ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದ ಮಹಾಪುರಾಣಂ

೭

## ಪ್ರಭಾಸಖಂಡ
## ವಸ್ತ್ರಾಪಥಕ್ಷೇತ್ರಮಾಹಾತ್ಮ್ಯ, ಅರ್ಬುದಖಂಡ, ಮತ್ತು ದ್ವಾರಕಾಮಾಹಾತ್ಮ್ಯ

(ಉತ್ತರ ಭಾಗ–೨)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೫೮

## ಅರಿಕೆ

ಪ್ರಭಾಸ ಕ್ಷೇತ್ರದ ವಿಷಯವಾಗಿ ಹೇಳಬೇಕಾದ ಒಂದೆರಡು ಸಂಗತಿಗಳನ್ನು ಈ ಖಂಡದ ಮೊದಲಭಾಗದ ಅರಿಕೆಯಲ್ಲಿಯೇ ಹೇಳಿಯಾಗಿದೆ. ಈ ಮೂರನೆಯ ಸಂಪುಟದಲ್ಲಿ ಪ್ರಭಾಸ ಖಂಡದ "ವಸ್ತ್ರಾಪಥಕ್ಷೇತ್ರಮಾಹಾತ್ಮ್ಯ" "ಅರ್ಬುದ ಖಂಡ" ಮತ್ತು "ದ್ವಾರಕಾ ಮಾಹಾತ್ಮ್ಯ" ಎಂಬ ಮೂರು ಭಾಗಗಳೂ ಮುಗಿದಿವೆ. ಅಖಂಡ ಸ್ಕಾಂದಮಹಾಪುರಾಣವು ಇದರೊಂದಿಗೆ ಈಶ್ವರ ಕೃಪೆಯಿಂದ ಮುಗಿಯಿತೆಂದು ತಿಳಿಸಲು ಅತ್ಯಂತ ಸಂತೋಷವಾಗುತ್ತದೆ.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ



# ವಿಷಯಾನುಕ್ರಮಣಿಕೆ.

---

## ಅಥ ದ್ವಿತೀಯಂ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯಂ

## ಅಥ ತೃತೀಯಂ ಅರ್ಬುದಖಂಡಂ

ಪುಟಸಂಖ್ಯೆ

ಪುಟಸಂಖ್ಯೆ

ಪುಟಸಂಖ್ಯೆ

---

|| ಶ್ರೀಃ ||

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀ ಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಪ್ರಭಾಸಖಂಡೇ ದ್ವಿತೀಯಂ

## ವಸ್ತ್ರಾಪಕ್ಷೇತ್ರಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಕಮಲಾಸನಂ ತ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದನಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಪ್ರಥಮೋಽಧ್ಯಾಯಃ

ದಾಮೋದರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ :—**

**ಅಥ ತೇ ಸಂಪ್ರವಕ್ಷ್ಯಾಮಿ ಕ್ಷೇತ್ರಗರ್ಭಂ ಮಹೋದಯಂ ।**
**ತದ್ವಸ್ತ್ರಾಪಥಮಾಹಾತ್ಮ್ಯಂ ಯತ್ರ ರೈವತಕೋ ಗಿರಿಃ ॥ ೧ ॥**

---

ಕನ್ನಡದ ಅನುವಾದ

ದಾಮೋದರ ಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ:—ಬಳಿಕ ನಿನಗೆ ಕ್ಷೇತ್ರಗರ್ಭ, ರೈವತಕ ಪರ್ವತವಿರುವ ವಸ್ತ್ರಾಪಥಗಳ ಮಾಹಾತ್ಮ್ಯವನ್ನು ಹೇಳುವೆನು.

ದಾಮೋದರಂ ರೈವತಕೇ ಭವಂ ವಸ್ತ್ರಾಪಥೇ ತಥಾ ।
ಏತದ್ರೈವತಕಂ ಕ್ಷೇತ್ರಂ ವಸ್ತ್ರಾಪಥಮಿತಿ ಸ್ಮೃತಂ ॥ ೨ ॥
ಸುವರ್ಣರೇಖಾ ಯತ್ರಸ್ಥಾ ನದೀ ಪಾತಕನಾಶನೀ ।
ಯತ್ರ ಸಾಕ್ಷಾತ್ಸ್ಥಿತಃ ಕೃಷ್ಣೋ ದಾಮೋದರ ಇತಿ ಸ್ಮೃತಃ ॥ ೩ ॥
ಯತ್ರ ಸ್ಥಿತಂ ಮೃಗೀಕುಂಡಂ ಮಹಾಪಾತಕನಾಶನಂ ।
ಸಕೃಚ್ಛ್ರಾದ್ಧೇ ಕೃತೇ ತತ್ರ ಕಲ್ಪಕೋಟಿಸಹಸ್ರಕಂ ।
ಪಿತೄಣಾಂ ಜಾಯತೇ ತೃಪ್ತಿರಪುನರ್ಭವಕಾಂಕ್ಷಿಣೀ ॥ ೪ ॥

ದೇವ್ಯುವಾಚ :—

ಭಗವನ್ವಿಸ್ತರಾದ್ಬ್ರೂಹಿ ದಾಮೋದರಮಹೋದಯಂ ।
ಕ್ಷೇತ್ರಗರ್ಭಸ್ಯ ಮಾಹಾತ್ಮ್ಯಂ ಕರ್ಣಿಕಾರೂಪಸಂಸ್ಥಿತಂ ॥ ೫ ॥

ಈಶ್ವರ ಉವಾಚ :—

ಶೃಣು ದೇವಿ ಪ್ರವಕ್ಷ್ಯಾಮಿ ದಾಮೋದರಹರಿಂ ಪ್ರತಿ ।
ಇತಿಹಾಸಂ ಪುರಾಖ್ಯಾತಮೃಷಿಭಿಃ ಕಲ್ಪವಾಸಿಭಿಃ ॥ ೬ ॥
ಗಂಗಾತೀರೇ ಶುಭೇ ರಮ್ಯೇ ಪುಣ್ಯೇ ಜನಪದಾಕುಲೇ ।
ಋಷಿಭಿಃ ಸೇವಿತೇ ನಿತ್ಯಂ ಸ್ವರ್ಗಮಾರ್ಗಪ್ರದೇ ಧ್ರುವಂ ॥ ೭ ॥

---

೨. ರೈವತಕ ಪರ್ವತದಲ್ಲಿ ದಾಮೋದರ ಕ್ಷೇತ್ರವಿರುವುದು. ರೈವತಕ ಪರ್ವತವೇ ವಸ್ತ್ರಾಪಥವೆನ್ನಿಸಿಕೊಳ್ಳುವುದು.

೩. ಇಲ್ಲಿ ಪಾಪವನ್ನು ಪರಿಹರಿಸುವ ಸುವರ್ಣರೇಖಾ ನದಿಯೂ, ದಾಮೋದರನೆಂದು ವಿಖ್ಯಾತನಾದ ಶ್ರೀ ಕೃಷ್ಣನೂ ಇರುವರು.

೪. ಇಲ್ಲಿ ಮಹಾಪಾತಕಗಳನ್ನು ನಿವಾರಿಸುವ ಮೃಗೀಕುಂಡವಿರುವುದು. ಇಲ್ಲಿ ಒಂದು ಸಾರಿ ಶ್ರಾದ್ಧಗೈದರೆ ಪಿತೃಗಳಿಗೆ ಸಾವಿರ ಕೋಟಿ ಕಲ್ಪಗಳಕಾಲ ಮರಳಿ ಹುಟ್ಟದಂತೆ ತೃಪ್ತಿಯುಂಟಾಗುವುದು.

೫. ದೇವಿಯು ಹೇಳುತ್ತಾಳೆ :—ಪೂಜ್ಯನೆ! ದಾಮೋದರಮಾಹಾತ್ಮ್ಯವನ್ನೂ, ಕರ್ಣಿಕಾರೂಪದಲ್ಲಿರುವ ಕ್ಷೇತ್ರಗರ್ಭದ ಮಾಹಾತ್ಮ್ಯವನ್ನೂ ವಿಸ್ತಾರವಾಗಿ ಹೇಳು.

೬. ಈಶ್ವರನು ಹೇಳುತ್ತಾನೆ:—ದೇವಿ! ಕಲ್ಪಕಾಲದವರೆಗೆವಾಸಿಸುವ ಋಷಿಗಳು ಹೇಳಿರುವ ದಾಮೋದರ ಕೃಷ್ಣನ ಮಾಹಾತ್ಮ್ಯವನ್ನು ಹೇಳುವೆನು ಕೇಳು.

೭-೮. ಮಂಗಳಕರವೂ, ಮನೋಹರವೂ, ಪುಣ್ಯಕರವೂ, ಜನಪದಗಳಿಂದ ಕೂಡಿರುವುದೂ, ಋಷಿಗಳಿಂದ ಸೇವಿಸಲ್ಪಟ್ಟುದೂ, ಸ್ವರ್ಗಮಾರ್ಗವನ್ನೀಯು

ತತ್ರ ಜ್ಞಾನವಿದೋ ವಿಪ್ರಾ ಯಜಂತಿ ವಿವಿಧೈರ್ಮಖೈಃ ।
ಋಷಯಃ ಸಾಂಖ್ಯಯೋಗೇನ ದಾನೇನೈವೇತರೇ ಜನಾಃ ॥ ೮ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಃ ಸ್ವರ್ಗಮಭೀಪ್ಸವಃ ।
ಸೇವಂತೇ ತಜ್ಜಲಂ ದಿವ್ಯಂ ದೇವಾನಾಮಪಿ ದುರ್ಲಭಂ ॥ ೯ ॥
ತತ್ರ ರಾಜಾ ಗಜೋ ನಾಮ ಬಲೀ ಸರ್ವಜನಾಧಿಪಃ ।
ಗಂಗಾಜಲಾಭಿಷೇಕಾರ್ಥಂ ತ್ಯಕ್ತ್ವಾ ರಾಜ್ಯಂ ಜಗಾಮ ಹ ॥ ೧೦ ॥
ಭಾರ್ಯಾ ತಸ್ಯ ಸತೀ ಸಾಧ್ವೀ ಪುತ್ರಿಣೀ ರೂಪಸಂಯುತಾ ।
ಸಾಪ್ಯಾಯಾತ್ಸಹ ತೇನೈವ ಭರ್ತ್ರಾ ವೈ ಭರ್ತೃವತ್ಸಲಾ ॥ ೧೧ ॥
ಸಂಗತಾನಾಮ ನಾಮ್ನಾ ಚ ದಕ್ಷಾ ದಾಕ್ಷಾಯಣೀ ಯಥಾ ।
ಏವಂ ನಿವಸತೋಸ್ತತ್ರ ವರ್ಷಾಣಾಮಯುತಂ ಗತಂ ॥ ೧೨ ॥
ಆಜಗಾಮ ಋಷಿಸ್ತತ್ರ ಭದ್ರೋನಾಮ ಮಹಾಯಶಾಃ ।
ಸಹಿತೋ ಬಹುಭಿರ್ವಿಪ್ರೈರ್ಜಪಹೋಮಪರಾಯಣೈಃ ॥ ೧೩ ॥
ತ್ಯಕ್ತ್ವಾ ಸಂಸಾರಮಾರ್ಗಂ ತು ಸ್ವರ್ಗಮಾರ್ಗಜಿಗೀಷವಃ ।
ಗಂಗಾನಿಷೇವಣಂ ಕೃತ್ವಾ ಸ್ಫೋಟಯಿತ್ವಾತ್ಮಜಂ ಮಲಂ ॥ ೧೪ ॥

---

ವುದೂ ಆದ ಗಂಗಾತೀರದಲ್ಲಿ ಜ್ಞಾನಿಗಳು ನಾನಾ ಬಗೆಯ ಯಜ್ಞಗಳಿಂದಲೂ, ಋಷಿಗಳು ಸಾಂಖ್ಯಯೋಗದಿಂದಲೂ, ಇತರ ಜನರು ದಾನದಿಂದಲೂ ದೇವರನ್ನು ಪೂಜಿಸುತ್ತಾರೆ.

೯. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಸ್ವರ್ಗವನ್ನು ಬಯಸುವ ಶೂದ್ರರು ಇವರು ದೇವತೆಗಳಿಗೆ ದುರ್ಲಭವಾದ ಆ ದಿವ್ಯಜಲವನ್ನು ಸೇವಿಸುತ್ತಾರೆ.

೧೦. ಅಲ್ಲಿ ಸಕಲ ಪ್ರಜೆಗಳಿಗೆ ಒಡೆಯನಾದ ಗಜನೆಂಬ ರಾಜನು ರಾಜ್ಯವನ್ನು ತ್ಯಜಿಸಿ ಗಂಗಾಜಲದ ಸ್ನಾನಕ್ಕಾಗಿ ಹೊರಟನು.

೧೧–೧೨. ಪತಿವ್ರತೆಯೂ, ಪುತ್ರರುಳ್ಳವಳೂ, ಸುಂದರಿಯೂ, ಪತಿಪ್ರಿಯಳೂ ದಾಕ್ಷಾಯಣಿಯಂತೆ ಚತುರಳೂ ಆದ ಸಂಗತೆಯೆಂಬ ಅವನ ಸತಿಯೂ ಅವನೊಡನೆ ಹೊರಟಳು. ಹೀಗೆ ಅವರು ಅಲ್ಲಿ ವಾಸಮಾಡುತ್ತಿರಲು ಹತ್ತುಸಾವಿರ ವರ್ಷಗಳು ಕಳೆದುವು.

೧೩. ಅಲ್ಲಿಗೆ ಭದ್ರನೆಂಬ ಕೀರ್ತಿಮಂತನಾದ ಮುನಿಯು ಜಪಹೋಮಗಳಲ್ಲಿ ನಿರತರಾದ ಬಹುಮಂದಿ ಬ್ರಾಹ್ಮಣರೊಡನೆ ಬಂದನು.

೧೪–೧೫. ಸಂಸಾರ ಮಾರ್ಗವನ್ನು ತ್ಯಜಿಸಿ ಸ್ವರ್ಗಮಾರ್ಗದಲ್ಲಿ ಹೋಗಲಿಚ್ಛಿಸುವ ಭದ್ರಕಾದಿ ಮುನಿಗಳು ಗಂಗೆಯನ್ನು ಸೇವಿಸಿ ತಮ್ಮ ದೋಷವನ್ನು ನೀಗಿಸಿ

ಜಲಂ ದತ್ವಾ ತು ಭೂತೇಭ್ಯಃ ಪೂಜಯಿತ್ವಾ ಜನಾರ್ದನಂ ।
ಯಾವದ್ಯಾಂತಿ ನದೀತೀರ ಋಷಯೋ ಭದ್ರಕಾದಯಃ ।
ತಾವತ್ಪಶ್ಯಂತಿ ರಾಜಾನಂ ಗಜಂ ವರಗಜೋಪಮಂ ॥ ೧೫ ॥
ತೇನೈವ ದೃಷ್ಟ್ವಾ ಮುನಯೋ ರಾಜ್ಞಾ ನಿಹತಕಲ್ಮಷಾಃ ।
ಸಪ್ತರ್ಷಯೋ ಯಥಾ ಸ್ವರ್ಗೇ ಸುರರಾಜೇನ ಧೀಮತಾ ॥ ೧೬ ॥
ತಮೃಷಿಂ ಸ ಚ ಸಂಪ್ರೇಕ್ಷ್ಯ ಪದಾನಿ ದಶ ಪಂಚ ಚ ।
ಆಗಚ್ಛಂತ್ವತ್ರ ಪೂಜಾರ್ಹಾ ಭವಂತೋ ಮಮ ಮಂದಿರಂ ॥ ೧೭ ॥
ಪಶ್ಯಂತು ಸಂಗತಾಂ ಸರ್ವೇ ಮಮ ಭಾರ್ಯಾಂ ಯಶಸ್ವಿನೀಂ ।
ತಸ್ಯಾಃ ಪೂಜಾಂ ಸಮಾದಾಯ ಯೋ ಮಾರ್ಗೋ ಮನಸಿ ಸ್ಥಿತಃ ॥ ೧೮ ॥
ತಂ ಗಚ್ಛಧ್ವಂ ಮಹಾಭಾಗಾಃ ಪುಣ್ಯಾಃ ಪುಣ್ಯಮಭೀಪ್ಸವಃ ।
ಏವಮುಕ್ತಾಸ್ತು ತೇ ರಾಜ್ಞಾ ಋಷಯಃ ಕೌತುಕಾನ್ವಿತಾಃ ।
ಆಜಗ್ಮುರ್ಮಂದಿರಂ ಶುಭ್ರಂ ಪುರಂದರಪುರೋಪಮಂ ॥ ೧೯ ॥
ಆಸನಾನಿ ವಿಚಿತ್ರಾಣಿ ದತ್ವಾ ತೇಷಾಂ ಮನಸ್ವಿನೀ ।
ಸಂಗತಾ ರಾಜರಾಜೇನ ಸಾರ್ಧಮಗ್ರೇ ವ್ಯವಸ್ಥಿತಾ ॥ ೨೦ ॥
ಕೃತ್ವಾ ಕರಪುಟಂ ರಾಜಾ ಋಷೀಣಾಂ ಪುಣ್ಯಕರ್ಮಣಾಂ ।
ಬಭಾಷೇ ವಚನಂ ರಾಜಾ ಭದ್ರೋ ಭದ್ರಂ ಸುಸಂಗತಂ ॥ ೨೧ ॥

---

ಕೊಂಡು ಪ್ರಾಣಿಗಳಿಗೆ ಜಲದಾನಮಾಡಿ ವಿಷ್ಣುವನ್ನು ಪೂಜಿಸಿ ನದೀತೀರಕ್ಕೆ ಹೋಗಲು ಅಲ್ಲಿ ಉತ್ತಮವಾದ ಆನೆಯಂತಿರುವ ರಾಜನನ್ನು ನೋಡಿದರು.

೧೬. ಆ ದೊರೆಯು ಪಾಪರಹಿತರಾದ ಮುನಿಗಳನ್ನು ಸ್ವರ್ಗದಲ್ಲಿ ದೇವೇಂದ್ರನು ಸಪ್ತರ್ಷಿಗಳನ್ನು ನೋಡುವಂತೆ ಕಂಡನು.

೧೭. ಅವನು ಆ ಮುನಿಗಳನ್ನು ಕಂಡ ಕೂಡಲೆ, "ಪೂಜ್ಯರೆ! ನೀವು ಹದಿನೈದು ಹೆಜ್ಜೆಗಳ ದೂರದಲ್ಲಿರುವ ನನ್ನ ಮನೆಗೆ ಬನ್ನಿರಿ.

೧೮–೧೯. ಪುಣ್ಯಾಪೇಕ್ಷಿಗಳಾದ ನೀವು ಕೀರ್ತಿಮತಿಯಾದ ನನ್ನ ಪತ್ನಿಯನ್ನು ನೋಡಿ ಅವಳ ಪೂಜೆಯನ್ನು ಸ್ವೀಕರಿಸಿ ನಿಮಗೆ ಇಷ್ಟವಾದ ದಾರಿಯಲ್ಲಿ ನಡೆಯಿರಿ". ದೊರೆಯು ಹೀಗೆನ್ನಲು ಆ ಮುನಿಗಳು ಕುತೂಹಲಗೊಂಡು ದೇವೇಂದ್ರನ ಪಟ್ಟಣದಂತಿರುವ ಶುಭ್ರವಾದ ಅವನ ಮನೆಗೆ ಬಂದರು.

೨೦. ಬುದ್ಧಿಮತಿಯಾದ ಆ ಸಂಗತೆಯು ಅವರಿಗೆ ವಿಚಿತ್ರಾಸನಗಳನ್ನಿತ್ತು ದೊರೆಯೊಡನೆ ಮುಂದೆ ನಿಂತಳು.

೨೧. ಆಗ ಆ ಗಜರಾಜನು ಕೈಮುಗಿದುಕೊಂಡು ಪುಣ್ಯವಂತರಾದ ಆ ಮುನಿಗಳನ್ನು ಕುರಿತು ಉಚಿತವಾದ ಮಾತನ್ನಾಡಿದನು.

ವಸುಧಾ ವಸುಸಂಪೂರ್ಣಾ ಮಂಡಿತಾ ನಗರೀ ಪುರೀ ।
ಪರ್ವತೈಶ್ಚ ಸಮುದ್ರೈಶ್ಚ ಸರಿದ್ಭಿಶ್ಚ ಸರೋವರೈಃ ॥ ೨೨ ॥
ಗ್ರಾಮೈಶ್ಚತುಷ್ಪಥೈರ್ಘೋರೈರ್ಗೋಕುಲೈರಾಕುಲೀಕೃತಾ ।
ನರರತ್ನೈರಶ್ವರತ್ನೈರ್ಗಜರತ್ನೈಸ್ತು ಸಂಕುಲಾ ॥ ೨೩ ॥
ದುಸ್ತ್ಯಜಾ ಭೋಗಭೋಕ್ತ್ರಾಣಾಂ ಪರಂ ಜ್ಞಾನಮಜಾನತಾಂ ।
ಸಂಸಾರೇಽತ್ರ ಮಹಾಘೋರೇ ಪುನರಾವೃತ್ತಿಕಾರಿಣಿ ॥ ೨೪ ॥
ಪತಂತಿ ಪುರುಷಾ ಭದ್ರ ಪತ್ರಾಣೀವ ಪುನಃಪುನಃ ।
ಕೃತೇನ ಯೇನ ವಿಪ್ರೇಂದ್ರ ಸ್ವರ್ಗಂ ಪ್ರಾಪ್ನೋತಿ ನಿರ್ಮಲಂ ।
ದಾನೇನ ತಪಸಾ ಚೈವ ತತ್ತ್ವಮಾಚಕ್ಷ್ವ ಸುವ್ರತ ॥ ೨೫ ॥

ಭದ್ರ ಉವಾಚ :—

ತೀರ್ಥಾನಿ ತೋಯಪೂರ್ಣಾನಿ ದೇವಾಃ ಪಾಷಾಣಮೃಣ್ಮಯಾಃ ।
ಆತ್ಮಸ್ಥಂ ಯೇ ನ ಪಶ್ಯಂತಿ ತೇ ನ ಪಶ್ಯಂತಿ ತತ್ಪರಂ ॥ ೨೬ ॥
ಸಂತಿ ತೀರ್ಥಾನ್ಯನೇಕಾನಿ ಪುಣ್ಯಾನ್ಯಾಯತನಾನಿ ಚ ।
ಪುಣ್ಯತೋಯಾಃ ಪವಿತ್ರಾಶ್ಚ ಸರಿತಃ ಸಾಗರಾಸ್ತಥಾ ।
ಬಹುಪುಣ್ಯಪ್ರದಾ ಪೃಥ್ವೀ ಸ್ಥಾನೇ ಸ್ಥಾನೇ ಪದೇ ಪದೇ ॥ ೨೭ ॥

---

೨೨—೨೩. ಭೂಮಿಯು ದ್ರವ್ಯಗಳಿಂದ ತುಂಬಿರುವುದು. ಅಲಂಕೃತವಾದ ಈ ಪಟ್ಟಣವು ಪರ್ವತ, ಸಮುದ್ರ, ನದೀ, ಸರೋವರ, ಗ್ರಾಮ, ಭಯಂಕರ ಚೌಕ, ಉತ್ತಮರಾದ ಮಾನವರು ಗಜಶ್ರೇಷ್ಠ ಇವುಗಳಿಂದ ವ್ಯಾಪ್ತವಾಗಿದೆ.

೨೪,೨೫. ಅಜ್ಞಾನಿಗಳಾದ ಭೋಗಿಗಳು ಇದನ್ನು ಬಿಡಲಾರರು. ಅತ್ಯಂತ ಘೋರವೂ, ಪುನರಾವೃತ್ತಿಯಿಲ್ಲದ್ದೂ ಆದ ಈ ಸಂಸಾರದಲ್ಲಿ ಮನುಷ್ಯರು ಎಲೆಗಳಂತೆ ಬೀಳುತ್ತಾರೆ. ಬ್ರಾಹ್ಮಣವರ್ಯನೆ! ಮಾನವನು ದಾನ, ತಪಸ್ಸುಗಳಲ್ಲಿ ಯಾವುದನ್ನು ಮಾಡಿದರೆ ಶುದ್ಧವಾದ ಸ್ವರ್ಗವನ್ನು ಸೇರುವನು ? ನೀನು ಅದನ್ನು ಹೇಳು.

೨೬. ಭದ್ರನು ಹೇಳುತ್ತಾನೆ :—ತೀರ್ಥಗಳು ನೀರಿನಿಂದ ತುಂಬಿರುವುವು. ದೇವತೆಗಳು ಕಲ್ಲು ಮಣ್ಣಿನ ರೂಪವುಳ್ಳವರಾಗಿರುವರು. ಆದ್ದರಿಂದ ತಮ್ಮಲ್ಲಿರುವ ಪರಮಾತ್ಮನನ್ನು ಕಾಣದವರು ಆ ಪರಬ್ರಹ್ಮನನ್ನು ಕಾಣರು.

೨೭. ಅನೇಕ ತೀರ್ಥಗಳೂ, ಪುಣ್ಯಕರವಾದ ದೇವಾಲಯಗಳೂ, ಪವಿತ್ರವಾದ ನದಿಗಳೂ, ಸಮುದ್ರಗಳೂ, ಬಹು ಪುಣ್ಯವನ್ನೀಯುವ ಭೂಮಿಯೂ ಎಲ್ಲೆಡೆಯಲ್ಲಿಯೂ ಇರುವುವು.

ಯದ್ಯಸ್ತಿ ತವ ರಾಜೇಂದ್ರ ಜ್ಞಾನಂ ಜ್ಞಾನವತಾಂ ವರ ।
ವಿಷ್ಣುಂ ಜಿಷ್ಣುಂ ಹೃಷೀಕೇಶಂ ಶಂಖಿನಂ ಗದಿನಂ ತಥಾ ॥ ೨೮ ॥

ಚತುರ್ಭುಜಂ ಮಹಾಬಾಹುಂ ಪ್ರಭಾಸೇ ದೈತ್ಯಸೂದನಂ ।
ವಾರಾಹಂ ವಾಮನಂ ಚೈವ ನಾರಸಿಂಹಂ ಬಲಾರ್ಜುನಂ ॥ ೨೯ ॥

ರಾಮಂ ರಾಮಂ ಚ ರಾಮಂ ಚ ಪುರುಷೋತ್ತಮಮೇವ ಚ ।
ಪುಂಡರೀಕೇಕ್ಷಣಂ ಚೈವ ಗದಾಪಾಣಿಂ ತಥೈವ ಚ ॥ ೩೦ ॥

ರಾಘವಂ ಶಕ್ರದಮನಂ ಗೋವಿಂದಂ ಬಹುಪುಣ್ಯದಂ ।
ಜಯಂ ಚ ಭೂಧರಂ ಚೈವ ದೇವದೇವಂ ಜನಾರ್ದನಂ ॥ ೩೧ ॥

ಸುರೋತ್ತಮಂ ಶ್ರೀಧರಂ ಚ ಹರಿಂ ಯೋಗೀಶ್ವರಂ ತಥಾ ।
ಕಪಿಲೇಶಂ ಭೂತನಾಥಂ ಶ್ವೇತದ್ವೀಪಪತಿಂ ಹರಿಂ ॥ ೩೨ ॥

ಬದರ್ಯಾಶ್ರಮವಾಸೌ ಚ ನರನಾರಾಯಣೌ ತಥಾ ।
ಪದ್ಮನಾಭಂ ಸುನಾಭಂ ಚ ಹಯಗ್ರೀವಂ ವಿಶಾಂಪತೇ ॥ ೩೩ ॥

ದ್ವಿಜನಾಥಂ ಧರಾನಾಥಂ ಖಡ್ಗಪಾಣಿಂ ತಥೈವ ಚ ।
ದಾಮೋದರಂ ಜಲಾವಾಸಂ ಸರ್ವಪಾಪಹರಂ ಹರಿಂ ॥ ೩೪ ॥

ಏತಾನ್ಯೇವ ಹಿ ಸ್ಥಾನಾನಿ ದೇವದೇವಸ್ಯ ಚಕ್ರಿಣಃ ।
ಗಚ್ಛತೇ ಯತ್ರ ತತ್ರೈವ ಮುಚ್ಯತೇ ಸರ್ವಪಾತಕೈಃ ॥ ೩೫ ॥

---

೨೮–೩೫. ಜ್ಞಾನಿಯಾದ ಎಲೈ ರಾಜಶ್ರೇಷ್ಠನೇ! ನಿನ್ನಲ್ಲಿ ಜ್ಞಾನವಿದ್ದರೆ ಪ್ರಭಾಸದಲ್ಲಿರುವ ಜಯಶೀಲನೂ, ಇಂದ್ರಿಯಗಳಿಗೆ ಒಡೆಯನೂ, ಶಂಖವನ್ನೂ, ಗದೆಯನ್ನೂ ಹಿಡಿದಿರುವವನೂ, ನಾಲ್ಕು ತೋಳುಗಳುಳ್ಳವನೂ, ಆದ ದೈತ್ಯಸೂದನ, ವಾರಾಹ, ವಾಮನ, ನಾರಸಿಂಹ, ಬಲಾರ್ಜುನ, ಪರಶುರಾಮ, ದಾಶರಥಿ, ಬಲರಾಮ, ಪುರುಷೋತ್ತಮ, ಪುಂಡರೀಕೇಕ್ಷಣ, ಗದಾಪಾಣಿ, ರಾಘವ, ಶಕ್ರದಮನ, ಬಹು ಪುಣ್ಯಪ್ರದನಾದ ಗೋವಿಂದ, ಜಯ, ಭೂಧರ, ಜನಾರ್ದನ, ಸುರೋತ್ತಮ, ಶ್ರೀಧರ, ಹರಿ, ಯೋಗೀಶ್ವರ, ಕಪಿಲೇಶ, ಭೂತನಾಥ, ಶ್ವೇತದ್ವೀಪಪತಿ, ಬದರಿಕಾಶ್ರಮ ವಾಸಿಗಳಾದ ನರನಾರಾಯಣರು, ಪದ್ಮನಾಭ, ಸುನಾಭ, ಹಯಗ್ರೀವ, ದ್ವಿಜನಾಥ, ಧರಾನಾಥ, ಖಡ್ಗಪಾಣಿ, ದಾಮೋದರ, ಜಲಾವಾಸ ಹರಿ ರೂಪಿಯಾದ ಶ್ರೀ ವಿಷ್ಣುವಿನ ಅನೇಕ ಕ್ಷೇತ್ರಗಳಿರುವುವು. ಇವುಗಳಲ್ಲಿ ಯಾವುದಾದರೊಂದರ ಯಾತ್ರೆ ಮಾಡಿದರೆ ಸಕಲ ಪಾಪಗಳಿಂದಲೂ ಮುಕ್ತನಾಗುವನು.

ಗಂಗಾ ಚ ಯಮುನಾ ಚೈವ ತಥಾ ದೇವೀ ಸರಸ್ವತೀ ।
ದೃಷದ್ವತೀ ಗೋಮತೀ ಚ ತಾಪೀ ಕಾವೇರಿಣೀ ತಥಾ ॥ ೩೬ ॥
ನರ್ಮದಾ ಶರ್ಮದಾ ಚೈವ ನದೀ ಗೋದಾವರೀ ತಥಾ ।
ಶತದ್ರುಶ್ಚ ತಥಾ ವಿಂಧ್ಯಾ ಪಯೋಷ್ಣೀ ವರದಾ ತಥಾ ॥ ೩೭ ॥
ಚರ್ಮಣ್ವತೀ ಚ ಸರಯೂರ್ಗಂಡಕೀ ಚಂಡಪಾಪಹಾ ।
ಚಂದ್ರಭಾಗಾ ವಿಪಾಶಾ ಚ ಶೋಣಶ್ಚೈವ ಪುನಃಪುನಃ ॥ ೩೮ ॥
ಏತಾಶ್ಚಾನ್ಯಾಶ್ಚ ಬಹವೋ ಹಿಮವತ್ಪ್ರಭವಾಃ ಶುಭಾಃ ।
ತಾಸು ಸ್ನಾತೋ ನರಃ ಸ್ವರ್ಗಂ ಯಾತಿ ಪಾತಕವರ್ಜಿತಃ ॥ ೩೯ ॥
ವನಾನಿ ನಂದನಾದೀನಿ ಪರ್ವತಾ ಮಂದರಾದಯಃ ।
ನಾಮೋಚ್ಚಾರೇಣ ಯೇಷಾಂ ಹಿ ಪಾಪಂ ಯಾತಿ ರಸಾತಲೇ ॥ ೪೦ ॥

ಗಜ ಉವಾಚ :—

ಭದ್ರಂ ಹಿ ಭಾಷಿತಂ ಭದ್ರ ಆಖ್ಯಾನಮಮೃತೋಪಮಂ ।
ಪೃಚ್ಛಾಮಿ ಸರ್ವಧರ್ಮಜ್ಞ ತ್ವಾಮಹಂ ಕಿಂಚಿದೇವ ಹಿ ॥ ೪೧ ॥
ಯಸ್ಮಿನ್ಮಾಸೇ ದಿನೇ ಯಸ್ಮಿಂಸ್ತೀರ್ಥೇ ಯಸ್ಮಿನ್ಕ್ರಮಾನ್ನರೈಃ ।
ಅಕ್ಷಯಂ ಸೇವ್ಯತೇ ಸ್ವರ್ಗಸ್ತನ್ಮಮಾಚಕ್ಷ್ವ ಸುವ್ರತ ॥ ೪೨ ॥

---

೩೬–೩೯. ಗಂಗೆ, ಯಮುನೆ, ಸರಸ್ವತಿ, ದೃಷದ್ವತೀ, ಗೋಮತೀ, ತಾಪಿ, ಕಾವೇರಿಣೀ, ನರ್ಮದಾ, ಶರ್ಮದಾ, ಗೋದಾವರಿ, ಶತದ್ರು, ವಿಂಧ್ಯಾ, ಪಯೋಷ್ಣೀ, ವರದಾ, ಚರ್ಮಣ್ವತೀ, ಗೋಮತೀ, ಸರಯೂ, ಗಂಡಕೀ, ಚಂಡಪಾಪಹಾ, ಚಂದ್ರಭಾಗಾ, ವಿಪಾಶಾ, ಶೋಣ ಇವುಗಳಲ್ಲಿಯೂ ಮಿಂದ ಮಾನವನು ಪಾತಕವಿಲ್ಲದವನಾಗಿ ಸ್ವರ್ಗಕ್ಕೆ ತೆರಳುವನು.

೪೦. ನಂದನಾದಿ ವನಗಳ ಮತ್ತು ಮಂದರಾದಿ ಪರ್ವತಗಳ ನಾಮವನ್ನು ಉಚ್ಚರಿಸುವುದರಿಂದಲೇ ಪಾಪವು ಪಾತಾಳವನ್ನು ಸೇರುವುದು.

೪೧. ಗಜನು ಹೇಳುತ್ತಾನೆ :—ಭದ್ರಮುನಿಯೆ ! ನೀನು ಅಮೃತದಂತಿರುವ ಕಥೆಯನ್ನು ಹೇಳಿರುವೆ. ಸರ್ವಧರ್ಮವನ್ನರಿತ ನಿನ್ನನ್ನು ಇನ್ನೂ ಸ್ವಲ್ಪವಿಷಯವನ್ನು ಕುರಿತು ಪ್ರಶ್ನಿಸುತ್ತೇನೆ.

೪೨. ಮಾನವನು ಯಾವ ತಿಂಗಳ ಯಾವ ದಿವಸ ಯಾವ ತೀರ್ಥವನ್ನು ಕ್ರಮದಂತೆ ಸೇವಿಸಿದರೆ ಶಾಶ್ವತವಾದ ಸ್ವರ್ಗವು ಲಭಿಸುವುದು. ಅದನ್ನು ನನಗೆ

ಸ್ನಾನಂ ದಾನಂ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ।
ಅಕ್ಷಯೋ ಯೇನ ವೈ ಸ್ವರ್ಗಸ್ತನ್ಮೇ ಗದಿತುಮರ್ಹಸಿ ॥ ೪೩ ॥

ಭದ್ರ ಉವಾಚ :—

ಶ್ರೂಯತಾಂ ಗಜಶಾರ್ದೂಲ ಕಥಾಂ ಕಥಯತೋ ಮಮ ।
ಯಾಂ ಶ್ರುತ್ವಾ ಮುಚ್ಯತೇ ಪಾಪಾನ್ನರೋ ನರವರೋತ್ತಮ ॥ ೪೪ ॥
ಋಷೀಣಾಂ ಕಥಿತಂ ಪೂರ್ವಂ ನಾರದೇನ ಮಹಾತ್ಮನಾ ॥ ೪೫ ॥
ಏವಂ ಪೃಷ್ಟಶ್ಚ ತೈಃ ಸರ್ವೈರ್ನಾರದೋ ಮುನಿಸತ್ತಮಃ ।
ಕಥಯಾಮಾಸ ಸಂಹೃಷ್ಟೋ ಮೇಘದುಂದುಭಿನಿಸ್ಸ್ವನೈಃ ॥ ೪೬ ॥
ರಮ್ಯೇ ಹಿಮವತಃ ಪೃಷ್ಠೇ ಸಮವಾಯೇ ಮಯಾ ಶ್ರುತಂ ।
ತದಹಂ ತವ ವಕ್ಷ್ಯಾಮಿ ಶ್ರೋತುಕಾಮ ನರರ್ಷಭ ॥ ೪೭ ॥
ತೀರ್ಥಾನ್ಯೇವ ಹಿ ಸರ್ವಾಣಿ ಪುನರಾವರ್ತಕಾನಿ ತು ।
ಅಕ್ಷಯಾಂಲ್ಲಭತೇ ಲೋಕಾಸ್ತತ್ತೀರ್ಥಂ ಕಥಯಾಮಿ ತೇ ॥ ೪೮ ॥
ಮಾರ್ಗಶೀರ್ಷೇ ಕಾನ್ಯಕುಬ್ಜ ಉಷಿತ್ವಾ ರಾಜಸತ್ತಮ ।
ನ ಶೋಚತಿ ನರೋ ನಾರೀ ಸ್ವರ್ಗಂ ಯಾತಿ ಪರಾವರಂ ॥ ೪೯ ॥

---

೪೩. ಸ್ನಾನ, ದಾನ, ಜಪ, ಹೋಮ, ವೇದಾಧ್ಯಯನ, ದೇವಪೂಜೆ ಇವುಗಳಲ್ಲಿ ಯಾವುದನ್ನು ಮಾಡುವುದರಿಂದ ಅಕ್ಷಯ ಸ್ವರ್ಗವು ದೊರೆಯುವುದು? ಅದನ್ನು ನನಗೆ ಹೇಳು.

೪೪. ರಾಜೇಂದ್ರ! ನಾನು ಕಥೆಯನ್ನು ಹೇಳುವೆನು ಕೇಳು. ಇದನ್ನು ಕೇಳಿದ ಮನುಷ್ಯನು ಪಾಪಮುಕ್ತನಾಗುವನು.

೪೫. ಇದನ್ನು ಹಿಂದೆ ಮಹಾತ್ಮನಾದ ನಾರದನು ಋಷಿಗಳಿಗೆ ಹೇಳಿರುವನು.

೪೬. ಅವರೆಲ್ಲರೂ ಹೀಗೆ ನಾರದನನ್ನು ಕೇಳಲು ಮುನಿವರ್ಯನಾದ ಅವನ ಸಂತೋಷದಿಂದ ಮೇಘ, ನಗಾರಿ ಇವುಗಳ ಧ್ವನಿಗಳಿಂದ ಇಂತೆಂದನು.

೪೭. ನರೇಂದ್ರ ! ನಾನು ಹಿಮಾಲಯದ ತಪ್ಪಲಿನಲ್ಲಿರುವ ಮುನಿಗಳ ಗುಂಪಿನಲ್ಲಿ ಕೇಳಿದುದನ್ನು ಈಗ ಕೇಳಬಯಸುವ ನಿನಗೆ ಹೇಳುವೆನು.

೪೮. ಎಲ್ಲ ತೀರ್ಥಗಳ ಯಾತ್ರೆಮಾಡಿದರೂ ಪುನಃ ಜನ್ಮವು ಬರುವುದು. ಈಗ ಅಕ್ಷಯ ಲೋಕಗಳನ್ನೀಯುವ ತೀರ್ಥವನ್ನು ನಿನಗೆ ಹೇಳುವೆನು.

೪೯. ನರನಾಗಲಿ, ನಾರಿಯಾಗಲಿ, ಮಾರ್ಗಶೀರ್ಷಮಾಸದಲ್ಲಿ ಕಾನ್ಯಕುಬ್ಜದಲ್ಲಿ ವಾಸಮಾಡಿದರೆ ದುಃಖಗೊಳ್ಳದೆ ಶ್ರೇಷ್ಠವಾದ ಸ್ವರ್ಗಕ್ಕೆ ತೆರಳುವರು.

ಪೌಷಸ್ಯ ಪೌರ್ಣಮಾಸೀ ಯಾ ಯದಿ ಸಾ ಕ್ರಿಯತೇಽರ್ಬುದೇ ।
ವರ್ಷಾಣಾಮರ್ಬುದಂ ಸ್ವರ್ಗೇ ಮೋದತೇ ಪಿತೃಭಿಃ ಸಹ ॥ ೫೦ ॥
ಮಾಘ್ಯಾಂ ಯದಿ ಗಯಾಶ್ರಾದ್ಧಂ ಪಿತೄಣಾಂ ಯಚ್ಛತೇ ನರಃ ।
ತ್ರಯಾಣಾಮಪಿ ದೇವಾನಾಂ ಚತುರ್ಥಃ ಸ ಪ್ರಜಾಯತೇ ॥ ೫೧ ॥
ಫಾಲ್ಗುನ್ಯಾಂ ಹಿಮವತ್ಪೃಷ್ಠೇ ವಸನ್ನೇಕಾಂ ನಿಶಾಂ ನರಃ ।
ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ಜನಾರ್ದನಃ ॥ ೫೨ ॥
ಚೈತ್ರ್ಯಾಂ ಶ್ರಾದ್ಧಂ ಪ್ರಭಾಸೇ ತು ಯೇ ಕುರ್ವಂತಿ ಮನೀಷಿಣಃ ।
ನ ತೇ ಮರ್ತ್ಯಾ ಭವಂತೀಹ ಕುಲಜೈಃ ಸಹ ಸತ್ತಮಾಃ ॥ ೫೩ ॥
ಚತುರ್ಭುಜೇ ತು ವೈಶಾಖ್ಯಾಂ ಯೇ ಕುರ್ವಂತಿ ಜಲಪ್ರಿಯೇ ।
ತಥಾವಂತ್ಯಾಂ ನರಃ ಕಶ್ಚಿತ್ಸ ಯಾತಿ ಪರಮಾಂ ಗತಿಂ ॥ ೫೪ ॥
ಜ್ಯೇಷ್ಠ್ಯಾಂ ಜ್ಯೇಷ್ಠರ್ಕ್ಷಯುಕ್ತಾಯಾಂ ಶ್ರಾದ್ಧಂ ಚ ಚಿತ್ರಕೂಪಕೇ ।
ಕುರ್ಯುರ್ಯುಗಾನಿ ತೇ ತ್ರೀಣಿ ವಸಂತಿ ನಾಕಸದ್ಮನಿ ॥ ೫೫ ॥
ಯೋ ವ್ರಜೇಶವನೇ ನದ್ಯಾಂ ದಿನಾನಿ ನವ ಪಂಚ ಚ ।
ತಿಷ್ಠತೇ ಚ ನರಃ ಸ್ವರ್ಗಂ ವೈಕುಂಠಮಭಿಗಚ್ಛತಿ ॥ ೫೬ ॥

---

೫೦. ಮನುಷ್ಯನು ಪುಷ್ಯಮಾಸ ಹುಣ್ಣಿಮೆಯನ್ನು ಅರ್ಬುದ ತೀರ್ಥದಲ್ಲಿ ಆಚರಿಸಿದರೆ ಅರ್ಬುದ ವರ್ಷಗಳಕಾಲ ಪಿತೃಗಳೊಡನೆ ಸ್ವರ್ಗದಲ್ಲಿ ಆನಂದಿಸುವನು.

೫೧. ಮಾಘಶುದ್ಧ ಹುಣ್ಣಿಮೆಯದಿನ ಪಿತೃಗಳಿಗೆ ಗಯಾಶ್ರಾದ್ಧಗೈದವನು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ದೇವತೆಗಳಿಗೆ ನಾಲ್ಕನೆಯವನಾಗುವನು.

೫೨. ಫಾಲ್ಗುನ ಶುದ್ಧ ಪೂರ್ಣಿಮಾದಿನ ಹಿಮಾಲಯದ ತಪ್ಪಲಲ್ಲಿ ಒಂದು ರಾತ್ರಿ ವಾಸಿಸುವವನು ವಿಷ್ಣುವಿರುವ ವೈಕುಂಠಕ್ಕೆ ಹೋಗುವನು.

೫೩. ಚೈತ್ರಶುದ್ಧ ಪೂರ್ಣಿಮಾದಿನ ಪ್ರಭಾಸದಲ್ಲಿ ಶ್ರಾದ್ಧಮಾಡುವವರು ತಮ್ಮ ವಂಶದವರೊಡನೆ ಸ್ವರ್ಗವನ್ನು ಸೇರಿದವರಾಗಿ ಮರಳಿ ಈ ಲೋಕದಲ್ಲಿ ಹುಟ್ಟುವುದಿಲ್ಲ.

೫೪. ವೈಶಾಖಶುದ್ಧ ಪೂರ್ಣಿಮಾದಿನ ಅವಂತಿಯಲ್ಲಿರುವ ಚತುರ್ಭುಜ ತೀರ್ಥದಲ್ಲಿ ತರ್ಪಣಮಾಡಿದವನು ಉತ್ತಮ ಗತಿಯನ್ನು ಪಡೆಯುವನು.

೫೫. ಜ್ಯೇಷ್ಠಶುದ್ಧ ಹುಣ್ಣಿಮೆಯದಿನ ತ್ರಿತಕೂಪದಲ್ಲಿ ಶ್ರಾದ್ಧಮಾಡಿದವರು ಮೂರು ಯುಗಗಳ ಕಾಲ ಸ್ವರ್ಗದಲ್ಲಿ ವಾಸಿಸುವರು.

೫೬. ಯಮುನಾನದಿಯ ದಡದಲ್ಲಿ ಹದಿನಾಲ್ಕು ದಿನಗಳು ವಾಸಿಸುವವರು ವೈಕುಂಠವನ್ನು ಪಡೆಯುವರು.

ಶ್ರಾವಣಸ್ಯ ತು ಮಾಸಸ್ಯ ಪೂರ್ಣಾಯಾಂ ಪೂರ್ವಸಾಗರೇ ।
ಸ್ನಾನಂ ದಾನಂ ಜಪಂ ಶ್ರಾದ್ಧಂ ನರಃ ಕುರ್ವನ್ನ ಶೋಚತಿ ॥ ೫೭ ॥
ತಥಾ ಭಾದ್ರಪದೇ ಕ್ಷೇತ್ರೇ ಪ್ರಭಾಸೇ ಶಶಿಭೂಷಣಂ ।
ಪೂಜಯಿತ್ವಾ ನರೋ ಲಿಂಗಂ ದೇವಲಿಂಗೀ ಭವೇತ್ತತಃ ॥ ೫೮ ॥
ಆಶ್ವಿನೇ ಚಂದ್ರಭಾಗಾಯಾಂ ಶ್ರಾದ್ಧಂ ಸ್ನಾನಂ ಕರೋತಿ ಯಃ ।
ಸ್ಥಾನಂ ಯುಗಸಹಸ್ರಾಣಾಂ ಕೃತಂ ತೇನ ತ್ರಿವಿಷ್ಟಪೇ ॥ ೫೯ ॥
ಅಷ್ಟಾಕ್ಷರೈಶ್ಚತುರ್ಬಾಹುಂ ಧ್ಯಾಯಂತಿ ಮುನಿಸತ್ತಮಾಃ ।
ಬಹುನಾತ್ರ ಕಿಮುಕ್ತೇನ ಗಜಾಹಂ ಪ್ರವದಾಮಿ ತೇ ॥ ೬೦ ॥
ದಾಮೋದರಸಮಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಮಾಸಾನಾಂ ಕಾರ್ತಿಕಃ ಶ್ರೇಷ್ಠಃ ಕಾರ್ತಿಕೇ ಭೀಷ್ಮಪಂಚಕಂ ॥ ೬೧ ॥
ತತ್ರಾಪಿ ದ್ವಾದಶೀ ಶ್ರೇಷ್ಠಾ ರಾಜನ್ದಾಮೋದರೇ ಜಲೇ ।
ಕಿಮನ್ಯೈರ್ಬಹುಭಿಸ್ತೀರ್ಥೈಃ ಕಿಂ ಕ್ಷೇತ್ರೈಃ ಕಿಂ ಮಹಾವನೈಃ ।
ದಾಮೋದರೇ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೬೨ ॥

---

೫೭. ಶ್ರಾವಣಮಾಸದ ಹುಣ್ಣಿಮೆಯದಿನ ಪೂರ್ವ ಸಮುದ್ರದಲ್ಲಿ ಸ್ನಾನ, ದಾನ, ಜಪ, ಶ್ರಾದ್ಧಗಳನ್ನು ಮಾಡುವ ಮಾನವನು ದುಃಖಗೊಳ್ಳುವುದಿಲ್ಲ

೫೮. ಹಾಗೆಯೇ ಭಾದ್ರಪದ ಶುದ್ಧ ಹುಣ್ಣಿಮೆಯದಿನ ಪ್ರಭಾಸಕ್ಷೇತ್ರದಲ್ಲಿ ಮಹೇಶ್ವರ ಲಿಂಗವನ್ನು ಪೂಜಿಸಿದವನು ಮಹೇಶ್ವರನೇ ಆಗುವನು.

೫೯. ಆಶ್ವಿನಮಾಸದಲ್ಲಿ ಚಂದ್ರಭಾಗಾನದಿಯಲ್ಲಿ ಮಿಂದವನೂ, ಶ್ರಾದ್ಧಮಾಡಿದವನೂ ಸಾವಿರ ಯುಗಗಳವರೆಗೆ ಸ್ವರ್ಗದಲ್ಲಿ ವಾಸಿಸುವನು.

೬೦. ಮುನಿವರ್ಯರು ಅಷ್ಟಾಕ್ಷರ ಮಂತ್ರದಿಂದ ವಿಷ್ಣುವನ್ನು ಧ್ಯಾನಿಸುವರು. ಗಜರಾಜ! ಹೆಚ್ಚುಹೇಳಿ ಪ್ರಯೋಜನವೇನು? ನಾನುಇದನ್ನುನಿನಗೆ ಹೇಳುವೆನುಕೇಳು

೬೧. ದಾಮೋದರ ತೀರ್ಥಕ್ಕೆ ಸರಿಯಾದ ತೀರ್ಥವು ಹಿಂದೆಯೂ, ಇರಲಿಲ್ಲ. ಮುಂದೆಯೂಇರುವುದಿಲ್ಲ. ಮಾಸಗಳಲ್ಲಿಕಾರ್ತಿಕಮಾಸವು ಶ್ರೇಷ್ಠವಾದುದು. ಅದರಲ್ಲಿ ಭೀಷ್ಮ ಪಂಚಕವು ಉತ್ತಮವಾದುದು.

೬೨. ಅಲ್ಲಿಯೂ ದ್ವಾದಶಿಯು ಉತ್ತಮವು. ದೊರೆಯೆ ! ಇತರ ಬಹು ತೀರ್ಥಗಳಿಂದಲೂ, ಕ್ಷೇತ್ರಗಳಿಂದಲೂ, ಮಹಾವನಗಳಿಂದಲೂ ಏನು ಪ್ರಯೋಜನ ? ದಾಮೋದರತೀರ್ಥದಲ್ಲಿ ಮಿಂದಮಾನವನು ಸಕಲಪಾಪಗಳಿಂದಲೂ ಮುಕ್ತನಾಗುವನು.

ಗಜ ಉವಾಚ :—
ಭದ್ರ ಭದ್ರಂ ತ್ವಯಾ ಪ್ರೋಕ್ತಂ ರಸಾಯನಮಿವಾಪರಂ ।
ಭೂಯೋಽಹಂ ಶ್ರೋತುಮಿಚ್ಛಾಮಿ ತೀರ್ಥಸ್ಯಾಸ್ಯ ಮಹಾಫಲಂ ॥ ೬೩ ॥
ಕೇ ದೇಶಾಃ ಕಿಂ ಪ್ರಮಾಣಂ ತು ಕಾ ನದೀ ಕೇ ಚ ಪರ್ವತಾಃ ।
ಜನಾ ವಸಂತಿ ಕೇ ತತ್ರ ಋಷಯಃ ಕೇ ತಪಸ್ವಿನಃ ॥ ೬೪ ॥
ಭದ್ರ ಉವಾಚ :—
ಪೃಥಿವೀ ವಸುಸಂಪೂರ್ಣಾ ಸಾಗರೇಣ ತು ವೇಷ್ಟಿತಾ ।
ಮಂಡಿತಾ ನಗರೈರ್ಗ್ರಾಮೈಃ ಪುರೈಃ ಪರಪುರಂಜಯ ॥ ೬೫ ॥
ವಾರಾಣಸೀ ಪ್ರಭಾಸಂ ಚ ಸಂಗಮಂ ಸಿತಕೃಷ್ಣಯೋಃ ।
ಏವಂ ಸಾರಾಣಿ ತೀರ್ಥಾನಿ ಯಸ್ಮಾನ್ಮೃತ್ಯುಹರಾಣಿ ಚ ॥ ೬೬ ॥
ದಾಮೋದರೇತಿ ಯೇ ನೂನಂ ಸ್ಮರಂತೋ ಯತ್ರ ತತ್ರ ಹಿ ।
ತೇ ವಸಂತಿ ಹರೇರ್ಗೇಹಂ ನ ಸ್ಮರಂತಿ ಕದಾಚನ ॥ ೬೭ ॥
ಸೋಮನಾಥಸ್ಯ ಸಾನ್ನಿಧ್ಯ ಉದಯಂತ್ಪೋ ಗಿರಿರ್ಮಹಾನ್ ।
ತಸ್ಯ ಪಶ್ಚಿಮಭಾಗೇ ತು ರೈವತಕ ಇತಿ ಸ್ಮೃತಃ ॥ ೬೮ ॥

---

೬೩. ಗಜನು ಹೇಳುತ್ತಾನೆ :—ಭದ್ರಮುನಿಯೆ ! ನೀನು ಮತ್ತೊಂದು ರಸಾಯನದಂತಿರುವ ವಿಷಯವನ್ನು ನನಗೆ ಹೇಳಿರುವೆ. ಮರಳಿ ನಾನು ಈ ತೀರ್ಥದ ಮಹಾ ಫಲವನ್ನು ಕೇಳಬಯಸುವೆನು.

೬೪. ಅಲ್ಲಿ ಯಾವ ದೇಶಗಳಿರುವುವು ? ಅದರ ವಿಸ್ತೀರ್ಣವೆಷ್ಟು ? ಯಾವ ನದಿಯೂ, ಪರ್ವತಗಳೂ ಇರುವುವು. ಅಲ್ಲಿ ಯಾವ ಮನುಷ್ಯರು ವಾಸಿಸುವರು. ಮತ್ತು ಯಾವ ಮುನಿಗಳಿರುವರು.

೬೫. ಭದ್ರನು ಹೇಳುತ್ತಾನೆ :—ಶತ್ರುನಾಶಕನಾದ ದೊರೆಯೆ ! ದ್ರವ್ಯಗಳಿಂದ ತುಂಬಿದ ಭೂಮಿಯು ಸಮುದ್ರದಿಂದ ಸುತ್ತಲ್ಪಟ್ಟು ನಗರ, ಗ್ರಾಮ, ಪಟ್ಟಣಗಳಿಂದ ಮಂಡಿತವಾಗಿರುವುದು.

೬೬. ಕಾಶೀ, ಪ್ರಭಾಸ, ಗಂಗಾ ಯಮುನಾ ಸಂಗಮಗಳು ಮೃತ್ಯುವನ್ನು ಪರಿಹರಿಸುವುದರಿಂದ ಶ್ರೇಷ್ಠವಾದ ತೀರ್ಥಗಳು.

೬೭. ಎಲ್ಲಿಯಾದರೂ ದಾಮೋದರ ಎಂದು ಸ್ಮರಿಸುವ ಮಾನವರು ವೈಕುಂಠ ಲೋಕವನ್ನು ಸೇರಿ ಮರಳಿ ಸಂಸಾರಿಗಳಾಗಿ ಜನಿಸುವುದಿಲ್ಲ.

೬೮. ಸೋಮನಾಥನ ಪಶ್ಚಿಮದಲ್ಲಿ ಹತ್ತಿರದಲ್ಲಿಯೇ ರೈವತಕಮಹಾಪರ್ವತವಿರುವುದು.

ವಾಹಿನೀ ವಹತೇ ತತ್ರ ನದೀ ಕಾಂಚನಶೇಖರಾತ್ ।
ಧಾತವಸ್ತತ್ರ ತೇ ರಕ್ತಾಃ ಶ್ವೇತಾ ನೀಲಾಸ್ತಥಾಸಿತಾಃ ॥ ೧೯ ॥
ಪಾಷಾಣಾಃ ಕುಂಜರಾಕಾರಾಶ್ಚಾನ್ಯೇ ಸೈರಿಭಸನ್ನಿಭಾಃ ।
ಚಣಕಾಕೃತಯಶ್ಚಾನ್ಯೇ ಅನ್ಯೇ ಗೋಕ್ಷುರಕಪ್ರಭಾಃ ॥ ೨೦ ॥
ವೃಕ್ಷಾ ವಲ್ಯಶ್ಚ ಗುಲ್ಮಾಶ್ಚ ಸಂತಾನಾಃ ಸಂತ್ಯನೇಕಶಃ ।
ಸರ್ವಂ ತತ್ಕಾಂಚನಮಯಂ ಮೂಲಂ ಪುಷ್ಪಂ ಫಲಂ ದಲಂ ॥ ೨೧ ॥
ನ ಹಿ ಪಶ್ಯತಿ ಪಾಪಾತ್ಮಾ ಮುಕ್ತಃ ಪಾಪೇನ ಪಶ್ಯತಿ ।
ಸೇವ್ಯತೇ ಸ ಗಿರಿರ್ನಿತ್ಯಂ ಧಾತುವಾದಪರೈರ್ನರೈಃ ॥ ೨೨ ॥
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಃ ಶೂದ್ರಾನುಗೈರ್ಬಹಿಃ ।
ಪಕ್ಷಿಣಸ್ತತ್ರ ಬಹವಃ ಶಿವಾಶಿವಗಿರಸ್ತದಾ ॥ ೨೩ ॥
ಹಂಸಸಾರಸಚಕ್ರಾಹ್ವಾಃ ಶುಕಕೋಕಿಲಬರ್ಹಿಣಃ ।
ಮೃಗಾಶ್ಚ ವಾನರೇಂದ್ರಾಶ್ಚ ಹಂಸಾ ವ್ಯಾಘ್ರಾಸ್ತಥೈವ ಚ ॥ ೨೪ ॥
ತತ್ತೀರ್ಥಸ್ಯ ಪ್ರಭಾವೇನ ನ ದುಷ್ಟಾನ್ಯಾಚರಂತಿ ತೇ ।
ಕಾಲೇನ ಮೃತ್ಯುಮಾಯಾಂತಿ ಪಶುಪಕ್ಷಿಸರೀಸೃಪಾಃ ॥ ೨೫ ॥
ಸರ್ವೇ ವಿಮಾನಮಾರೂಢಾ ಗಚ್ಛಂತಿ ಹರಿಮಂದಿರಂ ।
ವಾಯುನಾ ಪಾತಿತಂ ಯತ್ರ ಪತ್ರಪುಷ್ಪಫಲಾದಿಕಂ ॥ ೨೬ ॥

---

೧೯. ಅಲ್ಲಿ ಮೇಲ್ಭಾಗದಿಂದ ಒಂದು ನದಿಯು ಹರಿಯುವುದು. ಮತ್ತು ಕೆಂಪು ಬಿಳುಪು, ನೀಲ, ಕಪ್ಪು ಬಣ್ಣಗಳ ಧಾತುಗಳಿರುವುದು.

೨೦. ಅಲ್ಲಿ ಕೆಲವು ಕಲ್ಲುಗಳು ಆನೆಯಂತೆಯೂ, ಇನ್ನು ಕೆಲವು ಕೋಣಗಳಂತೆಯೂ, ಮತ್ತೆ ಕೆಲವು ಕಡಲೆಯಂತೆಯೂ, ಕೆಲವು ಗೋಕ್ಷುರಕದಂತೆಯೂ ಇರುವರು.

೨೧. ಅಲ್ಲಿ ಅನೇಕ ಮರಗಳೂ, ಬಳ್ಳಿಗಳೂ, ಪೊದೆಗಳೂ ಇರುವುವು. ಅಲ್ಲಿರುವ ಗೆಣಸು, ಹೂವು, ಹಣ್ಣು, ಎಲೆ ಇವೆಲ್ಲ ಸುವರ್ಣಮಯವಾದುವು.

೨೨–೨೭. ಅದನ್ನು ಪಾಪಿಷ್ಠನು ಕಾಣುವುದಿಲ್ಲ. ಪಾಪಮುಕ್ತನು ಕಾಣುವನು. ಧಾತುವಾದದಲ್ಲಿ ನಿರತರಾದ ಚತುರ್ವರ್ಣದ ಮಾನವರು ಯಾವಾಗಲೂ ಆ ಬೆಟ್ಟವನ್ನು ಸೇವಿಸುತ್ತಾರೆ. ಅಲ್ಲಿ ವಾಸಿಸುವ ಶುಭಾಶುಭಗಳನ್ನು ನುಡಿಯುವ ಪಕ್ಷಿಗಳೂ, ಹಂಸ, ಸಾರಸ, ಚಕ್ರವಾಕ, ಗಿಣಿ, ಕೋಗಿಲೆ, ನವಿಲುಗಳೂ, ಜಿಂಕೆಗಳೂ, ಉತ್ತಮ ಜಾತಿಯ ಕಪಿಗಳೂ, ಹುಲಿಗಳೂ ಆ ತೀರ್ಥದ ಪ್ರಭಾವದಿಂದ ದುಷ್ಕಾರ್ಯವನ್ನಾಚರಿಸುವುದಿಲ್ಲ. ಆ ಪಶು, ಪಕ್ಷಿ, ಹಾವುಗಳು ಉಚಿತ ಕಾಲದಲ್ಲಿ ಮಡಿದು ವಿಮಾನವನ್ನೇರಿ ವೈಕುಂಠವನ್ನು ಸೇರುವುವು. ಅಲ್ಲಿ ಗಾಳಿಯಿಂದ ಬಿದ್ದ ಪತ್ರ, ಪುಷ್ಪ, ಫಲಾದಿಗಳು

ತಸ್ಯಾ ನದ್ಯಾ ಜಲಂ ಸ್ಪೃಷ್ಟ್ವಾ ಸರ್ವಂ ವೈ ಮುಕ್ತಿಮಾಪ್ನುತೇ ।
ಸಾ ನದೀ ಪೃಥಿವೀಂ ಭಿತ್ವಾ ಪಾತಾಲಾದಾಗತಾ ನೃಪ ॥ ೭೭ ॥

ಪೂರ್ವಂ ಪನ್ನಗರಾಜಸ್ತು ತೇನ ಮಾರ್ಗೇಣ ಚಾಗತಃ ।
ಸ್ನಾತುಂ ದಾಮೋದರೇ ತೀರ್ಥೇ ಜನ್ಮಮೃತ್ಯುಪ್ರಘಾತಿನಿ ॥ ೭೮ ॥

ಸ್ವರ್ಗಾದಾಗತ್ಯ ಚಂದ್ರೋಽಪಿ ಯಷ್ಟ್ವಾಂ ಯಜ್ಞಂ ಸುಪುಷ್ಕಲಂ ।
ಯಕ್ಷ್ಮರೋಗಾದ್ವಿನಿರ್ಮುಕ್ತೋ ಗತಃ ಸ್ವರ್ಗಂ ನಿರಾಮಯಃ ॥ ೭೯ ॥

ಬಲಿನಾ ಚೈವ ದಾನಾನಿ ದತ್ತಾನ್ಯಾಗತ್ಯ ಕಾರ್ತಿಕೇ ।
ಹರಿಶ್ಚಂದ್ರೇಣ ವಿಧಿನಾ ನಲೇನ ನಹುಷೇಣ ಚ ॥ ೮೦ ॥

ನಾಭಾಗೇನಾಂಬರೀಷಾದ್ಯೈಃ ಕೃತಂ ಕರ್ಮ ಸುದುಷ್ಕರಂ ।
ದತ್ವಾ ದಾನಾನ್ಯನೇಕಾನಿ ಗಜಾ ಗಾವೋ ಹಯಾ ರಥಾಃ ॥ ೮೧ ॥

ಅನಡುತ್ಕಾಂಚನಂ ಭೂಮಿಂ ರತ್ನಾನಿ ವಿವಿಧಾನಿ ಚ ।
ಛತ್ರಾಣಿ ವಿಪ್ರಮುಖ್ಯೇಭ್ಯೋ ಯಾನಾನಿ ಚೈವ ವಾಸಸೀ ॥ ೮೨ ॥

ಅನ್ನಾನಿ ರಸಮಿಶ್ರಾಣಿ ದತ್ವಾ ದಾಮೋದರಾಗ್ರತಃ ।
ಗತಾಸ್ತೇ ವಿಷ್ಣುಭುವನಂ ನಾಗಚ್ಛಂತಿ ಮಹೀತಲೇ ॥ ೮೩ ॥

---

ಆ ನದಿಯ ನೀರಿನ ಸ್ಪರ್ಶದಿಂದ ಮುಕ್ತಿಯನ್ನು ಹೊಂದುವುವು. ದೊರೆಯೆ ! ಆ ನದಿಯು ಪಾತಾಳದಿಂದ ಭೂಮಿಯನ್ನು ಸೀಳಿಕೊಂಡು ಬಂದಿದೆ.

೭೮. ಹಿಂದೆ ಮಹಾಶೇಷನು ಜನ್ಮಮೃತ್ಯುಗಳನ್ನುಪರಿಹರಿಸುವ ಆ ದಾಮೋದರ ತೀರ್ಥದಲ್ಲಿ ಸ್ನಾನ ಮಾಡಲು ಆ ನದಿಯ ದಾರಿಯಿಂದ ಬಂದಿರುವನು.

೭೯. ಚಂದ್ರನುಯಜ್ಞವನ್ನುಮಾಡಲು ಸ್ವರ್ಗಲೋಕದಿಂದಲ್ಲಿಗೆ ಬಂದುಯಜ್ಞ ಮಾಡಿ ಕ್ಷಯರೋಗ ಮುಕ್ತನಾಗಿ ಸ್ವರ್ಗಕ್ಕೆ ತೆರಳಿದನು.

೮೦-೮೩. ಬಲಿಚಕ್ರವರ್ತಿಯೂ ಕಾರ್ತಿಕ ಮಾಸದಲ್ಲಿ ಇಲ್ಲಿಗೆ ಬಂದು ದಾನ ಗಳನ್ನಿತ್ತಿರುವನು. ಮತ್ತು ಹರಿಶ್ಚಂದ್ರ, ನಳ, ನಹುಷ, ನಾಭಾಗ, ಅಂಬರೀಷ ಮೊದಲಾದ ನರೇಂದ್ರರು ವಿಧಿಯಂತೆ ದುಷ್ಕರವಾದ ಕಾರ್ಯವನ್ನೆಸಗಿ ಆನೆ, ಗೋವು, ಕುದುರೆ, ರಥ, ಎತ್ತು, ಚಿನ್ನ ಭೂಮಿ, ರತ್ನ, ಕೊಡೆ, ವಾಹನ, ವಸ್ತ್ರ, ಷಡ್ರಸಾನ್ನ ಇವೇ ಮೊದಲಾದ ಅನೇಕ ದಾನಗಳನ್ನು ದಾಮೋದರನ ಮುಂದೆ ಬ್ರಾಹ್ಮಣರಿಗೆ ಕೊಟ್ಟು ವೈಕುಂಠವನ್ನು ಸೇರಿ ಮರಳಿ ಭೂಮಿಗೆ ಬರಲಿಲ್ಲ.

ಪತ್ರಂ ಪುಷ್ಪಂ ಫಲಂ ತೋಯಂ ತಸ್ಮಿಂಸ್ತೀರ್ಥೇ ದದಾತಿ ಯಃ ।
ದ್ವಿಜಾನಾಂ ಭಕ್ತಿಸಂಯುಕ್ತಃ ಸ ಯಾತಿ ಜಲಶಾಯಿನಂ ॥ ೮೪ ॥
ಪ್ರಸೃತಿಂ ಚಾಪಿ ಯೋ ದದ್ಯಾನ್ಮುಷ್ಟಿಂ ವಾಥ ಕ್ಷುಧಾರ್ತಿನೇ ।
ವಿಮಾನವರಮಾರೂಢಃ ಸ ಸೋಮಂ ಪ್ರತಿಗಚ್ಛತಿ ॥ ೮೫ ॥
ದಾಮೋದರಾಗ್ರತಃ ಕೃತ್ವಾ ಪರ್ವತಾನನ್ನಸಂಭವಾನ್ ।
ಪೂಜಿತಾನ್ಫಲಪುಷ್ಪೈಶ್ಚ ದೀಪಂ ದದ್ಯಾತ್ಸವರ್ತಿಕಂ ॥ ೮೬ ॥
ಅವಾಪ್ಯ ದುಷ್ಕರಂ ಸ್ಥಾನಂ ಕುಲಾನಾಂ ತಾರಯೇಚ್ಛತಂ ।
ಚತುರಂಗುಲಮಾತ್ರೇಽಪಿ ದತ್ತೇ ದಾಮೋದರಾಗ್ರತಃ ॥ ೮೭ ॥
ದಾನೇ ಯುಗಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಮಾ ಗಚ್ಛ ಹಿಮವತ್ಪೃಷ್ಠಂ ಮಲಯಂ ಮಾ ಚ ಮಂದರಂ ॥ ೮೮ ॥
ಗಚ್ಛ ರೈವತಕಂ ಶೈಲಂ ಯತ್ರ ದಾಮೋದರಃ ಸ್ಥಿತಃ ।
ಕೃತ್ವಾ ಮಾಸೋಪವಾಸಂ ತು ದ್ವಿಜೋ ದಾಮೋದರಾಗ್ರತಃ ॥ ೮೯ ॥
ನ ನಿವರ್ತತಿ ಕಾಲೇನ ದಾಮೋದರಪುರಂ ವ್ರಜೇತ್ ।
ಕರೋತ್ಯನಶನಂ ಯಶ್ಚ ನರೋ ನಾರ್ಯಥವಾ ಪುನಃ ।
ಸರ್ವಲೋಕಾನತಿಕ್ರಮ್ಯ ಸ ಹರೇರ್ಗೇಹಮಾಪ್ನುಯಾತ್ ॥ ೯೦ ॥

---

೮೪. ಆ ತೀರ್ಥದಲ್ಲಿ ಪತ್ರ, ಪುಷ್ಪ, ಫಲ, ನೀರು ಇವುಗಳನ್ನು ಭಕ್ತಿಯಿಂದ ಬ್ರಾಹ್ಮಣರಿಗೆ ಕೊಟ್ಟವನು ಶ್ರೀ ವಿಷ್ಣುವನ್ನು ಸೇರುವನು.

೮೫. ಅಲ್ಲಿ ಹಸಿವು ಗೊಂಡವನಿಗೆ ಒಂದು ಸೆರೆ ಅಥವಾ ಮುಷ್ಟಿ ಅನ್ನವನ್ನಿತ್ತವನು ವಿಮಾನವನ್ನೇರಿ ಚಂದ್ರನೆಡೆಗೆ ಹೋಗುವನು.

೮೬–೯೦. ದಾಮೋದರನ ಮುಂದೆ ಅನ್ನರಾಶಿಗಳನ್ನು ಹಾಕಿ ಫಲಪುಷ್ಪಗಳಿಂದ ಪೂಜಿಸಿ ಬತ್ತಿಯಿಂದ ದೀಪವನ್ನು ಹೊತ್ತಿಸಿದವನು ದುರ್ಲಭಸ್ಥಾನವನ್ನು ಪಡೆದು ನೂರು ಕುಲಗಳನ್ನುದ್ಧರಿಸುವನು. ದಾಮೋದರನ ಮುಂದೆ ನಾಲ್ಕು ಅಂಗುಲದಷ್ಟು ಅನ್ನವನ್ನು ಹಾಕಿದರೂ ಸಾವಿರ ಯುಗಗಳಕಾಲ ಸ್ವರ್ಗಲೋಕದಲ್ಲಿ ಪೂಜ್ಯನಾಗುವನು. ಹಿಮಾಲಯದ ತಪ್ಪಲಿಗೂ, ಮಲಯ ಮಂದರಶೈಲಗಳಿಗೂ ಹೋಗಬೇಡ, ದಾಮೋದರನಿರುವ ರೈವತಕ ಪರ್ವತಕ್ಕೆ ಹೋಗು. ಬ್ರಾಹ್ಮಣನು ದಾಮೋದರನ ಮುಂದೆ ಮಾಸೋಪವಾಸವನ್ನು ಮಾಡಿದರೆ ಕಾಲಾಂತರದಲ್ಲಿ ವೈಕುಂಠಲೋಕವನ್ನು ಸೇರಿ ಹಿಂದಿರುಗುವುದಿಲ್ಲ. ಹೆಂಗಸಾಗಲಿ, ಗಂಡಸಾಗಲಿ ಉಪವಾಸ ಮಾಡಿದರೆ ಸಕಲ ಲೋಕಗಳನ್ನು ಮೀರಿ ವೈಕುಂಠಲೋಕಕ್ಕೆ ಹೋಗುವರು.

ವಿಘ್ನಾನಿ ತತ್ರ ತಿಷ್ಠಂತಿ ನಿತ್ಯಂ ಪಂಚಶತಾನಿ ಚ ।
ಧರ್ಮವಿಧ್ವಂಸಕರ್ತ್ರಾಣಿ ನರಸ್ತತ್ರ ನ ಗಚ್ಛತಿ ॥ ೯೧ ॥
ಪ್ರದ್ಯುಮ್ನಬಲಶೈನೇಯಗದಾಚಕ್ರಾದಿಭಿಃ ಸಹ ।
ಶತಲಕ್ಷಪ್ರಮಾಣೈಸ್ತು ಸೇವ್ಯತೇ ಸ ಗಿರಿರ್ಮಹಾನ್ ॥ ೯೨ ॥
ಕ್ರೀಡಂತಿ ನಾರ್ಯಸ್ತೇಷಾಂ ಹಿ ನಿತ್ಯಂ ದಾಮೋದರಾಗ್ರತಃ ।
ಸುಚಂದ್ರವದನಾ ಗೌರ್ಯಃ ಶ್ಯಾಮಾಶ್ಚೈವ ಸುಮಧ್ಯಮಾಃ ॥ ೯೩ ॥
ನಿತಂಬಿನ್ಯಃ ಸುಕೇಶಾಶ್ಚ ಶುಭ್ರಾಃ ಸ್ವಾಯತಲೋಚನಾಃ ।
ಸುಗಂಡಾ ಲಲಿತಾಶ್ಚೈವ ಸುಕಕ್ಷಾಃ ಸುಪಯೋಧರಾಃ ॥ ೯೪ ॥
ಶೋಭಮಾನಾಃ ಸುಜಂಘಾಶ್ಚ ಸುಪಾದಾಃ ಸುಂದರಾಂಗುಲೀಃ ।
ರಾಜಪುತ್ರ್ಯೋ ಗಿರೌ ತಸ್ಮಿನ್ವಸಂತಿ ಚ ರಮಂತಿ ಚ ॥ ೯೫ ॥
ಕೌಸುಂಭಂ ಪಾದಯುಗಲೇ ಕುಂಕುಮಂ ಪೀತಕಂಚುಕಂ ।
ಬ್ರಾಹ್ಮಣೇಭ್ಯೋ ದದಂತೀಹ ಸ್ಪರ್ಧಮಾನಾಃ ಪೃಥಕ್ಪೃಥಕ್ ॥ ೯೬ ॥
ಭಕ್ಷ್ಯಂಭೋಜ್ಯಂ ಚ ಪೇಯಂ ಚ ಲೇಹ್ಯಂ ಚೋಷ್ಯಂ ಚ ಪಿಚ್ಛಿಲಂ ।
ತಾಂಬೂಲಂ ಪುಷ್ಪಸಂಯುಕ್ತಂ ಕಾರ್ತಿಕೇ ಹರಿವಾಸರೇ ॥ ೯೭ ॥

---

೯೧. ದಾಮೋದರ ಕ್ಷೇತ್ರಕ್ಕೆ ಹೋಗದವನಿಗೆ ಧರ್ಮವನ್ನು ನಾಶಗೊಳಿಸುವ ಐನೂರು ವಿಘ್ನಗಳು ಯಾವಾಗಲೂ ಮುಂದೆ ನಿಲ್ಲುವುವು.

೯೨. ಒಂದುಕೋಟಿ ಸಂಖ್ಯೆಯ ಪ್ರದ್ಯುಮ್ನ, ಶೈನೇಯ, ಗದಾಚಕ್ರಾದಿಗಳು ಆ ಮಹಾರೈವತಕ ಪರ್ವತವನ್ನು ಸೇವಿಸುತ್ತಾರೆ.

೯೩–೯೫. ಅಲ್ಲಿ ದಾಮೋದರನ ಮುಂದೆ ಅವರ ಹೆಂಗಸರು ವಿನೋದ ಪಡುತ್ತಾರೆ. ಮತ್ತು ಚಂದ್ರಮುಖಿಯರೂ, ನೀಲವರ್ಣೆಯರೂ, ಒಳ್ಳೆಯ ನಡುವುಳ್ಳ ವರೂ ಚೆನ್ನಾಗಿರುವ ಕೂದಲುಳ್ಳವರೂ ವಿಶಾಲವಾದ, ಕಣ್ಣುಗಳುಳ್ಳವರೂ ಒಳ್ಳೆ ಕಪೋಲ, ಕಂಕಳು, ಕುಚ, ನೊಣಕಾಲು, ಪಾದ, ಬೆರಳು ಇವುಗಳುಳ್ಳವರೂ ಆದ ರಾಜಪುತ್ರಿಯರು ಆ ರೈವತಕ ಪರ್ವತದಲ್ಲಿ ಆನಂದದಿಂದ ಆಡುತ್ತಿರುವರು.

೯೬–೯೭. ಆ ರಾಜಪುತ್ರಿಯರು ಕಾರ್ತಿಕಮಾಸದ ಹರಿದಿನದಲ್ಲಿ ಬ್ರಾಹ್ಮಣ ಸ್ತ್ರೀಯರಿಗೆ ಪಾದಗಳಿಗೆ ಅರಸಿನವನ್ನು ಹಚ್ಚಿ ಕುಂಕುಮ, ಹಳದಿ ಕುಪ್ಪಸ, ಭಕ್ಷ್ಯ, ಭೋಜ್ಯ, ಪಾಯಸ, ಲೇಹ್ಯ, ಚೋಷ್ಯ, ತಾಂಬೂಲ, ಹೂವು ಇವುಗಳನ್ನು ಕೊಡುತ್ತಾರೆ.

ದೃಷ್ಟ್ವಾ ತು ರೇವತೀಕುಂಡಂ ಪ್ರದದ್ಯಾತ್ಫಲಮುತ್ತಮಂ ।
ಪುತ್ರಿಣೀ ಋದ್ಧಿಸಂಪನ್ನಾ ಸುಭಗಾ ಜಾಯತೇ ಸತೀ ॥ ೯೮ ॥
ಏವಂ ಕೃತ್ವಾ ತು ಸಾ ರಾತ್ರಿರ್ನೀಯತೇ ನಿದ್ರಯಾ ವಿನಾ ।
ವೇದಘೋಷೈಃ ಸುಪುಣ್ಯೈಸ್ತು ಭಾರತಾಖ್ಯಾನವಾಚನೈಃ ॥ ೯೯ ॥
ಹುಂಕೃತೈಸ್ತಲಶಬ್ದೈಶ್ಚ ತಾಲಶಬ್ದೈಃ ಪುನಃಪುನಃ ।
ದೇಶಭಾಷಾವಿಭಾಷಿಣ್ಯೋ ರಾಮಾಮಂಡಲಮಧ್ಯತಃ ।
ಹಾಸ್ಯನೃತ್ಯಸಮಾಯುಕ್ತಾ ರಾಜನ್ದಾಮೋದರಾಗ್ರತಃ ॥ ೧೦೦ ॥
ಪಂಚಪಾಷಾಣಕಂ ಹರ್ಮ್ಯಂ ಯಃ ಕರೋತಿ ಶಿವಾಲಯಂ ।
ಪಂಚವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೧೦೧ ॥
ದಶಪಾಷಾಣಸಂಯುಕ್ತಂ ಕೃತ್ವಾ ದಾಮೋದರಾಗ್ರತಃ ।
ದಶವರ್ಷಸಹಸ್ರಾಣಿ ಸ್ವರ್ಗೇ ಹಲ್ಲತಿ ಮಲ್ಲತಿ ॥ ೧೦೨ ॥
ಶತಪಾಷಾಣಕಂ ಹರ್ಮ್ಯಂ ಯಃ ಕರೋತಿ ಮಹನ್ನೃಪ ।
ಮಂದಿರಂ ಸುಂದರಂ ಶುಭ್ರಂ ಸ ಯಾತಿ ಹರಿಮಂದಿರಂ ॥ ೧೦೩ ॥
ಕೃತ್ವಾ ಸಾಹಸ್ರಿಕಂ ಚೈತ್ಯಂ ಬಹುರೂಪಸಮನ್ವಿತಂ ।
ಸರ್ವಾಂಲ್ಲೋಕಾನತಿಕ್ರಮ್ಯ ಪರಂ ಬ್ರಹ್ಮಾಧಿಗಚ್ಛತಿ ॥ ೧೦೪ ॥

---

೯೮. ರೇವತೀ ಕುಂಡವನ್ನು ದರ್ಶನಮಾಡಿ ಉತ್ತಮ ಫಲವನ್ನು ದಾನಮಾಡಿದ ಸ್ತ್ರೀಯು ಸತ್ಪುತ್ರರುಳ್ಳವಳೂ, ಸಂಪತ್ತುಳ್ಳವಳೂ, ಸೌಭಾಗ್ಯವತಿಯೂ ಆಗುವಳು.

೯೯. ಸ್ತ್ರೀಯರು ಹೀಗೆಮಾಡಿ ನಿದ್ರೆಮಾಡದೆ ದಾಮೋದರನಮುಂದೆ ವೇದ ಘೋಷ, ಪುಣ್ಯಕರವಾದ ಭಾರತವಾಚನ, ಹುಂಕಾರ, ಚಪ್ಪಾಳೆ, ತಾಳಶಬ್ದ ಇವು ಗಳಿಂದಲೂ, ದೇಶಭಾಷೆಯ ಸಂಭಾಷಣೆಯಿಂದಲೂ, ಹಾಸ್ಯ, ನೃತ್ಯಗಳಿಂದಲೂ ರಾತ್ರಿಯನ್ನು ಕಳೆಯುತ್ತಾರೆ.

೧೦೧. ಐದು ಕಲ್ಲುಗಳಿಂದ ಶಿವಾಲಯವನ್ನು ಕಟ್ಟಿಸಿದವನು ಐದುಸಾವಿರ ವರ್ಷಗಳಕಾಲ ಸ್ವರ್ಗಲೋಕದಲ್ಲಿ ಪೂಜ್ಯನಾಗುವನು.

೧೦೨. ಹತ್ತು ಕಲ್ಲುಗಳಿಂದ ದಾಮೋದರನ ಮುಂದೆ ಶಿವಾಲಯವನ್ನು ಕಟ್ಟಿಸಿ ದವನು ಹತ್ತುಸಾವಿರ ವರ್ಷಗಳಕಾಲ ಸ್ವರ್ಗಲೋಕದಲ್ಲಿ ವಿನೋದ ಪಡುತ್ತಾನೆ.

೧೦೩. ದೊರೆಯೆ! ನೂರು ಕಲ್ಲುಗಳಿಂದ ಮನೋಹರವಾದ ಮಹೇಶ್ವರಾಲಯ ವನ್ನು ಕಟ್ಟಿಸಿದವನು ವೈಕುಂಠಲೋಕವನ್ನು ಸೇರುವನು.

೧೦೪. ಸಾವಿರ ಕಲ್ಲುಗಳಿಂದ ನಾನಾ ರೂಪವಾದ ದೇವಾಲಯವನ್ನು ಕಟ್ಟಿಸಿದ ವನು ಸಕಲಲೋಕಗಳನ್ನೂ ಅತಿಕ್ರಮಿಸಿ ಪರಬ್ರಹ್ಮನನ್ನು ಹೊಂದುವನು.

ಪಂಚವರ್ಣಧ್ವಜಂ ದದ್ಯಾದ್ದಾಮೋದರಗೃಹೋಪರಿ ।
ತಂತುಪ್ರಮಾಣವರ್ಷಾಣಿ ದಿವ್ಯಾನಿ ಸ ದಿವಂ ವ್ರಜೇತ್ ॥ ೧೦೫ ॥
ತಸ್ಯ ಗವ್ಯೂತಿಮಾತ್ರೇಣ ಕ್ಷೇತ್ರಂ ವಸ್ತ್ರಾಪಥಂ ಶುಭಂ ।
ಯದ್ದೃಷ್ಟ್ವಾ ಸರ್ವಪಾಪಾನಿ ವಿಲೀಯಂತೇ ಬಹೂನಿ ಚ ॥ ೧೦೬ ॥
ರಾಜಂಸ್ತತ್ಪದಮಾಯಾತಿ ಯದ್ಗತ್ವಾ ನ ನಿವರ್ತತೇ ।
ಪೂಜಯಿತ್ವಾ ಭವಂ ದೇವಂ ಭವಸಂಭವನಾಶನಂ ॥ ೧೦೭ ॥
ನರೋ ನಾರೀ ನೃಪಶ್ರೇಷ್ಠ ಶಿವಲೋಕೇ ಮಹೀಯತೇ ।
ತಚ್ಛ್ರುತ್ವಾ ವಚನಂ ತಸ್ಯ ಭದ್ರಸ್ಯ ಚ ಸುಭಾಷಿತಂ ॥ ೧೦೮ ॥
ಆಗತಃ ಕಾರ್ತಿಕೀಂ ಕರ್ತುಂ ದೇವೇ ದಾಮೋದರೇ ತತಃ ।
ಋಗ್ಯಜುಸ್ಸಾಮಸಂಯುಕ್ತೈರ್ಬ್ರಾಹ್ಮಣೈರ್ಬ್ರಹ್ಮವಿತ್ತಮೈಃ ॥ ೧೦೯ ॥
ಕ್ಷತ್ರಿಯೈಃ ಕ್ಷತ್ರಧರ್ಮಜ್ಞೈರ್ವೈಶ್ಯೈರ್ದಾನಪರಾಯಣೈಃ ।
ಸಹ ಶೂದ್ರೈಃ ಸಮಾಯಾತಸ್ತಸ್ಮಿಂಸ್ತೀರ್ಥೇ ಗಜೋ ನೃಪಃ ॥ ೧೧೦ ॥
ದತ್ವಾ ದಾನಾನ್ಯನೇಕಾನಿ ಹುತ್ವಾ ಹವಿರ್ಹುತಾಶನೇ ।
ಅಗ್ನಿಷ್ಟೋಮಾದಿಕಾನ್ಯಜ್ಞಾನ್ಹಯಮೇಧಾದಿಕಾನ್ಬಹೂನ್ ।
ಚಕಾರ ವಿಧಿವದ್ರಾಜಾ ಗಜಸ್ತತ್ರ ಸಮಾಹಿತಃ ॥ ೧೧೧ ॥

---

೧೦೫. ದಾಮೋದರಾಲಯದ ಮೇಲೆ ಐದುಬಣ್ಣದ ಧ್ವಜವನ್ನು ಏರಿಸಿದವನು ಅಷ್ಟುಪ್ರಮಾಣದ ದಿವ್ಯವರ್ಷಗಳಕಾಲ ಸ್ವರ್ಗವಾಸಿಯಾಗುವನು.

೧೦೬. ನಾಲ್ಕು ಮೈಲಿ ಪ್ರಮಾಣದ ಆ ವಸ್ತ್ರಾಪಥಕ್ಷೇತ್ರವನ್ನು ದರ್ಶನ ಮಾಡಿದರೆ ಸಕಲ ಪಾಪಗಳು ಪರಿಹಾರವಾಗುವುವು.

೧೦೭–೧೧೦. ಹೆಂಗಸರಾಗಲಿ, ಗಂಡಸರಾಗಲಿ ಸಂಸಾರವನ್ನು ಪರಿಹರಿಸುವ ಆ ಶಿವನನ್ನು ಪೂಜಿಸಿದರೆ ಪುನರಾವೃತ್ತಿಯಿಲ್ಲದ ಸ್ಥಾನವು ಲಭಿಸುವುದು. ಮತ್ತು ಶಿವ ಲೋಕದಲ್ಲಿ ಪೂಜ್ಯರಾಗುವರು. ಭದ್ರನ ಆ ಸೂಕ್ತಿಯನ್ನು ಕೇಳಿದ ಗಜನೃಪನು ದಾಮೋದರ ಕ್ಷೇತ್ರಕ್ಕೆ ಕಾರ್ತಿಕೀವ್ರತವನ್ನು ಮಾಡಲು ಋಗ್ಯಜುಸ್ಸಾಮವೇದಗಳನ್ನರಿತ ಬ್ರಾಹ್ಮಣರಿಂದಲೂ, ಕ್ಷತ್ರಿಯಧರ್ಮವನ್ನರಿತ ಕ್ಷತ್ರಿಯರಿಂದಲೂ, ದಾನನಿರತರಾದ ವೈಶ್ಯರಿಂದಲೂ ಕೂಡಿ ಆ ತೀರ್ಥಕ್ಕೆ ಬಂದನು.

೧೧೧. ಆ ಗಜನರೇಂದ್ರನು ಅಲ್ಲಿ ಸಾವಧಾನ ಮನಸ್ಸಿನಿಂದ ಅನೇಕ ದಾನಗಳನ್ನಿತ್ತು, ಅಗ್ನಿಯಲ್ಲಿ ಹೋಮಿಸಿ, ಅಗ್ನಿಷ್ಟೋಮ ಮೊದಲಾದ ಯಜ್ಞಗಳನ್ನೂ, ಅಶ್ವಮೇಧ ಮೊದಲಾದ ಯಾಗಗಳನ್ನೂ, ವಿಧಿಯಂತೆ ಮಾಡಿದನು.

ತತಶ್ಚ ನ್ಯವಸತ್ತತ್ರ ತಪಃ ಕರ್ತುಂ ಸಹರ್ಷಿಭಿಃ ।
ಊರ್ಧ್ವಪಾದಾಃ ಸ್ಥಿತಾ ವಿಪ್ರಾಃ ಪೀತ್ವಾ ಧೂಮಮಧೋಮುಖಾಃ ।
ಶುಷ್ಕಪತ್ರಾಶನಾಶ್ಚಾನ್ಯೇ ಅನ್ಯೇ ವೈ ಫಲಭೋಜನಾಃ ॥ ೧೧೨ ॥
ಮೂಲಾನಿ ಚಾನ್ಯೇ ಭಕ್ಷಂತಿ ಅನ್ಯೇ ಪಾರ್ಯಶನಾ ದ್ವಿಜಾಃ ।
ಆಲೋಕಂತಿ ಸ್ವಮನ್ಯೇ ಚ ತಥಾನ್ಯೇ ಜಲಶಾಯಿನಃ ॥ ೧೧೩ ॥
ಪಂಚಾಗ್ನಿಸಾಧಕಾಶ್ಚಾನ್ಯೇ ಶಿಲಾಚೂರ್ಣಸ್ಯ ಭಕ್ಷಕಾಃ ।
ಜಪಂತಿ ಚಾನ್ಯೇ ಸಂಶುದ್ಧಾ ಗಾಯತ್ರೀಂ ವೇದಮಾತರಂ ॥
ಸಾವಿತ್ರೀಂ ಮನಸಾ ಚಾನ್ಯೇ ದೇವೀಮನ್ಯೇ ಸರಸ್ವತೀಂ ॥ ೧೧೪ ॥
ಸೂಕ್ತಾನಿ ಹಿ ಪವಿತ್ರಾಣಿ ಬ್ರಹ್ಮಣಾ ನಿರ್ಮಿತಾನಿ ಚ ।
ಅನ್ಯೇಽವಸಂಸ್ತದಾ ತತ್ರ ದ್ವಾದಶಾಕ್ಷರಚಿಂತಕಾಃ ॥ ೧೧೫ ॥
ಆಲೋಕ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃಪುನಃ ।
ಇದಮೇವ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ ॥ ೧೧೬ ॥
ಆರಾಧಿತಃ ಸುದುಷ್ಪಾರೇ ಭವೇ ಭಗವತೋ ವಿನಾ ।
ತಥಾ ನಾನ್ಯೋ ಮಹಾದೇವಾತ್ಪತಂತಂ ಯೋಽಭಿರಕ್ಷತಿ ॥ ೧೧೭ ॥

---

೧೧೨–೧೧೪. ತರುವಾಯ ಅವನು ಅಲ್ಲಿ ಋಷಿಗಳೊಡನೆ ತಪಸ್ಸನ್ನು ಮಾಡುವುದಕ್ಕಾಗಿ ವಾಸಿಸಿದನು. ಆ ಋಷಿಗಳಲ್ಲಿ ಕೆಲವರು ಹೊಗೆಯನ್ನು ಕುಡಿಯುತ್ತ ಕೆಳಮುಖರಾಗಿಯೂ, ಮೇಲ್ಮುಖವಾದ ಪಾದವುಳ್ಳವರಾಗಿಯೂ, ಕೆಲವರು ಒಣಗಿದ ಎಲೆಗಳನ್ನು ತಿನ್ನುವವರಾಗಿಯೂ, ಕೆಲವರು ಹಣ್ಣುಗಳನ್ನು ಭಕ್ಷಿಸುವವರಾಗಿಯೂ, ಇನ್ನು ಕೆಲವರು ಗೆಣಸನ್ನು ತಿನ್ನುವವರಾಗಿಯೂ, ಮತ್ತೆ ಕೆಲವರು ನೀರನ್ನು ಕುಡಿಯುವವರಾಗಿಯೂ, ಕೆಲವರು ತಮ್ಮಲ್ಲಿಯೇ ಧ್ಯಾನಿಸುವವರಾಗಿಯೂ, ಕೆಲವರು ನೀರಿನಲ್ಲಿ ಮಲಗುವವರಾಗಿಯೂ, ಕೆಲವರು ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನು ಮಾಡುವವರಾಗಿಯೂ, ಮತ್ತೆ ಕೆಲವರು ಕಲ್ಲಿನ ಪುಡಿಯನ್ನು ತಿನ್ನುವವರಾಗಿಯೂ ತಪಸ್ಸನ್ನು ಮಾಡುತ್ತಿದ್ದರು. ಕೆಲವರು ಗಾಯತ್ರಿಯನ್ನೂ, ಇನ್ನು ಕೆಲವರು ಸಾವಿತ್ರಿಯನ್ನೂ, ಇತರರು ಸರಸ್ವತಿಯನ್ನೂ ಜಪಿಸುತ್ತಿದ್ದರು.

೧೧೫. ಇತರ ಕೆಲವರು ಬ್ರಹ್ಮನು ನಿರ್ಮಿಸಿರುವ ಪವಿತ್ರವಾದ ಸೂಕ್ತಗಳನ್ನೂ, ದ್ವಾದಶಾಕ್ಷರಗಳನ್ನೂ ಪಠಿಸುತ್ತಿದ್ದರು.

೧೧೬. ಸಕಲ ಶಾಸ್ತ್ರಗಳನ್ನು ನೋಡಿ ಪುನಃ ಪುನಃ ವಿಮರ್ಶಿಸಲು ಯಾವಾಗಲೂ ನಾರಾಯಣನನ್ನು ಧ್ಯಾನಿಸಬೇಕೆಂದು ಸಿದ್ಧವಾಯಿತು.

೧೧೭. ಸರ್ವಪೂಜ್ಯನಾದ ಮಹಾದೇವನನ್ನು ಬಿಟ್ಟು ಅಪಾರವಾದ ಸಂಸಾರದಲ್ಲಿ ಮುಳುಗುತ್ತಿರುವ ನರನನ್ನು ಯಾವ ದೇವತೆಯು ತಾನೇ ಕಾಪಾಡುವನು.?

ಗತಾಗತಾ ನಿವರ್ತಂತೇ ಚಂದ್ರಸೂರ್ಯಾದಯೋ ಗ್ರಹಾಃ ।
ಅದ್ಯಾಪಿ ನ ನಿವರ್ತಂತೇ ದ್ವಾದಶಾಕ್ಷರಚಿಂತಕಾಃ ॥ ೧೧೮ ॥
ಯೇಽಕ್ಷರಾ ಋಷಯಶ್ಚಾನ್ಯೇ ದೇವಲೋಕಜಿಗೀಷವಃ ।
ಪ್ರಾಪ್ನುವಂತಿ ತತಃ ಸ್ಥಾನಂ ದಗ್ಧಬೀಜಂ ಚ ತತ್ತಥಾ ॥ ೧೧೯ ॥
ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರದ್ವಯಂ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥ ೧೨೦ ॥
ಏಕಭಕ್ತಂ ತಥಾ ನಕ್ತಮಯಾಚ್ಯಮುಷಿತಂ ತಥಾ ।
ಏವಮಾದೀನಿ ಚಾನ್ಯಾನಿ ಕೃತ್ವಾ ದಾಮೋದರಾಗ್ರತಃ ॥
ಕೃತಕೃತ್ಯಾ ಭವಂತೀಹ ಯಾವದಾಭೂತಸಂಪ್ಲವಂ ॥ ೧೨೧ ॥
ಸ ರಾಜಾ ಋಷಿಭಿಃ ಸಾರ್ಧಂ ಯಾವತ್ತಿಷ್ಠತಿ ತತ್ರ ವೈ ।
ವಿಮಾನಾನಾಂ ಸಹಸ್ರಾಣಿ ತಾವತ್ತತ್ರಾಗತಾನಿ ಚ ॥ ೧೨೨ ॥
ಗಂಧರ್ವಾಪ್ಸರಸಸ್ತತ್ರ ಸಿದ್ಧಚಾರಣಕಿನ್ನರಾಃ ।
ಸರ್ವೇ ವಿಮಾನಮಾರೂಢಾಃ ಶತಶೋಽಥ ಸಹಸ್ರಶಃ ॥ ೧೨೩ ॥

---

೧೧೮. ಚಂದ್ರ ಸೂರ್ಯಾದಿ ಗ್ರಹಗಳು ಬರುತ್ತಾರೆ. ಹೋಗುತ್ತಾರೆ. ದ್ವಾದಶಾಕ್ಷರವನ್ನು ಚಿಂತಿಸುವವರು ಈಗಲೂ ಹಿಂದಿರುಗುವುದಿಲ್ಲ.

೧೧೯. ಬ್ರಹ್ಮಚಾರಿಗಳೂ, ದೇವಲೋಕಕ್ಕೆ ಹೋಗಲು ಬಯಸುವವರೂ ಆದ ಋಷಿಗಳು ಆ ದ್ವಾದಶಾಕ್ಷರಚಿಂತನೆಯಿಂದ ಮರಳಿ ಜನಿಸದ ಸ್ಥಾನವನ್ನು ಪಡೆಯುವರು.

೧೨೦. ಹರಿಯೆಂಬ ಎರಡು ಅಕ್ಷರಗಳನ್ನು ಒಂದುಸಾರಿ ಉಚ್ಚರಿಸಿದವನು ಮೋಕ್ಷಕ್ಕೆ ಹೋಗಲು ದಟ್ಟಿಯನ್ನು ಕಟ್ಟಿ ಸಿದ್ಧನಾಗುವನು.

೧೨೧. ದಾಮೋದರನ ಮುಂದೆ ಒಂದು ಊಟ, ರಾತ್ರಿ ಉಪವಾಸ, ಯಾರನ್ನೂ ಬೇಡದೆ ಉಪವಾಸವಿರುವುದು ಇವುಗಳೇ ಮೊದಲಾದುವನ್ನು ಮಾಡಿದವರು ಪ್ರಳಯ ಕಾಲವರೆಗೆ ಧನ್ಯರಾಗುವರು.

೧೨೨. ಆ ರಾಜನು ಋಷಿಗಳೊಡನೆ ಅಲ್ಲಿ ಹೀಗೆ ವಾಸಿಸುತ್ತಿರಲು ಅಲ್ಲಿಗೆ ಸಾವಿರ ವಿಮಾನಗಳು ಬಂದುವು.

೧೨೩. ಅವುಗಳಲ್ಲಿ ಸಾವಿರಾರು ಮಂದಿ ಗಂಧರ್ವರೂ, ಅಪ್ಸರರೂ, ಸಿದ್ಧರೂ, ಚಾರಣರೂ, ಕಿನ್ನರರೂ, ಕುಳಿತಿದ್ದರು.

ಸರ್ವೈರ್ಜನಪದೈಸ್ಸಾರ್ಥ ಸ ರಾಜಾಭಾರ್ಯಯಾ ಸಹ ।
ಗತೋ ವಿಮಾನಮಾರೂಢೋ ಯತ್ತತ್ಪದ ಮನುಮಯಂ ॥ ೧೨೪ ॥
ಯ ಇದಂ ಪಠತೇ ನಿತ್ಯಂ ಶೃಣುಯಾದ್ವಾಪಿ ಮಾನವಃ ।
ಸರ್ವಪಾಪವಿನಿರ್ಮುಕ್ತಃ ಪರಂ ಬ್ರಹ್ಮಾಧಿಗಚ್ಛತಿ ॥ ೧೨೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಪ್ರಥಮೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ದಾಮೋದರಮಾಹಾತ್ಮ್ಯ ವರ್ಣನಂ ನಾಮ
ಪ್ರಥಮೋಽಧ್ಯಾಯಃ

---

೧೨೪. ಆ ಗಜನೃಪನು ಸಕಲ ಪ್ರಜೆಗಳಿಂದಲೂ, ಪತ್ನಿಯಿಂದಲೂ, ಕೂಡಿ ವಿಮಾನವನ್ನೇರಿ ಮೋಕ್ಷಕ್ಕೆ ಹೋದನು.

೧೨೫. ಇದನ್ನು ಕೇಳುವವನಾಗಲಿ ಹೇಳುವವನಾಗಲಿ ಸಕಲ ಪಾಪಮುಕ್ತನಾಗಿ ಪರಬ್ರಹ್ಮನನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯ
ದಾಮೋದರಮಾಹಾತ್ಮ್ಯವರ್ಣನವೆಂಬ
ಒಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ದ್ವಿತೀಯೋಽಧ್ಯಾಯಃ

## ಭವಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ತತೋ ಗಚ್ಛೇನ್ಮಹಾದೇವಿ ಕ್ಷೇತ್ರಂ ವಸ್ತ್ರಾಪಥಂ ಪುನಃ ।
ಯತ್ಪ್ರಭಾಸಸ್ಯ ಸರ್ವಸ್ವಂ ಕ್ಷೇತ್ರಂ ನಾಭಿಃ ಪ್ರಿಯಂ ಮಮ ॥ ೧ ॥
ಯತ್ರ ಸಾಕ್ಷಾದ್ಭವೋ ದೇವಃ ಸೃಷ್ಟಿಸಂಹಾರಕಾರಕಃ ।
ಪೃಥಿವ್ಯಾಂ ಸತ್ವಧಿಷ್ಠಾತಾ ತತ್ತ್ವಾನಾಮಾದಿಮಃ ಪ್ರಭುಃ ॥ ೨ ॥
ಸ ಸ್ವಯಂಭೂಃ ಸ್ಥಿತಸ್ತತ್ರ ಪ್ರಭಾಸೇ ಭೂತಿದೋ ಭವಃ ।
ಭವತೀದಂ ಜಗದ್ಯಸ್ಮಾತ್ತಸ್ಮಾದ್ಭವ ಇತಿ ಸ್ಮೃತಃ ॥ ೩ ॥
ಯಃ ಸಕೃತ್ಕುರುತೇ ಯಾತ್ರಾಂ ಕ್ಷೇತ್ರೇ ವಸ್ತ್ರಾಪಥೇ ಪುನಃ ।
ವಿಗಾಹ್ಯ ತತ್ರ ತೀರ್ಥಾನಿ ಕೃತಕೃತ್ಯಃ ಸ ಜಾಯತೇ ॥ ೪ ॥

---

### ಕನ್ನಡದ ಅನುವಾದ

### ಭವಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ :—ಮಹಾದೇವಿ! ಬಳಿಕ ವಸ್ತ್ರಾಪಥ ಕ್ಷೇತ್ರಕ್ಕೆ ಹೋಗಬೇಕು. ಅದು ಪ್ರಭಾಸಕ್ಷೇತ್ರದ ಸರ್ವಸ್ವವೂ, ನಾಭಿರೂಪವೂ ಆಗಿರುವುದು.

೨-೩. ಅಲ್ಲಿ ಪ್ರಪಂಚದ ಸೃಷ್ಟಿಸಂಹಾರಗಳನ್ನು ಮಾಡುವವನೂ ತತ್ವಗಳಿಗೆ ಅಭಿಮಾನಿಯೂ ಸ್ವಯಂಭವನೂ, ಆದಿಪುರುಷನೂ ಆದ ಮಹೇಶ್ವರನು ನೆಲೆಸಿರುವನು. ಅವನಿಂದ ಈ ಜಗತ್ತು ಹುಟ್ಟುವುದರಿಂದ ಅವನು ಭವನೆಂದು ಪ್ರಸಿದ್ಧನಾದವನು.

೪. ಒಂದು ಸಾರಿ ಅಲ್ಲಿಯ ತೀರ್ಥಗಳಲ್ಲಿ ಮಿಂದು ಅಲ್ಲಿರುವ ವಸ್ತ್ರಾಪಥಕ್ಷೇತ್ರಯನ್ನು ಮಾಡಿದವನು ಧನ್ಯನಾಗುವನು.

ಅಥ ದೃಷ್ಟ್ವಾ ಭವಂ ದೇವಂ ಸಕೃತ್ಪೂಜ್ಯ ವಿಧಾನತಃ ।
ಕೇದಾರಯಾತ್ರಾಫಲಭಾಕ್ಸ ಭವೇನ್ಮನುಜೋತ್ತಮಃ ॥ ೫ ॥
ಚೈತ್ರೇ ಮಾಸಿ ಭವಂ ದೃಷ್ಟ್ವಾ ನ ಪುನರ್ಜಾಯತೇ ಭುವಿ ।
ವೈಶಾಖ್ಯಾಮಥವಾ ಸಮ್ಯಗ್ಭವಂ ದೃಷ್ಟ್ವಾ ವಿಮುಚ್ಯತೇ ॥ ೬ ॥
ವಾರಾಣಸ್ಯಾಂ ಕುರುಕ್ಷೇತ್ರೇ ನರ್ಮದಾಯಾಂ ತು ಯತ್ಫಲಂ ।
ತತ್ಫಲಂ ನಿಮಿಷಾರ್ಧೇನ ಭವಂ ದೃಷ್ಟ್ವಾ ದಿನೇದಿನೇ ॥ ೭ ॥
ದುರ್ಲಭಸ್ತತ್ರ ವಾಸಸ್ತು ದುರ್ಲಭಂ ಭವದರ್ಶನಂ ।
ಪ್ರೇತತ್ವಂ ನೈವ ತಸ್ಯಾಸ್ತಿ ನ ಯಾಮ್ಯಾ ನಾರಕೀ ವ್ಯಥಾ ॥ ೮ ॥
ಯೇಷಾಂ ಭವಾಲಯೇ ಪ್ರಾಣಾ ಗತಾ ವೈ ವರವರ್ಣಿನಿ ।
ಧನ್ಯಾನಾಮಪಿ ಧನ್ಯಾಸ್ತೇ ದೇವಾನಾಮಪಿ ದೇವತಾಃ ॥ ೯ ॥
ವಸ್ತ್ರಾಪಥೇ ಮತಿರ್ಯೇಷಾಂ ಭವೇ ಯೇಷಾಂ ಮತಿಃ ಸ್ಥಿರಾ ।
ಗೋದಾನಂ ತತ್ರ ಶಂಸಂತಿ ಬ್ರಾಹ್ಮಣಾನಾಂ ಚ ಭೋಜನಂ ।
ಪಿಂಡದಾನಂ ಚ ತತ್ರೈವ ಕಲ್ಪಾಂತಂ ತೃಪ್ತಿಮಾವಹೇತ್ ॥ ೧೦ ॥

---

೫. ತರುವಾಯ ಮಹೇಶ್ವರನನ್ನು ಕಂಡು ವಿಧಿಯಿಂದ ಪೂಜಿಸಿದವನು ಕೇದಾರಯಾತ್ರಾಫಲಗಳನ್ನು ಹೊಂದಿ ಮನುಷ್ಯರಲ್ಲಿ ಉತ್ತಮನಾಗುವನು.

೬. ಚೈತ್ರಮಾಸದಲ್ಲಿ ಈಶ್ವರನನ್ನು ನೋಡಿದವನು ಮರಳಿ ಜನಿಸುವುದಿಲ್ಲ. ವೈಶಾಖಮಾಸದಲ್ಲಿ ದರ್ಶನಮಾಡಿದವನು ಮುಕ್ತನಾಗುವನು.

೭. ಪ್ರತಿದಿನವೂ ಮಹೇಶ್ವರನನ್ನು ಅರ್ಧನಿಮಿಷಕಾಲ ನೋಡುವುದರಿಂದ ಕಾಶೀ, ಕುರುಕ್ಷೇತ್ರ, ನರ್ಮದೆ ಇವುಗಳ ಯಾತ್ರೆಮಾಡಿದ ಫಲವು ಲಭಿಸುವುದು.

೮. ಆ ವಸ್ತ್ರಾಪಥಕ್ಷೇತ್ರವಾಸವೂ, ಆ ಮಹೇಶ್ವರನ ದರ್ಶನವೂ ದುರ್ಲಭವಾದುವು. ಅದನ್ನು ಮಾಡಿದವರಿಗೆ ಪ್ರೇತತ್ವವೂ, ಯಮನ ಸಂಬಂಧವಾದ ನರಕವೂ ಇಲ್ಲ.

೯-೧೦. ಪ್ರಿಯಳೆ! ವಸ್ತ್ರಾಪಥದಲ್ಲಿಯೂ, ಭವನಲ್ಲಿಯೂ ಸ್ಥಿರ ಬುದ್ಧಿಯುಳ್ಳವರಾಗಿ ಭವಾಲಯದಲ್ಲಿ ಮೃತರಾದವರು ಧನ್ಯರಿಗೆ ಧನ್ಯರೂ, ದೇವತೆಗಳಿಗೂ ದೇವತೆಗಳೂ ಆಗುವರು. ಅಲ್ಲಿ ಮಾಡಿದ ಗೋದಾನವೂ, ಬ್ರಾಹ್ಮಣ ಭೋಜನವೂ, ಶ್ಲಾಘ್ಯವಾದುವು. ಅಲ್ಲಿ ಮಾಡಿದ ಪಿಂಡಪ್ರದಾನವು ಕಲ್ಪಾಂತ್ಯದವರೆಗೆ ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುವುದು.

**ಇತಿ ಸಂಕ್ಷೇಪತಃ ಪ್ರೋಕ್ತಂ ಮಾಹಾತ್ಮ್ಯಂ ತೇ ಭವೋದ್ಭವಂ ।**
**ಶ್ರುತಂ ಪಾಪೋಪಶಮನಂ ಯಜ್ಞಾಯುತಫಲಪ್ರದಂ ॥ ೧೧ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ವಸ್ತ್ರಾಪಥಕ್ಷೇತ್ರಸ್ಥಭವಮಾಹಾತ್ಮ್ಯವರ್ಣನಂ ನಾಮ
ದ್ವಿತೀಯೋಽಧ್ಯಾಯಃ

---

೧೧. ಹೀಗೆ ನಿನಗೆ ಕೇಳುವುದರಿಂದ ಪಾಪವನ್ನು ಪರಿಹರಿಸುವುದೂ, ಹತ್ತು ಸಾವಿರ ಯಜ್ಞಗಳ ಫಲವನ್ನು ಕೊಡುವುದೂ ಆದ ಭವಕ್ಷೇತ್ರದ ಮಾಹಾತ್ಮ್ಯವನ್ನು ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ವಸ್ತ್ರಾಪಥಕ್ಷೇತ್ರಸ್ಥಭವಮಾಹಾತ್ಮ್ಯವರ್ಣನವೆಂಬ
ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತೃತೀಯೋಽಧ್ಯಾಯಃ

## ಪ್ರವರತೀರ್ಥಾನುಕೀರ್ತನಂ

ಈಶ್ವರ ಉವಾಚ :—

ಅಥ ವಸ್ತ್ರಾಪಥೇ ಕ್ಷೇತ್ರೇ ಸಂತಿ ತೀರ್ಥಾನಿ ಕೋಟಿಶಃ ।
ತಥಾಪಿ ಸಾರಂ ತೇ ವಚ್ಮಿ ಸರ್ವತೀರ್ಥಮಹೋದಯಂ ॥ ೧ ॥
ದಾಮೋದರೇ ನದೀ ಪ್ರೋಕ್ತಾ ಸ್ವರ್ಣರೇಖೇತಿ ಯಾ ಸ್ಮೃತಾ ।
ಬ್ರಹ್ಮಕುಂಡಂ ಚ ತತ್ರೈವ ತಥಾ ಬ್ರಹ್ಮೇಶ್ವರಃ ಸ್ಮೃತಃ ॥ ೨ ॥
ಕಾಲಮೇಘಶ್ಚ ಸಂಪ್ರೋಕ್ತೋ ಭವೋ ದಾಮೋದರಃ ಸ್ಮೃತಃ ।
ಗವ್ಯೂತಿದ್ವಿತಯೇಸ್ಯೈವ ಕಾಲಿಕಾ ತತ್ರ ಕೀರ್ತಿತಾ ॥ ೩ ॥
ಇಂದ್ರೇಶ್ವರಶ್ಚ ತತ್ರೈವ ರೈವತಃ ಪರ್ವತಸ್ತಥಾ ।
ಉಜ್ಜಯಂತಶ್ಚ ತತ್ರೈವ ದೇವಃ ಕುಂಭೀಶ್ವರಃ ಸ್ಮೃತಃ ॥ ೪ ॥
ಭೀಮೇಶ್ವರಶ್ಚ ತತ್ರೈವ ತತಃ ಕ್ಷೇತ್ರಂ ಮಹಾಪ್ರಭಂ ।
ತೈಲಸಾರಣಿಕಂ ನಾಮ ತ್ರೇತಾಯಾಂ ಹೈಮನಾರಕಂ ॥ ೫ ॥

---

ಕನ್ನಡದ ಅನುವಾದ

## ಪ್ರವರತೀರ್ಥಾನುಕೀರ್ತನ

೧. ಈಶ್ವರನು ಹೇಳುತ್ತಾನೆ :—ಆ ವಸ್ತ್ರಾಪಥ ಕ್ಷೇತ್ರದಲ್ಲಿ ಕೋಟ್ಯಂತರ ತೀರ್ಥಗಳಿರುವುವು. ಆದರೂ ನಿನಗೆ ಶ್ರೇಷ್ಠವಾದ ಸರ್ವತೀರ್ಥದ ಮಾಹಾತ್ಮ್ಯವನ್ನು ಹೇಳುವೆನು.

೨–೩. ದಾಮೋದರದಲ್ಲಿರುವ ನದಿಯು ಸ್ವರ್ಣರೇಖಾ ಎಂದು ಪ್ರಸಿದ್ಧವಾಗಿರುವುದು. ಅಲ್ಲಿಯೇ ಇರುವ ಬ್ರಹ್ಮಕುಂಡವು ಬ್ರಹ್ಮೇಶ್ವರವೆಂದೂ, ಕಾಲಮೇಘನು ದಾಮೋದರನೆಂದೂ ಪ್ರಸಿದ್ಧರಾಗಿರುವರು. ಕಾಳಿಕೆಯು ನಾಲ್ಕು ಮೈಲಿ ವಿಸ್ತೀರ್ಣಳಾಗಿರುವಳು.

೪. ಅಲ್ಲಿರುವ ರೈವತಪರ್ವತವು ಇಂದ್ರೇಶ್ವರನೆಂದೂ, ಉಜ್ಜಯಂತನು ಕುಂಭೀಶ್ವರನೆಂದೂ ಪ್ರಸಿದ್ಧರಾಗಿರುವರು.

೫. ಅಲ್ಲಿ ಭೀಮೇಶ್ವರನೂ ಇರುವನು. ಆದ್ದರಿಂದ ಅತ್ಯಂತಕಾಂತಿಯುಳ್ಳ ಆ ಕ್ಷೇತ್ರವು ತ್ರೇತಾಯುಗದಲ್ಲಿ ತೈಲಸಾರಣಿಕವೆಂದು ವಿಖ್ಯಾತವಾಗಿರುವುದು.

ಪಂಚಗವ್ಯೂತಿಮಾತ್ರಂ ತು ತತ್ಕ್ಷೇತ್ರಂ ಸಂಪ್ರಕೀರ್ತಿತಂ ।
ಮೃಗೀಕುಂಡಂ ಚ ತತ್ರೈವ ಸರ್ವಪಾತಕನಾಶನಂ ॥ ೬ ॥
ಏತದ್ವಸ್ತ್ರಾಪಥಂ ಕ್ಷೇತ್ರಂ ರತ್ನಧಾತ್ವೋಸ್ತಥಾಕರಂ ।
ಕಥಿತಂ ತವ ದೇವೇಶಿ ಪುನಃ ಸಂಕ್ಷೇಪತೋ ಮಯಾ ॥ ೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಪ್ರವರತೀರ್ಥಾನುಕೀರ್ತನಂ ನಾಮ
ತೃತೀಯೋಽಧ್ಯಾಯಃ

---

೬. ಆ ಕ್ಷೇತ್ರವು ಇಪ್ಪತ್ತು ಮೈಲಿ ವಿಸ್ತೀರ್ಣವಾಗಿರುವುದು. ಸಕಲಪಾಪಗಳನ್ನು ನೀಗಿಸುವ ಮೃಗೀಕುಂಡವು ಅಲ್ಲಿಯೇ ಇರುವುದು.

೭. ದೇವೇಶಿ! ರತ್ನಧಾತುಗಳಿಗೆ ಆಶ್ರಯವಾದ ಈ ವಸ್ತ್ರಾಪಥಕ್ಷೇತ್ರವನ್ನು ಮರಳಿ ನಿನಗೆ ಸಂಕ್ಷೇಪವಾಗಿ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಪ್ರವರತೀರ್ಥಾನುಕೀರ್ತನವೆಂಬ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

## ಚತುರ್ಥೋಽಧ್ಯಾಯಃ

### ದುನ್ನಾವಿಲ್ಲಪೃದ್ಗಿರಿಸ್ಥಾನಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ತತೋ ಗಚ್ಛೇನ್ಮಹಾದೇವಿ ದುನ್ನಾವಿಲ್ಲೇತಿ ವಿಶ್ರುತಂ ।
ಯೋಜನಸ್ಯಾಂತರೇ ದೇವಿ ಪಶ್ಚಿಮೇ ಮಂಗಲಸ್ಥಿತೇಃ ॥ ೧ ॥
ದುನ್ನಕೋ ಯತ್ರ ಭೀಮೇನ ಭುಕ್ತ್ವಾ ತ್ಯಕ್ತಃ ಪುರಾ ಪ್ರಿಯೇ ।
ತತ್ರೈವ ವಿವರಂ ದಿವ್ಯಂ ಮಹಾಪಾತಾಲಮಾರ್ಗದಂ ॥ ೨ ॥
ತಸ್ಯ ಕಲ್ಪಃ ಪುರಾ ಪ್ರೋಕ್ತಾಃ ಪಾತಾಲೋತ್ತರಸಂಗ್ರಹೇ ।
ತತ್ರ ಲಿಂಗಾನೇಕಾನಿ ಸಿದ್ಧಸ್ಥಾನಾನಿ ಷೋಡಶ ॥ ೩ ॥

---

### ಕನ್ನಡದ ಅನುವಾದ

### ದುನ್ನಾವಿಲ್ಲಪೃದ್ಗಿರಿಸ್ಥಾನಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ :—ಮಹಾದೇವಿ ! ಬಳಿಕ ಮಂಗಳ ಸ್ಥಿತಿಯ ಪಶ್ಚಿಮದಲ್ಲಿ ಯೋಜನ ದೂರದಲ್ಲಿರುವ ದುನ್ನಾವಿಲ್ಲವೆಂಬ ಕ್ಷೇತ್ರಕ್ಕೆ ಹೋಗಬೇಕು.

೨. ಪ್ರಿಯಳೆ ! ಹಿಂದೆ ಅಲ್ಲಿ ಭೀಮಸೇನನು ದುನ್ನಕವನ್ನು ಭುಂಜಿಸಿ ಬಿಟ್ಟಿರುವನು. ಅಲ್ಲಿಯೇ ಮಹಾಪಾತಾಳಕ್ಕೆ ಮಾರ್ಗವನ್ನೀಯುವ ವಿವರವಿರುವುದು.

೩. ಹಿಂದೆ ಪಾತಾಳೋತ್ತರ ಸಂಗ್ರಹದಲ್ಲಿ ಅದರ ಕ್ರಮವನ್ನು ತಿಳಿಸಿರುವೆನು. ಅಲ್ಲಿ ಅನೇಕ ಲಿಂಗಗಳೂ, ಹದಿನಾರು ಸಿದ್ಧಸ್ಥಾನಗಳೂ ಇರುವುವು.

**ಸುವರ್ಣಸ್ಯಾಕರಃ ಪೂರ್ವಂ ತತ್ಸ್ಥಾನಮಭವತ್ಪ್ರಿಯೇ ।**
**ತಸ್ಮಿನ್ಸ್ಥಾನೇ ನರೈರ್ದೇವಿ ಗಂತವ್ಯಂ ಭೂತಿಲಿಪ್ಸಯಾ ॥ ೪ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ದುನ್ನಾವಿಲ್ಲಹೃದ್ಗಿರಿಸ್ಥಾನ ಮಾಹಾತ್ಮ್ಯವರ್ಣನಂ ನಾಮ
ಚತುರ್ಥೋಽಧ್ಯಾಯಃ

---

೪. ಪ್ರಿಯಳೆ! ಆ ಸ್ಥಾನವು ಹಿಂದೆ ಸುವರ್ಣದ ಗಣಿಯಾಗಿದ್ದಿತು. ಐಶ್ವರ್ಯವನ್ನು ಬಯಸುವ ಮಾನವನು ಆ ಸ್ಥಳಕ್ಕೆ ಹೋಗಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ದುನ್ನಾವಿಲ್ಲಹೃದ್ಗಿರಿಸ್ಥಾನ ಮಾಹಾತ್ಮ್ಯವರ್ಣನವೆಂಬ
ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚಮೋಽಧ್ಯಾಯಃ

### ಗಂಗೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ತತೋ ಗಚ್ಛೇನ್ಮಹಾದೇವಿ ಮಂಗಲಾತ್ಪಶ್ಚಿಮೇ ಸ್ಥಿತಂ ।
ಗಂಗಾಸ್ರೋತಸ್ತಥಾ ಲಿಂಗಂ ಸುರಾರ್ಕಂ ಚ ವಿಶೇಷತಃ ॥ ೧ ॥
ತಾನ್ಗಚ್ಛೇದ್ವಿಧಿವದ್ದೇವಿ ಯದಿ ಯಾತ್ರಾಫಲೇಪ್ಸುನಾ ।
ಸ್ನಾತ್ವಾ ಪಿಂಡಪ್ರದಾನಂ ಚ ಕುರ್ಯಾತ್ತತ್ರ ಯಥಾರ್ಥತಃ ।
ಬ್ರಾಹ್ಮಣೇಭ್ಯಸ್ತಥಾ ದೇಯಮನ್ನಂ ಭೂರಿ ಸದಕ್ಷಿಣಂ ॥ ೨ ॥
ಇತಿ ತೇ ಕಥಿತಂ ಮಯಾ ಪ್ರಿಯೇ
ಕಲಿಪಾಪೌಘವಿನಾಶನಂ ಶುಭಂ ।
ನಿಖಿಲಂ ತೀರ್ಥಮಹೋದಯೋದಯಂ
ಪಠಿತಂ ಸದ್ವಿನಿಹಂತಿ ಪಾಪಸಂಹತಿಂ ॥ ೩ ॥

---

### ಕನ್ನಡದ ಅನುವಾದ

### ಗಂಗೇಶ್ವರಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ :—ಮಹಾದೇವಿ ! ಅನಂತರ ಮಂಗಳ ಕ್ಷೇತ್ರದ ಪಶ್ಚಿಮದಲ್ಲಿರುವ ಗಂಗಾ ಸ್ರೋತಸ್ಸನ್ನೂ, ಸುರಾರ್ಕಲಿಂಗವನ್ನೂ ಹೊಂದಬೇಕು.

೨. ದೇವಿ ! ಯಾತ್ರಾಫಲವನ್ನು ಬಯಸುವವರು ಅಲ್ಲಿಗೆ ಹೋಗಬೇಕು. ಅಲ್ಲಿ ವಿಧಿಯಂತೆ ಮಿಂದು ಪಿಂಡಪ್ರದಾನವನ್ನೂ, ಬ್ರಾಹ್ಮಣರಿಗೆ ಅನ್ನ, ಭೂರಿದಕ್ಷಿಣೆಗಳನ್ನೂ ಕೊಡಬೇಕು.

೩. ಪ್ರಿಯಳೆ ! ಹೀಗೆ ಕಲಿಯುಗದ ಪಾಪಗಳ ಸಮೂಹವನ್ನು ಪರಿಹರಿಸುವ ಸಮಸ್ತ ತೀರ್ಥಗಳ ಮಾಹಾತ್ಮ್ಯವನ್ನು ಹೇಳಿರುವೆನು. ಇದನ್ನು ಓದಿದರೆ ಪಾಪ ಸಮೂಹವು ದೂರವಾಗುವುದು.

ಇದಂ ನ ದೇಯಂ ದುರ್ಬುದ್ಧೇಃ ಸುತರಾಂ ಪಾಪನಾಶನಂ ।
ಶ್ರೋತವ್ಯಂ ವಿಧಿನಾ ತದ್ವದ್ಭವಿಷ್ಯೋಕ್ತವಿಧಾನತಃ ॥ ೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಗಂಗೇಶ್ವರಮಾಹಾತ್ಮ್ಯವರ್ಣನಂನಾಮ
ಪಂಚಮೋಽಧ್ಯಾಯಃ

---

೪. ಪಾಪವನ್ನು ನೀಗಿಸುವ ಇದನ್ನು ದುರ್ಬುದ್ಧಿಗೆ ಹೇಳಕೂಡದು. ಇದನ್ನು ಭವಿಷ್ಯೋಕ್ತವಿಧಿಯಿಂದ ಕೇಳಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರ ಮಾಹಾತ್ಮ್ಯದಲ್ಲಿ
ಗಂಗೇಶ್ವರಮಾಹಾತ್ಮ್ಯವರ್ಣನವೆಂಬ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷಷ್ಠೋಽಧ್ಯಾಯಃ

### ಭವಮಾಹಾತ್ಮ್ಯೇ ಮೃಗಾನನಾಭೋಜವೃತ್ತಾಂತವರ್ಣನಂ

ಈಶ್ವರ ಉವಾಚ :—

ಅಧುನಾ ಸಂಪ್ರವಕ್ಷ್ಯಾಮಿ ಮಂಗಲಾತ್ಪಶ್ಚಿಮೇ ವ್ರಜೇತ್ ।
ತತ್ರ ಸಿದ್ಧೇಶ್ವರಂ ಪಶ್ಯೇತ್ಸರ್ವಸಿದ್ಧಿಪ್ರದಾಯಕಂ ॥ ೧ ॥

ತತ್ರೈವ ಚಕ್ರತೀರ್ಥಂ ತು ತೀರ್ಥಕೋಟಿಫಲಪ್ರದಂ ।
ಲೋಕೇಶ್ವರಂ ಸ್ವಯಂಭೂತಂ ಪೂರ್ವಮಿಂದ್ರೇಶ್ವರೇತಿ ಚ ॥ ೨ ॥

ದೃಷ್ಟ್ವಾ ತಂ ವಿಧಿವದ್ದೇವಿ ತತೋ ಯಕ್ಷವನಂ ವ್ರಜೇತ್ ।
ಮಂಗಲಾತ್ಪಶ್ಚಿಮೇ ಭಾಗೇ ಯತ್ರ ದೇವೀ ಸ್ವಯಂ ಸ್ಥಿತಾ ॥ ೩ ॥

ಯಕ್ಷೇಶ್ವರೀ ಮಹಾಭಾಗಾ ವಾಂಛಿತಾರ್ಥಪ್ರದಾಯಿನೀ ।
ತಾಂ ಸಂಪೂಜ್ಯ ವಿಧಾನೇನ ತತೋ ವಸ್ತ್ರಾಪಥಂ ಪುನಃ ॥ ೪ ॥

---

ಕನ್ನಡದ ಅನುವಾದ

### ಭವಮಾಹಾತ್ಮ್ಯ—ಮೃಗಾನನಾಭೋಜವೃತ್ತಾಂತವರ್ಣನ

೧. ಈಶ್ವರನು ಹೇಳುತ್ತಾನೆ :—ಮಂಗಳಕ್ಷೇತ್ರದಿಂದ ಪಶ್ಚಿಮದಲ್ಲಿರುವ ಸಕಲ ಸಿದ್ಧಿಯನ್ನೀಯುವ ಸಿದ್ಧೇಶ್ವರನೆಡೆಗೆ ಹೋಗಿ ಅವನನ್ನು ದರ್ಶನ ಮಾಡಬೇಕು.

೨. ಅಲ್ಲಿಯೇ ಕೋಟಿತೀರ್ಥಗಳ ಫಲವನ್ನೀಯುವ ಚಕ್ರತೀರ್ಥವೂ, ಸ್ವಯಂ ವ್ಯಕ್ತವಾಗಿ ಹಿಂದೆ ಇಂದ್ರೇಶ್ವರವೆಂದು ಪ್ರಸಿದ್ಧವಾದ ಲೋಕೇಶ್ವರತೀರ್ಥವೂ ಇರುವುವು.

೩–೪. ದೇವಿ ! ಅದನ್ನು ವಿಧಿಯಂತೆ ನೋಡಿ ಬಳಿಕ ಯಕ್ಷವನಕ್ಕೆ ಹೋಗಬೇಕು. ಮಂಗಳಕ್ಷೇತ್ರದ ಪಶ್ಚಿಮದಲ್ಲಿ ಇಷ್ಟಾರ್ಥಗಳನ್ನು ಕೊಡುವ ಯಕ್ಷೇಶ್ವರಿಯು ಇರುವಳು. ಅವಳನ್ನು ವಿಧಿಯಂತೆ ಪೂಜಿಸಿ ಮರಳಿ ವಸ್ತ್ರಾಪಥಕ್ಷೇತ್ರದಲ್ಲಿರುವ ರೈವ

ಗಿರಿಂ ರೈವತಕಂ ಗತ್ವಾ ಕುರ್ಯಾದ್ಯಾತ್ರಾಂ ವಿಧಾನತಃ ।
ಮೃಗೀಕುಂಡಾದಿತೀರ್ಥಾನಿ ಸಂತಿ ತತ್ರೈವ ಕೋಟಿಶಃ ॥ ೫ ॥
ಯದ್ಭುಕ್ತಿಶಿಖರೇ ದೇವಿ ಸೀಮಾಲಿಂಗಂ ಹಿ ತತ್ಸ್ಮೃತಂ ।
ದಶಕೋಟಿಸ್ತು ತೀರ್ಥಾನಿ ತತ್ರ ಸಂತಿ ವರಾನನೇ ॥ ೬ ॥
ಯತ್ರ ವೈ ಯಾದವಾಃ ಸಿದ್ಧಾಃ ಕಲೌ ಯೇ ಬುದ್ಧಿರೂಪಿಣಃ ।
ಶತಂ ಸಹಸ್ರಾರ್ಬುದಂ ಚ ಲಿಂಗಂ ತತ್ರೈವ ತಿಷ್ಠತಿ ॥ ೭ ॥
ಗಜೇಂದ್ರಸ್ಯ ಪದಂ ತತ್ರ ತತ್ರೈವ ರಸಕೂಪಿಕಾಃ ।
ಸಪ್ತಕುಂಡಾನಿ ತತ್ರೈವ ರೈವತೇ ಪರ್ವತೋತ್ತಮೇ ॥ ೮ ॥
ಅಂಬಿಕಾ ಚ ಸ್ಥಿತಾ ದೇವೀ ಪ್ರದ್ಯುಮ್ನಃ ಸಾಂಬ ಏವ ಚ ।
ಲಿಂಗಾಕಾರೇ ಪರ್ವತೇ ತು ತತ್ರ ತೀರ್ಥಾನಿ ಕೋಟಿಶಃ ॥ ೯ ॥
ಕ್ಷೇತ್ರಪಾಲಸ್ವರೂಪೇಣ ಮಹೋದಧಿಃ ಸ್ವಯಂ ಸ್ಥಿತಃ ।
ದಾಮೋದರಶ್ಚ ತತ್ರೈವ ಭವೋ ಬ್ರಹ್ಮಾಂಡನಾಯಕಃ ॥ ೧೦ ॥

ಪಾರ್ವತ್ಯುವಾಚ :—

ಶ್ರುತಾನಿ ತವ ತೀರ್ಥಾನಿ ದೇವೇಶ ವದತಸ್ತವ ।
ಗಂಗಾ ಸರಸ್ವತೀ ಪುಣ್ಯಾ ಯಮುನಾ ಚ ಮಹಾನದೀ ॥ ೧೧ ॥

---

ತಕಪರ್ವತ ಯಾತ್ರೆಯನ್ನು ಕ್ರಮದಂತೆ ಮಾಡಬೇಕು. ಅಲ್ಲಿ ಕೋಟ್ಯಂತರ ಮೃಗೀಕುಂಡಾದಿ ತೀರ್ಥಗಳಿರುವುವು.

೬. ಇದರ ಶಿಖರದಲ್ಲಿ ಸೀಮಾಲಿಂಗವೂ, ಹತ್ತು ಕೋಟಿ ತೀರ್ಥಗಳೂ ಇರುವುವು.

೭. ಈ ಕಲಿಯುಗದಲ್ಲಿ ಯಾದವರು ಸಿದ್ಧಿಯನ್ನು ಪಡೆದು ಜ್ಞಾನಿಗಳಾದರು. ಇದರಲ್ಲಿ, ನೂರು ಸಾವಿರ ಅರ್ಬುದಲಿಂಗಗಳಿರುವುವು.

೮. ಅಲ್ಲಿಯೇ ಗಜೇಂದ್ರನ ಸ್ಥಾನವೂ, ರಸಕೂಪಗಳೂ, ಏಳು ಕುಂಡಗಳೂ ಇರುವುವು.

೯. ಲಿಂಗಾಕಾರವಾದ ಆ ತೀರ್ಥದಲ್ಲಿ ಅಂಬಿಕಾದೇವಿ, ಪ್ರದ್ಯುಮ್ನ, ಸಾಂಬ, ಅನೇಕ ಕೋಟಿ ತೀರ್ಥಗಳು ಇರುವುವು.

೧೦. ಮೃಗೀಕುಂಡ, ಕಾಲಮೇಘ, ಕ್ಷೇತ್ರಪಾಲರೂಪಿಯಾದ ಮಹೋದಧಿ, ದಾಮೋದರ, ಬ್ರಹ್ಮಾಂಡನಾಯಕನಾದ ಭವ ಇವರೂ ಅಲ್ಲಿರುವರು.

೧೧—೧೬. ಪಾರ್ವತಿಯು ಹೇಳುತ್ತಾಳೆ! ದೇವೇಶ ಹೇಳುತ್ತಿರುವ ನಿನ್ನಿಂದ ತೀರ್ಥಗಳೂ, ಗಂಗಾ, ಸರಸ್ವತೀ, ಯಮುನಾ, ಗೋದಾವರಿ,, ಗೋಮತೀ, ತಾಪೀ, ನರ್ಮದಾ, ಸರಯೂ, ಸ್ವರ್ಣರೇಖಾ, ತಮಸಾ ಮೊದಲಾದ ಸಮುದ್ರವನ್ನು ಸೇರುವ

ಗೋದಾವರೀ ಗೋಮತೀ ಚ ನದೀ ತಾಪೀ ಚ ನರ್ಮದಾ ।
ಸರಯೂಃ ಸ್ವರ್ಣರೇಖಾ ಚ ತಮಸಾ ಪಾಪನಾಶಿನೀ ॥ ೧೨ ॥
ನದ್ಯಃ ಸಮುದ್ರಸಂಯೋಗಾಃ ಸರ್ವಾಃ ಪುಣ್ಯಾ ಶ್ರುತಾ ಮಯಾ ।
ಮೋಕ್ಷಾರಣ್ಯಾನಿ ದಿವ್ಯಾನಿ ದಿವ್ಯಕ್ಷೇತ್ರಾಣಿ ಯಾನಿ ಚ ॥ ೧೩ ॥
ನಗರ್ಯೋ ಮುಕ್ತಿದಾಯಿನ್ಯಸ್ತಾಃ ಶ್ರುತಾಸ್ತ್ವತ್ಪ್ರಸಾದತಃ ।
ಬ್ರಹ್ಮವಿಷ್ಣುಶಿವಾದೀನಾಂ ಸೂರ್ಯೇಂದುವರುಣಸ್ಯ ಚ ॥ ೧೪ ॥
ದೇವತಾನಾಮೃಷೀಣಾಂ ಚ ಸಂತಿ ಸ್ಥಾನಾನ್ಯನೇಕಶಃ ।
ಪರಂ ದೇವ ತ್ವಯಾ ಪುಣ್ಯಂ ಪ್ರಭಾಸಂ ಕಥಿತಂ ಮಮ ॥ ೧೫ ॥
ತಸ್ಮಾದ್ಯಚ್ಚಾಧಿಕಂ ಪ್ರೋಕ್ತಂ ಕ್ಷೇತ್ರಂ ವಸ್ತ್ರಾಪಥಂ ತ್ವಯಾ ।
ಶೃಣ್ವಂತ್ಯಾ ಚ ಮಯಾ ಪೂರ್ವಂ ನ ಪೃಷ್ಟಂ ಕಾರಣಂ ತದಾ ॥ ೧೬ ॥
ಇದಾನೀಂ ಚ ಶ್ರುತಂ ಸರ್ವಂ ಸ್ವಸ್ಥಾಹಂ ಕಾರಣಂ ವದ ।
ಪ್ರಭಾವಂ ಪ್ರಥಮಂ ಬ್ರೂಹಿ ಕ್ಷೇತ್ರಸ್ಯ ಚ ಭವಸ್ಯ ಚ ॥ ೧೭ ॥
ಕಸ್ಮಿನ್ದೇಶೇ ಚ ತತ್ತೀರ್ಥಂ ಶಿವಃ ಕೇನಾತ್ರ ಸಂಸ್ಥಿತಃ ।
ಸ್ವಯಂಭೂರ್ಭಗವಾನ್ರುದ್ರಃ ಕಥಂ ತತ್ರ ಸ್ಥಿತಃ ಸ್ವಯಂ ॥
ಪ್ರಭೋ ಮೇ ಮಹದಾಶ್ಚರ್ಯಂ ವರ್ತತೇ ತದ್ವದಾಧುನಾ ॥ ೧೮ ॥

---

ನದಿಗಳೂ, ಮೋಕ್ಷಪ್ರದವಾದ ದಿವ್ಯಾರಣ್ಯಗಳೂ, ದಿವ್ಯ ಕ್ಷೇತ್ರಗಳೂ, ಮುಕ್ತಿಯನ್ನೀಯುವಪಟ್ಟಣಗಳೂ ಕೇಳಲ್ಪಟ್ಟುವು. ಬ್ರಹ್ಮ, ವಿಷ್ಣು, ಶಿವ, ಸೂರ್ಯ, ಚಂದ್ರ, ವರುಣ ಮೊದಲಾದ ದೇವತೆಗಳ ಮತ್ತು ಋಷಿಗಳ ಅನೇಕ ಸ್ಥಾನಗಳಿವೆ. ಪ್ರಭಾಸವನ್ನೂ ಉತ್ತಮ ಕ್ಷೇತ್ರವೆಂದು ಹೇಳಿರುವೆ. ಅದಕ್ಕಿಂತಲೂ ವಸ್ತ್ರಾಪಥ ಕ್ಷೇತ್ರವು ಉತ್ತಮವಾದುದೆಂದು ಹೇಳಿದೆ. ಅದನ್ನು ಕೇಳುತ್ತಿರುವಾಗ ನಾನು ಕಾರಣವನ್ನು ಕುರಿತು ಪ್ರಶ್ನೆಮಾಡಲಿಲ್ಲ.

೧೭. ಈಗ ಎಲ್ಲವನ್ನೂ ಕೇಳಿ ಸ್ಥಿರ ಮನಸ್ಸುಳ್ಳವಳಾಗಿದ್ದೇನೆ. ಕಾರಣವನ್ನು ಹೇಳು. ಮೊದಲು ಆ ಕ್ಷೇತ್ರದ ಮತ್ತು ಭವನದ ಮಾಹಾತ್ಮ್ಯವನ್ನು ಹೇಳು.

೧೮. ಆ ತೀರ್ಥವು ಯಾವ ದೇಶದಲ್ಲಿರುವುದು ? ಶಿವನು ಏಕೆ ಅಲ್ಲಿ ನೆಲೆಸಿರುವನು ? ಸ್ವಯಂವ್ಯಕ್ತನಾದ ರುದ್ರನು ತಾನೇ ಅಲ್ಲಿ ಏಕೆ ಇರುವನು ? ಸ್ವಾಮಿ ! ನನಗೆ ಬಹಳ ಆಶ್ಚರ್ಯವುಂಟಾಗಿದೆ. ಅದನ್ನು ನನಗೆ ಹೇಳು.

ಈಶ್ವರ ಉವಾಚ :—
ವಸ್ತ್ರಾಪಥಸ್ಯ ಕ್ಷೇತ್ರಸ್ಯ ಪ್ರಭಾವಂ ಪ್ರಥಮಂ ಶೃಣು ।
ಪಶ್ಚಾದ್ಭವಸ್ಯ ಮಾಹಾತ್ಮ್ಯಂ ಶೃಣು ತ್ವಂ ಚ ವರಾನನೇ ॥ ೧೯ ॥
ಕಾನ್ಯಕುಬ್ಜೇ ಮಹಾಕ್ಷೇತ್ರೇ ರಾಜಾ ಭೋಜೇತಿ ವಿಶ್ರುತಃ ।
ಪುರಾ ಪುಣ್ಯಯುಗೇ ಧರ್ಮ್ಯಃ ಪ್ರಜಾ ಧರ್ಮೇಣ ಶಾಸತಿ ॥ ೨೦ ॥
ವಿಶಾಲಾಕ್ಷೋ ದೀರ್ಘಬಾಹುರ್ವಿದ್ವಾನ್ವಾಗ್ಮೀ ಪ್ರಿಯಂವದಃ ।
ಸರ್ವಲಕ್ಷಣಸಂಪೂರ್ಣೋ ಬಹ್ವಾಶ್ಚರ್ಯವಿಲೋಕಕಃ ॥ ೨೧ ॥
ವನಾತ್ಕದಾಚಿದಭ್ಯೇತ್ಯ ವನಪಾಲೋಽಬ್ರವೀದಿದಂ ।
ಆಶ್ಚರ್ಯಂ ಭ್ರಮತಾ ದೇವ ವನೇ ದೃಷ್ಟಂ ಮಯಾಧುನಾ ॥ ೨೨ ॥
ಗಿರೌ ವಿಷಮಭೂಭಾಗೇ ಬಹುವೃಕ್ಷಸಮಾಕುಲೇ ।
ಮೃಗಯೂಥಗತಾ ನಾರೀ ಮಯಾ ದೃಷ್ಟಾ ಮೃಗಾನನಾ ॥ ೨೩ ॥
ಮೃಗವತ್ಪ್ಲವತೇ ಬಾಲಾ ಸದಾ ತತ್ರೈವ ದೃಶ್ಯತೇ ।
ಇತಿ ಶ್ರುತ್ವಾ ವಚೋ ರಾಜಾ ತುಷ್ಟಸ್ತಸ್ಮೈ ಧನಂ ದದೌ ॥ ೨೪ ॥
ಚತುರಂ ತುರಗಂ ದಿವ್ಯಂ ವಾಸಸೀ ಸ್ವರ್ಣಭೂಷಣಂ ।
ಇದಾನೀಮೇವ ಯಾಸ್ಯಾಮಿ ಸೇನಾಧ್ಯಕ್ಷ ತ್ವಯಾ ಸಹ ॥ ೨೫ ॥

---

೧೯. ಈಶ್ವರನು ಹೇಳುತ್ತಾನೆ :—ಸುಂದರಿ ! ನೀನು ಮೊದಲು ವಸ್ತ್ರಾಪಥದ ಮಾಹಾತ್ಮ್ಯವನ್ನೂ, ಅನಂತರ ಭವನ ಮಾಹಾತ್ಮ್ಯವನ್ನೂ ಕೇಳು.

೨೦–೨೨. ಹಿಂದೆ ಪುಣ್ಯಯುಗದಲ್ಲಿ ಕಾನ್ಯಕುಬ್ಜ ಮಹಾಕ್ಷೇತ್ರದಲ್ಲಿ ಧರ್ಮಿಷ್ಠನೂ, ವಿಶಾಲಾಕ್ಷನೂ, ಉದ್ದವಾದ ತೋಳುಳ್ಳವನೂ, ವಿದ್ವಾಂಸನೂ, ವಾಚಾಲನೂ, ಹಿತವಾಗಿ ಮಾತಾಡುವವನೂ, ಸಮಸ್ತ ಲಕ್ಷಣಗಳಿಂದ ಕೂಡಿದವನೂ, ಅನೇಕ ಆಶ್ಚರ್ಯಗಳನ್ನು ಕಂಡವನೂ ಆದ ಭೋಜನೆಂಬ ಪ್ರಸಿದ್ಧ ರಾಜನಿದ್ದನು. ಅವನು ಪ್ರಜೆಗಳನ್ನು ಧರ್ಮದಿಂದ ಕಾಪಾಡುತ್ತಿರಲು ಒಂದಾನೊಂದು ದಿನ ಕಾಡಿನಿಂದ ವನಪಾಲನೋರ್ವನು ಬಂದು ಹೀಗೆಂದನು:—"ಸ್ವಾಮಿ ! ನಾನು ಸಂಚರಿಸುತ್ತಿರುವಾಗ ಒಂದು ಆಶ್ಚರ್ಯವನ್ನು ಕಂಡೆನು.

೨೩. ಹಳ್ಳ ತಿಟ್ಟಾದ ಭೂಭಾಗವುಳ್ಳುದೂ, ಅನೇಕ ವೃಕ್ಷಗಳಿಂದ ಒತ್ತಾದುದೂ ಆದ ಪರ್ವತದಲ್ಲಿ ಮೃಗಯೂಥದಂತೆ ಗಮನವುಳ್ಳವಳೂ, ಮೃಗಮುಖಿಯೂ ಆದ ಒಬ್ಬಳು ತರುಣಿಯನ್ನು ಕಂಡೆನು.

೨೪–೨೬. ಅವಳು ಜಿಂಕೆಯಂತೆ ಚಿಗಿಯುವಳು. ಯಾವಾಗಲೂ ಒಂದೇಕಡೆಯೇ ಕಾಣಿಸುತ್ತಾಳೆ" ಎನ್ನಲು ದೊರೆಯು ಅವನ ಮಾತನ್ನು ಕೇಳಿಸಂತುಷ್ಟನಾಗಿ ಅವನಿಗೆ ಹಣವನ್ನೂ, ಉತ್ತಮವಾದ ಕುದುರೆಯನ್ನೂ, ವಸ್ತ್ರಗಳನ್ನೂ, ಸುವರ್ಣ ಭೂಷಣ

ಅಶ್ವಾನಾಂ ದಶಸಾಹಸ್ರಂ ವಾಗುರಾಣಾಂ ತ್ವನೇಕಧಾ ।
ಪತ್ತಯೋ ಯಾಂತು ಸರ್ವತ್ರ ವೇಷ್ಟಯಂತು ಗಿರಿಂ ವರಂ ॥ ೨೬ ॥
ನ ಹಂತವ್ಯೋ ಮೃಗಃ ಕಶ್ಚಿದ್ರಕ್ಷಣೀಯಾ ಹಿ ಸಾ ಮೃಗೀ ।
ಸ್ತ್ರೀವೇಷಧಾರಿಣೀ ನಾರೀ ಮೃಗೀ ಭವತಿ ಭೂತಲೇ ॥ ೨೭ ॥
ಕ್ವ ಯಾಸ್ಯತಿ ವರಾಕೀ ಸಾ ಮದ್ಬಲೈಃ ಪರಿಪೀಡಿತಾ ।
ಶಸ್ತ್ರಾಸ್ತ್ರವರ್ಜಿತಂ ಸೈನ್ಯಂ ವನಪಾಲಪದಾನುಗಂ ॥ ೨೮ ॥
ಅಹೋರಾತ್ರೇಣ ಸಂಪ್ರಾಪ್ತಂ ಬಹುವ್ಯಾಧಜನಾಗ್ರತಃ ।
ಅಶ್ವಾಧಿರೂಢೋ ಬಲವಾನ್ಭೋಜರಾಜೋ ಯಯೌ ಸ್ವಯಂ ॥ ೨೯ ॥
ನಿಃಶಬ್ದಪದಸಂಚಾರಃ ಸಂಜ್ಞಾಸಂಕೇತಭಾಷಕಃ ।
ಗಿರಿಂ ಸಂವೇಷ್ಟಯಾಮಾಸ ವಾಗುರಾಭಿಃ ಸ್ವಯಂ ನೃಪಃ ॥ ೩೦ ॥
ವನಪಾಲೇನ ಸಹಿತೋ ಮೃಗಯೂಥಂ ದದರ್ಶ ಸಃ ।
ಸಾ ಮೃಗೀ ಮೃಗಮಧ್ಯಸ್ಥಾ ನಾರೀದೇಹಾ ಮುಖೇ ಮೃಗೀ ।
ಮೃಗವಚ್ಚೇಷ್ಟತೇ ಬಾಲಾ ಧಾವತೇ ಚ ಮೃಗೈಃ ಸಹ ॥ ೩೧ ॥

---

ವನ್ನೂ ಬಹುಮಾನವಾಗಿ ಕೊಟ್ಟುಕಳಿಸಿದನು. ತಾನು ಸೇನಾಪತಿಯನ್ನು ಕುರಿತು, "ನಾನು ಈಗಲೇ ನಿನ್ನೊಡನೆ ಹೊರಡಬಯಸುವೆನು. ಹತ್ತುಸಾವಿರ ಕುದುರೆಗಳೂ, ಅನೇಕ ಬಲೆಗಳೂ, ಕಾಲಾಳುಗಳೂ ಹೋಗಿ ಆ ಬೆಟ್ಟವನ್ನು ಸುತ್ತುವರಿಯಲಿ.

೨೭. ಅಲ್ಲಿ ಒಂದು ಮೃಗವನ್ನೂ ಕೊಲ್ಲಬಾರದು, ಮನುಷ್ಯಸ್ತ್ರೀಯು ಹೆಣ್ಣು ಜಿಂಕೆಯವೇಷವನ್ನು ಧರಿಸಿದ್ದಾಳೆ. ಅವಳನ್ನು ಕಾಪಾಡಬೇಕು.

೨೮–೨೯. ನನ್ನ ಸೈನ್ಯದಿಂದ ಸುತ್ತುಬಳಸಲ್ಪಟ್ಟ ಅವಳು ಎಲ್ಲಿಗೆ ಹೋದಾಳು" ಎಂದು ಹೇಳಲು ಒಂದೇ ದಿನದಲ್ಲಿ ಅನೇಕ ಬೇಡರುಳ್ಳ, ಶಸ್ತ್ರಾಸ್ತ್ರವರ್ಜಿತವಾದ ಆ ಸೈನ್ಯವು ವನಪಾಲನನ್ನು ಅನುಸರಿಸಿ ಆ ಕಾಡಿಗೆ ಬಂದಿತು. ಬಲಿಷ್ಠನಾದ ಆ ಭೋಜ ರಾಜನೂ ಅಶ್ವವನ್ನೇರಿ ಅಲ್ಲಿಗೆ ಬಂದನು.

೩೦. ನಿಶ್ಶಬ್ದವಾಗಿ ಹೆಜ್ಜೆಯನ್ನಿಡುವವನೂ, ಸಂಜ್ಞೆಯಿಂದಲೇ ಮಾತಾಡುವವನೂ, ಆದ ಆ ರಾಜನು ಬಲೆಯಿಂದ ಆ ಪರ್ವತವನ್ನು ಸುತ್ತಿದನು.

೩೧. ಆತನು ವನಪಾಲನೊಡನೆ ಜಿಂಕೆಗಳ ಹಿಂಡನ್ನು ಕಂಡನು. ಮುಖದಲ್ಲಿ ಮೃಗದ ಆಕಾರವುಳ್ಳದೂ, ಮನುಷ್ಯಸ್ತ್ರೀಯ ದೇಹವುಳ್ಳದೂ ಆಗಿ ಮೃಗಗಳ ನಡುವೆ ಇರುವ ಆ ಮೃಗಿಯು ಮೃಗದಂತೆಯೇ ನಟಿಸುತ್ತ ಮೃಗಗಳೊಡನೆ ಓಡುತ್ತಿದ್ದಿತು.

ಅಶ್ವಗಂಧಾನ್ಸಮಾಘ್ರಾಯ ಸಂತ್ರಸ್ತಾ ಮೃಗಯೂಥಪಾಃ ।
ಕ್ಷುಬ್ಧಾ ಭ್ರಾಂತಾಃ ಕ್ಷಣೇ ತಸ್ಮಿನ್ಸರ್ವೇ ಯಾಂತಿ ದಿಶೋ ದಶ ॥ ೩೨ ॥
ಮೃಗವಕ್ತ್ರಾ ತು ಯಾ ನಾರೀ ಮೃಗೈಃ ಕತಿಪಯೈಃ ಸಹ ।
ಪ್ಲವಮಾನಾ ನಿಪತಿತಾ ವಾಗುರಾಯಾಂ ವಿಚೇತನಾ ॥ ೩೩ ॥
ಬಲಾಧ್ಯಕ್ಷೇಣ ವಿಧೃತಾ ಮೃಗೈಃ ಸಹ ಶನೈರ್ನೃಪಃ ।
ದದರ್ಶ ಮಹದಾಶ್ಚರ್ಯಂ ಭೋಜರಾಜೋ ಜನೈರ್ವೃತಃ ॥ ೩೪ ॥
ತತಃ ಕೋಲಾಹಲೋ ಜಾತಃ ಪರಮಾನಂದಿನಿಸ್ವನಃ ।
ಮೃಗೈಃ ಸಹ ಸಮಾನಿನ್ಯೇ ಕಾನ್ಯಕುಬ್ಜಂ ಮೃಗೀಂ ನೃಪಃ ॥ ೩೫ ॥
ದಿವ್ಯವಸ್ತ್ರಸಮಾಚ್ಛನ್ನಾ ದಿವ್ಯಾಭರಣಭೂಷಿತಾ ।
ನರಯಾನಸ್ಥಿತಾ ನಾರೀ ಪ್ರವಿವೇಶ ಮೃಗೈರ್ವೃತಾ ॥ ೩೬ ॥
ವಾದಿತ್ರೈರ್ಬ್ರಹ್ಮಘೋಷೈಶ್ಚ ನೀಯತೇ ನೃಪಮಂದಿರಂ ।
ಜನೈರ್ಜಾನಪದೈರ್ಮಾರ್ಗೇ ದೃಶ್ಯತೇ ನೃಪಮಂದಿರೇ ॥ ೩೭ ॥
ನೀಯಮಾನಾ ನಾಗರೈಶ್ಚ ಮಹದಾಶ್ಚರ್ಯಭಾಷಕೈಃ ।
ಪುಣ್ಯೇ ಮುಹೂರ್ತೇ ಸಂಪ್ರಾಪ್ತೇ ಸಾ ಮೃಗೀ ನೃಪಮಂದಿರಂ ॥ ೩೮ ॥

---

೩೨. ಆ ಜಿಂಕೆಗಳ ಹಿಂಡು ಕುದುರೆಗಳ ವಾಸನೆಯನ್ನು ಹಿಡಿದು ಭ್ರಾಂತಿಗೊಂಡು ಆ ಕ್ಷಣದಲ್ಲಿಯೇ ಹತ್ತು ದಿಕ್ಕುಗಳಿಗೂ ಚದುರಿ ಓಡಿತು.

೩೩. ಮೃಗಮುಖಿಯಾದ ಆ ಹೆಂಗಸು ನೆಗೆದೋಡುತ್ತ ಜ್ಞಾನತಪ್ಪಿ ಕೆಲವು ಮೃಗಗಳೊಡನೆ ಬಲೆಯಲ್ಲಿ ಬಿದ್ದಳು.

೩೪. ಸೇನಾಪತಿಯು ಮೃಗಗಳೊಡನೆ ಮೆಲ್ಲನೆ ಅವಳನ್ನು ಹಿಡಿಯಲು ಭೋಜರಾಜನ ಹಿಂದಾಳುಗಳೊಡನೆ ಆ ಅದ್ಭುತಾಂಗನೆಯನ್ನು ಕಂಡನು.

೩೫. ಬಳಿಕ ಅತ್ಯಾನಂದದಿಂದ ಗದ್ದಲವುಂಟಾಯಿತು. ದೊರೆಯು ಆ ಮೃಗಾಂಗನೆಯನ್ನು ಕಾನ್ಯಕುಬ್ಜದೇಶಕ್ಕೆ ಕರೆತಂದನು.

೩೬–೩೮. ದಿವ್ಯವಸ್ತ್ರವನ್ನುಟ್ಟವಳೂ, ದಿವ್ಯಾಭರಣಾಲಂಕೃತಳೂ, ಮನುಷ್ಯವಾಹನದಲ್ಲಿರುವವಳೂ ಆದ ಆ ಅಂಗನೆಯು ವಾದ್ಯಗಳಿಂದಲೂ, ವೇದಘೋಷಗಳಿಂದಲೂ ಕೂಡಿ ದಾರಿಯಲ್ಲಿ ಜನರಿಂದ ನೋಡಲ್ಪಡುತ್ತ ಆಶ್ಚರ್ಯದ ಮಾತನ್ನಾಡುತ್ತಿರುವ ಪಟ್ಟಣಿಗರೊಡನೆಯೂ, ಮೃಗಗಳೊಡನೆಯೂ ಮಂಗಳಕರವಾದ ಮೂಹೂರ್ತದಲ್ಲಿ ಅರಮನೆಯನ್ನು ಹೊಕ್ಕಳು.

ಪ್ರತೀಹಾರೇಣ ರಾಜೇಂದ್ರ ವಚಸಾ ವಾರಿತೋ ಜನಃ ।
ಗತಃ ಸೇನಾಪತಿಃ ಸೈನ್ಯಂ ಗೃಹೀತ್ವಾ ಸ್ವನಿಕೇತನಂ ॥ ೩೯ ॥
ರಾಜಾಪಿ ಸ್ವಗೃಹಂ ಪ್ರಾಪ್ಯ ಸ್ನಾತ್ವಾ ಸಂಪೂಜ್ಯ ದೇವತಾಃ ।
ತಾಂ ಮೃಗೀಂ ಸ್ನಾಪಯಾಮಾಸ ದಿವ್ಯಗಂಧಾನುಲೇಪನಾಂ ॥ ೪೦ ॥
ಕುಂಕುಮೇನ ವಿಲಿಪ್ತಾಂಗೀಂ ದಿವ್ಯವಸ್ತ್ರಾವಗುಂಠಿತಾಂ ।
ಯಥೋಚಿತಂ ಯಥಾಸ್ಥಾನಂ ದಿವ್ಯಾಭರಣಭೂಷಿತಾಂ ॥ ೪೧ ॥
ಏಕಾಂತೇ ನಿರ್ಜನೇ ರಾಜಾ ಬಭಾಷೇ ಚಾರುಲೋಚನಾಂ ।
ಕಾ ತ್ವಂ ಕಸ್ಯ ಸುತಾ ಕೇನ ಕಾರಣೇನ ಮೃಗೈಃ ಸಹ ॥ ೪೨ ॥
ಸ್ತ್ರೀಣಾಂ ಶರೀರಂ ತೇ ಕಸ್ಮಾನ್ಮೃಗೀಣಾಂ ವದನಂ ಕುತಃ ।
ಇತಿ ಸರ್ವಂ ಸಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ॥ ೪೩ ॥
ಏವಂ ಸಾ ಪ್ರೋಚ್ಯಮಾನಾಪಿ ನ ಬಭಾಷೇ ಕಥಂಚನ ।
ಮೂಕವನ್ನ ವಿಜಾನಾತಿ ನ ಚ ಭುಂಕ್ತೇ ಸುಲೋಚನಾ ॥ ೪೪ ॥
ನ ಭುಂಕ್ತೇ ಪೃಥಿವೀಪಾಲೋ ನ ರಾಜ್ಯಂ ಬಹು ಮನ್ಯತೇ ।
ನ ದಾರೈರ್ವಿದ್ಯತೇ ಕಾರ್ಯಂ ನಾಶ್ವೈರ್ನ ಚ ಗಜೈ ರಥೈಃ ॥ ೪೫ ॥

---

೩೯. ದೊರೆಯ ಅಪ್ಪಣೆಯಂತೆ ಬಾಗಿಲು ಕಾಯುವವನು ಜನರನ್ನು ಒಳಗೆ ಪ್ರವೇಶಿಸದಂತೆ ತಡೆದನು. ಸೇನಾಪತಿಯು ಸೈನ್ಯವನ್ನು ತೆಗೆದುಕೊಂಡು ತನ್ನ ಮನೆಗೆ ಹೊರಟುಹೋದನು.

೪೦–೪೩. ದೊರೆಯೂ ತನ್ನ ಅರಮನೆಯನ್ನು ಸೇರಿ ಮಿಂದು ದೇವತೆಗಳನ್ನಾರಾಧಿಸಿ ಆ ಮೃಗಾಂಗನೆಗೂ ಸ್ನಾನಮಾಡಿಸಿ ದಿವ್ಯಗಂಧವನ್ನು ಹಚ್ಚಿ, ಕುಂಕುಮವನ್ನಿಟ್ಟು, ದಿವ್ಯವಸ್ತ್ರವನ್ನುಡಿಸಿ, ಉತ್ತಮಾಭರಣಗಳಿಂದಲಂಕರಿಸಿ ಉಚಿತಸ್ಥಾನದಲ್ಲಿ ರಹಸ್ಯವಾಗಿ ಕುಳ್ಳಿರಿಸಿ ಅವಳನ್ನು ಹೀಗೆ ಪ್ರಶ್ನಿಸಿದನು. "ನೀನು ಯಾರು? ಯಾರ ಮಗಳು? ಈ ಮೃಗಗಳೊಡನೆ ಏತಕ್ಕೆ ವಾಸಿಸುತ್ತಿರುವೆ? ನಿನಗೆ ಮನುಷ್ಯಸ್ತ್ರೀಯ ದೇಹವೂ, ಮೃಗದಮುಖವೂ ಹೇಗುಂಟಾಯಿತು? ಇದನ್ನೆಲ್ಲ ನನಗೆ ಹೇಳು. ನನಗೆ ಅತ್ಯಂತ ಕುತೂಹಲವುಂಟಾಗಿದೆ."

೪೪. ಹೀಗೆ ಕೇಳಿದರೂ ಅವಳು ಮಾತಾಡಲಿಲ್ಲ. ಮೂಕಿಯಂತೆ ಅದನ್ನರಿಯಲೂ ಇಲ್ಲ. ಭುಂಜಿಸಲೂ ಇಲ್ಲ.

೪೫. ಭೋಜರಾಜನೂ ಊಟಮಾಡಲಿಲ್ಲ. ರಾಜ್ಯವನ್ನೂ ಆದರಿಸಲಿಲ್ಲ. ಪತ್ನಿ, ಅಶ್ವ, ಆನೆ, ರಥ ಇವುಗಳಿಂದ ಅವನಿಗೇನೂ ಪ್ರಯೋಜನವಾಗಲಿಲ್ಲ.

ತದೇವ ರಾಜ್ಯಂ ತೇ ದಾರಾಸ್ತೇ ಗಜಾಸ್ತದ್ಧನಂ ಬಹು ।
ಪ್ರಮದಾಮದಸಂರಕ್ತಂ ಯತ್ರ ಸಂಕ್ರೀಡತೇ ಮನಃ ॥ ೪೬ ॥
ಆಹೂಯಾಹ ಪ್ರತೀಹಾರಂ ತಯಾ ಸಂಮೋಹಿತೋ ನೃಪಃ ।
ಪುರೋಧಸಂ ಗುರುಂ ವಿಪ್ರಾನಾಚಾರ್ಯಾಞ್ಶೀಘ್ರಮಾನಯ ॥ ೪೭ ॥
ದೈವಜ್ಞಾನಥ ಮಂತ್ರಜ್ಞಾನ್ಭಿಷಜಸ್ತಾಂತ್ರಿಕಾಂಸ್ತಥಾ ।
ಇತಿ ಸನ್ನೋದಿತಾ ರಾಜ್ಞಾ ಪ್ರತೀಹಾರೋ ಯಯೌ ಸ್ವಯಂ ॥ ೪೮ ॥
ಆಜಗಾಮ ಸ ವೇಗೇನ ಸಮಾನೀಯ ದ್ವಿಜೋತ್ತಮಾನ್ ।
ರಾಜ್ಞೇ ವಿಜ್ಞಾಪಯಾಮಾಸ ದೇವ ವಿಪ್ರಾಃ ಸಮಾಗತಾಃ ॥ ೪೯ ॥
ಪ್ರವೇಶಯ ಗುರುಂ ದ್ವಾಃಸ್ಥಂ ಸಂಪ್ರಾಪ್ತಾನ್ಮದ್ಧಿತೇ ರತಾನ್ ।
ಇತಿ ಸನ್ನೋದಿತೋ ರಾಜ್ಞಾ ತಥಾ ಚಕ್ರೇ ಸ ಬುದ್ಧಿಮಾನ್ ॥ ೫೦ ॥
ಅಭ್ಯುತ್ಥಾಯ ನೃಪಃ ಪೂರ್ವಂ ನಮಸ್ಕೃತ್ಯ ಪ್ರಪೂಜ್ಯ ಚ ।
ಆಸನೇಷೂಪವಿಷ್ಟಾಂಸ್ತಾನ್ಬಭಾಷೇ ಕಾರ್ಯತತ್ಪರಃ ॥ ೫೧ ॥
ಇದಮಾಶ್ಚರ್ಯಮೇವೈಕಂ ಕಥಂ ಶಕ್ಯಂ ನಿವೇದಿತುಂ ।
ಜಾನೀತ ಹಿ ಸ್ವಯಂ ಸರ್ವೇ ಲೋಕತಃ ಶಾಸ್ತ್ರತೋಽಪಿ ವಾ ॥ ೫೨ ॥

---

೪೬. ಅಂಗನೆಯ ಮದದಿಂದ ಅನುರಾಗಗೊಂಡ ಮನಸ್ಸು ವಿನೋದಪಟ್ಟರೆ ಅದೇ ರಾಜ್ಯ, ಪತ್ನಿ, ಆನೆ, ಧನಗಳು.

೪೭–೪೯. ಆ ಅಂಗನೆಯಲ್ಲಿ ಮೋಹಗೊಂಡ ಭೋಜರಾಜನು ಬಾಗಿಲು ಕಾಯುವವನನ್ನು ಕರೆದು, "ಎಲೈ ಪುರೋಹಿತರು, ಗುರುಗಳು, ಬ್ರಾಹ್ಮಣರು, ಆಚಾರ್ಯರು, ಜೋಯಿಸರು, ಮಂತ್ರವಾದಿಗಳು, ವೈದ್ಯರು, ತಾಂತ್ರಿಕರು ಇವರನ್ನು ಶೀಘ್ರವಾಗಿ ಕರೆದುಕೊಂಡು ಬಾ" ಎಂದು ಆಜ್ಞೆಮಾಡಿದನು. ಅವನು ದೊರೆಯ ಪ್ರೇರಣೆಯಂತೆ ಅಲ್ಲಿಂದ ಹೊರಟು ಅವರೆಲ್ಲರನ್ನೂ ಕರೆದುಕೊಂಡು ಬಂದು ಬ್ರಾಹ್ಮಣರೆಲ್ಲ ಬಂದಿದ್ದಾರೆಂದು ರಾಜನಿಗುಸುರಿದನು.

೫೦. ದೊರೆಯು ಬಾಗಿಲಿನಲ್ಲಿರುವ ಗುರುಗಳನ್ನೂ, ನನಗೆ ಹಿತವನ್ನು ಬಯಸುವ ಇತರರನ್ನೂ ಒಳಗೆ ಕಳುಹಿಸು ಎನ್ನಲು ಬುದ್ಧಿವಂತನಾದ ಆ ದ್ವಾರಪಾಲಕನು ಹಾಗೆಯೇ ಮಾಡಿದನು.

೫೧. ಕಾರ್ಯನಿರತನಾದ ರಾಜನು ಮೊದಲು ಮೇಲಕ್ಕೆದ್ದು ಅವರನ್ನು ವಂದಿಸಿ, ಪೂಜಿಸಿ ಆಸನಗಳಲ್ಲಿ ಕುಳ್ಳಿರಿಸಿ ಹೀಗೆ ಪ್ರಶ್ನಿಸಿದನು.

೫೨. "ಈ ಮೃಗಮುಖಿಯ ವಿಷಯವೊಂದು ಆಶ್ಚರ್ಯವಾಗಿದೆ ಇದನ್ನು ಅರಿಯಲು ಹೇಗೆಸಾಧ್ಯ? ನೀವೆಲ್ಲ ಲೋಕವ್ಯವಹಾರದಿಂದಲೊ, ಅಥವಾ ಶಾಸ್ತ್ರದಿಂದಲೊ ಇದನ್ನು ತಿಳಿಯಿರಿ.

ಕಥಮೇಷಾ ಸಮುತ್ಪನ್ನಾ ಕಸ್ಯೇದಂ ಕರ್ಮಣಃ ಫಲಂ ।
ಅಸ್ಯಾಂ ಕೇನ ಪ್ರಕಾರೇಣ ವಚನಂ ಮಾನುಷಂ ಭವೇತ್ ॥ ೫೩ ॥
ಸ್ವಯಂ ಮನುಷ್ಯವದನಾ ಕಥಮೇಷಾ ಭವಿಷ್ಯತಿ ।
ಸಾವಧಾನೈರ್ದ್ವಿಜೈರ್ಭೂಯಃ ಸರ್ವಂ ಸಂಚಿತ್ಯ ಚೋಚ್ಯತಾಂ ॥ ೫೪ ॥

ವಿಪ್ರಾ ಊಚುಃ :—
ದೇವ ಸಾರಸ್ವತೋನಾಮ ಕುರುಕ್ಷೇತ್ರೇ ದ್ವಿಜೋತ್ತಮಃ ।
ಊರ್ಧ್ವರೇತಾಃ ಸರಸ್ವತ್ಯಾಂ ತಪಸ್ತೇಪೇ ಜಿತೇಂದ್ರಿಯಃ ॥ ೫೫ ॥
ಕಥಯಿಷ್ಯತಿ ಸರ್ವಂ ತೇ ತೇನಾದಿಷ್ಟಾ ಮೃಗೀ ಸ್ವಯಂ ।
ಇತಿ ಶ್ರುತ್ವಾ ವಚೋ ರಾಜಾ ಯಯೌ ಸಾರಸ್ವತಂ ದ್ವಿಜಂ ॥ ೫೬ ॥
ಸರಸ್ವತೀಜಲೇ ಸ್ನಾತಂ ಪ್ರಭಾತೇ ಧ್ಯಾನತತ್ಪರಂ ।
ದೃಷ್ಟ್ವಾ ಪ್ರದಕ್ಷಿಣೀಕೃತ್ಯ ಸಾಷ್ಟಾಂಗಂ ತಂ ಪ್ರಣಮ್ಯ ಚ ।
ಉಪವಿಷ್ಟೋ ನೃಪೋ ಭೂಮೌ ಪ್ರಾಂಜಲಿಃ ಸಂಜಿತೇಂದ್ರಿಯಃ ॥ ೫೭ ॥
ಮನುಷ್ಯಪದಸಂಚಾರಂ ಶ್ರುತ್ವಾ ಜ್ಞಾತ್ವಾ ಚ ಕಾರಣಂ ।
ಸಾರಸ್ವತೋ ಬಭಾಷೇಽಥ ತಂ ನೃಪಂ ಭಕ್ತಿತತ್ಪರಂ ॥ ೫೮ ॥

---

೫೩. ಇದು ಹೇಗೆ ಹುಟ್ಟಿತು? ಇದು ಯಾವ ಕರ್ಮದ ಫಲ? ಇದು ಮನುಷ್ಯರಂತೆ ಹೇಗೆ ಮಾತಾಡೀತು?

೫೪. ತಾನಾಗಿಯೇ ಮನುಷ್ಯರಂತೆ ಹೇಗೆ ಮುಖವುಳ್ಳದಾದೀತು? ದ್ವಿಜರೆ! ಈ ವಿಚಾರವೆಲ್ಲವನ್ನೂ ಸಾವಧಾನವಾಗಿ ಆಲೋಚಿಸಿ ನನಗೆ ಹೇಳಿರಿ".

೫೫. ಬ್ರಾಹ್ಮಣರು ಹೇಳುತ್ತಾರೆ:—"ಸ್ವಾಮಿ! ಸಾರಸ್ವತನೆಂಬ ಜಿತೇಂದ್ರಿಯನೂ, ಬ್ರಹ್ಮಚಾರಿಯೂ ಆದ ಬ್ರಾಹ್ಮಣನೋರ್ವನು ಕುರುಕ್ಷೇತ್ರದಲ್ಲಿರುವ ಸರಸ್ವತೀ ನದಿಯ ದಡದಲ್ಲಿ ತಪಸ್ಸನ್ನಾಚರಿಸುತ್ತಿರುವನು.

೫೬. ಅವನ ಅಪ್ಪಣೆಯಾದರೆ ಈ ಮೃಗಾಂಗನೆಯು ತಾನಾಗಿಯೇ ಮಾತಾಡುವಳು". ಬ್ರಾಹ್ಮಣರು ಹೀಗೆ ಹೇಳಲು ದೊರೆಯು ಅದನ್ನು ಕೇಳಿ ಸಾರಸ್ವತ ದ್ವಿಜನೆಡೆಗೆ ಹೋದನು.

೫೭. ಅವನು ಬೆಳಿಗ್ಗೆ ಸರಸ್ವತೀ ಜಲದಲ್ಲಿ ಮಿಂದು ಧ್ಯಾನಾಸಕ್ತನಾದ ಆ ಬ್ರಾಹ್ಮಣನನ್ನು ಕಂಡು ಪ್ರದಕ್ಷಿಣೆ ಮಾಡಿ ಸಾಷ್ಟಾಂಗ ಪ್ರಣಾಮಗೈದು ಕೈಮುಗಿದುಕೊಂಡು ಜಿತೇಂದ್ರಿಯನಾಗಿ ಭೂಮಿಯಲ್ಲಿ ಕುಳಿತನು.

೫೮. ತರುವಾಯ ಸಾರಸ್ವತನು ಮನುಷ್ಯನ ಹೆಜ್ಜೆಯ ಶಬ್ದವನ್ನು ಕೇಳಿ, ಆದರ ಕಾರಣವನ್ನರಿತು ಭಕ್ತಿಯುಳ್ಳ ಆ ರಾಜನನ್ನು ಕುರಿತು ಇಂತೆಂದನು.

ಸಾರಸ್ವತ ಉವಾಚ :—

ಭೋಜರಾಜ ಶುಭಂ ತೇಽಸ್ತು ಜ್ಞಾತಂ ತತ್ಕಾರಣಂ ಮಯಾ ।
ಮೃಗಾನನಾ ತ್ವಯಾ ನಾರೀ ಸಮಾನೀತಾ ವನಾತ್ಕಿಲ ॥ ೫೯ ॥
ಮಹದಾಶ್ಚರ್ಯಮೇವೈತತ್ತವ ಚೇತಸಿ ವರ್ತತೇ ।
ಆದಿಷ್ಟಾ ತು ಮಯಾ ಬಾಲಾ ಸರ್ವಂ ತೇ ಕಥಯಿಷ್ಯತಿ ॥ ೬೦ ॥
ಜಾನಾಮ್ಯಹಂ ಮಹಾರಾಜ ಚರಿತ್ರಂ ಜನ್ಮ ಯಾದೃಶಂ ।
ಆಶ್ಚರ್ಯಂ ಸಂಭವೇಲ್ಲೋಕೇ ಕಥ್ಯಮಾನಂ ತಯಾ ಸ್ವಯಂ ॥ ೬೧ ॥
ಇತ್ಯಾದಿಶ್ಯ ಗತೋ ವೇಗಾದ್ರಥೇನಾದಿತ್ಯವರ್ಚಸಾ ।
ಅಹೋರಾತ್ರದ್ವಯೇನೈವ ಸಂಪ್ರಾಪ್ತೋ ನೃಪಮಂದಿರಂ ॥ ೬೨ ॥
ಪ್ರವಿಶ್ಯ ಚ ಮೃಗೀಂ ದೃಷ್ಟ್ವಾ ಯತ್ರಾಸ್ತೇ ಮೃಗಲೋಚನಾ ।
ತಯಾ ಸಾರಸ್ವತೋ ಜ್ಞಾತೋ ಧರ್ಮಜ್ಞಃ ಸರ್ವವಿದ್ದ್ವಿಜಃ ॥ ೬೩ ॥

ಮೃಗ್ಯುವಾಚ :—

ಏಷ ಸರ್ವಂ ಹಿ ಜಾನಾತಿ ಕಾರಣಂ ಯಚ್ಚ ಯಾದೃಶಂ ।
ವರ್ತಮಾನಂ ಭವಿಷ್ಯಂ ಚ ಭೂತಂ ಯದ್ಭುವನತ್ರಯೇ ॥ ೬೪ ॥

---

೫೯. ಸಾರಸ್ವತನು ಹೇಳುತ್ತಾನೆ :—ನಿನಗೆ ಮಂಗಳವಾಗಲಿ. ನೀನು ಬಂದ ಕಾರಣವನ್ನರಿತೆನು. ನೀನು ಮೃಗ ಮುಖಿಯಾದ ಸ್ತ್ರೀಯೊಬ್ಬಳನ್ನು ಕಾಡಿನಿಂದ ಕರೆ ತಂದಿರುವೆಯಷ್ಟೆ.

೬೦. ಅದರಿಂದ ನೀನು ಬಹಳ ಆಶ್ಚರ್ಯಗೊಂಡಿರುವೆ. ಆ ಬಾಲೆಯು ನನ್ನ ಅಪ್ಪಣೆಯಿಂದ ನಿನಗೆ ಎಲ್ಲವನ್ನೂ ಹೇಳುವಳು.

೬೧. ಮಹಾರಾಜ ! ನಾನು ಅವಳ ಜನ್ಮವನ್ನೂ, ಚರಿತೆಯನ್ನೂ ತಿಳಿದಿದ್ದೇನೆ. ಆದರ ಆ ಮೃಗಮುಖಿಯೇ ಅದನ್ನು ಹೇಳಿದರೆ ಲೋಕದಲ್ಲಿಯೇ ಒಂದು ಆಶ್ಚರ್ಯ ವಿಚಾರವಾಗಬಹುದು.

೬೨. ಆ ಸಾರಸ್ವತನು ಹೀಗೆ ಅಪ್ಪಣೆ ಮಾಡಿ ಆದಿತ್ಯನಂತೆ ಕಾಂತಿಯುಳ್ಳ ರಥ ದಿಂದ ವೇಗವಾಗಿ ಹೊರಟು ಎರಡು ದಿನಗಳಲ್ಲಿ ಭೋಜನ ಅರಮನೆಯನ್ನು ಸೇರಿದನು.

೬೩. ಅಲ್ಲಿ ಅವನು ಮೃಗಾಂಗನೆಯನ್ನು ನೋಡಲು ಅವಳು ಧರ್ಮಜ್ಞನೂ, ಸರ್ವಜ್ಞನೂ ಆದ ಆ ಸಾರಸ್ವತಮುನಿಯನ್ನು ತಿಳಿದಳು.

೬೪. ಮೃಗಾಂಗನೆಯು ಹೇಳುತ್ತಾಳೆ :—ಸಾರಸ್ವತನು ನನ್ನ ಈ ಜನ್ಮಕ್ಕೆ ಕಾರಣವನ್ನರಿತಿರುವನಲ್ಲದೆ ಇವನು ಲೋಕದಲ್ಲಿ ನಡೆಯುವ ಭೂತ, ಭವಿಷ್ಯದ್ವರ್ತ ಮಾನ ವಿಷಯಗಳನ್ನೂ ಅರಿತಿರುವನು.

ಏತೇನ ಮರಣಂ ಜ್ಞಾತಂ ಮದೀಯಂ ಪೂರ್ವಜನ್ಮನಿ ।
ವಸ್ತ್ರಾಪಥೇ ಮಹಾಕ್ಷೇತ್ರೇ ತಪಸ್ತಪ್ತ್ವಾ ಭವಾಲಯೇ ॥ ೬೫ ॥
ವಿಧೂಯ ಕಲುಷಂ ಸರ್ವಂ ಜ್ಞಾನಮುತ್ಪಾದ್ಯ ಯತ್ನತಃ ।
ಜರಾಮರಣನಿರ್ಮುಕ್ತಃ ಪ್ರತ್ಯಕ್ಷಂ ದೃಷ್ಟವಾನ್ಭವಂ ॥ ೬೬ ॥
ಅಸ್ಯ ತುಷ್ಟೋ ಭವೋ ದೇವೋ ಜ್ಞಾತಂ ತೀರ್ಥಸ್ಯ ಕಾರಣಂ ।
ಆದಿಷ್ಟಯಾ ಮಯಾ ವಾಚ್ಯಂ ಭವೇಜ್ಜನ್ಮನಿ ಕಾರಣಂ ॥ ೬೭ ॥
ಇತಿ ಚಿಂತಾಪರಾ ಯಾವತ್ತಾವದ್ವಿಪ್ರಃ ಸಮಾಗತಃ ।
ತಸ್ಮೈ ಪ್ರಣಾಮಪರಮಾ ಮೂರ್ಛಿತಾ ನಿಪಪಾತ ಸಾ ॥ ೬೮ ॥
ಅಥ ಸಾರಸ್ವತೋ ಜ್ಞಾನಾಜ್ಞಾತವಾನ್ಕಾರಣಂ ಚ ತತ್ ।
ಆನಯಂತು ದ್ವಿಜಾ ವೇಗಾತ್ಕಲಶಂ ತೋಯಸಂಭೃತಂ ॥ ೬೯ ॥
ಸರ್ವೌಷಧೀಃ ಪಲ್ಲವಾಂಶ್ಚ ದೂರ್ವಾಃ ಪುಷ್ಪಾಣಿ ಚಾಕ್ಷತಾನ್ ।
ಧೂಪಂ ಚ ಚಂದನಂ ಚೈವ ಗೋಮಯಂ ಮಧುಸರ್ಪಿಷೀ ॥ ೭೦ ॥
ಇತ್ಯಾದಿಷ್ಟೈರ್ದ್ವಿಜೈರ್ವೇಗಾತ್ಸಮಾನೀತಂ ನೃಪಾಜ್ಞಯಾ ।
ಉಪಲಿಪ್ಯ ಚ ಭೂಭಾಗಂ ಸ್ವಸ್ತಿಕಂ ಸಂನಿವೇಶ್ಯ ಚ ॥ ೭೧ ॥

---

೬೫–೬೬. ಇವನು ನನ್ನ ಹಿಂದಿನ ಜನ್ಮದ ಮರಣವನ್ನು ಅರಿತಿದ್ದಾನೆ. ಮತ್ತು ವಸ್ತ್ರಾಪಥ ಮಹಾಕ್ಷೇತ್ರದಲ್ಲಿರುವ ಭವಾಲಯದಲ್ಲಿ ತಪಸ್ಸನ್ನು ಮಾಡಿ ಸಕಲ ಪಾಪಗಳನ್ನು ಪರಿಹರಿಸಿಕೊಂಡು ಪ್ರಯತ್ನದಿಂದ ಜ್ಞಾನವನ್ನು ಸಂಪಾದಿಸಿಕೊಂಡು ಮುಪ್ಪು ಸಾವುಗಳಿಲ್ಲದೆ ಮಹೇಶ್ವರನನ್ನು ಪ್ರತ್ಯಕ್ಷವಾಗಿ ನೋಡಿದನು.

೬೭. ಇವನ ವಿಷಯದಲ್ಲಿ ಮಹೇಶ್ವರನು ಸಂತುಷ್ಟನಾದ್ದರಿಂದ ತೀರ್ಥದ ಕಾರಣವು ಇವನಿಗೆ ತಿಳಿಯಿತು. ಇವನ ಅಪ್ಪಣೆಯಿಂದ ನಾನು ಜನ್ಮದ ಕಾರಣವನ್ನು ಹೇಳಬೇಕಾಗಿರುವುದು.

೬೮. ಹೀಗೆ ಅವಳು ಚಿಂತಿಸುತ್ತಿರಲು ಆ ಸಾರಸ್ವತ ಬ್ರಾಹ್ಮಣನು ಅಲ್ಲಿಗೆ ಬಂದನು. ಅವಳು ಅವನನ್ನು ನಮಸ್ಕರಿಸಲುದ್ಯುಕ್ತಳಾಗಿ ಮೂರ್ಛೆಗೊಂಡು ಕೆಳಗೆ ಬಿದ್ದಳು.

೬೯–೭೨. ಬಳಿಕ ಸಾರಸ್ವತನು ಅವಳ ಮೂರ್ಛೆಗೆ ಕಾರಣವನ್ನರಿತನು. ಬಳಿಕ ರಾಜನು, "ಬ್ರಾಹ್ಮಣರೆ ! ಶೀಘ್ರವಾಗಿ ನೀರಿನಿಂದ ತುಂಬಿದ ಕಲಶ, ಸಮಸ್ತಾ ಷಧಿ, ತಳಿರು, ಗರಿಕೆ, ಹೂವು, ಅಕ್ಷತೆ, ಧೂಪ, ಚಂದನ, ಗೋಮಯ, ಜೇನು, ತುಪ್ಪ ಇವುಗಳನ್ನು ತೆಗೆದುಕೊಂಡು ಬನ್ನಿರಿ" ಎಂದು ಆಜ್ಞೆ ಮಾಡಲು ಅವರು ಕೂಡಲೆ ತೆಗೆದುಕೊಂಡು ಬಂದರು. ಆ ಸಾರಸ್ವತನು ಭೂಮಿಯನ್ನು ಸಾರಿಸಿ ಸ್ವಸ್ತಿಕ ರೂಪವಾಗಿ ರಂಗವಲ್ಲಿಯನ್ನಿಟ್ಟು, ಅಗ್ನಿಕಾರ್ಯ ಮಾಡಿ ಕಲಶದಲ್ಲಿ ವೇದಮಂತ್ರಗಳಿಂದ ಇಂದ್ರಾದಿ

ತತ್ರಾಗ್ನಿಕಾರ್ಯಂ ಕೃತ್ವಾಥದೇ ವೇನಾಸ್ಕುಂಭೇ ನಿಧಾಯ ಸಃ ।
ಇಂದ್ರಂ ತಸ್ಮಿಂಶ್ಚ ವಿನ್ಯಸ್ಯ ದಿಕ್ಪಾಲಾಂಶ್ಚ ಯಥಾಕ್ರಮಂ ।
ಹುತ್ವಾಗ್ನಿಂ ಸ ಚರುಂ ಕೃತ್ವಾ ಗ್ರಹಪೂಜಾಮಕಾರಯತ್ ॥ ೭೨ ॥
ತೋಯಂ ಸುವರ್ಣಪಾತ್ರಸ್ಥಂ ಕೃತ್ವಾ ಕುಂಭಾನ್ಸ್ವಯಂ ಗುರುಃ ।
ಅಭಿಷೇಕಂ ತತಶ್ಚಕ್ರೇ ಮುಹೂರ್ತೇ ಸಾರ್ವಕಾಮಿಕೇ ॥ ೭೩ ॥
ಅಭಿಷಿಕ್ತಾ ತು ಸಾ ತೇನ ಪೂತಾ ಸ್ನಾನಾರ್ಥವಾರಿಣಾ ।
ಜಾತಾ ಸಚೇತನಾ ಬಾಲಾ ಸರ್ವಂ ಪಶ್ಯತಿ ಚಕ್ಷುಷಾ ॥ ೭೪ ॥
ಶೃಣೋತಿ ಸರ್ವಂ ಜಾನಾತಿ ಚರಿತ್ರಂ ಪೂರ್ವಜನ್ಮನಃ ।
ಬದರೀಫಲಮಾತ್ರಂ ತು ಪುರೋಡಾಶಂ ದದೌ ಗುರುಃ ॥ ೭೫ ॥
ತಯೋಪಭುಕ್ತಂ ಯತ್ನೇನ ತತಶ್ಚಕ್ರೇ ಸ ಮಾರ್ಜನಂ ।
ಮಾನುಷೇ ವಚನೇ ಕರ್ಣೇ ದದೌ ಜ್ಞಾನಂ ಗುರುಸ್ತತಃ ॥ ೭೬ ॥
ಗುರವೇ ದಕ್ಷಿಣಾಂ ದತ್ವಾ ತತಃ ಸಾ ಚ ಮೃಗಾನನಾ ।
ಭೋಜರಾಜಾಯ ಸರ್ವಂ ಚ ಚರಿತ್ರಂ ಪೂರ್ವಜನ್ಮನಃ ॥ ೭೭ ॥
ವಕ್ತುಂ ಪ್ರಚಕ್ರಮೇ ಬಾಲ್ಯಾದ್ಯಷ್ಟವೃತ್ತಂ ಪೂರ್ವಜನ್ಮನಿ ।
ನಮಸ್ಕೃತ್ಯ ಗುರುಂ ಪೂರ್ವಂ ಬ್ರಾಹ್ಮಣಾನ್ಕ್ಷತ್ರಿಯಾಂಸ್ತಥಾ ॥ ೭೮ ॥

---

ದಿಕ್ಪಾಲಕರನ್ನು ಆವಾಹನೆ ಮಾಡಿ ಚರುವಿನಿಂದ ಹೋಮಿಸಿ ಗ್ರಹಪೂಜೆಯನ್ನು ಮಾಡಿಸಿದನು.

೭೩. ಗುರುವು ಚಿನ್ನದ ಕಲಶದಲ್ಲಿ ನೀರನ್ನು ತುಂಬಿ ಸಕಲೇಷ್ಟಗಳನ್ನೀಯುವ ಮುಹೂರ್ತದಲ್ಲಿ ಅಭಿಷೇಕಮಾಡಿದನು.

೭೪. ಅವನು ಸ್ನಾನದ ನೀರಿನಿಂದ ಅವಳನ್ನು ಅಭಿಷೇಕ ಮಾಡಲು ಅವಳು ಎಚ್ಚರಗೊಂಡು ಕಣ್ಣಿನಿಂದ ಎಲ್ಲವನ್ನೂ ನೋಡಿದಳು.

೭೫. ಅವಳು ತನ್ನ ಹಿಂದಿನ ಜನ್ಮದ ಚರಿತ್ರೆಯನ್ನೆಲ್ಲ ತಿಳಿದಳು. ಬಳಿಕ ಗುರುವು ಎಲಚೀ ಹಣ್ಣಿನಷ್ಟು ಪುರೋಡಾಶವನ್ನು ಅವಳಿಗೆ ಕೊಟ್ಟನು.

೭೬. ಅವಳು ಅದನ್ನು ತಿನ್ನಲು ಅವನು ಅವಳಿಗೆ ಮಾರ್ಜನ ಮಾಡಿ ಮನುಷ್ಯ ವಚನದಿಂದ ಕಿವಿಯಲ್ಲಿ ಜ್ಞಾನೋಪದೇಶ ಮಾಡಿದನು.

೭೭-೭೮. ಬಳಿಕ ಅವಳು ಗುರುವಿಗೆ ದಕ್ಷಿಣೆಯನ್ನಿತ್ತು ಮೊದಲು ಗುರುವಿಗೂ ಅನಂತರ ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ವಂದಿಸಿ ತನ್ನ ಹಿಂದಿನ ಜನ್ಮದ ಚರಿತ್ರೆಯನ್ನೆಲ್ಲ ಆ ಭೋಜರಾಜನಿಗೆ ಹೇಳಲು ಆರಂಭಿಸಿದಳು.

ಮೃಗ್ಯುವಾಚ :—

ನ ವಿಷಾದಸ್ತ್ವಯಾ ಕಾರ್ಯೋ ರಾಜಞ್ಛೃತ್ವಾ ಮಯೋದಿತಂ ।
ಇತಸ್ತ್ವಂ ಸಪ್ತಮೇ ಸ್ಥಾನೇ ಕಲಿಂಗಾಧಿಪತೇಃ ಸುತಃ ॥ ೭೯ ॥
ಮೃತೇ ಪಿತರಿ ಬಾಲಸ್ತ್ವಂ ಸ್ವಭಿಷಿಕ್ತಃ ಸ್ವಮಂತ್ರಿಭಿಃ ।
ಅಹಂ ಹಿ ವಂಗರಾಜಸ್ಯ ಸಂಜಾತಾ ದುಹಿತಾ ಕಿಲ ॥ ೮೦ ॥
ಪರಿಣೀತಾ ತ್ವಯಾ ದೇವ ಪಿತ್ರಾ ದತ್ತಾ ಸ್ವಯಂ ನೃಪ ।
ತ್ವಯಾಹಂ ಪಟ್ಟಮಹಿಷೀ ಕೃತಾ ಯೋಷಿದ್ವರಾ ಯತಃ ॥ ೮೧ ॥
ಯುವಾ ಜಾತಃ ಕ್ರಮೇಣೈವ ಹಿಂಸ್ರಃ ಕ್ರೂರೋ ಬಭೂವ ಹ ।
ನ ವೇದಶಾಸ್ತ್ರಕುಶಲೋ ದಯಾಧರ್ಮವಿವರ್ಜಿತಃ ॥ ೮೨ ॥
ಲುಬ್ಧೋ ಮಾನೀ ಮಹಾಕ್ರೋಧೀ ಸತ್ಯಾಚಾರಬಹಿಷ್ಕೃತಃ ।
ನ ದೇವಂ ನ ಗುರುಂ ವಿಪ್ರಾನ್ನೋ ಜಾನಾತಿ ದುರಾಶಯಃ ॥ ೮೩ ॥
ವಿರಕ್ತಾ ಹಿ ಪ್ರಜಾಸ್ತಸ್ಯ ಬ್ರಾಹ್ಮಣೋಚ್ಛೇದಕಾರಕಃ ।
ಸಮಾಸನ್ನೈರ್ನೃಪೈಸ್ತಸ್ಯ ದೇಶಃ ಸರ್ವೋ ವಿಲುಂಪಿತಃ ।
ಸೈನ್ಯಂ ಸರ್ವಂ ಸಮಾದಾಯ ಯುದ್ಧಾಯೋಪಜಗಾಮ ಸಃ ॥ ೮೪ ॥

---

೭೯—೮೧. ಮೃಗಿಯು ಹೇಳುತ್ತಾಳೆ:—ದೊರೆಯೆ! ನಾನು ಹೇಳಿದ್ದನ್ನು ಕೇಳಿ ನೀನು ವಿಷಾದಗೊಳ್ಳಬೇಡ, ನೀನು ಇಲ್ಲಿಂದ ಹಿಂದಣ ಏಳನೆಯ ಜನ್ಮದಲ್ಲಿ ಕಳಿಂಗ ರಾಜನ ಮಗನಾಗಿ ಜನಿಸಿದೆ. ನಿನ್ನ ತಂದೆಯು ಮೃತನಾಗಲು ಮಂತ್ರಿಗಳು ನಿನಗೆ ಪಟ್ಟಾಭಿಷೇಕಮಾಡಿದರು. ತರುವಾಯ ವಂಗರಾಜನ ಮಗಳಾಗಿ ಹುಟ್ಟಿದ ನನ್ನನ್ನು ನೀನು ನನ್ನ ತಂದೆಯ ಅಪ್ಪಣೆಯಿಂದ ವಿವಾಹಮಾಡಿಕೊಂಡು ಪಟ್ಟದ ರಾಣಿಯನ್ನಾಗಿ ಮಾಡಿದೆ.

೮೨—೮೩. ಕ್ರಮದಿಂದ ಯುವಕನಾದ ನೀನು ಘಾತುಕನೂ, ಕ್ರೂರನೂ, ವೇದಶಾಸ್ತ್ರಗಳಲ್ಲಿ ಅಕುಶಲನೂ, ದಯಾಧರ್ಮರಹಿತನೂ, ಲುಬ್ಧನೂ, ಅಹಂಕಾರಿಯೂ, ಅತ್ಯಂತ ಕೋಪಿಷ್ಠನೂ, ಸತ್ಯ ಆಚಾರಗಳಿಲ್ಲದವನೂ ಆದುದರಿಂದ ದೇವಗುರು ಬ್ರಾಹ್ಮಣರನ್ನು ಸನ್ಮಾನಿಸಲಿಲ್ಲ.

೮೪. ನೀನು ಬ್ರಾಹ್ಮಣನಾಶಕನಾದ್ದರಿಂದ ನಿನ್ನಲ್ಲಿ ಪ್ರಜೆಗಳು ವಿರಕ್ತರಾದರು. ಸಮೀಪದಲ್ಲಿರುವ ರಾಜರು ನಿನ್ನ ದೇಶವನ್ನು ಅಪಹರಿಸಲು ನೀನು ಸೈನ್ಯದೊಡನೆ ಯುದ್ಧಕ್ಕೆ ಹೊರಟೆ.

ಸಹೈವಾಹಂ ಗತಾ ದೇವ ಯುದ್ಧಂ ಜಾತಂ ನೃಪ್ಯೈಃ ಸಹ ।
ಹಾರಿತಂ ಸೈನಿಕೈಸ್ತಸ್ಯ ಗತಾ ನಷ್ಟ್ವಾ ದಿಶೋ ದಶ ॥ ೮೫ ॥
ತ್ಯಕ್ತ್ವಾ ಧರ್ಮಂ ನಿಜಂ ರಾಜಾ ಪಲಾಯನಪರೋಽಭವತ್ ।
ಗಚ್ಛಮಾನಸ್ತು ನೃಪತಿಃ ಶತ್ರುಭಿಃ ಪರಿಪೀಡಿತಃ ॥ ೮೬ ॥
ತವಾಸ್ಮಿವಾದೀ ದುಷ್ಟಾತ್ಮಾ ಹತೋ ಲೋಕವಿರೋಧಕಃ ।
ದೇಹಂ ತಸ್ಯ ಗೃಹೀತ್ವಾಗ್ನೌ ಪ್ರವಿಷ್ಟಾಹಂ ನೃಪೋತ್ತಮ ॥ ೮೭ ॥
ಮೃತಸ್ಯೈವಂ ಗತಿರ್ನಾಸ್ತಿ ನರಕೇ ಸ ವಿಪಚ್ಯತೇ ।
ಮೃತಂ ಕಾಂತಂ ಸಮಾದಾಯ ಭಾರ್ಯಾಗ್ನೌ ಪ್ರವಿಶೇದ್ಯದಿ ॥ ೮೮ ॥
ಸಾ ತಾರಯತಿ ಪಾಪಿಷ್ಠಂ ಯಾವದಾಭೂತಸಂಪ್ಲವಂ ।
ಇಹ ಪಾಪಕ್ಷಯಂ ಕೃತ್ವಾ ಪಶ್ಚಾತ್ಸ್ವರ್ಗೇ ಮಹೀಯತೇ ॥ ೮೯ ॥
ಅತಸ್ತ್ವಂ ಬ್ರಾಹ್ಮಣೋ ಜಾತೋ ದೇಶೇ ಮಾಲವಕೇ ನೃಪ ।
ತಸ್ಯೈವ ತತ್ರ ಭಾರ್ಯಾಹಂ ಸಂಭೂತಾ ಬ್ರಾಹ್ಮಣೀ ನೃಪ ॥ ೯೦ ॥

---

೮೫. ಸ್ವಾಮಿ! ನಾನೂ ನಿನ್ನೊಡನೆ ಹೊರಟೆನು. ನಿನಗೆ ಶತ್ರುಸೈನಿಕರೊಡನೆ ಯುದ್ಧವು ನಡೆಯಲು ಆ ಶತ್ರುಸೈನಿಕರು ನಿನ್ನ ರಾಜ್ಯವನ್ನು ಅಪಹರಿಸಿದರು. ಉಳಿದ ನಿನ್ನ ಜನರು ದಿಕ್ಕು ವಿದಿಕ್ಕುಗಳಿಗೂ ಹೋಗಿ ಅಡಗಿಕೊಂಡರು.

೮೬. ನೀನೂ ನಿನ್ನ ಕ್ಷಾತ್ರಧರ್ಮವನ್ನು ತ್ಯಜಿಸಿ ಓಡಿ ಹೋಗುತ್ತಿದ್ದೆ. ಓಡುತ್ತಿದ್ದ ನಿನ್ನನ್ನು ಶತ್ರುಗಳು ಹಿಂಸಿಸಿದರು.

೮೭. ನೀನು ಶತ್ರುಗಳನ್ನು ಕುರಿತು "ನಿಮ್ಮವನಾಗಿದ್ದೇನೆ" ಎಂದರೂ ಅವರು ಬಿಡದೆ ಲೋಕವಿರೋಧಿಯಾದ ನಿನ್ನನ್ನು ಕೊಂದರು. ನಾನು ನಿನ್ನ ದೇಹವನ್ನು ಹೊತ್ತುಕೊಂಡು ಅಗ್ನಿಪ್ರವೇಶಮಾಡಿದೆನು.

೮೮–೮೯. ಹೀಗೆ ಮೃತನಾದ ನಿನಗೆ ಉತ್ತಮ ಗತಿಯು ದೊರಕದೆ ನರಕದಲ್ಲಿ ನರಳುತ್ತಿದ್ದೆ. ಮೃತನಾದ ಪತಿಯೊಡನೆ ಪತ್ನಿಯು ಅಗ್ನಿಯಲ್ಲಿ ಸಹಗಮನ ಮಾಡಿದರೆ ಆ ಪತ್ನಿಯು ಪಾಪಿಷ್ಠನಾದ ಪತಿಯನ್ನು ಪ್ರಳಯಕಾಲದವರೆಗೆ ಉದ್ಧಾರ ಮಾಡುವಳು. ಅವನು ಲೋಕದಲ್ಲಿ ಪಾಪವನ್ನು ನೀಗಿಸಿಕೊಂಡು ಅನಂತರ ಸ್ವರ್ಗ ಲೋಕದಲ್ಲಿ ಪೂಜ್ಯನಾಗುತ್ತಾನೆ.

೯೦. ದೊರೆಯೆ! ಆದ್ದರಿಂದ ನೀನು ಮಾಲವದೇಶದಲ್ಲಿ ಬ್ರಾಹ್ಮಣನಾಗಿ ಜನಿಸಿದೆ. ನಾನೂ ಅಲ್ಲಿಯೇ ಹುಟ್ಟಿ ನಿನಗೆ ಪತ್ನಿಯಾದೆನು.

ಧನಧಾನ್ಯಸಮೃದ್ಧೋಽಭೂತ್ತಥಾ ಜೀವಧನಾಧಿಕಃ ।
ಮೃತಃ ಪಿತಾ ಮೃತಾ ಮಾತಾ ಸ ಚ ಭ್ರಾತೃವಿವರ್ಜಿತಃ ॥ ೯೧ ॥
ಧನಧಾನ್ಯಸಮೃದ್ಧೋಽಪಿ ಲುಬ್ಧೋ ಭ್ರಮತಿ ಭೂತಲೇ ।
ಅತೀವ ಕೋಪನೋ ವಿಪ್ರೋ ವೇದಪಾಠವಿವರ್ಜಿತಃ ॥ ೯೨ ॥
ಸ್ನಾನಸಂಧ್ಯಾದಿಹೀನಶ್ಚ ಮಾಯಾವೀ ಯಾಚತೇ ಜನಂ ।
ಭಕ್ತಿಂ ಕರೋಮಿ ಪರಮಾಂ ಸ ಚ ಕ್ರುಧ್ಯತಿ ಮಾಂ ಪ್ರತಿ ॥ ೯೩ ॥
ಸಂತಾನಂ ತಸ್ಯ ವೈ ನಾಸ್ತಿ ಧನರಕ್ಷಾಪರೋ ಹಿ ಸಃ ।
ನ ದದಾತಿ ನ ಚಾಶ್ನಾತಿ ನ ಜುಹೋತಿ ನ ರಕ್ಷತಿ ॥ ೯೪ ॥
ನ ತರ್ಪಣಂ ತಿಲೈರ್ವಿಪ್ರೋ ವಿದಧಾತ್ಯತಿಲೋಭತಃ ।
ಕಾರ್ತಿಕೇಽಪಿ ಚ ಸಂಪ್ರಾಪ್ತೇ ವಿಷ್ಣುಪೂಜಾವಿವರ್ಜಿತಃ ॥ ೯೫ ॥
ದೀಪಂ ದದಾತಿ ನೋ ವಿಪ್ರೋ ಮಾಸಮೇಕಂ ನಿರಂತರಂ ।
ನ ಭುಂಕ್ತೇ ಶಾಕಪತ್ರಂ ಸ ಏಕಾಹಾರೋ ನಿರಂತರಂ ॥ ೯೬ ॥
ಮಾಸೇ ನಭಸ್ಯೇ ಸಂಪ್ರಾಪ್ತೇ ಪ್ರಾಪ್ತೇ ಕೃಷ್ಣೇ ನೃಪೋತ್ತಮ ।
ನ ಕರೋತಿ ಗೃಹೇ ಶ್ರಾದ್ಧಂ ಸ್ನಾನತರ್ಪಣವರ್ಜಿತಃ ॥ ೯೭ ॥

---

೯೧. ನೀನು ಧನಧಾನ್ಯಗಳಿಂದ ಸಮೃದ್ಧನಾಗಿದ್ದರೂ ನಿನ್ನ ತಂದೆ ತಾಯಿಗಳು ಮೃತರಾದರು. ಸಹೋದರರೂ ತ್ಯಜಿಸಿದರು.

೯೨–೯೩. ನೀನು ಧನಧಾನ್ಯಗಳಿಂದ ತುಂಬಿದ್ದಾಗ್ಯೂ ಲೋಭಿಯೂ ಅತ್ಯಂತ ಕೋಪಿಷ್ಠನೂ, ವೇದಪಾಠ ವಿಹೀನನೂ, ಸ್ನಾನಸಂಧ್ಯಾದಿಗಳನ್ನು ಮಾಡದವನೂ, ಕಪಟಿಯೂ ಆಗಿ ಜನರಲ್ಲಿ ಹಣವನ್ನು ಬೇಡುತ್ತಿದ್ದೆ. ನಾನು ನಿನ್ನಲ್ಲಿ ಅತಿಶಯ ಭಕ್ತಿಮಾಡಿದರೂ ನನ್ನಲ್ಲಿ ಕೋಪಮಾಡುತ್ತಿದ್ದೆ.

೯೪. ನಿನಗೆ ಸಂತತಿಯಾಗಲಿಲ್ಲ. ಧನವನ್ನು ಕಾಪಾಡುವುದರಲ್ಲಿ ಆಸಕ್ತನಾದ ನೀನು ದಾನಮಾಡುತ್ತಿರಲಿಲ್ಲ. ಭೋಜನಮಾಡುತ್ತಿರಲಿಲ್ಲ. ಹೋಮಿಸುತ್ತಿರಲಿಲ್ಲ. ಯಾರನ್ನೂ ಕಾಪಾಡುತ್ತಿರಲಿಲ್ಲ.

೯೫–೯೬. ಅತಿಲೋಭದಿಂದ ತಿಲತರ್ಪಣಮಾಡುತ್ತಿರಲಿಲ್ಲ. ಕಾರ್ತಿಕ ಮಾಸದಲ್ಲಿಯೂ ವಿಷ್ಣುಪೂಜೆಯನ್ನು ಮಾಡಲಿಲ್ಲ ಒಂದು ತಿಂಗಳು ದೀಪವನ್ನೂ ಹೊತ್ತಿಸುತ್ತಿರಲಿಲ್ಲ. ಯಾವಾಗಲೂ ಒಂದೇ ಊಟವನ್ನು ಮಾಡುತ್ತ ತರಕಾರಿ ಯನ್ನು ತಿನ್ನುತ್ತಿರಲಿಲ್ಲ.

೯೭. ಭಾದ್ರಪದ ಕೃಷ್ಣಪಕ್ಷದಲ್ಲಿ ಮನೆಯಲ್ಲಿ ಸ್ನಾನ ಶ್ರಾದ್ಧ, ತರ್ಪಣಗಳನ್ನು ಮಾಡುತ್ತಿರಲಿಲ್ಲ.

ನ ಜಾನಾತಿ ದಿನಂ ಪಿತ್ರ್ಯಂ ಪಕ್ಷಮೇಕಂ ನಿರಂತರಂ ।
ಅನ್ಯತ್ರ ಭುಂಕ್ತೇ ವಿಪ್ರೋಽಸೌ ಕ್ಷಯಾಹೇಽಪಿ ಸಮಾಗತೇ ॥ ೯೮ ॥
ಮಕರಸ್ಥೇಽಪಿ ಸಂಕ್ರಾಂತೌ ಕೃಶರಾನ್ನಂ ದದಾತಿ ನ ।
ತಿಲಾನ್ಸುವರ್ಣಂ ತಾರಂ ವಾ ವಸ್ತ್ರಂ ವಾ ಫಲಮೇವ ಚ ।
ಶಾಕಪತ್ರಂ ಸ ಪುಷ್ಪಂ ವಾ ನ ದದಾತಿ ತಥೇಂಧನಂ ॥ ೯೯ ॥
ಗವಾಂ ಗವಾಹ್ನಿಕಂ ನೈವ ಕಥಂ ಮುಕ್ತಿರ್ಭವಿಷ್ಯತಿ ।
ನ ಯಾತಿ ವಿಷ್ಣುಶರಣಂ ಸಂಪ್ರಾಪ್ತೇ ದಕ್ಷಿಣಾಯನೇ ॥ ೧೦೦ ॥
ಧೇನುಂ ದದಾತಿ ನೋ ವಿಪ್ರೋ ಗ್ರಹಣೇ ಚಂದ್ರಸೂರ್ಯಯೋಃ ॥೧೦೧॥

ಏಕಾಪಿ ದತ್ತಾ ಸುಪಯಸ್ವಿನೀ ಸಾ
ಸವಸ್ತ್ರಘಂಟಾಭರಣೋಪಪನ್ನಾ ।
ವತ್ಸೇನ ಯುಕ್ತಾ ಹಿ ದದಾತಿ ದಾತ್ರೇ
ಮುಕ್ತಿಂ ಕುಲಸ್ಯಾಸ್ಯ ಕರೋತಿ ವೃದ್ಧಿಂ ॥ ೧೦೨ ॥
ಯಾವಂತಿ ರೋಮಾಣಿ ಭವಂತಿ ತಸ್ಯಾ
ಸ್ತಾವಂತಿ ವರ್ಷಾಣಿ ಮಹೀಯತೇ ಸಃ ।
ಬ್ರಹ್ಮಾಲಯೇ ಸಿದ್ಧಗಣೈರ್ವೃತೋಽಸೌ
ಸಂತಿಷ್ಠತೇ ಸೂರ್ಯಸಮಾನತೇಜಾಃ ॥ ೧೦೩ ॥

---

೯೮. ಪಿತೃಪಕ್ಷವನ್ನರಿಯುತ್ತಿರಲಿಲ್ಲ. ಪಿತೃಶ್ರಾದ್ಧದ ದಿನದಲ್ಲಿಯೂ ಬೇರೆಯವರ ಮನೆಯಲ್ಲಿ ಭುಂಜಿಸುತ್ತಿದ್ದೆ.

೯೯. ಮಕರಸಂಕ್ರಾಂತಿಯ ದಿನ ಹುಗ್ಗಿಯನ್ನು ದಾನಮಾಡಲಿಲ್ಲ. ಎಳ್ಳು, ಸುವರ್ಣ, ಬೆಳ್ಳಿ, ವಸ್ತ್ರ, ಫಲ, ತರಕಾರಿ, ಹೂವು, ಕಟ್ಟಿಗೆಗಳನ್ನು ದಾನಮಾಡಲಿಲ್ಲ.

೧೦೦. ಗೋವುಗಳಿಗೆ ಗೋಗ್ರಾಸವನ್ನು ಕೊಡಲಿಲ್ಲ. ಮೋಕ್ಷವು ಹೇಗಾಗುವುದು ? ದಕ್ಷಿಣಾಯನದಲ್ಲಿ ವಿಷ್ಣುದೇವಾಲಯಕ್ಕೆ ಹೋಗಲಿಲ್ಲ.

೧೦೧. ಚಂದ್ರಸೂರ್ಯರ ಗ್ರಹಣಕಾಲದಲ್ಲಿ ಗೋದಾನ ಮಾಡಲಿಲ್ಲ.

೧೦೨. ವಸ್ತ್ರ, ಘಂಟೆ, ಆಭರಣಗಳಿಂದಲೂ, ಕರುವಿನಿಂದಲೂ ಕೂಡಿ ದಾನ ಮಾಡಲ್ಪಟ್ಟ ಒಂದು ಗೋವು ದಾನಮಾಡಿದವನಿಗೆ ಮುಕ್ತಿಯನ್ನೂ, ವಂಶವೃದ್ಧಿಯನ್ನೂ ಉಂಟುಮಾಡುವುದು.

೧೦೩. ಆ ಗೋವಿನ ರೋಮಗಳ ಸಂಖ್ಯೆಯಷ್ಟು ಕಾಲ ಅವನು ಬ್ರಹ್ಮಲೋಕದಲ್ಲಿ ಸಿದ್ಧರಿಂದಸಹಿತನೂ, ಸೂರ್ಯಸಮಾನ ತೇಜಸ್ಸುಳ್ಳನೂ ಆಗಿವಾಸಿಸುತ್ತ ಪೂಜ್ಯನಾಗುವನು.

ದೇವಾಲಯಂ ನೋ ವಿದಧಾತಿ ವಾಪೀಂ
ಕೂಪಂ ತಡಾಗಂ ನ ಕರೋತಿ ಕುಂಡಂ ।
ಪುಣ್ಯಂ ವಿವಾಹಂ ಸುಜನೋಪಕಾರಂ
ನಾಸೌ ಸತಾಂ ವಾ ದ್ವಿಜಮಂದಿರಂ ಚ ॥ ೧೦೪ ॥
ಧನಂ ಸದಾ ಭೂಮಿಗತಂ ಕರೋತಿ
ಧರ್ಮಂ ನ ಜಾನಾತಿ ಕುಲಸ್ಯ ಚಾಸೌ ।
ಅಹಂ ಹಿ ತಸ್ಯಾನುಗತಾ ಭವಾಮಿ
ಕಥಂ ಹಿ ಕಾಂತಂ ಪರಿವಂಚಯಾಮಿ ॥ ೧೦೫ ॥
ಏವಂ ಹಿ ವರ್ತಮಾನಃ ಕಾಲಧರ್ಮಮುಪೇಯಿವಾನ್ ।
ಧನಲೋಭಾನ್ಮಯಾ ದೇವ ಮರಣಂ ಪರಿವರ್ಜಿತಂ ॥ ೧೦೬ ॥
ಪಶ್ಯಂತ್ಯಾ ಗೋತ್ರಿಭಿಃ ಸರ್ವಂ ಗೃಹೀತಂ ಧನಸಂಚಯಂ ।
ಕಾಲೇನ ಮಹತಾ ದೇವ ಮೃತಾಹಂ ದ್ವಿಜಮಂದಿರೇ ॥ ೧೦೭ ॥
ಶ್ವೇತಸರ್ಪಃ ಸಮಭವದ್ದೇಶೇ ತಸ್ಮಿನ್ನರೋತ್ತಮ ।
ತತ್ರೈವಾಹಂ ಬ್ರಾಹ್ಮಣಸ್ಯ ಸಂಜಾತಾ ತನಯಾ ನೃಪ ॥ ೧೦೮ ॥

---

೧೦೪. ನೀನು ದೇವಾಲಯ, ವಾಪಿ, ಕೂಪ, ಕೆರೆ, ಕುಂಡಗಳನ್ನು ನಿರ್ಮಿಸಲಿಲ್ಲ. ಪುಣ್ಯಕರವಾದ ವಿವಾಹ, ಸಜ್ಜನರಿಗುಪಕಾರ ಇವುಗಳನ್ನು ಮಾಡಲಿಲ್ಲ. ಬ್ರಾಹ್ಮಣರಿಗೆ ಮನೆಯನ್ನು ಕಟ್ಟಿಸಿ ಕೊಡಲಿಲ್ಲ.

೧೦೫. ನೀನು ಯಾವಾಗಲೂ ಹಣವನ್ನು ಭೂಗತ ಮಾಡುತ್ತಿದ್ದೆ. ಕುಲಧರ್ಮವನ್ನು ತಿಳಿಯಲಿಲ್ಲ. ನಾನು ನಿನ್ನನ್ನು ಅನುಸರಿಸಿದ್ದೆನು. ಪತಿಯನ್ನು ಹೇಗೆ ವಂಚಿಸಲಿ.

೧೦೬. ಹೀಗಿರುವ ಅವನು ಮೃತನಾದನು. ನಾನು ಹಣದಾಸೆಯಿಂದ ಮಡಿಯಲಿಲ್ಲ.

೧೦೭. ನಾನು ನೋಡುತ್ತಿರುವಾಗಲೆ ದಾಯಾದಿಗಳು ಅವನ ಸಕಲ ಧನವನ್ನು ತೆಗೆದುಕೊಂಡರು. ಬಹುಕಾಲದ ಮೇಲೆ ನಾನು ಬ್ರಾಹ್ಮಣನಾದ ಆ ನಿನ್ನ ಮನೆಯಲ್ಲಿ ಮಡಿದನು.

೧೦೮. ಆ ನೀನು ಅದೇ ದೇಶದಲ್ಲಿ ಬಿಳಿಯ ಸರ್ಪವಾಗಿ ಹುಟ್ಟಿದೆ. ಅಲ್ಲಿಯೇ ನಾನು ಬ್ರಾಹ್ಮಣನ ಮಗಳಾದೆನು.

ವರ್ಷೇಽಷ್ಟಮೇ ತು ಸಂಪ್ರಾಪ್ತೇ ಪರಿಣೀತಾ ದ್ವಿಜನ್ಮನಾ ।
ತಸ್ಮಿನ್ನೇವ ಗೃಹೇ ಸರ್ಪೋ ಮದೀಯೇ ವಸತೇ ನೃಪ ॥ ೧೦೯ ॥
ಭಾರ್ಯಾ ಮಮೇತಿ ಸಂದಷ್ಟೋ ರಾತ್ರೌ ಭರ್ತಾ ಮಹಾಹಿನಾ ।
ಮೃತೋಽಪಿ ಬ್ರಾಹ್ಮಣೈಃ ಸರ್ಪೋ ಲಗುಡೈರ್ವಿನಿಪಾತಿತಃ ॥ ೧೧೦ ॥
ವೈಧವ್ಯಂ ಮಮ ದತ್ವಾ ತು ದ್ವಿಜಸರ್ಪೌ ಮೃತಾವುಭೌ ।
ಪಿತ್ರಾ ಮಾತ್ರಾ ಮಹಾಶೋಕಂ ಕೃತ್ವಾ ಮೇ ಮುಂಡಿತಂ ಶಿರಃ ॥ ೧೧೧ ॥
ವಸಾನಾ ಶ್ವೇತವಸ್ತ್ರಂ ಚ ವಿಷ್ಣುಭಕ್ತಿಪರಾಯಣಾ ।
ಮಾಸೋಪವಾಸನಿರತಾ ಯಾನಿ ತೀರ್ಥಾನ್ಯನೇಕಶಃ ॥ ೧೧೨ ॥
ಸರ್ಪಸ್ತು ಮಕರೋ ಜಾತೋ ಗೋದಾವರ್ಯಾಂ ಶಿವಾಲಯೇ ।
ದೇವಂ ಭೀಮೇಶ್ವರಂ ದ್ರಷ್ಟುಂ ಗತಾಹಂ ಸ್ವಜನೈಃ ಸಹ ॥ ೧೧೩ ॥
ಯಾವತ್ಸ್ನಾತುಂ ಪ್ರವಿಷ್ಟಾಹಂ ವೃತಾ ಸರ್ವಜನೈರ್ನೃಪ ।
ಮಕರೇಣ ತದಾ ದೃಷ್ಟ್ವಾ ಭಾರ್ಯೇಯಂ ಮಮ ವಲ್ಲಭಾ ।
ಗೃಹೀತಾ ಮಕರೇಣಾಹಂ ನೇತುಮಂತರ್ಜಲೇ ನೃಪ ॥ ೧೧೪ ॥

---

೧೦೯. ಎಂಟನೆ ವರ್ಷದಲ್ಲಿ ಒಬ್ಬ ಬ್ರಾಹ್ಮಣನು ನನ್ನನ್ನು ಮದುವೆ ಮಾಡಿಕೊಂಡನು. ನನ್ನ ಮನೆಯಲ್ಲಿಯೇ ಆ ಸರ್ಪವು ವಾಸವಾಗಿದ್ದಿತು.

೧೧೦. ಆ ಸರ್ಪವು ಇವಳು ನನ್ನ ಪತ್ನಿಯೆಂದು ನನ್ನ ಪತಿಯನ್ನು ಕಚ್ಚಲು ಅವನು ಮೃತನಾದನು. ಬ್ರಾಹ್ಮಣರು ಆ ಸರ್ಪವನ್ನು ದೊಣ್ಣೆಯಿಂದ ಕೊಂದರು.

೧೧೧. ಆ ಬ್ರಾಹ್ಮಣ ಸರ್ಪರಿಬ್ಬರೂ ನನಗೆ ವೈಧವ್ಯವನಿತ್ತು ಮಡಿಯಲು ನನ್ನ ತಂದೆತಾಯಿಗಳು ಅತ್ಯಂತವಾಗಿ ದುಃಖಿಸಿ ನನ್ನ ತಲೆಯನ್ನುಮುಂಡನ ಮಾಡಿಸಿದನು.

೧೧೨. ನಾನು ಶ್ವೇತ ವಸ್ತ್ರವನ್ನುಟ್ಟು ವಿಷ್ಣುಭಕ್ತಳೂ ಮಾಸೋಪವಾಸ ನಿರತಳೂ ಆಗಿ ಅನೇಕ ತೀರ್ಥಯಾತ್ರೆಗಳನ್ನು ಮಾಡುತ್ತಿದ್ದನು.

೧೧೩. ಆ ಸರ್ಪವು ಗೋದಾವರೀ ನದಿಯ ಜಲದಲ್ಲಿ ಮೊಸಳೆಯಾಗಿ ಹುಟ್ಟಿತು. ನಾನು ಅಲ್ಲಿ ಶಿವಾಲಯದಲ್ಲಿರುವ ಭೀಮೇಶ್ವರನನ್ನು ನೋಡಲು ಬಂಧುಗಳೊಡನೆ ಹೋದೆನು.

೧೧೪. ನಾನು ಸಮಸ್ತ ಜನರೊಡನೆ ಅಲ್ಲಿ ಸ್ನಾನ ಮಾಡಲು ಪ್ರವೇಶಿಸಿದ ಕೂಡಲೇ ಮೊಸಳೆಯು ಇವಳು ನನ್ನ ಪ್ರಿಯಭಾರ್ಯೆಯೆಂದು ನೀರಿನೊಳಗೆ ಒಯ್ಯಲು ಹಿಡಿದುಕೊಂಡಿತು.

ಹಾಹಾಕರಃ ಸಮಭವಜ್ಜನಃ ಕ್ಷುಬ್ಧಃ ಸಮಂತತಃ ।
ಕುಂತಾಘಾತೇನ ಕೇನಾಸೌ ಮಕರಸ್ತು ನಿಪಾತಿತಃ ॥ ೧೧೫ ॥
ಝುಷವಕ್ತ್ರಸ್ಥಿತಾ ಚಾಹಂ ಮೃತಾ ಕೃಷ್ಟಾ ಜನೈರ್ಬಹಿಃ ।
ಅಗ್ನಿಂ ದತ್ವಾ ಜಲೇ ಕ್ಷಿಪ್ತ್ವಾ ಭಸ್ಮ ಲೋಕಾ ಗೃಹಾನ್ಗತಾಃ ॥ ೧೧೬ ॥
ಸ್ತ್ರೀವಧಾಲ್ಲುಬ್ಧಕೋ ಜಾತೋ ಝುಷಸ್ತೀರ್ಥಪ್ರಭಾವತಃ ।
ಮಾನುಷೀಂ ಯೋನಿಮಾಪನ್ನಸ್ತಸ್ಮಿನ್ನೇವ ಮಹಾವನೇ ॥ ೧೧೭ ॥
ಅಗ್ನೇರ್ಜಲಾಚ್ಚ ಸರ್ಪಾಚ್ಚ ಗಜಾತ್ಸಿಂಹಾದ್ವೃಷಾದಪಿ ।
ಝುಷಾದ್ವಿಸ್ಫೋಟಕಾನ್ಮೃತ್ಯುರ್ಯೇಷಾಂ ತೇ ನರಕಂ ಗತಾಃ ॥ ೧೧೮ ॥
ಆತ್ಮಹಾ ಭ್ರೂಣಹಾ ಸ್ತ್ರೀಹಾ ಬ್ರಹ್ಮಘ್ನಃ ಕೂಟಸಾಕ್ಷ್ಯದಃ ।
ಕನ್ಯಾವಿಕ್ರಯಕರ್ತಾ ಚ ಮಿಥ್ಯಾವ್ರತಧರಸ್ತು ಯಃ ॥ ೧೧೯ ॥
ವಿಕ್ರೀಣಾತಿ ಕ್ರತುಂ ಯಸ್ತು ಮದ್ಯಪಃ ಸ್ಯಾದ್ದ್ವಿಜಸ್ತು ಯಃ ।
ರಾಜದ್ರೋಹೀ ಸ್ವರ್ಣಚೌರೋ ಬ್ರಹ್ಮವೃತ್ತಿವಿಲೋಪಕಃ ॥ ೧೨೦ ॥
ಗೋಘ್ನಸು ನಿಕ್ಷೇಪಹರೋ ಗ್ರಾಮಸೀಮಾಹರಸ್ತು ಯಃ ।
ಸರ್ವೇ ತೇ ನರಕಂ ಯಾಂತಿ ಯಾ ಚ ಸ್ತ್ರೀ ಪತಿವಂಚಕಾ ॥ ೧೨೧ ॥

---

೧೧೫. ಆಗ ಎಲ್ಲೆಡೆಯಲ್ಲಿಯೂ ಸಂಭ್ರಮಗೊಂಡ ಜನರ ಹಾಹಾಕಾರವುಂಟಾಯಿತು. ಯಾವನೋ ಒಬ್ಬನು ಕುಂತಾಯುಧದಿಂದ ಮೊಸಳೆಯನ್ನು ಕೊಂದನು.

೧೧೬. ಜನರು ಮೊಸಳೆಯ ಬಾಯಿಯಲ್ಲಿ ಮೃತಳಾದ ನನ್ನನ್ನು ಹೊರಗೆ ಎಳೆದು ಬೆಂಕಿಯಲ್ಲಿ ಸುಟ್ಟು ಬೂದಿಯನ್ನು ನೀರಿನಲ್ಲೆಸೆದು ಮನೆಗೆ ಹೋದನು.

೧೧೭. ಆ ಮೊಸಳೆಯು ಅದೇ ಕಾಡಿನಲ್ಲಿ ಸ್ತ್ರೀವಧ ದೋಷದಿಂದಲೂ, ತೀರ್ಥ ಮಾಹಾತ್ಮ್ಯೆಯಿಂದಲೂ ಬೇಡನಾಗಿ ಹುಟ್ಟಿತು.

೧೧೮. ಅಗ್ನಿ, ನೀರು, ಸರ್ಪ, ಆನೆ, ಸಿಂಹ, ಎತ್ತು, ಮೊಸಳೆ, ಬೊಬ್ಬೆ ದವುಗಳಿಂದ ಮೃತರಾದವರು ನರಕವಾಸಿಗಳಾಗುವರು.

೧೧೯–೧೨೧. ಆತ್ಮಹತ್ಯೆ, ಶಿಶುಹತ್ಯೆ, ಸ್ತ್ರೀಹತ್ಯೆ, ಬ್ರಹ್ಮಹತ್ಯೆಗಳನ್ನು ಮಾಡಿದವನೂ, ಸುಳ್ಳು ಸಾಕ್ಷಿ ಹೇಳಿದವನೂ, ಕನ್ಯಾವಿಕ್ರಯ ಮಾಡಿದವನೂ, ಸುಳ್ಳಾಗಿ ವ್ರತವನ್ನಾಚರಿಸುವವನೂ, ಯಜ್ಞ ವಿಕ್ರಯಮಾಡುವವನೂ, ಹೆಂಡವನ್ನು ಕುಡಿಯುವ ಬ್ರಾಹ್ಮಣನೂ, ರಾಜದ್ರೋಹಿಯೂ, ಸ್ವರ್ಣವನ್ನು ಕದಿಯುವವನೂ, ಬ್ರಾಹ್ಮಣ ವೃತ್ತಿಯನ್ನು ಹಾಳುಮಾಡುವವನೂ, ಗೋಹತ್ಯೆ ಮಾಡಿದವನೂ, ನಿಧಿಯನ್ನು ಅಪಹರಿಸಿದವನೂ, ಗ್ರಾಮದ ಎಲ್ಲೆಯನ್ನು ಕದ್ದವನೂ, ಪತಿಯನ್ನು ವಂಚಿಸಿದ ಹೆಂಗಸೂ ನರಕವನ್ನು ಹೊಂದುವರು.

ಝುಷಮೃತ್ಯುಪ್ರಭಾವೇನ ಜಾತಾ ಕ್ರೌಂಚೀ ವನೇ ನೃಪ ।
ಗೋದಾವರೀವನೇ ವ್ಯಾಘ್ರೋ ಭ್ರಮತೇ ಮೃಗಮಾರ್ಗಕಃ ॥ ೧೨೨ ॥
ವನೇ ಕ್ರೌಂಚಃ ಸಕಾಮೋ ಮಾಂ ಮುದಾ ಕಾಮಯಿತುಮುದ್ಯತಃ ।
ದೃಷ್ಟ್ವಾಹಂ ಭ್ರಮತಾ ತೇನ ವ್ಯಾಧೇನಾಕೃಷ್ಯ ಕಾರ್ಮುಕಂ ॥ ೧೨೩ ॥
ಹತಃ ಕ್ರೌಂಚೋ ಮೃತೋ ರಾಜನ್ನಷ್ಟಾ ಸ್ಥಾನಾದಹಂ ತತಃ ।
ಗೋದಾವರೀವನೇ ತಸ್ಮಿನ್ನೇವಂ ರೂಪಂ ದದರ್ಶ ತಂ ॥ ೧೨೪ ॥
ಋಷಿರ್ವ್ಯಾಧಂ ಶಶಾಪಾಥ ದೃಷ್ಟ್ವಾ ಕರ್ಮ ವಿಗರ್ಹಿತಂ ।
ಕಾಮಧರ್ಮಮಕುರ್ವಾಣಂ ಪ್ರಿಯಾಸಂಭಾಷತತ್ಪರಂ ।
ಕ್ರೌಂಚಂ ತ್ವಮವಧೀರ್ಯಸ್ಮಾತ್ತಸ್ಮಾತ್ಸಿಂಹೋ ಭವಿಷ್ಯತಿ ॥ ೧೨೫ ॥
ಋಷಿಸ್ತೇನ ವಿನೀತೇನ ಸ್ಥಿತ್ವಾ ಸಂತೋಷಿತೋ ನೃಪ ।
ಋಷಿರ್ವದತಿ ತಸ್ಯಾಗ್ರೇ ನ ಮೇ ಮಿಥ್ಯಾ ವಚೋ ಭವೇತ್ ॥ ೧೨೬ ॥
ಸಿಂಹಸ್ಥಸ್ಯ ಪ್ರಸಾದಂ ತೇ ಕರಿಷ್ಯೇ ಮುಕ್ತಿಹೇತವೇ ।
ಸುರಾಷ್ಟ್ರದೇಶೇ ಭವಿತಾ ಸಿಂಹೋ ರೈವತಕೇ ಗಿರೌ ॥ ೧೨೭ ॥
ವಸ್ತ್ರಾಪಥೇ ಮಹಾಕ್ಷೇತ್ರೇ ಮುಕ್ತಿಸ್ತೇ ವಿಹಿತಾ ಧ್ರುವಾ ।
ಇತ್ಯುಕ್ತ್ವಾ ಸ ಋಷಿರ್ದೇವ ಗತೋ ಭೀಮೇಶ್ವರಂ ಪ್ರತಿ ।
ಮುರ್ವಚಃಶ್ರವಣಾದ್ವ್ಯಾಧಃ ಕ್ರಮಾತ್ಪಂಚತ್ವಮಾಯಯೌ ॥ ೧೨೮ ॥

---

೧೨೨. ದೊರೆಯೆ ! ನಾನು ಮೊಸಳೆಯಿಂದ ಸತ್ತ ಕಾರಣ ಕಾಡಿನಲ್ಲಿ ಹೆಣ್ಣು ಕ್ರೌಂಚ ಪಕ್ಷಿಯಾಗಿ ಹುಟ್ಟಿದೆನು. ನೀನು ಬೇಡನಾಗಿ ಗೋದಾವರೀ ವನದಲ್ಲಿ ಮೃಗಗಳ ಮಾರ್ಗವನ್ನು ನೋಡುತ್ತ ಸಂಚರಿಸಿದೆ.

೧೨೩-೧೨೫. ಕಾಡಿನಲ್ಲಿ ಒಂದು ಗಂಡು ಕ್ರೌಂಚಪಕ್ಷಿಯು ಕಾಮ ಪೀಡಿತವಾಗಿ ಸಂತೋಷದಿಂದ ನನ್ನನ್ನು ಕಾಮಿಸಲು ಉದ್ಯುಕ್ತವಾಗಲು ಅಲ್ಲಿ ಸಂಚರಿಸುತ್ತಿದ್ದ ವ್ಯಾಧನಾದ ನೀನು ಬಿಲ್ಲನ್ನು ಎಳೆದು ಅದನ್ನು ಕೊಂದೆ. ನಾನು ಆ ಸ್ಥಳದಿಂದ ಅದೃಶ್ಯಳಾದೆನು. ಆ ವನದಲ್ಲಿದ್ದ ಓರ್ವ ಮುನಿಯು ನಿಂದಿತವಾದ ಈ ನಿನ್ನ ಕೆಲಸವನ್ನು ಕಂಡು “ ಕಾಮ ಧರ್ಮವನ್ನಾಚರಿಸದೆ ಪ್ರಿಯೆಯೊಡನೆ ಆಡುತ್ತಿರುವ ಕ್ರೌಂಚ ಪಕ್ಷಿಯನ್ನು ನೀನು ಕೊಂದುದರಿಂದ ಸಿಂಹನಾಗುವೆ ” ಯೆಂದು ನಿನ್ನನ್ನು ಶಪಿಸಿದನು.

೧೨೬-೧೨೮. ಆಗ ನೀನು ಆ ಮುನಿಯನ್ನು ವಿನಯದಿಂದ ಸಂತೋಷಗೊಳಿಸಲು ಅವನು, “ನನ್ನ ಮಾತು ಸುಳ್ಳಾಗುವುದಿಲ್ಲ. ನೀನು ಸುರಾಷ್ಟ್ರ ದೇಶದಲ್ಲಿರುವ ರೈವತಕ ಪರ್ವತದಲ್ಲಿ ಸಿಂಹವಾಗಿ ಹುಟ್ಟುವೆ. ಆಗ ನಾನು ನಿನಗೆ ಮೋಕ್ಷವಾಗುವಂತೆ ಅನುಗ್ರಹ ಮಾಡುವೆನು. ನಿನಗೆ ವಸ್ತ್ರಾಪಥ ಕ್ಷೇತ್ರದಲ್ಲಿ ನಿಶ್ಚಯವಾಗಿಯೂ ಮೋಕ್ಷವಾಗುವುದು”. ಎಂದು ಭೀಮೇಶ್ವರಕ್ಕೆ ಹೋದನು. ಬೇಡನು ಶಾಪದ ಮಾತನ್ನು ಕೇಳಿದ್ದರಿಂದ ಕಾಲಕ್ರಮದಿಂದ ಮೃತನಾದನು.

ಕ್ರೌಂಚೀ ಕ್ರೌಂಚವಿಯೋಗೇನ ಗತಾ ಸಾ ಚ ವನಾಂತರೇ ।
ಮೃತಾ ದೈವವಶಾಜ್ಜಾತಾ ಮೃಗೀ ರೈವತಕೇ ಗಿರೌ ॥ ೧೨೯ ॥
ಮೃಗಯೂಥಗತಾ ನಿತ್ಯಂ ಮೋದತೇ ಮುದವಿಹ್ವಲಾ ।
ವ್ಯಾಧಃ ಸಿಂಹಃ ಸಮುಭವದ್ಗಿರೇಸ್ತಸ್ಯ ಮಹಾವನೇ ॥ ೧೩೦ ॥
ಕಾಮಾರ್ತಾ ಭ್ರಮತಾ ದೃಷ್ಟಾ ಮೃಗೀ ಸಿಂಹೇನ ಯತ್ನತಃ ।
ತತ್ರ ಸಂಭ್ರಮತೇ ನಿತ್ಯಂ ಸಿಂಹಶ್ಚಾಪಿ ಮೃಗೀ ವನೇ ॥ ೧೩೧ ॥
ಸಿಂಹೋಽಪಿ ದೈವಯೋಗೇನ ಮಮೇಯಮಿತಿ ಮನ್ಯತೇ ।
ಪರಂ ಹಿಂಸ್ರಸ್ವಭಾವೇನ ತಾಮಾಘಾತುಂ ಪ್ರಚಕ್ರಮೇ ॥ ೧೩೨ ॥
ಚಲತ್ವಂ ಮೃಗಜಾತೀನಾಂ ವಿಹಿತಂ ವೇಧಸಾ ಸ್ವಯಂ ।
ಪುನರ್ಗತಾ ಮೃಗೀಯೂಥಂ ಕ್ರೀಡಿತೇ ಚಾರುಲೋಚನಾ ॥ ೧೩೩ ॥
ಭವಸ್ಯ ಪಶ್ಚಿಮೇ ಭಾಗೇ ತತ್ರ ರೈವತಕೇ ಗಿರೌ ।
ಅನುಯಾತಃ ಶನೈಃ ಸೋಽಥ ಮೃಗೇಂದ್ರೋ ಮೃಗಯೂಥಪಃ ।
ಉತ್ಪಪಾತ ತತಃ ಸಿಂಹೋ ಮೃಗಸಂಘಸ್ಯ ಮೂರ್ಧನಿ ॥ ೧೩೪ ॥

---

೧೨೯. ಕ್ರೌಂಚಿಯಾದ ನಾನು ಕ್ರೌಂಚಪಕ್ಷಿಯ ವಿಯೋಗದಿಂದ ವನಾಂತರಕ್ಕೆ ಹೋಗಿ ಮೃತಳಾಗಿ ರೈವತಕ ಪರ್ವತದಲ್ಲಿ ಮೃಗಿಯಾಗಿ ಜನಿಸಿದೆನು.

೧೩೦. ಮೃಗಿಯಾದ ನಾನು ಮೃಗಗಳ ಹಿಂಡನ್ನು ಸೇರಿ ಮುದದಿಂದ ವಿನೋದ ಪಟ್ಟೆನು. ಬೇಡನಾಗಿದ್ದ ನೀನೂ ಆ ಶೈಲದ ವನದಲ್ಲಿ ಸಿಂಹವಾದೆ.

೧೩೧. ಆ ಮೃಗೀವನದಲ್ಲಿ ಯಾವಾಗಲೂ ಸಂಚರಿಸುತ್ತಿದ್ದ ಸಿಂಹವಾದ ನೀನು ಕಾಮಪೀಡಿತಳಾದ ನನ್ನನ್ನು ನೋಡಿದೆ.

೧೩೨. ಸಿಂಹವಾದ ನೀನೂ ನನ್ನನ್ನು ತನ್ನವಳೆಂದು ತಿಳಿದು ಹಿಡಿಯುವುದಕ್ಕೆ ಆರಂಭಿಸಿದೆ.

೧೩೩. ಬ್ರಹ್ಮನು ಮೃಗಜಾತಿಗಳಿಗೆ ಚಾಂಚಲ್ಯವನ್ನು ಸೃಷ್ಟಿಸಿರುವುದರಿಂದ ನಾನು ಹೆಣ್ಣು ಮೃಗಗಳ ಹಿಂಡನ್ನು ಸೇರಿ ವಿನೋದಪಡುತ್ತಿದ್ದನು.

೧೩೪. ಭವಕ್ಷೇತ್ರದ ಪಶ್ಚಿಮ ಭಾಗದಲ್ಲಿರುವ ರೈವತಕ ಗಿರಿಯಲ್ಲಿ ಆ ಸಿಂಹವು ಮೃಗಗಳ ಹಿಂಡನ್ನು ಹಿಂಬಾಲಿಸಿ ಆ ಹಿಂಡಿನ ಮೇಲೆ ಹಾರಿತು.

ಸಿಂಹಸ್ಯ ಸ ಮೃಗೈಃ ಕಾರ್ಯಂ ಹರಿಣೀಂ ಪ್ರತಿ ಪಶ್ಯತಃ ।
ಯತ್ರ ಸಾ ಹರಿಣೀ ಯಾತಿ ಯಯೌ ಸಿಂಹಸ್ತಥೈವ ತಾಂ ॥ ೧೩೫ ॥
ಯದಾ ವೇಗಂ ಮೃಗೀ ಚಕ್ರೇ ಸಿಂಹಃ ಕ್ರುದ್ಧಸ್ತದಾ ವನೇ ।
ಸಿಂಹೋಽಪಿ ವೇಗವಾಞ್ಜಾತೋ ಮೃಗೀವೇಗಾಧಿಕೋಽಭವತ್ ॥ ೧೩೬ ॥
ಯದಾ ಸಿಂಹೇನ ಸಂಕ್ರಾಂತಾ ದದೌ ಝಂಪಾಂ ಮೃಗೀ ತು ಸಾ ।
ಭವಸ್ಯಾಗ್ರೇ ನದೀತೋಯೇ ಪತಿತಾ ಜಲಮೂರ್ಧನಿ ॥ ೧೩೭ ॥
ಲಂಬತೇ ತು ಶರೀರಂ ಮೇ ವೇಣೌ ಪ್ರೋತಂ ಶಿರೋ ಮಮ ।
ಸಿಂಹಃ ಸಹೈವ ಪತಿತೋ ಮೃತಃ ಪಯಸಿ ಮಧ್ಯತಃ ॥ ೧೩೮ ॥
ಸ್ವರ್ಣರೇಖಾಜಲೇ ಚೈವ ವಿಶೀರ್ಣಂ ಮಮ ತದ್ವಪುಃ ।
ನ ತು ವಕ್ತ್ರಂ ನಿಪತಿತಂ ತ್ವಕ್ಸಾರಶಿರಸಿ ಸ್ಥಿತಂ ॥ ೧೩೯ ॥
ಏತಚ್ಚರಿತ್ರಂ ಯತ್ಸರ್ವಂ ದೃಷ್ಟಂ ಸಾರಸ್ವತೇನ ವೈ ।
ತತ್ತೀರ್ಥಸ್ಯ ಪ್ರಭಾವೇನ ಸಿಂಹಸ್ತ್ವಂ ಸಮುಜಾಯಥಾಃ ॥ ೧೪೦ ॥
ಇದಂ ಹಿ ಸಪ್ತಮಂ ಜನ್ಮ ಸರ್ವಪಾಪಕ್ಷಯೋದಯಂ ।
ಕಾನ್ಯಕುಬ್ಜೇ ಮಹಾದೇಶೇ ರಾಜಾ ಭೋಜೇತಿ ವಿಶ್ರುತಃ ॥ ೧೪೧ ॥

---

೧೩೫. ಹೆಣ್ಣು ಜಿಂಕೆಯನ್ನು ನೋಡುತ್ತಿದ್ದ ಸಿಂಹಕ್ಕೆ ಮೃಗಗಳಿಂದೇನು ಪ್ರಯೋಜನ ? ಆದ್ದರಿಂದ ಆ ಸಿಂಹವು ಮೃಗಿಯು ಹೋದೆಡೆಗೆ ಹೋಗುತ್ತಿದ್ದಿತು.

೧೩೬. ಮೃಗಿಯು ವೇಗಗೊಳ್ಳಲು ಸಿಂಹವು ಕುಪಿತವಾಗಿ ಅದಕ್ಕಿಂತ ವೇಗವುಳ್ಳದ್ದಾಯಿತು.

೧೩೭. ಹೀಗೆ ಸಿಂಹವು ಮೃಗಿಯನ್ನು ಹಿಡಿಯಲು ಅದು ಮೇಲಕ್ಕೆ ಹಾರಿ ಭವಕ್ಷೇತ್ರದ ಮೇಲಿರುವ ನದಿಯ ನೀರಿನಲ್ಲಿ ಬಿದ್ದಿತು.

೧೩೮ ಮೃಗಿಯಾದ ನನ್ನ ತಲೆಯು ಬಿದಿರಿನಲ್ಲಿ ಸಿಕ್ಕಿಕೊಂಡದ್ದರಿಂದ ದೇಹವು ಜೋಲಾಡುತ್ತಿದ್ದಿತು. ಸಿಂಹವೂ ನನ್ನೊಡನೆ ನೀರಿನಲ್ಲಿ ಬಿದ್ದು ಮೃತವಾಯಿತು.

೧೩೯. ಸ್ವಾಮಿ ಆ ನನ್ನ ಶರೀರವು ಸ್ವರ್ಣರೇಖೆಯ ನೀರಿನಲ್ಲಿ ಶಿಥಿಲವಾಯಿತು. ಬಿದಿರಿನಲ್ಲಿ ಸಿಕ್ಕಿಕೊಂಡ ತಲೆಯು ಕೆಳಕ್ಕೆ ಬೀಳಲಿಲ್ಲ.

೧೪೦. ಈ ಸಕಲ ಚರಿತ್ರೆಯನ್ನು ಸಾರಸ್ವತನು ನೋಡಿರುವನು. ಆ ತೀರ್ಥದ ಮಾಹಾತ್ಮ್ಯದಿಂದ ಸಿಂಹವಾಗಿದ್ದ ನೀನು ರಾಜನಾದೆ.

೧೪೧. ಕಾನ್ಯಕುಬ್ಜ ಮಹಾ ದೇಶದಲ್ಲಿ ಭೋಜನೆಂದು ವಿಖ್ಯಾತನಾದ ನಿನ್ನ ಈ ಏಳನೆಯ ಜನ್ಮವು ಸಕಲ ಪಾಪನಾಶದಿಂದುಂಟಾದುದು.

**ಅಹಂ ಹಿ ಹರಿಣೀಗರ್ಭೇ ಜಾತಾ ಮಾನುಷರೂಪಿಣೀ ।**
**ಜಾತಂ ವಕ್ತ್ರಂ ಮೃಗೀಣಾಂ ಮೇ ಯಸ್ಮಾನ್ನ ಪತಿತಂ ಜಲೇ ॥ ೧೪೨ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ ಭವಮಾಹಾತ್ಮ್ಯೇಮೃಗಾನನಾಭೋಜವೃತ್ತಾಂತವರ್ಣನಂ ನಾಮ ಷಷ್ಠೋಽಧ್ಯಾಯಃ

---

೧೪೨. ನಾನು ಮೃಗಸ್ತ್ರೀಯ ಗರ್ಭದಲ್ಲಿ ಮನುಷ್ಯಸ್ತ್ರೀಯಾಗಿ ಜನಿಸಿದೆನು. ನನ್ನ ತಲೆಯು ನೀರಿನಲ್ಲಿ ಬೀಳದಿದ್ದುದರಿಂದ ಮುಖವು ಮೃಗದಂತಾಯಿತು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ ಭವಮಾಹಾತ್ಮ್ಯ—ಮೃಗಾನನಾಭೋಜವೃತ್ತಾಂತವರ್ಣನವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಸಪ್ತಮೋಽಧ್ಯಾಯಃ

### ಸ್ವರ್ಣರೇಖಾಮಾಹಾತ್ಮ್ಯವರ್ಣನಂ

ರಾಜೋವಾಚ :—
ಕಥಂ ತ್ವಂ ಹರಿಣೀರೂಪೇ ಜಾತಾ ಮಾನುಷರೂಪಿಣೀ ।
ಕೇನ ಸಂವರ್ಧಿತಾ ಬಾಲ್ಯೇ ಕಥಂ ತೇ ರೂಪಮೀದೃಶಂ ॥ ೧ ॥
ಮೃಗ್ಯುವಾಚ :—
ಶೃಣು ದೇವ ಪ್ರವಕ್ಷ್ಯಾಮಿ ಯದ್ವೃತ್ತಂ ಕನ್ಯಕೇ ವನೇ ।
ಋಷಿರುದ್ದಾಲಕೋನಾಮ ಗಂಗಾಕೂಲೇ ಮಹಾತಪಾಃ ॥ ೨ ॥
ಪ್ರಭಾತೇ ಮೂತ್ರಮುತ್ಸ್ರಷ್ಟುಂ ಗತೋ ದೇವ ವನಾಂತರೇ ।
ಮೂತ್ರಾಂತೇ ಪತಿತೋ ಭೂಮೌ ವೀರ್ಯಬಿಂದುರ್ದ್ವಿಜನ್ಮನಃ ॥ ೩ ॥
ಯಾವತ್ಸ ಚಲಿತೋ ವಿಪ್ರಃ ಶೌಚಂ ಕೃತ್ವಾ ಪ್ರಯತ್ನತಃ ।
ತಾವನ್ಮೃಗೀ ಸಮಾಯಾತಾ ದೃಷ್ಟ್ವಾ ಪುಷ್ಪವನಾಂತರಾತ್ ॥ ೪ ॥

---

### ಕನ್ನಡದ ಅನುವಾದ

### ಸ್ವರ್ಣರೇಖಾ ಮಾಹಾತ್ಮ್ಯವರ್ಣನ

೧. ರಾಜನು ಹೇಳುತ್ತಾನೆ :—ಮೃಗಿಯೆ ! ಜಿಂಕೆಯಾಗಿದ್ದ ನೀನು ಮನುಷ್ಯ ರೂಪಳಾಗಿರುವುದು ಹೇಗೆ ? ಬಾಲ್ಯದಲ್ಲಿ ನಿನ್ನನ್ನು ಯಾರು ಬೆಳೆಸಿದರು ?

೨-೩. ಮೃಗಿಯು ಹೇಳುತ್ತಾಳೆ :—ಸ್ವಾಮಿ ! ಕಾನ್ಯಕುಬ್ಜ ವನದಲ್ಲಿ ನಡೆದ ವೃತ್ತಾಂತವನ್ನು ಹೇಳುವೆನು ಕೇಳು. ಗಂಗಾ ದಡದಲ್ಲಿ ವಾಸವಾಗಿದ್ದ ಅತ್ಯಂತ ತಪಸ್ವಿಯಾದ ಉದ್ದಾಲಕನೆಂಬ ಮುನಿಯು ಬೆಳಗ್ಗೆ ಮೂತ್ರೋತ್ಸರ್ಜನವನ್ನು ಮಾಡಲು ಕಾಡಿನ ಮಧ್ಯಕ್ಕೆ ಹೋದನು. ಅಲ್ಲಿ ಮೂತ್ರೋತ್ಸರ್ಜನದ ಕೊನೆಯಲ್ಲಿ ಅವನ ವೀರ್ಯದ ಕಣವು ನೆಲದಮೇಲೆ ಬಿದ್ದಿತು.

೪-೫. ಆ ಬ್ರಾಹ್ಮಣನು ಶೌಚವನ್ನು ಮಾಡಿಕೊಂಡು ಹೊರಟ ಕೂಡಲೆ ಪುಷ್ಪ ವನದಿಂದ ಒಂದು ಹೆಣ್ಣು ಜಿಂಕೆಯು ಅಲ್ಲಿಗೆ ಬಂದಿತು. ಅದು ಆ ವೀರ್ಯ ಬಿಂದುವನ್ನು

ಚಾಪಲ್ಯಾದ್ಭಕ್ಷಿತಂ ವೀರ್ಯಂ ದೃಷ್ಟಂ ಬ್ರಹ್ಮರ್ಷಿಣಾ ಸ್ವಯಂ ।
ಯಸ್ಮಾದಶ್ನಾತಿ ಮೇ ವೀರ್ಯಂ ತಸ್ಮಾದ್ಗರ್ಭೋ ಭವಿಷ್ಯತಿ ॥ ೫ ॥
ಮಮ ರೂಪಾ ತವವಕ್ತ್ರಾ ನಾರೀ ಗರ್ಭೇ ಭವಿಷ್ಯತಿ ।
ವರ್ಧಯಿಷ್ಯಂತಿ ದೇವ್ಯಸ್ತಾಂ ರಸ್ಯೈರ್ದಿವ್ಯೈಃ ಸುತಾಂ ತವ ॥ ೬ ॥
ಕೇನಾಪಿ ದೈವಯೋಗೇನ ಜ್ಞಾನಂ ತಸ್ಯಾ ಭವಿಷ್ಯತಿ ।
ಏವಮುದ್ದಾಲಕಾದೇವ ಸಂಜಾತಾಹಂ ಮೃಗಾನನಾ ।
ಪ್ರವಿಶ್ಯಾಗ್ನೌ ಮೃತಾ ಪೂರ್ವಂ ತ್ವಯಾ ಸಾರ್ಧಂ ನರಾಧಿಪ ॥ ೭ ॥
ತಸ್ಮಾಜ್ಜಾತಂ ಸತೀತ್ವಂ ಮೇ ಸಪ್ತಜನ್ಮನಿ ವೈ ಪ್ರಭೋ ।
ಯತ್ತ್ವಯಾ ಕುರ್ವತಾ ರಾಜ್ಯಂ ಪಾಪಂ ವೈ ಸಮುಪಾರ್ಜಿತಂ ॥ ೮ ॥
ಕ್ಷತ್ರಧರ್ಮಂ ಪರಿತ್ಯಜ್ಯ ಪಲಾಯನಪರೋ ಮೃತಃ ।
ತದೇನೋ ಹಿ ಮಯಾ ದಗ್ಧಂ ಚಿತಾಗ್ನೌ ನೃಪಸತ್ತಮ ॥ ೯ ॥
ಪತಿಂ ಗೃಹೀತ್ವಾ ಯಾ ನಾರೀ ಮೃತಮಗ್ನೌ ವಿಶೇದ್ಯದಿ ।
ಸಾ ತಾರಯತಿ ಭರ್ತಾರಮಾತ್ಮಾನಂ ಚ ಕುಲದ್ವಯಂ ॥ ೧೦ ॥
ಗೋಗ್ರಹೇ ದೇಶಭಂಗೇ ಚ ಸಂಗ್ರಾಮೇ ಸಂಮುಖೇ ಮೃತಃ ।
ಸ ಸೂರ್ಯಮಂಡಲಂ ಭಿತ್ವಾ ಬ್ರಹ್ಮಲೋಕೇ ಮಹೀಯತೇ ॥ ೧೧ ॥

---

ನೋಡಿ ಚಾಪಲ್ಯದಿಂದ ಭಕ್ಷಿಸಲು ಬ್ರಹ್ಮರ್ಷಿಯು ಅದನ್ನು ಕಂಡು ಹೀಗೆಂದನು "ನೀನು ನನ್ನ ವೀರ್ಯವನ್ನು ಭಕ್ಷಿಸಿದ ಕಾರಣ ಗರ್ಭಿಣಿಯಾಗುವೆ.

೬. ನಿನ್ನ ಗರ್ಭದಲ್ಲಿ ನನ್ನ ರೂಪವುಳ್ಳವಳೂ ನಿನ್ನ ಮುಖದಂತೆ ಮುಖವುಳ್ಳವಳೂ ಆದ ನಾರಿಯೊಬ್ಬಳು ಜನಿಸುವಳು. ಆ ನಿನ್ನ ಮಗಳನ್ನು ದೇವತೆಗಳು ದಿವ್ಯ ರಸದಿಂದ ಬೆಳೆಸುವರು.

೭–೯. ಯಾವುದೊ ಒಂದು ದೈವ ಯೋಗದಿಂದ ಆ ನಿನ್ನ ಮಗಳಿಗೆ ಜ್ಞಾನವುಂಟಾಗುವುದು". ನಾನು ಹೀಗೆ ಉದ್ದಾಲಕನಿಂದ ಹುಟ್ಟಿರುವೆನು ನಾನು ಹಿಂದೆ ನಿನ್ನೊಡನೆ ಅಗ್ನಿಪ್ರವೇಶ ಮಾಡಿ ಮೃತಳಾದ ಕಾರಣ ಏಳು ಜನ್ಮಗಳಲ್ಲಿಯೂ ಪತಿವ್ರತೆಯಾದೆನು. ರಾಜ್ಯಭಾರ ಮಾಡುತ್ತಿದ್ದ ನೀನು ಕ್ಷತ್ರಿಯ ಧರ್ಮವನ್ನು ತ್ಯಜಿಸಿ ಪಾಪವನ್ನು ಗಳಿಸಿ ಓಡಲುದ್ಯುಕ್ತನಾಗಿ ಮೃತನಾದುದರಿಂದುಂಟಾದ ಪಾಪವನ್ನು ನಾನು ಚಿತಾಗ್ನಿಯನ್ನು ಪ್ರವೇಶಿಸಿ ಪರಿಹರಿಸಿದೆನು.

೧೦. ಮೃತನಾದ ಪತಿಯೊಡನೆ ಪತ್ನಿಯು ಅಗ್ನಿಪ್ರವೇಶ ಮಾಡಿದರೆ ಅವಳು ತನ್ನನ್ನೂ, ಪತಿಯನ್ನೂ, ಉಭಯ ಕುಲಗಳನ್ನೂ ಉದ್ಧರಿಸುವಳು.

೧೧. ಗೋಗ್ರಹಣ, ದೇಶನಾಶ, ಯುದ್ಧ ಇವುಗಳಲ್ಲಿ ಅಭಿಮುಖನಾಗಿ ಮೃತನಾದವನು ಸೂರ್ಯ ಮಂಡಲವನ್ನು ಭೇದಿಸಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

ಅನಾಶಕಂ ಯೋ ವಿದಧಾತಿ ಮರ್ತ್ಯೋ
ದಿನೇದಿನೇ ಯಜ್ಞಸಹಸ್ರಪುಣ್ಯಂ ।
ಸ ಯಾತಿ ಯಾನೇನ ಗಣಾನ್ವಿತೇನ
ವಿಧೂಯ ಪಾಪಾನಿ ಸುರೈಃ ಸ ಪೂಜ್ಯತೇ ॥ ೧೨ ॥
ಗಂಗಾಜಲೇ ಪ್ರಯಾಗೇ ವಾ ಕೇದಾರೇ ಪುಷ್ಕರೇ ಚ ಯೇ ।
ವಸ್ತ್ರಾಪಥೇ ಪ್ರಭಾಸೇ ಚ ಮೃತಾಸ್ತೇ ಸ್ವರ್ಗಗಾಮಿನಃ ॥ ೧೩ ॥
ದ್ವಾರಾವತ್ಯಾಂ ಕುರುಕ್ಷೇತ್ರೇ ಯೋಗಾಭ್ಯಾಸೇನ ಯೇ ಮೃತಾಃ ।
ಹರಿರಿತ್ಯಕ್ಷರಂ ಮೃತ್ಯೌ ಯೇಷಾಂ ತೇ ಸ್ವರ್ಗಗಾಮಿನಃ ॥ ೧೪ ॥
ಪೂಜಯಿತ್ವಾ ಹರಿಂ ಯೇ ತು ಭೂಮೌ ದರ್ಭತಿಲೈಃ ಸಹ ।
ತಿಲಾಂಶ್ಚ ಪಂಚಲೋಹಂ ಚ ದತ್ತ್ವಾ ಯೇ ತು ಪಯಸ್ವಿನೀಂ ॥ ೧೫ ॥
ಯೇ ಮೃತಾ ರಾಜಶಾರ್ದೂಲ ತೇ ನರಾಃ ಸ್ವರ್ಗಗಾಮಿನಃ ।
ಉತ್ಪಾದ್ಯ ಪುತ್ರಾನ್ಸಂಸ್ಥಾಪ್ಯ ಪಿತೃಪೈತಾಮಹೇ ಪದೇ ॥ ೧೬ ॥
ನಿರ್ಮಲಾ ನಿಷ್ಕಲಂಕಾ ಯೇ ತೇ ಮೃತಾಃ ಸ್ವರ್ಗಗಾಮಿನಃ ।
ವ್ರತೋಪವಾಸನಿರತಾಃ ಸತ್ಯಾಚಾರಪರಾಯಣಾಃ ।
ಅಹಿಂಸಾರತಾಃ ಶಾಂತಾಸ್ತೇ ನರಾಃ ಸ್ವರ್ಗಗಾಮಿನಃ ॥ ೧೭ ॥

---

೧೨. ಶಾಶ್ವತವಾದ ಸಾವಿರ ಯಜ್ಞಗಳ ಪುಣ್ಯವನ್ನು ಗಳಿಸಿದವನು ಪ್ರಮಥ ಗಣಗಳಿಂದ ಸಹಿತವಾದ ವಾಹನದಿಂದ ಸ್ವರ್ಗವನ್ನು ಸೇರಿ ದೇವತೆಗಳಿಂದ ಪೂಜಿಸಲ್ಪಡುವನು.

೧೩. ಗಂಗೆ, ಪ್ರಯಾಗ, ಕೇದಾರ, ಪುಷ್ಕರ, ವಸ್ತ್ರಾಪಥ, ಪ್ರಭಾಸಕ್ಷೇತ್ರಗಳಲ್ಲಿ ಮೃತರಾದವರು ಸ್ವರ್ಗವನ್ನು ಸೇರುವರು.

೧೪. ದ್ವಾರಾವತೀ, ಕುರುಕ್ಷೇತ್ರಗಳಲ್ಲಿ ಯೋಗಾಭ್ಯಾಸದಿಂದ ಹರಿಯೆಂಬ ಎರಡು ಅಕ್ಷರಗಳನ್ನು ಪಠಿಸುತ್ತ ಮೃತರಾದವರು ಸ್ವರ್ಗಕ್ಕೆ ತೆರಳುವರು.

೧೫–೧೭. ಭೂಮಿಯಲ್ಲಿ ದರ್ಭೆ ಎಳ್ಳುಗಳಿಂದ ಹರಿಯನ್ನು ಪೂಜಿಸಿ ಎಳ್ಳು ಪಂಚಲೋಹ, ಗೋವು ಇವುಗಳನ್ನು ದಾನಮಾಡಿ ಮೃತರಾದ ಮಾನವರು ಸ್ವರ್ಗಕ್ಕೆ ತೆರಳುವರು. ಪಿತೃ, ಪಿತಾಮಹರ ಸ್ಥಾನದಲ್ಲಿ ಪುತ್ರರನ್ನು ಇಟ್ಟು ನಿರ್ಮಲರೂ, ನಿಷ್ಕಳಂಕರೂ ಆಗಿ ಮೃತರಾದವರು ಸ್ವರ್ಗವನ್ನು ಸೇರುವರು. ವ್ರತ, ಉಪವಾಸಗಳಲ್ಲಿ ಆಸಕ್ತರೂ, ಸತ್ಯ, ಆಚಾರಗಳಲ್ಲಿ ನಿರತರೂ, ಅಹಿಂಸಾತತ್ವರೂ, ಶಾಂತರೂ ಆದ ಮಾನವರು ಸ್ವರ್ಗಕ್ಕೆ ತೆರಳುವರು.

ಸಾಪವಾದೋ ರಣಂ ತ್ಯಕ್ತ್ವಾ ಮೃತೋ ಯಸ್ಮಾನ್ನರಾಧಿಪ ।
ಸಪ್ತಯೋನಿಷು ತೇ ಜನ್ಮ ತಸ್ಮಾಜ್ಜಾತಂ ಮಯಾ ಸಹ ॥ ೧೮ ॥
ತ್ವಾ ವಿನಾ ಮೇ ಪತಿರ್ಮಾಭೂನ್ಮರಣೇ ಯಾಚಿತಂ ಮಯಾ ।
ತದಾಂತರಿಕ್ಷೇ ರಾಜೇಂದ್ರ ವಾಗುವಾಚಾಶರೀರಿಣೀ ।
ಆದೌ ಪಾಪಫಲಂ ಭುಂಕ್ತ್ವಾ ಪಶ್ಚಾತ್ಸ್ವರ್ಗಂ ಗಮಿಷ್ಯಸಿ ॥ ೧೯ ॥
ಯದಿ ವಸ್ತ್ರಾಪಥೇ ಗತ್ವಾ ಶಿರಃ ಕಶ್ಚಿದ್ವಿಮುಂಚತಿ ।
ಸ್ವರ್ಣರೇಖಾಜಲೇ ರಾಜನ್ಮಾನುಷಂ ಸ್ಯಾನ್ಮುಖಂ ಮಮ ॥ ೨೦ ॥
ಅಹಂ ಮಾನುಷವಕ್ತ್ರಾಽಸ್ಮಿ ಪಾಪಚ್ಛಾಯಾಽಽವೃತಂ ಮುಖಂ ।
ದೃಶ್ಯತೇ ಮೃಗವಕ್ತ್ರಾಭಂ ತಸ್ಮಾಚ್ಛೀಘ್ರಂ ವಿಮುಂಚಯ ॥ ೨೧ ॥
ಇತಿ ಶ್ರುತ್ವಾ ವಚೋ ರಾಜಾ ಸಾರಸ್ವತಮುದೈಕ್ಷತ ।
ಜನೋ ವಿಹಸ್ಯ ಸಾನಂದಂ ಸರ್ವಂ ಸತ್ಯಂ ಮೃಗೀವಚಃ ॥ ೨೨ ॥
ಇತ್ಯುಕ್ತ್ವಾಽಽಹ ದ್ವಿಜೇಂದ್ರಃ ಸ ಏವಂ ಕುರು ನೃಪೋತ್ತಮ ।
ಏವಂ ರಾಜ್ಞಾ ಸಮಾದಿಷ್ಟಃ ಪ್ರತೀಹಾರೋ ಯಯೌ ವನಂ ॥ ೨೩ ॥
ವಸ್ತ್ರಾಪಥೇ ಮಹಾತೀರ್ಥೇ ಭವಂ ದ್ರಷ್ಟುಂ ತ್ವರಾನ್ವಿತಃ ।
ತ್ವಕ್ಸಾರಜಾಲಿರ್ಮಹತೀ ಸ್ವರ್ಣರೇಖಾಜಲೋಪರಿ ॥ ೨೪ ॥

---

೧೮. ದೊರೆಯೆ ! ನೀನು ಯುದ್ಧವನ್ನು ಬಿಟ್ಟು ಅಪವಾದಗೊಂಡುದರಿಂದ ನಿನಗೆ ನನ್ನೊಡನೆ ಜನ್ಮವಾಯಿತು.

೧೯. ನಾನು ಮಡಿಯುವಾಗ ನೀನೆ ಪತಿಯಾಗಬೇಕೆಂದು ಬೇಡಿಕೊಂಡೆನು. ನೃಪತಿಯೆ ! ಆಗ ಆಕಾಶದಲ್ಲಿ ಮೊದಲು ನೀನು ಪಾಪ ಫಲವನ್ನು ಅನುಭವಿಸಿ ಅನಂತರ ಸ್ವರ್ಗಕ್ಕೆ ತೆರಳುವೆ ಎಂದ ಅಶರೀರವಾಣಿಯಾಯಿತು.

೨೦. ನೀನು ವಸ್ತ್ರಾಪಥ ಕ್ಷೇತ್ರಕ್ಕೆ ಹೋಗಿ ಸ್ವರ್ಣರೇಖಾ ಜಲದಲ್ಲಿ ತಲೆಯನ್ನು ಬಿಟ್ಟರೆ ನನ್ನ ಮುಖವು ಮನುಷ್ಯನಂತಾಗುವುದು.

೨೧. ನನ್ನ ಮುಖವು ಮನುಷ್ಯನ ಮುಖದಂತೆಯೇ ಆಗಿರುವುದು. ಆದರೆ ಅದು ಪಾಪದ ಛಾಯೆಯಿಂದ ಮುಚ್ಚಿರುವುದರಿಂದ ಮೃಗದಂತೆ ಕಾಣುವುದು. ಆದ್ದರಿಂದ ಶೀಘ್ರವಾಗಿ ನನ್ನನ್ನು ಅಲ್ಲಿ ಬಿಡು.

೨೨. ದೊರೆಯು ಮೃಗಿಯ ಈ ಮಾತನ್ನು ಕೇಳಿ ಸಾರಸ್ವತನನ್ನು ನೋಡಿದ ಜನರು ಆನಂದದಿಂದ ನಕ್ಕು ಜಿಂಕೆಯ ಮಾತೆಲ್ಲ ಸತ್ಯವೆಂದರು.

೨೩—೨೫. ಆ ದೊರೆಯನ್ನು ಕುರಿತು ಸಾರಸ್ವತನು ಮೃಗಿಯು ಹೇಳಿದಂತೆ ಮಾಡೆನಲು ದೊರೆಯ ಆಜ್ಞೆಯಂತೆ ಬಾಗಿಲು ಕಾಯುವವನು ವಸ್ತ್ರಾಪಥ ಮಹಾತೀರ್ಥದಲ್ಲಿರುವ ಭವನನ್ನು ನೋಡಲು ತ್ವರೆಯಿಂದ ಕಾಡಿಗೆ ಹೋದನು. ಆಗ ಸಾರ

ವರ್ತತೇ ತಚ್ಛಿರೋ ಯತ್ರ ವಂಶಪ್ರೋತಂ ಮಹಾವನೇ ।
ಸಾರಸ್ವತಸ್ಯ ಶಿಷ್ಯೇಣ ಕುಶಲೇನ ನಿವೇದಿತಂ ॥ ೨೫ ॥
ತೀರ್ಥಂ ವಸ್ತ್ರಾಪಥಂ ಗತ್ವಾ ಭವಸ್ಯಾಗ್ರೇ ಮಹಾನದೀ ।
ಜಾಲೇ ತತ್ರ ಶಿರೋದೃಷ್ಟ್ವಾ ತಚ್ಚ ತೋಯೇ ವಿಮೋಚಿತಂ ॥ ೨೬ ॥
ಸ್ನಾತ್ವಾ ಸಂಪೂಜ್ಯ ತೀರ್ಥೇಶಂ ಪ್ರತೀಹಾರಃ ಸಮಭ್ಯಗಾತ್ ।
ಶಿಷ್ಯೇಣ ಸಹಿತೋ ವೇಗಾದ್ರಥೇನಾದಿತ್ಯವರ್ಚಸಾ ॥ ೨೭ ॥
ಯದಾಗತಃ ಪ್ರತೀಹಾರಃ ತದಾ ಸಾರಸ್ವತೇನ ಸಾ ।
ವೃತಾ ಚಾಂದ್ರಾಯಣೇನೈವ ಮಾಸಮೇಕಂ ನಿರಂತರಂ ॥ ೨೮ ॥
ಸಂಪೂರ್ಣೇ ತು ವ್ರತೇ ತಸ್ಯಾಃ ದಿವ್ಯಂ ವಕ್ತ್ರಂ ಸುಲೋಚನಂ ।
ಸುಶೋಭನಂ ದೀರ್ಘಕೇಶಂ ದೀರ್ಘಕರ್ಣಂ ಶುಭದ್ವಿಜಂ ॥ ೨೯ ॥
ಕಂಬುಗ್ರೀವಂ ಪದ್ಮಗಂಧಂ ಸರ್ವಲಕ್ಷಣಸಂಯುತಂ ।
ವ್ರತಾಂತೇ ಮೂರ್ಛಿತಾ ಬಾಲಾ ಗತಜ್ಞಾನಾ ಬಭೂವ ಸಾ ॥ ೩೦ ॥
ನ ದೇವೀ ನ ಚ ಗಂಧರ್ವೀ ನಾಸುರೀ ನ ಚ ಕಿಂನರೀ ।
ಯಾದೃಶೀ ಸಾ ಯದಾ ಜಾತಾ ತೀರ್ಥಭಾವೇನ ಸುಂದರೀ ॥ ೩೧ ॥

---

ಸ್ವತಃ ಶಿಷ್ಯನು ಅಲ್ಲಿ ಸ್ವರ್ಣರೇಖೆಯ ನೀರಿನ ಮೇಲಿರುವ ಬಿದಿರಿನ ಪೊದೆಯಲ್ಲಿ ಬಿದಿರಿಗೆ ಆ ತಲೆಯು ಸಿಕ್ಕಿಕೊಂಡಿರುವುದೆಂದು ತಿಳಿಸಿದನು.

೨೬. ಆದರಂತೆ ಆ ಬಾಗಿಲು ಕಾಯುವನು ವಸ್ತ್ರಾಪಥ ತೀರ್ಥಕ್ಕೆ ಹೋಗಿ ಭವತೀರ್ಥದ ಸ್ವರ್ಣರೇಖಾ ನದಿಯ ಮೇಲಿರುವ ಬಿದಿರಿನಲ್ಲಿ ಮೃಗಿಯ ತಲೆಯನ್ನು ಕಂಡು ಅದನ್ನು ನೀರಿನಲ್ಲಿ ಕೆಡವಿದನು.

೨೭. ಅವನು ಆ ತೀರ್ಥದಲ್ಲಿ ಮಿಂದು ತೀರ್ಥಸ್ವಾಮಿಯನ್ನರ್ಚಿಸಿ ಆದಿತ್ಯನಂತೆ ತೇಜಸ್ವಿಯಾದ ಸಾರಸ್ವತನೊಡನೆ ವೇಗವಾಗಿ ಬಂದನು.

೨೮. ಪ್ರತೀಹಾರನು ಬಂದ ಕೂಡಲೆ ಸಾರಸ್ವತನು ಆವಳಿಗೆ ಒಂದು ತಿಂಗಳು ಚಾಂದ್ರಾಯಣ ವ್ರತವನ್ನಾಚರಿಸುವಂತೆ ನೇಮಿಸಿದನು.

೨೯–೩೦. ವ್ರತವು ಸಂಪೂರ್ಣವಾಗಲು ಅವಳ ಮುಖವು ಒಳ್ಳೆ ಕಣ್ಣುಗಳುಳ್ಳದ್ದೂ, ಮನೋಹರವಾದದ್ದೂ, ಉದ್ದವಾದ ಕೂದಲುಗಳುಳ್ಳದ್ದೂ, ಉದ್ದವಾದ ಕಿವಿಗಳುಳ್ಳದ್ದೂ, ಮನೋಹರವಾದ ಹಲ್ಲುಗಳುಳುಳ್ಳದ್ದೂ, ಶಂಖದಂತೆ ಕುತ್ತಿಗೆಯುಳ್ಳದ್ದೂ, ಪದ್ಮದಂತೆ ಸುವಾಸನೆಯುಳ್ಳದ್ದೂ, ಸಮಸ್ತ ಲಕ್ಷಣಗಳುಳ್ಳದ್ದೂ ಆಯಿತು. ಅನಂತರ ಅವಳು ಮೂರ್ಛೆಗೊಂಡು ಪ್ರಜ್ಞೆಯಿಲ್ಲದವಳಾದಳು.

೩೧. ಅವಳು ತೀರ್ಥ ಮಾಹಾತ್ಮ್ಯೆಯಿಂದ ದೇವ, ಗಂಧರ್ವ, ಅಸುರ, ಕಿನ್ನರ ಸ್ತ್ರೀಯರಿಗಿಂತ ಸುಂದರಿಯಾದಳು.

ಪರಿಣೀತಾ ತು ಸಾ ತೇನ ಭೋಜರಾಜೇನ ಸುಂದರೀ ।
ಮೃಗೀ ಮುಖೀತಿ ವಿಖ್ಯಾತಾ ದೇವೀಸಾ ಭುವನೇಶ್ವರೀ ॥ ೩೨ ॥
ನ ಜಾನಾತಿ ಪುನಃ ಕಿಂಚಿದ್ವ್ಯದ್ವೃತ್ತಂ ರಾಜಮಂದಿರೇ ।
ಕೃತಾ ಸಾ ಪಟ್ಟಮಹಿಷೀ ಭೋಜರಾಜೇನ ಧೀಮತಾ ॥ ೩೩ ॥

ಈಶ್ವರ ಉವಾಚ :—

ದೇಶಾನಾಂ ಪ್ರವರೋ ದೇಶೋ ಗಿರೀಣಾಂ ಪ್ರವರೋ ಗಿರಿಃ ।
ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ವನಾನಾಮುತ್ತಮಂವನಂ ॥ ೩೪ ॥
ಗಂಗಾ ಸರಸ್ವತೀ ತಾಪೀ ಸ್ವರ್ಣರೇಖಾಜಲೇ ಸ್ಥಿತಾ ।
ಬ್ರಹ್ಮಾ ವಿಷ್ಣುಶ್ಚ ಸೂರ್ಯಶ್ಚ ಸರ್ವ ಇಂದ್ರಾಯಃ ಸುರಾಃ ॥ ೩೫ ॥
ನಾಗಾ ಯಕ್ಷಾಶ್ಚ ಗಂಧರ್ವಾ ಅಸ್ಮಿನ್ ಕ್ಷೇತ್ರೇ ವ್ಯವಸ್ಥಿತಾಃ ।
ಬ್ರಹ್ಮಾಂಡಂ ನಿರ್ಮಿತಂ ಯೇನ ತ್ರೈಲೋಕ್ಯಂ ಸಚರಾಚರಂ ॥ ೩೬ ॥
ದೇವಾ ಬ್ರಹ್ಮಾದಯೋ ಜಾತಾ ಸ ಭವೋತ್ರ ವ್ಯವಸ್ಥಿತಃ ।
ಶಿವೋ ಭವೇತಿ ವಿಖ್ಯಾತಃ ಸ್ವಯಂದೇವಸ್ತ್ರಿಲೋಚನಃ ॥ ೩೭ ॥
ದೇವೀತಿ ಸ್ಕಂದರಚನಾದ್ಭವಾನೀ ಚಾತ್ರ ಸಂಸ್ಥಿತಾ ।
ಅತೋ ಯನ್ಮಾಧಿಕಂ ಪ್ರೋಕ್ತಂ ತೀರ್ಥಂ ದೇವಿ ಮಯಾ ತವ ॥ ೩೮ ॥

---

೩೨. ಆ ಸುಂದರಿಯನ್ನು ಭೋಜರಾಜನು ವಿವಾಹಮಾಡಿಕೊಂಡನು. ಅವಳು ಮೃಗೀಮುಖೀ ಎಂದು ವಿಖ್ಯಾತಳಾದಳು.

೩೩. ಅರಮನೆಯಲ್ಲಿ ನಡೆದ ವೃತ್ತಾಂತವನ್ನು ಅವಳು ತಿಳಿಯಲಿಲ್ಲ. ಅವಳನು ಬುದ್ಧಿಶಾಲಿಯಾದ ಭೋಜರಾಜನು ಪಟ್ಟದರಾಣಿಯನ್ನಾಗಿ ಮಾಡಿದನು.

೩೪. ಈಶ್ವರನು ಹೇಳುತ್ತಾನೆ :—ಆ ಕ್ಷೇತ್ರವು ದೇಶಗಳಲ್ಲಿ ಉತ್ತಮ ದೇಶವೂ, ಬೆಟ್ಟಗಳಲ್ಲಿ ಉತ್ತಮವಾದ ಬೆಟ್ಟವೂ, ಕ್ಷೇತ್ರಗಳಲ್ಲಿ ಉತ್ತಮ ಕ್ಷೇತ್ರವೂ, ವನಗಳಲ್ಲಿ ಉತ್ತಮ ವನವೂ ಆಗಿರುವುದು.

೩೫–೩೭. ಗಂಗಾ, ಸರಸ್ವತೀ, ತಾಪೀ ನದಿಗಳು ಆ ಸ್ವರ್ಣರೇಖಾ ಜಲದಲ್ಲಿರುವುವು. ಬ್ರಹ್ಮ, ವಿಷ್ಣು, ಸೂರ್ಯ, ಇಂದ್ರಾದಿ ದೇವತೆಗಳೂ, ನಾಗ, ಯಕ್ಷ, ಗಂಧರ್ವ, ಇಲ್ಲಿ ನೆಲೆಸಿರುವರು. ಚರಾಚರಾತ್ಮಕರಾದ ಬ್ರಹ್ಮಾಂಡವನ್ನೂ, ಬ್ರಹ್ಮಾದಿ ದೇವತೆಗಳನ್ನೂ ಸೃಷ್ಟಿಸಿದ ಭವನು ತ್ರಿಲೋಚನನಾದ ಶಿವನೆ ಭವನೆಂದು ಪ್ರಸಿದ್ಧನಾಗಿರುವನು.

೩೮. ದೇವೀ ಎಂದು ಸ್ಕಂದನನ್ನು ಸೃಷ್ಟಿಸಿದ್ದರಿಂದ ಭವಾನೀ ಎಂಬ ಶಿವನ ಪತ್ನಿಯೂ ಇಲ್ಲಿರುವಳು. ಆದ್ದರಿಂದ ದೇವಿ! ಈ ತೀರ್ಥವನ್ನು ಅತ್ಯಧಿಕವಾದುದೆಂದು ಹೇಳಿರುವನು.

ತಸ್ಮಿನ್ಜಲೇ ಸ್ನಾನಪರೋ ನರೋ ಯದಿ
ಸಂಧ್ಯಾಂ ವಿಧಾಯಾನುಕರೋತಿ ತರ್ಪಣಂ ।
ಶ್ರಾದ್ಧಂ ಪಿತೃಣಾಂ ಚ ದದಾತಿ ದಕ್ಷಿಣಾಂ
ಭವೋದ್ಭವಂ ಪಶ್ಯತಿ ಮುಚ್ಯತೇ ಭವಾತ್ ॥ ೬೯ ॥
ಅಥ ಯದಿ ಭವಪೂಜಾಂ ದಿವ್ಯಪುಷ್ಪೈಃ ಕರೋತಿ ।
ತದನು ಶಿವಶಿವೇತಿ ಸ್ತೋತ್ರಪಾಠಂ ಚ ಗೀತಂ ॥
ಸುರವರಗುಣವೃಂದೈಃ ಸ್ತೂಯಮಾನೋ ವಿಮಾನೈಃ ॥
ಸುರವರಶಿವರೂಪೋ ಮಾನವೋ ಯಾತಿ ನಾಕಂ॥ ೭೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಸ್ವರ್ಣರೇಖಾಮಾಹಾತ್ಮ್ಯವರ್ಣನಂನಾಮ
। ಸಪ್ತಮೋಽಧ್ಯಾಯಃ ॥

---

೬೯. ಆ ನದಿಯ ನೀರಿನಲ್ಲಿ ಮಿಂದು ಸಂಧ್ಯಾವಂದನೆಯನ್ನು ಮಾಡಿ ಪಿತೃಗಳಿಗೆ ಶ್ರಾದ್ಧ, ತರ್ಪಣಗಳನ್ನುಗೈದು ದಕ್ಷಿಣೆಯನ್ನಿತ್ತು ಭವನನ್ನು ದರ್ಶನಮಾಡಿದ ಮಾನವನು ಸಂಸಾರ ಮುಕ್ತನಾಗುವನು.

೭೦. ದಿವ್ಯ ಪುಷ್ಪಗಳಿಂದ ಭವಪೂಜೆಯನ್ನು ಮಾಡಿ ಶಿವ ಶಿವ ಎಂದು ಸ್ತುತಿಸಿ ಗಾನ ಮಾಡಿದ ಮಾನವನು ಶಿವರೂಪನಾಗಿ ದೇವೋತ್ತಮರಿಂದ ಸ್ತುತಿಸಲ್ಪಡುತ್ತ ವಿಮಾನವನ್ನೇರಿ ಸ್ವರ್ಗಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಸ್ವರ್ಣರೇಖಾಮಾಹಾತ್ಮ್ಯವರ್ಣನವೆಂಬ
ಏಳನೆಯನೆಯ ಅಧ್ಯಾಯವು ಮುಗಿದುದು.

|| ಶ್ರೀಃ |

## ಅಷ್ಟಮೋಽಧ್ಯಾಯಃ

### ಬ್ರಹ್ಮಕೃತರುದ್ರಪ್ರಸಾದವರ್ಣನಂ

ಭೋಜರಾಜ ಉವಾಚ :—

ಪ್ರಭೋ ಸಾರಸ್ವತ ಮಯಾ ಶ್ರುತಂ ಮಾಹಾತ್ಮ್ಯಮುತ್ತಮಂ |
ವಸ್ತ್ರಾಪಥಸ್ಯ ಕ್ಷೇತ್ರಸ್ಯ ಗಿರೇ ರೈವತಕಸ್ಯ ಚ || ೧ ||
ವಿಶೇಷೇಣ ಸ್ವರ್ಣರೇಖಾಭವಸ್ಯ ಚ ಜಲಸ್ಯ ಚ |
ಇದಾನೀಂ ಶ್ರೋತುಮಿಚ್ಛಾಮಿ ತೀರ್ಥೋತ್ಪತ್ತಿಂ ವದಸ್ವ ಮೇ || ೨ ||
ಬ್ರಹ್ಮವಿಷ್ಣುಶಿವಾದೀನಾಂ ಮಧ್ಯೇ ಕೋಽಯಂ ವ್ಯವಸ್ಥಿತಃ ||
ಕೇಯಂ ನದೀ ಸ್ವರ್ಣರೇಖಾ ಸರ್ವಪಾತಕನಾಶಿನೀ || ೩ ||
ಕಸ್ಮಾದ್ಬ್ರಹ್ಮಾದಯೋ ದೇವಾ ಅಸ್ಮಿಂಸ್ತೀರ್ಥೇ ಸಮಾಗತಾಃ ||
ಕಥಂ ನಾರಾಯಣೋ ದೇವಃ ಸ್ವಯಮೇವ ಸಮಾಗತಃ || ೪ ||
ಹೇಮಾಲಯಂ ಪರಿತ್ಯಜ್ಯ ಭವಾನೀ ಗಿರಿಮೂರ್ಧನಿ ||
ಸಂಸ್ಥಿತಾ ಸ್ಕಂದಮಾದಾಯ ದೇವೈರಿಂದ್ರಾದಿಭಿಸ್ಸಹ || ೫ ||

---

ಕನ್ನಡದ ಅನುವಾದ

### ಬ್ರಹ್ಮಕೃತರುದ್ರಪ್ರಸಾದವರ್ಣನ

೧-೨. ಭೋಜರಾಜನು ಹೇಳುತ್ತಾನೆ :—ಸ್ವಾಮಿ ! ಸಾರಸ್ವತ ಮುನಿಯೆ! ವಸ್ತ್ರಾಪಥ ಕ್ಷೇತ್ರ, ರೈವತಕ ಗಿರಿ, ಸ್ವರ್ಣರೇಖಾ ಜಲ ಇವುಗಳ ಮಾಹಾತ್ಮ್ಯವನ್ನು ಕೇಳಿರುವೆನು. ಈಗ ತೀರ್ಥದ ಉತ್ಪತ್ತಿಯನ್ನು ಕೇಳಬಯಸುವೆನು. ಅದನ್ನು ನನಗೆ ಹೇಳು.

೩. ಇಲ್ಲಿ ಬ್ರಹ್ಮ ವಿಷ್ಣು ಶಿವರ ಮಧ್ಯದಲ್ಲಿ ಯಾರಿದ್ದಾರೆ? ಸಕಲ ಪಾಪಗಳನ್ನೂ ಪರಿಹರಿಸುವ ಈ ಸ್ವರ್ಣರೇಖಾ ನದಿಯು ಯಾವುದು ?

೪. ಬ್ರಹ್ಮಾದಿ ದೇವತೆಗಳೂ ನಾರಾಯಣನೂ ಈ ತೀರ್ಥಕ್ಕೆ ಹೇಗೆ ಬಂದರು ?

೫. ಪಾರ್ವತಿಯು ಹಿಮಾಲಯವನ್ನು ತ್ಯಜಿಸಿ ಇಂದ್ರಾದಿ ದೇವತೆಗಳೊಡನೆ ಸ್ಕಂದನನ್ನು ಕರೆದುಕೊಂಡು ಈ ಪರ್ವತದ ಮೇಲೆ ಹೇಗೆ ಬಂದು ನೆಲೆಸಿದಳು.

ಸಾರಸ್ವತ ಉವಾಚ :—
ಶೃಣು ಸರ್ವಂ ಮಹಾರಾಜ ಕಥಯಿಷ್ಯೇ ಸವಿಸ್ತರಂ ||
ಯೇನ ವೈ ಕಥ್ಯಮಾನೇನ ಸರ್ವಪಾಪಕ್ಷಯೋ ಭವೇತ್ || ೬ ||
ಪುರಾ ಬ್ರಹ್ಮದಿನಸ್ಯಾಂತೇ ಜಗದೇತಚ್ಚರಾಚರಂ ||
ಸಂಹೃತ್ಯ ಭಗವಾನ್ರುದ್ರಃ ಬ್ರಹ್ಮವಿಷ್ಣುಪುರಸ್ಕೃತಃ || ೭ ||
ತಾಂ ಚ ತೇ ಸಕಲಾಂ ರಾತ್ರಿಂ ಏಕಮೂರ್ತಿಭವಾಸ್ತ್ರಯಃ ||
ತಿಷ್ಠಂತಿ ರಾತ್ರಿಪರ್ಯನ್ತೇ ಪುನರ್ಭಿನ್ನಾ ಭವಂತಿ ತೇ || ೮ ||
ಬ್ರಹ್ಮವಿಷ್ಣುಶಿವಾದೇವಾ ರಜಸ್ಸತ್ವತಮೋಮಯಾಃ ||
ಸೃಷ್ಟಿಂ ಕರೋತಿ ಭಗವಾನ್ ಬ್ರಹ್ಮಾ ಪಾಲಯತೇ ಹರಿಃ || ೯ ||
ಸರ್ವಂ ಸಂಹರತೇ ರುದ್ರಃ ಜಗತ್ಕಾಲಪ್ರಮಾಣತಃ ||
ತೇನಾದೌ ಭಗವಾನ್ಸೃಷ್ಟಃ ದಕ್ಷೋ ನಾಮ ಪ್ರಜಾಪತಿಃ || ೧೦ ||
ಸರ್ವೇ ಸಂಕ್ಷೇಪತಃ ಕೃತ್ವಾ ಬ್ರಹ್ಮಾಂಡಂ ಸಚರಾಚರಂ ||
ಭಿನ್ನಾ ದೇವಾ ಸ್ತ್ರಯೋಜಾತಾ ಸತ್ಯಲೋಕವ್ಯವಸ್ಥಿತಾಃ || ೧೧ ||
ತ್ರಯೋ ಭುವಂ ಸಮಾಸಾದ್ಯ ಕೌತುಕಾದಿಷ್ಟಚೇತಸಃ ||
ಕೈಲಾಸಂ ತೇ ಗಿರಿವರಂ ಸಮಾರೂಢಾಃ ಸುರೈರ್ವೃತಾಃ || ೧೨ ||

---

೬. ಸಾರಸ್ವತನು ಹೇಳುತ್ತಾನೆ :—ಮಹಾರಾಜ ! ಎಲ್ಲವನ್ನೂ ವಿಸ್ತಾರವಾಗಿ ಹೇಳುವೆನು. ಇದನ್ನು ಹೇಳುವುದರಿಂದ ಸಕಲ ಪಾಪಗಳು ಪರಿಹಾರವಾಗುವುವು.

೭-೮. ಹಿಂದೆ ಪೂಜ್ಯನಾದ ರುದ್ರನು ಬ್ರಹ್ಮನ ದಿವಸದ ಕೊನೆಯಲ್ಲಿ ಚರಾಚರ ಜಗತ್ತನ್ನು ಸಂಹರಿಸಿ ಬ್ರಹ್ಮ ವಿಷ್ಣುಗಳೊಡನೆ ಆ ರಾತ್ರಿಯೆಲ್ಲ ಒಂದೇ ಶರೀರನಾಗಿ ರಾತ್ರಿಯ ಕೊನೆಯಲ್ಲಿ ಮರಳಿ ಬೇರೆಯಾದನು.

೯. ಬ್ರಹ್ಮ ವಿಷ್ಣು ಶಿವರು ರಜಸ್ಸತ್ವತಮೋಮಯರು. ಬ್ರಹ್ಮನು ಸೃಷ್ಟಿಮಾಡುವನು, ಹರಿಯು ಪಾಲಿಸುವನು.

೧೦. ರುದ್ರನು ಜಗತ್ತನ್ನು ಕಾಲ ಪ್ರಮಾಣದಿಂದ ಸಂಹರಿಸುವನು. ಅವನು ಮೊದಲು ದಕ್ಷನೆಂಬ ಪ್ರಜಾಪತಿಯನ್ನು ಸೃಷ್ಟಿಸಿದನು.

೧೧-೧೨. ಸತ್ಯಲೋಕ ವಾಸಿಗಳಾದ ಈ ಮೂರು ದೇವತೆಗಳು ಚರಚರಾತ್ಮಕ ಬ್ರಹ್ಮಾಂಡವನ್ನು ಸಂಗ್ರಹಿಸಿ ಭಿನ್ನರಾಗಿ ಕುತೂಹಲದಿಂದ ಭೂಮಿಯನ್ನು ಹೊಂದಿ ದೇವತೆಗಳೊಡನೆ ಕೈಲಾಸ ಪರ್ವತವನ್ನೇರಿದರು.

ಅಹಂ ಜ್ಯೇಷ್ಠೋ ಅಹಂ ಜ್ಯೇಷ್ಠೋ ವಾದೋ ಭೂದ್ಬ್ರಹ್ಮರುದ್ರಯೋಃ ।
ತದಾ ಕ್ರುದ್ಧೋ ಮಹಾದೇವೋ ಬ್ರಹ್ಮಾಣಂ ಹಂತುಮುದ್ಯತಃ ॥ ೧೩ ॥
ವಿಷ್ಣುನಾ ವಾರಿತೋ ಬ್ರಹ್ಮಾ ನ ತೇ ವಾದಸ್ತು ಯುಜ್ಯತೇ।
ತತ್ವಂ ನಾಹಂ ಯದಾ ನೇದಂ ಬ್ರಹ್ಮಾಂಡಂ ಸಚರಾಚರಂ ॥ ೧೪ ॥
ಏಕ ಏವ ತದಾ ದೇವೋ ಜಲೇ ಶೇತೇ ಮಹೇಶ್ವರಃ ।
ಜಾಗರ್ತಿ ಚ ಯದಾ ದೇವಃ ಸ್ವೇಚ್ಛಯಾ ಕೌತುಕಾತ್ತತಃ ॥ ೧೫ ॥
ಅನೇನ ತ್ವಂ ಕೃತಃ ಪೂರ್ವಂ ಅಹಂ ಪಶ್ಚಾತ್ತಯಾ ಕೃತಃ ।
ಬ್ರಹ್ಮಾಂಡಂ ಕೂರ್ಮರೂಪೇಣ ಧೃತಮಸ್ಯ ಪ್ರಸಾದತಃ ॥ ೧೬ ॥
ಅನುಪ್ರವಿಷ್ಟಾ ಬ್ರಹ್ಮಾಂಡಂ ಪ್ರಸಾದಾಚ್ಛಂಕರಸ್ಯ ಚ ।
ಸೃಷ್ಟಿಃ ಕೃತಾ ತ್ವಯಾ ಸರ್ವಾ ಮಯಿ ರಕ್ಷಾ ವ್ಯವಸ್ಥಿತಾ ॥ ೧೭ ॥
ಉದಾಸೀನವದಾಸೀನಃ ಸಂಸಾರಾತ್ಸಾರಮೀಕ್ಷತೇ ।
ಏಕ ಏವ ಶಿವೋ ದೇವಃ ಸರ್ವವ್ಯಾಪೀ ಮಹೇಶ್ವರಃ ॥ ೧೮ ॥
ಪಿತಾಮಹತ್ವಂ ಸಂಜಾತಂ ಪ್ರಸಾದಾಚ್ಛಂಕರಸ್ಯ ತೇ ।
ಪ್ರಸಾದಯಾಮಾಸ ಹರಂ ಶ್ರುತ್ವಾ ಬ್ರಹ್ಮಾ ವಚೋ ಹರೇಃ ॥ ೧೯ ॥

---

೧೩. ಆಗ ಬ್ರಹ್ಮರುದ್ರರಿಗೆ ನಾನು ಜ್ಯೇಷ್ಠನು. ನಾನು ಜ್ಯೇಷ್ಠನು ಎಂದು ವಿವಾದವುಂಟಾಯಿತು. ಆಗ ಕ್ರುದ್ಧನಾದ ಮಹಾದೇವನು ಬ್ರಹ್ಮನನ್ನು ಕೊಲ್ಲಲುದ್ಯುಕ್ತನಾದನು.

೧೪. ಆಗ ವಿಷ್ಣುವು ಬ್ರಹ್ಮನನ್ನು ಕುರಿತು ನೀನು ವಾದಿಸುವುದು ಉಚಿತವಲ್ಲ. ಈ ಚರಾಚರ ಬ್ರಹ್ಮಾಂಡವಿಲ್ಲದಿರುವಾಗ ನೀನೂ, ನಾನೂ ಇರಲಿಲ್ಲ.

೧೫–೧೬. ಆಗ ಶಿವನೊಬ್ಬನೆ ನೀರಿನಲ್ಲಿ ಮಲಗಿದ್ದನು. ಅವನು ತನ್ನಿಚ್ಛೆಯಿಂದ ಕುತೂಹಲದಿಂದ ಎಚ್ಚರಗೊಂಡು ಮೊದಲು ನಿನ್ನನ್ನು ಸೃಷ್ಟಿಸಿದನು. ತರುವಾಯ ನೀನು ನನ್ನನ್ನು ಸೃಷ್ಟಿಮಾಡಿದೆ. ಈ ರುದ್ರನ ಅನುಗ್ರಹದಿಂದ ನಾನು ಬ್ರಹ್ಮಾಂಡವನ್ನು ಕೂರ್ಮ ರೂಪದಿಂದ ಧರಿಸಿ ಅದರೊಳಗೆ ಪ್ರವೇಶಿಸಿದನು. ನೀನು ಎಲ್ಲವನ್ನೂ ಸೃಷ್ಟಿ ಮಾಡಿ ನನ್ನಲ್ಲಿ ರಕ್ಷಣಾ ಕಾರ್ಯವು ನೆಲೆಗೊಂಡಿತು.

೧೮. ಸರ್ವ ವ್ಯಾಪಿಯಾದ ಶಿವನೊಬ್ಬನೆ ಉದಾಸೀನನಂತಿದ್ದು ಸಂಸಾರಕ್ಕಿಂತ ಉತ್ತಮವಾದುದನ್ನು ಈಕ್ಷಿಸುವನು.

೧೯. ಶಂಕರನ ಪ್ರಸಾದದಿಂದ ನೀನು ಪಿತಾಮಹನಾದೆ. ಎಂದು ಹೇಳಲು ಬ್ರಹ್ಮನು ವಿಷ್ಣುವಿನ ಮಾತಿನಿಂದ ಶಿವನನ್ನು ಸಮಾಧಾನಗೊಳಿಸಿದನು.

ಅನಾದಿನಿಧನೋ ದೇವೋ ಬಹುಶೀರ್ಷೋ ಮಹಾಭುಜಃ ।
ಇತ್ಯಾದಿವೇದವಚನೈಸ್ತುತಸ್ತುಷ್ಟೋ ಮಹೇಶ್ವರಃ ।
ಪ್ರಾಹ ಬ್ರಹ್ಮ ವರಂ ಯತ್ತೇ ವೃಣೀಷ್ವ ಮನಸಿ ಸ್ಥಿತಂ ॥ ೨೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಬ್ರಹ್ಮಕೃತರುದ್ರಪ್ರಸಾದವರ್ಣನಂ ನಾಮ
॥ ಅಷ್ಟಮೋಽಧ್ಯಾಯಃ ॥

---

೨೦. ಅನಂತರ ಆದ್ಯಂತರಹಿತನೂ, ಅನೇಕ ಶಿರಸ್ಸುಳ್ಳವನೂ, ಮಹಾಭುಜನು ಇವೇ ಮೊದಲಾದ ವೇದವಾಕ್ಯಗಳಿಂದ ಶಿವನನ್ನು ಸ್ತುತಿಸಲು ಅವನು ತುಷ್ಟನಾಗಿ ಬ್ರಹ್ಮನೆ ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ ಎಂದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ
ಏಳನೆಯ ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಬ್ರಹ್ಮಕೃತರುದ್ರಪ್ರಸಾದವರ್ಣನವೆಂಬ
ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ನವಮೋऽಧ್ಯಾಯಃ

### ಭವೋತ್ಪತ್ತಿವೃತ್ತಾಂತವರ್ಣನಂ

ಬ್ರಹ್ಮೋವಾಚ :—

ಯದಿ ಸೃಷ್ಟಂ ಮಯಾ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ತದಾ ಮೂರ್ತಿಮಿಮಾಂ ತ್ಯಕ್ತ್ವಾ ಭವಃ ಸೃಷ್ಟೋ ಮಯಾಧುನಾ ॥ ೧ ॥
ಪಿತಾಮಹಮಹತ್ವಂ ಸ್ಯಾತ್ ತಥಾ ಶೀಘ್ರಂ ವಿಧೀಯತಾಂ ।
ಬ್ರಹ್ಮಣೋ ವಚನಂ ಶ್ರುತ್ವಾ ವಿಷ್ಣುನಾ ಸ ಪ್ರಮೋದಿತಃ ॥ ೨ ॥
ಮಹದಾಶ್ಚರ್ಯಜನಕೇ ಸಂಪ್ರಾಪ್ತೋ ಗಿರಿಮೂರ್ಧನಿ ।
ನ ವಿಚಾರಸ್ತ್ವಯಾ ಕಾರ್ಯಃ ಕರ್ತವ್ಯಂ ಬ್ರಹ್ಮಭಾಷಿತಂ ॥ ೩ ॥
ತಥೇತ್ಯುಕ್ತ್ವಾ ಶಿವೋ ದೇವಃ ತತ್ರೈವಾಂತರಧೀಯತ ।
ಬ್ರಹ್ಮಾ ಯಯೌ ಮೇರುಶೃಂಗಂ ಮಾನಸಃ ಶಿರಸಿ ಸ್ಥಿತಂ ॥ ೪ ॥
ತಪಸ್ತೇಪೇ ಪ್ರಜಾನಾಥೋ ವೇದೋಚ್ಚಾರಣತತ್ಪರಃ ।
ಅಥರ್ವವೇದೋಚ್ಚಾರಣಂ ಯಾವಚ್ಚಕ್ರೇ ಪಿತಾಮಹಃ ॥ ೫ ॥

---

ಕನ್ನಡದ ಅನುವಾದ

### ಭವೋತ್ಪತ್ತಿವೃತ್ತಾಂತವರ್ಣನ

೧–೩. ಬ್ರಹ್ಮನು ಹೇಳುತ್ತಾನೆ :—ನಾನು ಚರಾಚರ ಜಗತ್ತನ್ನು ಸೃಷ್ಟಿಸಿದ್ದೇ ಆದರೆ ಈಗ ಈ ಶರೀರವನ್ನು ಬಿಟ್ಟು ಭವನನ್ನು ಸೃಷ್ಟಿಮಾಡಿರುವೆನು. ನಾನು ಪಿತಾಮಹನಾಗುವಂತೆ ಮಾಡು. ವಿಷ್ಣುವು ಬ್ರಹ್ಮನ ಮಾತನ್ನು ಕೇಳಿ ಅತ್ಯಂತ ಆಶ್ಚರ್ಯವನ್ನುಂಟುಮಾಡುವ ಕೈಲಾಸ ಪರ್ವತಕ್ಕೆ ಬಂದು ಶಿವನನ್ನು ಕುರಿತು ನೀನು ವಿಚಾರ ಮಾಡಬೇಡ. ಬ್ರಹ್ಮನ ಮಾತನ್ನು ನಡೆಯಿಸು. ಎಂದನು.

೪. ಶಿವನು ಹಾಗೆಯೇ ಆಗಲೆಂದು ಅಲ್ಲಿಯೇ ಅಡಗಿ ಹೋದನು. ಬ್ರಹ್ಮನು ಮಾನಸ ಸರೋವರದ ಮೇಲ್ಗಡೆಯಿರುವ ಮೇರುಶಿಖರಕ್ಕೆ ಹೋದನು.

೫–೬. ಪ್ರಜಾನಾಥನಾದ ಬ್ರಹ್ಮನು ವೇದವನ್ನುಚ್ಚರಿಸಲು ಆಸಕ್ತನಾಗಿ ಅಥರ್ವವೇದವನ್ನು ಉಚ್ಚರಿಸಲು ಅವನ ಬಾಯಿಯಿಂದ ಭಯಂಕರ ರೂಪವುಳ್ಳವನೂ, ಸಂಸಾ

ಮುಖಾದ್ರುದ್ರಃ ಸಮುಭವದ್ರೌದ್ರರೂಪೋ ಭವಾಪಹಃ ।
ಅರ್ಧನಾರೀನರವಪುಃ ದುಷ್ಪ್ರೇಕ್ಷ್ಯೋಽತಿಭಯಂಕರಃ ॥ ೬ ॥
ವಿಭಜಾತ್ಮಾನಮಿತ್ಯುಕ್ತ್ವಾ ಬ್ರಹ್ಮಾಚಾಂತರ್ದಧೇ ಭಯಾತ್ ।
ತಥೋಕ್ತೋಽಸೌ ದ್ವಿಧಾ ಸ್ತ್ರೀತ್ವಂ ಪುರುಷತ್ವಂ ತಥಾಕರೋತ್ ॥ ೭ ॥
ಬಿಭೇದ ಪುರುಷತ್ವಂ ಚ ದಶಧಾ ಚೈಕಧಾ ಪುನಃ ।
ಏಕಾದಶೈತೇ ಕಥಿತಾ ರುದ್ರಾಸ್ತ್ರಿಭುವನೇಶ್ವರಾಃ ॥ ೮ ॥
ಕೃತ್ವಾ ನಾಮಾನಿ ಸರ್ವೇಷಾಂ ದೇವಕಾರ್ಯೇ ನಿಯೋಜಿತಾಃ ।
ವಿಭಜ್ಯ ಪುನರೀಶಾನೀ ಸ್ವಾತ್ಮಾನಂ ಶಂಕರಾದ್ವಿಭೋಃ ॥ ೯ ॥
ಮಹಾದೇವನಿಯೋಗೇನ ಪಿತಾಮಹಮುಪಸ್ಥಿತಾ ।
ತಾಮಾಹ ಭಗವಾನ್ಬ್ರಹ್ಮಾ ದಕ್ಷಸ್ಯ ದುಹಿತಾ ಭವ ॥ ೧೦ ॥
ಸಾಪಿ ತಸ್ಯಾ ನಿಯೋಗೇನ ಪ್ರಾದುರಾಸೀತ್ಪ್ರಜಾಪತೇಃ ।
ನಿಯೋಗಾದ್ಬ್ರಹ್ಮಣೋ ದಕ್ಷೋ ದದೌ ರುದ್ರಾಯ ತಾಂ ಸತೀಂ ।
ದಾಕ್ಷೀಂ ರುದ್ರೋಽಪಿ ಜಗ್ರಾಹ ಸ್ವಕೀಯಾಮೇವ ಶೂಲಭೃತ್ ।
ಅಥ ಬ್ರಹ್ಮಾ ಬಭಾಷೇ ತಂ ಸೃಷ್ಟಿಂ ಕುರು ಸತೀಪತೇ ॥ ೧೨ ॥

---

ರವನ್ನು ನಿವಾರಿಸುವವನೂ, ಅರ್ಧನಾರೀಶ್ವರನೂ, ನೋಡಲಶಕ್ಯನೂ ಅತಿಭಯಂಕರನೂ ಆದ ರುದ್ರನು ಜನಿಸಿದನು.

೭. ಬ್ರಹ್ಮನು "ನಿನ್ನನ್ನು ನೀನೇ ವಿಭಾಗಿಸಿಕೊ" ಎಂದು ಭಯದಿಂದ ಅಡಗಿ ಹೋದನು. ಹಾಗೆ ಹೇಳಲು ಶಿವನು ಸ್ತ್ರೀಪುರುಷ ಭೇದದಿಂದ ತನ್ನನ್ನು ಎರಡ ವಿಧವಾಗಿ ವಿಭಾಗಿಸಿದನು.

೮. ಪುರುಷತ್ವವನ್ನು ಹನ್ನೊಂದು ವಿಧವಾಗಿ ವಿಭಾಗಿಸಲು ಅವರು ತ್ರಿಭುವನೇಶ್ವರರಾದ ಏಕಾದಶ ರುದ್ರರೆನ್ನಿಸಿಕೊಂಡರು.

೯–೧೦. ಅವರಿಗೆಲ್ಲ ಬೇರೆ ಬೇರೆ ಹೆಸರುಗಳನ್ನಿಟ್ಟು ದೇವಕಾರ್ಯದಲ್ಲಿ ನೇಮಿಸಿದನು. ಪಾರ್ವತಿಯು ತನ್ನನ್ನು ಶಂಕರನಿಂದ ವಿಭಾಗಿಸಿ ಆ ಮಹಾದೇವನ ಅಪ್ಪಣೆಯಿಂದ ಬ್ರಹ್ಮನ ಬಳಿಗೆ ಬಂದಳು. ಬ್ರಹ್ಮನು ಅವಳನ್ನು ಕುರಿತು ನೀನು ದಕ್ಷನ ಮಗಳಾಗೆಂದನು.

೧೧. ಅವಳು ಆ ಬ್ರಹ್ಮನ ಅಪ್ಪಣೆಯಿಂದ ಹಾಗೆಯೇ ಆಗಲು ದಕ್ಷನು ಅದೇ ಬ್ರಹ್ಮನ ಅಪ್ಪಣೆಯಿಂದ ಆ ಸತಿಯನ್ನು ರುದ್ರನಿಗಿತ್ತನು.

೧೨. ಶೂಲಧಾರಿಯಾದ ರುದ್ರನು ತನ್ನವಳೇ ಆದ ಆ ಸತಿಯನ್ನು ಸ್ವೀಕರಿಸಲು ಬ್ರಹ್ಮನು ಅವನನ್ನು ಕುರಿತು ಎಲೈ ಸತೀಪತಿಯೆ! ಸೃಷ್ಟಿಮಾಡೆಂದನು.

ರುದ್ರ ಉವಾಚ :—

ಸೃಷ್ಟಿರ್ಮಯಾನ ಕರ್ತವ್ಯಾ ಕರ್ತವ್ಯಾ ಭವತಾ ಸ್ವಯಂ ।
ಪಾಲನಂ ವಿಷ್ಣುನಾ ಕಾರ್ಯಂ ಸಂಹರ್ತಾಹಂ ವ್ಯವಸ್ಥಿತಃ ॥ ೧೩ ॥
ಸ್ಥಾಣುವತ್ಸಂಸ್ಥಿತೋ ಯಸ್ಮಾತ್ ತಸ್ಮಾತ್ ಸ್ಥಾಣುರ್ಭವಾಮ್ಯಹಂ ।
ರಜೋರೂಪಾಸ್ಸತ್ವರೂಪಾಸ್ತಮೋರೂಪಾಶ್ಚ ಯೇ ನರಾಃ ॥ ೧೪ ॥
ಸರ್ವೇ ತೇ ಭವತಾ ಕಾರ್ಯಾ ಗುಣತ್ರಯವಿಭಾಗತಃ ।
ಯದಾ ತೇ ತಾಮಸೈಃ ಕಾರ್ಯಂ ತದಾ ರೌದ್ರೋ ಭವ ಸ್ವಯಂ ॥ ೧೫ ॥
ಯದಾ ತೇ ರಾಜಸೈಃ ಕಾರ್ಯಂ ತದಾ ತ್ವಂ ರಾಜಸೋ ಭವ ।
ಸಾತ್ವಿಕೈಸ್ತೇ ಯದಾ ಕಾರ್ಯಂ ತದಾ ತ್ವಂ ಸಾತ್ವಿಕೋ ಭವ ॥ ೧೬ ॥

ಈಶ್ವರ ಉವಾಚ :—

ಇತ್ಯಾಜ್ಞಾಪ್ಯ ಚ ಬ್ರಹ್ಮಾಣಂ ಸ್ವಯಂ ಸೃಷ್ಟ್ಯಾದಿಕರ್ಮಸು ।
ಗೃಹೀತ್ವಾ ತಾಂ ಸತೀಂ ರುದ್ರಃ ಕೈಲಾಸಮಧಿತಿಷ್ಠತಿ ॥ ೧೭ ॥
ದಕ್ಷಃ ಕಾಲೇನ ಮಹತಾ ಹರಸ್ಯಾಲಯಮಾಯಯೌ । ॥ ೧೮ ॥

---

೧೩. ರುದ್ರನು ಹೇಳುತ್ತಾನೆ :—ನಾನು ಸೃಷ್ಟಿಯನ್ನು ಮಾಡಲರ್ಹನಲ್ಲ. ನೀನು ಸೃಷ್ಟಿಮಾಡತಕ್ಕವನು, ವಿಷ್ಣುವು ಪಾಲಿಸುವವನು. ನಾನು ಸಂಹರಿಸುವವನು.

೧೪. ನಾನು ಸ್ಥಾಣುವಿನಂತೆ (ಮೋಟು ಮರದಂತೆ) ಇರುವುದರಿಂದ ಸ್ಥಾಣುವೆನ್ನಿಸಿಕೊಳ್ಳುವೆನು.

೧೫. ನೀನು ಗುಣತ್ರಯವಿಭಾಗದಿಂದ ರಜಸ್ತಮೋರೂಪರಾದ ಮನುಷ್ಯರನ್ನು ಸೃಷ್ಟಿಸು.

೧೬. ನೀನು ತಮೋಗುಣ ಕಾರ್ಯವಾಗಬೇಕಾದಾಗ ರೌದ್ರನೂ, ರಜಸ್ಸಿನಿಂದ ಕಾರ್ಯವಾಗಬೇಕಾದಾಗ ರಾಜಸನೂ, ಸತ್ವದಿಂದ ಕಾರ್ಯವಾಗಬೇಕಾದಾಗ ಸಾತ್ವಿಕನೂ ಆಗು.

೧೭. ಈಶ್ವರನು ಹೇಳುತ್ತಾನೆ :—ರುದ್ರನು ಬ್ರಹ್ಮನನ್ನು ಸೃಷ್ಟ್ಯಾದಿ ಕಾರ್ಯಗಳಲ್ಲಿ ನೇಮಿಸಿ ಆ ಸತಿಯನ್ನು ಕರೆದುಕೊಂಡು ಹೋಗಿ ಕೈಲಾಸದಲ್ಲಿ ವಾಸವಾಗಿದ್ದನು.

೧೮. ದಕ್ಷನು ಬಹುಕಾಲದ ಮೇಲೆ ಶಿವಾಲಯಕ್ಕೆ ಬಂದನು.

ಅಥ ರುದ್ರಸ್ಸಮುತ್ಥಾಯ ಕೃತವಾನ್ ಗೌರವಂ ಬಹು
ತತೋ ಯಥೋಚಿತಾಂ ಪೂಜಾಂ ನ ದಕ್ಷೋ ಬಹುಮನ್ಯತೇ । ॥ ೧೯ ॥
ತದಾ ವೈ ತಮಸಾವಿಷ್ಟಃ ಸೋಧಿಕಂ ಬ್ರಹ್ಮಣಶ್ಶುಭಃ
ಪೂಜಾಮನರ್ಘ್ಯಾಮನ್ವಿಚ್ಛನ್ ಜಗಾಮ ಕುಪಿತೋಗೃಹಂ । ॥ ೨೦ ॥
ಕದಾಚಿತ್ತಾಂ ಗೃಹಪ್ರಾಪ್ತಾಂ ಸತೀಂ ದಕ್ಷಃ ಸುದುರ್ಮನಾಃ
ಭರ್ತ್ರಾ ಸಹ ವಿನಿಂದ್ಯೈನಾಂ ಭರ್ತ್ಸಯಾಮಾಸ ವೈ ರುಷಾ । ॥ ೨೧ ॥
ಪಂಚವಕ್ತ್ರೋ ದಶಭುಜೋ ಮುಖೇ ನೇತ್ರತ್ರಯಾನ್ವಿತಃ
ಕಪರ್ದೀ ಖಂಡಚಂದ್ರೋಽಸೌ ತಥಾಸೌ ನೀಲಲೋಹಿತಃ । ॥ ೨೨ ॥
ಕಪಾಲೀ ಶೂಲಹಸ್ತೋಽಸೌ ಗಜಚರ್ಮಾವಗುಂಠಿತಃ
ನಾಸ್ಯ ಮಾತಾ ನ ಚ ಪಿತಾ ನ ಭ್ರಾತಾ ನ ಚ ಬಾಂಧವಃ । ॥ ೨೩ ॥
ಸರ್ಪಾಸ್ಥಿಮುಂಡಿತಗ್ರೀವಃ ತ್ಯಕ್ತ್ವಾ ಹೇಮವಿಭೂಷಣಂ
ಭಿಕ್ಷಯಾ ಭೋಜನಂ ಯಸ್ಯ ಕಥಮನ್ನಂ ಪ್ರದಾಸ್ಯತಿ । ॥ ೨೪ ॥
ಕದಾಚಿತ್ಪೂರ್ವತೋ ಯಾತಿ ಗಚ್ಛನ್ಯಾತಿ ಸಪಶ್ಚಿಮೇ
ದಕ್ಷಿಣಸ್ಯಾಂ ವೃಷೋ ಯಾತಿ ಸ್ವಯಂ ಯಾತಿ ಸಚೋತ್ತರೇ । ॥ ೨೫ ॥

---

೧೯. ಆಗ ರುದ್ರನು ಮೇಲಕ್ಕೆದ್ದು ಬಹು ಗೌರವವನ್ನು ತೋರಿಸಿದನು. ಆದರೆ ದಕ್ಷನು ಅವನ ಯಥೋಚಿತ ಪೂಜೆಯನ್ನು ಬಹುಮಾನಿಸಲಿಲ್ಲ.

೨೦. ಆಗ ತಮೋಗುಣಾವಿಷ್ಟನಾದ ದಕ್ಷನು ಅಮೂಲ್ಯ ಪೂಜೆಯು ತನಗಾಗ ಬೇಕೆಂದು ಬಯಸುತ್ತ ಕುಪಿತನಾಗಿ ತನ್ನ ಮನೆಗೆ ಹೋದನು.

೨೧. ದಕ್ಷನು ಒಂದಾನೊಂದು ದಿನ ಮನೆಗೆ ಬಂದ ಸತಿಯನ್ನು ಗಂಡನೊಡನೆ ನಿಂದಿಸಿ ಕೋಪದಿಂದ ಧಿಕ್ಕರಿಸಿದನು.

೨೨–೨೩. ಈ ರುದ್ರನು ಐದು ಮುಖವುಳ್ಳವನೂ, ಹತ್ತು ತೋಳುಗಳುಳ್ಳವನೂ, ಮೂರು ಕಣ್ಣುಗಳುಳ್ಳವನೂ, ಜಡೆಯುಳ್ಳವನೂ, ಚಂದ್ರ ಕಲೆಯುಳ್ಳವನೂ, ನೀಲ ಲೋಹಿತನೂ, ಕಪಾಲಧಾರಿಯೂ, ತ್ರಿಶೂಲಹಸ್ತನೂ, ಗಜಚರ್ಮವನ್ನು ಹೊದ್ದ ವನೂ ಆಗಿರುವನು. ಇವನಿಗೆ ತಾಯಿ, ತಂದೆ, ಸಹೋದರ, ಬಂಧುಗಳಾರೂ ಇಲ್ಲ.

೨೪. ಸುವರ್ಣದ ಒಡವೆಗಳನ್ನು ತ್ಯಜಿಸಿ ಸರ್ಪಗಳ ಮೂಳೆಗಳಿಂದ ಅಲಂಕಾರ ಗೊಂಡ ಕುತ್ತಿಗೆಯುಳ್ಳವನಾಗಿ ಭಿಕ್ಷಾನ್ನವನ್ನು ತಿನ್ನುತ್ತಿರುವ ಈ ಶಿವನು ಹೇಗೆ ಅನ್ನವನ್ನು ನೀಡುವನು ?

೨೫. ಒಂದು ವೇಳೆ ಪೂರ್ವದಿಕ್ಕಿಗೆ ಹೋಗುತ್ತ ಪಶ್ಚಿಮಕ್ಕೆ ಪ್ರಯಾಣ ಮಾಡು ವನು. ಇವನ ವಾಹನವಾದ ವೃಷಭವು ದಕ್ಷಿಣ ದಿಕ್ಕಿಗೆ ಹೋಗುತ್ತಿರುವುದು. ಇವನು ಉತ್ತರಕ್ಕೆ ಹೋಗುವನು.

ತಿರ್ಯಗೂರ್ಧ್ವಮಧೋ ಯಾತಿ ನೈವ ಯಾತಿ ನ ತಿಷ್ಠತಿ
ಇತಿ ಚಿತ್ರಂ ಚರಿತ್ರಂ ತೇ ಭರ್ತುರ್ನಾನ್ಯಸ್ಯ ದೃಶ್ಯತೇ । ॥ ೨೬ ॥
ನಿರ್ಗುಣಃ ಸಗುಣಾತೀತಃ ನಿಸ್ನೇಹೋ ಮೂಕವತ್ ಸ್ಥಿತಃ
ಸರ್ವಜ್ಞಸ್ಸರ್ವಗಸ್ಸರ್ವಃ ಪಠ್ಯತೇ ಭುವನತ್ರಯೇ । ॥ ೨೭ ॥
ಕದಾಚಿನ್ನೈವ ಜಾನಾತಿ ನ ಶೃಣೋತಿ ನ ಪಶ್ಯತಿ
ದೈತ್ಯಾನಾಂ ದಾನವಾನಾಂ ಚ ರಾಕ್ಷಸಾನಾಂ ದದಾತಿಯಃ । ॥ ೨೮ ॥
ನಚಾಸ್ಯಚ ಪಿತಾ ಕಶ್ಚಿತ್ ನ ಚ ಭ್ರಾತಾಸ್ತಿಕಶ್ಚನ
ಏಕ ಏವ ವೃಷಾರೂಢೋ ನಗ್ನೋ ಭ್ರಮತಿ ಭೂತಲೇ । ॥ ೨೯ ॥
ನ ಗೃಹಂ ನ ಧನಂ ಗೋತ್ರಂ ಅನಾದಿನಿಧನೋಽವ್ಯಯಃ
ಸ್ಥಿರಬುದ್ಧಿರ್ನ ಚೈವಾಸೌ ಕ್ರೀಡತೇ ಭುವನತ್ರಯೇ । ॥ ೩೦ ॥
ಕದಾಚಿತ್ಸತ್ಯಲೋಕೇಸೌ ಪಾತಾಲಮಧಿತಿಷ್ಠತಿ
ಗಿರಿಸಾನುಷು ಶೇತೇಸಾವಶಿವೋಽಪಿ ಶಿವಃ ಸ್ಮೃತಃ । ॥ ೩೧ ॥

---

೨೬. ಅಡ್ಡಲಾಗಿಯೂ, ಮೇಲೆಯೂ, ಕೆಳಗೂ ಹೋಗುತ್ತಾನೆ. ಹೋಗುವುದೂ ಇಲ್ಲ, ನಿಲ್ಲುವುದೂ ಇಲ್ಲ. ಹೀಗೆ ನಿನ್ನ ಗಂಡನ ಚರಿತೆಯು ಆಶ್ಚರ್ಯಕರವಾಗಿದೆ. ಬೇರೆ ಯಾರಲ್ಲಿಯೂ ಈ ಗುಣಗಳು ಕಾಣುವುದಿಲ್ಲ.

೨೭. ಇವನು ನಿರ್ಗುಣನೂ, ಗುಣಬಹಿರ್ಭೂತನೂ, ಪ್ರೀತಿಯಿಲ್ಲದವನೂ, ಮೂಕರಂತಿರುವವನೂ, ಸರ್ವಜ್ಞನೂ, ಎಲ್ಲ ಕಡೆಗೂ ಹೋಗುವವನೂ ಆಗಿರುವನು. ಎಂದು ಮೂರು ಲೋಕದ ಜನರು ಹೇಳುತ್ತಾರೆ.

೨೮. ದೈತ್ಯ, ದಾನವ, ರಾಕ್ಷಸರಿಗೆ ವರವನ್ನೀಯುವ ಇವನು ಒಂದು ವೇಳೆ ತಿಳಿಯುವುದಿಲ್ಲ. ಕೇಳುವುದಿಲ್ಲ. ನೋಡುವುದಿಲ್ಲ.

೨೯. ಇವನಿಗೆ ತಂದೆಯೂ, ಸಹೋದರನೂ ಒಬ್ಬನೂ ಇಲ್ಲ. ಒಬ್ಬನೆ ಎತ್ತಿನ ಮೇಲೆ ಕುಳಿತುಕೊಂಡು ದಿಗಂಬರನಾಗಿ ಭೂಮಿಯಲ್ಲಿ ಸಂಚರಿಸುತ್ತಾನೆ

೩೦. ಇವನಿಗೆ ಮನೆಯಿಲ್ಲ. ಹಣವಿಲ್ಲ. ಗೋತ್ರವಿಲ್ಲ. ಆದ್ಯಂತರಹಿತನೂ, ವಿಕಾರವಿಲ್ಲದವನೂ ಆಗಿರುವನು. ಇವನು ಸ್ಥಿರಬುದ್ಧಿಯುಳ್ಳವನಲ್ಲ. ಮೂರು ಲೋಕಗಳಲ್ಲಿಯೂ ವಿಹರಿಸುತ್ತಾನೆ.

೩೧. ಇವನು ಒಂದು ಸಾರಿ ಸತ್ಯಲೋಕದಲ್ಲಿಯೂ, ಒಂದುಸಾರಿ ಪಾತಾಳದಲ್ಲಿಯೂ, ಒಂದು ಸಾರಿ ಪರ್ವತಗಳ ತಪ್ಪಲಲ್ಲಿಯೂ ಇರುವನು. ಅಮಂಗಳಕರನಾದರೂ ಮಂಗಳಕರನೆಂದು ಹೇಳಿಸಿಕೊಳ್ಳುವನು

ಶ್ರೀಖಂಡಾದೀನಿ ಸಂತ್ಯಜ್ಯ ಸದಾ ಭಸ್ಮಾವಗುಂಠಿತಃ ।
ಸರ್ವದೇತಿವಚಸ್ಸತ್ಯಂ ಕಿಮನ್ಯತ್ಸ ಪ್ರದಾಸ್ಯತಿ ॥ ೩೨ ॥
ಧಿಕ್ತ್ವಾಂ ಜಾಮಾತರಂ ಧಿಕ್ತಂ ಯುಯೋಃ ಸ್ನೇಹಃ ಪರಸ್ಪರಂ ।
ತಸ್ಯ ತ್ವಂ ವಲ್ಲಭಾ ಭಾರ್ಯಾ ಸ ಚ ಪ್ರಾಣಾಧಿಕಸ್ತವ ॥ ೩೩ ॥
ನ ಚ ಪಿತ್ರಾಸ್ತಿ ತೇ ಕಾರ್ಯಂ ನ ಮಾತ್ರಾ ನ ಸಖೀಷುಚ ।
ಕೇವಲಂ ಭರ್ತೃಭಕ್ತಾ ತ್ವಂ ತಸ್ಮಾದ್ಗಚ್ಛ ಗೃಹಾನ್ಮಮ ॥ ೩೪ ॥
ಅನ್ಯೇ ಜಾಮಾತರಃ ಸರ್ವೇ ಭರ್ತುಸ್ತವ ಪಿನಾಕಿನಃ ।
ತ್ವಮದ್ಯೈವಾಶು ಚಾಸ್ಮಾಕಂ ಗೃಹಾದ್ಗಚ್ಛ ಪರಂ ಪ್ರತಿ ॥ ೩೫ ॥
ತಸ್ಯ ತದ್ವಾಕ್ಯಮಾಕರ್ಣ್ಯ ಸಾ ದೇವೀ ಶಂಕರಪ್ರಿಯಾ ।
ವಿನಿಂದ್ಯ ಪಿತರಂ ದಕ್ಷಂ ಧ್ಯಾತ್ವಾ ದೇವಂ ಮಹೇಶ್ವರಂ ॥ ೩೬ ॥
ಶ್ವೇತವಸ್ತ್ರಾ ಜಲೇ ಸ್ನಾತ್ವಾ ದದಾಹಾತ್ಮಾನಮಾತ್ಮನಾ ।
ಯಾಚತಸ್ತು ಶಿವೋ ಭರ್ತಾ ಪುನರ್ಜನ್ಮಾಂತರೇ ತಯಾ ॥ ೩೭ ॥
ಪಿತಾ ಮೇ ಹಿಮವಾನಸ್ತು ಮೇನಾ ಗರ್ಭೇ ಭವಾಮ್ಯಹಂ ।
ಅತ್ರಾಂತರೇ ಹಿಮವತಾ ತಪಸಾ ತೋಷಿತೋ ಹರಃ ॥ ೩೮ ॥

---

೩೨. ಶ್ರೀಗಂಧವೇ ಮೊದಲಾದುವನ್ನು ಬಿಟ್ಟು ಯಾವಾಗಲೂ ಭಸ್ಮಲಿಪ್ತನಾದ ಇವನು ಸರ್ವವನ್ನು ಕೊಟ್ಟವನೆಂಬುದು ನಿಜವಾದರೆ ಬೇರೆ ಏನನ್ನು ಕೊಡುವನು.

೩೩. ನಿನಗೂ, ಅಳಿಯನಾದ ಈ ಶಿವನಿಗೂ ನಿಂದೆಯಿರಲಿ. ನಿಮ್ಮಿಬ್ಬರಿಗೆ ಪರಸ್ಪರ ಸ್ನೇಹವುಂಟಾಗಿದೆ. ನೀನು ಅವನಿಗೆ ಪ್ರಿಯಳಾದ ಪತ್ನಿ ; ಅವನು ನಿನಗೆ ಪ್ರಾಣಕ್ಕಿಂತ ಹೆಚ್ಚಾದ ಪತಿಯು.

೩೪. ನಿನಗೆ ತಂದೆ, ತಾಯಿ, ಗೆಳತಿಯರಿಂದಾಗಬೇಕಾದಕಾರ್ಯವೇನೂ ಇಲ್ಲ. ನೀನು ಕೇವಲ ಪತಿಯಲ್ಲಿ ಭಕ್ತಿಯುಳ್ಳವಳಾಗಿರುವೆ. ಆದ್ದರಿಂದ ನನ್ನ ಮನೆಯಿಂದ ಹೊರಡು.

೩೫. ನನಗೆ ನಿನ್ನ ಪತಿಗಿಂತ ಇತರ ಉತ್ತಮ ಅಳಿಯಂದಿರುವರು. ನೀನು ಈಗಲೇ ನಮ್ಮ ಮನೆಯಿಂದ ನಿನ್ನ ಪತಿಯೆಡೆಗೆ ಹೋಗು.

೩೬–೩೭. ಶಂಕರನ ಸತಿಯಾದ ಆ ಸತಿಯು ದಕ್ಷನ ಆ ಮಾತನ್ನು ಕೇಳಿ ಅವನನ್ನು ನಿಂದಿಸಿ ಮಹೇಶ್ವರನನ್ನು ಧ್ಯಾನಿಸಿ ಶ್ವೇತ ವಸ್ತ್ರವನ್ನುಟ್ಟು ಮಿಂದು ಜನ್ಮಾಂತರದಲ್ಲಿಯೂ ಶಿವನೇ ಪತಿಯಾಗಬೇಕೆಂದುಬೇಡಿಕೊಂಡು ತಾನೇ ತನ್ನ ದೇಹವನ್ನು ಸುಟ್ಟುಕೊಂಡಳು.

೩೮. ಅಲ್ಲದೆ ತನಗೆ ಹಿಮವಂತನು ತಂದೆಯಾಗಬೇಕೆಂದೂ, ಮೇನೆಯ ಗರ್ಭದಲ್ಲಿ ತಾನು ಜನಿಸಬೇಕೆಂದೂ ಸಂಕಲ್ಪಿಸಿದಳು. ಈ ಮಧ್ಯದಲ್ಲಿ ಶಿವನು ಹಿಮವಂತನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಅವನನ್ನು ಕುರಿತು ಇಂತೆಂದನು.

ಪ್ರತ್ಯಕ್ಷಂ ದರ್ಶನಂ ದತ್ವಾ ಹಿಮವಂತಂ ವಚೋಽಬ್ರವೀತ್ ॥ ೩೮ ॥
ಏಷಾ ದತ್ತಾ ಸುತಾ ತುಭ್ಯಂ ಪರಿಣೇಷ್ಯಾಮಿ ತಾಮಹಂ ।
ದೇವಾನಾಂ ಕಾರ್ಯಸಿದ್ಧ್ಯರ್ಥಂ ಗಿರಿರಾಜೋ ಭವಿಷ್ಯಸಿ ॥ ೪೯ ॥
ಆತ್ಮಮೂರ್ತೌ ಪ್ರವಿಷ್ಟಾಂ ತಾಂ ಜ್ಞಾತ್ವಾ ದೇವೋ ಮಹೇಶ್ವರಃ ।
ಶಶಾಪ ದಕ್ಷಂ ಕುಪಿತಃ ಸಮಾಗತ್ಯಾಥ ತದ್ಗೃಹಂ ॥ ೪೦ ॥
ತ್ಯಕ್ತ್ವಾ ದೇಹಮಿಮಂ ಬ್ರಾಹ್ಮ್ಯಂ ಕ್ಷತ್ರಿಯಾಣಾಂ ಕುಲೇ ಭವ ।
ಸ್ವಾಯಂಭುವತ್ವಂ ಸಂತ್ಯಜ್ಯ ದಕ್ಷ ಪ್ರಾಚೇತಸೋ ಭವ ॥ ೪೧ ॥
ಸ್ವಸ್ಯಾಂ ಸುತಾಯಾಂ ಊಢಾಯಾಂ ಪುತ್ರಮುತ್ಪಾದಯಿಷ್ಯಸಿ ।
ಏವಂ ಶಪ್ತ್ವಾ ಮಹಾದೇವೋ ಯಯೌ ಕೈಲಾಸಪರ್ವತಂ ॥ ೪೨ ॥
ಸ್ವಾಯಂಭುವೋಽಪಿ ಕಾಲೇನ ದಕ್ಷಃ ಪ್ರಾಚೇತಸೋಽಭವತ್ ।
ಭವಾನೀ ಸಸುತಾಂ ಲಬ್ಧ್ವಾ ಗಿರಿಸ್ತುಷ್ಟೋ ಹಿಮಾಲಯಃ ॥ ೪೩ ॥
ಮೇನಾಪಿ ತಾಂ ಸುತಾಂ ಲಬ್ಧ್ವಾ ಧನ್ಯಂ ಮೇನೇ ಗೃಹಾಶ್ರಮಾ ।
ತಾಂ ದೃಷ್ಟ್ವಾ ಜಾಯಮಾನಾಂ ಚ ಸ್ವೇಚ್ಛಯೈವ ವರಾನನಾಂ ॥ ೪೪ ॥

---

೩೯. ನಿನಗೆ ಮಗಳನ್ನೊಬ್ಬಳನ್ನಿತ್ತಿರುವೆನು. ನಾನು ಅವಳನ್ನು ದೇವತೆಗಳ ಕಾರ್ಯಕ್ಕಾಗಿ ವರಿಸುವೆನು. ನೀನು ಗಿರಿರಾಜನಾಗುವೆ.

೪೦–೪೧. ಮಹೇಶ್ವರನ ಸತಿಯು ತನ್ನ ಮೂರ್ತಿಯಾದ ಅಗ್ನಿಯಲ್ಲಿ ಪ್ರವೇಶ ಮಾಡಿರುವುದನ್ನರಿತು ಕುಪಿತನಾಗಿ ದಕ್ಷನನ್ನು ಶಪಿಸಿ ಅವನ ಮನೆಗೆ ಹೋಗಿ, " ದಕ್ಷ ! ನೀನು ಈ ಬ್ರಾಹ್ಮಣ ದೇಹವನ್ನು ತ್ಯಜಿಸಿ ಕ್ಷತ್ರಿಯ ವಂಶದಲ್ಲಿ ಜನಿಸು. ಸ್ವಾಯಂಭು ವತ್ವವನ್ನು ಬಿಟ್ಟು ಪ್ರಾಚೇತಸನಾಗು.

೪೨. ನಿನ್ನ ಮಗಳನ್ನೆ ಮದುವೆ ಮಾಡಿಕೊಂಡು ಅವಳಲ್ಲಿ ಪುತ್ರನನ್ನು ಪಡೆ ಯುವೆ. ಮಹೇಶ್ವರನು ಹೀಗೆ ಶಪಿಸಿ ಕೈಲಾಸ ಪರ್ವತಕ್ಕೆ ತೆರಳಿದನು.

೪೩. ಕಾಲಾಂತರದಲ್ಲಿ ಸ್ವಾಯಂಭುವನಾದ ದಕ್ಷನು ಪ್ರಾಚೇತಸನಾದನು. ಹಿಮಾಲಯನು ಭವಾನಿಯನ್ನು ಮಗಳನ್ನಾಗಿ ಪಡೆದು ಸಂತುಷ್ಟನಾದನು.

೪೪–೪೮. ಮೇನೆಯೂ ಆ ಮಗಳನ್ನು ಪಡೆದು ಗೃಹಸ್ಥಾಶ್ರಮವು ಸಾರ್ಥಕ ವಾಯಿತೆಂದರಿತಳು. ಆವಳು ಜನಿಸಿದ ಆ ಮಗಳನ್ನು ನೋಡಿ ಪತಿಯನ್ನು ಕುರಿತು ದೊರೆಯೆ ! ಕಮಲದಂತೆ ಮುಖವುಳ್ಳವಳೂ, ಸಕಲ ಪ್ರಾಣಿಗಳ ಹಿತಕ್ಕಾಗಿ ತಪಸ್ಸನ್ನು ಮಾಡಿ ಹುಟ್ಟಿದವಳೂ ಆದ ಈ ಬಾಲಕಿಯನ್ನು ನೋಡು. ಎಂದಳು. ಅವನೂ ಎಳೆ

ಮೇನಾ ಹಿಮವತಃ ಪತ್ನೀ ಪ್ರಾಹೇದಂ ಪರ್ವತೇಶ್ವರಂ ।
ಪಶ್ಯ ಬಾಲಾಮಿಮಾಂ ರಾಜನ್ರಾಜೀವಸದೃಶಾನನಾಂ ॥ ೪೫ ॥
ಹಿತಾಯ ಸರ್ವಭೂತಾನಾಂ ಜಾತಾಂ ಚ ತಪಸಾ ಶುಭಾಂ ।
ಸೋಽಪಿ ದೃಷ್ಟ್ವಾ ಮಹಾದೇವೀಂ ತರುಣಾದಿತ್ಯಸನ್ನಿಭಾಂ ॥ ೪೬ ॥
ಕಪರ್ದಿನೀಂ ಚತುರ್ವಕ್ತ್ರಾಂ ತ್ರಿನೇತ್ರಾಮತಿಲಾಲಸಾಂ ।
ಅಷ್ಟಹಸ್ತಾಂ ವಿಶಾಲಾಕ್ಷೀಂ ಚಂದ್ರಾವಯವಭೂಷಣಾಂ ॥ ೪೭ ॥
ಪ್ರಣಮ್ಯ ಶಿರಸಾ ಭೂಮೌ ತೇಜಸಾ ತು ಸುವಿಹ್ವಲಃ ।
ಭೀತಃ ಕೃತಾಂಜಲಿಃ ಸ್ತಬ್ಧಃ ಪ್ರೋವಾಚ ಪರಮೇಶ್ವರೀಂ ॥ ೪೮ ॥

ಹಿಮವಾನುವಾಚ :—

ಕಾ ತ್ವಂ ದೇವಿ ವಿಶಾಲಾಕ್ಷಿ ಶಂಸ ಮೇ ಸಂಶಯೋ ಮಹಾನ್ ॥ ೪೯ ॥

ದೇವ್ಯುವಾಚ :—

ಮಾಂ ವಿದ್ಧಿ ಪರಮಾಂ ಶಕ್ತಿಂ ಮಹೇಶ್ವರಸಮಾಶ್ರಯಾಂ ।
ಅನನ್ಯಾಮವ್ಯಯಾಮೇಕಾಂ ಯಾಂ ಪಶ್ಯಂತಿ ಮುಮುಕ್ಷವಃ ॥ ೫೦ ॥
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ರೂಪಮೈಶ್ವರಂ ।
ಏತಾವದುಕ್ತ್ವಾ ವಿಜ್ಞಾನಂ ದತ್ವಾ ಹಿಮವತೇ ಸ್ವಯಂ ॥ ೫೧ ॥
ಸೂರ್ಯಕೋಟಿಪ್ರತೀಕಾಶಂ ತೇಜೋಬಿಂಬಂ ನಿರಾಕುಲಂ ।
ಜ್ವಾಲಾಮಾಲಾಸಹಸ್ರಾಢ್ಯಂ ಕಾಲಾನಲಶತೋಪಮಂ ॥ ೫೨ ॥

---

ಸೂರ್ಯನಿಗೆ ಸಮಾನಳೂ, ಜಟಾಧಾರಿಣಿಯೂ, ನಾಲ್ಕು ಮುಖವುಳ್ಳವಳೂ, ವಿಶಾಲವಾದ ಮೂರು ಕಣ್ಣುಗಳುಳ್ಳವಳೂ, ಎಂಟು ಕೈಯುಳ್ಳವಳೂ, ಚಂದ್ರಕಲಾಭೂಷಣಳೂ ಆದ ಆ ಪಾರ್ವತಿಯನ್ನು ನೋಡಿ ತಲೆಬಾಗಿ ವಂದಿಸಿ ಅವಳ ತೇಜಸ್ಸಿನಿಂದ ವ್ಯಥೆಗೊಂಡವನೂ, ಭೀತನೂ, ಸ್ತಬ್ಧನೂ ಆಗಿ ಕೈಮುಗಿದುಕೊಂಡು ಅವಳನ್ನು ಕುರಿತು ಹೀಗೆಂದನು.

೪೯. ಹಿಮವಂತನು ಹೇಳುತ್ತಾನೆ :—ದೇವಿ ! ವಿಶಾಲಾಕ್ಷಿಯಾದ ನೀನಾರು ? ನನಗೆ ಬಹಳ ಸಂಶಯವುಂಟಾಗಿದೆ.

೫೦. ದೇವಿಯು ಹೇಳುತ್ತಾಳೆ :—ನನ್ನನ್ನು ಮೋಕ್ಷಾರ್ಥಿಗಳು ನೋಡುವ ಮಹೇಶ್ವರನ ಪರಮ ಶಕ್ತಿಯನ್ನಾಗಿ ತಿಳಿ.

೫೧-೬೭. ನಿನಗೆ ದಿವ್ಯ ಚಕ್ಷುಸ್ಸನ್ನು ಕೊಡುವೆನು. ಅದರಿಂದ ನೀನು ಈಶ್ವರನ ರೂಪವನ್ನು ನೋಡು. ಎಂದು ಹಿಮಾಲಯನಿಗೆ ಜ್ಞಾನವನ್ನಿತ್ತಳು. ಆ ಹಿಮವಂತನು ಅನೇಕ ಕೋಟಿ ಸೂರ್ಯರಿಗೆ ಸಮಾನನೂ, ತೇಜೋಬಿಂಬನೂ, ಆಕುಲತೆಯಿಲ್ಲದವನೂ, ಅನೇಕ ಜ್ವಾಲೆಗಳಿಂದ ಕೂಡಿರುವವನೂ, ಪ್ರಳಯಕಾಲದ ಅಗ್ನಿಗೆ ಸಮಾನನೂ, ಜಟಿ

ದಂಷ್ಟ್ರಾಕರಾಳದುರ್ಧರ್ಷಂ ಜಟಾಮಂಡಲಮಂಡಿತಂ ।
ಪ್ರಶಾಂತಂ ಸೌಮ್ಯವದನಂ ಅನಂತಾಶ್ಚರ್ಯಸಂಯುತಂ ॥ ೫೩ ॥
ಚಂದ್ರಾವಯವಲಕ್ಷ್ಮಾಣಂ ಚಂದ್ರಕೋಟಿಸಮಪ್ರಭಂ ।
ಕಿರೀಟಿನಂ ಗದಾಹಸ್ತಂ ನೂಪುರೈರುಪಶೋಭಿತಂ ॥ ೫೪ ॥
ದಿವ್ಯಮಾಲಾಂಬರಧರಂ ದಿವ್ಯಗಂಧಾನುಲೇಪನಂ ।
ಶಂಖಚಕ್ರಧರಂ ಕಾಮ್ಯಂ ತ್ರಿನೇತ್ರಂ ಕೃತ್ತಿವಾಸಸಂ ॥ ೫೫ ॥
ಅಂಡಸ್ಥಂ ಚಾಂಡಬಾಹ್ಯಸ್ಥಂ ಬಾಹ್ಯಮಾಭ್ಯಂತರಂ ಪರಂ ।
ಸರ್ವಶಕ್ತಿಮಯಂ ಶುಭ್ರಂ ಸರ್ವಾಲಂಕಾರಸಂಯುತಂ ॥ ೫೬ ॥
ಬ್ರಹ್ಮೇಂದ್ರೋಪೇಂದ್ರಯೋಗೀಂದ್ರೈಃ ವಂದ್ಯಮಾನಪದಾಂಬುಜಂ ।
ಸರ್ವತಃ ಪಾಣಿಪಾದಾಂತಂ ಸರ್ವತೋಽಕ್ಷಿಶಿರೋಮುಖಂ ॥ ೫೭ ॥
ಸರ್ವಮಾವೃತ್ಯ ತಿಷ್ಠಂತಂ ದದರ್ಶ ಪರಮೇಶ್ವರಂ ।
ದೃಷ್ಟ್ವಾ ನಂದೀಶ್ವರಂ ದೇವಂ ದೇವ್ಯಾ ಮಹೇಶ್ವರಂ ಪರಂ ॥ ೫೮ ॥
ಭಯೇನ ಚ ಸಮಾವಿಷ್ಟಃ ಸರಾಜಾ ಹೃಷ್ಟಮಾನಸಃ ।
ಆತ್ಮನ್ಯಾಧಾಯ ಚಾತ್ಮಾನಂ ಓಂಕಾರಂ ಸಮನುಸ್ಮರ್ರ ॥ ೫೯ ॥

---

ಗಳ ಸಮೂಹದಿಂದ ಅಲಂಕಾರಗೊಂಡವನೂ, ಶಾಂತನೂ, ಸೌಮ್ಯವಾದ ಮುಖವುಳ್ಳವನೂ, ಅತ್ಯಾಶ್ಚರ್ಯದಿಂದ ಕೂಡಿರುವವನೂ, ಚಂದ್ರಖಂಡದ ಚಿಹ್ನೆಯುಳ್ಳವನೂ, ಕೋಟಿ ಚಂದ್ರರಿಗೆ ಸಮಾನವಾದ ಕಾಂತಿಯುಳ್ಳವನೂ, ಕಿರೀಟ, ಗದೆ, ಕಾಲ್ಗೆಜ್ಜೆ ಇವುಗಳಿಂದ ಅಲಂಕಾರಗೊಂಡವನೂ, ದಿವ್ಯ ಮಾಲೆಯನ್ನು ಧರಿಸಿದವನೂ, ದಿವ್ಯ ಗಂಧವನ್ನು ಲೇಪನಮಾಡಿಕೊಂಡಿರುವವನೂ, ಶಂಖ ಚಕ್ರಗಳನ್ನು ಹಿಡಿದವನೂ, ಇಷ್ಟಾರ್ಥವನ್ನೀಯುವವನೂ, ಮುಕ್ಕಣ್ಣನೂ, ಚರ್ಮದ ಬಟ್ಟೆಯುಳ್ಳವನೂ, ಬ್ರಹ್ಮಾಂಡದ ಒಳಗೂ, ಹೊರಗೂ ಇರುವವನೂ, ಸಕಲ ಶಕ್ತಿ ಸ್ವರೂಪನೂ, ಶುಭ್ರ ವರ್ಣನೂ, ಸರ್ವಾಲಂಕಾರವುಳ್ಳವನೂ, ಬ್ರಹ್ಮ, ಇಂದ್ರರಿಂದಲೂ ಯೋಗಿವರ್ಯರಿಂದಲೂ ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳವನೂ, ಸರ್ವತ್ರ ಕಾಲು, ಕೈ, ಕಣ್ಣು, ತಲೆ, ಮುಖಗಳುಳ್ಳವನೂ, ಸಮಸ್ತವನ್ನೂ ಆವರಿಸಿ ಇರುವವನೂ ಆದ ಪರಮೇಶ್ವರನನ್ನು ಕಂಡನು. ಆ ಹಿಮಾಲಯನು ದೇವಿಯ ಅನುಗ್ರಹದಿಂದ ನಂದೀಶ್ವರನಾದ ಮಹೇಶ್ವರನನ್ನು ನೋಡಿ ಭಯಗೊಂಡು ಸಂತೋಷದಿಂದ ಪರಮಾತ್ಮನಲ್ಲಿ ಮನಸ್ಸಿಟ್ಟು ಓಂಕಾರವನ್ನು ಸ್ಮರಿಸುತ್ತ ಎಂಟು ಸಾವಿರ ನಾಮಗಳಿಂದ ಸ್ತುತಿಸಿ ಮರಳಿ ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದನು. "ಪರಮೇಶ್ವರ! ನಿನಗುಂಟಾದ ಈಶ್ವರ

ನಾಮ್ನಾಮಷ್ಟಸಹಸ್ರೇಣ ಸ್ತುತ್ವಾಸೌ ಹಿಮವಾನ್ಗಿರಿಃ ।
ಭೂಯಃ ಪ್ರಣಮ್ಯ ಭೂತಾತ್ಮಾ ಪ್ರೋವಾಚೇದಂ ಕೃತಾಂಜಲಿಃ ॥ ೬೦ ॥
ಯದೇತದೈಶ್ವರಂ ರೂಪಂ ಜ್ಞಾತ್ವಾ ತೇ ಪರಮೇಶ್ವರಿ ।
ಭೀತೋಽಸ್ಮಿ ಸಾಂಪ್ರತಂ ದೃಷ್ಟ್ವಾ ತತ್ತ್ವಮನ್ಯತ್ಪ್ರದರ್ಶಯ ॥ ೬೧ ॥
ಏವಮುಕ್ತಾಽಥ ಸಾ ದೇವೀ ತೇನ ಶೈಲೇನ ಪಾರ್ವತೀ ।
ಸಂಹೃತ್ಯ ದರ್ಶಯಾಮಾಸ ಸ್ವರೂಪಮಪರಂ ಪರಂ ॥ ೬೨ ॥
ನೀಲೋತ್ಪಲದಲಪ್ರಖ್ಯಂ ನೀಲೋತ್ಪಲಸುಗಂಧಕಂ ।
ದ್ವಿನೇತ್ರಂ ದ್ವಿಭುಜಂ ಸೌಮ್ಯಂ ನೀಲಾಲಕವಿಭೂಷಿತಂ ॥ ೬೩ ॥
ರಕ್ತಪಾದಾಂಬುಜತಲಂ ಸಂರಕ್ತಕರಪಲ್ಲವಂ ।
ಶ್ರೀಮದ್ವಿಶಾಲಸದ್ವೃತ್ತಂ ಲಲಾಟತಿಲಕೋಜ್ಜ್ವಲಂ ॥ ೬೪ ॥
ಭೂಷಿತಂ ಚಾರುಸರ್ವಾಂಗಂ ಭೂಷಣೈರತಿಕೋಮಲಂ ।
ದಧಾನಂ ಚೋರಸಾ ಮಾಲಾಂ ವಿಶಾಲಾಂ ಹೇಮನಿರ್ಮಿತಾಂ ॥ ೬೫ ॥
ಈಷತ್ಸ್ಮಿತಂ ಸುಬಿಂಬೋಷ್ಠಂ ನೂಪುರಾರಾವಶೋಭಿತಂ ।
ಪ್ರಸನ್ನವದನಂ ದಿವ್ಯಂ ಚಾರುಭ್ರೂಮಹಿಮಾಸ್ಪದಂ ॥ ೬೬ ॥
ತದೀದೃಶಂ ಸಮಾಲೋಕ್ಯ ಸ್ವರೂಪಂ ಶೈಲಸತ್ತಮಃ ।
ಭಯಂ ಸಂತ್ಯಜ್ಯ ಹೃಷ್ಟಾತ್ಮಾ ಬಭಾಷೇ ಪರಮೇಶ್ವರೀಂ ॥ ೬೭ ॥

---

ರೂಪವನ್ನು ನೋಡಿ ಭಯಗೊಂಡಿರುವೆನು. ಆದ್ದರಿಂದ ಬೇರೆ ರೂಪವನ್ನು ತೋರಿಸು." ಹಿಮಾಲಯನು ಹೀಗೆ ಹೇಳಲು ಪಾರ್ವತಿಯು ಆ ಭಯಂಕರ ರೂಪವನ್ನು ಅಡಗಿಸಿಕೊಂಡು ಬೇರೆ ರೂಪವನ್ನು ತೋರಿಸಿದಳು. ಹಿಮಾಲಯನು ಕನ್ನೈದಿಲೆಹೂವಿನಂತಿರುವುದೂ, ಕನ್ನೈದಿಲೆಹೂವಿನಸುವಾಸನೆಯುಳ್ಳದ್ದೂ, ಎರಡುಕಣ್ಣು, ಭುಜಗಳುಳ್ಳದ್ದೂ, ಸೌಮ್ಯವಾದುದೂ, ಕರಿಬಣ್ಣದಮುಂಗೂದಲುಗಳಿಂದಅಲಂಕಾರಗೊಂಡುದೂ, ಕೆಂಪು ಕಮಲದಂತೆ ಪಾದಗಳುಳ್ಳದ್ದೂ, ಕೆಂಪು ಕೈಗಳುಳ್ಳದ್ದೂ, ವಿಶಾಲವಾದ ಲಲಾಟದಲ್ಲಿರುವ ತಿಲಕದಿಂದ ಪ್ರಕಾಶಮಾನವಾದುದೂ, ಒಡವೆಗಳಿಂದ ಅಲಂಕಾರಗೊಂಡುದೂ, ಮನೋಹರವೂ, ಮೃದುವೂ, ಸಮಸ್ತಾವಯವಗಳುಳ್ಳದ್ದೂ, ಅತಿ ಎದೆಯಲ್ಲಿ ಉದ್ದವಾದ ಚಿನ್ನದ ಮಾಲೆಯನ್ನು ಧರಿಸಿರುವುದೂ, ಸ್ವಲ್ಪ ನಗುವುಳ್ಳದ್ದೂ, ತೊಂಡೆ ಹಣ್ಣಿನಂತೆ ತುಟಿಯುಳ್ಳದ್ದೂ, ಕಾಲ್ಗಜ್ಜೆಯ ಧ್ವನಿಯಿಂದ ಅಲಕಾರಗೊಂಡುದೂ, ಪ್ರಸನ್ನ

ಹಿಮವಾನುವಾಚ :—
ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಾಃ ಕ್ರಿಯಾಃ ।
ಯನ್ಮೇ ಸಾಕ್ಷಾತ್ತ್ವಮವ್ಯಕ್ತಾ ಪ್ರಸನ್ನಾ ದೃಷ್ಟಿಗೋಚರಾ ॥ ೬೮ ॥
ಇದಾನೀಂ ಯನ್ಮಯಾ ಕಾರ್ಯಂ ತನ್ಮೇ ಬ್ರೂಹಿ ಮಹೇಶ್ವರಿ ।
ಮಹೇಶ್ವರ್ಯುವಾಚ :—
ಶಿವಪೂಜಾ ತ್ವಯಾ ಕಾರ್ಯಾ ಧ್ಯಾನೇನ ತಪಸಾ ಸದಾ ॥ ೬೯ ॥
ಅಹಂ ತಸ್ಮೈ ಪ್ರದಾತವ್ಯಾ ಕೇನಚಿತ್ಕಾರಣೇನ ವೈ ।
ಯಾದೃಶಸ್ತು ತ್ವಯಾ ದೃಷ್ಟಃ ಧ್ಯೇಯೋ ವೈ ತಾದೃಶಸ್ತ್ವಯಾ ।
ಏಕ ಏವ ಶಿವೋ ದೇವಃ ಸರ್ವಾಧಾರೋ ಧರಾಧರಃ ॥ ೭೦ ॥
ಸಾರಸ್ವತ ಉವಾಚ :—
ತಪಶ್ಚ ಕೃತವಾನ್ರುದ್ರಃ ಸಮಾಗಮ್ಯ ಹಿಮಾಚಲಂ ।
ತಸ್ಯೋಮಾ ಪರಮಾಂ ಭಕ್ತಿಂ ಚಕಾರ ಶಿವಸನ್ನಿಧೌ ॥ ೭೧ ॥
ದೇವಕಾರ್ಯೇಣ ಕೇನಾಪಿ ದೇವೋ ವೈ ಜ್ಞಾಪಿತಃ ಪ್ರಭುಃ ।
ಉಪಯೇಮೇ ಹರೋ ದೇವೀಂ ಉಮಾಂ ತ್ರಿಭುವನೇಶ್ವರೀಂ ॥ ೭೨ ॥

---

ವಾದಮುಖವುಳ್ಳುದೂ, ಮನೋಹರವಾದ ಹುಬ್ಬುಳ್ಳುದೂ ಆದ ಆ ದೇವಿಯ ರೂಪವನ್ನು ಕಂಡು ಭಯವನ್ನು ತ್ಯಜಿಸಿ ಸಂತೋಷಗೊಂಡು ಇಂತೆಂದನು.

೬೮. ಹಿಮವಂತನು ಹೇಳುತ್ತಾನೆ :—ಮಹೇಶ್ವರಿ ! ಪ್ರಸನ್ನಳಾದ ನಿನ್ನ ದರ್ಶನವಾದ್ದರಿಂದ ಈದಿನ ನನ್ನ ಜನ್ಮವು ಸಫಲವಾಯಿತು. ಈದಿನ ನನ್ನ ಕಾರ್ಯಗಳು ಸಫಲವಾದುವು. ಈಗ ನಾನೇನು ಮಾಡಬೇಕು ಅದನ್ನು ನನಗೆ ಹೇಳು.

೬೯. ಮಹೇಶ್ವರಿಯು ಹೇಳುತ್ತಾಳೆ :—ನೀನು ಯಾವಾಗಲೂ ಧ್ಯಾನ ತಪಸ್ಸುಗಳಿಂದ ಶಿವಪೂಜೆಯನ್ನು ಮಾಡು. ಯಾವುದಾದರೊಂದು ಕಾರಣದಿಂದ ನನ್ನನ್ನು ಅವನಿಗೆ ದಾನಮಾಡು.

೭೦. ನೀನು ನೋಡಿದಂತಿರುವ ಶಿವನನ್ನು ಧ್ಯಾನಮಾಡಬೇಕು. ಶಿವನೊಬ್ಬನೆ ಸಮಸ್ತಕ್ಕೂ ಆಧಾರನು.

೭೧. ಸಾರಸ್ವತನು ಹೇಳುತ್ತಾನೆ :—ಪೂಜ್ಯನಾದ ಶಿವನು ಹಿಮಾಲಯಕ್ಕೆ ಬಂದು ತಪಸ್ಸನ್ನಾಚರಿಸಿದನು. ಅವನಲ್ಲಿ ಉಮೆಯು ಅತಿಶಯ ಭಕ್ತಿಯನ್ನಿಟ್ಟಳು.

೭೨. ದೇವತೆಗಳಿಂದ ಯಾವುದೊ ಒಂದು ಕೆಲಸಕ್ಕಾಗಿ ಜ್ಞಾಪಿಸಲ್ಪಟ್ಟ ಹರನು ಮೂರು ಲೋಕಗಳಿಗೆ ಒಡೆಯಳಾದ ಪಾರ್ವತಿಯನ್ನು ಶಿವನು ಮದುವೆ ಮಾಡಿಕೊಂಡನು.

ಸಶಪ್ತಃ ಶಂಭುನಾ ಪೂರ್ವಂ ದಕ್ಷಃ ಪ್ರಾಚೇತಸೋ ನೃಪಃ ।
ವಿನಿಂದ್ಯ ಪೂರ್ವವೈರೇಣ ಗಂಗಾದ್ವಾರೇಽಯಜದ್ಧರಿಂ ॥ ೭೩ ॥
ದೇವಾಶ್ಚ ಯಜ್ಞಭಾಗಾರ್ಥಮಾಹೂತಾ ವಿಷ್ಣುನಾ ಸ್ವಯಂ ।
ಸಹೈವ ಮುನಿಭಿಸ್ಸರ್ವೈರಾಗತಾ ಮುನಿಪುಂಗವಾಃ ॥ ೭೪ ॥
ಇಷ್ಟ್ವಾ ದೇವಕುಲಂ ಕೃತ್ಸ್ನಂ ಶಂಕರೇಣ ವಿನಾಗತಂ ।
ದಧೀಚೋ ನಾಮ ವಿಪ್ರರ್ಷಿಃ ಪ್ರಾಚೇತಸಮಥಾಬ್ರವೀತ್ ॥ ೭೫ ॥

ದಧೀಚಿರುವಾಚ :—

ಬ್ರಹ್ಮಾದ್ಯಾಸ್ತು ಪಿಶಾಚಾಂತಾಃ ಯಸ್ಯಾಜ್ಞಾನುವಿಧಾಯಿಃ ।
ಸ ಹಿ ವಃ ಸಾಂಪ್ರತಂ ರುದ್ರೋ ವಿಧಿನಾ ಕಿಂ ನ ಪೂಜ್ಯತೇ ॥ ೭೬ ॥

ದಕ್ಷ ಉವಾಚ :—

ಸರ್ವೇಷ್ವೇವ ಹಿ ಯಜ್ಞೇಷು ನ ಭಾಗಃ ಪರಿಕಲ್ಪಿತಃ ।
ನ ಮಂತ್ರಾ ಭಾರ್ಯಯಾ ಸಾರ್ಧಂ ಶಂಕರಸ್ಯೇತಿ ನೇಷ್ಯತೇ ॥ ೭೭ ॥
ವಿಹಸ್ಯ ದಕ್ಷಂ ಕುಪಿತೋ ವಚಃ ಪ್ರಾಹ ಮಹಾಮುನಿಃ ।
ಶೃಣ್ವತಾಂ ಸರ್ವದೇವಾನಾಂ ಸರ್ವಜ್ಞಾನಮಯಃ ಸ್ವಯಂ ॥ ೭೮ ॥

---

೭೩. ಶಿವನು ಹಿಂದೆ ಶಪಿಸಿದ ಪ್ರಾಚೇತಸನಾದ ದಕ್ಷನು ಹಿಂದಿನ ದ್ವೇಷದಿಂದ ರುದ್ರನನ್ನು ನಿಂದಿಸಿ ಗಂಗಾದ್ವಾರದಲ್ಲಿ ವಿಷ್ಣುವನ್ನುದ್ದೇಶಿಸಿ ಯಾಗಮಾಡಿದನು.

೭೪. ವಿಷ್ಣುವು ಯಜ್ಞಭಾಗಕ್ಕಾಗಿ ತಾನೇ ದೇವತೆಗಳನ್ನು ಆಹ್ವಾನಮಾಡಿದನು. ಮುನಿವರ್ಯರೆಲ್ಲ ಋಷಿಗಳೊಡನೆ ಅಲ್ಲಿಗೆ ಬಂದರು.

೭೫. ದಧೀಚನೆಂಬ ಮುನಿಯು ಶಂಕರನನ್ನು ಬಿಟ್ಟು ಬಂದಿರುವ ಸಕಲ ದೇವತೆಗಳನ್ನು ಕಂಡು ಪ್ರಾಚೇತಸನನ್ನು ಕುರಿತು ಇಂತೆಂದನು.

೭೬. ದಧೀಚನು ಹೇಳುತ್ತಾನೆ :—ಬ್ರಹ್ಮನೇ ಆದಿಯಾಗಿ ಪಿಶಾಚಿಗಳೇ ಕೊನೆಯಾಗುಳ್ಳ ಸಮಸ್ತರೂ ಯಾವನಪ್ಪಣೆಯನ್ನು ನಡೆಯಿಸುವರೋ, ಅಂತಹ ರುದ್ರನನ್ನು ನೀವು ಈಗೇಕೆ ಪೂಜಿಸುವುದಿಲ್ಲ.

೭೭. ದಕ್ಷನು ಹೇಳುತ್ತಾನೆ :—ಸಕಲ ಯಜ್ಞಗಳಲ್ಲಿಯೂ ಶಂಕರನಿಗೆ ಭಾಗವು ಕಲ್ಪಿತವಾಗಿಲ್ಲ. ಶಂಕರನನ್ನು ಪತ್ನಿಯೊಡನೆ ಆಹ್ವಾನಮಾಡುವ ಮಂತ್ರವೂ ಇಲ್ಲ. ಆದ್ದರಿಂದ ಅವನನ್ನು ಕರೆಯಲಿಲ್ಲ.

೭೮. ಸಕಲ ಜ್ಞಾನ ಸ್ವರೂಪನಾದ ದಧೀಚನು ಸಕಲ ದೇವತೆಗಳು ಕೇಳುತ್ತಿರುವಂತೆಯೆ ಕೋಪಗೊಂಡು ನಕ್ಕು ಇಂತೆಂದನು.

ಯತಃ ಪ್ರವೃತ್ತಿಃ ವಿಶ್ವಾತ್ಮಾ ಯಶ್ಚಾಸೌ ಭುವನೇಶ್ವರಃ ।
ನ ತ್ವಂ ಪೂಜಯಸೇ ರುದ್ರಂ ದೇವೈಸ್ಸಂಪೂಜ್ಯತೇ ಹರಃ ॥ ೭೯ ॥

ದಕ್ಷ ಉವಾಚ :—

ಅಸ್ಥಿಮಾಲಾಧರೋ ನಗ್ನಃ ಸಂಹರ್ತಾ ತಾಮಸೋ ಹರಃ ।
ವಿಷಕಂಠಃ ಶೂಲಹಸ್ತಃ ಕಪಾಲೀ ನಾಗವೇಷ್ಟಿತಃ ॥ ೮೦ ॥
ಈಶ್ವರೋ ಹಿ ಜಗತ್ಸ್ರಷ್ಟಾ ಪ್ರಭುರ್ಯೋಽಸೌ ಸನಾತನಃ ।
ಸತ್ವಾತ್ಮಕೋಽಸೌ ಭಗವಾನ್ ಇಜ್ಯತೇ ಸರ್ವಕರ್ಮಸು ॥ ೮೧ ॥

ದಧೀಚಿರುವಾಚ :—

ಕಿಂ ತ್ವಯಾ ಭಗವಾನೇಷಃ ಸಹಸ್ರಾಂಶುರ್ನ ದೃಶ್ಯತೇ ।
ಸರ್ವಲೋಕೈಕಸಂಹರ್ತಾ ಕಾಲಾತ್ಮಾ ಪರಮೇಶ್ವರಃ ॥ ೮೨ ॥
ಏಷ ರುದ್ರೋ ಮಹಾದೇವಃ ಕಪರ್ದೀ ಚಾಗ್ರಣೀರ್ಹರಃ ।
ಆದಿತ್ಯೋ ಭಗವಾನ್ಸೂರ್ಯೋ ನೀಲಗ್ರೀವೋ ವಿಲೋಹಿತಃ ॥ ೮೩ ॥

ದಕ್ಷ ಉವಾಚ :—

ಯ ಏತೇ ದ್ವಾದಶಾದಿತ್ಯಾಃ ಆಹತಾ ಯಜ್ಞಭಾಗಿನಃ ।
ಸರ್ವೇ ಸೂರ್ಯಾ ಇತಿ ಜ್ಞೇಯಾಃ ನ ಹ್ಯನ್ಯೋ ವಿದ್ಯತೇ ರವಿಃ ॥ ೮೪ ॥

---

೭೯. ಪ್ರಪಂಚವನ್ನು ಸೃಷ್ಟಿಸುವವನೂ, ಪ್ರಪಂಚರೂಪನೂ, ಭುವನಗಳಿಗೆ ಒಡೆಯನೂ, ದೇವತೆಗಳಿಂದ ಪೂಜಿಸಲ್ಪಡುವವನೂ ಆದ ಶಂಕರನನ್ನು ನೀನು ಏಕೆ ಪೂಜಿಸುದಿಲ್ಲ?.

೮೦. ದಕ್ಷನು ಹೇಳುತ್ತಾನೆ:—ಅಸ್ಥಿಮಾಲೆಗಳನ್ನು ಧರಿಸಿದವನೂ, ದಿಗಂಬರನೂ, ತಮೋಗುಣಪ್ರಚುರನೂ, ವಿಷಕಂಠನೂ, ತ್ರಿಶೂಲಹಸ್ತನೂ, ಕಪಾಲಧರನೂ, ನಾಗಗಳಿಂದ ಸುತ್ತಲ್ಪಟ್ಟವನೂ ಆದ ಹರನು ಜಗತ್ತನ್ನು ನಾಶಗೊಳಿಸುವವನು.

೮೧. ಜಗತ್ತುಗಳನ್ನು ಸೃಷ್ಟಿಸುವವನೂ, ಅನಾದಿಯೂ, ಸತ್ವಸ್ವರೂಪನೂ, ಆದ ವಿಷ್ಣುವನ್ನು ಎಲ್ಲ ಕಾರ್ಯಗಳಲ್ಲಿಯೂ ಪೂಜಿಸುವರು.

೮೨. ದಧೀಚಿಯು ಹೇಳುತ್ತಾನೆ:—ಎಲೈ ದಕ್ಷನೆ! ನೀನು ಸಕಲ ಲೋಕ ಸಂಹಾರಕನೂ, ಕಾಲಸ್ವರೂಪನೂ, ಪರಮೇಶ್ವರನೂ ಆದ ಈ ಸೂರ್ಯನನ್ನು ನೋಡುವುದಿಲ್ಲವೇ ?.

೮೩. ಈ ಸೂರ್ಯನೆ ಜಟಾಧಾರಿಯೂ, ದೇವತಾಗ್ರೇಸರನೂ, ನೀಲಕಂಠನೂ, ಆದ ಮಹಾದೇವನಾಗಿರುವನು.

೮೪. ದಕ್ಷನು ಹೇಳುತ್ತಾನೆ;—ಯಜ್ಞಭಾಗಿಗಳಾದ ಈ ದ್ವಾದಶಾದಿತ್ಯರು ಇಲ್ಲಿಗೆ ಬಂದಿದ್ದಾರೆ. ಇವರನ್ನೆ ಸೂರ್ಯರೆಂದು ತಿಳಿ; ಬೇರೆ ಸೂರ್ಯರಿಲ್ಲ.

ಏವಮುಕ್ತೇ ತು ಮುನಯಸ್ಸಮಾಯಾತು ದಿದೃಕ್ಷವಃ ।
ಬಾಢಮಿತ್ಯಬ್ರುವನ್ದಕ್ಷಂ ತಸ್ಯ ಸಾಹಾಯ್ಯಕಾರಿಣಃ ॥ ೮೫ ॥
ತಪಸಾವಿಷ್ಟಮನಸೋ ನ ಪಶ್ಯಂತಿ ವೃಷಧ್ವಜಂ ।
ಸಹಸ್ರಶೋಥ ಶತಶೋ ಬಹುಶೋಥ ಯ ಏವ ಹಿ ॥ ೮೬ ॥
ದೇವಾಶ್ಚ ಸರ್ವೇ ಭಾಗಾರ್ಥಮಾಗತಾ ವಾಸವಾದಯಃ ।
ನಾಪಶ್ಯನ್ದೇವಮೀಶಾನಂ ಋತೇ ನಾರಾಯಣಂ ಹರಿಂ ॥ ೮೭ ॥
ರುದ್ರಂ ಕ್ರೋಧಪರಂ ದೃಷ್ಟ್ವಾ ಬ್ರಹ್ಮಾ ಬ್ರಹ್ಮಾಸನಾದ್ಯಯೌ ।
ಅಂತರ್ಹಿತೇ ಭಗವತಿ ದಕ್ಷೋ ನಾರಾಯಣಂ ಹರಿಂ ॥ ೮೮ ॥
ರಕ್ಷಕಂ ಜಗತಾಂ ದೇವಂ ಜಗಾಮ ಶರಣಂ ಸ್ವಯಂ ।
ಪ್ರವರ್ತಯಾಮಾಸ ಚ ತಂ ಯಜ್ಞಂ ದಕ್ಷೋಥ ನಿರ್ಭಯಃ ॥ ೮೯ ॥
ರಕ್ಷಕೋ ಭಗವಾನ್ವಿಷ್ಣುಃ ಶರಣಾಗತರಕ್ಷಕಃ ।
ಪುನಃ ಪ್ರಾಹಾಧ್ವರೇ ದಕ್ಷಂ ದಧೀಚೊ ಭಗವಾನೃಪ ॥ ೯೦ ॥
ನಿರ್ಭಯಃ ಶೃಣು ದಕ್ಷ ತ್ವಂ ಯಜ್ಞಭಂಗೋ ಭವಿಷ್ಯತಿ ।
ಅಪೂಜ್ಯಪೂಜನಾದ್ದಕ್ಷ ಪೂಜ್ಯಸ್ಯ ಚ ವಿಸರ್ಜನಾತ್ ॥ ೯೧ ॥

---

೮೫. ದಕ್ಷನು ಹೀಗೆನ್ನಲು ಅವನ ಸಹಾಯಕ್ಕಾಗಿಯೂ, ನೋಡುವುದಕ್ಕಾಗಿಯೂ ಬಂದ ಮುನಿಗಳು ಅದು ನಿಜವೆಂದರು.

೮೬. ತಪೋಮಗ್ನರಾದ ಆ ಸಾವಿರಾರು ಮಂದಿ ಮುನಿಗಳು ಮಹೇಶ್ವರನನ್ನು ನೋಡಲಿಲ್ಲ.

೮೭. ಯಜ್ಞಭಾಗಕ್ಕಾಗಿ ಬಂದ ಇಂದ್ರಾದಿ ದೇವತೆಗಳೂ ನಾರಾಯಣನನ್ನು ಬಿಟ್ಟು ಬೇರೆ ಮಹೇಶ್ವರನನ್ನು ಕಾಣಲಿಲ್ಲ.

೮೮–೯೩. ಬ್ರಹ್ಮನು, ಮಹಾದೇವನು ಕುಪಿತನಾದುದನ್ನು ಕಂಡು ಬ್ರಹ್ಮಾಸನವನ್ನು ಬಿಟ್ಟು ಸತ್ಯಲೋಕಕ್ಕೆ ಹೊರಟುಹೋದನು. ಬ್ರಹ್ಮನು ಅಡಗಿ ಹೋಗಲು ದಕ್ಷನು ಜಗದ್ರಕ್ಷಕನಾದ ನಾರಾಯಣನನ್ನು ಮರೆಹೊಕ್ಕನು. ಬಳಿಕ ದಕ್ಷನು ನಿರ್ಭಯನಾಗಿ ಆ ಯಜ್ಞವನ್ನು ಮಾಡತೊಡಗಿದನು. ಶರಣಾಗತ ರಕ್ಷಕನಾದ ವಿಷ್ಣುವು ರಕ್ಷಕನಾದನು. ದೊರೆಯೆ! ಮರಳಿ ದಧೀಚನು ಭಯವಿಲ್ಲದವನಾಗಿ "ದಕ್ಷ! ಕೇಳು ನಿನ್ನ ಯಜ್ಞವು ಹಾಳಾಗುವುದು. ಪ್ರಪಂಚದಲ್ಲಿ ಮನುಷ್ಯನು ಅಪೂಜ್ಯನನ್ನು ಪೂಜಿಸುವುದರಿಂದಲೂ, ಪೂಜ್ಯನನ್ನು ಪೂಜಿಸದಿರುವುದರಿಂದಲೂ

ನರಃ ಪಾಪಮವಾಪ್ನೋತಿ ಮಹದ್ವೈ ನಾತ್ರ ಸಂಶಯಃ ।
ಅಸತಾಂ ಪ್ರಗ್ರಹೋ ಯತ್ರ ಸತಾಂ ಚೈವ ವಿಮಾನತಾ ॥ ೯೨ ॥
ದಂಡೋ ದೇವಕೃತಸ್ತತ್ರ ಸದ್ಯಃ ಪತತಿ ದಾರುಣಃ ।
ಏವಮುಕ್ತ್ವಾ ಸ ವಿಪ್ರರ್ಷಿಃ ಶಶಾಪೇಶ್ವರವಿದ್ವಿಷಃ ॥ ೯೩ ॥
ಯಸ್ಮಾದ್ಬಹಿಷ್ಕೃತೋ ದೇವೋ ಭವದ್ಭಿಃ ಪರಮೇಶ್ವರಃ ।
ಭವಿಷ್ಯಥ್ವತ್ರಯೀಬಾಹ್ಯಾಃ ಸರ್ವೇಪೀಶ್ವರವಿದ್ವಿಷಃ ॥ ೯೪ ॥
ಮಿಥ್ಯಾರೀತಿಸಮಾಚಾರಾ ಮಿಥ್ಯಾಜ್ಞಾನಪ್ರಭಾಷಿಣಃ ।
ಪ್ರಾಪ್ತೇ ಕಲಿಯುಗೆ ಘೋರೇ ಕಲಿಜೈಃ ಕಿಲ ಪೀಡಿತಾಃ ॥ ೯೫ ॥
ಕೃತ್ವಾ ತಪೋಬಲಂ ಘೋರಂ ಗಚ್ಛಥ್ವಂ ನರಕಂ ಪುನಃ ।
ಭವಿಷ್ಯತಿ ಹೃಷೀಕೇಶಃ ಸ್ವಾಮೀ ವೋಪಿ ಪರಾಙ್ಮುಖಃ ॥ ೯೬ ॥

ಸಾರಸ್ವತ ಉವಾಚ :—

ಏವಮುಕ್ತ್ವಾಸ ಬ್ರಹ್ಮರ್ಷಿಃ ವಿರರಾಮ ತಪೋನಿಧಿಃ ।
ಜಗಾಮ ಮನಸಾ ರುದ್ರಂ ಅಶೇಷಾಧ್ವರನಾಶನಂ ॥ ೯೭ ॥
ಏತಸ್ಮಿನ್ನಂತರೇ ದೇವೀ ಮಹಾದೇವಂ ಮಹೇಶ್ವರಂ ।
ಗತ್ವಾ ವಿಜ್ಞಾಪಯಾಮಾಸ ಜ್ಞಾತ್ವಾ ದಕ್ಷಮಖಂ ಶಿವಾ ॥ ೯೮ ॥

---

ಮಹಾಪಾಪವನ್ನು ಹೊಂದುವನು. ಸಂದೇಹವಿಲ್ಲ. ಎಲ್ಲಿ ದುಷ್ಟರ ಸತ್ಕಾರವೂ ಸಜ್ಜನರ ಅವಮಾನವೂ ನಡೆಯುವುದೊ, ಅಲ್ಲಿ ದೈವಾಯುತ್ತವಾದ ಕಠಿನ ಶಿಕ್ಷೆಯುಂಟಾಗುವುದು". ಎಂದು ದಧೀಚನು ಹೇಳಿ ಈಶ್ವರ ದ್ವೇಷಿಗಳನ್ನು ಹೀಗೆ ಶಪಿಸಿದನು.

೯೪–೯೫. "ನೀವು ಪರಮೇಶ್ವರನನ್ನು ಬಹಿಷ್ಕರಿಸಿ ಈಶ್ವರ ದ್ವೇಷಿಗಳಾದ್ದರಿಂದ ವೇದಬಾಹ್ಯರೂ, ಮಿಥ್ಯಾರೀತಿಯ ನಡತೆಯುಳ್ಳವರೂ, ಮಿಥ್ಯಾಜ್ಞಾನ ಪ್ರಕಾಶಕರೂ, ಘೋರಕಲಿಯುಗವು ಬರಲು ಕಲಿದೋಷಗಳಿಂದ ಪೀಡಿತರೂ ಆಗುವಿರಿ.

೯೬. ನೀವು ಘೋರತಪಸ್ಸಿನ ಬಲವನ್ನು ಪ್ರಯೋಗಿಸಿ ನರಕಕ್ಕೆ ತೆರಳಿರಿ, ನಿಮಗೆ ಸ್ವಾಮಿಯಾದ ನಾರಾಯಣನೂ ಅನಭಿಮುಖನಾಗುವನು".

೯೭. ಸಾರಸ್ವತನು ಹೇಳುತ್ತಾನೆ:—ತಪೋನಿಧಿಯಾದ ಆ ಬ್ರಹ್ಮರ್ಷಿಯು ಹೀಗೆ ಹೇಳಿ ಸಮಸ್ತಯಾಗ ತಾರಕನಾದ ಶಿವನನ್ನು ಧ್ಯಾನಿಸಿದನು.

೯೮. ಈ ಸಮಯದಲ್ಲಿ ಮಹಾದೇವಿಯು ದಕ್ಷಯಾಗದ ವಾರ್ತೆಯನ್ನು ಕೇಳಿ ತಿಳಿದು ಮಹೇಶ್ವರನೆಡೆಗೆ ಹೋಗಿ ಹೀಗೆ ವಿಜ್ಞಾಪಿಸಿದಳು.

ದೇವ್ಯುವಾಚ :—
ದಕ್ಷೋ ಯಜ್ಞೇನ ಯಜತೇ ಪಿತಾ ಮೇ ಪೂರ್ವಜನ್ಮನಿ ।
ತೇನ ತ್ವಂ ದೂಷಿತಃ ಪೂರ್ವಂ ಅಹಂ ಚಾತೀವ ದುಃಖಿತಾ ।
ವಿನಾಶಯಸ್ವ ತಂ ಯಜ್ಞಂ ವರಮೇನಂ ವೃಣೋಮ್ಯಹಂ ॥ ೯೯ ॥
ಸಾರಸ್ವತ ಉವಾಚ :—
ಏವಂ ವಿಜ್ಞಾಪಿತೋ ದೇವ್ಯಾ ದೇವದೇವೋ ಮಹೇಶ್ವರಃ ।
ಸಸರ್ಜ ಸಹಸಾ ರುದ್ರಂ ಧಕ್ಷಯಜ್ಞಜಿಘಾಂಸಯಾ ॥ ೧೦೦ ॥
ಸಹಸ್ರಶಿರಸಂ ಕ್ರೂರಂ ಸಹಸ್ರಾಕ್ಷಂ ಮಹಾಭುಜಂ ।
ಸಹಸ್ರಪಾಣಿಂ ದುರ್ಧರ್ಷಂ ಯುಗಾಂತಾನಲಸನ್ನಿಭಂ ॥ ೧೦೧ ॥
ದಂಷ್ಟ್ರಾಕರಾಲಂ ದುಷ್ಪ್ರೇಕ್ಷ್ಯಂ ಶಂಖಚಕ್ರಧರಂ ಪ್ರಭುಂ ।
ದಂಡಹಸ್ತಂ ಮಹಾನಾದಂ ಶಾರ್ಙ್ಗಿಣಂ ಭೂತಿಭೂಷಣಂ ॥ ೧೦೨ ॥
ವೀರಭದ್ರ ಇತಿ ಖ್ಯಾತಂ ದೇವದೇಸಮನ್ವಿತಂ ।
ಸ ಜಾತಮಾತ್ರೋ ದೇವೇಶಮುಪತಸ್ಥೇ ಕೃತಾಂಜಲಿಃ ॥ ೧೦೩ ॥
ತಮಾಹ ದಕ್ಷಸ್ಯಮೋಽಮುಖಂ ವಿನಾಶಯ ಶಮಸ್ತು ತೇ ।
ವಿನಿಂದ್ಯ ಮಾಂ ಸ ಯಜತೇ ಗಂಗಾದ್ವಾರೇ ಗಣೇಶ್ವರ ॥ ೧೦೪ ॥

---

೯೯. ದೇವಿಯು ಹೇಳುತ್ತಾಳೆ:—ನನ್ನ ಹಿಂದಿನ ಜನ್ಮದ ತಂದೆಯಾದ ದಕ್ಷನು ಯಾಗಮಾಡುತ್ತಿದ್ದಾನೆ. ಹಿಂದೆ ಅವನು ನಿನ್ನನ್ನು ಬಹುವಾಗಿ ನಿಂದಿಸಿರುವನು. ಅದರಿಂದ ನಾನು ಬಹಳ ದುಃಖಗೊಂಡಿದ್ದೇನೆ. ಅದ್ದರಿಂದ ಅವನ ಯಜ್ಞವನ್ನು ಹಾಳುಮಾಡು. ನಾನು ಇದನ್ನು ವರವನ್ನಾಗಿ ಕೇಳಿಕೊಳ್ಳುವೆನು.

೧೦೦–೧೦೩. ಸಾರಸ್ವತನು ಹೇಳುತ್ತಾನೆ :—ದೇವಿಯು ಹೀಗೆ ಬಿನ್ನೈಸಲು ಮಹೇಶ್ವರನು ಕೂಡಲೆ ದಕ್ಷಯಜ್ಞವನ್ನು ಹಾಳುಮಾಡಲಿಚ್ಛೆಯಿಂದ ಸಾವಿರ ತಲೆಯುಳ್ಳವನೂ, ಸಾವಿರ ತೋಳುಗಳುಳ್ಳವನೂ, ಸಾವಿರ ಕೈಗಳುಳ್ಳವನೂ, ತಿರಸ್ಕರಿಸಲಶಕ್ಯನೂ, ಪ್ರಳಯಕಾಲದ ಅಗ್ನಿಗೆ ಸಮಾನನೂ, ಕರಾಳವಾದ ಹಲ್ಲುಗಳುಳ್ಳವನೂ, ನೋಡಲಶಕ್ಯನೂ, ಶಂಖ ಚಕ್ರ ದಂಡಗಳನ್ನು ಹಿಡಿದವನೂ, ಶಾರ್ಙ್ಗವೆಂಬ ಬಿಲ್ಲುಳ್ಳವನೂ, ಭಸ್ಮಲಿಪ್ತನೂ, ದೇವತೆಗಳಿಂದ ಕೂಡಿರುವವನೂ ಆದ ವೀರಭದ್ರನನ್ನು ಸೃಷ್ಟಿಸಿದನು. ಅವನು ಹುಟ್ಟಿದ ಕೂಡಲೇ ಕೈಮುಗಿದುಕೊಂಡು ಮಹೇಶ್ವರನ ಬಳಿಗೆ ಬಂದನು.

೧೦೪. ಈಶ್ವರನು ಅವನನ್ನು ಕುರಿತು, "ಗಣೇಶ್ವರ! ನೀನು ದಕ್ಷನ ಯಾಗವನ್ನು ನಾಶಗೊಳಿಸು. ನಿನಗೆ ಶಾಂತಿಯುಂಟಾಗಲಿ. ಆ ದಕ್ಷನು ನನ್ನನ್ನು ನಿಂದಿಸಿ ಗಂಗಾದ್ವಾರದಲ್ಲಿ ಯಾಗಮಾಡುತ್ತಿರುವನು" ಎಂದನು.

ತತೋ ಬಂಧಪ್ರಮುಕ್ತೇನ ಸಿಂಹೇನೇವ ಚ ಲೀಲಯಾ ।
ವೀರಭದ್ರೇಣ ದಕ್ಷಸ್ಯ ನಾಶಾರ್ಥಂ ರೋಮಚೋದ್ಧೃತಂ ॥ ೧೦೫ ॥
ರೋಮ್ಣಾ ಸಹಸ್ರಶೋ ರುದ್ರಾಃ ನಿಸ್ಸೃಷ್ಟಾಸ್ತೇನ ಧೀಮತಾ ।
ರೋಮಜಾ ಇತಿ ವಿಖ್ಯಾತಾಸ್ತತ್ರ ಸಾಹಾಯ್ಯಕಾರಿಣಃ ।
ಶೂಲಶಕ್ತಿಗದಾಹಸ್ತಾ ದಂಡೋಪಲಕರಾಸ್ತಥಾ ।
ಕಾಲಾಗ್ನಿರುದ್ರಸಂಕಾಶಾ ನಾದಯಂತೋ ದಿಶೋ ದಶ ॥ ೧೦೭ ॥
ಸರ್ವೇ ವೃಷಸಮಾರೂಢಾಃ ಸಭಾರ್ಯಾಶ್ಚಾತಿಭೀಷಣಾಃ ।
ಸಮಾಶ್ರಿತ್ಯ ಗಣಶ್ರೇಷ್ಠಂ ಯಯುರ್ದಕ್ಷಮಖಂ ಪ್ರ ॥ ೧೦೮ ॥
ದೇವಾಂಗನಾ ಸಹಸ್ರಾಢ್ಯಂ ಮಪ್ಸರೋಗಣ ನಾದಿತಂ ।
ವೀಣಾವೇಣು ನಿನಾದಾಢ್ಯಂ ವೇದವಾದಾಭಿನಾದಿತಂ ॥ ೧೦೯ ॥
ದೃಷ್ಟ್ವಾ ದಕ್ಷಂ ಸಮಾಸೀನಂ ದೇವೈರ್ಬ್ರಹರ್ಷಿಭಿಸ್ಸಹ ।
ಉವಾಚ ಸವೃಷಾರೂಢೋ ದಕ್ಷಂ ವೀರಃ ಸ್ಮಯನ್ನಿವ ॥ ೧೧೦ ॥
ವಯಂ ಹ್ಯಚತುರಾಸ್ಸರ್ವೇ ಶರ್ವಸ್ಯಾಮಿತತೇಜಸಃ ।
ಭಾಗಾರ್ಥಲಿಪ್ಸಯಾ ಪ್ರಾಪ್ತಾ ಭಾಗಾನ್ಯಚ್ಛ ತ್ವಮೀಪ್ಸಿತಾನ್ ॥ ೧೧೧ ॥

---

೧೦೫. ಬಳಿಕ ದಕ್ಷನ ನಾಶಕ್ಕಾಗಿ ವೀರಭದ್ರನ ದೇಹದ ಕೂದಲುಗಳು ಪಂಜರದಿಂದ ಬಿಡಲ್ಪಟ್ಟ ಸಿಂಹದಂತೆ ಅಲ್ಲಾಡಿದುವು.

೧೦೬–೧೦೯. ಅವನು ರೋಮಗಳಿಂದ ಸಾವಿರಾರು ಮಂದಿ ರುದ್ರರನ್ನು ಸೃಷ್ಟಿಸಿದನು. ರೋಮಜರೆಂದು ಪ್ರಖ್ಯಾತರಾದ ಅವರು ವೀರಭದ್ರನಿಗೆ ಸಹಾಯಮಾಡುವವರೂ, ಶೂಲ, ಶಕ್ತಿ, ಗದೆ, ದೊಣ್ಣೆ, ಕಲ್ಲು ಇವುಗಳನ್ನು ಹಿಡಿದವರೂ, ಪ್ರಳಯ ಕಾಲದ ರುದ್ರನಂತಿರುವವರೂ, ಹತ್ತು ದಿಕ್ಕುಗಳಲ್ಲಿ ಗರ್ಜಿಸುವವರೂ, ಎಲ್ಲರೂ ವೃಷಭಾರೂಢರೂ, ಪತ್ನೀಸಹಿತರೂ, ಅತ್ಯಂತ ಭಯಂಕರರೂ ಆಗಿ ವೀರಭದ್ರನನ್ನು ಹಿಂಬಾಲಿಸುತ್ತ ಅನೇಕ ಮಂದಿ ದೇವತಾ ಸ್ತ್ರೀಯರುಳ್ಳುದೂ, ಅಪ್ಸರರ ಗಾನವುಳ್ಳುದೂ, ವೀಣೆ, ಕೊಳಲು ಇವುಗಳ ನಾದವುಳ್ಳುದೂ, ವೇದಘೋಷವುಳ್ಳುದೂ ಆದ ದಕ್ಷಯಜ್ಞವನ್ನು ಕುರಿತು ತೆರಳಿದರು.

೧೧೦. ವೃಷಭಾರೂಢನಾದ ಆ ವೀರಭದ್ರನು ದೇವಬ್ರಹ್ಮರ್ಷಿಗಳೊಡನೆ ಕುಳಿತಿರುವ ದಕ್ಷನನ್ನು ನೋಡಿ ನಗುವಂತೆ ನಟಿಸುತ್ತ ಹೀಗೆಂದನು.

೧೧೧. ಅಕುಶಲರಾದ ನಾವೆಲ್ಲ ಶಿವನ ಭಾಗವನ್ನು ಪಡೆಯಲು ಬಂದಿದ್ದೇವೆ. ನೀನು ನಮಗಿಷ್ಟವಾದ ಭಾಗಗಳನ್ನು ಕೊಡು.

ಭಾಗೋ ಭವದ್ಭ್ಯೋ ದೇಯಸ್ತು ನಾಸ್ಮಭ್ಯಮಿತಿ ಕಥ್ಯತಾಂ ।
ತತೋ ವಯಂ ವಿನಿಶ್ಚಿತ್ಯ ಕರಿಷ್ಯಾಮೋ ಯಥೋಚಿತಂ ॥ ೧೧೨ ॥
ಏವಮುಕ್ತ್ವಾ ಗಣೇಶೇನ ಪ್ರಜಾಪತಿ ಪುರಸ್ಸರಾಃ ।

ದೇವಾ ಊಚುಃ :—

ಪ್ರಮಾಣಂ ನೋ ವಿಜಾನೀಥ ಭಾಗಂ ಮಂತ್ರಾ ಇತಿ ಧ್ರುವಂ ॥ ೧೧೩ ॥

ಮಂತ್ರಾ ಊಚುಃ :—

ಸುರಾ ಯೂಯಂ ತಮೋ ಭೂತಾಸ್ತಮೋಪಹತಾಚೇತಸಃ ।
ಯೇ ನಾಧ್ವರಸ್ಯ ರಾಜಾನಂ ಪೂಜಯೇಯುರ್ಮಹೇಶ್ವರಂ ॥ ೧೧೪ ॥
ಈಶ್ವರ ಸ್ಸರ್ವಭೂತಾನಾಂ ಸರ್ವದೇವತನುರ್ಹರಃ ।

ಗಣ ಉವಾಚ :—

ಪೂಜ್ಯತೇ ಸರ್ವಯಜ್ಞೇಷು ಕಥಂ ದಕ್ಷೋ ನ ಪೂಜಯೇತ್ ॥ ೧೧೫ ॥
ಮಂತ್ರಾಃ ಪ್ರಮಾಣಂ ಸ ಕೃತಾಃ ಯುಷ್ಮಾಭಿರ್ಬಲಗರ್ವಿತೈಃ ।
ಯಸ್ಮಾದಸಹ್ಯಂ ತಸ್ಮಾನ್ನೋ ನಾಶಯಾಮ್ಯದ್ಯ ಗರ್ವಿತಂ ॥ ೧೧೬ ॥
ಇತ್ಯುಕ್ತ್ವಾ ಯಜ್ಞ ಶಾಲಾಂ ತಾಂ ದೇವೋಹಸ್ಗಣಪುಂಗವಃ ।
ಗಣೇಶ್ವರಾಶ್ಚ ಸಂಕ್ರುದ್ಧಾಃ ಯೂಪಾನುತ್ಪಾಟ್ಯಚಿಕ್ಷಿಪುಃ ॥ ೧೧೭ ॥

---

೧೧೨. ನೀನು ನಮಗೆ ಹವಿರ್ಭಾಗವನ್ನು ಕೊಡುವುದಿಲ್ಲವೆಂದರೆ ಆಗ ನಾವೆಲ್ಲ ನಿಶ್ಚಯಿಸಿಕೊಂಡು ಯಥೋಚಿತವಾದ ಕಾರ್ಯ ವನ್ನು ಮಾಡುವೆವು.

೧೧೩. ವೀರಭದ್ರನೇ ಮೊದಲಾದವರನ್ನು ಕುರಿತು ಹೀಗೆ ಹೇಳಿದನು.

೧೧೪. ದೇವತೆಗಳು ಹೇಳುತ್ತಾರೆ:—ಯಜ್ಞ ಭಾಗದ ವಿಷಯದಲ್ಲಿ ನಮಗೆ ಮಂತ್ರಗಳೇ ಪ್ರಮಾಣಗಳೆಂದು ತಿಳಿಯಿರಿ.

೧೧೫. ಮಂತ್ರಗಳು ಹೇಳುತ್ತವೆ:—ದೇವತೆಗಳೆ! ನೀವು ಯಜ್ಞಗಳಿಗೊಡೆಯನಾದ ಮಹೇಶ್ವರನನ್ನು ಪೂಜಿಸದಿರುವುದರಿಂದ ನಷ್ಟವಾದ ಬುದ್ಧಿಯುಳ್ಳವರಾಗಿರುವಿರಿ.

೧೧೬. ಗಣನು ಹೇಳುತ್ತಾನೆ ವೀರಭದ್ರನು ಹೇಳುತ್ತಾನೆ :—ಸರ್ವದೇವತೆಗಳಿಗೂ ದೇಹವಾಗಿರುವ ಹರನು ಸಕಲ ಪ್ರಾಣಿಗಳಿಗೆ ಒಡೆಯನು. ಅವನನ್ನು ಸಕಲ ಯಜ್ಞಗಳಲ್ಲಿ ಜ್ಞಾನಿಗಳು ಪೂಜಿಸುತ್ತಾರೆ. ದಕ್ಷನು ಹೇಗೆ ಪೂಜಿಸುವುದಿಲ್ಲ ?

೧೧೭. ಬಲದಿಂದ ಅಹಂಕಾರಗೊಂಡ ನೀನು ಮಂತ್ರಗಳನ್ನು ಪ್ರಮಾಣವಾಗಿ ಅಂಗೀಕರಿಸಲಿಲ್ಲ. ಆದ್ದರಿಂದ ನಾವು ನಿನ್ನ ಕಾರ್ಯಗಳನ್ನು ಸಹಿಸದೆ ಅಹಂಕಾರಗೊಂಡ ನಿನ್ನನ್ನು ಈಗ ಕೊಲ್ಲುವೆವು.

6

ಪ್ರಸ್ತೋತಾರಂ ಸಹೋತಾರಂ ಅಧ್ವರ್ಯುಂ ಚ ಗಣೇಶ್ವರಃ ।
ಗೃಹೀತ್ವಾ ಭೀಷಣಾಸ್ಸರ್ವೇ ಗಂಗಾಸ್ರೋತಸಿ ಚಿಕ್ಷಿಪುಃ ॥ ೧೧೮ ॥
ವೀರಭದ್ರೋಽಪಿ ದೀಪ್ತಾತ್ಮಾ ವಜ್ರಯುಕ್ತಂ ಕರಂಹರೇಃ ।
ವ್ಯಷ್ಟಂಭಯಾದದೀನಾತ್ಮಾ ತಥಾನ್ಯೇಷಾಂ ದಿವೌಕಸಾಂ ॥ ೧೧೯ ॥
ಭವನೇತ್ರೇ ತಥೋತ್ಪಾಟ್ಯ ಕರಾಗ್ರೇಣೈವ ಲೀಲಯಾ ।
ನಿಹತ್ಯ ಮುಷ್ಟಿನಾ ದಂಡೈಃ ಸಪ್ತಾಶ್ವಂಚ ನ್ಯಪಾತಯತ್ ॥ ೧೨೦ ॥
ತಥಾ ಚಂದ್ರಮಸಂ ದೇವಂ ಪಾದಾಂಗುಷ್ಠೇನ ಲೀಲಯಾ ।
ಧರ್ಷಯಾಮಾಸ ಬಲವಾನ್ ಸ್ಮಯಮಾನೋ ಗಣೇಶ್ವರಃ ॥ ೧೨೧ ॥
ವಹ್ನೇರ್ಹಸ್ತದ್ವಯಂ ಛಿತ್ವಾ ಜಿಹ್ವಾಮುತ್ಪಾಟ್ಯಲೀಲಯಾ ।
ಜಘಾನ ಮೂರ್ಧ್ನಿ ಪಾದೇನ ಮುನೀನಪಿ ಮುನೀಶ್ವರಾನ್ ॥ ೧೨೨ ॥
ತಥಾ ವಿಷ್ಣುಂ ಸಗರುಡಂ ಸಮಾಯಾತಂ ಮಹಾಬಲಃ ।
ವಿವ್ಯಾಧ ನಿಶಿತೈರ್ಬಾಣೈಃ ಸ್ತಂಭಯಿತ್ವಾ ಸುದರ್ಶನಂ ॥ ೧೨೩ ॥
ತತಸ್ಸಹಸ್ರಶೋ ಭದ್ರಃ ಸಸರ್ಜ ಗರುಡಾನ್ ಬಹೂನ್ ।
ವೈನತೇಯಾದಭ್ಯಧಿಕಾನ್ ಗರುಡಂ ತೇ ಪ್ರದುದ್ರುವುಃ ॥ ೧೨೪ ॥

---

೧೧೮. ಗಣೇಶ್ವರನಾದ ವೀರಭದ್ರನು ಆ ಯಜ್ಞಶಾಲೆಯನ್ನು ಹಾಳುಮಾಡಿದನು. ಉಳಿದ ಗಣಗಳೂ ಕೋಪಗೊಂಡು ಯೂಪಸ್ತಂಭಗಳನ್ನು ಕಿತ್ತು ಎಸೆದುವು.

೧೧೯. ಪ್ರಸ್ತೋತೃ, ಹೋತೃ, ಅಧ್ವರ್ಯುಗಳನ್ನು ಹಿಡಿದುಕೊಂಡು ಪ್ರವಾಹದಲ್ಲಿ ಎಸೆದುವು.

೧೨೦. ಜಾಜ್ವಲ್ಯಮಾನವಾದ ವೀರಭದ್ರನೂ ಇಂದ್ರನ ವಜ್ರಾಯುಧವುಳ್ಳ ಕೈಯನ್ನೂ, ಇತರ ದೇವತಗಳ ಕೈಗಳನ್ನೂ ತಡೆದನು.

೧೨೧. ಆಯಾಸವಿಲ್ಲದೆ ಸೂರ್ಯನ ಕಣ್ಣುಗಳನ್ನು ಕೈಯಿಂದಲೇ ಕಿತ್ತು ಮುಷ್ಟಿಯಿಂದ ಗುದ್ದಿ ದೊಣ್ಣೆಗಳಿಂದ ಅವನ ಕುದುರೆಯನ್ನು ಕೆಡವಿದನು.

೧೨೨. ಹಾಗೆಯೇ ಬಲಿಷ್ಠನಾದ ಅವನು ನಗುತ್ತಲೇ ಚಂದ್ರನನ್ನು ಕಾಲಿನ ಅಂಗುಷ್ಠದ ಬೆರಳಿನಿಂದ ತಿಕ್ಕಿದನು.

೧೨೩. ಅಗ್ನಿಯ ಎರಡು ನಾಲಿಗೆಗಳನ್ನು ಕತ್ತರಿಸಿ, ಸೀಳಿ ಮುನಿವರ್ಯರನ್ನು ಕಾಲಿನಿಂದ ತಲೆಯಮೇಲೆ ಒದೆದನು.

೧೨೪. ಹಾಗೆಯೇ ಬಲವಂತನಾದ ಅವನು ಯುದ್ಧಕ್ಕೆ ಬಂದ ವಿಷ್ಣುವಿನ ಚಕ್ರವನ್ನು ತಡೆದು ಹರಿತವಾದ ಬಾಣಗಳಿಂದ ನಾರಾಯಣನನ್ನು ಹೊಡೆದನು.

ತಾನ್ದೃಷ್ಟ್ವಾ ಗರುಡೋ ಧೀಮಾನ್ಪಲಾಯನಪರೋಽಭವತ್ ।
ತತ್ರಿಸ್ಥಿತೋ ಮಾಧವೋ ವೇಗಾದ್ವ್ಯಥಾ ಗೌಃ ಸಿಂಹಪೀಡಿತಾ ॥ ೧೨೫ ॥
ಅಂತರ್ಹಿತೇ ವೈನತೇಯೇ ವಿಷ್ಣೌ ಚ ಪದ್ಮಸಂಭವಃ ।
ಆಗತ್ಯ ವಾರಯಾಮಾಸ ವೀರಭದ್ರಂ ಶಿವಪ್ರಿಯಂ ॥ ೧೨೬ ॥
ಪ್ರಸಾದಯಾಮಾಸ ಸ ತಂ ಗೌರವಾತ್ಪರಮೇಷ್ಠಿನಃ ।
ತೇಽದೃಶ್ಯಂ ನೈವ ಜಾನಂತಿ ರುದ್ರಂ ತತ್ರಾಗತಂ ಸುರಾಃ ॥ ೧೨೭ ॥
ಸದೇವೋ ವಿಷ್ಣುನಾ ಜ್ಞಾತೋ ಬ್ರಹ್ಮಣಾ ಚ ದಧೀಚಿನಾ ।
ತುಷ್ಟಾವ ಭಗವನ್ಬ್ರಹ್ಮಾ ದಕ್ಷೋ ವಿಷ್ಣುರ್ದಿವೌಕಸಃ ॥ ೧೨೮ ॥
ವಿಶೇಷಾತ್ಪಾರ್ವತೀಂ ದೇವೀಮೀಶ್ವರಾರ್ಧಶರೀರಿಣೀಂ ।
ಸ್ತೋತ್ರೈರ್ನಾನಾವಿಧೈರ್ದಕ್ಷಃ ಪ್ರಣಮ್ಯ ಚ ಕೃತಾಂಜಲಿಃ ॥ ೧೨೯ ॥
ತತೋ ಭಗವತೀ ಪ್ರಾಹ ಪ್ರಹಸಂತೀ ಮಹೇಶ್ವರಂ ।
ತ್ವಮೇವ ಜಗತಸ್ಸ್ರಷ್ಟಾ ಸಂಹರ್ತಾಚೈವ ರಕ್ಷಕಃ ॥ ೧೩೦ ॥
ಅನುಗ್ರಾಹ್ಯೋ ಭಗವತಾ ದಕ್ಷಶ್ಚಾಪಿ ದಿವೌಕಸಃ ।
ತತಃ ಪ್ರಹಸ್ಯ ಭಗವಾನ್ಕಪರ್ದೀ ನೀಲಲೋಹಿತಃ ॥ ೧೩೧ ॥

---

೧೨೫. ಬಳಿಕ ವಿಷ್ಣುವಿನ ವಾಹನನಾದ ಗರುಡನಿಗಿಂತ ಅಧಿಕ ಬಲವುಳ್ಳ ಸಾವಿರಾರು ಗರುಡರನ್ನು ಸೃಷ್ಟಿಸಿದನು. ಆ ಗರುಡರು ವಿಷ್ಣುವಿನ ಗರುಡನನ್ನು ಅಟ್ಟಿಸಿಕೊಂಡು ಹೋದರು.

೧೨೬—೧೨೭. ಬುದ್ಧಿವಂತನಾದ ಗರುಡನು ಅವುಗಳನ್ನು ನೋಡಿ ಓಡಲು ಉದ್ಯುಕ್ತನಾಗಲು, ಅದರಲ್ಲಿ ಕುಳಿತ ವಿಷ್ಣುವು ಸಿಂಹದಿಂದ ಪೀಡಿಸಲ್ಪಟ್ಟ ಗೋವಿನಂತೆ ಶೀಘ್ರವಾಗಿ ಕಣ್ಮರೆಯಾಗಲು ಬ್ರಹ್ಮನು ಬಂದು ಶಿವಪ್ರಿಯನಾದ ವೀರಭದ್ರನನ್ನು ತಡೆದನು.

೧೨೮. ಆ ವೀರಭದ್ರನು ಬ್ರಹ್ಮನಲ್ಲಿ ಗೌರವದಿಂದ ಅವನನ್ನು ಸಂತೋಷ ಗೊಳಿಸಿದನು. ದೇವತೆಗಳು ಅಲ್ಲಿಗೆ ಬಂದರೂ ಅದೃಶ್ಯನಾಗಿರುವ ಶಿವನನ್ನು ತಿಳಿಯಲಿಲ್ಲ.

೧೨೯. ಬ್ರಹ್ಮ ವಿಷ್ಣು ದಧೀಚಿಗಳು ಶಿವನು ಬಂದಿರುವುದನ್ನರಿತರು. ತರುವಾಯ ಬ್ರಹ್ಮ, ವಿಷ್ಣು, ದೇವತೆಗಳು ಆ ಶಿವನನ್ನು ಸ್ತುತಿಸಿದರು.

೧೩೦. ದಕ್ಷನು ಅತಿಶಯವಾಗಿ ಈಶ್ವರನ ಅರ್ಧಾಂಗಿಯಾದ ಪಾರ್ವತಿಯನ್ನು ನಮಸ್ಕರಿಸಿ ಕೈಮುಗಿದುಕೊಂಡು ನಾನಾ ವಿಧಸ್ತೋತ್ರಗಳಿಂದ ಸ್ತುತಿಸಿದರು.

೧೩೧—೧೩೨. ಬಳಿಕ ಪೂಜ್ಯಳಾದ ದೇವಿಯು ನಗುತ್ತ ಮಹೇಶ್ವರನನ್ನು ಕುರಿತು, "ನೀನೇ ಜಗತ್ತುಗಳನ್ನು ಸೃಷ್ಟಿಸುವವನೂ,ರಕ್ಷಿಸುವವನೂ,ಸಂಹರಿಸುವವನೂ

ಉವಾಚ ಪ್ರಣತಾನ್ದೇವಾನ್ ದಕ್ಷಂ ಪ್ರಾಚೇತಸಂ ಹರಃ ।
ಗಚ್ಛಧ್ವಂ ದೇವತಾಸ್ಸರ್ವಾ ಪ್ರಸನ್ನೋ ಭವತಾಮಹಂ ॥ ೧೩೨ ॥
ಸಂಪೂಜ್ಯಸ್ಸರ್ವಯಜ್ಞೇಷು ಪ್ರಥಮಂ ದೇವಕರ್ಮಣಿ ।
ತ್ವಂ ಚಾಪಿ ಶೃಣು ಮೇ ದಕ್ಷ ವಚನಂ ಸರ್ವರಕ್ಷಣಂ ॥ ೧೩೩ ॥
ತ್ಯಕ್ತ್ವಾ ಲೋಕೇಷಣಾಮೇನಾಂ ಮದ್ಭಕ್ತೋ ಭವ ಯತ್ನತಃ ।
ಭವಿಷ್ಯಸಿ ಗಣೇಶಾನಃ ಕಲ್ಪಾಂತೇಽನುಗ್ರಹಾನ್ಮಮ ॥ ೧೩೪ ॥
ತಾವತ್ತಿಷ್ಠ ಮಮಾದೇಶಾತ್ ಸ್ವಾಧಿಕಾರೇಷು ನಿರ್ವೃತಃ ।
ಇತ್ಯುಕ್ತ್ವಾಽದರ್ಶನಂ ಪ್ರಾಪ್ತೋ ದಕ್ಷಸ್ಯಾಮಿತತೇಜಸಃ ॥ ೧೩೫ ॥
ದಧೀಚಿನಾ ಶಿವೋ ದೃಷ್ಟೋ ವಿಜ್ಞಪ್ತಃ ಶಾಪಮೋಚನೇ ।
ಕಥಂ ಶಾಪಂ ಮಯಾ ದತ್ತಂ ತರಿಷ್ಯಂತಿ ತವಾಜ್ಞಯಾ ॥ ೧೩೬ ॥

ಶಿವ ಉವಾಚ :—

ಭವಿಷ್ಯಂತಿ ತ್ರಯೀಬಾಹ್ಯಾಃ ಸಂಪ್ರಾಪ್ತೇತು ಕಲೌ ಯುಗೇ ।
ಪಠಿಷ್ಯಂತಿ ಚ ಯೇ ವೇದಾಂಸ್ತೇ ವಿಪ್ರಾಸ್ಸ್ವರ್ಗಗಾಮಿನಃ ॥ ೧೩೭ ॥

---

ಆಗಿರುವೆ. ನೀನು ದಕ್ಷನನ್ನೂ ದೇವತೆಗಳನ್ನೂ ಅನುಗ್ರಹಿಸು." ಎಂದಳು. ತರುವಾಯ ಶಿವನು ನಕ್ಕು ನಮಸ್ಕರಿಸಿ ದೇವತೆಗಳನ್ನೂ, ಪ್ರಾಚೇತಸನಾದ ದಕ್ಷನನ್ನೂ ಕುರಿತ ಇಂತೆಂದನು.

೧೩೨. "ದೇವತೆಗಳೆ! ನೀವು ಹೊರಡಿರಿ. ನಿಮ್ಮಲ್ಲಿ ನಾನು ಪ್ರಸನ್ನನಾಗಿರುವೆನು. ಸಕಲ ಯಜ್ಞಗಳಲ್ಲಿಯೂ, ದೇವಕಾರ್ಯದಲ್ಲಿಯೂ ನೀವು ನನ್ನನ್ನು ಪೂಜಿಸಬೇಕು.

೧೩೪. ದಕ್ಷ! ನೀನೂ ನನ್ನ ಮಾತನ್ನು ಕೇಳು. ನೀನು ಈ ಲೋಕದಾಸೆಯನ್ನು ತ್ಯಜಿಸಿ ನನ್ನ ಭಕ್ತನಾಗು.

೧೩೫. ನೀನು ಕಲ್ಪಾಂತದಲ್ಲಿ ನನ್ನ ಅನುಗ್ರಹದಿಂದ ಗಣೇಶ್ವರನಾಗುವೆ. ಅಲ್ಲಿಯವರೆಗೆ ನನ್ನ ಅಪ್ಪಣೆಯಿಂದ ಸುಖವಾಗಿ ನಿನ್ನ ಅಧಿಕಾರದಲ್ಲಿರು. ಹೀಗೆ ಹೇಳಿ ದಕ್ಷನು ನೋಡುವಾಗಲೆ ಅದೃಶ್ಯನಾದನು.

೧೩೬. ದಧೀಚಿಯು ಶಿವನನ್ನು ದರ್ಶನಮಾಡಿ ಇವರು ನನ್ನ ಶಾಪದಿಂದ ಹೇಗೆ ಉತ್ತೀರ್ಣರಾಗುವರು ಎಂದು ವಿಜ್ಞಾಪಿಸಿಕೊಂಡನು.

೧೩೭. ಶಿವನು ಹೇಳುತ್ತಾನೆ:—ಕಲಿಯುಗವು ಪ್ರಾಪ್ತವಾಗಲು ಇವರು ವೇದಬಾಹ್ಯರಾಗುವರು. ಆಗ ವೇದವನ್ನು ಪಠಿಸುವ ಬ್ರಾಹ್ಮಣರು ಮಾತ್ರ ಸ್ವರ್ಗವನ್ನು ಸೇರುವರು.

ಆಗಮಾ ವಿಷ್ಣುರಚಿತಾಃ ಪಠ್ಯಂತೇ ಯೇ ದ್ವಿಜಾತಿಭಿಃ ।
ತೇಽಪಿ ಸ್ವರ್ಗಂ ಪ್ರಯಾಸ್ಯಂತಿ ಮತ್ಪ್ರಸಾದಾನ್ನಸಂಶಯಃ ॥ ೧೩೮ ॥
ಕಲಿಕಾಲಪ್ರಭಾವೇನ ಯೇಷಾಂ ಪಾಠೋ ನ ವಿದ್ಯತೇ ।
ಗೃಹಸ್ಥಧರ್ಮಾಚರಣಂ ಕರ್ತವ್ಯಂ ಮಮ ಪೂಜನಂ ॥ ೧೩೯ ॥
ಅವಶ್ಯಂ ಚ ಮಯಾ ಕಾರ್ಯಂ ತೇಷಾಂ ಪಾಪವಿಮೋಚನಂ ।
ಭಿಕ್ಷಾಂ ಭ್ರಮಾಮಿ ಮಧ್ಯಾಹ್ನೇಽತೀತೇ ಭಸ್ಮಗುಂಠಿತಃ ॥ ೧೪೦ ॥
ಜಟಾಜೂಟಧರಶ್ಶಾಂತೋ ಭಿಕ್ಷಾಪಾತ್ರಕರೋ ದ್ವಿಜಃ ।
ಯೋ ದದಾತಿ ಚ ಮೇ ಭಿಕ್ಷಾಂ ಸ್ವರ್ಗಂ ಯಾತಿ ಸಮಾನವಃ ॥ ೧೪೧ ॥
ಉಪಾನಹೌ ವಾ ಛತ್ರಂ ವಾ ಕೌಪೀನಂ ವಾ ಕಮಂಡಲುಂ ।
ಯೋ ದದಾತಿ ತಪಸ್ವಿಭ್ಯೋ ಸಮೋ ಮುಕ್ತ ಸ್ಸಪಾತಕೈಃ ॥ ೧೪೨ ॥
ದಧೀಚೇಸ್ಸವರಾನ್ದತ್ವಾ ಬಭಾಷೇ ಸಹ ವಿಷ್ಣುನಾ ।

ರುದ್ರ ಉವಾಚ :—

ಯಸ್ತೇ ಮಿತ್ರಂ ಸಮೇ ಮಿತ್ರಂ ಯಸ್ತೇರಿಪುಸ್ಸ ಮೇ ರಿಪುಃ ।
ಯಸ್ತ್ವಾಂ ಪೂಜಯತೇ ವಿಷ್ಣೋ ಸಮಾಂ ಪೂಜಯತೇ ಧ್ರುವಂ ॥೧೪೩॥

---

೧೩೮. ವಿಷ್ಣುವು ರಚಿಸಿರುವ ಆಗಮವನ್ನು ಪಠಿಸುವ ಬ್ರಾಹ್ಮಣರೂ ನನ್ನ ಅನುಗ್ರಹದಿಂದ ನಿಶ್ಚಯವಾಗಿ ಸ್ವರ್ಗವನ್ನು ಸೇರುವರು.

೧೩೯. ಕಲಿಕಾಲಪ್ರಭಾವದಿಂದ ಯಾರು ವೇದವನ್ನು ಅಧ್ಯಯನಮಾಡುವುದಿಲ್ಲವೊ, ಅವರು ಗೃಹಸ್ಥ ಧರ್ಮವಾದ ನನ್ನ ಪೂಜೆಯನ್ನು ಅವಶ್ಯವಾಗಿ ಮಾಡಬೇಕು.

೧೪೦. ನಾನು ಅವಶ್ಯವಾಗಿಯೂ ಅವರ ಪಾಪವನ್ನು ಪರಿಹರಿಸುವೆನು. ನಾನು ಅಪರಾಹ್ಣಕಾಲದಲ್ಲಿ ಭಸ್ಮಲಿಪ್ತನಾಗಿ ಭಿಕ್ಷಾಟನಮಾಡುವೆನು.

೧೪೧. ಆಗ ಜಟೆಯನ್ನು ಧರಿಸಿದವನೂ, ಶಾಂತನೂ ಆಗಿ ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡ ನನಗೆ ಭಿಕ್ಷೆಯನ್ನೀಯುವ ಮಾನವನು ಸ್ವರ್ಗಕ್ಕೆ ತೆರಳುವನು.

೧೪೨. ಮುನಿಗಳಿಗೆ ಪಾದರಕ್ಷೆ, ಛತ್ರ, ಕೌಪೀನ, ಕಮಂಡಲಗಳನ್ನು ದಾನ ಮಾಡುವ ಮಾನವನು ಪಾತಕ ಮುಕ್ತನಾಗುವನು. ಹೀಗೆ ಆ ಶಿವನು ದಧೀಚಿಗೆ ವರಗಳನ್ನಿತ್ತು ವಿಷ್ಣುವಿನೊಡನೆ ಮಾತಾಡಿದನು.

೧೪೩. ರುದ್ರನು ಹೇಳುತ್ತಾನೆ :—ವಿಷ್ಣುವೆ ! ನಿನಗೆ ಸ್ನೇಹಿತನಾದವನು ನನಗೂ ಸ್ನೇಹಿತನು. ನಿನಗೆ ಶತ್ರುವಾದವನು ನನಗೂ ಶತ್ರುವು. ನಿನ್ನನ್ನು ಪೂಜಿಸಿದವನು ನಿಶ್ಚಯವಾಗಿಯೂ ನನ್ನನ್ನೂ ಪೂಜಿಸುವನು.

ಯಸ್ತ್ವಾಂ ಸ್ತೌತಿ ಸಮಾಂ ಸ್ತೌತಿ ಪ್ರಿಯೋ ಯಸ್ತೇ ಸ ಮೇ ಪ್ರಿಯಃ ।
ಅಹಂ ಯತ್ರ ಚ ತತ್ರ ತ್ವಂ ನಾಸ್ತಿ ಭೇದಃ ಪರಸ್ಪರಂ ॥ ೧೪೪ ॥

ಕೃಷ್ಣ ಉವಾಚ :—

ಏವಮೇತತ್ಪರಂ ದೇವ ವಕ್ತವ್ಯಂ ಯತ್ತಥೈವ ತತ್ ।
ಅರ್ಧನಾರೀ ನರವಪುರ್ಯದಾ ದೃಷ್ಟೋ ಯಾ ಪುರಾ ॥ ೧೪೫ ॥
ನೇಯಂ ನಾರೀ ಮಯಾ ದೃಷ್ಟಾ ದೃಷ್ಟಂ ರೂಪಂ ಕಿಲಾತ್ಮನಃ ।
ಶಂಖಚಕ್ರಗದಾಹಸ್ತಂ ವನಮಾಲಾವಿಭೂಷಿತಂ ॥ ೧೪೬ ॥
ಶ್ರೀವತ್ಸಾಂಕಂ ಪೀತವಸ್ತ್ರಂ ಕೌಸ್ತುಭೇನ ವಿರಾಜಿತಂ ।
ದ್ವಿತೀಯಾರ್ಧಂ ಮಯಾದೃಷ್ಟಂ ಶೂಲಹಸ್ತಂ ತ್ರಿಲೋಚನಂ ॥ ೧೪೭ ॥
ಚಂದ್ರಾವಯವ ಸಂಯುಕ್ತಂ ಜಟಾಜೂಟಕಲಾಪಿನಂ ।
ಏಕೀಭಾವಂ ಪ್ರಪನ್ನೋಽಹಂ ಯಥಾ ಪೂರ್ವಂ ತಥಾಧುನಾ ॥ ೧೪೮ ॥
ನ ಮಾಂ ಗೌರೀ ಪ್ರಪಶ್ಯೇತ ಪ್ರಪಶ್ಯಾಮಿ ತಥೈವ ಚ ।

ಈಶ್ವರ ಉವಾಚ :—

ಆವಯೋರಂತರಂ ನಾಸ್ತಿ ಚೈಕರೂಪಾವುಭಾವಪಿ ।
ಯೋ ಜಾನಾತಿ ಸ ಜಾನಾತಿ ಸತ್ಯಲೋಕಂ ಸ ಗಚ್ಛತಿ ॥ ೧೪೯ ॥

---

೧೪೪. ನಿನ್ನನ್ನು ಸ್ತುತಿಸಿದರೆ ನನ್ನನ್ನು ಸ್ತೋತ್ರಮಾಡಿದಂತಾಗುವುದು. ನಿನಗೆ ಪ್ರಿಯನಾದವನು ನನಗೂ ಪ್ರಿಯನು. ನಾನೆಲ್ಲಿರುವೆನೊ ನೀನು ಅಲ್ಲಿರುವೆ. ನಮ್ಮಿಬ್ಬರಿಗೆ ಪರಸ್ಪರ ಭೇದವಿಲ್ಲ.

೧೪೫. ಕೃಷ್ಣನು ಹೇಳುತ್ತಾನೆ :—ಸ್ವಾಮಿ ! ನಾನು ಹೇಳತಕ್ಕ ಮತ್ತೊಂದು ವಿಷಯವೂ ಹಾಗೆಯೇ. ನಾನು ನಿನ್ನನ್ನು ಹಿಂದೆ ಅರ್ಧನಾರೀ ದೇಹದಲ್ಲಿರುವುದನ್ನು ನೋಡಿರುವೆನು.

೧೪೬—೧೪೮. ಈಗ ನಾನು ಆ ನಾರಿಯನ್ನು ಕಾಣುವುದಿಲ್ಲ. ಶಂಖ, ಚಕ್ರ, ಗದೆಗಳನ್ನು ಹಿಡಿದಿರುವುದೂ, ವನಮಾಲೆಯಿಂದ ಅಲಂಕಾರಗೊಂಡದೂ, ಶ್ರೀವತ್ಸವೆಂಬ ಮಚ್ಚೆಯುಳ್ಳದೂ, ಪೀತಾಂಬರಧಾರಿಯೂ, ಕೌಸ್ತುಭದಿಂದ ಪ್ರಕಾಶಮಾನವಾದುದೂ ಆದ ನನ್ನ ಶರೀರವನ್ನು ಕಾಣುವೆನು. ಎರಡನೆಯ ಅರ್ಧವು ತ್ರಿಶೂಲವನ್ನು ಹಿಡಿದಿರುವುದೂ, ಮೂರು ಕಣ್ಣುಗಳುಳ್ಳದೂ, ಚಂದ್ರಕಲೆಯನ್ನು ಧರಿಸಿರುವುದೂ, ಜಟೆ, ಕಪಾಲಗಳುಳ್ಳದೂ, ಆಗಿರುವುದು. ನಾನು ಹಿಂದಿನಂತೆಯೇ ನಿನ್ನೊಡನೆ ಐಕ್ಯವನ್ನು ಹೊಂದಿರುವೆನು. ಅಂತಹ ನನ್ನನ್ನು ಗೌರಿಯು ನೋಡುವುದಿಲ್ಲ. ಅಂತೆಯೇ ನಾನೂ ಅವಳನ್ನು ನೋಡುವುದಿಲ್ಲ.

೧೪೯. ಈಶ್ವರನು ಹೇಳುತ್ತಾನೆ :—ಒಂದೇ ರೂಪವನ್ನು ಧರಿಸಿರುವ ನಮ್ಮಿಬ್ಬರಿಗೆ ಭೇದವಿಲ್ಲ. ಇದನ್ನರಿತವನು ಸತ್ಯಲೋಕಕ್ಕೆ ತೆರಳುವನು.

ಇತ್ಯುಕ್ತ್ವಾ ಸ ಯಯೌ ತತ್ರ ಕೈಲಾಸಂ ಪರ್ವತೋತ್ತಮಂ ||
ಕೃಷ್ಣೋಽಪಿ ಮಂದರಂ ಪ್ರಾಪ್ತೋ ದೇವಕಾರ್ಯೇಣ ಕೇನಚಿತ್ || ೧೩೦ ||
ಅತ್ರಾಂತರೇ ದೈತ್ಯರಾಜೋ ಮಹಾದೇವ ಪ್ರಸಾದತಃ |
ಹಿರಣ್ಯನೇತ್ರತನಯಃ ಬಾಧತೇ ಸೌ ಜಗತ್ರಯಂ || ೧೩೧ ||
ಅಮರತ್ವಂ ಹರಾಲ್ಲಬ್ಧ್ವಾ ಕಾಮಾಂಧೋ ನೈವ ಪಶ್ಯತಿ |
ಹರಾಂಗಧಾರಿಣೀಂ ದೇವೀಂ ದಿವ್ಯರೂಪಾಂ ಸುಲೋಚನಾಂ || ೧೩೨ ||
ಮಮೇತಿ ಸ ಚ ಜಾನಾತಿ ಯಾಚತೇ ಚ ಹರಂ ಪ್ರತಿ |
ಹರೋಽಪಿ ಕಾರ್ಯವ್ಯಸನಃ ತ್ಯಕ್ತ್ವಾ ಕೈಲಾಸಪರ್ವತಂ || ೧೩೩ ||
ಮಂದರಂ ಸಮನುಪ್ರಾಪ್ತೋ ದೇವಂ ದ್ರಷ್ಟುಂ ಜನಾರ್ದನಂ |
ಪರಸ್ಪರಂ ಸಮಾಲೋಚ್ಯಾ ಮುಂಚದ್ದೇವೀಂ ಸಮಂದರೇ || ೧೩೪ ||
ನಾರಾಯಣಗೃಹೇ ದೇವೀ ಸ್ಥಿತಾ ದೇವಗಣೈರ್ವೃತಾ |
ಅತ್ರಾಂತರೇ ಗೌತಮಸ್ತು ಗೋವಧಾನ್ಮಲಿನೀಕೃತಃ || ೧೩೫ ||
ಪವಿತ್ರೀಕರಣಾಯಾಸ್ಯ ಭಿಕ್ಷುರೂಧರೋ ಹರಃ |
ಗೌತಮಸ್ಯ ಗೃಹಂ ಪ್ರಾಪ್ತೋ ಸುಂದರಂ ಚಾಂಧಕೋಗತಃ || ೧೩೬ ||

---

೧೩೦. ಆ ಶಿವನು ಹೀಗೆಂದು ಕೈಲಾಸಕ್ಕೆ ತೆರಳಿದನು. ವಿಷ್ಣುವೂ ದೇವಕಾರ್ಯಕ್ಕಾಗಿ ಮಂದರಶೈಲಕ್ಕೆ ಹೋದನು.

೧೩೧. ಈ ಮಧ್ಯದಲ್ಲಿ ಹಿರಣ್ಯಾಕ್ಷನ ಮಗನು ಮಹಾದೇವನ ಅನುಗ್ರಹದಿಂದ ಮೂರುಲೋಕಗಳನ್ನು ಪೀಡಿಸುತ್ತಿದ್ದನು.

೧೩೨-೧೩೪. ಅವನು ಶಿವನಿಂದ ಅಮರತ್ವವನ್ನು ಪಡೆದು ಕಾಮಾಂಧನಾಗಿ ಹರನ ಸತಿಯೂ, ಸುಂದರಿಯೂ ಆದ ಪಾರ್ವತಿಯನ್ನು ತನಗೆ ಕೊಡಬೇಕೆಂದು ಶಿವನನ್ನು ಯಾಚಿಸಿದನು. ಶಿವನೂ ಕಾರ್ಯಾಸಕ್ತನಾಗಿ ಕೈಲಾಸ ಪರ್ವತವನ್ನು ತ್ಯಜಿಸಿ ವಿಷ್ಣುವನ್ನುನೋಡಲು ಮಂದರ ಪರ್ವತಕ್ಕೆ ಹೋಗಿ ಅವನೊಡನೆ ಆಲೋಚಿಸಿ ದೇವಿಯನ್ನು ಆ ಪರ್ವತದಲ್ಲಿ ಬಿಟ್ಟನು.

೧೩೫. ಅದರಂತೆ ದೇವಿಯು ನಾರಾಯಣನ ಮಂದಿರದಲ್ಲಿ ಗಣಗಳೊಡನೆ ಇದ್ದಳು ಈ ಮಧ್ಯದಲ್ಲಿ ಗೌತಮ ಮುನಿಯು ಗೋವಧೆಯಿಂದ ಪಾತಕಿಯಾದನು.

೧೩೬. ಹರನು ಆ ಗೌತಮನ ಶುದ್ಧಿಗಾಗಿ ಭಿಕ್ಷುರೂಪವನ್ನು ಧರಿಸಿ ಅವನ ಮನೆಗೆ ಹೋದನು. ಅಂಧಕಾಸುರನು ಮಂದರಪರ್ವತಕ್ಕೆ ಹೋದನು,

ಯಯಾಚೇ ಪಾರ್ವತೀಂ ದುಷ್ಟೋ ಯುದ್ಧಂ ಚಕ್ರೇ ಸವಿಷ್ಣುನಾ ।
ಹಾರಿತಂ ತು ಗಣೈಸ್ಸರ್ವೈಃ ದೇವೀಂ ದೈತ್ಯೋ ನ ಪಶ್ಯತಿ ॥ ೧೫೭ ॥
ಸ್ತ್ರೀರೂಪಧಾರೀ ಕೃಷ್ಣೋಽಸೌ ಗೌರೀಂ ರಕ್ಷತಿ ಮಂದಿರೇ ।
ಗೌರೀಣಾಂ ಶತಂ ಚಕ್ರೇ ಹರಿಸ್ತತ್ರ ಸಮಾಯಯಾ ॥ ೧೫೮ ॥
ವಿಷ್ಣೋರ್ದೇಹಸಮುದ್ಭೂತಾ ದಿವ್ಯರೂಪಾ ವರಸ್ತ್ರಿಯಃ ।
ಅಂಧಕೋ ನೈವ ಜಾನಾತಿ ಕೈಷಾ ಗೌರೀ ನು ಪಾರ್ವತೀ ॥ ೧೫೯ ॥
ವಿಲಂಬಸ್ತತ್ರ ಸಂಜಾತೋ ಮೋಹಿತೋ ವಿಷ್ಣುಮಾಯಯಾ ।
ತಾವಚ್ಛಿವಸ್ಸಮಾಯಾತಃ ಕೃತ್ವಾ ಗೌತಮಪಾವನಂ ॥ ೧೬೦ ॥
ಭಿಕ್ಷಾಮಾತ್ರೇಣ ಚಾನ್ನೇನ ಗೌತಮೋ ನಿರ್ಮಲೀಕೃತಃ ।
ಸೋಂಧಕೇನ ತದಾ ಯುದ್ಧಂ ಚಕ್ರೇ ರುದ್ರೋಽಪಿ ಕೋಪಿತಃ ॥ ೧೬೧ ॥
ಅಮರೋ ಸ ಹರಾಜ್ಞಾತಃ ಶೂಲೇ ಪ್ರೋತಸ್ಸುದಾರುಣೇ ।
ಶೂಲಸ್ಥಸ್ತು ಸ್ತುತಿಂ ಚಕ್ರೇ ತಸ್ಯ ತುಷ್ಟೋ ಮಹೇಶ್ವರಃ ॥ ೧೬೨ ॥
ಗಣೇಶತ್ವಂ ದದೌ ತಸ್ಮೈ ಯಾವದಾಭೂತಸಂಪ್ಲವಂ ।
ಸ್ವಸರೂಪಾಮುಮಾದೇವೀಂ ಕೃಷ್ಣಸ್ತಸ್ಮೈದದೌ ಸ್ವಯಂ ॥ ೧೬೩ ॥

---

೧೫೭. ದುಷ್ಟನಾದ ಅವನು ಅಲ್ಲಿ ಪಾರ್ವತಿಯನ್ನು ಬೇಡಲು ಅವನಿಗೆ ವಿಷ್ಣುವಿನೊಡನೆ ಯುದ್ಧವಾಯಿತು. ಗಣಗಳು ಅವನ ಸರ್ವಸ್ವವನ್ನೂ ಅಪಹರಿಸಲು ಆ ದೈತ್ಯನು ದೇವಿಯನ್ನು ಕಾಣಲಿಲ್ಲ.

೧೫೮. ವಿಷ್ಣುವು ಸ್ತ್ರೀರೂಪವನ್ನು ಧರಿಸಿ ತನ್ನ ಮನೆಯಲ್ಲಿ ಗೌರಿಯನ್ನು ರಕ್ಷಿಸಿದನು. ಅಲ್ಲದೆ ಮಾಯೆಯಿಂದ ನೂರುಮಂದಿ ಗೌರಿಯನ್ನು ಸೃಷ್ಟಿಸಿದನು.

೧೫೯. ಅಂಧಕನು ವಿಷ್ಣು ದೇಹದಿಂದ ಹುಟ್ಟಿದ ದಿವ್ಯ ರೂಪವುಳ್ಳ ಆ ಸ್ತ್ರೀಯರ ನಡುವೆ ಪಾರ್ವತಿಯು ಯಾರೆಂಬುದನ್ನರಿಯಲಿಲ್ಲ.

೧೬೦. ವಿಷ್ಣುಮಾಯೆಯಿಂದ ಅವನು ಮೋಹಗೊಂಡಿದ್ದರಿಂದ ವಿಳಂಬವಾಯಿತು. ಅಷ್ಟರಲ್ಲಿ ಶಿವನು ಗೌತಮನನ್ನು ಪವಿತ್ರಗೊಳಿಸಿ ಅಲ್ಲಿಗೆ ಬಂದನು.

೧೬೧. ಗೌತಮನು ಶಿವನಿಗೆ ಭಿಕ್ಷೆಯನ್ನು ನೀಡಿದ್ದರಿಂದಲೇ ಪವಿತ್ರನಾದನು. ರುದ್ರನು ಇತ್ತ, ಕುಪಿತನಾಗಿ ಅಂಧಕನೊಡನೆ ಕಾಳಗಮಾಡಿದನು.

೧೬೨. ಶಿವನಿಂದಲೇ ಅಮರತ್ವವನ್ನು ಪಡೆದ ಅಂಧಕನು ದಾರುಣ ತ್ರಿಶೂಲದಲ್ಲಿ ಸಿಕ್ಕಿಕೊಂಡು ಶಿವನನ್ನು ಸ್ತುತಿಸಲು ಅವನು ಸಂತುಷ್ಟನಾದನು.

೧೬೩. ಆಗಲಾತನು ಅವನಿಗೆ ಪ್ರಳಯಕಾಲದವರೆಗೆ ಗಣೇಶತ್ವವನ್ನಿತ್ತನು. ವಿಷ್ಣುವು ತನಗೆ ಸಮಾನ ರೂಪಳಾದ ಪಾರ್ವತಿಯನ್ನು ಶಿವನಿಗೆ ಒಪ್ಪಿಸಿ ಕೊಟ್ಟನು.

ಗೌರೀ ರೂಪಾಸ್ತ್ರಿಯಶ್ಚಾನ್ಯಾಃ ಧರಿತ್ರ್ಯಾಂ ತಾಸ್ತು ಪ್ರೇಷಿತಾಃ ।
ಕೃತ್ವಾ ನಾಮಾನಿ ಸರ್ವಾಸಾಂ ಲೋಕೇ ಪೂಜ್ಯಾ ಭವಿಷ್ಯಥ ॥ ೧೬೪ ॥
ಏತಾ ಯೇ ಪೂಜಯಿಷ್ಯಂತಿ ಪೂಜಯಿಷ್ಯಂತಿ ತೇ ಶಿವಾಂ ।
ಶಿವಾಂ ಯೇ ಪೂಜಯಿಷ್ಯಂತಿ ತೇಽರ್ಚಯಂತೇ ಹರಂ ಹರಿಂ ॥ ೧೬೫ ॥
ಉಮಾಂ ಸಮಾದಾಯ ಯಯೌ ಹರೋ ಗಿರಿಂ ।
ವೃಷಂ ಸಮಾರುಹ್ಯ ಸುರಾಸುರಾರ್ಚಿತಃ ।
ಹರಿಸ್ತು ರೇಮೇ ರಮಯಾಸಹಾಂಧಕೇ ।
ಹತೇ ಚ ದೇವಾಸ್ಸುರರಾಜಮಾಯಯುಃ ॥ ೧೧೬ ॥
ಬ್ರಹ್ಮೇಶನಾರಾಯಣ ಪುಣ್ಯಚೇತಸಾಂ ।
ಶೃಣ್ವಂತಿ ಚಿತ್ರಂ ಚರಿತಂ ಮಹಾತ್ಮನಾಂ ।
ಮುಚ್ಯಂತಿ ಪಾಪೈಃ ಕಲಿಕಾಲಸಂಭವೈಃ ।
ಯಾಸ್ಯಂತಿ ನಾಕಂ ಗುಣವೃಂದವಂದಿತಾಃ ॥ ೧೬೭ ॥
ಏವಂ ಕಾಲೇ ವರ್ತಮಾನೇ ಹರಃ ಕೈಲಾಸಪರ್ವತೇ ।
ದಕ್ಷೋದಾನವದೈತ್ಯೈಸ್ತು ಗೃಹ್ಯತೇಽಸೌ ವರಾನ್ಬಹೂನ್ ॥ ೧೬೮ ॥

---

೧೬೪. ಗೌರಿಯಂತಿರುವ ಇತರ ಸ್ತ್ರೀಯರಿಗೂ ಅದೇ ಹೆಸರುಗಳನ್ನಿಟ್ಟು ಪ್ರಪಂಚದಲ್ಲಿ ಪೂಜ್ಯರಾಗುವಿರೆಂದು ವರವನ್ನಿತ್ತು ಅವರನ್ನು ಭೂಮಿಗೆ ಕಳುಹಿಸಿದನು.

೧೬೫. ಇವರನ್ನು ಪೂಜಿಸಿದವರು ಪಾರ್ವತಿಯನ್ನು ಪೂಜಿಸಿದವರಂತಾಗುವರು ಪಾರ್ವತಿಯನ್ನು ಪೂಜಿಸಿದವರು ಹರಿಹರನನ್ನು ಪೂಜಿಸಿದವರಂತಾಗುವರು.

೧೬೬. ಸುರಾಸುರರಿಂದ ಆರಾಧಿಸಲ್ಪಟ್ಟವನಾಗಿ ಪಾರ್ವತಿಯನ್ನು ಕರೆದು ಕೊಂಡು ವೃಷಭವನ್ನೇರಿ ಕೈಲಾಸಕ್ಕೆ ಹೋದನು. ಹರಿಯು ಲಕ್ಷ್ಮಿಯೊಡನೆ ವಿನೋದ ಪಟ್ಟನು. ಅಂಧಕನು ಮೃತನಾದ ಕೂಡಲೆ ದೇವತೆಗಳು ಇಂದ್ರನ ಬಳಿಗೆ ಬಂದರು.

೧೬೭. ಮಹಾತ್ಮರಾದ ಬ್ರಹ್ಮ ವಿಷ್ಣು ಮಹೇಶ್ವರರ ಆಶ್ಚರ್ಯಕರವಾದ ಚರಿತ್ರೆಯನ್ನು ಕೇಳುವ ಮಾನವರು ಕಲಿಕಾಲದಿಂದುಂಟಾದ ಪಾಪಗಳಿಂದ ಮುಕ್ತರೂ ಗಣಗಳ ಸಮೂಹಗಳಿಂದ ನಮಸ್ಕಾ ಮಾಡಲ್ಪಟ್ಟವರೂ ಆಗಿ ಸ್ವರ್ಗಕ್ಕೆ ಹೋಗುವರು.

೧೬೮. ಹೀಗೆ ಕಾಲವು ಕಳೆಯುತ್ತಿರಲು ಕೈಲಾಸಪರ್ವತದಲ್ಲಿ ವಾಸಿಸುತಿದ್ದ ಶಿವನಿಂದ ರಾಕ್ಷಸರೂ, ದಾನವರೂ, ದೈತ್ಯರೂ ಬಹು ವರಗಳನ್ನು ಪಡೆದರು.

ಬ್ರಹ್ಮದತ್ತವರೋ ರೌದ್ರಸ್ತಾರಕಾಖ್ಯೋ ಮಹಾಸುರಃ ।
ತೇನ ಸರ್ವಂ ಜಗದ್ವ್ಯಾಪ್ತಂ ತಸ್ಯ ನಷ್ಟಾ ಸುರಾ ರಣೇ ॥ ೧೬೯ ॥
ಮಹಾದೇವಸುತೇನೈವ ಹಂತವ್ಯೋಸೌ ಸಸರ್ಜ ತಂ ।
ಕಾರ್ತಿಕೇಯಮುಮಾಪುತ್ರಂ ರುದ್ರವೀರ್ಯಸಮುದ್ಭವಂ ॥ ೧೭೦ ॥
ದೇವೈರಿಂದ್ರಾದಿಭಿಸ್ಸರ್ವೈ ಸ್ಸೇನಾಧ್ಯಕ್ಷೇಭ್ಯಷೇಚಿತಃ ।
ತೇನಾಪಿ ದೈವಯೋಗೇನ ತಾರಕಾಖ್ಯೋ ನಿಪಾತಿತಃ ॥ ೧೭೧ ॥
ಕೈಲಾಸಶಿಖರಾಸೀನಃ ದೇವದೇವೋ ಜಗದ್ಗುರುಃ ।
ಉಮಯಾ ಸಹ ಸಂತುಷ್ಟೋ ನಂದಿಭದ್ರಾದಿಭಿರ್ವೃತಃ ॥ ೧೭೨ ॥
ಸ್ಕಂದೇನ ಗಜವಕ್ತ್ರೇಣ ಧನಾಧ್ಯಕ್ಷೇಣ ಸಂಯುತಃ ।
ಅಥ ಹಾಸಪರಂ ದೇವಂ ಶನೈಃ ಪ್ರೋವಾಚ ತಂ ಶಿವಾ ॥ ೧೭೩ ॥
ಕೇನ ದೇವ ಪ್ರಕಾರೇಣ ತೋಷಂ ಯಾಸ್ಯಸಿ ಶಂಕರ ।
ಮರ್ತ್ಯಾನಾಂ ಕೇನ ದಾನೇನ ತಪಸಾನಿಯಮೇನ ವಾ ॥ ೧೭೪ ॥
ಕೇನ ವಾ ಕರ್ಮಣಾ ದೇವ ಕೇನ ಮಂತ್ರೇಣ ವಾ ಪುನಃ ।
ಸ್ನಾನೇನ ಕೇನ ದೇವೇಶ ಕೇನ ಧೂಪೇನ ತುಷ್ಯಸಿ ॥ ೧೭೫ ॥
ಪುಷ್ಪೇಣ ಕೇನ ಮೇ ನಾಥ ಕೇನ ಪತ್ರೇಣ ಶಂಕರ ।
ಕಯಾ ಸಂತುಷ್ಯಸೇ ಸ್ತುತ್ಯಾ ಸಾಹಸೇನ ಚ ಕೇನ ವೈ ॥ ೧೭೬ ॥
ನೈವೇದ್ಯೇನ ಚ ಕೇನ ತ್ವಂ ಕೇನ ಹೋಮೇನ ತುಷ್ಯಸಿ ।
ಕೇನ ಕಷ್ಟೇನ ವಾ ದೇವ ಕೇನಾರ್ಘೇಣ ಮಮ ಪ್ರಭೋ ॥ ೧೭೭ ॥

---

೧೬೯. ಬ್ರಹ್ಮನಿಂದ ವರವನ್ನು ಪಡೆದ ತಾರಕನೆಂಬ ಭಯಂಕರನಾದ ಮಹಾ ದೈತ್ಯನು ಸಮಸ್ತ ಪ್ರಪಂಚವನ್ನು ವ್ಯಾಪಿಸಿ ಯುದ್ಧದಲ್ಲಿ ಸುರರನ್ನು ನಾಶಗೊಳಿಸಿದನು.

೧೭೦. ಇವನನ್ನು ಕೊಲ್ಲಲು ತನ್ನ ಸುತನನ್ನು ಬಿಟ್ಟು ಬೇರೆಯಾರೂ ಶಕ್ತರಲ್ಲ ವೆಂಬುದನ್ನರಿತ ಶಂಕರನು ಓರ್ವ ಕುಮಾರನನ್ನು ಸೃಷ್ಟಿಸಿದನು.

೧೭೧. ಅವನೇ ಕಾರ್ತಿಕೇಯನು ಇಂದ್ರಾದಿದೇವತೆಗಳು ಅವನನ್ನು ಸೇನಾಪತಿ ಯನ್ನಾಗಿ ಮಾಡಲು ಅವನು ತಾರಕಾಸುರನನ್ನು ಕೊಂದನು.

೧೭೨–೧೭೩. ಜಗದ್ಗುರುವಾದ ಮಹಾದೇವನು ಕೈಲಾಸಶಿಖರದಲ್ಲಿ ಪಾರ್ವತಿ, ನಂದಿ, ಭದ್ರ, ಸ್ಕಂದ, ಗಜಾನನ, ಧನಾಧಿಪತಿ ಮೊದಲಾದವರೊಡನೆ ಸಂತೋಷ ದಿಂದ ಕುಳಿತು ನಗುತ್ತಿರಲು ಅವನನ್ನು ಕುರಿತು ಪಾರ್ವತಿಯು ಮೆಲ್ಲನೆ ಹೀಗೆ ಪ್ರಶ್ನೆಮಾಡಿದಳು.

೧೭೪–೧೭೭. ನಾಥ! ನೀನು ಯಾವ ದಾನ, ತಪಸ್ಸು, ವ್ರತ, ಧರ್ಮಕಾರ್ಯ ಮಂತ್ರ, ಸ್ನಾನ, ಧೂಪ, ಹೂವು, ಪಾತ್ರೆ, ಸ್ತುತಿ, ಸಾಹಸ, ನೈವೇದ್ಯ, ಹೋಮ, ಪೂಜೆ ರೀತಿ ಇವುಗಳಿಂದ ಮನುಷ್ಯರಿಗೆ ಒಲಿಯುವೆ ?

ಷೋಡಶೈತೇ ಮಯಾ ಪ್ರಶ್ನಾಃ ಪೃಷ್ಟಾ ಮೇ ನಿರ್ಣಯಂ ವದ ।

ಶಂಕರ ಉವಾಚ :—

ಸಾಧು ಪೃಷ್ಟಂ ತ್ವಯಾ ದೇವಿ ಕಥಯಿಷ್ಯೇ ಮಮ ಪ್ರಿಯಂ ।
ಶಿವಪೂಜಾಪ್ರಕಾರೋಽಯಂ ಕ್ರಿಯತೇ ವಚಸಾ ಗುರೋಃ ॥ ೧೭೮ ॥
ಅಭಯಂ ಸರ್ವಜಂತೂನಾಂ ದೇಯಂ ಮಮ ಪ್ರಿಯಂ ।
ಸತ್ಯಂ ತಪಸ್ಸಮಾಖ್ಯಾತಂ ಪರದಾರವಿವರ್ಜನಂ ॥ ೧೭೯ ॥
ಪ್ರಿಯೋ ಮೇ ನಿಯಮೋ ದೇವಿ ಕರ್ಮ ತಲ್ಲೋಕರಂಜನಂ ।
ಮಯೋಂ ನಮಃ ಶಿವಾಯೇತಿ ಮಂತ್ರೋಯಮುರರೀಕೃತಃ ॥ ೧೮೦ ॥
ಸರ್ವಪಾಪವಿನಿರ್ಮುಕ್ತಃ ಮಮ ದೇವಿ ಸ ವಲ್ಲಭಃ ।
ಪಾಪತ್ಯಾಗೋ ಭವೇತ್ಸ್ನಾನಂ ಧೂಪೋ ಮೇ ಗೌಗ್ಗುಲಃ ಪ್ರಿಯಃ ॥೧೮೧॥
ಧತ್ತೂರಕಸ್ಯ ಪುಷ್ಪಂ ಮೇ ಬಿಲ್ವಪತ್ರಂ ಮಮ ಪ್ರಿಯಂ ।
ಸ್ತುತಿಶ್ಶಿವಶಿವಾಯೇತಿ ಸಾಹಸಂ ರಣಕರ್ಮಣಿ ॥ ೧೮೨ ॥
ನ ಬಿಭೇತಿ ನರೋ ಯಸ್ತು ತಸ್ಯಾಗ್ರೆ ಸಂಭವಾಮ್ಯಹಂ ।
ಹಂತಕಾರೋ ಗವಾಂ ಯಸ್ತು ನೈವೇದ್ಯಂ ಮಮವಲ್ಲಭಂ ॥ ೧೮೩ ॥

---

೧೭೮. ನಾನು ಹೀಗೆ ಹದಿನಾರು ಪ್ರಶ್ನೆಗಳನ್ನು ಕೇಳಿರುವೆನು. ಇದನ್ನು ನಿಶ್ಚಯಿಸಿ ಹೇಳು.

೧೭೯. ಶಂಕರನು ಹೇಳುತ್ತಾನೆ :—ದೇವಿ! ನೀನು ಚೆನ್ನಾಗಿ ಕೇಳಿದೆ. ಅದನ್ನು ನನಗೆ ಪ್ರಿಯವಾದ ಹೇಳುವೆನು. ಗುರುವಿನ ಮಾತಿನಿಂದ ಈ ಶಿವಪೂಜೆಯ ಕ್ರಮ ವನ್ನೂ ಹೇಳುವೆನು.

೧೮೦–೧೮೧. ಸಕಲ ಪ್ರಾಣಿಗಳಿಗೆ ಅಭಯವನ್ನೀಯುವುದೇ ನನಗೆ ಪ್ರಿಯ ವಾದ ದಾನವು, ಸತ್ಯವೇ ತಪಸ್ಸು, ಪರರ ಪತ್ನಿಯರನ್ನು ತ್ಯಜಿಸುವುದೆ ಪ್ರಿಯವಾದ ನಿಯಮವು. ಜನರನ್ನು ಸಂತೋಷಗೊಳಿಸುವುದೇ ಕರ್ಮವು, ಮಯೋಂ ನಮಃ ಶಿವಾಯ ಎಂಬದು ಮಂತ್ರವು.

೧೮೨. ಸಕಲಪಾಪಮುಕ್ತನಾದವನು ನನಗೆ ಪ್ರಿಯನು. ಪಾಪತ್ಯಾಗವೇ ಸ್ನಾನವು. ಗುಗ್ಗುಲು ಧೂಪವು ಪ್ರಿಯವಾದುದು.

೧೮೩–೧೮೪. ಧತ್ತೂರದ ಹೂವೂ, ಬಿಲ್ವಪತ್ರವೂ ನನಗೆ ಪ್ರಿಯವಾದುವು. ಶಿವಶಿವಾಯ ಎಂಬುದೇ ಸ್ತುತಿಯು ಯುದ್ಧದಲ್ಲಿ ಹೆದರದೆ ಸಾಹಸವನ್ನು ತೋರಿಸುವ

ಪೂರ್ಣಾಹುತ್ಯಾ ಪರಾ ಪ್ರೀತಿರ್ಜಾಯತೇ ಮಮ ಸುಂದರಿ ।
ಶುಶ್ರೂಷಾ ವಲ್ಲಭಂ ಕಷ್ಟಂ ಯತೀನಾಂ ಚ ತಪಸ್ವಿನಾಂ ॥ ೧೮೪ ॥
ಸೂರ್ಯೋದಯೇ ಮಹಾದೇವಿ ಮಧ್ಯಾಹ್ನೇಽಸ್ತಮನೇ ತಥಾ ।
ಅರ್ಘೋ ಯೋ ದೀಯತೇ ಸೂರ್ಯೇ ವಲ್ಲಭೋಽಸೌ ಮಮ ಪ್ರಿಯೇ ॥
ಕಿಂ ದಾನೈಃ ಕಿಂ ತಪೋಭಿರ್ವಾ ಕಿಂ ಯಜ್ಞೈರ್ಭಾವವರ್ಜಿತೈಃ ।
ದಯಾ ಸತ್ಯಂ ಘೃಣಾಽಸ್ತೇಯಂ ದಂಭಪೈಶುನ್ಯವರ್ಜಿತಂ ॥ ೧೮೬ ॥
ಭಕ್ತ್ಯಾ ಯದ್ದೀಯತೇ ಸ್ತೋಕಂ ದೇವಿ ತದ್ವಲ್ಲಭಂ ಮಮ ।
ಏವಂ ಯಾವತ್ಕಥಯತಿ ಪ್ರಶ್ನಾನ್ಪೂರ್ವೋಕ್ತಾನ್ಯಥೋದಿತಾನ್ ॥ ೧೮೭ ॥
ತಾವದ್ಬ್ರಹ್ಮಾದಿಭಿರ್ದೇವೈರ್ವಿಷ್ಣುಸ್ತತ್ರ ಯಯೌ ಸ್ವಯಂ ।
ವಿಷ್ಣುರುವಾಚ :—
ನಾಹಂ ಪಾಲಯಿತುಂ ಶಕ್ತಸ್ತ್ವಂ ದದಾಸಿ ವರಾನ್ಬಹೂನ್ ।
ದೈತ್ಯಾನಾಂ ದಾನವಾದೀನಾಂ ರಾಕ್ಷಸಾನಾಂ ಮಹೇಶ್ವರ ॥ ೧೮೮ ॥
ವಿಕೃತಿಂ ಯಾಂತಿ ಪಶ್ಚಾತ್ತೇ ಕಷ್ಟಂ ವಧ್ಯಾ ಭವಂತಿ ಮೇ ।
ಪತ್ರೇಣ ಪುಷ್ಪಮಾತ್ರೇಣ ಓಂಕಾರೇಣ ಶಿವೇನ ಚ ॥ ೧೮೯ ॥

---

ವನಿಗೆ ನಾನು ಪ್ರತ್ಯಕ್ಷನಾಗುವೆನು. ಗೋವುಗಳ ಘೃತ ಮೊದಲಾದುವು ನನಗಿಷ್ಟವಾದ ನೈವೇದ್ಯವು.

೧೮೪. ಸುಂದರಿ! ನನಗೆ ಪೂರ್ಣಾಹುತಿಯಿಂದ ಅತ್ಯಂತ ಪ್ರೀತಿಯುಂಟಾಗುವುದು. ಶುಶ್ರೂಷೆಯೇ ನನಗಿಷ್ಟವಾದ ಕಷ್ಟವು. ಯತಿಗಳ ಪೂಜೆಯಿಂದ ಸಂತುಷ್ಟನಾಗುವೆನು.

೧೮೫. ಸೂರ್ಯನ ಉದಯಕಾಲ, ಅಸ್ತಮಯಕಾಲ, ಮಧ್ಯಾಹ್ನಗಳಲ್ಲಿ ಅರ್ಘ್ಯವನ್ನು ಕೊಡುವವನು ನನಗೆ ಪ್ರಿಯನು.

೧೮೬. ಭಕ್ತಿಯಿಲ್ಲದ ದಾನ, ತಪಸ್ಸು, ಯಜ್ಞ ಇವುಗಳಿಂದೇನು ಪ್ರಯೋಜನ? ದಯೆ, ಸತ್ಯ, ಅಸ್ತೇಯಗಳಿಂದಲೂ ದಂಭ, ಪೈಶುನ್ಯ (ಚಾಡಿಹೇಳೋಣ) ವಿಲ್ಲದೆಯೂ ಭಕ್ತಿಯಿಂದಲೂ ಸಮರ್ಪಿಸುವ ಅಲ್ಪವಸ್ತುಗಳು ನನಗೆ ಪ್ರಿಯವಾದುವು.

೧೮೮. ಮಹೇಶ್ವರನು ಹಿಂದೆ ಹೇಳಿದಂತೆ ಪ್ರಶ್ನೆಗಳಿಗೆ ಉತ್ತರವನ್ನು ಹೇಳುತ್ತಿರಲು ಬ್ರಹ್ಮಾದಿ ದೇವತೆಗಳೂ, ವಿಷ್ಣುವೂ ಅಲ್ಲಿಗೆ ಹೋದರು.

೧೮೯. ವಿಷ್ಣುವು ಹೇಳುತ್ತಾನೆ :—ಮಹೇಶ್ವರ! ನೀನು ದೈತ್ಯ, ದಾನವ, ರಾಕ್ಷಸರಿಗೆ ಬಹು ವರಗಳನ್ನು ಕೊಡುವುದರಿಂದ ನಾನು ಜಗತ್ತನ್ನು ರಕ್ಷಿಸಲು ಸಮರ್ಥನಲ್ಲ.

ಮುಕ್ತಿಂ ಯಾತಿ ನರೋ ದೇವ ಭವಭಕ್ತಿಂ ಕರೋತು ಕಃ ।
ಇಂದ್ರಾದಯೋಽಪಿ ಯೇ ದೇವಾ ಯಜ್ಞೈರಾಪ್ಯಾಯಯಂತಿ ತೇ ॥ ೯೦ ॥
ನ ಯಜಂತಿ ದ್ವಿಜಾ ಯಜ್ಞಾನ್ ಭಿಕ್ಷಾದಾನೇನ ತುಷ್ಯಸಿ ।

ರುದ್ರ ಉವಾಚ :—

ಇಂದ್ರಾದಿಭಿರ್ನಮೇ ಕಾರ್ಯಂ ಬ್ರಹ್ಮಾ ಮೇ ಕಿಂ ಕರಿಷ್ಯತಿ ॥ ೯೧ ॥
ಯೇನ ಕೇನ ಪ್ರಕಾರೇಣ ಪ್ರಜಾಃ ಪಾಲ್ಯಾಸ್ತ್ವಯಾಧುನಾ ।
ಮದೀಯಾ ಪ್ರಕೃತಿಸ್ತ್ವೇಷಾ ತಾಂ ಕಥಂ ತ್ಯಕ್ತುಮುತ್ಸಹೇ ॥ ೯೨ ॥
ತ್ವಯಾಹಂ ಬ್ರಹ್ಮಣಾ ದೇವೈರ್ವರಕರ್ಮಣಿ ಯೋಜಿತಃ ।
ಇದಾನೀಮೇವ ಕಿಂನಷ್ಟಂ ಮುಕ್ತ್ವಾ ದೇವೀಂ ತವಾಗ್ರತಃ ॥ ೯೩ ॥
ಭೂತ್ವಾ ಮೂರ್ತಿಂ ಪರಿತ್ಯಜ್ಯ ಏಕಾಕೀ ವಿಚರಾಮ್ಯಹಂ ।
ಇತ್ಯುಕ್ತ್ವಾ ಸ ಶಿವೋ ದೇವಸ್ತತ್ರೈವಾಂತರಧೀಯತ ॥ ೯೪ ॥
ಗತೇ ತಸ್ಮಿನ್ ಶಿವೇ ತತ್ರ ಸಂಕ್ಷೋಭಸ್ಸುಮಹಾನಭೂತ್ ।
ಉಮಾ ಪ್ರೋವಾಚ ಚೇಂದ್ರಾದೀನ್ ಬ್ರಹ್ಮವಿಷ್ಣುಗಣಾಂಸ್ತಥಾ ॥ ೯೫ ॥

---

೯೦. ನಿನ್ನಿಂದ ವರವನ್ನು ಪಡೆದವರು ವಿಕಾರಗೊಂಡು ವಧ್ಯರಾಗುವರು. ಪತ್ರ, ಪುಷ್ಪ, ಓಂಕಾರ, ಶಿವಎಂಬ ನಾಮ ಇವುಗಳಿಂದ ನಿನ್ನಲ್ಲಿ ಭಕ್ತಿಗೈಯುವ ಮಾನವರು ಮೋಕ್ಷವನ್ನು ಪಡೆಯುವರು.

೯೧. ಇಂದ್ರಾದಿ ದೇವತೆಗಳು ಯಜ್ಞದಿಂದ ಸಂತೋಷಗೊಳಿಸುವ ನಿನ್ನನ್ನು ದ್ವಿಜರು ಯಜ್ಞಮಾಡದೆ ಬಿಕ್ಷೆಯನ್ನು ನೀಡಿ ಸಂತೋಷಗೊಳಿಸುವರು.

೯೨. ರುದ್ರನು ಹೇಳುತ್ತಾನೆ :—ಇಂದ್ರಾದಿಗಳಿಂದ ನನಗೇನಾಗಬೇಕು. ಬ್ರಹ್ಮನು ನನಗೇನು ಮಾಡುವನು ? ನೀನು ಹೇಗಾದರೂ ಪ್ರಜೆಗಳನ್ನು ಕಾಪಾಡ ತಕ್ಕದು.

೯೩. ಇವಳು ನನ್ನ ಪ್ರಕೃತಿಯು. ಇವಳನ್ನು ನಾನು ಹೇಗೆ ಬೀಡಲಿ. ನೀನು, ಬ್ರಹ್ಮ, ಇತರ ದೇವತೆಗಳು ಸೇರಿ ನನ್ನನ್ನು ವರವನ್ನು ಕೊಡುವುದರಲ್ಲಿ ನೇಮಿಸಿದ್ದೀರಿ.

೯೪. ಈಗಲೂ ಏನೂ ಕೆಡಲಿಲ್ಲ. ದೇವಿಯನ್ನು ನಿನ್ನ ಮುಂದೆ ಬಿಟ್ಟು ಒಬ್ಬಂಟಿಗನಾಗಿ ಸಂಚರಿಸುವೆನು.

೯೫. ಆ ಶಿವನು ಹೀಗೆ ಹೇಳಿ ಅಲ್ಲಿಯೇ ಅಡಗಿಹೋಗಲು ಅಲ್ಲಿ ದೊಡ್ಡ ಗದ್ದಲವಾಯಿತು.

ಇದಾನೀಂ ಕಿಂಮಯಾ ಕಾರ್ಯಂ ಭವದ್ಭಿಃ ಶಿವವರ್ಜಿತೈಃ ।
ಅತ್ರಾಂತರೇ ಚ ಯೇಚಾನ್ಯೇ ದೇವಾಸ್ತತ್ರ ಸಮಾಗತಾಃ ॥ ೧೯೬ ॥
ಋಷಯಶ್ಚೈವ ಸಿದ್ಧಾಶ್ಚ ತಥಾ ನಾರದಪರ್ವತೌ ।
ಗಂಗಾಸರಸ್ವತೀನದ್ಯಃ ನಾಗಾಯಕ್ಷಾಸ್ಸಮಾಗತಾಃ ॥ ೧೯೭ ॥
ಬ್ರಹ್ಮಾದಿಭಿಸ್ಸಮಾಲೋಚ್ಯ ಕಥಮೇತದ್ಭವಿಷ್ಯತಿ ।

ವಿಷ್ಣುರುವಾಚ :—

ಸಹೈವ ಗಮ್ಯತಾಂ ತತ್ರ ಯತ್ರ ದೇವೋ ಗತಶ್ಶಿವಃ ॥ ೧೯೮ ॥
ಸ್ವಲ್ಪಾಯಾಸೇನ ತೇ ಯಾಂತು ನರಾಸ್ಸ್ವರ್ಗಂ ಶಿವಾಜ್ಞಯಾ ।
ಸತ್ಯಲೋಕೇ ನರಾಯಾಂತು ಯಾಂತು ದೇವಾ ಧರಾತಲಂ ॥ ೧೯೯ ॥
ರಕ್ಷೋ ದಾನವದೈತ್ಯಾನಾಂ ವರಾನ್ಯಚ್ಛತು ಶಂಕರಃ ।
ತೇಷಾಂ ಬಾಧಾ ಮಯಾ ಕಾರ್ಯಾ ಯೇಚ ಸ್ಯುರ್ಧರ್ಮಲೋಪಕಾಃ ॥
ಹೃಷ್ಟೇ ಶಿವೇ ಮಯಾ ಕಾರ್ಯಾ ವ್ಯವಸ್ಥಾ ಸ್ವರ್ಗಗಾಮಿನಾಂ ।
ತ್ರಯೀಧರ್ಮಂ ಪರಿತ್ಯಜ್ಯ ಯೇಽನ್ಯಂ ಧರ್ಮಮುಪಾಸತೇ ॥ ೨೦೧ ॥

---

೧೯೬. ಆಗ ಪಾರ್ವತಿಯು ಇಂದ್ರಾದಿ ದೇವತೆಗಳನ್ನೂ, ಬ್ರಹ್ಮ ವಿಷ್ಣುಗಳನ್ನೂ ಗಣಗಳನ್ನೂ ಕುರಿತು ಶಿವನನ್ನು ತ್ಯಜಿಸಿದ ನಿಮ್ಮಿಂದ ಈಗ ನಾನೇನು ಮಾಡಬೇಕು? ಎಂದು ಪ್ರಶ್ನೆಮಾಡಿದಳು.

೧೯೭–೧೯೮. ಈ ಮಧ್ಯದಲ್ಲಿ ಅಲ್ಲಿಗೆ ಬಂದ ದೇವತೆಗಳೂ, ಋಷಿಗಳೂ, ಸಿದ್ಧರೂ, ನಾರದ ಪರ್ವತರೂ, ಗಂಗಾ ಸರಸ್ವತೀ ನದಿಗಳೂ, ನಾಗ ಯಕ್ಷರೂ ಬ್ರಹ್ಮಾದಿ ದೇವತೆಗಳೊಡನೆ ಇದು ಹೇಗಾಗುವುದೆಂದು ಆಲೋಚಿಸಿದರು.

೧೯೯. ವಿಷ್ಣುವು ಹೇಳುತ್ತಾನೆ :— ಜನರು ಶಿವನೆಡೆಗೆ ಹೋಗಿ ಅವನ ಅಪ್ಪಣೆ ಯಿಂದ ಆಯಾಸವಿಲ್ಲದೆ ಸ್ವರ್ಗಕ್ಕೆ ತೆರಳಲಿ.

೨೦೦–೨೦೧. ಮನುಷ್ಯರು ಸತ್ಯಲೋಕಕ್ಕೆ ಹೋಗಲಿ. ದೇವತೆಗಳು ಭೂಮಿಗೆ ಹೋಗಲಿ. ಶಂಕರನು ರಾಕ್ಷಸ, ದಾನವ, ದೈತ್ಯರಿಗೆ ವರವನ್ನೀಯಲಿ. ಧರ್ಮಲೋಪಕರಾದ ಅವರನ್ನು ನಾನು ಪೀಡಿಸುವೆನು. ಶಿವನು ಸಂತುಷ್ಟನಾಗಲು ಸ್ವರ್ಗಕ್ಕೆ ತೆರಳುವ ಜನರಿಗೆ ವ್ಯವಸ್ಥೆಯನ್ನು ಮಾಡಬೇಕು.

ತೇ ನರಾ ನರಕಂ ಯಾಂತು ಯಾವದಾಭೂತಸಂಪ್ಲವಂ ।
ಯದಾಽದೃಶ್ಯ ಶ್ಶಿವೋ ಜಾತಃ ಪ್ರವಿವೇಶಗಿರೇರ್ವನಂ ॥ ೨೦೨ ॥
ಗಿರೀಣಾಂ ಮಧ್ಯಮಾಸ್ಥಾಯ ತ್ಯಕ್ತ್ವಾ ದಿವ್ಯೇಸವಾಸಸೀ ।
ಗಜಾಜಿನಂ ಪರಿತ್ಯಜ್ಯ ತ್ಯಕ್ತ್ವಾ ಮೂರ್ತಿಂ ಮಹೇಶ್ವರಃ ॥ ೨೦೩ ॥
ಭಿತ್ವಾ ಭೂಮಿತಲಂ ದೇವಃ ಸ್ಥಾಣುರೂಪೋ ಬಭೂವ ಸಃ ।
ಯಸ್ಮಾತ್ಸ್ವಯಂಭೂರ್ಭವತಿ ಭವಸ್ತಸ್ಮಾತ್ಸ್ವಯಂ ಹರಃ ॥ ೨೦೪ ॥
ಅತ್ರಾಂತರೇ ಸುರಾಸ್ಸರ್ವೇ ನ ಪಶ್ಯಂತಿ ಮಹೇಶ್ವರಂ ।
ಜ್ಞಾನಾತೀತಂ ಕಲಾತೀತಂ ದಿವ್ಯಧ್ಯಾನಬಹಿಸ್ಥಿತಂ ॥ ೨೦೫ ॥
ಯದಾ ದೇವಾ ವ್ಯಾಕುಲಾಸ್ಸಂಪತಂತಿ ।
ರವಿರ್ವಾಯುರಂಬರಂ ತೋಯಮುರ್ವೀ ।
ನಿಜೇ ಸ್ಥಾನೇ ವರ್ತಮಾನಾ ಉಮಾ ಯಾಃ ।
ಶಶಂಸುರ್ವೈ ದೇವದೇವಂ ಸುರಾಣಾಂ ॥ ೨೦೬ ॥
ಸ್ವರ್ಗೇ ಧರಿತ್ರ್ಯಾಂ ಚರಿತಂ ತಲೇಷು
ದೇವೇಷು ಮರ್ತ್ಯೇಷು ಸರೀಸೃಪೇಷು ।
ಸ್ಥೂಲೇಷು ಸೂಕ್ಷ್ಮೇಷು ಯಥಾ ತಥೈವ
ಸತ್ಯಂ ಹಿ ವಾಚ್ಯಂ ಪದಮಸ್ಮದೀಯಂ ॥ ೨೦೭ ॥

---

೨೦೨. ವೇದಧರ್ಮವನ್ನು ಬಿಟ್ಟು ಇತರ ಧರ್ಮವನ್ನು ಉಪಾಸಿಸುವ ಮಾನವರು ಪ್ರಳಯಕಾಲದವರೆಗೆ ನರಕ ವಾಸಿಗಳಾಗಲಿ.

೨೦೩–೨೦೪. ಶಿವನು ಅದೃಶ್ಯನಾದ ಕೂಡಲೆ ಅವನು ಪರ್ವತದ ಮಧ್ಯದಲ್ಲಿರುವ ವನವನ್ನು ಹೊಕ್ಕು, ತನ್ನ ದಿವ್ಯವಸ್ತ್ರಗಳನ್ನೂ, ಆನೆಯ ಚರ್ಮವನ್ನೂ ಶರೀರವನ್ನೂ ತ್ಯಜಿಸಿ ಭೂತಲವನ್ನು ಭೇದಿಸಿ ಸ್ಥಾಣುರೂಪನಾದನು.

೨೦೫–೨೦೬. ಹರನು ತಾನೇ ವ್ಯಕ್ತನಾಗುವುದರಿಂದ ಸ್ವಯಂಭೂ ಎನ್ನಿಸಿಕೊಳ್ಳುವನು. ಈ ಮಧ್ಯದಲ್ಲಿ ಸಕಲದೇವತೆಗಳು ಜ್ಞಾನಾತೀತನೂ, ಕಲಾತಿಕ್ರಾಂತನೂ ದಿವ್ಯಧ್ಯಾನಕ್ಕೆ ಸಿಲುಕದವನೂ ಆದ ಮಹೇಶ್ವರನು ಕಾಣದೆ ವ್ಯಾಕುಲಗೊಳ್ಳಲು ಸೂರ್ಯ, ವಾಯು, ಆಕಾಶ, ನೀರು, ಭೂಮಿಗಳು ತಮ್ಮ ಸ್ಥಾನದಲ್ಲಿಯೇ ಇದ್ದು ಶಂಕರನ ವಿಷಯವನ್ನು ಪಾರ್ವತಿಗೆ ತಿಳಿಸಿದುವು.

೨೦೭. ಶಂಕರನಿಗೆ ಸ್ವರ್ಗ, ಭೂಮಿ ಪಾತಾಳ, ದೇವತೆಗಳು ಮನುಷ್ಯರು, ಹಾವುಗಳು, ಸ್ಥೂಲ, ಸೂಕ್ಷ್ಮವಸ್ತುಗಳು ಇವುಗಳು ಹೇಗೆ ಆವಾಸಸ್ಥಾನಗಳೊ ನಮ್ಮ ಸ್ಥಾನವೂ ಹಾಗೆಯೇ.

ತತೋ ದೇವಾಃ ಪ್ರಚಲಿತಾಃ ಕೃತ್ವಾ ದೇವೀಂ ಪುರಸ್ಸರಂ ।
ನಂದಿಭದ್ರಾದಯಸ್ಸರ್ವೇ ದೇವಾ ಇಂದ್ರಾದಯಸ್ತಥಾ ॥ ೨೦೮ ॥
ಸ್ಕಂದೇನ ಸಹಿತಾ ದೇವೀ ಸಿಂಹಾರೂಢಾ ಯಯೌ ಸ್ವಯಂ ।
ಅಧಿರುಹ್ಯ ಗರುತ್ಮಂತಂ ಯಯೌ ವಿಷ್ಣುಸ್ಸನಾತನಃ ॥ ೨೦೯ ॥
ಹಂಸಾಧಿರೂಢೋ ಭಗವಾನ್ ಬ್ರಹ್ಮಾ ಚಾಯಾತಿ ಪೃಷ್ಠತಃ ।
ಐರಾವತಂ ಸಮಾರುಹ್ಯ ದೇವರಾಜೋಗಮತ್ಸ್ವಯಂ ॥ ೨೧೦ ॥
ಗಂಗಾ ಸರಸ್ವತೀ ದೇವೀ ಯಮುನಾ ಚ ಮಹಾನದೀ ।
ದೇವತಾಶ್ಚ ಗತಾಸ್ಸರ್ವೇ ನಾಗಾ ಯಕ್ಷಾಸ್ಸಕಿಂನ್ನರಾಃ ॥ ೨೧೧ ॥
ಗತಾಸ್ಸಂಕ್ಷೇಪತಸ್ಸರ್ವೇ ಯತ್ರದೇವೋ ಮಹೇಶ್ವರಃ ।
ಅಧಿರುಹ್ಯಗಿರೇಶ್ಶೃಂಗಂ ಅಂಬಾದೇವೀ ವ್ಯವಸ್ಥಿತಾ ॥ ೨೧೨ ॥
ವಿಷ್ಣುರ್ಮುಕ್ತ್ವಾ ಗರುತ್ಮಂತಂ ಸ್ಥಿತೋ ರೈವತಕೇ ಗಿರೌ ।
ಸ್ತುತಿಂ ಚಕ್ರೇ ತದಾ ದೇವೀ ಜಗುರ್ಗೀತಂ ಸುಸಂಯುತಾಃ ॥ ೨೧೩ ॥
ಐರಾವತಪದಾಕ್ರಾಂತೋ ನ ಚಚಾಲ ಸಪರ್ವತಃ ।
ಭಿತ್ವಾ ಭೂಮಿತಲಂ ತತ್ರ ನಾಗರಾಜಸ್ಸಮಾಗತಃ ॥ ೨೧೪ ॥

---

೨೦೮. ಬಳಿಕ ಇಂದ್ರಾದಿ ದೇವತೆಗಳೂ, ನಂದಿ, ಭದ್ರಾದಿಗಳೂ ಗೌರಿಯನ್ನು ಮುಂದಿರಿಸಿಕೊಂಡು ಹೊರಟರು.

೨೦೯. ದೇವಿಯು ಸಿಂಹವನ್ನೇರಿ ಸ್ಕಂದನೊಡನೆ ತಾನೇ ಹೊರಟಳು. ವಿಷ್ಣುವು ಗರುಡಾರೂಢನಾಗಿ ಹೊರಟನು.

೨೧೦. ಬ್ರಹ್ಮನು ಹಂಸದ ಮೇಲೆ ಕುಳಿತು ಹಿಂಬಾಲಿಸಿದನು. ಇಂದ್ರನು ಐರಾವತದಲ್ಲಿ ಕುಳಿತು ಹೊರಟನು.

೨೧೧—೨೧೨. ಗಂಗೆ, ಸರಸ್ವತಿ, ಯಮುನಾ, ಮೊದಲಾದ ಸಕಲ ನದಿಗಳೂ ದೇವತೆಗಳು, ನಾಗಗಳು, ಯಕ್ಷರು, ಕಿನ್ನರರೂ ಒಟ್ಟಿಗೆ ಸೇರಿ ಮಹೇಶ್ವರನೆಡೆಗೆ ಹೋದರು. ಪಾರ್ವತಿಯು ಗಿರಿಶೃಂಗವನ್ನೇರಿ ನಿಂತಳು.

೨೧೩. ವಿಷ್ಣುವು ಗರುಡನಿಂದಿಳಿದು ರೈವತಕ ಗಿರಿಯಲ್ಲಿ ನಿಂತನು. ಆಗ ದೇವಿಯು ಸ್ತುತಿಸಿದಳು. ಉಳಿದವರು ಒಟ್ಟಿಗೆ ಹಾಡಿದರು.

೨೧೪. ಐರಾವತದ ಪಾದದಿಂದ ಆಕ್ರಮಿಸಲ್ಪಟ್ಟ ಆ ಪರ್ವತವು ನಡುಗಲಿಲ್ಲ. ಅಲ್ಲಿ ಮಹಾಶೇಷನು ಭೂಮಿಯನ್ನು ಸೀಳಿಕೊಂಡು ಮೇಲಕ್ಕೆ ಬಂದನು.

ಗಂಗಾದ್ಯಾಸ್ಸರಿತಸ್ಸರ್ವಾಸ್ತೇನ ರಂಧ್ರೇಣ ಚಾಗತಾಃ ।
ಬ್ರಹ್ಮಾ ವಿಷ್ಣುರ್ಯದಾ ದೇವಾಸ್ತುತಿಂ ಚಕ್ರುಸ್ಸಮಂತತಃ ॥ ೨೧೫ ॥
ದದರ್ಶ ರೂಪಂ ಭಗವಾನ್ ಭವೋ ದೇವಸ್ತದಾ ಹರಃ ।
ತತೋ ಹೃಷ್ಟಾಸ್ಸುರಾಸ್ಸರ್ವೇ ಅಂಬಾ ಹೃಷ್ಟಾ ಗಣಾಶ್ಚತೇ ॥ ೨೧೬ ॥
ಗಮ್ಯತಾಂ ದೇವ ಕೈಲಾಸಂ ದೇವ್ಯೇತಿ ಸಂಪ್ರಮೋದಿತಃ ।

ಈಶ್ವರ ಉವಾಚ :—

ಯದಿ ಹೃಷ್ಟಾ ಸ್ಸುರಾಸ್ಸರ್ವೇ ಗಂಗಾದ್ಯಾಸ್ಸರಿತಸ್ತಥಾ ॥ ೨೧೭ ॥
ಗಿರೌ ರೈವತಕೇ ವಿಷ್ಣುರಂಬಾಚಾತ್ರೈವ ತಿಷ್ಠತು ।
ಸರಸ್ವತೀಚ ಯಮುನಾ ರೇವಾ ಚಾಸ್ಮಿನ್ಸ್ವ್ಯವಸ್ಥಿತಾಃ ॥ ೨೧೮ ॥
ಸ್ವರ್ಣರೂಪಂ ಜಲಂ ಯಸ್ಮಾತ್ಸ್ವರ್ಣರೇಖೇತಿ ಸಾನದೀ ।
ವಸ್ತ್ರಾಪಥಮಿದಂ ಕ್ಷೇತ್ರಂ ಭವೋ ದೇವೋತ್ರ ತಿಷ್ಠತು ॥ ೨೧೯ ॥
ತೀರ್ಥಮೇತನ್ಮಯಾ ಪ್ರೋಕ್ತಂ ಭುಕ್ತಿಮುಕ್ತಿಪ್ರದಾಯಕಂ ।
ಅತ್ರ ಸ್ನಾತೋ ನರೋ ನಾರೀ ಮುಚ್ಯತೇ ಸರ್ವಪಾತಕೈಃ ॥ ೨೨೦ ॥
ಇತಿ ಪ್ರೋಚ್ಯ ಶಿವೋದೇವಃ ಕಲಾಂ ನ್ಯಸ್ಯ ಭವೇ ತದಾ ।
ಪಶ್ಯತಾಂ ಸರ್ವದೇವಾನಾಂ ಯಯೌ ಕೈಲಾಸಪರ್ವತಂ ॥ ೨೨೧ ॥

---

೨೧೫—೨೧೬. ಗಂಗಾದಿ ಸಕಲ ನದಿಗಳೂ ಆರಂಧ್ರದಿಂದ ಬಂದುವು. ಬ್ರಹ್ಮ, ವಿಷ್ಣುಗಳು ಸ್ತುತಿಸಲು ಪೂಜ್ಯನಾದ ಶಿವನು ಅಲ್ಲಿ ಪ್ರತ್ಯಕ್ಷನಾದನು.

೨೧೭. ಬಳಿಕ ಸುರರೂ, ದೇವಿಯೂ,ಗಣಗಳೂ ಸಂತೋಷಗೊಂಡು,"ಸ್ವಾಮಿ! ದೇವಿಯೊಡನೆ ಕೈಲಾಸಕ್ಕೆ ಹೊರಡು" ಎಂದು ಹೇಳಿ ಶಂಕರನನ್ನು ಸಂತೋಷಗೊಳಿಸಿದರು.

೨೧೮. ಈಶ್ವರನು ಹೇಳುತ್ತಾನೆ :—ಸಕಲ ದೇವತೆಗಳೂ, ಗಂಗಾದಿ ನದಿಗಳೂ ಸಂತೋಷಗೊಂಡಿದ್ದರೆ ಈ ರೈವತಕ ಪರ್ವತದಲ್ಲಿ ವಿಷ್ಣುವೂ, ಪಾರ್ವತಿಯೂ ನೆಲೆಸಲಿ.

೨೧೯. ಈ ಪರ್ವತದಲ್ಲಿ ಸರಸ್ವತಿ, ಯಮುನಾ ನದಿಗಳಿರುವುವು. ಈ ನದಿಯ ನೀರು ಸ್ವರ್ಣದಂತಿರುವುದರಿಂದ ಇದಕ್ಕೆ ಸ್ವರ್ಣರೇಖೆಯೆಂದು ಹೆಸರಾಯಿತು.

೨೨೦. ಭಕ್ತಿ ಮುಕ್ತಿಗಳನ್ನೀಯುವ ನಾನು ಹೇಳಿದ ಈ ವಸ್ತ್ರಾಪಥ ಕ್ಷೇತ್ರದಲ್ಲಿ ಭವನಿರಲಿ.

೨೨೧. ಶಿವನು ಹೀಗೆಂದು ತನ್ನ ಕಲೆಯನ್ನು ಭವನಲ್ಲಿರಿಸಿ ಸಕಲ ದೇವತೆಗಳೂ ನೋಡುತ್ತಿರುವಾಗಲೆ ಕೈಲಾಸಪರ್ವತಕ್ಕೆ ತೆರಳಿದನು.

ಅಂಬೇತಿ ಸ್ಕಂದವದನಾತ್ಕಲಾಂ ನ್ಯಸ್ಯ ಗಿರೌ ತದಾ ।
ದೇವೇನ ಸಹಿತಾ ದೇವೀ ವೃಷಾರೂಢಾ ಯಯೌ ಸ್ವಯಂ ॥ ೨೨೨ ॥
ನಾರಾಯಣೋ ರೈವತಕೇ ಗಿರೌ ರಮ್ಯೇಽಸ್ಥಿತಸ್ಸ್ವಯಂ ।
ಕಲ್ಪಾದೌ ಚ ಯುಗಾದೌ ಚ ಸ್ಥಿತೋ ವಿಷ್ಣುಸ್ಸದಾ ಗಿರೌ ॥ ೨೨೩ ॥
ಬಹುರಾತ್ರಸ್ಥಿತೋ ದೇವಃ ಕೃತ್ವಾ ದೈತ್ಯನಿಬರ್ಹಣಂ ।
ರೇಮೇ ರೈವತಕೇ ದೇವ ಯಾವದಾಭೂತಸಂಪ್ಲವಂ ॥ ೨೨೪ ॥
ನಾರಸಿಂಹೇನ ರೂಪೇಣ ಹಿರಣ್ಯಕಶಿಪುರ್ಹತಃ ।
ಹತ್ವಾ ತದಾಗತಸ್ತತ್ರ ನಾರಸಿಂಹಂ ಮುಮೋಚ ಹ ॥ ೨೨೫ ॥
ಮಹಾವರಾಹರೂಪೇಣ ಹಿರಣ್ಯಾಕ್ಷೋ ನಿಪಾತಿತಃ ।
ತದೇವಮುಕ್ತ್ವಾ ದೇವೇಶಸ್ಥಿತೋ ರೈವತಕೇ ಗಿರೌ ॥ ೨೨೬ ॥
ಸ ಪೃಥುಂ ಪಾರ್ಥಿವಂ ಕೃತ್ವಾ ದೇವಕಾರ್ಯೇಣ ವೈ ನೃಪ ।
ಗಿರೌ ರೈವತಕೇ ದೇವ ಉವಾಸ ಸುರಪೂಜತಃ ॥ ೨೨೭ ॥
ಅತ್ರಾಗತ್ಯಃಪೃಥುಃ ಪೂರ್ವಂ ಚಕ್ರೇ ದೇವ ಪ್ರಪೂಜನಂ ।
ಜಪಮಾಲಾ ತದಾ ಕಂಠೇ ಪೃಥುನಾ ಸಂನಿವೇಶಿತಾ ।
ದಾಮೋದರೇತಿ ದೇವೇಶಂ ನಾಮ ಚಕ್ರೇ ಪೃಥುಸ್ಸ್ವಯಂ ॥ ೨೨೮ ॥

---

೨೨೨ ಸ್ಕಂದನು ಅಂಬ ಎಂದು ಹೇಳಿದ್ದರಿಂದ ದೇವಿಯು ಆ ಶೈಲದಲ್ಲಿ ತನ್ನ ಕಲೆಯನ್ನಿಟ್ಟು ಶಿವನೊಡನೆ ವೃಷಭವನ್ನೇರಿ ಹೊರಟುಹೋದಳು.

೨೨೩. ಆ ವಿಷ್ಣುವು ಅನೇಕ ಕಾಲ ಅಲ್ಲಿದ್ದು ದೈತ್ಯರನ್ನು ಸಂಹರಿಸಿ ಪ್ರಳಯ ಕಾಲದವರೆಗೆ ಆ ರೈವತಕ ಪರ್ವತದಲ್ಲಿಯೇ ವಿನೋದಪಟ್ಟನು.

೨೨೫. ವಿಷ್ಣುವು ನಾರಸಿಂಹರೂಪದಿಂದ ಹಿರಣ್ಯಕಶಿಪುವನ್ನು ಕೊಂದು ಆ ರೂಪವನ್ನು ತ್ಯಜಿಸಿದನು.

೨೨೬. ಮಹಾ ವರಾಹ ರೂಪದಿಂದ ಹಿರಣ್ಯಾಕ್ಷನನ್ನು ಕೊಂದು ಆ ರೂಪವನ್ನು ತ್ಯಜಿಸಿ ರೈವತಕ ಪರ್ವತದಲ್ಲಿ ನೆಲೆಸಿದನು.

೨೨೭. ಅವನು ದೇವತೆಗಳಿಗಾಗಿ ಪೃಥುವನ್ನು ದೊರೆಯನ್ನಾಗಿ ಮಾಡಿ ಈ ಪರ್ವತದಲ್ಲಿ ವಾಸಿಸುತ್ತ ದೇವತೆಗಳಿಂದ ಪೂಜಿಸಲ್ಪಡುತ್ತಿದ್ದನು.

೨೨೮. ಹಿಂದೆ ಪೃಥುರಾಜನು ಇಲ್ಲಿಗೆ ಬಂದು ವಿಷ್ಣುವನ್ನು ಪೂಜಿಸಿ ಅವನ ಕುತ್ತಿಗೆಗೆ ಜಪಮಾಲೆಯನ್ನು ಹಾಕಿ ದಾಮೋದರನೆಂದು ಹೆಸರನ್ನಿಟ್ಟನು.

ವಸ್ತ್ರಾಪಥೇ ದೇವವರೋ ಭವಃ ಸ್ಥಿತೋ
ದಾಮೋದರೋ ರೈವತಕೇ ವ್ಯವಸ್ಥಿತಃ ।
ಅಂಬೇತಿ ದೇವೀ ಗಿರಿಮೂರ್ಧ್ನಿ ಸಂಸ್ಥಿತಾ
ದೇವಾಶ್ಚ ಸರ್ವೇ ಪರಿತಃ ಪ್ರತಿಷ್ಠಿತಾಃ ॥ ೨೨೯ ॥
ಕ್ಷೇತ್ರಾಧಿಪಾ ಸ್ತೀರ್ಥವರಸ್ಯ ರಕ್ಷಕಾ
ದೇವೇನ ಮುಕ್ತಾ ಭವಸಂನಿಧಾನತಃ ।
ಪಶ್ಯಂತಿ ಯೇ ದೇವವರಂ ಭವಾಭಿಧಂ
ಮುಚ್ಯಂತಿ ತೇ ಯಾಂತಿ ದಿವಂ ನರಾ ಭುವಃ ॥ ೨೩೦ ॥
ವಸ್ತ್ರಾಪಥಸ್ಯ ಕ್ಷೇತ್ರಸ್ಯ ಭವಸ್ಯ ಚ ಮಯಾ ತವ ।
ಉತ್ಪತ್ತಿಃ ಕಥಿತಾ ರಾಜನ್ ಕಿಮನ್ಯಚ್ಛ್ರೋತುಮಿಚ್ಛಸಿ ॥ ೨೩೧ ॥
ಶೃಣೋತಿ ಪಠತೇ ಯಶ್ಚ ಕಥಾಂ ಚೇಮಾಂ ಸಮಂತತಃ ।
ಸರ್ವಪಾಪವಿನಿರ್ಮುಕ್ತಃ ಸ್ವರ್ಗೇಲೋಕೇ ಮಹೀಯತೇ ॥ ೨೩೨ ॥
ಬ್ರಹ್ಮಘ್ನಶ್ಚ ಸುರಾಪಶ್ಚ ಭ್ರೂಣಹಾ ಗುರುತಲ್ಪಗಃ ।
ಸ್ವರ್ಣರೇಖಾಜಲೇ ಸ್ನಾತಃ ಮುಚ್ಯತೇ ಸರ್ವಪಾತಕೈಃ ॥ ೨೩೩ ॥
ಯೇ ಚ ಕೀಟ ಪತಂಗಾದ್ಯಾಃ ಸ್ವರ್ಣರೇಖಾಜಲೇ ಮೃತಾ: ।
ಸರ್ವಪಾತಕನಿರ್ಮುಕ್ತಾಸ್ತೇ ಪ್ರಯಾಂತಿ ಸುರಾಲಯಂ ॥ ೨೩೪ ॥

---

೨೨೯. ಭವನು ವಸ್ತ್ರಾಪಥ ಕ್ಷೇತ್ರದಲ್ಲಿಯೂ, ದಾಮೋದರನು ರೈವತಕ ಪರ್ವತದಲ್ಲಿಯೂ, ದೇವಿಯು ಅಂಬಾ ಎಂಬ ಹೆಸರಿನಿಂದ ಪರ್ವತದ ಮೇಲೆಯೂ ವಾಸವಾಗಿದ್ದರು. ದೇವತೆಗಳು ಇವರ ಸುತ್ತಲೂ ಇದ್ದರು.

೨೩೦. ಮಹೇಶ್ವರನು ಈ ತೀರ್ಥವನ್ನು ರಕ್ಷಿಸುವ ಕ್ಷೇತ್ರಾಧಿಪತಿಗಳನ್ನು ಭವನ ಸನ್ನಿಧಿಯಲ್ಲಿಟ್ಟಿರುವನು. ಈ ಭವನೆಂಬ ಮಹೇಶ್ವರನನ್ನು ದರ್ಶನ ಮಾಡಿದ ಮಾನವರು ಪಾಪಮುಕ್ತರಾಗಿ ಸ್ವರ್ಗಕ್ಕೆ ತೆರಳುವರು.

೨೩೧. ದೊರೆಯೆ ! ವಸ್ತ್ರಾಪಥಕ್ಷೇತ್ರ, ಮತ್ತು ಭವ ಇವರ ಉತ್ಪತ್ತಿಯನ್ನು ನಿನಗೆ ಹೇಳಿರುವೆನು. ಬೇರೆ ಏನನ್ನು ಕೇಳಬಯಸುವೆ.

೨೩೨. ಈ ಕಥೆಯನ್ನು ಕೇಳುವವರೂ, ಪಠಿಸುವವರೂ ಸಕಲ ಪಾಪಮುಕ್ತರಾಗಿ ಸ್ವರ್ಗಲೋಕದಲ್ಲಿ ಪೂಜ್ಯರಾಗುವರು.

೨೩೩. ಬ್ರಾಹ್ಮಹತ್ಯೆ, ಶಿಶುಹತ್ಯೆಗಳನ್ನು ಮಾಡಿದವರೂ, ಗುರು ಪತ್ನೀಸಂಗವನ್ನು ಮಾಡಿದವರೂ, ಸ್ವರ್ಣರೇಖಾ ನದಿಯ ನೀರಿನಲ್ಲಿ ಮಿಂದು ಸಕಲ ಪಾಪಮುಕ್ತರಾಗುವರು.

೨೩೪. ಈ ನದಿಯ ನೀರಿನಲ್ಲಿ ಮೃತವಾದ ಕೀಟ, ಪತಂಗ ಮೊದಲಾದುವೂ ಸಕಲ ಪಾಪಮುಕ್ತವಾಗಿ ದೇವಲೋಕಕ್ಕೆ ತೆರಳುವುವು.

**ಸ್ವರ್ಣರೇಖಾಜಲೇ ಸ್ನಾತ್ವಾ ಸಂಧ್ಯಾಂ ಶ್ರಾದ್ಧಂ ಕರೋತಿ ಯಃ ।**
**ವಸ್ತ್ರಾಪಥೇ ಭವಂ ಪೂಜ್ಯ ಬ್ರಹ್ಮಲೋಕಂ ಸಗಚ್ಛತಿ ॥ ೨೩೫ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ ಭವೋತ್ಪತ್ತಿವೃತ್ತಾಂತವರ್ಣನಂ ನಾಮ ಅಷ್ಟಮೋಽಧ್ಯಾಯಃ

---

೨೩೫ ಸ್ವರ್ಣರೇಖಾ ನದಿಯ ನೀರಿನಲ್ಲಿ ಮಿಂದು ಸಂಧ್ಯಾವಂದನೆಶ್ರಾದ್ಧಗಳನ್ನು ಮಾಡಿ ವಸ್ತ್ರಾಪಥದಲ್ಲಿರುವ ಭವನನ್ನು ಪೂಜಿಸಿದವರು ಬ್ರಹ್ಮಲೋಕವನ್ನು ಸೇರುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ ಭವೋತ್ಪತ್ತಿವೃತ್ತಾಂತವರ್ಣನವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದಶಮೋಽಧ್ಯಾಯಃ

### ಸಾರಸ್ವತಕೃತೋಪದೇಶವರ್ಣನಂ

ಪಾರ್ವತ್ಯುವಾಚ :—

ಅಹೋ ತೀರ್ಥಸ್ಯ ಮಾಹಾತ್ಮ್ಯಂ ಗಿರೇ ರೈವತಕಸ್ಯ ಚ ।
ಭವಸ್ಯ ದೇವದೇವಸ್ಯ ತಥಾ ವಸ್ತ್ರಾಪಥಸ್ಯ ಚ ॥ ೧ ॥

ಗಂಗಾ ಸರಸ್ವತೀ ಚೈವ ಗೋಮತೀ ನರ್ಮದಾ ನದೀ ।
ಸ್ವರ್ಣರೇಖಾಜಲೇ ಸರ್ವಾಸ್ತಥಾ ಬ್ರಹ್ಮಾ ಸವಾಸವಃ ॥ ೨ ॥

ಬ್ರಹ್ಮೇಂದ್ರವಿಷ್ಣುಮುಖಾನಾಂ ದೇವಾನಾಂ ಶಂಕರಸ್ಯ ಚ ।
ವಾಸೋ ವಿರಚಿತಸ್ತತ್ರ ಯಾವದ್ಬ್ರಹ್ಮದಿನಂ ಭವೇತ್ ॥ ೩ ॥

ಕ್ಷೇತ್ರತೀರ್ಥಪ್ರಭಾವಂ ಚ ಪ್ರಸಾದಾತ್ತವ ಶಂಕರ ।
ಶ್ರುತಂ ಸವಿಸ್ತರಂ ಸರ್ವಮಿದಂ ತ್ವದುದಿತಂ ಮಯಾ ॥ ೪ ॥

---

### ಕನ್ನಡದ ಅನುವಾದ

### ಸಾರಸ್ವತಕೃತೋಪದೇಶವರ್ಣನಂ

೧. ಪಾರ್ವತಿಯು ಹೇಳುತ್ತಾಳೆ :—ಆ ವಸ್ತ್ರಾಪಥಕ್ಷೇತ್ರ, ರೈವತಕಪರ್ವತ, ಭವ ಮೂರ್ತಿಗಳ ಮಾಹಾತ್ಮ್ಯವು ಆಶ್ಚರ್ಯಕರವಾದುದು.

೨–೩. ಗಂಗಾ, ಸರಸ್ವತೀ, ಗೋಮತೀ, ನರ್ಮದಾ ಇವು ಸ್ವರ್ಣರೇಖಾ ಜಲದಲ್ಲಿರುವುವು. ಹಾಗೆಯೇ ಬ್ರಹ್ಮ ವಿಷ್ಣು ಮಹೇಶ್ವರರೂ ಇಂದ್ರಾದಿ ದೇವತೆಗಳೊಡನೆ ಅಲ್ಲಿ ಪ್ರಳಯಕಾಲದವರೆಗೆ ವಾಸಿಸುವರು.

೪. ಶಂಕರ! ನಿನ್ನ ಅನುಗ್ರಹದಿಂದ ವಿಸ್ತಾರವಾದ ಕ್ಷೇತ್ರ, ತೀರ್ಥಗಳ ಮಾಹಾತ್ಮ್ಯವನ್ನು ಕೇಳಿದೆನು.

ಮಹೇ[illegible]ಸೋ ಬ್ರೂಹಿ ಕಿಂ ಚಕಾರ ಜನೇಶ್ವರಃ |
ಭೋಜರಾಜೋ ಮೃಗೀಂ ಪ್ರಾಪ್ಯ ಸಚ ಸಾರ್ಸ್ವತೋ ಮುನಿಃ || ೫ ||

ಈಶ್ವರ ಉವಾಚ :—

ತಾಸು ಸರ್ವಾಸು ನಾರೀಷು ರೂಪೌದಾರ್ಯಗುಣಾಧಿಕಾ |
ನಿತ್ಯಂ ಪ್ರಮುದಿತಾ ಶಾಂತಾ ನಿತ್ಯಂ ಮಂಗಲಕಾರಿಕಾ || ೬ ||
ಮಾತಾ ಸ್ವಸಾ ಸಖೀ ಪುತ್ರೀ ಸ್ತ್ರೀಷು ಸಂಬಂಧವರ್ಧಿನೀ |
ಪಿತಾ ಭ್ರಾತಾ ಗುರುಃ ಪುತ್ರಃ ಪುರುಷೇಷು ತಥಾ ಕೃತಃ || ೭ ||
ಏವಂ ಗುಣವತೀಂ ಭಾರ್ಯಾಂ ಪ್ರಾಪ್ಯ ಹೃಷ್ಟೋ ಜನೇಶ್ವರಃ |
ಸಾರಸ್ವತಂ ಮುನಿಂ ಸ್ತುತ್ವಾ ರಾಜಾ ವಚನಮಬ್ರವೀತ್ || ೮ ||

ರಾಜೋವಾಚ :—

ಬ್ರಹ್ಮಾ ವಿಷ್ಣುರ್ಹರಃ ಸೂರ್ಯ ಇಂದ್ರೋಗ್ನಿರ್ಮರುತಾಂಗಣಃ |
ಬ್ರಹ್ಮಚರ್ಯೇಣ ತಪಸಾ ತ್ವಯಾ ಸಂತೋಷಿತಾಃ ಪ್ರಭೋ || ೯ ||
ದೈವತಂ ಪರಮಂ ಮೇ ತ್ವಂ ಪಿತಾಮಾತಾ ಗುರುಃ ಪ್ರಭುಃ |
ಯೇನ ಜನ್ಮಾಂತರಂ ಸರ್ವಂ ಪ್ರತ್ಯಕ್ಷಂ ಕಥಿತಂ ಮಮ || ೧೦ ||

---

೫. ಮಹೇಶ್ವರ! ಆ ಭೋಜರಾಜನು ಮೃಗಿಯನ್ನು ಹೊಂದಿ ಏನನ್ನು ಮಾಡಿದನು? ಸಾರಸ್ವತ ಮುನಿಯು ಏನನ್ನು ಮಾಡಿದನು?

೬. ಈಶ್ವರನು ಹೇಳುತ್ತಾನೆ :—ಆ ರಾಜನ ಸಮಸ್ತ ಸ್ತ್ರೀಯರಲ್ಲಿ ರೂಪೌದಾರ್ಯಗುಣಗಳಿಂದ ಅಧಿಕಳೂ, ಯಾವಾಗಲೂ ಸಂತೋಷಗೊಂಡಿರುವವಳೂ, ಶಾಂತಳೂ, ಮಂಗಳವನ್ನುಂಟು ಮಾಡುವವಳೂ, ಆದ ಅವಳನ್ನು ಭೋಜರಾಜನು ಹೆಂಗಸರಲ್ಲಿ ತಾಯಿ, ಸಹೋದರಿ, ಸಖಿ, ಪುತ್ರಿಯೆಂದೂ, ಗಂಡಸರಲ್ಲಿ ತಂದೆ, ಸಹೋದರ, ಗುರು, ಪುತ್ರನೆಂದೂ ಭಾವಿಸಿದನು.

೮. ಭೋಜರಾಜನು ಇಂತಹ ಗುಣಶಾಲಿನಿಯಾದ ಭಾರ್ಯೆಯನ್ನು ಪಡೆದು ಸಾರಸ್ವತ ಮುನಿಯನ್ನು ಸ್ತುತಿಸಿ ಇಂತೆಂದನು.

೯. ರಾಜನು ಹೇಳುತ್ತಾನೆ :—ಸ್ವಾಮಿ! ನೀನು ಬ್ರಹ್ಮ, ವಿಷ್ಣು, ಶಿವ, ಸೂರ್ಯ, ಇಂದ್ರ, ಅಗ್ನಿ ದೇವತೆಗಳು, ಇವರನ್ನು ಬ್ರಹ್ಮಚರ್ಯ, ತಪಸ್ಸುಗಳಿಂದ ಸಂತೋಷಗೊಳಿಸಿದೆ.

೧೦. ನೀನು ನನಗೆ ಜನ್ಮಾಂತರ ವಿಷಯವನ್ನು ಸಂಪೂರ್ಣವಾಗಿ ಹೇಳಿದ್ದರಿಂದ ನನಗೆ ಉತ್ತಮ ದೇವತೆಯೂ, ತಂದೆಯೂ, ತಾಯಿಯೂ, ಗುರುವೂ, ಪ್ರಭುವೂ ಆಗಿರುವೆ.

ಸುರಾಷ್ಟ್ರದೇಶೋ ವಿಖ್ಯಾತೋ ಗಿರೀ ರೈವತಕೋ ಮಹಾನ್ ।
ಭವಸ್ಸ್ವಯಂಭೂರ್ಭಗವಾನ್ ಕ್ಷೇತ್ರೇ ವಸ್ತ್ರಾಪಥೇ ಶ್ರುತಃ ॥ ೧೧ ॥
ಉಜ್ಜಯಂತಗಿರೇರ್ಮೂರ್ಧ್ನಿ ಗೌರೀಸ್ಕಂದಗಣೇಶ್ವರಾ ।
ಭಾವಯಂತೋ ಭವಂ ಸರ್ವೇ ಸಂಸ್ಥಿತಾ ಬ್ರಹ್ಮವಾಸರಂ ॥ ೧೨ ॥
ವಾಮನೋ ನಗರಂ ಸ್ಥಾಪ್ಯ ಶಿವಂ ಸಿದ್ಧೇಶ್ವರಂ ಪ್ರತಿ ।
ಜಿತ್ವಾ ದೈತ್ಯಂ ಬಲಿಂ ಬಧ್ವಾ ಸ್ವಯಂ ರೈವತಕೇ ಸ್ಥಿತಃ ॥ ೧೩ ॥
ಇತ್ಯೇತತ್ಸರ್ವಮಾಶ್ಚರ್ಯಂ ಜೀವದ್ಭಿರ್ಯದಿ ದೃಶ್ಯತೇ ।
ತೀರ್ಥಯಾತ್ರಾವಿಧಾನೇನ ಭವೋ ವಸ್ತ್ರಾಪಥೇ ಹರಿಃ ॥ ೧೪ ॥
ತ್ಯಕ್ತ್ವಾ ರಾಜ್ಯಂ ಪ್ರಿಯಾಸ್ಪುತ್ರಾನ್ನತ್ಯಶ್ವರಥಕುಂಜರಾನ್ ।
ಪುತ್ರಂ ರಾಜ್ಯೇ ಪ್ರತಿಷ್ಠಾಪ್ಯ ಗಂತವ್ಯಂ ನಿಶ್ಚಿತಂ ಮಯಾ ॥ ೧೫ ॥
ತ್ವತ್ಪ್ರಸಾದಾಚ್ಛ್ರುತಂ ಸರ್ವಂ ಗಮ್ಯತೇ ಯದಿ ದೃಶ್ಯತೇ ।
ತೀರ್ಥಯಾತ್ರಾವಿಧಾನೇನ ಭವೋ ವಸ್ತ್ರಾಪಥೇ ಹರಿಃ ॥ ೧೬ ॥
ಸೂರ್ಯಲೋಕಂ ಸೋಮಲೋಕಂ ಇಂದ್ರಲೋಕಂ ಹರೇಃ ಪುರಂ ।
ಬ್ರಹ್ಮಲೋಕಮತಿಕ್ರಮ್ಯ ಯಾಸ್ಯೇಽಹಂ ಶಿವಮಂದಿರಂ ॥ ೧೭ ॥

---

೧೧. ಸುರಾಷ್ಟ್ರದೇಶದಲ್ಲಿ ರೈವತಕವೆಂಬ ಪ್ರಖ್ಯಾತವಾದ ಬೆಟ್ಟವಿರುವುದು. ವಸ್ತ್ರಾಪಥಕ್ಷೇತ್ರದಲ್ಲಿ ಭವನಿರುವನು.

೧೨. ಉಜ್ಜಯಂತಪರ್ವತದಮೇಲೆ ಗೌರೀ, ಸ್ಕಂದ, ಗಣೇಶ್ವರರು ಭವನನ್ನು ಧ್ಯಾನಿಸುತ್ತ ಪ್ರಳಯಕಾಲದವರೆಗೆ ಇರುವನು.

೧೩. ವಾಮನನು ನಗರವನ್ನು ನಿರ್ಮಿಸಿ ಅಲ್ಲಿ ಸಿದ್ಧೇಶ್ವರನನ್ನು ಪ್ರತಿಷ್ಠೆಮಾಡಿ ಬಲಿಯನ್ನು ಜಯಿಸಿ ತಾನು ರೈವತಕದಲ್ಲಿ ನೆಲೆಸಿದನು.

೧೪ ಇವೆಲ್ಲ ಅದ್ಭುತ ವಿಷಯಗಳನ್ನೂ, ವಸ್ತ್ರಾಪಥದಲ್ಲಿರುವ ಭವನನ್ನೂ ವಿಷ್ಣುವನ್ನೂ ಬದುಕಿರುವ ಮಾನವರು ತೀರ್ಥಯಾತ್ರೆಯ ಕ್ರಮದಿಂದ ನೋಡಬೇಕು.

೧೫. ನಾನೀಗ ರಾಜ್ಯ, ಪ್ರಿಯಪುತ್ರರು, ಕಾಲಾಳುಗಳು, ಕುದುರೆ, ಆನೆ, ರಥಗಳು ಇವುಗಳನ್ನು ಬಿಟ್ಟು ಪುತ್ರನನ್ನು ರಾಜ್ಯದಲ್ಲಿ ಸ್ಥಾಪಿಸಿ ಹೊರಡಬೇಕೆಂದು ನಿಶ್ಚಯಿಸಿರುವೆನು.

೧೬–೧೭. ನಿನ್ನ ಅನುಗ್ರಹದಿಂದ ಕೇಳಿದುದೆಲ್ಲವನ್ನೂ, ವಸ್ತ್ರಾಪಥದಲ್ಲಿರುವ ಭವವಿಷ್ಣುಗಳನ್ನೂ ತೀರ್ಥಯಾತ್ರೆಯ ಕ್ರಮದಿಂದ ದರ್ಶನ ಮಾಡಿದರೆ, ಸೂರ್ಯ, ಚಂದ್ರ, ಇಂದ್ರ, ವಿಷ್ಣು, ಬ್ರಹ್ಮರ ಲೋಕಗಳನ್ನೂ ಅತಿಕ್ರಮಿಸಿ ಶಿವಲೋಕವನ್ನು ಸೇರುವೆನು.

ಶ್ರುತ್ವಾ ಹಿ ವಾಕ್ಯಂ ವಿವಿಧಂ ನರೇಂದ್ರಾತ್ ।
ಪ್ರಹೃಷ್ಟರೋಮಾ ಸ ಮುನಿರ್ಬಭೂವ ।
ಜಿಜ್ಞಾಸಮಾನೋ ಹಿ ನೃಪಸ್ಯ ಸರ್ವಂ ।
ನಿವಾರಯಾಮಾಸ ಮುನಿರ್ನರೇಂದ್ರಂ ॥ ೧೮ ॥

ಸಾರಸ್ವತ ಉವಾಚ :—

ಗೃಹೇಪಿ ದೇವಾ ಹರಿವಿಷ್ಣುಮುಖ್ಯಾಃ ।
ಜಲಾನಿ ದರ್ಭಾ ನೃಪತೇ ತಿಲಾಶ್ಚ ।
ಅನೇಕದೇಶಾಂತರದರ್ಶನಾರ್ಥಂ ।
ಮನೋ ನಿವಾರ್ಯಂ ನೃಪತೇ ತ್ವಯೇತಿ ॥ ೧೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಪ್ರಥಮೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಭೋಜಭೂಪಸ್ಯ ಸಾರಸ್ವತಮುನಿ ಕೃತೋಪದೇಶಮಾಹಾತ್ಮ್ಯ ವರ್ಣನಂ ನಾಮ
ದಶಮೋಽಧ್ಯಾಯಃ

---

೧೮. ಆ ಸಾರಸ್ವತಮುನಿಯು ದೊರೆಯ ನಾನಾ ಬಗೆಯ ಮಾತುಗಳನ್ನು ಕೇಳಿ ರೋಮಾಂಚಗೊಂಡನು. ರಾಜನ ಸಕಲ ವಿಷಯಗಳನ್ನೂ ತಿಳಿಯಬೋಸುಗ ಅವನನ್ನು ತಡೆದನು.

೧೯. ದೊರೆಯೆ! ಮನೆಯಲ್ಲಿಯೇ ಶಿವ, ವಿಷ್ಣು ಮೊದಲಾದ ದೇವತೆಗಳೂ, ನೀರು, ದರ್ಭೆ, ತಿಲಗಳೂ ಇರುವುದರಿಂದ ಅನೇಕ ದೇಶಗಳನ್ನು ನೋಡಲು ಕುತೂಹಲಗೊಂಡ ಮನಸ್ಸನ್ನು ತಡೆ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಸಾರಸ್ವತಮುನಿಕೃತೋಪದೇಶವರ್ಣನವೆಂಬ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಏಕಾದಶೋಽಧ್ಯಾಯಃ

ವಸ್ತ್ರಾಪಥ ಯಾತ್ರಾವಿಧಾನಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—
ಸಾರಸ್ವತಸ್ಯ ವಿಪ್ರಸ್ಯ ಶ್ರುತ್ವಾ ಭೋಜನೃಪೋ ವಚಃ ।
ವಿವರ್ಣವದನೋ ಭೂತ್ವಾ ಪ್ರಗೃಹ್ಯಾಂಘ್ರೀ ವಚೋಽಬ್ರವೀತ್ ॥ ೧ ॥
ಮುನೇ ನೈವಂ ತ್ವಯಾ ವಾಚ್ಯಂ ಗಂತವ್ಯಂ ನಿಶ್ಚಿತಂ ಮಯಾ ।
ನರಾಣಾಂ ಪುಣ್ಯದಾ ಯಾತ್ರಾ ಕಥಯಸ್ವ ಕಥಂ ಭವೇತ್ ॥ ೨ ॥
ಕಿಂ ಗ್ರಾಹ್ಯಂ ಕಿಂ ಚ ಮೋಕ್ತವ್ಯಂ ಕಿಂ ದೇಯಂ ಕಿಂ ನದೀಯತೇ ।
ತೀರ್ಥೋಪವಾಸಃ ಸ್ನಾನಂ ಚ ಸಂಧ್ಯಾಸ್ನಾನವಿಧಿಕ್ರಮಃ ॥ ೩ ॥
ಪೂಜಾ ನಿದ್ರಾಜಪೋ ರಾತ್ರೌ ಸರ್ವಂ ಸಂಕ್ಷೇಪತೋ ವದ ।
ಸಾರಸ್ವತ ಉವಾಚ :—
ಸುರಾಷ್ಟ್ರದೇಶೇ ಗಂತವ್ಯಂ ಗಿರೌ ರೈವತಕೇ ಯದಿ ।
ನೃಪ ಯಾತ್ರಾವಿಧಿಂ ವಕ್ಷ್ಯೇ ತ್ವಮೇಕಾಗ್ರಮನಾಃ ಶೃಣು ॥ ೪ ॥

---

ಕನ್ನಡದ ಅನುವಾದ

ವಸ್ತ್ರಾಪಥ ಯಾತ್ರಾವಿಧಾನಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ:—ಭೋಜರಾಜನು ಸಾರಸ್ವತ ಬ್ರಾಹ್ಮಣನ ಮಾತನ್ನು ಕೇಳಿ ಕಳೆಗುಂದಿದ ಮುಖವುಳ್ಳವನಾಗಿ ಪಾದಗಳನ್ನು ಹಿಡಿದು ಇಂತೆಂದನು.

೨. ಮುನಿಯೆ! ನೀನು ಹೀಗೆ ಹೇಳಬಾರದು. ನಾನು ಹೋಗಬೇಕೆಂದು ನಿಶ್ಚಯಿಸಿರುವೆನು. ಯಾತ್ರೆಯು ಮನುಷ್ಯರಿಗೆ ಹೇಗೆ ಪುಣ್ಯವನ್ನೀಯುವುದು ಹೇಳು.

೩. ಅಲ್ಲಿ ಗ್ರಾಹ್ಯ ತ್ಯಾಜ್ಯ ಪದಾರ್ಥಗಳೂ, ಕೊಡತಕ್ಕ ಕೊಡಬಾರದ ಪದಾರ್ಥಗಳೂ ಯಾವುವು? ತೀರ್ಥೋಪವಾಸ, ಸ್ನಾನ, ಸಂಧ್ಯಾವಂದನೆ ಪೂಜೆ, ನಿದ್ರೆ, ರಾತ್ರಿ ಜಪ ಇವುಗಳ ಕ್ರಮವನ್ನೆಲ್ಲ ಸಂಕ್ಷೇಪವಾಗಿ ಹೇಳು.

೪. ಸಾರಸ್ವತನು ಹೇಳುತ್ತಾನೆ :—ದೊರೆಯೆ! ನೀನು ಸುರಾಷ್ಟ್ರದೇಶದಲ್ಲಿರುವ ರೈವತಕ ಪರ್ವತಕ್ಕೆ ಹೋಗಬೇಕಾಗಿದ್ದರೆ ಯಾತ್ರಾವಿಧಿಯನ್ನು ಹೇಳುವೆನು. ನೀನು ಚಿತ್ತೈಕಾಗ್ರ್ಯತೆಯಿಂದ ಕೇಳು.

ಬೃಹಸ್ಪತಿಬಲಂ ಗೃಹ್ಯ ಸೂರ್ಯಂ ಸಂತರ್ಪ್ಯ ಚೋತ್ತಮಮ್ ।
ವಾಮತಃ ಪೃಷ್ಠತಸ್ಸರ್ವಂ ವೃತ್ವಾ ಸಂಶೋಧ್ಯವಾಸರಂ ॥ ೫ ॥
ಚಂದ್ರಲಗ್ನಂ ಗೃಹಾಜ್ಜ್ಞಾತ್ವಾ ಬಲಿಷ್ಠಾಜ್ಜನ್ಮರಾಶಿತಃ ।
ಶಕುನಂ ಚ ಶುಭಂ ಲಬ್ಧ್ವಾ ಪ್ರಸ್ಥಾತವ್ಯಂ ನೃಪೈರ್ನೃಪ ॥ ೬ ॥
ತೀರ್ಥೇ ಸದೈವ ಗಂತವ್ಯಂ ಸರ್ವೇ ಮಾಸಾಶ್ಚ ಶೋಭನಾಃ ।
ತಿಥಯಶ್ಚೋತ್ತಮಾಸ್ಸರ್ವಾ ಸ್ನಾನದಾನಾರ್ಚನಾದಿಷು ॥ ೭ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ಮಾಸಾಂತೇ ಪೂರ್ಣಿಮಾದಿನೇ ।
ಸಂಕ್ರಾಂತೌ ಗ್ರಹಣೇ ಕಾಲಾ ಏತೇ ಪ್ರೋಕ್ತಾ ಭವಾರ್ಚನೇ ॥ ೮ ॥
ಕೈಲಾಸಂ ಪರ್ವತಂ ತ್ಯಕ್ತ್ವಾ ದೇವೀಂ ದೇವಾಂಶ್ಚ ಸಂಗತಾನ್ ।
ವೈಶಾಖೇ ಪಂಚದಶ್ಯಾಂ ತು ಭೂಮಿಂ ಭಿತ್ವಾ ಭವೋಽಭವತ್ ॥ ೯ ॥
ತಸ್ಮಿನ್ನೇವ ದಿನೇ ದೇವೀ ಸ್ವರ್ಣರೇಖಾ ನದೀ ತಲಾತ್ ।
ಪಂಥಾನಂ ವಾಸುಕಿಂ ಪ್ರಾಪ್ಯ ಸರ್ವಪಾಪಪ್ರಣಾಶಿನೀ ॥ ೧೦ ॥
ಐರಾವತಪದಾಕ್ರಾಂತ ಉಜ್ಜಯಂತೋ ಮಹಾಗಿರಿಃ ।
ಸುಸ್ರಾವ ತೋಯಂ ಬಹುಧಾ ಗಜಪಾದೋದ್ಭವಂ ಶುಚಿ ॥ ೧೧ ॥

---

೫-೬. ಗುರುಬಲವನ್ನು ನೋಡಿ, ಸೂರ್ಯನನ್ನು ಸಂತೋಷಗೊಳಿಸಿ, ಎಡ ಭಾಗದಲ್ಲಿಯೂ ಮುಂಭಾಗದಲ್ಲಿಯೂ ಇರುವವುಗಳನ್ನು ಪ್ರದಕ್ಷಿಣೆಗೈದು, ಒಳ್ಳೆಯ ದಿನವನ್ನು ನೋಡಿಕೊಂಡು, ಜನ್ಮರಾಶಿಯಿಂದ ಬಲಿಷ್ಠವಾದ ಗ್ರಹದಿಂದ ಚಂದ್ರಲಗ್ನವನ್ನರಿತು, ಶುಭಶಕುನವನ್ನು ಪಡೆದು ರಾಜನು ಪ್ರಯಾಣಮಾಡಬೇಕು.

೭. ತೀರ್ಥಯಾತ್ರೆಗೂ, ಸ್ನಾನ, ದಾನ ಅರ್ಚನಾದಿಗಳಿಗೂ ಎಲ್ಲ ತಿಂಗಳೂ, ತಿಥಿಗಳೂ ಉತ್ತಮವಾದುವು.

೮. ಭವನ ಪೂಜೆಗೆ ಅಷ್ಟಮಿ, ಚತುರ್ದಶೀ, ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಾಂತಿ, ಗ್ರಹಣ ಈ ಕಾಲಗಳು ವಿಹಿತವಾಗಿರುವುವು.

೯. ಭವನು ವೈಶಾಖಮಾಸದ ಚತುರ್ದಶಿಯದಿನ ಕೈಲಾಸಪರ್ವತ, ಉಮಾದೇವಿ, ದೇವತೆಗಳು ಇವರನ್ನು ತ್ಯಜಿಸಿ ಭೂಮಿಯನ್ನು ಭೇದಿಸಿ ತಾನೇ ಉದ್ಭವಿಸಿದನು.

೧೦. ಅದೇ ದಿನ ಸಕಲ ಪಾಪಗಳನ್ನು ನೀಗಿಸುವ ಸ್ವರ್ಣರೇಖಾನದಿಯು ಪಾತಾಳದಿಂದ ವಾಸುಕಿಮಾರ್ಗವನ್ನು ಸೇರಿ ಉದ್ಭವಿಸಿತು.

೧೧. ಐರಾವತದ ಪಾದಗಳಿಂದ ತುಳಿಯಲ್ಪಟ್ಟ ಉಜ್ಜಯನ್ತ ಮಹಾಗಿರಿಯು ಅನೇಕವಿಧವಾಗಿ ಶುದ್ಧವಾದ ನೀರನ್ನು ಸುರಿಸಿತು.

ದೇವಾ ಬ್ರಹ್ಮಾದಯ ಸ್ಸರ್ವೇ ಗಂಗಾದ್ಯಾ ಸ್ಸರಿತಸ್ತಥಾ ।
ವಸ್ತ್ರಾಪಥಸ್ಯ ಕ್ಷೇತ್ರಸ್ಯ ಪ್ರಮಾಣಂ ಶೃಣು ಭೂಪತೇ ।
ಹರಸ್ಯ ತ್ಯಜತೋ ಭೂಮೌ ಪತಿತಂ ವಸ್ತ್ರಭೂಷಣಂ ॥ ೧೩ ॥
ತಾವನ್ಮಾತ್ರಂ ಸ್ಮೃತಂ ಕ್ಷೇತ್ರಂ ದೇವೈರ್ವಸ್ತ್ರಾಪಥಂ ಕೃತಂ ।
ಉತ್ತರೇಣ ನದೀ ಭದ್ರಾ ಪೂರ್ವಸ್ಯಾಂ ಯೋಜನದ್ವಯಂ ॥ ೧೪ ॥
ದಕ್ಷಿಣೇನ ಬಲೇಃ ಸ್ಥಾನಂ ಉಜ್ಜಯಂತೋ ನದೀಮನು ।
ಅಪರಸ್ಯಾಂ ಪರಂ ನದ್ಯೋಃ ಸಂಗಮಂ ವಾಮನಾತ್ಪುರಾತ್ ॥ ೧೫ ॥
ಏತದ್ವಸ್ತ್ರಾಪಥಂ ಕ್ಷೇತ್ರಂ ಭುಕ್ತಿಮುಕ್ತಿಪ್ರದಾಯಕಂ ।
ಕ್ಷೇತ್ರಸ್ಯ ವಿಸ್ತರೋ ಜ್ಞೇಯಃ ಯೋಜನಾನಾಂ ಚತುಷ್ಟಯಂ ॥ ೧೬ ॥
ವೈಶಾಖಪಂಚದಶ್ಯಾಂತು ಭವೋ ಭಾವೇನ ಭೊಪತೇ ।
ಪೂಜ್ಯತೇ ಶಿವಲೋಕೇತು ಸ್ಥೀಯತೇ ಬ್ರಹ್ಮವಾಸರಂ ॥ ೧೭ ॥
ಅತೋ ವಸಂತೇ ಸಂಪ್ರಾಪ್ತೇ ಪ್ರಯಾಣಂ ಕುರು ಭೂಪತೇ ।
ನಿಗೃಹ್ಯ ನಿಯಮಾನ್ಭೂತ್ವಾ ಶುಚಿಃ ಸ್ನಾತೋ ಜಿತೇಂದ್ರಿಯಃ ॥ ೧೮ ॥
ಗಜವಾಜರಥಾಂಸ್ತ್ಯಕ್ತ್ವಾ ಪದಾಭ್ಯಾಂ ಯಾತಿ ಯೋನರಃ ।
ಪುಷ್ಕರೇಣ ವಿಮಾನೇನ ಸ ಯಾತಿ ಶಿವಮಂದಿರಂ ॥ ೧೯ ॥

---

೧೩. ದೊರೆಯೆ! ವಸ್ತ್ರಾಪಥಕ್ಷೇತ್ರದ ಪ್ರಮಾಣವನ್ನು ಕೇಳು. ಶಿವನು ಭೂಮಿಯನ್ನು ತ್ಯಜಿಸುತ್ತಿರಲು ಅವನಿಂದ ವಸ್ತ್ರವು ಕೆಳಗೆ ಬಿದ್ದಿತು.

೧೪–೧೫. ಅಷ್ಟರಿಂದಲೇ ದೇವತೆಗಳು ಅದನ್ನು ವಸ್ತ್ರಾಪಥವೆಂದು ಕರೆದರು. ಇದರ ಉತ್ತರದಲ್ಲಿ ಭದ್ರಾನದಿಯೂ, ಪೂರ್ವದಲ್ಲಿ ಎರಡು ಯೋಜನಗಳೂ, ದಕ್ಷಿಣ ದಲ್ಲಿ ನದಿಯ ಹತ್ತಿರ ಬಲಿಸ್ಥಾನವೂ, ಪಶ್ಚಿಮದಲ್ಲಿ ವಾಮನಪುರ ನದೀಸಂಗಮಗಳೂ, ಇರುವುವು.

೧೬. ಈ ವಸ್ತ್ರಾಪಥಕ್ಷೇತ್ರವು ಭಕ್ತಿಮುಕ್ತಿಗಳನ್ನೀಯುವುದು. ಇದು ನಾಲ್ಕು ಯೋಜನ ವಿಸ್ತೀರ್ಣವಾಗಿರುವುದು.

೧೭. ದೊರೆಯೆ! ವೈಶಾಖಮಾಸದ ಚತುರ್ದಶೀದಿನ ಇಲ್ಲಿರುವ ಭವನನ್ನು ಭಕ್ತಿಯಿಂದ ಪೂಜಿಸಿದವನು ಬ್ರಹ್ಮನ ದಿನದವರೆಗೆ ಶಿವಲೋಕದಲ್ಲಿ ಪೂಜ್ಯನಾಗುವನು.

೧೮. ರಾಜನೆ! ಆದ್ದರಿಂದ ನೀನು ವಸಂತಕಾಲವು ಬರಲು ಮಿಂದು ಶುದ್ಧನಾಗಿ ಇಂದ್ರಿಯಗಳನ್ನು ನಿಗ್ರಹಿಸಿ ನಿಯಮನ್ನನುಷ್ಠಾನಮಾಡುತ್ತ ಪ್ರಯಾಣಮಾಡು.

೧೯. ಆನೆ, ಕುದುರೆ, ರಥಗಳನ್ನು ತ್ಯಜಿಸಿ ಪಾದಗಳಿಂದಲೇ ಪ್ರಯಾಣಮಾಡುವ ಮನುಷ್ಯನು ಪುಷ್ಪಕ ವಿಮಾನದಿಂದ ಶಿವಾಲಯಕ್ಕೆ ತೆರಳುವನು.

ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ।
ಭಿಕ್ಷಾಹಾರೇಣ ತೋಯೇನ ಫಲಾಹಾರೇಣ ವಾ ಯದಿ ॥ ೨೦ ॥
ಉಪವಾಸೇನ ಕೃಚ್ಛ್ರೇಣ ಶಾಕಾಹಾರೇಣ ಯಾತಿ ಯಃ ।
ಸ ಯಾತಿ ಸುಂದರೀವೃಂದೈಃ ವೀಜ್ಯಮಾನೋ ಗಣೈರ್ದಿವಿ ॥ ೨೧ ॥
ಮಲಸ್ನಾನಂ ವಿನಾ ಮಾರ್ಗೇ ಪಾದಾಭ್ಯಂಗವಿವರ್ಜಿತಃ ।
ಮಲಧಾರೀ ಕ್ಷೀಣ ತನುಃ ಯಷ್ಟಿಹಸ್ತೋ ಜಿತೇಂದ್ರಿಯಃ ॥ ೨೨ ॥
ಶೀತಾತಪ ಜಲಕ್ಲಿಷ್ಟಃ ಶಿವಸ್ಮರಣ ತತ್ಪರಃ ।
ಯದಿ ಯಾತಿ ನರೋ ಯಾತಿ ಸ ಭಿತ್ವಾ ಸೂರ್ಯಮಂಡಲಂ ॥ ೨೩ ॥
ನರಕಸ್ಥಾನಪಿ ಪಿತ್ರ್ಯಾನ್ ಮಾತೃತಃ ಪಿತೃತೋ ನೃಪ ।
ಅಕ್ಷಯಂ ಸಪ್ತ ಸಪ್ತೈವ ನಯೇದೇವಂ ಶಿವಾಲಯೇ ॥ ೨೪ ॥
ಉತನ್ಭುವೌ ಯದಾ ಯಾತಿ ಮೃಗಚರ್ಮಾಗುಂಠಿತಃ ।
ದಂಡಪ್ರಮಾಣಭೂಮೇರ್ವಾ ಸಂಖ್ಯಾಂಕುರ್ವನ್ನರೋಯದಿ ॥ ೨೫ ॥

---

೨೦-೨೧. ಒಂದು ಭೋಜನದಿಂದಲೂ, ರಾತ್ರಿಯುಪವಾಸದಿಂದಲೂ, ಬೇಡದ ಬಂದ ಭಿಕ್ಷೆಯಿಂದಲೂ, ನೀರಿನಿಂದಲೂ, ಫಲಾಹಾರದಿಂದಲೂ, ಕಠಿನೋಪವಾಸ ದಿಂದಲೂ ಶಾಕಾಹಾರದಿಂದಲೂ ಯಾತ್ರೆಮಾಡಿದವನು ಸುಂದರಸ್ತ್ರೀಯರಿಂದ ಗಾಳಿ ಬೀಸಿಸಿ ಕೊಳ್ಳಲ್ಪಟ್ಟವನಾಗಿ ಗಣಗಳೊಡನೆ ದೇವಲೋಕವನ್ನು ಸೇರುವನು.

೨೨-೨೩. ಕೊಳೆಯನ್ನು ಹೋಗಲಾಡಿಸಲು ಸ್ನಾನಮಾಡವನೂ, ಪಾದಾಭ್ಯಂಗ ವಿಲ್ಲದವನೂ, ಕೃಶವಾದದೇಹವುಳ್ಳವನೂ, ದಂಡವನ್ನು ಧರಿಸಿದವನೂ, ಜಿತೇಂದ್ರಿ ಯನೂ, ಚಳಿ, ಬಿಸಿಲು, ನೀರಿನಿಂದ ವ್ಯಥೆಗೊಳ್ಳುವವನೂ, ಶಿವಸ್ಮರಣಾಸಕ್ತನೂ ಆಗಿ ಯಾತ್ರೆಮಾಡುವವನು ಸೂರ್ಯಮಂಡಲವನ್ನು ಭೇದಿಸಿಕೊಂಡು ಸ್ವರ್ಗಕ್ಕೆತೆರಳುವನು.

೨೪. ನರಕವಾಸಿಗಳಾದ ಮಾತಾಪಿತೃಗಳ ಏಳು ತಲೆಯ ಪಿತೃಗಳನ್ನು ಶಿವಾಲ ಯವನ್ನು ಸೇರುವಂತೆ ಮಾಡುವನು.

೨೫-೨೬. ಕೃಷ್ಣಾಜಿನವನ್ನು ಹೊದ್ದು ಭೂಮಿಯಲ್ಲಿ ಹೊರಳಾಡುತ್ತಲೂ, ದಂಡ ಪ್ರಮಾಣದ ಭೂಮಿಯನ್ನು ಎಣಿಸುತ್ತಲೂ ಪ್ರಯಾಣ ಮಾಡಿ ನಿರ್ಜಲಾರಣ್ಯ

ಅರಣ್ಯೇ ನಿರ್ಜಲೇ ಸ್ಥಾನೇ ಜಲಾಂತಃ ಪರಿಪೀಡಿತಃ ।
ಶರಣ್ಯಂ ಶಂಕರಂ ಕೃತ್ವಾ ಮನೋ ನಿಶ್ಚಲಮಾತ್ಮನಃ ॥ ೨೬ ॥

ಸಪ್ತದ್ವೀಪವತೀಂ ಪೃಥ್ವೀಂ ಸಮುದ್ರವಸನಾಂ ನೃಪ ।
ಸಲಬ್ಧ್ವಾ ಬಹುಭಿರ್ಯಜ್ಞೈಃ ಯಜ್ಞೇ ದತ್ವಾ ಚ ಮೇದಿನೀಂ ॥ ೨೭ ॥

ಸಪ್ತಭೌಮ ವಿಮಾನಸ್ಥೋ ದಿವ್ಯದೇಹೋ ಹರಾಕೃತಿಃ ।
ನಿರೀಕ್ಷ್ಯ ಮೇದಿನೀಂ ಮಂದಂ ಕೃತಮಂಗಲಮಂಡನಂ ॥ ೨೮ ॥

ಮೃಗನೇತ್ರಾಭುಜಸ್ಪರ್ಶಲಗ್ನಲೀನ ಪಯೋಧರಃ ।
ಗೀತವಾದ್ಯವಿನೋದೇನ ಸತ್ಯಲೋಕಂ ವ್ರಜೇನ್ನರಃ ॥ ೨೯ ॥

ವಿಧಾಯ ಭುಜವೇಗಂ ವಾ ಪಾದೌ ಬಧ್ವಾ ಶನೈಶ್ಶನೈಃ ।
ಮೌನೇನ ಮಾನುಷೋ ಮಾಯಾಂ ತ್ಯಕ್ತ್ವಾ ಯಾತಿ ಶಿವಾಲಯೇ ॥೩೦॥

ಬ್ರಹ್ಮಘ್ನೋವಾ ಸುರಾಪೋವಾ ಸ್ತೇಯೀವಾ ಗುರುತಲ್ಪಗಃ ।
ಕೃತಘ್ನೋ ಮುಚ್ಯತೇ ಪಾಪೈಃ ಮೃತೋ ಮುಕ್ತಿಮವಾಪ್ನುಯಾತ್ ॥೩೧॥

---

ವಲ್ಲಿ ಬಾಯಾರಿಕೆಯಿಂದ ಪೀಡಿತನಾಗಿ ಶರಣಾಗತನಾದ ಶಂಕರನಲ್ಲಿ ಸ್ಥಿರವಾಗಿ ಮನಸ್ಸನ್ನಿಟ್ಟವನು ಏಳು ದ್ವೀಪಗಳುಳ್ಳುದೂ, ಸಮುದ್ರವೆಂಬ ವಸ್ತ್ರವುಳ್ಳುದೂ, ಆದ ಭೂಮಿಯನ್ನು ಪಡೆಯುವನು. ಅವನು ಅನೇಕ ಯಜ್ಞಗಳನ್ನು ಮಾಡಿ ಆ ಯಜ್ಞಗಳಲ್ಲಿ ಮೇದಿನಿಯನ್ನು ದಾನವಿತ್ತರೆ ದಿವ್ಯ ಹರನ ದೇಹವನ್ನು ಧರಿಸಿ ಏಳು ಅಂತಸ್ತುಗಳುಳ್ಳ ವಿಮಾನದಲ್ಲಿ ಕುಳಿತು ಮಂಗಳಾಲಂಕಾರವುಳ್ಳವನಾಗಿ ಭೂಮಿಯನ್ನು ನೋಡುತ್ತ ಮೃಗಾಕ್ಷಿಯಾದ ಅಂಗನೆಯನ್ನು ಆಲಿಂಗನೆ ಮಾಡಿಕೊಂಡು ಗೀತವಾದ್ಯ ವಿನೋದದಿಂದ ಸತ್ಯಲೋಕಕ್ಕೆ ತೆರಳುವನು.

೩೦. ಭುಜವೇಗದಿಂದಾಗಲಿ, ಕಾಲುಗಳನ್ನು ಕಟ್ಟಿಕೊಂಡು ಮೆಲ್ಲ ಮೆಲ್ಲನೆ ತೆವಳುವುದರಿಂದಾಗಲಿ ಮಾಯೆಯನ್ನು ತ್ಯಜಿಸಿ ಮೌನದಿಂದ ಪ್ರಯಾಣ ಮಾಡುವವನು ಶಿವಾಲಯವನ್ನು ಸೇರುವನು.

೩೧. ಬ್ರಹ್ಮಹತ್ಯೆ ಗೈದವನೂ, ಸುರಾಪಾಯಿಯೂ, ಕಳ್ಳನೂ, ಗುರುತಲ್ಪಗಾಮಿಯೂ, ಕೃತಘ್ನನೂ ಇಲ್ಲಿ ಮಡಿದು ಪಾಪ ಮುಕ್ತನಾಗಿ ಮೋಕ್ಷವನ್ನು ಪಡೆಯುವನು.

ಮಾತರಂ ಪಿತರಂ ದೇಶಂ ಭ್ರಾತರಂ ಸ್ವಜನಬಾಂಧವಾನ್ ।
ಗ್ರಾಮಂ ಭೂಮಿಂ ಗೃಹಂ ತ್ಯಕ್ತ್ವಾ ಕೃತ್ವಾ ಚೇಂದ್ರಿಯಸಂಯಮಂ ॥ ೩೨ ॥

ಗೃಹೀತ್ವಾ ಶಿವಸಂಸ್ಕಾರಂ ನರೋ ಭ್ರಾಮ್ಯತಿ ಭೂತಲೇ ।
ದೃಷ್ಟ್ವಾ ತೀರ್ಥಾನ್ಯನೇಕಾನಿ ಪುಣ್ಯಾನ್ಯಾಯತನಾನಿ ಚ ॥ ೩೩ ॥

ಕಸ್ಮಿಂಸ್ತೀರ್ಥೇ ಶುಭೇ ಸ್ಥಾನೇ ಛಿತ್ವಾ ಸಂಸಾರಬಂಧನಂ ।
ಅಭಯಾಂ ದಕ್ಷಿಣಾಂ ದತ್ವಾ ಶಿವಶಿವೇತಿಭಾಷಕಃ ॥ ೩೪ ॥

ಏಕಾಂತೇ ನಿರ್ಜನೇ ಸ್ಥಾನೇ ಶಿವಸ್ಮರಣತತ್ಪರಃ ।
ಯದಿ ತಿಷ್ಠತಿ ತಂ ಯಾಂತಿ ನಮಸ್ಕರ್ತುಂ ಸುರಾಧಿಪ ॥ ೩೫ ॥

ಆಯಾಂತಿ ದೇವತಾಸ್ಸರ್ವೇ ಚಿಹ್ನಂ ತಸ್ಯ ನಿರೀಕ್ಷಿತುಂ ।
ವಿಮಾನವೃಂದೈರ್ನೇತವ್ಯಃ ಕದಾಸೌ ಪುರುಷೋತ್ತಮಃ ॥ ೩೬ ॥

ಯದಾತು ಪಂಚತ್ವಮುಪೈತಿ ಕಾಲೇ
ಕಲೇಬರಂ ಸ್ಕಂಧಕೃತಂ ನರೈಶ್ಚ ।
ನಿರೀಕ್ಷ್ಯಮಾಣಸ್ಸುರಸುಂದರೀಭಿಃ
ಸನೀಯಮಾನೋ ಮದವಿಹ್ವಲಾಭಿಃ ॥ ೩೭ ॥

---

೩೨–೩೬. ತಾಯಿ, ತಂದೆ, ದೇಶ, ಸಹೋದರ, ಬಂಧು, ಗ್ರಾಮ, ಭೂಮಿ, ಮನೆ ಇವುಗಳನ್ನು ತ್ಯಜಿಸಿ ಜಿತೇಂದ್ರಿಯನಾಗಿ ಶಿವಸಂಸ್ಕಾರವನ್ನು ಸ್ವೀಕರಿಸಿ ಅನೇಕ ತೀರ್ಥಗಳನ್ನು ಪುಣ್ಯಕರವಾದ ದೇವಾಲಯಗಳನ್ನೂ ನೋಡುವುದಕ್ಕಾಗಿ ಭೂಮಿಯಲ್ಲಿ ಸಂಚರಿಸುತ ಯಾವುದಾದರೊಂದು ಶುಭ ತೀರ್ಥದಲ್ಲಿ ಸಂಸಾರವನ್ನು ಬಿಟ್ಟು, ಪ್ರಾಣಿಗಳಿಗೆ ಅಭಯ ದಕ್ಷಿಣೆಯನ್ನಿತ್ತು ಶಿವಶಿವ ಎಂದು ಹೇಳುತ್ತ ನಿರ್ಜನ ಸ್ಥಾನದಲ್ಲಿ ವಾಸಿಸುವವನನ್ನು ನಮಸ್ಕರಿಸುವುದಕ್ಕೂ, ಅವನ ಚಿಹ್ನೆಗಳನ್ನು ನೋಡುವುದಕ್ಕೂ ದೇವತೆಗಳು ಬರುವರು ಮತ್ತು ಅವರು ಈ ಉತ್ತಮನಾದ ಮಾನವನನ್ನು ಯಾವಾಗ ವಿಮಾನಗಳಿಂದ ಕರೆದುಕೊಂಡು ಹೋಗೋಣವೆಂದು ಆಲೋಚಿಸುವರು.

೩೭–೩೮. ಇಲ್ಲಿ ಸಕಾಲದಲ್ಲಿ ಮಡಿದ ರುದ್ರಭಕ್ತನಾದ ಮಾನವನು ಮನುಷ್ಯರು ನೋಡುತ್ತಿರುವಾಗಲೆ ಮತ್ತರಾದ ದೇವತಾಸ್ತ್ರೀಯರಿಂದ ಕರೆದುಕೊಂಡು ಹೋಗಲ್ಪಡುವವನೂ, ದೇವೇಂದ್ರ, ಸೂರ್ಯ, ಅಗ್ನಿ, ಕುಬೇರ, ರುದ್ರ ಇವರಿಂದ ಪೂಜಿಸಲ್ಪಟ್ಟ

ಸುರೇಂದ್ರಸೂರ್ಯಾಗ್ನಿಧನೇಶರುದ್ರೈಃ
ಸಂಪೂಜ್ಯಮಾನಃ ಶಿವರೂಪಧಾರೀ ।
ಸುರಾದಿಲೋಕಾನ್ಪ್ರವಿಮುಚ್ಯವೇಗಾತ್
ಶಿವಾಲಯೇ ತಿಷ್ಠತಿ ರುದ್ರಭಕ್ತಃ ॥ ೩೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ವಸ್ತ್ರಾಪಥಯಾತ್ರಾವಿಧಾನಮಾಹಾತ್ಮ್ಯವರ್ಣನಂನಾಮ
ಏಕಾದಶೋಽಧ್ಯಾಯಃ

---

ವನೂ ಆಗಿ ಶಿವರೂಪವನ್ನು ತಾಳಿ ಇಂದ್ರಾದಿ ಲೋಕಗಳನ್ನು ತ್ಯಜಿಸಿ ಶೀಘ್ರವಾಗಿ ಶಿವಾಲಯವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳ್ಳುಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರ ಮಾಹಾತ್ಮ್ಯದಲ್ಲಿ
ವಸ್ತ್ರಾಪಥಯಾತ್ರಾವಿಧಾನಮಾಹಾತ್ಮ್ಯವರ್ಣನವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಾದಶೋಽಧ್ಯಾಯಃ

### ಯಾತ್ರಾವಿಧಿವರ್ಣನಂ

ಸಾರಸ್ವತ ಉವಾಚ :—

ಗಂಗೋದಕಂ ಮಧುಘೃತೇ ಕುಂಕುಮಾಗುರುಚಂದನಂ ।
ಗುಗ್ಗುಲಂ ಬಿಲ್ವಪತ್ರಾಣಿ ಬಕಪುಷ್ಪಂ ಚ ಯೋ ವಹೇತ್ ॥ ೧ ॥
ಪದಚಾರೀ ಶುಚಿತನುಃ ಭಾರಂ ಸ್ಕಂಧೇ ನಿಧಾಯ ಚ ।
ತೀರ್ಥೇ ಸ್ನಾತ್ವಾ ಶಿವಂ ವಿಷ್ಣುಂ ಬ್ರಹ್ಮಾಣಂ ಶಂಕರಂ ಪ್ರಿಯಂ ॥ ೨ ॥
ದೃಷ್ಟ್ವಾ ನಿವೇದಯೇದ್ಯಸ್ತು ಸ ಮುಕ್ತ ಸ್ಸರ್ವಬಂಧನೈಃ ।
ಸ ನರೋ ಗಣತಾಂ ಯಾತಿ ಯಾವದಾಭೂತಸಂಪ್ಲವಂ ॥ ೩ ॥
ಕಲತ್ರಮಿತ್ರಪುತ್ರೈರ್ವಾ ಭ್ರಾತೃಭಿ ಸ್ಸ್ವಜನೈರ್ನರೈಃ ।
ಸಹಿತೋ ವಾ ಸರ್ವೈರ್ಯಾತಿ ತೀರ್ಥೇ ದೇವಂ ವಿಚಿಂತ್ಯ ಚ ॥ ೪ ॥
ದೇವಮೂರ್ತಿಂ ಶುಭಾಂಕೃತ್ವಾ ರಥಸ್ಥಾಂ ಸುಪ್ರತಿಷ್ಠಿತಾಂ ।
ಚಂದನಾಗರುಕರ್ಪೂರೈರರ್ಚಿತಾಂ ಕುಂಕುಮೇನ ಚ ॥ ೫ ॥

---

### ಕನ್ನಡದ ಅನುವಾದ

### ಯಾತ್ರಾವಿಧಿವರ್ಣನ

೧–೩. ಸಾರಸ್ವತನು ಹೇಳುತ್ತಾನೆ :—ಗಂಗಾಜಲ, ಜೇನು, ತುಪ್ಪ, ಕುಂಕುಮ, ಅಗುರುಗಂಧ, ಗುಗ್ಗುಲು, ಬಿಲ್ವಪತ್ರೆ, ಬಕಪುಷ್ಪಗಳನ್ನು ಧರಿಸಿದವನೂ, ಕಾಲ್ನಡೆಯುಳ್ಳವನೂ, ಶುದ್ಧ ದೇಹವುಳ್ಳವನೂ ಆಗಿ ಹೆಗಲಿನಲ್ಲಿ ಹೊರೆಯನ್ನಿಟ್ಟುಕೊಂಡು ತೀರ್ಥದಲ್ಲಿ ಮಿಂದು ಶಿವ, ವಿಷ್ಣು, ಬ್ರಹ್ಮ ಇವರನ್ನು ಕಂಡು ನಿವೇದನ ಮಾಡಿದ ಮಾನವನು ಸಕಲ ಬಂಧ ಮುಕ್ತನಾಗಿ ಪ್ರಳಯಕಾಲದವರೆಗೆ ಗಣತ್ವವನ್ನು ಹೊಂದುವನು.

೪–೮. ಹೆಂಡತಿ, ಸ್ನೇಹಿತ, ಪುತ್ರರಿಂದಾಗಲಿ, ಸಹೋದರ, ಬಂಧುಗಳಿಂದಾಗಲಿ ಕೂಡಿ ಪ್ರಯಾಣಮಾಡಿ ತೀರ್ಥದಲ್ಲಿ ಶಂಕರನನ್ನು ಧ್ಯಾನಿಸಿ ಮನೋಹರವಾದ ದೇವ ಪ್ರತಿಮೆಯನ್ನು ರಥದಲ್ಲಿರಿಸಿ ಗಂಧ, ಕರ್ಪೂರ, ಕುಂಕುಮ, ನಾನಾವಿಧ ಪುಷ್ಪ,

ಪೂಜಯನ್ವಿವಿಧೈಃ ಪುಷ್ಪೈಃ ಧೂಪದೀಪಾದಿಕೈರ್ನೃಪ ।
ಗೀತನೃತ್ಯೈಸ್ತಥಾವಾದಿತ್ರೈರ್ಹಾಸ್ಯಲಾಸ್ಯೈರನೇಕಧಾ ॥ ೬ ॥
ಧರಿತ್ರೀಂ ಕಾಂಚನಂ ಗಾಶ್ಚ ಜಲಾನ್ನವಸನಾನಿ ಚ ।
ತೃಣೇಂಧನೇ ಪ್ರಿಯಾಂ ವಾಣೀಂ ಯಚ್ಛನ್ಯಾತಿ ನರೋ ಯದಿ ॥ ೭ ॥
ದೇವಾಂಗನಾಕರಗ್ರಾಹಗೃಹೀತೋ ನಂದನಂ ವನಂ ।
ಪ್ರಾಪ್ಯ ಭುಂಕ್ತೇ ಶುಭಾನ್ಭೋಗಾನ್ ಯಾವದಾಚಂದ್ರತಾರಕಂ ॥ ೮ ॥
ತೀರ್ಥೇ ಸಂಚರತಃ ಪುರುಷೋ ರೋಗೈಃ ಪ್ರಾಣಾನ್ವಿಮುಂಚತಿ ।
ಅದೃಷ್ಟ್ವಾ ದೈವತಂ ತೀರ್ಥೇ ದೃಷ್ಟತೀರ್ಥಫಲಂ ಲಭೇತ್ ॥ ೯ ॥
ಸಂಸಾರದೋಷಾನ್ವಿವಿಧಾನ್ವಿಚಿಂತ್ಯ
ಸ್ತ್ರೀಪುತ್ರಮಿತ್ರೇಷ್ವಪಿ ಬಂಧಮುಕ್ತಃ ।
ವಿಜ್ಞಾಯ ಬದ್ಧಂ ಪುರುಷಂ ಪ್ರಧಾನೈಃ
ಸ ಸರ್ವತೀರ್ಥಾನಿ ಕರೋತಿ ದೇಹಂ ॥ ೧೦ ॥
ಆಜನ್ಮಜನ್ಮಾಂತರಸಂಚಿತಾನಿ ।
ದಗ್ಧ್ವಾ ಸ ಪಾಪಾನಿ ನರೋ ನರೇಂದ್ರ ।
ತೇಜೋಮಯಂ ಸರ್ವಗತಂ ಪುರಾಣಂ ।
ಭವೋದ್ಭವಂ ಪಶ್ಯತಿ ಮುಚ್ಯತೇ ಸಃ ॥ ೧೧ ॥

---

ಧೂಪದೀಪಾದಿಗಳು ಇವುಗಳಿಂದ ಪೂಜಿಸಿ ಅನೇಕ ಪ್ರಕಾರವಾದ ಗಾನ, ನೃತ್ಯ, ವಾದ್ಯ, ಹಾಸ್ಯ, ಲಾಸ್ಯಗಳನ್ನು ಮಾಡಿ ಭೂಮಿ, ಚಿನ್ನ, ಗೋವು, ನೀರು, ಅನ್ನ, ವಸ್ತ್ರ, ಹುಲ್ಲು, ಕಟ್ಟಿಗೆ ಇವುಗಳನ್ನು ದಾನಮಾಡುತ್ತ, ಒಳ್ಳೆಯ ಮಾತನ್ನಾಡುತ್ತ ಯಾತ್ರೆಗೈಯುವ ಮನುಷ್ಯನು ದೇವಾಂಗನೆಯರ ಹಸ್ತಲಾಘವವನ್ನು ಪಡೆದು ನಂದನವನವನ್ನು ಸೇರಿ ಚಂದ್ರ ಸೂರ್ಯರಿರುವ ವರೆಗೆ ಉತ್ತಮ ಭೋಗಗಳನ್ನನುಭವಿಸುವವನು.

೯. ತೀರ್ಥಯಾತ್ರೆಗಾಗಿ ಹೊರಟ ಮನುಷ್ಯನು ರೋಗಗಳಿಂದ ಮಡಿದರೆ ತೀರ್ಥ ದೇವತೆಯನ್ನು ನೋಡದವನಾದರೂ ತೀರ್ಥ ದರ್ಶನದ ಫಲವನ್ನು ಪಡೆಯುವನು.

೧೦–೧೧ ಅನೇಕ ಬಗೆಯ ಸಂಸಾರ ದೋಷಗಳನ್ನು ಆಲೋಚಿಸಿ ಪತ್ನೀ, ಪುತ್ರ, ಮಿತ್ರರಲ್ಲಿ ಸ್ನೇಹವನ್ನು ತ್ಯಜಿಸಿ ಪುರುಷನು ಪ್ರಕೃತಿಯಿಂದ ಬದ್ಧನಾಗಿರುವುದನ್ನರಿತು ತೀರ್ಥಯಾತ್ರೆಯನ್ನು ಮಾಡಿ ತೇಜಸ್ವಿಯೂ, ಸರ್ವ ವ್ಯಾಪಿಯೂ, ಪುರಾತನನೂ ಆದ ಭವನನ್ನು ದರ್ಶನ ಮಾಡಿದವನು ಅನೇಕ ಜನ್ಮಗಳಲ್ಲಿ ಸಗಿದ ಪಾಪಗಳಿಂದ ಮುಕ್ತನಾಗುವನು.

ತೀರ್ಥೇ ವಿಪ್ರವಚೋ ಗ್ರಾಹ್ಯಂ ಸ್ನಾತ್ವಾ ಸಂಧ್ಯಾರ್ಚನಾದಿಕಂ ।
ದರ್ಭಾಸ್ತಿಲಾ ಹವಿಷ್ಯಾನ್ನಂ ಪ್ರಯೋಗಾಶ್ಶ್ರದ್ಧಯಾ ಕೃತಾಃ ॥ ೧೨ ॥

ಅಗಸ್ತ್ಯಂ ಭೃಂಗರಾಜಂ ಚ ಪುಷ್ಪಂ ಶತದಲಂ ಶುಭಂ ।
ಕರ್ಪೂರಾಗರುಶ್ರೀಖಂಡಂ ಕುಂಕುಮಂ ತುಲಸೀದಲಂ ॥ ೧೩ ॥

ಬಿಲ್ವಪ್ರಮಾಣ ಪಿಂಡೇಷು ದೀಪೋದ್ಯೋತಿತಭೂಮಿಷು ।
ತಾಂಬೂಲಫಲನೈವೇದ್ಯಂ ತಿಲದರ್ಭೋದಕೇನ ಚ ॥ ೧೪ ॥

ತೀರ್ಥೇ ಸಂಕಲ್ಪಿತಂ ಮರ್ತ್ಯೈಸ್ತದನಂತಂ ಪ್ರಜಾಯತೇ ।
ಅಯನೇ ವಿಷುವೇ ಚೈವ ಸಂಕ್ರಾತೌ ಗ್ರಹಣೇಷು ಚ ॥ ೧೫ ॥

ಮಾಸಾಂತೇಽಪರಪಕ್ಷೇತು ಕ್ಷಯಾಹೇ ಪಿತೃಮಾತೃಕೇ ।
ಗಜಚ್ಛಾಯಾಂ ತ್ರಯೋದಶ್ಯಾಂ ದ್ರವ್ಯೇ ಪ್ರಾಪ್ತೌ ದ್ವಿಜೋತ್ತಮಃ ॥ ೧೬ ॥

ಗೃಹೇ ಶ್ರಾದ್ಧಂ ಪ್ರಕುರ್ವೀತ ಪಿತೄಣಾಮನೃಣಮುಕ್ತಯೇ ।
ಗೃಹಾಚ್ಛತಗುಣಂ ನದ್ಯಾಂ ಯಾ ನದೀ ಯಾತಿ ಸಾಗರಂ ॥ ೧೭ ॥

ಪ್ರಭಾಸೇ ಪುಷ್ಕರೇ ರಾಜನ್ ಗಂಗಾಯಾಂ ಪಿಂಡತಾರಕೇ ।
ಪ್ರಯಾಗೇ ನೃಪ ಗೋಮತ್ಯಾಂ ಭವ ದಾಮೋದರಾಗ್ರತಃ ॥ ೧೮ ॥

---

೧೨-೧೭. ಮನುಷ್ಯನು ತೀರ್ಥದಲ್ಲಿ ಬ್ರಾಹ್ಮಣರ ಮಾತನ್ನು ಸ್ವೀಕರಿಸಿ ಮಿಂದು ಸಂಧ್ಯಾವಂದನೆ ಮಾಡಿ ಶ್ರದ್ಧೆಯಿಂದ ದೀಪಗಳಿಂದ ಪ್ರಕಾಶಗೊಂಡ ಭೂಮಿಯಲ್ಲಿತ್ತ ಬಿಲ್ವಪತ್ರೆಯಷ್ಟು ಪ್ರಮಾಣದ ಪಿಂಡಗಳಲ್ಲಿ ಸಮರ್ಪಿಸಿದ ಎಳ್ಳು, ಹವಿಸ್ಸುಗಳೂ ಅಗಸ್ತ್ಯ ಭೃಂಗರಾಜ ಪುಷ್ಪಗಳೂ, ಕರ್ಪೂರ, ಅಗುರು, ಶ್ರೀಖಂಡ, ಕುಂಕುಮ, ತುಲಸೀದಳಗಳೂ, ತಾಂಬೂಲ, ಫಲ, ದರ್ಭೋದಕಗಳೂ ಅನಂತವಾಗುವುವು. ಉತ್ತರಾಯಣ ದಕ್ಷಿಣಾಯನ ಪುಣ್ಯಕಾಲಗಳು, ಯುಗಾದಿ, ಸಂಕ್ರಾಂತಿ, ಗ್ರಹಣಗಳು, ಅಮಾವಾಸ್ಯೆ, ಮಹಾಲಯಪಕ್ಷ, ತಾಯಿ ತಂದೆಗಳ ಮೃತದಿನ, ಗಜಚ್ಛಾಯಾ, ತ್ರಯೋದಶೀ ಇವುಗಳಲ್ಲಿ ಬ್ರಾಹ್ಮಣನು ದ್ರವ್ಯವಿದ್ದರೆ ಪಿತೃಗಳ ಋಣ ಮುಕ್ತಿಗಾಗಿ ಮನೆಯಲ್ಲಿ ಶ್ರಾದ್ಧ ಮಾಡಬೇಕು. ಸಮುದ್ರವನ್ನು ಸೇರುವ ನದಿಯಲ್ಲಿ ಮಾಡಿದ ಶ್ರಾದ್ಧವು ಮನೆಯಲ್ಲಿ ಮಾಡಿದ ಶ್ರಾದ್ಧಕಿಂತ ನೂರರಷ್ಟು ಫಲವನ್ನೀಯುವುದು.

೧೮-೧೯. ಪ್ರಭಾಸ, ಪುಷ್ಕರಕ್ಷೇತ್ರ, ಗಂಗೆ, ಪ್ರಯಾಗ, ಗೋಮತಿಗಳಲ್ಲಿಯೂ, ಭವ ದಾಮೋದರರ ಮುಂದೆಯೂ, ನರ್ಮದಾ ತೀರ್ಥಗಳಲ್ಲಿಯೂ ಶ್ರಾದ್ಧವನ್ನು ಮಾಡಿದ

ನರ್ಮದಾದಿಷು ತೀರ್ಥೇಷು ಕುರ್ಯಾಚ್ಛ್ರಾದ್ಧಂ ನರೋ ಯದಿ ।
ಸರ್ವಪಾಪವಿನಿರ್ಮುಕ್ತಃ ಪಿತರೋ ಯಾಂತಿ ಸದ್ಗತಿಂ ॥ ೧೯ ॥
ಸಂತಾನಮುತ್ತಮಂ ಲಬ್ಧ್ವಾ ಭುಕ್ತ್ವಾ ಭೋಗಾನನುತ್ತಮಾ ।
ದಿವ್ಯಂ ವಿಮಾನಮಾರುಹ್ಯ ಪ್ರಾಂತೇ ಯಾತಿ ಸುರಾಲಯಂ ॥ ೨೦ ॥
ಜಾತಕರ್ಮಾದಿಯಜ್ಞೇಷು ವಿವಾಹೇ ಯಜ್ಞಕರ್ಮಣಿ ।
ದೇವಪ್ರತಿಷ್ಠಾಪ್ರಾರಂಭೇ ವೃದ್ಧಿಶ್ರಾದ್ಧಂ ಪ್ರಕಲ್ಪಯೇತ್ ॥ ೨೧ ॥
ತೃಪ್ಯಂತಿ ದೇವತಾಸ್ಸರ್ವಾಸ್ತೃಪ್ಯಂತಿ ಪಿತರೋ ನೃಣಾಂ ।
ವೃದ್ಧಿಶ್ರಾದ್ಧಕೃತೋ ಗೇಹೇ ಜಾಯತೇ ಸರ್ವಮಂಗಲಂ ॥ ೨೨ ॥
ಕಾಮಃ ಕ್ರೋಧಶ್ಚ ಲೋಭಶ್ಚ ಮೋಹೋ ಮದ್ಯಮದಾದಯಃ ।
ಮಾಯಾ ಮಾತ್ಸರ್ಯಪೈಶುನ್ಯಮವಿವೇಕೋಽವಿಚಾರಣಾ ॥ ೨೩ ॥
ಅಹಂಕಾರೋ ಯದೃಚ್ಛಾ ಚ ಚಾಪಲ್ಯಂ ಲೌಲ್ಯತಾ ನೃಪ ।
ಅತ್ಯಾಯಾಸೋಪ್ಯನಾಯಾಸಃ ಪ್ರಮಾದೋ ದ್ರೋಹಸಾಹಸಂ ॥ ೨೪ ॥
ಆಲಸ್ಯಂ ದೀರ್ಘಸೂತ್ರತ್ವಂ ಪರದಾರೋಪಸೇವನಂ !
ಅಲ್ಪಾಹಾರೋ ನಿರಾಹಾರಃ ಶೋಕಶ್ಚೌರ್ಯಂ ನೃಪೋತ್ತಮ ॥ ೨೫ ॥

---

ಮಾನವನು ಸಕಲ ಪಾಪ ಮುಕ್ತನಾಗುವನು. ಅವನ ಪಿತೃಗಳು ಸದ್ಗತಿಯನ್ನು ಪಡೆಯುವರು.

೨೦. ಮತ್ತು ಅವನು ಉತ್ತಮ ಸಂತತಿಯನ್ನು ಪಡೆದು ಶ್ರೇಷ್ಠವಾದ ಭೋಗಗಳನ್ನನುಭವಿಸಿ, ಕೊನೆಯಲ್ಲಿ ದಿವ್ಯ ವಿಮಾನವನ್ನೇರಿ ಸ್ವರ್ಗಲೋಕಕ್ಕೆ ತೆರಳುವನು.

೨೧. ಜಾತಕರ್ಮಾದಿಗಳು, ಯಜ್ಞ, ಮದುವೆ, ದೇವತಾ ಪ್ರತಿಷ್ಠೆ ಇವುಗಳ ಆರಂಭದಲ್ಲಿ ವೃದ್ಧಿ ಶ್ರಾದ್ಧವನ್ನು ಮಾಡಬೇಕು.

೨೨. ಆದರಿಂದ ಸಮಸ್ತ ದೇವತೆಗಳೂ, ಪಿತೃಗಳೂ ತೃಪ್ತಿಗೊಳ್ಳುವರು. ವೃದ್ಧಿ ಶ್ರಾದ್ಧವನ್ನು ಮಾಡಿದವನ ಮನೆಯಲ್ಲಿ ಸಕಲ ಮಂಗಳಗಳಾಗುವುವು.

೨೩-೨೬. ಕಾಮ, ಕೋಪ, ಆಶೆ, ಮೋಹ, ಮದ್ಯ, ಮದ, ಕಪಟ, ಮಾತ್ಸರ್ಯ, ಪೈಶುನ್ಯ, ಅವಿವೇಕ, ಅವಿಚಾರ, ಅಹಂಕಾರ, ಸ್ವೇಚ್ಛೆ, ಚಪಲತೆ, ಅತ್ಯಾಸಕ್ತಿ, ಅತ್ಯಾಯಾಸ, ಆಯಾಸಪಡದಿರುವುದು, ಅನವಧಾನ, ದ್ರೋಹ, ಸಾಹಸ, ಸೋಮಾರಿತನ, ನಾವಕಾಶದಿಂದ ಕಾರ್ಯವನ್ನು ಮಾಡುವುದು, ಪರಪತ್ನೀಗಮನ, ಅಲ್ಪಾಹಾರ, ಉಪ

ಏತಾನ್ದೋಷಾನ್ಗೃಹೇ ನಿತ್ಯಂ ವರ್ಜಯನ್ಯದಿ ವರ್ತತೇ ।
ಸನರೋ ಮಂಡನಂ ಭೂಮೇರ್ದೇಶಸ್ಯ ನಗರಸ್ಯ ಚ ॥ ೨೬ ॥
ಶ್ರೀಮಾನ್ವಿದ್ವಾನ್ಕುಲೀನೋಽಸೌ ಸ ಏವ ಪುರುಷೋತ್ತಮಃ ।
ಸರ್ವತೀರ್ಥಾಭಿಷೇಕಶ್ಚ ನಿತ್ಯಂ ತಸ್ಯ ಪ್ರಜಾಯತೇ ॥ ೨೭ ॥
ತದಾ ತೀರ್ಥಫಲಂ ಸಮ್ಯಕ್ತ್ಯಕ್ತದೋಷಸ್ಯ ಜಾಯತೇ ।
ಸ್ನಾನಂ ಸಂಧ್ಯಾ ಜಪೋ ಹೋಮಃ ಪಿತೃದೇವರ್ಷಿತರ್ಪಣಂ ॥ ೨೮ ॥
ಶ್ರಾದ್ಧಂ ದೇವಸ್ಯ ಪೂಜಾ ಚ ತ್ಯಕ್ತದೋಷಸ್ಯ ಜಾಯತೇ ।
ಪ್ರಯಾಗೇ ವಾ ಕುರುಕ್ಷೇತ್ರೇ ಸರಸ್ವತ್ಯಾಂ ಚ ಸಾಗರೇ ॥ ೨೯ ॥
ಗಯಾಯಾಂ ವಾ ರುದ್ರಪಾದೇ ನರನಾರಾಯಣಾಶ್ರಮೇ ।
ಪ್ರಭಾಸೇ ಪುಷ್ಕರೇ ಕೃಷ್ಣೇ ಗೋಮತ್ಯಾಂ ಪಿಂಡತಾರಕೇ ॥ ೩೦ ॥
ವಸ್ತ್ರಾಪಥೇ ಗಿರೌ ಪುಣ್ಯೇ ತಥಾ ದಾಮೋದರೇ ನೃಪ ।
ಭೀಮೇಶ್ವರೇ ನರ್ಮದಾಯಾಂ ಸ್ಕಾಂದೇ ರಾಮೇಶ್ವರಾದಿಷು ॥ ೩೧ ॥
ಉಜ್ಜಯಿನ್ಯಾಂ ಮಹಾಕಾಲೇ ವಾರಾಣಸ್ಯಾಂ ಚ ಭೂರ್ಭುವಃ ।
ಕಾಲಿಂದ್ಯಾಂ ಮಥುರಾಯಾಂ ಚ ಸಕೃದ್ಯಾತಿ ನರೋ ಯದಿ ।
ಸ ದೋಷೋ ಮುಚ್ಯತೇ ದೋಷೈಃ ಬ್ರಹ್ಮಹತ್ಯಾದಿಭಿಃ ಕೃತೈಃ । ॥ ೩೨ ॥

---

ವಾಸ, ದುಃಖ, ಕಳ್ಳತನ, ಈ ದೋಷಗಳನ್ನು ತ್ಯಜಿಸಿ ಮನೆಯಲ್ಲಿ ವಾಸಿಸುವ ಮನುಷ್ಯನು ಭೂಮಿಗೂ, ದೇಶಕ್ಕೂ, ಪಟ್ಟಣಕ್ಕೂ ಅಲಂಕಾರಪ್ರಾಯನು.

೨೭. ಅವನೇ ಶ್ರೀಮಂತನೂ, ವಿದ್ವಾಂಸನೂ, ಸತ್ಕುಲೋತ್ಪನ್ನನೂ, ಪುರುಷೋತ್ತಮನೂ, ಆಗುವನು. ಅವನಿಗೆ ನಿತ್ಯವೂ ಸಕಲ ತೀರ್ಥಸ್ನಾನ ಫಲವು ಲಭಿಸುವುದು.

೨೮. ಹೀಗೆ ದೋಷವನ್ನು ತ್ಯಜಿಸಿದವನಿಗೆ ತೀರ್ಥಫಲವೂ, ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ಪಿತೃ ದೇವರ್ಷಿತರ್ಪಣ, ಶ್ರಾದ್ಧ, ದೇವತಾಪೂಜೆ ಇವುಗಳ ಫಲಗಳೂ ಉಂಟಾಗುವುವು.

೨೯–೩೨. ಪ್ರಯಾಗ, ಕುರುಕ್ಷೇತ್ರ, ಸರಸ್ವತೀನದಿ, ಸಮುದ್ರ, ಗಯಾ, ರುದ್ರಪಾದ, ನರನಾರಾಯಣಾಶ್ರಮ, ಪ್ರಭಾಸ, ಪುಷ್ಕರಕ್ಷೇತ್ರ, ಕೃಷ್ಣಕ್ಷೇತ್ರ, ಗೋಮತಿ, ಪಿಂಡತಾರಕ, ವಸ್ತ್ರಾಪಥ, ರೈವತಕಗಿರಿ, ದಾಮೋದರಕ್ಷೇತ್ರ, ಭೀಮೇಶ್ವರ, ನರ್ಮದಾ, ಸ್ಕಂದಕ್ಷೇತ್ರ, ಉಜ್ಜಯನೀ, ಮಹಾಕಾಲ, ಕಾಶೀ, ಭೂರ್ಭುವ, ಕಾಲಂದೀ, ಮಧುರೆ ಇವುಗಳಿಗೆ ಒಂದು ಸಾರಿ ಹೋದ ಮನುಷ್ಯನು ಬ್ರಹ್ಮಹತ್ಯಾದಿ ದೋಷಗಳಿಂದ ಮುಕ್ತನಾಗುವನು.

ಅಪಿ ಕೀಟಃ ಪತಂಗೋ ವಾ ಪಕ್ಷೀ ವಾ ಸೂಕರೋಽಪಿ ವಾ ।
ಖರೋಷ್ಟ್ರಕುಂಜರಾವಾಜಿಮೃಗಸಿಂಹಸರೀಸೃಪಾಃ ॥ ೩೩ ॥
ಜ್ಞಾನತೋಽಜ್ಞಾನತೋ ರಾಜಂಸ್ತೇಷು ಸ್ಥಾನೇಷು ಯೇ ಮೃತಾಃ ।
ಸರ್ವೇ ತೇ ಪುಣ್ಯಕರ್ಮಾಣಃ ಸ್ವರ್ಗಂ ಭುಕ್ತ್ವಾ ಸುಖಂ ಬಹು ॥ ೩೪ ॥
ಚತುರ್ವರ್ಣೇಷು ಸರ್ವೇ ತೇ ಜಾಯಂತೇ ಕರ್ಮಬಂಧನಾತ್ ।
ಕರ್ಮಬಂಧಂ ವಿಹಾಯಾಶು ಮುಕ್ತಿಂ ಯಾಂತಿ ನರಾಃ ಪುನಃ ॥ ೩೫ ॥
ಮೋದಂತೇ ತೀರ್ಥಮರಣಾತ್ಸ್ವರ್ಗಭೋಗಾವಸಾನತಃ ।
ಸಂಪ್ರಾಪ್ಯ ಭಾರತೇ ಖಂಡೇ ಕರ್ಮಭೂಮಿಂ ಮಹೋದಯಂ ॥ ೩೬ ॥
ಅನೇಕಾಶ್ಚರ್ಯಸಂಯುಕ್ತಂ ಬಹುಪರ್ವತಮಂಡಿತಂ ।
ಗಂಗಾದ್ಯಾಸ್ಸರಿತಸ್ಸರ್ವಾ ಸಮುದ್ರೈಸ್ಸಹ ಸಂಗತಾಃ ॥ ೩೭ ॥
ಪದೇಪದೇ ನಿಧಾನಾನಿ ಸಂತಿ ತೀರ್ಥಾನ್ಯನೇಕಶಃ ।
ಯೇಷಾಂ ಸ್ಮರಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೩೮ ॥
ಪಾತಾಲಮಾರ್ಗಾ ಬಹವಃ ಸ್ವರ್ಗಮಾರ್ಗಶ್ಚ ದೃಶ್ಯತೇ ।
ಗಗನೇ ದೃಶ್ಯತೇ ಸೂರ್ಯಃ ಹೃದಯೇ ದೃಶ್ಯತೇ ಹರಃ ॥ ೩೯ ॥

---

೩೩–೩೫. ದೊರೆಯೆ ! ಕೀಟ, ಪತಂಗ, ಪಕ್ಷಿ, ಹಂದಿ, ಕತ್ತೆ, ಒಂಟೆ, ಆನೆ, ಕುದುರೆ, ಜಿಂಕೆ, ಸಿಂಹ, ಹಾವು ಇವುಗಳಲ್ಲಿ ಯಾವುದೇ ಆಗಲಿ ಅಲ್ಲಿ ತಿಳಿದು, ಅಥವಾ ತಿಳಿಯದೆ ಮೃತವಾದರೆ ಪುಣ್ಯಶಾಲಿಗಳಾದ ಅವೆಲ್ಲ ಸ್ವರ್ಗವನ್ನು ಸೇರಿ ಬಹು ಸುಖವನ್ನು ಅನುಭವಿಸಿ ಕರ್ಮವಶದಿಂದ ಬ್ರಾಹ್ಮಣಾದಿ ಜಾತಿಗಳಲ್ಲಿ ಜನಿಸಿ ಕೂಡಲೆ ಕರ್ಮಬಂಧವನ್ನು ತ್ಯಜಿಸಿ ಮುಕ್ತಿಯನ್ನು ಹೊಂದುವುವು.

೩೬–೩೭. ಈ ತೀರ್ಥದಲ್ಲಿ ಮೃತಿಯನ್ನು ಹೊಂದುವುದರಿಂದ ಸ್ವರ್ಗಸುಖಾನುಭವದ ಕೊನೆಯಲ್ಲಿ ಮಾನವನು ಭರತಖಂಡದಲ್ಲಿ ಅನೇಕಾಶ್ಚರ್ಯಗಳಿಂದ ಕೂಡಿರುವುದೂ, ಅನೇಕ ಪರ್ವತಗಳಿಂದ ಅಲಂಕಾರಗೊಂಡುದೂ ಆದ ಕರ್ಮ ಭೂಮಿಯನ್ನು ಸೇರಿ ಆನಂದಗೊಳ್ಳುವನು. ಈ ಭಾರತದಲ್ಲಿ ಗಂಗಾದಿ ಸಕಲ ನದಿಗಳು ಸಮುದ್ರಗಳೊಡನೆ ಸೇರಿರುವುವು.

೩೮. ಇಲ್ಲಿ ಪ್ರತಿ ಹೆಜ್ಜೆಯಲ್ಲಿಯೂ ನಿಧಿಗಳೂ, ಸ್ಮರಣ ಮಾತ್ರದಿಂದ ಸಮಸ್ತ ಪಾಪವನ್ನು ಪರಿಹರಿಸುವ ಅನೇಕ ತೀರ್ಥಗಳೂ ಇರುವುವು.

೩೯. ಇಲ್ಲಿ ಅನೇಕ ಪಾತಾಳ ಮಾರ್ಗಗಳೂ ಕಾಣಿಸುವುವು. ಆಕಾಶದಲ್ಲಿ ಸೂರ್ಯನೂ, ಹೃದಯದಲ್ಲಿ ಶಿವನೂ ಕಾಣಿಸುವರು.

ಧ್ಯಾನೇನ ಜ್ಞಾನಯೋಗೇನ ತಪಸಾ ವಚಸಾ ಗುರೋಃ ।
ಸತ್ಯೇನ ಸಾಹಸೇನೈವ ದೃಶ್ಯತೇ ಭುವನತ್ರಯಂ ॥ ೪೦ ॥
ವೇದಸ್ಮೃತಿ ಪುರಾಣೈಶ್ಚ ಯೇ ನ ಪಶ್ಯಂತಿ ಭೂತಲಂ ।
ಪಾತಾಲಂ ಸ್ವರ್ಗಲೋಕಂ ಚ ವಂಚಿತಾಸ್ತೇ ನರಾ ಇಹ ॥ ೪೧ ॥
ಯೇ ವಿರಜ್ಯಂತಿ ನ ಸ್ತ್ರೀಷು ಕಾಮಾಸಕ್ತಾ ವಿಚೇತಸಃ ।
ದೇವೋನ್ಯಥಾ ವರಸ್ತ್ರೀಣಾಂ ಅನ್ಯಥಾ ತೈಶ್ಚ ಚಿಂತಿತಂ ॥ ೪೨ ॥
ಜನ್ಮಭೂಮಿಷು ತೇ ರಕ್ತಾ ಜನ್ಯಂತೇ ಜಂತವಃ ಪುನಃ ।
ಮುಕ್ತಿಮಾರ್ಗಾತ್ಪುನರ್ಭ್ರಷ್ಟಾ ಜಾಯಂತೇ ಪಶುಯೋನಿಷು ॥ ೪೩ ॥
ಧನಾನಿ ಸಂಪ್ರಾಪ್ಯ ವರಾಟಿಕಾಂ ಯೇ ।
ದ್ವಿಜಾತಿಮುಖ್ಯಾಯ ವಿಧಾಯ ಪೂಜಾಂ ।
ಯಚ್ಛಂತಿ ನೋ ನಿರ್ಮಲಚೇತನಾ ಯೇ
ನರಾಧಮಾ ದೈವಹತಾ ಮೃತಾಸ್ತೇ ॥ ೪೪ ॥
ದೇಹಂ ಸುಪುಷ್ಟಂ ವಿಜರಂ ಚ ಯೌವನಂ ।
ಲಬ್ಧ್ವಾ ನಗಂಗಾದಿಷು ಯಾಂತಿ ಯೇ ನರಾಃ ।
ಮಾತಾಪಿತಾ ನೋ ನಸುತೋ ನ ಬಾಂಧವಃ ।
ಭಾರ್ಯಾ ಸ್ವಸಾ ನೋ ದುಹಿತಾ ನ ವಿದ್ಯತೇ ॥ ೪೫ ॥

---

೪೦. ಧ್ಯಾನ, ಜ್ಞಾನಯೋಗ, ತಪಸ್ಸು, ಗುರೋಪದೇಶ, ಸತ್ಯ, ಸಾಹಸ ಇವುಗಳಿಂದ ಮೂರು ಲೋಕಗಳು ಕಾಣಿಸುವುವು.

೪೧. ವೇದಸ್ಮೃತಿಪುರಾಣಗಳಿಂದ ಭೂಮಿ, ಪಾತಾಳ, ಸ್ವರ್ಗಲೋಕಗಳನ್ನು ಅರಿಯದ ಮಾನವರು ವಂಚಿತರಾಗುವರು.

೪೨. ಕಾಮಾಸಕ್ತರಾದ ಮೂಢರು ಸ್ತ್ರೀಯರಲ್ಲಿ ವೈರಾಗ್ಯಗೊಳ್ಳದೆ ಬೇರೆ ವಿಧವಾಗಿರುವ ಉತ್ತಮ ಸ್ತ್ರೀಯರ ದೇಹವನ್ನು ತಾವು ಮತ್ತೊಂದು ಬಗೆಯಿಂದ ತಿಳಿದುಕೊಳ್ಳುವರು.

೪೩. ಜನ್ಮಭೂಮಿಗಳಲ್ಲಿ ಅನುರಾಗಗೊಂಡ ಅವರು ಮುಕ್ತಿ ಮಾರ್ಗದಿಂದ ಭ್ರಷ್ಟರಾಗಿ ಪಶುಯೋನಿಗಳಲ್ಲಿ ಹುಟ್ಟುತ್ತಾರೆ.

೪೪. ಧನವಂತರಾಗಿ ಬ್ರಾಹ್ಮಣೋತ್ತಮನಿಗೆ ಒಂದು ಕವಡೆಯನ್ನೂ ಶುದ್ಧ ಮನಸ್ಸಿನಿಂದ ಕೊಡದ ನರಾಧಮರು ದೈವದ ಆಗ್ರಹಕ್ಕೆ ಪಾತ್ರರಾಗಿರುವರೆಂದು ತಿಳಿಯಬೇಕು.

೪೫–೪೬. ಮುಪ್ಪಿಲ್ಲದೆ ಪುಷ್ಟಿಯಾದ ದೇಹವನ್ನೂ, ಯೌವನವನ್ನೂ, ಹೊಂದಿ ಗಂಗಾದಿ ಪವಿತ್ರ ನದಿಗಳಿಗೆ ಹೋಗದವರೂ ತಾಯಿ,ತಂದೆ, ಪುತ್ರ, ಬಂಧು, ಹೆಂಡತಿ,

ಏಕಸ್ತು ಯೋ ಯಾತಿ ಕಥಂ ನ ಕ್ಲಿಶ್ಯತೇ
ಮೂರ್ಖೋ ನ ಜಾನಾತಿ ಭವಂ ಮಹೇಶ್ವರಂ ।
ಸ್ನಾತ್ವಾ ನ ಪಶ್ಯಂತಿ ಹರಂ ಮಹೇಶ್ವರಂ
ದೈವೇನ ತೇ ವೈ ಮುಷಿತಾ ನರಾಧಮಾಃ ॥ ೪೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಯಾತ್ರಾವಿಧಿಮಾಹಾತ್ಮ್ಯವರ್ಣನಂ ನಾಮ
ದ್ವಾದಶೋಽಧ್ಯಾಯಃ

---

ಸಹೋದರಿ, ಮಗಳು ಇವರಿಲ್ಲದೆ ಒಬ್ಬಂಟಿಗನಾಗಿ ಯಾತ್ರೆಗೆ ಹೋಗುವವನೂ ಹೇಗೆ ದುಃಖಗೊಳ್ಳುವುದಿಲ್ಲ. ಮೂರ್ಖನು ಭವನ ಮಾಹಾತ್ಮ್ಯವನ್ನು ತಿಳಿಯುವುದಿಲ್ಲ. ಆ ಕ್ಷೇತ್ರದಲ್ಲಿ ಮಿಂದು ಹರನನ್ನು ಕಾಣದ ನರಾಧಮರು ದೈವವಂಚಿತರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಯಾತ್ರಾವಿಧಿಮಾಹಾತ್ಮ್ಯವರ್ಣನವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತ್ರಯೋದಶೋಽಧ್ಯಾಯಃ

## ಶ್ರಾದ್ಧದಾನಾದಿಮಾಹಾತ್ಮ್ಯವರ್ಣನಂ

ಸ್ವಾರಸ್ವತ ಉವಾಚ :—

ಛಿತ್ವಾ ಶುಭಾಶುಭಂ ಕರ್ಮ ಮುಕ್ತಿಮಿಚ್ಛೇಚ್ಛಿವಾಂ ತತಃ ।
ಇದಂ ನ ಶಕ್ಯತೇ ಕರ್ತುಂ ಶುಭಂ ಕಾರ್ಯಂ ತದಾ ನರೈಃ ॥ ೧ ॥

ಉತ್ಥಾಯೋತ್ಥಾಯ ಸ್ನಾತವ್ಯಂ ಪೂಜ್ಯೌ ಹರಿಹರೌ ಸ್ವಯಂ ।
ಸತ್ಯಂ ವಾಚ್ಯಂ ಹಿತಂ ಕಾರ್ಯಂ ದಾನಂ ದೇಯಂ ಸ್ವಶಕ್ತಿತಃ ॥ ೨ ॥

ಪರಾಪವಾದಭೀರುತ್ಸಂ ಪರದಾರಾನ್ವಿವರ್ಜಯೇತ್ ।
ಸುವರ್ಣಭೂಮಿಹರಣಬ್ರಹ್ಮದೇವಸ್ವವರ್ಜನಂ ॥ ೩ ॥

ಬ್ರಾಹ್ಮಣಸ್ತ್ರೀನರೇಂದ್ರಾಣಾಂ ಬಾಲವೃದ್ಧತಪಸ್ವಿನಾಂ ।
ಪಿತೃಮಾತೃಗುರೂಣಾಂ ಚ ನಾಪ್ರಿಯಂ ಮನಸಾ ವದೇತ್ ॥ ೪ ॥

---

## ಕನ್ನಡದ ಅನುವಾದ

### ಶ್ರಾದ್ಧದಾನಾದಿಮಾಹಾತ್ಮ್ಯವರ್ಣನ

೧–೩. ಸಾರಸ್ವತನು ಹೇಳುತ್ತಾನೆ :—ಶುಭಾಶುಭ ಕರ್ಮಗಳನ್ನು ಕಳೆದು ಕೊಂಡು ಮಂಗಳಕರವಾದ ಮುಕ್ತಿಯನ್ನು ಬಯಸಬೇಕು. ಮನುಷ್ಯನು ಈ ಶುಭ ಕಾರ್ಯವನ್ನು ಮಾಡಲಸಮರ್ಥನಾದರೆ ಪ್ರತಿದಿನವೂ ಎದ್ದು ಸ್ನಾನಮಾಡಿ ಹರಿ ಹರನನ್ನು ಪೂಜಿಸಬೇಕು. ಸತ್ಯವನ್ನು ನುಡಿಯಬೇಕು. ಹಿತವನ್ನುಂಟುಮಾಡಬೇಕು. ತನ್ನ ಶಕ್ತ್ಯನುಸಾರ ದಾನಮಾಡಬೇಕು. ಪರರ ಅಪವಾದದಿಂದ ಹೆದರಬೇಕು. ಪರರ ಪತ್ನಿಯರನ್ನು ತ್ಯಜಿಸಬೇಕು. ಸುವರ್ಣ, ಭೂಮಿ ಇವುಗಳನ್ನು ಕದಿಯುವುದನ್ನೂ, ಬ್ರಹ್ಮಸ್ವದೇವಸ್ವಹರಣವನ್ನೂ ಬಿಡಬೇಕು.

೪. ಬ್ರಾಹ್ಮಣ, ಹೆಂಗಸು, ದೊರೆ, ಬಾಲಕ, ಮುದುಕ, ಮುನಿ, ತಂದೆ, ತಾಯಿ, ಗುರು ಇವರಿಗೆ ಮನಸ್ಸಿನಿಂದಲೂ ಅಹಿತವಾದ ಮಾತನ್ನಾಡಬಾರದು.

ದೇಶಕಾಲಪರಿಜ್ಞಾನಂ ಪಾತ್ರಾಪಾತ್ರವಿವೇಚನಂ ।
ಛಾಯಾ ನೃಣಾಂ ನ ವಕ್ತವ್ಯಾ ತಕ್ರಾಗ್ನೀಂಧನಕಾಂಜಿಕಂ ॥ ೫ ॥
ಔಷಧಂ ಶಾಕಮರ್ಥಿಭ್ಯೋ ದಾತವ್ಯಂ ಗೃಹಮೇಧಿಭಿಃ ।
ಏಕಾದಶೀ ಪಂಚದಶೀ ಚತುರ್ದಶ್ಯಷ್ಟಮೀಷು ಚ ॥ ೬ ॥
ಅಮಾವಾಸ್ಯಾವ್ಯತೀಪಾತಸಂಕ್ರಾಂತಿಗ್ರಹಣೇಷು ಚ ।
ವೈಧೃತೇ ಪಿತೃಮಾತ್ರೋಶ್ಚ ಕ್ಷಯಾಹದಿವಸೇಷು ಚ ॥ ೭ ॥
ಯುಗಾದಿಮನ್ವಾದಿದಿನೇ ಗೃಹೇ ಕಾರ್ಯೋ ಮಹೋತ್ಸವಃ ।
ತೀರ್ಥೇ ವಾ ಗಮನಂ ಕಾರ್ಯಂ ಗೃಹಾಚ್ಛತಗುಣಂ ಯತಃ ॥ ೮ ॥
ಇಂದ್ರಿಯಾಣಾಂ ಜಯಃ ಕಾರ್ಯಃ ಮದ್ಯಂ ದ್ಯೂತಂ ವಿವರ್ಜಯೇತ್ ।
ವಿವಾದಂ ಗಮನಂ ಯುದ್ಧಂ ಗೃಹೀ ಯತ್ನೇನ ವರ್ಜಯೇತ್ ॥ ೯ ॥
ಸ್ನಾನಂ ದಾನಂ ಜಪೋ ಹೋಮೋ ದೈವಪೂಜಾ ದ್ವಿಜಾರ್ಚನಂ ।
ಅಕ್ಷಯಂ ಜಾಯತೇ ಸರ್ವಂ ವಿಧಿವಚ್ಚೇದ್ಭವೇತ್ಕೃತಂ ॥ ೧೦ ॥
ಏಕಾಪಿ ಗೌಃ ಪ್ರದಾತವ್ಯಾ ವಸ್ತ್ರಾಲಂಕಾರಭೂಷಣಾ ।
ದೋಗ್ಧ್ರೀ ಸವತ್ಸಾ ತರುಣೀ ದ್ವಿಜಮುಖ್ಯಾಯ ಕಲ್ಪಿತಾ ॥ ೧೧ ॥

---

೫–೮. ದೇಶ, ಕಾಲ ಜ್ಞಾನಗಳನ್ನೂ, ಪಾತ್ರಾಪಾತ್ರ ವಿವೇಚನೆಯನ್ನೂ, ಆರಸರ ಛಾಯೆಯನ್ನೂ ಹೇಳಬಾರದು. ಗೃಹಸ್ಥರು ಯಾಚಕರಿಗೆ ಮಜ್ಜಿಗೆ, ಬೆಂಕಿ, ಕಟ್ಟಿಗೆ, ಆಮಲಿ, ಔಷಧ, ತರಕಾರಿಗಳನ್ನೀಯಬೇಕು. ಏಕಾದಶೀ, ಹುಣ್ಣಿಮೆ, ಚತುರ್ದಶೀ, ಅಷ್ಟಮೀ ದಿನಗಳಲ್ಲಿಯೂ, ಅಮಾವಾಸ್ಯೆ, ವ್ಯತೀಪಾತ, ಸಂಕ್ರಾಂತಿ, ಗ್ರಹಣ, ವೈಧೃತಿ, ತಂದೆತಾಯಿಗಳ ಶ್ರಾದ್ಧದ ದಿನ, ಯುಗಾದಿ, ಮನ್ವಾದಿಗಳಲ್ಲಿಯೂ ಮನೆಯಲ್ಲಿ ಉತ್ಸವವನ್ನು ಮಾಡಬೇಕು. ಅಥವಾ ತೀರ್ಥಕ್ಕೆ ಹೋಗಿ ಮಾಡಬೇಕು. ಅದರಿಂದ ನೂರರಷ್ಟು ಫಲವು ಹೆಚ್ಚುವುದು.

೯. ಗೃಹಸ್ಥನು ಇಂದ್ರಿಯಗಳನ್ನು ಜಯಿಸಬೇಕು. ಮದ್ಯ, ಜೂಜುಗಳನ್ನು ಬಿಡಬೇಕು. ವಿವಾದ, ಪ್ರಯತ್ನದಿಂದ ತ್ಯಜಿಸಬೇಕು.

೧೦. ಸ್ನಾನ, ದಾನ, ಜಪ, ಹೋಮ, ದೇವಪೂಜೆ, ಬ್ರಾಹ್ಮಣ ಪೂಜೆ ಇವುಗಳನ್ನು ಶಾಸ್ತ್ರರೀತಿಯಿಂದ ಮಾಡಿದರೆ ಅಕ್ಷಯವಾಗುವುದು.

೧೧. ಬ್ರಾಹ್ಮಣೋತ್ತಮನಿಗೆ ವಸ್ತ್ರ, ಒಡವೆಗಳಿಂದ ಅಲಂಕಾರಗೊಂಡುದೂ, ಹಾಲನ್ನು ಕರೆಯುವುದೂ, ಕರುವುಳ್ಳುದೂ, ಯುವತಿಯೂ ಆಗಿರುವ ಒಂದು ಗೋವನ್ನಾದರೂ ಕೊಡಬೇಕು.

ಸಂಪ್ರಾಪ್ಯ ಭಾರತಂ ಖಂಡಂ ಮಾನುಷಂ ಜನ್ಮ ಚೋತ್ತಮಮಂ ।
ಧನ್ಯೋ ದದಾತಿ ಯೋ ಧೇನುಂ ಸನರಃ ಸೂರ್ಯಮಂಡಲಂ ।
ಭಿತ್ವಾ ಯಾತಿ ವಿಮಾನೇನ ಗಮ್ಯಮಾನೋ ಗವಾದಿಭಿಃ ॥ ೧೨ ॥
ಸಪ್ತಜನ್ಮಾನಿ ಪಾಪಾನಿ ಕೃತ್ವಾ ಪಾಪೀಹ ಚಾಧಮಃ ।
ಏಕೋ ದದಾತಿ ಯೋ ಧೇನುಂ ಮುಚ್ಯತೇ ಸರ್ವಪಾತಕೈಃ ॥ ೧೩ ॥
ಯದಾ ಸ ನೀಯತೇ ಬದ್ಧೋ ಯಮಮಾರ್ಗೇಣ ಕಿಂಕರೈಃ ।
ತದಾ ನಂದಾ ಸಮಾಗತ್ಯ ಸ್ವಂ ಪುತ್ರಮಿವ ಪಶ್ಯತಿ ॥ ೧೪ ॥
ವಿಜಿತ್ಯ ಹುಂಕೃತೇನೈವ ತಾನ್ದೂತಾನ್ದೂರತಃ ಸ್ಥಿತಾ ।
ಗೋಪ್ರದಂ ತಂ ಸಮಾದಾಯ ಪ್ರಯಾತಿ ಶಿವಮಂದಿರಂ ॥ ೧೫ ॥
ವೃಷೋ ಧರ್ಮ ಇತಿ ಪ್ರೋಕ್ತೋ ಯೇನ ಮುಕ್ತಸ್ಸ ಮುಚ್ಯತೇ ।
ಗೋಷು ಮಧ್ಯೇ ಪಿತ್ರ್ಯಾನ್ಸರ್ವಾನ್ಹರಮುದ್ದಿಶ್ಯ ವಾ ಹರಿಂ ॥ ೧೬ ॥
ಸೂರ್ಯಬ್ರಹ್ಮಪುರೇ ವಾಸೋ ಜಾಯತೇ ಬ್ರಹ್ಮವಾಸರೇ ।
ದೃಢಂ ಕಕುದ್ಮಿನಂ ಸಂತಂ ಯುವಾನಂ ಭಾರಸಾಧನಂ ॥ ೧೭ ॥
ಹಲಕ್ಷಮಂ ಬಲೀವರ್ದಂ ದತ್ವಾ ವಿಪ್ರಾಯ ಪರ್ವಸು ।
ತಮಾರುಹ್ಯ ನರೋ ಯಾತಿ ಗೋಲೋಕಂ ಶಿವಸನ್ನಿಧೌ । ॥ ೧೮ ॥

---

೧೨. ಭಾರತ ಖಂಡದಲ್ಲಿ ಉತ್ತಮವಾದ ಮನುಷ್ಯ ಜನ್ಮವನ್ನು ಹೊಂದಿ ಗೋದಾನ ಮಾಡಿ ಧನ್ಯನಾದ ಮಾನವನು ಸೂರ್ಯಮಂಡಲವನ್ನು ಭೇದಿಸಿ ಗೋವುಗಳೊಡನೆ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ತೆರಳುವನು.

೧೩. ಏಳು ಜನ್ಮಗಳಲ್ಲಿ ಪಾಪಮಾಡಿ ಅತ್ಯಂತ ನೀಚನಾದ ಮನುಷ್ಯನು ಹಸುವನ್ನು ದಾನಮಾಡಿದರೆ ಸಕಲ ಪಾಪಮುಕ್ತನಾಗುವನು.

೧೪. ಅವನನ್ನು ಯಮಭಟರು ಕಟ್ಟಿ ಕರೆದುಕೊಂಡು ಹೋಗುವಾಗ ನಂದೆಯು (ಗೋವು) ಬಂದು ತನ್ನ ಪುತ್ರನಂತೆ ಅವನನ್ನು ನೋಡುತ್ತಾಳೆ.

೧೫. ಅವಳು ಹುಂಕಾರದಿಂದಲೇ ದೂರದಲ್ಲಿರುವ ಆ ದೂತರನ್ನು ಗೆದ್ದು ಗೋದಾನ ಮಾಡಿದವನನ್ನು ಕರೆದುಕೊಂಡು ಶಿವಾಲಯಕ್ಕೆ ತೆರಳುವಳು.

೧೬–೧೮. ವೃಷವು ಧರ್ಮವೆನಿಸಿಕೊಳ್ಳುವುದು. ಅದನ್ನು ಗೋವುಗಳ ಮಧ್ಯದಲ್ಲಿ ಸಕಲ ಪಿತೃಗಳನ್ನೂ, ಹರಿಹರರನ್ನೂ ಉದ್ದೇಶಿಸಿ ಬಿಟ್ಟರೆ ಹಾಗೆ ಬಿಟ್ಟ ಮನುಷ್ಯನು ಮುಕ್ತನಾಗಿ ಸೂರ್ಯ ಮತ್ತು ಬ್ರಹ್ಮರ ಲೋಕಗಳಲ್ಲಿ ಬ್ರಹ್ಮನ ದಿನದವರೆಗೆ ವಾಸಿಸುವನು. ಬಲಶಾಲಿಯೂ, ಹಿಳಲುಳ್ಳದ್ದೂ, ಸಾಧುವೂ, ಯೌವನವುಳ್ಳದ್ದೂ, ಭಾರವನ್ನು ಹೊರಲು ಸಮರ್ಥವೂ, ಉಳಲು ಶಕ್ತಿಯುಳ್ಳದ್ದೂ ಆದ ಎತ್ತನ್ನು ಪರ್ವಕಾಲದಲ್ಲಿ ಬ್ರಾಹ್ಮಣನಿಗೆ ದಾನಮಾಡಿದ ನರನು ಆ ಎತ್ತನ್ನು ಹತ್ತಿಕೊಂಡು ಶಿವನ ಹತ್ತಿರವಿರುವ ಗೋಲೋಕಕ್ಕೆ ತೆರಳುವನು.

ಅಶ್ವಂ ಸಾಸ್ತರಣಂ ದತ್ವಾ ಖಲೀನೇನ ಚ ಸಂಯುತಂ ।
ಅಶ್ವರಾಜಬಲಾತ್ಸ್ವರ್ಗೇ ಮೋದತೇ ಬ್ರಹ್ಮವಾಸರಂ ॥ ೧೯ ॥
ಗಜದಾನಾದ್ಗಜೇಂದ್ರೇಣ ನೀಯತೇ ನಂದನಂ ವನಂ ।
ಪೃಥಿವ್ಯಾಂ ಸಾಗರಾಂತಾಯಾಂ ಏಷ ರಾಜಾ ಭವಿಷ್ಯತಿ ॥ ೨೦ ॥
ಗೃಹಂ ಸೋಪಸ್ಕರಂ ದತ್ವಾ ವಿಪ್ರಾಯ ಗೃಹಮೇಧಿನೇ ।
ಲಭತೇ ನಂದನೇ ದಿವ್ಯಂ ವಿಮಾನಂ ಸರ್ವಕಾಮಿಕಂ ॥ ೨೧ ॥
ದ್ರವ್ಯಂ ಪೃಥಿವ್ಯಾಂ ಪರಮಂ ಸುವರ್ಣಂ ।
ಹೃಷ್ಯಂತಿ ದೇವಾಃ ಯದಿ ದೀಯತೇ ತತಃ ।
ಸೂರ್ಯೋಽಪಿ ತಸ್ಮೈ ರುಚಿರಂ ವಿಮಾನಂ ।
ದದಾತಿ ತಾವದ್ಭ್ರಮತೇಽತ್ರ ಯಾವತ್ ॥ ೨೨ ॥
ರೌಪ್ಯಂ ಪಿತೄಣಾಮತಿವಲ್ಲಭಂ ತ
ದ್ದತ್ವಾ ನರೋ ನಿರ್ಮಲತಾಮುಪೈತಿ ।
ಸೋಮಸ್ಯ ಲೋಕಂ ಲಭತೇ ಸ ತಾವ ।
ದ್ಧ್ರುವೇ ನಿಬದ್ಧಾ ಋಷಯೋ ಹಿ ಯಾವತ್ ॥ ೨೩ ॥

---

೧೯. ಜೀನು, ಕಡಿವಾಣಗಳಿಂದ ಕೂಡಿರುವ ಕುದುರೆಯನ್ನು ದಾನಮಾಡಿದವನು ಆ ಕುದುರೆಯನ್ನು ದಾನಮಾಡಿದ ಪುಣ್ಯದಿಂದ ಪ್ರಳಯಕಾಲದ ವರೆಗೆ ಬ್ರಹ್ಮಲೋಕದಲ್ಲಿ ಆನಂದಿಸುವನು.

೨೦. ಗಜದಾನಮಾಡಿದವನು ಆನೆಯಿಂದಲೇ ನಂದನವನಕ್ಕೆ ಒಯ್ಯಲ್ಪಡುವನಲ್ಲದೆ ಸಮಸ್ತ ಭೂಮಿಗೆ ಒಡೆಯನಾಗಿ ಚಕ್ರವರ್ತಿಯೆನ್ನಿಸಿಕೊಳ್ಳುವನು.

೨೧. ಗೃಹಸ್ಥನಾದ ಬ್ರಾಹ್ಮಣನಿಗೆ ಸಮಸ್ತ ಸಾಮಗ್ರಿಗಳಿಂದ ಕೂಡಿರುವ ಮನೆಯನ್ನು ದಾನಮಾಡಿದವನು ನಂದನವನದಲ್ಲಿ ಸಮಸ್ತೇಷ್ಟವನ್ನು ಕೊಡುವ ದಿವ್ಯ ವಿಮಾನವನ್ನು ಪಡೆಯುವನು.

೨೨. ಭೂಮಿಯಲ್ಲಿ ಸುವರ್ಣವು ಉತ್ತಮ ದ್ರವ್ಯವು. ಅದನ್ನು ದಾನಮಾಡಿದರೆ ದೇವತೆಗಳು ಆನಂದಿಸುವರು. ಸೂರ್ಯನು ಅವನಿಗೆ ಮನೋಹರವಾದ ವಿಮಾನವನ್ನೀಯುವನು. ಅವನು ಅದರಲ್ಲಿ ಕುಳಿತು ಸಂಚರಿಸುವನು.

೨೩. ಪಿತೃಗಳಿಗೆ ಪ್ರಿಯವಾದ ಬೆಳ್ಳಿಯನ್ನು ದಾನಮಾಡಿದವನು ಶುದ್ಧನಾಗಿ ಚಂದ್ರಲೋಕವನ್ನು ಹೊಂದಿ ಧ್ರುವನೊಡನೆ ನೆಲೆಸಿರುವ ಋಷಿಗಳಿರುವವರೆಗೆ ವಾಸಿಸುವನು.

ಶ್ರೀಖಂಡಕರ್ಪೂರಸಮಾಕುಲಾನಿ ತಾಂಬೂಲರತ್ನಾದಿಫಲಾನಿ ದತ್ವಾ ।
ಪುಷ್ಪಾಣಿ ವಸ್ತ್ರಾಣಿ ಸುಖೇನ ಯಾತಿ ಸಾಕಂ ಶಶಾಂಕಂ ದಿವಿ ದೇವವೃಂದೈಃ
॥ ೨೪ ॥
ತಕ್ರೋದಕತೈಲಘೃತದುಗ್ಧೇಕ್ಷುರಸಮಧೂನಿ ಯೋ ದದ್ಯಾತ್ ।
ಖರ್ಜೂರಖಂಡದ್ರಾಕ್ಷಾವಾತಾಮಾಂಜೀರಕೈಸ್ಸಾಕಂ ॥ ೨೫ ॥
ದರ್ಭಾಕ್ಷತಮೃದ್ಗೋಮಯದೂರ್ವಾ ಯಜ್ಞೋಪವೀತಾನಿ ।
ತಿಲಚರ್ಮಸೂರ್ಯಪಿಟಕಂ ದತ್ವಾ ಖ್ಯಾತಶ್ಚಿರಂ ಸ್ವರ್ಗೇ ॥ ೨೬ ॥
ಆತ್ಮಾಹಾರಾಚ್ಚತುರ್ಭಾಗಂ ಸಿದ್ಧಾನ್ನಾದ್ಯದಿ ದೀಯತೇ ।
ಹಂತಕಾರಸ್ಸ ತಂ ದತ್ವಾ ಧ್ರುವಂ ಯಾತಿ ಧ್ರುವಾಲಯೇ ॥ ೨೭ ॥
ಆತ್ಮಾಹಾರಪ್ರಮಾಣೇನ ಪ್ರತ್ಯಹಂ ಗೋಷು ದೀಯತೇ ।
ಗವಾಹ್ನಿಕಂ ತಾಸು ದತ್ವಾ ನರೋ ಯಾತಿ ಸುರಾಲಯಂ ॥ ೨೮ ॥
ಕಂಡನೀಪೇಷಣೀಚುಲ್ಲೀಮಾರ್ಜನೀಭಿಶ್ಚ ಯತ್ಕೃತಂ ।
ಪಾಪಂ ಗೃಹೀ ಕ್ಷಾಲಯತಿ ದದದ್ಭಿಕ್ಷಾಂ ದಿನಂ ಪ್ರತಿ ॥ ೨೯ ॥

---

೨೪. ಶ್ರೀಖಂಡ, ಕರ್ಪೂರ, ತಾಂಬೂಲ, ರತ್ನ, ಫಲ, ಪುಷ್ಪ, ವಸ್ತ್ರ, ಇವುಗಳನ್ನು ದಾನಮಾಡಿದವನು ದೇವತೆಗಳೊಡನೆ ಚಂದ್ರನನ್ನು ಹೊಂದುವನು.

೨೫–೨೬. ಮಜ್ಜಿಗೆ, ನೀರು, ಎಣ್ಣೆ, ತುಪ್ಪ, ಹಾಲು, ಕಬ್ಬಿನರಸ, ಜೇನು, ಖರ್ಜೂರ, ದ್ರಾಕ್ಷಿ, ವಾತಾಮಾ, ಜೀರಿಗೆ, ದರ್ಭೆ, ಅಕ್ಷತ, ಮಣ್ಣು, ಗೋಮಯ, ಗರಿಕೆಹುಲ್ಲು, ಯಜ್ಞೋಪವೀತ, ಎಳ್ಳು, ಚರ್ಮ, ಬುಟ್ಟಿ ಇವುಗಳನ್ನು ದಾನಮಾಡಿದವನು ಸ್ವರ್ಗದಲ್ಲಿ ಪ್ರಸಿದ್ಧನಾಗುವನು.

೨೭. ತನಗೆ ಆಹಾರಕ್ಕಾಗಿಟ್ಟುಕೊಂಡ ಸಿದ್ಧಾನ್ನದ ನಾಲ್ಕನೆ ಒಂದು ಭಾಗವನ್ನು ದಾನಮಾಡಿದರೆ ಅದು ಹಂತಕಾರವೆನ್ನಿಸಿಕೊಳ್ಳುವುದು. ಹಾಗೆ ದಾನಮಾಡಿದವನು ಧ್ರುವಾಲಯವನ್ನು ಸೇರುವನು.

೨೮. ತನ್ನ ಆಹಾರದಷ್ಟೇ ಆಹಾರವನ್ನು ಪ್ರತಿದಿನವೂ ಗೋವಿಗೆ ಕೊಡುವವನು ದೇವಲೋಕವನ್ನು ಸೇರುವನು.

೨೯. ಗ್ರಹಸ್ಥನು ಕತ್ತಿ, ಬೀಸುವಕಲ್ಲು, ಒಲೆ, ಪರಕೆಗಳಿಂದ ಮಾಡಿದ ಪಾಪವನ್ನು ಪ್ರತಿದಿನ ಭಿಕ್ಷೆಯನ್ನು ನೀಡುವುದರಿಂದ ಪರಿಹಸಿಕೊಳ್ಳುವನು.

ಗ್ರಾಸಮಾತ್ರಾ ಭವೇದ್ಭಿಕ್ಷಾ ಸಾ ನಿತ್ಯಂ ಯತ್ರ ದೀಯತೇ ।
ತದ್ಗೃಹಂ ಗೃಹಮನ್ಯಚ್ಚ ಸ್ಮಶಾನಮಿವ ದೃಶ್ಯತೇ ॥ ೩೦ ॥
ಕುಂಭಾನ್ನೋದಕಸಿದ್ಧಾನ್ನಾಂಶ್ಛತ್ರೋಪಾನತ್ಕಮಂಡಲುಂ ।
ಅಂಗುಲೀಯಕವಾಸಾಂಸಿ ದತ್ವಾ ಯಾತಿ ನರೋ ದಿವಿ ॥ ೩೧ ॥
ಶ್ರಾಂತಸ್ಯ ಯಾನಂ ತೃಷಿತಸ್ಯ ಪಾನಂ
ಅನ್ನಂ ಕ್ಷುಧಾರ್ತಸ್ಯ ನರೋ ನರೇಂದ್ರ ।
ದತ್ವಾ ವಿಮಾನೇನ ಸುರಾಂಗನಾಭಿಃ
ಸಂಸ್ತೂಯಮಾನಸ್ತ್ರಿದಿವಂ ಸ ಯಾತಿ ॥ ೩೨ ॥
ಭೋಜನಂ ಸತತಂ ದೇಯಂ ಯಥಾಶಕ್ತ್ಯಾ ಘೃತಪ್ಲುತಂ ।
ತನ್ಮಯಾ ಹಿ ಯತಃ ಪ್ರಾಣಾ ಅತಃ ಪುಷ್ಯಂತಿ ಪ್ರಾಣಿನಃ ॥ ೩೩ ॥
ಕ್ಷುತ್ಪೀಡಾ ಮಹತೀ ಲೋಕೇ ಹ್ಯನ್ನಂ ತದ್ಭೇಷಜಂ ಸ್ಮೃತಂ ।
ತೇನ ಸಾ ಶಾಂತಿಮಾಯಾತಿ ತತೋಽನ್ನಂ ದೇಯಮುತ್ತಮಂ ॥ ೩೪ ॥
ಅನ್ನಂ ವಸ್ತ್ರಂ ಫಲಂ ತೋಯಂ ತಕ್ರಂ ಶಾಕಂ ಘೃತಂ ಮಧು ।
ಪತ್ರಂ ಪುಷ್ಪಂ ತಥೋಪಾನತ್ಕಂಥಾಂ ಯಷ್ಟಿಂ ಕಮಂಡಲುಂ ॥ ೩೫ ॥

---

೩೦. ಭಿಕ್ಷೆಯು ಒಂದು ಕವಳದಷ್ಟಾಗಿರುವುದು. ಅದನ್ನು ಪ್ರತಿದಿನವೂ ಕೊಡುವವನ ಮನೆಯು ಮನೆಯೆನ್ನಿಸಿಕೊಳ್ಳುವುದು. ಉಳಿದುದು ಸ್ಮಶಾನದಂತೆ ಕಾಣಿಸುವುದು.

೩೧. ನೀರು ಅನ್ನಗಳಿಂದ ತುಂಬಿದ ಕಲಶ, ಕೊಡೆ, ಪಾದರಕ್ಷೆ, ಕಮಂಡಲು, ಉಂಗುರ, ವಸ್ತ್ರ ಇವುಗಳನ್ನು ದಾನಮಾಡುವವನು ಸ್ವರ್ಗಲೋಕವನ್ನು ಪಡೆಯುವನು.

೩೨. ಬಳಲಿದವನಿಗೆ ವಾಹನವನ್ನೂ, ಬಾಯಾರಿದವನಿಗೆ ಪಾನೀಯವನ್ನೂ, ಹಸಿವುಗೊಂಡವನಿಗೆ ಅನ್ನವನ್ನೂ ದಾನಮಾಡಿದವನು ದೇವತಾಸ್ತ್ರೀಯರಿಂದ ಸ್ತುತಿಸಲ್ಪಡುವವನಾಗಿ ವಿಮಾನದಿಂದ ಸ್ವರ್ಗಕ್ಕೆ ಹೋಗುವನು.

೩೩. ಊಟದಿಂದಲೆ ಪ್ರಾಣವು ಉಳಿಯುವುದರಿಂದಲೂ, ಪ್ರಾಣಿಗಳು ಪುಷ್ಟವಾಗುವುದರಿಂದಲೂ ಯಾವಾಗಲೂ ಶಕ್ತ್ಯನುಸಾರ ತುಪ್ಪದೊಡನೆ ಭೋಜನವನ್ನೀಯಬೇಕು.

೩೪. ಲೋಕದಲ್ಲಿ ಹಸಿವಿನ ಪೀಡೆಯು ಅಧಿಕವಾದುದು. ಅನ್ನವು ಅದಕ್ಕೆ ಔಷಧವಾಗಿರುವುದು. ಅದರಿಂದ ಹಸಿವು ಮಾಯವಾಗುವುದು. ಆದ್ದರಿಂದ ಉತ್ತಮವಾದ ಅನ್ನವನ್ನು ಕೊಡಬೇಕು.

೩೫–೩೮. ಅನ್ನ, ವಸ್ತ್ರ, ಫಲ, ನೀರು, ಮಜ್ಜಿಗೆ, ತರಕಾರಿ, ತುಪ್ಪ, ಜೇನು, ಎಲೆ, ಹೂವು, ಪಾದರಕ್ಷೆ, ಕಂತೆ, ದೊಣ್ಣೆ, ಕಮಂಡಲು, ಕೊಡೆ, ಪಾತ್ರೆ, ವ್ರತ,

ಛತ್ರಪಾತ್ರೇ ವ್ರತಂ ವಿದ್ಯಾ ಅಕ್ಷಮಾಲಾ ಸುರಾರ್ಚನಂ ।
ಕನ್ಯಾ ಕುಶೋಪವೀತಾನಿ ಬೀಜೌಷಧಗೃಹಾಣಿ ಚ ॥ ೩೬ ॥
ಸಸ್ಯಂ ಕ್ಷೇತ್ರಂ ಯಜ್ಞಪಾತ್ರಂ ಯೋಗಪಟ್ಟಂ ಚ ಪಾದುಕೇ ।
ಕೃಷ್ಣಾಜಿನಂ ಬುದ್ಧಿದಾನಂ ಧರ್ಮಾದೇಶಕಥಾನಕಂ ॥ ೩೭ ॥
ಅರ್ಥೈತತ್ಸಂತತಂ ದೇಯಂ ತೇನ ಶ್ರೇಯೋ ಮಹದ್ಭವೇತ್ ।
ಸರ್ವಪಾಪಕ್ಷಯಂ ಕೃತ್ವಾ ದಾತಾ ಯಾತಿ ಶಿವಾಲಯಂ ॥ ೩೮ ॥
ಶ್ರಾದ್ಧೇ ಗೃಹಸ್ಥಾ ಭೋಕ್ತವ್ಯಾಃ ಕುಲೀನಾ ವೇದಪಾರಗಾಃ ।
ಅಕ್ರೋಧನಾಃ ಸ್ನಾನಶೀಲಾಃ ಸ್ವದೇಶಾಚಾರತತ್ಪರಾಃ ॥ ೩೯ ॥
ಆಮಂತ್ರ್ಯ ಪೂರ್ವದಿವಸೇ ನಿರೀಹಾ ಅಪಿ ಯೇ ದ್ವಿಜಾಃ ।
ಅಲೋಲುಪಾ ವ್ಯಾಧಿಹೀನಾ ನ ತು ಯೇ ಗ್ರಾಮಯಾಜಿನಃ ॥ ೪೦ ॥
ತೇಷಾಂ ಪುರಃ ಪ್ರದಾತವ್ಯಂ ಪಿಂಡದಾನಂ ವಿಧಾನತಃ ।
ಶ್ರಾದ್ಧಂ ಶ್ರಾದ್ಧವಿಹೀನೇನ ಕೃತಮಪ್ಯಕೃತಂ ಭವೇತ್ ॥ ೪೧ ॥
ತಸ್ಮಾಚ್ಛ್ರದ್ಧಾನ್ವಿತೈಃ ಶ್ರಾದ್ಧಂ ಕರ್ತವ್ಯಂ ಕ್ರೋಧವರ್ಜಿತೈಃ ।
ವಾನಪ್ರಸ್ಥೋ ಬ್ರಹ್ಮಚಾರೀ ಪಥಿಕಸ್ತೀರ್ಥಸೇವಕಃ ॥ ೪೨ ॥

---

ವಿದ್ಯೆ, ಜಪಮಾಲೆ, ದೇವಪೂಜೆ, ಕನ್ಯಾ, ದರ್ಭೆ, ಜನಿವಾರ, ಬೀಜ, ಔಷಧ, ಮನೆ, ಸಸ್ಯ, ಕ್ಷೇತ್ರ, ಯಜ್ಞಪಾತ್ರೆ, ಯೋಗಪಟ್ಟಿ, ಪಾದುಕೆ, ಕೃಷ್ಣಾಜಿನ, ಬುದ್ಧಿ, ಧರ್ಮೋಪದೇಶ, ಕಥೆ ಇವುಗಳನ್ನು ಯಾವಾಗಲೂ ದಾನಮಾಡಬೇಕು. ಇದರಿಂದ ಪಾಪವು ಕ್ಷಯಿಸಿ ಶ್ರೇಯಸ್ಸುಂಟಾಗಿ ದಾನಮಾಡಿದವನು ಶಿವಾಲಯವನ್ನು ಸೇರುವನು.

೩೯. ಶ್ರಾದ್ಧದಲ್ಲಿ ಕುಲೀನರೂ, ವೇದಪಾರಂಗತರೂ, ಕೋಪವಿಲ್ಲವರೂ, ಸ್ನಾನ ಮಾಡುವವರೂ, ತಮ್ಮ ದೇಶದ ಆಚಾರದಲ್ಲಿ ನಿರತರೂ ಆದ ಬ್ರಾಹ್ಮಣರು ಭೋಜನ ಮಾಡಲರ್ಹರು.

೪೦–೪೧. ಆಶೆಯಿಲ್ಲದವರೂ, ಕಾಯಿಲೆಯಿಲ್ಲದವರೂ, ಹಳ್ಳಿಯವರಿಂದ ಯಾಗಮಾಡಿಸಿದವರೂ ಆದ ಬ್ರಾಹ್ಮಣರನ್ನು ಹಿಂದಿನ ದಿನ ಆಮಂತ್ರಿಸಿ ಅವರ ಮುಂದೆ ವಿಧಿಯಂತೆ ಪಿಂಡಪ್ರದಾನ ಮಾಡಬೇಕು. ಶ್ರದ್ಧೆಯಿಲ್ಲದವನು ಮಾಡಿದ ಶ್ರಾದ್ಧವು ಮಾಡದಿರುವಂತೆಯೇ ಆಗಿರುವುದು.

೪೨–೪೩. ಆದ್ದರಿಂದ ಕೋಪಗೊಳ್ಳದೆ ಶ್ರದ್ಧೆಯಿಂದ ಶ್ರಾದ್ಧಮಾಡಬೇಕು. ಗೃಹಸ್ಥರು ಆ ಶ್ರಾದ್ಧದಲ್ಲಿ ವೈಶ್ವದೇವದ ಕೊನೆಯಲ್ಲಿ ವಾನಪ್ರಸ್ಥ, ಬ್ರಹ್ಮಚಾರೀ,

ಅತಿಥಿರ್ವೈಶ್ವದೇವಾಂತೇ ಸಪೂಜ್ಯಶ್ಶ್ರಾದ್ಧಕರ್ಮಣಿ ।
ಸರ್ವದಾ ಯತಯಃ ಪೂಜ್ಯಾಃ ಸ್ವಶಕ್ತ್ಯಾ ಗೃಹಮೇಧಿನಃ ॥ ೪೩ ॥
ಯಾತ್ರಾವಿಧಿಮಥೋ ವಕ್ಷ್ಯೇ ಸೇತಿಹಾಸಂ ನೃಪೋತ್ತಮ ॥ ೪೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥ ಕ್ಷೇತ್ರಮಾಹಾತ್ಮ್ಯೇ
ಶ್ರಾದ್ಧದಾನಾದಿ ಮಾಹಾತ್ಮ್ಯವರ್ಣನಂ ನಾಮ
ತ್ರಯೋದಶೋಽಧ್ಯಾಯಃ

---

ಮಾರ್ಗಸ್ಥ, ತೀರ್ಥಯಾತ್ರೆ ಮಾಡುವವ, ಅತಿಥಿ ಇವರನ್ನು ಪೂಜಿಸಬೇಕು. ಸನ್ಯಾಸಿಗಳನ್ನು ಯಾವಾಗಲೂ ಶಕ್ತ್ಯನುಸಾರ ಅರ್ಚಿಸಬೇಕು.

೪೪. ಮಹಾರಾಜ! ಬಳಿಕ ನಿನಗೆ ಯಾತ್ರಾವಿಧಿಯನ್ನು ಹೇಳುವೆನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಶ್ರಾದ್ಧದಾನಾದಿ ಮಾಹಾತ್ಮ್ಯವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಚತುರ್ದಶೋಽಧ್ಯಾಯಃ

## ಸೋಮೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ

ಸಾರಸ್ವತ ಉವಾಚ :—

ವಸ್ತ್ರಾಪಥೇ ಮಹಾಕ್ಷೇತ್ರೇ ನಗರೇ ವಾಮನೇ ಪುರಾ ।
ಪುತ್ರಶೋಕಾಭಿಸಂತಪ್ತೋ ವಸಿಷ್ಠೋ ಭಗವಾನೃಷಿಃ ॥ ೧ ॥
ಆಜಗಾಮ ತಪಸ್ತಪ್ತುಂ ಸ್ವರ್ಣರೇಖಾನದೀತಟೇ ।
ಈಶಾನಕೋಣೇ ನಗರಾತ್ಸ್ವರ್ಣರೇಖಾನದೀಜಲೇ ॥ ೨ ॥
ಸ್ನಾತ್ವಾ ಧ್ಯಾತ್ವಾ ಶಿವಂ ದೇವಂ ಮನಸಾ ಚಿಂತಯದ್ಯದಾ ।
ತದಾ ರುದ್ರಸ್ಸಮಾಯಾತಃ ತ್ರಿನೇತ್ರೋ ವೃಷಭಧ್ವಜಃ ॥ ೩ ॥
ಮಹರ್ಷೇ ತವ ತುಷ್ಟೋಽಹಂ ಕಿಂ ಕರೋಮಿ ವದಸ್ವ ತತ್ ।

ವಸಿಷ್ಠ ಉವಾಚ :—

ಯದಿ ತುಷ್ಟೋ ಮಹಾದೇವ ವರೋ ದೇಯೋ ಮಮಾಧುನಾ ।
ತದಾತ್ರ ಭವತಾ ಸ್ಥೇಯಂ ಯಾವದಾಚಂದ್ರತಾರಕಂ ॥ ೪ ॥

---

ಕನ್ನಡದ ಅನುವಾದ

ಸೋಮೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ

೧. ಸಾರಸ್ವತನು ಹೇಳುತ್ತಾನೆ :—ಪುತ್ರಶೋಕದಿಂದ ದುಃಖಗೊಂಡ ವಸಿಷ್ಠ ಮಹರ್ಷಿಯು ವಸ್ತ್ರಾಪಥ ಮಹಾಕ್ಷೇತ್ರದಲ್ಲಿ ವಾಮನ ನಗರದಲ್ಲಿರುವ ಸ್ವರ್ಣರೇಖಾನದಿಯ ದಡದಲ್ಲಿ ತಪಸ್ಸನ್ನಾಚರಿಸಲು ಬಂದನು. ಅವನು ಪಟ್ಟಣದ ಈಶಾನ್ಯ ಮೂಲೆಯಲ್ಲಿರುವ ಸ್ವರ್ಣರೇಖಾ ನದಿಯ ನೀರಿನಲ್ಲಿ ಮಿಂದು, ಮಹೇಶ್ವರನನ್ನು ಚಿಂತಿಸುತ್ತಿರಲು ಮುಕ್ಕಣ್ಣನೂ, ವೃಷಭಧ್ವಜನೂ ಆದ ಮಹೇಶ್ವರನು ಬಂದು "ಮಹರ್ಷಿಯೆ! ನಿನ್ನಲ್ಲಿ ನಾನು ಸಂತುಷ್ಟನಾಗಿರುವೆನು. ಏನನ್ನು ಮಾಡಲಿ? ಅದನ್ನು ಹೇಳು. ಎಂದನು.

೪. ವಸಿಷ್ಠನು ಹೇಳುತ್ತಾನೆ :—ಮಹಾದೇವ ! ನೀನು ನನ್ನಲ್ಲಿ ಸಂತುಷ್ಟನಾಗಿದ್ದರೆ, ನನಗೆ ವರವನ್ನು ಕೊಡುವವನಾದರೆ ನೀನಿಲ್ಲಿ ಚಂದ್ರ ಸೂರ್ಯರಿರುವ ವರೆಗೆ ನೆಲೆಸು.

ಅತ್ರ ಸ್ನಾನಂ ಕರಿಷ್ಯಂತಿ ಯೇ ನರಾಃ ಪಾಪಕರ್ಮಿಣಃ ।
ತೇಷಾಂ ಪಾಪಕ್ಷಯೋ ದೇವ ಕರ್ತವ್ಯೋ ಭವತಾ ಸದಾ ॥ ೫ ॥
ನರಾ ಯೇ ಪಾಪಕರ್ಮಾಣಃ ಪೂಜಯಂತಿ ತ್ರಿಲೋಚನಂ ।
ತಾನ್ನರಾನ್ನಯ ದೇವೇಶ ವಿಮಾನೈಶ್ಶಿವಮಂದಿರಂ ॥ ೬ ॥

ಸಾರಸ್ವತ ಉವಾಚ :—

ತಥೇತ್ಯುಕ್ತ್ವಾ ಹರೋ ದೇವ ಸ್ತತ್ರೈವಾಂತರಧೀಯತ ।
ಹಿರಣ್ಯಕಶಿಪುಂ ಹತ್ವಾ ನರಸಿಂಹೋ ಮಹಾಬಲಃ ॥ ೭ ॥
ತ್ರೈಲೋಕ್ಯಮಿಂದ್ರಾಯ ದದೌ ಕಾಲರುದ್ರಂ ಸ್ವಯಂ ಯಯೌ ।
ತದನ್ವಯೇ ಬಲಿರ್ಜಾತಃ ಸ ಚಾತೀವ ಬಲಾಧಿಕಃ ।
ಏಕಾತಪತ್ರಾಂ ಪೃಥಿವೀಂ ಬಲಿಶ್ಚಕ್ರೇ ಬಲಾಧಿಕಃ ।
ಅಕೃಷ್ಟಪಚ್ಯಾ ಸುಜಲಾ ಧರಿತ್ರೀ ಸಸ್ಯಶಾಲಿನೀ ॥ ೮ ॥
ಗಂಧವಂತಿ ಚ ಪುಷ್ಪಾಣಿ ರಸವಂತಿ ಫಲಾನಿ ಚ ।
ಆಸ್ಕಂಧಫಲಿನೋ ವೃಕ್ಷಾಃ ಪುಟಕೇ ಪುಟಕೇ ಮಧು ॥ ೯ ॥
ಚತುರ್ವೇದಾ ದ್ವಿಜಾಃ ಸರ್ವೇ ಕ್ಷತ್ರಿಯಾ ಯುದ್ಧಕೋವಿದಾಃ ।
ಗೋಷು ಸೇವಾಪರಾ ವೈಶ್ಯಾಃ ಶೂದ್ರಾಶ್ಶುಶ್ರೂಷಣೇ ರತಾಃ ॥ ೧೦ ॥

---

೫. ಇಲ್ಲಿ ಮಿಂದ ಪಾಪಿಗಳ ಪಾಪವನ್ನು ನೀನು ಯಾವಾಗಲೂ ಪರಿಹರಿಸು.

೬. ದೇವೇಶ ! ಶಂಕರನನ್ನು ಪೂಜಿಸಿದ ಪಾಪಿಯನ್ನು ಶಿವಮಂದಿರಕ್ಕೆ ವಿಮಾನದಿಂದ ಕರೆದುಕೊಂಡು ಹೋಗು.

೭. ಸಾರಸ್ವತನು ಹೇಳುತ್ತಾನೆ :—ಹರನು ಹಾಗೆಯೇ ಆಗಲೆಂದು ಹೇಳಿ ಅಲ್ಲಿಯೇ ಅಂತರ್ಧಾನವಾದನು. ಮಹಾ ಬಲಿಷ್ಠನಾದ ನರಸಿಂಹನು ಹಿರಣ್ಯಕಶಿಪುವನ್ನು ಕೊಂದು ದೇವೇಂದ್ರನಿಗೆ ಮೂರುಲೋಕಗಳ ಪ್ರಭುತ್ವವನ್ನಿತ್ತು ತಾನು ಕಾಲರುದ್ರನನ್ನು ಸೇರಿದನು.

೮–೧೦. ಅವನ ವಂಶದಲ್ಲಿ ಅತ್ಯಂತ ಬಲಿಷ್ಠನಾದ ಬಲಿಯು ಹುಟ್ಟಿ ಚಕ್ರವರ್ತಿಯಾದನು. ಅವನು ರಾಜ್ಯವಾಳುತ್ತಿರಲು ಭೂಮಿಯು ಉಳದೆ ಬೆಳೆದ ಸಸ್ಯಗಳಿಂದಲೂ ನೀರಿನಿಂದಲೂ ಪ್ರಕಾಶಿಸಿತು. ಹೂವುಗಳು ಪರಿಮಳವುಳ್ಳುವಾದುವು. ಹಣ್ಣುಗಳು ರುಚಿಕರವಾದುವು. ಮರಗಳು ಕಾಂಡದವರೆಗೆ ಫಲಗಳುಳ್ಳುವಾದುವು. ಪ್ರತಿಯೊಂದು ಜೇನುಗೂಡಿನಲ್ಲಿಯೂ ಜೇನುತುಪ್ಪವು ತುಂಬಿತು. ಬ್ರಾಹ್ಮಣರೆಲ್ಲ ನಾಲ್ಕು ವೇದಗಳನ್ನು ಅಧ್ಯಯನ ಮಾಡಿದರು. ಕ್ಷತ್ರಿಯರು ಯುದ್ಧದಲ್ಲಿ ಕುಶಲರಾದರು. ವೈಶ್ಯರು ಗೋಸೇವೆಯಲ್ಲಿಯೂ, ಶೂದ್ರರು ಬ್ರಾಹ್ಮಣ ಸೇವೆಯಲ್ಲಿಯೂ ನಿರತರಾದರು.

ಸದಾಚಾರಾ ಜನಪದಾ ಈತಿವ್ಯಾಧಿವಿವರ್ಜಿತಾಃ ।
ಹೃಷ್ಟಪುಷ್ಟಜನಾಸ್ಸರ್ವೇ ಸದಾನಂದಾಸ್ಸದೋದ್ಯತಾಃ ॥ ೧೧ ॥
ಕುಂಕುಮಾಗುರು ಲಿಪ್ತಾಂಗಾಸ್ಸುವೇಷಾಸ್ಸಾಧುಮಂಡಿತಾಃ ।
ದಾರಿದ್ರ್ಯದುಃಖಮರಣೈಃ ವಿಮುಕ್ತಾಶ್ಚಿರಜೀವಿನಃ ॥ ೧೨ ॥
ದೀಪೋದ್ಯೋತಿತಭೂಭಾಗಾ ರಾತ್ರಾವಪಿ ಯಥಾ ದಿನೇ ।
ವಿಚರಂತಿ ತಥಾ ಮರ್ತ್ಯಾ ದೇವಾ ದೇವಾಲಯೇ ಯಥಾ ॥ ೧೩ ॥
ಪೃಥಿವ್ಯಾಂ ಸ್ವರ್ಗರೂಪಾಯಾಂ ರಾಜ್ಯಂ ಚಕ್ರೇಽಸುರೋ ಬಲಿಃ ।
ನಿತ್ಯಂ ವಿವಾಹವಾದಿತ್ರೈಃ ನಾದಿತಂ ಭೂಪ ಮಂದಿರಂ ॥ ೧೪ ॥
ಧರಿತ್ರೀಂ ಬುಭುಜೇ ದೈತ್ಯೋ ದೇವರಾಜೋ ಯಥಾ ದಿವಿ ।
ದೇವೇಂದ್ರೋ ಬಲಿನಾ ನಿತ್ಯಂ ಯಜ್ಞೈಸ್ಸಂತೋಷಿತಸ್ತದಾ ॥ ೧೫ ॥
ದೇವಾನಾಂ ದಾನವಾನಾಂ ಚ ನಾಸ್ತಿ ಯುದ್ಧಂ ಪರಸ್ಪರಂ ।
ಏಕ ಏವ ಮಹೀಪಾಲೋ ಯುದ್ಧಂ ನಾಸ್ತಿ ಧರಾತಲೇ ॥ ೧೬ ॥
ಸಪತ್ನಕಕಲಿರ್ನಾಮ ನಾಸ್ತಿ ಯುದ್ಧಂ ಹರೇರ್ಗಜೈಃ ।
ನ ಸರ್ಪನಕುಲೈರ್ನಿತ್ಯಂ ನ ಬಿಡಾಲೈಶ್ಚ ಮೂಷಕೈಃ ॥ ೧೭ ॥

---

೧೧. ದೇಶಗಳು ಸದಾಚಾರ ಸಂಪನ್ನರೂ, ಹೃಷ್ಟಪುಷ್ಟರೂ ಆದ ಜನರುಳ್ಳದೂ, ಈತಿಬಾಧೆ ವ್ಯಾಧಿಗಳಿಲ್ಲದುವೂ, ಯಾವಾಗಲೂ ಆನಂದದಿಂದ ತುಂಬಿರುವುವೂ ಆಗಿದ್ದುವು.

೧೨-೧೩. ಜನರು ಕುಂಕುಮ, ಅಗುರು ಇವುಗಳಿಂದ ಮಾಡಿದ ಗಂಧದಿಂದ ಲಿಪ್ತಾಂಗರೂ ಒಳ್ಳೆ ಉಡುಪುಳ್ಳವರೂ, ಚೆನ್ನಾಗಿ ಅಲಂಕಾರಮಾಡಿಕೊಂಡವರೂ, ಬಡತನ, ದುಃಖ, ಮರಣಗಳಿಲ್ಲದವರೂ, ಚಿರಂಜೀವಿಗಳೂ, ದೀಪಗಳಿಂದ ಬೆಳಗುತ್ತಿರುವ ಭೂಮಿಯುಳ್ಳವರೂ ಆಗಿ ದೇವಾಲಯದಲ್ಲಿ ದೇವತೆಗಳಂತೆ ಸಂಚರಿಸುತ್ತಿದ್ದರು.

೧೪. ಬಲಿಚಕ್ರವರ್ತಿಯು ಸ್ವರ್ಗದಂತಿರುವ ಭೂಮಿಯಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಅರಮನೆಯು ಯಾವಾಗಲೂ ವಿವಾಹಗಳ ಮಂಗಳವಾದ್ಯಗಳಿಂದ ಶಬ್ದಗೊಂಡವು.

೧೫. ಸ್ವರ್ಗದಲ್ಲಿ ಇಂದ್ರನಂತೆ ಆ ಬಲಿಯು ಭೂಮಿಯಲ್ಲಿ ರಾಜ್ಯವಾಳಿದನು. ಅವನು ಯಾವಾಗಲೂ ದೇವರಾಜನನ್ನು ಯಜ್ಞಗಳಿಂದ ಆನಂದಗೊಳಿಸುತ್ತಿದ್ದನು.

೧೬. ದೇವದಾನವರಿಗೆ ಪರಸ್ಪರ ಯುದ್ಧವಾಗುತ್ತಿರಲಿಲ್ಲ. ಭೂಮಿಯಲ್ಲಿ ಬಲಿಯೊಬ್ಬನೆ ರಾಜನಾದುದರಿಂದ ಯುದ್ಧ ನಡೆಯುತ್ತಿರಲಿಲ್ಲ.

೧೭. ಆನೆ ಸಿಂಹಗಳಿಗೂ, ಹಾವು ಮುಂಗಸಿಗಳಿಗೂ, ಬೆಕ್ಕು ಇಲಿಗಳಿಗೂ ವೈರದಿಂದ ಜಗಳವಿರಲಿಲ್ಲ.

ಮೈತ್ರೀಭಾವಂ ಗತಂ ಸರ್ವಂ ಜಗತ್ಸ್ಥಾವರಜಂಗಮಮ್ ।
ತ್ರೈಲೋಕ್ಯಭ್ರಮಣಂ ಕೃತ್ವಾ ನಾರದೋ ನಂದನೇ ವನೇ ॥ ೧೮ ॥
ಗತೋ ನ ಪಶ್ಯತೇ ಯುದ್ಧಂ ತ್ರೈಲೋಕ್ಯೇ ಸಚರಾಚರೇ ।
ತಾವತ್ತಸ್ಯೋದರೇ ಪೀಡಾ ಮಹತೀ ಸಮುಜಾಯತ ॥ ೧೯ ॥
ನ ಮೇ ಸ್ನಾನಾದಿನಾ ಕಾರ್ಯಂ ತರ್ಪಣೈಃ ಕಿಂ ಪ್ರಯೋಜನಮ್ ।
ಜಪಹೋಮಾದಿನಾ ಸರ್ವಮನ್ಯಥಾ ಮಮ ಚೇಷ್ಟಿತಮ್ ॥ ೨೦ ॥
ತತ್ಸ್ನಾನಂ ಯತ್ರ ಯುಧ್ಯಂತೇ ಗಜಾ ದಂತವಿಘಟ್ಟನೈಃ ।
ಸಾ ಸಂಧ್ಯಾ ಯತ್ರ ನಿಪತ್ಯೈಃ ಕಬಂಧೈರ್ಭೂರ್ವಿಭೂಷಿತಾ ॥ ೨೧ ॥
ಕುಂತಘಾತವಿನಿರ್ಭಿನ್ನಗಜಕುಂಭೋದ್ಭವಾಸೃಜಾ ।
ತೃಪ್ಯಂತಿ ಯತ್ರ ಕ್ರವ್ಯಾದಾಸ್ತರ್ಪಣಂ ತನ್ಮಮ ಪ್ರಿಯಮ್ ॥ ೨೨ ॥
ಗಜಶೀರ್ಷೈರಗಮ್ಯಾಸ್ತೇ ನಿಹತಾಃ ಕ್ಷತ್ರಿಯಾ ರಣೇ ।
ಸ ಹೋಮೋ ಯತ್ರ ಹೂಯಂತೇ ಗಜಾಶ್ಚ ನರಪುಂಗವಾಃ ॥ ೨೩ ॥
ಶಬ್ದಾಗ್ನೌ ನಾರದಸ್ಯಾಯಂ ಹೋಮಸ್ತ್ರೈಲೋಕ್ಯವಿಶ್ರುತಃ ।
ಛಿನ್ನಪಾದಶಿರೋಹಸ್ತೈರಂತರಾಂತ್ರವಿಲಂಬಿತೈಃ ॥ ೨೪ ॥

---

೧೮. ಹೀಗೆ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವು ಸ್ನೇಹದಿಂದಿರಲೂ ನಾರದ ಮುನಿಯು ಮೂರು ಲೋಕಗಳಲ್ಲಿ ಸಂಚರಿಸಿ ನಂದನವನವನ್ನು ಸೇರಿದನು.

೧೯. ಅವನು ತ್ರಿಭುವನದಲ್ಲಿ ಯುದ್ಧವನ್ನು ಕಾಣದಿರುವುದರಿಂದ ಅತ್ಯಂತ ಹೊಟ್ಟೆಕಿಚ್ಚುವುಳ್ಳವನಾದನು.

೨೦. ನನಗೆ ಸ್ನಾನ, ತರ್ಪಣ, ಜಪ, ಹೋಮ, ಇವುಗಳಿಂದ ಪ್ರಯೋಜನವಿಲ್ಲ. ನನ್ನ ಕಾರ್ಯವೇ ಬೇರೆ.

೨೧. ಆನೆಗಳು ದಂತಗಳಿಂದ ಹೊಡೆದುಕೊಂಡು ಯುದ್ಧ ಮಾಡಿದರೆ ಅದೇ ನನ್ನ ಸ್ನಾನವು. ಮೃತಮುಂಡಗಳಿಂದ ಭೂಮಿಯು ಅಲಂಕಾರಗೊಂಡರೆ ಅದೇ ಸಂಧ್ಯಾವಂದನೆಯು.

೨೨. ಕುಂತಾಯುಧದ ಏಟಿನಿಂದ ಸೀಳಿದ ಆನೆಯ ಕುಂಭಸ್ಥಳದ ರಕ್ತವನ್ನು ಕುಡಿದು ರಾಕ್ಷಸರು ತೃಪ್ತಿಗೊಂಡರೆ ಅದೇ ತರ್ಪಣವು.

೨೩–೨೪. ಶಬ್ದವೆಂಬ ಅಗ್ನಿಯಲ್ಲಿ ಆನೆಗಳಿಂದಲೂ, ಮಾನವರಿಂದಲೂ ಹೋಮವು ಮಾಡಲ್ಪಟ್ಟರೆ ಅದೇ ನನಗೆ ತ್ರೈಲೋಕ್ಯ ಪ್ರಸಿದ್ಧವಾದ ಹೋಮವು. ಕತ್ತರಿಸಿದ ಕಾಲು, ತಲೆ, ಕೈ, ಕರಳುಗಳಿಂದಲೂ, ಭೂಲೋಕದ ಮನುಷ್ಯರಿಂದಲೂ, ಪಾತಾಳದ ನಾಗಗಳಿಂದಲೂ ನನಗೇನು ಪ್ರಯೋಜನ? ದೇವೇಂದ್ರ ಮತ್ತು ಉಪೇಂ

ಯದರ್ಚ್ಯತೇ ಭೂಮಿತಲಂ ತಸ್ಮೇ ನಿತ್ಯಂ ಸುರಾರ್ಚನಂ ।
ಕಿಂ ದೇವೈರ್ದಿವಿ ಮೇ ಕಾರ್ಯಂ ಕಿಂ ಮನುಷ್ಯೈರ್ಧರಾತಲೇ ॥ ೨೫ ॥
ಪನ್ನಗೈಃ ಕಿಂ ತು ಪಾತಾಲೇ ನ ಯುಧ್ಯಂತೇ ಪರಸ್ಪರಂ ।
ತಥಾ ಕರಿಷ್ಯೇ ದೇವೇಂದ್ರಾದುಪೇಂದ್ರಾಚ್ಚ ಧರಾತಲೇ ॥ ೨೬ ॥
ರಸಾತಲಂ ಬಲಿರ್ಯಾತು ಸತ್ಯಮಸ್ತು ವಚೋ ಮಮ ।
ಜೀವಿತೇನಾಪಿ ರಾಜ್ಯೇನ ಯದಾ ದಾಮೋದರಂ ಹರಿಂ । ॥ ೨೭ ॥
ತೋಷಯಿಷ್ಯತಿ ಯತ್ನೇನ ತದೇಂದ್ರೋಸೌ ಭವಿಷ್ಯತಿ
ದೇವೇಂದ್ರೋ ವೃತ್ರಹಾ ಭೂತ್ವಾ ಭ್ರಷ್ಟರಾಜ್ಯೋ ಭವಿಷ್ಯತಿ । ॥ ೨೮ ॥
ಯದಾ ವಸ್ತ್ರಾಪಥೇ ಗತ್ವಾ ಭವಂ ಭಾವೇನ ಪೂಜಯೇತ್ ।
ಸುರಾಧಿಪಸ್ತದಾ ಭೂಯೋ ಬ್ರಹ್ಮಹತ್ಯಾವಿವರ್ಜಿತಃ ॥ ೨೯ ॥
ಅನೇನ ಮಂತ್ರಜಾಪ್ಯೇನ ಸ ಶಾಂತೋದರವೇದನಃ ।
ನಾರದೋ ದೇವರಾಜಸ್ಯ ಸಮೀಪಂ ಸಹಸಾ ಯಯೌ ॥ ೩೦ ॥
ಸಿಂಹಾಸನಂ ಸಮಾರುಹ್ಯ ನಂದನೇ ಸಂಸ್ಥಿತೋ ಹರಿಃ ।
ಆಸ್ತೇ ಪರಿವೃತೋ ದೇವೈರ್ದೇವರಾಜೋ ಮಹಾಬಲಃ ॥ ೩೧ ॥
ನಿರೀಕ್ಷಮಾಣೋ ನೃತ್ಯಂತೀಂ ರಂಭಾಂ ತಾಂ ಸುರಸುಂದರೀಂ ।
ಆಯಾಂತಂ ದದೃಶೇ ದೇವೋ ನಾರದಂ ವಿಸ್ಮಯಾನ್ವಿತಃ ॥ ೩೨ ॥

---

ದ್ದರಿಂದ ಭೂಲೋಕವಾಸಿಯಾದ ಬಲಿಯು ಪಾತಾಳಕ್ಕೆ ತೆರಳುವಂತೆ ಮಾಡುವೆನು. ನನ್ನ ಈ ಮಾತು ನಿಜವಾಗಲಿ ಈ ಬಲಿಯು ತನ್ನ ಜೀವ, ಮತ್ತು ರಾಜ್ಯಗಳಿಂದ ಶ್ರೀಮನ್ನಾರಾಯಣನನ್ನು ಪ್ರಯತ್ನದಿಂದ ಮೆಚ್ಚಿಸಿದರೆ ದೇವೇಂದ್ರನಾಗುವನು. ಈಗಿರುವ ಶಕ್ರನು ವೃತ್ರಾಸುರನನ್ನು ಕೊಂದು ರಾಜ್ಯಭ್ರಷ್ಟನಾಗುವನು.

೨೯. ಅವನು ವಸ್ತ್ರಾಪಥ ಕ್ಷೇತ್ರವನ್ನು ಹೊಂದಿ ಭವನನ್ನು ಭಕ್ತಿಯಿಂದ ಪೂಜಿಸಿದರೆ ಬ್ರಹ್ಮಹತ್ಯೆಯಿಂದ ಮುಕ್ತನಾಗಿ ಮರಳಿ ಸುರ ರಾಜನಾಗುವನು.

೩೦. ನಾರದನೂ ಈ ಮಂತ್ರಾಲೋಚನೆಯಿಂದ ಹೊಟ್ಟೆಕಿಚ್ಚಿಲ್ಲದವನಾಗಿ ಕೂಡಲೆ ದೇವೇಂದ್ರನೆಡೆಗೆ ಹೋದನು

೩೧–೩೨. ದೇವೇಂದ್ರನು ನಂದನವನದಲ್ಲಿ ಸಿಂಹಾಸನದಲ್ಲಿ ಕುಳಿತು ದೇವತೆಗಳೊಡನೆ ನರ್ತನ ಮಾಡುತ್ತಿರುವ ಸುಂದರಿಯಾದ ರಂಭೆಯನ್ನು ನೋಡುತ್ತ ಬರುತ್ತಿರುವ ನಾರದನನ್ನು ಆಶ್ಚರ್ಯದಿಂದ ಕಂಡನು.

ಅಹೋ ವಿರುದ್ಧೋ ಭಗವಾನ್ನಾರದೋ ಮಯಿ ದೃಶ್ಯತೇ ।
ನೃತ್ಯತೇ ಕಿಂ ನ ವಾ ನೃತ್ಯೇ ಗೀಯತೇ ಕಿಂ ನ ಗೀಯತೇ ॥ ೩೩ ॥
ವಾದ್ಯತಾಂ ತಾಲಮಾನ್ಯೈಃ ಕಿಂ ಯಾವಚ್ಚಿಂತಾಪರೋ ಹರಿಃ ।
ಋಷಿಸ್ಸಮಾಗತಸ್ತಾವಜ್ಜಲಾಭ್ಯುಕ್ಷಣತತ್ಪರಃ ॥ ೩೪ ॥
ಸಿಂಹಾಸನಂ ಪರಿತ್ಯಜ್ಯ ಸಮುತ್ಥಾಯಾಗ್ರತಸ್ಸ್ಥಿತಃ ।
ಸ್ವಾಗತೇನಾಭಿವಾದ್ಯಾಥ ಬಭಾಷೇ ನಾರದಂ ಹರಿಃ ॥ ೩೫ ॥
ಮಹರ್ಷೇಸ್ವಾಗತಂ ತೇಽದ್ಯ ಕುತೋ ವಾ ಗಮ್ಯತೇ ತ್ವಯಾ ।
ಸ್ನಾನೇ ಸಂಧ್ಯಾರ್ಚನೇ ಹೋಮೇ ಕುಶಲಂ ತವ ವಿದ್ಯತೇ ॥ ೩೬ ॥
ಇತಿ ಪ್ರೋಕ್ತೋ ವಿಹಸ್ಯಾಥ ಬಭಾಷೇ ನಾರದೋ ಹರಿಂ ।
ಯದ್ಯೇತಜ್ಜಾಯತೇ ಮಹ್ಯಂ ಕಿಮನ್ಯೇನ ಪ್ರಯೋಜನಂ ॥ ೩೭ ॥
ಪ್ರೇಕ್ಷಣೀಕಸ್ಯ ತೇ ಸ್ಥಾನಂ ನಾಹಂ ಪಶ್ಯಾಮಿ ಸ್ವರ್ಪತೇ ।
ಯಾವದ್ರಾಜ್ಯಂ ಬಲೇಸ್ತಾವತ್ತ್ವಯಾ ಮೇ ನಪ್ರಯೋಜನಂ । ॥ ೩೮ ॥

---

೩೩–೩೪. ಪೂಜ್ಯನಾದ ನಾರದನು ನನಗೆ ವಿರುದ್ಧನಾಗಿ ಕಾಣುವನು. ಆಶ್ಚರ್ಯ ದಿಂದ ಕುಣಿಯುತ್ತಿರುವನೆ ? ಇಲ್ಲ. ಹಾಡುತ್ತಿರುವನೊ ? ಇಲ್ಲ. ತಾಳವನ್ನು ಹಾಕು ತ್ತಿರುವನೊ ! ಹೀಗೆ ಅವನು ಚಿಂತಿಸುತ್ತಿರಲು ಮುನಿಯು ನೀರನ್ನು ಪ್ರೋಕ್ಷಿಸುತ್ತ ಅಲ್ಲಿಗೆ ಬಂದನು.

೩೫. ಕೂಡಲೆ ಇಂದ್ರನು ಸಿಂಹಾಸನವನ್ನು ತ್ಯಜಿಸಿ ಮೇಲಕ್ಕೆದ್ದು ಮುಂದೆ ನಿಂತು ವಂದಿಸಿ ಹೀಗೆ ಪ್ರಶ್ನಿಸಿದನು.

೩೬. "ಮಹರ್ಷಿಯೆ ! ನಿನಗೆ ಸುಖಾಗಮನವೆ ? ನೀನು ಇಲ್ಲಿಗೆ ಬರಲು ಕಾರಣ ವೇನು ? ನಿನ್ನ ಸ್ನಾನ, ಸಂಧ್ಯಾವಂದನೆ, ಹೋಮ ಇವುಗಳು ಸರಿಯಾಗಿ ನಡೆಯುತ್ತಿ ರುವವೆ ?"

೩೭. ಇಂದ್ರನು ಹೀಗೆನ್ನಲು ನಾರದನು ನಕ್ಕು ಆ ಇಂದ್ರನನ್ನು ಕುರಿತು ಇಂತೆಂದನು. " ನನ್ನೀ ಸ್ನಾನಾದಿಗಳು ಸರಿಯಾಗಿ ನಡೆದರೆ ಇದರಿಂದ ನನಗೇನು ಪ್ರಯೋಜನ ?

೩೮. ಸ್ವರ್ಗದರಸ ! ಪ್ರೇಕ್ಷಣೀಯನಾದ ನಿನ್ನ ಸ್ಥಾನವನ್ನು ನಾನು ಈಗ ಕಾಣುವುದಿಲ್ಲ. ಬಲಿಯು ರಾಜ್ಯವಾಳುತ್ತಿರಲು ನಿನ್ನಿಂದ ನನಗೆ ಪ್ರಯೋಜನವಿಲ್ಲ.

ಅದಿತ್ಯಾದ್ಯಾ ಗ್ರಹಾಸ್ಸರ್ವೇ ಕಾಲಮಾನೇನ ಯೋಜಿತಾಃ ।
ಆಹುತ್ಯಾ ಪ್ಲಾವಿತಾ ಮೇಘಾ ವರ್ಷಂತಿ ಮುದಿತಾ ಭುವಿ ॥ ೩೯ ॥
ರೋಗಾದಿಮರಣಂ ನಾಸ್ತಿ ಯಮೋ ಧರ್ಮೇಣಪೀಡಿತಃ ॥ ೪೦ ॥
ಏಕಾತಪತ್ರಾಂ ಪೃಥಿವೀಂ ಬುಭುಜೇ ಸ ನರಾಧಿಪಃ
ತ್ರೈಲೋಕ್ಯನಾಥೇತಿ ಮಹಾನೃಪೇತಿ
ಸಂಗ್ರಾಮವಿದ್ಯಾಕುಶಲೇತಿ ನಿತ್ಯಂ ।
ತ್ರೈಲೋಕ್ಯಲಕ್ಷ್ಮೀಕುಚಕಾಮುಕೇತಿ
ಸಂಸ್ತೂಯತೇಚಾರಣಬಂದಿವೃಂದೈಃ ॥ ೪೧ ॥
ಬ್ರಹ್ಮೇತಿ ಕೃಷ್ಣೇತಿ ಹರೇತಿ ಭೂಮಾ
ವಿಂದ್ರೇತಿ ಸೂರ್ಯೇತಿ ಧನಾಧಿಪೇತಿ ।
ದೇವಾರಿನಾಥೇತಿ ಸುರಾಧಿಪೇತಿ ।
ಜೇಗೀಯತೇ ಚಾರಣಬಂದಿವೃಂದೈಃ ॥ ೪೨ ॥
ಯುದ್ಧಂ ವಿನಾ ದೈತ್ಯಗಣಾ ಹಸಂತಿ
ಮತ್ತಾಃ ಪ್ರಮತ್ತಾಃಕರಿಣೋ ನದಂತಿ ।
ರಥಾಧಿರೂಢಾಃ ಪುರುಷಾ ಭ್ರಮಂತಿ
ಸೇನಾಧಿಪಾಃಸ್ತ್ರೀಷು ಗೃಹೇ ರಮಂತಿ ॥ ೪೩ ॥

---

೩೯. ಆದಿತ್ಯಾದಿ ಸಕಲ ಗ್ರಹಗಳು ಕಾಲದ ಪ್ರಮಾಣದಿಂದ ನೇಮಿಸಲ್ಪಟ್ಟಿದ್ದಾರೆ. ಆಹುತಿಯಿಂದ ನೆನೆದ ಮೇಘಗಳು ಸಂತೋಷದಿಂದ ಭೂಮಿಯಲ್ಲಿ ಮಳೆ ಸುರಿಸುತ್ತವೆ.

೪೦. ರೋಗಾದಿಗಳಿಂದ ಮರಣವಿಲ್ಲ. ಯಮನುಧರ್ಮದಿಂದ ಪೀಡಿತನಾದನು.

೪೧–೪೨. ಆ ಬಲಿಯು ಸಮಸ್ತ ಭೂಮಿಯನ್ನು ಆಳುತ್ತಿರಲು ಅವನನ್ನು ಚಾರಣರೂ, ಸ್ತುತಿಪಾಠಕರೂ ಮೂರು ಲೋಕದ ಒಡೆಯನೆಂದೂ, ಸಾರ್ವಭೌಮನೆಂದೂ, ಯುದ್ಧ ವಿದ್ಯೆಯಲ್ಲಿ ನಿಪುಣನೆಂದೂ, ಮೂರುಲೋಕಗಳ ಸಂಪತ್ತುಗಳಿಗೆ ಆಶ್ರಯನೆಂದೂ, ಬ್ರಹ್ಮನೆಂದೂ, ಕೃಷ್ಣನೆಂದೂ, ಹರನೆಂದೂ, ಇಂದ್ರನೆಂದೂ, ಸೂರ್ಯನೆಂದೂ, ಕುಬೇರನೆಂದೂ, ರಾಕ್ಷಸರೊಡೆಯನೆಂದೂ, ಸುರರಾಜನೆಂದೂ, ಹೊಗಳುವರು.

೪೩–೪೪ ಯುದ್ಧವಿಲ್ಲದಿರುವುದರಿಂದ ದೈತ್ಯರು ನಗುತ್ತಾರೆ. ಆನೆಗಳು ಮದಿಸಿ ಕೂಗುತ್ತಿವೆ. ಮನುಷ್ಯರು ರಥವನ್ನೇರಿ ಸಂಚರಿಸುತ್ತಾರೆ. ಸೇನಾಧಿ

ಯಜ್ಞಾಗ್ನಿಧೂಮೇನ ನಭೋ ವಿರಾಜತೇ
ಸುವರ್ಣರೂಪಾ ಪೃಥಿವೀ ವಿರಾಜತೇ
ಶೂನ್ಯಂ ತು ವೇದೈರ್ಭುವನಂ ಚ ಶೋಭತೇ
ಧಿಷ್ಣ್ಯಂ ಬಲೇರ್ದೈತ್ಯಗಣೈಶ್ಚ ಶೋಭತೇ || ೪೪ ||
ಬಲಿರ್ನಜಾನಾನಿ ಸುರಾಧಿಪಂ ತ್ವಾಂ
ಸುರಾಶ್ಚ ಸರ್ವೇ ಬಲಿಯಜ್ಞಭೋಜಿನಃ ।
ತ್ವಮೇವ ತೇಽರಿಂ ಹೃದಿ ಚಿಂತಯ ಸ್ವಯಂ
ಯುಕ್ತಂ ತವೇದಂ ಕಥಿತಂ ಮಯೇತಿ । || ೪೫ ||
ರಂಭಾ ನ ರಾಜತೇ ರಂಗೇ ಮೇನಕಾ ತ್ವಾಂ ನ ಮನ್ಯತೇ ।
ತಿಲೋತ್ತಮಾಪಿ ಮನುತೇ ಬಲಿರಾಜಂ ಸುರೇಶ್ವರಂ || ೪೬ ||
ಊರ್ವಶೀ ಚೈವ ತಂ ಯಾತಿ ಸುಕೇಶಾ ಸಹ ಭಾಷತೇ ।
ಮಂಜುಘೋಷಾ ಮುಖಂ ವಕ್ರಂ ಕೃತ್ವಾ ತ್ವಾಂ ನ ನಿರೀಕ್ಷತೇ || ೪೭ ||
ಪುಲೋಮಾ ಪುಲಕೋದ್ಭೇದಂ ನ ಕರೋತಿ ಬಲಿಂ ವಿನಾ ।
ಪೌಲೋಮೀಪುರತೋ ಗತ್ವಾ ಬಲಿಂ ಸ್ತೌತಿ ಚ ಮಂಥರಾ || ೪೮ ||
ನಾರದಃ ಪರ್ವತಶ್ಚೈವ ಹಾಹಾಹೂಹೂಶ್ಚ ತುಂಬರುಃ ।
ಬಲಿರಾಜ್ಯಂ ಪ್ರಶಂಸಂತಿ ರುದ್ರಸ್ಯಾಗ್ರೇ ಮಯಾ ಶ್ರುತಂ || ೪೯ ||

---

ಪತಿಗಳು ಸ್ತ್ರೀಯರೊಡನೆ ಮನೆಯಲ್ಲಿ ವಿನೋದಪಡುತ್ತಾರೆ. ಆಕಾಶವು ಯಜ್ಞಧೂಮದಿಂದ ಪ್ರಕಾಶಿಸುತ್ತದೆ. ಭೂಮಿಯು ಸುವರ್ಣರೂಪವಾಗಿ ಹೊಳೆಯುತ್ತಿದೆ. ಲೋಕವೆಲ್ಲ ವೇದವಿಲ್ಲದೆಯೂ, ಬಲಿಯ ಮನೆಯು ದೈತ್ಯರಿಂದಲೂ ಪ್ರಕಾಶಿಸುತ್ತದೆ.

೪೫. ಬಲಿಯು ನಿನ್ನನ್ನು ದೇವರಾಜನೆಂದರಿಯುವುದಿಲ್ಲ. ಸಕಲ ಸುರರೂ ಬಲಿಯಜ್ಞ ಭಾಗವನ್ನು ಭುಂಜಿಸುವರು. ನೀನೇ ಶತ್ರುವಾದ ಅವನ ವಿಷಯದಲ್ಲಿ ನಾನು ಹೇಳಿರುವುದು ಯುಕ್ತವೊ ಅಯುಕ್ತವೊ ಎಂಬುದನ್ನು ಆಲೋಚಿಸು.

೪೬–೪೮. ರಂಭೆಯು ರಂಗಸ್ಥಳದಲ್ಲಿ ವಿರಾಜಿಸುವುದಿಲ್ಲ. ಮೇನಕೆಯು ನಿನ್ನನ್ನು ತಿಳಿಯುವುದಿಲ್ಲ. ತಿಲೋತ್ತಮೆಯು ಬಲಿಯನ್ನು ಶಕ್ರನೆಂದರಿಯುವಳು. ಊರ್ವಶಿಯು ಅವನೆಡೆಗೆ ಹೋಗುವಳು. ಸುಕೇಶಿಯು ಅವನೊಡನೆ ಮಾತಾಡುವಳು. ಮಂಜುಘೋಷೆಯು ಮುಖವನ್ನುವಕ್ರ ಮಾಡಿಕೊಂಡುನಿನ್ನನ್ನು ನೋಡುತ್ತಾಳೆ. ಪುಲೋಮೆಯು ಬಲಿಯುನ್ನು ಬಿಟ್ಟು ರೋಮಾಂಚಗೊಳ್ಳುವುದಿಲ್ಲ. ಪೌಲೋಮಿಯು ಬಲಿಯ ಮುಂದೆ ಹೋಗಿ ಅವನನ್ನು ಸ್ತೋತ್ರಮಾಡುತ್ತಾಳೆ.

೪೯. ರುದ್ರನ ಮುಂದೆ ಪರ್ವತ, ಹಾಹಾ, ಹೂಹೂ, ತುಂಬುರುಗಳು ಬಲಿಯ ರಾಜ್ಯವನ್ನು ಹೊಗಳುವುದನ್ನು ನಾನು ಕೇಳಿರುವೆನು.

ಆಜ್ಯಾಹುತಿಭಿಃ ಸಂತುಷ್ಟಾ ಋಷಯೋ ಬ್ರಹ್ಮಸದ್ಮನಿ ।
ಬ್ರಹ್ಮಣೋಽಗ್ರೇ ಪ್ರಶಂಸಂತಿ ತದೇವಂ ಕಥಿತಂ ಮಯಾ ॥ ೫೦ ॥
ಬೃಹಸ್ಪತಿರ್ಯದಾಚಷ್ಟೇ ನ ತದ್ವಾಚ್ಯಂ ಮಯಾ ತವ ।
ಇಂದ್ರಾಣೀ ಬಲಿನಂ ಮತ್ವಾ ಬಲಿಂ ಚಿತ್ರೇಷು ಪಶ್ಯತಿ ॥ ೫೧ ॥
ಅನೇನ ವಾಕ್ಯೇನ ಸುರಾಧಿಪಸ್ತು
ಚಚಾಲ ಕೋಪಾವರಿತಸ್ತದಾನೀಂ ।
ಗಜೇತಿ ವಜ್ರೇತಿ ಜಗಾದ ಸೂತಂ
ಸಮಾನಯಾಸಿಂ ಕವಚಂ ರಥಂ ಚ ॥ ೫೨ ॥
ರಥೇನ ಸೂರ್ಯೋ ಮರುತೋ ಗಜೇನ
ವೃಷೇಣ ರುದ್ರೋ ಮಹಿಷೇಣ ಶೌರಿಃ ।
ವಾದ್ಯಂತು ವಾದ್ಯಾನಿ ರಣಾಯ ಮೇಽದ್ಯ
ಚಂಡೀಗಣೇಶಾಸ್ತ್ವರಿತಾಃ ಪ್ರಯಾಂತು ॥ ೫೩ ॥
ದೃಷ್ಟ್ವಾ ಸುರೇಂದ್ರಂ ಸಂಕ್ರುದ್ಧಂ ಬೃಹಸ್ಪತಿರುದಾರಧೀಃ ।
ಋಷಿಮಧ್ಯೇ ಗತೋ ವಿದ್ವಾನ್ಸಭಾಷೇ ಸಮಯೋಚಿತಂ ॥ ೫೪ ॥
ಸಾಮಾದ್ಯಾ ನೀತಯಃ ಪ್ರೋಕ್ತಾಶ್ಚತಸ್ರೋ ಮನುನಾ ಪುರಾ ।
ಸಾಮಸಾಧ್ಯೇಷು ಕಾರ್ಯೇಷು ದಂಡಸ್ತೇನ ನ ಪಾತ್ಯತಾಂ ॥ ೫೫ ॥

---

೫೦. ಬ್ರಹ್ಮನ ಮನೆಯಲ್ಲಿ ಆ ಬ್ರಹ್ಮನ ಮುಂದೆ ಆಜ್ಯಾಹುತಿಗಳಿಂದ ಸಂತುಷ್ಟರಾದ ಮುನಿಗಳು ಆ ಬಲಿಯನ್ನು ಹೊಗಳುತ್ತಾರೆ. ಅದನ್ನು ನಾನು ಹೇಳಿರುತ್ತೇನೆ.

೫೧. ಬೃಹಸ್ಪತಿಯು ಹೇಳಿದ್ದನ್ನು ನಾನು ನಿನಗೆ ಹೇಳಬಾರದು. ಶಚಿಯು ಬಲಿಯು ಬಲಿಷ್ಠನೆಂದರಿತು ಅವನನ್ನು ಚಿತ್ರದಲ್ಲಿ ನೋಡುತ್ತಾಳೆ.

೫೨–೫೩. ಆಗ ಈ ಮಾತಿನಿಂದ ಕುಪಿತನಾದ ಶಕ್ರನು "ಗಜ! ವಜ್ರ ! ಎಂದು, ಕರೆದು ಸೂತನನ್ನು ಕುರಿತು ಕತ್ತಿ, ಕವಚ, ರಥಗಳನ್ನು ತೆಗೆದುಕೊಂಡು ಬಾ. ಸೂರ್ಯನು ರಥದಿಂದಲೂ, ಮರುತ್ತುಗಳು. ಆನೆಯಿಂದಲೂ, ರುದ್ರನು ವೃಷಭದಿಂದಲೂ, ಶನಿಯು ಕೋಣದಿಂದಲೂ ಹೊರಡಲಿ. ಭಟರು ವಾದ್ಯಗಳನ್ನು ಬಾರಿಸಲಿ. ಚಂಡೀ, ಗಣೇಶರು ಯುದ್ಧಕ್ಕೆ ಶೀಘ್ರವಾಗಿ ಹೋಗಲಿ ಎಂದು ಹೇಳಿದನು."

೫೪. ಆಗ ಋಷಿಗಳ ನಡುವೆ ಇರುವ ಬೃಹಸ್ಪತಿಯು ಕುಪಿತನಾದ ಶಕ್ರನನ್ನು ಕಂಡು ಸಮಯೋಚಿತವಾಗಿ ಮಾತಾಡಿದನು.

೫೫. ಮನುವು ಹಿಂದೆ ಸಾಮಾದಿ ನಾಲ್ಕು ನೀತಿಗಳನ್ನು ಹೇಳಿರುವನು. ಆದ್ದರಿಂದ ಸಾಮೋಪಾಯದಿಂದಾಗುವ ಕಾರ್ಯಗಳಲ್ಲಿ ದಂಡೋಪಾಯವನ್ನೆಸಗಬಾರದು.

ಅತೋ ಹ್ಯುಪೇಂದ್ರಮಾಹೂಯ ಮಂತ್ರಯಂತು ಸುರೋತ್ತಮಾಃ ।
ತದಧೀನಂ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೫೬ ॥
ವಿನಷ್ಟೇಷು ಚ ಕಾರ್ಯೇಷು ತಸ್ಯ ವಾಚ್ಯಂ ಶುಭಾಶುಭಂ ।
ಸ ಏವ ಪ್ರಥಮಂ ಗಚ್ಛೇತ್ ಪೃಥಿವ್ಯಾಂ ಸ್ವಾರ್ಥಸಿದ್ಧಯೇ ॥ ೫೭ ॥
ತಥೇತಿ ದೇವೈರ್ವಿಜ್ಞಪ್ತಸ್ತಥಾ ಚಕ್ರೇ ಸುರೇಶ್ವರಃ ।
ಮಂದರೇಽಥ ಗಿರೌ ವಿಷ್ಣುಃ ಸತ್ಯಲೋಕಾತ್ಸಮಾಗತಃ ॥ ೫೮ ॥
ಋಷಯಸ್ತತ್ರ ತೇ ಯಾಂತು ಸಮಾನೇತುಂ ಜನಾರ್ದನಂ ।
ಇತ್ಯುಕ್ತ್ವೋ ನಾರದಃ ಸ್ವರ್ಗಾತ್ಸ್ನಾತುಂ ಪ್ರಾಪ್ತಂ ಸ ಮಂದರೇ ॥ ೫೯ ॥
ಗೌತಮೋಽತ್ರಿರ್ಭರದ್ವಾಜೋ ವಿಶ್ವಾಮಿತ್ರೋಽಥ ಕಶ್ಯಪಃ ।
ಜಮದಗ್ನಿರ್ವಸಿಷ್ಠಶ್ಚ ಸಂಪ್ರಾಪ್ತಾ ಹರಿಮಂದಿರೇ ॥ ೬೦ ॥
ಗಿರೌ ಗಂಗಾಜಲೇ ಸ್ನಾನಂ ಸಂಧ್ಯಾಂ ಚಕ್ರೇ ಸ ನಾರದಃ ।
ಯಾವದಾಸ್ತೇ ತದಾ ಹೃಷ್ಟಾ ವಾಲಖಿಲ್ಯಾ ಮಹರ್ಷಯಃ ॥ ೬೧ ॥
ವಿನಯೇನಾಭಿವಾದ್ಯಾಥ ಕಥಯಾಮಾಸ ನಾರದಃ ।
ಋಷಯೋ ಮಂದರೇ ಪ್ರಾಪ್ತಾ ವಿಷ್ಣುಂ ನೇತುಂ ಸುರಾಲಯೇ ॥ ೬೨ ॥

---

೫೬. ದೇವವರ್ಯರೆ! ಆದ್ದರಿಂದ ಉಪೇಂದ್ರನನ್ನು ಕರೆದು ಆಲೋಚಿಸಿರಿ. ಈ ಚರಾಚರಾತ್ಮಕವಾದ ಮೂರುಲೋಕಗಳೂ ಅವನ ಅಧೀನವಾದುವು.

೫೭. ಕಾರ್ಯವು ಕೆಡಲು ಶುಭಾಶುಭಗಳನ್ನು ಅವನಿಗೆ ಹೇಳಬೇಕು. ಅವನೇ ಮೊದಲು ಇಷ್ಟಸಿದ್ಧಿಗಾಗಿ ಧರೆಗೆ ತೆರಳಲಿ.

೫೮. ಬೃಹಸ್ಪತಿಯು ಹೀಗೆ ಹೇಳಲು ಇಂದ್ರನು ದೇವತೆಗಳೊಡನೆ ಹಾಗೆಯೇ ಮಾಡಿದನು. ತರುವಾಯ ವಿಷ್ಣುವು ಸತ್ಯಲೋಕದಿಂದ ಮಂದರಪರ್ವತಕ್ಕೆ ಬಂದನು.

೫೯. ನಾರದನು ಆ ವಿಷ್ಣುವನ್ನು ಕರೆಯಲು ಋಷಿಗಳು ಅಲ್ಲಿಗೆ ಹೋಗಲಿ" ಎಂದು ಹೇಳಿ ತಾನು ಸ್ವರ್ಗದಿಂದ ಮಂದರ ಪರ್ವತಕ್ಕೆ ಸ್ನಾನ ಮಾಡಲು ಬಂದನು.

೬೦. ಗೌತಮ, ಅತ್ರಿ, ಭರದ್ವಾಜ, ವಿಶ್ವಾಮಿತ್ರ ಕಶ್ಯಪ, ಜಮದಗ್ನಿ, ವಸಿಷ್ಠ ಮುನಿಗಳೂ ಅಲ್ಲಿಗೆ ಬಂದರು.

೬೧. ಆ ನಾರದನು ಮಂದರದಲ್ಲಿರುವ ಗಂಗಾಜಲದಲ್ಲಿ ಮಿಂದು ಸಂಧ್ಯಾವಂದನೆಯನ್ನು ಮಾಡಿ ಕುಳಿತಿರಲು ಹರ್ಷಗೊಂಡ ವಾಲಖಿಲ್ಯ ಮಹರ್ಷಿಗಳು ಅಲ್ಲಿಗೆ ಬಂದರು.

೬೨-೬೩. ನಾರದನು ಅವರನ್ನು ವಿನಯದಿಂದ ವಂದಿಸಿ ಇಂತೆಂದನು. ಮುನಿಗಳೆ! ಗೌತಮಾದಿ ಮಹರ್ಷಿಗಳು ವಿಷ್ಣುವನ್ನು ಕರೆದುಕೊಂಡು ಹೋಗಲು ಮಂದರ

ಋಷಯೋ ದರ್ಶನಂ ಕರ್ತುಂ ಭವತಾಮಪಿ ಯುಜ್ಯತೇ ।
ತದೇತದ್ವಚನಂ ಶ್ರುತ್ವಾ ಹರ್ಷಿತಾಸ್ತೇ ಮಹರ್ಷಯಃ ॥ ೬೩ ॥
ಅಂಗುಷ್ಠಪರ್ವಮಾತ್ರಾಂಸ್ತಾನ್ ವಾಮನಾನ್ಹರಿಮಂದಿರೇ ।
ಗತಾನ್ಗಂಗಾಜಲೇ ಸ್ನಾತುಂ ವಾಲಖಿಲ್ಯಾನ್ಸುರೋ ಹರಿಃ ॥ ೬೪ ॥
ಜಹಾಸ ವಾಮನಾನ್ಸರ್ವಾನ್ಭಾವಿಕಾರ್ಯಬಲಾತ್ತತಃ ।
ಬ್ರಹ್ಮಪುತ್ರಾ ವಾಲಖಿಲ್ಯಾಃ ಸರ್ವೇ ತೇ ಸಂಶಿತವ್ರತಾಃ ॥ ೬೫ ॥
ಲಜ್ಜಾನ್ವಿತಾಃ ಕ್ರೋಧಪರಾ ಊಚುಃ ಪರಸ್ಪರಂ ।
ಕೇನಾಪಿ ದೇವಕಾರ್ಯೇಣ ವಾಮನೋಽಯಂ ಭವಿಷ್ಯತಿ ॥ ೬೬ ॥
ಋಷಿಭಿರ್ವಿಷ್ಣುನಾ ಸರ್ವೇ ಪ್ರತಿಚೋದ್ಯ ಪ್ರಸಾದಿತಾಃ ।
ಭಾಗ್ಯವೋಕ್ಷಃ ಕದಾ ವಿಷ್ಣೋರ್ಭವಿಷ್ಯತಿ ತದುಚ್ಯತಾಂ ॥ ೬೭ ॥
ಪ್ರಭಾಸಾದಧಿಕಂ ಕ್ಷೇತ್ರಂ ಯದಾ ವಸ್ತ್ರಾಪಥಂ ಭವೇತ್ ।
ಭವಿಷ್ಯತಿ ತದಾ ವೃದ್ಧಿಃ ಧ್ರುವಮಂಡಲವ್ಯಾಪಿನೀ ।
ತಥಾ ವಸ್ತ್ರಾಪಥಂ ಕ್ಷೇತ್ರಂ ಭವಿಷ್ಯತಿ ಯವಾಧಿಕಂ ॥ ೬೮ ॥

---

ಪರ್ವತಕ್ಕೆ ಬಂದಿರುವರು. ನೀವೂ ಆ ಮುನಿಗಳ ದರ್ಶನಮಾಡುವುದು ಯುಕ್ತವಾದುದು. ಹೀಗೆ ನಾರದನು ಹೇಳಲು ಅದನ್ನು ಕೇಳಿ ಆ ವಾಲಖಿಲ್ಯರು ಸಂತೋಷಗೊಂಡರು.

೬೪–೬೬. ಹರಿಯು ಮಂದರದಲ್ಲಿರುವ ಗಂಗಾಜಲದಲ್ಲಿ ಸ್ನಾನಮಾಡಲು ಬಂದ ಅಂಗುಷ್ಠ ಪರ್ವದಷ್ಟು ಪರಿಮಾಣವುಳ್ಳವರೂ, ಕುಳ್ಳರೂ, ಆದ ಆ ವಾಲಖಿಲ್ಯರನ್ನು ನೋಡಿ ಮುಂದೆ ಆಗುವ ಕಾರ್ಯವಶದಿಂದ ನಕ್ಕನು. ಆಗ ಬ್ರಹ್ಮನ ಮಕ್ಕಳೂ, ತೀಕ್ಷ್ಣವಾದ ವ್ರತವುಳ್ಳವರೂ, ನಾಚಿಕೆಗೊಂಡವರೂ, ಕುಪಿತರೂ ಆದ ಅವರು ಪರಸ್ಪರವಾಗಿ ಇಂತೆಂದರು. "ಈ ವಿಷ್ಣು ಮಾಯಾಮಯನಾದರೂ ದೇವಕಾರ್ಯಕ್ಕಾಗಿ ವಾಮನನಾಗುವನು.

೬೭. ಆಗ ವಿಷ್ಣುವೂ, ಸಕಲ ಮುನಿಗಳೂ ಆ ವಾಲಖಿಲ್ಯರನ್ನು ಸಮಾಧಾನಗೊಳಿಸಿ ಈ ಪಾಪವು ಯಾವಾಗ ಪರಿಹಾರವಾಗುವುದು? ಅದನ್ನು ಹೇಳಿರಿ" ಎಂದರು.

೬೮. ಅವರು ಧ್ರುವಮಂಡಲದವರೆಗೆ ವೃದ್ಧಿಗೊಳ್ಳುವ ಪ್ರಭಾಸ ವಸ್ತ್ರಾಪಥ ಕ್ಷೇತ್ರಗಳಲ್ಲಿ ಯಾವಾಗ ವಸ್ತ್ರಾಪಥಕ್ಷೇತ್ರವು ಯವದಷ್ಟು ಹೆಚ್ಚಾಗುವುದೊ ; ಆಗ

ದೃಷ್ಟ್ವಾ ಸೋಮೇಶ್ವರಂ ದೇವಂ ದೋಷಮುಕ್ತೋ ಭವಿಷ್ಯತಿ ।
ಅಸಾಧ್ಯಸಾಧನೀ ಶಕ್ತಿರ್ಭವಿಷ್ಯತಿ ಸ್ಥಿರಾ ತವ ॥ ೯ ॥
ವಸ್ತ್ರಾಪಥೇ ಸೋಮನಾಥಂ ಯಃ ಪಶ್ಯತಿ ಸ ಪಶ್ಯತಿ ।
ಇಂದ್ರೋಪೇಂದ್ರೌ ಸಮಾಲಿಂಗ್ಯಾಥಾಸೀನೌ ತೌ ವರಾಸನೇ ॥ ೨೦ ॥

ವಿಷ್ಣುರುವಾಚ :—

ಕಿಂ ತೇ ಕಾರ್ಯಂ ದೇವರಾಜ ತದವಶ್ಯಂ ಕರೋಮ್ಯಹಂ ॥ ೨೧ ॥

ಇಂದ್ರ ಉವಾಚ :—

ಹಿರಣ್ಯಕಶಿಪೋರ್ವಂಶೇ ಬಲಿರ್ದೈತ್ಯೋ ಮಹಾಬಲಃ ।
ತೇನೇದಂ ಸಕಲಂ ವ್ಯಾಪ್ತಂ ದೇವಂ ಯಜ್ಞಭುಜಃ ಕೃತಾಃ ॥ ೨೨ ॥
ದೇವಲೋಕೇ ಭೂಮಿಲೋಕೋ ಗತಃ ಸ್ವರ್ಗೋಽಪಿ ಕೇಶವ ।
ಯಾವನ್ನೋ ವಿಕೃತಿಂ ಯಾತಿ ಪೂರ್ವವೈರಮನುಸ್ಮರನ್ ।
ಭ್ರಷ್ಟರಾಜ್ಯೋ ಬಲಿಸ್ತಾವತ್ಪಾತಾಲಮಧಿತಿಷ್ಠತು ॥ ೨೩ ॥
ಸೂರ್ಯಸೋಮಾನ್ವಯೇ ಕಶ್ಚಿದ್ರಾಜಾ ಭವತು ಭೂತಲೇ ॥ ೨೪ ॥

---

ಈ ವಿಷ್ಣುವು ಸೋಮೇಶ್ವರನನ್ನು ದರ್ಶನ ಮಾಡಿ ದೋಷಮುಕ್ತನಾಗುವನು. ಅಸಾಧ್ಯ ಕಾರ್ಯವನ್ನು ಸಾಧಿಸುವ ಸ್ಥಿರಶಕ್ತಿಯೂ ಉಂಟಾಗುವುದು. ವಸ್ತ್ರಾಪಥದಲ್ಲಿರುವ ಸೋಮನಾಥನನ್ನು ದರ್ಶನ ಮಾಡುವವನ ಕಣ್ಣು ಸಫಲವಾಗುವುದು" ಎಂದರು. ಆಗ ಇಂದ್ರ, ಉಪೇಂದ್ರರು ಪರಸ್ಪರವಾಗಿ ಆಲಿಂಗಿಸಿಕೊಂಡು ಉತ್ತಮಾಸನದಲ್ಲಿ ಕುಳಿತರು.

೨೧. ವಿಷ್ಣುವು ಹೇಳುತ್ತಾನೆ :—ದೇವೇಂದ್ರ ! ನಿನ್ನ ಯಾವ ಕೆಲಸವು ಆಗಬೇಕಾಗಿದೆ ? ಅದನ್ನು ನಾನು ಅವಶ್ಯವಾಗಿ ಮಾಡುವೆನು.

೨೨. ಇಂದ್ರನು ಹೇಳುತ್ತಾನೆ :—ಹಿರಣ್ಯಕಶಿಪುವಿನ ವಂಶದಲ್ಲಿ ಬಲಿಯೆಂಬ ಮಹಾ ದೈತ್ಯನು ಜನಿಸಿ ಈ ಸಮಸ್ತ ಜಗತ್ತನ್ನು ವ್ಯಾಪಿಸಿರುವನು. ಅವನು ದೇವತೆಗಳನ್ನೆಲ್ಲ ಯಜ್ಞಾಂಶವನ್ನು ಭೋಜನ ಮಾಡುವವರನ್ನಾಗಿ ಮಾಡಿರುವನು.

೨೩. ದೇವಲೋಕ ವಾಸಿಗಳೆಲ್ಲ ಭೂಮಿಗೆ ಹೋಗಿರುವರು. ಆ ದೈತ್ಯನು ಹಿಂದಿನ ದ್ವೇಷವನ್ನು ಜ್ಞಾಪಿಸಿಕೊಂಡು ವಿಕಾರಗೊಳ್ಳುವುದರೊಳಗೆ ಭ್ರಷ್ಟರಾಜ್ಯನಾಗಿ ಪಾತಾಳದಲ್ಲಿ ವಾಸಿಸುವಂತೆ ಮಾಡು.

೨೪. ಭೂಮಿಯಲ್ಲಿ ಸೂರ್ಯ ಚಂದ್ರರ ವಂಶದಲ್ಲಿ ಒಬ್ಬ ರಾಜನು ಹುಟ್ಟಲಿ.

ಸಾರಸ್ವತ ಉವಾಚ :—
ಇತ್ಯೇತದ್ವಚನಂ ಶ್ರುತ್ವಾ ಸ್ವಯಂ ಸಂಚಿನ್ತ್ಯ ಚೇತಸಾ ।
ಕಥಾ ಕರಿಷ್ಯೇ ತಂ ಪ್ರೋಚ್ಯ ಮುನೀನ್ಪ್ರಾಹ ಜನಾರ್ದನಃ ॥ ೭೫ ॥
ಋಷಯಸ್ತತ್ರ ಗಚ್ಛಂತು ಕಾರಯಂತು ಮಹಾಮುಖಂ ।
ಅಹಂ ತತ್ರಾಗಮಿಷ್ಯಾಮಿ ಸಾಧಯಿಷ್ಯಾಮಿ ತಂ ಬಲಿಂ ॥ ೭೬ ॥
ಇತ್ಯುಕ್ತ್ವಾ ಮುನಯಃ ಸರ್ವೇ ಗತಾಸ್ತೇ ಯಜ್ಞಮಂಡಪೇ ।
ದ್ವಾದಶಾಹೋ ಮಹಾಯಜ್ಞಃ ಪ್ರಾರಬ್ಧಃ ಸರ್ವದಕ್ಷಿಣಃ ॥ ೭೭ ॥
ಸುರಾಷ್ಟ್ರದೇಶಂ ವಿಖ್ಯಾತಂ ಕ್ಷೇತ್ರಂ ವಸ್ತ್ರಾಪಥಂ ನೃಪ ।
ತಸ್ಯ ದಕ್ಷಿಣದಿಗ್ಭಾಗೇ ಬಲೇಸ್ಸಿದ್ಧಂ ಮಹಾಪುರಂ ॥ ೭೮ ॥
ಕ್ಷೇತ್ರಾದ್ಬಹಿಃ ಸಮಾರಬ್ಧೋ ಯಜ್ಞಃ ಸರ್ವಸ್ವದಕ್ಷಿಣಃ ।
ಶುಕ್ರೇಣಾಮಂತ್ರಿತಾಃ ಸರ್ವೇ ಮುನಯೋ ಯಜ್ಞಕರ್ಮಣಿ ।
ಅತಿಹೃಷ್ಟೋ ಬಲಿರ್ಯಜ್ಞೇ ದದೌ ದಾನಾನ್ಯನೇಕಧಾ ॥ ೭೯ ॥
ಸ್ವರ್ಣಪಾತ್ರೇಷು ಸರ್ವೇಷು ದೀಯತೇ ಭೋಜನಂ ಬಹು ।
ಅತಿಥಿರ್ಬ್ರಾಹ್ಮಣೋ ವಿದ್ವಾನ್ಸರ್ವಸ್ವೇನಾಪಿ ಪೂಜ್ಯತೇ ।
ದಾನಾದ್ಯಜ್ಞೋ ಭವೇತ್ಪೂರ್ಣೋ ದಾನಹೀನೋ ವೃಥಾ ಭವೇತ್ ॥ ೮೦॥

---

೭೫. ಸಾರಸ್ವತನು ಹೇಳುತ್ತಾನೆ :—ವಿಷ್ಣುವು ಈ ಮಾತನ್ನು ಕೇಳಿ ತಾನೂ ಆಲೋಚಿಸಿ ಹಾಗೆಯೇ ಮಾಡುವೆನೆಂದು ಹೇಳಿ ಮುನಿಗಳನ್ನು ಕುರಿತು ಹೀಗೆಂದನು.

೭೬. "ಮುನಿಗಳು ಬಲಿಯೆಡೆಗೆ ಹೋಗಿ ದೊಡ್ಡ ಯಜ್ಞವನ್ನು ಮಾಡಲಿ. ನಾನು ಅಲ್ಲಿಗೆ ಬಂದು ಬಲಿಯನ್ನು ಪಾತಾಳಕ್ಕೆ ಕಳುಹಿಸುವೆನು".

೭೭. ಅವನು ಹೀಗೆನ್ನಲು ಮುನಿಗಳೆಲ್ಲ ಯಜ್ಞಮಂಡಪವನ್ನು ಸೇರಿ ಸರ್ವಸ್ವ ದಕ್ಷಿಣೆಯುಳ್ಳ ಹನ್ನೆರಡು ದಿವಸ ಮಾಡಲರ್ಹವಾದ ಮಹಾ ಯಜ್ಞವನ್ನಾರಂಭಿಸಿದರು.

೭೮. ದೊರೆಯೆ ! ಸುರಾಷ್ಟ್ರ ದೇಶದಲ್ಲಿ ವಸ್ತ್ರಾಪಥವೆಂಬ ಕ್ಷೇತ್ರವಿರುವುದು. ಅದರ ದಕ್ಷಿಣ ದಿಕ್ಕಿನಲ್ಲಿ ಬಲಿಯ ದೊಡ್ಡ ಪಟ್ಟಣವು ಇರುವುದು.

೭೯. ಅವನು ಕ್ಷೇತ್ರದ ಹೊರಗೆ ಸಕಲ ವಸ್ತುಗಳೆ ದಕ್ಷಿಣೆಯಾಗುಳ್ಳ ಯಜ್ಞವನ್ನಾರಂಭಿಸಿದನು. ಶುಕ್ರಾಚಾರ್ಯರು ಯಜ್ಞಕ್ಕೆ ಸಕಲ ಮುನಿಗಳನ್ನೂ ಆಮಂತ್ರಿಸಿದರು. ಅತ್ಯಂತ ಸಂತೋಷಗೊಂಡ ಬಲಿಯು ಯಜ್ಞದಲ್ಲಿ ಅನೇಕ ಬಗೆಯ ದಾನಗಳನ್ನಿತ್ತನು.

೮೦. ಸುವರ್ಣಪಾತ್ರೆಗಳಲ್ಲಿ ಭೋಜನಮಾಡಿಸಿದನು. ವಿದ್ವಾಂಸನೂ, ಬ್ರಾಹ್ಮಣನೂ ಆದ ಅತಿಥಿಯನ್ನು ಸರ್ವಸ್ವದಿಂದ ಪೂಜಿಸಿದನು. ಯಜ್ಞವು ದಾನದಿಂದ ಪೂರ್ತಿಗೊಳ್ಳುವುದು. ದಾನಹೀನವಾದರೆ ವ್ಯರ್ಥವಾಗುವುದು.

ಏತಸ್ಮಿನ್ನೇವ ಕಾಲೇ ತು ವಿಷ್ಣುರ್ವಾಮನತಾಂ ಗತಃ ।
ಮಧ್ಯದೇಶೇ ಚತುರ್ವೇದೀ ಬ್ರಾಹ್ಮಣಸ್ತೀರ್ಥಯಾತ್ರಿಕಃ ।
ಮಹೋದರೋ ಹ್ರಸ್ವಭುಜಃ ಖಂಜಪಾದೋ ಮಹಾಶಿರಾಃ ॥ ೪೧ ॥
ಮಹಾಹನುಃ ಸ್ಥೂಲಜಂಘಃ ಸ್ಥೂಲಗ್ರೀವೋಽತಿಲಂಪಟಃ ।
ಶ್ವೇತವಸ್ತ್ರೋ ಬದ್ಧಶಿಖಶ್ಛತ್ರೋಪಾನತ್ಕಮಂಡಲೀ ॥ ೪೨ ॥
ದ್ರಷ್ಟುಂ ತೀರ್ಥಾನ್ಯನೇಕಾನಿ ಬಭ್ರಾಮ ಸ ಮಹೀತಲೇ ।
ಸುರಾಷ್ಟ್ರದೇಶೇ ಸಂಪ್ರಾಪ್ತಃ ಕ್ಷೇತ್ರೇ ವಸ್ತ್ರಾಪಥೇ ದ್ವಿಜಃ ॥ ೪೩ ॥
ಸ್ವರ್ಣರೇಖಾನದೀತೀರೇ ಚಿಂತಯಾಮಾಸ ವಾಮನಃ ।
ಪ್ರಥಮಂ ಕಿಂ ಭವಂ ದೃಷ್ಟ್ವಾ ಯಾಮಿ ಸೋಮೇಶ್ವರಂ ಶಿವಂ ॥ ೪೪ ॥
ಅಥ ಸೋಮೇಶ್ವರಂ ಪೂಜ್ಯ ಪಶ್ಚಾದ್ಯಾಸ್ಯಾಮಿ ಮಂದಿರಂ ।
ಇತಿ ಚಿಂತಾಪರೋ ಭೂತ್ವಾ ಕೃತ್ಯಂ ಸಂಚಿಂತ್ಯ ಚೇತಸಾ ।
ಅತ್ರ ಸ್ಥಿತಃ ಸೋಮನಾಥಂ ಪೂಜಯಿಷ್ಯಾಮಿ ನಿಶ್ಚಿತಂ ॥ ೪೫ ॥
ವಸ್ತ್ರಾಪಥೇ ಮಹಾಕ್ಷೇತ್ರೇ ಭವಂ ಸೋಮೇಶ್ವರಂ ಯಥಾ ।
ಪೂಜಯಂತಿ ಜನಾ ನಿತ್ಯಂ ತಥಾ ಕಾರ್ಯಂ ಮಯಾ ಧ್ರುವಂ ॥ ೪೬ ॥

---

೪೧-೫೧. ಈ ಸಮಯದಲ್ಲಿ ವಿಷ್ಣುವು ಮಧ್ಯದೇಶದಲ್ಲಿ ವಾಮನತ್ವವನ್ನು ಹೊಂದಿ ನಾಲ್ಕುವೇದಗಳನ್ನು ತಿಳಿದ ಬ್ರಾಹ್ಮಣನೂ, ತೀರ್ಥಯಾತ್ರಿಕನೂ, ದೊಡ್ಡ ಹೊಟ್ಟೆಯುಳ್ಳವನೂ, ಕುಳ್ಳಾದ ತೋಳುಗಳುಳ್ಳವನೂ, ಕುಂಟನೂ, ದೊಡ್ಡ ತಲೆಯುಳ್ಳವನೂ, ದೊಡ್ಡ ಕಪೋಲವುಳ್ಳವನೂ, ದಪ್ಪವಾದ ಮೊಣಕಾಲು, ಕುತ್ತಿಗೆಗಳುಳ್ಳವನೂ, ಶ್ವೇತ ವಸ್ತ್ರಧಾರಿಯೂ, ಜುಟ್ಟನ್ನು ಕಟ್ಟಿಕೊಂಡವನೂ, ಕೊಡೆ, ಪಾದರಕ್ಷೆ ಕಮಂಡಲುಗಳನ್ನು ಧರಿಸಿದವನೂ ಆಗಿ ಅನೇಕ ತೀರ್ಥಗಳನ್ನು ನೋಡಲು ಭೂಮಿಯಲ್ಲಿ ಸಂಚರಿಸುತ್ತ ಸುರಾಷ್ಟ್ರ ದೇಶದ ವಸ್ತ್ರಾಪಥಕ್ಷೇತ್ರದಲ್ಲಿರುವ ಸ್ವರ್ಣರೇಖಾ ನದಿಯ ದಡಕ್ಕೆ ಬಂದು ಹೀಗೆ ಚಿಂತಿಸಿದನು. ಮೊದಲು ಭವನನ್ನು ದರ್ಶನ ಮಾಡಿ ಅನಂತರ ಸೋಮೇಶ್ವರನೆಡೆಗೆ ಹೋಗಲೆ ? ಅಥವಾ ಮೊದಲು ಸೋಮೇಶ್ವರನನ್ನು ಪೂಜಿಸಿ ಬಳಿಕ ಮಂದರ ಪರ್ವತಕ್ಕೆ ಹೋಗಲೆ ? ಎಂದಾಲೋಚಿಸಿ ಆವನು ಇಲ್ಲಿಯೇ ನೆಲೆಸಿ ಸೋಮನಾಥನನ್ನು ಪೂಜಿಸುವೆನು. ವಸ್ತ್ರಾಪಥ ಮಹಾಕ್ಷೇತ್ರದಲ್ಲಿ ಜನರು ಭವನನ್ನೂ, ಸೋಮೇಶ್ವರನನ್ನೂ ಪೂಜಿಸುವಂತೆ ಮಾಡುವೆನು. ಇದು ದೇಶಗಳಲ್ಲಿ ಉತ್ತಮ ದೇಶವಾಗಿರುವುದು. ಇಲ್ಲಿ ಪರ್ವತಗಳಲ್ಲಿ ಉತ್ತಮ ಪರ್ವತವೂ, ಕ್ಷೇತ್ರಗಳಲ್ಲಿ ಉತ್ತಮ ಕ್ಷೇತ್ರವೂ, ನದಿಗಳಲ್ಲಿ ಉತ್ತಮ ನದಿಯೂ, ವನಗಳಲ್ಲಿ ಉತ್ತಮ

ದೇಶಾನಾಮುತ್ತಮೋ ದೇಶೋ ಗಿರೀಣಾಮುತ್ತಮೋ ಗಿರಿಃ ।
ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ತೀರ್ಥಾನಾಮುತ್ತಮಾ ಸರಿತ್ ॥ ೮೭ ॥
ದಿವ್ಯಂ ವನಂ ವನಾನಾಂ ತು ದೇವಾನಾಮುತ್ತಮೋ ಭವಃ ।
ಯದಾ ಸೋಮೇಶ್ವರೋ ದೇವೋ ಭೂಮಿಂ ಭಿತ್ವಾ ಭವಿಷ್ಯತಿ ॥ ೮೮ ॥
ತದಾಭ್ರಮಂಡಲೇ ದಿವ್ಯಂ ಕ್ಷೇತ್ರಮೇತದ್ಯವಾಧಿಕಂ ।
ಚೈತ್ರಶುಕ್ಲ ಚತುರ್ದಶ್ಯಾಮಗ್ನಿಸಾಧನತತ್ಪರಃ ॥ ೮೯ ॥
ಊರ್ಧ್ವಬಾಹುಃ ಸೂರ್ಯಕಾಂತೀ ಭವಂ ತಾವತ್ಸ ಪಶ್ಯತಿ ।
ಮಧ್ಯಂದಿನಪರಂ ಯಾತೇ ದಿನನಾಥೇ ವಿಲಂಬಿತೇ ॥ ೯೦ ॥
ಅಗ್ನಿತಾಪಾಂಗಸಂತಪ್ತಸ್ತಾವತ್ಪಶ್ಯತಿ ಶಂಕರಂ ।
ಸೋಮನಾಥಂ ಶಿವಂ ಶಾಂತಂ ಸರ್ವದೇವನಮಸ್ಕೃತಂ ।
ಅರ್ಘ್ಯೇಣ ಪುಷ್ಪಮಿಶ್ರೇಣ ಜಲಮಿಶ್ರೇಣ ಭಾಮಿನಿ ॥ ೯೧ ॥

ಸಾರಸ್ವತ ಉವಾಚ :—

ಭೂಮಿಂ ಭಿತ್ವಾಽಥ ದೇವೇಶಃ ಸ್ವಯಂ ಸೋಮೇಶ್ವರಃ ಸ್ಥಿತಃ ।
ಲಿಂಗರೂಪೋ ಮಹಾದೇವೋ ಯಾವದಾಬ್ರಹ್ಮವಾಸರಂ ॥ ೯೨ ॥

ಸೋಮೇಶ್ವರ ಉವಾಚ :—

ಸಿದ್ಧಸ್ತ್ವಂ ಮತ್ಪ್ರಸಾದೇನ ಕಾರ್ಯಂ ಸಿದ್ಧಂ ಭವಿಷ್ಯತಿ ।
ಇತ್ಯುಕ್ತೋ ವಾಮನೋ ದೇವಂ ಪ್ರತ್ಯುವಾಚ ಮಹೇಶ್ವರಂ । ॥ ೯೩ ॥

---

ವನವೂ ದೇವತೆಗಳಲ್ಲಿ ಉತ್ತಮನಾದ ಭವನೂ ಇರುವರು. ಸೋಮೇಶ್ವರನು ಭೂಮಿಯನ್ನು ಭೇದಿಸಿ ಉದ್ಭವಿಸಿದಾಗ ಈ ಕ್ಷೇತ್ರವು ಮೇಘ ಮಂಡಲದಲ್ಲಿ ಯವದಷ್ಟು ಅಧಿಕವಾಗಿ ದಿವ್ಯ ಕ್ಷೇತ್ರವಾಗುವುದು" ಎಂದು ನಿರ್ಧರಿಸಿ ಚೈತ್ರಶುಕ್ಲ ಚತುರ್ದಶೀ ದಿನ ಸೂರ್ಯೋದಯ ಕಾಲದಲ್ಲಿ ಅಗ್ನಿಮಧ್ಯದಲ್ಲಿ ತೋಳುಗಳನ್ನು ಎತ್ತಿಕೊಂಡು ಭವನನ್ನು ನೋಡಿದನು. ಅವನು ಅಪರಾಹ್ಣಕಾಲದಲ್ಲಿ ಅಗ್ನಿಯಿಂದ ಕಾದ ಅವಯವಗಳುಳ್ಳವನಾಗಿ ಸರ್ವದೇವವಂದಿತನಾದ ಶಿವನನ್ನು ಪುಷ್ಪಜಲ ಮಿಶ್ರವಾದ ಅರ್ಘ್ಯವನ್ನಿತ್ತು ಪೂಜಿಸಿದನು.

೯೨. ಬಳಿಕ ಸೋಮೇಶ್ವರನು ಲಿಂಗರೂಪದಿಂದ ಭೂಮಿಯನ್ನು ಭೇದಿಸಿ ಮೇಲಕ್ಕೆ ಬಂದು ಪ್ರಳಯಕಾಲದವರೆಗೆ ಅಲ್ಲಿ ನೆಲೆಸಿದನು.

೯೩. ಸೋಮೇಶ್ವರನು ಹೇಳುತ್ತಾನೆ:—ವಾಮನ! ನಾನು ನಿನಗೆ ಪ್ರಸನ್ನನಾಗಿರುವೆನು. ನನ್ನ ಅನುಗ್ರಹದಿಂದ ನಿನ್ನ ಕಾರ್ಯವು ಕೈಗೂಡುವುದು. ಎಂದು ಶಿವನು ಹೇಳಲು ವಾಮನನು ಇಂತೆಂದನು.

ವಾಮನ ಉವಾಚ :—

ಯದಿ ತುಷ್ಟೋ ಮಹಾದೇವ ಯದಿ ದೇಯೋ ವರೋ ಮಮ ।
ತದಾತ್ರ ಲಿಂಗೇ ಸ್ಥಾತವ್ಯಮಸ್ತು ದಿವ್ಯಂ ಪುರೋ ಮಮ ॥ ೯೪ ॥

ಯಸ್ತು ಸ್ವಾಯಂಭುವಂ ಲಿಂಗಂ ವಾಮನೇ ನಗರೇ ಮಮ ।
ಪೂಜಯಿಷ್ಯತಿ ಬ್ರಹ್ಮಘ್ನೋ ಗೋಘ್ನೋ ವಾ ಬಾಲಘಾತಕಃ ॥ ೯೫ ॥

ಗುರುದ್ರೋಹೀ ಸ್ವರ್ಣಚೋರೋ ಮುಚ್ಯತೇ ಸರ್ವಪಾತಕೈಃ ।
ನಿರ್ದೋಷಃ ಪೂಜಯೇದ್ಯಸ್ತು ಸಕೃತ್ಸೋಮೇಶ್ವರಂ ಹರಂ ॥ ೯೬ ॥

ಮೃತೋ ವಿಮಾನಮಾರುಹ್ಯ ದಿವ್ಯಸ್ತ್ರೀಪರಿವೇಷ್ಟಿತಃ ।
ಸಂಸ್ತೂಯಮಾನೋ ದಿಕ್ಪಾಲೈರ್ಯಾತು ಸ್ವರ್ಗೇ ಶಿವಾಲಯೇ ॥ ೯೭ ॥

ಬ್ರಹ್ಮಲೋಕಮತಿಕ್ರಮ್ಯ ರುದ್ರಲೋಕೇ ಸ ಗಚ್ಛತು ॥
ತಥೇತ್ಯುಕ್ತ್ವಾ ಸೋಮನಾಥಸ್ತತ್ರೈವಾಂತರಧೀಯತ ॥ ೯೮ ॥

ಪ್ರಕಾಶ್ಯ ವಾಮನೋ ಲಿಂಗಂ ಸೋಮನಾಥಂ ಸ್ವಯಂಭುವಂ ।
ಪ್ರಾಪ್ತಜ್ಞಾನೋ ಲಬ್ಧವೃದ್ಧಿರ್ಯಯೌ ದ್ರಷ್ಟುಂ ಭವಂ ಹರಂ ॥ ೯೯ ॥

---

೯೪. ವಾಮನನು ಹೇಳುತ್ತಾನೆ :— ಮಹಾದೇವ! ನೀನು ಸಂತುಷ್ಟನಾಗಿದ್ದರೆ, ನನಗೆ ವರವನ್ನೀಯುವುದಾದರೆ ಈ ಲಿಂಗದಲ್ಲಿ ಸನ್ನಿಹಿತನಾಗಿರು. ಇದು ನನ್ನ ದಿವ್ಯ ಪಟ್ಟಣವಾಗಲಿ.

೯೫—೯೮. ಈ ವಾಮನಪುರದಲ್ಲಿರುವ ಸ್ವಯಂವ್ಯಕ್ತವಾದ ಲಿಂಗವನ್ನು ಬ್ರಹ್ಮಹತ್ಯೆ, ಗೋಹತ್ಯೆ, ಶಿಶುಹತ್ಯೆಮಾಡಿದವನಾಗಲಿ, ಗುರುದ್ರೋಹಿಯಾಗಲಿ, ಸ್ವರ್ಣಚೋರನಾಗಲಿ ಪೂಜಿಸಿದರೆ ಸಕಲ ಪಾಪಮುಕ್ತನಾಗಲಿ, ನಿರ್ದೋಷಿಯಾದವನು ಒಂದುಸಾರಿ ಪೂಜಿಸಿದರೆ ಮೃತನಾದ ಮೇಲೆ ವಿಮಾನವನ್ನೇರಿ ದಿಕ್ಪಾಲಕರಿಂದ ಸ್ತುತಿಸಲ್ಪಡುತ್ತ ದೇವವಾಸ್ತ್ರೀಯರೊಡನೆ ಬ್ರಹ್ಮಲೋಕವನ್ನತಿಕ್ರಮಿಸಿ ರುದ್ರಲೋಕಕ್ಕೆ ತೆರಳಲಿ. ಸೋಮನಾಥನು ಹಾಗೆಯೇ ಆಗಲೆಂದು ಹೇಳಿ ಅಲ್ಲಿಯೆ ಅಡಗಿಹೋದನು.

೯೯. ವಾಮನನು ಹೀಗೆ ಸ್ವಯಂವ್ಯಕ್ತನಾದ ಸೋಮೇಶ್ವರನನ್ನು ಪ್ರಕಾಶಗೊಳಿಸಿ ಜ್ಞಾನವನ್ನು ಪಡೆದು ಭವನನ್ನು ನೋಡಲು ಹೊರಟು ಹೋದನು.

ಗಂಗಾದ್ಯಾಸ್ಸರಿತಸ್ಸರ್ವಾಃ ಸ್ವರ್ಣರೇಖಾಜಲೇ ಸ್ಥಿತಾಃ ।
ಏತಾಂ ಸೋಮೇಶ್ವರೋತ್ಪತ್ತಿಂ ಯೇ ಶೃಣ್ವಂತಿ ನರಾಃ ಸ್ತ್ರಿಯಃ ।
ಸರ್ವಪಾಪಕ್ಷಯಸ್ತೇಷಾಂ ಜಾಯತೇ ನಾತ್ರ ಸಂಶಯಃ ॥ ೧೦೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಸೋಮೇಶ್ವರೋತ್ಪತ್ತಿವರ್ಣನಂ ನಾಮ
ಚತುರ್ದಶೋಽಧ್ಯಾಯಃ

---

೧೦೦. ಗಂಗಾದಿ ಸಕಲ ನದಿಗಳೂ ಸ್ವರ್ಣರೇಖಾಜಲದಲ್ಲಿರುವುವು. ಈ ಸೋಮೇಶ್ವರೋತ್ಪತ್ತಿಯನ್ನು ಕೇಳಿದ ಸ್ತ್ರೀ ಪುರುಷರು ಸಕಲ ಪಾಪಮುಕ್ತರಾಗುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಸೋಮೇಶ್ವರೋತ್ಪತ್ತಿವರ್ಣನವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚದಶೋಽಧ್ಯಾಯಃ

### ಶ್ರೀ ದಾಮೋದರಮಾಹಾತ್ಮ್ಯವರ್ಣನಂ

ಸಾರಸ್ವತ ಉವಾಚ :—

ಅಥಾಽಸೌ ವಾಮನೋ ವಿಪ್ರೋ ಲಬ್ಧಜ್ಞಾನೋ ಭವಾರ್ಚನೇ ।
ಜಗಾಮ ತದ್ವನಂ ರಮ್ಯಂ ಗಿರೇ ರೈವತಸ್ಯ ಯತ್ ॥ ೧ ॥
ಯತ್ರ ವೃಕ್ಷಾ ಬಹುವಿಧಾ ದೀರ್ಘಶಾಖಾಃ ಫಲಾನ್ವಿತಾಃ ।
ವಟೋದುಂಬರಬಿಲ್ವಾಶ್ಚ ಸರ್ಜಾರ್ಜುನಕದಂಬಕಾಃ ॥ ೨ ॥
ಪಲಾಶಾಶ್ವತ್ಥನಿಂಬಾಶ್ಚ ಧವಾಟೀವಾರುಣೀದ್ರುಮಾಃ ।
ಶಮೀಕಂಕೋಲಲಿಂಬಾಶ್ಚ ಬೀಜಪೂರೀ ಚ ದಾಡಿಮಃ ॥ ೩ ॥
ಬದರೀ ನಿಂಬಕಃ ಪೂಗಃ ಕದಲೀ ಶಲ್ಲಕೀ ಶಿವಾ ।
ತಾಬಹಿಂತಾಲಶಿರಸಾ ಬೀಜಕಾವಂಶಖಾದಿರಾಃ ॥ ೪ ॥
ಗಜನಾಸನಗಾಗುಚ್ಛಾ ಇಂಗುದೀಕೋರವೇಂಗುದಾಃ ।
ಬ್ರಹ್ಮವೃಕ್ಷಾಃ ಕುರುಬಕಾಃ ಕರಂಜಾಃ ಪುತ್ರಜೀವಿನಃ ॥ ೫ ॥

---

### ಕನ್ನಡದ ಅನುವಾದ

### ಶ್ರೀ ದಾಮೋದರಮಾಹಾತ್ಮ್ಯವರ್ಣನ

೧. ಸಾರಸ್ವತನು ಹೇಳುತ್ತಾನೆ:—ಬಳಿಕ ವಾಮನನು ಭವಾರ್ಚನೆಯಿಂದ ಜ್ಞಾನವನ್ನು ಪಡೆದು ರೈವತಕ ಗಿರಿಯಲ್ಲಿರುವ ಕಾಡಿಗೆ ಹೋದನು.

೨-೧೦. ಅಲ್ಲಿ ಅವನು ಉದ್ದವಾದ ಕೊಂಬೆಗಳುಳ್ಳವೂ, ಫಲಗಳಿಂದ ತುಂಬಿರುವುವೂ ಆಗಿರುವ ಆಲ, ಅತ್ತಿ, ಬಿಲ್ವ, ಸರ್ಜ, ಅರ್ಜುನ, ಈಚಲ, ಮುತ್ತುಗ, ಅಶ್ವತ್ಥ, ಬೇವು, ಧವ, ವಾರುಣಿ, ಶಮಿ, ಕಂಕೋಲ, ಲಿಂಬೆ, ಪೇರಳೆ, ದಾಳಿಂಬ, ಎಲಚಿ, ಅಡಿಕೆ, ಬಾಳೆ, ಶಲ್ಲಕೀ, ತಾಳೆ, ಹಿಂತಾಳ, ಬೀಜನ, ಬಿದಿರು, ಖದಿರೆ, ಅಜಗ, ಸನಗ, ಇಂಗುದೀ, ಕೋರವ, ಬ್ರಹ್ಮವೃಕ್ಷ, ಕುರುಬಕ, ಕರಂಜ, ಅಂಕೋ, ಪಾರಿಭದ್ರ, ಕಲಂಬ, ಹಲಸು, ಉಜ್ವಲಾ, ಹರಿದ್ರಾ, ಗಂಗಡೀವ, ಯವ, ತೇಸುಂಡಕ,

ಅಂಕೋಲಾಃ ಪಾರಿಭದ್ರಾಶ್ಚ ಕಲಂಬಾಃ ಪನಸಾಸ್ತಥಾ ।
ಉಜ್ವಲಾಶ್ಚ ಹರಿದ್ರಾಶ್ಚ ಗಂಗಡೀಪಾ ಯಮಾ ದ್ರುಮಾಃ ॥ ೬ ॥
ತೇಸುಂಡಕಾಃ ಶಿರೀಷಾಶ್ಚ ಖರ್ಜೂರೀಕರವಿಂದಿಕಾಃ ।
ಸೇವಾಲೀ ಶಾಲ್ಮಲೀ ಶಾಲಾ ಮಧೂಕಾಶ್ಚ ವಿಭೀತಕಾಃ ॥ ೭ ॥
ಹರೀತಕ್ಯಃ ಕಟಾಹಾಶ್ಚ ಕರ್ಯಾಷ್ಟಾ ಆಟರೂಷಕಾಃ ।
ವಿಕಚ್ಛಪಃ ಕಪಿತ್ಥಾಶ್ಚ ರೋಹಿಣೀವೇತ್ರಕದ್ರುಮಾಃ ॥ ೮ ॥
ಮದನಫಲಾನಿರ್ಗುಂಡೀಪಾಟಲಾನಂದಿಪಾದಪಾಃ ।
ಲವಂಗೈಲಾ ಲವಲ್ಯಶ್ಚ ಸಂತಾನಾ ಅಗುರುದ್ರುಮಾಃ ॥ ೯ ॥
ಶ್ರೀಖಂಡಕರ್ಪೂರನಗಾಃ ಕಲ್ಪವೃಕ್ಷಾ ನಗೋತ್ತಮಾಃ ।
ವಾಮೇನ ತದಾ ದೃಷ್ಟಾಶ್ಛಾಯಾವೃಕ್ಷಾಃ ಸುರಾರ್ಚಿತಾಃ ॥ ೧೦ ॥
ಉದಯಾಸ್ತಮನೇ ಯೇಷಾಂ ಛಾಯಾ ನ ಪ್ರತಿಹನ್ಯತೇ ।
ತೇಷಾಂ ದರ್ಶನಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೧೧ ॥
ಯೇ ಜನಾಃ ಪುಣ್ಯಕರ್ಮಾಣಸ್ತೇಷಾಂ ತೇ ದೃಷ್ಟಿಗೋಚರಾಃ ।
ಏತಾನ್ಪಶ್ಯನ್ಯಯೌ ವೃಕ್ಷಾಂಸ್ತತೋ ರೈವತಕಂ ಗಿರಿಂ ॥ ೧೨ ॥
ಯಾವನ್ನಿರೀಕ್ಷತೇ ತುಂಗಂ ಶಿಖರಂ ತಸ್ಯ ಮೂರ್ಧನಿ ।
ಆಶ್ಚರ್ಯಂ ದದೃಶೇ ವಿಪ್ರೋ ಮಹಲ್ಲೋಕಭಯಂಕರಂ ॥ ೧೩ ॥

---

ಬಾಗೆ, ಖರ್ಜೂರ, ಕರವಿಂದಕ, ಲಕ್ಕಿ, ಬೂರುಗ, ಸಾಲ, ಮಧೂಕ, ತಾರೆ, ಅಳಲೆ, ಕಟಾಹ, ಕರ್ಯಷ್ಟ, ಆಟರೂಷಕ, ವಿಕಚ್ಛ, ಬೇಲ, ರೋಹಿಣಿ, ಬೆತ್ತ, ಮದನ ಫಲ, ನಿರ್ಗುಂಡೀ, ಪಾಟಲ, ನಂದಿ, ಲವಂಗ, ಏಲಕ್ಕಿ, ಲವಲಿ, ಸಂತಾನ, ಅಗುರು ಶ್ರೀಖಂಡ, ಕರ್ಪೂರ, ಕಲ್ಪವೃಕ್ಷ. ಮೊದಲಾದ ಮರಗಳನ್ನು ಕಂಡನು.

೧೧. ಆ ಮರಗಳ ನೆರಳು ಉದಯಾಸ್ತಮಯ ಕಾಲಗಳಲ್ಲಿ ಒಂದೇ ರೀತಿಯಾಗಿದ್ದಿತು. ಅವುಗಳನ್ನು ನೋಡುವುದರಿಂದ ಸಕಲ ಪಾಪಗಳೂ ಪರಿಹಾರ ವಾಗುವುವು.

೧೨. ಅವು ಪುಣ್ಯವಂತರಿಗೆ ಮಾತ್ರ ಕಾಣಿಸುತ್ತಿದ್ದುವು. ನಾಮನನು ಆ ಮರ ಗಳನ್ನು ನೋಡುತ್ತ ರೈವತಕ ಪರ್ವತಕ್ಕೆ ಹೋದನು.

೧೩. ಅವನು ಅದರ ಶಿಖರದಲ್ಲಿ ಪ್ರಪಂಚಕ್ಕೆ ಭಯವನ್ನುಂಟುಮಾಡುವ ಆಶ್ಚರ್ಯ ವಿಷಯವನ್ನು ಕಂಡನು.

ಧೂಮೋಜ್ವಲನಮಧ್ಯಸ್ಥಾನ್ಪುರುಷಾನ್ಪಂಚ ಪಶ್ಯತಿ ।
ಕೃಷ್ಣಾಂಗಾನ್ಖೇಚರಾನ್ರೌದ್ರಾನ್ಕೃಷ್ಣಾಗುರುವಿಭೂಷಿತಾನ್ ॥ ೧೪ ॥
ಸಾರಮೇಯಸಮಾರೂಢಾನ್ಕರಿಹಸ್ತಾನ್ಸಮೇಖಲಾನ್ ।
ಖಡ್ಗಖೇಟಕಹಸ್ತಾಂಶ್ಚ ಡಮರೂಡ್ಡಾಮರಸ್ವನಾನ್ ॥ ೧೫ ॥
ಸಘುರ್ಘುರೀಕಚರಣಾನ್ಯಾಸನಾದಿತಪರ್ವತಾನ್ ।
ಫೇತ್ಕಾರಭಾಸುರಾಕಾರಾನ್ಕಾಶಕುಂಚಿತಮೂರ್ಧಜಾನ್ ॥ ೧೬ ॥
ನರಮಾಂಸವಸಾಸಾರಕವಲವ್ಯಗ್ರತಾಲುಕಾನ್ ।
ಜನಗಂಧಸಮಾಜ್ಞಾನಸಭವತೀವ್ರವಿಲೋಚನಾನ್ ॥ ೧೭ ॥
ಪಂಚಾಗ್ನಿಸಾಧನಾವ್ಯಾಪ್ತದಿವ್ಯಚಕ್ಷುಃಪ್ರಭಾವತಃ ।
ದೇವಾನ್ಪಶ್ಯತಿ ವಿಪ್ರೇಂದ್ರೋ ಜ್ಞಾತಕಾರ್ಯಪರಂಪರಃ ॥ ೧೮ ॥
ಏತೇ ಕ್ಷೇತ್ರಾಧಿಪಾಃ ಪಂಚ ಮಹಾದೇವೇನ ನಿರ್ಮಿತಾಃ ।
ಮಹಾಬಲಾ ರೈವತಕೇ ನಿವಸಂತಿ ಗಿರೌ ಸದಾ ॥ ೧೯ ॥
ಸ್ವೇಚ್ಛಾಚಾರಾನ್ನರಾನ್ಮರ್ತ್ಯಾನ್ವಾರಯಂತಿ ನಗೇ ತಥಾ ।
ಹರಿಂ ಹರಂ ನದೀಂ ದೇವೀಂ ನ ಪಶ್ಯಂತಿ ಗಿರಿಂ ಯಥಾ ॥ ೨೦ ॥

---

೧೪–೧೮. ಅಲ್ಲಿ ಅವನು ಹೊಗೆ, ಬೆಂಕಿಗಳ ನಡುವೆ ಇರುವವರೂ, ಕೃಷ್ಣ ವರ್ಣದ ಅಂಗಗಳುಳ್ಳವರೂ, ಆಕಾಶದಲ್ಲಿ ಸಂಚರಿಸುವವರೂ, ಭಯಂಕರರೂ, ಕೃಷ್ಣಾಗುರುಲಿಪ್ತರೂ, ನಾಯಿಗಳನ್ನೇರಿದವರೂ, ಆನೆಯ ಸೊಂಡಿಲನ್ನು ಹಿಡಿದವರೂ, ಡಾಬನ್ನು ಧರಿಸಿದವರೂ, ಕತ್ತಿ, ಗುರಾಣಿಗಳನ್ನು ಹಿಡಿದವರೂ, ಡಮರುವಿನಂತೆ ಶಬ್ದಮಾಡುವವರೂ, ಘರ್ಘರ ಶಬ್ದವುಳ್ಳ ಪಾದಗಳನ್ನಿಡುವುದರಿಂದ ಪರ್ವತಗಳನ್ನು ಶಬ್ದಗೊಳಿಸುವವರೂ, ಫೇತ್ಕಾರದಿಂದ ಪ್ರಕಾಶಮಾನವಾದ ಆಕಾರವುಳ್ಳವರೂ, ಕಾಶಪುಷ್ಪದಂತೆ ಸುಕ್ಕಾದ ತಲೆಗೂದಲುಳ್ಳವರೂ, ಮನುಷ್ಯರ ಮಾಂಸ, ಮಜ್ಜಗಳ ಸಾರವನ್ನು ಹೀರುವುದರಲ್ಲಿ ಆಸಕ್ತವಾದ ದವಡೆಯುಳ್ಳವರೂ, ಜನರ ವಾಸನೆಯನ್ನು ತಿಳಿಯುವುದರಿಂದ ಕಠಿನವಾದ ಕಣ್ಣುಳ್ಳವರೂ ಆದ ಐದುಮಂದಿ ಪುರುಷರನ್ನು ಪಂಚಾಗ್ನಿ ಸಾಧನದಿಂದ ಪಡೆದ ದಿವ್ಯದೃಷ್ಟಿಯ ಪ್ರಭಾವದಿಂದ ನೋಡಿದನು.

೧೯. ಮಹಾದೇವನು ನಿರ್ಮಿಸಿರುವ ಅತ್ಯಂತ ಬಲಶಾಲಿಗಳಾದ ಈ ಐದು ಮಂದಿಗಳು ರೈವತಕ ಪರ್ವತದಲ್ಲಿ ಯಾವಾಗಲೂ ವಾಸಮಾಡುತ್ತಾರೆ.

೨೦. ಇವರು ಅಲ್ಲಿ ಸ್ವೇಚ್ಛಾಚಾರಿಗಳಾದ ಮಾನವರು ವಿಷ್ಣು, ಭವ, ಸ್ವರ್ಣರೇಖಾನದೀ, ದೇವಿ, ರೈವತಕ ಪರ್ವತಗಳನ್ನು ನೋಡದಂತೆ ತಡೆಯುವರು.

ದೃಷ್ಟ್ವಾ ಜ್ಞಾತ್ವಾ ಸ್ತುತಿಂ ಚಕ್ರೇ ಧ್ಯಾತ್ವಾ ದೇವಂ ಮಹೇಶ್ವರಂ ।
ಜಯಂತಿ ದುಷ್ಟದೈತ್ಯೇಂದ್ರಯುದ್ಧಧ್ಯಾನಾಂಕಿತಂ ವಪುಃ ।
ಬಿಭ್ರತಿ ಭ್ರಾತರೋ ಯೇ ತೇ ಪಂಚೇಂದ್ರಸಮವಿಕ್ರಮಾಃ ॥ ೨೧ ॥
ರುದ್ರವಕ್ತ್ರೋದ್ಭವಾ ದಕ್ಷಾ ದಕ್ಷಾಧ್ವರವಿನಾಶಕಾಃ ।
ಸ್ವಾವಲೀಢಾಹುತೀನಷ್ಟಭೀತನಾಡವನಂದಿತಾಃ ॥ ೨೨ ॥
ಕುಂಕುಮಾಗುರುಕರ್ಪೂರಲಿಪ್ತಾಂಗಾಃ ಸುವಿಭೂಷಿತಾಃ ।
ಮದಿರಾಮೋದಮತ್ತಾಂಗನೃತ್ಯಗೀತಕರಾಃ ಸುರಾಃ ॥ ೨೩ ॥
ಬ್ರಹ್ಮಾಂಡಭ್ರಮಣಶ್ರಾಂತಸ್ವಗಂಧತ್ರಸ್ತಸಂಚರಾಃ ।
ಮನೋಜವಾಃ ಕಾಮಗಮಾಃ ಕ್ಷೇತ್ರಪಾಲಾ ಜಯಂತಿ ತೇ ॥ ೨೪ ॥
ಇತ್ಯಾದಿವಚನಾತ್ತುಷ್ಟಾ ದ್ವಿಜಸ್ಯಾಗ್ರೇ ಸ್ವಯಂ ಸ್ಥಿತಾಃ ।
ಏಕಪಾದೋಽಸ್ಮ್ಯಹಂ ಚೈಕೋ ದ್ವಿತೀಯೋ ಗಿರಿದಾರುಣಃ ॥ ೨೫ ॥
ತೃತೀಯೋ ಮೇಘನಾದಸ್ತು ಸಿಂಹನಾದಶ್ಚತುರ್ಥಕಃ ।
ಪಂಚಮಃ ಕಾಲಮೇಘೋಽಹಂ ಕುರ್ಮಃ ಕಿಂ ತೇ ವದಸ್ವ ತತ್ ॥ ೨೬ ॥

---

೨೧. ಅವನು ಆ ಕ್ಷೇತ್ರಪಾಲರನ್ನು ಕಂಡು, ಮಹೇಶ್ವರನನ್ನು ಧ್ಯಾನಿಸಿ ಹೀಗೆ ಸ್ತುತಿಸಿದನು. ಮಹೇಶ್ವರ! ನಿನ್ನ ಸಹೋದರರೂ, ಇಂದ್ರನಿಗೆ ಸರಿಯಾದ ಪರಾಕ್ರಮವುಳ್ಳವರೂ, ದುಷ್ಟ ದೈತ್ಯರೊಡನೆ ಯುದ್ಧಮಾಡುವುದರಿಂದ ಚಿಹ್ನೆಗೊಂಡ ಶರೀರವನ್ನು ಧರಿಸಿದವರೂ ಆದ ಕ್ಷೇತ್ರಪಾಲಕರು ಜಯಶೀಲರಾಗಿದ್ದಾರೆ.

೨೨–೨೪. ರುದ್ರನ ವದನದಿಂದ ಉದ್ಧರಿಸಿದವರೂ, ಕುಶಲರೂ, ದಕ್ಷಯಾಗವನ್ನು ನಾಶಗೊಳಿಸಿದವರೂ, ಹೋಮದ ಆಹುತಿಗಳನ್ನು ಭಕ್ಷಿಸಿದ್ದರಿಂದ ಭಯಗೊಂಡ ಬ್ರಾಹ್ಮಣರಿಂದ ಸಂತೋಷಗೊಂಡವರೂ, ಕುಂಕುಮ. ಅಗರು, ಕರ್ಪೂರಗಳಿಂದ ಲಿಪ್ತವಾದ ಅವಯವಗಳುಳ್ಳವರೂ, ಮದ್ಯದ ವಾಸನೆಯಿಂದ ಮತ್ತರಾಗಿ ಕುಣಿಯುವವರೂ, ಹಾಡುವವರೂ, ಬ್ರಹ್ಮಾಂಡದಲ್ಲಿ ಸಂಚರಿಸುವುದರಿಂದ ಬಳಲಿ ತಮ್ಮ ಗಂಧದಿಂದ ಭಯಗೊಂಡ ಪ್ರಾಣಿಗಳ ಸಂಚಾರವುಳ್ಳವರೂ, ವೇಗವುಳ್ಳವರೂ, ಸ್ವೇಚ್ಛಾಚಾರಿಗಳೂ ಆದ ಕ್ಷೇತ್ರಪಾಲಕರು ಜಯಶೀಲರಾಗಿದ್ದಾರೆ.

೨೫–೨೬. ಈ ಸ್ತೋತ್ರದಿಂದ ಸಂತುಷ್ಟರಾದ ಆ ಕ್ಷೇತ್ರಪಾಲಕರು ಆ ವಾಮನನ ಮುಂದೆ ನಿಂತು ಏಕಪಾದ, ಗಿರಿದಾರುಣ, ಮೇಘನಾದ, ಸಿಂಹನಾದ, ಕಾಲಮೇಘ ಎಂಬ ತಮ್ಮ ಐದು ಜನರ ಹೆಸರನ್ನು ಹೇಳಿ ನಿನಗೆ ನಮ್ಮಿಂದೇನಾಗಬೇಕು? ಹೇಳು, ಎಂದರು.

ದ್ವಿಜ ಉವಾಚ :—

ಯದಿ ತುಷ್ಟಾ ಭವಂತೋ ಮೇ ಯದಿ ದೇಯೋ ವರೋ ಧ್ರುವಂ ।
ಅಹೋ ಆಪ್ರಲಯಂ ಯಾವತ್ಸ್ಥಾತವ್ಯಂ ಮತ್ಪ್ರತಿಷ್ಠಿತೈಃ ॥ ೨೭ ॥

ಏಕಪಾದೋ ಗಿರಿತಟೇ ಪ್ರಹರ್ಷಾತ್ಪ್ರಥಮಂ ಸ್ಥಿತಃ ।
ವಸತೌ ವಸತಾ ತೇನ ಗಿರೌ ಚ ಗಿರಿದಾರುಣಃ ॥ ೨೮ ॥

ಪ್ರತಿಷ್ಠಿತಃ ಪ್ರಸಾದ್ಯಾಥ ವರದೋಽಸೌ ಸ್ವಯಂ ಸ್ಥಿತಃ ।
ಉಜ್ಜಯಂತಗಿರೇರ್ಮೂರ್ಧ್ನಿ ಮೇಘನಾದಃ ಸ್ವಯಂ ಯಯೌ ॥ ೨೯ ॥

ಭವಾನೀಶಂಕರಂ ರಮ್ಯಂ ಸಿಂಹನಾದಸ್ತಥಾವಿಶತ್ ।
ಸ್ವಯಂ ವಸ್ತ್ರಾಪಥೇನೈವ ಭವಸ್ಯಾಗ್ರೇ ನಿರೂಪಿತಃ ॥ ೩೦ ॥

ಸ್ವರ್ಣರೇಖಾನದೀತೀರೇ ಕಾಲಮೇಘೋ ಮಹಾಬಲಃ ।
ಸರ್ವಲೋಕೋಪಕಾರಾರ್ಥಂ ತೀರ್ಥಂ ಸಂಸ್ಥಾಪಿತಂ ಪುರಾ ॥ ೩೧ ॥

ವಾಮನೇನ ಸ್ವಯಂ ಗತ್ವಾ ಕ್ಷೇತ್ರಪಾಲಾಸ್ತು ಪೂಜಿತಾಃ ।
ಪುರಾ ಯುಗಾದೌ ರಾಜೇಂದ್ರ ಸರ್ವೇ ದೇವಾಃ ಸಮಾಗತಾಃ ॥ ೩೨ ॥

ಸುರಾಷ್ಟ್ರದೇಶೇ ಸಂಪ್ರಾಪ್ತಾಃ ಪುಣ್ಯೇ ರೈವತಕೇ ಗಿರೌ ।
ರಕ್ಷಾರ್ಥಂ ಸರ್ವಲೋಕಾನಾಂ ವಧಾರ್ಥಂ ದೇವವೈರಿಣಾಂ ॥ ೩೩ ॥

---

೨೭. ಬ್ರಾಹ್ಮಣನು ಹೇಳುತ್ತಾನೆ :—ನೀವು ನನ್ನಲ್ಲಿ ಸಂತುಷ್ಟರಾಗಿದ್ದರೆ, ವರವನ್ನು ಕೊಡುವವರಾದರೆ ನಾನು ಪ್ರತಿಷ್ಠಿಸಿದಂತೆ ಪ್ರಲಯಕಾಲದವರೆಗೆ ಇಲ್ಲಿ ನೆಲೆಸಿರಿ.

೨೮—೩೩. ಆದರಂತೆ ಕ್ಷೇತ್ರಪಾಲಕರಲ್ಲಿ ಏಕಪಾದನು ರೈವತಕಗಿರಿಯ ತಪ್ಪಲಿನಲ್ಲಿ ವಾಸಿಸಿದನು; ವಾಮನನು ಗಿರಿದಾರುಣನನ್ನು ಪರ್ವತದಲ್ಲಿ ಪ್ರಸನ್ನನಾಗಿಸಿ ಪ್ರತಿಷ್ಠೆ ಮಾಡಿದನು. ಮೇಘನಾದನು ತಾನೇ ಉಜ್ಜಯಂತ ಗಿರಿಯ ಮೇಲ್ಭಾಗಕ್ಕೆ ಹೋದನು. ಸಿಂಹನಾದನು ಮನೋಹರವಾದ ಭವಾನೀಶಂಕರ ಸ್ಥಾನವನ್ನು ಪ್ರವೇಶಿಸಿದನು. ಮಹಾ ಬಲಶಾಲಿಯಾದ ಕಾಲಮೇಘನು ವಸ್ತ್ರಾಪಥ ಕ್ಷೇತ್ರದಲ್ಲಿ ಸ್ವರ್ಣರೇಖಾ ನದಿಯ ದಡದಲ್ಲಿರುವ ಭವನ ಮುಂದೆ ಇದ್ದನು. ಹೀಗೆ ವಾಮನನು ಹಿಂದೆ ಸಕಲ ಲೋಕೋಪಕಾರಕ್ಕಾಗಿ ತೀರ್ಥವನ್ನು ಸ್ಥಾಪಿಸಿ ಕ್ಷೇತ್ರಪಾಲಕರನ್ನು ಪೂಜಿಸಿದನು. ನರೇಂದ್ರ ! ಹಿಂದಿನ ಯುಗದಲ್ಲಿ ಸಕಲ ದೇವತೆಗಳು ಸಮಸ್ತ ಲೋಕಗಳ ರಕ್ಷಣೆಗಾಗಿಯೂ, ದಾನವರ ವಧೆಗಾಗಿಯೂ ಸುರಾಷ್ಟ್ರ ದೇಶದಲ್ಲಿರುವ ರೈವತಕ ಪರ್ವತಕ್ಕೆ ಬಂದರು.

ವಿಷ್ಣೋಃ ಕಂಠೇ ತದಾ ಮುಕ್ತಾ ಜಯಮಾಲಾ ಸುರೋತ್ತಮೈಃ ।
ದಾಮೋದರೇತಿ ವಿಖ್ಯಾತಂ ದತ್ತಂ ನಾಮೋತ್ತಮಂ ಹರೇ ॥ ೩೪ ॥
ತತ್ರಾದೌ ಕಾರ್ತಿಕೇ ಶುಕ್ಲೇ ವಾಸರೇ ವಿಷ್ಣುವಲ್ಲಭೇ ।
ಉಪೋಷ್ಯ ಸಹಿತೈರ್ದೇವೈಸ್ತತ್ತೀರ್ಥಂ ವಿಷ್ಣುನಾ ಕೃತಂ ॥ ೩೫ ॥
ಸರ್ವತೀರ್ಥಮಯೀ ಪುಣ್ಯಾ ಸ್ವರ್ಣರೇಖಾ ನದೀ ಸ್ಥಿತಾ ।
ಭುಕ್ತಿಮುಕ್ತಿಪ್ರದಂ ಪುಣ್ಯಂ ವಿಷ್ಣುಲೋಕಪ್ರದಾಯಕಂ ॥ ೩೬ ॥
ಕ್ಷಾಲನಂ ಸರ್ವಪಾಪಾನಾಂ ರೋಗದಾರಿದ್ರ್ಯನಾಶನಂ ।
ದಾಮೋದರಂ ರೈವತಕೇ ಪರಮಾನಂದದಾಯಕಂ ॥ ೩೭ ॥
ಯೇ ಪಶ್ಯಂತಿ ವಿಮಾನೈಸ್ತೇ ನೀಯಂತೇ ವಿಷ್ಣುಮಂದಿರೇ ।
ನ ಗೃಹೇ ಕಾರ್ತಿಕಃ ಕಾರ್ಯೋ ವಿಶೇಷಾದ್ಭೀಷ್ಮಪಂಚಕಂ ॥ ೩೮ ॥
ಪಂಚಕಾದ್ದ್ವಾದಶೀ ಶ್ರೇಷ್ಠಾ ಕಾರ್ಯಾ ದಾಮೋದರೇ ಜಲೇ ।
ಪ್ರಾತಃಸ್ನಾನಂ ಪ್ರಕರ್ತವ್ಯಂ ಸಂಪ್ರಾಪ್ತೇ ಕಾರ್ತಿಕೇ ಜನೈಃ ॥ ೩೯ ॥
ಮಾಸೋಪವಾಸಃ ಕರ್ತವ್ಯೋ ಯತಿಭಿರ್ಬ್ರಹ್ಮಚಾರಿಭಿಃ ।
ಸತೀಭಿರ್ವಿಧವಾಭಿಶ್ಚ ಮುಕ್ತಿಸ್ಥಾನಮಭೀಪ್ಸುಭಿಃ ॥ ೪೦ ॥

---

೩೪. ಅವರು ಅಲ್ಲಿ ವಿಷ್ಣುವಿನ ಕಂಠದಲ್ಲಿ ಜಯಮಾಲೆಯನ್ನು ಹಾಕಿ ಅವನಿಗೆ ದಾಮೋದರನೆಂಬ ಪ್ರಖ್ಯಾತ ನಾಮಧೇಯವನ್ನಿಟ್ಟರು.

೩೫. ಅಲ್ಲಿ ವಿಷ್ಣುವು ಮೊದಲು ದೇವತೆಗಳೊಡನೆ ಕಾರ್ತಿಕ ಶುದ್ಧದಲ್ಲಿ ತನಗೆ ಪ್ರಿಯವಾದ ವಾರದಲ್ಲಿ ಉಪವಾಸ ಮಾಡಿ ಆ ತೀರ್ಥವನ್ನು ನಿರ್ಮಿಸಿದನು.

೩೬—೩೯. ಅಲ್ಲಿ ಸಕಲ ತೀರ್ಥ ಸ್ವರೂಪವಾದ ಸ್ವರ್ಣರೇಖಾ ಎಂಬ ಪುಣ್ಯ ನದಿಯಿರುವುದು. ಭಕ್ತಿ ಮುಕ್ತಿಗಳನ್ನೀಯುವವನೂ, ವಿಷ್ಣುಲೋಕಪ್ರದಾಯಕನೂ, ಸಮಸ್ತ ಪಾಪ ನಿವಾರಕನೂ, ರೋಗ ದಾರಿದ್ರ್ಯಗಳನ್ನು ನಿವಾರಿಸುವವನೂ, ಆತ್ಮಾನಂದವನ್ನುಂಟುಮಾಡುವವನೂ ಆದ ಆ ದಾಮೋದರನನ್ನು ದರ್ಶನ ಮಾಡಿದವರು ವಿಮಾನವನ್ನೇರಿ ವಿಷ್ಣುಮಂದಿರವನ್ನು ಸೇರುವರು. ಮನೆಯಲ್ಲಿ ಕಾರ್ತಿಕ ವ್ರತವನ್ನಾಚರಿಸಬಾರದು. ಅಲ್ಲಿ ಭೀಷ್ಮಪಂಚಕವನ್ನೂ ಅದಕ್ಕಿಂತ ಉತ್ತಮವಾದ ದ್ವಾದಶೀ ವ್ರತವನ್ನೂ ಮಾಡಬೇಕು. ಮನುಷ್ಯರು ಕಾರ್ತಿಕಮಾಸದಲ್ಲಿ ದಾಮೋದರ ತೀರ್ಥದ ಜಲದಲ್ಲಿ ಪ್ರಾತಃಸ್ನಾನವನ್ನು ಮಾಡಬೇಕು.

೪೦. ಮುಕ್ತಿಯನ್ನಪೇಕ್ಷಿಸುವ ಯತಿಗಳು, ಬ್ರಹ್ಮಚಾರಿಗಳು, ಪತಿವ್ರತೆಯರು, ವಿಧವೆಯರೂ ಕಾರ್ತಿಕ ಮಾಸದಲ್ಲಿ ಉಪವಾಸಮಾಡಬೇಕು.

ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ।
ಉಪವಾಸೇನ ಕೃಚ್ಛ್ರೇಣ ಶಾಕಾಹಾರೇಣ ವಾ ಪುನಃ ॥ ೪೧ ॥
ಸಂಸೇವ್ಯಃ ಕಾರ್ತಿಕೇ ವಿಷ್ಣುಪಾದಾನಪರ್ಯೈರ್ನರೈಃ ।
ಬ್ರಹ್ಮಚರ್ಯಪರೈರ್ಮಾಸೋ ನೀಯತೇ ಯದಿ ಮಾನವೈಃ ॥ ೪೨ ॥
ತದಾ ವಿಷ್ಣುಪುರೇ ವಾಸಃ ಕ್ರಿಯತೇ ವಿಷ್ಣುನಾ ಸಹ ।
ಪಂಚೋಪವಾಸಾಃ ಕರ್ತವ್ಯಾಃ ಸಂಪ್ರಾಪ್ತೇ ಭೀಷ್ಮಪಂಚಕೇ ॥ ೪೩ ॥
ಏಕಾದಶೀಂ ಸಮಾರಭ್ಯ ಪಂಚಮೀ ಪೂರ್ಣಿಮಾದಿನಂ ।
ತದೇತತ್ಪಂಚಕಂ ಪ್ರೋಕ್ತಂ ಸರ್ವಪಾಪಹರಂ ನೃಣಾಂ ॥ ೪೪ ॥
ಸರ್ವೇಷಾಮಪಿ ಮಾಸಾನಾಂ ಪಂಚಕಾತ್ಕಾರ್ತಿಕಾದಪಿ ।
ಏಕಾದಶೀ ಕಾರ್ತಿಕಸ್ಯ ಪುಣ್ಯಾ ದಾಮೋದರೇ ಕೃತಾ ॥ ೪೫ ॥
ಮಿಷ್ಟಾನ್ನಂ ಕಾರ್ತಿಕೇ ದೇಯಂ ಹವಿಷ್ಯಂ ಸಘೃತಪ್ಲುತಂ ।
ಸುವರ್ಣಂ ರಜತಂ ವಸ್ತ್ರಂ ತೋಯಮನ್ನಂ ಫಲಾನಿ ಚ ॥ ೪೬ ॥
ಮಾಸಾಂತೇ ವಿವಿಧಂ ದೇಯಂ ಗೌಸ್ತಿಲಾಃ ಕುಸುಮಾನಿ ಚ ।
ಸರ್ವದಾನೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಂ ॥ ೪೭ ॥

---

೪೧–೪೪. ಕಾರ್ತಿಕಮಾಸದಲ್ಲಿ ಮಾನವರು ಏಕಭೋಜನದಿಂದಲೂ, ಯಾಚನೆ ಮಾಡದೆ ಒದಗಿದ ಪದಾರ್ಥಗಳಿಂದಲೂ, ಉಪವಾಸಗಳಿಂದಲೂ, ಕೃಚ್ಛ್ರಗಳಿಂದಲೂ, ಶಾಕಾಹಾರದಿಂದಲೂ ವಿಷ್ಣುವನ್ನು ಸೇವಿಸಬೇಕು. ಮಾನವರು ದೀಪಗಳನ್ನು ದಾನಮಾಡಿ ಬ್ರಹ್ಮಚರ್ಯದಿಂದ ಆ ಮಾಸವನ್ನು ಕಳೆದರೆ ವಿಷ್ಣುವಿನೊಡನೆ ವೈಕುಂಠದಲ್ಲಿ ವಾಸಿಸುವರು. ಭೀಷ್ಮಪಂಚಕವು ಬರಲು ಐದುದಿನ ಉಪವಾಸ ಮಾಡಬೇಕು. ಏಕಾದಶಿಯನ್ನಾರಂಭಿಸಿ ಹುಣ್ಣಿಮೆ ವರೆಗೆ ಐದುದಿನಗಳು ಮನುಷ್ಯರ ಪಾಪವನ್ನು ಪರಿಹರಿಸುವ ಭೀಷ್ಮಪಂಚಕವೆನ್ನಿಸಿಕೊಳ್ಳುವುವು. ಸಮಸ್ತ ಮಾಸಗಳು, ಕಾರ್ತಿಕಮಾಸದ ಭೀಷ್ಮಪಂಚಕ ಇವುಗಳಿಗಿಂತ ದಾಮೋದರನೆಡೆಯಲ್ಲಾಚರಿಸಿದ ಕಾರ್ತಿಕೈಕಾದಶಿಯು ಪುಣ್ಯಕರವಾದುದು.

೪೫. ಸಮಸ್ತ ಮಾಸಗಳು, ಕಾರ್ತಿಕಮಾಸದ ಭೀಷ್ಮಪಂಚಕ ಇವುಗಳಿಗಿಂತ. ದಾಮೋದರನೆಡೆಯಲ್ಲಾಚರಿಸಿದ ಕಾರ್ತಿಕೈಕಾದಶಿಯು ಪುಣ್ಯಕರವಾದುದು.

೪೬. ಕಾರ್ತಿಕ ಮಾಸದಲ್ಲಿ ಮೃಷ್ಟಾನ್ನ, ಘೃತಸಹಿತವಾದ ಹವಿಸ್ಸು, ಸುವರ್ಣ, ಬೆಳ್ಳಿ, ವಸ್ತ್ರ, ನೀರು, ಹಣ್ಣುಗಳನ್ನು ದಾನಮಾಡಬೇಕು.

೪೭–೪೮. ಆ ಮಾಸದ ಕೊನೆಯಲ್ಲಿ ನಾನಾವಿಧವಸ್ತುಗಳನ್ನೂ, ಗೋವು, ಎಳ್ಳು, ಹೂವುಗಳನ್ನೂ ದಾನಮಾಡಬೇಕು. ದೊರೆಯೆ! ಸಕಲದಾನಗಳಿಂದಲೂ,ಸಕಲ

ಅಶ್ವಮೇಧಾದಿಭಿರ್ಯಜ್ಞೈಃ ಗಯಾಯಾಂ ಪಿಂಡದಸ್ಯ ಯತ್ ।
ತತ್ಫಲಂ ಜಾಯತೇ ನೄಣಾಂ ದೃಷ್ಟೇ ದಾಮೋದರೇ ನೃಪ ॥ ೪೮ ॥
ಏಕಾದಶ್ಯಾಂ ಕೃತಸ್ನಾನೋ ದೇವಪೂಜಾಪರೋ ಭವೇತ್ ।
ಸ್ನಾಪ್ಯ ಪಂಚಾಮೃತೇನೈವ ತತಸ್ತೀರ್ಥೋದಕೇನ ಚ ॥ ೪೯ ॥
ಕುಂಕುಮಾಗುರುಶ್ರೀಖಂಡಕರ್ಪೂರೋದಕಮಿಶ್ರಿತೈಃ ।
ಪೂಜಯಿತ್ವಾ ತತಃ ಪುಷ್ಪೈಃ ಶತಪತ್ರೈಃ ಸುಗಂಧಿಭಿಃ ॥ ೫೦ ॥
ಮಾಲತೀಕುಸುಮೈಃ ಶುಭ್ರೈರ್ಬಹುಭಿಸ್ತುಲಸೀದಲೈಃ ।
ವಸ್ತ್ರಂ ಯಜ್ಞೋಪವೀತಂ ಚ ದತ್ವಾ ಧೂಪಂ ಪ್ರಧೂಪಯೇತ್ ॥೫೧॥
ದೀಪಂ ದದ್ಯಾದ್ಘೃತೇನೈವ ತೈಲೇನಾಪಿ ಘೃತಂ ವಿನಾ ।
ನೈವೇದ್ಯಂ ವಿವಿಧಂ ದೇಯಂ ಫಲಂ ತಾಂಬೂಲಮೇವ ಚ ॥ ೫೨ ॥
ಪ್ರಾಸಾದಪೂಜಾ ಕರ್ತವ್ಯಾ ಧ್ವಜದಾನಾದಿನಾ ನೃಪ ।
ಗೌಃ ಸವತ್ಸಾ ತತೋ ದೇಯಾ ಸಂಸಾರಾರ್ಣವತಾರಿಣೀ ॥ ೫೩ ॥
ತತಃ ಪ್ರದಕ್ಷಿಣಾಂ ಕೃತ್ವಾ ಗೀತವಾದಿತ್ರನಿಸ್ವನೈಃ ।
ವೇದಪಾಠಪುರಾಣೈಶ್ಚ ವ್ಯಾಖ್ಯಾದಿವ್ಯಕಥಾದಿಭಿಃ ॥ ೫೪ ॥

---

ತೀರ್ಥಗಳಿಂದಲೂ, ಅಶ್ವಮೇಧಾದಿ ಯಜ್ಞಗಳಿಂದಲೂ, ಗಯೆಯಲ್ಲಿ ಪಿಂಡಪ್ರದಾನ ಮಾಡುವುದರಿಂದಲೂ ಉಂಟಾಗುವ ಫಲವು ದಾಮೋದರದರ್ಶನದಿಂದಾಗುವುದು.

೪೯–೫೨. ಏಕಾದಶೀದಿನ ಮಿಂದು ದೇವಪೂಜೆಯನ್ನು ಮಾಡಬೇಕು. ಮೊದಲು ಪಂಚಾಮೃತದಿಂದಲೂ, ಅನಂತರ ತೀರ್ಥೋದಕದಿಂದಲೂ ಅಭಿಷೇಕ ಮಾಡಿ ಕುಂಕುಮ, ಅಗರು, ಶ್ರೀಖಂಡ, ಕರ್ಪೂರೋದಕಗಳೊಡನೆ ತಾವರೆ ಹೂವುಗಳಿಂದಲೂ, ಬಿಳಿಜಾಜಿ ಹೂವುಗಳಿಂದಲೂ, ತುಳಸೀದಳಗಳಿಂದಲೂ ಪೂಜಿಸಿ ವಸ್ತ್ರಯಜ್ಞೋಪವೀತಗಳನ್ನಿತ್ತು ಧೂಪ ಘೃತದೀಪಗಳನ್ನು ಕೊಟ್ಟು ಅಥವಾ ಎಣ್ಣೆ ದೀಪವನ್ನರ್ಪಿಸಿ ಬಗೆ ಬಗೆಯ ನೈವೇದ್ಯವನ್ನೂ ಫಲತಾಂಬೂಲಗಳನ್ನೂ ಕೊಡಬೇಕು.

೫೩. ದೊರೆಯೆ! ದೇವಾಲಯವನ್ನರ್ಚಿಸಿ ಧ್ವಜವನ್ನೂ, ಕರುವಿನಿಂದ ಸಹಿತವಾದ ಸಂಸಾರವೆಂಬ ಸಮುದ್ರವನ್ನು ದಾಟಿಸುವ ಗೋವನ್ನೂ, ದಾನಮಾಡಬೇಕು.

೫೪–೫೮. ಅನಂತರ ಪ್ರದಕ್ಷಿಣೆಗೈದು ಗಾನ, ವಾದ್ಯಗಳಿಂದಲೂ, ವೇದಾಧ್ಯಯನ ಪುರಾಣಪಠನಗಳಿಂದಲೂ, ದೇವತಾ ಕಥಾಪ್ರವಚನಗಳಿಂದಲೂ ದೇವರ

ದೇವಾಗ್ರೇ ಜಾಗರಃ ಕಾರ್ಯೋ ದೀಪೋ ದೇಯೋಽತಿಭೂಮಿಷು ।
ಸಪ್ತಧಾನ್ಯಮಯಾಃ ಸಪ್ತ ಪರ್ವತಾ ದೀಪಸಂಯುತಾಃ ॥ ೫೫ ॥
ಫಲತಾಂಬೂಲಪಕ್ವಾನ್ನಪೂರಿತಾಃ ಪರಿಕಲ್ಪಿತಾಃ ।
ವಿದ್ವದ್ಭಿಃ ಶ್ರೋತ್ರಿಯೈಃ ಶಾಂತೈರ್ಬ್ರಾಹ್ಮಣೈರ್ಗೃಹಮೇಧಿಭಿಃ ॥ ೫೬ ॥
ಸ್ತ್ರೀಭಿಶ್ಚ ನರಶಾರ್ದೂಲ ಶ್ರೋತವ್ಯಾ ವೈಷ್ಣವೀ ಕಥಾ ।
ಏವಂ ಜಾಗರಣಂ ಕಾರ್ಯಂ ರಾಗಕ್ರೋಧವಿವರ್ಜಿತೈಃ ॥ ೫೭ ॥
ಪೂರ್ವಾಂ ಸಂಧ್ಯಾಂ ತತಃ ಸ್ನಾತ್ವಾ ಕೃತ್ವಾ ಮಧ್ಯಾಹ್ನಮಾಚರೇತ್ ॥ ೫೮ ॥
ದೇವಾನ್ಪಿತೄನ್ಮನುಷ್ಯಾಂಶ್ಚ ಸಂತರ್ಪ್ಯ ವಿಧಿಪೂರ್ವಕಂ ।
ಕೃತ್ವಾ ಶ್ರಾದ್ಧಂ ಪಿತೄಣಾಂ ತು ದದ್ಯಾದ್ದಾನಂ ಸ್ವಶಕ್ತಿತಃ ॥ ೫೯ ॥
ದೇವಂ ದಾಮೋದರಂ ಪೂಜ್ಯ ಪುಷ್ಪಧೂಪಾದಿನಾ ಪುನಃ ।
ನರಸಿಂಹಂ ಸುರಂ ಪೂಜ್ಯ ವೈನತೇಯಂ ಚ ಪೂಜಯೇತ್ ॥ ೬೦ ॥
ಕೃತ್ವಾ ಜಾಗರಣಂ ರಾತ್ರಾವುತ್ಥಾಪ್ಯ ಮಧುಸೂದನಂ ।
ದ್ವಾದಶೀಭುಕ್ತಿಮಾಸಾದ್ಯ ಕಾರ್ಯಂ ಪಾರಣಕಂ ನರೈಃ ॥ ೬೧ ॥

---

ಮುಂದೆ ಜಾಗರಣೆಮಾಡಿ ಸಮೀಪದಲ್ಲಿ ದೀಪವನ್ನು ಹೊತ್ತಿಸಿ ದೀಪ, ಫಲ, ತಾಂಬೂಲ, ಪಕ್ವಾನ್ನಗಳಿಂದ ಕೂಡಿದ ಏಳು ಸಪ್ತಧಾನ್ಯ ರಾಶಿಗಳನ್ನುಮಾಡಬೇಕು. ವಿದ್ವಾಂಸರು, ಶ್ರೋತಿಯರು, ಬಳಲಿ ಬ್ರಾಹ್ಮಣರು, ಗೃಹಸ್ಥರು, ಹೆಂಗಸರು ಇವರಿಂದ ವಿಷ್ಣುವಿನ ಕಥೆಯನ್ನು ಕೇಳಬೇಕು. ಹೀಗೆ ರಾತ್ರಿ ರಾಗಕ್ರೋಧಗಳನ್ನು ಬಿಟ್ಟು ಜಾಗರಣೆ ಮಾಡಿ ಬೆಳಗ್ಗೆ ಸೂರ್ಯನುದಯಿಸಲು ಪ್ರಾತಸ್ಸ್ನಾನವನ್ನೂ ಸಂಧ್ಯಾವಂದನೆಯನ್ನೂ ಮಾಡಿ ಮಧ್ಯಾಹ್ನವಾಗಲು ಮಾಧ್ಯಾಹ್ನಿಕವನ್ನಾಚರಿಸಬೇಕು.

೫೯. ದೇವ, ಪಿತೃ, ಮನುಷ್ಯರನ್ನು ವಿಧಿಯಂತೆ ತೃಪ್ತಿಗೊಳಿಸಿ ಪಿತೃಗಳಿಗೆ ಶ್ರಾದ್ಧಗೈದು ತನ್ನಶಕ್ತ್ಯನುಸಾರ ದಾನವನ್ನು ನೀಡಬೇಕು.

೬೦. ಪುಷ್ಪ ಧೂಪ ಮೊದಲಾದುವುಗಳಿಂದ ದಾಮೋದರನನ್ನೂ, ನರಸಿಂಹನನ್ನೂ, ಗರುಡನನ್ನೂ ಪೂಜಿಸಬೇಕು..

೬೧. ಮಾನವರು ರಾತ್ರಿ ಜಾಗರಣೆ ಮಾಡಿ ಬೆಳಗ್ಗೆ ವಿಷ್ಣುವನ್ನು ಎಬ್ಬಿಸಿ ದ್ವಾದಶೀ ಪಾರಣೆಯನ್ನು ಮಾಡಬೇಕು.

ಕೃತ್ವಾ ಜಾಗರಣಂ ರಾತ್ರಾವುದಿತೇ ಸೂರ್ಯಮಂಡಲೇ ।
ಬ್ರಾಹ್ಮಣಾನ್ಭೋಜಯಿತ್ವಾ ಚ ಸಹಿತಃ ಪುತ್ರಬಾಂಧವೈಃ ।
ವಿಕಲಾಂಧಕೃಪಾನಾಂ ದೇಯಮನ್ನಂ ಸ್ವಶಕ್ತಿತಃ ॥ ೬೨ ॥
ದಾಮೋದರೇ ರೈವತಕೇ ಸ್ವರ್ಣರೇಖಾನದೀ ಜಲೇ ।
ಏವಂ ಯಃ ಕುರುತೇ ಯಾತ್ರಾಂ ತಸ್ಯ ಪುಣ್ಯಫಲಂ ಶೃಣು ॥ ೬೩ ॥
ಬ್ರಹ್ಮಘ್ನಶ್ಚ ಸುರಾಪಶ್ಚ ಗ್ರಾಮಸೀಮಾವಿಲೋಪಕಃ ।
ರಾಜದ್ರೋಹೀ ಗುರುದ್ರೋಹೀ ಮಿಥ್ಯಾವ್ರತಧರಶ್ಚ ಯಃ ॥ ೬೪ ॥
ಕೂಟಸಾಕ್ಷ್ಯಪ್ರದೋ ಯಶ್ಚ ಗ್ರಾಮಸೀಮಾವಿಲೋಪಕಃ ।
ಬಾಲಸ್ತ್ರೀಘಾತಕೋ ವಿಪ್ರಃ ಸಂಧ್ಯಾವಂದನವರ್ಜಿತಃ ॥ ೬೫ ॥
ದೇವಬ್ರಹ್ಮಸ್ವಹರ್ತಾ ಚ ವೇದವಿಕ್ರಯಕಾರಕಃ ।
ಕನ್ಯಾವಿಕ್ರಯಕರ್ತಾ ಚ ದೇವಬ್ರಾಹ್ಮಣನಿಂದಕಃ ॥ ೬೬ ॥
ವಿಶ್ವಾಸಘಾತಕೋ ವಿಪ್ರಃ ಶೂದ್ರಾನ್ನಾದೋಽಥ ಲುಬ್ಧಕಃ ।
ನಾಯಕಃ ಪರದಾರಾಣಾಂ ಸ್ವಯಂದತ್ತಾಪಹಾರಕಃ ॥ ೬೭ ॥
ಪರ್ವಮೈಥುನಸೇವೀ ಚ ತಥಾ ವೈ ಸೇತುಭೇದಕಃ ।
ಪರಿಣೀತಾಮೃತುಸ್ನಾತಾಂ ಸ್ವಯಂ ಯೋ ನಾಭಿಗಚ್ಛತಿ ॥ ೬೮ ॥

---

೬೨. ಪುತ್ರಭಾಂಧವರೊಡನೆ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅಂಗವಿಕಲರು, ಕುರುಡರು, ದೀನರು ಇವರಿಗೆ ಶಕ್ತ್ಯನುಸಾರ ಅನ್ನವನ್ನು ನೀಡಬೇಕು.

೬೩ ಹೀಗೆ ದಾಮೋದರ, ರೈವತಕ, ಸ್ವರ್ಣರೇಖಾನದೀ ಜಲಗಳ ಯಾತ್ರೆಯನ್ನು ಮಾಡಿದವರಿಗಾಗುವ ಫಲವನ್ನು ಕೇಳು.

೬೪–೭೦. ಬ್ರಹ್ಮಘ್ನ, ಸುರಾಪಾಯಿ, ಗ್ರಾಮದ ಎಲ್ಲೆಯನ್ನು ಹಾಳುಮಾಡಿದವ, ರಾಜದ್ರೋಹಿ, ಗುರುದ್ರೋಹಿ, ಸುಳ್ಳುವ್ರತವನ್ನು ಧರಿಸಿದವ, ಸುಳ್ಳುಸಾಕ್ಷಿ ಹೇಳಿದವ, ಪರರ ನಿಧಿಯನ್ನು ಅಪಹರಿಸಿದವ, ಬಾಲಘ್ನ, ಸ್ತ್ರೀಸಂಹಾರಕ, ಸಂಧ್ಯಾಸ್ನಾನಗಳನ್ನು ಮಾಡದ ಬ್ರಾಹ್ಮಣ, ದೇವಬ್ರಾಹ್ಮಣರ ಸ್ವತ್ತನ್ನು ಅಪಹರಿಸಿದವ, ವೇದಕ್ರಯವನ್ನೂ ಕನ್ಯಾವಿಕ್ರಯವನ್ನೂ ಮಾಡಿದವ, ದೇವಬ್ರಾಹ್ಮಣ ನಿಂದಕ, ವಿಶ್ವಾಸಘಾತಕನಾದ ಬ್ರಾಹ್ಮಣ, ಶೂದ್ರಾನ್ನಭಕ್ಷಕ, ಲೋಭಿ, ಪರಪತ್ನಿಯರನ್ನು ಅಪಹರಿಸಿದವ, ತಾನಿತ್ತುದನ್ನು ಅಪಹರಿಸಿದವ, ಪರ್ವಕಾಲದಲ್ಲಿ ಸ್ತ್ರೀಸಂಗ ಮಾಡಿದವ, ಸೇತುವೆಯನ್ನು ಒಡೆದವ, ಋತುಸ್ನಾತಳಾದ ಸತೀಸಂಗಮ ಮಾಡದವ, ವೇದಾಧ್ಯಯನ ಮಾಡಿದ

ಬ್ರಾಹ್ಮಣೀ ವಿಧವಾ ಬಾಲಾ ಸ ಭವೇಚ್ಛ್ರುತಧಾರಿಣೀ ।
ಮಹಾಪಾತಕಿನಶ್ಚೈತೇ ತಥಾನ್ಯೇ ಬಹವೋ ನೃಪ ॥ ೬೯ ॥

ಸ್ವರ್ಣರೇಖಾಜಲೇ ಸ್ನಾತ್ವಾ ದೃಷ್ಟ್ವಾ ದಾಮೋದರಂ ಹರಿಂ ।
ರಾತ್ರೌ ಜಾಗರಣಂ ಕೃತ್ವಾ ಮುಚ್ಯತೇ ಸರ್ವಪಾತಕೈಃ ॥ ೭೦ ॥

ನ ತು ಯೇ ಪಾಪಕರ್ಮಾಣಃ ಸಮಾಯಾತಾಃ ಪ್ರಜಾಗರೇ ।
ಸಂಸಾರಸಾಗರೇ ತೀರ್ಥೇ ಗಚ್ಛಂತಿ ನ ಹರೇಃ ಪುರಂ ॥ ೭೧ ॥

ಯಥಾ ಯಥಾ ಯಾತಿ ನರಃ ಪ್ರಜಾಗರೇ
ತಥಾ ತಥಾ ವಿಷ್ಣುಪುರೇ ವಿಚಿಂತ್ಯತೇ ।
ವಾಸಃ ಸುರೈರ್ವೈಷ್ಣವಲೋಕಹೇತವೇ
ಮೃದಂಗಗೀತಧ್ವನಿನಾದಿತೇ ಗೃಹೇ ॥ ೭೨ ॥

ಗದಾಸಿಶಂಖಾದಿಧರಾಶ್ಚತುರ್ಭುಜಾ
ದೈತೇಯುದರ್ಪಾಪಹರೂಪಧಾರಿಣಃ ।
ಪ್ರಗೀಯಮಾನಾಃ ಸುರಸುಂದರೀಭಿಃ
ತೇ ಯಾಂತಿ ಖಂ ಖೇಚರಗಾತ್ರಸಂಗಾಃ ॥ ೭೩ ॥

---

ಬ್ರಾಹ್ಮಣ ಬಾಲವಿಧವೆ ಇವರೇ ಮೊದಲಾದ ಅನೇಕ ಮಂದಿ ಮಹಾಪಾತಕಿಗಳು ಸ್ವರ್ಣರೇಖಾ ನೀರಿನಲ್ಲಿ ಮಿಂದು, ದಾಮೋದರನನ್ನು ದರ್ಶನ ಮಾಡಿ, ರಾತ್ರಿ ಜಾಗರಣೆಗೈದರೆ ಸಕಲ ಪಾಪಮುಕ್ತರಾಗುವರು.

೭೧. ಸಂಸಾರಸಾಗರ ಮಗ್ನರಾಗಿ ಜಾಗರಣೆಗೆ ಬಾರದ ಪಾಪಿಗಳು ವಿಷ್ಣು ಪುರವನ್ನು ಸೇರುವುದಿಲ್ಲ.

೭೨. ಮನುಷ್ಯನು ಜಾಗರಣೆ ಮಾಡಿದಹಾಗೆಲ್ಲ ದೇವತೆಗಳು ಅವನಿಗೆ ಮೃದಂಗ, ಸಂಗೀತ ಧ್ವನಿಗಳಿಂದ ಮನೋಹರವಾದ ವಿಷ್ಣುಲೋಕದಲ್ಲಿ ವಾಸಸ್ಥಳವನ್ನು ಎಲ್ಲಿ ನಿರ್ಮಿಸೋಣವೆಂದು ಆಲೋಚಿಸುವರು.

೭೩. ಆ ನರರು ಗದೆ, ಕತ್ತಿ, ಶಂಖ, ಚಕ್ರಗಳನ್ನು ಧರಿಸಿ ನಾಲ್ಕು ಭುಜಗಳುಳ್ಳ ವಿಷ್ಣುವಿನ ರೂಪವುಳ್ಳವರಾಗಿ ದೇವತಾಸ್ತ್ರೀಯರಿಂದ ಸ್ತುತಿಸಲ್ಪಡುತ್ತ ದೇವತೆಗಳಂತೆ ಆಕಾಶದಲ್ಲಿ ಸಂಚರಿಸುತ್ತಾರೆ.

ವಾರಾಹಕಲ್ಪೇ ಪ್ರಥಮಂ ಯುಗಾದೌ
ದಾಮೋದರೋ ರೈವತಕೇ ಪ್ರಸಿದ್ಧಃ ।
ಸೈಷಾ ನದೀ ಯಾ ಸರಿತಾಂ ವರಿಷ್ಠಾ
ಸೋಽಯಂ ಹರಿರ್ಯೋ ಭುವನಸ್ಯ ಕರ್ತಾ ॥ ೭೪ ॥
ಇದಂ ಪುರಾಣಂ ಪಠತೇ ಶೃಣೋತಿ
ನರೋ ವಿಮಾನೈಃ ಮಧುಸೂದನಾಲಯೇ ।
ದೇವಾಂಗನಾದತ್ತಚತುರ್ಭುಜಃ ಸ
ನೀಯತೇ ದೇವಗಣೈರಭಿಷ್ಟುತಃ ॥ ೭೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಶ್ರೀ ದಾಮೋದರಮಾಹಾತ್ಮ್ಯವರ್ಣನಂ ನಾಮ
ಪಂಚದಶೋಽಧ್ಯಾಯಃ

---

೭೪. ವಾರಾಹಕಲ್ಪದ ಕೃತಯುಗದಲ್ಲಿ ರೈವತಕದಲ್ಲಿರುವ ದಾಮೋದರನು ಪ್ರಸಿದ್ಧನಾಗಿದ್ದನು. ಈ ಸ್ವರ್ಣರೇಖಾ ನದಿಯು ನದಿಗಳಲ್ಲಿ ಶ್ರೇಷ್ಠವಾಗಿರುವುದು. ಈ ವಿಷ್ಣುವು ಲೋಕಗಳನ್ನು ಸೃಷ್ಟಿಸಿರುವನು.

೭೫. ಈ ಪುರಾಣವನ್ನು ಪಠಿಸುವವರೂ, ಕೇಳುವವರೂ ನಾಲ್ಕು ತೋಳುಗಳುಳ್ಳವರಾಗಿ ದೇವತಾಸ್ತ್ರೀಯರಿಂದ ಆಲಿಂಗತರೂ, ದೇವತೆಗಳಿಂದ ಸ್ತುತಿಸಲ್ಪಟ್ಟವರೂ ಆಗಿ ವಿಮಾನವನ್ನೇರಿ ವೈಕುಂಠವನ್ನು ಸೇರುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಶ್ರೀ ದಾಮೋದರಮಾಹಾತ್ಮ್ಯವರ್ಣನವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ।

## ಷೋಡಶೋಽಧ್ಯಾಯಃ

### ಶಿವರಾತ್ರಿಮಾಹಾತ್ಮ್ಯವರ್ಣನಂ

ಅಥಾಸೌ ವಾಮನೋ ವಿಪ್ರಃ ಪ್ರವಿಷ್ಟೋ ಗಹನೇ ವನೇ ।
ಏಕಾಕೀ ಕಿಂ ಚಕಾರಾಥ ಕೌತುಕಂ ತದ್ವದಸ್ವ ಮೇ ॥ ೧ ॥

ಸಾರಸ್ವತ ಉವಾಚ :—

ಅಥಾಸೌ ವಾಮನೋ ವಿಪ್ರೋ ಗತ್ವಾ ರೈವತಕೇ ಗಿರೌ ।
ಸ್ವರ್ಣರೇಖಾನದೀತೋಯೇ ಸ್ನಾತ್ವಾಽಥ ವಿಧಿಪೂರ್ವಕಂ ॥ ೨ ॥
ಸುಗಂಧಪುಷ್ಪಧೂಪಾದ್ಯೈರ್ದೇವಂ ಸಂಪೂಜ್ಯ ಭಕ್ತಿತಃ ।
ತಸ್ಥೌ ತದಗ್ರತೋ ರಾಜನ್ ಏಕಾಕೀ ನಿರ್ಜನೇ ವನೇ ॥ ೩ ॥
ಸರ್ವಸತ್ವಸಮಾಯುಕ್ತೇ ಸರೀಸೃಪಸಮಾಕುಲೇ ।
ಅನೇಕಸ್ವರಸಂಘುಷ್ಟೇ ಮಯೂರಧ್ವನಿನಾದಿತೇ ॥ ೪ ॥
ಕೋಕಿಲಾರಾವರಮ್ಯೇ ಚ ವನಕುಕ್ಕುಟಘೋಷಿತೇ ।
ಖದ್ಯೋತದ್ಯೋತಿತೇ ತಸ್ಮಿನ್ನಲೀಮುಖವಿಧೂನಿತೇ ॥ ೫ ॥

---

### ಕನ್ನಡದ ಅನುವಾದ

### ಶಿವರಾತ್ರಿಮಾಹಾತ್ಮ್ಯವರ್ಣನಂ

೧. ರಾಜನು ಹೇಳುತ್ತಾನೆ :—ಬಳಿಕ ಈ ವಾಮನನು ಗಹನವಾದ ಕಾಡನ್ನು ಒಬ್ಬಂಟಿಗನಾಗಿ ಪ್ರವೇಶಿಸಿ ಏನು ಮಾಡಿದನು ? ಬಹಳ ಕುತೂಹಲವುಂಟಾಗಿದೆ. ಅದನ್ನು ನನಗ ಹೇಳು.

೨-೫. ಸಾರಸ್ವತನು ಹೇಳುತ್ತಾನೆ :—ಬಳಿಕ ಈ ವಾಮನನು ರೈವತಕ ಪರ್ವತದಲ್ಲಿರುವ ಸ್ವರ್ಣರೇಖಾ ನದಿಯ ನೀರಿನಲ್ಲಿ ವಿಧಿಯುಂತೆ ಮಿಂದು ಸುಗಂಧವಾದ ಪುಷ್ಪಧೂಪಾದಿಗಳಿಂದ ದಾಮೋದರನನ್ನು ಭಕ್ತಿಯಿಂದಾರಾಧಿಸಿ ಅವನ ಮುಂದೆ ಜನರಿಲ್ಲದುದೂ, ಸಮಸ್ತ ಪ್ರಾಣಿಗಳಿಂದ ಕೂಡಿರುವುದೂ, ನವಿಲು, ಕೋಗಿಲೆ, ಕಾಡು ಕೋಳಿ ಮೊದಲಾದುವುಗಳ ಅನೇಕ ಬಗೆಯ ಧ್ವನಿಯುಳ್ಳುದೂ, ಮಿಂಚುಹುಳುಗಳಿಂದ

ಕ್ವಚಿದ್ವಂಶಾಗ್ನಿನಾ ಶಾಂತೇ ಕ್ವಚಿತ್ಪುಷ್ಪಿತಪಾದಪೇ ।
ಗಗನಾಸಕ್ತವಿಟಪೇ ಸೂರ್ಯತಾಪವಿವರ್ಜಿತೇ ॥ ೬ ॥
ಲುಬ್ಧಕಾಘಾತಸಂತ್ರಸ್ತಭ್ರಾಂತಸೂಕರಶಂಬರೇ ।
ಸಂಹೃಷ್ಟಕ್ಷತ್ರಿಯವ್ರಾತಸ್ಥಾನದಾನವಿಚಕ್ಷಣೇ ॥ ೭ ॥
ಅನೇಕಾಶ್ಚರ್ಯಸಂಪನ್ನಂ ಸಂಸ್ಮಾರ ಮನಸಾ ಹರಿಂ ।
ತಂ ಭೀತಮಿವ ವಿಜ್ಞಾಯ ನರಸಿಂಹಃ ಸಮಾಯಯೌ ॥ ೮ ॥
ರಕ್ಷಾರ್ಥಂ ತಸ್ಯ ವಿಪ್ರಸ್ಯ ಬಭಾಷೇ ಪುರತಃ ಸ್ಥಿತಃ ।
ನ ಭೇತವ್ಯಂ ತ್ವಯಾ ವಿಪ್ರ ವದ ತೇ ಕಿಂ ಕರೋಮ್ಯಹಂ ॥ ೯ ॥

ವಿಪ್ರ ಉವಾಚ :—

ಯದಿ ತುಷ್ಟೋ ವರೋ ದೇಯೋ ನರಸಿಂಹ ತ್ವಯಾ ಮಮ ।
ಸದಾತ್ರ ರಕ್ಷಾ ಕರ್ತವ್ಯಾ ಸರ್ವೇಷಾಂ ತೀರ್ಥವಾಸಿನಾಂ ॥ ೧೦ ॥
ದೇವಸ್ಯಾಗ್ರೇ ಸದಾ ಸ್ಥೇಯಂ ಯಾವದಿಂದ್ರಾಶ್ಚತುರ್ದಶ ।
ಏವಮಸ್ತ್ವಿತಿ ತಂ ಪ್ರೋಚ್ಯ ತಥಾ ಚಕ್ರೇ ಹರಿಸ್ತದಾ ॥ ೧೧ ॥

---

ಪ್ರಕಾಶಿಸುವುದೂ, ಕಪಿಗಳಿಂದ ಅಲ್ಲಾಡಿಸಲ್ಪಟ್ಟ ಮರಗಳುಳ್ಳುದೂ, ಒಂದೆಡೆಯಲ್ಲಿ ಶಾಂತವಾದ ಬಿದಿರಿನ ಬೆಂಕಿಯುಳ್ಳುದೂ, ಇನ್ನೊಂಡೆಯಲ್ಲಿ ಪುಷ್ಪಗೊಂಡ ವೃಕ್ಷಗಳುಳ್ಳುದೂ, ಆಕಾಶವನ್ನು ಮುಟ್ಟುವ ಮರಗಳುಳ್ಳುದೂ, ಬಿಸಿಲಿಲ್ಲದಿರುವುದೂ, ಬೇಡರ ಹೊಡೆತದಿಂದ ಬೆದರಿದ ಹಂದಿ ಮೊದಲಾದ ಪ್ರಾಣಿಗಳುಳ್ಳುದೂ, ಸಂತೋಷಗೊಂಡ ಕ್ಷತ್ರಿಯರಿಗೆ ಸ್ಥಾನವನ್ನೀಯುವುದೂ ಆಗಿರುವ ನಿರ್ಜನವಾದ ಕಾಡಿನಲ್ಲಿ ಒಬ್ಬಂಟಿಗನಾಗಿ ನಿಂತು ಹರಿಯನ್ನು ಮನಸ್ಸಿನಿಂದ ಸ್ಮರಿಸಿದನು. ಆಗ ನರಸಿಂಹನು ಅವನು ಭಯಗೊಂಡಿರುವನೆಂದರಿತು ಅಲ್ಲಿಗೆ ಬಂದನು.

೯. ಆ ಬ್ರಾಹ್ಮಣನ ರಕ್ಷಣೆಗಾಗಿ ಅಲ್ಲಿಗೆ ಬಂದ ಆ ನರಸಿಂಹನು ಅವನ ಮುಂದೆ ನಿಂತು, "ಬ್ರಾಹ್ಮಣ ನೀನು ಹೆದರಬೇಡ. ನಾನು ನಿನಗೆ ಏನು ಉಪಕಾರವನ್ನು ಮಾಡಲಿ ಹೇಳು" ಎಂದನು.

೧೦. ಬ್ರಾಹ್ಮಣನು ಹೇಳುತ್ತಾನೆ :—ನರಸಿಂಹ! ನೀನು ನನ್ನಲ್ಲಿ ಸಂತುಷ್ಟನಾಗಿ ವರವನ್ನು ಕೊಡುವುದಾದರೆ ಇಲ್ಲಿ ವಾಸಿಸುತ್ತ ಈ ತೀರ್ಥವಾಸಿಗಳನ್ನೆಲ್ಲ ರಕ್ಷಿಸು.

೧೧. ಹದಿನಾಲ್ಕು ಮಂದಿ ಇಂದ್ರರ ಕಾಲದವರೆಗೆ ನೀನು ಯಾವಾಗಲೂ ಈ ದಾಮೋದರನ ಮುಂದಿರಬೇಕು. ಏಂದು ವಾಮನನಿಂತು ಹೇಳಲು ನರಸಿಂಹನು ಹಾಗೆಯೆ ಆಗಲೆಂದು ಹೇಳಿದನು.

ಅತೋ ದಾಮೋದರಸ್ಯಾಗ್ರೇ ನರಸಿಂಹಃ ಪ್ರಪೂಜ್ಯತೇ ।
ವನಂ ಸೌಮ್ಯಂ ಕೃತಂ ತೇನ ತೀರ್ಥರಕ್ಷಾಂ ಕರೋತಿ ಸಃ ॥ ೧೨ ॥

ಭೂತಪ್ರೇತಾದಿಸಂವಾಸೋ ವನೇ ತಸ್ಮಿನ್ನಜಾಯತೇ ।
ನರಸಿಂಹಪ್ರಭಾವೇನ ನಷ್ಟಂ ಸಿಂಹಾದಿಜಂ ಭಯಂ ॥ ೧೩ ॥

ಕಾರ್ತಿಕೇ ವಾಸರೇ ವಿಷ್ಣೋರ್ದ್ವಾದಶ್ಯಾಂ ಪಾರಣೇ ಕೃತೇ ।
ದಾಮೋದರಂ ನಮಸ್ಕೃತ್ಯ ಭವಂ ದ್ರಷ್ಟುಂ ತತೋ ಯಯೌ ॥ ೧೪ ॥

ಚತುರ್ದಶ್ಯಾಂ ಕೃತಸ್ನಾನೋ ಭವಂ ಸಂಪೂಜ್ಯ ಭಾವತಃ ।
ಭವಭಾವಭವಂ ಪಾಪಂ ಭಸ್ಮೀಭೂತಂ ಭವಾರ್ಚನಾತ್ ॥ ೧೫ ॥

ಸ ಕ್ಷೀಣಪಾಪನಿಚಯೋ ಜಾತೋ ದೇವಸ್ಯ ದರ್ಶನಾತ್ ।
ಭವಸ್ಯಾಗ್ರೇ ಸ್ಥಿತಂ ಶಾಂತಂ ತಥಾ ವಸ್ತ್ರಾಪಥಸ್ಯ ಚ ॥ ೧೬ ॥

ಕಾಲಮೇಘಂ ಸಮಭ್ಯರ್ಚ್ಯ ತತೋ ವಸ್ತ್ರಾಪಥಂ ಯಯೌ ।
ದೇವಂ ಸಂಪೂಜ್ಯ ಮಂತ್ರೈಃ ಸವೇದೋಕ್ತೈರ್ವಿಧಿಪೂರ್ವಕಂ ॥ ೧೭ ॥

ಧೂಪದೀಪಾದಿನೈವೇದ್ಯೈಃ ಸರ್ವಂ ಚಕ್ರೇ ಸ ವಾಮನಃ ।
ಪ್ರದಕ್ಷಿಣಾಶತಂ ಕೃತ್ವಾ ಭವಸ್ಯಾಗ್ರೇ ವ್ಯವಸ್ಥಿತಃ ॥ ೧೮ ॥

---

೧೨. ಆದರಿಂದ ದಾಮೋದರನ ಮುಂದಿರುವ ನರಸಿಂಹನನ್ನು ಜನರು ಪೂಜಿಸುತ್ತಾರೆ. ಆ ನರಸಿಂಹನು ವನವನ್ನು ಸೌಮ್ಯವನ್ನಾಗಿಸಿ ತೀರ್ಥವನ್ನು ರಕ್ಷಿಸುತ್ತಾನೆ.

೧೩. ನರಸಿಂಹನ ಮಾಹಾತ್ಮ್ಯದಿಂದ ಆ ವನದಲ್ಲಿ ಭೂತಪ್ರೇತಾದಿಗಳು ವಾಸಿಸುವುದಿಲ್ಲ. ಸಿಂಹಾದಿಗಳ ಭಯವೂ ಇರುವುದಿಲ್ಲ.

೧೪. ಆ ವಾಮನನು ಕಾರ್ತಿಕಮಾಸದ ದ್ವಾದಶೀ ವಿಷ್ಣುವಿನ ದಿನದಲ್ಲಿ ಪಾರಣೆ ಮಾಡಿ ದಾಮೋದರನನ್ನು ವಂದಿಸಿ ಭವನನ್ನು ನೋಡಲು ಹೋದನು.

೧೫–೧೮. ಚತುರ್ದಶೀದಿನ ಮಿಂದು ಭವನನ್ನು ಭಕ್ತಿಯಿಂದ ಅರ್ಚಿಸಿ ಸಂಸಾರದಿಂದುಂಟಾದ ಪಾಪವನ್ನು ಪರಿಹರಿಸಿಕೊಂಡು ಆ ಭವನ ಮುಂದಿರುವ ಶಾಂತನಾದ ಕಾಲಮೇಘನನ್ನು ಪೂಜಿಸಿ ಬಳಿಕ ವಸ್ತ್ರಾಪಥಕ್ಕೆ ಬಂದು ಅಲ್ಲಿರುವ ಭವನನ್ನು ವೇದೋಕ್ತಮಂತ್ರಗಳಿಂದಲೂ, ಧೂಪ, ದೀಪ, ನೈವೇದ್ಯಗಳಿಂದಲೂ ಪೂಜಿಸಿ ನೂರು ಪ್ರದಕ್ಷಿಣೆಗೈದು ಮುಂದೆ ನಿಂತನು.

ಯಾವನ್ನಿರೀಕ್ಷತೇ ಸರ್ವಂ ತಾವತ್ಪಶ್ಯತಿ ಪರ್ವತಂ ।
ಉಜ್ಜಯಂತಂ ಗಿರಿವರಂ ಮೈನಕಾಸ್ಯ ಸಹೋದರಂ ॥ ೧೯ ॥
ಸುರಾಷ್ಟ್ರದೇಶೇ ವಿಖ್ಯಾತಂ ಯುಗಾದೌ ಪ್ರಥಮಂ ಸ್ಥಿತಂ ।
ಭೂಧರಂ ಭೂಧರೈರ್ಯುಕ್ತಂ ಶಿಲಾಪಾದಪಮಂಡಿತಂ ॥ ೨೦ ॥
ತಂ ದೃಷ್ಟ್ವಾ ಚಿಂತಯಾಮಾಸ ಸೂಕ್ಷ್ಮಾನ್ಧರ್ಮಾನ್ಸ ವಾಮನಃ ।
ಅಲ್ಪಾಯಾಸಾನ್ಸುಬಹುಲಾನ್ಪುತ್ರಲಕ್ಷ್ಮೀಪ್ರದಾಯಕಾನ್ ॥ ೨೧ ॥
ಅವಶ್ಯಂ ಕ್ರಿಯಮಾಣೇಷು ಸ್ವಧರ್ಮ ಉಪಜಾಯತೇ ।
ದೃಷ್ಟ್ವಾ ನದೀಂ ಸಾಗರಗಾಂ ಸ್ನಾತ್ವಾ ಪಾಪೈಃ ಪ್ರಮುಚ್ಯತೇ ॥ ೨೨ ॥
ಗಾಂ ಸ್ಪೃಷ್ಟ್ವಾ ಬ್ರಾಹ್ಮಣಂ ನತ್ವಾ ಸಂಪೂಜ್ಯ ಗುರುದೇವತಾಃ ।
ತಪಸ್ವಿನಂ ಯತಿಂ ಶಾಂತಂ ಶ್ರೋತ್ರಿಯಂ ಬ್ರಹ್ಮಚಾರಿಣಂ ॥ ೨೩ ॥
ಪಿತರಂ ಮಾತರಂ ಭಗಿನೀಂ ತತ್ಪತಿಂ ದುಹಿತಾಂ ಪತಿಂ ।
ಭಾಗಿನೇಯಮಥ ದೌಹಿತ್ರಂ ಮಿತ್ರಸಂಬಂಧಿಬಾಂಧವಾನ್ ।
ಸಂಭೋಜ್ಯ ಪಾತಕೈಃ ಸರ್ವೈರ್ಮುಚ್ಯಂತೇ ಗೃಹಮೇಧಿನಃ ॥ ೨೪ ॥
ರಾಜಾ ಗಜಾಶ್ವನಕುಲಂ ಸತೀವೃಷಮಹೀಧರಾಃ ।
ಆದರ್ಶಕ್ಷೀರವೃಕ್ಷಾಶ್ಚ ಸತತಾನ್ನಪ್ರದಾಸ್ತು ತೇ ॥ ೨೫ ॥

---

೧೯–೨೦. ಅವನು ಸುತ್ತಲೂ ನೋಡುತ್ತಿರಲು ಸುರಾಷ್ಟ್ರ ದೇಶದಲ್ಲಿ ಪ್ರಸಿದ್ಧವಾದುದೂ, ಯುಗಾದಿಯಿಂದ ಇರುವುದೂ, ಬೆಟ್ಟಗಳಿಂದ ತೂರಿರುವುದೂ, ಕಲ್ಲು, ಮರಗಳಿಂದ ಅಲಂಕಾರಗೊಂಡುದೂ ಆದ ಮೈನಾಕಸಹೋದರನಾದ ಉಜ್ಜಯಂತ ಗಿರಿಯನ್ನು ಕಂಡನು.

೨೧–೨೪. ಅವನು ಅದನ್ನು ಕಂಡು ಸ್ವಲ್ಪಾಯಾಸದಿಂದ ಮಾಡಲು ಸಾಧ್ಯವೂ, ಮಕ್ಕಳು, ಸಂಪತ್ತುಗಳನ್ನು ಕೊಡುವುವೂ, ಅವಶ್ಯಕರ್ತವ್ಯವಾದ ಸ್ವಧರ್ಮಗಳೂ ಆಗಿರುವ ಸೂಕ್ಷ್ಮ ಧರ್ಮಗಳನ್ನು ಚಿಂತಿಸಿದನು. ಮನುಷ್ಯನು ಸಮುದ್ರವನ್ನು ಸೇರುವ ನದಿಯನ್ನು ಕಂಡರೆ ಪಾಪಮುಕ್ತನಾಗುವನು. ಗೃಹಸ್ಥರು ಗೋವನ್ನು ಸ್ಪರ್ಶಮಾಡುವುದರಿಂದಲೂ, ಬ್ರಾಹ್ಮಣನಿಗೆ ನಮಸ್ಕಾರಮಾಡುವುದರಿಂದಲೂ, ಗುರುದೇವತೆಗಳನ್ನು ಪೂಜಿಸುವುದರಿಂದಲೂ, ಮುನಿ, ಸನ್ನ್ಯಾಸಿ, ಶಾಂತನಾದ ಶ್ರೋತ್ರಿಯ, ಬ್ರಹ್ಮಚಾರಿ, ತಂದೆ, ತಾಯಿ, ಸಹೋದರಿ, ಭಾವ, ಮಗಳು, ಅಳಿಯ, ಸಹೋದರಿಯ ಮಗ, ಮೊಮ್ಮಗ, ಸ್ನೇಹಿತ, ಬಂಧು ಇವರನ್ನು ಭೋಜನಮಾಡಿಸುವುದರಿಂದಲೂ ಸಕಲಪಾಪ ಮುಕ್ತರಾಗುವರು.

೨೫–೩೦. ರಾಜ, ಆನೆ, ಕುದುರೆ, ಮುಂಗಸಿ, ಪತಿವ್ರತಾಸ್ತ್ರೀ, ಎತ್ತು, ಬೆಟ್ಟ, ಕನ್ನಡಿಗಳೂ,ಆಲ ಮೊದಲಾದ ಕ್ಷೀರ ವೃಕ್ಷಗಳೂ ಯಾವಾಗಲೂ ಅನ್ನದಾನ ಮಾಡುವವರು,

ದೃಷ್ಟಮಾತ್ರಾಃ ಪುನಂತ್ಯೇತೇ ಯೇ ನಿತ್ಯಂ ಸತ್ಯವಾದಿನಃ ।
ವೇದಧರ್ಮಕಥಾಂ ಶ್ರುತ್ವಾ ಭುಕ್ತಿಮುಕ್ತಿಪ್ರದಾಂ ನರಾ ॥ ೨೬ ॥
ಸ್ಮೃತ್ವಾ ಹರಿಹರೌ ಗಂಗಾಂ ಕೃತ್ವಾ ತೀರೇಣ ಮಾರ್ಜನಂ ।
ಗತ್ವಾ ಜಾಗರಣೇ ವಿಷ್ಣೋರ್ದತ್ವಾ ದಾನಂ ಚ ಶಕ್ತಿತಃ ॥ ೨೭ ॥
ತಾಂಬೂಲಂ ಕುಸುಮಂ ದೀಪಂ ನೈವೇದ್ಯಂ ತುಲಸೀದಲಂ ।
ಗೀತಂ ನೃತ್ಯಂ ಚ ವಾದ್ಯಂ ಚ ವಿಧಾಯ ಸುರಮಂದಿರೇ ॥ ೨೮ ॥
ಏತೇ ಸೂಕ್ಷ್ಮಾಃ ಸ್ಮೃತಾ ಧರ್ಮಾಃ ಕ್ರಿಯಮಾಣಾ ಮಹೋದಯಾಃ ।
ಅತೋ ಗಿರೀಂದ್ರಂ ಪಶ್ಯಾಮಿ ಸರ್ವದೇವಾಲಯಂ ಶುಭಂ ॥ ೨೯ ॥
ತೇಷಾಂ ಕರತಲೇ ಸ್ವರ್ಗಃ ಶಿಖರಂ ಯಾಂತಿ ಯೇ ನರಾಃ ॥ ೩೦ ॥
ಇತಿ ಜ್ಞಾತ್ವಾ ಸಮಾರೂಢೋ ವಾಮನೋ ಗಿರಿಮೂರ್ಧನಿ ।
ಐರಾವತಪದಾಕ್ರಾಂತ್ಯಾ ಯತ್ರ ತೋಯಂ ವಿನಿಸ್ಸೃತಂ ॥ ೩೧ ॥
ತತಃ ಶಿಖರಮಾರೂಢಾಂ ಭವಾನೀಂ ಸ್ಕಂದಮಾತರಂ ।
ದ್ರಷ್ಟುಂ ಸ ವಾಮನೋ ಯಾತಿ ಶಿಖರೇ ಗಗನಾಶ್ರಿತೇ ॥ ೩೨ ॥
ಯಥಾಯಥಾ ಗಿರಿವರೇ ಸಮಾರೋಹಂತಿ ಮಾನವಾಃ ।
ತಥಾತಥಾ ವಿಮುಚ್ಯಂತೇ ಪಾತಕೈಃ ಸರ್ವದೇಹಿನಃ ॥ ೩೩ ॥

---

ಸತ್ಯವಾದಿಗಳು-ಇವರು ದರ್ಶನಮಾತ್ರದಿಂದ ಪವಿತ್ರಗೊಳಿಸುವರು. ಭುಕ್ತಿಮುಕ್ತಿಗಳನ್ನು ಕೊಡುವ ವೇದಧರ್ಮದ ಕಥಾಶ್ರವಣ, ಹರಿಹರರ ಸ್ಮರಣೆ, ಗಂಗಾ ತೀರದಲ್ಲಿ ಮಾರ್ಜನ, ಮಿಕ್ಕ ಹರಿದಿನದಲ್ಲಿ ಜಾಗರಣೆ, ಶಕ್ತ್ಯನುಸಾರ ತಾಂಬೂಲ, ಪುಷ್ಪ, ದೀಪ, ನೈವೇದ್ಯ, ತುಲಸೀದಳಗಳ ಸಮರ್ಪಣೆ,ದೇವಾಲಯದಲ್ಲಿ ಗೀತ, ನೃತ್ಯ, ವಾದ್ಯಗಳನ್ನು ಮಾಡುವುದು ಇವು ಸೂಕ್ಷ್ಮಧರ್ಮಗಳು. ಇವುಗಳನ್ನು ಅನುಷ್ಠಾನ ಮಾಡುವುದರಿಂದ ಅತಿಶಯಫಲ ಉಂಟಾಗುವುದು. ಆದುದರಿಂದ ನಾನು ಸಕಲ ದೇವತೆಗಳಿಗೆ ಆಶ್ರಯವಾದ ಪರ್ವತಶ್ರೇಷ್ಠವನ್ನು ನೋಡುತ್ತೇನೆ. ಅದರ ಶಿಖರವನ್ನೇರಿದ ಮಾನವರಿಗೆ ಸುಲಭವಾಗಿ ಸ್ವರ್ಗವು ಲಭಿಸುವುದು.

೩೧. ವಾಮನನು ಹೀಗೆ ಆಲೋಚಿಸಿ ಐರಾವತದ ಪಾದಾಕ್ರಮಣದಿಂದ ನೀರು ಹೊರಟಿರುವ ಪರ್ವತದ ಶಿಖರವನ್ನು ಹತ್ತಿದನು.

೩೨. ಅವನು ಆಕಾಶವನ್ನು ವ್ಯಾಪಿಸಿರುವ ಆ ಪರ್ವತದ ಶಿಖರವನ್ನೇರಿ ನೆಲೆಸಿರುವ ಸ್ಕಂದಮಾತೆಯಾದ ಭವಾನಿಯನ್ನು ನೋಡಲು ಮೇಲಕ್ಕೆ ಹತ್ತಿದನು.

೩೩. ಮಾನವರು ಈ ಪರ್ವತವನ್ನು ಹತ್ತಿದ ಹಾಗೆಲ್ಲ ಅವರ ಪಾಪಗಳು ಪರಿಹಾರವಾಗುವುದು.

ಇತಿ ಕೃತ್ವಾ ಮತಿಂ ವಿಪ್ರೋ ಜಗಾಮ ಗಿರಿಮೂರ್ಧನಿ ।
ಭವಭಕ್ತೋ ಭವಾನೀಂ ಸ ದದರ್ಶ ಸ್ಕಂದಮಾತರಂ ॥ ೩೪ ॥
ಅಂಬೇತಿ ಭಾಷತೇ ಸ್ಕಂದಸ್ತತೋಽನ್ಯೇ ಸರ್ವದೇವತಾಃ ।
ಪೃಥಿವ್ಯಾಂ ಮಾನವಾಃ ಸರ್ವೇ ಪಾತಾಲೇ ಸರ್ವಪನ್ನಗಾಃ ॥ ೩೫ ॥
ಅತೋ ಹ್ಯಂಬೇತಿ ವಿಖ್ಯಾತಾ ಪೂಜ್ಯತೇ ಗಿರಿಮೂರ್ಧನಿ ।
ಸಂಪೂಜ್ಯ ವಿವಿಧೈರ್ಮುಖ್ಯೈಃ ಫಲೈರ್ನಾನಾವಿಧೈರ್ದ್ವಿಜಃ ॥ ೩೬ ॥
ಗಗನಾಸಕ್ತಶಿಖರೇ ಸಂಸ್ಥಿತಃ ಕೌತುಕಾನ್ವಿತಃ ।
ಏಕಾಕೀ ಶಿಖರೇ ತಸ್ಮಿನ್ನೂರ್ಧ್ವಬಾಹುರ್ವ್ಯವಸ್ಥಿತಃ ॥ ೩೭ ॥
ನಿರೀಕ್ಷ್ಯ ಮೇದಿನೀಂ ಸರ್ವಾಂ ಸಪರ್ವತಸಸಾಗರಾಂ ।
ಆದ್ಯಂ ಸನಾತನಂ ದೇವಂ ಭಾಸ್ಕರಂ ತ್ರಿಗುಣಾತ್ಮಕಂ ॥ ೩೮ ॥
ಸರ್ವತೇಜೋಮಯಂ ದೇವಂಸರ್ವ ದೇವೈರ್ನಮಸ್ಕೃತಂ ॥
ಭ್ರಮಮಾಣಂ ನಿರಾಧಾರಂ ಕಾಲಮಾನಪ್ರಯೋಜಕಂ ॥ ೩೯ ॥
ಯಾವತ್ಪಶ್ಯತಿ ತಂ ವಿಪ್ರಸ್ತಾವತ್ಪಶ್ಯತಿ ಶಂಕರಂ ।
ದಿಗಂಬರಂ ಭವಂ ದೇವಂ ಸಮಂತಾದಶ್ಮಗುಂಠಿತಂ ॥ ೪೦ ॥

---

೩೪. ಭವಭಕ್ತನಾದ ಆ ವಾಮನನು ಹೀಗೆ ಆಲೋಚಿಸಿ ಆ ಪರ್ವತದ ಶಿಖರವನ್ನು ಹತ್ತಿ ಸ್ಕಂದನ ತಾಯಿಯಾದ ಭವಾನಿಯನ್ನು ಕಂಡನು.

೩೫-೩೭. ಆ ಪಾರ್ವತಿಯನ್ನು ಸ್ಕಂದನೂ, ಇತರ ದೇವತೆಗಳೂ, ಭೂಮಿಯಲ್ಲಿರುವ ಸಕಲ ಮಾನವರೂ, ಪಾತಾಳವಾಸಿಗಳಾದ ಸಕಲ ಸರ್ಪಗಳೂ ಅಂಬ ಎಂದು ಕರೆಯುವುದರಿಂದ ಅವಳು ಅಂಬಾ ಎಂದು ವಿಖ್ಯಾತಳಾಗಿ ಪರ್ವತ ಶಿಖರದಲ್ಲಿ ಎಲ್ಲರಿಂದಲೂ ಪೂಜಿತಳಾಗಿರುವಳು ವಾಮನನು ಆ ಭವಾನಿಯನ್ನು ನಾನಾ ಬಗೆಯ ಫಲಗಳಿಂದ ಆರಾಧಿಸಿ ಆ ಪರ್ವತದ ಗಗನವನ್ನು ಮುಟ್ಟುವ ಶಿಖರದಲ್ಲಿ ಒಬ್ಬಂಟಿಗನೂ, ಮೇಲಕ್ಕೆತ್ತಿದ ತೋಳುಗಳುಳ್ಳವನೂ ಆಗಿ ನೆಲೆಸಿದನು.

೩೮-೪೦. ಅವನು ಪರ್ವತಗಳಿಂದಲೂ ಸಮುದ್ರಗಳಿಂದಲೂ ಕೂಡಿದ ಭೂಮಿಯನ್ನೆಲ್ಲ ನೋಡುತ್ತ ಅಲ್ಲಿ ಅನಾದಿಯೂ, ತ್ರಿಗುಣಸ್ವರೂಪನೂ, ಸಕಲ ತೇಜೋರೂಪನೂ, ಸಮಸ್ತ ದೇವವಂದ್ಯನೂ, ಆಧಾರವಿಲ್ಲದೆ ತಿರುಗುವವನೂ, ಕಾಲಪ್ರಮಾಣಕ್ಕೆ ಕಾರಣನೂ ಆದ ಭಾಸ್ಕರನನ್ನು ಕಂಡನು. ಹಾಗೆಯೇ ದಿಗಂಬರನೂ, ಸುತ್ತಲೂ ಕಲ್ಲಿನಿಂದ ಮುಚ್ಚಲ್ಪಟ್ಟವನೂ, ಮುದುಕನ ಆಕಾರವುಳ್ಳವನೂ, ಸರ್ವಜ್ಞನೂ, ಗುಣಗಳಿಂದ

ಬುದ್ಧರೂಪಾಕೃತಿಂ ದೇವಂ ಸರ್ವಜ್ಞಂ ಗುಣಭೂಷಿತಂ ।
ಕೃಶಾಂಗಂ ಜಟಿಲಂ ಸೌಮ್ಯಂ ವ್ಯೋಮಮಾರ್ಗೇ ಸ್ವಯಂ ಸ್ಥಿತಂ ॥ ೪೧ ॥

ಶ್ರೀ ಶಿವ ಉವಾಚ :—

ಶೃಣು ವಾಮನ ತುಷ್ಟೋಽಹಂ ದಾಸ್ಯೇ ತೇ ವಿವಿಧಾನ್ವರಾನ್ ।
ತ್ರೈಲೋಕ್ಯವ್ಯಾಪಿನೀ ವೃದ್ಧಿಃ ಭವಿಷ್ಯತಿ ನ ಸಂಶಯಃ ॥ ೪೨ ॥
ಪ್ರತಿಭಾಸ್ಯಂತಿ ತೇ ವೇದಾ ಗೀತನೃತ್ಯಾದಿಕಂ ಚ ಯತ್ ।
ಅಸಾಧ್ಯಸಾಧನೀ ಶಕ್ತಿರ್ಭವಿಷ್ಯತಿ ತವ ಸ್ಥಿರಾ ।
ಪದಂ ವಸ್ತ್ರಾಪಥೇ ಗತ್ವಾ ಕುರು ತೀರ್ಥಾವಲೋಕನಂ ॥ ೪೩ ॥

ವಾಮನ ಉವಾಚ :—

ವಸ್ತ್ರಾಪಥೇ ಮಹಾದೇವ ಯಾನಿ ತೀರ್ಥಾನಿ ತಾನಿ ಮೇ ।
ವದ ದೇವ ವಿಶೇಷೇಣ ಯದ್ಯಸ್ತಿ ಕರುಣಾ ಮಯಿ ॥ ೪೪ ॥

ರುದ್ರ ಉವಾಚ :—

ವಸ್ತ್ರಾಪಥಸ್ಯ ವಾಯವ್ಯೇ ಕೋಣೇ ದಿವ್ಯಂ ಸರೋವರಂ ।
ತಸ್ಯ ಪಶ್ಚಿಮದಿಗ್ಭಾಗೇ ಜಾಲಿರ್ಗಹನಪಲ್ಲವಾ ॥ ೪೫ ॥
ಬಿಲ್ವವೃಕ್ಷಮಯೀ ಮಧ್ಯೇ ಲಿಂಗಂ ತತ್ರಾಸ್ತಿ ಮೃಣ್ಮಯಂ ।
ಯತ್ರಾಸೌ ಲುಬ್ಧಕಃ ಸಿದ್ಧೋ ಗತೋ ಮಮ ಪುರೇ ಪುರಾ ॥ ೪೬ ॥

---

ಅಲಂಕಾರಗೊಂಡವನೂ, ಕೃಶಾಂಗನೂ, ಜಟಾಧಾರಿಯೂ, ಶಾಂತನೂ, ಆಕಾಶದಲ್ಲಿ ನೆಲೆಸಿರುವವನೂ ಆದ ಶಂಕರನನ್ನೂ ಕಂಡನು.

೪೨. ಶ್ರೀ ಶಿವನು ಹೇಳುತ್ತಾನೆ :—ವಾಮನ! ಕೇಳು. ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನಗೆ ವಿವಿಧ ವರವನ್ನೀಯುವೆನು. ನೀನು ಮೂರುಲೋಕಗಳನ್ನು ವ್ಯಾಪಿಸುವಷ್ಟು ಬೆಳೆಯುವೆ.

೪೩. ನಿನಗೆ ವೇದಗಳೂ, ಗೀತನೃತ್ಯಾದಿಗಳೂ, ಅಸಾಧ್ಯವಾದುದನ್ನು ಸಾಧಿಸುವ ಶಕ್ತಿಯೂ ಸಿದ್ಧಿಸುವುವು. ಆದರೆ ವಸ್ತ್ರಾಪಥಕ್ಷೇತ್ರಕ್ಕೆ ಹೋಗಿ ಅಲ್ಲಿರುವ ತೀರ್ಥವನ್ನು ದರ್ಶನಮಾಡು.

೪೪. ವಾಮನನು ಹೇಳುತ್ತಾನೆ :—ಸ್ವಾಮಿ ! ನೀನು ನನ್ನಲ್ಲಿ ಕರುಣೆಯುಳ್ಳವನಾದರೆ ವಸ್ತ್ರಾಪಥದಲ್ಲಿರುವ ತೀರ್ಥಗಳನ್ನು ನನಗೆ ಹೇಳು.

೪೫-೪೬. ರುದ್ರನು ಹೇಳುತ್ತಾನೆ :—ವಸ್ತ್ರಾಪಥದ ವಾಯವ್ಯ ಮೂಲೆಯಲ್ಲಿ ದಿವ್ಯ ಸರೋವರವೂ, ಅದರ ಪಶ್ಚಿಮ ಭಾಗದಲ್ಲಿ ಎಲೆಗಳಿಂದ ಗಹನವಾದ ಬಿಲ್ವವೃಕ್ಷಗಳ ಪೊದೆಯೂ, ಅದರ ನಡುವೆ ಮಣ್ಣಿನ ಲಿಂಗವೂ ಇವೆ. ಅಲ್ಲಿ ಹಿಂದೆ ಒಬ್ಬ ಬೇಡನು ಸಿದ್ಧನಾಗಿ ನನ್ನ ಪಟ್ಟಣಕ್ಕೆ ತೆರಳಿರುವನು.

ತಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ ।
ಇಂದ್ರೋ ವೈ ವೃತ್ರಹಾ ಯಸ್ಮಿನ್ವಿಮುಕ್ತೋ ಬ್ರಹ್ಮಹತ್ಯಯಾ ॥ ೪೭ ॥
ತಸ್ಮಾದುತ್ತರದಿಗ್ಭಾಗೇ ಧನದೇನ ಪ್ರತಿಷ್ಠಿತಂ ।
ಲಿಂಗಂ ತ್ರೈಲೋಕ್ಯವಿಖ್ಯಾತಂ ತತ್ರ ದೇವೀ ತ್ರಿಶೂಲಿನೀ ॥ ೪೮ ॥
ಯಸ್ಯಾ ದರ್ಶನಮಾತ್ರೇಣ ಪುತ್ರೋಽಸ್ಯ ನಲಕೂಬರಃ ॥
ಪಾಶಾನುಷಕ್ತಹಸ್ತೋಽಭೂದ್ದೇವಂ ಚಕ್ರೇ ತ್ರಿಶೂಲಿನಂ ॥ ೪೯ ॥
ಭವಸ್ಯ ನೈರ್ಋತೇ ಕೋಣೇ ಗಣೋ ಹೇರಂಬಸಂಜ್ಞಿತಃ ।
ಯಮೇನ ಕುರ್ವತಾ ಲಿಂಗಂ ಪ್ರಥಮಂ ಚ ಪ್ರತಿಷ್ಠಿತಃ ॥ ೫೦ ॥
ವಿಚಿತ್ರಂ ತಸ್ಯಂ ಮಹಾತ್ಮ್ಯಂ ಚಿತ್ರಗುಪ್ತೋಽತಿವಿಸ್ಮಿತಃ ।
ದೃಷ್ಟ್ವಾ ಸಮಾಗತೋ ದ್ರಷ್ಟುಂ ದೇವಂ ತಂ ಮೃಣ್ಮಯಂ ಪುರಾ ॥ ೫೧ ॥
ತೇನಾಪಿ ನಿರ್ಮಿತಂ ಲಿಂಗಂ ತಸ್ಮಿನ್ ಕ್ಷೇತ್ರೇ ದ್ವಿಜೋತ್ತಮ।
ಚಿತ್ರಗುಪ್ತೇಶ್ವರಂ ನಾಮ ವಿಖ್ಯಾತಂ ಭುವನತ್ರಯೇ ॥ ೫೨ ॥
ಪಶ್ಚಿಮೇನ ಚಕಾರೋಚ್ಚೈಃ ಪ್ರಜಾಪತಿರುರಾಧೀಃ ।
ಕೇದಾರಾಖ್ಯಂ ತದಾ ಲಿಂಗಂ ಗಿರೌ ರೈವತಕೇ ಸ್ಥಿತಂ ॥
ಪ್ರಜಾಪತಿಃ ಸ್ವಯಂ ತಸ್ಥೌ ತತ್ರ ಪರ್ವತಸಾನುನಿ ॥ ೫೩ ॥

---

೪೭. ಆವನ ದರ್ಶನದಿಂದಲೇ ಬ್ರಹ್ಮಹತ್ಯೆಯು ಪರಿಹಾರವಾಗುವುದು. ವೃತ್ರಾಸುರನನ್ನು ಕೊಂದ ದೇವೇಂದ್ರನು ಅಲ್ಲಿ ಬ್ರಹ್ಮಹತ್ಯೆಯಿಂದ ಮುಕ್ತನಾಗಿರುವನು.

೪೮. ಅದರ ಉತ್ತರದಿಕ್ಕಿನಲ್ಲಿ ಕುಬೇರನು ಪ್ರತಿಷ್ಠೆ ಮಾಡಿರುವ ತ್ರಿಭುವನ ಪ್ರಸಿದ್ಧವಾದ ತ್ರಿಶೂಲವನ್ನು ಧರಿಸಿದ ದೇವಿಯ ಲಿಂಗ ವಿರುವುದು.

೪೯. ಈ ಕುಬೇರನ ಮಗನಾದ ಪಾಶಗಳಿಂದ ಸಂಬದ್ಧವಾದ ಕೈಯುಳ್ಳ ನಳಕೂಬರನು ಆ ದೇವಿಯ ದರ್ಶನವನ್ನು ಮಾಡಿ ಆ ಲಿಂಗವನ್ನು ತ್ರಿಶೂಲವನ್ನೂ ಧರಿಸಿದ ಶಿವಲಿಂಗವನ್ನಾಗಿ ಮಾಡಿದನು.

೫೦. ಆ ಭವನ ನೈಋತ್ಯ ದಿಕ್ಕಿನಲ್ಲಿ ಲಿಂಗವನ್ನು ನಿರ್ಮಿಸುತ್ತಿದ್ದ ಯಮನು ಹೇರಂಬವೆಂಬ ಲಿಂಗವನ್ನು ಮೊದಲು ಪ್ರತಿಷ್ಠೆ ಮಾಡಿರುವನು.

೫೧-೫೨. ಆ ಲಿಂಗದ ಮಾಹಾತ್ಮ್ಯವು ಅದ್ಭುತವಾದುದು. ಚಿತ್ರಗುಪ್ತನು ಆ ಮಣ್ಣಿನ ಲಿಂಗವನ್ನು ಕಂಡು ಆಶ್ಚರ್ಯಗೊಂಡು ಆ ಕ್ಷೇತ್ರದಲ್ಲಿ ಚಿತ್ರಗುಪ್ತೇಶ್ವರನೆಂದು ಪ್ರಸಿದ್ಧವಾದ ಲಿಂಗವನ್ನು ನಿರ್ಮಿಸಿದನು.

೫೩. ಅದರ ಪಶ್ಚಿಮದಲ್ಲಿ ಉದಾರ ಬುದ್ಧಿಯುಳ್ಳ ಬ್ರಹ್ಮನು ಕೇದಾರವೆಂಬ ಲಿಂಗವನ್ನು ಸ್ಥಾಪಿಸಿ ತಾನು ಆ ಪರ್ವತ ತಪ್ಪಲಿನಲ್ಲಿ ನೆಲೆಸಿದನು.

ರುದ್ರ ಉವಾಚ :—

ಇಂದ್ರೇಶ್ವರಸ್ಯ ಮಾಹಾತ್ಮ್ಯಂ ಕಥಯಿಷ್ಯೇ ಶೃಣುಷ್ವ ತತ್ ।
ಈಶಾನಕೋಣೇ ವಿಖ್ಯಾತಂ ಭವಸ್ಯ ವಿದಿತಂ ಮಮ ॥ ೫೪ ॥

ವಾಮನ ಉವಾಚ :—

ಕಸ್ಮಾದಿಂದ್ರಃ ಸಮಾಯಾತಃ ಕಥಂ ಚಕ್ರೇ ಹರಂ ಹರಿಃ ।
ಕಥಾಂ ಸವಿಸ್ತರಾಮೇತಾಂ ಕಥಯಸ್ವ ಮಮ ಪ್ರಭೋ ॥ ೫೫ ॥

ರುದ್ರ ಉವಾಚ :—

ಲುಬ್ಧಕಸ್ತು ಪುರಾ ಸಿದ್ಧಃ ಶಿವರಾತ್ರಿಪ್ರಜಾಗರಾತ್ ।
ಶಿವಲೋಕೇ ತದಾ ಪ್ರಾಪ್ತಂ ವಿಮಾನಂ ಗಣಸಂಯುತಂ ॥ ೫೬ ॥
ಸರ್ವತ್ರಗಂ ಸುರುಚಿರಂ ದಿವ್ಯಸ್ತ್ರೀಗೀತನಾದಿತಂ ।
ತದಾರುಹ್ಯ ಸಮಾಯಾತೋ ದ್ರಷ್ಟುಂ ತಾಂ ನಗರೀಂ ಹರೇಃ ॥ ೫೭ ॥
ಯಸ್ಯಾಂ ಯುದ್ಧಂ ಸಮಭವದ್ಗಣಾನಾಂ ಯಮಕಿಂಕರೈಃ ।
ಆಗಚ್ಛಮಾನಂ ತಂ ಜ್ಞಾತ್ವಾ ದೇವರಾಜೇನ ಚಿಂತಿತಂ ॥ ೫೮ ॥
ಪೂಜ್ಯೋಽಯಂ ಹರವತ್ಸರ್ವೈಶ್ಚಿತ್ರಗುಪ್ತಯಮಾದಿಭಿಃ ।
ಇಂದ್ರೋ ಗಜಂ ಸಮಾರುಹ್ಯ ಮಹಿಷೇಣ ಯಮೋ ಯತಃ ॥ ೫೯ ॥

---

೫೪. ರುದ್ರನು ಹೇಳುತ್ತಾನೆ :—ವಾಮನ! ನನಗೆ ತಿಳಿದ ಭವನ ಈಶಾನ್ಯ ಮೂಲೆಯಲ್ಲಿರುವ ಇಂದ್ರೇಶ್ವರನ ಮಾಹಾತ್ಮ್ಯವನ್ನು ಹೇಳುವೆನು ಕೇಳು.

೫೫. ವಾಮನನು ಹೇಳುತ್ತಾನೆ :—ಇಂದ್ರನು ಏಕೆ ಬಂದನು ? ಅವನು ಹೇಗೆ ಶಿವನನ್ನು ಪ್ರತಿಷ್ಠೆ ಮಾಡಿದನು ? ಈ ಕಥೆಯನ್ನು ನನಗೆ ವಿಸ್ತಾರವಾಗಿ ಹೇಳು.

೫೬—೫೭. ರುದ್ರನು ಹೇಳುತ್ತಾನೆ:— ಹಿಂದೆ ಬೇಡನೊಬ್ಬನು ಶಿವರಾತ್ರಿಯ ಜಾಗರಣೆಯಿಂದ ಸಿದ್ಧಿಯನ್ನು ಪಡೆದನು. ಅವನು ಗಣಗಳಿಂದ ಕೂಡಿರುವುದೂ, ಸರ್ವತ್ರ ಸಂಚರಿಸುವುದೂ, ಮನೋಹರವೂ, ದಿವ್ಯಸ್ತ್ರೀಯರ ಗಾನದಿಂದ ಶಬ್ದಗೊಂಡದೂ ಆದ ವಿಮಾನವನ್ನೇರಿ ಇಂದ್ರನ ನಗರಿಯನ್ನು ನೋಡಲು ಬಂದನು.

೫೮—೫೯. ಅಲ್ಲಿ ಗಣಗಳಿಗೂ ಯಮಭಟರಿಗೂ ಯುದ್ಧವಾಯಿತು. ದೇವೇಂದ್ರನು ಬರುತ್ತಿರುವ ಆ ಬೇಡನನ್ನು ಕಂಡು ಇವನು ಚಿತ್ರಗುಪ್ತ ಯಮಾದಿಗಳಿಂದ ಶಿವನಂತೆ ಪೂಜ್ಯನಾಗಿರುವನು ಎಂದಾಲೋಚಿಸಿದನು. ತರುವಾಯ ಐರಾವತದಲ್ಲಿ ಕುಳಿತಿರುವ ಇಂದ್ರನೂ, ಮಹಿಷವನ್ನು ಏರಿದ ಯಮನೂ ಒಟ್ಟಿಗೆ ಸೇರಿದರು.

ವಿಧಾಯ ಲೇಖನೀ ಕರ್ಣೇ ಚಿತ್ರಗುಪ್ತೋ ಯಮಾಜ್ಞಯಾ ।
ತತೋ ಹೂತಾ ಗಣಾಸ್ಸರ್ವೇ ಯೇ ನೀತಾ ಧರಣೀತಲಾತ್ ॥ ೬೦ ॥
ನಿಜಾಪರಾಧ ಸಂತಪ್ತಾ ಗತಾಸ್ತೇ ದಕ್ಷಿಣಾಮುಖಂ ।
ಆತಿಥ್ಯಪೂಜಾ ಕರ್ತವ್ಯಾ ಲುಬ್ಧಕೇ ಗೃಹಮಾಗತೇ ॥ ೬೧ ॥
ಅಪೂಜಿತೇ ಗತೇ ಹ್ಯಸ್ಮಿನ್ಹರೋ ಮಾಂ ಶಪಯಿಷ್ಯತಿ ।
ತಸ್ಮಾತ್ಪೂಜಾಂ ಕರಿಷ್ಯಾಮಿ ಯಥಾ ತುಷ್ಯತಿ ಶಂಕರಃ ॥ ೬೨ ॥
ದೇವಂ ದ್ರಷ್ಟುಂ ಸಮಾಯಾತಂ ದದರ್ಶಾದೂರತಃ ಸ್ಥಿತಂ ।
ವಿಮಾನಸ್ಥಂ ಹರಾಕಾರಂ ಸೂರ್ಯಕೋಟಿಸಮಪ್ರಭಂ ॥ ೬೩ ॥
ಸಂಸ್ತೂಯಮಾನಂ ಚರಿತೈಃ ಶಿವರಾತ್ರೇಃ ಶಿವಸ್ಯ ಚ ।
ಮಾಘೇ ಮಾಸೇ ಚತುರ್ದಶ್ಯಾಂ ಕೃಷ್ಣಾಯಾಂ ಜಾಗರೇ ಕೃತೇ ॥ ೬೪ ॥
ತದೇವಂ ಜಾಯತೇ ಸರ್ವಂ ಸುರೇಶ್ವರ ಧರಾತಲೇ ।
ಏವಂ ದೇವಾಂಗನಾ ಕಾಚಿದಾಚಕ್ಷಂತೀ ಪುರಂದರಂ ।
ನಿವಾರ್ಯ ಹಸ್ತಮುದ್ಯಮ್ಯ ಗಜೇಂದ್ರಂ ಚಾರುಲೋಚನಾ ॥ ೬೫ ॥
ಕಿಂ ದಾನೈರ್ಬಹುಭಿರ್ದತ್ತೈರ್ವ್ರತೈಃ ಕಿಂ ಕಿಂ ಸುರಾರ್ಚನೈಃ ।
ಕಿಂ ಯೋಗೈಃ ಕಿಂ ತಪೋಭಿಶ್ಚ ಬ್ರಹ್ಮಚರ್ಯೈಃ ಸುರೇಶ್ವರ ॥ ೬೬ ॥

---

೬೦. ಚಿತ್ರಗುಪ್ತನು ಯಮನ ಅಪ್ಪಣೆಯಂತೆ ಲೇಖನಿಯನ್ನು ಕಿವಿಯಲ್ಲಿಟ್ಟು ಕೊಂಡು ಭೂಮಿಯಿಂದ ಲುಬ್ಧಕನನ್ನು ಕರೆತಂದ ಗಣಗಳನ್ನು ಕರೆಯಿಸಿದನು.

೬೧-೬೨. ಅವರೆಲ್ಲ ತಮ್ಮ ಅಪರಾಧದಿಂದ ವ್ಯಥೆಗೊಂಡು ದಕ್ಷಿಣಾಭಿಮುಖ ವಾಗಿ ಹೋದರು. ಇಂದ್ರನು, "ಲುಬ್ಧಕನು ಮನೆಗೆ ಬಂದರೆ ಆತಿಥ್ಯವನ್ನು ಮಾಡಬೇಕು. ಇವನನ್ನು ಪೂಜಿಸದೆ ನಾನು ಕಳುಹಿಸಿದರೆ ಹರನು ಸಿಟ್ಟಾಗಿ ನನ್ನನ್ನು ಶಪಿಸುವನು. ಆದ್ದರಿಂದ ಶಂಕರನ ಸಂತೋಷಕ್ಕಾಗಿ ಇವನನ್ನು ಪೂಜಿಸುವೆನು".

೬೩-೭೦. ಹೀಗೆ ಆಲೋಚಿಸುತ್ತ ಆ ಇಂದ್ರನು ಶಂಕರನನ್ನು ನೋಡಲು ವಿಮಾನವನ್ನೇರಿ ಬಂದ ಶಿವನ ಆಕೃತಿಯುಳ್ಳವನೂ, ಅನೇಕ ಕೋಟಿ ಸೂರ್ಯರಂತೆ ಕಾಂತಿಯುಳ್ಳವನೂ, ಶಿವನ ಚರಿತೆಯನ್ನು ಹೊಗಳುತ್ತಿರುವವನೂ ಆದ ಲುಬ್ಧಕನನ್ನು ಕಂಡನು. ಆಗ ಸುಂದರಿಯಾದ ದೇವಾಂಗನೆಯೊಬ್ಬಳು ದೇವೇಂದ್ರನನ್ನು ಕುರಿತು "ಸುರೇಶ್ವರ! ಭೂಮಿಯಲ್ಲಿ ಮಾಘಮಾಸದ ಕೃಷ್ಣ ಚತುರ್ದಶೀ ದಿನ ಜಾಗರಣೆ ಮಾಡಿದರೆ ಮನುಷ್ಯನು ಹೀಗಾಗುವನು" ಎಂದು ಹೇಳುತ್ತ ಕೈಯನ್ನು ಎತ್ತಿ ಐರಾವತವನ್ನು

ಗಯಾಯಾಂ ಪಿಂಡದಾನೇನ ಪ್ರಯಾಗಮರಣೇನ ಕಿಂ ।
ಸೋಮೇಶ್ವರೇ ಸರಸ್ವತ್ಯಾಂ ಸೋಮಪರ್ವಣಿ ಕಿಂ ಗತೈಃ ॥ ೬೭ ॥
ಕುರುಕ್ಷೇತ್ರಗತೈಃ ಕಿಂ ಸ್ಯಾದ್ರಾಹುಗ್ರಸ್ತೇ ದಿವಾಕರೇ ।
ತುಲಾಸುವರ್ಣದಾನೇನ ವೇದಪಾಠೇನ ಕಿಂ ಭವೇತ್ ॥ ೬೮ ॥
ಸರ್ವಪಾಪಕ್ಷಯೋ ಯೇನ ವೃಷೋತ್ಸರ್ಗೇಣ ತೇನ ಕಿಂ ।
ಗೋದಾನಂ ಕಿಂ ಕರೋತ್ಯೇವಂ ಜಲದಾನಂ ತಥೈವ ಚ ॥ ೬೯ ॥
ಅಯನೇ ವಿಷುವೇ ಚೈವ ಸಂಕ್ರಾಂತೌ ಕೀದೃಶಂ ಫಲಂ ।
ಮಾಘಮಾಸೇ ಚತುರ್ದಶ್ಯಾಂ ಯಾದೃಶಂ ಜಾಗರೇ ಕೃತೇ ॥ ೭೦ ॥
ಯಮಃ ಸಂಭಾಷತೇ ವಾಣ್ಯಾ ಮಹಿಷೋಪರಿ ಸಂಸ್ಥಿತಃ ।
ಪಶ್ಯ ರುದ್ರಸ್ಯ ಮಾಹಾತ್ಮ್ಯಂ ಚಿತ್ರಗುಪ್ತ ವಿಚಾರಯ ॥ ೭೧ ॥
ಅಯಂ ಸ ಲುಬ್ಧಕೋ ಯೇನ ಹರಃ ಸಂಪೂಜಿತಃ ಪುರಾ ।
ಸುರಾಷ್ಟ್ರದೇಶೇ ವಿಖ್ಯಾತಂ ತೀರ್ಥಂ ವಸ್ತ್ರಾಪಥಂ ಶೃಣು ॥ ೭೨ ॥
ಉಜ್ಜಯಂತೋ ಗಿರಿಸ್ತತ್ರ ತಥಾ ರೈವತಕೋ ಗಿರಿಃ ।
ಮಹತೀ ವರ್ತತೇ ಜಾಲಿಸ್ತಯೋರ್ಮಧ್ಯೇ ಮಯಾ ಶ್ರುತಂ ॥ ೭೩ ॥

---

ತಡೆದು ಶಿವರಾತ್ರಿ ಜಾಗರಣೆ ಮಾಡಿದರೆ ಅನೇಕ ದಾನಗಳನ್ನು ಕೊಡುವುದರಿಂದಲೂ, ವ್ರತಗಳಿಂದಲೂ, ದೇವಪೂಜೆಗಳಿಂದಲೂ, ಯೋಗಾಭ್ಯಾಸಗಳಿಂದಲೂ, ತಪಸ್ಸು ಬ್ರಹ್ಮಚರ್ಯೆಗಳಿಂದಲೂ, ಗಂಗೆಯಲ್ಲಿ ಪಿಂಡಪ್ರದಾನ ಮಾಡುವುದರಿಂದಲೂ, ಪ್ರಯಾಗದಲ್ಲಿ ಮೃತನಾಗುವುದರಿಂದಲೂ, ಚಂದ್ರಗ್ರಹಣ ಕಾಲದಲ್ಲಿ ಸೋಮೇಶ್ವರ, ಸರಸ್ವತೀನದಿಗಳಿಗೆ ಹೋಗುವುದರಿಂದಲೂ, ಸೂರ್ಯಗ್ರಹಣ ಕಾಲದಲ್ಲಿ ಕುರುಕ್ಷೇತ್ರ ಗಮನದಿಂದಲೂ, ಸುವರ್ಣತುಲಾಭಾರದಿಂದಲೂ, ವೇದಪಾಠದಿಂದಲೂ, ಸಕಲ ಪಾಪವನ್ನು ಪರಿಹರಿಸುವ ವೃಷೋತ್ಸರ್ಗದಿಂದಲೂ, ಅಯನ ಸಂಕ್ರಾಂತಿ, ಯುಗಾದಿಗಳಲ್ಲಿ ಗೋದಾನ ಜಲದಾನಗಳಿಂದಲೂ ಏನು ಪ್ರಯೋಜನ ?

೭೧. ಯಮನು ಕೋಣನ ಮೇಲೆ ಕುಳಿತುಕೊಂಡು ಚಿತ್ರಗುಪ್ತನನ್ನು ಕುರಿತು ಚಿತ್ರಗುಪ್ತ ! ರುದ್ರನ ಮಾಹಾತ್ಮ್ಯೆಯನ್ನು ನೋಡು ವಿಚಾರಮಾಡು.

೭೨–೭೩. ಈ ಬೇಡನು ಹಿಂದೆ ಶಿವನನ್ನು ಪೂಜಿಸಿರುವನು. ಸುರಾಷ್ಟ್ರದೇಶದಲ್ಲಿ ಪ್ರಸಿದ್ಧವಾದ ವಸ್ತ್ರಾಪಥಕ್ಷೇತ್ರವಿರುವುದು. ಅಲ್ಲಿ ಉಜ್ಜಯಂತ, ರೈವತಕಗಿರಿಗಳೂ, ದೊಡ್ಡ ಪೊದೆಯೂ ಇರುವುವು.

ಮೃಣ್ಮಯಂ ವರ್ತತೇ ಲಿಂಗಂ ರಾತ್ರೌ ಚಾನೇನ ಪೂಜಿತಃ ।
ರಾತ್ರೌ ಜಾಗರಣಂ ಕರ್ತುಂ ಯೇನ ಕಾರ್ಯೇಣ ಚಾಗತಃ ॥ ೨೪ ॥
ತದಸ್ಮಾಭಿಃ ಕಥಂ ವಾಚ್ಯಂ ಸ್ವಯಂ ಜಾನಂತಿ ತೇ ಸುರಾಃ ।
ವರಾಂಗನಾ ವರಂ ದ್ರಷ್ಟುಂ ವರಯಂತಿ ಪರಸ್ಪರಂ ।
ಇಂದ್ರಾವಾಸಾತ್ಸಮಾಯಾತಾ ನಂದನೇ ವೇಗವತ್ತರಾಃ ॥ ೨೫ ॥

ವಿರಂಚಿನಾರಾಯಣಶಂಕರತ್ವಿಷಾ
ದೇಹೇನ ಚಾಗಚ್ಛತಿ ಕೋಽಪಿ ಪೂರುಷಃ ।
ಪುರೀಂ ಸುರೇಶಾಧಿಪತೇರ್ನಿರೀಕ್ಷಿತುಂ
ಭರ್ತಾ ಮಮಾಯಂ ತವ ಚಾಸ್ತಿ ಕಿಂ ಪತಿಃ ॥ ೨೬ ॥
ಮೃದಂಗವೀಣಾಪಟಹಸ್ವರಸ್ತುತೈಃ
ಪ್ರಬೋಧಿತಾಭಿಃ ಸುರರಾಜಮಂದಿರೇ ।
ದೇವೋ ಹರೋಽಯಂ ನ ನರೋ ಹರಾಕೃತಿ
ರ್ದೃಷ್ಟೋಽಂಗನಾಭಿಸ್ತವ ಕಿಂ ಕಿಮಾವಯೋಃ ॥ ೨೭ ॥

---

೨೪. ಈ ಬೇಡನು ರಾತ್ರಿ ಅಲ್ಲಿರುವ ಮಣ್ಣಿನ ಲಿಂಗವನ್ನು ಪೂಜಿಸಿ ಜಾಗರಣೆ ಮಾಡಿದನು.

೨೫. ಅದನ್ನು ನಾವು ಹೇಳಬೇಕಾಗಿಲ್ಲ. ದೇವತೆಗಳೆ ಸ್ವಂತವಾಗಿ ತಿಳಿಯುತ್ತಾರೆ. ಇಂದ್ರಭವನದಿಂದ ಬಂದ ಉತ್ತಮ ಸ್ತ್ರೀಯರು ವೇಗದಿಂದ ಇವನನ್ನು ನಂದನವನದಲ್ಲಿ ವರಿಸುತ್ತಾರೆ.

೨೬. ಅವರು, "ಬ್ರಹ್ಮ ವಿಷ್ಣು ಮಹೇಶ್ವರರಂತೆ ದೇಹಕಾಂತಿಯುಳ್ಳ ಒಬ್ಬ ಮನುಷ್ಯನು ಇಂದ್ರನ ಪಟ್ಟಣವನ್ನು ನೋಡಲು ಬರುವನು. ಇವನು ನನ್ನ ಪತಿಯು, ನಿನಗೆ ಪತಿಯಿರುವನಷ್ಟೆ? " ಎನ್ನುವರು.

೨೭. ಇಂದ್ರನ ಮನೆಯಲ್ಲಿ ಮೃದಂಗ, ವೀಣೆ, ತಮಟೆಗಳ ಧ್ವನಿಯಿಂದ ಎಚ್ಚರಗೊಂಡ ಆ ಸ್ತ್ರೀಯರು ಶಿವನ ಆಕಾರವುಳ್ಳ ಇವನನ್ನು ನೋಡಿದರು. ನಮ್ಮಿಬ್ಬರಿಗೆ ಅವನಿಂದೇನು ಪ್ರಯೋಜನ ?

ಗಾಯಂತಿ ಕಾಶ್ಚಿದ್ವಿಹಸಂತಿ ಕಾಶ್ಚಿ-
ನ್ನೃತ್ಯಂತಿ ಕಾಶ್ಚಿತ್ಪ್ರಪಠಂತಿ ಕಾಶ್ಚಿತ್ ।
ವಪಂತಿ ಕಾಶ್ಚಿಜ್ಜಯಶಬ್ದಸಂಯುತೈಃ
ವಾಕ್ಯೈರನೇಕೈರ್ಗುರುಸನ್ನಿಧಾನೇ ॥ ೭೮ ॥
ಕಾಚಿಚ್ಛಿವಂ ಸ್ತೌತಿ ಶಿವಾಂ ತಥಾನ್ಯಾ
ಪೃಚ್ಛತ್ಯಥಾನ್ಯಾ ಕಿಮು ಬಿಲ್ವಪತ್ರಾತ್ ।
ಕಿಂ ವೋಪವಾಸೇನ ಫಲಂ ತವೇದಂ
ನಿದ್ರಾಕ್ಷಯೇಣಾಥ ಫಲಂ ತವೈತತ್ ॥ ೭೯ ॥
ತಾಸಾಂ ನಾನಾವಿಧಾ ವಾಚಃ ಶ್ರೂಯಂತೇ ನಂದನೇ ವನೇ ।
ಬ್ರಹ್ಮಲೋಕಾದಿಕಾ ವಾರ್ತಾಃ ಕೃತ್ವಾ ಚ ತದನಂತರಂ ॥ ೮೦ ॥
ದೇವೇಂದ್ರೋ ಲುಬ್ಧಕಂ ಭೂಯೋ ಬಭಾಷೇ ಕೌತುಕಾನ್ವಿತಃ ।
ಕಸ್ಮಿನ್ದೇಶೇ ಗಿರೌ ಜಾಲಿರ್ಲಿಂಗಂ ಯತ್ರಾಸ್ತಿ ದರ್ಶಯ ॥ ೮೧ ॥

ಲುಬ್ಧಕ ಉವಾಚ :—
ಸುರಾಷ್ಟ್ರದೇಶೇ ವಿಖ್ಯಾತೋ ಯಸ್ಮಿನ್ದೇಶೇ ಸರಸ್ವತೀ ।
ಬಾಡವಂ ಶಿರಸಾ ಧೃತ್ವಾ ಪ್ರವಿಷ್ಟಾ ಲವಣೋದಧೌ ॥ ೮೨ ॥

---

೭೮. ಕೆಲವು ಸುರಾಂಗನೆಯರು ಹಾಡುವರು, ಕೆಲವರು, ನಗುವರು. ಕೆಲವರು ಕುಣಿಯುವರು, ಕೆಲವರು ಪಠಿಸುವರು, ಕೆಲವರು ಗುರುವಿನ ಬಳಿ ಜಯಶಬ್ದವುಳ್ಳ ಅನೇಕ ವಾಕ್ಯಗಳಿಂದ ಮಾತಾಡುವರು.

೭೯. ಒಬ್ಬಳು ಶಿವನನ್ನು ಸ್ತುತಿಸುವಳು. ಮತ್ತೊಬ್ಬಳು ಪಾರ್ವತಿಯನ್ನು ಸ್ತುತಿಸುವಳು. ಮತ್ತೊಬ್ಬಳು, "ನಿನಗೀ ಫಲವು ಬಿಲ್ವಪತ್ರೆಯಿಂದಲೊ? ಉಪವಾಸ ದಿಂದಲೊ? ಅಥವಾ ಜಾಗರಣೆಯಿಂದಲೊ? ಯಾವುದರಿಂದ ಉಂಟಾಯಿತು?" ಎಂದು ಕೇಳುವಳು.

೮೦–೮೧. ಹೀಗೆ ನಂದನವನದಲ್ಲಿ ಸುರಾಂಗನೆಯರ ಅನೇಕ ಬಗೆಯ ಮಾತುಗಳು ಕೇಳಿಸುವುವು. ದೇವೇಂದ್ರನು ಬ್ರಹ್ಮಲೋಕ ಮೊದಲಾದುವುಗಳ ಸಮಾಚಾರವನ್ನು ಕೇಳಿ ಅನಂತರ ಲುಬ್ಧಕನನ್ನು ಕುರಿತು ಕುತೂಹಲದಿಂದ, "ಆ ಪೊದೆಯು ಯಾವ ದೇಶದಲ್ಲಿರುವುದು? ಲಿಂಗವು ಎಲ್ಲಿರುವುದು? ಆ ಲಿಂಗವನ್ನು ನನಗೆ ತೋರಿಸು". ಎಂದು ಕೇಳಿದನು.

೮೨. ಲುಬ್ಧಕನು ಹೇಳುತ್ತಾನೆ :— ಸುರಾಷ್ಟ್ರವೆಂಬ ಪ್ರಸಿದ್ಧ ದೇಶವಿರುವುದು. ಅಲ್ಲಿ ಸರಸ್ವತಿಯು ವಾಡವಾಗ್ನಿಯನ್ನು ತಲೆಯಲ್ಲಿ ಹೊತ್ತುಕೊಂಡು ಲವಣ ಸಮುದ್ರವನ್ನು ಹೊಕ್ಕಳು.

ಯತ್ರ ಸಾ ಗೋಮತೀ ಯಾತಿ ಯತ್ರಾಸ್ತೇ ಗಂಧಮಾದನಃ ।
ಉಜ್ಜಯಂತೋ ಗಿರಿವರೋ ಯತ್ರ ರೈವತಕೋ ಗಿರಿಃ ॥ ೮೩ ॥
ತತ್ರ ವಸ್ತ್ರಾಪಥಂ ಕ್ಷೇತ್ರಂ ಭವಸ್ತತ್ರ ವ್ಯವಸ್ಥಿತಃ ।
ತತ್ರಾಸ್ತೇ ಮೃಣ್ಮಯಂ ಲಿಂಗಂ ಜಾಲಿಮಧ್ಯೇ ಸುರೋತ್ತಮ ॥ ೮೪ ॥

ಇಂದ್ರ ಉವಾಚ :—

ಸಹಿತೈಸ್ತತ್ರ ಗಂತವ್ಯಂ ಪೂಜಿಯಿಷ್ಯೇ ಭವಂ ಸ್ವಯಂ ।
ಜಾಲಿಮಧ್ಯೇ ತಥಾ ಲಿಂಗಂ ದರ್ಶಯಸ್ವ ಚ ಲುಬ್ಧಕ ॥ ೮೫ ॥
ಪರದಾರಾದಿಕಂ ಪಾಪಂ ದೈತ್ಯಾನಾಂ ತು ವಿಕೃಂತನೇ ।
ವಧೇ ವೃತ್ರಸ್ಯ ಸಂಜಾತಂ ತತ್ಸರ್ವಂ ಕ್ಷಾಲಯಾಮ್ಯಹಂ ॥ ೮೬ ॥
ಇತ್ಯುಕ್ತ್ವಾ ಸಹಿತಾಸ್ಸರ್ವೇ ಸಂಪ್ರಾಪ್ತಾ ಗಿರಿಮೂರ್ಧನಿ ।
ವಾಹನಾನಿ ಚ ತೇ ತ್ಯಕ್ತ್ವಾ ಪ್ರಸ್ಥಿತಾಃ ಪಾದಚಾರಿಣಃ ॥ ೮೭ ॥
ಉಜ್ಜಯಂತಗಿರೇರ್ಮೂರ್ಧ್ನಿ ಗಜರಾಜಸ್ಸಮಾಗತಃ ।
ತದಾಗ್ರಚರಣಂ ತಸ್ಯ ದದೌ ಮೂರ್ಧನಿ ಕಾರಣಾತ್ ॥ ೮೮ ॥
ತೇನಾಕ್ರಾಂತೋ ಗಿರಿವರಸ್ತೋಯಂ ಸುಸ್ರಾವ ನಿರ್ಮಲಂ ।
ಗಜಪಾದೋದ್ಭವಂ ವಾರಿ ಭವಿಷ್ಯತಿ ಸದಾ ಸ್ಥಿರಂ ॥ ೮೯ ॥

---

೮೩–೮೪. ಅಲ್ಲಿ ಗೋಮತೀನದಿಯೂ ಗಂಧಮಾದನ, ಉಜ್ಜಯಂತ, ರೈವತಕ ಪರ್ವತಗಳೂ, ವಸ್ತ್ರಾಪಥಕ್ಷೇತ್ರವೂ ಇರುವುವು. ಭವನೂ ನೆಲೆಸಿರುವನು. ಅಲ್ಲಿ ಜಾಲಿಯ ಮಧ್ಯದಲ್ಲಿ ಮಣ್ಣಿನ ಲಿಂಗವೂ ಇರುವುದು.

೮೫. ಇಂದ್ರನು ಹೇಳುತ್ತಾನೆ :—ಬೇಡನೆ ! ನಾವು ಎಲ್ಲರೂ ಒಟ್ಟುಗೂಡಿ ಅಲ್ಲಿಗೆ ಹೋಗೋಣ. ನಾನು ಸ್ವತಂತ್ರವಾಗಿ ಶಿವನನ್ನಾರಾಧಿಸುವೆನು. ಜಾಲಿಯ ನಡುವೆ ಇರುವ ಲಿಂಗವನ್ನು ನನಗೆ ತೋರಿಸು.

೮೬. ನನಗೆ ಪರದಾರಗಮನ ದೋಷವೂ, ದೈತ್ಯರನ್ನೂ, ವೃತ್ರನನ್ನೂ ಕೊಂದು ದರಿಂದ ಪಾಪವೂ ಉಂಟಾಗಿರುವುದು. ಅದನ್ನು ಪರಿಹರಿಸಿಕೊಳ್ಳುವೆನು.

೮೭. ಹೀಗೆಂದು ಅವರೆಲ್ಲ ತಮ್ಮ ವಾಹನಗಳನ್ನು ತ್ಯಜಿಸಿ ಪಾದಚಾರಿಗಳಾಗಿ ರೈವತಗಿರಿಯ ಶಿಖರಕ್ಕೆ ಬಂದರು.

೮೮–೯೦. ಐರಾವತವು ಉಜ್ಜಯಂತರಿಗೆ ಬಂದು ತನ್ನ ಕಾಲಿನ ತುದಿಯನ್ನು ಅಪ್ಪಳಿಸಲು ಅದರಿಂದ ಆ ಪರ್ವತದಿಂದ ನೀರು ಸುರಿಯಿತು. ಆಗ ಆನೆಯ ಪಾದ

ಇತಿ ಪ್ರೋಕ್ತಂ ಸುರೇಂದ್ರೇಣ ಲೋಕಾನಾಂ ಹಿತಕಾಮ್ಯಯಾ ।
ಸರ್ವೇ ಸಮಾಗತಾಸ್ತತ್ರ ಯತ್ರ ಜಾಲಿರ್ವ್ಯವಸ್ಥಿತಾ ॥ ೯೦ ॥
ಸಂಪೂಜ್ಯ ವಿವಿಧೈಃ ಪುಷ್ಪೈರ್ಮಾಘಮಾಸೇ ಚತುರ್ದಶೀ ।
ತಸ್ಯಾಂ ಜಾಗರಣಂ ಕೃತ್ವಾ ಸಂಜಾತೋ ನಿರ್ಮಲೋ ಹರಿಃ ॥ ೯೧ ॥
ವಸ್ತ್ರಾಪಥೇ ಭವಂ ಪೂಜ್ಯ ಹರಿಂ ರೈವತಕೇ ಗಿರೌ ।
ಇಂದ್ರೇಶ್ವರಂ ಪ್ರತಿಷ್ಠಾಪ್ಯ ಸಂಪ್ರಾಪ್ತಃ ಸ್ವನಿಕೇತನಂ ॥ ೯೨ ॥
ಲುಬ್ಧಕೋಽಪಿ ವಿಮಾನೇನ ಸಂಪ್ರಾಪ್ತೋ ಹರಿಮಂದಿರೇ ।
ಇತ್ಯುಕ್ತ್ವಾ ಸ ಭವೋ ದೇವಸ್ತತ್ರೈವಾಂತರಧೀಯತ ॥ ೯೩ ॥
ವಾಮನೋಽಪಿ ತತಶ್ಚಕ್ರೇ ತತ್ರ ತೀರ್ಥಾವಗಾಹನಂ ।
ಯಾದೃಗ್ರೂಪಃ ಶಿವೋ ದೃಷ್ಟಃ ಸೂರ್ಯಬಿಂಬೇ ದಿಗಂಬರಃ ॥ ೯೪ ॥
ಪದ್ಮಾಸನಸ್ಥಿತಃ ಸೌಮ್ಯಸ್ತಥಾ ತಂ ತತ್ರ ಸಂಸ್ಮರನ್ ।
ಪ್ರತಿಷ್ಠಾಪ್ಯ ಮಹಾಮೂರ್ತಿಂ ಪೂಜಯಾಮಾಸ ವಾಸರಂ ॥ ೯೫ ॥
ಮನೋಽಭೀಷ್ಟಾರ್ಥಸಿಧ್ಯರ್ಥ್ಯಂ ತತಸ್ಸಿದ್ಧಿಮವಾಪ್ತವಾನ್ ।
ನೇಮಿನಾಥಶಿವೇತ್ಯೇವಂ ನಾಮ ಚಕ್ರೇ ಸ ವಾಮನಃ ॥ ೯೬ ॥

---

ದಿಂದುಂಟಾದ ಈ ನೀರು ಯಾವಾಗಲೂ ಸ್ಥಿರವಾಗಿರುವುದು ಎಂದು ಸುರರಾಜನು ಲೋಕಕ್ಕೆ ಹಿತವನ್ನುಂಟುಮಾಡಲು ಹೇಳಲು ಅವರೆಲ್ಲ ಆ ಜಾಲಿಯೆಡೆಗೆ ಬಂದರು.

೯೧. ಅಲ್ಲಿ ಇಂದ್ರನು ಮಾಘಮಾಸದ ಚತುರ್ದಶೀ ದಿನ ವಿವಿಧ ಪುಷ್ಪಗಳಿಂದ ಆ ಲಿಂಗವನ್ನು ಪೂಜಿಸಿ ರಾತ್ರಿ ಜಾಗರಣೆ ಮಾಡಿ ಶುದ್ಧನಾದನು.

೯೨. ಹಾಗೆಯೇ ಅವನು ವಸ್ತ್ರಾಪಥದಲ್ಲಿರುವ ಭವನನ್ನೂ, ರೈವತಕಪರ್ವತ ದಲ್ಲಿರುವ ಹರಿಯನ್ನೂ, ಪೂಜಿಸಿ ಇಂದ್ರೇಶ್ವರನನ್ನು ಪ್ರತಿಷ್ಠೆಮಾಡಿ ತನ್ನ ಮನೆಗೆ ಬಂದನು.

೯೩. ಬೇಡನೂ ವಿಮಾನದಿಂದ ಇಂದ್ರಾಲಯವನ್ನು ಸೇರಿದನು. ಮಹೇಶ್ವರನು ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನವಾದನು.

೯೪–೯೬. ಬಳಿಕ ವಾಮನನೂ ಅಲ್ಲಿ ತೀರ್ಥಸ್ನಾನಮಾಡಿ ತಾನು ಸೂರ್ಯಬಿಂಬ ದಲ್ಲಿ ನೋಡಿದ ದಿಗಂಬರನೂ, ಪದ್ಮಾಸನದಲ್ಲಿ ಕುಳಿತಿರುವವನೂ, ಸೌಮ್ಯನೂ ಆದ ಶಿವನನ್ನು ಸ್ಮರಿಸುತ್ತ ಮಹಾಲಿಂಗವನ್ನು ಪ್ರತಿಷ್ಠೆಮಾಡಿ ಒಂದು ದಿನ ಇಷ್ಟಸಿದ್ಧಿಗಾಗಿ ಅವನನ್ನು ಪೂಜಿಸಿದನು. ಆದರಿಂದ ಸಿದ್ಧಿಯನ್ನು ಪಡೆದು ನೇಮಿನಾಥ ಶಿವನೆಂದು ಅವನಿಗೆ ನಾಮಕರಣ ಮಾಡಿದನು.

ಭವಸ್ಯ ಪಶ್ಚಿಮೇ ಭಾಗೇ ಪ್ರತ್ಯಾಸನ್ನೇ ಧರಾತಲೇ ।
ವಾಮನೋ ವಸತಿಂ ಚಕ್ರೇ ತೀರ್ಥೇ ವಸ್ತ್ರಾಪಥೇ ತದಾ ॥ ೯೭ ॥
ಅತೋ ಯವಾಧಿಕಂ ಪ್ರೋಕ್ತಂ ತೀರ್ಥಂ ದೈವೈಸ್ಸವಾಸವೈಃ ।
ಇಂದ್ರೇಣ ಕುರ್ವತಾ ದೇವಂ ಸಮಾಗತ್ಯ ಭವಾಗ್ರತಃ ॥ ೯೮ ॥
ಯವಾಧಿಕಂ ಪ್ರಭಾಸಾತ್ತು ತೀರ್ಥಮೇತದ್ಭವಾಜ್ಞಯಾ ।
ಅನ್ಯೇಷಾಂ ಷಡ್ಗುಣಂ ತೀರ್ಥಂ ಭವಿಷ್ಯತಿ ಶಿವಾಜ್ಞಯಾ ॥ ೯೯ ॥
ಇತ್ಯೇತಕ್ಕಥಿತಂ ಸರ್ವಂ ಕಿಮನ್ಯತ್ಪರಿಪೃಚ್ಛಸಿ ॥ ೧೦೦ ॥

ರಾಜೋವಾಚ :—

ಶಿವರಾತ್ರಿಪ್ರಭಾವೋಽಯಮತುಲಃ ಪರಿಕೀರ್ತಿತಃ ।
ಅಜಾನತಾ ಕೃತಾ ತೇನ ಲುಬ್ಧಕೇನ ಪುರಾ ಶ್ರುತಂ ॥ ೧೦೧ ॥
ಇದಾನೀಂ ವದ ಕರ್ತವ್ಯಂ ಕಥಮನ್ಯೈರ್ಜನೈರ್ವಿಭೋ ।
ಕಿಂ ಗ್ರಾಹ್ಯಂ ಕಿಂ ನು ಮೋಕ್ತವ್ಯಂ ಶಿವರಾತ್ರ್ಯಾಂ ವದಸ್ವ ಮೇ ॥ ೧೦೨ ॥

---

೯೭. ವಾಮನನು ವಸ್ತ್ರಾಪಥಕ್ಷೇತ್ರದಲ್ಲಿ ಭವನ ಪಶ್ಚಿಮದಲ್ಲಿರುವ ಸಮೀಪದ ಭೂಮಿಯಲ್ಲಿ ವಾಸಮಾಡಿದನು.

೯೮–೯೯. ಆದ್ದರಿಂದ ಈ ತೀರ್ಥವನ್ನು ಇಂದ್ರನಿಂದ ಸಹಿತರಾದ ದೇವತೆಗಳು ಯವದಷ್ಟು ಅಧಿಕವೆಂದು ಹೇಳುತ್ತಾರೆ. ಇಂದ್ರನು ಇಲ್ಲಿಗೆ ಬಂದು ಭವನ ಮುಂದೆ ಪಾಪಮುಕ್ತನಾದ್ದರಿಂದ ಈ ತೀರ್ಥವು ಶಿವನ ಆಜ್ಞೆಯಿಂದ ಪ್ರಭಾಸಕ್ಕಿಂತ ಯವ ದಷ್ಟು ಅಧಿಕವಾಗಿರುವುದು. ಇತರ ತೀರ್ಥಗಳಿಗಿಂತಲೂ ಆರರಷ್ಟು ಅಧಿಕವಾಗಿ ರುವುದು.

೧೦೦. ಹೀಗೆ ನಿನಗೆ ಎಲ್ಲವನ್ನೂ ಹೇಳಿರುವೆನು. ಬೇರೆ ಏನನ್ನು ಕೇಳುವೆ ?

೧೦೧. ರಾಜನು ಹೇಳುತ್ತಾನೆ :—ಸಾರಸ್ವತ ! ನೀನು ಈ ಶಿವರಾತ್ರಿಯ ಮಾಹಾತ್ಮ್ಯವು ಅಸದೃಶವಾದುದೆಂದು ಹೇಳಿರುವೆ. ಬೇಡನು ಹಿಂದೆ ತಿಳಿಯದೆ ಮಾಡಿದ ಶಿವದರ್ಶನದಿಂದ ಉಂಟಾದ ಫಲವನ್ನೂ ಕೇಳಿದನು.

೧೦೨. ಈಗ ಇತರ ಜನರು ಮಾಡತಕ್ಕ ಕರ್ತವ್ಯವನ್ನು ಹೇಳು. ಶಿವರಾತ್ರಿಯ ದಿನ ಏನನ್ನು ಸ್ವೀಕರಿಸಬೇಕು ? ಏನನ್ನು ಬಿಡಬೇಕು ?

ಸಾರಸ್ವತ ಉವಾಚ :—
ಸಂಪ್ರಾಪ್ಯ ಮಾನುಷಂ ಜನ್ಮ ಜ್ಞಾತ್ವಾ ದೇವಂ ಮಹೇಶ್ವರಂ ।
ಶಿವರಾತ್ರಿಃ ಸದಾ ಕಾರ್ಯಾ ಭುಕ್ತಿಮುಕ್ತಿಪ್ರದಾಯಿನೀ ॥ ೧೦೩ ॥
ಈದೃಶಂ ಜಾಯತೇ ಪುಣ್ಯಂ ಏಕಯಾ ಕೃತಯಾ ನೃಪ ।
ಯೇ ಕುರ್ವಂತಿ ಸದಾ ಮರ್ತ್ಯಾಸ್ತೇಷಾಂ ಪುಣ್ಯಮನಂತಕಂ ॥ ೧೦೪ ॥
ದ್ವಾದಶಾಬ್ದಂ ವ್ರತಮಿದಂ ಕರ್ತವ್ಯಂ ಪ್ರತಿವತ್ಸರಂ ।
ಜೀವಿತಂ ಚಂಚಲಂ ನೄಣಾಂ ಯದಿ ಕರ್ತುಂ ನ ಶಕ್ಯತೇ ॥ ೧೦೫ ॥
ಕದಾ ದ್ವಾದಶಭಿರ್ಮಾಸೈಃ ವ್ರತಮೇತತ್ಸಮಾಪ್ಯತೇ ।
ಮಾಘಮಾಸೇ ಚತುರ್ದಶ್ಯಾಂ ಪ್ರಾರಂಭಃ ಕ್ರಿಯತೇ ನೃಪ । ॥ ೧೦೬ ॥
ಪ್ರತಿಮಾಸಂ ತತಃ ಕಾರ್ಯಂ ಪೌಷಾಂತೇ ತು ಸಮಾಪ್ಯತೇ ॥
ವಿಘ್ನಶ್ಚೇಜ್ಜಾಯತೇ ಮಧ್ಯೇ ಕಥಂಚಿದ್ದೈವಯೋಗತಃ ॥ ೧೦೭ ॥
ನ ಭವೇದ್ವ್ರತಭಂಗಸ್ತು ಪುನಃ ಕಾರ್ಯಮನಂತರಂ ।
ದ್ವಾದಶೈವ ಪ್ರಕರ್ತವ್ಯಾಃ ಕೃತ್ವಾ ಸಂಖ್ಯಾ ವಿಶೇಷತಃ ॥ ೧೦೮ ॥
ಕೃತಂ ನ ಶಕ್ಯತೇ ಲೋಕೇ ಶುಭಂ ವಾ ಯದಿ ವಾ ಶುಭಂ ।
ಕೃಷ್ಣಾಯಾಂ ತು ಚತುರ್ದಶ್ಯಾಂ ಕೃತಪೂರ್ವಾಹ್ಣಿಕಕ್ರಿಯಃ ॥ ೧೦೯ ॥

---

೧೦೩. ಸಾರಸ್ವತನು ಹೇಳುತ್ತಾನೆ :—ಮನುಷ್ಯಜನ್ಮವನ್ನು ಪಡೆದ ಪ್ರಾಣಿಯು ಮಹೇಶ್ವರನನ್ನರಿತು ಯಾವಾಗಲೂ ಭುಕ್ತಿಮುಕ್ತಿಯನ್ನೀಯುವ ಶಿವ ರಾತ್ರಿಯನ್ನಾಚರಿಸಬೇಕು.

೧೦೪ ಮಾನವರು ಯಾವಾಗಲೂ ಈ ಶಿವರಾತ್ರಿಯನ್ನಾಚರಿಸುವುದರಿಂದ ಅನಂತ ಪುಣ್ಯವು ಲಭಿಸುವುದು.

೧೦೫—೧೦೮. ಈ ವ್ರತವನ್ನು ಹನ್ನೆರಡು ವರ್ಷಕಾಲ ಪ್ರತಿವರ್ಷವೂ ಮಾಡ ಬೇಕು. ದೊರೆಯೆ ! ಮಾಘಮಾಸದ ಕೃಷ್ಣ ಚತುರ್ದಶೀ ದಿನ ಇದನ್ನಾರಂಭಿಸಿ ಪ್ರತಿತಿಂಗಳೂ ಅನುಷ್ಠಾನ ಮಾಡಿ ಪುಷ್ಯಮಾಸದ ಅಂತ್ಯದಲ್ಲಿ ಮುಗಿಸಬೇಕು. ಮಧ್ಯ ದಲ್ಲಿ ದೈವಯೋಗದಿಂದ ಏನಾದರೂ ವಿಘ್ನಗಳು ಒದಗಿದರೆ ವ್ರತವು ಕೆಡುವುದಿಲ್ಲ. ಆಮೇಲೆ ಮರಳಿ ಮಾಡಬೇಕು. ಒಟ್ಟಿಗೆ ಹನ್ನೆರಡುಸಾರಿಯೇ ಮಾಡಬೇಕಾಗಿರುವುದು.

೧೦೯—೧೧೦. ಲೋಕದಲ್ಲಿ ಮಾಡಿದ ಶುಭಕರ್ಮವಾಗಲಿ ಅಶುಭಕರ್ಮವಾ ಗಲಿ ಹಾಳಾಗುವುದಿಲ್ಲ. ಮಾನವನು ಕೃಷ್ಣ ಚತುರ್ದಶೀ ದಿನ ಆಹ್ನಿಕವನ್ನು ನೆರವೇರಿಸಿ

ಉಪವಾಸನಿಯಮೋ ಗ್ರಾಹ್ಯೋ ನದ್ಯಾಂ ಸ್ನಾನಂ ವಿಧೀಯತೇ ।
ತದಭಾವೇ ತಡಾಗಾದೌ ಕಾರ್ಯಂ ಸ್ನಾನಂ ಸ್ವಶಕ್ತಿತಃ ॥ ೧೧೦ ॥
ತೈಲಾಭ್ಯಂಗೋ ನ ಕರ್ತವ್ಯೋ ನ ಕಾರ್ಯಂ ಗಮನಂ ಕ್ವಚಿತ್ ।
ತೀರ್ಥಸೇವಾಪ್ರಕರ್ತವ್ಯಾ ತಸ್ಮಿಂಶ್ಚಾಗಮನಂ ಶುಭಂ ॥ ೧೧೧ ॥
ಶಿವರಾತ್ರಿಸ್ಸದಾ ಕಾರ್ಯಾ ಲಿಂಗೇ ಸ್ವಾಯಂಭುವೇ ಸರ್ವೈಃ ।
ತದಭಾವೇ ಮಹಾಪುಣ್ಯೇ ಲಿಂಗೇ ವರ್ಷಶತಾಧಿಕೇ ॥ ೧೧೨ ॥
ಗಿರೌ ವನೇ ಸಮುದ್ರಾಂತೇ ನದ್ಯಾಂ ಯಚ್ಚ ಶಿವಾಲಯೇ ।
ತದ್ವೈ ಸ್ವಾಯಂಭುವಂ ಲಿಂಗಂ ಸ್ವಯಂ ತತ್ರೈವ ಸಂಸ್ಥಿತಂ ॥ ೧೧೩ ॥
ವಾಲುಲಿಂಗಾದಿಕಂ ಲಿಂಗಂ ಪೂಜಿತಂ ಫಲದಂ ಸ್ಮೃತಂ ।
ದಿವಾ ಸಂಪೂಜ್ಯ ಯತ್ನೇನ ಪುಷ್ಪಧೂಪಾದಿನಾ ನರಃ ॥ ೧೧೪ ॥
ವರ್ಜಯೇನ್ಮದಿರಾಂ ದ್ಯೂತಂ ನಾರೀಂ ನಖನಿಕೃಂತನಂ ।
ಬ್ರಹ್ಮಚರ್ಯಪರೈಃ ಶಾಂತೈಃ ಕರ್ತವ್ಯಂ ಸಮುಪೋಷಣಂ ॥ ೧೧೫ ॥
ರಾತ್ರೌ ದೇವಾಗ್ರತೋ ಗತ್ವಾ ಕರ್ತವ್ಯಾಃ ಸಪ್ತ ಪರ್ವತಾಃ ।
ಪಕ್ವಾನ್ನಫಲತಾಂಬೂಲಪುಷ್ಪಧೂಪಾದಿಚರ್ಚಿತಾಃ ॥ ೧೧೬ ॥

---

ಉಪವಾಸಗೈದು ನದಿಯಲ್ಲಿ ಸ್ನಾನಮಾಡಬೇಕು. ಹಾಗೆ ನದಿಯ ಸ್ನಾನವು ಲಭಿಸದಿದ್ದರೆ ಕೆರೆಯಲ್ಲಿ ಸ್ನಾನಮಾಡಬೇಕು.

೧೧೧. ತೈಲಾಭ್ಯಂಗವನ್ನೂ, ಪ್ರಯಾಣವನ್ನೂ ಮಾಡಬಾರದು. ತೀರ್ಥವನ್ನು ಸೇವಿಸಬೇಕು. ಆ ದಿನ ತೀರ್ಥಗಮನವು ಮಂಗಳಕರವಾದುದು.

೧೧೨. ಸ್ವಾಯಂಭುವಲಿಂಗದೆಡೆಯಲ್ಲಿ ಶಿವರಾತ್ರಿವ್ರತವನ್ನಾಚರಿಸಬೇಕು. ಅಂತಹ ಲಿಂಗವು ದೊರೆಯದೆ ಇದ್ದಲ್ಲಿ ಒಂದುನೂರು ವರ್ಷಗಳಿಗಿಂತ ಹೆಚ್ಚುಕಾಲದಿಂದರುವ ಲಿಂಗದ ಹತ್ತಿರವ್ರತವನ್ನಾಚರಿಸಬೇಕು.

೧೧೩–೧೧೫. ಪರ್ವತ, ಕಾಡು, ಸಮುದ್ರದ ದಡ, ನದಿ, ಶಿವಾಲಯ, ಇಲ್ಲಿ ತಾನಾಗಿಯೇ ಉದ್ಭವವಾಗಿರುವ ಲಿಂಗವು ಸ್ವಾಯಂಭುವ ಲಿಂಗವೆನ್ನಿಸಿಕೊಳ್ಳುವುದು. ಮರಳಿನ ಲಿಂಗವನ್ನು ಪೂಜಿಸಿದರೂ ಫಲವು ದೊರೆಯುವುದು. ಹಗಲು ಪುಷ್ಪಧೂಪಾದಿಗಳಿಂದ ಲಿಂಗವನ್ನಾರಾಧಿಸಿ ಮದ್ಯ, ಜೂಜು, ಸ್ತ್ರೀ, ಉಗುರನ್ನು ಕತ್ತರಿಸುವುದು ಇವುಗಳನ್ನು ತ್ಯಜಿಸಬೇಕು. ಬ್ರಹ್ಮಚರ್ಯನಿರತರೂ,ಶಾಂತರೂ ಆಗಿ ಉಪವಾಸ ಮಾಡಬೇಕು.

೧೧೬. ರಾತ್ರಿ ಶಿವನ ಮುಂದೆ ಪಕ್ವಾನ್ನ, ಫಲ, ತಾಂಬೂಲ, ಪುಷ್ಪ, ಧೂಪಗಳಿಂದ ಸಹಿತವಾದ ಏಳು ಗುಡ್ಡೆಗಳನ್ನು ಮಾಡಬೇಕು.

ಘೃತೇನ ದೀಪಃ ಕರ್ತವ್ಯಃ ಪಾಪನಾಶನಹೇತವೇ ।
ಯತೋ ದೀಪಸ್ಯ ಮಾಹಾತ್ಮ್ಯಂ ವಿಜ್ಞೇಯಂ ಮುಕ್ತಿದಾಯಕಂ ॥೧೧೭॥
ದೀಪಸ್ಸದೈವ ಕರ್ತವ್ಯೋ ಗೃಹೇ ದೇವಾಲಯೇ ನರೈಃ ।
ದಿವಾ ನಿಶಿ ಚ ಸಂಧ್ಯಾಯಾಂ ದೀಪಃ ಕಾರ್ಯಃ ಸ್ವಶಕ್ತಿತಃ ॥ ೧೧೮ ॥
ಕಿಂಚಿದುದ್ಯೋತಮಾತ್ರೇಣ ದೇವಾಸ್ತುಷ್ಯಂತಿ ಭೂತಲೇ ।
ಪಿತೄಣಾಂ ಪ್ರಥಮಂ ದೀಪಃ ಕರ್ತವ್ಯಃ ಶ್ರಾದ್ಧಕರ್ಮಣಿ ॥ ೧೧೯ ॥
ರಾತ್ರೌ ಜಾಗರಣಂ ಕಾರ್ಯಂ ಯಥಾ ನಿದ್ರಾ ನ ಜಾಯತೇ ।
ಶಿವರಾತ್ರಿಪ್ರಭಾವೋಽಯಂ ಶ್ರೋತವ್ಯಃ ಶಿವಸನ್ನಿಧೌ ॥ ೧೨೦ ॥
ಶಿವಸ್ಯ ಚರಿತಂ ರಾತ್ರೌ ಶ್ರೋತವ್ಯಂ ಬಹುವಿಸ್ತರಂ ।
ಗೀತಂ ನೃತ್ಯಂ ತಥಾ ವಾದ್ಯಂ ಕರ್ತವ್ಯಂ ಶಿವಸನ್ನಿಧೌ ॥ ೧೨೧ ॥
ಏವಂ ಸಾ ನೀಯತೇ ರಾತ್ರಿರ್ಮುಖ್ಯಂ ಜಾಗರಣಂ ಯತಃ ।
ರಾತ್ರೌ ದೇಯಾನಿ ದಾನಾನಿ ಶಕ್ತ್ಯಾ ವೈ ತತ್ರ ಜಾಗರೇ ॥ ೧೨೨ ॥
ಪುನಃ ಸ್ನಾತ್ವಾ ಪ್ರಭಾತೇ ತು ಕರ್ತವ್ಯಂ ಶಿವಪೂಜನಂ ।
ಪೂಜನೀಯಾಶ್ಚ ಯತಯೋ ಭೋಜನಾಚ್ಛಾದನಾದಿಭಿಃ ॥ ೧೨೩ ॥

---

೧೧೭. ಪಾಪಪರಿಹಾರಕ್ಕಾಗಿ ತುಪ್ಪದಿಂದ ದೀಪವನ್ನು ಹೊತ್ತಿಸಿ ಮುಕ್ತಿಯನ್ನೀಯುವ ಆದರ ಮಾಹಾತ್ಮ್ಯವನ್ನರಿಯಬೇಕು.

೧೧೮. ಮಾನವರು ಗೃಹ, ದೇವಾಲಯಗಳಲ್ಲಿ ಹಗಲು, ಸಂಜೆ, ರಾತ್ರಿ ಕಾಲಗಳಲ್ಲಿ ಶಕ್ತ್ಯನುಸಾರ ದೀಪವನ್ನು ಹೊತ್ತಿಸಬೇಕು.

೧೧೯. ಭೂಮಿಯಲ್ಲಿ ದೀಪವನ್ನು ಸ್ವಲ್ಪ ಪ್ರಕಾಶಗೊಳಿಸುವುದರಿಂದಲೇ ದೇವತೆಗಳು ಸಂತುಷ್ಟರಾಗುವರು. ಶ್ರಾದ್ಧದಲ್ಲಿ ಪಿತೃಗಳಿಗೆ ಮೊದಲು ದೀಪವನ್ನರ್ಪಿಸಬೇಕು.

೧೨೦. ಶಿವನ ಸನ್ನಿಧಿಯಲ್ಲಿ ಶಿವರಾತ್ರಿಯ ದಿನ ರಾತ್ರಿ ನಿದ್ರಿಸದೆ ಜಾಗರಣೆ ಮಾಡಿ ಶಿವರಾತ್ರಿಯ ಮಾಹಾತ್ಮ್ಯೆಯನ್ನು ಕೇಳಬೇಕು.

೧೨೧. ಶಿವನ ಸಮೀಪದಲ್ಲಿ ರಾತ್ರಿ ಅವನ ಚರಿತೆಯನ್ನು ವಿಸ್ತಾರವಾಗಿ ಕೇಳಿ ಗೀತ, ನೃತ್ಯ, ವಾದ್ಯಗಳನ್ನು ಮಾಡಬೇಕು.

೧೨೨. ಹೀಗೆ ಆ ರಾತ್ರಿಯನ್ನು ಕಳೆಯಬೇಕು. ಅದರಲ್ಲಿ ಜಾಗರಣೆಯು ಮುಖ್ಯವಾದುದರಿಂದ ಅದರಲ್ಲಿ ಶಕ್ತ್ಯನುಸಾರ ದಾನಮಾಡಬೇಕು.

೧೨೩. ಬೆಳಗ್ಗೆ ಮರಳಿ ಮಿಂದು ಶಿವನನ್ನು ಪೂಜಿಸಿ ಯತಿಗಳನ್ನು ಭೋಜನ, ಹೊದ್ದಿಕೆ ಮೊದಲಾದುವುಗಳನ್ನಿತ್ತು ಪೂಜಿಸಬೇಕು.

ತಪಸ್ವಿನಾಂ ಪ್ರದಾತವ್ಯಂ ಭೋಜನಂ ಗೃಹಮೇಧಿಭಿಃ ।
ದ್ವಾದಶಾಷ್ಟೌ ಚ ಚತ್ವಾರೋ ಭೋಕ್ತವ್ಯಾ ಏಕ ಏವ ವಾ ॥ ೧೨೪ ॥
ಏಕೋಽಪಿ ಬ್ರಹ್ಮಚಾರೀ ಯೋ ಬ್ರಹ್ಮವಿಚ್ಛಿವಪೂಜಕಃ ।
ಸಹಸ್ರಾಣಾಂ ಸಮೋ ಭಕ್ತ್ಯಾ ಗೃಹೇ ಸಂಭೋಜಿತೋ ಭವೇತ್ ॥ ೧೨೫ ॥
ಅಕ್ಷಾರಾಲವಣಂ ಪತ್ರೇ ಭೋಕ್ತವ್ಯಂ ವಾಗ್ಯತೈಃ ಸ್ವಯಂ ।
ಪುತ್ರಮಿತ್ರಕಲತ್ರಾಣಾಂ ದಾತವ್ಯಂ ಭೋಜನಂ ಪುರಃ ॥ ೧೨೬ ॥
ಅನೇನ ವಿಧಿನಾ ಕಾರ್ಯಾ ಶಿವರಾತ್ರಿಃ ಶಿವವ್ರತೈಃ ।
ದ್ವಾದಶೈತಾ ಯದಾ ಪೂರ್ಣಾಸ್ತಿಲಪಾತ್ರಾಣಿ ವೈ ತದಾ ॥ ೧೨೭ ॥
ದ್ವಾದಶೈವ ಪ್ರದೇಯಾನಿ ಗುರುಬ್ರಾಹ್ಮಣಜ್ಞಾತಿಷು ।
ವ್ರತಾಂತೇ ಗೌಃ ಪ್ರದಾತವ್ಯಾ ಕೃಷ್ಣಾ ವತ್ಸಯುತಾ ದೃಢಾ ॥ ೧೨೮ ॥
ಸವಸ್ತ್ರಾಭರಣಾ ದೇಯಾ ಘಂಟಾಭರಣಭೂಷಿತಾ ।
ಅಂಗುಲೀಕಯುವಾಸಾಂಸಿ ಛತ್ರೋಪಾನತ್ಕಮಂಡಲು ॥ ೧೨೯ ॥
ಗುರವೇ ದಕ್ಷಿಣಾ ದೇಯಾ ಬ್ರಾಹ್ಮಣೇಭ್ಯಃ ಸ್ವಶಕ್ತಿತಃ ।
ಏವಂ ಕೃತ್ವಾ ತತೋ ದೇಯಂ ತಪಸ್ವಿಭ್ಯೋಽಥ ಭೋಜನಂ ।
ಮಿಷ್ಟಾನ್ನಂ ವಿವಿಧಂ ದತ್ವಾ ಕ್ಷಮಾಪ್ಯ ಚ ವಿಸರ್ಜಯೇತ್ ॥ ೧೩೦ ॥

---

೧೨೪. ಗೃಹಸ್ಥನು ಮುನಿಗಳನ್ನು ಭೋಜನಮಾಡಿಸಬೇಕು. ಹನ್ನೆರಡು, ಎಂಟು, ನಾಲ್ಕುಮಂದಿ ಅಥವಾ ಒಬ್ಬನಿಗಾದರೂ ಅನ್ನವನ್ನು ನೀಡಬೇಕು.

೧೨೫. ಬ್ರಹ್ಮಜ್ಞಾನಿಯೂ, ಶಿವಪೂಜಕನೂ ಆದ ಒಬ್ಬ ಬ್ರಹ್ಮಚಾರಿಯನ್ನು ಭಕ್ತಿಯಿಂದ ಭೋಜನಮಾಡಿಸಿದರೆ ಸಾವಿರಮಂದಿ ಬ್ರಾಹ್ಮಣರನ್ನು ಭೋಜನ ಮಾಡಿಸಿದಂತಾಗುವುದು.

೧೨೬. ತಾನು ಮೌನದಿಂದ ಉಪ್ಪಿಲ್ಲದೆ ಎಲೆಯಲ್ಲಿ ಭೋಜನಮಾಡಿ ಅನಂತರ ಮಕ್ಕಳು, ಸ್ನೇಹಿತರು, ಹೆಂಡತಿ ಇವರನ್ನು ಭೋಜನಮಾಡಿಸಬೇಕು.

೧೨೭–೧೩೦. ಈ ಕ್ರಮದಿಂದ ಹನ್ನೆರಡು ಶಿವರಾತ್ರಿ ವ್ರತಗಳನ್ನಾಚರಿಸಿ ಎಳ್ಳಿನಿಂದ ತುಂಬಿರುವ ಹನ್ನೆರಡು ಪಾತ್ರೆಗಳನ್ನು ಗುರು, ಬ್ರಾಹ್ಮಣ, ಜ್ಞಾತಿಗಳಿಗೆ ಕೊಟ್ಟು ವ್ರತದ ಕೊನೆಯಲ್ಲಿ ಕರುವಿನಿಂದ ಸಹಿತವೂ, ವಸ್ತ್ರ ಘಂಟೆ ಒಡವೆಗಳಿಂದ ಅಲಂಕಾರಗೊಂಡುದೂ ಆದ ಕರಿಬಣ್ಣದ ಗೋವನ್ನು ದಾನಮಾಡಬೇಕು. ಗುರುವಿಗೆ ಉಂಗುರ, ವಸ್ತ್ರ, ಕೊಡೆ, ಪಾದರಕ್ಷೆ, ಕಮಂಡಲುಗಳನ್ನಿತ್ತು ಬ್ರಾಹ್ಮಣರಿಗೆ ಶಕ್ತ್ಯನುಸಾರ ದಕ್ಷಿಣೆಯನ್ನೀಯಬೇಕು. ಅನಂತರ ಮುನಿಗಳಿಗೆ ಮೃಷ್ಟಾನ್ನ ಭೋಜನವನ್ನಿತ್ತು ಕ್ಷಮೆಬೇಡಿ ಅವರನ್ನು ಕಳುಹಿಸಬೇಕು.

ಏವಂ ಯಃ ಕುರುತೇ ಸತ್ಯಂ ತಸ್ಯ ಪಾಪಂ ನ ವಿದ್ಯತೇ ।
ಸಂತಾನಮುತ್ತಮಂ ಲಬ್ಧ್ವಾ ಭುಕ್ತ್ವಾ ಭೋಗಾನನುತ್ತಮಾನ್ ॥ ೧೩೧ ॥
ದಿವ್ಯಂ ವಿಮಾನಮಾರೂಢೋ ದಿವ್ಯಸ್ತ್ರೀಪರಿವೇಷ್ಟಿತಃ ।
ಗೀತವಾದಿತ್ರನಿರ್ಘೋಷೈರ್ನೀಯತೇ ಶಿವಮಂದಿರೇ ॥ ೧೩೨ ॥
ತದೇತ್ಕಥಿತಂ ಪುಣ್ಯಂ ಶಿವರಾತ್ರಿವ್ರತಂ ಮಯಾ ।
ಕೃತೇನ ಯೇನ ಲೋಕಾನಾಂ ಸರ್ವಪಾಪಕ್ಷಯೋ ಭವೇತ್ ॥ ೧೩೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಶಿವರಾತ್ರಿಮಾಹಾತ್ಮ್ಯವರ್ಣನಂ ನಾಮ
ಷೋಡಶೋಽಧ್ಯಾಯಃ

---

೧೩೧–೧೩೨. ಹೀಗೆ ಮಾಡಿದವನ ಪಾಪವೆಲ್ಲ ಪರಿಹಾರವಾಗುವುದು. ಅವನು ಉತ್ತಮ ಸಂತತಿಯನ್ನು ಪಡೆದು ದಿವ್ಯ ಭೋಗಗಳನ್ನನುಭವಿಸಿ ದಿವ್ಯ ವಿಮಾನವನ್ನೇರಿ ದೇವತಾಸ್ತ್ರೀಯರೊಡನೆ ಗೀತವಾದ್ಯಗಳ ಶಬ್ದಗಳಿಂದ ಶಿವಾಲಯಕ್ಕೆ ತೆರಳುವನು.

೧೩೩. ನಾನು ನಿನಗೆ ಈ ಶಿವರಾತ್ರಿವ್ರತವನ್ನು ಹೇಳಿರುವೆನು. ಇದನ್ನಾಚರಿಸಿದವರ ಪಾಪಗಳೆಲ್ಲ ಪರಿಹಾರವಾಗುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಶಿವರಾತ್ರಿಮಾಹಾತ್ಮ್ಯವರ್ಣನವೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತದಶೋಽಧ್ಯಾಯಃ

### ಬಲಿಯಜ್ಞಪ್ರಭಾಸಮಾಹಾತ್ಮ್ಯವರ್ಣನಂ

ರಾಜೋವಾಚ :—

ವಿಚಿತ್ರಮಿದಮಾಖ್ಯಾನಂ ತ್ವತ್ಪ್ರಸಾದಾಚ್ಛ್ರುತಂ ಮಯಾ ।
ದೃಷ್ಟ್ವಾ ನಾರಾಯಣಂ ಶಕ್ರಂ ನಾರದೋ ಮಂದರೇ ಗಿರೌ ॥ ೧ ॥
ಕಿಂ ಚಕಾರ ಮುನೀಂದ್ರೋಽಥ ತನ್ಮೇ ವಿಸ್ತರತೋ ಮುನೇ ।
ವದ ಸಂಸಾರಸರಣೋದ್ಭೂತಮಾಯಾಪ್ರಪೀಡಿತಂ ।
ಕಥಾಮೃತಜಲೌಘೇನ ವಿತೃಷಂ ಕುರು ಮಾಂ ವಿಭೋ ॥ ೨ ॥

ಸಾರಸ್ವತ ಉವಾಚ :—

ಅಥಾಽಸೌ ನಾರದೋ ದೇವಂ ಜ್ಞಾತ್ವಾ ಶಪ್ತಂ ದ್ವಿಜನ್ಮನಾ ।
ಭೃಗುಣಾ ಚ ತಥಾ ಪೂರ್ವಂ ನಾನ್ಯಥೈತದ್ಭವಿಷ್ಯತಿ ॥ ೩ ॥
ಭವಿಷ್ಯಂ ಯುದ್ಭವಂ ದೇವ ವರ್ತಮಾನಂ ವಿಚಿಂತ್ಯತಾಂ ।
ಅಯಂ ಚ ವಾಮನೋ ಭೂತ್ವಾ ವಿಷ್ಣುರ್ಯಾಸ್ಯತಿ ತಾಂ ಪುರೀಂ ॥ ೪ ॥

---

### ಕನ್ನಡದ ಅನುವಾದ

### ಬಲಿಯಜ್ಞಪ್ರಭಾಸಮಾಹಾತ್ಮ್ಯವರ್ಣನ

೧-೨. ರಾಜನು ಹೇಳುತ್ತಾನೆ :—ಮುನಿವರ್ಯ! ನಾನು ನಿನ್ನ ಅನುಗ್ರಹದಿಂದ ವಿಚಿತ್ರವಾದ ಈ ಕಥೆಯನ್ನು ಕೇಳಿದನು. ನಾರದನು ಮಂದರಶೈಲದಲ್ಲಿ ನಾರಾಯಣ ಮತ್ತು ಇಂದ್ರರನ್ನು ನೋಡಿ ಏನು ಮಾಡಿದನು? ಅದನ್ನು ನನಗೆ ವಿಸ್ತಾರವಾಗಿ ಹೇಳು. ಸ್ವಾಮಿ! ಸಂಸಾರದ ಮಾಯೆಯಿಂದ ಪೀಡಿತನಾದ ನನಗೆ ಕಥಾಮೃತವೆಂಬ ಜಲಪ್ರವಾಹದಿಂದ ಬಾಯಾರಿಕೆಯಿಲ್ಲದಂತೆ ಮಾಡು.

೩. ಸಾರಸ್ವತನು ಹೇಳುತ್ತಾನೆ :—ಬಳಿಕ ಈ ನಾರದನು ಭೃಗು ಮುನಿಯಿಂದ ವಿಷ್ಣುವು ಶಪ್ತನಾಗಿರುವುದನ್ನರಿತು."ಈ ಶಾಪವು ವ್ಯತ್ಯಾಸವಾಗುವುದಿಲ್ಲ.

೪. ಮುಂದಾಗುವುದು ಆಗಿಯೇ ಆಗುವುದು. ಈಗ ಮಾಡತಕ್ಕದ್ದನ್ನು ಆಲೋಚಿಸಬೇಕು. ವಿಷ್ಣುವು ವಾಮನನಾಗಿ ಆ ಬಲಿಯ ನಗರಿಗೆ ಹೋಗುವನು.

ನಿಗ್ರಹಂ ಸ ಬಲೇಃ ಪಶ್ಚಾತ್ಕರಿಷ್ಯತಿ ಮಮ ಪ್ರಿಯಂ ।
ಯುದ್ಧಂ ವಿನಾ ಕಥಂ ಸ್ಥೇಯಂ ವರ್ತಮಾನಂ ಮಹೋಲ್ಬಣಂ ॥ ೫ ॥
ದೇವದಾನವಯುದ್ಧಾನಿ ದೈತ್ಯಗಂಧರ್ವರಕ್ಷಸಾಂ ।
ನಿವಾರಿತಾನಿ ಸರ್ವಾಣಿ ಸರೀಸೃಪಪತತ್ರಿಣಾಂ ॥ ೬ ॥
ಸಾಪತ್ನಜಃ ಕಲಿರ್ನಾಸ್ತಿ ಮಮ ಭಾಗ್ಯಪರಿಕ್ಷಯೇ ।
ದೇವೇಂದ್ರೋ ಗುರುಣಾ ಪೂರ್ವಂ ವಾರಿತಃ ಕಿಂ ಕರೋಮ್ಯಹಂ ॥ ೭ ॥
ಮಾನನೀಯೋ ಗುರುರ್ಮೇಽಯಮತಸ್ತಂ ನ ಶಪಾಮ್ಯಹಂ ।
ಯುದ್ಧಾರ್ಥಂ ತತೋ ಯತ್ನೋ ನ ಸಿಧ್ಯತಿ ಕರೋಮಿ ಕಿಂ ॥ ೮ ॥
ಕೇನಾಪಿ ದೈವಯೋಗೇನ ಪುರುಷಾರ್ಥೋ ನ ಸಿಧ್ಯತಿ ।
ತಥಾಪಿ ಯತ್ನಃ ಕರ್ತವ್ಯಃ ಪುರುಷಾರ್ಥೇ ವಿಪಶ್ಚಿತಾ ।
ದೈವಂ ಪುರುಷಕಾರೇಣ ವಿನಾಪಿ ಫಲತಿ ಕ್ವಚಿತ್ ॥ ೯ ॥
ಯದುಕ್ತಂ ತದ್ವಚೋ ವ್ಯರ್ಥಂ ಯತಸ್ಸಿದ್ಧಿಃ ಪ್ರಯತ್ನತಃ ।
ಬಲಿಂ ಗತ್ವಾ ಭಣಿಷ್ಯಾಮಿ ಯಥಾ ಯುದ್ಧಂ ಕರಿಷ್ಯತಿ ॥ ೧೦ ॥
ಸ ಶ್ರೋಷ್ಯತಿ ಸ ಚೇದ್ವಾಕ್ಯಂ ನಿಶ್ಚಿತಂ ತಂ ಶಪಾಮ್ಯಹಂ ।
ಇತ್ಯುಕ್ತ್ವಾ ಸ ಯಯೌ ವೇಗಾನ್ನಾರದೋ ಬಲಿಮಂದಿರೇ ।
ನಿಮೇಷಾಂತರಮಾತ್ರೇಣ ಶಿಷ್ಯಾಭ್ಯಾಂ ಗಗನೇ ಸ್ಥಿತಃ ॥ ೧೧ ॥

---

೫. ಅವನು ಅನಂತರ ಬಲಿಯನ್ನು ನಿಗ್ರಹಿಸುವನು. ಈಗ ನಾನು ಪ್ರಿಯವಾದ ಭಯಂಕರ ಯುದ್ಧವಿಲ್ಲದೆ ಹೇಗಿರಲಿ ?

೬–೮. ನನ್ನ ದುರದೃಷ್ಟದಿಂದ ದೇವತೆಗಳು, ದಾನವರು, ದೈತ್ಯರು, ಗಂಧರ್ವರು, ರಾಕ್ಷಸರು, ನಾಗರು, ಪಕ್ಷಿಗಳು ಇವರಲ್ಲಿ ವೈರದಿಂದ ಯುದ್ಧವು ನಡೆಯುವುದಿಲ್ಲ. ಇದಾಗದಂತೆ ಹಿಂದೆ ಬೃಹಸ್ಪತಿಯು ದೇವೇಂದ್ರನನ್ನು ತಡೆದಿರುವನು. ನಾನೇನು ಮಾಡಲಿ ! ಬೃಹಸ್ಪತಿಯು ನನಗೆ ಪೂಜ್ಯನಾದುದರಿಂದ ನಾನು ಅವನನ್ನು ಶಪಿಸುವುದಿಲ್ಲ. ನಾನು ಯುದ್ಧಕ್ಕಾಗಿ ಮಾಡಿದ ಪ್ರಯತ್ನವು ಕೈಗೂಡುವುದಿಲ್ಲ.

೯–೧೦. ಯಾವುದಾದರೂ ಒಂದು ದೈವಯೋಗದಿಂದ ಪುರುಷಾರ್ಥಕ್ಕಾಗಿ ಪ್ರಯತ್ನಿಸಬೇಕು. ಒಂದು ಆ ವೇಳೆ ಪುರುಷ ಪ್ರಯತ್ನವಿಲ್ಲದೆ ಅದೃಷ್ಟವು ಫಲಿಸುವುದುಂಟು. ಎಂಬೀಮಾತು ಪ್ರಯತ್ನಿಸಿದರೆ ಕಾರ್ಯವು ಕೈಗೂಡುವುದರಿಂದ ಅರ್ಥವಿಲ್ಲದುದು. ನಾನೀಗ ಬಲಿಯನ್ನು ಹೊಂದಿ ಯುದ್ಧಮಾಡುವಂತೆ ಹೇಳುವೆನು.

೧೧. ಅವನು ನನ್ನ ಮಾತನ್ನು ಕೇಳದಿದ್ದರೆ ನಿಶ್ಚಯವಾಗಿಯೂ ಅವನನ್ನು ಶಪಿಸುವೆನು". ಹೀಗೆಂದು ಆ ನಾರದನು ವೇಗದಿಂದ ಬಂದು ನಿಮಿಷದಲ್ಲಿ ಬಲಿಯ ಮಂದಿರಕ್ಕೆ ತೆರಳಿ ಆಕಾಶದಲ್ಲಿ ಶಿಷ್ಯರೊಡನೆ ನಿಂತನು.

ಪ್ರಾಸಾದೇ ಶೈಲಸಂಕಾಶೇ ಸಪ್ತಭೌಮೇ ಮಹೋಜ್ಜ್ವಲೇ ।
ತಸ್ಯೋಪರಿ ಸಭಾ ದಿವ್ಯಾ ನಿರ್ಮಿತಾ ವಿಶ್ವಕರ್ಮಣಾ ॥ ೧೨ ॥

ತಸ್ಯಾಂ ಸಿಂಹಾಸನಂ ದಿವ್ಯಂ ತತ್ರಾಸೀನೋ ಬಲಿರ್ನೃಪಃ ।
ದೈತ್ಯೈಃ ಪರಿವೃತಸ್ಸರ್ವೈಃ ಪ್ರೌಢಿಹಾಸ್ಯಕಥಾಪರೈಃ ॥ ೧೩ ॥

ಋಷಿಭಿರ್ಬ್ರಾಹ್ಮಣೈಃ ಶಾಂತೈಸ್ತಥೈವೋಶನಸಾ ಸ್ವಯಂ ।
ಪುತ್ರಮಿತ್ರಕಲತ್ರೈಶ್ಚ ಸಂವೃತೋ ದಿವ್ಯಮಂದಿರೇ ॥ ೧೪ ॥

ದೇವಾಂಗನಾಕರಗ್ರಾಹಗೃಹೀತೈರ್ದಿವ್ಯಚಾಮರೈಃ ।
ಸಂವೀಜ್ಯಮಾನೋ ದೈತ್ಯೇಂದ್ರಃ ಸ್ತೂಯಮಾನಃ ಸಚಾರಣೈಃ ॥ ೧೫ ॥

ಯಾವದಾಸ್ತೇ ಮದೋನ್ಮತ್ತಾ ಮಂತ್ರಯಂತಿ ಪರಸ್ಪರಂ ।
ದೈತ್ಯದಾನವಮುಖ್ಯಾ ಯೇ ತೇ ಸರ್ವೇ ಯುದ್ಧಕಾಂಕ್ಷಿಣಃ ॥ ೧೬ ॥

ಉತ್ಥಾಯೋತ್ಥಾಯ ಭಾಷಂತೇ ಪ್ರಗಲ್ಭಂತೇ ಸುರೈಃ ಸಹ ।
ಅಸ್ಮದೀಯಮಿದಂ ಸರ್ವಂ ತ್ರೈಲೋಕ್ಯಂ ಸಾಂಪ್ರತಂ ಭತ ॥ ೧೭ ॥

ಶುಕ್ರಬುಧ್ಯಾ ವಿನಾ ಯುದ್ಧಂ ಪ್ರಾಪ್ಸ್ಯತೇ ಕಿಂ ಮಹೋದಯಃ ।
ದೈತ್ಯೇಂದ್ರೋ ದೇವರಾಜೇನ ಸ್ನೇಹಂ ಚ ಕುರುತೇ ಯದಿ ॥ ೧೮ ॥

---

೧೨. ಆ ಬಲಿಯು ಏಳು ಅಂತಸ್ತಿನ ಬೆಟ್ಟದಂತಿರುವ ಅರಮನೆಯ ಮೇಲ್ಭಾಗದಲ್ಲಿ ವಿಶ್ವಕರ್ಮನು ದಿವ್ಯಸಭೆಯೊಂದನ್ನು ನಿರ್ಮಿಸಿದ್ದನು.

೧೩–೧೫. ಅಲ್ಲಿರುವ ದಿವ್ಯ ಸಿಂಹಾಸನದಲ್ಲಿ ಬಲಿಯು ಹಾಸ್ಯ, ಕಥೆಗಳಲ್ಲಿ ನಿರತರಾದ ದೈತ್ಯರು, ಋಷಿಗಳು, ಶಾಂತರಾದ ಬ್ರಾಹ್ಮಣರು, ಶುಕ್ರಾಚಾರ್ಯ, ಪುತ್ರ, ಮಿತ್ರ, ಪತ್ನಿಯರೊಡನೆ ಕುಳಿತುಕೊಂಡು ದೇವತಾ ಸ್ತ್ರೀಯರ ಚಾಮರಗಳಿಂದ ಬೀಸಿಸಿಕೊಳ್ಳಲ್ಪಡುತ್ತ, ಚಾರಣರಿಂದ ಸಂಸ್ತುತನಾಗಿ ಮಂಡಿಸಿದ್ದನು.

೧೬–೧೮. ಆಗ ಮದೋನ್ಮತ್ತರಾದ ದೈತ್ಯ ದಾನವಶ್ರೇಷ್ಠರು ದೇವತೆಗಳೊಡನೆ ಯುದ್ಧಮಾಡಲಿಚ್ಛೆಯಿಂದ ಪರಸ್ಪರ ಆಲೋಚಿಸುತ್ತಿದ್ದರು. ಅಡಿಗಡಿಗೂ ಎದ್ದು ಹೆಮ್ಮೆಯಿಂದ ಹೀಗೆ ಮಾತಾಡುತ್ತಿದ್ದರು. "ಈಗ ಮೂರು ಲೋಕಗಳೂ ನಮ್ಮದಾಗಿವೆ. ಶುಕ್ರಾಚಾರ್ಯರ ಅಭಿಪ್ರಾಯದಂತೆ ಕಾಳಗಮಾಡದೆ ಬಲಿಸಾರ್ವಭೌಮನು ದೇವೇಂದ್ರನೊಡನೆ ಸ್ನೇಹಮಾಡಿಕೊಂಡಿದ್ದರೆ ನಮಗೆ ಏಳಿಗೆಯು ಹೇಗೆ ಲಭಿಸುವುದು ?

ಐರಾವಣಂ ಸದಾ ಮತ್ತಂ ಕಥಂ ನೋ ಯಾಚತೇ ಬಲಿಃ ।
ಚತುರಂ ತುರಗಂ ಕಸ್ಮಾನ್ನಾರ್ಪಯತಿ ದಿವಾಕರಃ ॥ ೧೯ ॥
ಯಾವನ್ನಾಕ್ರಮ್ಯತೇ ಲುಬ್ಧೋ ಧನಾಢ್ಯಕ್ನೋ ರಣಾಜಿರೇ ।
ತಾವನ್ನಾರ್ಪಯತೇ ವಿತ್ತಂ ಯದಾ ತತ್ಸಂಚಿತಂ ಸುರೈಃ ॥ ೨೦ ॥
ನ ದರ್ಶಯತಿ ರತ್ನಾನಿ ಜಲರಾಶೀ ರಸಾತಲಾತ್ ।
ಯಾವನ್ನ ಮಂದರಂ ಕ್ಷಿಪ್ತ್ವಾ ವಿಮಥ್ನೀಮೋ ವಯಂ ಚ ತಂ ॥ ೨೧ ॥
ಯಥಾಮೃತಕಲಾಶ್ಚಂದ್ರಾದ್ಭುಜ್ಯಂತೇ ಕ್ರಮಶಃ ಸುರೈಃ ।
ಏವಂ ಭಾಗಂ ಬಲೇಃ ಕಸ್ಮಾನ್ನ ದದಾತಿ ಜಲಾತ್ಮಕಃ ॥ ೨೨ ॥
ಸ್ಪರ್ಧನೀಶೀತಲೋವಾತಃ ಪದ್ಮಕಿಂಜಲ್ಕವಾಸಿತಃ ।
ಸ್ವರ್ಗೇ ವಾತಿ ಶನೈರ್ಯದ್ವತ್ತಥಾ ನ ಬಲಿಮಂದಿರೇ ॥ ೨೩ ॥
ಇಂದ್ರಚಾಪೋದ್ಯತಾ ಮೇಘಾ ಜಲಂ ಮುಂಚಂತಿ ಭೂತಲೇ ।
ಬಲಿಖಡ್ಗೋದ್ಧತಾಃ ಸ್ವರ್ಗಂ ಪುನಸ್ತೇಯಾಂತಿ ಭೂತಲಾತ್ ॥ ೨೪ ॥
ಅಸ್ಮದೀಯೇ ಧರಾಪೃಷ್ಠೇ ಯಮೋ ಮಾರಯತೇ ಜನಂ ।
ನೈವಂ ಸ್ವರ್ಗೇ ನ ಪಾತಾಲೇ ಪಶ್ಯಾಹೋ ಕಾರ್ಯಕಾರಣಂ ॥ ೨೫ ॥

---

೧೯. ಬಲಿಯು ಮದಿಸಿದ ಐರಾವತವನ್ನೇಕೆ ಬೇಡುವುದಿಲ್ಲ. ಸೂರ್ಯನು ಕುಶಲವಾದ ತನ್ನ ಅಶ್ವವನ್ನರ್ಪಿಸುವುದಿಲ್ಲವೇಕೆ ?

೨೦. ಯುದ್ಧದಲ್ಲಿ ಬಲಿಯು ಕುಬೇರನನ್ನು ಆಕ್ರಮಿಸುವವರೆಗೆ ಅವನು ತನ್ನ ಬೊಕ್ಕಸವನ್ನು ಒಪ್ಪಿಸುವುದಿಲ್ಲ.

೨೧. ನಾವು ಮಂದರ ಪರ್ವತದಿಂದ ಕಡೆಯುವವರೆಗೆ ಸಮುದ್ರನು ತನ್ನಲ್ಲಿರುವ ರತ್ನಗಳನ್ನು ತೋರಿಸುವುದಿಲ್ಲ.

೨೨. ಜಡನಾದ ಚಂದ್ರನು ಅಮೃತಕಲೆಗಳನ್ನು ಸುರರಿಗೆ ಭುಂಜಿಸಲು ಕೊಡುವಂತೆ ಬಲಿಗೆ ಕೊಡುವುದಿಲ್ಲ ?

೨೩. ಪದ್ಮಪರಾಗಗಳಿಂದ ಸುವಾಸನೆಯಾದ ಗಂಗೆಯ ತಂಗಾಳಿಯು ಸ್ವರ್ಗದಲ್ಲಿ ಮೆಲ್ಲನೆ ಬೀಸುವಂತೆ ಬಲಿಯ ಮನೆಯಲ್ಲಿ ಏಕೆ ಬೀಸುವುದಿಲ್ಲ ?

೨೪. ಇಂದ್ರನ ಬಿಲ್ಲಿನಿಂದ ಉಂಟಾದ ಮೋಡಗಳು ಭೂಮಿಯಲ್ಲಿ ಮಳೆಸುರಿಸುವುವು. ಆದರೆ ಬಲಿಯ ಖಡ್ಗದಿಂದ ಚಂಚಲವಾದ ಅವು ಭೂಮಿಯಿಂದ ಮರಳಿ ಸ್ವರ್ಗಕ್ಕೆ ತೆರಳುವುದು.

೨೫. ಯಮನು ನಮ್ಮ ಭೂಮಿಯಲ್ಲಿ ಜನರನ್ನು ಕೊಲ್ಲುವನು. ಆದರೆ ಹೀಗೆ ಸ್ವರ್ಗ ಪಾತಾಳಗಳಲ್ಲಿ ಜನರನ್ನು ಕೊಲ್ಲುವುದಿಲ್ಲ ಈ ಕಾರ್ಯಕಾರಣಗಳನ್ನು ನೋಡು.

ಆಯುರ್ವೃತ್ತಿಂ ಸುತಾಸೌಖ್ಯಮಸ್ಮಾಕಂ ಲಿಖತಿ ಸ್ವಯಂ ।
ಲಲಾಟೇ ಚಿತ್ರಗುಪ್ತೋಽಸೌ ನ ದೇವಾನಾಂ ತು ತತ್ಸಮಂ ॥ ೨೬ ॥
ವರ್ಷಾಶೀತಾತಪಾಃ ಕಾಲಾ ವರ್ತಂತೇ ಭುವಿ ಸಾಂಪ್ರತಂ ।
ನ ಸ್ವರ್ಗೇ ನೈವ ಪಾತಾಲೇ ಭೀತಾ ಭೂಮೌ ಭ್ರಮಂತಿ ಹಿ ॥ ೨೭ ॥
ಏಕವೀರ್ಯೋದ್ಭವಾ ಯೂಯಂ ಸ್ವಸ್ರೀಯಾ ದೇವದಾನವಾಃ ।
ಭೂಮೌ ಸ್ಥಿತಾ ವಯಂ ಕಸ್ಮಾದ್ದೇವಾಃ ಕೇನೋಪರಿ ಕೃತಾಃ ॥ ೨೮ ॥
ಸಮುದ್ರೇ ಮಥ್ಯಮಾನೇ ತು ದೈತ್ಯೇಂದ್ರೋ ವಂಚಿತಃ ಸುರೈಃ ।
ಏಕತಃ ಸರ್ವದೇವಾಶ್ಚ ಬಲಿಶ್ಚೈವೈಕತಃ ಸ್ಥಿತಃ ॥ ೨೯ ॥
ಉತ್ಪನ್ನೇಷು ಚ ರತ್ನೇಷು ಭಾಗ್ಯಂ ವೈ ಯಸ್ಯ ಯಾದೃಶಂ ।
ಗಜಾಶ್ಚ ಕಲ್ಪವೃಕ್ಷಾದ್ಯಾಶ್ಚಂದ್ರಂ ತೇ ಗಣದಂತಿನಃ ॥ ೩೦ ॥
ಗೃಹೀತ್ವಾ ಹ್ಯಮೃತಂ ದೈವೈರ್ಯೂಯಂ ಪಾನೇ ವಿನಿಯೋಜಿತಾಃ ।
ಏತಯಾ ಘೂರ್ಣಿತಾ ಯೂಯಂ ನ ಜಾನೀಥಾತಿಗರ್ವಿತಾಃ ॥ ೩೧ ॥
ಪೀತಾವಶೇಷಂ ಪೀಯೂಷಂ ಸತ್ಯಲೋಕೇ ಧೃತಂ ಸುರೈಃ ।
ಅಹೋತಿಕುಟಿಲಾ ದೇವಾಃ ಕಸ್ಮಾಚ್ಛೇಷಂ ನ ದೀಯತೇ ॥ ೩೨ ॥

---

೨೬. ಚಿತ್ರಗುಪ್ತನು ನಮ್ಮ ಹಣೆಯಲ್ಲಿ ಆಯುಸ್ಸು, ಜೀವನ, ಸಂತಾನ ಸೌಖ್ಯ ಇವುಗಳನ್ನು ಬರೆದಂತೆ ದೇವತೆಗಳ ಹಣೆಯಲ್ಲ ಬರೆಯುವುದಿಲ್ಲ.

೨೭. ಈಗ ಭೂಮಿಯಲ್ಲಿ ಮಳೆ, ಬಿಸಿಲುಕಾಲಗಳು ಇರುವಂತೆ ಪಾತಾಳ ಸ್ವರ್ಗಗಳಲ್ಲಿರುವುದಿಲ್ಲ. ಅವು ಭಯದಿಂದ ಭೂಮಿಯಲ್ಲಿಯೇ ಸಂಚರಿಸುತ್ತವೆ.

೨೮. ದೇವದಾನವರು ಒಂದೇ ವೀರ್ಯದಿಂದ ಜನಿಸಿ ಜ್ಞಾತಿಗಳಾಗಿದ್ದರೂ ನಾವು ಭೂಮಿಯಲ್ಲಿರುವೆವು. ದೇವತೆಗಳು ಮೇಲಿನ ಸ್ವರ್ಗದಲ್ಲಿ ವಾಸಿಸುವಂತೆ ಯಾರು ಮಾಡಿದರು ?

೨೯. ಸಮುದ್ರವನ್ನು ಕಡೆಯುವಾಗ ದೇವತೆಗಳು ತಾವು ಒಂದೆಡೆಯಲ್ಲಿಯೂ, ಬಲಿಯೊಬ್ಬನು ಮತ್ತೊಂದೆಡೆಯಲ್ಲಿಯೂ ಇರುವಂತೆ ಮಾಡಿ ವಂಚಿಸಿರುವರು.

೩೦–೩೧. ರತ್ನಗಳು ಹುಟ್ಟಿದಕೂಡಲೆ ಯಾರ ಅದೃಷ್ಟವು ಹೇಗಿರುವುದು ? ನೋಡಿರಿ. ದೇವತೆಗಳು ಐರಾವತ, ಉಚ್ಚೈಃಶ್ರವಸ್ಸು, ಕಲ್ಪವೃಕ್ಷ, ಚಂದ್ರ ಕಾಮಧೇನು ಇವೇ ಮೊದಲಾದುವುಗಳನ್ನೂ ಅಮೃತವನ್ನೂ ತೆಗೆದುಕೊಂಡು ನಮ್ಮನ್ನು ಮದ್ಯಪಾನದಲ್ಲಿ ನೇಮಿಸಿದರು. ಇದರಿಂದ ಮತ್ತರಾದ ನೀವು ಯಾವುದನ್ನೂ ಅರಿಯಲಿಲ್ಲ.

೩೨. ದೇವತೆಗಳು ಕುಡಿದುಳಿದ ಅಮೃತವನ್ನು ಸತ್ಯಲೋಕಕ್ಕೆ ತೆಗೆದುಕೊಂಡು ಹೋದರು. ಅವರು ಎಂತಹ ವಂಚಕರು? ಉಳಿದುದನ್ನಾದರೂ ನಮಗೇಕೆ ಕೊಡಲಿಲ್ಲ?

ಸುರಾಮೃತಮಿತಿ ಜ್ಞಾತ್ವಾ ಯೂಷಾದ್ವಂಚಿತಾ ವಯಂ ।
ತಿಲತೈಲಮೇವ ಮಿಷ್ಟಂ ಯೈರ್ನ ದೃಷ್ಟಂ ಘೃತಂ ಕ್ವಚಿತ್ ॥ ೩೩ ॥
ವಿಷ್ಣೋರ್ವಕ್ರಚರಿತ್ರಾಣಾಂ ಸಂಖ್ಯಾ ಕರ್ತುಂ ನ ಶಕ್ಯತೇ ।
ತಥಾಪಿ ಕಥ್ಯತೇ ತುಷ್ಟೈರ್ಹೃಷ್ಟೈಸ್ತೈರ್ಯದನುಷ್ಠಿತಂ ॥ ೩೪ ॥
ಗೌರಾಂಗೀ ಸುಂದರೀ ಸುಭ್ರೂಃ ಪೀನೋನ್ನತಪಯೋಧರಾ ।
ಸುಕೇಶಾ ಚಂದ್ರವದನಾ ಕರ್ಣಾಸಕ್ತವಿಲೋಚನಾ ॥ ೩೫ ॥
ವಲಿತ್ರಯಾಂಕಿತಾ ಮಧ್ಯೇ ಬಾಲಾ ಮುಷ್ಟ್ಯಾಪಿ ಗೃಹ್ಯತೇ ।
ಸ್ಥಲಾರವಿಂದಚರಣಾ ಲತೇವ ಭುಜಭೂಷಿತಾ ॥ ೩೬ ॥
ಸಾ ಸರ್ವಾಭರಣೋಪೇತಾ ಸರ್ವಲಕ್ಷಣಸಂಯುತಾ ।
ತ್ರೈಲೋಕ್ಯಮೋಹಿನೀ ದೇವೀ ಸಂಜಾತಾಽಮೃತಮಂಥನೇ ॥ ೩೭ ॥
ಅಮೃತಾದುತ್ಥಿತಾ ಪೂರ್ವಂ ಯಸ್ಯ ಸಾ ತಸ್ಯ ತದ್ಧ್ರುವಂ ।
ತ್ರೈಲೋಕ್ಯಂ ವಶಗಂ ತಸ್ಯ ಯಸ್ಯ ಸಾ ಚಾರುಲೋಚನಾ ॥ ೩೮ ॥
ತಯಾ ಸಂಮೋಹಿತಾಃ ಸರ್ವೇ ದೇವದಾನವರಾಕ್ಷಸಾಃ ।
ವಿಮುಚ್ಯ ಮಂಥನಂ ಸರ್ವೇ ತಾಂ ಗ್ರಹೀತುಂ ಸಮುದ್ಯತಾಃ ॥ ೩೯ ॥
ಏಕಾ ಸ್ತ್ರೀ ಬಹವೋ ದೇವಾ ದಾನವಾ ದೈತ್ಯರಾಕ್ಷಸಾಃ ।
ವಿವಾದಃ ಸುಮಹಾನ್ಜಾತಃ ಕಥಮತ್ರ ಭವಿಷ್ಯತೇ ॥ ೪೦ ॥

---

೩೩. ವಿಷ್ಣುವಿನ ವಕ್ರಚರಿತೆಗಳು ಎಷ್ಟೆಂದು ಎಣಿಸಲು ಸಾಧ್ಯವಿಲ್ಲ. ಆದರೂ ಸಂತುಷ್ಟರಾದ ದೇವತೆಗಳು ಮಾಡಿದ ಕಾರ್ಯವನ್ನು ಹೇಳುವೆನು.

೩೫–೩೭. ಅಮೃತ ಮಥನಕಾಲದಲ್ಲಿ ಶುಭ್ರವಾದ ಶರೀರವುಳ್ಳವಳೂ, ಸುಂದರಿಯೂ, ಮನೋಹರವಾದ ಹುಬ್ಬುಗಳುಳ್ಳವಳೂ, ಉನ್ನತ ಕುಚಗಳುಳ್ಳವಳೂ, ಚಂದ್ರಮುಖಿಯೂ, ರಮ್ಯವಾದ ಕೂದಲುಳ್ಳವಳೂ, ವಿಶಾಲಾಕ್ಷಿಯೂ, ತ್ರಿವಳಿಯುಳ್ಳವಳೂ, ಕೃಶವಾದ ನಡುವುಳ್ಳವಳೂ, ಕಮಲದಂತೆ ಪಾದಗಳುಳ್ಳವಳೂ, ಲತೆಯಂತಿರುವ ತೋಳುಗಳುಳ್ಳವಳೂ, ಸರ್ವಾಭರಣ ಭೂಷಿತಳೂ, ಸಮಸ್ತ ಲಕ್ಷಣಗಳುಳ್ಳವೂ ಆಗಿರುವ ತ್ರೈಲೋಕ್ಯವನ್ನೂ ಮೋಹಗೊಳಿಸುವ ಉತ್ತಮಾಂಗನೆಯು ಹುಟ್ಟಿದಳು.

೩೯. ಅವಳಿಂದ ಮೋಹಗೊಂಡ ದೇವ, ದಾನವ, ರಾಕ್ಷಸರು ಸಮುದ್ರಮಂಥನ ಕಾರ್ಯವನ್ನು ತ್ಯಜಿಸಿ ಅವಳನ್ನು ಹಿಡಿದುಕೊಳ್ಳುವುದಕ್ಕೆ ಉದ್ಯುಕ್ತರಾದರು.

೪೦. ಒಬ್ಬಳು ಸ್ತ್ರೀಯೂ, ಬಹುಮಂದಿ ದೇವ, ದಾನವ, ರಾಕ್ಷಸರೂ ಇದ್ದುದರಿಂದ ಅವರಲ್ಲಿ ಮಹಾ ಕಲಹವುಂಟಾಯಿತು.

ಆಗತ್ಯ ವಿಷ್ಣುನಾ ಸರ್ವೇ ಭುಜೇ ಧೃತ್ವಾ ನಿವಾರಿತಾಃ ।
ಅಸ್ಯಾರ್ಥೇ ಕಿಮಹೋ ವಾದಃ ಕ್ರಿಯತೇ ಭೋಃ ಪರಸ್ಪರಂ ॥ ೪೧ ॥
ಅಮೃತಾರ್ಥೇ ಸಮಾರಂಭೋ ಮಹಿಲಾರ್ಥೇ ವಿನಶ್ಯತಿ ।
ಸಂಕೇತಂ ಪ್ರಥಮಂ ಕೃತ್ವಾ ವಿಷ್ಣುನಾ ಚಿಂತಿತಂ ಪುನಃ ॥ ೪೨ ॥
ದಿವ್ಯರೂಪಧರಃಸ್ರಗ್ವೀ ವನಮಾಲಾವಿಭೂಷಿತಃ ।
ಕೌಸ್ತುಭೋದ್ಯೋತಿತತನುಃ ಶಂಖಚಕ್ರಗದಾಧರಃ ॥ ೪೩ ॥
ತಸ್ಯಾ ಹಸ್ತೇ ಶುಭಾಂ ಮಾಲಾಂ ದತ್ವಾ ವಿಷ್ಣುಃ ಪುರಃಸ್ಥಿತಃ ।
ಉದ್ಧೃತ್ಯ ಬಾಹುಂ ಸರ್ವೇಷಾಂ ಬಭಾಷೇ ವಚನಂ ಹರಿಃ ॥ ೪೪ ॥
ಕುರ್ವಂತು ಕುಂಡಲಂ ಸರ್ವೇ ತಿಷ್ಠಂತು ಸ್ವಯಮಾಸನೇ ।
ವಿಲೋಕ್ಯ ಸ್ವೇಚ್ಛಯಾ ಲಕ್ಷ್ಮೀರ್ವರಮಾಲಾಂ ಪ್ರಯಚ್ಛತು ॥ ೪೫ ॥
ಸ್ವಯಂವರವಿಭೇದಂ ಯಃ ಕರಿಷ್ಯತ್ಯತಿಲಂಪಟಃ ।
ಸ ವಧ್ಯಃ ಸಹಿತೈಃ ಸರ್ವೈಃ ಪರಸ್ತ್ರೀಲುಬ್ಧಕೋ ಯಥಾ ॥ ೪೬ ॥

---

೪೧. ಆಗ ವಿಷ್ಣುವು ಬಂದು ಅವರನ್ನೆಲ್ಲ ತೋಳಿನಿಂದ ತಡೆದು, "ಎಲೈ ದೇವ ದಾನವರೆ! ನೀವು ಇವಳಿಗಾಗಿ ಏಕೆ ಜಗಳವಾಡುವಿರಿ ?

೪೨. ಅಮೃತಕ್ಕಾಗಿ ಮಾಡಿದ ಪ್ರಯತ್ನವು ಸ್ತ್ರೀಗಾಗಿ ಹಾಳಾಗುವುದು". ಎಂದು ಹೇಳಿ ಮೊದಲು ಸಂಕೇತ ಮಾಡಿ, ಬಳಿಕ ಚಿಂತಿಸಿದನು.

೪೩-೪೪. ದಿವ್ಯ ರೂಪಧಾರಿಯೂ, ಹಾರವನ್ನು ಧರಿಸಿದವನೂ, ವನಮಾಲೆಯಿಂದ ಅಲಂಕಾರಗೊಂಡವನೂ, ಕೌಸ್ತುಭಮಣಿಯಿಂದ ಪ್ರಕಾಶಿಸುವ ಶರೀರವುಳ್ಳವನೂ, ಶಂಖ, ಚಕ್ರ, ಗದೆಗಳನ್ನು ಹಿಡಿದವನೂ ಆದ ಆ ವಿಷ್ಣುವು ಅವಳ ಕೈಯಲ್ಲಿ ಮಂಗಳಕರವಾದ ಮಾಲೆಯನ್ನಿತ್ತು ಮುಂದೆ ನಿಂತು ತೋಳುಗಳನ್ನು ಮೇಲಕ್ಕೆತ್ತಿ ಎಲ್ಲರನ್ನು ಕುರಿತು ಇಂತೆಂದನು.

೪೫. "ಎಲ್ಲರೂ ಮಂಡಲಾಕಾರವಾಗಿ ಆಸನದಲ್ಲಿ ಕುಳಿತುಕೊಳ್ಳಿರಿ. ಲಕ್ಷ್ಮಿಯು ನಿಮ್ಮನ್ನು ನೋಡಿ ತನ್ನಿಷ್ಟದಂತೆ ಮಾಲೆಯನ್ನು ಹಾಕಲಿ.

೪೬. ಸ್ತ್ರೀಯಲ್ಲಿ ಅತ್ಯಂತ ಆಸಕ್ತನಾಗಿ ಸ್ವಯಂವರವನ್ನು ಕೆಡಿಸಿದವನನ್ನು ಎಲ್ಲರೂ ಒಟ್ಟಿಗೆ ಸೇರಿ, ಪರಸ್ತ್ರೀಯರಲ್ಲಿ ಆಸಕ್ತನಾದವನನ್ನು ಕೊಲ್ಲುವಂತೆ ಕೊಲ್ಲತಕ್ಕದ್ದು.

ಪರದಾರಕೃತಂ ಪಾಪಂ ಸ್ತ್ರೀವಧಾತ್ತಸ್ಯ ಜಾಯತಾಂ ।
ಅನ್ಯೋಽಪಿ ಯಃ ಕರೋತ್ಯೇವಮುಸ್ತು ತದುಚ್ಯತಾಂ ॥ ೪೭ ॥
ಸಾಧಾರಣಂ ಹರಿಂ ಜ್ಞಾತ್ವಾ ತಥೇತ್ಯುಕ್ತ್ವಾ ತಥಾಕೃತಂ ।
ದೇವದಾನವದೈತ್ಯಾನಾಂ ಗಂಧರ್ವೋರಗರಕ್ಷಸಾಂ ।
ಮಧ್ಯೇ ಯೋಽಭಿಮತೋ ಭರ್ತಾ ಸ ತೇ ಸತ್ಯಂಭವೇದಿತಿ ॥ ೪೮ ॥
ತೇನಾಸೌ ಮೋಹಿತಾ ಪೂರ್ವಂ ದೃಷ್ಟಿದಾನೇನ ಕರ್ಷಿತಾ ।
ಆದ್ಯಂ ಸಂಮೋಹನಂ ಸ್ತ್ರೀಣಾಂ ಚಕ್ರೇ ದೃಷ್ಟಿನಿರೀಕ್ಷಣಂ ॥ ೪೯ ॥
ಏವಮೇವೇತಿ ತತ್ಕರ್ಣೇ ಹಸ್ತಂ ದತ್ವಾ ಯದುಚ್ಯತೇ ।
ದಧಾತಿ ಹೃದಿ ಯಂ ನಾರೀ ಕಾಮಬಾಣಪ್ರಪೀಡಿತಾ ॥ ೫೦ ॥
ತಮೇವ ವರಯೇದತ್ರ ಕಶ್ಚಿನ್ನಾಸ್ತ್ಯೇವ ಸಂಶಯಃ ।
ಸಂಜಾತೇ ಕಲಹೇ ಪೂರ್ವಂ ಹರಿಣಾ ತಂ ನಿವರ್ತಿತುಂ ॥ ೫೧ ॥
ಯದಾ ಗೃಹೀತಾ ಸರ್ವೈಃ ಸಾ ಹರಿಂ ನೈವ ವಿಮುಂಚತಿ ।
ತ್ವಮೇವ ಭರ್ತಾ ಸಾಽಚಷ್ಟೇ ಮುಂಚ ಮಾಂ ವ್ರಜ ದೂರತಃ ॥ ೫೨ ॥
ಮುಕ್ತ್ವಾ ದೂರಂ ತತೋ ವಿಷ್ಣುಃ ಪ್ರವಿಷ್ಟಃ ಸುರಮಂಡಲೇ ।
ತದಾ ಸರ್ವೇ ಚ ಮಾಮುಕ್ತ್ವಾ ಯಥಾಸ್ಥಾನಂ ಸ್ವಯಂ ಗತಾಃ ॥ ೫೩ ॥

---

೪೭. ಅವನಿಗೆ ಪರಸ್ತ್ರೀಯನ್ನು ವಧಿಸಿದ ಪಾಪವುಂಟಾಗಲಿ. ಬೇರೆ ಯಾವನು ಹೀಗೆ ಮಾಡಿದರೂ ಅವನಿಗೂ ಹೀಗೆಯೇ ಆಗಲಿ. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ಹೇಳಿರಿ" ಎಂದನು.

೪೮. ಆಗ ಅವರೆಲ್ಲ ವಿಷ್ಣುವು ತಮ್ಮಂತೆಯೆ ಒಬ್ಬನೆಂದರಿತು ದೇವತೆಗಳು, ದಾನವರು, ದೈತ್ಯರು, ಗಂಧರ್ವರು, ಉರಗರು, ರಾಕ್ಷಸರು ಇವರ ಮಧ್ಯದಲ್ಲಿ ಯಾರು ಇವಳಿಗೆ ಇಷ್ಟನಾದವನೊ ಅವನನ್ನು ಇವಳು ವರಿಸಲಿ ಎಂದು ಹೇಳಲು ಹಾಗೆಯೇ ಮಾಡಲ್ಪಟ್ಟಿತು.

೪೯–೫೩. ಆ ವಿಷ್ಣುವಿನ ದೃಷ್ಟಿಯಿಂದ ಸೆಳೆಯಲ್ಪಟ್ಟು ಮೋಹಗೊಂಡ ಅವಳು ಹಾಗೆಯೇ ಮಾಡುತ್ತೇನೆಂದು ಕಿವಿಯಲ್ಲಿ ಕೈಯನ್ನಿಟ್ಟು ಹೇಳಿ ತನ್ನ ಸಂಮೋಹಕ ದೃಷ್ಟಿಯಿಂದ ನೋಡಿದಳು. ಕಾಮಪೀಡಿತಳಾದ ನಾರಿಯು ಮನಸ್ಸಿನಲ್ಲಿ ಆಲೋಚಿಸಿದವನನ್ನೇ ನಿಶ್ಚಯವಾಗಿಯೂ ವರಿಸುವಳು. ಕಲಹವುಂಟಾಗಲು ಅದನ್ನು ತಡೆಯುವುದಕ್ಕಾಗಿ ಹರಿಯು ಹೀಗೆ ಮಾಡಲು ಎಲ್ಲರೂ ಅವಳನ್ನು ಹಿಡಿದುಕೊಂಡರು. ಅವಳಾದರೂ ನೀನೆ ನನ್ನ ಪತಿಯೆಂದು ವಿಷ್ಣುವನ್ನು ಬಿಡದಿರಲು ಆ ವಿಷ್ಣುವು ನನ್ನನ್ನು ಬಿಡು. ನೀನು ದೂರಹೋಗು ಎಂದುಹೇಳಿ ದೇವತೆಗಳಗುಂಪನ್ನು ಪ್ರವೇಶಿಸಿದನು. ಆಗ ಎಲ್ಲರೂ ಲಕ್ಷ್ಮಿಯನ್ನು ಬಿಟ್ಟು ತಮ್ಮ ತಮ್ಮ ಸ್ಥಳಕ್ಕೆ ಹೋದರು.

ಆಚಷ್ಟ ವಿಜಯಾ ಪೂರ್ವಂ ಸರ್ವಾನ್ದೇವಾನ್ಯಥಾಕ್ರಮಂ ।
ಸಾ ಚ ನಿರೀಕ್ಷತೇ ಪಶ್ಚಾತ್ತಂ ವಿಚಾರ್ಯ ವಿಮುಂಚತಿ ॥ ೫೪ ॥
ಉದಾಸೀನಃ ಶಿವಃ ಶಾಂತೋ ಗೌರೀಕಾಂತಸ್ತ್ರಿಲೋಚನಃ ।
ನಾನ್ಯಾಂ ನಿರೀಕ್ಷತೇ ನಿತ್ಯಂ ಧ್ಯಾನಾಸಕ್ತಸ್ತ್ರಿಲೋಚನಃ ॥ ೫೫ ॥
ಪಿತಾಮಹೋಯಮಿತ್ಯುಕ್ತಂ ಯದಾ ಸಖ್ಯಾ ತದಾ ತಯಾ ।
ನಮಸ್ಕೃತ್ಯ ಗತಂ ದೂರೇ ಕೃತ್ವಾ ಮೌನಂ ನ ಪಶ್ಯತಿ ॥ ೫೬ ॥
ಆದಿತ್ಯಂ ಪದ್ಮಕಂ ಮುಂಚ ದಹನಂ ದಹನಾತ್ಮಕಂ ।
ವಾತಿ ವಾತೋ ಗತಾ ದೂರೇ ವರುಣೋ ಮೇ ಪಿತಾ ಯತಃ ॥ ೫೭ ॥
ಪೌಲೋಮೀವದನಾಸಕ್ತೋ ದೇವೇಂದ್ರೋ ಮೇ ನ ರೋಚತೇ ॥ ೫೮ ॥
ವಧಬಂಧಕೃತಚ್ಛೇದಭೇದದಂಡವಿಕರ್ಷಣಂ ।
ಕುರ್ವನ್ನ ಕುರುತೇ ಸೌಮ್ಯಂ ರೂಪಂ ವೈವಸ್ವತೋ ಯಮಃ ॥ ೫೯ ॥
ದೇವದಾನವಗಂಧರ್ವದೈತ್ಯಪನ್ನಗರಾಕ್ಷಸಾನ್ ॥ ೬೦ ॥
ದೃಷ್ಟ್ವಾತ್ಯುಗ್ರಾಂಸ್ತತೋ ಯಾತಿ ದೃಷ್ಟೋಽಸೌ ಪುರುಷೋತ್ತಮಃ ।
ಕರ್ಣಾಂತಲೋಚನಭ್ರಾಂತವಕ್ತ್ರಂ ದೃಷ್ಟ್ವಾವಲೋಕ್ಯ ತಂ ॥ ೬೧ ॥

---

೫೪. ವಿಜಯಾ ಎಂಬ ಲಕ್ಷ್ಮಿಯ ಸಖಿಯು ಮೊದಲು ಎಲ್ಲ ದೇವತೆಗಳನ್ನೂ ಕ್ರಮವಾಗಿ ತಿಳಿಸಿದಳು. ಆ ಲಕ್ಷ್ಮಿಯು ಅವರನ್ನು ನೋಡಿ ಆಲೋಚಿಸಿ ಅವರನ್ನು ಬಿಟ್ಟು ಮುಂದಕ್ಕೆ ಹೋದಳು.

೫೫. ಉದಾಸೀನನೂ, ಶಾಂತನೂ, ಗೌರೀಪತಿಯೂ, ಮುಕ್ಕಣ್ಣನೂ ಧ್ಯಾನ ನಿರತನೂ ಆದ ಶಿವನು ಯಾವಾಗಲೂ ಇತರ ಸ್ತ್ರೀಯನ್ನು ನೋಡುತ್ತಿರಲಿಲ್ಲ.

೫೬. ಅವನನ್ನು ನೋಡಿ . ಸಖಿಯು ಇವನು ಪಿತಾಮಹನೆನ್ನಲು ಲಕ್ಷ್ಮಿಯು ಅವನಿಗೆ ನಮಸ್ಕರಿಸಿ ನೋಡದೆ ಮೌನದಿಂದ ದೂರ ಹೋದಳು.

೫೭. "ಪದ್ಮಧಾರಿಯಾದ ಸೂರ್ಯನನ್ನೂ, ಸುಡುತ್ತಿರುವ ಅಗ್ನಿಯನ್ನೂ ಬಿಡು ವಾಯುವು ಯಾವಾಗಲೂ ಬೀಸುತ್ತಿರುವನು. ವರುಣನು ನನ್ನ ತಂದೆಯು.

೫೮. ಶಚಿಪತಿಯಾದ ದೇವೇಂದ್ರನು ನನಗೆ ರುಚಿಸುವುದಿಲ್ಲ.

೫೯–೬೩. ವಧೆ, ಬಂಧನ, ಛೇದ, ಭೇದ, ಇವುಗಳನ್ನು ಮಾಡುತ್ತಿರುವ. ಯಮನು ಸೌಮ್ಯ ರೂಪವನ್ನು ಧರಿಸುವುದಿಲ್ಲ" ಎಂದು ಆ ಲಕ್ಷ್ಮಿಯು ಅತಿ ಕಠಿನ ರಾದ ದೇವ, ದಾನವ, ಗಂಧರ್ವ, ದೈತ್ಯ, ಉರಗ, ರಾಕ್ಷಸರನ್ನು ಕಂಡು ಅವರನ್ನು

ಸೌಭಾಗ್ಯಾತಿಶಯಾಕ್ರಾಂತಂ ರಮ್ಯಂ ಕಾಮಮನೋಹರಂ ।
ಸಂಜಾತಪುಲಕೋದ್ಭೇದಸ್ವೇದವಾರಿಕಣಾಂಕಿತಂ ॥ ೬೨ ॥
ದೇವದಾನವದೈತ್ಯೇಂದ್ರಕ್ರೋಧದೃಷ್ಟಿನಿರೀಕ್ಷಿತಂ ।
ರಮ್ಯಂ ರಾಮಾ ವರಂ ಚಕ್ರೇ ದದೌ ಮಾಲಾಂ ತತಸ್ಸ್ವಯಂ ॥ ೬೩ ॥
ದೈತ್ಯಾಃ ಪರಸ್ಪರಂ ಪ್ರೋಚುಃ ಪ್ರೇಕ್ಷ್ಯ ತತ್ಸುರಚೇಷ್ಟಿತಂ ।
ವಿಭಾಗಂ ಪಶ್ಯ ದೇವಾನಾಂ ಸ್ವರ್ಗೇ ಸರ್ವೇ ಸ್ವಯಂ ಗತಾಃ ॥ ೬೪ ॥
ಪಾತಾಲಸ್ಯ ತಲೇ ಯೂಯಂ ಮಾನವಾ ಧರಣೀತಲೇ ।
ದೇವಾಸ್ತ್ರಿಭುವನೇ ಯಾಂತು ನ ವಯಂ ಸ್ವರ್ಗಗಾಮಿನಃ ॥ ೬೫ ॥
ಮಾನವಾಃ ಕ್ಷತ್ರಿಯಾ ರಾಜ್ಯಂ ಕುರ್ವಂತು ಪೃಥಿವೀತಲೇ ।
ಪಾತಾಲಂ ತು ಪರಿತ್ಯಜ್ಯ ಧಾತ್ರೀ ಯದಿ ತು ರಕ್ಷ್ಯತೇ ॥ ೬೬ ॥
ದೈತ್ಯದಾನವಜೈಃ ಕಶ್ಚಿದ್ರಾಕ್ಷಸೈಸ್ತನ್ನ ಶೋಭನಂ ।
ಅಥಂ ಕಿಂ ಬಹುನೋಕ್ತೇನ ರಾಜಾ ತ್ರಿಭುವನೇ ಬಲಿಃ ॥ ೬೭ ॥
ಸಂವಿಭಜ್ಯಾಥ ರತ್ನಾನಿ ಸಮಂ ರಾಜ್ಯಂ ವಿಧೀಯತಾಂ ।
ಯಾವದೇವಂ ಪ್ರಗಲ್ಭಂತೇ ತಾವತ್ಪಶ್ಯಂತಿ ನಾರದಂ ॥ ೬೮ ॥

---

ತ್ಯಜಿಸಿ ಮುಂದೆ ಸಾಗಿ ವಿಶಾಲಾಕ್ಷನೂ, ಸುಂದರನೂ, ಮನ್ಮಥನಂತೆ ಮನೋಹರನೂ ರೋಮಾಂಚಗೊಂಡವನೂ, ಬೆವರಿನ ಹನಿಗಳುಳ್ಳವನೂ, ಕುಪಿತರಾದ ದೇವದಾನವಾದಿಗಳಿಂದ ನೋಡಲ್ಪಟ್ಟವನೂ ಆದ ಹರಿಯನ್ನು ಕಂಡು ಆವನು ತನಗೆ ಉತ್ತಮ ವರನೆಂದು ಮಾಲೆಯನ್ನು ಹಾಕಿದಳು.

೬೪–೬೫. ದೈತ್ಯರು ಆ ದೇವತೆಗಳ ಕೆಲಸವನ್ನು ಕಂಡು ಪರಸ್ಪರವಾಗಿ ಹೀಗೆ ಮಾತಾಡಿಕೊಂಡರು. "ದೇವತೆಗಳು ವಿಭಾಗಮಾಡಿರುವುದನ್ನು ನೋಡು. ತಾವೆಲ್ಲ ಸ್ವರ್ಗಕ್ಕೆ ತೆರಳಿ ಪಾತಾಳದಲ್ಲಿ ನಿಮ್ಮನ್ನೂ, ಭೂಮಿಯಲ್ಲಿ ಮನುಷ್ಯರನ್ನೂ ವಾಸಿಸುವಂತೆ ಮಾಡಿದರು. ಆ ದೇವತೆಗಳು ಮೂರಲೋಕಗಳಲ್ಲಿಯೂ ಸಂಚರಿಸುವರು. ನಾವು ಸ್ವರ್ಗಕ್ಕೆ ಹೋಗುವಂತಿಲ್ಲ.

೬೬–೬೮. ಮಾನವರಾದ ಕ್ಷತ್ರಿಯರು ಭೂಮಿಯಲ್ಲಿ ರಾಜ್ಯವಾಳಬಹುದು. ದೈತ್ಯ, ದಾನವ, ರಾಕ್ಷಸರಲ್ಲಿ ಕೆಲವರು ಪಾತಾಳವನ್ನು ಬಿಟ್ಟು ಭೂಮಿಯಲ್ಲಿ ರಾಜ್ಯವಾಳಿದರೆ ಅದು ಉಚಿತವಲ್ಲವಂತೆ. ಬಹುಮಾತಿನಿಂದೇನು ಪ್ರಯೋಜನ? ಬಲಿರಾಜನು ಮೂರು ಲೋಕಗಳಲ್ಲಿರುವ ರತ್ನಗಳನ್ನು ವಿಭಾಗಿಸಿ ರಾಜ್ಯವನ್ನು ಸರಿಯಾಗಿ ಪಾಲನೆ ಮಾಡಲಿ. ಹೀಗೆ ಆ ದಾನವರು ಆಡಂಬರದಿಂದ ಮಾತಾಡುತ್ತಾ ಆಕಾಶದಿಂದ ಇಳಿಯುತ್ತಿರುವ

ಗಗನಾತ್ಸಮುಪಾಯಾಂತಂ ದ್ವಿತೀಯಮಿವ ಭಾಸ್ಕರಂ ।
ಬ್ರಹ್ಮದಂಡಕರಾಸಕ್ತಯುದ್ಧಪುಸ್ತಕಧಾರಿಣಂ ॥ ೧೯ ॥
ಕೃಷ್ಣಾಜಿನಧರಂ ಶಾಂತಂ ಛತ್ರವೀಣಾಕಮಂಡಲೂನ್ ।
ಮೌಂಜೀಗುಣತ್ರಯಾಸಕ್ತಗ್ರಂಥಿಪ್ರವರಮೇಖಲಂ ॥ ೨೦ ॥
ಬ್ರಹ್ಮರೂಪಧರಂ ಶಾಂತಂ ದಿವ್ಯರುದ್ರಾಕ್ಷಭೂಷಿತಂ ।
ಗತಕಲ್ಪಕೃತಗ್ರಂಥಿ ಸೂತ್ರಮಾಲಾವಲಂಬಿತಂ ॥ ೨೧ ॥
ವಿರಿಂಚಿಹರಸಂವಾದೋ ಜನ್ಮಾಹಂಕಾರಗರ್ವಿತಃ ।
ಸಂಕ್ರುದ್ಧೈಃ ಕ್ರಿಯತೇ ಕೋಽದ್ಯ ಚಿಂತಾತತ್ಪರಮಾನಸಂ ॥ ೨೨ ॥
ಆಯಾಂತಂ ನಾರದಂ ದೃಷ್ಟ್ವಾ ವಿಸ್ಮಿತಾಃ ಸಮುಪಸ್ಥಿತಾಃ ।
ಪ್ರಭೋ ಪ್ರಸಾದಃ ಕ್ರಿಯತಾಮಾಗಂತವ್ಯಂ ಗೃಹೇ ಮಮ ॥ ೨೩ ॥
ಧನ್ಯೋಽಹಂ ಕೃತಪುಣ್ಯೋಽಹಂ ಯಸ್ಯ ಮೇ ತ್ವಂ ಗೃಹಾಗತಃ ।
ಇತ್ಯುಕ್ತೋ ಬಲಿನಾ ವಿಪ್ರೋ ವಿವೇಶಾಸುರಮಂದಿರೇ ।
ಆಸನಂ ಪಾದ್ಯಮರ್ಘ್ಯಂ ಚ ದತ್ವಾ ಸಂಪೂಜಿತೋ ದ್ವಿಜಃ ॥ ೨೪ ॥
ಪ್ರವಿಶ್ಯ ಸಹಿತಾಃ ಸರ್ವೇ ಸಂವಿಷ್ಟಾ ದೈತ್ಯದಾನವಾಃ ।
ಶುಕ್ರೇಣ ಸಹಿತೋ ದೈತ್ಯೋ ಬಭಾಷೇ ನಾರದಂ ಬಲಿಃ ॥ ೨೫ ॥

---

ಎರಡನೆಯ ಸೂರ್ಯನಂತಿರುವವನೂ, ಬ್ರಹ್ಮದಂಡ,ಯುದ್ಧಪುಸ್ತಕಗಳನ್ನು ಹಿಡಿದಿರುವವನೂ, ಕೃಷ್ಣಾಜಿನವನ್ನು ಧರಿಸಿರುವವನೂ. ಶಾಂತನೂ, ಕೊಡೆ, ವೀಣೆ, ಕಮಂಡಲುಗಳನ್ನು ಧರಿಸಿರುವವನೂ,ಮುಮ್ಮಡಿಯಿಂದ ಮೌಂಜಿಯ ಪಾಬುಳ್ಳವನೂ,ಬ್ರಾಹ್ಮಣ ರೂಪಿಯೂ, ದಿವ್ಯ ರುದ್ರಾಕ್ಷಿಯಿಂದ ಅಲಂಕಾರಗೊಂಡವನೂ, ಹಿಂದಿನ ಕಲ್ಪದಲ್ಲಿ ಮಾಡಿದ ಸೂತ್ರ ಮಾಲೆಯುಳ್ಳವನೂ, .ಕುಪಿತರಾದ ಯಾರು ಈಗ ಜನ್ಮಾಹಂಕಾರಗಳಿಂದ ಕೂಡಿದ ಬ್ರಹ್ಮ ಹರರ ಸಂವಾದವನ್ನು ವರ್ಣಿಸುವರೆಂದು ಚಿಂತಾಕ್ರಾಂತವಾದ ಮನಸ್ಸುಳ್ಳವನೂ ಆದ ನಾರದನನ್ನು ನೋಡಿ ಆಶ್ಚರ್ಯದಿಂದ ಸಮೀಪಿಸಿದರು. ಬಲಿಯು, "ಸ್ವಾಮಿ ! ಅನುಗ್ರಹಿಸಿ ನನ್ನ ಮನೆಗೆ ಬಾ. ನೀನು ನನ್ನ ಮನೆಗೆ ಬಂದುದರಿಂದ ನಾನು ಧನ್ಯನಾಗಿರುವೆನು". ಎಂದು ಹೇಳಲು ಮುನಿಯು ಆ ಬಲಿಯ ಮನೆಯನ್ನು ಹೊಕ್ಕನು. ಬಲಿಯು ಅವನಿಗೆ ಆಸನ, ಪಾದ್ಯ, ಅರ್ಘ್ಯಗಳನ್ನಿತ್ತು ಪೂಜಿಸಿದನು.

೨೫. ದೇವದಾನವರು ಒಟ್ಟಿಗೆ ಸೇರಿ ಕುಳಿತುಕೊಳ್ಳಲು ಬಲಿಯು ಈ ಶುಕ್ರಾಚಾರ್ಯರೊಡನೆ ನಾರದನನ್ನು ಕುರಿತು ಇಂತೆಂದನು.

ಇದಂ ರಾಜ್ಯಮಿಮೇ ದಾರಾ ಇಮೇ ಪುತ್ರಾ ಅಹಂ ಬಲಿಃ ।
ಬ್ರೂಹಿ ಯೇನಾತ್ರ ತೇ ಕಾರ್ಯಂ ದಾನಂ ಮೇ ಪ್ರಥಮಂ ವ್ರತ ॥ ೭೬ ॥

ನಾರದ ಉವಾಚ :—

ಭಕ್ತ್ಯಾ ತುಷ್ಯಂತಿ ಯೇ ವಿಪ್ರಾಸ್ತೇ ವಿಪ್ರಾ ಭೂಮಿದೇವತಾಃ ।
ನ ತು ಯೇ ಪೂಜಿತಾಃ ಶಕ್ತ್ಯಾ ಪುನರ್ಯಾಚಂತಿ ತೇಽಧಮಾಃ ॥ ೭೭ ॥
ತ್ವಯಾಽಹಂ ಪೂಜಿತೋ ಹೃಷ್ಟೋ ನ ವಿತ್ತೈರ್ಮೇ ಪ್ರಯೋಜನಂ ।
ಹೃಷ್ಟೋಽಹಂ ತವ ರಾಜ್ಯೇನ ಯಜ್ಞೈರ್ದಾನೈರ್ವ್ರತೈಸ್ತಥಾ ॥ ೭೮ ॥
ದೇವೈಃ ಕೃತಂ ವಿಪ್ರಿಯಂ ತೇ ಕಿಂಚಿತ್ಪಶ್ಯಾಮ್ಯಹಂ ಬಲೇ ।
ತ್ವಯಾ ಸಂಪೂಜ್ಯಮಾನೋಽಪಿ ದೇವರಾಜೋ ನ ತುಷ್ಯತಿ ॥ ೭೯ ॥
ನ ಕ್ಷಮಂತಿ ಸುರಾಸ್ಸರ್ವೇ ತವ ರಾಜ್ಯಂ ಧರಾತಲೇ ।
ಸ್ವರ್ಗೇ ಮೇ ತಾವಕೋ ಜಾತೋ ದೇವಾನಾಂ ತವ ವಿಗ್ರಹೇ ॥ ೮೦ ॥
ಸಂನಹ್ಯ ಪ್ರಮಂ ಯಾತಿ ಯಸ್ಸೈನ್ಯಂ ಶತ್ರುಭೂಮಿಷು ।
ಸ ಕ್ಷತ್ರಿಯೋ ವಿಜಯತೇ ತಸ್ಯ ರಾಜ್ಯಂ ಚ ವರ್ಧತೇ ॥ ೮೧ ॥

---

೭೬. "ಇದು ನನ್ನ ರಾಜ್ಯ. ಇವಳು ನನ್ನ ಪತ್ನಿ. ಇವರು ಪುತ್ರರು. ನಾನು ಬಲಿರಾಜನು. ಇವುಗಳಲ್ಲಿ ನಿನಗೆ ಯಾವುದರಿಂದ ಏನಾಗಬೇಕಾಗಿದೆ ? ದಾನವು ನನ್ನ ಮೊದಲನೆ ನಿಯಮವು".

೭೭. ನಾರದನು ಹೇಳುತ್ತಾನೆ :—ಭಕ್ತಿಯಿಂದ ಸಂತೋಷಗೊಂಡ ನನಗೆ ದ್ರವ್ಯದಿಂದ ಪ್ರಯೋಜನವಿಲ್ಲ. ನಾನು ನಿನ್ನ ರಾಜ್ಯ, ಯಜ್ಞ, ದಾನ, ವ್ರತಗಳಿಂದ ಸಂತೋಷಗೊಂಡಿರುವೆನು.

೭೮. ಬಲಿರಾಜ ! ನಿನಗೆ ದೇವತೆಗಳು ಯಾವುದೋ ಒಂದು ಅಪಕಾರಮಾಡಿದ್ದಾರೆಂದು ತಿಳಿಯುತ್ತೇನೆ. ನೀನು ಪೂಜಿಸಿದರೂ ದೇವೇಂದ್ರನು ಸಂತೋಷಗೊಳ್ಳುವುದಿಲ್ಲ.

೭೯. ಸಕಲ ದೇವತೆಗಳೂ ನೀನು ಭೂಮಿಯಲ್ಲಿ ರಾಜನಾಗಿರುವುದನ್ನು ಸಹಿಸುವುದಿಲ್ಲ. ನಿನಗೆ ದೇವತೆಗಳೊಡನೆ ಯುದ್ಧವಾದರೆ ನನಗೆ ವ್ಯಥೆಯುಂಟಾಗುವುದು.

೮೦. ಮೊದಲು ಸೈನ್ಯವನ್ನು ಸಿದ್ಧಮಾಡಿಕೊಂಡು ಶತ್ರುರಾಜ್ಯವನ್ನು ಪ್ರವೇಶಿಸುವ ಕ್ಷತ್ರಿಯನು ಜಯಿಸುವನು; ಅವನ ರಾಜ್ಯವು ವೃದ್ಧಿಗೊಳ್ಳುವುದು.

೮೧ ನಿನ್ನ ರಾಜ್ಯವು ಹಾಳಾಗುವುದೆಂದು ನಾನು ಕೇಳಿರುವೆನು. ನೀನು ಇದನ್ನರಿತು ಶೀಘ್ರವಾಗಿ ಉಚಿತಕಾರ್ಯವನ್ನು ಮಾಡು.

ಉಚ್ಛೇದಸ್ತವ ರಾಜ್ಯಸ್ಯ ಭವಿಷ್ಯತಿ ಶ್ರುತಂ ಮಯಾ ।
ಏವಂ ಜ್ಞಾತ್ವಾ ಯಥಾಯುಕ್ತಂ ತಚ್ಛೀಘ್ರಂ ತು ವಿಧೀಯತಾಂ ॥ ೮೨ ॥

ಬಲಿರುವಾಚ :—

ಯೈರ್ಗುಣೈಃ ಕುರುತೇ ರಾಜ್ಯಂ ರಾಜಾ ತಾನ್ವದ ಮೇ ವಿಭೋ ।
ದಾನಂ ಪಾತ್ರೇ ಪ್ರದಾತವ್ಯಂ ಮಯಾ ತ್ವಮಪಿ ತಂ ವದ ॥ ೮೩ ॥

ನಾರದ ಉವಾಚ :—

ಷಡ್ತ್ರಿಂಶದ್ಗುಣಸಂಪನ್ನೋ ರಾಜಾ ರಾಜ್ಯಂ ಕರೋತಿ ಚ ।
ಸ ರಾಜ್ಯಫಲಮಾಪ್ನೋತಿ ಶೃಣು ತತ್ಕಥಯಾಮ್ಯಹಂ ॥ ೮೪ ॥
ಚರೇದ್ಧರ್ಮಾನಕಟುಕೋ ಮುಂಚೇತ್ಸ್ನೇಹಮನಾಸ್ತಿಕೇ ।
ಅನೃಶಂಸ್ಯಶ್ಚರೇದರ್ಥಂ ಚರೇತ್ಕಾಮಮನುದ್ಧತಃ ॥ ೮೫ ॥
ಪ್ರಿಯಂ ಬ್ರೂಯಾದಕೃಪಣಃ ಶೂರಃ ಸ್ಯಾದವಿಕತ್ಥನಃ ।
ದಾತಾ ಚಾಽಯಾಮವರ್ಜಃ ಸ್ಯಾತ್ಪ್ರಗಲ್ಭಃ ಸ್ಯಾದನಿಷ್ಠುರಃ ॥ ೮೬ ॥
ಸಂದಧೀತ ನ ಚಾನಾರ್ಯಾನ್ವಿಗೃಹ್ಣೀಯಾನ್ನ ಬಂಧುಭಿಃ ।
ನಾನಾಪ್ತೈಶ್ಚಾರಯೇಚ್ಚಾರಾನ್ಕುರ್ಯಾತ್ಕಾರ್ಯಮಪೀಡಯಾ ॥ ೮೭ ॥

---

೮೩. ಬಲಿಯು ಹೇಳುತ್ತಾನೆ :—ರಾಜನು ರಾಜ್ಯವಾಳಲು ಅವಶ್ಯಕವಾದ ಗುಣಗಳಾಗುವುವು ? ದಾನಕ್ಕೆ ಉತ್ತಮನಾದ ಪಾತ್ರನಾರು ? ಅದನ್ನು ಹೇಳು.

೮೪. ನಾರದನು ಹೇಳುತ್ತಾನೆ :—ಇಪ್ಪತ್ತಾರು ಗುಣಗಳುಳ್ಳ ರಾಜನು ರಾಜ್ಯ ವಾಳುವನು. ಅವನೇ ರಾಜ್ಯ ಫಲವನ್ನು ಹೊಂದುವವನು ಅದನ್ನು ಹೇಳುವೆನು ಕೇಳು.

೮೫. ಕಠಿನನಾಗದೆ ಧರ್ಮವನ್ನಾಚರಿಸಬೇಕು. ನಾಸ್ತಿಕನಲ್ಲಿ ಸ್ನೇಹಮಾಡಬಾರದು. ಘಾತುಕನಾಗದೆ ದ್ರವ್ಯವನ್ನಾರ್ಜಿಸಬೇಕು. ಉದ್ಧತನಾಗದೆ ಕಾಮವನ್ನನ್ನು ಭವಿಸಬೇಕು.

೮೬. ದೀನನಾಗದೆ ಹಿತನ ವಚನವನ್ನಾಡಬೇಕು. ತನ್ನನ್ನು ಹೊಗಳಿಕೊಳ್ಳದೆ ಶೂರನಾಗಬೇಕು. ನೆಪದಿಂದ ವಿಳಂಬಮಾಡದೆ ದಾನಮಾಡಬೇಕು. ನಿಷ್ಠುರನಾಗದೆ ಚತುರನಾಗಬೇಕು.

೮೭. ದುಷ್ಟರೊಡನೆ ಸಂಧಿಮಾಡಿಕೊಳ್ಳಬಾರದು. ಬಂಧುಗಳೊಡನೆ ಜಗಳವಾಡಬಾರದು. ಆಪ್ತರಲ್ಲದವರನ್ನು ಗೂಢಚಾರರನ್ನಾಗಿ ಮಾಡಬಾರದು. ಪರರಿಗೆ ಪೀಡೆಯಾಗದಂತೆ ಕಾರ್ಯವನ್ನೆಸಗಬೇಕು.

ಅರ್ಥಾನ್ಸ್ವಾನ್ಪ್ರಯಾನ್ನ ಚಾಪತ್ಸು ಗುಣಾನ್ಸ್ವಾನ್ಪ್ರಯಾನ್ನ ಚಾತ್ಮನಃ ।
ಆದದ್ಯಾನ್ನ ಚ ಸಾಧುಭ್ಯೋ ನಾಸತ್ಪುರುಷಮಾಶ್ರಯೇತ್ ॥ ೮೮ ॥
ನಾಪರೀಕ್ಷ್ಯ ನಯೇದ್ದಂಡಂ ನ ಚ ಮಂತ್ರಂ ಪ್ರಕಾಶಯೇತ್ ।
ವಿಸೃಜೇನ್ನ ಚ ಲುಬ್ಧೇಭ್ಯೋ ವಿಶ್ವಸೇನ್ನಾಪಕಾರಿಷು ॥ ೮೯ ॥
ಅಪ್ತೈಃ ಸುಗುಪ್ತದಾರಃ ಸ್ಯಾದ್ರಕ್ಷ್ಯಶ್ಚಾನ್ಯೋ ಘೃಣೀ ನೃಪಃ ।
ಸ್ತ್ರಿಯಂ ಸೇವೇತ ನಾತ್ಯರ್ಥಂ ಮೃಷ್ಟಂ ಭುಂಜೀತ ನಾಽಹಿತಂ ॥ ೯೦ ॥
ಅಸ್ತೇಯಃ ಪೂಜಯೇನ್ಮಾನ್ಯಾನ್ಗುರುಂ ಸೇವೇದಮಾಯಯಾ ।
ಅರ್ಚ್ಯೋ ದೇವೋ ನ ದಂಭೇನ ಶ್ರಿಯಮಿಚ್ಛೇದಕುತ್ಸಿತಾಂ ॥ ೯೧ ॥
ಸೇವೇತ ಪ್ರಣಯಂ ಕೃತ್ವಾ ದಕ್ಷಃಸ್ಯಾದಥ ಕಾಲವಿತ್ ।
ಸಾಂತ್ವಯೇತ್ಸದಾ ವಾಚ್ಯಮನುಗೃಹ್ಣನ್ನ ಚಾಕ್ಷಿಪೇತ್ ॥ ೯೨ ॥
ಪ್ರಹರೇನ್ನ ಚ ವಿಪ್ರಾಯ ಹತ್ವಾ ಶತ್ರೂನ್ನ ಶೇಷಯೇತ್ ।
ಕ್ರೋಧಂ ಕುರ್ಯಾನ್ನ ಚಾಕಸ್ಮಾನ್ಮೃದುಃ ಸ್ಯಾನ್ನಾಪಕಾರಿಷು ॥ ೯೩ ॥

---

೮೮. ಆಪತ್ತುಗಳಲ್ಲಿ ದ್ರವ್ಯವಿರುವುದನ್ನು ತಿಳಿಸಬಾರದು. ತನ್ನ ಗುಣಗಳನ್ನು ತಾನೇ ಹೊಗಳಿಕೊಳ್ಳಬಾರದು ಸಜ್ಜನರಿಂದ ಏನನ್ನೂ ತೆಗೆದುಕೊಳ್ಳಕೂಡದು ದುಷ್ಟರನ್ನಾಶ್ರಯಿಸಬಾರದು.

೮೯. ಪರೀಕ್ಷಿಸದೆ ಶಿಕ್ಷಿಸಬಾರದು. ಮಂತ್ರಾಲೋಚನೆಯನ್ನು ಪ್ರಕಾಶಗೊಳಿಸ ಕೂಡದು. ಲೋಭಿಗೆ ದಾನಮಾಡಕೂಡದು. ಅಪಕಾರಿಯನ್ನು ನಂಬಬಾರದು.

೯೦. ಆಪ್ತರಿಂದ ಪತ್ನಿಯನ್ನು ರಕ್ಷಿಸಿಕೊಳ್ಳಬೇಕು. ದಯಾಳುವಾದ ರಾಜನನ್ನು ಕಾಪಾಡಬೇಕು. ಅತಿಯಾಗಿ ಸ್ತ್ರೀಯನ್ನು ಸೇವಿಸಬಾರದು. ಮೃಷ್ಟಾನ್ನವನ್ನು ಭುಂಜಿಸಬೇಕು. ಅನಿಷ್ಟವಾದ್ದನ್ನು ತಿನ್ನಕೂಡದು.

೯೧. ಕಳ್ಳತನವಿಲ್ಲದೆ ಪೂಜ್ಯರನ್ನು ಪೂಜಿಸಬೇಕು. ಗುರುವನ್ನು ನಿಷ್ಕಪಟನಾಗಿ ಸೇವಿಸಬೇಕು. ದೇವರನ್ನು ಮೋಸದಿಂದ ಪೂಜಿಸಬಾರದು. ನಿಂದ್ಯವಾದ ಸಂಪತ್ತನ್ನು ಅಪೇಕ್ಷಿಸಬಾರದು.

೯೨. ಕುಶಲನೂ, ಕಾಲಜ್ಞನೂ ಆಗಿ ಪ್ರೀತಿಯಿಂದ ಸೇವಿಸಬೇಕು. ಅನುಗ್ರಹ ಮಾಡುತ್ತ ಯಾವಾಗಲೂ ಸಮಾಧಾನಕರರಾದ ಮಾತನ್ನಾಡಬೇಕು ಆಕ್ಷೇಪಿಸಬಾರದು.

೯೩. ಬ್ರಾಹ್ಮಣರನ್ನು ಹೊಡೆಯಕೂಡದು. ಶತ್ರುಗಳನ್ನು ನಿಶ್ಶೇಷವಾಗಿ ಕೊಲ್ಲಬೇಕು. ಕಾರಣವಿಲ್ಲ ಕುಪಿತನಾಗಬಾರದು. ಅಪಕಾರಿಗಳಲ್ಲಿ ಮೃದುವಾಗಿರ ಕೂಡದು.

ಏವಂ ರಾಜ್ಯೇ ಸದಾ ಸ್ಥೇಯಂ ಯದಿ ಶ್ರೇಯ ಇಹೇಚ್ಛಸಿ ।
ತಪ ಸ್ಸ್ವಾಧ್ಯಾಯದಾನಾನಿ ತೀರ್ಥಯಾತ್ರಾಽಶ್ರಮಾಣಿ ಚ ॥ ೯೪ ॥
ಯೋಗೇನಾತ್ಮಪ್ರಬೋಧಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ತ್ವಯಾ ಸಂಸಾರವೈರಾಗ್ಯಂ ಕರ್ತವ್ಯಂ ವಿಪ್ರಪೂಜನಂ ॥ ೯೫ ॥
ಯಷ್ಟವ್ಯಂ ವಿವಿಧೈರ್ಯಜ್ಞೈರ್ಧ್ಯೇಯೋ ನಾರಾಯಣೋ ಹರಿಃ ।
ಪ್ರಸಂಗೇನ ಸಮಾಯಾತೋ ಯಾಸ್ಯೇ ರೈವತಕೇ ಗಿರೌ ॥ ೯೬ ॥
ತತ್ರಾಸ್ತೇ ಭಗವಾನ್ವಿಷ್ಣುರ್ನದೀ ತ್ರೈಲೋಕ್ಯಪಾವನೀ ।
ತತ್ರಾಸ್ತೇ ಚ ಶಿವಾ ವೃಕ್ಷೋ ಬಹುಪುಷ್ಪಫಲಾನ್ವಿತಃ ।
ತತ್ರ ಗತ್ವಾ ಕರಿಷ್ಯಾಮಿ ವ್ರತಂ ತದ್ವಿಷ್ಣುವಲ್ಲಭಂ ॥ ೯೭ ॥

ಬಲಿರುವಾಚ :—

ಕೋಽಯಂ ರೈವತಕೋ ನಾಮ ವ್ರತಂ ಕಿಂ ವಿಷ್ಣುವಲ್ಲಭಂ ।
ಶಿವಾವೃಕ್ಷಾಸ್ತು ಕೇ ಪ್ರೋಕ್ತಾಸ್ತತ್ಕಥಂ ಕಥಯಸ್ವ ಮೇ ॥ ೯೮ ॥

ನಾರದ ಉವಾಚ :—

ಪುರಾ ಯುಗೇತು ದೈತ್ಯೇಂದ್ರ ಸಪಕ್ಷಾಃ ಪರ್ವತಾಃ ಕೃತಾಃ ।
ಸಂಚಿತ್ಯ ಬ್ರಹ್ಮಣಾ ಪಶ್ಚಾದಲಾಸ್ತೇ ಕೃತಾಃ ಪುನಃ ॥ ೯೯ ॥

---

೯೪—೯೬. ಈ ಲೋಕದಲ್ಲಿ ನೀನು ಶ್ರೇಯಸ್ಸನ್ನು ಬಯಸುವುದಾದರೆ ಹೀಗೆ ರಾಜ್ಯದಲ್ಲಿರಬೇಕು. ತಪಸ್ಸು, ವೇದಾಧ್ಯಯನ, ದಾನ, ತೀರ್ಥಯಾತ್ರೆ, ಆಶ್ರಮ, ಇವುಗಳು ಆತ್ಮ ಜ್ಞಾನಯೋಗದ ಹದಿನಾರನೆ ಒಂದು ಕಲೆಗೂ ಸಮಾನವಲ್ಲ. ನೀನು ಸಂಸಾರದಲ್ಲಿ ವಿರಕ್ತನಾಗಿ ಬ್ರಾಹ್ಮಣರನ್ನು ಪೂಜಿಸಬೇಕು. ವಿವಿಧ ಯಜ್ಞಗಳಿಂದ ಯಾಗಮಾಡಬೇಕು. ನಾರಾಯಣನನ್ನು ಧ್ಯಾನಿಸಬೇಕು. ನಾನು ನಾನೊಂದು ಸಂದರ್ಭದಿಂದ ಇಲ್ಲಿಗೆ ಬಂದಿರುವೆನು. ರೈವತಕಗಿರಿಗೆ ತೆರಳುವೆನು.

೯೭. ಅಲ್ಲಿ ಪೂಜ್ಯನಾದ ವಿಷ್ಣುವೂ ತ್ರಿಲೋಕಪಾವನೆಯಾದ ಗಂಗೆಯೂ, ಅನೇಕ ಫಲಗಳಿಂದ ವಿರಾಜಿಸುವ ಶಿವಾವೃಕ್ಷವೂ ಇವೆ. ನಾನಲ್ಲಿಗೆ ಹೋಗಿ ವಿಷ್ಣು ಪ್ರಿಯವಾದ ವ್ರತವನ್ನಾಚರಿಸುವೆನು.

೯೮. ಬಲಿಯು ಹೇಳುತ್ತಾನೆ:—ಮುನಿಯೇ! ರೈವತಕವೆಂಬ ಪರ್ವತವಾವುದು? ವಿಷ್ಣುಪ್ರಿಯವಾದ ವ್ರತವು ಯಾವುದು? ಶಿವಾವೃಕ್ಷಗಳಾವುವು? ಅದು ಹೇಗೆ ಅದನ್ನು ನನಗೆ ಹೇಳು.

೯೯—೧೦೦. ನಾರದನು ಹೇಳುತ್ತಾನೆ:—ದೈತ್ಯರಾಜ! ಹಿಂದೆ ಬ್ರಹ್ಮನು ಪರ್ವತಗಳಿಗೆ ಸೃಷ್ಟಿಮಾಡಿದ್ದನು. ಬಳಿಕ ಆಲೋಚಿಸಿ ರೆಕ್ಕೆಗಳನ್ನು ಸ್ವೇಚ್ಛೆಯಿಂದ

ಉತ್ಪತಂತಿ ಮಹಾಕಾಯಾ ನಿಪತಂತಿ ಯದೃಚ್ಛಯಾ ।
ಮೇರುಮಂದರಕೈಲಾಸಾ ವಚಸಾ ಸಂಸ್ಥಿತಾಃ ಸ್ಥಿರಾಃ ॥ ೧೦೦ ॥
ವಾರಿತಾ ನ ಸ್ಥಿರಾ ಯೇ ತು ತ ಇಂದ್ರೇಣ ಸ್ಥಿರೀಕೃತಾಃ ।
ಮೇರೋರ್ದಕ್ಷಿಣಶೃಂಗೇ ತು ಕುಮುದೇತಿ ಸ ಪರ್ವತಃ ॥ ೧೦೧ ॥
ದಿವ್ಯಃ ಸಪಕ್ಷಃ ಸೌವರ್ಣೋ ದಿವ್ಯವೃಕ್ಷೈಃ ಸಮಾವೃತಃ ।
ತಸ್ಯೋಪರಿ ಪುರೀ ದಿವ್ಯಾ ವೈಷ್ಣವೀ ವಿಷ್ಣುನಾ ಕೃತಾ ॥ ೧೦೨ ॥
ತಸ್ಯಾ ಮಧ್ಯೇ ಗೃಹಂ ದಿವ್ಯಂ ಯಸ್ಮಿಂಲ್ಲಕ್ಷ್ಮೀಃ ಸದಾ ಸ್ಥಿತಾಃ ।
ಮೇರೋಃ ಶೃಂಗೇ ಪುರೀ ರಮ್ಯಾ ಗೃಹಂ ತತ್ರ ಮನೋರಮಂ ॥ ೧೦೩ ॥
ತತ್ರಾಸ್ತೇ ಸ ಭವೋ ದೇವೋ ಭವಾನೀ ಯತ್ರ ಸಂಸ್ಥಿತಾ ।
ಸಭಾ ಮಾಹೇಶ್ವರೀ ರಮ್ಯಾ ಸೌವರ್ಣೀ ರತ್ನಮಂಡಿತಾ ॥ ೧೦೪ ॥
ತತ್ರಾಸ್ತೇ ಭಗವಾನ್ವಿಷ್ಣುರ್ದೇವೈರ್ಬ್ರಹ್ಮಾದಿಭಿರ್ವೃತಃ ।
ತಸ್ಯಾಂ ವಿಷ್ಣುಃ ಸದಾ ಯಾತಿ ದೇವಂ ದ್ರಷ್ಟುಂ ಮಹೇಶ್ವರಂ ॥ ೧೦೫ ॥
ಸೌವರ್ಣೈಃ ಕುಮುದೈರ್ಯಸ್ಮಾದಸೌ ಸರ್ವತ್ರ ಮಂಡಿತಃ ।
ಕುಮುದೇತಿ ಕೃತಂ ನಾಮ ದೈವೈಸ್ತತ್ರ ಸಮಾಗತೈಃ ॥ ೧೦೬ ॥

---

ಮೇಲಕ್ಕೆ ಹಾರುವುವೂ, ಕೆಳಕ್ಕೆ ಬೀಳುವುವೂ ಆದ ಅವುಗಳ ರೆಕ್ಕೆಗಳನ್ನು ತೆಗೆಯಿಸಿ ಚಲಿಸದಂತೆ ಮಾಡಿದನು. ಆನಂತರ ಮೇರು, ಮಂದರ, ಕೈಲಾಸಪರ್ವತಗಳು ಸ್ಥಿರವಾಗಿ ನಿಂತುವು.

೧೦೧–೧೦೨. ಎಷ್ಟು ತಡೆದರೂ ನಿಲ್ಲದಿರುವ ಬೆಟ್ಟಗಳನ್ನು ಇಂದ್ರನು ಸ್ಥಿರಪಡಿಸಿದನು. ಮೇರುವಿನ ದಕ್ಷಿಣ ಶಿಖರದಲ್ಲಿ ರೆಕ್ಕೆಗಳಿಂದ ಕೂಡಿರುವುದೂ, ದಿವ್ಯವೃಕ್ಷಗಳಿಂದ ತುಂಬಿರುವುದೂ ಆದ ಕುಮುದವೆಂಬ ಸುವರ್ಣ ಪರ್ವತವಿರುವುದು. ಅದರ ಮೇಲೆ ವಿಷ್ಣುವು ನಿರ್ಮಿಸಿದ ದಿವ್ಯ ಪಟ್ಟಣವೊಂದಿರುವುದು.

೧೦೩–೧೦೪. ಅದರ ಮಧ್ಯದಲ್ಲಿರುವ ದಿವ್ಯಗೃಹದಲ್ಲಿ ಲಕ್ಷ್ಮಿಯು ಯಾವಾಗಲೂ ನೆಲೆಸಿರುವಳು. ಮೇರು ಶಿಖರದಲ್ಲಿರುವ ಸುಂದರ ಗೃಹದಲ್ಲಿ ಭವನೂ ಭವಾನಿಯೂ ಇರುವರು. ಅಲ್ಲಿ ರತ್ನಾಲಂಕೃತವಾದ ಚಿನ್ನದ ಮಾಹೇಶ್ವರ ಸಭೆಯಿರುವುದು.

೧೦೫. ಅಲ್ಲಿಯೇ ಬ್ರಹ್ಮಾದಿ ದೇವತೆಗಳೊಡನೆ ನೆಲೆಸಿರುವ ಪೂಜ್ಯನಾದ ವಿಷ್ಣುವು ಯಾವಾಗಲೂ ಮಹೇಶ್ವರನನ್ನು ನೋಡಲು ಹೋಗುವನು.

೧೦೬. ಈ ಪರ್ವತವು ಸುವರ್ಣ ಕುಮುದಗಳಿಂದ ಅಲಂಕಾರಗೊಂಡಿರುವುದರಿಂದ ಅಲ್ಲಿಗೆ ಬಂದ ದೇವತೆಗಳು ಇದಕ್ಕೆ ಕುಮುದ ಎಂದು ಹೆಸರನ್ನಿಟ್ಟಿರುವರು.

ಏಕದಾ ಭಗವಾನ್ರುದ್ರೋ ಗಿರೌ ತಸ್ಮಿನ್ಸಮಾಗತಃ ।
ದ್ರಷ್ಟುಂ ತಚ್ಛಿಖರೇ ರಮ್ಯೇ ತಾಂ ಪುರೀಂ ವಿಷ್ಣುಪಾಲಿತಾಂ ॥ ೧೦೭ ॥
ಗೃಹಾಗತಂ ಹರಂ ದೃಷ್ಟ್ವಾ ಹರಿಣಾ ಸ ತು ಪೂಜಿತಃ ।
ಲಕ್ಷ್ಮ್ಯಾ ಸಂಪೂಜಿತಾ ಗೌರೀ ಹರ್ಷಿತಾ ತತ್ರ ಸಂಸ್ಥಿತಾ ॥ ೧೦೮ ॥
ಏಕಾಸನೋಪವಿಷ್ಟೌ ತೌ ಮಂತ್ರಯಂತೌ ಪರಸ್ಪರಂ ।
ಹರೇಣ ಕಾರಣಂ ಜ್ಞಾತ್ವಾ ತತ್ಸರ್ವಂ ಕಥಿತಂ ಹರೇಃ ॥ ೧೦೯ ॥
ತ್ವಯೇಯಂ ನಗರೀ ಕಾರ್ಯಾ ಮಂದರೇ ಪರ್ವತೋತ್ತಮೇ ।
ಪ್ರಷ್ಟವ್ಯಃ ಕಾರಣಂ ನಾಹಮವಶ್ಯಂ ತದ್ಭವಿಷ್ಯತಿ ॥ ೧೧೦ ॥
ಹರ ಏವ ವಿಜಾನಾತಿ ಕಾರಣಂ ಕತಮೋಽಪಿ ನ ।
ಏವಂ ತಥೇತಿ ತೌ ಪ್ರೋಕ್ತ್ವಾ ಸಂಸ್ಥಿತೌ ಪರ್ವತೇಽಪಿ ಸಃ ॥ ೧೧೧ ॥
ತಂ ದೃಷ್ಟ್ವಾ ಸಂಗತಂ ರುದ್ರಂ ಕುಮುದಃ ಸ್ವಯಮಾಯಯೌ ।
ಧನ್ಯೋಽಹಂ ಕೃತಪುಣ್ಯೋಽಹಂ ಯಸ್ಯ ಮೇ ಗೃಹಮಾಗತೌ ॥ ೧೧೨ ॥
ದ್ವಾಭ್ಯಾಮುಕ್ತೋ ಗಿರಿವರೋ ದದಾವ ಕಿಂ ವರಂ ತವ
ಇತ್ಯುಕ್ತಃ ಪರ್ವತಸ್ತಾಭ್ಯಾಂ ವರಂ ವವ್ರೇ ಸ ಮೂಢಧೀಃ ॥ ೧೧೩ ॥

---

೧೦೭. ಒಂದಾನೊಂದುವೇಳೆ ರುದ್ರನು ಆ ಶಿಖರದಲ್ಲಿರುವ ಮನೋಹರವಾದ ವಿಷ್ಣುಪುರಿಯನ್ನು ನೋಡಲು ಬಂದನು.

೧೦೮. ವಿಷ್ಣುವು ಮನೆಗೆ ಬಂದ ಆ ಶಿವನನ್ನು ಕಂಡು ಅವನನ್ನು ಪೂಜಿಸಿದನು. ಗೌರಿಯೂ ಲಕ್ಷ್ಮಿಯಿಂದ ಪೂಜಿತಳಾಗಿ ಅಲ್ಲಿಯೆ ಇದ್ದಳು.

೧೦೯. ಒಂದೇ ಆಸನದಲ್ಲಿ ಕುಳಿತಿರುವ ಅವರಿಬ್ಬರೂ ಪರಸ್ಪರ ಆಲೋಚಿಸಿದರು. ಆಗ ಹರನು ಕಾರಣವನ್ನರಿತು ಅದನ್ನೆಲ್ಲ ವಿಷ್ಣುವಿಗೆ ಹೇಳಿದನು.

೧೧೦. ನೀನು ಈ ಮಂದರ ಪರ್ವತದಲ್ಲಿ ಪಟ್ಟಣವೊಂದನ್ನು ನಿರ್ಮಿಸು. ನನ್ನನ್ನು ಇದಕ್ಕೆ ಕಾರಣವನ್ನು ಕೇಳಬೇಡ. ಅದು ಅವಶ್ಯವಾಗಿ ಆಗುವುದು.

೧೧೧–೧೧೨. ಇದರ ಕಾರಣವನ್ನು ಹರನೇ ತಿಳಿದಿರುವನು. ಬೇರೆ ಯಾರಿಗೂ ಗೊತ್ತಿಲ್ಲ. ಹೀಗೆಂದು ಹೇಳಿ ಅವನು ಅಲ್ಲಿಯೇ ಇದ್ದನು. ಆಗ ಆ ಕುಮುದನು ಶಿವ ಪಾರ್ವತಿಯರನ್ನು ಕಂಡು ಅಲ್ಲಿಗೆ ಬಂದು ನೀವು ನನ್ನ ಮನೆಗೆ ಬಂದದ್ದರಿಂದ ನಾನು ಧನ್ಯನು.

೧೧೩. ಆಗ ಶಿವಪಾರ್ವತಿಯರು ನಿನಗೆ ಏನು ವರವನ್ನೀಯಲಿ. ಎಂದು ಕೇಳಲು ಅಜ್ಞನಾದ ಆ ಪರ್ವತನು ಹೀಗೆ ವರವನ್ನು ಕೇಳಿದನು..

ಭವಿಷ್ಯತ್ಕಾರ್ಯಹೇತುತ್ವಾದ್ಭವಿಷ್ಯತಿ ನ ತದ್ವೃಥಾ ।
ಯತ್ರಾಹಂ ತತ್ರ ವಸ್ತವ್ಯಂ ಭವದ್ಭ್ಯಾಮಸ್ತು ಮೇ ವರಃ ॥ ೧೧೪ ॥
ಮತ್ಸನ್ನಿಧೌ ಸಮಾಗತ್ಯ ಸ್ಥಾತವ್ಯಂ ಬ್ರಹ್ಮವಾಸರಂ ।
ತಥೇತ್ಯುಕ್ತ್ವಾ ಸಪತ್ನೀಕೌ ಗತೌ ಹರಿಹರಾವುಭೌ ॥ ೧೧೫ ॥
ಪಂಚಮೋ ಯೋ ಮನುಃ ಪೂರ್ವಂ ರೈವತೋನಾಮ ವಿಶ್ರುತಃ ।
ತಸ್ಯೋತ್ಪತ್ತೌ ತು ಯದ್ವೃತ್ತಂ ಕುಮುದಾಗ್ರೇ ಶೃಣುಷ್ವ ತತ್ ॥ ೧೧೬ ॥
ಋಷಿರಾಸೀನ್ಮಹಾಭಾಗ ಋತವಾಗಿತಿ ವಿಶ್ರುತಃ ।
ತಸ್ಯಾಪುತ್ರಸ್ಯ ಪುತ್ರೋಽಭೂದ್ರೈವತ್ಯಂತೇ ಮಹಾತ್ಮನಃ ॥ ೧೧೭ ॥
ಸ ತಸ್ಯ ವಿಧಿವಚ್ಚಕ್ರೇ ಜಾತಕರ್ಮಾದಿಕಾಃ ಕ್ರಿಯಾಃ ।
ತಥೋಪನಯನಾದ್ಯಾಶ್ಚ ಸ ಚಾಶೀಲೋಽಭವನ್ನೃಪ ॥ ೧೧೮ ॥
ಯತಃ ಪ್ರಭೃತಿ ಜಾತೋಽಸೌ ತತಃ ಪ್ರಭೃತ್ಯಸಾವೃಷಿಃ ।
ದೀರ್ಘರೋಗಪರಾಮರ್ಶಮವಾಪಾತೀವ ದುರ್ಧರಂ ॥ ೧೧೯ ॥
ಮಾತಾ ಚಾಸ್ಯ ಪರಾಂ ಮೂರ್ತಿಂ ಕುಷ್ಠರೋಗಾಭಿಪೀಡಿತಾ ।
ಜಗಾಮ ಚಿಂತಾಂ ಸ ಋಷಿಃ ಕಿಮೇತದಿತಿ ದುಃಖಿತಃ ॥ ೧೨೦ ॥

---

೧೧೪. ಮುಂದಿನ ಕಾರ್ಯ ವಶದಿಂದ ಅದು ಹಾಗೆಯೇ ಆಗುವುದು. ವ್ಯರ್ಥವಾಗುವುದಿಲ್ಲ. ನಾನೆಲ್ಲಿ ವಾಸಿಸುವೆನೊ ; ನೀವೂ ಅಲ್ಲಿಯೇ ವಾಸಿಸಬೇಕು. ಇದೇ ನನ್ನ ವರವು.

೧೧೫. ನನ್ನ ಹತ್ತಿರದಲ್ಲಿ ಬ್ರಹ್ಮನ ದಿನಮಾನದವರೆಗೆ ನೀವಿರಬೇಕು. ಎಂದು ಪರ್ವತವು ಹೇಳಲು ಅವರು ಹಾಗೆಯೆ ಆಗಲೆಂದು ಹೊರಟುಹೋದರು.

೧೧೬. ಹಿಂದೆ ಕುಮುದ ಪರ್ವತದ ಮೇಲೆ ರೈವತನೆಂಬ ಐದನೆ ಮನುವು ಹುಟ್ಟಿರುವನು. ಅವನ ವೃತ್ತಾಂತವನ್ನು ಹೇಳುವೆನು ಕೇಳು.

೧೧೭. ಹಿಂದೆ ಋತವಾಕ್ಕೆಂಬ ಭಾಗ್ಯಶಾಲಿಯಾದ ಮುನಿಯೊಬ್ಬನಿದ್ದನು. ಮಕ್ಕಳಿಲ್ಲದ ಮಹಾತ್ಮನಾದ ಅವನಿಗೆ ರೇವತೀ ನಕ್ಷತ್ರದ ಕೊನೆಯಲ್ಲಿ ಮಗನೊಬ್ಬನು ಹುಟ್ಟಿದನು.

೧೧೮. ಆ ಮುನಿಯು ಪುತ್ರನಿಗೆ ಜಾತಕರ್ಮ, ಉಪನಯನ ಮೊದಲಾದ ಸಂಸ್ಕಾರಗಳನ್ನು ವಿಧಿಯಂತೆ ಮಾಡಿದನು. ಆದರೆ ಆ ಬಾಲಕನು ದುಷ್ಟನಾದನು.

೧೧೯. ಆ ಪುತ್ರನು ಹುಟ್ಟಿದಂದಿನಿಂದ ತಂದೆಯು ಸಹಿಸಲಾಗದ ಮಹಾರೋಗದಿಂದ ಪೀಡಿತನಾದನು.

೧೨೦. ತಾಯಿಯೂ ಕುಷ್ಠರೋಗದಿಂದ ಪೀಡಿತಳಾಗಿ ಅತ್ಯಂತ ವ್ಯಥೆಯನ್ನು ಹೊಂದಿದಳು. ಅತಿ ದುಃಖಗೊಂಡ ತಂದೆಯು ಇದೇನೆಂದು ಚಿಂತಾಕ್ರಾಂತನಾದನು.

ಏಕದಾ ಭಗವಾನ್ರುದ್ರೋ ಗಿರೌ ತಸ್ಮಿನ್ಸಮಾಗತಃ ।
ದ್ರಷ್ಟುಂ ತಚ್ಛಿಖರೇ ರಮ್ಯೇ ತಾಂ ಪುರೀಂ ವಿಷ್ಣುಪಾಲಿತಾಂ ॥ ೧೦೭ ॥
ಗೃಹಾಗತಂ ಹರಂ ದೃಷ್ಟ್ವಾ ಹರಿಣಾ ಸ ತು ಪೂಜಿತಃ ।
ಲಕ್ಷ್ಮ್ಯಾ ಸಂಪೂಜಿತಾ ಗೌರೀ ಹರ್ಷಿತಾ ತತ್ರ ಸಂಸ್ಥಿತಾ ॥ ೧೦೮ ॥
ಏಕಾಸನೋಪವಿಷ್ಟೌ ತೌ ಮಂತ್ರಯಂತೌ ಪರಸ್ಪರಂ ।
ಹರೇಣ ಕಾರಣಂ ಜ್ಞಾತ್ವಾ ತತ್ಸರ್ವಂ ಕಥಿತಂ ಹರೇಃ ॥ ೧೦೯ ॥
ತ್ವಯೇಯಂ ನಗರೀ ಕಾರ್ಯಾ ಮಂದರೇ ಪರ್ವತೋತ್ತಮೇ ।
ಪ್ರಷ್ಟವ್ಯಃ ಕಾರಣಂ ನಾಹಮವಶ್ಯಂ ತದ್ಭವಿಷ್ಯತಿ ॥ ೧೧೦ ॥
ಹರ ಏವ ವಿಜಾನಾತಿ ಕಾರಣಂ ಕತಮೋಽಪಿ ನ ।
ಏವಂ ತಥೇತಿ ತೌ ಪ್ರೋಕ್ತ್ವಾ ಸಂಸ್ಥಿತೌ ಪರ್ವತೇಽಪಿ ಸಃ ॥ ೧೧೧ ॥
ತಂ ದೃಷ್ಟ್ವಾ ಸಂಗತಂ ರುದ್ರಂ ಕುಮುದಃ ಸ್ವಯಮಾಯಯೌ ।
ಧನ್ಯೋಽಹಂ ಕೃತಪುಣ್ಯೋಽಹಂ ಯಸ್ಯ ಮೇ ಗೃಹಮಾಗತೌ ॥ ೧೧೨ ॥
ದ್ವಾಭ್ಯಾಮುಕ್ತೋ ಗಿರಿವರೋ ದದಾವ ಕಿಂ ವರಂ ತವ
ಇತ್ಯುಕ್ತಃ ಪರ್ವತಸ್ತಾಭ್ಯಾಂ ವರಂ ವವ್ರೇ ಸ ಮೂಢಧೀಃ ॥ ೧೧೩ ॥

---

೧೦೭. ಒಂದಾನೊಂದುವೇಳೆ ರುದ್ರನು ಆ ಶಿಖರದಲ್ಲಿರುವ ಮನೋಹರವಾದ ವಿಷ್ಣುಪುರಿಯನ್ನು ನೋಡಲು ಬಂದನು.

೧೦೮. ವಿಷ್ಣುವು ಮನೆಗೆ ಬಂದ ಆ ಶಿವನನ್ನು ಕಂಡು ಅವನನ್ನು ಪೂಜಿಸಿದನು. ಗೌರಿಯೂ ಲಕ್ಷ್ಮಿಯಿಂದ ಪೂಜಿತಳಾಗಿ ಅಲ್ಲಿಯೆ ಇದ್ದಳು.

೧೦೯. ಒಂದೇ ಆಸನದಲ್ಲಿ ಕುಳಿತಿರುವ ಅವರಿಬ್ಬರೂ ಪರಸ್ಪರ ಆಲೋಚಿಸಿದರು. ಆಗ ಹರನು ಕಾರಣವನ್ನರಿತು ಅದನ್ನೆಲ್ಲ ವಿಷ್ಣುವಿಗೆ ಹೇಳಿದನು.

೧೧೦. ನೀನು ಈ ಮಂದರ ಪರ್ವತದಲ್ಲಿ ಪಟ್ಟಣವೊಂದನ್ನು ನಿರ್ಮಿಸು. ನನ್ನನ್ನು ಇದಕ್ಕೆ ಕಾರಣವನ್ನು ಕೇಳಬೇಡ. ಅದು ಅವಶ್ಯವಾಗಿ ಆಗುವುದು.

೧೧೧–೧೧೨. ಇದರ ಕಾರಣವನ್ನು ಹರನೇ ತಿಳಿದಿರುವನು. ಬೇರೆ ಯಾರಿಗೂ ಗೊತ್ತಿಲ್ಲ. ಹೀಗೆಂದು ಹೇಳಿ ಅವನು ಅಲ್ಲಿಯೇ ಇದ್ದನು. ಆಗ ಆ ಕುಮುದನು ಶಿವ ಪಾರ್ವತಿಯರನ್ನು ಕಂಡು ಅಲ್ಲಿಗೆ ಬಂದು ನೀವು ನನ್ನ ಮನೆಗೆ ಬಂದದ್ದರಿಂದ ನಾನು ಧನ್ಯನು.

೧೧೩. ಆಗ ಶಿವಪಾರ್ವತಿಯರು ನಿನಗೆ ಏನು ವರವನ್ನೀಯಲಿ. ಎಂದು ಕೇಳಲು ಅಜ್ಞನಾದ ಆ ಪರ್ವತನು ಹೀಗೆ ವರವನ್ನು ಕೇಳಿದನು..

ಭವಿಷ್ಯತ್ಕಾರ್ಯಹೇತುತ್ವಾದ್ಭವಿಷ್ಯತಿ ನ ತದ್ವೃಥಾ ।
ಯತ್ರಾಹಂ ತತ್ರ ವಸ್ತವ್ಯಂ ಭವದ್ಭ್ಯಾಮಸ್ತು ಮೇ ವರಃ ॥ ೧೧೪ ॥
ಮತ್ಸನ್ನಿಧೌ ಸಮಾಗತ್ಯ ಸ್ಥಾತವ್ಯಂ ಬ್ರಹ್ಮವಾಸರಂ ।
ತಥೇತ್ಯುಕ್ತ್ವಾ ಸಪತ್ನೀಕೌ ಗತೌ ಹರಿಹರಾವುಭೌ ॥ ೧೧೫ ॥
ಪಂಚಮೋ ಯೋ ಮನುಃ ಪೂರ್ವಂ ರೈವತೋನಾಮ ವಿಶ್ರುತಃ ।
ತಸ್ಯೋತ್ಪತ್ತೌ ತು ಯದ್ವೃತ್ತಂ ಕುಮುದಾಗ್ರೇ ಶೃಣುಷ್ವ ತತ್ ॥ ೧೧೬ ॥
ಋಷಿರಾಸೀನ್ಮಹಾಭಾಗ ಋತವಾಗಿತಿ ವಿಶ್ರುತಃ ।
ತಸ್ಯಾಪುತ್ರಸ್ಯ ಪುತ್ರೋಽಭೂದ್ರೇವತ್ಯಂತೇ ಮಹಾತ್ಮನಃ ॥ ೧೧೭ ॥
ಸ ತಸ್ಯ ವಿಧಿವಚ್ಚಕ್ರೇ ಜಾತಕರ್ಮಾದಿಕಾಃ ಕ್ರಿಯಾಃ ।
ತಥೋಪನಯನಾದ್ಯಾಶ್ಚ ಸ ಚಾಶೀಲೋಽಭವನ್ನೃಪ ॥ ೧೧೮ ॥
ಯತಃ ಪ್ರಭೃತಿ ಜಾತೋಽಸೌ ತತಃ ಪ್ರಭೃತ್ಯಸಾವೃಷಿಃ ।
ದೀರ್ಘರೋಗಪರಾಮರ್ಶಮವಾಪಾತೀವ ದುರ್ಧರಂ ॥ ೧೧೯ ॥
ಮಾತಾ ಚಾಸ್ಯ ಪರಾಂಮೂರ್ತಿಂ ಕುಷ್ಠರೋಗಾಭಿಪೀಡಿತಾ ।
ಜಗಾಮ ಚಿಂತಾಂ ಸ ಋಷಿಃ ಕಿಮೇತದಿತಿ ದುಃಖಿತಃ ॥ ೧೨೦ ॥

---

೧೧೪. ಮುಂದಿನ ಕಾರ್ಯ ವಶದಿಂದ ಅದು ಹಾಗೆಯೇ ಆಗುವುದು. ವ್ಯರ್ಥವಾಗುವುದಿಲ್ಲ. ನಾನೆಲ್ಲಿ ವಾಸಿಸುವೆನೊ ; ನೀವೂ ಅಲ್ಲಿಯೇ ವಾಸಿಸಬೇಕು. ಇದೇ ನನ್ನ ವರವು.

೧೧೫. ನನ್ನ ಹತ್ತಿರದಲ್ಲಿ ಬ್ರಹ್ಮನ ದಿನಮಾನದವರೆಗೆ ನೀವಿರಬೇಕು. ಎಂದು ಪರ್ವತವು ಹೇಳಲು ಅವರು ಹಾಗೆಯೆ ಆಗಲೆಂದು ಹೊರಟುಹೋದರು.

೧೧೬. ಹಿಂದೆ ಕುಮುದ ಪರ್ವತದ ಮೇಲೆ ರೈವತನೆಂಬ ಐದನೆ ಮನುವು ಹುಟ್ಟಿರುವನು. ಅವನ ವೃತ್ತಾಂತವನ್ನು ಹೇಳುವೆನು ಕೇಳು.

೧೧೭. ಹಿಂದೆ ಋತವಾಕ್ಕೆಂಬ ಭಾಗ್ಯಶಾಲಿಯಾದ ಮುನಿಯೊಬ್ಬನಿದ್ದನು. ಮಕ್ಕಳಿಲ್ಲದ ಮಹಾತ್ಮನಾದ ಅವನಿಗೆ ರೇವತೀ ನಕ್ಷತ್ರದ ಕೊನೆಯಲ್ಲಿ ಮಗನೊಬ್ಬನು ಹುಟ್ಟಿದನು.

೧೧೮. ಆ ಮುನಿಯು ಪುತ್ರನಿಗೆ ಜಾತಕರ್ಮ, ಉಪನಯನ ಮೊದಲಾದ ಸಂಸ್ಕಾರಗಳನ್ನು ವಿಧಿಯಂತೆ ಮಾಡಿದನು. ಆದರೆ ಆ ಬಾಲಕನು ದುಷ್ಟನಾದನು.

೧೧೯. ಆ ಪುತ್ರನು ಹುಟ್ಟಿದಂದಿನಿಂದ ತಂದೆಯು ಸಹಿಸಲಾಗದ ಮಹಾರೋಗದಿಂದ ಪೀಡಿತನಾದನು.

೧೨೦. ತಾಯಿಯೂ ಕುಷ್ಠರೋಗದಿಂದ ಪೀಡಿತಳಾಗಿ ಅತ್ಯಂತ ವ್ಯಥೆಯನ್ನು ಹೊಂದಿದಳು. ಅತಿ ದುಃಖಗೊಂಡ ತಂದೆಯು ಇದೇನೆಂದು ಚಿಂತಾಕ್ರಾಂತನಾದನು.

ಮೂರ್ಖಸ್ತು ಮಂದಧೀಃ ಪುತ್ರೋ ದುಃಖಂ ಜನಯತೇ ಪಿತುಃ ।
ಅಮಾರ್ಗಗೋ ವಿಶೇಷೇಣ ದುಃಖಾದ್ದುಃಖತರಂ ಹಿ ತತ್ ॥ ೧೨೧ ॥
ಅಪುತ್ರತಾ ಮನುಷ್ಯಾಣಾಂ ಶ್ರೇಯಸೇ ನ ಕುಪುತ್ರತಾ ।
ಸುಹೃದಾಂ ನೋಪಕಾರಾಯ ಪಿತೄಣಾಂ ನಾಪಿ ತೃಪ್ತಯೇ ॥ ೧೨೨ ॥
ಸುಪುತ್ರೋ ಹೃದಯೇಽಭ್ಯೇತಿ ಮಾತಾಪಿತ್ರೋರ್ದಿನೇದಿನೇ ।
ಪಿತ್ರೋರ್ದುಃಖಾಯ ಧಿಗ್ಜನ್ಮ ತಸ್ಯ ದುಷ್ಕೃತಕರ್ಮಣಃ ॥ ೧೨೩ ॥
ಧನ್ಯಾಸ್ತೇ ತನಯಾ ಯೇ ಸ್ಯುಃ ಸರ್ವಲೋಕಾಭಿಸಂಮತಾಃ ।
ಪರೋಪಕಾರಿಣಃ ಶಾಂತಾಃ ಸಾಧುಕರ್ಮಣ್ಯನುವ್ರತಾಃ ॥ ೧೨೪ ॥
ಅನಿರ್ವೃತಂ ನಿರಾನಂದಂ ದುಃಖಶೋಕಪರಿಪ್ಲುತಂ ।
ನರಕಾಯ ನ ಸ್ವರ್ಗಾಯ ಕುಪುತ್ರತ್ವಂ ಹಿ ಜನ್ಮನಃ । ॥ ೧೨೫ ॥
ಕರೋತಿ ಸುಹೃದಾಂ ದೈನ್ಯಮಹಿತಾನಾಂ ತಥಾ ಮುದಂ ।
ಅಕಾಲೇ ತು ಜರಾಂ ಪಿತ್ರೋಃ ಕುಪುತ್ರಃ ಕುರುತೇ ಕಿಲ ॥ ೧೨೬ ॥

---

೧೨೧. ಮೂಢನೂ, ದುರ್ಮಾರ್ಗಗಾಮಿಯೂ ಆದ ಪುತ್ರನು ತಂದೆಗೆ ಬಹು ದುಃಖವನ್ನುಂಟುಮಾಡುವನು.

೧೨೨. ಮನುಷ್ಯರಿಗೆ ಪುತ್ರರಿಲ್ಲದಿರುವುದೇ ಶ್ರೇಯಸ್ಕರವು. ದುಷ್ಟಪುತ್ರನು ಮಿತ್ರರ ಉಪಕಾರಕ್ಕೂ, ಪಿತೃಗಳ ತೃಪ್ತಿಗೂ ಪ್ರಯೋಜಕನಾಗುವುದಿಲ್ಲ.

೧೨೩. ಸುಪುತ್ರನು ತಂದೆತಾಯಿಗಳಿಗೆ ಪ್ರತಿದಿನವೂ ಆನಂದವನ್ನುಂಟುಮಾಡುವನು. ತಂದೆತಾಯಿಗಳಿಗೆ ದುಃಖವನ್ನುಂಟುಮಾಡುವ ದುಷ್ಟಜನ್ಮವು ನಿಂದಿತವಾದುದು.

೧೨೪. ಸಮಸ್ತ ಜನರಿಗೆ ಸಮ್ಮತರೂ, ಪರೋಪಕಾರಿಗಳೂ, ಶಾಂತರೂ, ಸಾಧುಕರ್ಮನಿರತರೂ ಆದ ಪುತ್ರರು ಧನ್ಯರು.

೧೨೫. ಮನುಷ್ಯನಿಗೆ ಸುಖ, ಆನಂದಗಳನ್ನುಂಟುಮಾಡದವನೂ, ದುಃಖಶೋಕಗಳಿಗೆ ಕಾರಣನೂ ಆದ ಪುತ್ರನು ಜನಿಸಿದರೆ ನರಕವು ಲಭಿಸುವುದೇ ಹೊರತು ಸ್ವರ್ಗಲೋಕವು ದೊರೆಯುವುದಿಲ್ಲ.

೧೨೬. ದುಷ್ಪುತ್ರನು ಮಿತ್ರರಿಗೆ ದೈನ್ಯವನ್ನೂ, ಶತ್ರುಗಳಿಗೆ ಸಂತೋಷವನ್ನೂ ತಂದೆತಾಯಿಗಳಿಗೆ ಅಕಾಲದಲ್ಲಿ ಮುಪ್ಪನ್ನೂ ಉಂಟುಮಾಡುವನು.

ನಾರದ ಉವಾಚ :—

ಏವಂ ಸೋಽತ್ಯಂತದುಷ್ಟಸ್ಯ ಪುತ್ರಸ್ಯ ಚರಿತ್ರೈರ್ಮುನಿಃ ।
ದಹ್ಯಮಾನಮನೋವೃತ್ತಿರ್ವೃದ್ಧಗರ್ಗಮಪೃಚ್ಛತ ॥ ೧೨೭ ॥

ಋತವಾಗುವಾಚ :—

ಸುವ್ರತೇನ ಪುರಾ ವೇದಾ ಅಧೀತಾ ವಿಧಿನಾ ಮಯಾ ।
ಸಮಾಪ್ಯ ವಿದ್ಯಾ ವಿಧಿವತ್ಕೃತೋ ದಾರಪರಿಗ್ರಹಃ ॥ ೧೨೮ ॥
ಸದಾರೇಣ ಹಿ ಯಾಃ ಕಾರ್ಯಾಃ ಶ್ರೌತಸ್ಮಾರ್ತಾದಿಕಾಃ ಕ್ರಿಯಾಃ ।
ತಾಃ ಕೃತಾಶ್ಚ ವಿಧಾನೇನ ಕಾಮಂ ಸಮನುರಂಧ್ಯ ಚ ॥ ೧೨೯ ॥
ಪುತ್ರಾರ್ಥಂ ಜನಿತಶ್ಚಾಯಂ ಪುಂನಾಮ್ನೋ ವಿಚ್ಯುತೌ ಮುನೇ ।
ಸೋಽಯಂ ಕಿಮಾತ್ಮದೋಷೇಣ ಮಾತುರ್ದೋಷೇಣ ಕಿಂ ಮಮ ।
ಅಸ್ಮದ್ದುಃಖಾವಹೋ ಜಾತೋ ದೌಶ್ಶೀಲ್ಯಾದ್ವದ ಕೋವಿದ ॥ ೧೩೦ ॥

ಗರ್ಗ ಉವಾಚ :—

ರೇವತ್ಯಂತೇ ಮುನಿಶ್ರೇಷ್ಠ ಜಾತೋಽಯಂ ತನಯಸ್ತವ ।
ತೇನ ದುಃಖಾಯ ತೇ ದುಷ್ಟೇ ಕಾಲೇ ಯಸ್ಮಾದಜಾಯತ ॥ ೧೩೧ ॥

---

೧೨೭. ನಾರದನು ಹೇಳುತ್ತಾನೆ :—ಆ ಮುನಿಯು ಹೀಗೆ ಅತಿ ದುಷ್ಟನಾದ ಪುತ್ರನ ನಡತೆಗಳಿಂದ ನೊಂದವನಾಗಿ ವೃದ್ಧಗರ್ಗನನ್ನು ಪ್ರಶ್ನಿಸಿದನು.

೧೨೮. ಋತವಾಗನು ಹೇಳುತ್ತಾನೆ .—ನಾನು ಹಿಂದೆ ಒಳ್ಳೆಯ ನಿಯಮದಿಂದ ವೇದಾಧ್ಯಯನ ಮಾಡಿ ವಿದ್ಯಾಭ್ಯಾಸ ಮುಗಿಸಿ ವಿಧಿಯಂತೆ ವಿವಾಹಮಾಡಿಕೊಂಡೆನು.

೧೨೯. ಗೃಹಸ್ಥನು ಪತ್ನಿಯೊಡನೆ ಮಾಡಬೇಕಾದ ಶ್ರೌತಸ್ಮಾರ್ತಾದಿ ಕಾರ್ಯಗಳನ್ನು ಕಾಮವನ್ನು ಅನುಸರಿಸಿ ವಿಧಿಯಂತೆ ನೆರವೇರಿಸಿರುವೆನು.

೧೩೦. ಪುನ್ನಾಮ ನರಕದ ನಿವಾರಣೆಗಾಗಿ ಈ ಪುತ್ರನನ್ನು ಪಡೆದೆನು. ಇವನು ತನ್ನ, ನನ್ನ, ಅಥವಾ ತಾಯಿಯ ದೋಷದಿಂದ ದುಸ್ಸ್ವಭಾವವುಳ್ಳವನಾಗಿ ನಮಗೆ ದುಃಖವನ್ನುಂಟುಮಾಡುತ್ತಿರುವನು.

೧೩೧. ಗರ್ಗನು ಹೇಳುತ್ತಾನೆ:—ಮುನಿಶ್ರೇಷ್ಠ ! ಈ ನಿನ್ನ ಮಗನು ರೇವತೀ ನಕ್ಷತ್ರದ ಕೊನೆಯಲ್ಲಿ ಜನಿಸಿರುವನು. ಆ ದುಷ್ಟಕಾಲದಲ್ಲಿ ಜನಿಸಿದ್ದರಿಂದ ನಿನಗೆ ಕಷ್ಟವನ್ನುಂಟುಮಾಡುತ್ತಿರುವನು.

ತವಾಪಚಾರೋ ನೈವಾಸ್ಯ ಮಾತುರ್ನಾಪಿ ಕುಲಸ್ಯ ಚ ।
ಅನ್ಯದ್ದೌಶ್ಶೀಲ್ಯಹೇತುಸ್ತ್ವಂ ರೇವತ್ಯಂತ ಉಪಾಗತಂ ॥ ೧೩೨ ॥
ರೇವತೀ ಅಶ್ವಿನೋರ್ಮಧ್ಯಮಾಶ್ಲೇಷಾಮಘಯೋಸ್ತಥಾ ।
ಜ್ಯೇಷ್ಠಾಮೂಲರ್ಕ್ಷಯೋಃ ಪ್ರೋಕ್ತಂ ಗಂಡಾಂತಂ ತು ಭಯಾವಹಂ ॥ ೧೩೩ ॥
ಗಂಡತ್ರಯೇ ತು ಯೇ ಜಾತಾ ನರನಾರೀತುರಂಗಮಾಃ ।
ತಿಷ್ಠಂತಿ ನ ಚಿರಂ ಗೇಹೇ ತಿಷ್ಠಂತೋಽಪಿ ಭಯಂಕರಾಃ ।
ಏವಮುಕ್ತೋಽಥ ಗರ್ಗೇಣ ಚುಕ್ರೋಧಾತೀವ ಕೋಪನಃ ॥ ೧೩೪ ॥

ಋತವಾಗುವಾಚ :—

ಯಸ್ಮಾನ್ಮಮೈಕಪುತ್ರಸ್ಯ ರೇವತ್ಯಂತೇ ಸಮುದ್ಭವಃ ॥ ೧೩೫ ॥
ರೇವತೀ ಕಿಂ ನ ಜಾನಾತಿ ಮಾಂ ವಿಪ್ರಃ ಶಾಪಯಿಷ್ಯತಿ ।
ಜಾಜ್ವಲ್ಯಮಾನಾ ಗಗನಾತ್ತಸ್ಮಾತ್ಪತತು ರೇವತೀ ॥ ೧೩೬ ॥

ನಾರದ ಉವಾಚ :—

ತೇನೈವಂ ವ್ಯಾಹೃತೇ ವಾಕ್ಯೇ ರೇವತ್ಯೃಕ್ಷಂ ಪಪಾತ ಹ ।
ಪಶ್ಯತಃ ಸರ್ವಲೋಕಸ್ಯ ವಿಸ್ಮಯಾವಿಷ್ಟಚೇತಸಃ ॥ ೧೩೭ ॥

---

೧೩೨. ಇದಕ್ಕೆ ತಾಯಿಯ ನಿನ್ನ ಅಥವಾ ವಂಶದ ದೋಷವು ಕಾರಣವಲ್ಲ. ರೇವತೀ ನಕ್ಷತ್ರದ ಕೊನೆಯೇ ಈ ದೌಶ್ಶೀಲ್ಯಕ್ಕೆ ಕಾರಣವು.

೧೩೩. ರೇವತೀ, ಅಶ್ವಿನೀ ನಕ್ಷತ್ರಗಳು, ಆಶ್ಲೇಷಾ ಮಘಾ ನಕ್ಷತ್ರಗಳು ಜ್ಯೇಷ್ಠಾ ಮೂಲಾನಕ್ಷತ್ರಗಳು ಇವುಗಳ ಮಧ್ಯಭಾಗವು ಭಯಂಕರವಾದ ಗಂಡಾಂತರ, ವೆನ್ನಿಸಿಕೊಳ್ಳುವುದು.

೧೩೪. ಈ ಮೂರು ಗಂಡಾತರಗಳಲ್ಲಿ ಹುಟ್ಟಿದ ಗಂಡಸು, ಹೆಂಗಸು, ಅಶ್ವಗಳು ಮನೆಯಲ್ಲಿ ಹೆಚ್ಚುಕಾಲ ನಿಲ್ಲುವುದಿಲ್ಲ. ನಿಂತರೂ ಭಯವನ್ನುಂಟುಮಾಡುವುವು. ಗರ್ಗನು ಹೀಗೆನ್ನಲು ಆ ಮುನಿಯು ಅತ್ಯಂತ ಕುಪಿತನಾದನು.

೧೩೫–೧೩೬. ಋತವಾಕ್ಯನು ಹೇಳುತ್ತಾನೆ :—ನನ್ನ ಒಬ್ಬನೇ ಮಗನು ರೇವಂತ್ಯದಲ್ಲಿ ಹೇಗೆ ಹುಟ್ಟಿದನು? ಬ್ರಾಹ್ಮಣನು ಶಪಿಸಿಯಾನೆಂದು ಆ ರೇವತಿಗೆ ತಿಳಿದಿಲ್ಲವೊ? ಆದ್ದರಿಂದ ಪ್ರಕಾಶಿಸುತ್ತಿರುವ ಆ ರೇವತಿಯು ಆಕಾಶದಿಂದ ಕೆಳಗೆ ಬೀಳಲಿ.

೧೩೭. ನಾರದನು ಹೇಳುತ್ತಾನೆ:—ಅವನು ಹೀಗೆ ಹೇಳಲು ಸಮಸ್ತ ಜನರೂ ಆಶ್ಚರ್ಯದಿಂದ ನೋಡುತ್ತಿರುವಾಗಲೆ ರೇವತೀ ನಕ್ಷತ್ರವು ಕೆಳಗೆಬಿದ್ದಿತು.

ಈಶ್ವರೇಚ್ಛಾಪ್ರಭಾವೇನ ಪತಿತಾ ಗಿರಿಮೂರ್ಧನಿ ।
ರೇವತ್ಯೃಕ್ಷಂ ನಿಪತಿತಂ ಕುಮುದಾದ್ರೌ ಸಮಂತತಃ ॥ ೧೩೮ ॥
ಸುರಾಷ್ಟ್ರದೇಶೇ ಸ ಪ್ರಾಪ್ತಃ ಪತಿತೋ ಭೂತಲೇ ಶುಭೇ ।
ಹಿಮಾಚಲಸ್ಯ ಪುತ್ರೋ ಯ ಉಜ್ಜಯಂತೋ ಗಿರಿರ್ಮಹಾನ್ ॥ ೧೩೯ ॥
ಕುಮುದೇನ ಸಮಂ ಮೈತ್ರೀ ಕೃತಾ ಪೂರ್ವಂ ಪರಸ್ಪರಂ ।
ಯತ್ರ ತ್ವಂ ಸ್ಥಾಸ್ಯಸೇ ಸ್ಥಾತಾ ತತ್ರಾಹಮಪಿ ನಿಶ್ಚಿತಂ ॥ ೧೪೦ ॥
ಇತಿ ಕೃತ್ವಾ ಗೃಹೀತ್ವಾಥ ಗಂಗಾವಾರಿ ಸಯಾಮುನಂ ।
ಸಾರಸ್ವತಂ ತಥಾ ಪುಣ್ಯಂ ಸಿಂಚಿತುಂ ತಂ ಸಮಾಗತಃ ॥ ೧೪೧ ॥
ಆಹೂತಸಂಪ್ಲವಂ ಯಾವತ್ಸಂಸ್ಥಿತಾ ತೌ ಪರಸ್ಪರಂ ।
ಕುಮುದಾದ್ರಿಶ್ಚ ತತ್ಪಾತಾತ್ಖ್ಯಾತೋ ರೈವತಕೋಽಭವತ್ ॥ ೧೪೨ ॥
ಅತೀವರಮ್ಯಃ ಸರ್ವಸ್ಯಾಂ ಪೃಥಿವ್ಯಾಂ ಪೃಥಿವೀಪತೇ ।
ಕುಮುದಾದ್ರಿಶ್ಚ ಸೌವರ್ಣೋ ರೇವತೀಚ್ಯವನಾತ್ಪುನಃ ॥ ೧೪೩ ॥
ಪಂಕಜಾಭಃ ಸಬಾಹ್ಯೇನ ಜಾತೋ ವರ್ಣೇನ ಭೂಪತೇ ।
ಮೇರುವರ್ಣಃ ಸ ಮಧ್ಯೇ ತು ಸೌವರ್ಣಃ ಪರ್ವತೋತ್ತಮಃ ॥ ೧೪೪ ॥

---

೧೩೮. ಅದು ಶಿವನ ಇಚ್ಛೆಯಿಂದ ಕುಮುದ ಪರ್ವತದ ಮಸ್ತಕದಲ್ಲಿ ಬಿದ್ದಿತು.

೧೩೯—೧೪೦. ಆ ಪರ್ವತವು ಸುರಾಷ್ಟ್ರ ದೇಶವನ್ನು ಸೇರಿತು. ಹಿಂದೆ ಉಜ್ಜಯಂತವೆಂಬ ಹಿಮಾಲಯನ ಪುತ್ರನಾದ ಮಹಾಗಿರಿಯು ಕುಮುದನೊಡನೆ ನೀನಿಲ್ಲಿರುವೆಯೊ ನಾನಲ್ಲಿ ನಿಶ್ಚಯವಾಗಿಯೂ ನೆಲೆಸುವೆನು ಎಂದು ಮಾತನಾಡಿ ಕೊಂಡು ಸ್ನೇಹಮಾಡಿತು.

೧೪೧. ಅದರಂತೆ ಆ ಉಜ್ಜಯಂತ ಪರ್ವತವು ಗಂಗಾ, ಯಮುನಾ, ಸರಸ್ವತೀ ನದಿಗಳ ಪವಿತ್ರಜಲವನ್ನು ತೆಗೆದುಕೊಂಡು ಕುಮುದ ಪರ್ವತವನ್ನು ಅಭಿಷೇಕಮಾಡಲು ಬಂದಿತು.

೧೪೨ ಅವು ಪರಸ್ಪರ ಜಲಪ್ರವಾಹಗಳುಳ್ಳವುಗಳಾಗಲು ಆ ಜಲಪಾತದಿಂದ ಕುಮುದಾದ್ರಿಯು ರೈವತಕವಾಯಿತು.

೧೪೩. ದೊರೆಯೇ ! ಸಮಸ್ತ ಭೂಮಿಯಲ್ಲಿ ಸುಂದರವಾದ ಕುಮುದ ಪರ್ವತವು ರೇವತಿಯ ಪತನದಿಂದ ಸುವರ್ಣಮಯವಾಯಿತು.

೧೪೪. ಅನಂತರ ಹೊರಭಾಗದಲ್ಲಿ ಪದ್ಮದಂತೆ ಕಾಂತಿಯುಳ್ಳದೂ, ಮಧ್ಯದಲ್ಲಿ ಮೇರುವಿನಂತೆ ಸ್ವರ್ಣವರ್ಣವುಳ್ಳುದೂ ಆಯಿತು.

ತತಃ ಸಂಜನಯಾಮಾಸ ಕನ್ಯಾಂ ರೈವತಕೋ ಗಿರಿಃ ।
ರೇವತೀಕಾಂತಿಸಂಭೂತಾಂ ರೇವತೀಸದೃಶಾನನಾಂ ॥ ೧೪೫ ॥
ಪ್ರಮುಂಚೋ ನಾಮ ರಾಜರ್ಷಿಸ್ತೇನ ದೃಷ್ಟ್ವಾ ವರಾಂಗನಾ ।
ಪಿತೃವದ್ರೇವತೀನಾಮ ಕೃತಂ ತಸ್ಯಾ ನೃಪೋತ್ತಮ ॥ ೧೪೬ ॥
ರೇವತೀತಿ ಚ ವಿಖ್ಯಾತಾ ಸಾ ಸರ್ವತ್ರ ಚ ವರಾಂಗನಾ ।
ಸರ್ವತೇಜೋಮಯಂ ಸ್ಥಾನಂ ಸರ್ವತೀರ್ಥಜಲಾಶ್ರಯಂ ॥ ೧೪೭ ॥
ಗಂಗಾಜಲಪ್ರವಾಹೈಶ್ಚ ಸಂಯುಕ್ತಂ ಯಾಮುನೈಸ್ತಥಾ ।
ಸ್ಥಿತಂ ಸಾರಸ್ವತಂ ತೋಯಂ ತತ್ರ ಗರ್ತೇಷು ತತ್ತ್ರಯಂ ॥ ೧೪೮ ॥
ವಿಖ್ಯಾತಂ ರೇವತೀಕುಂಡಂ ಯತ್ರ ಜಾತಾ ಚ ರೇವತೀ ।
ಸ್ಮರಣಾದ್ದರ್ಶನಾತ್ಸ್ನಾನಾತ್ಸರ್ವಪಾಪಕ್ಷಯೋ ಭವೇತ್ ॥ ೧೪೯ ॥
ಸಾ ಬಾಲಾ ವರ್ಧಿತಾ ತೇನ ಪ್ರಮುಂಚೇನ ಮಹಾತ್ಮನಾ ।
ಯೌವನಂ ತು ತಯಾ ಪ್ರಾಪ್ತಂ ತಸ್ಮಿನ್ರೈವತಕೇ ಗಿರೌ ॥ ೧೫೦ ॥
ತಾಂ ತು ಯೌವನಸಂಪನ್ನಾಂ ದೃಷ್ಟ್ವಾಽಥ ಪ್ರಮುಚೋ ಮುನಿಃ ।
ಏಕಾಂತೇ ಚಿಂತಯಾಮಾಸ ಕೋಽಸ್ಯಾ ಭರ್ತಾ ಭವಿಷ್ಯತಿ ॥ ೧೫೧ ॥

---

೧೪೫. ಬಳಿಕ ರೈವತಕ ಪರ್ವತ ರಾಜನು ರೇವತಿಯ ಕಾಂತಿಯಿಂದ ಹುಟ್ಟಿದ ವಳೂ,ರೇವತಿಗೆ ಸಮಾನವಾದ ಮುಖವುಳ್ಳವಳೂ ಆದ ಓರ್ವ ಕನ್ಯೆಯನ್ನು ಪಡೆದನು.

೧೪೬. ದೊರೆಯೆ ! ಸುಂದರಿಯಾದ ಅವಳನ್ನು ಪ್ರಮುಂಚನೆಂಬ ರಾಜರ್ಷಿಯು ಕಂಡು ಅವಳಿಗೆ ತಂದೆಯಂತೆ ರೇವತಿಯೆಂದು ಹೆಸರನ್ನಿಟ್ಟನು.

೧೪೭–೧೪೯. ಅವಳು ಎಲ್ಲೆಡೆಯಲ್ಲಿಯೂ ರೇವತಿಯೆಂದು ಪ್ರಖ್ಯಾತಳಾದಳು. ಆ ರೈವತಕ ಪರ್ವತದಲ್ಲಿ ಸಮಸ್ತ ತೇಜಸ್ಸ್ವರೂಪವೂ, ಸಕಲ ತೀರ್ಥಜಲಕ್ಕೆ ಆಶ್ರಯವೂ, ಗಂಗಾ, ಯಮುನಾ, ಸರಸ್ವತೀ ಜಲದಿಂದ ಕೂಡಿರುವುದೂ ಆದ ರೇವತೀಕುಂಡವಿರುವುದು. ಅದರಲ್ಲಿ ರೇವತಿಯು ಹುಟ್ಟಿರುವುದರಿಂದ ಆ ಕುಂಡದ ಸ್ಮರಣೆ, ದರ್ಶನ, ಸ್ನಾನಗಳಿಂದ ಸಕಲ ಪಾಪಗಳೂ ಪರಿಹಾರವಾಗುವುವು.

೧೫೦. ಮಹಾತ್ಮನಾದ ಪ್ರಮುಂಚನು ಆ ರೈವತಕ ಪರ್ವತದಲ್ಲಿ ಅವಳನ್ನು ಬೆಳೆಯಿಸುತ್ತಿರಲು ಅವಳು ಯುವತಿಯಾದಳು.

೧೫೧. ಯುವತಿಯಾದ ಅವಳನ್ನು ಕಂಡು ಪ್ರಮುಂಚಮುನಿಯು ರಹಸ್ಯದಲ್ಲಿ ಇವಳಿಗೆ ಯಾವನು ಸರಿಯಾದ ಪತಿಯೆಂದು ಆಲೋಚಿಸಿದನು

ಹುತ್ವಾಹುತ್ವಾ ಸ ಪಪ್ರಚ್ಛ ಗುರುಂ ವಹ್ನಿಂ ದ್ವಿಜೋತ್ತಮಃ ।
ಪ್ರಸಾದಂ ಕುರು ಮೇ ಬ್ರೂಹಿ ಕೋಽಸ್ಯಾ ಭರ್ತಾ ಭವಿಷ್ಯತಿ ॥ ೧೫೨ ॥
ಅನ್ಯೋಽಸ್ಯಾಃ ಸದೃಶಃ ಕೋಽಪಿ ವಂಶೇ ನಾಸ್ತಿ ಕರೋಮಿ ಕಿಂ ।
ವಹ್ನಿಕುಂಡಾತ್ಸಮುತ್ಥಾಯ ಪ್ರೋಕ್ತವಾನ್ಹವ್ಯವಾಹನಃ ॥ ೧೫೩ ॥
ಶೃಣು ಮೇ ವಚನಂ ವಿಪ್ರ ಯೋಽಸ್ಯಾ ಭರ್ತಾ ಭವಿಷ್ಯತಿ ।
ಪ್ರಿಯವ್ರತಾನ್ವಯಭವೋ ಮಹಾಬಲಪರಾಕ್ರಮಃ ॥ ೧೫೪ ॥
ಪುತ್ರೋ ವಿಕ್ರಮಶೀಲಸ್ಯ ಕಾಲಂದೀಜಠರೋದ್ಭವಃ ।
ದುರ್ದಮೋನಾಮ ಭವಿತಾ ಭರ್ತಾ ಹ್ಯಸ್ಯಾ ಮಹೀಪತಿಃ ॥ ೧೫೫ ॥
ಅತ್ರಾಂತರೇ ಸಮಾಯಾತೋ ದುರ್ದಮಃ.ಸ ಮಹೀಪತಿಃ ।
ಗಿರೌ ಮೃಗವಧಾಕಾಂಕ್ಷೀ ಮುನಿಂ ಗೇಹೇ ನ ಪಶ್ಯತಿ ।
ಪ್ರಿಯೇಽಯಿ ತಾತಃ ಕ್ವ ಗತಃ ಏಹಿ ಸತ್ಯಂ ಬ್ರವೀಹಿ ಮೇ ॥ ೧೫೬ ॥

ನಾರದ ಉವಾಚ :—

ಅಗ್ನಿಶಾಲಾಸ್ಥಿತೇನೈವ ತಚ್ಛ್ರುತಂ ವಚನಂ ಪ್ರಿಯಂ ।
ಪ್ರಿಯೇತ್ಯಾಮಂತ್ರಣಂ ಕೋಽಯಂ ಕರೋತಿ ಮಮ ವೇಶ್ಮನಿ ॥ ೧೫೭ ॥
ಸ ದದರ್ಶ ಮಹಾತ್ಮಾನಂ ರಾಜಾನಂ ದುರ್ದಮಂ ಮುನಿಃ ।
ಜಹರ್ಷ ದುರ್ದಮಂ ದೃಷ್ಟ್ವಾ ಮುನಿಃ ಪ್ರಾಹ ಸ ಗೌತಮಂ ॥ ೧೫೮ ॥

---

೧೫೨. ಆ ಮುನಿಯು ಅಗ್ನಿಯಲ್ಲಿ ಹೋಮಿಸಿ ಆ ಅಗ್ನಿದೇವನನ್ನು ಕುರಿತು "ಅಗ್ನಿಯೆ ! ಅನುಗ್ರಹಿಸು. ಇವಳಿಗೆ ಸರಿಯಾದ ಪತಿ ಯಾರು ?

೧೫೩. ನಮ್ಮ ವಂಶದಲ್ಲಿ ಇವಳಿಗೆ ಸರಿಯಾದ ವರನಿಲ್ಲ. ಏನು ಮಾಡಲಿ"ಎಂದು ಕೇಳಲು ಅಗ್ನಿಯು ವಹ್ನಿಕುಂಡದಿಂದೆದ್ದು ಇಂತೆಂದನು.

೧೫೪–೧೫೫. ಬ್ರಾಹ್ಮಣನೆ ! ನನ್ನ ಮಾತನ್ನು ಕೇಳು. ಪ್ರಿಯವತ್ರನ ವಂಶದವನೂ, ಅತ್ಯಂತ ಬಲಶಾಲಿಯೂ, ವಿಕ್ರಮನಿಂದ ಕಾಳಿಂದಿಯ ಉದರದಲ್ಲಿ ಹುಟ್ಟಿದವನೂ ಆದ ದುರ್ದಮನೆಂಬ ರಾಜನು ಇವಳಿಗೆ ಪತಿಯಾಗುವನು.

೧೫೬. ಈ ಮಧ್ಯದಲ್ಲಿ ಆ ಪರ್ವತಕ್ಕೆ ಮೃಗ ಬೇಟೆಯಾಡಲು ಬಂದ ದುರ್ದಮನೆಂಬ ರಾಜನು ಪ್ರಮುಂಚನೆಂಬ ಮುನಿಯನ್ನು ಆಶ್ರಮದಲ್ಲಿ ಕಾಣದೆ,"ಪ್ರಿಯಳೆ! ತಂದೆಯು ಎಲ್ಲಿಗೆ ಹೋಗಿರುವನು. ಇಲ್ಲಿ ಬಾ ಸತ್ಯವಾಗಿ ಹೇಳು" ಎಂದನು.

೧೫೭. ನಾರದನು ಹೇಳುತ್ತಾನೆ :—ಆಗ ಅಗ್ನಿಶಾಲೆಯಲ್ಲಿರುವ ಮುನಿಯು ಪ್ರಿಯವಾದ ಆ ಮಾತನ್ನು ಕೇಳಿ ನನ್ನ ಮನೆಯಲ್ಲಿ ಪ್ರಿಯೆ! ಎಂದು ಕರೆಯುವವನಾರು?

೧೫೮. ಹೀಗೆ ಆಲೋಚಿಸಿ ಮಹಾತ್ಮನಾದ ದುರ್ದಮನನ್ನು ಕಂಡು ಸಂತೋಷಗೊಂಡು ಶಿಷ್ಯನಾದ ಗೌತಮನನ್ನು ಕುರಿತು ಇಂತೆಂದನು.

ಶಿಷ್ಯಂ ವಿನಯಸಂಪನ್ನಮರ್ಘ್ಯಂ ಪಾದ್ಯಂ ಸಮಾನಯ ।
ಏಕಂ ತಾವದಯಂ ಭೂಪಶ್ಚಿರಕಾಲಾದುಪಾಗತಃ ॥ ೧೫೯ ॥
ಜಾಮಾತಾ ಸಾಂಪ್ರತಂ ರಾಜಾ ಯೋಗ್ಯಾಸ್ಯ ಚ ಸುತಾ ಮಮ
ತತಃ ಸ ಚಿಂತಯಾಮಾಸ ರಾಜಾ ಜಾಮಾತೃಕಾರಣಂ ॥ ೧೬೦ ॥
ಮೌನೇನ ವಿಧಿನಾ ರಾಜಾ ಜಗೃಹೇಽರ್ಘ್ಯಂ ದ್ವಿಜಾಜ್ಞಯಾ ।
ತಮಾಸನಗತಂ ವಿಪ್ರೋ ಗೃಹೀತಾರ್ಘ್ಯಂ ಮಹಾಮುನಿಃ ॥ ೧೬೧ ॥
ಪ್ರಸ್ತುತಂ ಪ್ರಾಹ ರಾಜೇಂದ್ರಂ ನೃಪತೇ ಕುಶಲಂ ಪುರೇ ।
ಕೋಶೇ ಬಲೇ ಚ ಮಿತ್ರೇ ಚ ಭೃತ್ಯಾಮಾತ್ಯಪ್ರಜಾಸು ಚ ।
ತಥಾತ್ಮನಿ ಮಹಾಬಾಹೋ ಯತ್ರ ಸರ್ವಂ ಪ್ರತಿಷ್ಠಿತಂ ॥ ೧೬೨ ॥
ಪತ್ನೀ ಚ ತೇ ಕುಶಲಿನೀ ಯಾತ್ರ ಸ್ಥಾನೇ ಹಿ ತಿಷ್ಠತಿ ।
ಅನ್ಯಾಸಾಂ ಕುಶಲಂ ಬ್ರೂಹಿ ಯಾಃ ಸಂತಿ ತವ ಮಂದಿರೇ ॥ ೧೬೩ ॥

ರಾಜೋವಾಚ :—

ತ್ವತ್ಪ್ರಸಾದಾದಕುಶಲಂ ನಾಸ್ತಿ ರಾಜ್ಯೇ ಕ್ವಚಿನ್ಮಮ ।
ಜಾತಕೌತೂಹಲೋಽಸ್ಮ್ಯಸ್ಮಿ ಮಮ ಭಾರ್ಯಾಽತ್ರ ಕಾ ಮುನೇ ॥ ೧೬೪ ॥

---

೧೫೯-೧೬೦. "ಈ ದೊರೆಯು ಬಹುಕಾಲದ ಮೇಲೆ ಇಲ್ಲಿಗೆ ಬಂದಿರುವನು. ಇವನು ನನಗೆ ಅಳಿಯನಾಗಲರ್ಹನು. ಇವನಿಗೆ ನನ್ನ ಪುತ್ರಿಯು ಪತ್ನಿಯಾಗಲು ಯೋಗ್ಯಳು. ಆದುದರಿಂದ ಅರ್ಘ್ಯ, ಪಾದ್ಯಗಳನ್ನು ತೆಗೆದುಕೊಂಡು ಬಾ" ಹೀಗೆನ್ನಲು ಆ ರಾಜನು ಅಳಿಯನಾಗಲು ಕಾರಣವೇನೆಂದು ಆಲೋಚಿಸಿದನು.

೧೬೧-೧೬೨. ಅವನು ಮುನಿಯ ಆಜ್ಞೆಯಂತೆ ಮೌನದಿಂದ ಅರ್ಘ್ಯವನ್ನು ಸ್ವೀಕರಿಸಿದನು. ಆ ಮುನಿಯು ಅವನನ್ನು ಆಸನದಲ್ಲಿ ಕುಳ್ಳಿರಿಸಿ ಪ್ರಕೃತಕ್ಕೆ ಅನುಗುಣವಾಗಿ ಹೀಗೆ ಪ್ರಶ್ನಿಸಿದನು. "ದೊರೆಯೆ! ನಿನ್ನ ಪಟ್ಟಣ, ಬೊಕ್ಕಸ, ಸೈನ್ಯ, ಮಿತ್ರರು, ಭೃತ್ಯರು, ಮಂತ್ರಿಗಳು, ಪ್ರಜೆಗಳು ಇವರೆಲ್ಲರೂ ಕ್ಷೇಮವಾಗಿರುವರೇ ?. ಸಕಲವನ್ನೂ ಸಲಹುತ್ತಿರುವ ನೀನು ಕುಶಲಿಯಾಗಿರುವೆಯಾ ?

೧೬೩. ಇಲ್ಲಿರುವ ನಿನ್ನ ಪತ್ನಿಯೂ, ನಿನ್ನ ಮನೆಯಲ್ಲಿರುವ ಸತಿಯರೂ ಕ್ಷೇಮವಾಗಿರವರೊ ?

೧೬೪. ರಾಜನು ಹೇಳುತ್ತಾನೆ :— ಮುನಿಯೆ ! ನಿನ್ನ ಅನುಗ್ರಹದಿಂದ ನನ್ನ ರಾಜ್ಯದಲ್ಲಿ ಯಾವ ವಿಷಯದಲ್ಲಿಯೂ ಅಕುಶಲವಿಲ್ಲ. ಇಲ್ಲಿ ನನ್ನ ಪತ್ನಿಯಾರು ? ಈ ವಿಷಯದಲ್ಲಿ ನಾನು ಕೌತೂಹಲವುಳ್ಳವನಾಗಿರುವೆನು.

ಪ್ರಮುಂಚ ಉವಾಚ :—
ರೇವತೀ ತೇ ವರಾ ಭಾರ್ಯಾ ಕಿಂ ನ ವೇತ್ಸಿ ನೃಪೋತ್ತಮ ।
ತ್ರೈಲೋಕ್ಯಸುಂದರೀ ಯಾ ತು ಕಥಂ ಸಾ ವಿಸ್ಮೃತಾ ತವ ॥ ೧೬೫ ॥
ರಾಜೋವಾಚ :—
ಸುಭದ್ರಾಂ ಶಾಂತಪಾಪಂ ಚ ಕಾವೇರಿತನಯಾಂ ತಥಾ ।
ಸೂರಾತ್ಮಜಾಸುಜಾತಾಂ ಚ ಕದಂಬಾ ಚ ವರಪ್ರಿಯಾಂ ॥ ೧೬೬ ॥
ವಿಪಾರಾಂ ನಂದಿನೀಂ ಚೈವ ವೇದ್ಮಿ ಭಾರ್ಯಾಂ ಗೃಹೇ ಮಮ ।
ತಿಷ್ಠಂತಿ ನೈವ ಜಾನಾಮಿ ಭಾರ್ಯಾ ಮೇ ರೇವತೀ ಕುತಃ ॥ ೧೬೭ ॥
ಋಷಿರುವಾಚ :—
ಪ್ರಿಯೇತಿ ಸಾಂಪ್ರತಂ ಪ್ರೋಕ್ತಾ ರೇವತೀ ಸಾ ಪ್ರಿಯಾ ತವ ।
ತದನ್ಯಥಾ ನ ಭವಿತಾ ವಚಸಂ ನೃಪಸತ್ತಮ ॥ ೧೬೮ ॥
ರಾಜೋವಾಚ :—
ನಾಸ್ತಿ ಭಾವಕೃತೋ ದೋಷಃ ಕ್ಷಮ್ಯತಾಂ ತದ್ವಚೋ ಮಮ ।
ವಿನಿರ್ಗತಂ ವಚೋ ವಕ್ತ್ರಾನ್ನಾಹಂ ಜಾನೇ ದ್ವಿಜೋತ್ತಮ ॥ ೧೬೯ ॥

---

೧೬೫. ಪ್ರಮುಂಚನು ಹೇಳುತ್ತಾನೆ :—ದೊರೆಯೆ! ರೇವತಿಯು ನಿನಗೆ ಉತ್ತಮಳಾದ ಪತ್ನಿಯು. ಇದನ್ನು ನೀನು ತಿಳಿಯುವುದಿಲ್ಲವೆ? ತ್ರೈಲೋಕ್ಯ ಸುಂದರಿ ಯಾದ ಇವಳನ್ನು ನೀನು ಹೇಗೆ ಮರೆತಿರುವೆ?

೧೬೬–೧೬೭. ರಾಜನು ಹೇಳುತ್ತಾನೆ :—ಮುನಿಯೆ! ಮನೆಯಲ್ಲಿರುವ ಶಾಂತಪಾಪಳೂ, ಕಾವೇರಿಯ ಮಗಳೂ ಆದ ಸುಭದ್ರೆ, ಸೂರನ ತನಯಳಾದ ಅನುಜಾತೆ, ಕದಂಬೆ, ವಿಪಾರೆ, ನಂದಿನೀ ಈ ನನ್ನ ಭಾರ್ಯೆಯರನ್ನು ಅರಿತಿರುವೆನು. ರೇವತಿಯು ನನ್ನ ಪತ್ನಿಯು ಹೇಗೆ. ಇದನ್ನು ನಾನರಿಯೆ.

೧೬೮. ಋಷಿಯು ಹೇಳುತ್ತಾನೆ :—ದೊರೆಯೆ! ನೀನೀಗ ಪ್ರಿಯಳೆ! ಎಂದು ಸಂಬೋಧಿಸಿರುವ ಆ ರೇವತಿಯು ನಿನ್ನ ಪತ್ನಿಯು. ಆ ನನ್ನ ಮಾತು ವ್ಯತ್ಯಾಸ ವಾಗುವುದಿಲ್ಲ.

೧೬೯. ರಾಜನು ಹೇಳುತ್ತಾನೆ :—ಮನಸ್ಸಿನಿಂದ ಆಲೋಚಿಸಿರುವುದು ದೋಷವಲ್ಲ. ನನ್ನ ಮಾತನ್ನು ಕ್ಷಮಿಸು. ನನ್ನ ಬಾಯಿಯಿಂದ ಹೊರಟ ಮಾತನ್ನು ನಾನರಿಯೆನು.

ಋಷಿರುವಾಚ :—
ನಾಸ್ತಿ ಭಾವಕೃತೋ ದೋಷಃ ಪರಿವೇದ್ಮಿ ಕುರುಷ್ವ ತತ್ ।
ವಹ್ನಿನಾ ಕಥಿತಸ್ತ್ವಂ ಮೇ ಜಾಮಾತಾದ್ಯ ಭವಿಷ್ಯಸಿ ॥ ೧೭೦ ॥
ಇತ್ಯಾದಿವಚನೈ ರಾಜಾ ಭಾರ್ಯಾರ್ಥಂ ಮೇನೇ ಸ ರೇವತೀಂ ॥
ಋಷಿಸ್ತಥೋದ್ಯತಃ ಕರ್ತುಂ ವಿವಾಹಂ ವಿಧಿಪೂರ್ವಕಂ ॥
ಉವಾಚ ಕನ್ಯಾ ಪಿತರಂ ಕಿಂಚಿನ್ಮೇ ಶ್ರೂಯತಾಂ ಪಿತಃ ॥ ೧೭೧ ॥
ಯದಿ ಮೇ ಪತಿನಾ ತಾತ ವಿವಾಹಂ ಕರ್ತುಮಿಚ್ಛಸಿ ।
ರೇವತ್ಯೃಕ್ಷಂ ವಿವಾಹಂ ಮೇ ತತ್ಕರೋತು ಪ್ರಸಾದತಃ ॥ ೧೭೨ ॥
ಋಷಿರುವಾಚ :—
ರೇವತ್ಯೃಕ್ಷಂ ನ ವೈ ಭದ್ರೇ ಚಂದ್ರಯೋಗೇ ದಿವಿ ಸ್ಥಿತಂ ।
ಋಕ್ಷಾಣ್ಯನ್ಯಾನ್ಯಪಿ ಸಂತಿ ಸುಭ್ರೂರ್ವೈವಾಹಿತಾನಿ ಚ ॥ ೧೭೩ ॥
ಕನ್ಯೋವಾಚ :—
ತಾತ ತೇನ ವಿನಾ ಕಾಲೋ ವಿಕಲಃ ಪ್ರತಿಭಾತಿ ಮೇ ।
ವಿವಾಹೋ ವಿಕಲೇ ತಾತ ಮದ್ವಿಧಾಯಾಃ ಕಥಂ ಭವೇತ್ ॥ ೧೭೪ ॥

---

೧೭೦. ಋಷಿಯು ಹೇಳುತ್ತಾನೆ :—ಭಾವಕೃತವಾದುದು ದೋಷವಲ್ಲವೆಂಬುದನ್ನು ನಾನು ತಿಳಿದಿದ್ದೇನೆ. ನೀನು ನನ್ನ ಮಾತನ್ನು ನಡೆಯಿಸು. ಅಗ್ನಿಯು ಹೇಳಿದಂತೆ ನೀನು ನನಗೆ ಅಳಿಯನಾಗುವೆ.

೧೭೧. ದೊರೆಯು ಮುನಿಯ ಇವೇ ಮೊದಲಾದ ಮಾತುಗಳಿಂದ ರೇವತಿಯನ್ನು ಪತ್ನಿಯನ್ನಾಗಿ ತಿಳಿದನು. ಅದರಂತೆ ಮುನಿಯು ವಿಧಿಯಂತೆ ವಿವಾಹಮಾಡಲುದ್ಯುಕ್ತನಾಗಲು ಕನ್ಯೆಯು ತಂದೆಯನ್ನು ಕುರಿತು, "ತಂದೆಯೆ! ನನ್ನದೊಂದು ಮಾತನ್ನು ಕೇಳು.

೧೭೨. "ನನಗೆ ನೀನು ವಿವಾಹ ಮಾಡಲು ಬಯಸುವುದಾದರೆ ಅನುಗ್ರಹಿಸಿ ರೇವತೀ ನಕ್ಷತ್ರದಲ್ಲಿ ವಿವಾಹವನ್ನು ನೆರವೇರಿಸು". ಎಂದಳು.

೧೭೩. ಈಶ್ವರನು ಹೇಳುತ್ತಾನೆ :—ಮಂಗಳಕರಳೆ! ಈಗ ರೇವತೀ ನಕ್ಷತ್ರವು ಆಕಾಶದಲ್ಲಿ ಚಂದ್ರನೊಡನೆ ಇಲ್ಲ. ಸುಂದರಿ! ಇತರ ವಿವಾಹೋಪಯುಕ್ತ ನಕ್ಷತ್ರಗಳಿರುವುವು.

೧೭೪. ಕನ್ಯೆಯು ಹೇಳುತ್ತಾಳೆ :—ತಾತ! ಆ ರೇವತಿ ನಕ್ಷತ್ರವಿಲ್ಲದ ಮುಹೂರ್ತವು ನನಗೆ ಸರಿಯಾದುದಲ್ಲವೆಂದು ತೋರುವುದು. ವ್ಯತ್ಯಾಸವಾದ ಕಾಲದಲ್ಲಿ ನನ್ನಂತಹವಳಿಗೆ ವಿವಾಹವು ಹೇಗಾಗುವುದು.

ಪ್ರಮುಂಚ ಉವಾಚ :—

ಋತವಾಗಿತಿ ವಿಖ್ಯಾತಸ್ತಪಸ್ವೀ ರೇವತೀಂ ಪ್ರತಿ ।
ಚಕಾರ ಕೋಪಂ ಕ್ರುದ್ಧೇನ ತೇನರ್ಕ್ಷಂ ತನ್ನಿಪಾತಿತಂ ॥ ೧೭೫ ॥
ಮಯಾ ಚಾಸ್ಮೈ ಪ್ರತಿಜ್ಞಾತಾ ಭಾರ್ಯೇತಿ ವಿದಿತಂ ತವ ।
ನ ಚೇಚ್ಛಸಿ ವಿವಾಹಂ ತ್ವಂ ಸಂಕಟಂ ನಃ ಸಮಾಗತಂ ॥ ೧೭೬ ॥

ಕನ್ಯೋವಾಚ :—

ಋತವಾಗೇವ ಸ ಮುನಿಃ ಕಿಮೇತತ್ತಪ್ತವಾನ್ಸ್ವಯಂ ।
ನ ತ್ವಯಾ ಮಮ ತಾತೇನ ಬ್ರಹ್ಮಬಂಧೋಃ ಸುತಾಽಸ್ಮಿ ಕಿಂ ॥ ೧೭೭ ॥

ಋಷಿರುವಾಚ :—

ಬ್ರಹ್ಮಬಂಧೋಃ ಸುತಾ ನ ತ್ವಂ ತಪಸ್ವೀ ನಾಸ್ತಿ ಮೇಽಧಿಕಃ ।
ಸುತಾ ತ್ವಂ ಚ ಮಯಾ ದೇಯಾ ನಾನ್ಯತ್ಕರ್ತುಂ ಸಮುತ್ಸಹೇ ॥ ೧೭೮ ॥

ಕನ್ಯೋವಾಚ :—

ತಪಸ್ವೀ ಯದಿ ಮೇ ತಾತಸ್ತತ್ಕಿಮೃಕ್ಷಮಿದಂ ದಿವಿ ।
ಸಮಾರೋಪ್ಯ ವಿವಾಹೋ ಮೇ ಕಸ್ಮಾನ್ನ ಕ್ರಿಯತೇ ಪುನಃ ॥ ೧೭೯ ॥

---

೧೭೫. ಪ್ರಮುಂಚನು ಹೇಳುತ್ತಾನೆ :—ಋತವಾಕನೆಂದು ಪ್ರಸಿದ್ಧನಾದ ಒಬ್ಬ ಮುನಿಯು ರೇವತಿಯನ್ನು ಕುರಿತು ಕುಪಿತನಾಗಿ ಅದನ್ನು ಕೆಳಗೆ ಕೆಡವಿದನು.

೧೭೬. ನಾನು ಈ ರಾಜನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುವುದಾಗಿ ನಿಶ್ಚಯಿಸಿರುವೆನು. ನೀನು ವಿವಾಹಮಾಡಿಕೊಳ್ಳಲಿಚ್ಛಿಸದಿದ್ದರೆ ನನಗೆ ಅತ್ಯಂತ ಕಷ್ಟವೊದಗುವುದು.

೧೭೭. ಕನ್ಯೆಯು ಹೇಳುತ್ತಾಳೆ :—ಋತವಾಕನೆಂಬ ಮುನಿಯೊಬ್ಬನೆ ತಪಸ್ಸನ್ನು ಮಾಡಿದವನೊ ? ನನ್ನ ತಂದೆಯಾದ ನೀನು ತಪಸ್ಸನ್ನಾಚರಿಸಲಿಲ್ಲವೋ? ನಾನು ನೀಚ ದ್ವಿಜನ ಸುತಳೇನು ?

೧೭೮. ಋಷಿಯು ಹೇಳುತ್ತಾನೆ :—ನೀನು ನೀಚ ಬ್ರಾಹ್ಮಣನ ಮಗಳೂ, ಅಲ್ಲ. ನನಗಿಂತ ಅಧಿಕನಾದ ತಾಪಸನೂ ಇಲ್ಲ. ನಾನು ನಿನ್ನನ್ನು ಮದುವೆ ಮಾಡಿ ಕೊಡಬೇಕಾಗಿದೆ. ಬೇರೆ ಏನನ್ನೂ ಮಾಡಲೂ ಇಚ್ಛಿಸುವುದಿಲ್ಲ.

೧೭೯. ಕನ್ಯೆಯು ಹೇಳುತ್ತಾಳೆ :—ನನ್ನ ತಂದೆಯು ತಾಪಸನಾದರೆ ಈ ರೇವತೀನಕ್ಷತ್ರವನ್ನು ಆಕಾಶಕ್ಕೆ ಏರಿಸಿ ಏಕೆ ನನಗೆ ವಿವಾಹಮಾಡುವುದಿಲ್ಲ ?

ಋಷಿರುವಾಚ :—
ಏವಂ ಭವತು ಭದ್ರಂ ತೇ ಭದ್ರೇ ಪ್ರೀತಿಮತೀ ಭವ ।
ಆರೋಪಯಾಮೀಂದುಮಾರ್ಗೇ ರೇವತ್ಯೃಕ್ಷಂ ಕೃತೇ ತವ ॥ ೧೮೦ ॥
ತತಸ್ತಪಃಪ್ರಭಾವೇನ ರೇವತ್ಯೃಕ್ಷಂ ಮಹಾಮುನಿಃ ।
ಯಥಾ ಪೂರ್ವಂ ತಥಾ ಚಕ್ರೇ ಸೋಮಯೋಗಿ ದ್ವಿಜೋತ್ತಮಃ ।
ವಿವಾಹಂ ದುಹಿತುಃ ಕೃತ್ವಾ ಜಾಮಾತರಮುವಾಚ ಹ ॥ ೧೮೧ ॥
ಔದ್ವಾಹಿಕಂ ತೇ ಭೂಪಾಲ ಕಥ್ಯತಾಂ ಕಿಂ ದದಾಮ್ಯಹಂ ।
ದುಷ್ಪ್ರಾಪಮಪಿ ದಾಸ್ಯಾಮಿ ವಿದ್ಯತೇ ಮೇ ಮಹತ್ತಪಃ ॥ ೧೮೨ ॥
ರಾಜೋವಾಚ :—
ಮನೋಃಸ್ವಾಯಂಭುವಸ್ಯಾಹಮುತ್ಪನ್ನಃ ಸಂತತೌ ಮುನೇ ।
ಮನ್ವಂತರಾಧಿಪಂ ಪುತ್ರಂ ತ್ವತ್ಪ್ರಸಾದಾದ್ವೃಣೋಮ್ಯಹಂ ॥ ೧೮೩ ॥
ಋಷಿರುವಾಚ :—
ಭವಿಷ್ಯತಿ ಮಹೀಪಾಲೋ ಮಹಾಬಲಪರಾಕ್ರಮಃ ।
ರೇವತೀ ರೇವತೀಕುಂಡೇ ಸ್ನಾತ್ವಾ ಪುತ್ರಂ ಜನಿಷ್ಯತಿ ॥ ೧೮೪ ॥

---

೧೮೦. ಋಷಿಯು ಹೇಳುತ್ತಾನೆ :—ಮಂಗಳಕರಳೆ ! ಹೀಗೆಯೇ ಆಗಲಿ. ನೀನು ಸಂತೋಷಗೊಳ್ಳು. ನಿನಗಾಗಿ ರೇವತೀ ನಕ್ಷತ್ರವನ್ನು ಚಂದ್ರನ ಮಾರ್ಗಕ್ಕೆ ಏರಿಸುವೆನು.

೧೮೧. ಬಳಿಕ ಆ ಮಹಾಮುನಿಯು ತನ್ನ ತಪಸ್ಸಿನ ಶಕ್ತಿಯಿಂದ ರೇವತೀ ನಕ್ಷತ್ರವನ್ನು ಚಂದ್ರನೊಡನೆ ಸೇರಿಸಿ ಮಗಳಿಗೆ ವಿವಾಹ ಮಾಡಿ ಅಳಿಯನನ್ನು ಕುರಿತು ಇಂತೆಂದನು.

೧೮೨. ದೊರೆಯೆ ! ನಿನಗೆ ಯಾವ ಉಡುಗೆರೆಯನ್ನು ಕೊಡಲಿ. ಅಸಾಧ್ಯವಾದುದನ್ನೂ ನಿನಗೆ ಕೊಡುವೆನು. ನನ್ನಲ್ಲಿ ಮಹಾತಪಸ್ಸಿದೆ.

೧೮೩. ರಾಜನು ಹೇಳುತ್ತಾನೆ :—ಮುನಿಯೆ ! ನಾನು ಸ್ವಾಯಂಭುವ ಮನುವಿನ ಸಂತತಿಯಲ್ಲಿ ಹುಟ್ಟಿರುವೆನು. ನಿನ್ನ ಅನುಗ್ರಹದಿಂದ ಮನ್ವಂತರಕ್ಕೆ ಒಡೆಯನಾದ ಸುತನನ್ನು ಪಡೆಯಲು ಬಯಸುವೆನು.

೧೮೪. ಋಷಿಯು ಹೇಳುತ್ತಾನೆ :—ಅತ್ಯಂತ ಬಲವುಳ್ಳ ದೊರೆಯಾಗುವ ಮಗನು ನಿನಗೆ ಹುಟ್ಟುವನು. ಈ ರೇವತಿಯು ರೇವತೀ ಕುಂಡದಲ್ಲಿ ನಿಂದು ಅಂತಹ ತನಯವನ್ನು ಪಡೆಯುವಳು.

ಏವಂ ಕೃತ್ವಾ ಗತೋ ರಾಜಾ ಸಾ ಚ ಪುತ್ರಮಜೀಜನತ್ ।
ರೈವತೇತಿ ಕೃತಂ ನಾಮ ಬಭೂವ ಸ ಮನುರ್ನೃಪಃ ॥ ೧೮೫ ॥
ಅಮುನಾ ಚ ತದಾ ಪ್ರೋಕ್ತಮಸ್ಮಿನ್ನೈ್ರವತಕೇ ಗಿರೌ ।
ಸ್ತ್ರಿಯಃ ಸ್ನಾನಂ ಕರಿಷ್ಯಂತಿ ತಾಸಾಂ ಪುತ್ರಾ ಮಹಾಬಲಾಃ ।
ದೀರ್ಘಾಯುಷೋ ಭವಿಷ್ಯಂತಿ ದುಃಖದಾರಿದ್ರ್ಯವರ್ಜಿತಾಃ ॥ ೧೮೬ ॥

ನಾರದ ಉವಾಚ :—

ಇತ್ಯುಕ್ತೇ ಪರ್ವತೋ ರಾಜನ್ ದೀರ್ಘೋರ್ಧ್ವ ಭೂತ್ವಾ ಪಪಾತಸಃ ।
ಏತೌ ತೌ ಸಂಸ್ಮೃತೌ ದೇವೌ ಸಭಾರ್ಯೌ ಹರಿಶಂಕರೌ ॥ ೧೮೭ ॥
ಸ್ಮೃತಿಮಾತ್ರಾ ತದಾ ಯಾತೌ ತೇನ ಬದ್ಧಾ ಪುರಾ ಯತಃ ।
ಯತ್ರಾಹಂ ತತ್ರ ಸ್ಥಾತವ್ಯಂ ಭವದ್ಭ್ಯಾಮಿತಿ ನಿಶ್ಚಿತಂ ॥ ೧೮೮ ॥
ಅತೋ ವಿಷ್ಣುಹರೌ ದೇವೌ ಸ್ಥಿತೌ ತೌ ಪರ್ವತೋತ್ತಮೇ ।
ಗಿರೌ ರೈವತಕೇ ರಮ್ಯೇ ಸ್ವರ್ಣರೇಖಾನದೀಜಲೇ ।
ಆರಾಧಯದ್ಧರಿಂ ದೇವಂ ರೇವತೀ ತಾಂ ಚ ಸೋಽಬ್ರವೀತ್ ॥ ೧೮೯ ॥
ಭವತಾಚ್ಚಂದ್ರಯೋಗಸ್ತೇ ಗಗನೇ ಬ್ರಾಹ್ಮಣಾಜ್ಞಯಾ ।
ಅನ್ಯದ್ವೃಣೀಷ್ವ ತುಷ್ಟೋಽಹಂ ವರಂ ಮನಸಿ ಯತ್ಸ್ಥಿತಂ ॥ ೧೯೦ ॥

---

೧೮೫. ಆ ದೊರೆಯು ಅದರಂತೆ ರೇವತಿಯಿಂದ ಸ್ನಾನ ಮಾಡಿಸಿ ಹೊರಟು ಹೋದನು. ಅವಳು ಪುತ್ರನನ್ನು ಪ್ರಸವಿಸಿದಳು. ರಾಜನು ಅವನಿಗೆ ರೈವತನೆಂದು ನಾಮಕರಣಮಾಡಿದನು. ಅವನು ಹೊರಡಲು ಅನುವಾದನು.

೧೮೬. ಅವನು, "ಈ ರೈವತಕ ಪರ್ವತದಲ್ಲಿ ಮಿಂದ ಸ್ತ್ರೀಯರಿಗೆ ಅತಿ ಬಲಿಷ್ಠರೂ, ದೀರ್ಘಾಯುಷ್ಮಂತರೂ, ದುಃಖ ದಾರಿದ್ರ್ಯಗಳಿಲ್ಲದವರೂ ಆದ ಪುತ್ರರು ಜನಿಸುವರು". ಎಂದನು.

೧೮೭. ನಾರದನು ಹೇಳುತ್ತಾನೆ :—ಹೀಗೆ ಅವನು ಹೇಳಲು ಆ ಪರ್ವತವು ಉದ್ದವಾಗಿ ಬಿದ್ದು ಪತ್ನಿಯರಿಂದ ಸಹಿತರಾದ ಹರಿಹರರನ್ನು ಸ್ಮರಿಸಿತು.

೧೮೮–೧೮೯. ಅವನು ಹಿಂದೆ ನಾನಿದ್ದಲ್ಲಿ ನೀವಿರಬೇಕೆಂದು ಬೇಡಿಕೊಂಡಿದ್ದರಿಂದ ಆ ಹರಿಹರರು ಸ್ಮರಿಸಿದ ಕೂಡಲೆ ಬಂದರು. ಆ ಪರ್ವತದಲ್ಲಿಯೇ ನೆಲೆಸಿದರು. ರೇವತಿಯು ಆ ಪರ್ವತದಲ್ಲಿರುವ ಸ್ವರ್ಣರೇಖಾನದೀ ಜಲದಲ್ಲಿ ಹರಿಯನ್ನಾರಾಧಿಸಲು ಅವನು ಅವಳನ್ನು ಕುರಿತು ಹೀಗೆಂದನು.

೧೯೦. "ಬ್ರಾಹ್ಮಣನ ಆಜ್ಞೆಯಿಂದ ಆಕಾಶದಲ್ಲಿ ನಿನಗೆ ಚಂದ್ರಯೋಗವುಂಟಾಗಲಿ. ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ಬೇರೆ ವರವನ್ನು ಕೇಳಿಕೊ".

ರೇವತ್ಯುವಾಚ :—

ಗಿರೌ ರೈವತಕೇ ದೇವ ಸ್ಥಾತವ್ಯಂ ಭವತಾ ಸದಾ ।
ಮಯಾ ಸ್ನಾನಂ ಕೃತಂ ಯತ್ರ ತತ್ರ ಸ್ನಾಸ್ಯಂತಿ ಯೇ ಜನಾಃ ॥ ೧೯೧ ॥
ತೇಷಾಂ ವಿಷ್ಣುಪುರೇ ವಾಸೋ ಭವತ್ವಿತಿ ವೃತಂ ಮಯಾ ।
ಏವಮಸ್ತು ತದಾ ಪ್ರೋಚ್ಯ ಗಿರೌ ರೈವತಕೇ ಸ್ಥಿತಃ ।
ದಾಮೋದರಶ್ಚತುರ್ಬಾಹುಃ ಸ್ವಯಂ ರುದ್ರೋಽಪಿ ಸಂಸ್ಥಿತಃ ॥ ೧೯೨ ॥
ಗಂಗಾದ್ಯಾಃ ಸರಿತಃ ಸರ್ವಾಃ ಸಂಸ್ಥಿತಾ ವಿಷ್ಣುನಾ ಸಹ ।
ಕ್ಷೀರೋದೇ ಮಥ್ಯಮಾನೇ ತು ಯದಾ ವೃಕ್ಷಃ ಸಮುತ್ಥಿತಃ ॥ ೧೯೩ ॥
ಆಮರ್ದಕೀ ದೇವದೈತ್ಯಾನಾಂ ತೇನ ಸಾಮರ್ದಕೀ ಸ್ಮೃತಾ ।
ಅಸ್ಮಿನ್ವೃಕ್ಷೇ ಸ್ಥಿತಾ ಲಕ್ಷ್ಮೀಃ ನೃಪಾ ಪಿತೃಗೃಹೇ ನೃಪ ॥ ೧೯೪ ॥
ಮಾಲಕ್ಷ್ಮೀಃ ಸ್ಮೃತೋ ವೃಕ್ಷಃ ಸೇವ್ಯತೇ ಸುರಸತ್ತಮೈಃ ।
ದೈವೈರ್ಬ್ರಹ್ಮಾದಿಭಿಃ ಸರ್ವೈರ್ವೃಕ್ಷೋಽಸೌ ವೈಷ್ಣವಃಸ್ಮೃತಃ ॥ ೧೯೫ ॥
ಸರ್ವೈಃ ಸಂಚಿತ್ಯ ಮುಕ್ತೋಽಸೌ ಗಿರೌ ರೈವತಕೇ ಪುರಾ ।
ಅಸ್ಯ ವೃಕ್ಷಸ್ಯ ಯಾತ್ರಾಂ ಯೇ ಕರಿಷ್ಯಂತಿ ಹರೇರ್ದಿನೇ ॥ ೧೯೬ ॥
ಫಾಲ್ಗುನೇ ಚ ಸಿತೇ ಪಕ್ಷೇ ಏಕಾದಶ್ಯಾಂ ನೃಪೋತ್ತಮ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಭವಿಷ್ಯಂತಿ ಗುಣಾಧಿಕಾಃ ।
ಪ್ರಾಂತೇ ವಿಷ್ಣುಪುರೇ ವಾಸೋ ಜಾಯತೇ ನಾತ್ರ ಸಂಶಯಃ ॥ ೧೯೭ ॥

---

೧೯೧–೧೯೨. ರೇವತಿಯು ಹೇಳುತ್ತಾಳೆ :—ಸ್ವಾಮಿ ! ನೀನು ಯಾವಾಗಲೂ ರೈವತಕ ಪರ್ವತದಲ್ಲಿ ನೆಲೆಸು. ನಾನು ಮಿಂದ ಸ್ಥಳದಲ್ಲಿ ಮಿಂದ ಮಾನವರು ವೈಕುಂಠಲೋಕದಲ್ಲಿ ವಾಸಿಸಲಿ ಎಂದು ರೇವತಿಯು ವರವನ್ನು ಕೇಳಲು ದಾಮೋದರನು ಹಾಗೆಯೇ ಆಗಲೆಂದು ಅಲ್ಲಿದ್ದನು. ರುದ್ರನೂ ಅಲ್ಲಿ ನೆಲಸಿದನು.

೧೯೩–೧೯೪. ಅಲ್ಲಿ ವಿಷ್ಣುವಿನೊಡನೆ ಗಂಗಾದಿ ಸಮಸ್ತ ನದಿಗಳೂ ಇದ್ದುವು. ದೇವ ದೈತ್ಯರು ಕ್ಷೀರ ಸಮುದ್ರವನ್ನು ಕಡೆಯುತ್ತಿರಲು ಆಮರ್ದಕಿಯೆಂಬ ವೃಕ್ಷವುಂಟಾಯಿತು. ಆಗ ಲಕ್ಷ್ಮಿಯು ತನ್ನ ಪಿತೃಭವನದಲ್ಲಿರುವ ಆ ಮರದಲ್ಲಿ ಇದ್ದಳು.

೧೯೫. ಪಾರ್ವತಿಯೆ ಲಕ್ಷ್ಮಿಯು ಆ ವಿಷ್ಣು ವೃಕ್ಷವನ್ನು ಬ್ರಹ್ಮಾದಿ ದೇವತೆಗಳು ಸೇವಿಸುತ್ತಾರೆ.

೧೯೬–೧೯೭. ಎಲ್ಲರೂ ಆಲೋಚಿಸಿ ಆ ವೃಕ್ಷವನ್ನು ರೈವತಕ ಪರ್ವತದಲ್ಲಿ ಸ್ಥಾಪಿಸಿದರು. ಫಾಲ್ಗುನ ಶುಕ್ಲಪಕ್ಷದ ಏಕಾದಶೀ ದಿನ, "ಈ ವೃಕ್ಷದ ಯಾತ್ರೆಯನ್ನು ಮಾಡುವವರಿಗೆ ಅತಿಶಯಗುಣಗುಳುಳ್ಳ ಪುತ್ರಪೌತ್ರರು ಜನಿಸುವರು. ಅವರು ಕೊನೆಯಲ್ಲಿ ವೈಕುಂಠ ಲೋಕದಲ್ಲಿ ವಾಸಿಸುತ್ತಾರೆ.

ಬಲಿರುವಾಚ :—
ಕಥಮೇತದ್ವ್ರತಂ ಕಾರ್ಯಂ ವೈಷ್ಣವಂ ವಿಷ್ಣುವಲ್ಲಭಂ ।
ರಾತ್ರೌ ಜಾಗರಣಂ ಕಾರ್ಯಂ ವಿಧಿನಾ ಕೇನ ತದ್ವದ ॥ ೧೯೮ ॥
ನಾರದ ಉವಾಚ :—
ಫಾಲ್ಗುನಸ್ಯ ಸಿತೇ ಪಕ್ಷ ಏಕಾದಶ್ಯಾಮುಪೋಷಿತಃ ।
ಸ್ನಾತ್ವಾ ನದ್ಯಾಂ ತಡಾಗೇ ವಾ ವಾಪ್ಯಾಂ ಕೂಪೇ ಗೃಹೇಪಿ ವಾ ॥ ೧೯೯ ॥
ಗತ್ವಾ ಗಿರೌ ವನೇ ವಾಽಪಿ ಯತ್ರ ಸಾ ಪ್ರಾಪ್ಯತೇ ಶಿವಾ ।
ಪೂಜ್ಯಾ ಪುಷ್ಪೈಃ ಶುಭೈ ರಾತ್ರೌ ಕಾರ್ಯಂ ಜಾಗರಣಂ ನರೈಃ ॥ ೨೦೦ ॥
ಅಷ್ಟಾಧಿಕಶತೈಃ ಕಾರ್ಯಾ ಫಲೈಸ್ತಸ್ಯಾಃ ಪ್ರದಕ್ಷಿಣಾ ।
ಪ್ರದಕ್ಷಿಣೀಕೃತ್ಯ ನಗಂ ಭೋಕ್ತವ್ಯಂ ತು ಫಲಂ ನರೈಃ ॥ ೨೦೧ ॥
ಕರಕಂ ಜಲಪೂರ್ಣಂ ತು ಕರ್ತವ್ಯಂ ಪಾತ್ರಸಂಯುತಂ ।
ಹವಿಷ್ಯಾನ್ನಂ ತು ಕರ್ತವ್ಯಂ ದೀಪಃ ಕಾರ್ಯೋ ವಿಧಾನತಃ ॥ ೨೦೨ ॥
ಏವಂ ಜಾಗರಣಂ ಕಾರ್ಯಂ ಕಥಾಶ್ರವಣತತ್ಪರೈಃ ।
ಮುಚ್ಯಂತೇ ದೇಹಿನಃ ಪಾಪೈಃ ಕಲಿಜೈಃ ಕಾಯಸಂಭವೈಃ ॥ ೨೦೩ ॥
ದೇಹಾಂತೇ ತೇ ನರಾಃ ಸರ್ವೇ ಪೂಜ್ಯಂತೇ ಹರಿಮಂದಿರೇ ॥ ೨೦೪ ॥

---

೧೯೮. ಬಲಿಯು ಹೇಳುತ್ತಾನೆ:—ವಿಷ್ಣುಪ್ರಿಯವಾದ ಈ ವೈಷ್ಣವವ್ರತವನ್ನು ಹೇಗೆ ಆಚರಣೆ ಮಾಡಬೇಕು? ರಾತ್ರಿ ಜಾಗರಣೆಯನ್ನು ಯಾವ ಕ್ರಮದಿಂದ ಮಾಡಬೇಕು.

೧೯೯—೨೦೨. ನಾರದನು ಹೇಳುತ್ತಾನೆ:—ಮನುಷ್ಯನು ಫಾಲ್ಗುನ ಶುಕ್ಲೈಕಾದಶೀ ದಿನ ಉಪವಾಸ ಮಾಡಿ ನದಿ, ಕೆರೆ, ಇಳಿಯುವ ಬಾವಿ ಅಥವಾ ಮನೆಯ ಬಾವಿಗಳಲ್ಲಿ ಮಿಂದು ಆ ರೈವತಕ ಪರ್ವತದಲ್ಲಾಗಲಿ, ಕಾಡಿನಲ್ಲಾಗಲಿ ಶಿವಾವೃಕ್ಷವು ಸಿಕ್ಕಿದಾಗ ಶುಭ ಪುಷ್ಪಗಳಿಂದ ಪೂಜಿಸಿ ರಾತ್ರಿ ಜಾಗರಣೆಗೈದು ನೂರೆಂಟು ಫಲಗಳಿಂದ ಪ್ರದಕ್ಷಿಣೆ ಮಾಡಿ, ಆ ಪರ್ವತಕ್ಕೂ ಪ್ರದಕ್ಷಿಣೆಗೈದು ಫಲವನ್ನು ಭುಂಜಿಸಿ ಪಾತ್ರೆಯೊಳಗೆ ಕಮಂಡಲುವನ್ನು ಇಟ್ಟು ಅದಕ್ಕೆ ನೀರನ್ನು ತುಂಬಿ ಹವಿಷ್ಯಾನ್ನವನ್ನು ನಿವೇದಿಸಿ ದೀಪವನ್ನು ಹೊತ್ತಿಸಬೇಕು.

೨೦೩. ಹೀಗೆ ಕಥಾಶ್ರವಣ ಮಾಡುತ್ತ ಜಾಗರಣೆ ಮಾಡಿದ ಮಾನವರು, ಕಲಿದೋಷದಿಂದುಂಟಾದ ದೈಹಿಕ ಪಾಪಗಳಿಂದ ಮುಕ್ತರಾಗುವರು,

೨೦೪. ಅವರು ದೇಹಾವಸಾನದಲ್ಲಿ ವೈಕುಂಠಲೋಕದಲ್ಲಿ ಪೂಜ್ಯರಾಗುತ್ತಾರೆ.

ಸಾರಸ್ವತ ಉವಾಚ :—

ಇತ್ಯುಕ್ತ್ವಾ ನಾರದೋ ದೈತ್ಯಂ ಯಯೌ ರೈವತಕಂ ಗಿರಿಂ ।
ದೈತ್ಯೇಂದ್ರೋ ಮಂತ್ರಯಾಮಾಸ ಕಿಂ ಕಾರ್ಯಂ ಸಾಂಪ್ರತಂ ಮಯಾ ।
ನ ರೋಚತೇ ಸುರೈಃ ಸಾರ್ಧಂ ವಿಗ್ರಹೋ ಮೇಽಸುರೋತ್ತಮಾಃ ॥ ೨೦೬ ॥

ಮಂತ್ರಿಣ ಊಚುಃ ।

ನಾಸ್ತಿ ಕ್ಷಮಾ ಭೃಶಂ ತೇಷಾಂ ಕ್ಷತ್ರಿಯಾಣಾಂ ಗೃಹೇ ಸತಾಂ ।
ಅಶಕ್ತಮಪಿ ಮಂಸ್ಯಂತೇ ಸ್ವಯಮಾಯಾಂತಿ ತೇ ಯತಃ ।
ತಸ್ಮಾತ್ಸ್ವಯಂ ಪ್ರಯಾಸ್ಯಾಮೋ ದೇವೇಂದ್ರಂ ಸಹಿತಾ ವಯಂ ॥ ೨೦೭ ॥
ಇತಿ ಶ್ರುತ್ವಾ ದದೌ ಢಕ್ಕಾಂ ಪ್ರಥಮಂ ಸುರವಿಗ್ರಹೇ ।
ಗೃಹೀತ್ವಾ ವಾಹಿನೀಂ ದೈತ್ಯಾಃ ಪ್ರಸ್ಥಿತಾ ಮೇರುಪರ್ವತೇ ॥ ೨೦೮ ॥
ಯತ್ರ ಸಾ ನಗರೀ ರಮ್ಯಾ ದೇವರಾಜಸ್ಯ ಪೂರ್ವತಃ ।
ಆಗಚ್ಛಮಾನಾಂ ತಾಂ ಜ್ಞಾತ್ವಾ ವಾಹಿನೀಂ ಮೇರುಪರ್ವತೇ ॥ ೨೦೯ ॥
ದೇವರಾಜಸಮಾದೇಶಾಚ್ಚಲಿತಾ ದೇವವಾಹಿನೀ ।
ಸುಮೇರೋಃ ಪೂರ್ವದಿಗ್ಭಾಗೇ ಯುದ್ಧಮಾಸೀತ್ಪರಸ್ಪರಂ ॥ ೨೧೦ ॥

---

೨೦೬. ಸಾರಸ್ವತನು ಹೇಳುತಾನೆ:—ನಾರದನು ಬಲಿಯನ್ನು ಕುರಿತು ಹೀಗೆ ಹೇಳಿ ರೈವತಕ ಪರ್ವತಕ್ಕೆ ಹೋದನು. ಬಲಿಯು, "ಅಸುರೋತ್ತಮರೆ! ನಾನೀಗ ಏನನ್ನು ಮಾಡಬೇಕು. ನನಗೆ ದೇವತೆಗಳೊಡನೆ ಯುದ್ಧಮಾಡಲಿಷ್ಟವಿಲ್ಲ". ಎಂದು ಕೇಳಿದನು.

೨೦೭. ಮಂತ್ರಿಗಳು ಹೇಳುತ್ತಾರೆ:—ಕ್ಷತ್ರಿಯರ ಭವನದಲ್ಲಿರುವವರಿಗೆ (ಕ್ಷತ್ರಿಯರಿಗೆ) ಸಹನೆಯು ಯುಕ್ತವಲ್ಲ. ತಾವಾಗಿ ಯುದ್ಧಹೂಡುವ ದೇವತೆಗಳು ನಮ್ಮನ್ನು ಅಶಕ್ತರೆಂದು ಭಾವಿಸುವರು ಆದ್ದರಿಂದ ನಾವು ಒಟ್ಟುಗೂಡಿ ದೇವ ರಾಜನನ್ನು ಕುರಿತು ಯುದ್ಧಕ್ಕೆ ತೆರಳೋಣ.

೨೦೮–೨೧೦. ಬಲಿಯು ಮಂತ್ರಿಗಳ ಈ ಮಾತನ್ನು ಕೇಳಿ ಸುರರೊಡನೆ ಯುದ್ಧಗೈಯ್ಯಲು ಢಕ್ಕೆಯನ್ನು ಬಾರಿಸಿದನು. ಹಾಗೆಯೇ ದೈತ್ಯರು ಸೈನ್ಯವನ್ನು ತೆಗೆದುಕೊಂಡು ಮೇರು ಪರ್ವತದ ಪೂರ್ವಭಾಗದಲ್ಲಿರುವ ಇಂದ್ರನಗರಿಗೆ ಹೊರಟರು. ಆಗ ದೇವತೆಗಳ ಸೈನ್ಯವು ಬರುತ್ತಿರುವ ಅಸುರ ಸೈನ್ಯವನ್ನು ಕಂಡು ಇಂದ್ರನ ಅಪ್ಪಣೆ ಯಿಂದ ಹೊರಟಿತು. ಆ ಎರಡು ಸೈನ್ಯಗಳಿಗೆ ಮೇರುವಿನ ಪೂರ್ವದಿಕ್ಕಿನಲ್ಲಿ ಕಾಳಗ ನಡೆಯಿತು.

ದೇವಸೈನ್ಯಂ ಯದಾ ಸರ್ವಂ ದೈತ್ಯಸೈನ್ಯೇನ ಸಂಯುತಂ ।
ಮಹಾಪ್ರಲಯಸಾದೃಶ್ಯಂ ಯುದ್ಧಂ ವೃತ್ತಂ ತದಾ ತಯೋಃ ॥ ೨೧೧ ॥
ಐರಾವಣಂ ಸಮಾರುಹ್ಯ ದೇವರಾಜಃ ಸಮಾಗತಃ ।
ರಥಮಾರುಹ್ಯ ದೈತ್ಯೇಂದ್ರೋ ಯುದ್ಧಾಯಾನ್ಯೇ ಸಮಾಗತಾಃ ॥ ೨೧೨ ॥
ದೇವಾ ಯಜ್ಞಭುಜೋ ಯಸ್ಮಾತ್ತಸ್ಮಾನ್ನ ಯುದ್ಧಕಾಂಕ್ಷಿಣಃ ।
ಐರಾವಣೋ ಬಲಿಂ ದೃಷ್ಟ್ವಾ ಸ ಚಚಾಲಾಗ್ರತೋ ಮೃಧೇ ॥ ೨೧೩ ॥
ಸಂಗ್ರಾಮೇ ವಿಮುಖೋ ಯಾತಿ ದಿಗ್ಗಜೈಃ ಪರಿವೇಷ್ಟಿತಃ ।
ಅಧ್ವರೇ ಬಾಹುನಾ ಯೇನ ಸಂಕಲ್ಪಂ ಕೃತವಾನ್ಬಲಿಃ ॥ ೨೧೪ ॥
ತೇನ ವೈ ಸ ಸುರಾನ್ಸರ್ವಾನ್ವಾರಯಾಮಾಸ ಸಂಯುಗೇ ।
ವಾರಿತಾ ವಿಮುಖಾ ಯಾಂತಿ ದೇವರಾಜಃ ಕರೋತು ಕಿಂ ॥ ೨೧೫ ॥
ಕುಲಿಶಂ ನ ಕುರುತೇ ಕರ್ಮ ಭುಜಮುಕ್ತಂ ನ ಗಚ್ಛತಿ ॥ ೨೧೬ ॥
ಏವಂ ಬಹೂನಿ ಯುದ್ಧಾನಿ ನಿರ್ವೃತ್ತಾನಿ ತದಾ ತಯೋಃ ।
ನ ಹಂತುಂ ಶಕ್ಯಂತೇ ಯುದ್ಧೇ ದೇವೈರ್ದೈತ್ಯಾ ಮಹಾಬಲಾಃ ॥ ೨೧೭ ॥

---

೨೧೧. ದೇವಸೈನ್ಯವೆಲ್ಲ ದೈತ್ಯಸೈನ್ಯದೊಡನೆ ಸೇರಲು ಆ ಎರಡು ಸೈನ್ಯಗಳಿಗೆ ಮಹಾಪ್ರಳಯ ಸಮಾನವಾದ ಯುದ್ಧವು ನಡೆಯಿತು.

೨೧೨. ದೇವೇಂದ್ರನು ಐರಾವತವನ್ನೂ, ಬಲಿಯು ರಥವನ್ನೂ ಏರಿ ಯುದ್ಧಕ್ಕೆ ಬರಲು ಇತರರೂ ಬಂದರು.

೨೧೩–೨೧೫. ದೇವತೆಗಳು ಯಜ್ಞಭಾಗವನ್ನು ಭುಂಜಿಸುವವರಾದ್ದರಿಂದ ಅವರು ಯುದ್ಧವನ್ನು ಬಯಸಲಿಲ್ಲ. ಐರಾವತವು ಯುದ್ಧದಲ್ಲಿ ಬಲಿರಾಜನನ್ನು ನೋಡಿ ಮುಂದೆ ಸಾಗಲಿಲ್ಲ. ಅದು ದಿಗ್ಗಜಗಳೊಡನೆ ಹಿಂದಕ್ಕೆ ತಿರುಗಿತು. ಬಲಿಯು ಯಾವ ತೋಳಿನಿಂದ ಯಜ್ಞದಲ್ಲಿ ಸಂಕಲ್ಪಮಾಡಿದನೋ ಅದರಿಂದಲೇ ಯುದ್ಧದಲ್ಲಿ ಸಕಲ ಸುರರನ್ನು ತಡೆದನು. ಇಂದ್ರನು ತಡೆದರೂ ಆ ಸುರರು ಹಿಂದಿರುಗಿದರು. ಆದ್ದರಿಂದ ಇಂದ್ರನು ಏನು ಮಾಡಿಯಾನು ?

೨೧೬. ತೋಳಿನಿಂದ ಪ್ರಯೋಗಿಸಿದರೂ ವಜ್ರಾಯುಧವು ತನ್ನ ಕಾರ್ಯವನ್ನು ಮಾಡಲು ಹೋಗಲಿಲ್ಲ.

೨೧೭ ಹೀಗೆ ದೇವದಾನವರಿಗೆ ಬಹುಯುದ್ಧಗಳು ನಡೆದುವು. ದೇವತೆಗಳು ಯುದ್ಧದಲ್ಲಿ ಅತಿಬಲಿಷ್ಠರಾದ ದೈತ್ಯರನ್ನು ವಧಿಸಲಾಗಲಿಲ್ಲ.

ಬಲಾಕಾಂಕ್ಷಾಃ ಸ್ಥಿತಾ ದೇವಾ ಗುರುಣಾ ತೇ ಪ್ರಬೋಧಿತಾಃ ।
ಅಮರಾ ದೇವತಾಃ ಸರ್ವ ಇತಿ ಶುಕ್ರೇಣ ವಾರಿತಾಃ ॥ ೨೧೮ ॥
ಅವತಾರಂ ಹರೇರ್ಜ್ಞಾತ್ವಾ ಪಂಚಮಂ ವಾಮನಂ ಸ್ಥಿತಂ ।
ಅತಿಹೃಷ್ಟೋಽಮರಾವತ್ಯಾಂ ರಾಜ್ಯಂ ಚಕ್ರೇ ಸುರೇಶ್ವರಃ ॥ ೨೧೯ ॥
ನನರ್ತ ಯುದ್ಧೇ ದೈತ್ಯೇಂದ್ರಃ ಸ್ವಗೃಹೇ ಯಜತೇ ಸುರಾನ್ ।
ಪಾತಾಲಾಭಿಸೃತಾ ದೈತ್ಯಾ ರಾಜ್ಯಂ ಕುರ್ವಂತಿ ಮಾನವಾಃ ॥ ೨೨೦ ॥
ತದಾ ದೇವಗಣಾಃ ಸರ್ವೇ ಮಂತ್ರಯಂತಿ ಸುರೈಃ ಸಹ ।
ದೈತ್ಯೋ ಲೋಕದ್ವಯಂ ಶಾಸ್ತಿ ಸ್ವರ್ಗಂ ಶಾಸ್ತಿ ಸುರೇಶ್ವರಃ ॥ ೨೨೧ ॥
ಕ್ಷಂತವ್ಯಂ ತಾವದೇವಾಸ್ಯ ವಾಮನೋ ರೈವತಂ ಗಿರಿಂ ।
ಯಾವದ್ಯಾತಿ ಸುರೈಃ ಕಾರ್ಯಂ ಮೌನಂ ದೈತ್ಯಜಿತ್ಯೈರಪಿ ॥ ೨೨೨ ॥
ಯದಾಪ್ರಭೃತಿ ಸಂಜಾತೋ ವಾಮನೋ ಧರಣೀತಲೇ ।
ತದಾಪ್ರಭೃತಿ ದೈತ್ಯಾನಾಂ ದುರ್ನಿಮಿತ್ತಾನಿ ಜಜ್ಞಿರೇ ॥ ೨೨೩ ॥

---

೨೧೮. ಸೈನ್ಯವನ್ನು ಬಯಸುವ ದೇವತೆಗಳನ್ನು ಬೃಹಸ್ಪತಿಯು ಎಚ್ಚರಿಸಿದನು. ಶುಕ್ರನು ದೇವತೆಗಳೆಲ್ಲ ಅಮರರೆಂದು ಹೇಳಿ ದಾನವರನ್ನು ತಡೆದನು.

೨೧೯. ದೇವರಾಜನು ಹರಿಯ ಐದನೆ ಅವತಾರನಾದ ವಾಮನನು ಭೂಮಿಯಲ್ಲಿ ಅವತರಿಸಿರುವುದನ್ನರಿತು ಅತಿ ಸಂತೋಷದಿಂದ ಅಮರಾವತಿಯಲ್ಲಿ ರಾಜ್ಯಭಾರಮಾಡುತ್ತಿದ್ದನು.

೨೨೦. ದೈತ್ಯರಾಜನಾದ ಬಲಿಯು ಯುದ್ಧದಲ್ಲಿ ಕುಣಿದಾಡಿದನು. ತನ್ನ ಮನೆಯಲ್ಲಿ ದೇವತೆಗಳನ್ನು ಪೂಜಿಸಿದನು. ದೈತ್ಯರು ಪಾತಾಳವನ್ನೂ ಪ್ರವೇಶಿಸಿ ಭೂಮಿ ಮತ್ತು ಪಾತಾಳವನ್ನು ಆಳುತ್ತಿದ್ದರು.

೨೨೧. ಆಗ ದೇವತೆಗಳು ಹೀಗೆ ಆಲೋಚಿಸಿದರು. ಬಲಿದೈತ್ಯರಾಜನು ಭೂಪಾತಾಳಗಳನ್ನು ಆಳುತ್ತಾನೆ. ದೇವೇಂದ್ರನು ಸ್ವರ್ಗವನ್ನು ಮಾತ್ರ ಆಳುತ್ತಿದ್ದಾನೆ.

೨೨೨. ದೇವತೆಗಳು ದೈತ್ಯರನ್ನು ಜಯಿಸುವವರಾದರೂ ವಾಮನನು ರೈವತ ಪರ್ವತಕ್ಕೆ ಬರುವವರೆಗೆ ದಾನವರನ್ನು ಕ್ಷಮಿಸಿ ಮೌನವಾಗಿರಬೇಕು.

೨೨೩. ವಾಮನನು ಭೂಮಿಯಲ್ಲಿ ಅವತರಿಸಿದಂದಿನಿಂದ ದೈತ್ಯರಿಗೆ ದುಶ್ಶಕುನಗಳು ಉಂಟಾಗುತ್ತಿವೆ.

ಶಿವಾ ಪ್ರವಿಶ್ಯ ನಗರೇ ರೌತಿ ಸಾ ವಿಸ್ವರಂ ನಿಶಿ ।
ಭ್ರಮಂತಿ ನಗರೇ ಕಾಕಾ ದಿವಾರಾತ್ರಂ ವಿರಾವಿಣಃ ॥ ೨೨೪ ॥
ಸರ್ಪಾಃ ಸರ್ಪಂತಿ ಗೇಹೇಷು ಕೃಷ್ಣಾ ರೌದ್ರಾ ವಿಷೋಲ್ಬಣಾಃ ।
ಕಂಕಾ ಗೃಧ್ರಾ ಬಕಾ ಭ್ರಾಂತಾ ಭ್ರಮಂತಿ ನಗರೋಪರಿ ॥ ೨೨೫ ॥
ಜಾಯಂತೇ ವಿಮುಖಾ ಗರ್ಭಾಃ ಸ್ತ್ರೀಷು ಗೋಷು ಮೃಗೀಷು ವಾ ।
ಘೃತಂ ದುಗ್ಧಂ ಚ ನೈವಾಸ್ತಿ ತಿಲೇ ತೈಲಂ ನ ವಿದ್ಯತೇ ॥ ೨೨೬ ॥
ಜನೇ ಜಾನಪದೋ ನಿತ್ಯಂ ಯುಧ್ಯತೇ ಚ ಪರಸ್ಪರಂ ।
ಕಾಳೀ ಕರಾಳವದನಾ ದೀರ್ಘಕೇಶೀ ವಿಲೋಚನಾ ॥ ೨೨೭ ॥
ಅಜ್ಞಾತಾ ರುವತೀ ಯಾತಿ ನಗರೇ ಸಾ ಗೃಹಂ ಪ್ರತಿ ।
ಕೋಽಯಂ ನ ಜ್ಞಾಯತೇ ಕಸ್ಮಾತ್ತಪಸ್ವೀ ಭಸ್ಮಗುಂಠಿತಃ ॥ ೨೨೮ ॥
ಯತಿರ್ಮೌನವ್ರತೀ ನಗ್ನಃ ಪುರೋ ಯಾತಿ ಗೃಹೇಗೃಹೇ ।
ಡಮರೂಡ್ಡಾಮರುಂ ಪಶ್ಚಾದ್ಧುಂಕಾರಂ ವಿದಧಾತಿ ಚ ॥ ೨೨೯ ॥
ಅಕಾಲೇ ಕುಪಿತಾ ಮೇಘಾಃ ಜಲಂ ಮುಂಚಂತಿ ಪುಷ್ಕಲಂ ।
ಕರಕೈಃ ಪೂರಿತಾ ಗರ್ಭಾ ಗರ್ಜಂತಿ ಗಿರಯೋ ಬಹು ॥ ೨೩೦ ॥

---

೨೨೪. ನರಿಗಳು ರಾತ್ರಿ ನಗರವನ್ನು ಹೊಕ್ಕು ದುಷ್ಟಸ್ವರದಿಂದ ಕೂಗುತ್ತಿವೆ. ಕಾಗೆಗಳು ಹಗಲು ರಾತ್ರಿ ಕೂಗುತ್ತ ಹಾರಾಡುತ್ತಿವೆ.

೨೨೫. ವಿಷದಿಂದ ಭಯಂಕರಗಳಾದ ಕೃಷ್ಣಸರ್ಪಗಳು ಮನೆಗಳಲ್ಲಿ ಸರಿಯುತ್ತಿವೆ. ಹದ್ದುಗಳೂ, ಕೊಕ್ಕರೆಗಳೂ, ಭ್ರಾಂತಿಯಿಂದ ಪಟ್ಟಣದ ಮೇಲೆ ಹಾರುತ್ತಿವೆ.

೨೨೬. ಸ್ತ್ರೀಯರೂ, ಗೋವುಗಳೂ, ಜಿಂಕೆಗಳೂ ಬಂಜೆಗಳಾಗುತ್ತಿವೆ. ಹಾಲು ತುಪ್ಪಗಳಿಲ್ಲ. ಎಳ್ಳಿನಲ್ಲಿ ಎಣ್ಣೆಯಿಲ್ಲ.

೨೨೭–೨೨೯. ದೇಶದವರೆಲ್ಲ ಪರಸ್ಪರ ಜಗಳವಾಡುತ್ತಿದ್ದಾರೆ. ಭಯಂಕರ ಮುಖವುಳ್ಳವಳೂ, ಉದ್ದವಾದ ಕೂದಲುಳ್ಳವಳೂ, ಕಣ್ಣಿಲ್ಲದವಳೂ, ಆದ ಮಹಾಕಾಳಿಯು ನಗರದಲ್ಲಿ ತಿಳಿಯದಂತೆ ಮನೆಯನ್ನು ಹೊಗುತ್ತಾಳೆ. ತಪಸ್ವಿಯೂ, ಭಸ್ಮಲಿಪ್ತನೂ, ಮೌನಿಯೂ, ದಿಗಂಬರನೂ, ಆದ ಯತಿಯು ಡಮರುವನ್ನು ಬಾರಿಸುತ್ತ, ಹುಂಕಾರ ಮಾಡುತ್ತ ಮನೆಮನೆಗೆ ಹೋಗುತ್ತಿದ್ದಾನೆ. ಇವನಾರೋ ತಿಳಿಯುವುದಿಲ್ಲ.

೨೩೦. ಕೋಪಗೊಂಡ ಮೇಘಗಳು ಆ ಕಾಲದಲ್ಲಿ ಮಳೆ ಸುರಿಸುತ್ತಿವೆ. ಪರ್ವತಗಳು ಆನೆಕಲ್ಲುಗಳಿಂದ ತುಂಬ ಗರ್ಜಿಸುತ್ತಿವೆ.

ಸಮಜಾಯತ ಭೂಕಂಪೋ ದಿಗ್ದಾಹಶ್ಚಾಪ್ಯಜಾಯತ ।
ಮಿಲಿತ್ವಾ ಶ್ವಗಣಃ ಸರ್ವೋ ಮುಖಮುಚ್ಚೈರ್ವಿಧಾಯ ಚ ॥ ೨೩೧ ॥
ರೌತಿ ರಾತ್ರೌ ಪುರೇ ನಿತ್ಯಂ ಘೂಕಃ ಶಬ್ದಂ ವಿಶಬ್ದತೇ ।
ಬಲಿರಾಜ್ಯಕ್ಷಯೋ ಜಾತೋ ದಿವಿ ಕೇತೂದಯೋ ನಿಶಿ ॥ ೨೩೨ ॥
ಆದಿತ್ಯಮಂಡಲೇ ವೇಧಃ ಕೀಲಕೈರ್ದೃಶ್ಯತೇ ಕೃತಃ ।
ಕಬಂಧಸಂಕುಲೇ ವ್ಯೋಮ್ನಿ ಚಂದ್ರಮಾ ನ ಪ್ರಕಾಶತೇ ॥ ೨೩೩ ॥
ಸ ಜಾತೋ ರೋಹಿಣೀವೇಧೋ ಯೋ ಜಾತೋ ಯುಗವ್ಯತ್ಯಯೇ ।
ನಕ್ಷತ್ರಾಣಿ ದಿವಾ ಲೋಕೈಃ ಗಣ್ಯಂತೇ ಗುಣವತ್ತರೈಃ ॥ ೨೩೪ ॥
ಬೀಜಾನಾಂ ವ್ಯತ್ಯಯೋ ಜಜ್ಞೇ ಭೂಮಿಸ್ತ್ರೀಗೋಮೃಗೀಷು ಚ ।
ಅಶ್ವಾ ಹೇಷಂತಿ ಸಹಸಾ ಮದಂ ಕುರ್ವಂತಿ ನೋ ಗಜಾಃ ॥ ೨೩೫ ॥
ಮಂತ್ರಿಣಾಂ ಮಾಂತ್ರಿಕೋ ಮಂತ್ರೋ ಭಿದ್ಯತೇ ರಾಜ್ಯಸಂಕ್ಷಯೇ ।
ಘೃತಾಹುತ್ಯಾ ಹುತೋ ವಹ್ನಿರ್ಜ್ವಲತಿ ನ ತದಾ ದ್ವಿಜೈಃ ॥ ೨೩೬ ॥
ಪ್ರಚಂಡಃ ಪಾವನೋ ವಾತಿ ವಾತ್ಯಯಾ ಘೂರ್ಣಿತದ್ರುಮಃ ।
ಧ್ವಜಾ ಜ್ವಲಂತಿ ಚೈತ್ಯೇಷು ನಭೋ ಭವತಿ ಧೂಸರಂ ॥ ೨೩೭ ॥

---

೨೩೧–೨೩೨. ಭೂಕಂಪವಾಯಿತು. ದಿಕ್ಕುಗಳು ಸುಟ್ಟು ಬೂದಿಯಾದುವು. ನಾಯಿಗಳೆಲ್ಲ ಒಟ್ಟು ಸೇರಿ ರಾತ್ರಿವೇಳೆ ಬಾಯಿಯನ್ನು ಮೇಲೆ ಮಾಡಿಕೊಂಡು ಬೊಗುಳುತ್ತಿವೆ. ಗೂಬೆಯು ಕೂಗುತ್ತಿದೆ. ಬಲಿರಾಜ್ಯ ರಾತ್ರಿವೇಳೆ ನಾಶವನ್ನು ಸೂಚಿಸುತ್ತದೆ. ಆಕಾಶದಲ್ಲಿ ಕೇತುವು ಉದಯಿಸುವುದು.

೨೩೩. ಸೂರ್ಯಮಂಡಲದಲ್ಲಿ ಕೀಲುಗಳಿಂದ ಮಾಡಲ್ಪಟ್ಟ ವೇಧೆಯು ಕಾಣುತ್ತಿದೆ. ಮಂಡಲಗಳಿಂದ ತುಂಬಿದ ಆಕಾಶದಲ್ಲಿ ಚಂದ್ರನು ಪ್ರಕಾಶಿಸುವುದಿಲ್ಲ

೨೩೪. ಪ್ರಳಯಕಾಲದಲ್ಲುಂಟಾದ ರೋಹಿಣೀ ವೇಧೆಯು ಈಗ ಉಂಟಾಗಿದೆ. ಹಗಲು ಗುಣಶಾಲಿಗಳಾದ ಜನರು ನಕ್ಷತ್ರವನ್ನು ಎಣಿಸುತ್ತಿದ್ದಾರೆ.

೨೩೫. ಭೂಮಿ, ಸ್ತ್ರೀ, ಗೋವು, ಜಿಂಕೆಗಳಲ್ಲಿ ಬೀಜಗಳು ವ್ಯತ್ಯಾಸವಾದುವು. ಆಕಸ್ಮಿಕವಾಗಿ ಕುದುರೆಗಳು ಕೆನೆಯುತ್ತವೆ. ಆನೆಗಳು ಮದಗೊಳ್ಳುವುದಿಲ್ಲ.

೨೩೬. ಮಂತ್ರಿಗಳು ಆಲೋಚಿಸಿದ ಗುಪ್ತ ವಿಷಯವು ರಾಜ್ಯನಾಶಕ್ಕಾಗಿ ಪ್ರಕಾಶಗೊಳ್ಳುತ್ತಿದೆ. ಬ್ರಾಹ್ಮಣರು ತುಪ್ಪದ ಆಹುತಿಗಳಿಂದ ಹೋಮಿಸಿದ ಅಗ್ನಿಯು ಜ್ವಲಿಸುವುದಿಲ್ಲ.

೨೩೭. ಬಿರುಗಾಳಿಯು ಮರಗಳನ್ನು ಉರುಳಿಸುತ್ತ ಬೀಸುತ್ತದೆ. ಮನೆಗಳಲ್ಲಿ ಧ್ವಜಗಳು ಉರಿಯುತ್ತವೆ. ಆಕಾಶವು ಮಲಿನವಾಗುತ್ತದೆ.

ಏತೇ ಚಾನ್ಯೇ ಚ ಬಹವ ಉತ್ಪಾತಾ ಬಲಿನೋ ಗೃಹೇ ।
ಸಂಜಾತಾ ವಾಮನೇ ಜಾತೇ ನಾರದಾಗಮನಾದನು ॥ ೨೩೮ ॥
ಅನ್ಯಚ್ಚ ಜಾಯತೇ ರೌದ್ರಂ ಯುದ್ದಿವಾ ಸ್ವಪ್ನದರ್ಶನಂ ।
ಸನ್ನಹ್ಯಂತೇ ಯದಾ ದೈತ್ಯಾಃ ಪತಿತಾ ನಿಪತಂತಿ ಚ ॥ ೨೩೯ ॥
ನಿಮಿತ್ತಾನಿ ಸ ಸೈನ್ಯಸ್ಯ ದೃಷ್ಟ್ವೈವ್ಯಸಂ ನ ಪ್ರವರ್ತತೇ ।
ಸದಾ ಸಂತಿಷ್ಠತೇ ಗೇಹೇ ರಾಜ್ಯಂ ಚ ಕುರುತೇ ಬಲಿಃ ॥ ೨೪೦ ॥
ಶರೀರೇ ನ ಸುಖಂ ತಸ್ಯ ಗಾತ್ರಭಂಗಃ ಶಿರೋಽವ್ಯಥಾ ।
ಜ್ವರಿತೋ ನ ಸುಖಂ ಶೇತೇ ನ ಭುಂಕ್ತೇ ನ ಪಿಬತ್ಯಸೌ ।
ನ ಭುಕ್ತಂ ಜೀರ್ಯತೇ ಲೋಕಃ ಸರ್ವೋಽಪಿ ವ್ಯಾಕುಲೀಕೃತಃ ॥ ೨೪೧ ॥
ವಿಪರೀತಂ ಜಗದ್ದೃಷ್ಟ್ವಾ ಬಲಿರ್ವ್ಯಾಕುಲಮಾನಸಃ ।
ಮಂತ್ರಯಾಮಾಸ ಕಿಮಿದಂ ಬ್ರಾಹ್ಮಣೈಸ್ಸಹ ದುಃಖಿತಃ ॥ ೨೪೨ ॥
ಶುಕ್ರಂ ಗುರುಂ ಸಮಾನೀಯ ಸಭಾಯಾಂ ಸಂನಿವೇಶ್ಯ ಚ ।
ಪಪ್ರಚ್ಛ ಕುಶಲಂ ದೈತ್ಯೋ ಭಕ್ತ್ಯಾ ಪರಮಯಾ ಯುತಃ ।
ವಿಪರೀತಮಿದಂ ಸರ್ವಂ ವರ್ತತೇ ತದ್ವದಸ್ವ ಮೇ ॥ ೨೪೩ ॥

---

೨೩೮. ವಾಮನನು ಅವತಾರಮಾಡಲು ನಾರದನು ಬಂದ ತರುವಾಯ ಬಲಿಯ ಮನೆಯಲ್ಲಿ ಇವೂ, ಇನ್ನೂ ಇತರ ಬಹುವಿಧವಾದ ಉತ್ಪಾತಗಳು ಉಂಟಾದುವು.

೨೩೯. ಮತ್ತು ಹಗಲು ಸೈನಿಕರು ಯುದ್ಧಸಿದ್ಧರಾದ ಕೂಡಲೆ ಭೂಮಿಯಲ್ಲಿ ಬೀಳುವಂತೆ ಕಾಣಿಸುತ್ತಿದ್ದರು.

೨೪೦. ಆ ಬಲಿಯು ಸೈನ್ಯದ ಈ ಶಕುನಗಳನ್ನು ಕಂಡು ಯುದ್ಧಸಿದ್ಧನಾಗದೆ ಯಾವಾಗಲೂ ಮನೆಯಲ್ಲಿಯೇ ಇದ್ದು ರಾಜ್ಯವಾಳುತ್ತಿದ್ದನು.

೨೪೧. ಅವನಿಗೆ ದೇಹದಲ್ಲಿ ಅಸ್ವಾಸ್ಥ್ಯವುಂಟಾಯಿತು. ಮೈಮುರಿಯುವುದು, ತಲೆನೋವು, ಜ್ವರ ಇವುಗಳಿಂದ ವ್ಯಥೆಗೊಂಡು ಊಟ, ಜಲಪಾನಗಳನ್ನು ಮಾಡುತ್ತಿರಲಿಲ್ಲ. ಸಕಲ ಜನರಿಗೂ ತಿಂದದ್ದು ಜೀರ್ಣಿಸದಿರುವುದರಿಂದ ಅವರು ವ್ಯಥೆಗೊಂಡರು.

೨೪೨. ಬಲಿಯು ವ್ಯತ್ಯಾಸಗೊಂಡ ಪ್ರಪಂಚವನ್ನು ಕಂಡು ವ್ಯಥೆಗೊಂಡವನಾಗಿ ಬ್ರಾಹ್ಮಣರೊಡನೆ ದುಃಖದಿಂದ ಮಂತ್ರಾಲೋಚನೆ ಮಾಡಿದನು.

೨೪೩. ಅವನು ಗುರುವಾದ ಶುಕ್ರಾಚಾರ್ಯರನ್ನು ಕರೆತಂದು ಸಭೆಯಲ್ಲಿ ಕುಳ್ಳಿರಿಸಿ ಅತಿ ಭಕ್ತಿಯಿಂದ ಕುಶಲಪ್ರಶ್ನೆಮಾಡಿ ಪ್ರಪಂಚವು ವ್ಯತ್ಯಾಸವಾಗಿರುವುದಕ್ಕೆ ಕಾರಣವನ್ನು ಹೇಳು.

ನಾರದೇನ ಯದುಕ್ತಂ ಮೇ ಗುರೋ ಸತ್ಯಂ ಭವಿಷ್ಯತಿ ।
ಉತ್ಪಾತಶಾಂತಿಕಂ ಬ್ರೂಹಿ ಬ್ರಾಹ್ಮಣೈಃ ಸಹಿತೋ ಮಮ ॥ ೨೪೪ ॥

ಶುಕ್ರ ಉವಾಚ :—

ಉತ್ಪಾತಶಾಂತಯೇ ಕಾರ್ಯೋ ಯಜ್ಞಃ ಸರ್ವಸ್ವದಕ್ಷಿಣಃ ।
ಬ್ರಾಹ್ಮಣೈಃ ಕ್ಷತ್ರಿಯೈಃ ಸಾರ್ಧಂ ದ್ವಾದಶಾಬ್ದೋ ವಿಧೀಯತಾಂ ॥ ೨೪೫ ॥
ಋಷಯೋ ಬ್ರಾಹ್ಮಣಾ ಯೇ ಚ ಮುನಯೋ ಬ್ರಹ್ಮಚಾರಿಣಃ ।
ಆಗಚ್ಛಂತು ಮಹಾಯಜ್ಞೇ ಯೇ ಚ ದೂರೇಽಪಿ ಸಂಸ್ಥಿತಾಃ ॥ ೨೪೬ ॥
ನಗರಾತ್ಪೂರ್ವದಿಗ್ಭಾಗೇ ಕರ್ತವ್ಯೋ ಯಜ್ಞಮಂಡಪಃ ।
ಯಸ್ಯ ಯಸ್ಯಾಭಿರುಚಿತಂ ದೇಯಂ ದಾನಂ ತ್ವಯಾ ನೃಪ ।
ತಥಾ ಕರಿಷ್ಯ ಇತ್ಯುಕ್ತ್ವಾ ಯಜ್ಞಾರ್ಥಂ ತತ್ಪರೋಽಭವತ್ ॥ ೨೪೭ ॥
ಆನಾಯ್ಯ ಬ್ರಾಹ್ಮಣಾನ್ಸರ್ವಾನ್ಕುಶಲಾನ್ಯಜ್ಞಕರ್ಮಣಿ ।
ಗೃಹೀತಾ ಯಜ್ಞದೀಕ್ಷಾ ತೈರ್ಯಜ್ಞೇ ವೈ ಸರ್ವದಕ್ಷಿಣೇ ॥ ೨೪೮ ॥
ಬ್ರಾಹ್ಮಣಾಯ ಮಯಾ ದೇಯಂ ಸರ್ವಸ್ವಮಿಹ ಯಾಚಿತೇ ।
ಶರೀರಪುತ್ರಮಿತ್ರಾಣಿ ದಾರಾನ್ದಾಸ್ಯಾಮಿ ಯಾಚಿತಃ ॥ ೨೪೯ ॥

---

೨೪೪. ಗುರುಗಳೆ! ನಾರದನು ಹೇಳಿದ್ದು ಸತ್ಯವಾಗುವುದು. ನೀವು ಬ್ರಾಹ್ಮಣರೊಡನೆ ಈ ಉತ್ಪಾತದ ಶಾಂತಿಕ್ರಮವನ್ನು ಹೇಳಿರಿ.

೨೪೫. ಶುಕ್ರಾಚಾರ್ಯನು ಹೇಳುತ್ತಾನೆ:—ಸರ್ವಸ್ವವೂ ದಕ್ಷಿಣೆಯಾಗುಳ್ಳ ಯಜ್ಞವನ್ನು ಬ್ರಾಹ್ಮಣ, ಕ್ಷತ್ರಿಯರೊಡನೆ ಹನ್ನೆರಡುವರ್ಷ ಕಾಲ ಉತ್ಪಾತಶಾಂತಿಗಾಗಿ ಮಾಡು.

೨೪೬. ಆ ಮಹಾಯಜ್ಞಕ್ಕೆ ದೂರದಲ್ಲಿರುವ ಋಷಿಗಳೂ, ಬ್ರಾಹ್ಮಣರೂ, ಮುನಿಗಳೂ, ಬ್ರಹ್ಮಚಾರಿಗಳೂ ಬರಲಿ.

೨೪೭. ಪಟ್ಟಣದ ಪೂರ್ವಭಾಗದಲ್ಲಿ ಯಜ್ಞ ಮಂಡಪವನ್ನು ಮಾಡಬೇಕು. ಯಾರು ಯಾರು ಯಾವ ಯಾವ ದಾನವನ್ನು ಬಯಸುವರೊ ಆ ದಾನವನ್ನು ಕೊಡಬೇಕು. ಬಲಿಯು ಹಾಗೆಯೇ ಆಗಲೆಂದು ಯಜ್ಞ ಮಾಡುವುದರಲ್ಲಿ ನಿರತನಾದನು.

೨೪೮. ಯಜ್ಞದಲ್ಲಿ ಕುಶಲರಾದ ಸಕಲ ಬ್ರಾಹ್ಮಣರನ್ನು ಕರೆಯಿಸಿ ಸರ್ವಸ್ವದಕ್ಷಿಣೆಯಾಗುಳ್ಳ ಯಜ್ಞದಲ್ಲಿ ಅವರನ್ನು ದೀಕ್ಷೆಗೊಳಿಸಿದನು.

೨೪೯. "ಈ ಯಜ್ಞದಲ್ಲಿ ನಾನು ಬ್ರಾಹ್ಮಣರಿಗೆ ಬೇಡಿದ ದೇಹ, ಪುತ್ರ, ಮಿತ್ರ, ಪತ್ನಿ ಮೊದಲಾದ ಸರ್ವಸ್ವವನ್ನೂ ಕೊಡುವೆನು.

ದಾತವ್ಯಂ ಸತತಂ ದಾನಂ ಬ್ರಾಹ್ಮಣೇಭ್ಯೋ ಮಯಾಧ್ವರೇ ।
ವಾರಿತೇನಾಪಿ ಸ ಸ್ಥೇಯಂ ದಾತವ್ಯಂ ನಿಶ್ಚಿತಂ ಮಯಾ ।
ಯಾಚಿತಶ್ಚೇನ್ನ ದಾಸ್ಯಾಮಿ ತದಾ ವ್ಯರ್ಥೋ ಮಮಾಧ್ವರಃ ॥ ೨೫೦ ॥
ವಿಧಾಯ ಮಂಡಪಂ ದಿವ್ಯಂ ಬಹುಯೋಜನವಿಸ್ತರಂ ।
ತತ್ರ ದಾನಾನಿ ದೀಯಂತೇ ಭೋಜನಾಚ್ಛಾದನಾನಿ ಚ ॥ ೨೫೧ ॥
ಸಪ್ತರ್ಷಯಃ ಸಮಾಯಾತಾ ಗಗನಾದ್ಧರಣೀತಲೇ ।
ದಿಗ್ಭ್ಯಃ ಸಮಾಗತಾಃ ಸರ್ವೇ ಬ್ರಾಹ್ಮಣಾಃ ಸಂತಿ ಯೇ ಭುವಿ ॥ ೨೫೨ ॥
ಕ್ಷತ್ರಿಯಾಶ್ಚ ಸಮಾಯಾತಾ ವಿಗೃಹ್ಯ ವಿವಿಧಂ ವಸು ।
ನಿವೇದಯಂತಿ ತೇ ರಾಜ್ಞೇ ಪ್ರಾರಬ್ಧೇ ಯಜ್ಞಕರ್ಮಣಿ ॥ ೨೫೩ ॥
ಆಸಮುದ್ರಾತ್ಸಮಾಯಾತಾ ನಟನರ್ತಕಯಾಚಕಾಃ ।
ಗೀತವಾದಿತ್ರನಿರ್ಘೋಷೋ ವೇದಧ್ವನಿವಿಮಿಶ್ರಿತಃ ॥ ೨೫೪ ॥
ತ್ರೈಲೋಕ್ಯಂ ಬಧಿರೀಚಕ್ರೇ ದೇಹಿದೇಹೀತಿ ಯಾಚಿತಂ ।
ಮಾ ದೇಹೀತಿ ವಚೋ ನಾಸ್ತಿ ಸ್ತೋಕಂ ದೇಹೀತಿ ಚೈವ ಸ ॥ ೨೫೫ ॥

---

೨೫೦. ನಾನು ಯಾವಾಗಲೂ ಬ್ರಾಹ್ಮಣರಿಗೆ ದಾನಮಾಡಬೇಕು. ಯಾರು ತಡೆದರೂ ನಿಲ್ಲಿಸದೆ ದಾನಮಾಡಬೇಕು. ಬೇಡಿದವರಿಗೆ ದಾನಮಾಡದಿದ್ದರೆ ನನ್ನ ಯಾಗವು ವ್ಯರ್ಥವಾಗುವುದು".

೨೫೧. ಹೀಗೆ ನಿಶ್ಚಯಿಸಿಕೊಂಡು ಅನೇಕ ಗಾವುದ ವಿಸ್ತೀರ್ಣವಾದ ದಿವ್ಯ ಮಂಡಪವನ್ನು ರಚಿಸಿ ಅಲ್ಲಿ ಭೋಜನ, ಆಚ್ಛಾದನ (ಹೊದ್ದಿಕೆ) ಮೊದಲಾದ ದಾನಗಳನ್ನು ಕೊಡುತ್ತಿದ್ದನು.

೨೫೨. ಆಕಾಶದಿಂದ ಸಪ್ತರ್ಷಿಗಳೂ, ಸಕಲ ದಿಕ್ಕುಗಳಿಂದ ಭೂಮಿಯಲ್ಲಿರುವ ಸಮಸ್ತ ಬ್ರಾಹ್ಮಣರೂ ಬಂದರು.

೨೫೩. ಕ್ಷತ್ರಿಯರೂ ನಾನಾವಿಧ ದ್ರವ್ಯಗಳನ್ನು ತೆಗೆದುಕೊಂಡು ಬಂದು ಯಜ್ಞ ಮಾಡಲಾರಂಭಿಸಿದ ದೊರೆಗೆ ಒಪ್ಪಿಸಿದರು.

೨೫೪-೨೫೫. ಸಮುದ್ರದವರೆಗೆ ಇರುವ ನಟ, ನರ್ತಕ, ಯಾಚಕರು ಬಂದರು. ವೇದಘೋಷ ಮಿಶ್ರವಾದ ಸಂಗೀತ ವಾದ್ಯಗಳ ಧ್ವನಿಯೂ ಕೊಡು ಕೊಡು ಎಂಬ ಧ್ವನಿಯೂ ಮೂರುಲೋಕವನ್ನು ಕಿವುಡು ಮಾಡಿತು. ಕೊಡಬೇಡವೆಂಬ ಅಥವಾ ಸ್ವಲ್ಪ ಕೊಡೆಂಬ ಧ್ವನಿಯೇ ಇರಲಿಲ್ಲ.

ಯದ್ಯದ್ಯೋ ಯಾಚತೇ ವಸ್ತು ತತ್ತಸ್ಮೈ ತತ್ರ ದೀಯತೇ ।
ಬ್ರಾಹ್ಮಣೋ ಹಿ ನ ಸೋಽಪ್ಯಸ್ತಿ ಯೋ ಹಿ ತಂ ಬಹು ಯಾಚತೇ ॥೨೫೬॥
ಭೋಜನಾಚ್ಛಾದನಾರ್ಥಂ ಚ ನ ಗೃಹ್ಣಂತಿ ದ್ವಿಜಾತಯಃ ।
ಸುವರ್ಣರತ್ನರೌಪ್ಯಾಣಿ ತಥಾಶ್ವರಥಕುಂಜರಾನ್ ॥ ೨೫೭ ॥
ಗೃಹಗೋಭೂಮಿಗ್ರಾಮಾಂಶ್ಚ ನ ಗೃಹ್ಣಂತಿ ದ್ವಿಜಾತಯಃ ।
ಬಲಿರಾಜ್ಯೇನ ಸಂತುಷ್ಟಾಃ ಕಿಂ ಕುರ್ವಂತಿ ಧನೇನ ತೇ ॥ ೨೫೮ ॥
ಏವಂ ಪ್ರವರ್ತತೇ ಯಜ್ಞೋ ಮಹಾನ್ಸರ್ವಸ್ವದಕ್ಷಿಣಃ ॥ ೨೫೯ ॥
ನೃತ್ಯಂತಿ ಗಾಯಂತಿ ಪಠಂತಿ ಚಾನ್ಯೇ
ಸ್ತುವಂತಿ ಯಜ್ಞಂ ಬಹುದಾನ ಯುಕ್ತಂ ।
ಬ್ರಹ್ಮೇಂದ್ರರುದ್ರಗ್ರಹಸೂರ್ಯಚಂದ್ರಾಃ
ಪ್ರಸಾದಿತಾ ಆಹುತಿಭಿಶ್ಚ ಮಂತ್ರೈಃ ॥ ೨೬೦ ॥
ಬಲಿಂ ಪ್ರಶಂಸಂತಿ ಗುರುಂ ತಥಾನ್ಯೇ
ಹೋತಾರಮೇಕೇ ಪರಿವಾರಮೇಕೇ ।
ಪ್ರಜಾಪತೇರ್ನಾಪಿ ಸುರಾಧಿಪಸ್ಯ
ಸಮಾಪ್ಯತೇ ಚೇದಥ ಯಾಸ್ಯತಿ ಧ್ರುವಂ ।
ಪ್ರದಾಯ ರಾಜ್ಯಂ ದ್ವಿಜಪುಂಗವೇಭ್ಯಃ ।
ಸಪುತ್ರಮಿತ್ರೈಃ ಸಹಿತೋ ರಸಾತಲಂ ॥ ೨೬೧ ॥

---

೨೫೬. ಯಾವ ಯಾವನು ಏನೇನನ್ನು ಕೇಳುವನೊ ಆಯಾ ವಸ್ತುಗಳನ್ನು ಅವನಿಗೆ ಕೊಡುತ್ತಿದ್ದನು. ಯಾವ ಬ್ರಾಹ್ಮಣನೂ ಅವನನ್ನು ಬಹುವಾಗಿ ಬೇಡಲಿಲ್ಲ.

೨೫೭–೨೫೮. ಬ್ರಾಹ್ಮಣರು ಊಟ, ಹೊದ್ದಿಕೆ, ಚಿನ್ನ, ರತ್ನ, ಬೆಳ್ಳಿ, ಕುದುರೆ, ರಥ, ಆನೆ, ಮನೆ, ಗೋವು, ಭೂಮಿ, ಹಳ್ಳಿಗಳನ್ನು ತೆಗೆದುಕೊಳ್ಳುತ್ತಿರಲಿಲ್ಲ. ಬಲಿ ರಾಜ್ಯದಿಂದ ಸಂತೋಷಗೊಂಡ ಅವರು ಹಣವನ್ನು ತೆಗೆದುಕೊಂಡು ಏನು ಮಾಡಿಯಾರು ?

೨೫೯. ಹೀಗೆ ಸರ್ವಸ್ವ ದಕ್ಷಿಣೆಯುಳ್ಳ ಮಹಾಯಜ್ಞವು ನಡೆಯಿತು.

೨೬೦. ಕೆಲವರು ಕುಣಿದರು. ಕೆಲವರು ಹಾಡಿದರು. ಕೆಲವರು ಪಠಿಸಿದರು. ಇನ್ನು ಕೆಲವರು ಬಹುದಾನಗಳಿಂದ ಕೂಡಿದ ಯಜ್ಞವನ್ನು ಹೊಗಳಿದರು. ಬ್ರಹ್ಮ, ಇಂದ್ರ, ರುದ್ರ, ಗ್ರಹಗಳು, ಸೂರ್ಯಚಂದ್ರರು, ಇವರು ಆಹುತಿ ಮತ್ತು ಮಂತ್ರಗಳಿಂದ ಸಂತೋಷಗೊಂಡರು.

೨೬೧–೨೬೨. ಕೆಲವರು ಬಲಿಯನ್ನೂ ಕೆಲವರು ಗುರುವನ್ನೂ, ಇನ್ನು ಕೆಲವರು ಹೋತೃವನ್ನೂ, ಮತ್ತೆ ಕೆಲವರು ಪರಿವಾರವನ್ನೂ ಹೊಗಳುತ್ತಿದ್ದರು. ಬ್ರಹ್ಮನಾಗಲಿ,

ಇತೀತಿ ವಾಚಃ ಪ್ರವದಂತಿ ವಾಡವಾಃ
ಶೃಣ್ವಂತಿ ದೈತ್ಯಾಃ ಕಿಮಿದಂ ವದಂತಿ ।
ಬಲೇಃ ಪುರಸ್ಥಾಃ ಕಥಯಂತಿ ಸಂಗತಾ
ಬಲಿಃ ಪ್ರಹೃಷ್ಟಃ ಪ್ರದದಾತಿ ಯಾಚಿತಂ ॥ ೨೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಬಲಿಯಜ್ಞಪ್ರಭಾವಮಾಹಾತ್ಮ್ಯವರ್ಣನಂ ನಾಮ
ಸಪ್ತದಶೋಽಧ್ಯಾಯಃ

---

ಇಂದ್ರನಾಗಲಿ ಹೊಗಳಲಿಲ್ಲ. ಈ ಬಲಿಯು ಯಾಗವನ್ನು ಮುಗಿಸಿದ್ದೇ ಆದರೆ ಬ್ರಾಹ್ಮಣೋತ್ತಮರಿಗೆ ರಾಜ್ಯವನ್ನಿತ್ತು ಪಾತಾಳಕ್ಕೆ ತೆರಳುವನು. ಎಂದು ಬ್ರಾಹ್ಮಣರು ಹೇಳುತ್ತಿದ್ದರು. ಬಲಿಯ ಪಟ್ಟಣದಲ್ಲಿರುವ ದೈತ್ಯರು ಇವರು ಏನನ್ನು ಹೇಳುತ್ತಿದ್ದಾರೆಂದು ಕೇಳುತ್ತಲೂ, ಗುಂಪುಕೂಡಿ ಮಾತಾಡುತ್ತಲೂ ಇದ್ದರು. ಬಲಿಯು ಸಂತೋಷದಿಂದ ಬೇಡಿದ್ದನ್ನು ಕೊಡುತ್ತಿದ್ದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಬಲಿಯಜ್ಞಪ್ರಭಾವಮಾಹಾತ್ಮ್ಯವರ್ಣನವೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಷ್ಟಾದಶೋಽಧ್ಯಾಯಃ

## ಬಲಿನಿಗ್ರಹವೃತ್ತಾಂತವರ್ಣನಂ

ರಾಜೋವಾಚ :—

ವಸ್ತ್ರಾಪಥೇ ಮಹಾಕ್ಷೇತ್ರೇ ಸಂಪ್ರಾಪ್ತೋ ವಾಮನೋ ಯದಾ ।
ತದಾಪ್ರಭೃತಿ ಕಿಂ ಚಕ್ರೇ ತನ್ಮೇ ವಿಸ್ತರತೋ ವದ ॥ ೧ ॥

ಸಾರಸ್ವತ ಉವಾಚ :—

ವಾಮನೋ ವಸತಿಂ ಚಕ್ರೇ ಭವಸ್ಯಾಗ್ರೇ ನೃಪೋತ್ತಮ ।
ಸ್ವರ್ಣರೇಖಾಜಲೇ ಸ್ನಾತ್ವಾ ಭವಂ ಸಂಪೂಜ್ಯ ಭಾವತಃ ॥ ೨ ॥
ಏಕಾಂತೇ ನಿರ್ಮಲೇ ಸ್ಥಾನೇ ಕಂಟಕಾಸ್ಥಿವಿವರ್ಜಿತೇ ।
ಕೃಷ್ಣಾಜಿನಪರಿಚ್ಛನ್ನ ಉಪವಿಷ್ಟೋ ವರಾಸನೇ ॥ ೩ ॥
ಕೃತ್ವಾ ಪದ್ಮಾಸನಂ ಧೀರೋ ನಿಶ್ಚಲೋಽಭೂದ್ದ್ವಿಜೋತ್ತಮಃ ।
ವಿಧಾಯ ಕಂಧರಾಬಂಧಮೃಜುನಾಸಾವಲೋಕಕಃ ॥ ೪ ॥

---

ಕನ್ನಡದ ಅನುವಾದ

## ಬಲಿನಿಗ್ರಹವೃತ್ತಾಂತವರ್ಣನಂ

೧. ರಾಜನು ಹೇಳುತ್ತಾನೆ :—ಮುನಿಯೆ ! ವಸ್ತ್ರಾಪಥ ಮಹಾಕ್ಷೇತ್ರಕ್ಕೆ ವಾಮನನು ಬಂದ ದಿನದಿಂದ ಅವನು ಏನನ್ನು ಮಾಡಿದನು ? ಅದನ್ನು ನನಗೆ ವಿಸ್ತಾರವಾಗಿ ಹೇಳು.

೨-೬. ಸಾರಸ್ವತನು ಹೇಳುತ್ತಾನೆ :—ನೃಪೇಂದ್ರ ! ವಾಮನನು ಭವನ ಮುಂದೆ ವಾಸಿಸಿದನು. ಅವನು ಸ್ವರ್ಣರೇಖಾನದಿಯ ನೀರಿನಲ್ಲಿ ಮಿಂದು ಭಕ್ತಿಯಿಂದ ಭವನನ್ನು ಪೂಜಿಸಿ ರಹಸ್ಯವಾದ ಮುಳ್ಳು ಮೂಳೆಗಳಿಲ್ಲದ ನಿರ್ಮಲ ಸ್ಥಳದಲ್ಲಿ ಕೃಷ್ಣಾಜಿನವನ್ನು ಹಾಸಿದ ಉತ್ತಮಾಸನದಲ್ಲಿ ಪದ್ಮಾಸನದಿಂದ ಕುಳಿತು ನಿಶ್ಚಲನಾಗಿ ಕುತ್ತಿಗೆಯನ್ನು ಅಲ್ಲಾಡಿಸದೆ ಮೂಗಿನ ತುದಿಯನ್ನೇ ನೋಡುತ್ತ ಮನೆ,ಕ್ಷೇತ್ರ,ಪತ್ನಿ,ಧನಗಳ ಚಿಂತೆಯನ್ನು ಬಿಟ್ಟು ವೈಷ್ಣವೀಮಾಯೆಯನ್ನು ತ್ಯಜಿಸಿ ಮೌನದಿಂದ ಜಿತೇಂದ್ರಿಯನೂ,

ಗೃಹಕ್ಷೇತ್ರಕಲತ್ರಾಣಾಂ ಚಿಂತಾಂ ಮುಕ್ತ್ವಾ ಧನಸ್ಯ ಚ ।
ಮಾಯಾಂ ಚ ವೈಷ್ಣವೀಂ ತ್ಯಕ್ತ್ವಾ ಕೃತಮೌನೋ ಜಿತೇಂದ್ರಿಯಃ ॥ ೫ ॥
ನಿರಾಹಾರೋ ಜಿತಕ್ರೋಧೋ ಮುಕ್ತಸಂಸಾರಬಂಧನಃ ।
ಭುಜೌ ಪದ್ಮಾಸನೇ ಕೃತ್ವಾ ಕಿಂಚಿನ್ಮೀಲಿತಲೋಚನಃ ।
ಮನೋಽತಿಚಂಚಲಂ ಜ್ಞಾತ್ವಾ ಸ್ಥಿರಂ ಚಕ್ರೇ ಹೃದಿ ದ್ವಿಜ ॥ ೬ ॥
ಕ್ರಮೇಣಾಭ್ಯಾಸಯೋಗೇನ ಭಿನ್ನಾಂ ಚಕ್ರೇ ಸ ಚೈಕತಃ ।
ಪ್ರಾಣಾಪಾನವ್ಯಾನೋದಾನಸಮಾನಾಖ್ಯಾಂಶ್ಚ ಮಾರುತಾನ್ ॥ ೭ ॥
ಏವಂ ತಂ ಹೃದಯೇ ಕೃತ್ವಾ ಗೃಹೀತ್ವಾ ಸರ್ವಸಂಧಿಷು ।
ಆನೀಯ ಬ್ರಹ್ಮಣಃ ಸ್ಥಾನೇ ದೃಢಂ ಬ್ರಹ್ಮಣ್ಯಯೋಜಯತ್ ॥ ೮ ॥
ಗೃಹೀತ್ವಾ ಪವನಂ ಬಾಹ್ಯಂ ಯದಾ ಪೂರಯತೇ ತನುಂ ।
ತದಾ ಸ ಪೂರಕೋ ಜ್ಞೇಯೋ ರೇಚಕಂ ತು ವದಾಮ್ಯಹಂ ॥ ೯ ॥
ಯದಾ ಚಾಭ್ಯಂತರೋ ವಾಯುರ್ಬಾಹ್ಯೇ ಯಾತಿ ಕ್ರಮಾನ್ನೃಪ ।
ತದಾ ಸ ರೇಚಕೋ ಜ್ಞೇಯಃ ಸ್ತಂಭನಾತ್ಕುಂಭಕೋ ಭವೇತ್ ॥ ೧೦ ॥
ಪಂಚವಿಂಶತಿತತ್ವಾನಿ ಯದಾ ಜಾನಂತಿ ಯೋಗಿನಃ ।
ಮುಚ್ಯಂತೇ ಪಾತಕೈಃ ಸರ್ವೈಃ ಸಪ್ತಜನ್ಮಕೃತೈರಪಿ ॥ ೧೧ ॥

---

ಆಹಾರವಿಲ್ಲದವನೂ, ಸಂಸಾರಬಂಧರಹಿತನೂ ಆಗಿ ಪದ್ಮಾಸನದಲ್ಲಿ ತೋಳುಗಳನ್ನಿಟ್ಟು ಸ್ವಲ್ಪ ಕಣ್ಣುಗಳನ್ನು ಮುಚ್ಚಿಕೊಂಡು ಮನಸ್ಸು ಚಂಚಲವಾದುದೆಂದರಿತು ಅದನ್ನು ಸ್ಥಿರಗೊಳಿಸಿದನು.

೭–೮. ಕ್ರಮವಾಗಿ ಅಭ್ಯಾಸಯೋಗದಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ವಾಯುಗಳನ್ನು ಬೇರೆಬೇರೆಯಾಗಿ ಮಾಡಿ ಆ ವಾಯುವನ್ನು ಹೃದಯದಲ್ಲಿ ನಿಲ್ಲಿಸಿ ಸಕಲ ಸಂಧಿಗಳಲ್ಲಿ ವ್ಯಾಪಿಸುವಂತೆ ಮಾಡಿ ಬ್ರಹ್ಮಸ್ಥಾನಕ್ಕೆ ತಂದು ಪರಬ್ರಹ್ಮನಲ್ಲಿ ಸೇರಿಸಿದನು.

೯. ಹೊರಗಿನ ಗಾಳಿಯನ್ನು ದೇಹದಲ್ಲಿ ಸೇರಿಸಿದರೆ ಪೂರಕವೆನ್ನಿಸಿಕೊಳ್ಳುವುದು. ರೇಚಕವನ್ನು ಹೇಳುವೆನು.

೧೦. ಒಳಗಿನ ಗಾಳಿಯು ಕ್ರಮವಾಗಿ ಹೊರಗೆ ಬಂದರೆ ಅದನ್ನು ರೇಚಕವೆಂದು ತಿಳಿಯಬೇಕು. ವಾಯುವನ್ನು ತಡೆಯುವುದು ಕುಂಭಕವೆನ್ನಿಸಿಕೊಳ್ಳುವುದು.

೧೧. ಯೋಗಿಗಳು ಇಪ್ಪತ್ತೈದು ತತ್ತ್ವಗಳನ್ನು ತಿಳಿದಾಗ ಏಳು ಜನ್ಮಗಳಲ್ಲಿ ಮಾಡಿದ ಸಕಲ ಪಾಪಗಳಿಂದ ಮುಕ್ತರಾಗುವರು.

ರಾಜೋವಾಚ :—

ಕಾನಿ ತತ್ವಾನಿ ಕೋ ದೇಹೀ ಕಿಂ ಜ್ಞೇಯಂ ಯೋಗಿನಾಂ ವದ ।
ಉತ್ಪನ್ನಜ್ಞಾನಸದ್ಭಾವೋ ಯೋಗೆಯುಕ್ತಃ ಕಥಂ ಭವೇತ್ ॥ ೧೨ ॥

ಈಶ್ವರ ಉವಾಚ :—

ಪ್ರಕೃತಿಶ್ಚ ತತೋ ಬುದ್ಧಿರಹಂಕಾರಸ್ತತೋಽಭವತ್ ।
ತನ್ಮಾತ್ರಪಂಚಕಂ ತಸ್ಮಾದೇಷಾ ಪ್ರಕೃತಿರಷ್ಟಧಾ ॥ ೧೩ ॥
ಬುದ್ಧೀಂದ್ರಿಯಾಣಿ ಪಂಚೈವ ಪಂಚ ಕರ್ಮೇಂದ್ರಿಯಾಣಿ ಚ ।
ಏಕಾದಶಂ ಮನೋ ವಿದ್ಧಿ ಮಹಾಭೂತಾನಿ ಪಂಚ ಚ ॥ ೧೪ ॥
ಗಣಃ ಷೋಡಶಕಃ ಸಾಂಖ್ಯೇ ವಿಸ್ತರೇಣ ಪ್ರಕೀರ್ತಿತಃ ।
ಚತುರ್ವಿಂಶತಿ ತತ್ವಾನಿ ಪುರುಷಃ ಪಂಚವಿಂಶಕಃ ॥ ೧೫ ॥
ದೇಹೀತಿ ಪ್ರೋಚ್ಯತೇ ದೇಹೇ ಸ ಚಾತ್ಮಾನಂ ಚ ಪಶ್ಯತಿ ।
ವಿಂದಂತಿ ಪರಮಾತ್ಮಾನಂ ಷಷ್ಠಂ ತಂ ವಿಂಶತೇಃ ಪರಂ ॥ ೧೬ ॥
ಆಸನಾದಿಪ್ರಕಾರಾ ಯೇ ತೇ ಜ್ಞೇಯಾಃ ಪ್ರಥಮಂ ಸದಾ ।
ಯದಾ ದೀಪಶಿಖಾಪ್ರಾಯಂ ಜ್ಯೋತಿಃ ಪಶ್ಯಂತಿ ತೇ ಹೃದಿ ॥ ೧೭ ॥
ಉತ್ಪನ್ನಜ್ಞಾನಸದ್ಭಾವಾ ಭಣ್ಯಾಸ್ತೇ ಯೋಗಿನೋ ಬುಧೈಃ ।
ಪೂರ್ವಂ ಜರಾಂ ಜರಯಂತಿ ರೋಗಾ ನಶ್ಯಂತಿ ದೂರತಃ ॥ ೧೮ ॥

---

೧೨. ರಾಜನು ಹೇಳುತ್ತಾನೆ :—ತತ್ತ್ವಗಳೂ, ಪ್ರಾಣಿಗಳೂ. ಯಾವುವು ? ಯೋಗಿಗಳು ಅರಿಯತಕ್ಕವಾವುವು ? ಜ್ಞಾನಿಯಾದ ಯೋಗಿಯು ಹೇಗೆ ಆಗುವನು ?

೧೩–೧೫. ಈಶ್ವರನು ಹೇಳುತ್ತಾನೆ :—ಸಾಂಖ್ಯ ಶಾಸ್ತ್ರದಲ್ಲಿ ಪ್ರಕೃತಿ, ಬುದ್ಧಿ, ಅಹಂಕಾರ, ಪಂಚತನ್ಮಾತ್ರಗಳು, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಮನಸ್ಸು, ಪಂಚಮಹಾಭೂತಗಳು ಇವು ಇಪ್ಪತ್ತನಾಲ್ಕು ತತ್ತ್ವಗಳು ಹೇಳಲ್ಪಟ್ಟಿರುವುವು. ಪುರುಷನು ಇಪ್ಪತ್ತೈದನೆಯವನು.

೧೬. ದೇಹದಲ್ಲಿರುವ ದೇಹಿಯು ಇಪ್ಪತ್ತಾರನೆಯವನಾದ ಪರಮಾತ್ಮನನ್ನು ಅರಿಯುತ್ತಾನೆ.

೧೭–೧೮. ಮೊದಲು ಆಸನಗಳ ಕ್ರಮವನ್ನು ತಿಳಿಯಬೇಕು. ಹೃದಯದಲ್ಲಿ ದೀಪ ಶಿಖೆಯಂತಿರುವ ಜ್ಯೋತಿಸ್ಸನ್ನು ನೋಡುವವರನ್ನು ಪಂಡಿತರು ಜ್ಞಾನಿಗಳಾದ ಯೋಗಿಗಳೆಂದು ಹೇಳುವರು. ಯೋಗಿಗಳಿಗೆ ಮುಪ್ಪು ಮೊದಲು ಹೋಗುವುದು. ರೋಗಗಳು ಪರಿಹಾರವಾಗುವುದು.

ಸರ್ವಪಾಪಚಯೇ ಕ್ಷೀಣೇ ಪಶ್ಚಾನ್ಮೃತ್ಯುಂ ಸ ವಿಂದತಿ ।
ಮೃತೋ ಲೋಕೇ ನರೋ ನಾಸ್ತಿ ಯೋಗೀ ಜಾನಾತಿ ಚೇತ್ಸ್ವಯಂ॥೧೯॥
ತದಾ ದ್ವಾರಾಣಿ ಸಂರುಧ್ಯ ದಶ ಪ್ರಾಣಾನ್ಸ ಮುಂಚತಿ ।
ಪುಣ್ಯಪಾಪಕ್ಷಯಂ ಕೃತ್ವಾ ಪ್ರಾಣಾ ಗಚ್ಛಂತಿ ಯೋಗಿನಃ ।
ಅಣಿಮಾದಿಗುಣೈಶ್ವರ್ಯಂ ಪ್ರಾಪ್ನುವಂತಿ ಶಿವಾಲಯೇ ॥ ೨೦ ॥
ಅನೇನ ಧ್ಯಾನಯೋಗೇನ ಭವಂ ಪಶ್ಯತಿ ಮಾನವಃ ।
ಮನಸಾ ಚಿಂತಿತಂ ಸರ್ವಂ ಸಂಪ್ರಾಪ್ತಂ ಭವದರ್ಶನಾತ್ ॥ ೨೧ ॥
ಏವಮಾಸ್ತೇ ಯದಾ ವಿಪ್ರೋ ವಾಮನೋ ಭವಸನ್ನಿಧೌ ।
ಗಗನಾದವತೀರ್ಣಂ ತಂ ತದಾ ಪಶ್ಯತಿ ನಾರದಂ ॥ ೨೨ ॥

ವಾಮನ ಉವಾಚ :—

ಮಹರ್ಷೇ ಕುಶಲಂ ತೇಽದ್ಯ ಕಸ್ಮಾದಾಗಮ್ಯತೇ ತ್ವಯಾ ।
ಪ್ರಣಮಾಮಿ ಮಹರ್ಷೇ ತ್ವಾಂ ಬ್ರಹ್ಮೈವ ತ್ವಂ ಜಗತ್ರಯೇ ॥ ೨೩ ॥

ನಾರದ ಉವಾಚ :—

ಸ್ವರ್ಗಲೋಕಾದಹಂ ಪ್ರಾಪ್ತಃ ಕುಶಲಂ ಕಿಂ ಬ್ರವೀಮಿತೇ ॥ ೨೪ ॥

---

೧೯–೨೦. ಆ ಯೋಗಿಯು ಸಕಲ ಪಾಪಗಳೂ ಕಳೆಯಲು ಮೃತನಾಗುವನು. ಲೋಕದಲ್ಲಿ ಮೃತನಾದ ಮಾನವನು ಏನನ್ನೂ ತಿಳಿಯುವುದಿಲ್ಲ. ಯೋಗಿಯು ಮಾತ್ರ ತಿಳಿಯುತ್ತಾನೆ. ಅವನು ಆಗ ದಶದ್ವಾರಗಳನ್ನು ತಡೆದು ಪ್ರಾಣವನ್ನು ಬಿಡುವನು. ಯೋಗಿಯ ಪುಣ್ಯ ಪಾಪಗಳು ನಾಶವಾದ ಕೂಡಲೆ ಅವನ ಪ್ರಾಣಗಳು ಹೋಗುವುವು. ಅವನು ಶಿವಾಲಯದಲ್ಲಿ ಅಣಿಮಾದ್ಯಷ್ಟೈಶ್ವರ್ಯವನ್ನು ಪಡೆಯುವನು.

೨೧. ಈ ಧ್ಯಾನಯೋಗದಿಸದ ಭವನನ್ನು ನೋಡಿದ ಮನುಷ್ಯನು ಮನಸ್ಸಿನಲ್ಲಿ ಆಲೋಚಿಸಿದ್ದನ್ನೆಲ್ಲ ಹೊಂದುತ್ತಾನೆ.

೨೨. ಹೀಗೆ ಭವನಹತ್ತಿರವಿರುವ ವಾಮನನು ಆಕಾಶದಿಂದ ಇಳಿಯುತ್ತಿರುವ ನಾರದನನ್ನು ಕಂಡನು.

೨೩. ವಾಮನನು ಹೇಳುತ್ತಾನೆ:—ಮಹರ್ಷಿಯೆ ! ನಿನಗೆ ಕುಶಲವೇ? ನೀನು ಎಲ್ಲಿಂದ ಬರುತ್ತಿರುವೆ ? ಇದೊ ನಿನಗೆ ವಂದನೆ. ನೀನು ಮೂರು ಲೋಕಗಳಲ್ಲಿ ಬ್ರಹ್ಮನೇ ಆಗಿದ್ದೀಯೆ.

೨೪. ನಾರದನು ಹೇಳುತ್ತಾನೆ :—ನಾನು ಸ್ವರ್ಗಲೋಕದಿಂದ ಬಂದಿರುವೆನು. ನಿನಗೆ ಕುಶಲವನ್ನು ಏನೆಂದು ಹೇಳಲಿ.

ಯಾತಾಯಾತೈರ್ದಿನೇಶಸ್ಯ ಪೂರ್ಯತೇ ಬ್ರಹ್ಮಣೋ ದಿನಂ ।
ದಿನಾಂತೇ ಜಾಯತೇ ರಾತ್ರೀ ರಾತ್ರೌ ನಶ್ಯಂತಿ ದೇವತಾಃ ॥ ೨೫ ॥
ಕಾಕಥಾ ಮೃತ್ಯುಲೋಕಸ್ಯ ಯೇ ಮ್ರಿಯಂತೇ ದಿನೇ ದಿನೇ ।
ನಭೋಧೂಮಾಕುಲಂ ಜಾತಂ ದೇವಾ ಬಲಿಗೃಹೇ ಗತಾಃ ॥ ೨೬ ॥
ಸಪ್ತರ್ಷಯೋ ಗತಾಸ್ತತ್ರ ಬ್ರಾಹ್ಮಣಾ ಬ್ರಹ್ಮಚಾರಿಣಃ ।
ಹಾಹಾಹೂಹೂಸ್ತುಂಬರುಶ್ಚ ಗತೌ ನಾರದಪರ್ವತೌ ॥ ೨೭ ॥
ಅಪ್ಸರೋಗಣಗಂಧರ್ವಾಃ ಸಂಪ್ರಾಪ್ತಾ ಬಲಿಮಂದಿರೇ ।
ಉತ್ಪಾತಶಾಂತಿಕೋ ಯಜ್ಞಃ ಕ್ರಿಯತೇ ಬಲಿನಾ ಸ್ವಯಂ ॥ ೨೮ ॥
ತತ್ರೈವ ಗಂತುಮಿಚ್ಛಾಮಿ ದ್ರಷ್ಟುಂ ಯಜ್ಞೇ ಬಲೇರ್ಗೃಹೇ ।
ಸಹಸ್ರಮೇಕಂ ಯಜ್ಞಾನಾಮೇಕೋನಂ ವಿದಧೇ ಬಲಿಃ ॥ ೨೯ ॥
ದೈತ್ಯಾನಾಂ ಭುವನಂ ಸರ್ವಂ ಸಂಪೂರ್ಣೇಽಸ್ಮಿನ್ಭವಿಷ್ಯತಿ ।
ಅಸಾವತಿಶಯಃ ಕೋಽಪಿ ಪ್ರಾರಬ್ಧೋ ಯಜ್ಞಕರ್ಮಣಿ ।
ದ್ವಿಜಾತಿಭ್ಯೋ ಮಯಾ ದೇಯಂ ಯೇನ ಯಷ್ಟ್ಯಾಜ್ಯತೇ ಸ್ವಯಂ ॥ ೩೦ ॥

---

೨೫. ಸೂರ್ಯನ ಗಮನಾಗಮನದಿಂದ ಬ್ರಹ್ಮನ ದಿನವು ಪೂರ್ತಿಯಾಗುವುದು. ಹಗಲಿನ ಕೊನೆಯಲ್ಲಿ ರಾತ್ರಿಯಾಗುವುದು. ರಾತ್ರಿಯಲ್ಲಿ ದೇವತೆಗಳು ನಾಶವಾಗುತ್ತಾರೆ.

೨೬. ಪ್ರತಿದಿನವೂ ಜನರು ಸಾಯುವ ಮೃತ್ಯುಲೋಕದ ಸಮಾಚಾರವೇನೆಂದು ಹೇಳಲಿ. ಆಕಾಶವು ಹೊಗೆಯಿಂದ ತುಂಬಿದೆ. ದೇವತೆಗಳು ಬಲಿಯ ಮನೆಗೆ ತೆರಳಿರುತ್ತಾರೆ.

೨೭—೨೮. ಬಲಿಯು ಉತ್ಪಾತವನ್ನು ಶಮನಗೊಳಿಸುವ ಯಜ್ಞವನ್ನು ಮಾಡುತ್ತಿದ್ದಾನೆ. ಅಲ್ಲಿಗೆ ಸಪ್ತರ್ಷಿಗಳೂ, ಬ್ರಾಹ್ಮಣರೂ, ಬ್ರಹ್ಮಚಾರಿಗಳೂ, ಹಾಹಾ ಹೂಹೂ ಗಂಧರ್ವರೂ, ತುಂಬುರು ಪರ್ವತರೂ, ಅಪ್ಸರರೂ, ಗಂಧರ್ವರೂ ಹೋಗಿದ್ದಾರೆ.

೨೯. ನಾನೂ ಆ ಬಲಿಯ ಮನೆಗೆ ಯಜ್ಞವನ್ನು ನೋಡಲು ಹೋಗುತ್ತೇನೆ. ಬಲಿಯು ಒಂಭೈನೂರ ತೊಂಬತ್ತೊಂಬತ್ತು ಯಜ್ಞಗಳನ್ನು ಮಾಡಿದ್ದಾನೆ.

೩೦—೩೩. ಈ ಯಜ್ಞವು ಪೂರ್ತಿಯಾಗಲು ಸಮಗ್ರಭುವನವೂ ದೈತ್ಯರದಾಗುವುದು. ಬಲಿಯು ಈ ಯಜ್ಞದಲ್ಲಿ ಒಂದು ಅತಿಶಯವನ್ನು ಆರಂಭಿಸಿದ್ದಾನೆ. ಬ್ರಾಹ್ಮ

ವಾರಿತೇನಾಪಿ ಮೇ ದೇಯಂ ಸತ್ಯಮಸ್ತು ವಚೋ ಮಮ ।
ಆತ್ಮಾನಮಪಿ ದಾರಾಂಶ್ಚ ರಾಜ್ಯಂ ಪುತ್ರಾನ್ಪ್ರಿಯಾನ್ಮಮ ॥ ೩೧ ॥
ಪ್ರಾರ್ಥಿತಶ್ಚೇನ್ನ ದಾಸ್ಯಾಮಿ ವ್ಯರ್ಥೋಽ ಭವತು ಮೇಽಧ್ವರಃ ।
ಅನೇನ ವಚನಾಜ್ಜಾತಾ ಮಹತೀ ಮೇ ಶಿರೋವ್ಯಥಾ ।
ಪ್ರತಿಜ್ಞಾಯ ಕಥಂ ಯಜ್ಞಃ ಸಂಪೂರ್ಣೋಽಯಂ ಭವಿಷ್ಯತಿ ॥ ೩೨ ॥
ಭಂಗೋಪಾಯಂ ನ ಪಶ್ಯಾಮಿ ಭ್ರಮಾಮಿ ಭುವನತ್ರಯೇ ।
ವಿಧ್ವಂಸಕಾರಿಣಂ ಜ್ಞಾತ್ವಾ ಭವಂತಂ ಪರ್ಯುಪಸ್ಥಿತಃ ॥ ೩೩ ॥
ಯಥಾ ನ ಪೂರ್ಯತೇ ಯಜ್ಞಃ ತಥೇದಾನೀಂ ವಿಧೀಯತಾಂ ॥ ೩೪ ॥

ವಾಮನ ಉವಾಚ :—

ಮಹರ್ಷೇ ಶೃಣು ಮೇ ವಾಕ್ಯಂ ಕಾ ಶಕ್ತಿರ್ಮಮ ವಿದ್ಯತೇ ।
ಕೋಽಹಂ ಕಸ್ಮಾತ್ಕರಿಷ್ಯಾಮಿ ಯಜ್ಞೇ ದೇವಾಃ ಸಮಾಗತಾಃ ॥ ೩೫ ॥
ಋಷಯೋ ಬ್ರಾಹ್ಮಣಾಃ ಸರ್ವೇ ಕಥಂ ವ್ಯರ್ಥೋ ಭವಿಷ್ಯತಿ ।
ಅಪರಂ ಶೃಣು ಮೇ ವಾಕ್ಯಂ ಬ್ರಹ್ಮರ್ಷೇ ಬ್ರಹ್ಮಣಸ್ಪತೇ ॥ ೩೬ ॥
ನ ಕಲತ್ರಂ ನ ತೇ ಪುತ್ರಾಃ ತಸ್ಮಾತ್ಪ್ರಕೃತಿರೀದೃಶೀ ।
ಯುದ್ಧಂ ವಿನಾ ನ ತೇ ಸೌಖ್ಯಂ ನ ಸೌಖ್ಯಂ ಕಲಹಂ ವಿನಾ ॥ ೩೭ ॥

---

ಣರು ಬೇಡಿದ್ದನ್ನೆಲ್ಲ ಯಾರಾದರೂ ತಡೆದರೂ ತಪ್ಪದೆ ಕೊಡುವೆನು. ನನ್ನ ಮಾತು ನಿಜವಾಗಲಿ. ನನ್ನನ್ನೂ, ಪತ್ನಿಯನ್ನೂ, ರಾಜ್ಯವನ್ನೂ ಪ್ರಿಯಪುತ್ರರನ್ನೂ ಬೇಡಿದರೆ ಕೊಡುವೆನು. ಹಾಗೆ ಮಾಡದಿದ್ದರೆ ನನ್ನ ಯಾಗವು ವ್ಯರ್ಥವಾಗಲಿ" ಎಂದು ಸಂಕಲ್ಪಿಸಿರುವನು. ನನಗೆ ಬಲಿಯ ಈ ಮಾತಿನಿಂದ ಅತ್ಯಂತ ತಲೆನೋವುಂಟಾಯಿತು. ನಾನು ಈ ಯಜ್ಞವು ಹೇಗೆ ಪೂರ್ತಿಯಾಗುವುದು ? ಎಂದು ಪ್ರತಿಜ್ಞೆ ಮಾಡಿ ಇದನ್ನು ಹಾಳು ಮಾಡುವ ಯುಕ್ತಿಯನ್ನು ಕಾಣದೆ ಮೂರುಲೋಕಗಳಲ್ಲಿ ಸಂಚರಿಸುತ್ತ ನೀನು ಅದನ್ನು ನಾಶಗೊಳಿಸುವವನೆಂದು ನಿನ್ನ ಹತ್ತಿರ ಬಂದೆನು.

೩೪. ನೀನೀಗ ಆ ಯಜ್ಞವು ಪೂರ್ತಿಯಾಗದಂತೆ ಮಾಡು.

೩೫–೩೬. ವಾಮನನು ಹೇಳುತ್ತಾನೆ :—ಮಹರ್ಷಿಯೆ ! ನನ್ನ ಮಾತನ್ನು ಕೇಳು. ನನಗೇನು ಶಕ್ತಿಯಿದೆ ? ನಾನಾರು ? ಹಾಗೆ ಏಕೆ ಮಾಡುವೆನು ? ಯಜ್ಞಕ್ಕೆ ದೇವತೆಗಳೂ, ಋಷಿಗಳೂ, ಬ್ರಾಹ್ಮಣರೂ ಬಂದಿದ್ದಾರೆ. ಅದು ಹೇಗೆ ವ್ಯರ್ಥವಾದೀತು ? ಬ್ರಹ್ಮರ್ಷಿಯೆ ! ನನ್ನ ಮತ್ತೊಂದು ಮಾತನ್ನು ಆಲಿಸು.

೩೭. ನಿನಗೆ ಹೆಂಡತಿ ಮಕ್ಕಳುಗಳಿಲ್ಲ. ನಿನ್ನ ಸ್ವಭಾವವು ಹೀಗೇಕಾಗಿದೆ ? ನಿನಗೆ ಯುದ್ಧ, ಜಗಳಗಳಿಲ್ಲದಿದ್ದರೆ ಸೌಖ್ಯವೇ ಇಲ್ಲವಲ್ಲ !

ಯಾದೃಶಸ್ತಾದೃಶೋ ವಾಽಪಿ ವಾಗ್ವಾದೋಽಪಿ ಸದಾ ಪ್ರಿಯಃ ।
ಸ್ನಾನಂ ಸಂಧ್ಯಾ ಜಪೋ ಹೋಮಸ್ತರ್ಪಣಂ ಪಿತೃದೇವಯೋಃ ॥ ೩೮ ॥
ನಾರದಃ ಕುರುತೇ ಚಾನ್ಯದನ್ಯತ್ಕುರ್ವಂತಿ ಬ್ರಾಹ್ಮಣಾಃ ।
ಮಮಾಪಿ ಕೌತುಕಂ ಜಾತಂ ಮಹರ್ಷೇ ವದ ಸತ್ವರಂ ॥ ೩೯ ॥

ನಾರದ ಉವಾಚ :—

ಪಾದ್ಮಕಲ್ಪೇ ವ್ಯತಿಕ್ರಾಂತೇ ರಾತ್ರ್ಯಂತೇ ಶೃಣು ವಾಮನ ।
ಬ್ರಹ್ಮಾಂಡಂ ವಾರಿಣಾ ವ್ಯಾಪ್ತಮನ್ಯತ್ಕಿಂಚಿನ್ನ ವಿದ್ಯತೇ ॥ ೪೦ ॥
ಅಪ್ಸು ಶೇತೇ ದೇವದೇವಃ ಸ ಚ ನಾರಾಯಣಃ ಸ್ಮೃತಃ ।
ಸ ಬ್ರಹ್ಮಾ ಸ ಶಿವೋ ನಾಸ್ತಿ ಭೇದಸ್ತೇಷಾಂ ಪರಸ್ಪರಂ ॥ ೪೧ ॥
ಯದಾ ಭವಂತಿ ತೇ ಭಿನ್ನಾಸ್ತದಾ ದೇವತ್ರಯಂ ಚ ತೇ ।
ಕರ್ತುಂ ವಾರಾಹಕಲ್ಪಂ ತು ಭಿನ್ನಾ ಜಾತಾಸ್ತ್ರಯಸ್ತದಾ ॥ ೪೨ ॥
ಬ್ರಹ್ಮವಿಷ್ಣುಹರಾ ದೇವಾ ರಜಸ್ಸತ್ವತಮೋಮಯಾಃ ।
ಸೃಷ್ಟಿಂ ಬ್ರಹ್ಮಾ ಕರೋತ್ಯೇವಂ ತಾಂ ಚ ಪಾಲಯತೇ ಹರಿಃ ॥ ೪೩ ॥

---

೩೮–೩೯. ಜಗಳವು ಹೇಗೆ ಇರಲಿ. ಅದು ನಿನಗೆ ಹಿತವಾಗಿರುವುದು. ನೀನು ಮಾಡುವ ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ದೇವಪಿತೃಗಳ ತರ್ಪಣ ಇವುಗಳೇ ಬೇರೆ. ಇತರ ಬ್ರಾಹ್ಮಣರು ಮಾಡುವುದೇ ಬೇರೆ. ನನಗೂ ಈ ವಿಷಯ ದಲ್ಲಿ ಕುತೂಹಲವುಂಟಾಗಿದೆ. ಅದನ್ನು ಜಾಗ್ರತೆಯಾಗಿ ನನಗೆ ಹೇಳು.

೪೦. ನಾರದನು ಹೇಳುತ್ತಾನೆ :—ವಾಮನ ! ಪಾದ್ಮಕಲ್ಪವು ಕಳೆಯಲು ರಾತ್ರಿಯ ಕೊನೆಯಲ್ಲಿ ಬ್ರಹ್ಮಾಂಡವು ನೀರಿನಿಂದ ತುಂಬಿದ್ದರಿಂದ ಬೇರೆ ಏನೂ ಇರ ಲಿಲ್ಲ.

೪೧. ಆಗ ನಾರಾಯಣನು ನೀರಿನಲ್ಲಿ ಮಲಗಿರುವನು. ಅವನೆ ಬ್ರಹ್ಮ ಶಿವರಾಗಿ ರುವನು. ಅವರಲ್ಲಿ ಪರಸ್ಪರ ಭೇದವಿಲ್ಲ.

೪೨. ಅವರು ಭಿನ್ನರಾದಾಗ ಮೂವರು ದೇವತೆಗಳಾಗುವರು. ಅವರು ವಾರಾಹ ಕಲ್ಪವನ್ನುಂಟುಮಾಡಲು ಬೇರೆಬೇರೆಯಾದರು.

೪೩–೪೪. ಬ್ರಹ್ಮ, ವಿಷ್ಣು, ಶಿವರೆಂಬ ಈ ಮೂವರು ದೇವತೆಗಳು ರಜಸ್ಸತ್ವ, ತಮೋ ಗುಣಮಯರು. ಬ್ರಹ್ಮನು ಸೃಷ್ಟಿಸುತ್ತಾನೆ. ಹರಿಯು ಪಾಲಿಸುತ್ತಾನೆ. ಶಿವನು ಚರಾಚರಾತ್ಮಕವಾದ ಈ ಮೂರುಲೋಕಗಳನ್ನು ಸಂಹರಿಸುತ್ತಾನೆ. ವಾಮನ!

ಹರಸ್ಸಂಹರತೇ ಸರ್ವಂ ತ್ರೈಲೋಕ್ಯಂ ಸಚರಾಚರಂ ।
ಏವಂ ಪ್ರವರ್ತ್ಯ ದೇವೇಶ ಉಪವಿಷ್ಟಾ ವರಾಸನೇ ।
ಕೈಲಾಸಶಿಖರೇ ರಮ್ಯೇ ಮಂತ್ರಯಂತಿ ಪರಸ್ಪರಂ ॥ ೪೪ ॥
ತ್ರಯಾಣಾಂ ಕೋ ವರೋ ದೇವಃ ಕೋ ಜ್ಯೇಷ್ಠಃ ಕೋ ಗುಣಾಧಿಕಃ ।
ಚತುರ್ಥೋ ನಾಸ್ತಿ ಯೋ ವೇತ್ತಿ ಸಹಸಾ ತೇ ತ್ರಯಃ ಸ್ಥಿತಾಃ ॥ ೪೫ ॥
ತೇಭ್ಯಃ ಸಮುಸ್ಥಿತಂ ಜ್ಯೋತಿರೇಕೀಭೂತಂ ತದಂಬರೇ ।
ಕಾಲಮಾನೇನ ಯುಕ್ತಂ ತದ್ಭ್ರಾಮ್ಯತೇ ರವಿಮಂಡಲಂ ॥ ೪೬ ॥
ಅಹಂ ಜ್ಯೇಷ್ಠೋ ಹ್ಯಹಂ ಜ್ಯೇಷ್ಠೋ ವಾದೋಽಭೂದ್ಧರಬ್ರಹ್ಮಣೋಃ ।
ದ್ವಯೋರ್ವಿವದತೋಃ ಕ್ರೋಧಾತ್ಸಂಜಾತೋಽಹಂ ಮುಖಾತ್ಪ್ರಭೋ॥೪೭॥
ಕಥಂ ದೇವ ನ ಜನಾಸಿ ಯದುಕ್ತಂ ಬ್ರಹ್ಮಣಾ ತದಾ ।
ದಶಾವತಾರಾಸ್ತೇ ರಂತುಂ ಮತ್ಸ್ಯಕೂರ್ಮಾದಯಃ ಪುರಾ ॥ ೪೮ ॥
ರುದ್ರೇಣ ವಾರಿತಾ ಗತ್ವಾ ಕಲಹೋ ವೋ ನ ಯುಜ್ಯತೇ ।
ತಥೈವ ಕೃತವಾನ್ವಿಷ್ಣುರವತಾರಾನ್ದಶೈವ ತಾ ॥ ೪೯ ॥

---

ಅವರು ಹೀಗೆ ಜಗತ್ತಿನ ವ್ಯಾಪಾರಗಳನ್ನು ನಿರ್ವಹಿಸುತ್ತ ಕೈಲಾಸಶಿಖರದಲ್ಲಿರುವ ಮನೋಹರವಾದ ಆಸನದಲ್ಲಿ ಕುಳಿತು ಪರಸ್ಪರವಾಗಿ ಆಲೋಚಿಸುತ್ತಿದ್ದರು.

೪೫–೪೬. "ನಮ್ಮ ಮೂವರಲ್ಲಿ ಯಾವನು ಉತ್ತಮನು? ಯಾವನು ಜ್ಯೇಷ್ಠನು? ಯಾವನು ಅಧಿಕ ಗುಣವುಳ್ಳವನು? ಇದನ್ನರಿತವನು ನಾಲ್ಕನೆಯವನೊಬ್ಬನಿಲ್ಲ". ಎಂದು ಅವರು ಮಾತಾಡುತ್ತಿರಲು ಅಕಸ್ಮಾತ್ತಾಗಿ ಅವರಿಂದ ಒಂದು ತೇಜಸ್ಸುಂಟಾಗಿ ಆಕಾಶದಲ್ಲಿ ಕಾಲಪ್ರಮಾದಿಂದ ಕೂಡಿದ ಸೂರ್ಯಮಂಡಲವಾಗಿ ಸುತ್ತಿತು.

೪೭. ಆಗ ಶಿವಬ್ರಹ್ಮರಲ್ಲಿ ನಾನು ಜ್ಯೇಷ್ಠ ನಾನು ಜ್ಯೇಷ್ಠ ಎಂದು ವಾದವುಂಟಾಯಿತು. ಕೋಪದಿಂದ ಅವರು ವಾದಿಸುತ್ತಿರಲು ನಾನು ಬ್ರಹ್ಮನ ಮುಖದಿಂದ ಹುಟ್ಟಿದೆನು.

೪೮–೪೯. ಸ್ವಾಮಿ! ಆಗ ಬ್ರಹ್ಮನು ಹೇಳಿದ್ದನ್ನು ನೀನು ಹೇಗೆ ತಿಳಿಯುವುದಿಲ್ಲ. ಹಿಂದೆ ನಿನ್ನ ಮತ್ಸ್ಯಕೂರ್ಮಾದಿ ದಶಾವತಾರಗಳು ಕ್ರೀಡಾರ್ಥವಾಗಿ ಪರಸ್ಪರ ಜಗಳವಾಡುತ್ತಿರಲು ರುದ್ರನು ಕಲಹವು ಯುಕ್ತವಲ್ಲವೆಂದು ತಡೆದನು. ವಿಷ್ಣುವು ಹಾಗೆಯೇ ದಶಾವತಾರಗಳನ್ನು ಮಾಡಿದನು.

ಕಲ್ಪಾದೌ ಬ್ರಹ್ಮಣೋ ವಕ್ತ್ರಾತ್ಸಂಜಾತೋಽಹಂ ದ್ವಿಜೋತ್ತಮ ।
ಕಲಹಾಜ್ಜನ್ಮ ಮೇ ಯಸ್ಮಾತಸ್ಮಾನ್ಮೇ ಕಲಹಃ ಪ್ರಿಯಃ ॥ ೫೦ ॥
ಕಲ್ಪಾದೌ ಸೃಜತಾ ಪೂರ್ವಂ ಚಿನ್ತಿತಂ ಬ್ರಹ್ಮಣಾ ಸ್ವಯಂ ।
ವೇದಾಂತಿನಾ ಕಥಂ ಸೃಷ್ಟಿಃ ಕರ್ತವ್ಯಾಽಹೋ ಹರೇ ಮಯಾ ॥ ೫೧ ॥
ನಷ್ಟಾನ್ವೇದಾನ್ನ ಜಾನಾಮಿ ಕ್ವ ವೇದಾಸ್ತೇ ಗತಾ ಇತಿ ।
ಪೃಥ್ವೀಮಪಿ ನ ಜಾನಾಮಿ ಕಿಂ ಸ್ಥಾನೇ ಕಿಮಧೋ ಗತಾ ॥ ೫೨ ॥
ಗಂತುಂ ನ ವಿದ್ಯತೇ ಶಕ್ತಿರ್ಜಲಮಧ್ಯೇ ಮಮಾಧುನಾ ।
ಅವತಾರೈಸ್ತ್ವಯಾ ಕಾರ್ಯಂ ದಶಭಿಃ ಸೃಷ್ಟಿರಕ್ಷಣಂ ॥ ೫೩ ॥
ಜಲೇ ಜಲೇಚರೋ ಮತ್ಸ್ಯೋ ಮಹಾನದ್ಯಾಂ ಭವಿಷ್ಯಸಿ ।
ಆದಾಯ ವೇದಾನ್ವೇಗೇನ ಮಮ ತ್ವಂ ದಾತುಮರ್ಹಸಿ ॥ ೫೪ ॥
ತಥಾ ಚ ಕೃತವಾನ್ದೇವೋ ಮತ್ಸ್ಯರೂಪಂ ಜಲೇ ಮಹತ್ ।
ವೇದಾನ್ಸಮಾನಯಾಮಾಸ ದದೌ ಚ ಬ್ರಹ್ಮಣೇ ಪುರಾ ।
ಕೂರ್ಮರೂಪಂ ಪುನಃ ಕೃತ್ವಾ ಮಂದರಂ ಧಾರಯಿಷ್ಯಸಿ ॥ ೫೫ ॥
ಇತ್ಯುಕ್ತೋ ಬ್ರಹ್ಮಣಾ ವಿಷ್ಣುರ್ಲಕ್ಷ್ಮೀಸ್ತ್ವಾಂ ವರಯಿಷ್ಯತಿ ।
ಪುರಾ ಚಿತ್ರಂ ಚರಿತ್ರಂ ತೇ ಮಥನೇ ದೃಷ್ಟವಾನಹಂ ॥ ೫೬ ॥

---

೫೦. ನಾನು ಕಲ್ಪಾದಿಯಲ್ಲಿ ಜಗಳವಾಡುತ್ತಿರುವ ಬ್ರಹ್ಮನ ಬಾಯಿಯಿಂದ ಹುಟ್ಟಿರುವುದರಿಂದ ನನಗೆ ಜಗಳವು ಪ್ರಿಯವಾಗಿರುವುದು.

೫೧–೫೨. ಕಲ್ಪಾದಿಯಲ್ಲಿ ಜಗತ್ತನ್ನು ಸೃಷ್ಟಿಸುತ್ತಿರುವ ಬ್ರಹ್ಮನು ವಿಷ್ಣುವನ್ನು ಕುರಿತು, " ಹರಿಯೆ ! ವೇದಾಂತಿಯಾದ ನಾನು ಹೇಗೆ ಸೃಷ್ಟಿಸಲಿ. ನಷ್ಟವಾದ ವೇದಗಳು ಎಲ್ಲಿಗೆ ಹೋದುವೆಂಬುದನ್ನು ನಾನರಿಯೆನು. ಭೂಮಿಯು ತನ್ನ ಸ್ಥಾನದಲ್ಲಿರುರುವುದೊ ? ಅಥವಾ ಪಾತಾಳಕ್ಕೆ ಹೋಗಿರುವುದೊ ?

೫೩. ನನಗೆ ಈಗ ನೀರಿನ ಮಧ್ಯಕ್ಕೆ ಹೋಗಲು ಶಕ್ತಿಯಿಲ್ಲ. ನೀನು ಹತ್ತು ಅವತಾರಗಳಿಂದ ನಾನು ಸೃಷ್ಟಿಸಿದ ಪ್ರಪಂಚವನ್ನು ಕಾಪಾಡಬೇಕು.

೫೪. ನೀನು ಮಹಾನದಿಯ ನೀರಿನಲ್ಲಿ ಸಂಚರಿಸುವ ಮೀನಾಗಿ ಶೀಘ್ರವಾಗಿ ವೇದಗಳನ್ನು ತಂದುಕೊಡು " ಎಂದನು.

೫೫–೫೬. ಹಾಗೆಯೇ ಆ ವಿಷ್ಣುವು ನೀರಿನಲ್ಲಿ ಮಹಾಮತ್ಸ್ಯರೂಪವನ್ನು ಧರಿಸಿ ವೇದಗಳನ್ನು ತಂದು ಬ್ರಹ್ಮನಿಗೆ ಕೊಟ್ಟನು. " ನೀನು ಕೂರ್ಮರೂಪವನ್ನು ತಾಳಿ ಮಂದರಪರ್ವತವನ್ನು ಧರಿಸು. ನಿನ್ನನ್ನು ಲಕ್ಷ್ಮಿಯು ವರಿಸುವಳು. ಹಿಂದೆ ಸಮುದ್ರಮಥನ ಕಾಲದಲ್ಲಿ ನಿನ್ನ ಅದ್ಭುತಚರಿತ್ರೆಯನ್ನು ನೋಡಿರುವೆನು ". ಎಂದು ಬ್ರಹ್ಮನು ಹೇಳಿದನು.

ಯದಾ ರಸಾತಲಂ ಪ್ರಾಪ್ತಾ ಪೃಥಿವೀ ನೈವ ದೃಶ್ಯತೇ ।
ಬ್ರಹ್ಮಾಂಡಾರ್ಥೇ ಸ್ಥಾಪಿತಾ ತತ್ರ ಸಾ ನೈವ ದೃಶ್ಯತೇ ॥ ೫೭ ॥
ವಾರಾಹಂ ಕ್ರಿಯತಾಂ ರೂಪಂ ಬ್ರಹ್ಮಣಾ ಪ್ರೇರಿತಃ ಸ್ವಯಂ ।
ಮಹಾವರಾಹರೂಪಂ ಸ ಕೃತ್ವಾ ಭೂಮೇರಧೋ ಗತಃ ॥ ೫೮ ॥
ಉದ್ಧೃತ್ಯ ಚ ತದಾ ವಿಷ್ಣುರ್ದಂಷ್ಟ್ರಾಗ್ರೇಣ ವಸುಂಧರಾಂ ।
ಸ ನಿನಾಯ ಯಥಾಸ್ಥಾನಂ ಮುಸ್ತಾಮಿವ ಧರಾತಲಾತ್ ॥ ೫೯ ॥
ಅವತಾರಂ ತೃತೀಯಂ ವೈ ಹರಸ್ಯಾಪಿ ಮನೋಹರಂ ।
ಯೇನ ಸಾ ಪೃಥಿವೀ ಪೃಥ್ವೀ ಪರ್ವತೈಃ ಸಹಿತಾ ಧೃತಾ ॥ ೬೦ ॥
ಚತುರ್ಥಂ ನರಸಿಂಹಂ ವೈ ಕಥಯಾಮಿ ಸುದಾರುಣಂ ।
ಆದಿತ್ಯಾ ಅದಿತೇಃ ಪುತ್ರಾ ದಿತೇಃ ಪುತ್ರಾ ಮಹಾಬಲಾ ॥ ೬೧ ॥
ಹಿರಣ್ಯಕಶಿಪುರ್ದೈತ್ಯೋ ಹಿರಣ್ಯಾಕ್ಷೋ ಮಹಾಬಲಃ ।
ಸ್ವರ್ಗೇ ದೇವಾಃ ಸ್ಥಿತಾಃ ಸರ್ವೇ ಪಾತಾಲೇ ದೈತ್ಯದಾನವಾಃ ॥ ೬೨ ॥
ಹಿರಣ್ಯಕಶಿಪುಶ್ಚಕ್ರೇ ದೈತ್ಯೋ ರಾಜ್ಯಂ ರಸಾತಲೇ ।
ಮನುಪುತ್ರಾ ಧರಾಪೃಷ್ಠೇ ಸ್ಥಾಪಿತಾ ದೇವದಾನವೈಃ ॥ ೬೩ ॥

---

೫೭–೫೮. ಭೂಮಿಯು ಪಾತಾಳವನ್ನು ಹೊಂದಿ ಬ್ರಹ್ಮಾಂಡಕ್ಕಾಗಿ ಮಾಡಿದ ಸ್ಥಾನದಲ್ಲಿ ಕಾಣದಿರಲು ಬ್ರಹ್ಮನು ವಿಷ್ಣುವನ್ನು ಕುರಿತು ವಾರಾಹರೂಪವನ್ನು ತಾಳು ಎಂದು ಪ್ರೇರಿಸಿದನು. ಆದರಂತೆ ಅವನು ಮಹಾವಾರಾಹರೂಪವನ್ನು ಧರಿಸಿ ಭೂಮಿಯ ಕೆಳಗೆ ಹೋದನು.

೫೯. ಅವನು ಭೂಮಿಯಿಂದ ಮುಸ್ತೆಯನ್ನು ತೆಗೆಯುವಂತೆ ಹಲ್ಲಿನ ಕೊನೆಯಿಂದ ಭೂಮಿಯನ್ನು ಮೇಲಕ್ಕೆತ್ತಿ ಆದರ ಸ್ಥಳದಲ್ಲಿರಿಸಿದನು.

೬೦. ವಿಶಾಲವಾದ ಭೂಮಿಯನ್ನು ಪರ್ವತಗಳೊಡನೆ ಧರಿಸಿದ ನನ್ನ ಮೂರನೆ ಅವತಾರವು ಶಿವನಿಗೂ ಮನೋಹರವಾದುದು.

೬೧–೬೨. ನಾಲ್ಕನೆ ಭಯಂಕರವಾದ ನರಸಿಂಹಾವತಾರವನ್ನು ಹೇಳುವೆನು. ದೇವತೆಗಳು ಅದಿತಿಯ ಮಕ್ಕಳು. ಇವರು ಸ್ವರ್ಗದಲ್ಲಿ ವಾಸಮಾಡಿದರು. ಅತಿ ಬಲಿಷ್ಠರಾದ ಹಿರಣ್ಯಕಶಿಪು, ಹಿರಣ್ಯಾಕ್ಷನೆಂಬ ದೈತ್ಯರು ದಿತಿಯಮಕ್ಕಳು. ಈ ದೈತ್ಯ ದಾನವರೆಲ್ಲ ಪಾತಾಳದಲ್ಲಿದ್ದರು.

೬೩. ದೈತ್ಯನಾದ ಹಿರಣ್ಯಕಶಿಪುವು ಪಾತಾಳರಾಜ್ಯವನ್ನಾಳುತ್ತಿದ್ದನು. ದೇವದಾನವರು ಭೂಮಿಯಲ್ಲಿ ಮಾನವರನ್ನು ಸ್ಥಾಪಿಸಿದರು.

ವ್ಯವಸ್ಥಾಂ ತಾಮತಿಕ್ರಮ್ಯ ಹಿರಣ್ಯಕಶಿಪುರ್ದ್ವಿಜ ।
ರಾಜ್ಯಂ ಚಕ್ರೇ ಧರಾಪೃಷ್ಠೇ ಸುರೇಂದ್ರಂ ಸ ವಿಜಿತ್ಯ ಚ ॥ ೧೪ ॥
ಸಪ್ತದ್ವೀಪವತೀಂ ಪೃಥ್ವೀಂ ಗೃಹೀತ್ವಾ ಸಾಮರಾವತೀಂ ।
ಗೃಹೀತುಕಾಮೋ ಬುಭುಜೇ ಪುತ್ರಪೌತ್ರೈಃ ಕೃತಾದರಃ ॥ ೧೫ ॥
ಪ್ರಹ್ಲಾದಪ್ರಮುಖಾಸ್ಪುತ್ರಾಸ್ಸ ಪೀಡಯತಿ ಮಂದಧೀಃ ।
ಪುತ್ರೇಷು ಪಾಠ್ಯಮಾನೇಷು ಪ್ರಹ್ಲಾದೋಽಪಿ ಪಪಾಠ ತತ್ ॥ ೧೬ ॥
ಯೇನ ವೈ ಪಠ್ಯಮಾನೇನ ಜಾಯತೇ ತಸ್ಯ ವೇದನಾ ।
ಭುವನದ್ವಯರಾಜ್ಯೇನ ದೈತ್ಯೋ ದೇವಾನ್ನ ಮನ್ಯತೇ ॥ ೧೭ ॥
ತಪಸಾ ತೋಷಿತೋ ಬ್ರಹ್ಮಾ ದದೌ ತಸ್ಮೈ ವರಂ ಪ್ರಭುಃ ।
ಅಮರತ್ವಂ ಸ ದೇವೇಭ್ಯೋ ಮನುಷ್ಯೇಭ್ಯಃ ಸುರೋತ್ತಮ ॥ ೧೮ ॥
ತಸ್ಮಾದಪಿ ನ ಮೇ ಭೂಯಾನ್ಮರಣಂ ಯದಿ ಚೇದ್ಭವೇತ್ ।
ಕಿಂಚಿತ್ಸಿಂಹೋ ನರಃ ಕಿಂಚಿದ್ಯೋ ಭವೇದ್ಧರಣೀಧರಃ ॥ ೧೯ ॥
ತಸ್ಮಾತ್ಕರರುಹೈರ್ಭಿನ್ನೋ ಮರಿಷ್ಯೇ ನ ಧರಾತಲೇ ।
ಏವಂ ಭವಿಷ್ಯತೀತ್ಯುಕ್ತ್ವಾ ಗತೋ ಬ್ರಹ್ಮಾ ಚ ವಿಸ್ಮಯಂ ॥ ೨೦ ॥

---

೧೪. ಹಿರಣ್ಯಕಶಿಪುವು ಈ ನಿಯಮವನ್ನು ಮೀರಿ ದೇವೇಂದ್ರನನ್ನು ಜಯಿಸಿ ಭೂಮಿಯನ್ನು ಆಳುತ್ತಿದ್ದನು.

೧೫. ಅವನು ಏಳು ದ್ವೀಪಗಳುಳ್ಳ ಭೂಮಿಯನ್ನು ವಶಪಡಿಸಿಕೊಂಡು ಅಮರಾವತಿಯನ್ನೂ ಕಿತ್ತುಕೊಳ್ಳಲಿಚ್ಛೆಯುಳ್ಳವನಾಗಿ ಪುತ್ರಪೌತ್ರರೊಡನೆ ಸಂತೋಷದಿಂದ ರಾಜ್ಯವಾಳುತ್ತಿದ್ದನು.

೧೬–೧೭. ಮೂರ್ಖನಾದ ಅವನು ಪ್ರಹ್ಲಾದನೇ ಮೊದಲಾದ ಮಕ್ಕಳನ್ನು ಪೀಡಿಸಿದನು. ಮಕ್ಕಳು ಓದುತ್ತಿರಲು ಪ್ರಹ್ಲಾದನು ಪಠಿಸುವುದನ್ನು ಕೇಳಿ ಅವನಿಗೆ ತಲೆನೋವುಂಟಾಗುತ್ತಿದ್ದಿತು. ಅವನು ಭೂಮಿ ಪಾತಾಳರಾಜ್ಯಗಳಿಂದ ಮತ್ತನಾಗಿ ದೇವತೆಗಳನ್ನು ತಿರಸ್ಕರಿಸುತ್ತಿದ್ದನು.

೧೮–೨೦. ಅವನು ಬ್ರಹ್ಮನನ್ನು ಸಂತೋಷಗೊಳಿಸಿ ಅವನನ್ನು ಕುರಿತು ಯಾವ ದೇವ ಮನುಷ್ಯರಿಂದಲೂ ನನಗೆ ಮರಣವಾಗದಿರಲಿ. ಮರಣವಾಗುವುದಾದರೂ ಸ್ವಲ್ಪಭಾಗ ಮನುಷ್ಯನಾಗಿಯೂ, ಸ್ವಲ್ಪಭಾಗ ಸಿಂಹನಾಗಿಯೂ ಇರುವವನ ಉಗುರುಗಳಿಂದಾಗಲಿ. ಆದರೆ ಭೂಮಿಯಲ್ಲಾಗದಿರಲಿ. ಎಂದು ವರವನ್ನು ಕೇಳಿದನು. ಬ್ರಹ್ಮನು ಹಾಗೆಯೇ ಆಗಲೆಂದು ವಿಸ್ಮಯಗೊಂಡನು.

ಕಾಲೇನ ಗಚ್ಛತಾ ತಸ್ಯ ಸಂಜಾತೋ ವಿಗ್ರಹೋ ಮಹಾನ್ ।
ದೇವಾಃ ಕಿಂ ಮೇ ಕರಿಷ್ಯಂತಿ ವಿಷ್ಣುನಾ ಕಿಂ ಪ್ರಯೋಜನಂ ॥ ೨೧ ॥
ಯಷ್ಟವ್ಯೋಽಹಂ ಸದಾ ಯಜ್ಞೈಃ ರುದ್ರಃ ಕಿಂ ಮೇ ಕರಿಷ್ಯತಿ ।
ಏವಂ ಹಿ ವರ್ತಮಾನಸ್ಯ ಪ್ರಹ್ಲಾದಃ ಸ್ತೌತಿ ತಂ ಹರಿಂ ॥ ೨೨ ॥
ಯೇನಾಸ್ಯ ಜಾಯತೇ ಮೃತ್ಯುಃ ತಮೇವ ಸ್ಮರತೇ ಹರಿಂ ।
ಯದಾಸೌ ವಾರ್ಯಮಾಣೋಽಪಿ ವಿರೌತಿ ಚ ಹರೇ ಹರೇ ॥ ೨೩ ॥

ಚತುರ್ಭುಜಂ ಶಂಖಗದಾಸಿಧಾರಿಣಂ
ಪೀತಾಂಬರಂ ಕೌಸ್ತುಭಲಾಂಛಿತಂ ಸದಾ ।
ಸ್ಮರಾಮಿ ವಿಷ್ಣುಂ ಜಗದೇಕನಾಯಕಂ
ದದಾತಿ ಮುಕ್ತಿಂ ಸ್ಮೃತಮಾತ್ರ ಏವ ಯಃ ॥ ೨೪ ॥

ಅನೇನ ವಚಸಾ ಕ್ಷುಬ್ಧೋ ದೈತ್ಯೋ ದೈತ್ಯಾನ್ಸಿದೇಶ ಹ ।
ಮಾರಯಧ್ವಂ ತು ತಂ ದುಷ್ಟಂ ಗಜಸರ್ಪಜಲಾಗ್ನಿತಃ ॥ ೨೫ ॥

---

೨೧. ಹೀಗೆ ಕಾಲವು ಕಳೆಯುತ್ತಿರಲು ಅವನಿಗೆ ಈ ರೀತಿ ಮಹಾ ಆಗ್ರಹವುಂಟಾಯಿತು. ದೇವತೆಗಳು ನನಗೇನು ಮಾಡುವರು? ವಿಷ್ಣುವಿನಿಂದೇನು ಪ್ರಯೋಜನ?

೨೨–೨೩. ನನ್ನನ್ನು ಕುರಿತು ಜನರು ಯಾವಾಗಲೂ ಯಜ್ಞ ಮಾಡಬೇಕು. ರುದ್ರನು ನನಗೇನು ಮಾಡುವನು. ಎಂದು ಅವನು ಗರ್ವಿಸಿರುತ್ತಿರಲು ಪ್ರಹ್ಲಾದನು ಅವನನ್ನು ಕೊಲ್ಲುವ ಹರಿಯನ್ನು ಸ್ಮರಿಸಿದನು. ಹಾಗೆ ಸ್ಮರಿಸಕೂಡದೆಂದು ತಡೆದರೂ ಆ ಪ್ರಹ್ಲಾದನು ಹರಿಹರಿಯೆಂದು ಕೂಗಿದನು.

೨೪. ಅವನು "ಸ್ಮರಿಸಿದಕೂಡಲೆ ಮುಕ್ತಿಯನ್ನೀಯುವವನೂ, ನಾಲ್ಕು ತೋಳುಗಳುಳ್ಳವನೂ, ಶಂಖ, ಗದೆ, ಖಡ್ಗ ಇವುಗಳನ್ನು ಧರಿಸಿದವನೂ, ಪೀತಾಂಬರನೂ, ಕೌಸ್ತುಭಮಣಿಯಿಂದ ಚಿಹ್ನೆಗೊಂಡವನೂ ಜಗತ್ತಿಗೆ ಮುಖ್ಯ ಒಡೆಯನೂ, ಆದ ವಿಷ್ಣುವನ್ನು ಸ್ಮರಿಸುತ್ತೇನೆ" ಎಂದನು.

೨೫. ಈ ಮಾತಿನಿಂದ ಕುಪಿತನಾದ ಹಿರಣ್ಯಕಶಿಪುವು ಈ ದುಷ್ಟನಾದ ಪ್ರಹ್ಲಾದನನ್ನು ಆನೆ, ಸರ್ಪ, ನೀರು, ಅಗ್ನಿಗಳಿಂದ ಕೊಲ್ಲಿರಿ. ಎಂದು ದೈತ್ಯರಿಗೆ ಆಜ್ಞೆಮಾಡಿದನು.

ಪ್ರಹ್ಲಾದ ಉವಾಚ :—

ಗಜೇಪಿ ವಿಷ್ಣುರ್ಭುಜಗೇಽಪಿ ವಿಷ್ಣು
ರ್ಜಲೇಪಿ ವಿಷ್ಣುರ್ಜ್ವಲನೇಽಪಿ ವಿಷ್ಣುಃ ।
ತ್ವಯಿ ಸ್ಥಿತೋ ದೈತ್ಯ ಮಯಿ ಸ್ಥಿತಶ್ಚ
ವಿಷ್ಣುಂ ವಿನಾ ದೈತ್ಯಗಣೋಽಪಿ ನಾಸ್ತಿ ॥ ೭೬ ॥

ಯದಾ ಸ ಮಾರ್ಯಮಾಣೋಽಪಿ ಮೃತ್ಯುಂ ಪ್ರಾಪ್ನೋತಿ ನ ಕ್ವಚಿತ್ ।
ಹಿರಣ್ಯಕಶಿಪೋರ್ವಕ್ಷೋ ದಹ್ಯತೇ ಕ್ರೋಧವಹ್ನಿನಾ ।
ತದಾ ಶಿಕ್ಷಯಿತುಂ ಪುತ್ರಂ ಮುಖಾಗ್ರೇ ಸನ್ನಿವೇಶ್ಯ ಚ ॥ ೭೭ ॥
ವಚೋಭಿಃ ಕಠಿನೈಃ ಪುತ್ರಂ ಸ್ವಯಂ ಹಂತುಂ ಸಮುದ್ಯತಃ ।
ಧಿಕ್ತ್ವಾಂ ನಾರಾಯಣಂ ಸ್ತೌಷಿ ಮಮಾರಿಂ ಸ್ತೌಷಿ ಚೇತ್ಪುನಃ ॥ ೭೮ ॥
ಪುಷ್ಪಲಾವಂ ಲವಿಷ್ಯಾಮಿ ಶಿರಸ್ತೇಽಹಂ ವರಾಸಿನಾ ।
ಅಹಂ ವಿಷ್ಣುರಹಂ ಬ್ರಹ್ಮಾ ರುದ್ರ ಇಂದ್ರೋ ವರಂ ವದ ॥ ೭೯ ॥
ಆತ್ಮೀಯಂ ಪಿತರಂ ತ್ಯಕ್ತ್ವಾ ಕಮನ್ಯಂ ಸ್ತೌಷಿ ಬಾಲಕ ॥ ೮೦ ॥

---

೭೬. ಪ್ರಹ್ಲಾದನು ಹೇಳುತ್ತಾನೆ :—ವಿಷ್ಣುವು ಆನೆಯಲ್ಲಿಯೂ, ಹಾವಿನಲ್ಲಿಯೂ, ನೀರಿನಲ್ಲಿಯೂ, ಬೆಂಕಿಯಲ್ಲಿಯೂ, ನಿನ್ನಲ್ಲಿಯೂ, ನನ್ನಲ್ಲಿಯೂ ಇರುವನು. ವಿಷ್ಣುವಿಲ್ಲದೆ ದೈತ್ಯರೇ ಇಲ್ಲ.

೭೭–೭೯. ಆ ಪ್ರಹ್ಲಾದನು ಹೊಡೆಯುತ್ತಿದ್ದರೂ ಸಾಯದೆ ಇರಲು ಹಿರಣ್ಯಕಶಿಪುವಿನ ಎದೆಯನ್ನು ಕ್ರೋಧಾಗ್ನಿಯು ಸುಟ್ಟಿತು. ಆಗ ಅವನು ಮಗನನ್ನು ಶಿಕ್ಷಿಸಲೋಸುಗ ಮುಖದ ಮುಂದೆ ನಿಲ್ಲಿಸಿಕೊಂಡು ಕಠಿನವಾದ ಮಾತುಗಳಿಂದ ಬಯ್ಯುತ್ತ ತಾನೇ ಹೊಡೆಯಲುದ್ಯುಕ್ತನಾದನು ". ನಾರಾಯಣನನ್ನು ಸ್ತುತಿಸುವ ನಿನಗೆ ನಿಂದೆಯಾಗಲಿ. ನೀನು ಮರಳಿ ನನ್ನ ಶತ್ರುವನ್ನು ಹೊಗಳಿದರೆ ನಿನ್ನ ತಲೆಯನ್ನು ಹರಿತವಾದ ಕತ್ತಿಯಿಂದ ಹೂವನ್ನು ಕತ್ತರಿಸಿದಂತೆ ಕತ್ತರಿಸುವೆನು. ನಾನೇ ವಿಷ್ಣು, ಬ್ರಹ್ಮ, ರುದ್ರ, ಇಂದ್ರರಾಗಿರುವೆನು. ವರವನ್ನು ಕೇಳಿಕೊ.

೮೦. ಎಲಾ ಹುಡುಗ! ನಿನ್ನ ತಂದೆಯನ್ನು ಬಿಟ್ಟು ಬೇರೆಯಾರನ್ನು ಹೊಗಳುತ್ತಿದ್ದೀಯೆ?

ಯದಾ ನ ಪಠತೇ ಬಾಲಃ ಸ್ತೌತಿ ನೋ ಪಿತರಂ ಸ್ವಕಂ ।
ದಂಡೇನಾಹತ್ಯ ಗುರುಣಾ ಪ್ರಹ್ಲಾದಃ ಪ್ರೇರಿತಃ ಪುನಃ ।
ವದೈಕಂ ವಚನಂ ಶಿಷ್ಯ ದೇಹಿ ಮೇ ತೇ ಗುರುದಕ್ಷಿಣಾಂ ॥ ೪೧ ॥
ಯಥಾ ಮೇ ತುಷ್ಯತೇ ಸ್ವಾಮೀ ದದಾತಿ ವಿಪುಲಂ ಧನಂ ॥ ೪೨ ॥
ಪ್ರಹ್ಲಾದ ಉವಾಚ :—
ಪ್ರಹರಸ್ವ ಪ್ರಥಮಂ ಮಾಂ ಕರಿಷ್ಯೇ ವಚನಂ ಗುರೋ ।
ಸ್ತೌಮಿ ವಿಷ್ಣುಮಹಂ ಯೇನ ತ್ರೈಲೋಕ್ಯಂ ಸಚರಾಚರಂ ॥ ೪೩ ॥
ಕೃತಂ ಸಂವರ್ಧಿತಂ ಶಾಂತಂ ಸ ಮೇ ವಿಷ್ಣುಃ ಪ್ರಸೀದತು ।
ಬ್ರಹ್ಮಾ ವಿಷ್ಣುರ್ಹರೋ ವಿಷ್ಣುರಿಂದ್ರೋ ವಾಯುರ್ಯಮೋಽನಲಃ ॥ ೪೪ ॥
ಪ್ರಕೃತ್ಯಾದೀನಿ ತತ್ವಾನಿ ಪುರುಷಂ ಪಂಚವಿಂಶಕಂ ।
ಪಿತೃದೇಹೇ ಗುರೋರ್ದೇಹೇ ಮಮ ದೇಹೇಽಪಿ ಸಂಸ್ಥಿತಃ ॥ ೪೫ ॥
ಏವಂ ಜಾನನ್ಕಥಂ ಸ್ತೌಮಿ ಮ್ರಿಯಮಾಣಂ ನರಾಧಮಂ ॥ ೪೬ ॥
ಗುರುರುವಾಚ :—
ನರೇಷು ಕೋಽಧಮಃ ಶಿಷ್ಯ ಜನ್ಮಾದಿಮರಣೇಽಧಮ ।
ಕಥಂ ನ ಪಿತರಂ ಸ್ತೌಷಿ ಮ್ರಿಯಮಾಣೋ ಹರಿಂ ಹರಿಂ ॥ ೪೭ ॥

---

೪೧. ಪ್ರಹ್ಲಾದನು ತನ್ನ ತಂದೆಯನ್ನು ಹೊಗಳದಿರಲು ಗುರುವು ದೊಣ್ಣೆಯಿಂದ ಅವನನ್ನು ಹೊಡೆದು ಹೊಗಳೆಂದು ಹೇಳಿದನು. "ಶಿಷ್ಯ! ನೀನು ನನ್ನದೊಂದು ಮಾತನ್ನು ಹೇಳಿ ಗುರುದಕ್ಷಿಣೆಯನ್ನು ಕೊಡು ಎಂದನು.

೪೨. ರಾಜನಾದ ನಿನ್ನ ತಂದೆಯು ಸಂತುಷ್ಟನಾದರೆ ನನಗೆ ಬಹು ಹಣವನ್ನು ಕೊಡುವನು.

೪೩–೪೬. ಪ್ರಹ್ಲಾದನು ಹೇಳುತ್ತಾನೆ:—ಗುರುವೆ! ಮೊದಲು ಹೊಡೆ. ನಾನು ನಿನ್ನ ಮಾತನ್ನು ನೆರವೇರಿಸುವೆನು. ಚರಾಚರಾತ್ಮಕವಾದ ಮೂರು ಲೋಕಗಳನ್ನು ಸೃಷ್ಟಿಸಿ ಬೆಳೆಸಿದವನೂ, ಶಾಂತನೂ ಆದ ವಿಷ್ಣುವನ್ನು ನಾನು ಹೊಗಳುವೆನು. ಅವನು ನನ್ನಲ್ಲಿ ಸಂತುಷ್ಟನಾಗಲಿ. ಬ್ರಹ್ಮ, ಶಿವ, ಇಂದ್ರ, ವಾಯು, ಯಮ, ಅಗ್ನಿ, ಇಪ್ಪತ್ತನಾಲ್ಕು ಪ್ರಕೃತ್ಯಾದಿ ತತ್ವಗಳು, ಪುರುಷ ಇವರೆಲ್ಲ ವಿಷ್ಣುವೆ. ಅವನು ಪಿತೃ, ಗುರು, ನನ್ನ ದೇಹಗಳಲ್ಲಿರುವನು. ಇದನ್ನೆಲ್ಲ ಅರಿತ ನಾನು ಸಾಯುತ್ತಿರುವ ನೀಚ ಮಾನವನಾದ ತಂದೆಯನ್ನು ಹೇಗೆ ಹೊಗಳಲಿ.

೪೭. ಗುರುವು ಹೇಳುತ್ತಾನೆ :—ಶಿಷ್ಯ ನೀನು ನರರಲ್ಲಿ ಎಂತಹ ಅಧಮನು ? ನೀಚ ! ನೀನು ಜನ್ಮ ಮರಣಾದಿಗಳಲ್ಲಿ ತಂದೆಯನ್ನು ಏಕೆ ಸ್ಮರಿಸುವುದಿಲ್ಲ. ಸಾಯುತ್ತ ಹರಿ ಹರಿ ಎಂದು ಹೇಳುತ್ತೀಯಲ್ಲ.

ಪ್ರಹ್ಲಾದ ಉವಾಚ :—
ಭೋಜನೇ ಶಯನೇ ಯಾನೇ ಜ್ವರೇ ನಿಷ್ಠೀವನೇ ರಣೇ ।
ಹರಿರಿತ್ಯಕ್ಷರಂ ನಾಸ್ತಿ ಮರಣೇಽಸೌ ನರಾಧಮಃ ॥ ೮೮ ॥
ಭಯೇ ರಾಜಕುಲೇ ಯುದ್ಧೇ ವ್ಯಾಧೌ ಸ್ತ್ರೀಸಂಗಮೇ ವನೇ ।
ಅಶಕ್ತೌ ವಾಽಥ ಸನ್ಯಾಸೇ ಮರಣೇ ಭೂಮಿಸಂಸ್ಥಿತಾಃ ।
ಸ್ಮರಂತಿ ಮಾತರಂ ಮೂರ್ಖಾಃ ಪಿತರಂ ಚ ನರಾಧಮಾಃ ॥ ೮೯ ॥
ಮಾತಾ ನಾಸ್ತಿ ಪಿತಾ ನಾಸ್ತಿ ನಾಸ್ತಿ ಮೇ ಸ್ವಜನೋ ಜನಃ ।
ಹರಿಂ ವಿನಾ ನ ಕೋಽಪ್ಯಸ್ತಿ ಯದ್ಯುಕ್ತಂ ತದ್ವಿಧೀಯತಾಂ ॥ ೯೦ ॥
ಇತ್ಯಾದಿವಚನೈಃ ಕ್ರುದ್ಧೋ ಹಂತುಂ ದೈತ್ಯಃ ಸಮುತ್ಥಿತಃ ।
ತದಾ ಮಾತಾ ಸಮಾಗತ್ಯ ಪುತ್ರಸ್ಯ ಪುರತಃ ಸ್ಥಿತಾ ॥ ೯೧ ॥
ಭ್ರಾತರಃ ಸ್ವಜನೋ ಭಗಿನೀ ಭಾಷತೇ ಮಾ ಹರಿಂ ವದ ।
ಅಹಂ ಮಾತಾ ಸ್ವಸಾ ಚೇಯಂ ಭ್ರಾತರಸ್ಸ್ವಜನೋ ಜನಃ ।
ಯಥಾ ಸಂಮಿಲಿತೈರ್ವತ್ಸ ಸ್ಥೀಯತೇ ಬಹುವಾಸರಂ ॥ ೯೨ ॥

---

೮೮. ಪ್ರಹ್ಲಾದನು ಹೇಳುತ್ತಾನೆ :—ನೀಚನಾದ ಈ ನನ್ನ ತಂದೆಯು ಭೋಜನ, ಶಯನ, ಪ್ರಯಾಣ, ಜ್ವರ, ಉಗುಳುವುದು, ಯುದ್ಧ, ಮರಣ ಇವುಗಳಲ್ಲಿ ಹರಿಯೆಂಬ ಶಬ್ದವನ್ನು ಉಚ್ಚರಿಸುವುದಿಲ್ಲ.

೮೯. ಮೂಢರಾದ ನೀಚ ಮನುಷ್ಯರು ಭಯ, ರಾಜಗೃಹ, ಯುದ್ಧ, ರೋಗ, ಸ್ತ್ರೀಸಂಗ, ಅಶಕ್ತಿ, ಸನ್ಯಾಸ, ಮರಣ ಇವುಗಳಲ್ಲಿ ತಾಯಿ ತಂದೆಗಳನ್ನು ಸ್ಮರಿಸುತ್ತಾರೆ.

೯೦. ನನಗೆ ಹರಿಯನ್ನು ಬಿಟ್ಟು ತಂದೆ ತಾಯಿಗಳೂ, ಬಂಧುಗಳೂ ಯಾರೂ ಇಲ್ಲ. ನಿಮಗೆ ಯಾವುದು ಉಚಿತವೆಂದು ತೋರುವುದೋ ಅದನ್ನು ಮಾಡಿರಿ".

೯೧. ಇವೇ ಮೊದಲಾದ ಮಾತುಗಳಿಂದ ಕೋಪಗೊಂಡ ಹಿರಣ್ಯಕಶಿಪುವು ಆ ಪ್ರಹ್ಲಾದನನ್ನು ಕೊಲ್ಲಲುದ್ಯುಕ್ತನಾಗಲು ತಾಯಿಯು ಬಂದು ಮಗನ ಮುಂದೆ ನಿಂತಳು.

೯೨. ಮಗು ! ಸಹೋದರರೂ, ಬಂಧುಗಳೂ, ಸಹೋದರಿಯರೂ ಹರಿಯೆಂದು ಹೇಳಬೇಡವೆನ್ನುತ್ತಾರೆ. ನಾನೂ, ನೀನೂ ಇವರೆಲ್ಲರೂ ಬಹುಕಾಲ ಒಟ್ಟಿಗಿರೋಣ.

ಪ್ರಹ್ಲಾದ ಉವಾಚ :—
ಮಾತಾ ಮೇ ಕಾ ಸ್ವಸಾ ಮೇ ಕಾ ಭ್ರಾತರಃ ಕೇ ಪಿತಾ ಚ ಕಃ ।
ಸ್ವಜನಂ ಶೃಣು ಮೇ ಮಾತಃ ಸಹಿತೈಃ ಸ್ಥೀಯತೇ ಸದಾ ॥ ೯೩ ॥
ಯಸ್ಯಾಃ ಪೀತಂ ಮಯಾ ಮೂತ್ರಂ ಪುರೀಷಮುದರೇ ಬಹು ।
ಸಾ ಮಾತಾ ನರಕೋಽಸ್ಮಾಕಮಗ್ರೇ ವಕ್ತುಂ ನ ಶಕ್ಯತೇ ॥ ೯೪ ॥
ನಿರ್ಮಿತೋ ನ ದ್ವಿತೀಯಸ್ತು ನಿರ್ಮಿತೋ ವಿಶ್ವಕರ್ಮಣಾ ।
ತ್ವಾದೃಶಸ್ತು ಪುಮಾನ್ಕಶ್ಚಿದ್ಯಸ್ಯ ನೋ ಹೃದಯೇ ಹರಿಃ ॥ ೯೫ ॥
ದಶಮಾಸಂ ಧ್ರುವಂ ಮನ್ಯೇ ಮೂತ್ರಂ ಪಾಸ್ಯತಿ ತರ್ಪಿತಃ ।
ಭ್ರಾತರೋ ಭ್ರಾತರಸ್ಸತ್ಯಂ ಗರ್ಭೇಽಪಿ ಸ್ಯುಃ ಕಥಂ ಯದಿ ॥ ೯೬ ॥
ಯುಧ್ಯತಸ್ತಾನ್ಕಥಂ ಮಾತಾ ವರಾಕೀ ವಾರಯಿಷ್ಯತಿ ।
ಸ್ವಜನೋ ದೃಶ್ಯತೇ ವೃದ್ಧಃ ಪರೇಷು ಪಂಡಿತಾಯತೇ ॥ ೯೭ ॥
ಕುಟುಂಬಂ ಭಣ್ಯತೇ ಕಸ್ಮಾದ್ಯಚ್ಚ ನಾಯಾತಿ ಯಾತಿ ಚ ।
ಬಂಧನಂ ಚ ಕುಟುಂಬಸ್ಯ ಜಾಯತೇ ನರಕಾಯ ನಃ ॥ ೯೮ ॥

---

೯೩. ಪ್ರಹ್ಲಾದನು ಹೇಳುತ್ತಾನೆ :—ಅಮ್ಮ ! ನನಗೆ ತಾಯಿಯೂ, ತಂದೆಯೂ ಸಹೋದರಿಯೂ, ಸಹೋದರರೂ, ಬಂಧುಗಳೂ ಯಾರು ? ನನ್ನೊಡನೆ ಯಾವಾಗಲೂ ಇರುವ ಅವರಾರೆಂಬುದನ್ನು ಹೇಳುವೆನು ಕೇಳು.

೯೪. ಗರ್ಭವಾಸದಲ್ಲಿ ಯಾವಳ ಮೂತ್ರ ಪುರೀಷಗಳನ್ನು ಬಹಳವಾಗಿ ಕುಡಿದಿರುವೆನೊ, ಅವಳು ನನಗೆ ನರಕಪ್ರಾಯಳು. ನಿನ್ನ ಮುಂದೆ ಹೇಳಲು ಸಾಧ್ಯವಿಲ್ಲ.

೯೫. ಹೃದಯದಲ್ಲಿ ವಿಷ್ಣುವಿಲ್ಲದ ನಿನ್ನಂತಹ ಮತ್ತೊಬ್ಬನನ್ನು ವಿಶ್ವಕರ್ಮನು ಸೃಷ್ಟಿಸಲಿಲ್ಲ.

೯೬–೯೮. ಹತ್ತು ತಿಂಗಳು ಗರ್ಭದಲ್ಲಿ ವಾಸಿಸುತ್ತ ಮೂತ್ರವನ್ನು ಕುಡಿಯುತ್ತ ತೃಪ್ತಿಗೊಂಡ ಅಣ್ಣತಮ್ಮಂದಿರು ಹೇಗೆ ಜಗಳವಾಡುತ್ತಿರುತ್ತಾರೆ ? ಹಾಗೆ ಜಗಳ ವಾಡುತ್ತಿರುವ ಆ ಮಕ್ಕಳನ್ನು ದುಃಖಿತಳಾದ ತಾಯಿಯು ಹೇಗೆ ತಡೆಯುವಳು ? ವೃದ್ಧನಾದ ಬಂಧುವು ಪರರಿಗೆ ಉಪದೇಶಮಾಡಲು ಪಂಡಿತನಂತಾಗುವನು. ಯಾವ ನೊಡನೆ ಯಾವುದು ಬರುವುದೂ, ಹೋಗುವುದೂ ಇಲ್ಲವೊ ಅದು ಕುಟುಂಬವೆಂದು ಹೇಗೆ ಹೇಳಿಸಿಕೊಳ್ಳುವುದು ? ನಮಗೆ ಕುಟುಂಬದ ಸಂಬಂಧವುನರಕವನ್ನುಂಟು ಮಾಡುವುದು.

ಮಾತಾ ಮೇ ವಿದ್ಯತೇ ಚಾನ್ಯಾ ಪಿತಾನ್ಯೋ ಭ್ರಾತರಶ್ಚ ಯೇ ।
ಸ್ವಸಾ ಸ್ವಜನಸಂಬಂಧಂ ಜ್ಞಾತ್ವಾ ಮುಕ್ತಿಮವಾಪ್ನುಯಾತ್ ॥ ೯೯ ॥
ಮಾತಾ ಪ್ರಕೃತಿರಸ್ಮಾಕಂ ಸ್ವಸಾ ಬುದ್ಧಿರ್ನಿಗದ್ಯತೇ ।
ಅಹಂಕಾರಸ್ತತೋ ಜಾತೋ ಯೋಽಹಮಿತ್ಯನುಮೀಯತೇ ॥ ೧೦೦ ॥
ತನ್ಮಾತ್ರಾಃ ಸೋದರಾಃ ಪಂಚ ಯೇ ಗಚ್ಛಂತಿ ಸಹೈವ ಮೇ ।
ಏಷಾ ಪ್ರಕೃತಿರಸ್ಮಾಕಂ ವಿಕಾರಃ ಸ್ವಜನೋ ಮಮ ॥ ೧೦೧ ॥
ಏತೇಷಾಂ ವಾಹಕೋ ಯಸ್ತು ಪುರುಷಃ ಪಂಚವಿಂಶಕಃ ।
ಸ ಮೇ ಪಿತಾ ಶರೀರೇಽಸ್ಮಿನ್ಪರಮಾತ್ಮಾ ಹರಿಃ ಸ್ಥಿತಃ ॥ ೧೦೨ ॥
ಯದ್ಯಸೌ ಚಿಂತ್ಯತೇ ಚಿತ್ತೇ ದೃಶ್ಯತೇ ಹೃದಯೇ ಹರಿಃ ।
ಅಣಿಮಾದಿಗುಣೈಶ್ವರ್ಯಂ ಪದಂ ತಸ್ಯೈವ ಜಾಯತೇ ॥ ೧೦೩ ॥
ಭವತಾ ಸಂಮತಂ ರಾಜ್ಯಂ ತನ್ಮೇ ನಿತ್ಯಂ ತೃಣೈಃ ಸಮಂ ।
ಯತ್ರ ನೋ ಪೂಜ್ಯತೇ ವಿಷ್ಣುರ್ಬ್ರಹ್ಮಾ ರುದ್ರೋಽನಿಲೋಽನಲಃ ॥ ೧೦೪ ॥
ಪ್ರತ್ಯಕ್ಷೋ ದೃಶ್ಯತೇ ಯಸ್ತು ನಿರಾಲಂಬೋ ಭ್ರಮತ್ಯಸೌ ।
ಸ ಏವ ಭಗವಾನ್ವಿಷ್ಣುರ್ಯ ಏತೇ ಗಗನೇ ಸ್ಥಿತಾಃ ॥ ೧೦೫ ॥
ಧ್ರುವೇ ಬದ್ಧಾ ಗ್ರಹಾಃ ಸರ್ವೇ ಯ ಏತೇಽಪ್ಯುಡವಃ ಸ್ಥಿತಾಃ ।
ತೇ ಸರ್ವೇ ವಿಷ್ಣುವಚಸಾ ನ ಪತಂತಿ ಧರಾತಲೇ ॥ ೧೦೬ ॥

---

೯೯. ನನಗೆ ಬೇರೆ ತಾಯಿ, ತಂದೆ, ಸಹೋದರ, ಸಹೋದರಿ, ಬಂಧು ಬಳಗಗಳಿರುವರು. ಅವರ ಸಂಬಂಧವನ್ನರಿತವನು ಮುಕ್ತನಾಗುವನು.

೧೦೦. ನಮಗೆ ತಾಯಿಯು ಪ್ರಕೃತಿ, ಸಹೋದರಿಯು ಬುದ್ಧಿ. ನಾನು ಎಂಬುದೇ ಅಹಂಕಾರವು.

೧೦೧. ನನ್ನೊಡನೆ ಹೋಗುವ ಈ ಐದು ತನ್ಮಾತ್ರೆಗಳು ಸಹೋದರರು, ಈ ಪ್ರಕೃತಿಯು ನನ್ನ ಬಂಧುವು.

೧೦೨. ಇವುಗಳನ್ನು ಪ್ರೇರಿಸುವ ಇಪ್ಪತ್ತೈದನೆಯ ತತ್ವವಾದ ಪುರುಷನೆಂಬ ಹರಿಯು ನನ್ನ ದೇಹದಲ್ಲಿರುವನು, ಅವನೇ ನನ್ನ ತಂದೆ.

೧೦೩. ಈ ಹರಿಯನ್ನು ಮನಸ್ಸಿನಲ್ಲಿ ಧ್ಯಾನಿಸುವವನೂ, ಹೃದಯದಲ್ಲಿ ನೋಡುವವನೂ ಅಣಿಮಾದ್ಯೈಶ್ವರ್ಯವುಳ್ಳಸ್ಥಾನವನ್ನು ಪಡೆಯುವನು.

೧೦೪. ವಿಷ್ಣು, ಬ್ರಹ್ಮ, ರುದ್ರ, ವಾಯು, ಅಗ್ನಿಗಳನ್ನು ಪೂಜಿಸದಿರುವ ನಿಮಗಿಷ್ಟವಾದ ರಾಜ್ಯವು ನನಗೆ ಹುಲ್ಲಿಗೆ ಸಮಾನವಾದುದು.

೧೦೫—೧೦೬. ಆಶ್ರಯರಹಿತನಾಗಿ ತಿರುಗುತ್ತ ಪ್ರತ್ಯಕ್ಷವಾಗಿ ಕಾಣುತ್ತಿರುವ ಇವನೇ ಆ ಪೂಜ್ಯನಾದ ವಿಷ್ಣುವು. ಆಕಾಶದಲ್ಲಿರುವ ಸಮಸ್ತ ಗ್ರಹಗಳೂ, ನಕ್ಷತ್ರಗಳೂ ಆ ವಿಷ್ಣುವಿನ ಮಾತಿನಿಂದಲೆ ಭೂಮಿಯಲ್ಲಿ ಬೀಳುವುದಿಲ್ಲ.

ಕಾಲೇ ವಿನಾಶಃ ಸರ್ವೇಷಾಂ ತೇನೈವ ವಿಹಿತಃ ಸ್ವಯಂ ।
ಇತಿ ಸಂಚಿಂತ್ಯ ಮೇ ನಾಸ್ತಿ ಭವದ್ಭ್ಯೋ ಮರಣಾದ್ಭಯಂ ॥ ೧೦೭ ॥
ಇತಿ ತದ್ವಚನಸ್ಯಾಂತೇ ಪದಾ ಹತ್ವಾ ಪಿತಾಽಬ್ರವೀತ್ ।
ಕುತ್ರಾಽಸೌ ಹನ್ಮಿ ತಂ ಪೂರ್ವಂ ಪಶ್ಚಾತ್ತ್ವಾಂ ಹರಿಭಾಷಿಣಂ ॥ ೧೦೮ ॥

ಪ್ರಹ್ಲಾದ ಉವಾಚ :—

ಪೃಥಿವ್ಯಾದೀನಿ ಭೂತಾನಿ ತಾನ್ಯೇವ ಭಗವಾನ್ಹರಿಃ ।
ಸ್ಥಲೇ ಜಲೇ ಕಿಂ ಬಹುನಾ ಸರ್ವಂ ವಿಷ್ಣುಮಯಂ ಜಗತ್ ॥ ೧೦೯ ॥
ತೃಣೇ ಕಾಷ್ಠೇ ಗೃಹೇ ಕ್ಷೇತ್ರೇ ದ್ರವ್ಯೇ ದೇಹೇ ಸ್ಥಿತೋ ಹರಿಃ ।
ಜ್ಞಾಯತೇ ಜ್ಞಾನಯೋಗೇನ ದೃಶ್ಯತೇ ಕಿಂ ನು ಚಕ್ಷುಷಾ ॥ ೧೧೦ ॥
ಬ್ರಹ್ಮಾಲಯೇ ಯಾತಿ ರಸಾತಲೇ ವಾ
ಧರಾತಲೇಽಸೌ ಭ್ರಮತಿ ಕ್ಷಣೇನ ।
ಆಘ್ರಾತಿ ಗಂಧಂ ವಿದಧಾತಿ ಸರ್ವಂ
ಶೃಣೋತಿ ಜಾನಾತಿ ಸ ಚಾತ್ರ ವಿಷ್ಣುಃ ॥ ೧೧೧ ॥

---

೧೦೭. ಆ ವಿಷ್ಣುವು ಸಕಲವಸ್ತುಗಳಿಗೂ ಸಕಾಲದಲ್ಲಿ ನಾಶವನ್ನು ವಿಧಿಸಿರುವನು. ಇದನ್ನು ಆಲೋಚಿಸಿ ನನಗೆ ಸಾವಿನಿಂದ ಭಯವಿಲ್ಲ.

೧೦೮. ತಂದೆಯು ಈ ಮಾತಿನ ಕೊನೆಯಲ್ಲಿ ಅವನನ್ನು ಕಾಲಿನಿಂದ ಒದೆದು, " ಈ ವಿಷ್ಣುವು ಎಲ್ಲಿರುವನು ? ಅವನನ್ನು ಮೊದಲು ಕೊಲ್ಲುವೆನು. ಅನಂತರ ಹರಿಯೆಂದು ಹೇಳುವ ನಿನ್ನನ್ನು ವಧಿಸುವೆನು". ಎಂದನು.

೧೦೯. ಪ್ರಹ್ಲಾದನು ಹೇಳುತ್ತಾನೆ :—ಪೃಥಿವ್ಯಾದಿ ಪಂಚಮಹಾಭೂತಗಳು ವಿಷ್ಣುವೇ, ಅವನು ಸ್ಥಳ, ಜಲ ಇವುಗಳಲ್ಲೆಲ್ಲ ಇರುವನು. ಈ ಜಗತ್ತೆಲ್ಲ ವಿಷ್ಣುವಿನ ರೂಪವಾದುದು.

೧೧೦. ಆ ಹರಿಯು ಹುಲ್ಲು, ಕಟ್ಟಿಗೆ, ಮನೆ, ಕ್ಷೇತ್ರ, ದ್ರವ್ಯ, ದೇಹ ಇವುಗಳಲ್ಲಿರುವನು. ಅವನನ್ನು ಜ್ಞಾನದೃಷ್ಟಿಯಿಂದ ನೋಡಲು ಸಾಧ್ಯವೇ ಹೊರತು ಚರ್ಮಚಕ್ಷುಸ್ಸಿನಿಂದ ನೋಡಲು ಸಾಧ್ಯವೇನು ?

೧೧೧. ವಿಷ್ಣುವು ಸತ್ಯಲೋಕ, ಪಾತಾಳ, ಭೂಮಿ ಇವುಗಳಲ್ಲಿ ಒಂದು ಕ್ಷಣದಲ್ಲಿ ಸಂಚರಿಸುವನು. ಅವನು ಗಂಧವನ್ನು ಮೂಸಿ ನೋಡುವನು. ಸಕಲವನ್ನು ನಿರ್ಮಿಸುವನು. ಎಲ್ಲವನ್ನು ಕೇಳುವನು. ತಿಳಿಯುವನು.

ಇತ್ಯುಕ್ತಃ ಸಹಜಾಂ ಮಾಯಾಂ ತ್ಯಕ್ತ್ವಾ ಸಿಂಹಾಸನೋತ್ಥಿತಃ ।
ದೃಢಂ ಪರಿಕರಂ ಬದ್ಧ್ವಾ ಖಡ್ಗಂ ಚಾಕೃಷ್ಯ ಚೋಜ್ಜ್ವಲಂ ॥ ೧೧೨ ॥
ಹತ್ವಾ ತಂ ಫಲಕಾಗ್ರೇಣ ಬಭಾಷೇ ದುಃಸಹಂ ವಚಃ ।
ಇದಾನೀಂ ಸ್ಮರ ರೇ ವಿಷ್ಣುಂ ನೋಚೇಜ್ಜ್ವಲಿತಕುಂಡಲಂ ।
ಪತಿಷ್ಯತಿ ಶಿರೋ ಭೂಮೌ ಫಲಂ ಪಕ್ವಂ ಯಥಾ ನಗಾತ್ ॥ ೧೧೩ ॥
ನೋ ಚೇದ್ದರ್ಶಯ ತಂ ವಿಷ್ಣುಮಸ್ಮಾತ್ಸ್ತಂಭಾದ್ವಿನಿರ್ಗತಂ ।
ಪ್ರಹ್ಲಾದಸ್ತು ಭಯಂ ತ್ಯಕ್ತ್ವಾ ಚಕ್ರೇ ಪದ್ಮಾಸನಂ ಭುವಿ ॥ ೧೧೪ ॥
ವಿಧಾಯ ಕಂಧರಾಂ ನೇತುಮುಚ್ಚೈಃ ಶ್ವಾಸಂ ನಿರುಧ್ಯ ಚ ।
ಹೃದಿ ಧ್ಯಾತ್ವಾ ಹರಿಂ ದೇವಂ ಮರಣಾಯೋನ್ಮುಖಃ ಸ್ಥಿತಃ ॥ ೧೧೫ ॥
ಪ್ರಭೋ ಮಯಾ ತದಾ ದೃಷ್ಟಮಾಶ್ಚರ್ಯಂ ಗಗನಾದ್ಭುವಿ ।
ಪುಷ್ಪಮಾಲಾ ಸ್ಥಿತಾ ಕಂಠೇ ಪ್ರಹ್ಲಾದಸ್ಯ ಸ್ವಯಂ ಗತಾ ॥ ೧೧೬ ॥
ಗಗನಂ ವ್ಯಾಪ್ಯಮಾನಂ ಚ ಕಿಂ ಕಿಮೇವಂ ಕೃತಂ ಜನೈಃ ।
ಝುಟಿತಿ ತ್ರುಟ್ಯತಿ ಸ್ತಂಭಾಚ್ಛಬ್ದೇನ ಕ್ಷುಭಿತೋ ಜನಃ ॥ ೧೧೭ ॥

---

೧೧೨–೧೧೫. ಪ್ರಹ್ಲಾದನು ಹೀಗೆ ಹೇಳಲು ಹಿರಣ್ಯಕಶಿಪುವು ತನ್ನ ಸ್ವಾಭಾವಿಕ ಮಾಯೆಯನ್ನು ತ್ಯಜಿಸಿ ಸಿಂಹಾಸನದಿಂದೆದ್ದು ದಟ್ಟಿಯನ್ನು ಬಿಗಿಯಾಗಿ ಕಟ್ಟಿ ಝಳಪಿಸುತ್ತಿರುವ ಖಡ್ಗವನ್ನು ಎಳೆದು ಅದನ್ನು ಗುರಾಣಿಯ ತುದಿಯಿಂದ ಹೊಡೆದು ಸಹಿಸಲಾಗದ ಈ ಮಾತನ್ನಾಡಿದನು. " ಎಲೈ ! ನೀನೀಗ ವಿಷ್ಣುವನ್ನು ಸ್ಮರಿಸು. ಇಲ್ಲದಿದ್ದರೆ ನಿನ್ನ ಕುಂಡಲಗಳಿಂದ ವಿರಾಜಿಸುವ ತಲೆಯು ಮಾಗಿದ ಹಣ್ಣು ಮರದಿಂದ ನೆಲದಲ್ಲಿ ಬೀಳುವಂತೆ ಬೀಳುವುದು. ಇಲ್ಲದಿದ್ದರೆ ಈ ಸ್ತಂಭದಿಂದ ಹೊರಟ ಆ ವಿಷ್ಣುವನ್ನು ತೋರಿಸು". ಪ್ರಹ್ಲಾದನು ಭಯವನ್ನು ತ್ಯಜಿಸಿ ಭೂಮಿಯ ಮೇಲೆ ಪದ್ಮಾಸನದಿಂದ ಕುಳಿತು ಕುತ್ತಿಗೆಯನ್ನು ನೀಳವಾಗಿ ಮಾಡಿ ಶ್ವಾಸವನ್ನು ಪಡೆದು ಮನಸ್ಸಿನಲ್ಲಿ ಹರಿಯನ್ನು ಧ್ಯಾನಿಸಿ ಮರಣೋನ್ಮುಖನಾದನು.

೧೧೬. ಸ್ವಾಮಿ ! ಆಗ ನಾನೊಂದು ಆಶ್ಚರ್ಯವನ್ನು ಕಂಡೆನು. ಒಂದು ಪುಷ್ಪಮಾಲೆಯು ಆಕಾಶದಿಂದ ನೆಲಕ್ಕೆ ಬಿದ್ದು ಪ್ರಹ್ಲಾದನ ಕುತ್ತಿಗೆಯನ್ನು ತಾನಾಗಿಯೇ ಸೇರಿತು.

೧೧೭–೧೧೮. ಕೂಡಲೆ ಸ್ತಂಭವು ಒಡೆಯಲು ಅಲ್ಲಿರುವ ಜನರು ಆ ಶಬ್ದದಿಂದ ಹೆದರಿ ಇದೇನು ? ಭೂಮಿಯು ಪಾತಾಳಕ್ಕೆ ಹೋಗುವುದೊ ? ಆಕಾಶವು ಭೂಮಿಗೆ

ಧರಣೀ ಯಾತಿ ಪಾತಾಲಂ ದ್ಯೌರ್ವಾ ಭೂಮಿಂ ಸಮೇಷ್ಯತಿ ।
ಪತಿಷ್ಯತಿ ಶಿರೋ ಭೂಮೌ ಖಡ್ಗಘಾತಾಹತಂ ನು ಕಿಂ ॥ ೧೧೮ ॥
ತಾವತ್ಸ್ತಂಭಾದ್ವಿನಿಷ್ಕ್ರಾಂತಃ ಸಿಂಹನಾದೋ ಭಯಂಕರಃ ।
ಭೂಮೌ ನಿಪತಿತಾಃ ಸರ್ವೇ ದೈತ್ಯಾಃ ಶಬ್ದೇನ ಮೂರ್ಛಿತಾಃ ॥ ೧೧೯ ॥
ಹಿರಣ್ಯಕಶಿಪೋರ್ಹಸ್ತಾತ್ಖಡ್ಗಚರ್ಮ ಪಪಾತ ಚ ।
ನ ಸ ಜಾನಾತಿ ಕಿಂ ಕಿಂ ಕಿಮೇತದಿತಿ ಪುನಃಪುನಃ ॥ ೧೨೦ ॥
ಉತ್ಥಿತೋ ವೀಕ್ಷತೇ ಯಾವತ್ತಾವತ್ಪಶ್ಯತಿ ತಂ ಹರಿಂ ।
ಅಧೋ ನರಂ ಸ್ಥಿತಂ ಸಿಂಹಮುಪರಿಷ್ಟಾದ್ವಿಭೀಷಣಂ ॥ ೧೨೧ ॥
ದಂಷ್ಟ್ರಾಕರಾಳವದನಂ ಲೇಲಿಹಾನಮಿವಾಂಬರಂ ।
ಜಾಜ್ವಲ್ಯಮಾನವಪುಷಂ ಪುಚ್ಛಾಚ್ಛೋಟಿತಮಸ್ತಕಂ ॥ ೧೨೨ ॥
ಮಹಾಕಂಠಕೃತಾರಾವಂ ಸಶಬ್ದಮಿವ ತೋಯದಂ ।
ಸಮುಚ್ಛ್ರವಸಿತಕೇಶಾಂತಂ ದುರ್ನಿರೀಕ್ಷ್ಯಂ ಸುರಾಸುರೈಃ ॥ ೧೨೩ ॥
ನರಸಿಂಹಮುಖೋ ದೃಷ್ಟ್ವಾ ನಿಪಪಾತ ಪುನಃ ಕ್ಷಿತೌ ।
ವಿಗೃಹ್ಯ ಕೇಶಪಾಶೇ ತಂ ಭ್ರಾಮಯಾಮಾಸ ಚಾಂಬರಂ ॥ ೧೨೪ ॥

---

ಬೀಳುವುದೊ ? ಕತ್ತಿಯಿಂದ ಕತ್ತರಿಸಿದ ತಲೆಯು ಭೂಮಿಯಲ್ಲಿ ಬೀಳುವುದೊ ? ಎಂದು ಮಾತಾಡುತ್ತಿರಲು ಗದ್ದಲವು ಆಕಾಶವನ್ನು ವ್ಯಾಪಿಸಿತು.

೧೧೯. ಅಷ್ಟರಲ್ಲಿ ಆ ಸ್ತಂಭದಿಂದ ಭಯಂಕರವಾದ ಸಿಂಹನಾದವುಂಟಾಯಿತು. ಆ ಶಬ್ದದಿಂದ ಸಕಲ ದಾನವರೂ ಮೂರ್ಛೆಗೊಂಡು ನೆಲದ ಮೇಲೆ ಬಿದ್ದರು.

೧೨೦–೧೨೩. ಹಿರಣ್ಯಕಶಿಪುವಿನ ಕೈಯಿಂದ ಕತ್ತಿ ಗುರಾಣಿಗಳು ಕೆಳಗೆ ಬಿದ್ದುವು. ಅವನು ಅದು ಏಕೆ ಎಂಬುದನ್ನರಿಯಲಿಲ್ಲ. ಅವನು ಇದೇನು ಎಂದು ಆಶ್ಚರ್ಯದಿಂದ ನೋಡುವಷ್ಟರಲ್ಲಿ ಆ ನರಸಿಂಹನು ಕಾಣಿಸಿಕೊಂಡನು. ಅವನು ಕೆಳಗೆ ಮನುಷ್ಯನಂತೆಯೂ, ಮೇಲೆ ಭಯಂಕರ ಆಕೃತಿಯುಳ್ಳ ಸಿಂಹದಂತೆಯೂ ಇರುವವನೂ, ಹಲ್ಲಿನಿಂದ ಭಯಂಕರನೂ ಕಠಿನ ಮುಖವುಳ್ಳವನೂ, ಆಕಾಶವನ್ನು ನೆಕ್ಕುವಂತಿರುವವನೂ, ಪ್ರಕಾಶಮಾನವಾದ ಶರೀರವುಳ್ಳವನೂ, ತಲೆಯನ್ನು ಮುಟ್ಟುತ್ತಿರುವ ಬಾಲವುಳ್ಳವನೂ, ಗುಡುಗಿನಿಂದ ಸಹಿತವಾದ ಮೋಡದಂತೆ ಸಿಂಹನಾದಮಾಡುತ್ತಿರುವವನೂ, ಬಿರುಸಾದ ಕೂದಲುಗಳ ತುದಿಯುಳ್ಳವನೂ, ದೇವದಾನವರಿಂದ ನೋಡಲಶಕ್ಯನೂ ಆಗಿದ್ದನು.

೧೨೪–೧೨೫. ಆ ಹಿರಣ್ಯಕಶಿಪುವು ಅಂತಹ ನರಸಿಂಹನನ್ನು ಕಂಡು ಮರಳಿ ನೆಲದಮೇಲೆ ಬಿದ್ದನು. ನರಸಿಂಹನು ಆ ದೈತ್ಯನನ್ನು ಕೂದಲುಗಳಲ್ಲಿ ಹಿಡಿದುಕೊಂಡು

ಭ್ರಾಮಯಿತ್ವಾ ಶತಗುಣಂ ಪೃಥಿವ್ಯಾಂ ಸಮಪೋಥಯತ್ ।
ನ ಮಮಾರ ಸ ದೈತ್ಯೇಂದ್ರೋ ಬ್ರಹ್ಮಣೋ ವರಕಾರಣಾತ್ ॥ ೧೨೫ ॥
ಗಗನಸ್ಥೈಸ್ತದಾ ದೇವೈರುಚ್ಚೈಃ ಸಂಸ್ಮಾರಿತೋ ಹರಿಃ ।
ದೈತ್ಯಂ ಜಾನುನಿ ಚಾನೀಯ ವಕ್ಷೋ ಹೃಷ್ಟೋ ನಿರೀಕ್ಷ್ಯ ಚ ॥ ೧೨೬ ॥
ಜಯಜಯೇತಿ ಯಕ್ಷಾಣಾಂ ಸುರಾಣಾಂ ಸೋಽವಧಾರಯತ್ ।
ಶಬ್ದಂ ಕರ್ಣೇ ಭುಜೌ ಸಜ್ಜೌ ಕೃತ್ವಾ ತೌ ಪದ್ಮಲಾಂಛಿತೌ ॥ ೧೨೭ ॥
ಬಿಭೇದ ವಕ್ಷೋ ದೈತ್ಯಸ್ಯ ವಜ್ರಘಾತಕಿಣಾಂಕಿತಂ ।
ನಖೈಃ ಕುಂದಸುಮಪ್ರಖ್ಯೈರಸ್ಥಿಸಂಘಾತಕರ್ಶಿತಂ ॥ ೧೨೮ ॥
ಭಿನ್ನೇ ವಕ್ಷಸಿ ದೈತ್ಯೇಂದ್ರೋ ಮಮಾರ ಚ ಪಪಾತ ಚ ।
ತದಾ ಪ್ರಹರ್ಷಮಭವತ್ತ್ರೈಲೋಕ್ಯಂ ಸಚರಾಚರಂ ॥ ೧೨೯ ॥
ಮಮಾಪಿ ತೃಪ್ತಿಃ ಸಂಜಾತಾ ಪ್ರಸಾದಾತ್ತವ ಕೇಶವ ।
ಯದಾ ಪುರತ್ರಯೇ ದಗ್ಧೇ ಪ್ರಸಾದಾಚ್ಛಂಕರಸ್ಯ ಚ ॥ ೧೩೦ ॥
ಹಿರಣ್ಯಾಕ್ಷೇ ಪುನರ್ಜಾತೇ ಸಾ ಕಾಲೇ ವಿನಿಪಾತಿತೇ ।
ಇದಾನೀಂ ನಾಸ್ತಿ ಮೇ ತೃಪ್ತಿಃ ಕುತ್ರ ಯಾಮಿ ಕರೋಮಿ ಕಿಂ ॥ ೧೩೧ ॥

---

ಆಕಾಶದಲ್ಲಿ ನೂರಾವೃತ್ತಿ ತಿರುಗಿಸಿ ಭೂಮಿಯ ಮೇಲೆ ಅಪ್ಪಳಿಸಿದನು. ಆದರೆ ಬ್ರಹ್ಮನ ವರಬಲದಿಂದ ಅವನು ಸಾಯಲಿಲ್ಲ.

೧೨೬—೨೮. ಆಗ ಆಕಾಶದಲ್ಲಿರುವ ದೇವತೆಗಳು ಗಟ್ಟಿಯಾಗಿ ಅವನನ್ನು ಕೊಲ್ಲುವ ಕ್ರಮವನ್ನು ಜ್ಞಾಪಿಸಲು ನರಸಿಂಹನು ಸಂತೋಷಗೊಂಡು ಅವನನ್ನು ಮೊಣಕಾಲುಗಳಲ್ಲಿ ಹಿಡಿದುಕೊಂಡು ಎದೆಯನ್ನು ನೋಡಿ ಸುರಯಕ್ಷರ ಜಯಕಾರವನ್ನು ಆಲಿಸುತ್ತ ಪದ್ಮಾಂಕಿತವಾದ ತನ್ನ ತೋಳುಗಳನ್ನು ಸಜ್ಜುಗೊಳಿಸಿ ಆ ದೈತ್ಯನ ವಜ್ರಾಯುಧದ ಆಘಾತದಿಂದ ಜಡ್ಡುಗಟ್ಟಿದ ಕಠಿನವಾದ ಎದೆಯನ್ನು ಮಲ್ಲಿಗೆಹೂವಿನಂತಿರುವ ಉಗುರುಗಳಿಂದ ಬಗೆದನು.

೧೨೯. ಹೀಗೆ ನರಸಿಂಹನು ಹಿರಣ್ಯಕಶಿಪುವಿನ ಎದೆಯನ್ನು ಬಗೆಯಲು ಅವನು ಮೃತನಾಗಿ ಕೆಳಗೆ ಬಿದ್ದನು. ಆಗ ಚರಾಚರಾತ್ಮಕವಾದ ಮೂರುಲೋಕದ ಜನಗಳು ಸಂತೋಷಗೊಂಡರು.

೧೩೦. ವಿಷ್ಣುವೆ ! ನಿನ್ನ ಅನುಗ್ರಹದಿಂದ ನನಗೂ ಶಂಕರನು ತ್ರಿಪುರವನ್ನು ಸುಟ್ಟಾಗ ಆದಂತೆ ತೃಪ್ತಿಯಾಯಿತು.

೧೩೧. ಕಾಲದಲ್ಲಿ ಹಿರಣ್ಯಾಕ್ಷನು ಹತನಾಗಲು ಹಾಗೆಯೇ ತೃಪ್ತಿಗೊಂಡೆನು. ಈಗ ನನಗೆ ಸಂತೋಷವಿಲ್ಲ ಎಲ್ಲಿಗೆ ಹೋಗಲಿ ಏನುಮಾಡಲಿ.

ಪೃಥಿವ್ಯಾಂ ಕ್ಷತ್ರಿಯಾಃ ಸಂತಿ ನ ಯುಧ್ಯಂತಿ ಪರಸ್ಪರಂ ।
ದೇವಾನಾಂ ದಾನವೈಃ ಸಾರ್ಧಂ ನಾಸ್ತಿ ಯುದ್ಧಂ ಕಥಂ ಪ್ರಭೋ ॥೧೩೨॥
ಇದಾನೀಂ ಬಲಿನಾ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ।
ಪಂಚಮೋ ಯೋಽವತಾರಸ್ತೇ ನ ಜಾನೇ ಕಿಂ ಕರಿಷ್ಯತಿ ।
ಬಲಿನಿಗ್ರಹಕಾಲೋಽಯಂ ತದ್ದರ್ಶಯ ಜನಾರ್ದನ ॥ ೧೩೩ ॥

ಸಾರಸ್ವತ ಉವಾಚ :—

ತದೇತತ್ಸಕಲಂ ಶ್ರುತ್ವಾ ಬಭಾಷೇ ವಾಮನೋ ಮುನಿಂ ॥ ೧೩೪ ॥

ವಾಮನ ಉವಾಚ :—

ಶೃಣು ನಾರದ ಯದ್ವೃತ್ತಂ ಹಿರಣ್ಯಕಶಿಪೌ ಹತೇ ।
ದೈತ್ಯರಾಜಃ ಕೃತೋ ರಾಜಾ ಪ್ರಹ್ಲಾದೋಽತೀವ ವೈಷ್ಣವಃ ॥ ೧೩೫ ॥
ತೇನ ರಾಜ್ಯಂ ಧರಾಪೃಷ್ಠೇ ಕೃತಂ ಸಂವತ್ಸರಾನ್ಬಹೂನ್ ।
ತಸ್ಯಾಪಿ ಕುರ್ವತೋ ರಾಜ್ಯಂ ವಿಗ್ರಹೋ ಹಿ ಸುರೈಃ ಸಮಂ ॥ ೧೩೬ ॥
ನೋ ಪಶ್ಯಾಮ್ಯಪಿ ದೈತ್ಯಾನಾಂ ಪೂರ್ವವೈರಮನುಸ್ಮರನ್ ।
ಉತ್ಪಾದ್ಯ ಪುತ್ರಾನ್ಸ ಬಹೂನ್ರಾಜ್ಯಂ ಚಕ್ರೇ ಸ ಪುಷ್ಕಲಂ ॥ ೧೩೭ ॥

---

೧೩೨. ಸ್ವಾಮಿ ! ಭೂಮಿಯಲ್ಲಿ ಕ್ಷತ್ರಿಯರಿದ್ದಾರೆ. ಅವರು ಪರಸ್ಪರ ಯುದ್ಧ ಮಾಡುವುದಿಲ್ಲ. ಸ್ವರ್ಗದಲ್ಲಿ ದೇವದಾನವರೂ ಯುದ್ಧಮಾಡುವುದಿಲ್ಲ.

೧೩೩. ಈಗ ಚರಾಚರಾತ್ಮಕ ಪ್ರಪಂಚವನ್ನು ಬಲಿಯು ವ್ಯಾಪಿಸಿರುವನು. ಇದು ನಿನ್ನ ಐದನೆ ಅವತಾರವು. ನೀನು ಏನು ಮಾಡುವಿಯೊ ? ನಾನರಿಯೆನು. ಇದು ಬಲಿಯನ್ನು ನಿಗ್ರಹಿಸುವ ಸಮಯವು. ಅದನ್ನೀಗ ತೋರಿಸು.

೧೩೪. ಸಾರಸ್ವತನು ಹೇಳುತ್ತಾನೆ :—ವಾಮನನು ಅದನ್ನೆಲ್ಲ ಕೇಳಿ ನಾರದನನ್ನು ಕುರಿತು ಇಂತೆಂದನು.

೧೩೫. ವಾಮನನು ಹೇಳುತ್ತಾನೆ :—ನಾರದ ! ಹಿರಣ್ಯಕಶಿಪುವನ್ನು ಕೊಂದ ಬಳಿಕ ನಡೆದ ಸಮಾಚಾರವನ್ನು ಕೇಳು. ಮಹಾ ವೈಷ್ಣವನಾದ ಪ್ರಹ್ಲಾದನನ್ನು ದೈತ್ಯರಾಜನನ್ನಾಗಿ ಮಾಡಿದರು.

೧೩೬ ೧೩೭. ಅವನು ಭೂಮಿಯಲ್ಲಿ ಅನೇಕ ವರ್ಷಕಾಲ ರಾಜ್ಯವಾಳಿದನು. ಅವನು ರಾಜ್ಯವಾಳುತ್ತಿರುವಾಗ ಹಿಂದಿನ ದ್ವೇಷದ ಸ್ಮರಣೆಯಿಂದ ದೈತ್ಯ ದಾನವರಿಗೆ ಯುದ್ಧ ನಡೆಯುತ್ತಿರಲಿಲ್ಲ. ಅವನು ಅನೇಕ ಮಂದಿ ಮಕ್ಕಳನ್ನು ಪಡೆದು ಸಮಗ್ರ ಭೂಮಿಯನ್ನು ಆಳಿದನು.

16

ವಿರೋಚನಾದ್ಬಲಿರ್ಜಾತೋ ಬಾಲ ಏವ ಯದಾಽಭವತ್ ।
ವಿಕ್ರಾಂತೇ ಸ ಹರಿಂ ಜ್ಞಾತ್ವಾ ತದಾ ಯೋಗೇನ ಕೇನಚಿತ್ ॥ ೧೩೮ ॥
ಮುಕ್ತ್ವಾ ರಾಜ್ಯಂ ಪ್ರಿಯಾನ್ಪುತ್ರಾನ್ಗತೋಽಸೌ ಗಿರಿಸಾನುಷು ।
ಕಲ್ಪಾಂತಸ್ಥಾಯಿನಂ ದೇಹಂ ತಸ್ಯ ಚಕ್ರೇ ಜನಾರ್ದನಃ ॥ ೧೩೯ ॥
ದೈತ್ಯಾನಾಂ ದಾನವಾನಾಂ ಚ ಬಹೂನಾಂ ರಾಜ್ಯಕಾರಣೇ ।
ವಿವಾದೋಽತೀವ ಸಂಜಾತಃ ಕೋ ನೋ ರಾಜಾ ಭವೇದಿತಿ ॥ ೧೪೦ ॥

ನಾರದ ಉವಾಚ :—

ಹಿರಣ್ಯಾಕ್ಷಸ್ಯ ಯೇ ಪುತ್ರಾಃ ಪೌತ್ರಾಶ್ಚ ಬಲವತ್ತರಾಃ ।
ವಿರೋಚನಪ್ರಭೃತಯಃ ಸಂತಿ ಯೇ ಬಲವತ್ತರಾಃ ॥ ೧೪೧ ॥
ವೃಷಪರ್ವಾಪಿ ಬಲವಾನ್ರಾಜ್ಯಾರ್ಥೇ ಸಮುಪಸ್ಥಿತಃ ।
ಇಂದ್ರವಿತ್ತೇಶವರುಣಾ ವಾಯುಃ ಸೂರ್ಯೋಽನಲೋ ಯಮಃ ॥ ೧೪೨ ॥
ದೈತ್ಯೇನ ಸದೃಶಾ ನ ಸ್ಯುರ್ಬಲರೂಪಕ್ಷಮಾದಿಭಿಃ ।
ಔದಾರ್ಯಾದಿಗುಣೈಃ ಕೃತ್ವಾ ಸಂತತ್ಯಾ ಚಾಸುರಾಧಿಕಃ ॥ ೧೪೩ ॥
ಶುಕ್ರೇಣಾಚಾರ್ಯಮಾಣಾಸ್ತೇ ಯುಧ್ಯಂತೇ ಚ ಪರಸ್ಪರಂ ।
ಅಮೃತಾಹರಣೇ ದಾರ್ಷ್ಟ್ಯಂ ಯದಾ ದೈತ್ಯಾಃ ಸ್ಮರಂತಿ ತತ್ ॥ ೧೪೪ ॥
ಪೀತಾವಶೇಷಮಮೃತಂ ಕಸ್ಮಾದ್ಯಚ್ಛಂತಿ ದೇವತಾಃ ।
ನಾಸ್ಮಾಕಮಿತಿ ಸನ್ನಹ್ಯ ಯುಧ್ಯಂತೇ ಚ ಪರಸ್ಪರಂ ॥ ೧೪೫ ॥

---

೧೩೮–೧೩೯. ವಿರೋಚನನ ಮಗನಾದ ಬಲಿಯು ಚಿಕ್ಕವಯಸ್ಸಿನಲ್ಲಿಯೇ ರಾಜ್ಯವನ್ನೂ, ಪ್ರಿಯ ಪುತ್ರರನ್ನೂ ತ್ಯಜಿಸಿ ಬೆಟ್ಟಗಳ ತಪ್ಪಲಲ್ಲಿ ಯೋಗದಿಂದ ರಹಸ್ಯದಲ್ಲಿ ಹರಿಯನ್ನರಿತನು. ಆದರಿಂದ ವಿಷ್ಣುವು ಅವನನ್ನು ಚಿರಂಜೀವಿಯನ್ನಾಗಿ ಮಾಡಿದನು.

೧೪೦. ಅನೇಕ ಮಂದಿ ದೈತ್ಯದಾನವರಿಗೆ ನಮ್ಮಲ್ಲಿ ಯಾವನು ರಾಜನಾಗಬೇಕೆಂದು ರಾಜ್ಯಕ್ಕೋಸ್ಕರ ಬಹಳ ವಿವಾದವುಂಟಾಯಿತು.

೧೪೧–೧೪೨. ನಾರದನು ಹೇಳುತ್ತಾನೆ:—ಹಿರಣ್ಯಾಕ್ಷನ ಪುತ್ರರೂ, ಪೌತ್ರರೂ ಆದ ವೀರವಿರೋಚನ ಮೊದಲಾದವರೂ, ವೃಷಪರ್ವನೂ, ಇಂದ್ರ, ಕುಬೇರ. ವರುಣ, ವಾಯು, ಸೂರ್ಯ, ಅಗ್ನಿ, ಯಮ ಮೊದಲಾದವರೂ ರಾಜ್ಯಕ್ಕಾಗಿ ಒಟ್ಟುಗೂಡಿದರು.

೧೪೩. ಇವರೆಲ್ಲ ಬಲ, ರೂಪ, ಸಹನೆ, ಔದಾರ್ಯಾದಿಗಳಿಂದಲೂ, ಸಂತತಿಯಿಂದಲೂ ಬಲಿಗೆ ಸಮಾನರಾಗಲಿಲ್ಲ. ಅವನೇ ಅಧಿಕನಾದನು.

೧೪೪–೧೪೫. ಶುಕ್ರಾಚಾರ್ಯನೇ ಆಚಾರ್ಯನಾಗುಳ್ಳ ಆ ದೈತ್ಯರು ಅಮೃತಪಾನದ ಕಾಲದಲ್ಲಿ ದೇವತೆಗಳು ದುಷ್ಟತನದಿಂದ ಕುಡಿದುಳಿದ ಅಮೃತವನ್ನು ಕೊಟ್ಟರುವುದನ್ನು ಸ್ಮರಿಸಿ ಅವರೊಡನೆ ಯುದ್ಧಮಾಡುತ್ತಿದ್ದರು.

ಕದಾಚಿದಪಿ ನೋ ಯುದ್ಧಂ ವಿಶ್ರಾಂತಿಮುಪಗಚ್ಛತಿ ।
ಏಕಕಾರ್ಯೋದ್ಯತಾ ಯಸ್ಮಾದ್ಬಹವೋ ದೈತ್ಯದಾನವಾಃ ॥ ೧೪೬ ॥
ಪೀತ್ವಾಽಮೃತಂ ಸುರಾ ಜಾತಾ ಅಮರಾಸ್ತೇ ಜಯಂತಿ ಚ ।
ದೇವದಾನವದೈತ್ಯಾನಾಂ ಗಂಧರ್ವೋರಗರಕ್ಷಸಾಂ ।
ವಿಷ್ಣುರ್ಬಲಾಧಿಕೋ ಯುದ್ಧೇ ತದೇತತ್ಕಾರಣಂ ವದ ॥ ೧೪೭ ॥

ವಾಮನ ಉವಾಚ :—

ಅನಾದಿನಿಧನಃ ಕರ್ತಾ ಪಾತಾ ಹರ್ತಾ ಜನಾರ್ದನಃ ।
ಏಕೋಽಯಂ ಸ ಶಿವೋ ದೇವಃ ಸಚಾಯಂ ಬ್ರಹ್ಮಸಂಜ್ಞಿತಃ ।
ಏಕಸ್ಯ ತು ಯದಾ ಕಾರ್ಯಂ ಜಾಯತೇ ಭುವನೇ ನೃಪ ॥ ೧೪೮ ॥
ತಸ್ಯ ದೇಹಂ ಸಮಾಶ್ರಿತ್ಯ ಮೃತ್ಯುಕಾರ್ಯಂ ಕುರ್ವಂತಿ ತೇ ।
ಬ್ರಹ್ಮಾಂಡಂ ಸಕಲಂ ವಿಷ್ಣೋಃ ಕರದಂ ವರದೋ ಯತಃ ।
ತಸ್ಮಾದ್ಬಲಾಧಿಕೋ ವಿಷ್ಣುರ್ನ ತಥಾನ್ಯೋಽಸ್ತಿ ಕಶ್ಚನ ॥ ೧೪೯ ॥
ಪಾಲನಾಯೋದ್ಯತೋ ವಿಷ್ಣುಃ ಕಿಮನ್ಯೈಶ್ಚರ್ಮಚಕ್ಷುಭಿಃ ।
ಇಂದ್ರಾದ್ಯಾಶ್ಚ ಸುರಾಃ ಸರ್ವೇ ವಿಷ್ಣೋರ್ವ್ಯಾಪಾರಕಾರಿಣಃ ॥ ೧೫೦ ॥

---

೧೪೬. ಬಹುಮಂದಿ ದೈತ್ಯದಾನವರು ಒಂದೇ ಕೆಲಸದಲ್ಲಿ ತೊಡಗಿರುವುದರಿಂದ ಅವರ ಯುದ್ಧವು ಒಂದು ವೇಳೆಯೂ ಶಾಂತವಾಗುವುದಿಲ್ಲ.

೧೪೭. ಸುರರು ಅಮೃತವನ್ನು ಕುಡಿದು ಅಮರರಾದುದರಿಂದ ಅವರೇ ಗೆಲ್ಲುತ್ತಿದ್ದರು. ದೇವ, ದಾನವ, ದೈತ್ಯ, ಗಂಧರ್ವ, ಉರಗ, ರಾಕ್ಷಸ ಇವರಲ್ಲಿ ವಿಷ್ಣುವು ಯುದ್ಧದಲ್ಲಿ ಅಧಿಕ ಬಲವುಳ್ಳವನಾಗಿರುವನು. ಇದಕ್ಕೆ ಕಾರಣವೇ ನೆಂಬುದನ್ನು ಹೇಳು.

೧೪೮–೧೪೯. ವಾಮನನು ಹೇಳುತ್ತಾನೆ :—ಆದ್ಯಂತರಹಿತನೂ, ಕರ್ತನೂ, ರಕ್ಷಕನೂ, ನಾಶಕನೂ ಆದ ಆ ವಿಷ್ಣುವೊಬ್ಬನೇ ಶಿವ ಬ್ರಹ್ಮಸ್ವರೂಪನಾಗಿರುವನು. ದೊರೆಯೆ! ಲೋಕದಲ್ಲಿ ಶಿವನೊಬ್ಬನಿಗೆ ಕಾರ್ಯವು ಒದಗಿದರೆ ಅವನು ಆ ವಿಷ್ಣುವಿನ ದೇಹವನ್ನಾಶ್ರಯಿಸಿ ಸಂಹಾರಕಾರ್ಯವನ್ನು ನೆರವೇರಿಸುವನು. ಸಕಲ ಬ್ರಹ್ಮಾಂಡವೂ ವರದಾಯಕನಾದ ವಿಷ್ಣುವಿನ ವಶದಲ್ಲಿರುವುದರಿಂದ ಅವನೇ ಅತಿಶಯ ಬಲವುಳ್ಳವನು. ಅವನಿಗಿಂತ ಇತರನೊಬ್ಬನಿಲ್ಲ.

೧೫೦. ವಿಷ್ಣುವು ಜಗತ್ತನ್ನು ಕಾಪಾಡಲುದ್ಯುಕ್ತನಾಗಿರುವನು. ಇತರ ಚರ್ಮಚಕ್ಷುಸ್ಸುಗಳಿರುವ ನರರಿಂದೇನು ಪ್ರಯೋಜನ? ಇಂದ್ರಾದಿ ಸಕಲ ಸುರರು ವಿಷ್ಣುವಿನ ಆಜ್ಞೆಯಂತೆ ಅವನ ಕಾರ್ಯವನ್ನು ಮಾಡುವವರು.

ಸೃಷ್ಟಿಂ ಕೃತ್ವಾ ತತೋ ಬ್ರಹ್ಮಾ ಕೈಲಾಸೇ ಸಂಸ್ಥಿತೋ ಹರಃ ।
ನ ಶಕ್ಯತೇ ಸುರೈರ್ವಿಷ್ಣುರ್ಭ್ರಾಮ್ಯಂತೇ ಭುವನತ್ರಯೇ ॥ ೧೫೧ ॥
ಜಗತ್ಯಸ್ಮಿನ್ಯದಾ ಕಶ್ಚಿದ್ವೈಪರೀತ್ಯೇನ ವರ್ತತೇ ।
ತಸ್ಯೋಚ್ಛೇದಂ ಸಮಾಗತ್ಯ ಕರೋತ್ಯೇವ ಜನಾರ್ದನಃ ॥ ೧೫೨ ॥
ತ್ವಮೇಜಯ ಮಹಾಬಾಹೋ ನ ಮನೋ ನಾರದಾऽದಯಂ ।
ಸರ್ವಪಾಪಹರಾಂ ದಿವ್ಯಾಂ ತಾಂ ಕಥಾಂ ಕಥಯಾಮ್ಯಹಂ ॥ ೧೫೩ ॥
ಪುರಾ ವಿವದತಾಂ ತೇಷಾಂ ದೈತ್ಯಾನಾಂ ರಾಜ್ಯಹೇತವೇ ।
ಪ್ರಹ್ಲಾದೇನ ಸಮಾಗತ್ಯ ವ್ಯವಸ್ಥಾ ವಿಹಿತಾ ಸ್ವಯಂ ॥ ೧೫೪ ॥
ಸರ್ವಲಕ್ಷಣಸಂಪನ್ನೋ ದೀರ್ಘಾಯುರ್ಬಲವತ್ತರಃ ।
ಯಜ್ಞಶೀಲಃ ಸದಾನಂದೋ ಬಹುಪುತ್ರೋऽತಿದುರ್ಜಯಃ ॥ ೧೫೫ ॥
ನ ಯುಧ್ಯತೇ ಸುರೈಃ ಸಾಕಂ ವಿಷ್ಣುಂ ಯೋ ವೇತ್ತಿ ದುರ್ಜಯಂ ।
ಸಂಗ್ರಾಮೇ ಮರಣಂ ನಾಸ್ತಿ ಯಸ್ಯ ಯಃ ಸರ್ವದಕ್ಷಿಣಃ ॥ ೧೫೬ ॥

---

೧೫೧. ಆವನು ಬ್ರಹ್ಮನಾಗಿ ಸೃಷ್ಟಿಸಿ ಕೈಲಾಸದಲ್ಲಿ ಹರನಾಗಿ ನೆಲೆಸಿರುವನು. ಇತರ ದೇವತೆಗಳು ಈ ಕಾರ್ಯವನ್ನೆಸಗಲು ಶಕ್ತರಲ್ಲ. ಆ ವಿಷ್ಣುವು ತ್ರಿಭುವನದಲ್ಲಿ ಸಂಚರಿಸುವನು.

೧೫೨. ಈ ಪ್ರಪಂಚದಲ್ಲಿ ಆವನ ನಿಯಮಕ್ಕೆ ವಿರುದ್ಧವಾಗಿ ಯಾವನಾದರೂ ನಡೆದರೆ ಕೂಡಲೆ ಆ ವಿಷ್ಣುವು ಬಂದು ಆವನನ್ನು ನಾಶಗೊಳಿಸುವನು.

೧೫೩. ನಾರದ! ನೀನು ನಿರ್ದಯವಾದ ಈ ಮನಸ್ಸನ್ನು ಚಾಂಚಲ್ಯಗೊಳಿಸಬೇಡ. ನಿನಗೆ ನಾನು ಸಕಲ ಪಾಪಗಳನ್ನು ಪರಿಹರಿಸುವ ಆ ದಿವ್ಯಕಥೆಯನ್ನು ಹೇಳುತ್ತೇನೆ.

೧೫೪. ಹಿಂದೆ ರಾಜ್ಯಕ್ಕಾಗಿ ದೈತ್ಯರು ವಿವಾದಮಾಡುತ್ತಿರಲು ಪ್ರಹ್ಲಾದನು ತಾನೇ ಬಂದು ವ್ಯವಸ್ಥೆ ಮಾಡಿದನು.

೧೫೫-೧೫೬. ಸಮಸ್ತ ಲಕ್ಷಣಗಳಿಂದ ಕೂಡಿರುವವನೂ, ದೀರ್ಘಾಯುಷ್ಮಂತನೂ, ಬಲಿಷ್ಠನೂ, ಯಜ್ಞಗಳನ್ನು ಮಾಡುವವನೂ, ಆನಂದ ಭರಿತನೂ, ಬಹುಪುತ್ರನೂ, ಜಯಿಸಲಶಕ್ಯನೂ ಆದ ಆ ಪ್ರಹ್ಲಾದನು ವಿಷ್ಣುವು ದುರ್ಜಯನಾಗಿರುವನೆಂಬುದನ್ನರಿತಿರುವುದರಿಂದ ದೇವತೆಗಳೊಡನೆ ಯುದ್ಧಮಾಡುವುದಿಲ್ಲ. ಇವನ ಯುದ್ಧದಲ್ಲಿ ಯಾರೂ ಸಾಯುತ್ತಿರಲಿಲ್ಲ. ಇವನು ಸರ್ವಸ್ವ ದಕ್ಷಿಣೆಯುಳ್ಳ ಯಜ್ಞವನ್ನು ಮಾಡಿರುವನು.

ಆತ್ಮನೋ ವಚನಂ ವ್ಯರ್ಥಂ ನ ಕರೋತಿ ಕಥಂಚನ ।
ಸರ್ವೇಷಾಂ ಪುತ್ರಪೌತ್ರಾಣಾಂ ಮಧ್ಯೇ ಯೋ ರಾಜತೇ ಶ್ರಿಯಾ ॥ ೧೫೭ ॥
ಅಭಿಷಿಕ್ತಸ್ತು ಶುಕ್ರೇಣ ಸ ವೋ ರಾಜಾ ಭವೇದಿತಿ ।
ಗುರುಪ್ರಮಾಣಮಿತ್ಯುಕ್ತ್ವಾ ಯಯೌ ಯತ್ರಾಗತಃ ಪುನಃ ॥ ೧೫೮ ॥
ತಥಾ ಚ ಕೃತವಂತಸ್ತೇ ಸಹಿತಾ ದೈತ್ಯದಾನವಾಃ ।
ವಿರೋಚನಪ್ರಭೃತಯಃ ಪುತ್ರಾಃ ಪೌತ್ರಾಃ ಸ್ವಯಂ ಗತಾಃ ॥ ೧೫೯ ॥
ಪ್ರತ್ಯೇಕಂ ವೀಕ್ಷಿತಾಃ ಸರ್ವೇ ಗುರುಣಾ ಜ್ಞಾನಪೂರ್ವಕಂ ।
ಪ್ರಹ್ಲಾದೇನ ಗುಣಾಃ ಪ್ರೋಕ್ತಾ ನ ತೇ ಸಂತಿ ವಿರೋಚನೇ ॥ ೧೬೦ ॥
ಅನ್ಯೇಷಾಮಪಿ ದೈತ್ಯಾನಾಂ ವೃಷಪರ್ವಾಪಿ ನೇದೃಶಃ ।
ಯಥಾ ನಿರೀಕ್ಷಿತಾಃ ಪುತ್ರಾ ಬಲಿಪ್ರಭೃತಯೋ ಮುನೇ ।
ಸರ್ವಾನ್ಸಂವೀಕ್ಷ್ಯ ಶುಕ್ರೇಣ ಬಲೌ ದೃಷ್ಟ್ವಾ ಗುಣಾಸ್ತಥಾ ॥ ೧೬೧ ॥
ಬಲಿದೇಹೇಽಧಿಕಾನ್ದೃಷ್ಟ್ವಾ ದೈತ್ಯೇಭ್ಯೋ ವಿನಿವೇದಿತಾಃ ।
ಬಲಿರ್ಗುಣಾಧಿಕೋ ದೈತ್ಯಾಃ ಕಥಂ ಕಾರ್ಯಂ ಭವೇನ್ಮಯಾ ॥ ೧೬೨ ॥

---

೧೫೭. ಇವನು ಹೇಗಾದರೂ ತನ್ನ ಮಾತನ್ನು ವ್ಯರ್ಥಗೊಳಿಸುವುದಿಲ್ಲ. ಇವನು ಸಕಲ ಪುತ್ರಪೌತ್ರರಮಧ್ಯದಲ್ಲಿ ಸಂಪತ್ತಿನಿಂದ ವಿರಾಜಿಸುವನು.

೧೫೮. ಇವನ ರಾಜ್ಯಾಭಿಷೇಕ ವಿಷಯದಲ್ಲಿ ಶುಕ್ರಾಚಾರ್ಯನೇ ನಿರ್ಧಾರಕನು. ಅವನಿಂದ ಅಭಿಷೇಕಮಾಡಲ್ಪಟ್ಟವನೇ ರಾಜನಾಗುವನೆಂದು ಹೇಳಿ ತನ್ನ ಸ್ಥಳಕ್ಕೆ ಹೊರಟನು.

೧೫೯. ಹಾಗೆಯೇ ವಿರೋಚನ ಮೊದಲಾದ ಆ ಪ್ರಹ್ಲಾದನ ಪುತ್ರ ಪೌತ್ರರಾದ ದೈತ್ಯ ದಾನವರು ಶುಕ್ರಾಚಾರ್ಯನೆಡೆಗೆ ಹೋದರು.

೧೬೦. ಶುಕ್ರಾಚಾರ್ಯನು ಪ್ರತ್ಯೇಕವಾಗಿ ಅವರವಿಚಾರವನ್ನು ವಿಮರ್ಶಿಸಿದನು. ಆದರೆ ಪ್ರಹ್ಲಾದನು ಹೇಳಿದ ಗುಣಗಳು ವಿರೋಚನನಲ್ಲಿ ಇರಲಿಲ್ಲ.

೧೬೧. ಅವನು ವೃಷಪರ್ವ ಮೊದಲಾದ ದೈತ್ಯರನ್ನು ಪರೀಕ್ಷಿಸಲು ಪ್ರಹ್ಲಾದನು ಹೇಳಿದ ಗುಣಗಳು ಬಲಿಯೊಬ್ಬನಲ್ಲಿಯೇ ಕಂಡವು.

೧೬೨. ಆ ಶುಕ್ರಾಚಾರ್ಯನು ಬಲಿಯ ದೇಹದಲ್ಲಿ ಹೆಚ್ಚಾಗಿರುವ ಗುಣಗಳನ್ನು ಕಂಡು ದೈತ್ಯರನ್ನು ಕುರಿತು ಇಂತೆಂದನು. "ದೈತ್ಯರೆ! ಬಲಿಯು ಅಧಿಕ ಗುಣಗಳುಳ್ಳವನು. ನಾನೀಗ ಹೇಗೆ ಕಾರ್ಯವನ್ನಾಚರಿಸಬೇಕು?

ಕೇನಾಪಿ ದೈವಯೋಗೇನ ಬಲಿರಿಂದ್ರೋ ಭವಿಷ್ಯತಿ ।
ಯಾದೃಶಸ್ತು ಪಿತಾ ಲೋಕೇ ತಾದೃಶಸ್ತು ಸುತೋ ಭವೇತ್ ॥ ೧೬೩ ॥
ಪೌತ್ರಶ್ಚ ನಿಶ್ಚಿತಂ ತಾದೃಗ್ಭವತೀತಿ ಸ ಚೇತ್ಸುತಃ ।
ಪ್ರಹ್ಲಾದಸ್ತು ಮಹಾಯೋಗೀ ವೈಷ್ಣವೋ ವಿಷ್ಣುವಲ್ಲಭಃ ॥ ೧೬೪ ॥
ತಸ್ಮಾದ್ವಿರೋಚನೇ ಕೇಚಿದ್ಧಿರಣ್ಯಕಶಿಪೋರ್ಗುಣಾಃ ।
ಜ್ಯೇಷ್ಠೋ ವಿರೋಚನೋ ರಾಜ್ಯೇ ಯದಿ ಚೇತ್ಕ್ರಿಯತೇಽಸುರಾಃ ।
ನರಸಿಂಹಃ ಸಮಾಗತ್ಯ ನಿಶ್ಚಿತಂ ಮಾರಯಿಷ್ಯತಿ ॥ ೧೬೫ ॥
ಮುಕ್ತಂ ವಿರೋಚನೇನಾಪಿ ರಾಜ್ಯಂ ಮರಣಭೀರುಣಾ ।
ಪ್ರಹ್ಲಾದಸ್ಯ ಗುಣಾಸ್ಸರ್ವೇ ಬಲಿದೇಹೇ ವ್ಯವಸ್ಥಿತಾಃ ॥ ೧೬೬ ॥
ಏವಂ ತೇ ಸಮಯಂ ಕೃತ್ವಾ ಬಲಿಂ ರಾಜ್ಯೇಽಭ್ಯಷಿಂಚಯನ್ ।
ಯಃ ಪ್ರಹ್ಲಾದಃ ಸ ವೈ ವಿಷ್ಣುರ್ಯೋ ವಿಷ್ಣುಃ ಸ ಬಲಿಃ ಸ್ವಯಂ ॥ ೧೬೭ ॥
ಅತೋ ಮಿತ್ರೀಕೃತೋ ದೇವೈರ್ವಿಗ್ರಹೈಸ್ತು ವಿವರ್ಜಿತಃ ।
ಏಕೀಭಾವಂ ಕೃತಂ ಸರ್ವಂ ಬಲಿರಾಜ್ಯೇ ಸುರಾಸುರೈಃ ॥ ೧೬೮ ॥

---

೧೬೩. ಯಾವುದೋ ಒಂದು ದೈವಯೋಗದಿಂದ ಬಲಿಯು ಇಂದ್ರನಾಗುವನು. ಲೋಕದಲ್ಲಿ ತಂದೆಯು ಹೇಗಿರುವನೊ ಮಗನೂ ಹಾಗೆಯೇ ಆಗುವನು.

೧೬೪. ಒಂದು ವೇಳೆ ಪುತ್ರನು ತಂದೆಯಂತೆ ಆಗದಿದ್ದರೂ ಪೌತ್ರನು ಅವನಂತೆ ನಿಶ್ಚಯವಾಗಿ ಆಗುವನು. ಪ್ರಹ್ಲಾದನು ಅತ್ಯಂತ ಯೋಗಿಯೂ, ವಿಷ್ಣುಪ್ರಿಯನೂ ಆಗಿದ್ದನು.

೧೬೫. ವಿರೋಚನನು ಪ್ರಹ್ಲಾದನ ಮಗನಾಗಿದ್ದರೂ ಅವನಿಗೆ ಪಿತಾಮಹನಾದ ಹಿರಣ್ಯಕಶಿಪುವಿನ ಕೆಲವು ಗುಣಗಳು ಬಂದಿವೆ. ಅಸುರರೆ! ಜ್ಯೇಷ್ಠನಾದ ವಿರೋಚನನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದರೆ ನರಸಿಂಹನು ನಿಶ್ಚಯವಾಗಿಯೂ ಬಂದು ಅವನನ್ನು ಕೊಲ್ಲುವನು.

೧೬೬. ಮರಣದಿಂದ ಹೆದರಿದ ವಿರೋಚನನು ತಾನೇ ರಾಜ್ಯವನ್ನು ತ್ಯಜಿಸಿರುವನು. ಪ್ರಹ್ಲಾದನ ಸಕಲ ಗುಣಗಳು ಬಲಿದೇಹದಲ್ಲಿರುವುವು.

೧೬೭. ಅವರು ಹೀಗೆ ಸಿದ್ಧಾಂತ ಮಾಡಿ ಬಲಿಯನ್ನು ರಾಜ್ಯದಲ್ಲಿ ಅಭಿಷೇಕ ಮಾಡಿದರು. ಪ್ರಹ್ಲಾದನೂ, ಬಲಿಯೂ ವಿಷ್ಣು ಸ್ವರೂಪರು.

೧೬೮. ಆದ್ದರಿಂದ ಬಲಿಯು ದೇವತೆಗಳೊಡನೆ ಸ್ನೇಹಮಾಡಿಕೊಂಡು ಯುದ್ಧವನ್ನು ತ್ಯಜಿಸಿರುವನು. ಬಲಿರಾಜ್ಯದಲ್ಲಿ ಸುರಾಸುರರು ಐಕಮತ್ಯದಿಂದಿರುವರು.

ತಸ್ಯಾಪಿ ಭಾಷಿತಂ ಶ್ರುತ್ವಾ ದೇವೇಂದ್ರೋ ಮಮ ಮಂದಿರೇ ।
ಸಮಾಗತಾ ವಾಲಖಿಲ್ಯಾಃ ಶಪ್ತೋಽಹಂ ವಾಮನಃ ಕೃತಃ ॥ ೧೬೯ ॥
ಪ್ರಸಾದ್ಯ ತೇ ಮಯಾ ಪ್ರೋಕ್ತಾಃ ಶಾಪಮುಕ್ತಿಪ್ರದಾ ಮಮ ।
ಭವಿಷ್ಯಂತೀತಿ ತೈರುಕ್ತಂ ಬಲಿನಿಗ್ರಹಣಾದನು ॥ ೧೭೦ ॥
ತವಾಪಿ ಕೌತುಕಂ ಯುದ್ಧೇ ಬಲಿರ್ಯಜ್ಞಂ ಕರೋತಿ ಚ ।
ದೇವಾನಾಂ ನಿಗ್ರಹೋ ನಾಸ್ತಿ ಸರ್ವೇ ಯಜ್ಞೇ ಸಮಾಗತಾಃ ॥ ೧೭೧ ॥
ಸ ಮಾಂ ಯಜತಿ ಯಜ್ಞೇನ ವಧಂ ತಸ್ಯ ಕರೋತು ಕಃ ।
ಅಹಂ ಚ ವಾಮನೋ ಜಾತೋ ನಾರದಃ ಕೌತುಕಾನ್ವಿತಃ ॥ ೧೭೨ ॥
ವಿಪರೀತಮಿದಂ ಸರ್ವಂ ವರ್ತತೇ ಮಮ ಚೇತಸಿ ।
ತಥಾಽಪಿ ಕ್ರಮಯೋಗೇನ ಸರ್ವಂ ಭವ್ಯಂ ಕರೋಮ್ಯಹಂ ॥ ೧೭೩ ॥

ನಾರದ ಉವಾಚ :—

ಪ್ರಸಾದಂ ಕುರು ದೇವೇಶ ಯುದ್ಧಾರ್ಥಂ ಕೌತುಕಂ ಮಮ ।
ಏಕೇನ ಬ್ರಾಹ್ಮಣೇನಾಜೌ ಹನ್ಯಂತೇ ಕ್ಷತ್ರಿಯಾ ಯದಾ ।
ಪಿತ್ರಾ ಪ್ರೋಕ್ತಂ ಚ ಮೇ ಪೂರ್ವಂ ತದಾ ಯುದ್ಧಂ ಭವಿಷ್ಯತಿ ॥ ೧೭೪ ॥

---

೧೬೯. ದೇವೇಂದ್ರನ ಮಾತಿನಂತೆ ನನ್ನ ಮನೆಗೆ ಬಂದ ವಾಲಖಿಲ್ಯರು ನನ್ನನ್ನು ವಾಮನನಾಗೆಂದು ಶಪಿಸಿದರು.

೧೭೦. ನಾನು ಅವರನ್ನು ಸಂತೋಷಗೊಳಿಸಿ ನನ್ನ ಶಾಪವನ್ನು ಪರಿಹರಿಸಿರೆಂದು ಕೇಳಿಕೊಳ್ಳಲು ಅವರು ನೀನು ಬಲಿ ನಿಗ್ರಹಮಾಡಿದರೆ ನಿನ್ನ ಶಾಪವು ಪರಿಹಾರವಾಗುವುದೆಂದರು.

೧೭೧. ನಿನಗೂ ಯುದ್ಧದಲ್ಲಿ ಕುತೂಹಲವಿರುವುದು. ಬಲಿಯು ಯಜ್ಞವನ್ನು ಮಾಡುತ್ತಿರುವನು. ದೇವತೆಗಳೂ ಯುದ್ಧಮಾಡುವುದಿಲ್ಲ. ಅವರೆಲ್ಲ ಯಜ್ಞಕ್ಕೆ ಬಂದಿರುವರು.

೧೭೨. ಆ ಬಲಿಯು ನನ್ನನ್ನುದ್ದೇಶಿಸಿ ಯಾಗ ಮಾಡುತ್ತಿರುವನು. ಅವನನ್ನು ವಧಿಸುವರಾರು ? ನಾನು ವಾಮನನಾಗಿರುವೆನು. ನೀನು ಕುತೂಹಲಿಯಾಗಿರುವೆ.

೧೭೩. ಇವೆಲ್ಲ ನನ್ನ ಮನಸ್ಸಿಗೆ ವಿಪರೀತನಾಗಿ ತೋರುವುದು. ಆದರೂ ನಾನು ಕ್ರಮವಾಗಿ ಎಲ್ಲವನ್ನೂ ಸರಿಗೊಳಿಸುವೆನು.

೧೭೪. ನಾರದನು ಹೇಳುತ್ತಾನೆ :—ಸ್ವಾಮಿ ! ನೀನು ಅನುಗ್ರಹಿಸು. ನನಗೆ ಯುದ್ಧದ ವಿಷಯದಲ್ಲಿ ಬಹಳ ಕುತೂಹಲವುಂಟಾಗಿದೆ. ನನ್ನ ತಂದೆಯು ಹಿಂದೆ ಒಬ್ಬ ಬ್ರಾಹ್ಮಣನು ಯುದ್ಧದಲ್ಲಿ ಕ್ಷತ್ರಿಯರನ್ನು ಕೊಲ್ಲುವಾಗ ಯುದ್ಧವಾಗುವುದೆಂದು ಹೇಳಿರುವನು.

ಬ್ರಾಹ್ಮಣೋಸಿ ಭವಾನ್ಞ್ಞಾತಃ ಕದಾ ಯುದ್ಧಂ ಕರಿಷ್ಯಸಿ ।
ವಿಹಸ್ಯ ವಾಮನೋ ಬ್ರೂತೇ ಸತ್ಯಂ ತವ ಭವಿಷ್ಯತಿ ॥ ೧೭೫ ॥
ಜಮದಗ್ನಿಸುತೋ ಭೂತ್ವಾ ಗುರುಂ ಕೃತ್ವಾ ಮಹೇಶ್ವರಂ ।
ಕಾರ್ತವೀರ್ಯಂ ವಧಿಷ್ಯಾಮಿ ಬಹುಭಿಃ ಕ್ಷತ್ರಿಯೈಸ್ಸಹ ॥ ೧೭೬ ॥
ಸಮಂತಪಂಚಕೇ ಪಂಚ ಕರಿಷ್ಯೇ ರುಧಿರಹ್ರದಾನ್ ।
ತತ್ರಾಹಂ ತರ್ಪಯಿಷ್ಯಾಮಿ ಪಿತೄನಥ ಪಿತಾಮಹಾನ್ ॥ ೧೭೭ ॥
ಪುಣ್ಯಕ್ಷೇತ್ರಂ ಕರಿಷ್ಯಾಮಿ ಭವಾಂಸ್ತತ್ರಾಗಮಿಷ್ಯತಿ ।
ಪರಂ ಚ ಕೌತುಕಂ ಯುದ್ಧೇ ಭವಿಷ್ಯತಿ ತವ ಪ್ರಿಯಂ ॥ ೧೭೮ ॥
ಬ್ರಾಹ್ಮಣೇಭ್ಯೋ ಗ್ರಹೀಷ್ಯಂತಿ ಯದಾ ಕುಂ ಕ್ಷತ್ರಿಯಾಃ ಪುನಃ ।
ತದೈವ ತಾನ್ಹನಿಷ್ಯಾಮಿ ಪುನರ್ದಾಸ್ಯಾಮಿ ಮೇದಿನೀಂ ॥ ೧೭೯ ॥
ತ್ರಿಸಪ್ತವಾರಂ ದಾಸ್ಯಾಮಿ ಜಿತ್ವಾಜಿತ್ವಾ ವಸುಂಧರಾಂ ।
ಶಸ್ತ್ರನ್ಯಾಸಂ ಕರಿಷ್ಯಾಮಿ ನಿರ್ವಿಣ್ಣೋ ಯುದ್ಧಕರ್ಮಣಿ ।
ವಿಹರಿಷ್ಯಾಮಿ ರಮ್ಯೇಷು ವನೇಷು ಗಿರಿಸಾನುಷು ॥ ೧೮೦ ॥

---

೧೭೫ ನೀನು ಬ್ರಾಹ್ಮಣನಾಗಿರುವೆ. ಯಾವಾಗ ಯುದ್ಧಗೈಯ್ಯುವೆ ? ಎಂದು ಕೇಳಲು ವಾಮನನು ನಕ್ಕು ಹೀಗೆಂದನು. ನಿನ್ನ ಮಾತು ಸತ್ಯವಾಗುವುದು.

೧೭೬. ನಾನು ಜಮದಗ್ನಿಯ ತನಯನಾಗಿ ಮಹೇಶ್ವರನನ್ನು ಗುರುವನ್ನಾಗಿ ಮಾಡಿಕೊಂಡು ಅನೇಕಮಂದಿ ಕ್ಷತ್ರಿಯರೊಡನೆ ಕಾರ್ತವೀರ್ಯನನ್ನು ಕೊಲ್ಲುವೆನು.

೧೭೭. ನಾನು ರಕ್ತದ ಮಡುಗಳುಳ್ಳ ಸಮಂತಪಂಚಕವೆಂಬ ಐದು ತೀರ್ಥಗಳನ್ನು ನಿರ್ಮಿಸಿ ಅಲ್ಲಿ ಪಿತೃಪಿತಾಮಹರಿಗೆ ತರ್ಪಣ ಗೈಯ್ಯುವೆನು.

೧೭೮. ನಾನು ನಿರ್ಮಿಸಿದ ಆ ಪುಣ್ಯಕ್ಷೇತ್ರಕ್ಕೆ ನೀನು ಬರುವೆ. ಯುದ್ಧದಲ್ಲಿ ಅತಿಶಯ ಪ್ರೀತಿಯುಳ್ಳ ನಿನಗೆ ಅದು ಪ್ರಿಯವಾಗಿರುವುದು.

೧೭೯. ಕ್ಷತ್ರಿಯರು ಮರಳಿ ಬ್ರಾಹ್ಮಣರಿಂದ ಭೂಮಿಯನ್ನು ತೆಗೆದುಕೊಂಡ ಕೂಡಲೆ ಅವರನ್ನು ಕೊಂದು ತಿರುಗಿ ಬ್ರಾಹ್ಮಣರಿಗೆ ಭೂಮಿಯನ್ನು ಕೊಡಿಸುವೆನು.

೧೮೦. ಹೀಗೆ ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಗೆದ್ದು ಭೂಮಿಯನ್ನು ಬ್ರಾಹ್ಮಣರಿಗೀಯುವೆನು. ಬಳಿಕ ಯುದ್ಧದಲ್ಲಿ ವಿರಕ್ತನಾಗಿ ಶಸ್ತ್ರವನ್ನು ತ್ಯಜಿಸಿ ರಮ್ಯವಾದ ಪರ್ವತಗಳ ತಪ್ಪಲುಗಳಲ್ಲಿ ವಿಹರಿಸುವೆನು.

ಲಂಕಾಯಾಂ ರಾವಣೋ ರಾಜ್ಯಂ ಕರಿಷ್ಯತಿ ಮಹಾಬಲಃ ।
ತ್ರೈಲೋಕ್ಯಕಂಟಕಂ ನಾಮ ಯದಾಸೌ ಧಾರಯಿಷ್ಯತಿ || ೧೪೧ ||
ತದಾ ದಾಶರಥೀ ರಾಮಃ ಕೌಸಲ್ಯಾನಂದವರ್ಧನಃ ।
ಭವಿಷ್ಯೇ ಭ್ರಾತೃಭಿಸ್ಸಾರ್ಧಂ ಗಮಿಷ್ಯೇ ಯಜ್ಞಮಂಡಪೇ || ೧೪೨ ||
ತಾಡಕಾಂ ತಾಡಯಿತ್ವಾಹಂ ಸುಬಾಹುಂ ಯಜ್ಞಮಂದಿರೇ ।
ನೀತ್ವಾ ಯಜ್ಞಾದ್ಗಮಿಷ್ಯಾಮಿ ಸೀತಾಯಾಸ್ತು ಸ್ವಯಂವರೇ || ೧೪೩ ||
ಪರಿಣೇಷ್ಯಾಮಿ ತಾಂ ಸೀತಾಂ ಭಂಕ್ತ್ವಾ ಮಾಹೇಶ್ವರಂ ಧನುಃ ।
ತ್ಯಕ್ತ್ವಾ ರಾಜ್ಯಂ ಗಮಿಷ್ಯಾಮಿ ವನೇ ವರ್ಷಾಂಶ್ಚತುರ್ದಶ || ೧೪೪ ||
ಸೀತಾಹರಣಜಂ ದುಃಖಂ ಪ್ರಥಮಂ ಮೇ ಭವಿಷ್ಯತಿ ।
ನಾಸಾಕರ್ಣವಿಹೀನಾಂ ತಾಂ ಕರಿಷ್ಯೇ ರಾಕ್ಷಸೀಂ ವನೇ || ೧೪೫ ||
ಚತುರ್ದಶಸಹಸ್ರಾಣಿ ತ್ರಿಶಿರಃಖರದೂಷಣಾ ।
ಹತ್ವಾ ಹನಿಷ್ಯೇ ಮಾರೀಚಂ ರಾಕ್ಷಸಂ ಮೃಗರೂಪಿಣಂ || ೧೪೬ ||
ಹೃತದಾರೋ ಗಮಿಷ್ಯಾಮಿ ದಗ್ಧ್ವಾ ಗೃಧ್ರಂ ಜಟಾಯುಷಂ ।
ಸುಗ್ರೀವೇಣ ಸಮಂ ಮೈತ್ರೀಂ ಕೃತ್ವಾ ಹತ್ವಾಽಥ ವಾಲಿನಂ || ೧೪೭ ||

---

೧೪೧–೧೪೨. ಮಹಾಬಲಶಾಲಿಯಾದ ರಾವಣನು ಲಂಕೆಯಲ್ಲಿ ರಾಜ್ಯವಾಳುತ್ತ ತ್ರೈಲೋಕ್ಯ ಕಂಟಕನೆಂಬ ಹೆಸರನ್ನಾಂತ ಕೂಡಲೆ ದಶರಥರಾಜನಿಂದ ಕೌಸಲ್ಯೆಯಲ್ಲಿ ರಾಮನೆಂಬ ಮಗನಾಗಿ ಜನಿಸಿ ಸಹೋದರನಾದ ಲಕ್ಷ್ಮಣನೊಡನೆ ವಿಶ್ವಾಮಿತ್ರಮುನಿಯು ಯಜ್ಞಶಾಲೆಗೆ ಹೋಗುವೆನು.

೧೪೩. ದಾರಿಯಲ್ಲಿ ತಾಡಕೆಯನ್ನು ಕೊಂದು ಯಜ್ಞಶಾಲೆಯಲ್ಲಿ ಸುಬಾಹುವನ್ನು ವಧಿಸಿ ಸೀತಾ ಸ್ವಯಂವರಕ್ಕೆ ತೆರಳುವೆನು.

೧೪೪. ಅಲ್ಲಿ ಮಾಹೇಶ್ವರ ಧನುಸ್ಸನ್ನು ಮುರಿದು ಸೀತೆಯನ್ನು ವಿವಾಹಮಾಡಿಕೊಂಡು ರಾಜ್ಯವನ್ನು ತ್ಯಜಿಸಿ ಕಾಡಿನಲ್ಲಿ ಹದಿನಾಲ್ಕು ವರ್ಷಗಳಕಾಲ ವಾಸಿಸುವೆನು.

೧೪೫. ಆ ಕಾಡಿನಲ್ಲಿ ಶೂರ್ಪಣಖೆಯ ಕಿವಿ ಮೂಗುಗಳನ್ನು ಕತ್ತರಿಸಿ ಮೊದಲು ಸೀತಾಪಹಾರದಿಂದುಂಟಾದ ದುಃಖವನ್ನನುಭವಿಸುವೆನು.

೧೪೬. ಅಲ್ಲಿ ಖರದೂಷಣ ಮೊದಲಾದ ಹದಿನಾಲ್ಕು ಸಾವಿರಮಂದಿ ರಾಕ್ಷಸರನ್ನು ಕೊಂದು ಮೃಗರೂಪಿಯಾದ ಮಾರೀಚನನ್ನೂ ವಧಿಸುವೆನು.

೧೪೭–೧೪೮. ದಾರಾಪಹಾರದಿಂದ ದುಃಖಿತನಾಗಿ ರಾವಣನು ಕೊಂದ ಜಟಾಯುವನ್ನು ದಹನಮಾಡಿ ಸುಗ್ರೀವನೊಡನೆ ಸಖ್ಯಮಾಡಿಕೊಂಡು ವಾಲಿಯನ್ನು

ಸಮುದ್ರಂ ಬಂಧಯಿಷ್ಯಾಮಿ ನಲಪ್ರಮುಖವಾನರೈಃ ।
ಲಂಕಾಂ ಸಂವೇಷ್ಟಯಿಷ್ಯಾಮಿ ಮಾರಯಿಷ್ಯಾಮಿ ರಾಕ್ಷಸಾನ್ ॥ ೧೮೮ ॥
ಕುಂಭಕರ್ಣಂ ನಿಹತ್ಯಾಜೌ ಮೇಘನಾದಂ ತತೋ ರಣೇ ।
ನಿಹತ್ಯ ರಾವಣಂ ರಕ್ಷಃ ಪಶ್ಯತಾಂ ಸರ್ವರಕ್ಷಸಾಂ ॥ ೧೮೯ ॥
ವಿಭೀಷಣಾಯ ದಾಸ್ಯಾಮಿ ಲಂಕಾಂ ದೇವವಿನಿರ್ಮಿತಾಂ ।
ಅಯೋಧ್ಯಾಂ ಪುನರಾಗತ್ಯ ಕೃತ್ವಾ ರಾಜ್ಯಮಕಂಟಕಂ ॥ ೧೯೦ ॥
ಕಾಲದುರ್ವಾಸಸೋಶ್ಚಿತ್ರಚರಿತ್ರೇಣಾಮರಾವತೀಂ ।
ಯಾಸ್ಯೇಽಹಂ ಭ್ರಾತೃಭಿಸ್ಸಾರ್ಧಂ ರಾಜ್ಯಂ ಪುತ್ರೇ ನಿವೇದ್ಯ ಚ ॥ ೧೯೧ ॥
ದ್ವಾಪರೇ ಸಮನುಪ್ರಾಪ್ತೇ ಕ್ಷತ್ರಿಯೈರ್ಬಹುಭಿರ್ಮಹೀ ।
ಭಾರಾಕ್ರಾಂತಾ ನ ಶಕ್ನೋತಿ ಪಾತಾಲಂ ಗಂತುಮುದ್ಯತಾ ॥ ೧೯೨ ॥
ಮಥುರಾಯಾಂ ತದಾ ಕರ್ತಾ ರಾಜ್ಯಂ ಕಂಸೋ ಮಹಾಸುರಃ ।
ಶಿಶಪಾಲಜರಾಸಂಧೌ ಕಾಲನೇಮಿರ್ಮಹಾಸುರಃ ॥ ೧೯೩ ॥
ಪೌಂಡ್ರಕೋ ವಾಸುದೇವಶ್ಚ ಬಾಣೋ ರಾಜಾ ಮಹಾಸುರಃ ।
ಗಜವಾಜಿತುರಂಗಾಢ್ಯಾ ವಧ್ಯಂತೇ ಮೇ ತದಾ ಮುನೇ ॥ ೧೯೪ ॥

---

ವಧಿಸಿ ನಳನೇ ಮೊದಲಾದ ವಾನರರಿಂದ ಸಮುದ್ರಕ್ಕೆ ಸೇತುವೆ ಕಟ್ಟಿಸಿ ಲಂಕೆಯನ್ನು ಸೇರಿ ರಾಕ್ಷಸರನ್ನು ಕೊಲ್ಲುವೆನು.

೧೮೯—೧೯೧. ಯುದ್ಧದಲ್ಲಿ ಕುಂಭಕರ್ಣ, ಮೇಘನಾದ, ರಾವಣ ಇವರನ್ನು ಎಲ್ಲ ರಾಕ್ಷಸರೂ ನೋಡುತ್ತಿರುವಾಗಲೆ ವಧಿಸಿ ದೇವನಿರ್ಮಿತವಾದ ಲಂಕೆಯನ್ನು ವಿಭೀಷಣನಿಗೆ ಕೊಡುವೆನು. ಮರಳಿ ಅಯೋಧ್ಯೆಗೆ ಬಂದು ರಾಜ್ಯವನ್ನು ನಿಷ್ಕಂಟಕವನ್ನಾಗಿಸಿ ಮಕ್ಕಳಿಗೆ ರಾಜ್ಯವನ್ನೊಪ್ಪಿಸಿ ಸಹೋದರರೊಡನೆ ಕಾಲದುರ್ವಾಸರ ಅದ್ಭುತ ಚರಿತ್ರೆಯಿಂದ ಅಮರಾವತಿಗೆ ತೆರಳುವೆನು.

೧೯೨. ದ್ವಾಪರಯುಗವು ಬರಲು ಅನೇಕ ಮಂದಿ ಕ್ಷತ್ರಿಯರಿಂದ ಭಾರಗೊಂಡ ಭೂಮಿಯು ನಿಲ್ಲಲಶಕ್ತವಾಗಿ ಪಾತಾಳಕ್ಕೆ ಹೋಗಲುದ್ಯುಕ್ತವಾಗುವುದು.

೧೯೩—೧೯೪. ಆಗ ನಾನು ಆನೆ, ಕುದುರೆಗಳಿಂದ ಸಹಿತರಾದ ಮಥುರಾ ರಾಜನಾದ ಕಂಸ, ಶಿಶುಪಾಲ, ಜರಾಸಂಧ, ಕಾಲನೇಮಿ, ಪೌಂಡ್ರಕ, ವಾಸುದೇವ, ಬಾಣ ಮೊದಲಾದವರನ್ನು ಕೊಲ್ಲುವೆನು.

ಕಲೌ ಸ್ವಲ್ಪೋದಕಾ ಮೇಘಾ ಅಲ್ಪದುಗ್ಧಾಶ್ಚ ಧೇನವಃ ।
ದುಗ್ಧೇ ಘೃತಂ ನ ಚೈವಾಸ್ತಿ ನಾಸ್ತಿ ಸತ್ಯಂ ಜನೇಷು ಚ ॥ ೧೯೫ ॥
ಚೋರೈರುಪಹತಾ ಲೋಕಾ ವ್ಯಾಧಿಭಿಃ ಪರಿಪೀಡಿತಾಃ ।
ತ್ರಾತಾರಂ ನಾಭಿಗಚ್ಛಂತಿ ಯುದ್ಧಾವಸ್ಥಾಂ ಗತಾ ಅಪಿ ॥ ೧೯೬ ॥
ಕ್ಷುದ್ರಾಃ ಪಶ್ಚಿಮವಾಹಿನ್ಯೋ ನದ್ಯಶ್ಶುಷ್ಯಂತಿ ಕಾರ್ತಿಕೇ ।
ಏಕಾದಶೀವ್ರತಂ ನಾಸ್ತಿ ಕೃಷ್ಣಾ ಯಾ ಚ ಚತುರ್ದಶೀ ॥ ೧೯೭ ॥
ನ ಜಾನಾತಿ ಜನಃ ಕಶ್ಚಿದ್ವ್ಯತಿಕ್ರಾಂತಮಪಿ ಸ್ವೇ ಗೃಹೇ ।
ದರಿದ್ರೋಪಹತಂ ಸರ್ವಂ ಸಂಧ್ಯಾಸ್ನಾನವಿವರ್ಜಿತಂ ।
ಭವಿಷ್ಯತಿ ಕಲೌ ಸರ್ವಂ ನ ತತ್ಪೂರ್ವಯುಗತ್ರಯೇ ॥ ೧೯೮ ॥
ಪಿತರಂ ಮಾತರಂ ಪುತ್ರಸ್ತ್ಯಕ್ತ್ವಾ ಭಾರ್ಯಾಂ ನಿಷೇವತೇ ।
ನ ಗುರುಃ ಸ್ವಜನಃ ಕಶ್ಚಿತ್ಕೋಽಪಿ ಕಂ ನಾನುಸೇವತೇ ॥ ೧೯೯ ॥
ಯಥಾಯಥಾ ಕಲಿರ್ವ್ಯಾಪ್ತಿಂ ಕರೋತಿ ಧರಣೀತಲೇ ।
ತಥಾತಥಾ ಜನಃ ಸರ್ವ ಏಕಾಕಾರೋ ಭವಿಷ್ಯತಿ ॥ ೨೦೦ ॥

---

೧೯೫. ಕಲಿಯುಗದಲ್ಲಿ ಮೇಘಗಳು ಸ್ವಲ್ಪ ನೀರುಳ್ಳವೂ, ಹಸುಗಳು ಸ್ವಲ್ಪ ಹಾಲುಳ್ಳವೂ ಆಗುವುವು. ಹಾಲಿನಲ್ಲಿ ತುಪ್ಪವೂ, ಜನರಲ್ಲಿ ಸತ್ಯವೂ ಇರುವುದಿಲ್ಲ.

೧೯೬. ಲೋಕದ ಜನರು ಕಳ್ಳರಿಂದಲೂ, ರೋಗಗಳಿಂದಲೂ ಪೀಡಿತರಾಗಿ ಯುದ್ಧಮಾಡಬೇಕಾದ ಸ್ಥಿತಿಯೊದಗಿದರೂ ರಕ್ಷಕರನ್ನು ಹೊಂದುವುದಿಲ್ಲ.

೧೯೭. ಪಶ್ಚಿಮದಿಕ್ಕಿಗೆ ಹರಿಯುವ ಅಲ್ಪ ನದಿಗಳು ಕಾರ್ತಿಕಮಾಸದಲ್ಲಿ ಒಣಗುವುವು. ಜನರು ಏಕಾದಶೀ ಕೃಷ್ಣಚತುರ್ದಶೀ ದಿನಗಳಲ್ಲಿ ವ್ರತವನ್ನಾಚರಿಸುವುದಿಲ್ಲ.

೧೯೮. ಒಬ್ಬ ಮನುಷ್ಯನೂ ತನ್ನ ಮನೆಯಲ್ಲಿ ನಡೆದ ಅತಿಕ್ರಮಣವನ್ನರಿಯುವುದಿಲ್ಲ. ಎಲ್ಲರೂ ಸಂಧ್ಯಾವಂದನೆ, ಸ್ನಾನ ಇವುಗಳಿಲ್ಲದವರೂ, ಬಡವರೂ ಆಗುವರು. ಹಿಂದಿನ ಮೂರು ಯುಗಗಳಲ್ಲಿ ಹೀಗಾಗುವುದಿಲ್ಲ.

೧೯೯. ಪುತ್ರನು ತಾಯಿ ತಂದೆಗಳನ್ನು ತ್ಯಜಿಸಿ ಪತ್ನಿಯನ್ನು ಸೇವಿಸುತ್ತಾನೆ. ಗುರುಗಳೂ, ಬಂಧುಗಳೂ ಇರುವುದಿಲ್ಲ. ಯಾರೂ ಯಾರನ್ನೂ ಸೇವಿಸುವುದಿಲ್ಲ.

೨೦೦. ಕಲಿಯು ವ್ಯಾಪಿಸಿದ ಹಾಗೆಲ್ಲ ಭೂಮಿಯಲ್ಲಿ ಜನರೆಲ್ಲ ಒಂದೇ ವಿಧರಾಗುತ್ತಾರೆ.

ಮ್ಲೇಚ್ಛೈರುಪಹತಂ ಸರ್ವಂ ಸಂಧ್ಯಾಸ್ನಾನವಿವರ್ಜಿತಂ ।
ಕಲ್ಕಿರಿತ್ಯಭಿವಿಖ್ಯಾತೋ ಭವಿಷ್ಯೇ ಬ್ರಾಹ್ಮಣೋ ಹ್ಯಹಂ ॥ ೨೦೧ ॥
ಮ್ಲೇಚ್ಛಾನಾಂ ಛೇದನಂ ಕೃತ್ವಾ ಯಾಜ್ಞವಲ್ಕ್ಯಪುರೋಹಿತಃ ।
ಬಹುಸ್ವರ್ಣೇನ ಯಜ್ಞೇನ ಯಕ್ಷ್ಯೇ ನಿಷ್ಕೃತಿಕಾರಣಾತ್ ॥ ೨೦೨ ॥
ಭವಿಷ್ಯಂತ್ಯವತಾರಾ ಮೇ ಯುದ್ಧಂ ತೇಷು ಭವಿಷ್ಯತಿ ।
ಇದಾನೀಂ ಬಲಿನಾ ಯುದ್ಧಂ ಕರಿಷ್ಯಂತಿ ನ ದೇವತಾಃ ॥ ೨೦೩ ॥
ಸ ಮಾಂ ಯಜತಿ ದೈತ್ಯೇಂದ್ರೋ ನ ಮೇ ವಧ್ಯೋ ಬಲಿರ್ಭವೇತ್ ।
ಸರ್ವಸ್ವದಾನನಿಯಮಂ ಕರೋತಿ ಸ ಮಹಾಧ್ವರೇ ॥ ೨೦೪ ॥

ಸಾರಸ್ವತ ಉವಾಚ :—

ಇತ್ಯುಕ್ತ್ವಾ ನಾರದಂ ದೇವೋ ವಿಸೃಜ್ಯ ತಮಥಾಭ್ಯಗಾತ್ ।
ದ್ರಷ್ಟುಂ ಬಲಿಕೃತಂ ಯಜ್ಞಂ ದೇವಕಾರ್ಯಪ್ರಸಿದ್ಧಯೇ ॥ ೨೦೫ ॥
ವಾಮನೋ ನಗರಂ ಗತ್ವಾ ವೀಕ್ಷಮಾಣೋ ಗೃಹಾದ್ಗೃಹಂ ।
ಬ್ರಾಹ್ಮಣಾನಾಂ ಗೃಹಂ ಗತ್ವಾ ಭೋಜನಂ ಸ ತು ಯಾಚತೇ ॥ ೨೦೬ ॥

---

೨೦೧. ಎಲ್ಲರೂ ಮ್ಲೇಚ್ಛರಿಂದ ಪೀಡಿತರಾಗಿ ಸಂಧ್ಯಾವಂದನೆ ಸ್ನಾನಗಳನ್ನು ತ್ಯಜಿಸುವರು. ಆಗ ನಾನು ಕಲ್ಕಿಯೆಂಬ ಬ್ರಾಹ್ಮಣನಾಗಿ ಅವತರಿಸುವೆನು.

೨೦೨. ನಾನು ಮ್ಲೇಚ್ಛರನ್ನು ನಾಶಗೊಳಿಸಿ ಯಾಜ್ಞವಲ್ಕ್ಯರನ್ನು ಪುರೋಹಿತರನ್ನಾಗಿಟ್ಟುಕೊಂಡು ಪ್ರಾಯಶ್ಚಿತ್ತಕ್ಕಾಗಿ ಅನೇಕ ಸುವರ್ಣಸಾಧ್ಯವಾದ ಯಜ್ಞವನ್ನು ಮಾಡುವೆನು.

೨೦೩. ನನ್ನ ಅವತಾರಗಳು ಆದಾಗ ಆ ದಾನವರೊಡನೆ ಯುದ್ಧ ನಡೆಯುವುದು. ಈಗ ದೇವತೆಗಳು ಬಲಿಯೊಡನೆ ಯುದ್ಧಗೈಯುವುದಿಲ್ಲ.

೨೦೪. ಆ ದೈತ್ಯರಾಜನು ನನ್ನನ್ನು ಪೂಜಿಸುವುದರಿಂದ ನನಗೆ ವಧ್ಯನಾಗುವುದಿಲ್ಲ. ಅವನು ಮಹಾ ಯಾಗದಲ್ಲಿ ಸಕಲವನ್ನೂ ದಾನಗೈಯುವೆನೆಂದು ನಿಯಮ ಮಾಡಿಕೊಂಡಿದ್ದಾನೆ.

೨೦೫. ಸಾರಸ್ವತನು ಹೇಳುತ್ತಾನೆ :—ವಾಮನನು ಹೀಗೆ ಹೇಳಿ ನಾರದನನ್ನು ಅಲ್ಲಿಯೇ ಬಿಟ್ಟು ದೇವತೆಗಳ ಕಾರ್ಯಸಿದ್ಧಿಗಾಗಿ ಬಲಿಯು ಮಾಡುತ್ತಿರುವ ಯಜ್ಞವನ್ನು ನೋಡಲು ಹೋದನು.

೨೦೬. ಅವನು ಪಟ್ಟಣಕ್ಕೆ ಹೋಗಿ ಮನೆಯಿಂದ ಮನೆಯನ್ನು ನೋಡುತ್ತ ಬ್ರಾಹ್ಮಣರ ಮನೆಯನ್ನು ಹೊಕ್ಕು ಭೋಜನವನ್ನು ಯಾಚಿಸಿದನು.

ನಿತ್ಯಂ ಸ್ನಾನಪರೋ ವಿಪ್ರೋ ವೇದಾಧ್ಯಯನತತ್ಪರಃ ।
ವಾಮನೋ ಲಭತೇ ಭಿಕ್ಷಾಂ ಭೋಜನಂ ದ್ವಿಜಮಂದಿರೇ ॥ ೨೦೭ ॥
ಚತಷ್ಪಥೇಷು ರಮ್ಯೇಷು ದೇವತಾಯತನೇಷು ಚ ।
ಆಸ್ತೇ ಪರಿವೃತೋ ಲೋಕೈಶ್ಚಾಲಯನ್ವಿಪುಲಾಂ ಕಟಿಂ ॥ ೨೦೮ ॥
ಶಿರೋ ವಿಧೂನತೇ ಸ್ಥೂಲಂ ಸ್ಥೂಲಸ್ಕಂಧೋ ಮಹಾಹನುಃ ।
ನೃತ್ಯತೇ ತಾಲಮಾನೇನ ಗಾಯತ್ಯತಿಮನೋಹರಂ ॥ ೨೦೯ ॥
ವೇದಾನಧೀತೇ ಚತುರೋ ವಾಮನೋ ದ್ವಿಜಸಂಸದಿ ।
ದೈತ್ಯಾನಾಂ ತನಯಾಸ್ಸರ್ವೇ ಬ್ರಾಹ್ಮಣಾನಾಂ ತಥೈವ ಚ ॥ ೨೧೦ ॥
ವಾಮನಂ ಪರ್ಯುಪಾಸಂತೇ ದಿವಾರಾತ್ರಂ ಮನೋರಮಂ ।
ಅಥ ತೈಸ್ಸಕಲೈರ್ನೀತೋ ವಾಮನೋ ಯಜ್ಞಮಂಡಪೇ ॥ ೨೧೧ ॥
ನಿಶ್ಚಿತಂ ಮಹಿಕಾಸ್ಥಾನಂ ಯಾಚಿತವ್ಯೋ ಬಲಿಸ್ತ್ವಯಾ ।
ತದಾಸ್ಮಾಕಂ ಮಹಚ್ಛ್ರೇಯೋ ದೇಶಸ್ಯ ನಗರಸ್ಯ ಚ ॥ ೨೧೨ ॥
ವಿಜ್ಞಪ್ತೋ ವಾಮನಃ ಸರ್ವೈರ್ದೈತ್ಯದ್ವಿಜಕುಮಾರಕೈಃ ।
ತ್ವಯಾ ವಾಮನ ವಸ್ತವ್ಯಂ ದೈತ್ಯೇಂದ್ರನಗರೇ ಸದಾ ॥ ೨೧೩ ॥

---

೨೦೭. ನಿತ್ಯವೂ ಸ್ನಾನಮಾಡುವವನೂ, ವೇದಾಧ್ಯಯನ ನಿರತನೂ, ಆಗಿ ಬ್ರಾಹ್ಮಣರ ಭಿಕ್ಷೆಯನ್ನು ಪಡೆಯುವನು.

೨೦೮. ಅವನು ರಮ್ಯವಾದ ಚೌಕ, ದೇವಾಲಯಗಳಲ್ಲಿ ಜನರೊಡನೆ ತನ್ನ ವಿಶಾಲವಾದ ಸೊಂಟವನ್ನು ಅಲ್ಲಾಡಿಸುತ್ತ ನಿಂತಿರುವನು.

೨೦೯. ಸ್ಥೂಲವಾದ ಕುತ್ತಿಗೆಯುಳ್ಳವನೂ, ದೊಡ್ಡ ಕಪೋಲಗಳುಳ್ಳವನೂ ಆದ ಆ ವಾಮನನು ದಪ್ಪವಾದ ತನ್ನ ತಲೆಯನ್ನು ಅಲ್ಲಾಡಿಸುತ್ತಾನೆ. ತಾಳವನ್ನನು ಸರಿಸಿ ಕುಣಿಯುವನು. ಅತಿ ಮಧುರವಾಗಿ ಹಾಡುವನು.

೨೧೦–೨೧೧. ಅವನು ಬ್ರಾಹ್ಮಣರ ಸಭೆಯಲ್ಲಿ ನಾಲ್ಕು ವೇದಗಳನ್ನು ಅಧ್ಯಯನ ಮಾಡುವನು. ದೈತ್ಯರ ಮತ್ತು ಬ್ರಾಹ್ಮಣರ ಮಕ್ಕಳೆಲ್ಲ ಹಗಲು ರಾತ್ರಿ ಆ ವಾಮನನನ್ನು ಸೇವಿಸುತ್ತಾರೆ. ಬಳಿಕ ಅವರೆಲ್ಲ ಆ ವಾಮನನನ್ನು ಯಜ್ಞಶಾಲೆಗೆ ಕರೆದುಕೊಂಡು ಹೋದರು.

೨೧೨–೨೧೩. ದೈತ್ಯರ ಮತ್ತು ಬ್ರಾಹ್ಮಣರ ಮಕ್ಕಳು ವಾಮನನನ್ನು ಕುರಿತು "ವಾಮನ! ನೀನು ಬಲಿಯೆಡೆಗೆ ಹೋಗಿ ನಿಶ್ಚಯವಾಗಿಯೂ ಮಠದ ಪ್ರದೇಶವನ್ನು ಬೇಡಬೇಕು. ಅದು ನಮ್ಮ ದೇಶ ಮತ್ತು ಪಟ್ಟಣಗಳಿಗೆ ಅತ್ಯಂತ ಶ್ರೇಯಸ್ಸನ್ನುಂಟು ಮಾಡುವುದು. ಅವನ ನಗರದಲ್ಲಿ ಯಾವಾಗಲೂ ವಾಸಮಾಡಬೇಕು" ಎಂದು ಬಿನ್ನೈಸಿದರು.

ಸಾರಸ್ವತ ಉವಾಚ :—
ಪ್ರವಿವೇಶ ತಥೇತ್ಯುಕ್ತ್ವಾ ವಾಮನೋ ಯಜ್ಞಮಂಡಪೇ ।
ತತಃ ಕೋಲಾಹಲೋ ಜಾತೋ ದ್ವಾಃಸ್ಥೈರ್ದ್ವಾರಿ ಕೃತೋ ಮಹಾನ್ ॥
ಬ್ರಾಹ್ಮಣೈರ್ಬಹುಭಿಸ್ಸಾರ್ಧಂ ವೇದಾನುಚ್ಚಾರಯನ್ಸ್ಥಿತಃ ।
ತತೋ ವೇದಧ್ವನಿರ್ಜಾತೋ ಮಹಾನ್ವೈ ಯಜ್ಞಮಂಡಪೇ ॥ ೨೧೫ ॥
ಪ್ರವಿಷ್ಟೌ ಪ್ರಥಮಂ ದೈತ್ಯೌ ದೈತ್ಯಾಯ ವಿನಿವೇದಿತಃ ।
ದ್ರಷ್ಟುಂ ಸಮಾಗತೋ ದೇವ ಬ್ರಾಹ್ಮಣೋ ವಾಮನೋಽಧ್ವರೇ ॥ ೨೧೬ ॥
ಭವಂತಂ ಕೌತುಕಾತ್ತಾವದ್ದ್ವಾರದೇಶೇ ಸಮಾವಿಶತ್ ।
ಏಕ ಏವ ಯಥಾ ಯಾತಿ ವಾಮನಸ್ತವ ಸನ್ನಿಧೌ ॥ ೨೧೭ ॥
ನಿರೀಹೋ ವಾಮನೋ ದೇವ ಯಾವತ್ತತ್ರೈವ ಕಿಂಚನ ।
ವೇದಾನಾಂ ತು ಧ್ವನಿಂ ಕೃತ್ವಾ ಚತುರ್ಣಾಮೇಕವಕ್ತ್ರತಃ ॥ ೨೧೮ ॥
ಬಲಿರ್ಹೃಷ್ಟೋಽಬ್ರವೀದ್ವಾಕ್ಯಂ ದ್ವಾಃಸ್ಥಮೇನಂ ಪ್ರವೇಶಯ ।
ಪೂಜಯಿಷ್ಯಾಮಿ ವಿಪ್ರೇಂದ್ರಂ ದಾಸ್ಯೇ ಚಾಸ್ಯ ಯದೀಪ್ಸಿತಂ ॥ ೨೧೯ ॥

---

೨೧೪. ವಾಮನನು ಹಾಗೆಯೇ ಆಗಲೆಂದು ಯಜ್ಞಶಾಲೆಯನ್ನು ಹೊಕ್ಕನು. ಅನಂತರ ಬಾಗಿಲಿನಲ್ಲಿ ಬಾಗಿಲನ್ನು ಕಾಯುವವರು ದೊಡ್ಡ ಗದ್ದಲವನ್ನು ಮಾಡಿದರು.

೨೧೫. ಅವನು ಅನೇಕ ಮಂದಿ ಬ್ರಾಹ್ಮಣರೊಡನೆ ವೇದವನ್ನುಚ್ಚರಿಸುತ್ತ ಇದ್ದನು. ಅನಂತರ ಯಜ್ಞಶಾಲೆಯಲ್ಲಿ ದೊಡ್ಡ ವೇದ ಧ್ವನಿಯುಂಟಾಯಿತು.

೨೧೬–೨೧೭. ಆಗ ಮೊದಲು ಪ್ರವೇಶಿಸಿದ ಇಬ್ಬರು ದೈತ್ಯರು ಬಲಿಗೆ ಹೀಗೆ ತಿಳಿಸಿದರು. ವಾಮನ ಬ್ರಾಹ್ಮಣನು ಯಜ್ಞದಲ್ಲಿ ನಿನ್ನನ್ನು ನೋಡಲು ಕುತೂಹಲದಿಂದ ಬಾಗಿಲಿನಲ್ಲಿರುವನು. ಅವನೊಬ್ಬನೆ ನಿನ್ನ ಹತ್ತಿರಕ್ಕೆ ಬರುತ್ತಾನೆ.

೨೧೮. ಸ್ವಾಮಿ ! ಯಾವುದನ್ನೂ ಅಪೇಕ್ಷಿಸದ ಅವನು ಅಲ್ಲಿಯೇ ಒಂದೇ ಬಾಯಿಯಿಂದ ನಾಲ್ಕು ವೇದಗಳನ್ನುಚ್ಚರಿಸುತ್ತ ಧ್ವನಿಮಾಡುತ್ತಿರುವನು.

೨೧೯. ಅದನ್ನು ಕೇಳಿ ಬಲಿಯು ಸಂತೋಷಗೊಂಡು ಬಾಗಿಲನ್ನು ಕಾಯುವರನ್ನು ಕುರಿತು ಹೀಗೆಂದನು. ಆ ಬ್ರಾಹ್ಮಣನನ್ನು ನಾನು ಪೂಜಿಸಿ ಅವನ ಇಷ್ಟಾರ್ಥಗಳನ್ನೀಯುವೆನು.

ಸ್ಮರಾಮಿ ಸ್ಮೃತಿವಾಕ್ಯಾನಿ ಯಾನಿ ಪ್ರಾಹ ಗುರುರ್ಮಮ ।
ಕಿಂಚಿದ್ವೇದಮಯಂ ಪಾತ್ರಂ ಕಿಂಚಿತ್ಪಾತ್ರಂ ತಪೋಮಯಂ ॥ ೨೨೦ ॥
ಆಗಮಿಷ್ಯತಿ ಯತ್ಪಾತ್ರಂ ತತ್ಪಾತ್ರಂ ತಾರಯಿಷ್ಯತಿ ।
ಯಜ್ಞೇ ಪ್ರವರ್ತಮಾನೇ ತು ದಾತವ್ಯಾ ದಕ್ಷಿಣಾ ಮಯಾ ॥ ೨೨೧ ॥
ವಾಮನೋ ನ ವಿಚಾರ್ಯಸ್ತು ಸತ್ಯಮಸ್ತು ವಚೋ ಮಮ ।
ಇತಿ ಶ್ರುತ್ವಾ ಗುರುಃ ಶುಕ್ರೋ ವಾರಯಾಮಾಸ ತಂ ಬಲಿಂ ॥ ೨೨೨ ॥
ಶುಕ್ರ ಉವಾಚ :—
ದ್ವಾರಿ ಪೂಜ್ಯಾ ದ್ವಿಜಾಃ ಸರ್ವೇ ದೀನಾಂಧಕೃಪಣಾದಯಃ ।
ಬಧಿರಾ ವಾಮನಾಃ ಕುಬ್ಜಾ ರೋಗಿಣೋ ಯೇ ತು ನಿಷ್ಠುರಾಃ ॥ ೨೨೩ ॥
ಸುವರ್ಣರಜತೈರ್ವಸ್ತ್ರೈರ್ವಾಮನೋ ದ್ವಾರಿ ಪೂಜ್ಯತಾಂ ।
ಚತುರ್ಣಾಂ ತು ವೃಥಾ ಜನ್ಮ ವೃಥಾದಾನಾನಿ ಷೋಡಶ ॥ ೨೨೪ ॥
ಅಪುತ್ರಾಣಾಂ ವೃಥಾ ಜನ್ಮ ಯೇ ಚ ಧರ್ಮಬಹಿಷ್ಕೃತಾಃ ।
ಪರಪಾಕಂ ಚ ಯೇಽಶ್ನಂತಿ ಪರದಾರರತಾಶ್ಚ ಯೇ ॥ ೨೨೫ ॥

---

೨೨೦–೨೨೧. ಕೆಲವು ದಾನಪಾತ್ರರು ವೇದಮಯರೂ, ಕೆಲವರು ತಪೋಮಯರೂ ಆಗಿರುತ್ತಾರೆ. ಅಂತಹ ಪಾತ್ರನು ಬಂದು ನಿನ್ನನ್ನು ಉದ್ಧಾರಮಾಡುವೆನೆಂದು ನನ್ನ ಗುರುಗಳು ಹೇಳಿದ ಸ್ಮೃತಿ ವಾಕ್ಯಗಳನ್ನು ಸ್ಮರಿಸುತ್ತೇನೆ. ಯಜ್ಞವು ನಡೆಯುತ್ತಿರುವಾಗ ನಾನು ದಕ್ಷಿಣೆಯನ್ನು ಕೊಡಬೇಕು.

೨೨೨. ಈತನು ವಾಮನನಾಗಿರುವನೆಂದು ಆಲೋಚಿಸಕೂಡದು. ನನ್ನ ಮಾತು ಸತ್ಯವಾಗಲಿ. ಬಲಿಯು ಹೀಗೆನ್ನಲು ಅದನ್ನು ಕೇಳಿ ಗುರುವಾದ ಶುಕ್ರಾಚಾರ್ಯನು ಅವನನ್ನು ತಡೆದನು.

೨೨೩. ಶುಕ್ರನು ಹೇಳುತ್ತಾನೆ :—ದೀನ, ಕುರುಡ, ಕೃಪಣ, ಕಿವುಡ, ವಾಮನ, ಕುಬ್ಜ, ರೋಗಿ, ಕಠಿನ ಇವರನ್ನು ಬಾಗಿಲಿನಲ್ಲಿಯೇ ಪೂಜಿಸಬೇಕು.

೨೨೪. ಆದ್ದರಿಂದ ವಾಮನನ್ನು ಸುವರ್ಣ, ರಜತ, ವಸ್ತ್ರಗಳಿಂದ ಬಾಗಿಲಿನಲ್ಲಿಯೇ ಪೂಜಿಸು. ಕಿವುಡನೇ ಮೊದಲಾದ ನಾಲ್ಕು ಜನರ ಜನ್ಮವೂ, ಅವರಿಗೆ ಮಾಡುವ ಷೋಡಶ ದಾನಗಳೂ ನಿಷ್ಫಲವಾಗುವುವು.

೨೨೫. ಮಕ್ಕಳಿಲ್ಲದವರು, ಧರ್ಮಬಾಹ್ಯರು, ಪರಪಾಕವನ್ನು ಭುಂಜಿಸುವವರು. ಪರದಾರನಿರತರು ಇವರ ಜನ್ಮವು ನಿಷ್ಫಲವು.

ಅನ್ಯಾಯೇನಾರ್ಜಿತಂ ವಿತ್ತಂ ನ ದೇಯಂ ಶ್ರೇಯ ಇಚ್ಛತಾ ।
ವ್ಯರ್ಥಮಬ್ರಾಹ್ಮಣೇ ದಾನಮಾರೂಢಪತಿತೇ ತಥಾ ॥ ೨೨೬ ॥
ಸಂಧ್ಯಾಹೀನೇ ದ್ವಿಜೇ ನಷ್ಟೇ ಪತಿತೇ ತಸ್ಕರೇ ತಥಾ ।
ಗುರೋಽಶ್ಚಾಪ್ರೀತಿಜನಕೇ ಪಿತೃಮಾತೃಪರಾಙ್ಮುಖೇ ॥ ೨೨೭ ॥
ಬ್ರಹ್ಮಬಂಧೌ ಚ ಯದ್ದತ್ತಂ ಯದ್ದತ್ತಂ ವೃಷಲೀಪತೌ ।
ವೇದವಿಕ್ರಯಕೇ ಚೈವ ಕೃತಘ್ನೇ ಗ್ರಾಮಯಾಜಕೇ ॥ ೨೨೮ ॥
ಸ್ತ್ರೀನಿರ್ಜಿತೇ ಚ ಯದ್ದತ್ತಂ ವ್ಯಾಲಗ್ರಾಹೇ ತಥೈವ ಚ ।
ಪರಿವಾರೇಷು ಯದ್ದತ್ತಂ ವೃಥಾ ದಾನಾನಿ ಷೋಡಶ ॥ ೨೨೯ ॥

ಸಾರಸ್ವತ ಉವಾಚ :—

ಅತ್ರಾಂತರೇ ಬಲಿರ್ಬ್ರೂತೇ ನೈವಂ ವಾಚ್ಯಂ ತ್ವಯಾ ಗುರೋ ।
ವೇದಾನಧೀತೇ ಯಃ ಕಶ್ಚಿತ್ಸ ಮೇ ವಿಷ್ಣುಃ ಸಮಾಗತಃ ॥ ೨೩೦ ॥
ನ ವಿಲಂಬಸ್ತು ಕರ್ತವ್ಯಃ ಶ್ರೋತ್ರಿಯೇ ಗೃಹಮಾಗತೇ ।
ಅಭ್ಯುತ್ಥಾನೇನ ವಚಸಾ ಪಾದಪ್ರಕ್ಷಾಲನೇನ ಚ ॥ ೨೩೧ ॥
ಯಥಾಶಕ್ತ್ಯಾ ಪ್ರದಾತವ್ಯಂ ಭೋಜನಂ ಗೃಹಮೇಧಿನಾ ।
ಅಪೂಜಿತೋ ಯದಾ ಯಾತಿ ವಾಮನೋ ಮಂಡಪಾದ್ಬಹಿಃ ॥ ೨೩೨ ॥

---

೨೨೬–೨೨೯. ಶ್ರೇಯಸ್ಸನ್ನು ಬಯಸುವವನು ಅನ್ಯಾಯದಿಂದ ಸಂಪಾದಿಸಿದ ಹಣವನ್ನು ದಾನಮಾಡಬಾರದು. ಶೂದ್ರ, ಉತ್ತಮ ಪದವಿಯನ್ನು ಹೊಂದಿ ಪತಿತನಾದವನು, ಸಂಧ್ಯಾವಂದನೆ ಮಾಡದವನು. ಪತಿತನು, ಕಳ್ಳನು, ಗುರುವಿಗೆ ಅಹಿತವನ್ನುಂಟುಮಾಡಿದವನು, ತಂದೆತಾಯಿಗಳಿಗೆ ಅಪ್ರಿಯನು, ನೀಚಬ್ರಾಹ್ಮಣನು, ಶೂದ್ರ ಸ್ತ್ರೀಯ ಪತಿಯು, ವೇದವನ್ನು ವಿಕ್ರಯಿಸುವವನು, ಕೃತಘ್ನನು, ಹಳ್ಳಿಯವರಿಂದ ಯಾಗ ಮಾಡಿಸುವವನು, ಹೆಂಗಸಿನ ಅಧೀನದಲ್ಲಿರುವವನೂ, ಹಾವಾಡಿಗನು, ಸೇವಕನು ಇವರಿಗೆ ಕೊಟ್ಟ ದಾನಗಳು ವ್ಯರ್ಥವಾಗುವುವು.

೨೩೦. ಸಾರಸ್ವತನು ಹೇಳುತ್ತಾನೆ :— ಈ ಮಧ್ಯದಲ್ಲಿ ಬಲಿಯು, "ಗುರುಗಳೆ! ನೀವು ಹೀಗೆ ಹೇಳಬಾರಧು. ವಿಷ್ಣುವೇ ವೇದವನ್ನು ಅಧ್ಯಯನ ಮಾಡುತ್ತ ಬಂದಿರುವನು.

೨೩೧–೨೩೩. ಶ್ರೋತ್ರಿಯನಾದ ಬ್ರಾಹ್ಮಣನು ಮನೆಗೆ ಬರಲು ಗೃಹಸ್ಥನು ಸಾವಕಾಶಮಾಡದೆ ಮೇಲಕ್ಕೇಳುವುದು, ಮಾತಾಡುವುದು, ಪಾದಗಳನ್ನು ತೊಳೆಯುವುದು ಇವುಗಳನ್ನು ಮಾಡಿ ಶಕ್ತ್ಯನುಸಾರ ಭೋಜನವನ್ನು ನೀಡಬೇಕು. ವಾಮನನು

ತದಾಯಂ ವ್ಯರ್ಥತಾಂ ಯಾತಿ ಯಜ್ಞಃ ಸರ್ವಸ್ಸದಕ್ಷಿಣಃ ।
ಅತ್ರಾಂತರೇ ಸಮಾನೀತೋ ವಾಮನೋ ಬಲಿಸನ್ನಿಧೌ ॥ ೨೩೩ ॥
ಆಯಾಂತಂ ದದೃಶೇ ದೈತ್ಯೋ ವಾಮನಂ ವಿಷ್ಣುರೂಪಿಣಂ ।
ಜಾಜ್ವಲ್ಯಮಾನಂ ವಪುಷಾ ಪಿಂಗಲಂ ಸೂರ್ಯಸನ್ನಿಭಂ ॥ ೨೩೪ ॥
ಉತ್ಥಾಯಾಭಿಮುಖಃ ಪ್ರಾಯಾನ್ನಮಸ್ಕೃತ್ಯಾಗ್ರತಃ ಸ್ಥಿತಃ ।
ಧನ್ಯೋಽಹಂ ಯಸ್ಯ ಮೇ ಯಜ್ಞೇ ಪ್ರಾಪ್ತೋ ವಿಷ್ಣುಸಮೋ ದ್ವಿಜಃ ॥
ವೇದಿಮಧ್ಯೇ ಸಮಾನೀತೋ ದದೌ ತಸ್ಯಾಸನಂ ಬಲಿಃ ।
ಪಾದ್ಯಮಾಚಮನೀಯಂ ಚ ದತ್ವಾರ್ಘ್ಯಂ ವಿಷ್ಟರಂ ಬಲಿಃ ।
ಶ್ರೀಖಂಡಗಂಧಪುಷ್ಪಾದ್ಯೈಃ ಪೂಜಯಿತ್ವಾಗ್ರತಃ ಸ್ಥಿತಃ ॥ ೨೩೬ ॥
ಮಧುಪರ್ಕಂ ಚ ಗಾಂ ತಸ್ಮೈ ಸತ್ವರಂ ಸ ನಿವೇದ್ಯ ಚ ।
ಆಘ್ರಾತೇ ಮಧುಪರ್ಕೇ ಚ ವಾಮನೇನ ತತಃ ಪರಂ ॥ ೨೩೭ ॥
ಸ್ವಾಗತಂ ಬಲಿನಾ ಪ್ರೋಕ್ತಂ ಸ್ವಸ್ತೀತ್ಯುಕ್ತಂ ದ್ವಿಜನ್ಮನಾ ।
ಅಹಮರ್ಥೀ ಸಮಾಯಾತೋ ದೀಯತಾಂ ವದ ಕಿಂ ವಿಭೋ ॥ ೨೩೮ ॥

---

ಪೂಜಿತನಾಗದೆ ಮಂಡಪದ ಹೊರಗೆ ಹೋದರೆ ಸಮಸ್ತವೂ ದಕ್ಷಿಣೆಯಾಗುಳ್ಳ ಈ ಯಜ್ಞವು ವ್ಯರ್ಥವಾಗುವುದು. ಇಷ್ಟರಲ್ಲಿ ವಾಮನನನ್ನು ಬಲಿಯ ಹತ್ತಿರಕ್ಕೆ ಕರೆ ತಂದರು.

೨೩೪. ಬಲಿಯು ಬರುತ್ತಿರುವ ಕುಳ್ಳನೂ, ವಿಷ್ಣುಸ್ವರೂಪನೂ, ಪ್ರಕಾಶಿಸುವ ವನೂ, ಹಳದಿಬಣ್ಣದ ಶರೀರವುಳ್ಳವನೂ, ಸೂರ್ಯನಿಗೆ ಸಮಾನನೂ ಆದ ವಾಮನನನ್ನು ಕಂಡನು.

೨೩೫. ಅವನು ಎದ್ದು, ಎದುರುಗೊಂಡು ನಮಸ್ಕರಿಸಿ ಮುಂದೆ ನಿಂತನು. ನನ್ನ ಯಜ್ಞಕ್ಕೆ ವಿಷ್ಣುಸದೃಶನಾದ ಬ್ರಾಹ್ಮಣನು ಬಂದದ್ದರಿಂದ ನಾನು ಧನ್ಯನಾದೆನು

೨೩೬–೨೩೮. ಅನಂತರ ಆ ವಾಮನನನ್ನು ವೇದಿಯ ನಡುವೆ ಕರೆತಂದು ಆಸನದಲ್ಲಿ ಕುಳ್ಳಿರಿಸಿ ಪಾದೋದಕ, ಆಚಮನೀಯ, ಅರ್ಘ್ಯ ಇವುಗಳನ್ನಿತ್ತು ಶ್ರೀಖಂಡ, ಗಂಧ, ಹೂವು ಮೊದಲಾದುವುಗಳಿಂದ ಪೂಜಿಸಿ ಮುಂದೆ ನಿಂತನು. ತರುವಾಯ ಶೀಘ್ರವಾಗಿ ಮಧುಪರ್ಕ, ಗೋವುಗಳನ್ನು ಅರ್ಪಿಸಿ ವಾಮನನು ಅವುಗ ಳನ್ನು ಸ್ವೀಕರಿಸಲು ಸ್ವಾಗತವೆ! ಎಂದು ಕೇಳಿದನು. ವಾಮನನು ಸ್ವಸ್ತಿಯನ್ನು ಹೇಳಿ ನಾನು ಅರ್ಥಿಯಾಗಿ ಬಂದಿರುವೆನು. ಅದನ್ನು ಕೊಡೆನ್ನಲು, ಬಲಿಯು ಸ್ವಾಮಿ! ಏನನ್ನು ಕೊಡಲಿ ಹೇಳೆಂದನು.

ಮೇದಿನೀಂ ದೇಹಿ ಮೇ ದೈತ್ಯ ಕಿಯನ್ಮಾತ್ರಾಂ ದ್ವಿಜೋತ್ತಮ ।
ವಾಸಾರ್ಥಂ ಮಮ ದೈತ್ಯೇಂದ್ರ ದೀಯತಾಂ ಮೇ ಕ್ರಮತ್ರಯಂ ॥ ೨೫೯ ॥
ವಿಧಾಯ ಮಠಿಕಾಂ ದಿವ್ಯಾಂ ಶಿಷ್ಯಾನಧ್ಯಾಪಯಾಮ್ಯಹಂ ।
ದತ್ತಂ ಕ್ರಮತ್ರಯಂ ತುಭ್ಯಂ ಗೃಹೀತಂ ವಾಮನೋಽಬ್ರವೀತ್ ॥ ೨೬೦ ॥
ಮಾ ದೇಹೀತ್ಯವದಚ್ಛುಕ್ರೋ ವಿಷ್ಣುರೇಷ ಸನಾತನಃ ।
ಹೃಷ್ಟೋ ಬ್ರೂತೇ ಬಲಿಃ ಶುಕ್ರಂ ಪಾತ್ರಂ ಸ್ಯಾತ್ಕಿಮತಃ ಪರಂ ॥ ೨೬೧ ॥
ಸವ್ಯಂ ಕೃತ್ವಾ ಬಲಿರ್ದರ್ಭಾನ್ಸಾಕ್ಷತಾನ್ದಕ್ಷಿಣೇ ಕರೇ ।
ಪ್ರಯೋಗಂ ನ ಗುರುಶ್ಶುಕ್ರೋ ನ ಮುಂಚತಿ ಜಲಂ ಕರೇ ॥ ೨೬೨ ॥
ವಿಸ್ಮಿತಾ ಋಷಯಸ್ಸರ್ವೇ ಹೋತಾರೋ ಯೇ ಸಭಾಸದಃ ।
ಬ್ರಾಹ್ಮಣಾ ಬಟವೋ ದೈತ್ಯೋ ಭಾರ್ಯಾಪುತ್ರಾಶ್ಚ ಬಾಂಧವಾಃ ॥ ೨೬೩ ॥
ದತ್ತಂ ಗೃಹೀತಮಿತ್ಯುಕ್ತೇ ಕಸ್ಮಾತ್ತೋಯಂ ನ ಮುಂಚತಿ ।
ವಾಮನಾಯ ಕರೇ ತೋಯಂ ವಿವೇಕಾಯ ಪ್ರದೀಯತೇ ॥ ೨೬೪ ॥
ಯದ್ದಾನಂ ವಚಸಾ ದತ್ತಂ ಕರ್ಮಣಾ ನೋಪಪದ್ಯತೇ ।
ವಿಧಾಯ ನರಕೇ ಪೂಯೇ ಯಜಮಾನಂ ನ ನಿಷ್ಕೃತಿಃ ॥ ೨೬೫ ॥

---

೨೫೯–೨೬೦. ವಾಮನನು ದೈತ್ಯರಾಜ ! ನನಗೆ ವಾಸಕ್ಕಾಗಿ ಮೂರಡಿ ಭೂಮಿಯನ್ನು ಕೊಡು. ನಾನಲ್ಲಿ ಮಠವನ್ನು ನಿರ್ಮಿಸಿ ಶಿಷ್ಯರಿಗೆ ಪಾಠಗಳನ್ನು ಹೇಳಿಕೊಡುವೆನು ಎಂದನು. ಬಲಿಯು ಕೊಟ್ಟಿದ್ದೇನೆ ಎನ್ನಲು ವಾಮನನು ತೆಗೆದುಕೊಂಡೆನು ಎಂದನು.

೨೬೧. ಆಗ ಶುಕ್ರಾಚಾರ್ಯನು ಕೊಡಬೇಡವೆನ್ನಲು ಬಲಿಯು ಸಂತೋಷದಿಂದ, "ಇವನು ಅನಾದಿಯಾದ ವಿಷ್ಣುವಾಗಿರುವನು. ಇವನಿಗಿಂತ ಉತ್ತಮ ಪಾತ್ರನು ಯಾವನಿರುವನು" ಎಂದನು.

೨೬೨. ಬಲಿಯು ಸವ್ಯಮಾಡಿಕೊಂಡು ಬಲಗೈಯಲ್ಲಿ ಅಕ್ಷತೆಸಹಿತವಾದ ದರ್ಭೆಗಳನ್ನು ಹಿಡಿದುಕೊಂಡನು. ಆದರೆ ಶುಕ್ರಾಚಾರ್ಯನು ಮಂತ್ರವನ್ನು ಹೇಳಿ ಪ್ರಯೋಗವನ್ನು ಮಾಡಿಸದಿರಲು ನೀರನ್ನು ಕೆಳಗೆ ಬಿಡಲಿಲ್ಲ.

೨೬೩–೨೬೫. ಆಗ ಸಭೆಯಲ್ಲಿರುವ ಋಷಿಗಳೂ, ಹೋಮಮಾಡುವ ಬ್ರಾಹ್ಮಣರೂ, ಬ್ರಹ್ಮಚಾರಿಗಳೂ, ದೈತ್ಯರೂ, ಪತ್ನೀ, ಪುತ್ರ, ಬಾಂಧವರೂ ಬಲಿಯು ಕೊಟ್ಟಿದ್ದೇನೆಂದನು. ವಾಮನನ್ನು ತೆಗೆದುಕೊಂಡೆನೆಂದನು. ಆದರೆ ವಾಮನನ ಕೈಯಲ್ಲಿ ನೀರನ್ನೇಕೆ ಎರೆಯುವುದಿಲ್ಲ? ಮಾತಿನಿಂದ ದಾನವನ್ನು ಕೊಡುತ್ತೇನೆಂದು ಕೊಡದಿದ್ದರೆ ಯಜಮಾನನು ನರಕಭಾಗಿಯಾಗುವನು. ಅದಕ್ಕೆ ಪ್ರಾಯಶ್ಚಿತ್ತವಿಲ್ಲ ಎಂದು ಆಶ್ಚರ್ಯಗೊಂಡರು.

ಉಶನಾ ಪ್ರಾಹ ದೈತ್ಯೇಂದ್ರ ವಾಮನೋ ಹರಿರಿತ್ಯಯಂ ।
ಕೇನಾಪಿ ದೈವಯೋಗೇನ ತ್ವಾಂ ದ್ರಷ್ಟುಂ ಸಮುಪಾಗತಃ ॥ ೨೪೬ ॥
ಅಪ್ರಿಯಂ ವಾ ಪ್ರಿಯಂ ವಾಽಪಿ ನ ಜಾನೇ ಕಿಂ ಕರಿಷ್ಯತಿ ।
ಬಭಾಷೇ ಭಾರ್ಗವಂ ಯಷ್ಟ್ವಾ ಶ್ರೂಯತಾಂ ವಚನಂ ಗುರೋ ॥ ೨೪೭ ॥
ಪ್ರೋಚ್ಯತೇ ದಾನಕಾಲೇಷು ಯಜಮಾನೈರ್ದ್ವಿಜೈರಪಿ ।
ಅಹಮಿಂದ್ರೋ ದ್ವಿಜೋ ವಿಷ್ಣುರ್ದ್ರವ್ಯಮಾದಿತ್ಯದೇವತಾ ।
ತತ್ಕಥಂ ನ ಮಯಾ ದೇಯಂ ವಿಷ್ಣವೇ ಪ್ರೀಯತಾಮಿತಿ ॥ ೨೪೮ ॥
ಇತ್ಯುಕ್ತ್ವಾ ಸ ದದೌ ತೋಯಂ ವಾಮನಾಯ ಕರೇ ಬಲಿಃ ।
ತತಃ ಕಿಮಿದಮಿತ್ಯುಕ್ತ್ವಾ ಸಂಸ್ಥಿತೋ ಮಂಡಪಾದ್ಬಹಿಃ ॥ ೨೪೯ ॥
ಮಧ್ಯೇಽಪಿ ವಾಮನೋ ವಿಪ್ರೋ ಬಲಿಮಾತ್ರೋ ಬಭೂವ ಸಃ ।
ದತ್ತಹಸ್ತೋಽಸುರೇಂದ್ರೇಣ ಗ್ರಹೀತುಂ ತು ಪದತ್ರಯಂ ॥ ೨೫೦ ॥
ಯಜಮಾನದ್ವಿಜೌ ಹೃಷ್ಟೌ ದೃಷ್ಟೌ ಯಜ್ಞೇ ಸುರಾದಿಭಿಃ ।
ವವೃಧೇ ವಾಮನೋತೀವ ಕೃತ್ವಾ ರೂಪಂ ಚತುರ್ಭುಜಂ ॥ ೨೫೧ ॥

---

೨೪೬. ಶುಕ್ರಾಚಾರ್ಯನು ಹೀಗೆಂದನು. " ಈ ವಾಮನನು ವಿಷ್ಣುವಾಗಿರುವನು. ಇವನು ಯಾವುದೊ ಒಂದು ದೈವಯೋಗದಿಂದ ನಿನ್ನನ್ನು ನೋಡಲು ಬಂದಿರುವನು.

೨೪೭–೨೪೯. ಇವನು ಒಳ್ಳೆಯದನ್ನು ಮಾಡುವನೊ ? ಕೆಟ್ಟದ್ದನ್ನು ಮಾಡುವನೊ " ನಾನರಿಯೆನು ಆಗ ಯಾಗಮಾಡುವ ಬಲಿಯು ಆ ಶುಕ್ರಾಚಾರ್ಯರನ್ನು ಕುರಿತು, "ಗುರುಗಳೆ ! ಕೇಳಿರಿ. ದಾನಕಾಲದಲ್ಲಿ ಯಾಗಮಾಡುತ್ತಿರುವ ಬ್ರಾಹ್ಮಣರು ನಾನು ಇಂದ್ರ. ಬ್ರಾಹ್ಮಣನು ವಿಷ್ಣು, ದ್ರವ್ಯವು ಸೂರ್ಯದೇವತೆಯೆಂದು ಹೇಳುತ್ತಾರೆ. ಆದ್ದರಿಂದ ನಾನು ವಿಷ್ಣುವಿಗೆ ಪ್ರೀತಿಯಾಗಲೆಂದು ಏಕೆ ದಾನಮಾಡಕೂಡದು ?" ಎಂದು ಹೇಳಿ ವಾಮನನ ಕೈಯಲ್ಲಿ ದಾನೋದಕವನ್ನೆರೆದನು. ಬಳಿಕ ಶುಕ್ರಾಚಾರ್ಯನು ಇದೇನೆಂದು ಹೇಳಿ ಮಂಡಪದ ಹೊರಗೆ ನಿಂತನು.

೨೫೦. ನಡುವೆ ವಾಮನನು ಬಲಿಯು ಕೊಟ್ಟ ಮೂರಡಿ ಭೂಮಿಯನ್ನು ತೆಗೆದುಕೊಳ್ಳಲು ಆವನ ಹತ್ತಿರವಿದ್ದನು.

೨೫೧. ಸುರರೇ ಮೊದಲಾದವರು ಯಜ್ಞದಲ್ಲಿ ಯಜಮಾನ ಮತ್ತು ಬ್ರಾಹ್ಮಣರು ಸಂತೋಷಗೊಂಡಿರುವುದನ್ನು ಕಂಡರು. ವಾಮನನು ಚತುರ್ಭುಜವುಳ್ಳ ರೂಪವನ್ನು ತಾಳಿ ಅತ್ಯಂತವಾಗಿ ಬೆಳೆದನು.

ನಾರದೋಽಪಿ ಸಮಾಯಾತೋ ಬಭಾಷೇ ಕಿಂ ಕೃತಂ ಬಲೇ ।
ಶಿಷ್ಯಾಭ್ಯಾಂ ಸಹಿತೋ ದೃಷ್ಟ್ವೋ ನರೀನರ್ತಿ ಪುರಃ ಸ್ಥಿತಃ ॥ ೨೫೨ ॥
ಗೃಹಾಣ ದಕ್ಷಿಣಾಂ ದೇವ ಸಭಾರ್ಯೋರ್ಭಾಷತೇ ಬಲಿಃ ।
ಅದ್ಯ ಕಿಂ ನ ಮಯಾ ಪ್ರಾಪ್ತಂ ಯದ್ಗೃಹ್ಣಾತಿ ಜನಾರ್ದನಃ ॥ ೨೫೪ ॥
ಸಾರ್ಧಕ್ರಮತ್ರಯಂ ಕೃತ್ವಾ ಧರಣೀಂ ಯಾಚತೇ ತ್ರಯಂ ।
ಯದಸ್ತಿ ತೇನ ಕರ್ತವ್ಯಃ ಸಂತೋಷೋ ಮಧುಸೂದನ ॥ ೨೫೫ ॥
ವರ್ಧಮಾನಂ ಹರಿಂ ದೃಷ್ಟ್ವಾ ಬ್ರಾಹ್ಮಣಾ ಋಷಯಃ ಸುರಾಃ ।
ತುಷ್ಟುವುರ್ಗಗನೇ ಯಾಂತಂ ಭಗವಂತಂ ಜನಾರ್ದನಂ ॥ ೨೫೫ ॥

ದೇವರ್ಷಯ ಊಚುಃ :—

ಜಯ ದೇವ ಜಯಾನಂತ ಜಯ ವಿಷ್ಣೋ ಜಯಾಚ್ಯುತ ।
ಜಯ ಮತ್ಸ್ಯ ನಮಸ್ತುಭ್ಯಂ ಜಯ ಕೂರ್ಮ ಧರಾಧರ ॥ ೨೫೬ ॥
ವರಾಹಾಯ ನಮಸ್ತುಭ್ಯಂ ನರಸಿಂಹ ನಮೋನಮಃ ।
ಜಾಮದಗ್ನ್ಯ ನಮಸ್ತುಭ್ಯಂ ಜಯ ರಾಮ ಸಲಕ್ಷ್ಮಣ ॥ ೨೫೭ ॥
ಜಯ ಕೃಷ್ಣ ಜಗನ್ನಾಥ ಜಯ ದೇವಕಿನಂದನ ।
ನಮಾಮಿ ಬುದ್ಧಂ ಕೃಷ್ಣಂ ಚ ಕಲ್ಕಿನಂ ಪ್ರಣಮಾಮ್ಯಹಂ ॥ ೨೫೮ ॥

---

೨೫೨. ಆಗ ನಾರದನು ಬಂದು, "ಬಲಿಯೆ ! ಎಂತಹ ಕೆಲಸವನ್ನು ಮಾಡಿದೆ" ಎಂದು ಶಿಷ್ಯರೊಡನೆ ಮುಂಭಾಗದಲ್ಲಿ ಅತಿಶಯವಾಗಿ ಕುಣಿದನು.

೨೫೩—೨೫೪. ಬಲಿಯು, "ಸ್ವಾಮಿ ! ದಕ್ಷಿಣೆಯನ್ನು ತೆಗೆದುಕೊ. ವಿಷ್ಣುವೇ ದಾನವನ್ನು ತೆಗೆದುಕೊಳ್ಳುವವನಾದ ಮೇಲೆ ಈಗ ನಾನು ಪಡೆಯದಿರುವುದೇನಿದೆ ? ಹರಿಯೆ ! ನೀನು ಒಂದುವರೆ ಅಡಿಯ ಮನೆಯನ್ನು ಕಟ್ಟಲು ಮೂರಡಿ ಭೂಮಿಯನ್ನು ಬೇಡುತ್ತಿರುವೆ. ಆದರಿಂದ ನನಗುಂಟಾದ ಸಂತೋಷವು ಯಾವುದು ?" ಎಂದು ಪತ್ನಿಯೊಡನೆ ನುಡಿದನು.

೨೫೫. ಬ್ರಾಹ್ಮಣರೂ, ಋಷಿಗಳೂ, ದೇವತೆಗಳೂ, ಆಕಾಶದಲ್ಲಿ ಬೆಳೆಯುತ್ತಿರುವ ವಿಷ್ಣುವನ್ನು ಕಂಡು ಸ್ತುತಿಸಿದರು.

೨೫೬—೨೫೮. ದೇವರ್ಷಿಗಳು ಹೇಳುತ್ತಾರೆ :—ನಾಶರಹಿತನಾದ ವಿಷ್ಣುವೆ ! ನಿನಗೆ ಜಯವಾಗಲಿ. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ಪರಶುರಾಮ, ಲಕ್ಷ್ಮಣನಿಂದ ಸಹಿತನಾದ ದಾಶರಥಿರಾಮ, ದೇವಕಿ ಪುತ್ರನಾದ ಕೃಷ್ಣ ಈ ಅವತಾರಗಳನ್ನು ಮಾಡಿದ ನಾರಾಯಣನೆ ! ನಿನಗೆ ಜಯವಾಗಲಿ. ಬುದ್ಧ, ಕಲ್ಕಿರೂಪಿಯಾದ ನಿನ್ನನ್ನು ವಂದಿಸುತ್ತೇನೆ.

ಸಾರಸ್ವತ ಉವಾಚ :—

ನರೀನರ್ತಿ ತಥಾ ಸ್ತೌತಿ ನಾರದೋ ಗಗನಂ ಗತಃ ।
ಯೋಗಿನಃ ಸನಕಾದ್ಯಾ ಯೇ ಸ್ತುವಂತಿ ಚ ಜನಾರ್ದನಂ ॥ ೨೫೯ ॥
ಅಂತರಿಕ್ಷೇ ಗತೇ ಕೃಷ್ಣೇ ವರ್ಧಮಾನೇ ಬಲೇಃ ಪುರಃ ।
ಊರ್ಧ್ವವಕ್ತ್ರಾಃ ಸ್ಥಿತಾಸ್ಸರ್ವೇ ನಿರೀಕ್ಷಂತೇ ದಿವಾಕರಂ ॥ ೨೬೦ ॥
ದೃಷ್ಟಚ್ಛತ್ರಾಕೃತಿಸ್ತಾವತ್ಪಶ್ಚಾದೂರ್ಧ್ವಂ ಗತೋ ಹರಿಃ ।
ಚೂಡಾಮಣಿರಿವಾಭಾತಿ ಭಾಸ್ಕರೋ ಹರಿಮಸ್ತಕೇ ॥ ೨೬೧ ॥
ದೈತ್ಯೈರ್ನಿರೀಕ್ಷಿತಃ ಸಮ್ಯಗ್ಲಲಾಟೇ ತಿಲಕಾಯತೇ ।
ಹರಿಃ ಸಂವರ್ಧತೇ ಯಾವತ್ಕರ್ಣೇಽಸೌ ಕುಂಡಲಾಯತೇ ॥ ೨೬೨ ॥
ವರ್ಧಮಾನಸ್ಯ ಚ ಹರೇರ್ಹೃದಯೇ ಕೌಸ್ತುಭಾಯತೇ ।
ಇಂದ್ರಾದ್ಯಾ ದೇವತಾ ರುದ್ರಾ ವಸವೋ ಗಗನೇ ಸ್ಥಿತಾಃ ॥ ೨೬೩ ॥
ಊರ್ಧ್ವಂ ಪುನರ್ಯತ್ರ ಹರಿರ್ಗತಸ್ತತ್ರ ಗಗನಂ ಮತಂ ।
ವನಮಾಲಾ ತದಾ ಕಂಠೇ ವಾಸವೇನ ನಿವೇಶಿತಾ ॥ ೨೬೪ ॥
ಪೃಥಿವೀ ಕಂಪತೇ ಸರ್ವಾ ದಿವಿಸ್ಥಂ ಸೂರ್ಯಮಂಡಲಂ ।
ಕಿಂ ಭವಿಷ್ಯತಿ ಭೀತಾಸ್ತೇ ದೈತ್ಯಾಃ ಪಶ್ಯಂತಿ ಭಾಸ್ಕರಂ ॥ ೨೬೫ ॥

---

೨೫೯. ಸಾರಸ್ವತನು ಹೇಳುತ್ತಾನೆ :—ನಾರದನು ಆಕಾಶವನ್ನು ಏರಿ ಕುಣಿದನು. ಸನಕಾದಿ ಯೋಗಿಗಳು ಆ ವಿಷ್ಣುವನ್ನು ಸ್ತುತಿಸಿದರು.

೨೬೦. ಬಲಿಯ ಮುಂದೆ ವಿಷ್ಣುವು ಆಕಾಶದಲ್ಲಿ ಬೆಳೆಯುತ್ತಿರಲು ಎಲ್ಲರೂ ಮೇಲ್ಮುಖರಾಗಿ ಸೂರ್ಯನನ್ನು ನೋಡಿದರು.

೨೬೧. ಮೇಲ್ಮುಖವಾಗಿ ಬೆಳೆದ ಹರಿಯ ತಲೆಯಲ್ಲಿ ಕೊಡೆಯಂತಿರುವ ಭಾಸ್ಕರನು ಚೂಡಾಮಣಿಯಂತೆ ಹೊಳೆದನು.

೨೬೨—೨೬೪. ಹೀಗೆ ವಿಷ್ಣುವು ಬೆಳೆಯುತ್ತಿರುವಾಗ ಸೂರ್ಯನು ಅವನ ಹಣೆಯಲ್ಲಿ ತಿಲಕದಂತೆಯೂ, ಕಿವಿಯಲ್ಲಿ ಕುಂಡಲದಂತೆಯೂ, ಎದೆಯಲ್ಲಿ ಕೌಸ್ತುಭದಂತೆಯೂ ದೈತ್ಯರಿಂದ ಕಾಣಲ್ಪಟ್ಟನು. ಇಂದ್ರಾದಿ ದೇವತೆಗಳೂ, ರುದ್ರರೂ, ವಸುಗಳೂ ಇರುವ ಸ್ಥಳಕ್ಕಿಂತ ಮೇಲೆ ಹರಿಯು ಬೆಳೆಯಲು ಅಲ್ಲಿ ಆಕಾಶವಿರಲಿಲ್ಲ. ಆಗ ಇಂದ್ರನು ಅವನ ಕಂಠದಲ್ಲಿ ವನಮಾಲೆಯನ್ನು ಹಾಕಿದನು.

೨೬೫. ಸಕಲ ಭೂಮಿಯೂ ನಡುಗಿತು. ಆಕಾಶದಲ್ಲಿರುವ ಸೂರ್ಯಮಂಡಲವು ಏನಾಗುವುದೊ ಎಂದು ದೈತ್ಯರೆಲ್ಲ ಭಯದಿಂದ ಸೂರ್ಯನನ್ನು ನೋಡಿದರು.

ನಾಭೌ ಪದ್ಮಾಯತೇ ಸೂರ್ಯಃ ಕಟೌ ಚ ರಶನಾಯತೇ ।
ಏವಂ ಸಂವರ್ಧಿತೋ ವಿಷ್ಣುರ್ಜಗೃಹೇ ಚ ಪದದ್ವಯಂ ॥ ೨೬೬ ॥
ಸ್ಥಾನಂ ನಾಸ್ತಿ ತೃತೀಯಸ್ಯ ಬ್ರಹ್ಮಾಂಡಂ ಸಕಲಂ ಕೃತಂ ।
ಅಹರ್ದಂಡೋ ಜಗತ್ಸ್ರಷ್ಟಾ ಬ್ರಹ್ಮದಂಡಾಯತೇ ತದಾ ॥ ೨೬೭ ॥
ದೇವದಾನವಗಂಧರ್ವಮನುಷ್ಯೋರಗಪನ್ನಗೈಃ ।
ಪೂಜ್ಯತೇ ಚರಣೋ ವಿಷ್ಣೋಃ ಸ್ತೂಯತೇ ಚಾನುಮೀಯತೇ ॥ ೨೬೮ ॥
ಧರ್ಮಾತ್ಮಾ ಯತದಂಡೋ ಹಿ ಗಂಧರ್ವೈರ್ಗೀಯತೇ ಮುಹುಃ ।
ಜ್ಯೋತಿಶ್ಚಕ್ರಾಕ್ಷದಂಡಃ ಕಿಂ ಹರಿಣಾ ನಿರ್ಮಿತಃ ಸ್ವಯಂ ॥ ೨೬೯ ॥
ಜಿತ್ವೇದಂ ಭುವನಂ ಗಂಗಾ ಧ್ವಜದಂಡೋಽಮರೈಃ ಕೃತಃ ।
ತ್ರಿವಿಕ್ರಮಾಂಘ್ರಿದಂಡೋಽಯಂ ಕೀರ್ತಿದಂಡಾಯತೇ ಧ್ರುವಂ ॥ ೨೭೦ ॥
ವೇಗೇನಾಕ್ಷಿಪ್ಯ ಹರಿಣಾ ನೀತೋ ಬ್ರಹಾಂಡಮಸ್ತಕೇ ।
ಪಾದಸ್ತನ್ಮಸ್ತಕಂ ಭಿತ್ವಾ ಬಹಿರ್ಯಾಸ್ಯತಿ ವೇಗತಃ ॥ ೨೭೧ ॥

---

೨೬೬. ಸೂರ್ಯನು ವಿಷ್ಣುವಿನ ನಾಭಿಯಲ್ಲಿ ಪದ್ಮದಂತೆಯೂ, ಸೊಂಟದಲ್ಲಿ ಡಾಬಿನಂತೆಯೂ ಹೊಳೆದನು. ಹೀಗೆ ಅಭಿವೃದ್ಧಿಗೊಂಡ ಆ ವಾಮನನು ಎರಡಡಿ ಭೂಮಿಯನ್ನು ತೆಗೆದುಕೊಂಡನು.

೨೬೭. ಸಂಪೂರ್ಣ ಬ್ರಹ್ಮಾಂಡವು ಮುಗಿದ:ದರಿಂದ ಮೂರನೆ ಅಡಿಗೆ ಸ್ಥಳವಿರಲಿಲ್ಲ. ಆಗ ಜಗತ್ಸ್ರಷ್ಟನಾದ ವಿಷ್ಣುವು ಬ್ರಹ್ಮದಂಡದಂತೆಯೂ, ಅಹರ್ದಂಡದಂತೆಯೂ ಆದನು.

೨೬೮-೨೬೯. ದೇವತೆಗಳು, ದಾನವರು, ಗಂಧರ್ವರು, ಮನುಷ್ಯರು, ಸರ್ಪಗಳು ಇವರು ವಿಷ್ಣುವಿನ ಪಾದವನ್ನು ಪೂಜಿಸಿ ಹೀಗೆ ಸ್ತುತಿಸಿ ಊಹಿಸಿದರು. "ವಿಷ್ಣುವು ಧರ್ಮಸ್ವರೂಪವಾದ ನಿಯಮದಂಡವನ್ನು ನಿರ್ಮಿಸಿರುವನೊ? ಅಥವಾ ನಕ್ಷತ್ರ ಸಮೂಹಕ್ಕೆ ಅಚ್ಚಿನದಂಡವನ್ನು ರಚಿಸಿಸುವನೊ?

೨೭೦. ದೇವತೆಗಳು ಈ ಲೋಕವನ್ನು ಜಯಿಸಿ ಗಂಗಾರೂಪವಾದ ಧ್ವಜ ದಂಡವನ್ನು ನಿರ್ಮಿಸಿರುವರೊ? ಈ ತ್ರಿವಿಕ್ರಮನ ಪಾದದಂಡವು ನಿಶ್ಚಯವಾಗಿಯೂ ಕೀರ್ತಿದಂಡದಂತಿರುವುದು.

೨೭೧. ವಿಷ್ಣುವು ವೇಗದಿಂದ ಪಾದವನ್ನು ಎತ್ತಿ ಬ್ರಹ್ಮಾಂಡದ ಮಸ್ತಕದಲ್ಲಿಡಲು ಅದು ಬ್ರಹ್ಮಾಂಡವನ್ನು ಭೇದಿಸಿ ಹೊರಗೆ ಹೊರಟಿತು.

ತಾವದ್ಬ್ರಹ್ಮಾಂಡವೇಗೋಽಯಂ ವಿರಾಡಿತಿ ಹಿ ಸಂಜ್ಞಿತಃ ।
ಸ ಸರ್ವಬೀಜರೂಪೋ ಹಿ ಪರಮಾತ್ಮೇತಿ ಗದ್ಯತೇ ॥ ೨೬೨ ॥
ತೇನೇದಂ ಸಕಲಂ ಜಾತಂ ಪಾದಸ್ಯಾಗ್ರೇ ವ್ಯವಸ್ಥಿತಂ ।
ಬ್ರಹ್ಮಾಂಡಭೇದನಂ ಕೃತ್ವಾ ನ ಗಂತವ್ಯಂ ಬಹಿಸ್ತ್ವಯಾ ॥ ೨೬೩ ॥
ತೇನೈವ ಸಹ ಬ್ರಹ್ಮಾಂಡೇ ಪಪಾಲ ಚರಣೋ ಹರೇಃ ।
ಬ್ರಹ್ಮಾಂಡಂ ಜರ್ಜರಂ ಜಾತಂ ಪಾದಸಂಕೋಚನಾದಪಿ ॥ ೨೬೪ ॥
ಭಿನ್ನೇ ತಸ್ಮಿನ್ಸಮಾಯಾತಂ ಬ್ರಾಹ್ಮಂ ತೋಯಂ ಜಗತ್ರಯೇ ।
ವಿಷ್ಣುಪಾದೋದ್ಭವಾ ಗಂಗಾ ಮಸ್ತಕಾನ್ನಿಸ್ಸೃತಾ ತದಾ ॥ ೨೬೫ ॥
ತ್ರೈಲೋಕ್ಯಪಾವನೀ ದೇವೀ ಯಾ ರುದ್ರೇಣ ಸ್ವಯಂ ಧೃತಾ ।
ಸ್ವರ್ಧುನೀ ಪೂಜ್ಯತೇ ಸ್ವರ್ಗೇ ಗಂಗೇತಿ ಗಾಂ ಗತಾ ಸತೀ ॥ ೨೬೬ ॥
ಪಾತಾಲೇ ಸಾ ಯದಾ ಪ್ರಾಪ್ತಾ ಖ್ಯಾತಾ ತ್ರಿಪಥಗೈವ ಸಾ ।
ಯಸ್ಯಾಃ ಸ್ಮರಣಮಾತ್ರೇಣ ಸರ್ವಪಾಪಕ್ಷಯೋ ಭವೇತ್ ॥ ೨೬೭ ॥
ದರ್ಶನಾದಶ್ವಮೇಧಸ್ಯ ಸಂಪೂರ್ಣಸ್ಯ ಫಲಂ ಲಭೇತ್ ।
ಸ್ನಾನಮಾತ್ರೇಣ ನಶ್ಯೇತ ಸಪ್ತಜನ್ಮಕೃತಂ ತ್ವಘಂ ॥ ೨೬೮ ॥

---

೨೬೨ ಆಗ ವಿರಾಡೆಂದು ಹೆಸರನ್ನು ಪಡೆದ ಈ ಬ್ರಹ್ಮಾಂಡವೇಗವು ಬೀಜರೂಪನಾದ ಪರಮಾತ್ಮನೆಂದು ಹೇಳಿಸಿಕೊಳ್ಳುವುದು.

೨೬೩. ಹರಿಯು "ನೀನು ಬ್ರಹ್ಮಾಂಡವನ್ನು ಭೇದಿಸಿ ಹೊರಗೆ ಹೋಗಬಾರದೆ"ಂದು ಪಾದವನ್ನು ಒಡೆಯಲು ಅದರ ಮೇಲೆ ಈ ಸಮಸ್ತ ಬ್ರಹ್ಮಾಂಡವೂ ನೆಲೆಸಿತು.

೨೬೪. ಹರಿಯ ಪಾದವು ಬ್ರಹ್ಮಾಂಡಕ್ಕೆ ಸ್ಪರ್ಶವಾದ ಕೂಡಲೆ ಆ ಪಾದವನ್ನು ಸಂಕೋಚಮಾಡಿದರೂ ಬ್ರಹ್ಮಾಂಡವು ಶಿಥಿಲವಾಯಿತು.

೨೬೫. ಬ್ರಹ್ಮಾಂಡವು ಒಡೆದೊಡನೆ ಅದರಿಂದ ನೀರು ಹೊರಟು ಮೂರು ಲೋಕಗಳನ್ನು ತುಂಬಿತು. ಅದೇ ವಿಷ್ಣುಪಾದದಿಂದ ಜನಿಸಿದ ಗಂಗೆಯಾಗಿರುವುದು.

೨೬೬. ತ್ರೈಲೋಕ್ಯಪಾವನಿಯಾದ ಆ ಗಂಗಾದೇವಿಯನ್ನು ರುದ್ರನು ಶಿರಸ್ಸಿನಲ್ಲಿ ಧರಿಸಿದನು. ಅವಳನ್ನು ದೇವತೆಗಳು ಸ್ವರ್ಧುನಿಯೆಂಬ ಹೆಸರಿನಿಂದ ಪೂಜಿಸಿದರು. ಅವಳು ಭೂಮಿಯನ್ನು ಸೇರಿ ಗಂಗೆಯಾದಳು.

೨೬೭. ಅವಳು ಪಾತಾಳವನ್ನು ಸೇರಿ ತ್ರಿಪಥಗಾ ಎಂದು ವಿಖ್ಯಾತಳಾದಳು. ಅವಳ ಸ್ಮರಣೆಯಿಂದ ಸಕಲಪಾಪಗಳೂ ನಶಿಸುವುವು.

೨೬೮. ನರನು ಅವಳ ದರ್ಶನದಿಂದಲೆ ಅಶ್ವಮೇಧಯಾಗದ ಫಲವನ್ನು ಪಡೆಯುವನು. ಸ್ನಾನದಿಂದ ಏಳು ಜನ್ಮಗಳಲ್ಲಿ ಸಗಿದ ಪಾಪವು ನೀಗುವುದು.

ಸ್ನಾತ್ವಾ ಸಂಪೂಜಯೇದ್ಯಸ್ತು ದೇವೌ ಹರಿಹರೌ ನರಃ ।
ಇಂದ್ರಲೋಕಮತಿಕ್ರಮ್ಯ ವಿಷ್ಣುಲೋಕೇ ಮಹೀಯತೇ ॥ ೨೭೯ ॥
ವಿಷ್ಣುಪಾದೋದಕಂ ಪೀತ್ವಾ ಜ್ಞಾತ್ವಾ ತತ್ವಾನಿ ಸಂಯಮೀ ।
ಉಪೋಷ್ಯ ದಿವಸಂ ವಿಷ್ಣೋರ್ಮುಕ್ತಿಂ ಗಚ್ಛತಿ ದೇಹವಾನ್ ॥ ೨೮೦ ॥
ಶುದ್ಧಸ್ವಭಾವಸತ್ವಸ್ಥಾ ವಿರಕ್ತಾ ಜನ್ಮಭೂಮಿಷು ।
ಸಂಸಾರಬಂಧನಂ ಛಿತ್ವಾ ಯಾಂತಿ ತೇ ಪರಮಾಂ ಗತಿಂ ॥ ೨೮೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ
ಬಲಿನಿಗ್ರಹವೃತಾಂತವರ್ಣನಂ ನಾಮ
ಅಷ್ಟಾದಶೋಽಧ್ಯಾಯಃ

---

೨೭೯. ಮನುಷ್ಯನು ಆ ಗಂಗೆಯಲ್ಲಿ ಮಿಂದು ಹರಿಹರರನ್ನು ಪೂಜಿಸಿದರೆ ಇಂದ್ರಲೋಕವನ್ನು ಮೀರಿ ವಿಷ್ಣುಲೋಕದಲ್ಲಿ ಪೂಜ್ಯನಾಗುವನು.

೨೮೦. ಯೋಗಿಯು ಹರಿದಿನದಲ್ಲಿ ಗಂಗೋದಕವನ್ನು ಕುಡಿದು ತತ್ವಗಳನ್ನು ತಿಳಿದು ಉಪವಾಸಮಾಡಿದರೆ ದೇಹಸಹಿತನಾಗಿ ಮೋಕ್ಷವನ್ನು ಪಡೆಯುವನು.

೨೮೧. ಶುದ್ಧಸ್ವಭಾವವುಳ್ಳವರೂ, ಸಾತ್ವಿಕರೂ, ಜನ್ಮಭೂಮಿಗಳಲ್ಲಿ ವಿರಕ್ತರೂ ಆದ ಮಾನವರು ಸಂಸಾರಬಂಧನದಿಂದ ಮುಕ್ತರಾಗಿ ಉತ್ತಮ ಗತಿಯನ್ನು ಪಡೆಯುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ
ಬಲಿನಿಗ್ರಹವೃತ್ತಾಂತವರ್ಣನವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕೋನವಿಂಶತಿತಮೋಽಧ್ಯಾಯಃ

### ವಸ್ತ್ರಾಪಥಕ್ಷೇತ್ರಮಾಹಾತ್ಮ್ಯಸಮಾಪ್ತಿವರ್ಣನಂ

ರಾಜೋವಾಚ :—

ಗೃಹೀತ್ವಾ ದಕ್ಷಿಣಾಂ ದೈತ್ಯಾನ್ಮಹಾವಿಷ್ಣುರ್ಜನಾರ್ದನಃ ।
ಚಕಾರ ಕಿಂ ಮಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ॥ ೧ ॥

ಸಾರಸ್ವತ ಉವಾಚ :—

ಏವಂ ಸುರೈಃ ಸ್ತುತೋ ದೇವೋ ಗೃಹೀತ್ವಾ ಮೇದಿನೀಂ ಹರಿಃ ।
ಬಲಿಂ ನಿರ್ವಾಸಯಾಮಾಸ ಸಂಪೂರ್ಣೇ ಯಜ್ಞಕರ್ಮಣಿ ।
ಯಜ್ಞಾಂತೇ ದಕ್ಷಿಣಾಂ ಲಬ್ಧ್ವಾ ಸಂಪೂರ್ಣೋಽಭೂದಥಾಧ್ವರಃ ॥ ೨ ॥
ಭಗವಾನಪ್ಯಸಂಪೂರ್ಣೇ ತೃತೀಯೇ ತು ಕ್ರಮೇ ವಿಭುಃ ।
ಸಮಭ್ಯೇತ್ಯ ಬಲಿಂ ಪ್ರಾಹ ಈಷತ್ಪ್ರಸ್ಫುರಿತಾಧರಃ ॥ ೩ ॥
ಋಣೇ ಭವತಿ ದೈತ್ಯೇಂದ್ರ ಬಂಧನಂ ಘೋರದರ್ಶನಂ ।
ತ್ವಂ ಪೂರಯ ಪದಂ ತನ್ಮೇ ನೋಚೇದ್ಬಂಧಂ ಪ್ರತೀಚ್ಛ ಭೋಃ ॥ ೪ ॥

---

ಕನ್ನಡದ ಅನುವಾದ

ವಸ್ತ್ರಾಪಥಕ್ಷೇತ್ರಮಾಹಾತ್ಮ್ಯಸಮಾಪ್ತಿವರ್ಣನ

೧. ರಾಜನು ಹೇಳುತ್ತಾನೆ :—ಮುನಿಯೆ ! ಮಹಾವಿಷ್ಣುವು ಬಲಿಯಿಂದ ದಕ್ಷಿಣೆಯನ್ನು ತೆಗೆದುಕೊಂಡು ಏನನ್ನು ಮಾಡಿದನು? ಅದನ್ನು ನನಗೆ ಹೇಳು. ನನಗೆ ಅತ್ಯಂತ ಕೌತೂಹಲವುಂಟಾಗಿದೆ.

೨. ಸಾರಸ್ವನು ಹೇಳುತ್ತಾನೆ :—ಹೀಗೆ ದೇವತೆಗಳು ಸ್ತುತಿಸಲು ವಿಷ್ಣುವು ಭೂಮಿಯನ್ನೂ ದಕ್ಷಿಣೆಯನ್ನು ತೆಗೆದುಕೊಂಡು ಯಜ್ಞವು ಮುಗಿಯಲು ಬಲಿಯನ್ನು ಭೂಮಿಯಿಂದ ಹೊರಡಿಸಿದನು.

೩. ಆ ವಾಮನನು ಮೂರನೆಯ ಅಡಿಯು ಪೂರ್ತಿಯಾಗದಿರಲು ಬಲಿಯ ಹತ್ತಿರಬಂದು ಸ್ವಲ್ಪ ತುಟಿಯನ್ನು ನಡಗಿಸುತ್ತ ಇಂತೆಂದನು.

೪. "ದೈತ್ಯರಾಜ! ಋಣವಿದ್ದರೆ ಘೋರ ಬಂಧನವುಂಟಾಗುವುದು. ಆದ್ದರಿಂದ ನೀನು ನನ್ನ ಮೂರನೆಯ ಅಡಿ ಭೂಮಿಯನ್ನು ಪೂರ್ತಿಗೊಳಿಸು. ಇಲ್ಲದಿದ್ದರೆ ಋಣ ಬಂಧನವನ್ನಂಗೀಕರಿಸು.

ತಸ್ಮುರಾರಿವಚಃ ಶ್ರುತ್ವಾ ಪುರೋ ಭೂತ್ವಾ ಬಲೇಃ ಸುತಃ ।
ಬಾಣೋ ವಾಮನಮಾಚಷ್ಟೇ ತದಾ ತಂ ವಿಶ್ವರೂಪಿಣಂ ॥ ೫ ॥
ಕೃತ್ವಾ ಮಹೀಮಲ್ಪತರಾಂ ವಪುಃ ಕೃತ್ವಾ ತು ವಾಮನಂ ।
ಪದತ್ರಯಂ ಯಾಚಯಿತ್ವಾ ವಿಶ್ವರೂಪಮಗಾಃ ಕಥಂ ॥ ೬ ॥
ಯದಿ ತೃತೀಯಂ ಕ್ರಮಣಂ ಯಾಚಸೇ ಜಗದೀಶ್ವರ ।
ಪುನರ್ವಾಮನತಾಂ ಯಾಹಿ ಬಲಿರ್ದಾಸ್ಯತಿ ತತ್ಪದಂ ॥ ೭ ॥
ಯಾದೃಗ್ವಿಧಾಯ ಬಲಿನಾ ವಾಮನಾಯೋದಕಂ ಕೃತಂ ।
ತತ್ತಾದೃಶಾಯ ದಾತವ್ಯಮಥ ಕಿಂ ವಿಶ್ವರೂಪಿಣೇ ॥ ೮ ॥
ಭವತ್ಕೃತಮಿದಂ ವಿಶ್ವಂ ವಿಶ್ವಸ್ಮಿನ್ವರ್ತತೇ ಬಲಿಃ ।
ಛದ್ಮನಾ ನೈವ ಗೃಹ್ಣಂತಿ ಸಾಧವೋ ಯೇ ಮಹೇಶ್ವರ ॥ ೯ ॥
ಜಗದೇತಜ್ಜಗನ್ನಾಥ ತಾವಕಂ ಯದಿ ಮನ್ಯಸೇ ।
ಜ್ಞಾತ್ವಾ ಬಲಿಮಮರ್ಯಾದಂ ಭವದ್ಭಕ್ತಿಪರಾಙ್ಮುಖಂ ॥ ೧೦ ॥

---

೫. ಆಗ ಬಲಿಯ ಮಗನಾದ ಬಾಣನು ಆ ವಿಷ್ಣುವಿನ ಮಾತನ್ನು ಕೇಳಿ ಬಲಿಯ ಮುಂದೆ ನಿಂತು ವಿಶ್ವರೂಪಿಯಾದ ಹರಿಯನ್ನು ಕುರಿತು ಹೀಗೆಂದನು.

೬. "ಹರಿಯೆ! ನೀನು ಭೂಮಿಯನ್ನು ಸಣ್ಣದಾಗಿ ಮಾಡಿ ವಾಮನರೂಪವನ್ನು ತಾಳಿ ಮೂರಡಿ ಭೂಮಿಯನ್ನು ಬೇಡಿ ಹೇಗೆ ವಿಶ್ವರೂಪನಾದೆ?

೭. ಜಗದೊಡೆಯ! ನೀನು ಮೂರನೆಯ ಅಡಿಯನ್ನು ಬೇಡುವುದಾದರೆ ಮರಳಿ ವಾಮನನಾಗು. ಆಗ ಬಲಿಯು ಆ ಮೂರನೆ ಅಡಿಭೂಮಿಯನ್ನು ನೀಡುವನು.

೮. ಬಲಿಯು ಎಂತಹ ವಾಮನನಿಗೆ ದಾನಕೊಡುವುದಾಗಿ ನಿಶ್ಚಯಿಸಿ ನೀರನ್ನೆರೆದಿರುವನೊ ಅಂತಹ ವಾಮನನಿಗೆ ದಾನವನ್ನು ಕೊಡಬೇಕೊ, ವಿಶ್ವರೂಪನಿಗೆ ಕೊಡಬೇಕೊ?

೯. ಮಹೇಶ್ವರ! ನೀನು ವಿಶ್ವರೂಪವನ್ನು ತಾಳಿರುವೆ. ಬಲಿಯು ಈ ನಿನ್ನ ವಿಶ್ವರೂಪದಲ್ಲಿರುವನು. ಸಾಧುಗಳು ಕಪಟದಿಂದ ದಾನವನ್ನು ತೆಗೆದುಕೊಳ್ಳುವುದಿಲ್ಲವಷ್ಟೆ.

೧೦-೧೧. ಜಗನ್ನಾಥ! ನೀನು ಈ ಜಗತ್ತನ್ನು ನಿನ್ನದೆಂದು ತಿಳಿಯುವುದಾದರೆ ಈ ಬಲಿಯನ್ನು ಮರ್ಯಾದೆಯಿಲ್ಲದವನಾಗಿಯೂ, ನಿನ್ನಲ್ಲಿ ಭಕ್ತಿಯಿಲ್ಲದವನನ್ನಾಗಿಯೂ ತಿಳಿದು ಕುತ್ತಿಗೆಗೆ ಹಗ್ಗವನ್ನು ಕಟ್ಟಿ ಹೊರಡಿಸು ನಿನ್ನನ್ನು ಯಾರು ತಡೆಯುವರು,

ಕಂಠಪಾಶೇನ ನಿಷ್ಕ್ರಸ್ಯ ಕೇನ ವೈ ವಾರ್ಯತೇ ಭವಾನ್ ।
ಗೋಪಾಲಮನ್ಯಂ ಕುರುತೇ ರಕ್ಷಣಾಯ ಚ ಗೋಪತಿಃ ।
ಸುತೃಣಂ ಚಾರಯನ್ಪೂರ್ವೇ ಗೋಪಃ ಕಿಂ ಕುರುತೇ ತದಾ ॥ ೧೧ ॥
ಇತ್ಯೇವಮುಕ್ತೇ ತೇನಾಥ ವಚನೇ ಬಲಿಸೂನುನಾ ।
ಪ್ರೋವಾಚ ಭಗವಾನ್ವಾಕ್ಯಮಾದಿಕರ್ತಾ ಜನಾರ್ದನಃ ॥ ೧೨ ॥
ಯಾನ್ಯುಕ್ತಾನಿ ವಚಾಂಸೀತ್ಥಂ ತ್ವಯಾ ಬಾಲೇನ ಸಾಂಪ್ರತಂ ।
ತೇಷಾಂ ತ್ವಂ ಹೇತುಸಂಯುಕ್ತಂ ಶೃಣು ಪ್ರತ್ಯುತ್ತರಂ ಮಮ ॥ ೧೩ ॥
ಪೂರ್ವಮುಕ್ತಸ್ತವ ಪಿತಾ ಮಯಾ ಬಾಣ ಪದತ್ರಯಂ ।
ದೇಹಿ ಮಹ್ಯಂ ಪ್ರಮಾಣೇನ ತಪೇತತ್ಸಮನುಷ್ಠಿತಂ ॥ ೧೪ ॥
ಕಿಂ ನ ವೇತ್ತಿ ಪ್ರಮಾಣಂ ಮೇ ಬಲಿಸ್ತವ ಪಿತಾ ಸುತ ।
ಬಲೇರಪಿ ಹಿತಾರ್ಥಾಯ ಕೃತಮೇತತ್ಪದತ್ರಯಂ ॥ ೧೫ ॥
ತಸ್ಮಾದ್ಯಸ್ಮಮ ಬಾಲೇಯ ತ್ವತ್ಪಿತ್ರಾಂಽಬು ಕರೇ ಮಹತ್ ।
ದತ್ತಂ ತೇನಾಸ್ಯ ಸುತಲೇ ಕಲ್ಪಂ ಯಾವದ್ವಸಿಷ್ಯತಿ ॥ ೧೬ ॥
ಗತೇ ಮನ್ವಂತರೇ ಬಾಣ ಶ್ರಾದ್ಧದೇವಸ್ಯ ಸಾಂಪ್ರತಂ ।
ಸಾವರ್ಣಿಕೇ ತ್ವಾಗತೇ ಚ ಬಲಿರಿಂದ್ರೋ ಭವಿಷ್ಯತಿ ॥ ೧೭ ॥

---

ಗೋವುಗಳ ಒಡೆಯನು ಗೋವುಗಳನ್ನು ಕಾಯುವುದಕ್ಕೆ ಬೇರೊಬ್ಬನನ್ನು ನೇಮಿಸು ವನು. ಆಗ ಗೋವುಗಳನ್ನು ಹುಲ್ಲುಗಾವಲಿನಲ್ಲಿ ಮೇಯಿಸುವ ಸೇವಕನಾದ ಗೋಪಾಲಕನು ಏನನ್ನು ಮಾಡುವನು ?"

೧೨. ಬಲಿಸುತನಾದ ಬಾಣನು ಹೀಗೆನ್ನಲು ಆದಿಕರ್ತನಾದ ಜನಾರ್ದನನು ಇಂತೆಂದನು.

೧೩. ಬಾಣ! ಬಾಲಕನಾದ ನೀನು ಈಗ ಹೇಳಿದ ಮಾತುಗಳಿಗೆ ಯುಕ್ತಿ ಯುಕ್ತವಾದ ನನ್ನ ಪ್ರತ್ಯುರವನ್ನು ಕೇಳು.

೧೪. ನಾನು ನಿನ್ನ ತಂದೆಯನ್ನು ಕುರಿತು ಮೂರಡಿ ಭೂಮಿಯನ್ನು ನನ್ನ ಪಾದ ಪ್ರಮಾಣದಿಂದ ಕೊಡೆಂದು ಕೇಳಿದೆನು. ಅದರಂತೆ ಅವನು ಮಾಡಿರುವನು.

೧೫. ಮಗು! ನಿನ್ನ ತಂದೆಯಾದ ಬಲಿಯು ನನ್ನ ಅಳತೆಯನ್ನರಿಯುವು ದಿಲ್ಲವೇ? ನಾನು ಅವನ ಹಿತಕ್ಕಾಗಿಯೇ ಈ ಮೂರಡಿ ಭೂಮಿಯನ್ನು ಕೇಳಿರುವೆನು.

೧೬. ಬಾಲಕ! ನಿನ್ನ ತಂದೆಯಾದ ಬಲಿಯು ನನ್ನ ಕೈಯಲ್ಲಿ ದಾನೋದಕ ವನ್ನು ಎರೆದಿರುವುದರಿಂದ ಸುತಲ ಲೋಕದಲ್ಲಿ ಕಲ್ಪಕಾಲದವರೆಗೆ ವಾಸಿಸುವನು.

೧೭. ಬಾಣ! ವೈವಸ್ವತ ಮನ್ವಂತರ ಕಳೆದು ಸಾವರ್ಣಿಕ ಮನ್ವಂತರವು ಬರಲು ಬಲಿಯು ದೇವೇಂದ್ರನಾಗುವನು.

ಇತಿ ಪ್ರೋಕ್ತ್ವಾ ಬಲಿಸುತಂ ಬಾಣಂ ದೇವಸ್ತ್ರಿವಿಕ್ರಮಃ ।
ಪ್ರೋವಾಚ ಬಲಿಮಭ್ಯೇತ್ಯ ವಚನಂ ಮಧುರಾಕ್ಷರಂ ॥ ೧೮ ॥

ಶ್ರೀಭಗವಾನುವಾಚ :—

ಅಪೂರ್ಣದಕ್ಷಿಣೇ ಯಾಗೇ ಗಚ್ಛ ರಾಜನ್ಮಹಾತಲಂ ।
ಸುತಲಂ ನಾಮ ಪಾತಾಲಂ ವಸ ತತ್ರ ನಿರಾಮಯಃ ॥ ೧೯ ॥

ಬಲಿರುವಾಚ :—

ಸುತಲಸ್ಥಸ್ಯ ಮೇ ನಾಥ ಕಥಂ ಚರಣಯೋಸ್ತವ ।
ದರ್ಶನಂ ಪೂಜನಂ ಯೋಗೋ ನಿವಸಾಮಿ ಯಥಾಸುಖಂ ॥ ೨೦ ॥

ಶ್ರೀಭಗವಾನುವಾಚ :—

ದೈತ್ಯೇಂದ್ರ ಹೃದಯೇ ನಿತ್ಯಂ ತಾವಕೇ ನಿವಸಾಮ್ಯಹಂ ।
ಅತಸ್ತೇ ದರ್ಶನಂ ಪ್ರಾಪ್ತಃ ಪುನಃ ಸ್ಥಾಸ್ಯೇ ತವಾಂತಿಕಂ ॥ ೨೧ ॥
ತಥಾನ್ಯಮುತ್ಸವಂ ಪುಣ್ಯಂ ವೃತ್ತೇ ಶಕ್ರಮಹೋತ್ಸವೇ ।
ದೀಪಪ್ರತಿಪನ್ನಾಮಾಸೌ ತತ್ರ ಭಾವೀ ಮಹೋತ್ಸವಃ ॥ ೨೨ ॥
ತತ್ರ ತ್ವಾಂ ನರಶಾರ್ದೂಲಾ ಹೃಷ್ಟಾಃ ಪುಷ್ಟಾಃ ಸ್ವಲಂಕೃತಾಃ ।
ಪುಷ್ಪದೀಪಪ್ರದಾನೇನ ಅರ್ಚಯಿಷ್ಯಂತಿ ಯತ್ನತಃ ॥ ೨೩ ॥

---

೧೮. ತ್ರಿವಿಕ್ರಮನು ಬಲಿಪುತ್ರನಾದ ಬಾಣನನ್ನು ಕುರಿತು ಹೀಗೆ ಹೇಳಿ ಬಲಿಯನ್ನು ಕುರಿತು ಹೀಗೆ ಸವಿನುಡಿಯನ್ನಾಡಿದನು.

೧೯. ಶ್ರೀ ಭಗವಂತನು ಹೇಳುತ್ತಾನೆ :—ದೈತ್ಯರಾಜ ! ಯಾಗ ದಕ್ಷಿಣೆಯು ಪೂರ್ತಿಯಾಗದಿರುವುದರಿಂದ ನೀನು ಸುತಲವೆಂಬ ಪಾತಾಳದಲ್ಲಿ ಸುಖವಾಗಿ ವಾಸಿಸು.

೨೦. ಬಲಿಯು ಹೇಳುತ್ತಾನೆ :—ಸ್ವಾಮಿ ! ಸುತಲದಲ್ಲಿ ವಾಸಿಸುವ ನನಗೆ ನಿನ್ನ ಚರಣಗಳ ದರ್ಶನ, ಪೂಜೆಗಳು ಹೇಗೆ ಲಭಿಸುವುವು ? ನಾನು ಸುಖವಾಗಿ ಹೇಗೆ ಅಲ್ಲಿ ವಾಸಮಾಡುವೆನು ?

೨೧. ಶ್ರೀ ಭಗವಂತನು ಹೇಳುತ್ತಾನೆ :—ದೈತ್ಯರಾಜ! ನಾನು ನಿತ್ಯವೂ ನಿನ್ನ ಹೃದಯದಲ್ಲಿ ವಾಸಿಸುವೆನು. ಅದರಿಂದ ನಿನಗೆ ನನ್ನ ದರ್ಶನವು ಲಭಿಸುವುದು. ಮತ್ತು ನಾನು ನಿನ್ನ ಹತ್ತಿರದಲ್ಲಿಯೇ ಇರುವೆನು.

೨೨. ಶಕ್ರಮಹೋತ್ಸವವು ನಡೆದ ಮೇಲೆ ದೀಪ ಪ್ರತಿಪತ್ತೆಂಬ ಪುಣ್ಯಕರವಾದ ಒಂದು ಮಹೋತ್ಸವವು ನಡೆಯುವುದು.

೨೩. ಆ ಉತ್ಸವದಲ್ಲಿ ಮಾನವೋತ್ತಮರು ಸಂತೋಷಗೊಂಡವರೂ, ಪುಷ್ಟಿಗೊಂಡವರೂ, ಅಲಂಕಾರಗಳಿಂದ ಭೂಷಿತರೂ ಆಗಿ ಪುಷ್ಪ ದೀಪಗಳಿಂದ ನಿನ್ನನ್ನು ಪೂಜಿಸುವರು.

ತತ್ರೋತ್ಸವಃ ಪುಣ್ಯತಮೋ ಭವಿಷ್ಯತಿ ಧರಾತಲೇ ।
ತವ ನಾಮಾಂಕಿತೋ ದೈತ್ಯ ತೇನ ತ್ವಂ ವತ್ಸರಂ ಸುಖೀ ॥ ೨೪ ॥
ಭವಿಷ್ಯಸಿ ನರಾ ಯೇ ತು ದೃಢಭಕ್ತಿಸಹಾನ್ವಿತಾಃ ।
ತ್ವಾಮರ್ಚಯಂತಿ ವಿಧಿವತ್ತೇऽಪಿ ಸ್ಯುಃ ಸುಖಭಾಗಿನಃ ॥ ೨೫ ॥
ಯಥೈವ ರಾಜ್ಯಂ ಭವತಸ್ತು ಸಾಂಪ್ರತಂ
ತಥೈವ ಸಾ ಭಾವ್ಯಥ ಕೌಮುದೀತಿ ।
ಇತ್ಯೇವಮುಕ್ತ್ವಾ ಮಧುಹಾದಿತೀಶ್ವರಂ
ನಿವಾಸಯಿತ್ವಾ ಸುತಲಂ ಸಭಾರ್ಯಕಂ ॥ ೨೬ ॥
ಉರ್ವೀಂ ಸಮಾದಾಯ ಜಗಾಮ ತೂರ್ಣಂ
ಸ ಶಕ್ರಸದ್ಮಾಮರ ಸಂಘಜುಷ್ಟಂ ।
ದತ್ವಾ ಮಘೋನೇ ಮಧುಜಿತ್ತ್ರಿವಿಷ್ಟಪಂ
ಕೃತ್ವಾ ತು ದೇವಾನ್ಮಖಭಾಗಭೋಗಿನಃ ॥ ೨೭ ॥
ಅಂತರ್ದಧೇ ವಿಶ್ವಪತಿರ್ಮಹೇಶಃ ।
ಸಂಪಶ್ಯತಾಂ ವೈ ವಸುಧಾಧಿಪಾನಾಂ ॥ ೨೮ ॥

---

೨೪. ದೈತ್ಯರಾಜ! ಆ ಭೂಮಿಯಲ್ಲಿ ನಿನ್ನ ಹೆಸರಿನ ಪುಣ್ಯಕರವಾದ ಉತ್ಸವವು ನಡೆಯುವುದು. ಆದರಿಂದ ನೀನು ಒಂದು ವರ್ಷಕಾಲ ಸುಖಿಯಾಗಿರುವೆ.

೨೫. ನಿನ್ನನ್ನು ದೃಢಭಕ್ತಿಯಿಂದ ವಿಧಿಪ್ರಕಾರವಾಗಿ ಪೂಜಿಸುವ ಮಾನವರು ಸುಖಗೊಳ್ಳುವರು.

೨೬–೨೮. ಈಗ ನಿನ್ನ ರಾಜ್ಯವು ಹೇಗಿರುವುದೊ ಹಾಗೆಯೇ ಮುಂದೆ ಕೌಮುದಿಯೆಂಬ ರಾಜ್ಯವು ಆಗುವುದು. ಹೀಗೆ ವಿಷ್ಣುವು ಬಲಿಯನ್ನು ಕುರಿತು ಹೇಳಿ ಆವನನ್ನು ಪತ್ನಿಯೊಡನೆ ಸುತಲದಲ್ಲಿ ವಾಸಮಾಡಿಸಿ ಶೀಘ್ರವಾಗಿ ಭೂಮಿಯನ್ನು ಪಡೆದುಕೊಂಡು ದೇವತೆಗಳು ವಾಸಮಾಡುತ್ತಿರುವ ದೇವಲೋಕಕ್ಕೆ ಹೋಗಿ ಇಂದ್ರನಿಗೆ ಆ ದೇವಲೋಕವನ್ನಿತ್ತು ದೇವತೆಗಳನ್ನು ಯಜ್ಞಭಾಗವನ್ನನುಭವಿಸುವಂತೆ ಮಾಡಿ ಸಕಲ ರಾಜರು ನೋಡುತ್ತಿರುವಾಗಲೆ ಅದೃಶ್ಯನಾದನು.

ಗೃಹೀತ್ವೇತಿ ಬಲೇ ರಾಜ್ಯಂ ಮನುಪುತ್ರೇ ನಿಯೋಜಿತಂ ।
ದ್ವೀಪಾಂತರೇ ಚ ತೇ ದೈತ್ಯಾಃ ಪ್ರೇಷಿತಾಶ್ಚಾಜ್ಞಯಾ ಸ್ವಯಂ ॥ ೨೯ ॥
ಪಾತಾಲನಿಲಯಾ ಯೇ ತು ತೇ ತತ್ರೈವ ನಿವೇಶಿತಾಃ ।
ದೇವಾನಾಂ ಪರಮೋ ಹರ್ಷಃ ಸಂಜಾತೋ ಬಲಿನಿಗ್ರಹೇ ॥ ೩೦ ॥
ನಿವಾಸಾಯ ಮನಶ್ಚಕ್ರೇ ವಾಮನೋಽವಾಮನೋ ಮನಃ ।
ತತ್ರ ಕ್ಷೇತ್ರೇ ಸ್ವನಗರೇ ವಾಮನಃ ಸಮ್ಯವಾಸ ಹ ॥ ೩೧ ॥

ಸಾರಸ್ವತ ಉವಾಚ :—

ಪ್ರಾದುರ್ಭಾವಸ್ತೇ ಕಥಿತೋ ನರೇಂದ್ರ
ಪುಣ್ಯಃ ಶುಚಿರ್ವಾಮನಸ್ಯಾಘಹಾರೀ ।
ಸ್ಮೃತೇ ಯಸ್ಮಿನ್ಸಂಶ್ರುತೇ ಕೀರ್ತಿತೇ ಚ
ಪಾಪಂ ಯಾಯಾತ್ಸಂಕ್ಷಯಂ ಪುಣ್ಯಮೇತಿ ॥ ೩೨ ॥

ಈಶ್ವರ ಉವಾಚ :—

ಇತಿ ಸಾರಸ್ವತವಚಃ ಶ್ರುತ್ವಾ ಭೋಜಃ ಸ ಭೂಪತಿಃ ।
ನಮಸ್ಕೃತ್ಯ ಮುನಿಶ್ರೇಷ್ಠಂ ಪೂಜಯಾಮಾಸ ಭಕ್ತಿತಃ ॥ ೩೩ ॥
ತತೋ ಯಥೋಕ್ತವಿಧಿನಾ ಸ ಭೋಜೋ ನೃಪಸತ್ತಮಃ ।
ವಸ್ತ್ರಾಪಥಕ್ಷೇತ್ರಯಾತ್ರಾಂ ಪರಿವಾರಜನೈಸ್ಸಹ ।
ಕೃತ್ವಾ ಕೃತಾರ್ಥತಾಂ ಪ್ರಾಪ್ತೋ ಜಗಾಮಾಂತೇ ಪರಂ ಪದಂ ॥ ೩೪ ॥

---

೨೯. ಹೀಗೆ ವಿಷ್ಣುವು ಬಲಿರಾಜ್ಯವನ್ನು ತೆಗೆದುಕೊಂಡು ಅದನ್ನು ಮಾನವರಿಗಿತ್ತನು. ತನ್ನ ಆಜ್ಞೆಯಂತೆ ಆ ದೈತ್ಯರನ್ನೆಲ್ಲ ದ್ವೀಪಾಂತರಕ್ಕೆ ಕಳುಹಿಸಿದನು.

೩೦. ಪಾತಾಳದಲ್ಲಿ ವಾಸಿಸುತ್ತಿದ್ದ ದಾನವರು ಅಲ್ಲಿಯೇ ವಾಸಮಾಡುವಂತೆ ನಿಯಮಿಸಿದನು. ಈ ಬಲಿ ನಿಗ್ರಹದಿಂದ ದೇವತೆಗಳಿಗೆ ಅತ್ಯಂತ ಸಂತೋಷವುಂಟುಮಾಡಿತು.

೩೧. ಅವಮಾನವಾದ ವಾಮನನು ತನ್ನ ಕ್ಷೇತ್ರದಲ್ಲಿಯೇ ವಾಸಮಾಡಲು ಮನಸ್ಸುಮಾಡಿದನು.

೩೨. ಸಾರಸ್ವತನು ಹೇಳುತ್ತಾನೆ :—ದೊರೆಯೆ ! ನಿನಗೆ ವಾಮನನ ಪಾಪವನ್ನು ಪರಿಹರಿಸುವ ಪವಿತ್ರವಾದ ಅವತಾರವನ್ನು ಹೇಳಿರುವೆನು. ಇದರ ಶ್ರವಣ, ಸ್ಮರಣ, ಕೀರ್ತನ ಮಾಡುವುದರಿಂದ ಪಾಪವು ಪರಿಹಾರವಾಗಿ ಪುಣ್ಯವು ಲಭಿಸುವುದು.

೩೩. ಈಶ್ವರನು ಹೇಳುತ್ತಾನೆ :—ಹೀಗೆ ಆ ಭೋಜರಾಜನು ಸಾರಸ್ವತನ ಮಾತನ್ನು ಕೇಳಿ ಅವನನ್ನು ವಂದಿಸಿ ಭಕ್ತಿಯಿಂದ ಪೂಜಿಸಿದನು.

೩೪. ಬಳಿಕ ಆ ಭೋಜನರೇಂದ್ರನು ವಿಧಿಯಂತೆ ಪರಿವಾರದವರೊಡನೆ ವಸ್ತ್ರಾಪಥಕ್ಷೇತ್ರ ಯಾತ್ರೆಯನ್ನು ಮಾಡಿ ಧನ್ಯನಾಗಿ ಕೊನೆಯಲ್ಲಿ ಮೋಕ್ಷವನ್ನು ಪಡೆದನು.

ಏತನ್ಮಯಾ ಪುಣ್ಯತಮಂ ಪ್ರಭಾಸ
ಕ್ಷೇತ್ರೇ ಚ ವಸ್ತ್ರಾಪಥಮೀರಿತಂ ತೇ ।
ಶ್ರುತ್ವಾ ಪಠಿತ್ವಾ ಪರಯಾ ಸಮೇತೋ
ಭಕ್ತ್ಯಾ ತು ವಿಷ್ಣೋಃ ಪದಮಭ್ಯುಪೈತಿ ॥ ೩೫ ॥
ಯಥಾ ಪಾಪಾನಿ ಧೂಯಂತೇ ಗಂಗಾವಾರಿವಿಗಾಹನಾತ್ ।
ತಥಾ ಪುರಾಣಶ್ರವಣಾದ್ದುರಿತಾನಾಂ ವಿನಾಶನಂ ॥ ೩೬ ॥
ಇದಂ ರಹಸ್ಯಂ ಪರಮಂ ತವೋಕ್ತಂ
ನ ವಾಚ್ಯಮೇತದ್ಧರಿಭಕ್ತಿವರ್ಜಿತೇ ।
ದ್ವಿಜಸ್ಯ ನಿಂದಾನಿರತೇಽತಿಪಾಪೇ
ಗುರಾವಭಕ್ತೇ ಕೃತಪಾಪಬುದ್ಧೌ ॥ ೩೭ ॥
ಇದಂ ಪಠೇದ್ಯೋ ನಿಯತಂ ಮನುಷ್ಯಃ ಕೃತಭಾವನಃ ।
ತಸ್ಯ ಭಕ್ತಿಃ ಶಿವೇ ಕೃಷ್ಣೇ ನಿಶ್ಚಲಾ ಜಾಯತೇ ಧ್ರುವಂ ॥ ೩೮ ॥
ತದ್ಭಕ್ತ್ಯಾ ಸಕಲಾನರ್ಥಾನ್ಪ್ರಾಪ್ನೋತಿ ಪುರುಷೋತ್ತಮ ।
ಪುರಾಣವಾಚಿನೇ ದದ್ಯಾದ್ಗೋಭೂಸ್ವರ್ಣವಿಭೂಷಣಂ ॥ ೩೯ ॥

---

೩೫. ಹೀಗೆ ನಾನು ಪ್ರಭಾಸಕ್ಷೇತ್ರದಲ್ಲಿರುವ ವಸ್ತ್ರಾಪಥದ ಮಾಹಾತ್ಮ್ಯವನ್ನು ನಿನಗೆ ಹೇಳಿರುವೆನು. ಇದನ್ನು ಅತಿಶಯ ಭಕ್ತಿಯಿಂದ ಕೇಳಿದವನೂ, ಪಠಿಸಿದವನೂ, ವೈಕುಂಠಲೋಕವನ್ನು ಸೇರುವನು.

೩೬. ಗಂಗಾಜಲದಲ್ಲಿ ಸ್ನಾನಮಾಡುವುದರಿಂದ ಪಾಪಗಳು ಪರಿಹಾರವಾಗುವಂತೆ ಪುರಾಣಶ್ರವಣದಿಂದ ಪಾಪವು ಪರಿಹಾರವಾಗುವುದು.

೩೭. ನಿನಗೆ ಈ ರಹಸ್ಯ ವಿಷಯವನ್ನು ಹೇಳಿರುವೆನು. ನೀನು ಇದನ್ನು ವಿಷ್ಣುವಿನಲ್ಲಿ ಭಕ್ತಿಯಿಲ್ಲದವನಿಗೂ, ಬ್ರಾಹ್ಮಣನನ್ನು ನಿಂದಿಸುವವನಿಗೂ, ಅತಿ ಪಾಪಿಷ್ಠನಿಗೂ, ಗುರುವಿನಲ್ಲಿ ಭಕ್ತಿಯಿಲ್ಲದವನಿಗೂ, ಪಾಪಮತಿಗೂ ಹೇಳಬಾರದು.

೩೮. ಇದನ್ನು ಭಕ್ತಿಯಿಂದ ಪಠಿಸುವ ಮನುಷ್ಯನಿಗೆ ವಿಷ್ಣುವಿನಲ್ಲಿ ದೃಢವಾದ ಭಕ್ತಿಯುಂಟಾಗುವುದು.

೩೯. ಆ ಪುರುಷಶ್ರೇಷ್ಠನು ವಿಷ್ಣುವಿನಲ್ಲಿ ಭಕ್ತಿಮಾಡುವುದರಿಂದ ಸಕಲೇಷ್ಟಾರ್ಥಗಳನ್ನು ಪಡೆಯುವನು. ಪುರಾಣವನ್ನು ಹೇಳುವವನಿಗೆ ಗೋವು, ಭೂಮಿ, ಸುವರ್ಣ, ಒಡವೆ ಇವುಗಳನ್ನು ಕೊಡಬೇಕು.

ವಿತ್ತಶಾಠ್ಯಂ ನ ಕರ್ತವ್ಯಂ ಕುರ್ವನ್ದಾರಿದ್ರ್ಯಮಾಪ್ನುಯಾತ್ ।
ತ್ರಿಃಕೃತ್ವಾ ಪ್ರಪಠನ್ಶೃಣ್ವನ್ಸರ್ವಕಾಮಾನವಾಪ್ನುಯಾತ್ ॥ ೪೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೇ ಬಲಯೇ
ವಾಮನಕೃತ ವರಪ್ರದಾನವೃತ್ತಾಂತವರ್ಣನಪೂರ್ವಕಂ ವಸ್ತ್ರಾಪಥ
ಕ್ಷೇತ್ರಯಾತ್ರಾಮಾಹಾತ್ಮ್ಯಂ ಸಾರಸ್ವತ ಭೋಜಸಂವಾದ
ಸಮಾಪ್ತಿಪುರಃಸರವಸ್ತ್ರಾಪಥಕ್ಷೇತ್ರ ಮಾಹಾತ್ಮ್ಯಸಮಾಪ್ತಿವರ್ಣನಂ
ನಾಮೈಕೋನವಿಂಶತಿತಮೋಽಧ್ಯಾಯಃ

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಸಪ್ತಮೇ ಪ್ರಭಾಸಖಂಡೇ ದ್ವಿತೀಯೇ ವಸ್ತ್ರಾಪಥಕ್ಷೇತ್ರ ಮಾಹಾತ್ಮ್ಯಂ ಸಂಪೂರ್ಣಂ**

---

೪೦. ವಿತ್ತವಿದ್ದು ಅದರಲ್ಲಿ ಶಾಠ್ಯವನ್ನು ಮಾಡಬಾರದು. ಹಾಗೆ ಮಾಡುವವನು ಬಡವನಾಗುವನು. ಈ ಪುರಾಣವನ್ನು ಮೂರುಸಾರಿ ಪಠಿಸುವವನೂ, ಕೇಳುವವನೂ ಸಕಲೇಷ್ಟಾರ್ಥಗಳನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದಮಹಾಪುರಾಣದ ಏಳನೆಯ
ಪ್ರಭಾಸಖಂಡದ ಎರಡನೆಯ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯದಲ್ಲಿ ವಾಮನ ಕೃತ
ವರಪ್ರದಾನ ವೃತ್ತಾಂತವರ್ಣನ ಪೂರ್ವಕ ವಸ್ತ್ರಾಪಥಕ್ಷೇತ್ರಯಾತ್ರಾ
ಮಾಹಾತ್ಮ್ಯಸಾರಸ್ವತಭೋಜ ಸಂವಾದ ಸಮಾಪ್ತಿಪುರಸ್ಸರ
ವಸ್ತ್ರಾಪಥಕ್ಷೇತ್ರಮಾಹಾತ್ಮ್ಯಸಮಾಪ್ತಿ ವರ್ಣನವೆಂಬ
ಹತ್ತೊಂಬತ್ತನೆ ಅಧ್ಯಾಯವು ಮುಗಿದುದು.

**ಇಲ್ಲಿಗೆ ಶ್ರೀ ಸ್ಕಾಂದ ಮಹಾಪುರಾಣದ ಏಳನೆ ಪ್ರಭಾಸಖಂಡದ ಎರಡನೆ ವಸ್ತ್ರಾಪಥಕ್ಷೇತ್ರಮಾಹಾತ್ಮ್ಯೆಯು ಮುಗಿದುದು.**

॥ ಶ್ರೀಃ ॥

॥ ಶ್ರೀ ಗಣೇಶಾಯ ನಮಃ ॥

# ॥ಅಥ ತೃತೀಯಮರ್ಬುದಖಂಡಂ ಪ್ರಾರಭ್ಯತೇ॥

## ಪ್ರಥಮೋಽಧ್ಯಾಯಃ

ವಸಿಷ್ಠಾಶ್ರಮಸಮೀಪವರ್ತಿವಿವರವೃತ್ತಾಂತೋಪಕ್ರಮವರ್ಣನಂ

ವ್ಯಾಸ ಉವಾಚ :—

ಓಂ ನಮೋಽನಂತಾಯ ಸೂಕ್ಷ್ಮಾಯ ಜ್ಞಾನಗಮ್ಯಾಯ ವೇಧಸೇ ।
ಶುದ್ಧಾಯ ವಿಶ್ವರೂಪಾಯ ದೇವದೇವಾಯ ಶಂಭವೇ ॥ ೧ ॥

ಋಷಯ ಊಚುಃ :—

ಕಥಿತೋ ವಂಶವಿಸ್ತಾರೋ ಭವತಾ ಸೋಮಸೂರ್ಯಯೋಃ ।
ಮನ್ವಂತರಾಣಿ ಸರ್ವಾಣಿ ಸೃಷ್ಟಿಶ್ಚೈವ ಪೃಥಗ್ವಿಧಾ ॥ ೨ ॥
ಅಧುನಾ ಶ್ರೋತುಮಿಚ್ಛಾಮಸ್ತೀರ್ಥಮಾಹಾತ್ಮ್ಯಮುತ್ತಮಂ ।
ಕಾನಿ ತೀರ್ಥಾನಿ ಪುಣ್ಯಾನಿ ಭೂತಲೇಽಸ್ಮಿನ್ಮಹಾಮತೇ ॥ ೩ ॥

---

ಕನ್ನಡದ ಅನುವಾದ

ವಸಿಷ್ಠಾಶ್ರಮಸಮೀಪವರ್ತಿವಿವರವೃತ್ತಾಂತೋಪಕ್ರಮವರ್ಣನ

೧. ವ್ಯಾಸನು ಹೇಳುತ್ತಾನೆ:—ನಾಶರಹಿತನೂ, ಸೂಕ್ಷ್ಮನೂ, ಜ್ಞಾನದೃಷ್ಟಿಯಿಂದ ತಿಳಿಯಲು ಯೋಗ್ಯನೂ, ಪವಿತ್ರನೂ, ಪ್ರಪಂಚ ಸ್ವರೂಪನೂ ಸಕಲ ದೇವತೆಗಳಿಗೆ ಒಡೆಯನೂ ಆದ ಶಂಕರನಿಗೆ ನಮಸ್ಕಾರವು.

೨. ಋಷಿಗಳು ಹೇಳುತ್ತಾರೆ:—ಮಹರ್ಷಿಯೆ! ನೀನು ಸೂರ್ಯಚಂದ್ರರ ವಂಶವಿಸ್ತಾರವನ್ನೂ, ಸಕಲಮನ್ವಂತರಗಳನ್ನೂ, ನಾನಾ ಬಗೆಯ ಸೃಷ್ಟಿಯನ್ನೂ ಹೇಳಿರುವೆ.

೩. ಈಗ ಉತ್ತಮವಾದ ತೀರ್ಥಮಾಹಾತ್ಮ್ಯವನ್ನು ಕೇಳಬಯಸುವೆವು. ಪ್ರಾಜ್ಞನೆ! ಈ ಭೂಮಿಯಲ್ಲಿ ಯಾವಯಾವ ತೀರ್ಥಗಳು ಪುಣ್ಯಕರವಾದುವು ?

ಸೂತ ಉವಾಚ :—

ನಾನಾತೀರ್ಥಾನಿ ಲೋಕೇಽಸ್ಮಿನ್ನೇಷಾಂ ಸಂಖ್ಯಾ ನ ವಿದ್ಯತೇ ।
ತಿಸ್ರಃ ಕೋಟ್ಯೋಽರ್ಧಕೋಟಿಶ್ಚ ತೇಷಾಂ ಸಂಖ್ಯಾ ಕೃತಾ ಪುರಾ ॥ ೪ ॥
ಕ್ಷೇತ್ರಾಣಿ ಸರಿತಶ್ಚೈವ ಪರ್ವತಾಶ್ಚ ನದಾಸ್ತಥಾ ।
ಋಷೀಣಾಂ ತಪಸೋ ವೀರ್ಯಾನ್ಮಾಹಾತ್ಮ್ಯಂ ಪರಮಂ ಗತಾಃ ॥ ೫ ॥
ತೇಷಾಂ ಮಧ್ಯೇಽರ್ಬುದೋ ನಾಮ ಸರ್ವಪಾಪಹರೋಽನಘಃ ।
ಅಸ್ಪೃಷ್ಟಃ ಕಲಿದೋಷೇಣ ವಸಿಷ್ಠಸ್ಯ ಪ್ರಭಾವತಃ ॥ ೬ ॥
ಪುನಂತಿ ಸರ್ವತೀರ್ಥಾನಿ ಸ್ನಾನದಾನಾದಿಕೈರ್ಯಥಾ ।
ಅರ್ಬುದೋ ದರ್ಶನಾದೇವ ಸರ್ವಪಾಪಹರೋ ನೃಣಾಂ ॥ ೭ ॥

ಋಷಯ ಊಚುಃ—

ಕಿಂ ಪ್ರಮಾಣೋಽರ್ಬುದೋ ನಾಮ ಕಸ್ಮಿನ್ದೇಶೇ ವ್ಯವಸ್ಥಿತಃ ।
ಕಥಂ ವಾಸಿಷ್ಠಮಾಹಾತ್ಮ್ಯಾತ್ಪ್ರಥಿತೋ ಧರಣೀತಲೇ ॥ ೮ ॥
ಕಾನಿ ತೀರ್ಥಾನಿ ಮುಖ್ಯಾನಿ ಹ್ಯರ್ಬುದೇ ಸಂತಿ ಪರ್ವತೇ ।
ಸರ್ವಂ ವಿಸ್ತರತೋ ಬ್ರೂಹಿ ಪರಂ ಕೌತೂಹಲಂ ಹಿ ನಃ ॥ ೯ ॥

---

೪. ಸೂತನು ಹೇಳುತ್ತಾನೆ: ಈ ಲೋಕದಲ್ಲಿ ಅನೇಕ ತೀರ್ಥಗಳಿರುವುವು. ಅವುಗಳ ಸಂಖ್ಯೆಯು ಎಷ್ಟೆಂಬುದು ತಿಳಿಯದು. ಹಿಂದೆ ಮೂರುವರೆ ಕೋಟಿ ತೀರ್ಥಗಳಿರುವುವು ಎಂದು ಎಣಿಸಿರುವರು.

೫. ಕ್ಷೇತ್ರಗಳು, ನದಿಗಳು, ಪರ್ವತಗಳು, ನದಗಳು ಇವು ಋಷಿಗಳ ತಪಸ್ಸಿನ ಸಾಮರ್ಥ್ಯದಿಂದ ಉತ್ತಮ ಮಾಹಾತ್ಮ್ಯವನ್ನು ಹೊಂದಿರುವುವು.

೬. ಅವುಗಳ ನಡುವೆ ವಸಿಷ್ಠನ ಪ್ರಭಾವದಿಂದ ಕಲಿದೋಷದ ಸಂಬಂಧವಿಲ್ಲದ ಸಕಲಪಾಪಗಳನ್ನು ಪರಿಹರಿಸುವ ಅರ್ಬುದವೆಂಬ ಕ್ಷೇತ್ರವಿರುವುದು.

೭. ಸಕಲ ತೀರ್ಥಗಳು ಸ್ನಾನದಾನಾದಿಗಳಿಂದ ಪವಿತ್ರಗೊಳಿಸುವಂತೆ ಅರ್ಬುದ ಕ್ಷೇತ್ರವು ದರ್ಶನದಿಂದಲೇ ಮನುಷ್ಯರ ಸಕಲಪಾಪಗಳನ್ನು ನಿವಾರಿಸುವುದು.

೮. ಋಷಿಗಳು ಹೇಳುತ್ತಾರೆ:— ಅರ್ಬುದ ಕ್ಷೇತ್ರವು ಎಷ್ಟು ವಿಸ್ತೀರ್ಣವಾಗಿರುವುದು? ಅದು ಯಾವ ದೇಶದಲ್ಲಿದೆ? ಅದು ಭೂಲೋಕದಲ್ಲಿ ವಸಿಷ್ಠರ ಮಾಹಾತ್ಮ್ಯದಿಂದ ಹೇಗೆ ಪ್ರಸಿದ್ಧವಾಯಿತು?.

೯. ಈ ಅರ್ಬುದದಲ್ಲಿ ಮುಖ್ಯವಾದ ಯಾವ ತೀರ್ಥಗಳಿವೆ? ಎಲ್ಲವನ್ನೂ ನಮಗೆ ವಿಸ್ತಾರವಾಗಿ ಹೇಳು. ಅತ್ಯಂತ ಕುತೂಹಲವುಂಟಾಗಿದೆ.

ಸೂತ ಉವಾಚ :—

ಅಹಂ ಚ ಸಂಪ್ರವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಅರ್ಬುದಸ್ಯ ದ್ವಿಜಶ್ರೇಷ್ಠಾ ಮಾಹಾತ್ಮ್ಯಂ ಚ ಯಥಾಶ್ರುತಂ ॥ ೧೦ ॥
ವಸಿಷ್ಠೋನಾಮ ದೇವರ್ಷಿಃ ಪಿತಾಮಹಸಮುದ್ಭವಃ ।
ಸ ಪೂರ್ವಂ ಭೂತಲಂ ಪ್ರಾಪ್ತಸ್ತಪಸ್ತೇಪೇ ಸುದಾರುಣಂ ॥ ೧೧ ॥
ನಿಯತೋ ನಿಯತಾಹಾರಃ ಸರ್ವಭೂತಹಿತೇ ರತಃ ।
ವರ್ಷಾಸ್ವಾಕಾಶವಾಸೀ ಚ ಹೇಮಂತೇ ಸಲಿಲಾಶಯಃ ॥ ೧೨ ॥
ಪಂಚಾಗ್ನಿಸಾಧಕೋ ಗ್ರೀಷ್ಮೇ ಜಪಹೋಮಪರಾಯಣಃ ।
ಕೇನಚಿತ್ತ್ವಥ ಕಾಲೇನ ತಸ್ಯ ಧೇನುಃ ಪಯಸ್ವಿನೀ ।
ನಂದಿನೀತಿ ಸುವಿಖ್ಯಾತಾ ಸಾ ವೈ ಕಾಮದುಘಾ ಶುಭಾ ॥ ೧೩ ॥
ಸಾ ಕದಾಚಿದ್ಧರಾಪೃಷ್ಠೇ ಭ್ರಮಮಾಣಾ ತೃಣಾಶಯಾ ।
ಪತಿತಾ ದಾರುಣೇ ಶ್ವಭ್ರೇ ಅಗಾಧೇ ತಿಮಿರಾವೃತೇ ॥ ೧೪ ॥
ಏತಸ್ಮಿನ್ನೇವ ಕಾಲೇ ತು ಭಗವಾಂಸ್ತೀಕ್ಷ್ಣದೀಧಿತಿಃ ।
ಅಸ್ತಂಗತೋ ನ ಸಂಪ್ರಾಪ್ತಾ ನಂದಿನೀ ಮುನಿಸತ್ತಮಾಃ ॥ ೧೫ ॥

---

೧೦. ಸೂತನು ಹೇಳುತ್ತಾನೆ :—ದ್ವಿಜವರ್ಯರೆ! ನಾನು ಪಾಪವನ್ನು ಪರಿಹರಿಸುವ ಕಥೆಯನ್ನೂ ಅರ್ಬುದಕ್ಷೇತ್ರದ ಮಾಹಾತ್ಮ್ಯವನ್ನೂ ಕೇಳಿದಂತೆ ನಿಮಗೆ ಹೇಳುವೆನು.

೧೧-೧೪. ಹಿಂದೆ ಬ್ರಹ್ಮನ ಸುತನಾದ ವಸಿಷ್ಠನೆಂಬ ದೇವರ್ಷಿಯು ಭೂಮಿಯನ್ನು ಸೇರಿ ಮಿತಾಹಾರಿಯೂ, ಸಕಲ ಪ್ರಾಣಿಗಳ ಹಿತದಲ್ಲಿ ನಿರತನೂ, ಮಳೆಗಾಲದಲ್ಲಿ ಆಕಾಶದಲ್ಲಿ ವಾಸಿಸುವವನೂ, ಚಳಿಗಾಲದಲ್ಲಿ ನೀರಿನಲ್ಲಿರುವವನೂ, ಗ್ರೀಷ್ಮಕಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿರುವವನೂ, ಜಪ ಹೋಮ ನಿರತನೂ ಆಗಿ ದಾರುಣ ತಪಸ್ಸನ್ನು ಮಾಡಿದನು. ಕೆಲವು ಕಾಲದ ಮೇಲೆ ಅವನ ಇಷ್ಟಾರ್ಥಗಳನ್ನು ನೀಡುವ ನಂದಿನಿಯೆಂಬ ಪ್ರಸಿದ್ಧವಾದ ಗೋವು ಹುಲ್ಲಿಗಾಗಿ ಭೂಮಿಯಲ್ಲಿ ಸಂಚರಿಸುತ್ತ ಆಳವಾದ ಕತ್ತಲೆಯಿಂದ ತುಂಬಿರುವ ಭಯಂಕರವಾದ ಕುಣಿಯಲ್ಲಿ ಬಿದ್ದಿತು.

೧೫. ಮುನಿವರ್ಯರೆ! ಈ ಸಮಯದಲ್ಲಿ ಪೂಜ್ಯನಾದ ಸೂರ್ಯನು ಅಸ್ತಂಗತನಾದನು. ಆದರೆ ನಂದಿನಿಯು ಸಿಗಲಿಲ್ಲ.

ತಸ್ಯಾಃ ಕ್ಷೀರೇಣ ನಿತ್ಯಂ ಸ ಸಾಯಂ ಪ್ರಾತರ್ದ್ವಿಜೋ ಮುನಿಃ ।
ಕರೋತಿ ಹೋಮಮಗ್ನೌ ಹಿ ಸುಸಮಿದ್ಧೇ ಜಿತವ್ರತಃ ॥ ೧೬ ॥
ಅಥ ಚಿಂತಾಪರೋ ವಿಪ್ರಃ ಪ್ರಾಯಶ್ಚಿತ್ತಭಯಾದ್ಭ್ರಮಂ ।
ವೀಕ್ಷಾಂಚಕ್ರೇ ವನೇ ತಸ್ಮಿನ್ಸಮೇಷು ವಿಷಮೇಷು ಚ ॥ ೧೭ ॥
ಸ ತಚ್ಛ್ವಭ್ರಮಥಾಸಾದ್ಯ ಭೂಭಾರಾವಮಥಾಶೃಣೋತ್ ।
ತಾಂ ಪ್ರೋವಾಚ ಮುನಿಶ್ರೇಷ್ಠಃ ಕಥಂ ತ್ವಂ ಪತಿತಾ ಶುಭೇ ॥ ೧೮ ॥
ಅಹಂ ಹೋಮಸ್ಯ ಚೋದ್ವೇಗಾನ್ನಿಃಸೃತಸ್ತ್ವಾಮವೇಕ್ಷಿತುಂ ।
ಸಾಬ್ರವೀಚ್ಛಷ್ಪಮಾಣಾಹಂ ವಿಪ್ರರ್ಷೇ ತೃಣವಾಂಛಯಾ ॥ ೧೯ ॥
ಪತಿತಾತ್ರ ವಿಭೋ ತ್ರಾಹಿ ಕೃಚ್ಛ್ರಾದಸ್ಮಾತ್ಸುದುಃಸಹಾತ್ ।
ತಸ್ಯಾಸ್ತದ್ವಚನಂ ಶ್ರುತ್ವಾ ಸ ಮುನಿರ್ಧ್ಯಾನಮಾಸ್ಥಿತಃ ॥ ೨೦ ॥
ಸರಸ್ವತೀಂ ಸಮಾದಧ್ಯೌ ನದೀಂ ತ್ರೈಲೋಕ್ಯಪಾವನೀಂ ।
ಸಾ ಧ್ಯಾತಾ ಮನಸಾ ತೇನ ಮುನಿನಾ ತತ್ರ ತತ್ಕ್ಷಣಾತ್ ॥ ೨೧ ॥
ಶ್ವಭ್ರಂ ತತ್ಪೂರಯಾಮಾಸ ಸಮಂತಾದ್ವಿಮಲೈರ್ಜಲೈಃ ।
ಪರಿಪೂರ್ಣೇ ತತಃ ಶ್ವಭ್ರೇ ನಿಷ್ಕ್ರಾಂತಾ ನಂದಿನೀ ತದಾ ॥ ೨೨ ॥

---

೧೬. ಆ ವಸಿಷ್ಠನು ಜಿತೇಂದ್ರಿಯನಾಗಿ ಆ ಧೇನುವಿನ ಹಾಲಿನಿಂದ ನಿತ್ಯವೂ ಜ್ವಲಿಸುವ ಅಗ್ನಿಯಲ್ಲಿ ಹೋಮವನ್ನು ಮಾಡುತ್ತಿದ್ದನು.

೧೭. ಅವನು ಚಿಂತಾಕ್ರಾಂತನಾಗಿ ಪ್ರಾಯಶ್ಚಿತ್ತದ ಭಯದಿಂದ ಆ ಕಾಡಿನ ಸಮ ವಿಷಮ ಪ್ರದೇಶಗಳಲ್ಲಿ ಆ ಧೇನುವನ್ನು ಹುಡುಕಿದನು.

೧೮. ಬಳಿಕ ಅವನು ಆ ಕುಣಿಯನ್ನು ಹೊಂದಿ ಹಸುವಿನ ಕೂಗನ್ನು ಕೇಳಿ ಅದನ್ನು ಕುರಿತು, "ಮಂಗಳೆ! ನೀನು ಹೇಗೆ ಈ ಕುಣಿಯಲ್ಲಿ ಬಿದ್ದೆ ?"

೧೯—೨೨. ನಾನು ಹೋಮಕ್ಕೆ ವಿಳಂಬವಾಗುವುದೆಂದರಿತು ವ್ಯಥೆಯಿಂದ ನಿನ್ನನ್ನು ಹುಡುಕಲು ಹೊರಟಿರುವೆನು ಎಂದನು. ಆ ಧೇನುವು, "ಮುನಿಯೆ! ನಾನು ಹುಲ್ಲನ್ನು ಆಶೆಯಿಂದ ಮೇಯುತ್ತ ಈ ಕುಣಿಯಲ್ಲಿ ಬಿದ್ದೆನು. ನನ್ನನ್ನು ಈ ದುಸ್ಸಹ ಕಷ್ಟದಿಂದ ಕಾಪಾಡು" ಎಂದಿತು. ವಸಿಷ್ಠನು ಆ ಧೇನುವಿನ ಮಾತನ್ನು ಕೇಳಿ ತ್ರೈಲೋಕ್ಯವನ್ನು ಪವಿತ್ರಗೊಳಿಸುವ ಸರಸ್ವತೀ ನದಿಯನ್ನು ಧ್ಯಾನಿಸಿದನು. ಮುನಿಯು ಮನಸ್ಸಿನಿಂದ ಧ್ಯಾನಿಸಿದ ಕೂಡಲೆ ಆ ನದಿಯು ಆ ಕುಣಿಯನ್ನು ಶುದ್ಧವಾದ ನೀರಿನಿಂದ ತುಂಬಿತು. ಕುಣಿಯು ನೀರಿನಿಂದ ತುಂಬಿದ ಕೂಡಲೆ

ಸಂಹೃಷ್ಟಾ ಮುನಿನಾ ಸಾರ್ಧಂ ಯಯಾವಾಶ್ರಮಸಂಮುಖಂ ॥ ೨೩ ॥
ಸ ದೃಷ್ಟ್ವಾ ಶ್ವಭ್ರಮಧ್ಯಂ ತಂ ಗಂಭೀರಂ ಚ ಮಹಾಮುನಿಃ ।
ಚಿಂತಯಾಮಾಸ ಮೇಧಾವೀ ಶ್ವಭ್ರಸ್ಯೈವ ಪ್ರಪೂರಣೇ ॥ ೨೪ ॥
ತಸ್ಯ ಚಿಂತಯತೋ ವಿಪ್ರಾ ಬುದ್ಧಿರೇಷೋದಪದ್ಯತ ।
ಆನೀಯ ಪರ್ವತಂ ಮುಕ್ತ್ವಾ ಶ್ವಭ್ರೋತತ್ಪ್ರಪೂರ್ಯತೇ ।
ತಸ್ಮಾದ್ಗಚ್ಛಾಮ್ಯಹಂ ಶೀಘ್ರಂ ಹಿಮವಂತಂ ನಗೋತ್ತಮಂ ॥ ೨೫ ॥
ಸ ಏವ ಪರ್ವತಂ ಚಾತ್ರ ಪ್ರೇಷಯಿಷ್ಯತಿ ಭೂಧರಃ ।
ಯೇನ ಸ್ಯಾತ್ಪರಿಪೂರ್ಣಂ ಚ ಶ್ವಭ್ರಮೇತನ್ಮಹಾತ್ಮನಾ ॥ ೨೬ ॥
ತತೋ ಜಗಾಮ ಸ ಮುನಿರ್ಹಿಮವಂತಂ ನಗೋತ್ತಮಂ ।
ದೃಷ್ಟ್ವಾ ವಸಿಷ್ಠಮಾಯಾಂತಂ ಹಿಮವಾನ್ ಹೃಷ್ಟಮಾನಸಃ ।
ಅರ್ಘ್ಯಪಾದ್ಯಾದಿಸಂಸ್ಕಾರೈಃ ಸಂಪೂಜ್ಯ ಇದಮಬ್ರವೀತ್ ॥ ೨೭ ॥
ಸ್ವಾಗತಂ ತೇ ಮುನಿಶ್ರೇಷ್ಠ ಸಫಲಂ ಮೇಽದ್ಯ ಜೀವಿತಂ ।
ಯದ್ಭವಾನ್ಮೇ ಗೃಹೇ ಪ್ರಾಪ್ತಃ ಪೂಜ್ಯಃ ಸರ್ವದಿವೌಕಸಾಂ ॥ ೨೮ ॥

---

ನಂದಿನಿಯು ಅಲ್ಲಿಂದ ಸಂತೋಷಗೊಂಡು ಹೊರಬಂದು ಮುನಿಯೊಡನೆ ಆಶ್ರಮಾಭಿಮುಖವಾಗಿ ಹೋಯಿತು.

೨೪. ಆ ವಸಿಷ್ಠ ಮಹರ್ಷಿಯು ಆಳವಾದ ಆ ಕುಣಿಯ ಮಧ್ಯವನ್ನು ಕಂಡು ಅದನ್ನು ಹೇಗೆ ಪೂರ್ತಿಮಾಡಬಹುದೆಂಬುದನ್ನು ಆಲೋಚಿಸಿದನು.

೨೫–೨೬. ಅವನು ಚಿಂತಿಸುತ್ತಿರಲು ಹೀಗೆ ಮನಸ್ಸಿನಲ್ಲಿ ಹೊಳೆಯಿತು. ಪರ್ವತವನ್ನು ತಂದು ಈ ಕುಣಿಯನ್ನು ತುಂಬಬೇಕು ಆದ್ದರಿಂದ ಶೀಘ್ರವಾಗಿ ಹಿಮವಂತನೆಡೆಗೆ ಹೋಗುವೆನು. ಅವನೇ ಇದಕ್ಕೆ ತಕ್ಕ ಪರ್ವತವನ್ನು ಕಳುಹಿಸುವನು. ಆದರಿಂದ ಈ ಕುಣಿಯು ತುಂಬುವುದು.

೨೭. ಬಳಿಕ ಆ ಮುನಿಯು ಅದರಂತೆ ಹಿಮವಂತನೆಡೆಗೆ ಹೋದನು. ಹಿಮವಂತನು ಬರುತ್ತಿರುವ ವಸಿಷ್ಠನನ್ನು ಕಂಡು ಸಂತೋಷದಿಂದ ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಪೂಜಿಸಿ ಹೀಗೆಂದನು.

೨೮. ಮುನಿವರ್ಯನೆ! ನಿನಗೆ ಸುಖಾಗಮನವಾಗಲಿ. ದೇವತೆಗಳಿಗೂ ಪೂಜ್ಯನಾದ ನೀನು ನನ್ನ ಮನೆಗೆ ಬಂದದ್ದರಿಂದ ಈ ದಿನ ನನ್ನ ಜೀವನವು ಸಫಲವಾಯಿತು.

ಬ್ರೂಹಿ ಕಾರ್ಯಂ ಮುನಿಶ್ರೇಷ್ಠ ಅಪಿ ಜೀವಿತಮಾತ್ಮನಃ ।
ನೂನಂ ತುಭ್ಯಂ ಪ್ರದಾಸ್ಯಾಮಿ ನಿಯೋಗೋ ದೀಯತಾಂ ಮಮ ॥ ೨೯ ॥

ವಸಿಷ್ಠ ಉವಾಚ :—

ಮಮಾಶ್ರಮಸ್ಯ ಸಾಂನಿಧ್ಯೇ ಶ್ವಭ್ರಮಸ್ತಿ ಸುದಾರುಣಂ ।
ಅಗಾಧಂ ನಂದಿನೀ ತತ್ರ ಪತಿತಾ ಧೇನುರುತ್ತಮಾ ॥ ೩೦ ॥
ಯತ್ನಾದಾಕರ್ಷಿತಾ ತಸ್ಮಾದ್ಭೂಯಃ ಪತನಜಾದ್ಭಯಾತ್ ।
ತವಾಂತಿಕಮನುಪ್ರಾಪ್ತೋ ನಾನ್ಯೋ ಯೋಗ್ಯೋ ಮಹೀಪತಿಃ ॥ ೩೧ ॥
ತಸ್ಮಾತ್ಕಂಚಿನ್ನಗಶ್ರೇಷ್ಠಂ ತತ್ರ ಪ್ರೇಷಯ ಭೂಧರಂ ।
ಯೇನ ತತ್ಪೂರ್ಯತೇ ಶ್ವಭ್ರಂ ಭೃಶಂ ಪ್ರೇಷಯ ತಾದೃಶಂ ॥ ೩೨ ॥

ಹಿಮವಾನುವಾಚ :—

ಕಿಂ ಪ್ರಮಾಣಂ ಮುನೇ ಶ್ವಭ್ರಂ ವಿಸ್ತಾರಾಯಾಮತೋ ವದ ।
ತತ್ಪ್ರಮಾಣಂ ನಗಂ ಕಂಚಿತ್ಪ್ರೇಷಯಾಮಿ ವಿಚಿಂತ್ಯ ಚ ॥ ೩೩ ॥

ವಸಿಷ್ಠ ಉವಾಚ :—

ದ್ವಿಸಹಸ್ರಂ ತು ದೈರ್ಘ್ಯೇಣ ವಿಸ್ತರೇಣ ತ್ರಿಸಹಸ್ರಕಂ ।
ನ ಸಂಖ್ಯಾ ವಿದ್ಯತೇಽಧಸ್ತಾತ್ತಸ್ಯ ಪರ್ವತಸತ್ತಮ ॥ ೩೪ ॥

---

೨೯. ಮುನಿವರ್ಯನೆ! ಬಂದ ಕಾರ್ಯವನ್ನು ಹೇಳು. ನನ್ನ ಪ್ರಾಣವನ್ನೂ ನಿನಗೆ ಕೊಡುವೆನು. ಆಜ್ಞೆಯನ್ನು ಮಾಡು.

೩೦. ವಸಿಷ್ಠನು ಹೇಳುತ್ತಾನೆ:—ನನ್ನ ಆಶ್ರಮದ ಹತ್ತಿರ ಭಯಂಕರವೂ, ಆಳವೂ ಆದ ಒಂದು ಕುಣಿಯಿದೆ. ಅದರಲ್ಲಿ ನನ್ನ ಉತ್ತಮವಾದ ನಂದಿನೀಧೇನುವು ಬಿದ್ದಿತು.

೩೧. ಅದನ್ನು ನಾನು ಪ್ರಯತ್ನದಿಂದ ಮೇಲಕ್ಕೆತ್ತಿರುವೆನು. ಅಲ್ಲಿ ಬೀಳುವುದೆಂಬ ಭಯದಿಂದ ನಿನ್ನೆಡೆಗೆ ಬಂದಿದ್ದೇನೆ. ಇತರ ಯೋಗ್ಯನಾದ ದೊರೆಯು ನನಗೆ ದೊರೆಯಲಿಲ್ಲ.

೩೨. ಆದ್ದರಿಂದ ಆ ಕುಣಿಯನ್ನು ತುಂಬುವುದಕ್ಕಾಗಿ ಒಂದು ಪರ್ವತವನ್ನು ಅಲ್ಲಿಗೆ ಕಳುಹಿಸು.

೩೩. ಹಿಮವಂತನು ಹೇಳುತ್ತಾನೆ :—ಮುನಿಯೆ ! ಆ ಕುಣಿಯು ವಿಸ್ತೀರ್ಣ ಮತ್ತು ಉದ್ದಗಳಿಂದ ಎಷ್ಟು ಅಳತೆಯುಳ್ಳುದು ? ಹೇಳು. ಅಷ್ಟೇ ಅಳತೆಯ ಒಂದು ಪರ್ವತವನ್ನು ಆಲೋಚಿಸಿ ಕಳುಹಿಸುತ್ತೇನೆ.

೩೪. ವಸಿಷ್ಠನು ಹೇಳುತ್ತಾನೆ :—ಪರ್ವತರಾಜನೆ ! ಆ ಕುಣಿಯು ಎರಡು ಸಾವಿರ ಯೋಜನ ಉದ್ದವೂ, ಮೂರುಸಾವಿರ ಯೋಜನ ಅಗಲವೂ ಆಗಿರುವುದು. ಕೆಳಗೆ ಎಷ್ಟು ಆಳವಾಗಿರುವುದೆಂಬುದು ತಿಳಿಯದು.

ಹಿಮವಾನುವಾಚ :—
ಕಥಂ ತೇನ ಪ್ರಮಾಣೇನ ಸಂಜಾತೋ ವಿವರೋ ಮಹಾನ್ ।
ಅಭೂತ್ಕೌತೂಹಲಂ ತೇನ ಸರ್ವಂ ವಿಸ್ತರತೋ ವದ ॥ ೩೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೋಽರ್ಬುದಖಂಡೇ ವಸಿಷ್ಠಾಶ್ರಮ ಸಮೀಪವರ್ತಿವಿವರ
ವೃತ್ತಾಂತೋಪಕ್ರಮ ವರ್ಣನಂ ನಾಮ
ಪ್ರಥಮೋಽಧ್ಯಾಯಃ

---

೩೫. ಹಿಮವಂತನು ಹೇಳುತ್ತಾನೆ :—ಮುನಿಯೆ ! ಅಂತಹ ದೊಡ್ಡ ಕುಣಿಯು ಹೇಗಾಯಿತು ? ನನಗೆ ಬಹಳ ಕುತೂಹಲವುಂಟಾಗಿದೆ ? ಅದನ್ನೆಲ್ಲ ವಿಸ್ತಾರವಾಗಿ ಹೇಳು.

ಇಲ್ಲಿಗೆ ಸ್ಕಾಂದಪುರಾಣದ ಮೂರನೆಯ ಅರ್ಬುದಖಂಡದಲ್ಲಿ ವಸಿಷ್ಠಾಶ್ರಮದ ಸಮೀಪವರ್ತಿ
ವಿವರವೃತ್ತಾಂತೋಪಕ್ರಮವರ್ಣನವೆಂಬ
ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ।

# ದ್ವಿತೀಯೋಽಧ್ಯಾಯಃ

## ಗೌತಮಶಿಷ್ಯೋತ್ತಂಕಚರಿತ್ರವರ್ಣನಂ

ವಸಿಷ್ಠ ಉವಾಚ :—

ಆಸೀತ್ಪೂರ್ವಂ ಮುನಿರ್ನಾಮ್ನಾ ಗೌತಮಶ್ಚ ಮಹಾತಪಾಃ ।
ಅಹಲ್ಯಾ ದಯಿತಾ ತಸ್ಯ ಧರ್ಮಪತ್ನೀ ಯಶಸ್ವಿನೀ ॥ ೧ ॥
ಶಿಷ್ಯಾನಧ್ಯಾಪಯಾಮಾಸ ಸ ಮುನಿಃ ಶತಶಸ್ತದಾ ।
ಶ್ರುತಾಧ್ಯಯನಸಂಪನ್ನಾನ್ವಿಸಸರ್ಜ ತತೋ ಗೃಹಾನ್ ॥ ೨ ॥
ತಸ್ಯಾನ್ಯೋಽಪಿ ಚ ಯಃ ಶಿಷ್ಯೋ ಗುರುಭಕ್ತಿಪರಾಯಣಃ ।
ಉತ್ತಂಕೋನಾಮ ಮೇಧಾವೀ ನ್ಯವಸತ್ತಸ್ಯ ಮಂದಿರೇ ॥ ೩ ॥
ನ ತಂ ವಿಸರ್ಜಯಾಮಾಸ ಜರಯಾಪಿ ಪರಿಪ್ಲುತಂ ।
ಉತ್ತಂಕೋಽಪಿ ಸುಶಿಷ್ಯತ್ವಾನ್ನೋ ವೇತ್ತಿ ಪಲಿತಂ ಶಿರಃ ॥ ೪ ॥
ಜಾತಕಾರ್ಯಸಮಾಯುಕ್ತೋ ವಿದ್ಯಾಪಾರಂಗತೋಽಪಿ ಸಃ ।
ಕೇನಚಿತ್ತ್ವಥ ಕಾಲೇನ ಕಾಷ್ಠಾರ್ಥಂ ಸ ಬಹಿರ್ಯಯೌ ॥ ೫ ॥

---

ಕನ್ನಡದ ಅನುವಾದ

ಗೌತಮಶಿಷ್ಯೋತ್ತಂಕಚರಿತ್ರವರ್ಣನ

೧. ವಸಿಷ್ಠನು ಹೇಳುತ್ತಾನೆ :—ಹಿಂದೆ ಅತ್ಯಂತ ತಪಸ್ವಿಯಾದ ಗೌತಮನೆಂಬ ಮುನಿಯು ಇದ್ದನು. ಅವನಿಗೆ ಕೀರ್ತಿಮತಿಯಾದ ಅಹಲ್ಯೆಯೆಂಬ ಸತಿಯಿದ್ದಳು.

೨. ಆ ಮುನಿಯು ನೂರಾರು ಮಂದಿ ಶಿಷ್ಯರನ್ನು ಅಧ್ಯಯನಮಾಡಿಸಿ ವಿದ್ಯಾವಂತರಾದ ಅವರನ್ನು ಮನೆಗೆ ಕಳುಹಿಸುತ್ತಿದ್ದನು.

೩. ಅವನ ಮನೆಯಲ್ಲಿ ಗುರುಭಕ್ತಿ ಸಂಪನ್ನನಾದ ಉತ್ತಂಕನೆಂಬ ಬುದ್ಧಿಶಾಲಿಯಾದ ಶಿಷ್ಯನು ವಾಸಮಾಡುತ್ತಿದ್ದನು.

೪. ಗೌತಮನು ಆ ಉತ್ತಂಕನು ಮುದುಕನಾದರೂ ಅವನನ್ನು ಮನೆಗೆ ಕಳುಹಿಸಲಿಲ್ಲ. ಅವನೂ ಒಳ್ಳೆಯ ಶಿಷ್ಯನಾದ್ದರಿಂದ ತನ್ನ ತಲೆಗೂದಲು ನೆರೆತುದುದನ್ನು ಕೂಡ ಅರಿಯಲಿಲ್ಲ.

೫. ಒಂದಾನೊಂದು ದಿನ ವಿದ್ಯಾಪಾರಂಗತನಾದ ಅವನು ಕಾರ್ಯನಿಯುಕ್ತನಾಗಿ ಕಟ್ಟಿಗೆಗಾಗಿ ಹೊರಗೆ ಹೋದನು.

ಪ್ರಭೂತಾನಿ ಸಮಾದಾಯ ಆಶ್ರಮಂ ಪರಮಂ ಗತಃ ।
ಅಥಾಸೌ ನ್ಯಕ್ಷಿಪತ್ತತ್ರ ಭೂತಲೇ ಕಾಷ್ಠಸಂಚಯಂ ॥ ೬ ॥
ಕಾಷ್ಠಲಗ್ನಾಂ ತದಾ ಶ್ವೇತಾಂ ಜಟಾಮೇಕಾಂ ದದರ್ಶ ಸಃ ।
ಸ ದೃಷ್ಟ್ವಾ ದುಃಖಮಾಪನ್ನಃ ಕೃಪಣಂ ಪರ್ಯಚಿಂತಯತ್ ॥ ೭ ॥
ಧಿಗ್ಧಿಙ್ಮೇ ಜೀವಿತಂ ನಷ್ಟಂ ಕುತಃ ಕಾರ್ಯರತಸ್ಯ ಚ ।
ಕಲತ್ರಸಂಗ್ರಹಂ ನೈವ ಮಯಾ ಕೃತಮಬುದ್ಧಿನಾ ॥ ೮ ॥
ಭವಿಷ್ಯತಿ ಕುಲಚ್ಛೇದಃ ಶೈಥಿಲ್ಯಾನ್ಮಮ ದುರ್ಮತೇಃ ।
ಗುರುಪತ್ನ್ಯಾ ಚ ಸಂದೃಷ್ಟ ಉತ್ತಂಕೋ ದುಃಖಿತಸ್ತದಾ ॥ ೯ ॥
ತಸ್ಯ ದುಃಖಂ ತಯಾ ಕ್ಷಿಪ್ರಂ ಗೌತಮಾಯ ನಿವೇದಿತಂ ।
ಗೌತಮೇನ ತಥೇತ್ಯುಕ್ತ್ವಾ ಮೃದುವಾಣ್ಯಾ ಸ ಭಾಷಿತಃ ॥ ೧೦ ॥
ವತ್ಸ ಗಚ್ಛ ಗೃಹಂ ತ್ವಂ ಚ ಅಗ್ನಿಹೋತ್ರಾದಿಕಾಃ ಕ್ರಿಯಾಃ ।
ಪಾಲಯಸ್ವ ವಿಧಾನೇನ ಪತ್ನ್ಯಾ ಸಹ ನ ಸಂಶಯಃ ॥ ೧೧ ॥
ಇತ್ಯುಕ್ತೋ ಗುರುಣಾ ಸೋಽಪಿ ಪ್ರತ್ಯುವಾಚ ಗುರುಂ ಪ್ರತಿ ।
ದಕ್ಷಿಣಾಂ ಪ್ರಾರ್ಥಯ ಸ್ವಾಮಿನ್ನಹಂ ದಾಸ್ಯಾಮ್ಯಸಂಶಯಂ ॥ ೧೨ ॥

---

೬. ಅವನು ಬಹಳ ಕಟ್ಟಿಗೆಯನ್ನು ತೆಗೆದುಕೊಂಡು ಆಶ್ರಮಕ್ಕೆ ಬಂದು ಅದನ್ನು ಭೂಮಿಯಲ್ಲಿ ಎಸೆದನು.

೭. ಆಗ ಅವನು ಕಟ್ಟಿಗೆಯಲ್ಲಿ ಸಿಕ್ಕಿಕೊಂಡಿರುವ ತನ್ನ ಒಂದು ಬಿಳಿ ಜಡೆಯನ್ನು ಕಂಡು ದುಃಖದಿಂದ ಹೀಗೆ ಚಿಂತಿಸಿದನು.

೮. ಕಾರ್ಯಾಸಕ್ತನಾದ ನನ್ನ ಜೀವನವು ಹಾಳಾಯಿತು. ಮೂಢನಾದ ನಾನು ಮದುವೆಮಾಡಿಕೊಳ್ಳಲೇ ಇಲ್ಲ.

೯. ದುರ್ಬುದ್ಧಿಯಾದ ನನ್ನ ಔದಾಸೀನ್ಯದಿಂದ ಸಂತತಿಯು ವಿಚ್ಛಿನ್ನವಾಗುವಾಗುವುದು. ಹೀಗೆ ದುಃಖಗೊಂಡ ಉತ್ತಂಕನನ್ನು ಗುರುಪತ್ನಿಯು ಕಂಡಳು.

೧೦. ಅವಳು ಆ ಉತ್ತಂಕನ ದುಃಖವನ್ನು ಗೌತಮನಿಗೆ ತಿಳಿಸಲು ಅವನು ಮೃದುವಚನದಿಂದ ಹಾಗೆಯೇ ಆಗಲೆಂದು ಉತ್ತಂಕನನ್ನು ಕುರಿತು ಹೀಗೆಂದನು.

೧೧. "ಮಗು ! ನೀನು ಮನೆಗೆ ಹೋಗಿ ಪತ್ನಿಯೊಡನೆ ಅಗ್ನಿಹೋತ್ರವೇ ಮೊದಲಾದುವುಗಳನ್ನು ವಿಧಿಯಂತೆ ನೆರವೇರಿಸು".

೧೨. ಗುರುವು ಹೀಗೆನ್ನಲು ಉತ್ತಂಕನು ಅವನನ್ನು ಕುರಿತು, "ಸ್ವಾಮಿ ! ದಕ್ಷಿಣೆಯನ್ನು ಕೇಳು. ನಿಶ್ಚಯವಾಗಿಯೂ ನಿನಗೆ ಅದನ್ನು ಕೊಡುವೆನು" ಎಂದನು.

ಗೌತಮ ಉವಾಚ :—
ಸೇವಾ ಕೃತಾ ತ್ವಯಾ ವತ್ಸ ಮಹತೀ ಮಮ ಸರ್ವದಾ ।
ತೇನೈವ ಪರಿಪೂರ್ಣತ್ವಂ ಜಾತಂ ಮೇ ನಾತ್ರ ಸಂಶಯಃ ॥ ೧೩ ॥
ಉತ್ತಂಕ ಉವಾಚ :—
ಕಿಂಚಿದ್ಗ್ರಾಹ್ಯಂ ತ್ವಯಾ ಸ್ವಾಮಿನ್ಸಂತೋಷೋ ಜಾಯತೇ ಮಮ ।
ತ್ವತ್ಪ್ರಸಾದಾನ್ಮುನಿಶ್ರೇಷ್ಠ ವಿದ್ಯಾಪಾರಂಗತೋಽಸ್ಮ್ಯಹಂ ॥ ೧೪ ॥
ಗೌತಮ ಉವಾಚ :—
ನ ಗ್ರಾಹ್ಯಂ ಚ ಮಯಾ ಪುತ್ರ ಸಂತುಷ್ಟಃ ಸೇವಯಾಸ್ಮ್ಯಹಂ ।
ನೇಚ್ಛಾಮ್ಯಹಂ ಧನಂ ತ್ವತ್ತಃ ಸುಖಂ ಗಚ್ಛ ಗೃಹಂ ಪ್ರತಿ ॥ ೧೫ ॥
ಇತ್ಯುಕ್ತೋ ಗುರುಣಾ ಸೋಽಪಿ ಮಾತರಂ ಚಾಭ್ಯಭಾಷತ ।
ಕಿಂಚಿದ್ಗ್ರಾಹ್ಯಂ ಮಯಾ ಮಾತಃ ಸಂತೋಷೋ ದೀಯತಾಂ ಮಮ ॥
ಗುರುಪತ್ನ್ಯುವಾಚ :—
ಸೌದಾಸಂ ಗಚ್ಛ ಪುತ್ರ ತ್ವಂ ಮಮಾಜ್ಞಾಂ ಕುರು ಸತ್ವರಂ ।
ಮದಯಂತೀ ಪ್ರಿಯಾ ತಸ್ಯ ಧರ್ಮಪತ್ನೀ ಯಶಸ್ವಿನೀ ॥ ೧೭ ॥

---

೧೩. ಗೌತಮನು ಹೇಳುತ್ತಾನೆ :—ಮಗು ! ನೀನು ಯಾವಾಗಲೂ ನನ್ನ ಸೇವೆಯನ್ನು ಬಹಳವಾಗಿ ಮಾಡಿರುವೆ. ಅದರಿಂದಲೇ ನನ್ನ ದಕ್ಷಿಣೆಯು ಪೂರ್ತಿಯಾಗಿರುವುದು. ಇದರಲ್ಲಿ ಸಂದೇಹವಿಲ್ಲ.

೧೪. ಉತ್ತಂಕನು ಹೇಳುತ್ತಾನೆ :—ಸ್ವಾಮಿ ! ನಾನು ನಿನ್ನ ಅನುಗ್ರಹದಿಂದ ವಿದ್ಯಾಪಾರಂಗತನಾಗಿರುವೆನು. ಆದ್ದರಿಂದ ನೀನು ನನ್ನಿಂದ ಸ್ವಲ್ಪವನ್ನಾದರೂ ತೆಗೆದುಕೊಳ್ಳಬೇಕು. ಅದರಿಂದ ನನಗೆ ಸಂತೋಷವಾಗುವುದು.

೧೫. ಗೌತಮನು ಹೇಳುತ್ತಾನೆ :—ಮಗು ! ನಾನು ನಿನ್ನಿಂದ ಏನನ್ನೂ ತೆಗೆದುಕೊಳ್ಳಕೂಡದು. ನಿನ್ನ ಸೇವೆಯಿಂದಲೇ ನಾನು ಸಂತೋಷಗೊಂಡಿದ್ದೇನೆ. ನಾನು ನಿನ್ನಿಂದ ಹಣವನ್ನು ಅಪೇಕ್ಷಿಸುವುದಿಲ್ಲ. ನೀನು ಸುಖವಾಗಿ ಮನೆಗೆ ತೆರಳು.

೧೬. ಗುರುವು ಹೀಗೆನ್ನಲು ಅವನು ಗುರುಪತ್ನಿಯನ್ನು ಕುರಿತು, "ಅಮ್ಮ ! ನೀವು ನನ್ನಿಂದಏನನ್ನಾದರೂ ತೆಗೆದುಕೊಂಡು ನನಗೆ ಸಂತೋಷವನ್ನುಂಟುಮಾಡಿರಿ". ಎಂದನು.

೧೭. ಗುರುಪತ್ನಿಯು ಹೇಳುತ್ತಾಳೆ :—ಮಗು ! ನೀನು ಸೌದಾಸನೆಡೆಗೆ ಹೋಗಿ ಶೀಘ್ರವಾಗಿ ನನ್ನ ಆಜ್ಞೆಯನ್ನು ನೆರವೇರಿಸು. ಆ ಸೌದಾಸನಿಗೆ ಮದಯಂತಿ ಯೆಂಬ ಪ್ರಿಯಳಾದ ಧರ್ಮ ಪತ್ನಿಯಿರುವಳು.

ಕುಂಡಲೇಽಥಾನಯ ಕ್ಷಿಪ್ರಂ ಮದಯಂತ್ಯಾಶ್ಚ ಪುತ್ರಕ ।
ನೋ ಚೇಚ್ಛಾಪಂ ಪ್ರದಾಸ್ಯಾಮಿ ಪಂಚಮೇಽಹ್ನಿ ನ ಆಗತಃ ॥ ೧೮ ॥
ಇತ್ಯುಕ್ತೋ ಗುರುಪತ್ನ್ಯಾ ಸ ಪ್ರಸ್ಥಿತಃ ಸತ್ವರಂ ಸದಾ ।
ಸೌದಾಸಸ್ಯ ಗೃಹಂ ಪ್ರಾಪ ವ್ಯಾಘ್ರಾಸ್ಯಂ ತಂ ಚ ದೃಷ್ಟವಾನ್ ॥ ೧೯ ॥
ದೃಷ್ಟ್ವಾ ಪ್ರಾಹ ತದಾ ವಿಪ್ರಂ ಭಕ್ಷಣಾರ್ಥಮುಪಸ್ಥಿತಂ ।
ಭಕ್ಷಯಿಷ್ಯಾಮಿ ವೈ ವಿಪ್ರ ತ್ವಾಮಹಂ ನಾತ್ರ ಸಂಶಯಃ ॥ ೨೦ ॥

ಉತ್ತಂಕ ಉವಾಚ :—

ಅವಶ್ಯಂ ಭಕ್ಷಯ ತ್ವಂ ಮಾಮೇಕಂ ಶೃಣು ನರಾಧಿಪ ।
ದೇಹಿ ಮೇ ಕುಂಡಲೇ ತಾತ ದತ್ವಾಽಹಂ ಗುರುವೇ ಪುನಃ ।
ಆಗಮಿಷ್ಯಾಮಿ ಭಕ್ಷಸ್ವ ಮಾಂ ತ್ವಂ ಕಾರ್ಯವಿವರ್ಜಿತಂ ॥ ೨೧ ॥

ಸೌದಾಸ ಉವಾಚ :—

ಗಚ್ಛ ತ್ವಂ ಮಂದಿರೇ ದುರ್ಗೇ ಯತ್ರಾಽಽಸ್ತೇ ದಯಿತಾ ಮಮ ।
ತಾಂ ತ್ವಮಾಸಾದ್ಯ ಯತ್ನೇನ ಜೀವಿತವ್ಯಭಯಾದ್ದ್ವಿಜ ॥ ೨೨ ॥
ಯಾಚ್ಯತಾಂ ಮಮ ವಾಕ್ಯೇನ ಸಾ ತೇ ದಾಸ್ಯತಿ ಕುಂಡಲೇ ।
ತ್ವಯಾ ಚ ನಾನ್ಯಥಾ ಕಾರ್ಯಂ ಯತ್ಸತ್ಯಂ ದ್ವಿಜಸತ್ತಮ ॥ ೨೩ ॥

---

೧೮. ಆ ಮದಯಂತಿಯ ಕುಂಡಲಗಳನ್ನು ಶೀಘ್ರವಾಗಿ ತೆಗೆದುಕೊಂಡು ಬಾ. ನೀನು ಇಂದಿನಿಂದ ಐದನೆ ದಿನ ತೆಗೆದುಕೊಂಡು ಬಾರದಿದ್ದರೆ ಶಾಪವನ್ನೀಯುವೆನು.

೧೯. ಗುರುಪತ್ನಿಯು ಹೀಗೆನ್ನಲು ಅವನು ಕೂಡಲೆ ಹೊರಟು ಸೌದಾಸನ ಮನೆಗೆ ಹೋಗಿ ಹುಲಿಯಂತೆ ಮುಖವುಳ್ಳ ಅವನನ್ನು ಕಂಡನು.

೨೦. ಆ ಸೌದಾಸನು ಸಮೀಪಕ್ಕೆ ಬಂದ ಉತ್ತಂಕನನ್ನು ಕಂಡು, "ಬ್ರಾಹ್ಮಣ! ನಾನು ನಿನ್ನನ್ನು ನಿಶ್ಚಯವಾಗಿಯೂ ಭಕ್ಷಿಸುವೆನು". ಎಂದನು.

೨೧. ಉತ್ತಂಕನು ಹೇಳುತ್ತಾನೆ :—ದೊರೆಯೆ! ನೀನು ನನ್ನನ್ನು ಅವಶ್ಯವಾಗಿ ಭಕ್ಷಿಸು. ಆದರೆ ನನ್ನದೊಂದು ಮಾತನ್ನು ಕೇಳು. ನೀನು ನನಗೆ ಕುಂಡಲಗಳನ್ನು ಕೊಡು. ನಾನದನ್ನು ಗುರುವಿಗಿತ್ತು ಹಿಂದಿರುಗಿ ಬರುವೆನು. ಆಗ ಕೃತಕಾರ್ಯನಾದ ನನ್ನನ್ನು ಭಕ್ಷಿಸು.

೨೨-೨೩. ಸೌದಾಸನು ಹೇಳುತ್ತಾನೆ :—ಬ್ರಾಹ್ಮಣ! ನೀನು ಪ್ರಾಣಭಯವಿಲ್ಲದಂತೆ ದುರ್ಗಮವಾದ ಮನೆಯಲ್ಲಿರುವ ನನ್ನ ಪತ್ನಿಯನ್ನು ಹೊಂದಿ ನನ್ನ ಮಾತಿನಂತೆ ಅವಳನ್ನು ಕುಂಡಲವನ್ನು ಕೊಡೆಂದು ಪ್ರಾರ್ಥಿಸು. ಅದರಂತೆ ಅವಳು ಕೊಡುವಳು. ನೀನು ನಿಜವಾಗಿಯೂ ಅನ್ಯಥಾಮಾಡಬಾರದು.

ವಸಿಷ್ಠ ಉವಾಚ :—
ಮದಯಂತ್ಯಾ ಸಮೀಪಂ ತು ಗತ್ವೋವಾಚ ದ್ವಿಜೋತ್ತಮಃ ।
ದೇಹಿ ಮೇ ಕುಂಡಲೇ ದೇವಿ ಸೌದಾಸಸ್ತ್ವಾಂ ಸಮಾದಿಶತ್ ॥ ೨೪ ॥
ಮದಯಂತ್ಯುವಾಚ :—
ಸಂದೇಹೋಽದ್ಯಾಪಿ ಮೇ ವಿಪ್ರ ಕುಂಡಲೇ ದ್ವಿಜಸತ್ತಮ ।
ಅಭಿಜ್ಞಾನಂ ತ್ವಮಾನೀಯ ನೃಪಸ್ಯ ದ್ವಿಜ ದರ್ಶಯ ॥ ೨೫ ॥
ಸ ಗತ್ವಾ ತ್ವರಿತಂ ಭೂಪಮಭಿಜ್ಞಾನಮಯಾಚತ ॥ ೨೬ ॥
ಸೌದಾಸ ಉವಾಚ :—
ಯೈರ್ವಿನಾ ಸುಗತಿರ್ನಾಸ್ತಿ ದುರ್ಗತಿಂ ಯೇ ನಯಂತಿ ವೈ ।
ಗತ್ವೈವಂ ಬ್ರೂಹಿ ತಾಂ ನೂನಂ ಕುಂಡಲೇ ರತ್ನಮಂಡಿತೇ ॥ ೨೭ ॥
ವಸಿಷ್ಠ ಉವಾಚ :—
ಪ್ರತ್ಯಭಿಜ್ಞಾನಮಾದಾಯ ಗತ್ವಾ ತಸ್ಯೈ ನ್ಯವೇದಯತ್ ॥ ೨೮ ॥
ತತೋಽಸೌ ಪ್ರದದೌ ತಸ್ಮೈ ಗೃಹ್ಣ ಮೇ ಕುಂಡಲೇ ದ್ವಿಜ ।
ಉವಾಚ ಯತ್ನಮಾಸ್ಥಾಯ ನೀಯತಾಂ ದ್ವಿಜಸತ್ತಮ ॥ ೨೯ ॥

---

೨೪. ವಸಿಷ್ಠನು ಹೇಳುತ್ತಾನೆ :— ಆ ಉತ್ತಂಕನು ಮದಯಂತಿಯ ಹತ್ತಿರ ಹೋಗಿ, "ದೇವಿ! ನನಗೆ ಕುಂಡಲವನ್ನು ಕೊಡುವಂತೆ ಸೌದಾಸನು ಅಪ್ಪಣೆಮಾಡಿರುವ" ನೆಂದನು.

೨೫–೨೬. ಮದಯಂತಿಯು ಹೇಳುತ್ತಾಳೆ :— ದ್ವಿಜವರ್ಯ! ನನಗೆ ಈಗಲೂ ಕುಂಡಲಗಳ ವಿಷಯದಲ್ಲಿ ಸಂದೇಹವಿದೆ. ನೀನು ರಾಜನ ಗುರುತನ್ನು ತಂದು ತೋರಿಸು. ಅದರಂತೆ ಉತ್ತಂಕನು ಶೀಘ್ರವಾಗಿ ದೊರೆಯೆಡೆಗೆ ಹೋಗಿ ಅಭಿಜ್ಞಾನವನ್ನು ಬೇಡಿದನು.

೨೭. ಸೌದಾಸನು ಹೇಳುತ್ತಾನೆ :— "ಯಾರಿಲ್ಲದಿದ್ದರೆ ಸುಗತಿಯಿಲ್ಲವೋ; ಯಾರು ದುರ್ಗತಿಯನ್ನು ಹೊಂದಿಸುವರೊ" ಬ್ರಾಹ್ಮಣ! ನೀನು ಹೋಗಿ ಈ ಮಾತನ್ನು ಆ ಸಾಧ್ವಿಗೆ ಹೇಳು. ಅವಳು ಕೂಡಲೆ ರತ್ನದಿಂದ ಅಲಂಕಾರಗೊಂಡ ಕುಂಡಲಗಳನ್ನು ನಿಶ್ಚಯವಾಗಿಯೂ ಕೊಡುವಳು.

೨೮–೩೦. ವಸಿಷ್ಠನು ಹೇಳುತ್ತಾನೆ :— ಉತ್ತಂಕನು ಸೌದಾಸನ ಅಭಿಜ್ಞಾನವನ್ನು ತೆಗೆದುಕೊಂಡು ಆ ಮದಯಂತಿಗೆ ತಿಳಿಸಲು ಅವಳು ಕುಂಡಲವನ್ನು ಅವನಿಗಿತ್ತು, "ಬ್ರಾಹ್ಮಣ! ಇದನ್ನು ಜಾಗರೂಕತೆಯಿಂದ ತೆಗೆದುಕೊಂಡು ಹೋಗು. ಇವುಗಳನ್ನು ಯಾವಾಗಲೂ ತಕ್ಷಕನು ಬೇಡುತ್ತಿರುವನು" ಎಂದಳು. ಅವನು

ಏತೇ ಚ ವಾಂಛತೇ ನಿತ್ಯಂ ತಕ್ಷಕೋ ದ್ವಿಜ ಕುಂಡಲೇ ।
ಸ ತಥೇತಿ ಸಮಾದಾಯ ವಿಸ್ಮಯೋತ್ಫುಲ್ಲಲೋಚನಃ ।
ಕೌತುಕಾತ್ಪುನರಾಗತ್ಯ ರಾಜಾನಂ ವಾಕ್ಯಮಬ್ರವೀತ್ ॥ ೩೦ ॥
ಅಭಿಜ್ಞಾನಾನ್ಮಯಾ ಭೂಪ ಸಂಪ್ರಾಪ್ತೇ ದೀಪ್ತಕುಂಡಲೇ ।
ವಾಕ್ಯಾರ್ಥಸ್ತು ನ ವಿಜ್ಞಾತಸ್ತತೋಽಹಂ ಪುನರಾಗತಃ ॥ ೩೧ ॥
ಕೌತುಕಾದ್ವದ ಮೇ ರಾಜನ್ಸ್ವಕಾರ್ಯೇ ಚ ಯಥಾಸ್ಥಿತಂ ।
ಕೈರ್ವಿನಾ ಸುಗತಿರ್ನಾಸ್ತಿ ದುರ್ಗತಿಂ ಕೇ ನಯಂತಿ ಚ ॥ ೩೨ ॥

ಸೌದಾಸ ಉವಾಚ :—

ಆರಾಧಿತಾ ದ್ವಿಜಾ ವಿಪ್ರ ಭವಂತಿ ಸುಗತಿಪ್ರದಾಃ ।
ಅಸಂತುಷ್ಟಾ ದುರ್ಗತಿದಾಃ ಸದ್ಯೋ ಮಮ ಯಥಾ ಪುರಾ ॥ ೩೩ ॥
ಏತಾವಾನ್ಮಮ ಶಾಪೋಽಯಂ ವಸಿಷ್ಠಸ್ಯ ಮಹಾತ್ಮನಃ ।
ತೇನೋಕ್ತಂ ತ್ವಾಂ ಯದಾ ಕಶ್ಚಿತ್ಪ್ರಶ್ನಂ ವಿಖ್ಯಾಪಯಿಷ್ಯತಿ ॥ ೩೪ ॥
ತದಾ ದೋಷವಿನಿರ್ಮುಕ್ತೋ ಭವಿಷ್ಯಸಿ ನ ಸಂಶಯಃ ।
ತ್ವತ್ಪ್ರಸಾದಾದ್ವಿನಿರ್ಮುಕ್ತೋ ಹ್ಯಹಂ ಶಾಪಾದ್ದ್ವಿಜೋತ್ತಮ ।
ಸಾತ್ತ್ವಿಕಂ ಧಾಮ ಚಾಪನ್ನೋ ಗಚ್ಛ ವಿಪ್ರ ನಮೋಽಸ್ತು ತೇ ॥ ೩೫ ॥

---

ಹಾಗೆಯೇ ಆಗಲೆಂದು ಅದನ್ನು ತೆಗೆದುಕೊಂಡು ಆಶ್ಚರ್ಯ ಕುತೂಹಲಗಳಿಂದ ಮರಳಿ ರಾಜನೆಡೆಗೆ ಬಂದು ಇಂತೆಂದನು.

೩೧—೩೨. "ದೊರೆಯೆ ! ನಿನ್ನ ಅಭಿಜ್ಞಾನದಿಂದ ನಾನು ಪ್ರಕಾಶಮಾನವಾದ ಕುಂಡಲಗಳನ್ನು ಪಡೆದೆನು. ನೀನು ಹೇಳಿದ ಮಾತಿನ ಅರ್ಥವು ಮಾತ್ರ ನಿನಗೆ ತಿಳಿಯದಿರುವುದರಿಂದ ಕುತೂಹಲಗೊಂಡು ಮರಳಿ ನಿನ್ನೆಡೆಗೆ ಬಂದಿರುವೆನು. ಸ್ವಕಾರ್ಯ ನಿರತನಾದ ನನಗೆ ಅದನ್ನು ಹೇಳು. ಯಾರಿಲ್ಲದಿದ್ದರೆ ಸುಗತಿಯಿಲ್ಲ. ಯಾರು ದುರ್ಗತಿಯನ್ನು ಹೊಂದಿಸುವರು.

೩೩. ಸೌದಾಸನು ಹೇಳುತ್ತಾನೆ .—ಬ್ರಾಹ್ಮಣ ! ಪೂಜಿಸಿದರೆ ಬ್ರಾಹ್ಮಣರು ಸದ್ಗತಿಯನ್ನೀಯುವರು. ಅಸಂತುಷ್ಟರಾದರೆ ನನಗೆ ಹಿಂದೆ ಕೊಟ್ಟಂತೆ ದುರ್ಗತಿಯನ್ನು ಕೊಡುವರು.

೩೪ ೩೫. ಮಹಾತ್ಮನಾದ ವಸಿಷ್ಠನು ನನಗೆ ಶಾಪವನ್ನಿತ್ತು ನಿನ್ನನ್ನು ಯಾವನೊ ಒಬ್ಬನು ಪ್ರಶ್ನೆಯನ್ನು ಕೇಳಿದಾದ ನಿನ್ನ ಶಾಪವು ಪರಿಹಾರವಾಗುವುದು. ಸಂದೇಹವಿಲ್ಲ. ಎಂದಿರುವನು. ಈಗ ನಿನ್ನ ಅನುಗ್ರಹದಿಂದ ನಾನು ಶಾಪಮುಕ್ತನಾಗಿ ಸಾತ್ವಿಕವಾದ ಸ್ಥಾನವನ್ನು ಪಡೆದಿರುವೆನು. ನಿನಗೆ ನಮಸ್ಕಾರವು.

ವಸಿಷ್ಠ ಉವಾಚ :—
ಉತ್ತಂಕಸ್ತೇನ ನಿರ್ಮುಕ್ತಃ ಸತ್ವರಂ ಪಥಮಾಶ್ರಿತಃ ।
ಗಚ್ಛಂಶ್ಚಾತಿಕ್ಷುಧಾವಿಷ್ಟೋಽಪಶ್ಯದ್ಬಿಲ್ವಫಲಾನಿ ಸಃ ॥ ೩೬ ॥
ತತಃ ಕೃಷ್ಣಾಜಿನೇ ಬದ್ಧ್ವಾ ಕುಂಡಲೇ ನ್ಯಸ್ಯ ಭೂತಲೇ ।
ಆರುರೋಹ ಫಲಾಕಾಂಕ್ಷೀ ಸ ಮುನಿಃ ಕ್ಷುಧಯಾನ್ವಿತಃ ॥ ೩೭ ॥
ಏತಸ್ಮಿನ್ನೇವ ಕಾಲೇ ತು ತಕ್ಷಕಃ ಪನ್ನಗೋತ್ತಮಃ ।
ಗೃಹೀತ್ವಾ ಕುಂಡಲೇ ತೂರ್ಣಮಗಮದ್ದಕ್ಷಿಣಾಮುಖಃ ॥ ೩೮ ॥
ಅಥೋತ್ತಂಕಃ ಫಲಾಹಾರೀ ಅವತೀರ್ಯ ಧರಾತಲೇ ।
ಸರ್ವತೋಽನ್ವೇಷಯಾಮಾಸ ವೇಗೇನ ಮಹತಾ ವೃತಃ ॥ ೩೯ ॥
ಸ ದೃಷ್ಟ್ವಾ ಸಮ್ಮುಖಂ ಪ್ರಾಪ್ತಂ ಸಮೀಪಂ ಪನ್ನಗೋತ್ತಮಃ ।
ಪ್ರವಿವೇಶ ಬಿಲಂ ರೌದ್ರಮಂಧಕಾರೇಣ ಸಂವೃತಂ ॥ ೪೦ ॥
ಉತ್ತಂಕೋಽಪಿ ಬಿಲಂ ಪ್ರಾಪ್ತಃ ಪ್ರವಿಶ್ಯ ತಮಸಾ ವೃತಂ ।
ದಂಡಕಾಷ್ಠಂ ಸಮಾದಾಯ ಕುಪಿತೋ ಹ್ಯಖನತ್ತದಾ ॥ ೪೧ ॥
ತಂ ತಥಾ ದುಃಖಿತಂ ದೃಷ್ಟ್ವಾ ಸಕ್ಲೇಶಂ ಗುರುಕಾರ್ಯತಃ ।
ವಜ್ರಮಾರೋಪಯಾಮಾಸ ದಂಡಾಂತೇ ಪಾಕಶಾಸನಃ ॥ ೪೨ ॥

---

೩೬. ವಸಿಷ್ಠನು ಹೇಳುತ್ತಾನೆ :—ಉತ್ತಂಕನು ಆ ಸೌದಾಸನಿಂದ ಕಳು ಹಿಸಲ್ಪಟವನಾಗಿ ಶೀಘ್ರವಾಗಿ ದಾರಿ ನಡೆದು ಅತ್ಯಂತ ಹಸಿವುಗೊಂಡವನಾಗಿ ಬಿಲ್ವಫಲಗಳನ್ನು ಕಂಡನು.

೩೭. ಬಳಿಕ ಹಸಿವುಗೊಂಡ ಆ ಮುನಿಯು ಆ ಫಲಗಳನ್ನು ಕೀಳಲು ಕುಂಡಲ ಗಳನ್ನು ಕೃಷ್ಣಾಜಿನದಲ್ಲಿ ಕಟ್ಟಿ ನೆಲದಲ್ಲಿಟ್ಟು ಮರವನ್ನು ಹತ್ತಿದನು.

೩೮. ಈ ಸಮಯದಲ್ಲಿಯೇ ತಕ್ಷಕನು ಕುಂಡಲಗಳನ್ನು ತೆಗೆದುಕೊಂಡು ಶೀಘ್ರವಾಗಿ ದಕ್ಷಿಣಾಭಿಮುಖವಾಗಿ ಹೋದನು.

೩೯. ಬಳಿಕ ಉತ್ತಂಕನು ಫಲಗಳನ್ನು ಭುಂಜಿಸಿ ಕೆಳಗಿಳಿದು ಅತಿ ವೇಗದಿಂದ ಸುತ್ತಲೂ ಹುಡುಕಿದನು.

೪೦. ಆ ತಕ್ಷಕನು ಎದುರಾಗಿ ಹತ್ತಿರದಲ್ಲಿ ಬರುತ್ತಿರುವ ಉತ್ತಂಕನನ್ನು ನೋಡಿ ಕತ್ತಲೆಯಿಂದ ತುಂಬಿರುವ ಭಯಂಕರವಾದ ಒಂದು ಬಿಲವನ್ನು ಹೊಕ್ಕನು.

೪೧. ಉತ್ತಂಕನೂ ಕತ್ತಲೆಯಿಂದ ಮುಚ್ಚಿರುವ ಆ ಬಿಲವನ್ನು ಹೊಕ್ಕು ಕೋಪದಿಂದ ದೊಣ್ಣೆಯನ್ನು ತೆಗೆದುಕೊಂಡು ಬಿಲವನ್ನು ಅಗೆದನು.

೪೨. ಇಂದ್ರನು ಗುರುವಿನ ಕಾರ್ಯಕ್ಕಾಗಿ ಹಾಗೆ ದುಃಖಗೊಂಡ ಉತ್ತಂಕ ನನ್ನು ಕಂಡು ಆ ದೊಣ್ಣೆಯ ಕೊನೆಗೆ ವಜ್ರಾಯುಧವನ್ನು ಜೋಡಿಸಿದನು.

ತತೋ ವಿದಾರಯಾಮಾಸ ಸ ಶೀಘ್ರಂ ಧರಣೀತಲಂ ।
ಪ್ರವಿಷ್ಟಶ್ಚೈವ ಪಾತಾಲಂ ಕುಂಡಲಾರ್ಥಂ ಪರಿಭ್ರಮನ್ ॥ ೪೩ ॥
ಸೋಽಪಶ್ಯದ್ವಾಜಿನಂ ತತ್ರ ಸರ್ವಶ್ವೇತಂ ಗುಣಾನ್ವಿತಂ ।
ತೇನೋಕ್ತಃ ಸ್ಪೃಶ ಮೇ ಗುಹ್ಯಂ ತತಃ ಕಾರ್ಯಂ ಭವಿಷ್ಯತಿ ॥ ೪೪ ॥
ಸ ಚಕಾರ ತಥಾ ಶೀಘ್ರಂ ತತೋ ಧೂಮೋ ವ್ಯಜಾಯತ ।
ಪಾತಾಲಂ ತೇನ ಸರ್ವತ್ರ ವ್ಯಾಪ್ತಂ ಭೂಧರವಹ್ನಿನಾ ॥ ೪೫ ॥
ತತಶ್ಚ ವ್ಯಾಕುಲಾಃ ಸರ್ವೇ ಪನ್ನಗಾಃ ಸಮುಪಾದ್ರವನ್ ।
ತಕ್ಷಕಂ ಪುರತಃ ಕೃತ್ವಾ ಸಂಪ್ರಾಪ್ತಾಃ ಕುಂಡಲಾನ್ವಿತಾಃ ।
ಉತ್ತಂಕಾಯ ತತೋ ದತ್ವಾ ಪ್ರಣಿಪತ್ಯ ಯಯುರ್ಗೃಹಂ ॥ ೪೬ ॥

ವಸಿಷ್ಠ ಉವಾಚ :—

ಅಥಾಶ್ವಸ್ತಮುವಾಚೇದಮಹಮಗ್ನಿರ್ದ್ವಿಜೋತ್ತಮ ।
ಯಸ್ತ್ವಯಾಽಽರಾಧಿತಃ ಪೂರ್ವಮುಪಾಧ್ಯಾಯನಿದೇಶತಃ ॥ ೪೭ ॥
ಜ್ಞಾತ್ವಾ ತ್ವಾಂ ದುಃಖಿತಂ ಪ್ರಾಪ್ತಮಿಹ ಪ್ರಾಪ್ತಃ ಕೃಪಾಪರಃ ।
ಸರ್ವಥಾ ತ್ವಂ ಚ ಮೇ ಪೃಷ್ಠಂ ಭಗರ್ವ ಶೀಘ್ರಮಾರುಹ ॥ ೪೮ ॥

---

೪೩–೪೪. ಆದರಿಂದವನು ಶೀಘ್ರವಾಗಿ ಭೂಮಿಯನ್ನು ಸೀಳಿ ಪಾತಾಳವನ್ನು ಪ್ರವೇಶಿಸಿ ಕುಂಡಲಕ್ಕಾಗಿ ಅಲೆಯುತ್ತ ಸಂಪೂರ್ಣವಾಗಿ ಬಿಳಿದಾದ ಒಂದು ಗುಣಶಾಲಿ ಕುದುರೆಯನ್ನು ನೋಡಿದನು. ಆಗ ಆ ಕುದುರೆಯು, "ನನ್ನ ಗುಹ್ಯ ಪ್ರದೇಶ ವನ್ನು ಮುಟ್ಟು. ಅದರಿಂದ ನಿನ್ನ ಕಾರ್ಯವು ನೆರವೇರುವು"ದೆಂದಿತು.

೪೫. ಆ ಉತ್ತಂಕನು ಹಾಗೆಯೇ ಮಾಡಲು ಅದರಿಂದ ಹೊಗೆಯುಂಟಾಗಿ ಅಗ್ನಿಯು ಪಾತಾಳವನ್ನೆಲ್ಲ ವ್ಯಾಪಿಸಿತು.

೪೬. ಅನಂತರ ಸಮಸ್ತ ಸರ್ಪಗಳೂ ವ್ಯಥೆಯಿಂದ ಓಡಿಬಂದು ಕುಂಡಲ ದೊಡನೆ ತಕ್ಷಕನನ್ನು ಮುಂದಿರಿಸಿಕೊಂಡು ಉತ್ತಂಕನಿಗೆ ಕುಂಡಲವನ್ನೊಪ್ಪಿಸಿ ನಮಸ್ಕರಿಸಿ ತಮ್ಮ ಮನೆಗಳಿಗೆ ಹೊರಟು ಹೋದುವು.

೪೭. ವಸಿಷ್ಠನು ಹೇಳುತ್ತಾನೆ :—ತರುವಾಯ ಆ ಕುದುರೆಯು ಉತ್ತಂಕನನ್ನು ಕುರಿತು, ನೀನು ಹಿಂದೆ ಗುರುವಿನ ಅಪ್ಪಣೆಯಿಂದ ಪೂಜಿಸಿದ ಅಗ್ನಿದೇವನು. ನಾನು

೪೮. ನೀನು ದುಃಖಗೊಂಡಿರುವುದನ್ನರಿತು ನಾನು ಕನಿಕರಗೊಂಡು ಇಲ್ಲಿಗೆ ಬಂದಿರುವೆನು. ಶೀಘ್ರವಾಗಿ ನನ್ನ ಬೆನ್ನಿನ ಮೇಲೆ ಕೂತುಕೊ.

ನಯಾಮಿ ತತ್ರ ಯತ್ರಾಸ್ತೇ ಗುರುಃ ಸರ್ವಗುಣಾಲಯಃ ।
ಆರೂಢಸ್ತಸ್ಯ ಪೃಷ್ಠೇ ಸ ಪ್ರತಸ್ಥೇ ಹ್ಯಾಶ್ರಮಂ ಪ್ರತಿ ॥ ೪೯ ॥
ತತ್ಕ್ಷಣಾತ್ಸಮನುಪ್ರಾಪ್ತೋ ಗೌತಮಸ್ಯ ನಿವೇಶನಂ ।
ಏತಸ್ಮಿನ್ನೇವ ಕಾಲೇ ತು ಅಹಲ್ಯಾಂ ಕೃತಮಂಡನಾ ॥ ೫೦ ॥
ಸ್ನಾತಾ ಚಾಭ್ಯೇತ್ಯ ಭರ್ತಾರಂ ಸಾಧ್ವೀ ವಾಕ್ಯಮುವಾಚ ಹ ।
ಉತ್ತಂಕೋಽದ್ಯ ನ ಸಂಪ್ರಾಪ್ತಃ ಶಾಪಂ ದಾಸ್ಯಾಮ್ಯಹಂ ಧ್ರುವಂ ॥ ೫೧ ॥
ಶಿಥಿಲೋ ಗುರುಕೃತ್ಯೇಷು ಸ ಯದಾ ಲಕ್ಷಿತೋ ಮಯಾ ।
ತಸ್ಯಾ ವಾಕ್ಯಾವಸಾನೇ ತು ಉತ್ತಂಕಃ ಪರ್ಯದೃಶ್ಯತ ॥ ೫೨ ॥
ಪ್ರಸನ್ನವದನೋ ಹೃಷ್ಟಃ ಕುಂಡಲಾಭ್ಯಾಂ ಸಮನ್ವಿತಃ ।
ಪ್ರಣಿಪತ್ಯ ಸ ತಾಂ ಭಕ್ತ್ಯಾ ಕುಂಡಲೇ ಸಂನ್ಯವೇದಯತ್ ॥ ೫೩ ॥
ಸಾ ದೃಷ್ಟ್ವಾ ತತ್ಕ್ಷಣಾತ್ಸಾಧ್ವೀ ಕರ್ಣಾಭ್ಯಾಂ ಸಂನ್ಯವೇಶಯತ್ ।
ಸ್ವಗೃಹಾಯ ತತಸ್ತೂರ್ಣಮುತ್ತಂಕಂ ವಿಸಸರ್ಜ ಹ ॥ ೫೪ ॥

ವಸಿಷ್ಠ ಉವಾಚ :—

ಏವಂ ಸ ವಿವಸೋ ಜಾತಸ್ತಕ್ಷಕೋತ್ತಂಕಕಾರಣಾತ್ ।
ಯಥಾ ಮೇ ಚಿಂತ್ಯತೇ ನಿತ್ಯಂ ಧೇನ್ವರ್ಥಂ ಶ್ವಭ್ರಪೂರಣೇ ॥ ೫೫॥

---

೪೯. ಸಕಲ ಗುಣಗಳಿಗೆ ಆಶ್ರಯನಾದ ನಿನ್ನ ಗುರುವಿನ ಸ್ಥಳಕ್ಕೆ ನಿನ್ನನ್ನು ಒಯ್ಯುವೆನು ಎಂದಿತು. ಅವನು ಆ ಕುದುರೆಯ ಬೆನ್ನಿನ ಮೇಲೆ ಹತ್ತಿ ಆಶ್ರಮವನ್ನು ಕುರಿತು ಪ್ರಯಾಣಮಾಡಿದನು.

೫೦–೫೧. ಕೂಡಲೆ ಗೌತಮನ ಮನೆಯನ್ನು ಸೇರಿದನು. ಈ ಸಮಯದಲ್ಲಿ ಅಹಲ್ಯೆಯು ಮಿಂದು ಅಲಂಕಾರ ಮಾಡಿಕೊಂಡು ಪತಿಯನ್ನು ಹೊಂದಿ ಇಂತೆಂದಳು. "ಇನ್ನೂ ಉತ್ತಂಕನು ಬರಲಿಲ್ಲ. ಆದ್ದರಿಂದ ಅವನಿಗೆ ಶಾಪವನ್ನು ಕೊಡುವೆನು.

೫೨. ಅವನು ಗುರುವಿನ ಕೆಲಸದಲ್ಲಿ ಆಸಕ್ತಿಯಿಲ್ಲದವನಂತೆ ಕಾಣುತ್ತಾನೆ". ಹೀಗೆ ಅವಳು ಹೇಳಿ ಮಾತನ್ನು ಮುಗಿಸಿದ ಕೂಡಲೆ ಉತ್ತಂಕನು ಕಾಣಿಸಿಕೊಂಡನು.

೫೩. ಪ್ರಸನ್ನವಾದ ಮುಖವುಳ್ಳವನೂ, ಸಂತೋಷಗೊಂಡವನೂ, ಕುಂಡಲಗಳಿಂದ ಕೂಡಿದವನೂ ಆದ ಆ ಉತ್ತಂಕನು ಆ ಗುರುಪತ್ನಿಯನ್ನು ಭಕ್ತಿಯಿಂದ ವಂದಿಸಿ ಕುಂಡಲಗಳನ್ನು ಅರ್ಪಿಸಿದನು.

೫೪. ಆ ಸಾಧ್ವಿಯು ಕೂಡಲೆ ಆ ಕುಂಡಲಗಳನ್ನು ಕಿವಿಯಲ್ಲಿ ಧರಿಸಿ ಉತ್ತಂಕನನ್ನು ಮನೆಗೆ ಕಳುಹಿಸಿದಳು.

೫೫. ವಸಿಷ್ಠನು ಹೇಳುತ್ತಾನೆ :— ಹೀಗೆ ತಕ್ಷಕೋತ್ತಂಕರಿಂದ ಆ ವಿವರವು ಉಂಟಾಯಿತು. ಆದ್ದರಿಂದ ನಾನು ನನ್ನ ನಂದಿನಿಗಾಗಿ ಆ ಕುಣಿಯನ್ನು ಮುಚ್ಚಿಸಬೇಕೆಂದು ಆಲೋಚಿಸಿದ್ದೇನೆ.

ತಸ್ಮಾತ್ತ್ವಂ ಪೂರಯ ಕ್ಷಿಪ್ರಂ ನಾನ್ಯಃ ಶಕ್ತೋಽತ್ರ ಕರ್ಮಣಿ ।
ಶೀಘ್ರಂ ಕುರು ನಗಶ್ರೇಷ್ಠ ಮಮ ಕಾರ್ಯಮಸಂಶಯಂ ॥ ೫೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ ವಿವರೋತ್ಪತ್ತಿವೃತ್ತಾಂತೇ
ಗೌತಮಶಿಷ್ಯೋತ್ತಂಕಚರಿತ್ರವರ್ಣನಂ ನಾಮ
ದ್ವಿತೀಯೋಽಧ್ಯಾಯಃ

---

೫೬. ನೀನು ಅದನ್ನು ಶೀಘ್ರವಾಗಿ ಮುಚ್ಚಿಸು. ನಿನ್ನನ್ನು ಬಿಟ್ಟರೆ ಈ ಕೆಲಸದಲ್ಲಿ ಬೇರೆ ಯಾರೂ ಶಕ್ತರಾದವರಿಲ್ಲ. ಇದು ನನ್ನ ಕೆಲಸವು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದ ವಿವರೋತ್ಪತ್ತಿವೃತ್ತಾಂತದಲ್ಲಿ
ಗೌತಮಶಿಷ್ಯೋತ್ತಂಕ ಚರಿತ್ರವರ್ಣನವೆಂಬ
ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತೃತೀಯೋಽಧ್ಯಾಯಃ

## ವಿವರಪೂರಣವರ್ಣನಂ

ಸೂತ ಉವಾಚ :—

ಶ್ರುತ್ವಾ ಹಿಮಾಚಲೋ ವಾಕ್ಯಂ ವಸಿಷ್ಠಸ್ಯ ಮಹಾತ್ಮನಃ ।
ಚಿಂತಯಾಮಾಸ ತತ್ಕಾರ್ಯಂ ವಿವರಸ್ಯ ಪ್ರಪೂರಣೇ ॥ ೧ ॥
ಚಿರಂ ವಿಚಾರ್ಯ ತಮೃಷಿಮಿದಮಾಹ ನಗೋತ್ತಮಃ ।
ಕ ಉಪಾಯೋ ನಗಾನಾಂ ವೈ ತತ್ರ ಗಂತುಂ ವದಸ್ವ ಮೇ ॥ ೨ ॥
ಪಕ್ಷಚ್ಛೇದಸ್ತು ಶಕ್ರೇಣ ಸರ್ವೇಷಾಂ ಚ ಪುರಾ ಕೃತಃ ।
ತಸ್ಮಾದಸ್ಯ ಮುನಿಶ್ರೇಷ್ಠ ಕಾರ್ಯಸ್ಯ ಪಶ್ಯ ನಿಶ್ಚಯಂ ॥ ೩ ॥

ವಸಿಷ್ಠ ಉವಾಚ :—

ಅಸ್ತ್ಯುಪಾಯೋ ನಗಾನಾಂ ತು ತತ್ರ ನೇತುಂ ಮಹಾನಗ ।
ತವಾಯಂ ತನಯಸ್ತತ್ರ ವಿಖ್ಯಾತೋ ನಂದಿವರ್ಧನಃ ॥ ೪ ॥

---

## ಕನ್ನಡದ ಅನುವಾದ.

### ವಿವರಪೂರಣವರ್ಣನ

೧. ಸೂತನು ಹೇಳುತ್ತಾನೆ :—ಹಿಮಾಚಲನು ಮಹಾತ್ಮನಾದ ವಸಿಷ್ಠನ ಮಾತನ್ನು ಕೇಳಿ ಆ ವಿವರವನ್ನು ತುಂಬುವ ಅವನ ಕೆಲಸದ ವಿಷಯದಲ್ಲಿ ಚಿಂತಿಸಿದನು.

೨. ಅವನು ಬಹಳಹೊತ್ತು ಆಲೋಚಿಸಿ ಇಂತೆಂದನು. "ಎಲೈ! ಮುನಿಯೇ ಪರ್ವತಗಳು ಅಲ್ಲಿಗೆ ಹೋಗುವ ಉಪಾಯವನ್ನು ನನಗೆ ಹೇಳು.

೩. ಹಿಂದೆ ಶಕ್ರನು ಸಕಲ ಪರ್ವತಗಳ ರೆಕ್ಕೆಗಳನ್ನೂ ಕತ್ತರಿಸಿರುವನು. ಆದ್ದರಿಂದ ಮುನಿವರ್ಯನೆ ! ಈ ಕಾರ್ಯವು ನೆರವೇರುವ ರೀತಿಯನ್ನು ಆಲೋಚಿಸು".

೪. ವಸಿಷ್ಠನು ಹೇಳುತ್ತಾನೆ :—ಪರ್ವತೋತ್ತಮ ! ಪರ್ವತಗಳನ್ನು ಅಲ್ಲಿಗೆ ತೆಗೆದುಕೊಂಡು ಹೋಗಲು ಉಪಾಯವಿರುವುದು. ನಿನಗೆ ನಂದಿವರ್ಧನೆಂಬ ಪ್ರಸಿದ್ಧನಾದ ಮಗನಿರುವನು.

ತಸ್ಯಾರ್ಬುದ ಇತಿ ಖ್ಯಾತೋ ವಯಸ್ಯಃ ಪರಮಃ ಪ್ರಿಯಃ ।
ನಾಗಃ ಪ್ರಾಣಭೃತಾಂ ಶ್ರೇಷ್ಠಃ ಖೇಚರೋಽಪಿ ಚ ವೀರ್ಯವಾನ್ ॥ ೫ ॥
ಸ ವಾ ಊರ್ಧ್ವಗತಿಃ ಕ್ಷಿಪ್ರಂ ಕ್ಷಣಾನ್ನೇಷ್ಯತ್ಯಸಂಶಯಃ ।
ಲೀಲಯಾ ಸರ್ವಕೃತ್ಯೇಷು ತಂ ವಿದಿತ್ವಾಽಹಮಾಗತಃ ॥ ೬ ॥
ಆದೇಶೋ ದೀಯತಾಮಸ್ಯ ದುಃಖಂ ಕರ್ತುಂ ಚ ನಾರ್ಹಸಿ ।
ಅವಶ್ಯಂ ಯದಿ ಭಕ್ತೋಽಸಿ ತತ್ರ ಪ್ರೇಷಯ ಸತ್ವರಂ ॥ ೭ ॥

ಸೂತ ಉವಾಚ :—

ವಸಿಷ್ಠಸ್ಯ ವಚಃ ಶ್ರುತ್ವಾ ಹಿಮವಾನ್ಪುತ್ರವತ್ಸಲಃ ।
ದುಃಖೇನ ಮಹತಾಽಽವಿಷ್ಟಶ್ಚಿಂತಯಾಮಾಸ ಭೂಧರಃ ॥ ೮ ॥
ಮೈನಾಕಸ್ತನಯೋಽಸ್ಮಾಕಂ ಪ್ರವಿಷ್ಟಃ ಸಾಗರಂ ಭಯಾತ್ ।
ಜ್ಯೇಷ್ಠಂ ತು ಸರ್ವಥಾ ಚಾಥ ವಸಿಷ್ಠೋ ನೇತುಮಾಗತಃ ।
ಕಿಂ ಕೃತ್ಯಮಧುನಾಽಸ್ಮಾಕಂ ಕಥಂ ಶ್ರೇಯೋ ಭವಿಷ್ಯತಿ ॥ ೯ ॥
ಇತಃ ಶಾಪಭಯಂ ತೀವ್ರಮಿತೋ ದುಃಖಂ ಚ ಪುತ್ರಜಂ ।
ವರಂ ಪುತ್ರವಿಯೋಗೋಽಸ್ತು ನ ಶಾಪೋ ದ್ವಿಜಸಂಭವಃ ॥ ೧೦ ॥

---

೫. ಅವನಿಗೆ ಅತಿ ಪ್ರಿಯನೂ, ಮಿತ್ರನೂ ಆಕಾಶದಲ್ಲಿ ಸಂಚರಿಸುವವನೂ, ಸಮರ್ಥನೂ ಆದ ಅರ್ಬುದನೆಂಬ ನಾಗನೊಬ್ಬನಿರುವನು.

೬. ಊರ್ಧ್ವಗತಿಯುಳ್ಳ ಅವನು ಜಾಗ್ರತೆಯಾಗಿ ಆ ನಂದಿವರ್ಧನನ್ನು ಅಲ್ಲಿಗೆ ಅನಾಯಾಸವಾಗಿ ತೆಗೆದುಕೊಂಡು ಹೋಗುವನು. ಸಮಸ್ತ ಕಾರ್ಯಗಳಲ್ಲಿ ಅವನು ನಿಪುಣನೆಂದರಿತು ನಾನು ಇಲ್ಲಿಗೆ ಬಂದಿರುವೆನು.

೭. ಅವನಿಗೆ ಆಜ್ಞೆ ಮಾಡು. ವ್ಯಥೆಪಡಬೇಡ ನೀನು ನಿಶ್ಚಯವಾಗಿಯೂ ನನ್ನಲ್ಲಿ ಭಕ್ತಿಯುಳ್ಳವನಾಗಿದ್ದರೆ ಅವನನ್ನು ಶೀಘ್ರವಾಗಿ ಅಲ್ಲಿಗೆ ಕಳುಹಿಸು.

೮. ಸೂತನು ಹೇಳುತ್ತಾನೆ :—ಪುತ್ರನಲ್ಲಿ ಪ್ರೀತಿಯುಳ್ಳ ಹಿಮವಂತನು ವಸಿಷ್ಠನ ಮಾತನ್ನು ಕೇಳಿ ಅತಿ ದುಃಖಿತನಾಗಿ ಹೀಗೆ ಚಿಂತಿಸಿದನು.

೯. "ನನ್ನ ತನಯನಾದ ಮೈನಾಕನು ಭಯದಿಂದ ಸಮುದ್ರದಲ್ಲಿ ಮುಳುಗಿರುವನು. ಜ್ಯೇಷ್ಠನಾದ ನಂದಿವರ್ಧನನನ್ನು ಈ ವಸಿಷ್ಠನು ಕರೆದುಕೊಂಡು ಹೋಗಲು ಬಂದಿರುವನು. ಈಗ ನಾನೇನು ಮಾಡಬೇಕು ? ನನಗೆ ಹೇಗೆ ಶ್ರೇಯಸ್ಸಾಗುವುದು.

೧೦. ಒಂದು ಕಡೆ ಶಾಪದ ಭಯವೂ, ಮತ್ತೊಂದೆಡೆ ಮಗನ ಅಗಲಿಕೆಯಿಂದುಂಟಾದ ದುಃಖವೂ ಸಂಭವಿಸಿರುವುದು. ಮಗನ ವಿಯೋಗವೇ ಉತ್ತಮವು, ಬ್ರಾಹ್ಮಣನ ಶಾಪವು ಒಳ್ಳೆಯದಲ್ಲ."

ಸ ಏವಂ ನಿಶ್ಚಯಂ ಕೃತ್ವಾ ನಂದಿವರ್ಧನಮುಕ್ತವಾನ್ ।
ಗಚ್ಛ ತ್ವಂ ಪುತ್ರ ಮೇ ವಾಕ್ಯಾದ್ವಸಿಷ್ಠಸ್ಯಾಶ್ರಮಂ ಪ್ರತಿ ॥ ೧೧ ॥
ತತ್ರಾಸ್ತಿ ವಿವರೋ ರೌದ್ರಸ್ತಂ ಪ್ರಪೂರಯ ಸತ್ವರಂ ।
ಅರ್ಬುದಂ ನಾಗಮಾದಾಯ ಮಿತ್ರಂ ಪ್ರಾಣಭೃತಾಂ ವರಂ ॥ ೧೨ ॥

ನಂದಿವರ್ಧನ ಉವಾಚ :—

ಪಾಪೀಯಾನ್ಸ ವಿಭೋ ದೇಶಃ ಫಲಮೂಲೈರ್ವಿವರ್ಜಿತಃ ।
ಪಾಲಾಶೈಃ ಖಾದಿರೈರಾಢ್ಯೋ ಧವೈಃ ಶಾಲ್ಮಲಿಭಿಸ್ತಥಾ ॥ ೧೩ ॥
ಸುನಿಷ್ಠುರೈರ್ಸ್ಸಪಶುಭಿರ್ಭಿಲ್ಲೈಶ್ಚ ವಿವಿಧೈರಪಿ ।
ನದ್ಯೋ ವಹಂತಿ ನೋ ತತ್ರ ದುಷ್ಟಾ ಲೋಕಾಶ್ಚ ವಾಸಿನಃ ।
ನಾಹೋಽಹಂ ಪರ್ವತಶ್ರೇಷ್ಠ ತತ್ರ ಗಂತುಂ ಕಥಂಚನ ॥ ೧೪ ॥
ಅಥೋವಾಚ ವಸಿಷ್ಠಸ್ತಂ ಸಂತ್ರಸ್ತಂ ನಂದಿವರ್ಧನಂ ।
ಮಾ ಭೀಃ ಕಾರ್ಯಾ ತ್ವಯಾ ತತ್ರ ದೇಶೇ ದೌಷ್ಟ್ಯಾತ್ಕಥಂಚನ ॥ ೧೫ ॥
ತವ ಮೂರ್ಧ್ನಿ ಸದಾ ವಾಸೋ ಮಮ ತತ್ರ ಭವಿಷ್ಯತಿ ।
ತೀರ್ಥಾನಿ ಸರಿತೋ ದೇವಾಃ ಪುಣ್ಯಾನ್ಯಾಯತನಾನಿ ಚ ॥ ೧೬ ॥
ವೃಕ್ಷಾಶ್ಚ ವಿವಿಧಾಕಾರಾಃ ಪತ್ರಪುಷ್ಪಫಲಾನ್ವಿತಾಃ ।
ಸದಾ ತತ್ರ ಭವಿಷ್ಯಂತಿ ಮೃಗಾಶ್ಚ ವಿಹಗಾಃ ಶುಭಾಃ ॥ ೧೭ ॥

---

೧೧–೧೨. ಅವನು ಹೀಗೆ ನಿಶ್ಚಯಿಸಿ ನಂದಿವರ್ಧನನನ್ನು ಕುರಿತು, "ಮಗು ! ನೀನು ನನ್ನ ಮಾತಿನಂತೆ ಅರ್ಬುದನಾಗನೊಡನೆ ವಸಿಷ್ಠರ ಆಶ್ರಮಕ್ಕೆ ತೆರಳು. ಅಲ್ಲಿ ಒಂದು ದೊಡ್ಡ ವಿವರವಿರುವುದು. ಅದನ್ನು ಶೀಘ್ರವಾಗಿ ಮುಚ್ಚು.

೧೩–೧೪. ನಂದಿವರ್ಧನನು ಹೇಳುತ್ತಾನೆ :—ಸ್ವಾಮಿ ! ಆ ಪಾಪಿಷ್ಠ ಸ್ಥಳ ದಲ್ಲಿ ಫಲ ಮೂಲಗಳಿಲ್ಲ. ಮುತ್ತುಗ, ಖದಿರ, ಧವ, ಬೂರುಗ ಮರಗಳು ಬೆಳೆದಿರು ವುವು. ಮತ್ತು ಅತಿ ಕಠಿನರೂ, ಪಶುಗಳಂತಿರುವವರೂ ಆದ ಬಗೆಬಗೆಯ ಬೇಡರು ವಾಸಿಸುತ್ತಿರುವರು, ಯಾವ ನದಿಗಳೂ ಹರಿಯುವುದಿಲ್ಲ. ಕೇವಲ ದುಷ್ಟಜನರು ವಾಸಿ ಸುತ್ತಿದ್ದಾರೆ. ಯಾವರೀತಿಯಿಂದಲೂ ನಾನು ನಾನು ಅಲ್ಲಿಗೆ ಹೋಗಲರ್ಹನಲ್ಲ.

೧೫. ತರುವಾಯ ವಸಿಷ್ಠನು ಭಯಗೊಂಡ ಆ ನಂದಿವರ್ಧನನನ್ನು ಕುರಿತು "ಅದು ದುಷ್ಟದೇಶವೆಂದು ನೀನು ಹೆದರಬೇಡ.

೧೬–೧೭. ನಾನು ನಿನ್ನ ಶಿಖರದಲ್ಲಿ ಯಾವಾಗಲೂ ವಾಸಿಸುವೆನು. ಅಲ್ಲಿ ತೀರ್ಥಗಳೂ, ನದಿಗಳೂ, ದೇವತೆಗಳೂ, ಪುಣ್ಯಕರಗಳಾದ ದೇವಾಲಯಗಳೂ ಪತ್ರ ಪುಷ್ಪ ಫಲಗಳಿಂದ ಕೂಡಿದ ನಾನಾ ಬಗೆಯ ಮರಗಳೂ ಮೃಗ ಪಕ್ಷಿಗಳೂ ಇರುವುವು.

ಅಹಮೇವಾನಯಿಷ್ಯಾಮಿ ತವಾರ್ಥೇ ಚ ಮಹೇಶ್ವರಂ ।
ತದಾ ಸ್ಥಾಸ್ಯಂತಿ ವೈ ತತ್ರ ಸರ್ವೇ ದೇವಾಃ ಸವಾಸವಾಃ ॥ ೧೮ ॥

ಸೂತ ಉವಾಚ :—

ವಸಿಷ್ಠಸ್ಯ ವಚಃ ಶ್ರುತ್ವಾ ಸಂಹೃಷ್ಟೋ ನಂದಿವರ್ಧನಃ ।
ಅರ್ಬುದಂ ನಾಗಮಾಸಾದ್ಯ ವಾಕ್ಯಮೇತದುವಾಚ ಹ ॥ ೧೯ ॥
ತತ್ರ ಯಾವೋಽದ್ಯ ಭದ್ರಂತೇ ವಯಸ್ಯ ವಿನಯಾನ್ವಿತ ।
ಏತತ್ಕಾರ್ಯಮಹಂ ಮನ್ಯೇ ಸಾಂಪ್ರತಂ ದ್ವಿಜಸಂಭವಂ ॥ ೨೦ ॥

ಅರ್ಬುದ ಉವಾಚ :—

ಅಹಂ ತತ್ರಾಗಮಿಷ್ಯಾಮಿ ಸ್ನೇಹಾತ್ತೇ ಪರ್ವತಾತ್ಮಜ ।
ತತ್ರೈವ ಚ ವಸಿಷ್ಯಾಮಿ ತ್ವಯಾ ಸಾರ್ಧಮಸಂಶಯಂ ॥ ೨೧ ॥
ಕಿಂ ತ್ವಹಂ ಪ್ರಣಯಾದ್ಭ್ರಾತರ್ವಕ್ಷ್ಯಾಮಿ ಯದ್ವಚಃ ಶೃಣು ।
ಪ್ರಣಯಾನ್ನಾನ್ಯಥಾ ಕಾರ್ಯಂ ಯದ್ಯಹಂ ತವ ಸಂಮತಃ ॥ ೨೨ ॥
ಮನ್ನಾಮ್ನಾ ಖ್ಯಾತಿಮಾಯಾತು ನಾನ್ಯತ್ಕಿಂಚಿದ್ವೃಣೋಮ್ಯಹಂ ।
ತತಃ ಸೋಽಪಿ ಪ್ರತಿಜ್ಞಾಯ ಆರೂಢಸ್ತಸ್ಯ ಚೋಪರಿ ।
ಪ್ರಣಮ್ಯ ಪಿತರೌ ಚೈವ ಪ್ರತಸ್ಥೇ ಮುನಿನಾ ಸಹ. ॥ ೨೪ ॥

---

೧೮. ನಾನು ನಿನಗೋಸ್ಕರವಾಗಿ ಶಿವನನ್ನು ಅಲ್ಲಿಗೆ ಕರೆತರುವೆನು. ಅಲ್ಲಿ ಯಾವಾಗಲೂ ಇಂದ್ರಾದಿ ದೇವತೆಗಳು ವಾಸವಾಗಿರುವರು.

೧೯. ಸೂತನು ಹೇಳುತ್ತಾನೆ :—ನಂದಿವರ್ಧನನು ವಸಿಷ್ಠನ ಮಾತನ್ನು ಕೇಳಿ ಸಂತೋಷಗೊಂಡವನಾಗಿ ಅರ್ಬುದನೆಂಬ ನಾಗನನ್ನು ಹೊಂದಿ ಇಂತೆಂದನು.

೨೦. "ವಿನೀತನಾದ ಮಿತ್ರನೆ ! ನಿನಗೆ ಮಂಗಳವಾಗಲಿ. ಅಲ್ಲಿಗೆ ಹೋಗೋಣ ಈ ದ್ವಿಜನ ಕಾರ್ಯವು ಮಾಡಲುಚಿತವಾದುದೆಂದರಿತಿರುವೆನು.

೨೧. ಅರ್ಬುದನು ಹೇಳುತ್ತಾನೆ :—ಪರ್ವತ ಪುತ್ರನೆ ! ನಾನು ನಿನ್ನಲ್ಲಿರುವ ಮೈತ್ರಿಯಿಂದ ಅಲ್ಲಿಗೆ ಬರುವೆನು ಅಲ್ಲಿ ನಿನ್ನೊಡನೆ ವಾಸಿಸುವೆನು.

೨೨. ಸಹೋದರನೆ ! ನಾನು ಪ್ರೀತಿಯಿಂದ ನುಡಿಯುವ ಮಾತನ್ನು ಕೇಳು. ನಾನು ನಿನಗೆ ಪ್ರಿಯನಾಗಿದ್ದರೆ ನೀನು ಅದನ್ನು ಅನ್ಯಥಾ ಮಾಡಬಾರದು.

೨೩–೨೪. ಆ ಸ್ಥಳವು ನನ್ನ ಹೆಸರಿನಿಂದ ಪ್ರಸಿದ್ಧವಾಗಲಿ. ಯಾವುದನ್ನೂ ನಾನು ಬೇಡುವುದಿಲ್ಲ. ಆ ನಂದಿವರ್ಧನನು ಹಾಗೆಯೇ ಆಗಲೆಂದು ಒಪ್ಪಿ ಅವನಮೇಲೆ ಹತ್ತಿಕೊಂಡು ತಂದೆತಾಯಿಗಳಿಗೆ ವಂದಿಸಿ ದಿವ್ಯ ವೃಕ್ಷಗಳಿಂದಲೂ, ನದೀ, ಗಿರಿನದಿ

ದಿವ್ಯೈರ್ವೃಕ್ಷೈಃ ಶುಭೈಃ ಪೂರ್ಣೈರ್ನದೀನಿರ್ಝರಸಂಕುಲೈಃ ।
ಮಧುರೈರ್ವಿಹಗೈರ್ಯುಕ್ತೋ ಮೃಗೈಃ ಸೌಮ್ಯೈಃ ಸಮನ್ವಿತಃ ॥ ೨೪ ॥
ಮುಕ್ತೋಽರ್ಬುದೇನ ತತ್ರೈವ ವಿವರೇ ಮುನಿವಾಕ್ಯತಃ ।
ಸಮಸ್ತಸ್ತತ್ರನಾಸಾಗ್ರಂ ಗತಃ ಪರ್ವತಸತ್ತಮಃ ॥ ೨೫ ॥
ವಿಮುಕ್ತೋ ವಿವರೇ ತಸ್ಮಿನ್ನರ್ಬುದೇನ ಮಹಾತ್ಮನಾ ।
ಪರಿಪೂರ್ಣೇ ಮಹಾರೌದ್ರೇ ಸಂತುಷ್ಟೋ ಮುನಿಪುಂಗವಃ ॥ ೨೬ ॥
ಅಬ್ರವೀಚ್ಚಾರ್ಬುದಂ ನಾಗಂ ವರಂ ವರಯ ಸುವ್ರತ ।
ಪರಿತುಷ್ಟೋಽಸ್ಮಿ ತೇ ಭದ್ರ ಕರ್ಮಣಾನೇನ ಪನ್ನಗ ॥ ೨೭ ॥

ಅರ್ಬುದ ಉವಾಚ :—

ಏಷ ಏವ ವರೋಽಸ್ಮಾಕಂ ಯತ್ತ್ವಂ ತುಷ್ಟೋ ಮಹಾಮುನೇ ।
ಅವಶ್ಯಂ ಯದಿ ದಾತವ್ಯಂ ತಚ್ಛೃಣುಷ್ವ ದ್ವಿಜೋತ್ತಮ ॥ ೨೮ ॥
ಯಚ್ಚೈತಚ್ಛಿಖರೇ ಹ್ಯಸ್ಮಿನ್ನಿರ್ಝರಂ ನಿರ್ಮಲೋದಕಂ ।
ನಾಗತೀರ್ಥಮಿತಿ ಖ್ಯಾತಿಂ ಭೂತಲೇ ಯಾತು ಸರ್ವತಃ ॥ ೨೯ ॥
ಅತ್ರೈವಾಹಂ ವಸಿಷ್ಯಾಮಿ ಮಿತ್ರಸ್ನೇಹಾತ್ಸದಾ ಮುನೇ ।
ತತ್ರ ಸ್ನಾತ್ವಾ ದಿವಂ ಯಾತು ಮಾನವಸ್ತ್ವತ್ಪ್ರಸಾದತಃ ॥ ೩೦ ॥

---

ಗಳಿಂದಲೂ, ಇಂಪಾಗಿ ಕೂಗುವ ಪಕ್ಷಿಗಳಿಂದಲೂ, ಸೌಮ್ಯ ಮೃಗಗಳಿಂದಲೂ ಸಹಿತನಾಗಿ ಮುನಿಯೊಡನೆ ಪ್ರಯಾಣಮಾಡಿದನು.

೨೫. ಮುನಿಯ ಮಾತಿನಂತೆ ಅರ್ಬುದನು ಆ ವಿವರದಲ್ಲಿ ನಂದಿವರ್ಧನನನ್ನು ಬಿಡಲು ಅವನು ಮೂಗಿನ ಕೊನೆಯವರೆಗೆ ಅಲ್ಲಿ ಮುಳುಗಿದನು.

೨೬. ಅರ್ಬುದನು ಬಿಟ್ಟುದರಿಂದ ಆ ವಿವರವು ತುಂಬಲು ವಸಿಷ್ಠ ಮುನಿಯು ಸಂತುಷ್ಟನಾದನು.

೨೭. ಅವನು ಅರ್ಬುದನನ್ನು ಕುರಿತು ನಾಗ! ನಿನ್ನೀ ಕಾರ್ಯದಿಂದ ನಾನು ಸಂತುಷ್ಟನಾಗಿರುವೆನು. ವರವನ್ನು ಕೇಳಿಕೊ.

೨೮. ಅರ್ಬುದನು ಹೇಳುತ್ತಾನೆ :—ಮಹರ್ಷಿಯೆ! ನೀನು ತೃಪ್ತಿಗೊಂಡಿರುವುದೇ ನನಗೆ ವರವು. ನೀನು ಅವಶ್ಯವಾಗಿ ವರವನ್ನು ಕೊಡಬೇಕೆಂದಿದ್ದರೆ ಅದನ್ನು ಕೇಳು.

೨೯. ಈ ಪರ್ವತದ ಶಿಖರದಲ್ಲಿರುವ ನಿರ್ಮಲವಾದ ನೀರುಳ್ಳ ಗಿರಿನದಿಯು ಭೂಮಿಯಲ್ಲಿ ನಾಗತೀರ್ಥವೆಂದು ಪ್ರಸಿದ್ಧವಾಗಲಿ.

೩೦. ಮುನಿಯೇ! ನಾನು ಇಲ್ಲಿಯೇ ಮಿತ್ರಸ್ನೇಹದಿಂದ ವಾಸಿಸುವೆನು. ಮಾನವನು ಇಲ್ಲಿ ಮಿಂದು ನಿನ್ನ ಅನುಗ್ರಹದಿಂದ ಸ್ವರ್ಗವನ್ನು ಪಡೆಯಲಿ.

ಅಪಿ ವಂಧ್ಯಾ ಚ ಯಾ ನಾರೀ ಸ್ನಾನಮಾತ್ರಂ ಸಮಾಚರೇತ್ ।
ಸಾ ಸ್ಯಾತ್ಪುತ್ರವತೀ ವಿಪ್ರ ಸುಖಸೌಭಾಗ್ಯಸಂಯುತಾ ॥ ೩೧ ॥

ವಸಿಷ್ಠ ಉವಾಚ :—

ಯಾ ವಂಧ್ಯಾಸ್ಮಿನ್ ಜಲೇ ಪೂರ್ಣೇ ಸ್ನಾನಮಾತ್ರಂ ಕರಿಷ್ಯತಿ ।
ಸಾಪಿ ಪುತ್ರಮವಾಪ್ನೋತಿ ಸರ್ವಲಕ್ಷಣಲಕ್ಷಿತಂ ॥ ೩೨ ॥
ನಭಸಃ ಶುಕ್ಲಪಂಚಮ್ಯಾಂ ಫಲೈಃ ಪೂಜಾಂ ಕರೋತಿ ಚ ।
ಅಪಿ ವರ್ಷಶತಾ ನಾರೀ ಸಾ ಭವಿಷ್ಯತಿ ಪುತ್ರಿಣೀ ॥ ೩೩ ॥
ಯೇಽತ್ರ ಸ್ನಾನಂ ಕರಿಷ್ಯಂತಿ ಹ್ಯಸ್ಮಿಂಸ್ತೀರ್ಥೇ ಚ ಭಕ್ತಿತಃ ।
ಯಾಸ್ಯಂತಿ ತೇ ಪರಂ ಸ್ಥಾನಂ ಜರಾಮರಣವರ್ಜಿತಂ ॥ ೩೪ ॥
ಶ್ರಾದ್ಧಂ ಚಾತ್ರ ಕರಿಷ್ಯಂತಿ ಪಂಚಮ್ಯಾಂ ಯೇ ಸಮಾಹಿತಾಃ ।
ಮಾಸೇ ನಭಸಿ ತೀರ್ಥಸ್ಯ ಫಲಂ ತೇಷಾಂ ಭವಿಷ್ಯತಿ ॥ ೩೫ ॥

ಸೂತ ಉವಾಚ :—

ಏವಂ ದತ್ವಾ ವರಂ ತಸ್ಯ ವಸಿಷ್ಠೋ ಭಗವಾನ್ಮುನಿಃ ।
ನಂದಿವರ್ಧನಮಭ್ಯೇತ್ಯ ವಾಕ್ಯಮೇತದುವಾಚ ಹ ॥ ೩೬ ॥
ವರಂ ಚ ಪ್ರಿಯತಾಂ ವತ್ಸ ಪರಿತುಷ್ಟೋಽಸ್ಮಿ ತೇಽನಘ ।
ವಿನಯಾತ್ಸೌಹೃದಾತ್ಸರ್ವಂ ದಾಸ್ಯಾಮಿ ಯತ್ಸುದುರ್ಲಭಂ ॥ ೩೭ ॥

---

೩೧. ದ್ವಿಜನೆ! ಬಂಜೆಯೂ ಇಲ್ಲಿ ಸ್ನಾನಮಾಡುವುದರಿಂದ ಪುತ್ರನನ್ನು ಪಡೆದು ಸುಖಸೌಭಾಗ್ಯ ಸಂಪನ್ನಳಾಗಲಿ.

೩೨. ವಸಿಷ್ಠನು ಹೇಳುತ್ತಾನೆ :—ಬಂಜೆಯೂ ಈ ಪೂರ್ಣಜಲದಲ್ಲಿ ಮಿಂದರೆ ಸಮಸ್ತಲಕ್ಷಣ ಸಂಪನ್ನನಾದ ಪುತ್ರನನ್ನು ಪಡೆಯಲಿ.

೩೩. ಶ್ರಾವಣಶುದ್ಧ ಪಂಚಮಿಾದಿನ ಫಲಗಳಿಂದ ಪೂಜಿಸುವ ನಾರಿಯು ಪುತ್ರರನ್ನು ಪಡೆದು ನೂರುವರ್ಷಕಾಲ ಬದುಕಲಿ.

೩೪. ಈ ತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡುವ ಮಾನವರು ಜರಾಮರಣಗಳಿಲ್ಲದ ಉತ್ತಮ ಸ್ಥಾನಕ್ಕೆ ತೆರಳಲಿ.

೩೫. ಶ್ರಾವಣ ಪಂಚಮಿಾದಿನ ಸಾವಧಾನ ಮನಸ್ಸಿನಿಂದ ಶ್ರಾದ್ಧಮಾಡಿದವರಿಗೆ ತೀರ್ಥಫಲವುಂಟಾಗಲಿ.

೩೬. ಸೂತನು ಹೇಳುತ್ತಾನೆ :—ವಸಿಷ್ಠನು ಹೀಗೆ ಆ ಅರ್ಬುದನಿಗೆ ವರವನ್ನಿತ್ತು ನಂದಿವರ್ಧನನ ಹತ್ತಿರ ಬಂದು ಇಂತೆಂದನು.

೩೭. "ಮಗು! ನಿರ್ದುಷ್ಟನಾದ ನಿನ್ನ ವಿನಯ,ಸೌಹಾರ್ದಗಳಿಗೆ ಮೆಚ್ಚಿರುವೆನು. ನೀನು ಕೇಳುವುದು ದುರ್ಲಭವಾಗಿದ್ದರೂ ಅದನ್ನೀಯುವೆನು.

ನಂದಿವರ್ಧನ ಉವಾಚ :—
ತವಾಸ್ತು ವಚನಂ ಸತ್ಯಂ ಪೂರ್ವೋಕ್ತಂ ಮುನಿಸತ್ತಮ ।
ಸಾಂನ್ನಿಧ್ಯಂ ಜಾಯತಾಮತ್ರ ಅವಶ್ಯಂ ತವ ಸರ್ವದಾ ॥ ೩೮ ॥
ಯಥಾಹಮರ್ಬುದೇತ್ಯೇವಂ ಖ್ಯಾತಿಂ ಗಚ್ಛಾಮಿ ಭೂತಲೇ ।
ಪ್ರಸಾದಾಚ್ಚೈವ ತೇ ಭೂಯಾದೇತನ್ಮೇ ಮನಸಿ ಸ್ಥಿತಂ ॥ ೩೯ ॥
ಸೂತ ಉವಾಚ :—
ಏವಮಸ್ತ್ವಿತಿ ತಂ ಪ್ರೋಚ್ಯ ವಸಿಷ್ಠೋ ಭಗವಾನ್ಮುನಿಃ ।
ಚಕ್ರೇ ಸ್ವಮಾಶ್ರಮಂ ತತ್ರ ತಸ್ಯ ವಾಕ್ಯೇನ ನೋದಿತಃ ॥ ೪೦ ॥
ಪನಸೈಶ್ಚಂಪಕೈರಾಮ್ರೈಃ ಪ್ರಿಯಂಗುಬಿಲ್ವದಾಡಿಮೈಃ ।
ನಾನಾಪಕ್ಷಿಸಮಾಯುಕ್ತೋ ದೇವಗಂಧರ್ವಸೇವಿತಃ ॥ ೪೧ ॥
ತಸ್ಥೌ ತತ್ರ ಮುನಿಶ್ರೇಷ್ಠೋ ಹ್ಯರುಂಧತ್ಯಾ ಸಮನ್ವಿತಃ ।
ಗೋಮತೀಮಾನಯಾಮಾಸ ತಪಸಾ ಮುನಿಸತ್ತಮಃ ॥ ೪೨ ॥
ಯಸ್ಯಾಂ ಸ್ನಾತ್ವಾ ದಿವಂ ಯಾಂತಿ ಅತಿಪಾಪಕೃತೋ ನರಾಃ ।
ಮಾಘಮಾಸೇ ವಿಶೇಷೇಣ ಮಕರಸ್ಥೇ ದಿವಾಕರೇ ॥ ೪೩ ॥
ಯೇಽತ್ರ ಸ್ನಾನಂ ಕರಿಷ್ಯಂತಿ ತೇ ಯಾಸ್ಯಂತಿ ಪರಾಂ ಗತಿಂ ॥ ೪೪ ॥
ಮಾಘಮಾಸೇ ವಿಶೇಷೇಣ ತಿಲದಾನಂ ಕರೋತಿ ಯಃ ।
ತಿಲಸಂಖ್ಯಾನಿ ವರ್ಷಾಣಿ ಸ್ವರ್ಗೇ ತಿಷ್ಠತಿ ಮಾನವಃ ॥ ೪೫ ॥

---

೩೮. ನಂದಿವರ್ಧನನು ಹೇಳುತ್ತಾನೆ:—ಮುನಿವರ್ಯನೆ ನೀನು ಹಿಂದೆ ನುಡಿದಮಾತು ಸತ್ಯವಾಗಲಿ. ನೀನು ಯಾವಾಗಲೂ ಇಲ್ಲಿ ಸನ್ನಿಹಿತನಾಗಿರು.

೩೯. ನಾನು ಭೂಮಿಯಲ್ಲಿ ಅರ್ಬುದನೆಂದು ಪ್ರಸಿದ್ಧನಾಗಬೇಕೆಂದು ಮನಸ್ಸಿನಲ್ಲಿ ಆಲೋಚಿಸಿರುವೆನು. ಅದು ನಿನ್ನ ಅನುಗ್ರಹದಿಂದಾಗಲಿ.

೪೦. ಸೂತನು ಹೇಳುತ್ತಾನೆ:—ವಸಿಷ್ಠನು ಹಾಗೆಯೇ ಆಗಲೆಂದು ಹೇಳಿ ಅವನ ಮಾತಿನಂತೆ ಅಲ್ಲಿ ತನ್ನ ಆಶ್ರಮವನ್ನು ನಿರ್ಮಿಸಿಕೊಂಡನು.

೪೧–೪೨. ವಸಿಷ್ಠಮುನಿಯು ಹಲಸು, ಸಂಪಿಗೆ, ಮಾವು, ಪ್ರಿಯಂಗು, ಬಿಲ್ವ, ದಾಳಿಂಬವೃಕ್ಷಗಳಿಂದಲೂ, ಅನೇಕ ಪಕ್ಷಿಗಳಿಂದಲೂ, ದೇವಗಂಧರ್ವರಿಂದಲೂ ಅರುಂಧತಿಯಿಂದಲೂ ಸಹಿತನಾಗಿ ಅಲ್ಲಿ ವಾಸಮಾಡುತ್ತ ತಪಸ್ಸಿನಿಂದ ಗೋಮತೀ ನದಿಯನ್ನು ಅಲ್ಲಿಗೆ ಕರೆಯಿಸಿದನು.

೪೩–೪೪–೪೫. ಅತ್ಯಂತ ಪಾಪಿಗಳಾದ ಮಾನವರೂ ಮಾಘ ಮಾಸದಲ್ಲಿ ಸೂರ್ಯನು ಮಕರರಾಶಿಯಲ್ಲಿರಲು ಈ ನದಿಯಲ್ಲಿ ಮಿಂದರೆ ಸ್ವರ್ಗಕ್ಕೆ ತೆರಳುವರು. ಮಾಘಮಾಸದಲ್ಲಿ ಇಲ್ಲಿ ವಿಶೇಷವಾಗಿ ತಿಲದಾನವನ್ನು ಮಾಡಿದವನು ಆ ತಿಲಗಳ ಸಂಖ್ಯೆಯಷ್ಟು ಕಾಲ ಸ್ವರ್ಗದಲ್ಲಿರುವನು.

ಬಹುನಾ ಕಿಮಿಹೋಕ್ತೇನ ಸ್ನಾನಮಾತ್ರಂ ಸಮಾಚರೇತ್ || ೪೬ ||
ವಸಿಷ್ಠಸ್ಯ ಮುಖಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ ।
ಅರುಂಧತೀ ಪೂಜನೀಯಾ ಪೂಜನೀಯಾ ವಿಶೇಷತಃ || ೪೭ ||

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ವಿವರಪೂರಣವರ್ಣನಂ ನಾಮ
ತೃತೀಯೋಽಧ್ಯಾಯಃ

---

೪೬. ಹೆಚ್ಚು ಹೇಳಿ ಏನು ಪ್ರಯೋಜನ? ಇಲ್ಲಿ ಸ್ನಾನಮಾತ್ರವನ್ನು ಮಾಡಿ ವಸಿಷ್ಠನ ಮುಖವನ್ನು ದರ್ಶನಮಾಡಿದವನು ಮರಳಿ ಜನಿಸುವುದಿಲ್ಲ. ಇಲ್ಲಿ ಅರುಂಧತಿಯನ್ನು ವಿಶೇಷವಾಗಿ ಪೂಜಿಸಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ವಿವರ ಪೂರಣವರ್ಣನವೆಂಬ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಚತುರ್ಥೋಽಧ್ಯಾಯಃ

### ಅಚಲೇಶ್ವರೋತ್ಪತ್ತಿ ವರ್ಣನಂ

**ಸೂತ ಉವಾಚ :—**

ಸ ಕೃತ್ವಾ ಸ್ವಾಶ್ರಮಂ ತತ್ರ ವಸಿಷ್ಠೋ ಭಗವಾನ್ಮುನಿಃ ।
ತತ್ರ ಶಂಭೋರ್ನಿವಾಸಾಯ ತಪಸ್ತೇಪೇ ಸುದಾರುಣಂ ॥ ೧ ॥
ಸ ಬಭೂವ ಮುನಿಃ ಸಮ್ಯಕ್ಫಲಾಹಾರಸಮನ್ವಿತಃ ।
ಶೀರ್ಣಪರ್ಣಾಶನಃ ಪಶ್ಚಾದ್ದ್ವೇ ಶತೇ ಸಮುಪದ್ಯತ ॥ ೨ ॥
ಜಲಾಹಾರಃ ಪಂಚಶತವರ್ಷಾಣಿ ಸ ಬಭೂವ ಹ ।
ವರ್ಷಾಣಾಂ ವಾಯುಭಕ್ಷೋಽಭೂತ್ತತೋ ದಶಶತಾನಿ ಚ ॥ ೩ ॥
ಪಂಚಾಗ್ನಿಸಾಧಕೋ ಗ್ರೀಷ್ಮೇ ಹೇಮಂತೇ ಸಲಿಲಾಶಯಃ ।
ವರ್ಷಾಸ್ವಾಕಾಶವಾಸೀ ಚ ಸಹಸ್ರಂ ಚ ತತೋಽಭವತ್ ॥ ೪ ॥

---

### ಕನ್ನಡದ ಅನುವಾ

### ಅಚಲೇಶ್ವರೋತ್ಪತ್ತಿ ವರ್ಣನದ

೧. ಸೂತನು ಹೇಳುತ್ತಾನೆ :—ಆ ವಸಿಷ್ಠಮುನಿಯು ಅಲ್ಲಿ ತನ್ನ ಆಶ್ರಮವನ್ನು ನಿರ್ಮಿಸಿ ಶಿವನು ಅಲ್ಲಿ ನೆಲೆಸುವುದಕ್ಕಾಗಿ ಭಯಂಕರ ತಪಸ್ಸನ್ನಾಚರಿಸಿದನು.

೨. ಆ ಮುನಿಯು ಮೊದಲು ಹಣ್ಣುಗಳಿಂದ ಜೀವಿಸುತ್ತಿದ್ದನು. ಬಳಿಕ ಇನ್ನೂರು ವರ್ಷಕಾಲ ಒಣಗಿದ ಎಲೆಗಳನ್ನು ತಿನ್ನುತ್ತಿದ್ದನು.

೩. ಅನಂತರ ಐನೂರು ವರ್ಷಗಳಕಾಲ ನೀರನ್ನು ಕುಡಿಯುತ್ತಲೂ. ಸಾವಿರ ವರ್ಷಗಳ ಕಾಲ ಗಾಳಿಯಿಂದ ಮಾತ್ರ ಜೀವಿಸುತ್ತಲೂ, ತಪಸ್ಸನ್ನು ಮಾಡಿದನು.

೪. ಅನಂತರ ಸಾವಿರ ವರ್ಷ ಗ್ರೀಷ್ಮಕಾಲದಲ್ಲಿ ಪಂಚಾಗ್ನಿಗಳ ನಡುವೆಯೂ ಚಳಿಗಾಲದಲ್ಲಿ ನೀರಿನಲ್ಲಿಯೂ, ಮಳೆಗಾಲದಲ್ಲಿ ಆಕಾಶದಲ್ಲಿಯೂ ತಪಸ್ಸನ್ನು ಮಾಡುತ್ತಿದ್ದನು.

ತತಸ್ತುಷ್ಟೋ ಮಹಾದೇವಸ್ತಸ್ಯರ್ಷೇಃ ಸುಮಹಾತ್ಮನಃ ।
ಭಿತ್ವಾ ತಂ ಪರ್ವತಂ ಸದ್ಯಸ್ತತ್ಪುರೋ ಲಿಂಗಮುತ್ಥಿತಂ ।
ತಂ ದೃಷ್ಟ್ವಾ ವಿಸ್ಮಯಾವಿಷ್ಟೋ ಮುನಿಃ ಸ್ತೋತ್ರಮುದೈರಯತ್ ॥ ೫ ॥
ನಮಃ ಶಿವಾಯ ಶುದ್ಧಾಯ ಸರ್ವಗಾಯಾವ್ಯಾವೃತಾಯ ಚ ।
ಕಪರ್ದಿನೇ ನಮಸ್ತುಭ್ಯಂ ನಮಸ್ತಸ್ಮೈ ತ್ರಿಮೂರ್ತಯೇ ॥ ೬ ॥
ನಮಃ ಸ್ಥೂಲಾಯ ಸೂಕ್ಷ್ಮಾಯ ವ್ಯಾಪಕಾಯ ಮಹಾತ್ಮನೇ ।
ನಿಷಂಗಿಣೇ ನಮಸ್ತುಭ್ಯಂ ತ್ರಿನೇತ್ರಾಯ ನಮೋನಮಃ ॥ ೭ ॥
ನಮಶ್ಚಂದ್ರಕಲಾಧಾರ ನಮೋ ದಿಗ್ವಸನಾಯ ಚ ।
ಪಿನಾಕಪಾಣಯೇ ತುಭ್ಯಮಷ್ಟಮೂರ್ತೇ ನಮೋನಮಃ ॥ ೮ ॥
ನಮಸ್ತೇ ಜ್ಞಾನರೂಪಾಯ ಜ್ಞಾನಗಮ್ಯಾಯ ತೇ ನಮಃ ।
ನಮಸ್ತೇ ಜ್ಞಾನದೇಹಾಯ ಸರ್ವಜ್ಞಾನಮಯಾಯ ಚ ॥ ೯ ॥
ಕಾಶೀಪತೇ ನಮಸ್ತುಭ್ಯಂ ಗಿರಿಶಾಯ ನಮೋನಮಃ ।
ಜಗತ್ಕಾರಣರೂಪಾಯ ಮಹಾದೇವಾಯ ತೇ ನಮಃ ॥ ೧೦ ॥

---

೫. ಬಳಿಕ ಸಂತುಷ್ಟನಾದ ಮಹಾದೇವನು ಮಹಾತ್ಮನಾದ ಆ ಮಹರ್ಷಿಯ ತಪಸ್ಸಿಗೆ ಮೆಚ್ಚಿ ಕೂಡಲೆ ಆ ಪರ್ವತವನ್ನು ಭೇದಿಸಿ ಆ ಮುನಿಯ ಮುಂದೆ ಲಿಂಗಾಕಾರದಿಂದ ಉದ್ಭವಿಸಿದನು. ಅದನನ್ನು ನೋಡಿ ಆಶ್ಚರ್ಯಗೊಂಡ ಮುನಿಯು ಹೀಗೆ ಸ್ತುತಿಸಿದನು.

೬. "ಮಂಗಳಕರನೂ, ಶುದ್ಧನೂ, ಸರ್ವವ್ಯಾಪಿಯೂ, ಶಾಶ್ವತನೂ, ಕಪರ್ದವೆಂಬ ಜಟೆಯನ್ನು ಧರಿಸಿದವನೂ, ತ್ರಿಮೂರ್ತಿ ಸ್ವರೂಪನೂ, ಆದ ಮಹೇಶ್ವರನಿಗೆ ನಮಸ್ಕಾರವು.

೭. ಸ್ಥೂಲಸೂಕ್ಷ್ಮರೂಪನೂ, ವ್ಯಾಪಕನೂ, ಬಿಲ್ಲನ್ನು ಧರಿಸಿದವನೂ, ಮುಕ್ಕಣ್ಣನೂ ಆದ ಶಿವನಿಗೆ ನಮಸ್ಕಾರವು.

೮. ಚಂದ್ರಕಲೆಯನ್ನು ಧರಿಸಿದವನೂ, ದಿಗಂಬರನೂ, ಪಿನಾಕಧಾರಿಯೂ, ಪೃಥಿವ್ಯಾದ್ಯಷ್ಟಮೂರ್ತಿಯೂ ಆದ ಶಿವನಿಗೆ ನಮಸ್ಕಾರವು.

೯. ಜ್ಞಾನಸ್ವರೂಪನೂ, ಜ್ಞಾನವೇದ್ಯನೂ, ಜ್ಞಾನದೇಹನೂ, ಸಮಸ್ತ ಜ್ಞಾನಮಯನೂ ಆದ ಶಿವನಿಗೆ ನಮಸ್ಕಾರವು.

೧೦. ಕಾಶಿಯೊಡೆಯನೂ, ಕೈಲಾಸಗಿರಿವಾಸಿಯೂ, ಜಗತ್ಕಾರಣನೂ ಆದ ಮಹಾದೇವನಿಗೆ ನಮಸ್ಕಾರವು.

ಗೌರೀಕಾಂತ ನಮಸ್ತುಭ್ಯಂ ನಮಸ್ತುಭ್ಯಂ ಶಿವಾತ್ಮನೇ ।
ಬ್ರಹ್ಮವಿಷ್ಣುಸ್ವರೂಪಾಯ ತ್ರಿನೇತ್ರಾಯ ನಮೋನಮಃ ॥ ೧೧ ॥
ವಿಶ್ವರೂಪಾಯ ಶುದ್ಧಾಯ ನಮಸ್ತುಭ್ಯಂ ಮಹಾತ್ಮನೇ ।
ನಮೋ ವಿಶ್ವಸ್ವರೂಪಾಯ ಸರ್ವದೇವಮಯಾಯ ಚ ॥ ೧೨ ॥

ಸೂತ ಉವಾಚ :—

ಏತಸ್ಮಿನ್ನೇವ ಕಾಲೇ ತು ವಾಗುವಾಚಾಶರೀರಿಣೀ ।
ಪರಿತುಷ್ಟೋಽಸ್ಮಿ ತೇ ಭದ್ರಂ ವರಂ ವರಯ ಸುವ್ರತ ॥ ೧೩ ॥
ಇತ್ಯುಕ್ತ್ವಾ ಪರ್ವತಂ ಭಿತ್ವಾ ತತ್ಪುರೋ ಲಿಂಗಮುತ್ಥಿತಂ ॥ ೧೪ ॥

ವಸಿಷ್ಠ ಉವಾಚ :—

ಲಿಂಗೇಽಸ್ಮಿಂಸ್ತವ ಸಾಂನಿಧ್ಯಂ ಸದಾ ಭವತು ಶಂಕರ ।
ಮಯಾ ಪೂರ್ವಂ ಪ್ರತಿಜ್ಞಾತಂ ನಗಸ್ಯೇಹ ಮಹಾತ್ಮನೇ ।
ಸತ್ಯಂ ಕುರು ವಚೋ ಮೇ ತ್ವಂ ಯದಿ ತುಷ್ಟೋಽಸಿ ಶಂಕರ ॥ ೧೫ ॥

ಶ್ರೀ ಭಗವಾನುವಾಚ :—

ಅದ್ಯಪ್ರಭೃತಿ ಲಿಂಗೇಽಸ್ಮಿನ್ಸಾಂನಿಧ್ಯಂ ಮೇ ಭವಿಷ್ಯತಿ ।
ತ್ವದ್ವಾಕ್ಯಾದ್ಬ್ರಾಹ್ಮಣಶ್ರೇಷ್ಠ ಸರ್ವಂ ಸತ್ಯಂ ಭವಿಷ್ಯತಿ ॥ ೧೬ ॥

---

೧೧. ಗೌರೀಪತಿಯೂ, ಬ್ರಹ್ಮವಿಷ್ಣುಶಿವರೂಪನೂ, ತ್ರಿನೇತ್ರನೂ, ಆದ ಶಿವನಿಗೆ ನಮಸ್ಕಾರವು.

೧೨. ಪ್ರಪಂಚ ರೂಪನೂ, ಶುದ್ಧನೂ, ಮಹಾತ್ಮನೂ, ಸಕಲ ದೇವರೂಪನೂ ಆದ ಮಹೇಶ್ವರನಿಗೆ ನಮಸ್ಕಾರವು".

೧೩. ಸೂತನು ಹೇಳುತ್ತಾನೆ :—ಈ ಸಮಯದಲ್ಲಿ ನಿನಗೆ ಮಂಗಳಕರವಾಗಲಿ. ವರವನ್ನು ಕೇಳಿಕೊ ಎಂದು ಅಶರೀರವಾಣಿಯಾಯಿತು.

೧೪. ಹೀಗೆ ಅಶರೀರವಾಣಿಯಾದ ಕೂಡಲೆ ಲಿಂಗವು ಪರ್ವತವನ್ನು ಭೇದಿಸಿ ಅವನ ಮುಂದೆ ನಿಂತಿತು.

೧೫. ವಸಿಷ್ಠನು ಹೇಳುತ್ತಾನೆ :—ಶಂಕರ ! ನೀನು ಯಾವಾಗಲೂ ಈ ಲಿಂಗದಲ್ಲಿ ಸನ್ನಿಹಿತನಾಗಿರು. ನಾನು ಹಿಂದೆ ಈ ಪರ್ವತಕ್ಕೆ ಹೀಗೆ ಪ್ರತಿಜ್ಞೆ ಮಾಡಿದ್ದೇನೆ. ನೀನು ನನ್ನಲ್ಲಿ ಸಂತುಷ್ಟನಾಗಿದ್ದರೆ ನನ್ನ ಮಾತನ್ನು ಸತ್ಯಗೊಳಿಸು.

೧೬. ಶ್ರೀ ಭಗವಂತನು ಹೇಳುತ್ತಾನೆ :—ಬ್ರಾಹ್ಮಣೋತ್ತಮ ! ಇದು ಮೊದಲ್ಗೊಂಡು ನಾನು ನಿನ್ನ ಮಾತಿನಂತೆ ಈ ಲಿಂಗದಲ್ಲಿ ಸನ್ನಿಹಿತನಾಗಿರುವೆನು, ನಿನ್ನ ಮಾತು ಸತ್ಯವಾಗುವುದು.

ಸ್ತೋತ್ರೇಣಾನೇನ ಯೋ ಮರ್ತ್ಯೋ ಮಾಂ ಸ್ತವಿಷ್ಯತಿ ಭಕ್ತಿತಃ ।
ಕೃಷ್ಣಪಕ್ಷೇ ಚತುರ್ದಶ್ಯಾಮಾಶ್ವಿನೇ ಮುನಿಸತ್ತಮ ॥ ೧೭ ॥
ಮತ್ಪ್ರಿಯಾರ್ಥಂ ತು ಶಕ್ರೇಣ ಪ್ರೇಷಿತಾ ಮುನಿಸತ್ತಮ ।
ಮಂದಾಕಿನೀತಿ ವಿಖ್ಯಾತಾ ನದೀ ತ್ರೈಲೋಕ್ಯಪಾವಿನೀ ॥ ೧೮ ॥
ದೇವಸ್ಯೋತ್ತರದಿಗ್ಭಾಗೇ ಕುಂಡಂ ತಿಷ್ಠತಿ ನಿತ್ಯಶಃ ।
ತಸ್ಯಾಂ ಸ್ನಾತ್ವಾ ಮುನಿಶ್ರೇಷ್ಠ ಲಿಂಗಂ ಮೇ ಪಶ್ಯತೇ ತು ಯಃ ।
ಸ ಯಾತಿ ಪರಮಂ ಸ್ಥಾನಂ ಜರಾಮರಣವರ್ಜಿತಂ ॥ ೧೯ ॥
ಅಚಲಂ ಭೇದಯಿತ್ವಾ ತು ಯಸ್ಮಾನ್ಮೇ ಲಿಂಗಮುದ್ಗತಂ ।
ಅಚಲೇಶ್ವರನಾಮ್ನೈವ ಲೋಕೇ ಖ್ಯಾತಿಂ ಗಮಿಷ್ಯತಿ ॥ ೨೦ ॥
ಅಸ್ಯ ಲಿಂಗಸ್ಯ ಮಾಹಾತ್ಮ್ಯಾನ್ನ ಕದಾಚಿಚ್ಚಲಿಷ್ಯತಿ ।
ಸರ್ವಥಾ ಮ ಇದಂ ಲಿಂಗಂ ಪ್ರಲಯಾಂತೇ ನ ಚಾಲ್ಯತೇ ॥ ೨೧ ॥

ಸೂತ ಉವಾಚ :—

ಏತಾವದುಕ್ತ್ವಾ ವಚನಂ ವಿರರಾಮ ಮಹೇಶ್ವರಃ ।
ವಸಿಷ್ಠೋಽಪಿ ಸುಹೃಷ್ಟಾತ್ಮಾ ಗೌತಮಾದ್ಯಾ ಮುನೀಶ್ವರಾ ॥ ೨೨ ॥
ಶಕ್ರಾದಯಸ್ತತೋ ದೇವಾಸ್ತೀರ್ಥಾನ್ಯಾಯತನಾನಿ ಚ ।
ಆನಯಾಮಾಸ ಬ್ರಹ್ಮರ್ಷಿಸ್ತಪಸಾ ಪರ್ವತೋತ್ತಮೇ ॥ ೨೩ ॥

---

೧೭–೧೯. ಆಶ್ವಿನಕೃಷ್ಣಪಕ್ಷ ಚತುರ್ದಶೀ ದಿನ ನೀನು ಹೇಳಿದ ಸ್ತೋತ್ರದಿಂದ ನನ್ನನ್ನು ಭಕ್ತಿಯಿಂದ ಸ್ತುತಿಸಿದವನೂ, ನನ್ನ ಪ್ರೀತಿಗಾಗಿ ದೇವೇಂದ್ರನು ಕಳುಹಿಸಿದ ಉತ್ತರದಿಕ್ಕಿನ ಕುಂಡದಲ್ಲಿರುವ ತ್ರೈಲೋಕ್ಯಪಾವನಿಯಾದ ಮಂದಾಕಿನಿಯಲ್ಲಿ ಮಿಂದು ನನ್ನನ್ನು ದರ್ಶನಮಾಡಿದವನೂ ಮುಪ್ಪು ಮರಣಗಳಿಲ್ಲದ ಉತ್ತಮ ಸ್ಥಾನವನ್ನು ಹೊಂದುವರು.

೨೦. ನನ್ನ ಈ ಲಿಂಗವು ಪರ್ವತವನ್ನು ಭೇದಿಸಿ ಉದ್ಭವಿಸಿದ್ದರಿಂದ ಅಚಲೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾಗುವುದು.

೨೧. ಈ ಲಿಂಗದ ಮಾಹಾತ್ಮ್ಯದಿಂದ ಈ ಪರ್ವತವು ಚಲಿಸುವುದಿಲ್ಲ. ನನ್ನೀ ಲಿಂಗವು ಪ್ರಳಯಾವಸಾನದಲ್ಲಿಯೂ ಚಂಚಲವಾಗುವುದಿಲ್ಲ.

೨೨–೨೩, ಮಹೇಶ್ವರನು ಹೀಗೆ ನುಡಿದು ಸುಮ್ಮನಾಗಲು ವಸಿಷ್ಠನು ಸಂತೋಷದಿಂದ ತನ್ನ ತಪಸ್ಸಿನ ಸಾಮರ್ಥ್ಯದಿಂದ ಗೌತಮಾದಿ ಮುನಿವರ್ಯರನ್ನೂ, ಇಂದ್ರಾದಿ ದೇವತೆಗಳನ್ನೂ, ತೀರ್ಥದೇವಾಲಯಗಳನ್ನೂ ಆ ಪರ್ವತಕ್ಕೆ ಕರೆಯಿಸಿದನು.

**ತತಸ್ತುಷ್ಟಃ ಸುರಶ್ರೇಷ್ಠಸ್ತತ್ರ ವಾಸಮಥಾಕರೋತ್ || ೨೪ ||**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ತೃತೀಯೇಽಬುರ್ಬದಖಂಡೇ ಅಚಲೇಶ್ವರೋತ್ಪತ್ತಿವರ್ಣನಂನಾಮ

॥ ಚತುರ್ಥೋಽಧ್ಯಾಯಃ ॥

---

೨೪. ಅನಂತರ ಸುರೋತ್ತಮನಾದ ಮಹೇಶ್ವರನು ಅಲ್ಲಿಯೇ ವಾಸಮಾಡಿದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಆರ್ಬುದಖಂಡದಲ್ಲಿ
ಅಚಲೇಶ್ವರೋತ್ಪತ್ತಿವರ್ಣನವೆಂಬ
ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಪಂಚಮೋಽಧ್ಯಾಯಃ

## ನಾಗತೀರ್ಥಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಅರ್ಬುದಸ್ಯ ಚ ಮಾಹಾತ್ಮ್ಯಂ ವಿಸ್ತರೇಣ ವದಸ್ವ ನಃ ।
ಕೌತುಕಂ ಸೂತ ನೋ ಜಾತಂ ಕಥಯಸ್ವ ಯಥಾ ಶುಭಂ ॥ ೧ ॥

ಸೂತ ಉವಾಚ :—

ಪುರಾಸೀಚ್ಚ ಋಷಿಶ್ರೇಷ್ಠಃ ಪುಲಸ್ತ್ಯೋ ಭಗವಾನ್ಮುನಿಃ ।
ಯಯಾತೇಶ್ಚ ಗೃಹೇ ಯಾತಸ್ತಂ ನತ್ವಾ ಚಾಬ್ರವೀನ್ನೃಪಃ ॥ ೨ ॥

ಯಯಾತಿರುವಾಚ :—

ಸ್ವಾಗತಂ ತೇ ಮುನಿಶ್ರೇಷ್ಠ ಸಫಲಂ ಮೇಽದ್ಯ ಜೀವಿತಂ ।
ಕಥಯಸ್ವ ಪ್ರಸಾದೇನ ಕಥಾಮರ್ಬುದಸಂಭವಾಂ ॥ ೩ ॥
ಅರ್ಬುದಾಖ್ಯೋ ನಗೋ ನಾಮ ವಿಖ್ಯಾತೋ ಯೋ ಧರಾತಲೇ ।
ತಸ್ಯ ಯಾತ್ರಾಕ್ರಮಂ ಬ್ರೂಹಿ ತತ್ಫಲಂ ದ್ವಿಜಸತ್ತಮ ॥ ೪ ॥

---

### ಕನ್ನಡದ ಅನುವಾದ

### ನಾಗತೀರ್ಥಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ! ನಮಗೆ ಅರ್ಬುದದ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳು. ನನಗೆ ಬಹಳ ಕುತೂಹಲವುಂಟಾಗಿದೆ.

೨. ಸೂತನು ಹೇಳುತ್ತಾನೆ :—ಹಿಂದೆ ಪುಲಸ್ತ್ಯನೆಂಬ ಮುನಿವರ್ಯನಿದ್ದನು. ಅವನು ಯಯಾತಿಯ ಮನೆಗೆ ಹೋಗಲು ಆ ಯಯಾತಿಯು ಆ ಮುನಿಯನ್ನು ವಂದಿಸಿ ಇಂತೆಂದನು.

೩. ಯಯಾತಿಯು ಹೇಳುತ್ತಾನೆ :—ಮುನಿವರ್ಯ! ನಿನಗೆ ಸುಖಾಗಮನವಾಗಲಿ. ನನ್ನ ಜೀವನವು ಈಗ ಸಫಲವಾಯಿತು. ನೀನು ಅನುಗ್ರಹಿಸಿ ಅರ್ಬುದದ ಕಥೆಯನ್ನು ಹೇಳು.

೪. ಭೂಮಿಯಲ್ಲಿ ಅರ್ಬುದವೆಂದು ಪ್ರಸಿದ್ಧವಾದ ಪರ್ವತವಿರುವುದು ಆ ಪರ್ವತದ ಯಾತ್ರಾಕ್ರಮವನ್ನೂ, ಅದರ ಫಲವನ್ನೂ ಹೇಳು.

ಸರ್ವಂ ವಿಸ್ತರತೋ ಬ್ರೂಹಿ ತೀರ್ಥಯಾತ್ರಾಪರಾಯಣ ।
ತಸ್ಮಾದ್ವದ ಮುನಿಶ್ರೇಷ್ಠ ಯೇನ ಯಾತ್ರಾಂ ಕರೋಮ್ಯಹಂ ॥ ೫ ॥
ಪುಲಸ್ತ್ಯ ಉವಾಚ :—
ಬಹುಧರ್ಮಮಯೋ ರಾಜನ್ನರ್ಬುದಃ ಪರ್ವತೋತ್ತಮಃ ।
ಅಶಕ್ತೋ ವಿಸ್ತರಾದ್ವಕ್ತುಮಪಿ ವರ್ಷಶತೈರಪಿ ॥ ೬ ॥
ಸಂಕ್ಷೇಪಾದೇವ ವಕ್ಷ್ಯಾಮಿ ತೀರ್ಥಮುಖ್ಯಾನಿ ತೇ ತಥಾ ।
ನಾಗತೀರ್ಥಂ ತು ತತ್ರಾದ್ಯಂ ಸರ್ವಕಾಮಪ್ರದಂ ನೃಣಾಂ ॥ ೭ ॥
ನಾರೀಣಾಂ ಚ ವಿಶೇಷೇಣ ಪುತ್ರಸೌಭಾಗ್ಯದಾಯಕಂ ।
ಶೃಣು ರಾಜನ್ಪುರಾವೃತ್ತಂ ಯತೋಽತ್ಯಾಶ್ಚರ್ಯಮುತ್ತಮಂ ॥ ೮ ॥
ಗೌತಮೀ ಬ್ರಾಹ್ಮಣೀ ನಾಮ್ನಾ ಸತೀ ಸಾಧ್ವೀ ಪತಿವ್ರತಾ ।
ಬಾಲವೈಧವ್ಯಸಂಪ್ರಾಪ್ತಾ ತೀರ್ಥಯಾತ್ರಾಪರಾಯಣಾ ॥ ೯ ॥
ಅರ್ಬುದಂ ಸಾ ಚ ಸಂಪ್ರಾಪ್ತಾ ನಾಗತೀರ್ಥಂ ವಿವೇಶ ಹ ।
ತಸ್ಮಿಂಜಲೇ ನಿಮಗ್ನಾ ಸಾ ಸ್ನಾತುಮಭ್ಯಾಯಯೌ ಪುರಾ ॥ ೧೦ ॥
ನಾಯಕಾ ಪುತ್ರಸಂಯುಕ್ತಾ ತತ್ತೀರ್ಥಂ ಸಮುಪಾಗತಾ ।
ಶುಶ್ರೂಷಾಂ ಸಾ ತತಸ್ತಸ್ಯಾಶ್ಚಕ್ರೇ ನಾನಾವಿಧಾಂ ನೃಪ ॥ ೧೧ ॥

---

೫. ತೀರ್ಥಯಾತ್ರಾನಿರತನಾದ ಮುನಿಯೆ ! ಎಲ್ಲವನ್ನೂ ವಿಸ್ತಾರವಾಗಿ ಹೇಳು. ಅದರಿಂದ ನಾನು ತೀರ್ಥಯಾತ್ರೆಯನ್ನು ಮಾಡುವೆನು.

೬. ಪುಲಸ್ತ್ಯನು ಹೇಳುತ್ತಾನೆ :—ದೊರೆಯೆ ! ಈ ಅರ್ಬುದವೆಂಬ ಉತ್ತಮವಾದ ಪರ್ವತವು ಬಹು ಧರ್ಮವನ್ನುಂಟುಮಾಡುವುದು. ಇದನ್ನು ನಾನು ನೂರು ವರ್ಷಗಳಿಂದಲೂ ಹೇಳಲು ಸಮರ್ಥನಲ್ಲ.

೭. ಮುಖ್ಯವಾದ ತೀರ್ಥಗಳನ್ನು ಸಂಕ್ಷೇಪವಾಗಿ ಹೇಳುವೆನು. ಅಲ್ಲಿ ಮೊದಲನೆಯದಾದ ನಾಗತೀರ್ಥವು ಮನುಷ್ಯರಿಗೆ ಸಕಲೇಷ್ಟಗಳನ್ನೀಯುವುದು.

೮. ಇದು ವಿಶೇಷವಾಗಿ ಹೆಂಗಸರಿಗೆ ಪುತ್ರರನ್ನು ಕೊಡುವುದು ದೊರೆಯೆ! ಇಲ್ಲಿ ಹಿಂದೆ ನಡೆದ ಆಶ್ಚರ್ಯಕರವಾದ ಒಂದು ವೃತ್ತಾಂತವನ್ನು ಕೇಳು.

೯—೧೩. ಪತಿವ್ರತೆಯಾದ ಗೌತಮಿಯೆಂಬ ಬ್ರಾಹ್ಮಣಸ್ತ್ರೀಯು ಬಾಲವೈಧವ್ಯವನ್ನು ಹೊಂದಿ ತೀರ್ಥಯಾತ್ರಾ ನಿರತಳಾಗಿ ಅರ್ಬುದ ಪರ್ವತಕ್ಕೆ ಬಂದು ನಾಗತೀರ್ಥದಲ್ಲಿ ಸ್ನಾನಮಾಡಲು ಪ್ರವೇಶಿಸಿದಳು. ಆಗ ರಾಣಿಯು ಮಕ್ಕಳೊಡನೆ 'ಅಲ್ಲಿಗೆ

ಸರ್ವೋಪಕರಣೈರ್ದರ್ಭೈಃ ಸುಮನೋಭಿಃ ಪೃಥಗ್ವಿಧೈಃ ।
ಅಥ ಸಾ ಚಿಂತಯಾಮಾಸ ಗೌತಮೀ ಪುತ್ರದುಃಖಿತಾ ॥ ೧೨ ॥
ಧನ್ಯೋಽಯಂ ತನಯೋ ಹ್ಯಸ್ಯಾಃ ಶುಶ್ರೂಷಾಂ ಕುರುತೇ ಸದಾ ।
ಪುತ್ರಯುಕ್ತಾ ತ್ವಿಯಂ ಧನ್ಯಾ ಧಿಗಹಂ ಪುತ್ರವರ್ಜಿತಾ ॥ ೧೩ ॥
ಅಹಂ ಭರ್ತ್ರಾ ವಿಯುಕ್ತಾ ಚ ಪುತ್ರಹೀನಾ ಸುದುಃಖಿತಾ ।
ಅಥ ಸಾ ನಿರ್ಗತಾ ತಸ್ಮಾತ್ಸಲಿಲಾನ್ನೃಪಸತ್ತಮ ॥ ೧೪ ॥
ವಿನಾಽಪಿ ಭರ್ತೃಸಂಯೋಗಾತ್ಸದ್ಯೋ ಗರ್ಭವತೀ ಹ್ಯಭೂತ್ ।
ಸಾ ಗರ್ಭಲಕ್ಷಣೈರ್ಯುಕ್ತಾ ಸುಜನವ್ರೀಡಯಾಽನ್ವಿತಾ ॥ ೧೫ ॥
ಚಕಾರ ಮರಣೇ ಬುದ್ಧಿಂ ಜ್ವಾಲಯಾಮಾಸ ಪಾವಕಂ ।
ಏತಸ್ಮಿನ್ನೇವ ಕಾಲೇ ತು ವಾಗುವಾಚಾಶರೀರಿಣೀ ॥ ೧೬ ॥

ವಾಗುವಾಚ :—

ನೋ ತ್ವಂ ಗೌತಮಿ ಚಿತ್ಯಾಗ್ನೌ ಪ್ರವೇಶಂ ಕರ್ತುಮರ್ಹಸಿ ।
ದೋಷೋ ನಾಸ್ತಿ ತವಾತ್ರಾರ್ಥೇ ತೀರ್ಥಸ್ಯಾಸ್ಯ ಪ್ರಭಾವತಃ ॥ ೧೭ ॥
ಯೋ ಯದ್ವಾಂಛತಿ ಚಿತ್ತೇ ಚ ಜಲಮಧ್ಯೇ ಸ್ಥಿತೋ ನರಃ ।
ಚಿಂತಿತಂ ಚ ತದಾಪ್ನೋತಿ ನಾರೀ ವಾ ನಾತ್ರ ಸಂಶಯಃ ॥ ೧೮ ॥

---

ಸ್ನಾನಮಾಡಲು ಬರಲು ಗೌತಮಿಯು ಅವಳಿಗೆ ದರ್ಭೆ, ಹೂವು, ಮೊದಲಾದ ವಿವಿಧ ಸಾಮಗ್ರಿಗಳನ್ನಿತ್ತು ಸೇವಿಸಿ ತನಗೆ ಪುತ್ರರಿಲ್ಲದಿರುವುದರಿಂದ ದುಃಖಗೊಂಡು ಹೀಗೆ ಚಿಂತಿಸಿದಳು.

೧೩. ಇವಳನ್ನು ಯಾವಾಗಲೂ ಸೇವಿಸುವ ಈ ಪುತ್ರನು ಧನ್ಯನು. ಪುತ್ರನಿಂದ ಸಹಿತಳಾದ ಇವಳೂ ಧನ್ಯಳು. ಪುತ್ರನಿಲ್ಲದ ನಾನು ನಿಂದ್ಯಳಾಗಿದ್ದೇನೆ.

೧೪. ದೊರೆಯೆ! ಆ ಗೌತಮಿಯು ನಾನು ಪುತ್ರವಿಹೀನಳೆಂದು ಅತ್ಯಂತ ದುಃಖಗೊಂಡು ಆ ನೀರಿನಿಂದ ಹೊರಟಳು.

೧೫–೧೬. ಅವಳು ಪತಿಯ ಸಮಾಗಮವಿಲ್ಲದಿದ್ದರೂ ಕೂಡಲೆ ಗರ್ಭಿಣಿಯಾಗಿ ಗರ್ಭಲಕ್ಷಣಗಳಿಂದ ಸಹಿತಳಾಗಲು ಅವಳು ಸಜ್ಜನರನ್ನು ನೋಡಲು ನಾಚಿಕೆಗೊಂಡು ಸಾಯುವುದಕ್ಕಾಗಿ ಅಗ್ನಿಯನ್ನು ಉರಿಸಿದಳು. ಇಷ್ಟರಲ್ಲಿ ಅಶರೀರವಾಣಿಯಾಯಿತು.

೧೭–೧೮. ಅಶರೀರವಾಣಿಯು ನುಡಿಯುತ್ತದೆ:—ಗೌತಮಿ! ನೀನ, ಚಿತಿಯ ಅಗ್ನಿಯಲ್ಲಿ ಪ್ರವೇಶಿಸಲರ್ಹಳಲ್ಲ. ಈ ವಿಷಯದಲ್ಲಿ ನಿನ್ನ ದೋಷವಿಲ್ಲ. ನೀರಿನ ಮಧ್ಯದಲ್ಲಿರುವ ಪುರುಷನಾಗಲಿ, ಸ್ತ್ರೀಯಾಗಲಿ ತಾವು ಅಪೇಕ್ಷಿಸಿದ್ದನ್ನೆಲ್ಲ ಈ ತೀರ್ಥದ ಸಾಮರ್ಥ್ಯದಿಂದ ಪಡೆಯುವರು.

ತ್ವಯಾ ತಸ್ಯಾಃ ಸುತಂ ದೃಷ್ಟ್ವಾ ಪುತ್ರವಾಂಛಾ ಕೃತಾ ಹೃದಿ ।
ತವ ಗರ್ಭಗತೋ ನೂನಂ ಪುತ್ರಃ ಪುತ್ರಿ ಭವಿಷ್ಯತಿ ॥ ೧೯ ॥
ತಸ್ಮಾದ್ವಿರಮ ಭದ್ರಂತೇ ನಿರ್ದೋಷಾಸಿ ಪತಿವ್ರತೇ ।
ವಿರರಾಮ ತತಃ ಸಾಧ್ವೀ ಗೌತಮೀ ಮರಣಾನ್ನೃಪ ॥ ೨೦ ॥
ಶ್ರುತ್ವಾಽಽಕಾಶಗತಾಂ ವಾಣೀಂ ದೇವದೂತೇನ ಭಾಷಿತಾಂ ।
ದೃಷ್ಟ್ವಾ ಪತಿಂ ವಿನಾ ಗರ್ಭಂ ವಾಕ್ಯಮೇತದುವಾಚ ಹ ॥ ೨೧ ॥
ಅಹೋ ತೀರ್ಥಪ್ರಭಾವೋಽಯಮಪೂರ್ವಃ ಪ್ರತಿಭಾತಿ ಮೇ ।
ಯತ್ರ ಸಂಜಾಯತೇ ಗರ್ಭಃ ಸ್ತ್ರೀಣಾಂ ಶುಕ್ರರಜೋ ವಿನಾ ॥ ೨೨ ॥
ನಾಹಂ ಕುತ್ರಾಪಿ ಯಾಸ್ಯಾಮಿ ಮುಕ್ತ್ವೇದಂ ತೀರ್ಥಮುತ್ತಮಂ ।
ಏವಮುಕ್ತ್ವಾ ತತಃ ಸಾಧ್ವೀ ತತ್ರೈವ ನ್ಯವಸತ್ತದಾ ॥ ೨೩ ॥
ಪುತ್ರಂ ವೈ ಜನಯಾಮಾಸ ಸರ್ವಲಕ್ಷಣಲಕ್ಷಿತಂ ।
ತತ್ರ ಪಾರ್ಥಿವಶಾರ್ದೂಲ ಕೃಷ್ಣಪಕ್ಷೇಽಽಶ್ವಿನಸ್ಯ ಚ ॥ ೨೪ ॥
ಯಃ ಪುನಃ ಕುರುತೇ ಶ್ರಾದ್ಧಂ ತಸ್ಯ ವಂಶೋ ನ ನಶ್ಯತಿ ।
ನ ಪ್ರೇತೋ ಜಾಯತೇ ರಾಜನ್ವಂಶೇ ತಸ್ಯ ಕದಾಚನ ॥ ೨೫ ॥

---

೧೯. ನೀನು ಅವಳ ಸುತನನ್ನು ಕಂಡು ಮನಸ್ಸಿನಲ್ಲಿ ಪುತ್ರನನ್ನು ಬಯಸಿದ್ದರಿಂದ ಗರ್ಭಿಣಿಯಾಗಿರುವೆ. ನಿಜವಾಗಿಯೂ ನಿನಗೆ ಪುತ್ರನು ಜನಿಸುವನು.

೨೦. ಪತಿವ್ರತೆಯೆ! ನೀನು ನಿರ್ದುಷ್ಟಳಾಗಿರುವೆ. ಆದ್ದರಿಂದ ಮರಣಕ್ಕಾಗಿ ಪ್ರಯತ್ನಿಸಬೇಡ.

೨೧. ಆ ಗೌತಮಿಯು ದೇವದೂತನು ಹೇಳಿದ ಮಾತನ್ನು ಕೇಳಿ ಪತಿಯಿಲ್ಲದೆ ಗರ್ಭಿಣಿಯಾಗಿರುವೆ ಎಂದು ಈ ಅಶರೀರವಾಣಿಯು ಹೇಗೆ ಹೇಳಿತು.

೨೨. ಈ ತೀರ್ಥದ ಮಾಹಾತ್ಮ್ಯವು ನೂತನವಾದುದಾಗಿ ನನಗೆ ಕಾಣುತ್ತಿದೆ. ಇದರಲ್ಲಿ ಸ್ತ್ರೀಯರು ಶುಕ್ರಶೋಣಿತ ಸಂಬಂಧವಿಲ್ಲದೆ ಗರ್ಭಿಣಿಯರಾಗುವರು.

೨೩. ನಾನು ಈ ಉತ್ತಮ ತೀರ್ಥವನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ಹೀಗೆ ಹೇಳಿ ಅವಳು ಅಲ್ಲಿಯೇ ಯಾವಾಗಲೂ ವಾಸಿಸುತ್ತಿದ್ದಳು.

೨೪–೨೫. ನೃಪೇಂದ್ರ! ಅವಳು ಅಲ್ಲಿ ಸಕಲ ಲಕ್ಷಣಗಳಿಂದ ಕೂಡಿರುವ ತನಯನನ್ನು ಪ್ರಸವಿಸಿದಳು. ಅಲ್ಲಿ ಆಶ್ವಿನ ಕೃಷ್ಣಪಕ್ಷದಲ್ಲಿ ಶ್ರಾದ್ಧ ಮಾಡಿದವನ ವಂಶವು ಹಾಳಾಗುವುದಿಲ್ಲ. ಅವನ ವಂಶದಲ್ಲಿ ಯಾವನೂ ಪ್ರೇತನಾಗುವುದಿಲ್ಲ.

ಯಃ ಪುಮಾನ್ಕಾಮರಹಿತಃ ಸ್ನಾನಂ ತತ್ರ ಸಮಾಚರೇತ್ ।
ಶ್ರಾದ್ಧಂ ಚ ಪಾರ್ಥಿವಶ್ರೇಷ್ಠ ತಸ್ಯ ಲೋಕಾಃ ಸನಾತನಾಃ ॥ ೨೬ ॥
ಯಾ ಸ್ತ್ರೀ ಪುಷ್ಪಫಲಾನ್ಯೇವ ತೀರ್ಥೇ ಚಾಸ್ಮಿನ್ನಿಸರ್ಜಯೇತ್ ।
ಸಾ ಸ್ಯಾತ್ಪುತ್ರವತೀ ಧನ್ಯಾ ಸೌಭಾಗ್ಯಂ ಚ ಪ್ರಪದ್ಯತೇ ॥ ೨೭ ॥
ನಿಷ್ಕಾಮಾ ಸ್ವರ್ಗಮಾಪ್ನೋತಿ ದುಷ್ಪ್ರಾಪ್ಯಂ ತ್ರಿದಶೈರಪಿ ।
ತಸ್ಮಾತ್ಸರ್ವಪ್ರಯತ್ನೇನ ಯಾತ್ರಾಂ ತಸ್ಯ ಸಮಾಚರೇತ್ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ನಾಗತೀರ್ಥಮಾಹಾತ್ಮ್ಯವರ್ಣನಂ ನಾಮ
ಪಂಚಮೋಽಧ್ಯಾಯಃ

---

೨೬. ಅಲ್ಲಿ ನಿಷ್ಕಾಮನಾಗಿ ಮಿಂದು ಶ್ರಾದ್ಧಮಾಡಿದವನಿಗೆ ಶಾಶ್ವತ ಲೋಕಗಳು ಲಭಿಸುವುವು.

೨೭–೨೮. ಅಲ್ಲಿ ನಿಷ್ಕಾಮಳಾಗಿ ಪುಷ್ಪ ಫಲಗಳನ್ನು ದಾನಮಾಡಿದ ಹೆಂಗಸು ಪುತ್ರವತಿಯೂ, ಧನ್ಯಳೂ ಆಗಿ ಸೌಭಾಗ್ಯವನ್ನೂ, ದೇವತೆಗಳಿಗೂ ಹೊಂದಲಶಕ್ಯವಾದ ಸ್ವರ್ಗವನ್ನೂ ಪಡೆಯುವಳು. ಆದ್ದರಿಂದ ಸಕಲ ಪ್ರಯತ್ನದಿಂದಲೂ ಆ ಅರ್ಬುದ ತೀರ್ಥದ ಯಾತ್ರೆಯನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ನಾಗತೀರ್ಥಮಾಹಾತ್ಮ್ಯವರ್ಣನವೆಂಬ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಷಷ್ಠೋಽಧ್ಯಾಯಃ

## ವಸಿಷ್ಠಾಶ್ರಮಮಾಹಾತ್ಮ್ಯವರ್ಣನಂ

ಪುಲಸ್ತ್ಯವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ವಸಿಷ್ಠಂ ತಪಸಾಂ ನಿಧಿಂ ।
ಯಂ ದೃಷ್ಟ್ವಾ ಮಾನವಃ ಸಮ್ಯಕ್ಕೃತಾರ್ಥತ್ವಮುಪಾಪ್ನುಯಾತ್ ॥ ೧ ॥
ತತ್ರಾಸ್ತಿ ಜಲಸಂಪೂರ್ಣಂ ಕುಂಡಂ ಪಾಪಹರಂ ನೃಣಾಂ ।
ತಸ್ಮಿನ್ಕುಂಡೇ ನೃಪಶ್ರೇಷ್ಠ ವಸಿಷ್ಠೇನ ಮಹಾತ್ಮನಾ ॥ ೨ ॥
ಗೋಮತೀ ಚ ಸಮಾನೀತಾ ತಪಸಾ ನೃಪಸತ್ತಮ ।
ತತ್ರ ಸ್ನಾತೋ ನರಃ ಸಮ್ಯಕ್ಪಾತಕೈರ್ವಿಪ್ರ ಮುಚ್ಯತೇ ॥ ೩ ॥
ಋಷಿಭಾನ್ಯೇನ ಯಸ್ತತ್ರ ಶ್ರಾದ್ಧಂ ನೃಪ ಸಮಾಚರೇತ್ ।
ಸ ಪಿತ್ರ್ಯಾಂಸ್ತಾರಯೇತ್ಸರ್ವಾನ್ಪಕ್ಷಯೋರುಭಯೋರಪಿ ॥ ೪ ॥
ಅತ್ರ ಗಾಥಾ ಪುರಾಗೀತಾ ನಾರದೇನ ಮಹಾತ್ಮನಾ ।
ಸ್ನಾತ್ವಾ ಪುಣ್ಯೋದಕೇ ತತ್ರ ದೃಷ್ಟ್ವಾ ತಂ ಮುನಿಸತ್ತಮಂ ॥ ೫ ॥

---

## ಕನ್ನಡದ ಅನುವಾದ

## ವಸಿಷ್ಠಾಶ್ರಮಮಾಹಾತ್ಮ್ಯವರ್ಣನ

೧ ಪುಲಸ್ತ್ಯನು ಹೇಳುತ್ತಾನೆ :—ನೃಪೋತ್ತಮ ! ಬಳಿಕ ತಪಸ್ಸಿಗೆ ಆಶ್ರಯನಾದ ವಸಿಷ್ಠನೆಡೆಗೆ ಹೋಗಬೇಕು. ಅವನನ್ನು ದರ್ಶನ ಮಾಡಿದ ಮಾನವನು ಧನ್ಯನಾಗುವನು.

೨–೩. ಅಲ್ಲಿ ಮಾನವರ ಪಾಪವನ್ನು ಪರಿಹರಿಸುವ ನೀರಿನಿಂದ ತುಂಬಿದ ಕುಂಡವಿರುವುದು. ದೊರೆಯೆ ! ಮಹಾತ್ಮನಾದ ವಸಿಷ್ಠನು ತನ್ನ ತಪಸ್ಸಿನಿಂದ ಆ ಕುಂಡಕ್ಕೆ ಗೋಮತೀ ನದಿಯನ್ನು ತಂದು ಸೇರಿಸಿರುವನು. ಅಲ್ಲಿ ಮಿಂದ ಮಾನವನು ಪಾಪಮುಕ್ತನಾಗುವನು.

೪. ದೊರೆಯೆ ! ಅಲ್ಲಿ ಋಷಿಗಳು ಭಕ್ಷಿಸುವ ಧಾನ್ಯದಿಂದ ಶ್ರಾದ್ಧ ಮಾಡಿದವನು ಉಭಯ ಕುಲದ ಪಿತೃಗಳನ್ನು ಉದ್ಧರಿಸುವನು.

೫–೬. ಹಿಂದೆ ಈ ವಿಷಯದಲ್ಲಿ ನಾರದಮುನಿಯು ಒಂದು ಗಾಥೆಯನ್ನು ಹಾಡಿರುವನು. ಪುಣ್ಯಕರವಾದ ಆ ತೀರ್ಥದಲ್ಲಿ ಮಿಂದು ಆ ವಸಿಷ್ಠ ಮುನಿವರ್ಯ

ಕಿಂ ಗಯಾಶ್ರಾದ್ಧದಾನೇನ ಕಿಮನ್ಯೈರ್ಮಖವಿಸ್ತರೈಃ ।
ವಸಿಷ್ಠಸ್ಯಾಶ್ರಮಂ ಪ್ರಾಪ್ಯ ಯಃ ಶ್ರಾದ್ಧಂ ಕುರುತೇ ನರಃ ।
ಸ ಪಿತೄಂಸ್ತಾರಯೇತ್ಸರ್ವಾನಾತ್ಮನಾ ನೃಪಸತ್ತಮ ॥ ೬ ॥
ತತ್ರೈವಾರುಂಧತೀ ಸಾಧ್ವೀ ವಸಿಷ್ಠಸ್ಯ ಸಮೀಪತಃ ।
ಪೂಜನೀಯಾ ವಿಶೇಷೇಣ ಸರ್ವಕಾಮಪ್ರದಾ ನೃಣಾಂ ॥ ೭ ॥
ಬಾಲ್ಯೇ ವಯಸಿ ಯತ್ಪಾಪಂ ವಾರ್ಧಕೇ ಯೌವನೇಽಪಿ ವಾ ।
ವಸಿಷ್ಠದರ್ಶನಾತ್ಸದ್ಯೋ ನರಾಣಾಂ ಯಾತಿ ಸಂಕ್ಷಯಂ ॥ ೮ ॥
ದೀಪಂ ಪ್ರಯಚ್ಛತೇ ಯಸ್ತು ವಸಿಷ್ಠಾಗ್ರೇ ಸಮಾಹಿತಃ ।
ಸುಖಸೌಭಾಗ್ಯಸಂಯುಕ್ತಸ್ತೇಜಸ್ವೀ ಜಾಯತೇ ನರಃ ॥ ೯ ॥
ಉಪವಾಸಪರೋ ಯಸ್ತು ತತ್ರೈಕಾಂ ರಜನೀಂ ನಯೇತ್ ।
ಸ ಯಾತಿ ಪರಮಂ ಸ್ಥಾನಂ ಯತ್ರ ಸಪ್ತರ್ಷಯೋಽಮಲಾಃ ॥ ೧೦ ॥
ತ್ರಿರಾತ್ರಂ ಕುರುತೇ ಯಸ್ತು ವಸಿಷ್ಠಾಗ್ರೇ ಸಮಾಹಿತಃ ।
ಸ ಯಾತಿ ಚ ಮಹರ್ಲೋಕಂ ಜರಾಮರಣವರ್ಜಿತಃ ॥ ೧೧ ॥
ಯಸ್ತು ಮಾಸೋಪವಾಸಂ ಚ ವಸಿಷ್ಠಾಗ್ರೇ ಕರೋತಿ ಚ ।
ಸೋಽಪಿ ಮುಕ್ತಿಮವಾಪ್ನೋತಿ ನ ಯಾತಿ ಸ ಭವಾರ್ಣವಂ ॥ ೧೨ ॥

---

ನನ್ನು ದರ್ಶನ ಮಾಡಿದವನಿಗೆ ಗಯಾಶ್ರಾದ್ಧದಿಂದಲೂ, ಇತರ ಯಜ್ಞಗಳಿಂದಲೂ ಏನು ಪ್ರಯೋಜನ ? ವಸಿಷ್ಠಾಶ್ರಮವನ್ನು ಹೊಂದಿ ಶ್ರಾದ್ಧಮಾಡಿದ ಮಾನವನು ಸಕಲ ಪಿತೃಗಳನ್ನೂ ಉದ್ಧಾರ ಮಾಡುವನು.

೭. ಮಾನವರು ಅಲ್ಲಿ ಆ ವಸಿಷ್ಠನ ಹತ್ತಿರವಿರುವ ಸಾಧ್ವಿಯೂ, ಸಕಲೇಷ್ಟಾರ್ಥಗಳನ್ನೀಯುವವಳೂ ಆದ ಅರುಂಧತಿಯನ್ನು ಅತಿಶಯವಾಗಿ ಪೂಜಿಸಬೇಕು.

೮. ವಸಿಷ್ಠನ ದರ್ಶನದಿಂದ ಮಾನವರು ಬಾಲ್ಯ, ಯೌವನ, ಮುಪ್ಪಿಗಳನಲ್ಲಿ ಸಗಿದ ಪಾಪವು ಕೂಡಲೆ ಪರಿಹಾರವಾಗುವುದು.

೯. ಸಾವಧಾನ ಮನಸ್ಸಿನಿಂದ ವಸಿಷ್ಠನ ಮುಂದೆ ದೀಪವನ್ನು ಹೊತ್ತಿಸುವವನು ಸುಖಸೌಭಾಗ್ಯಗಳನ್ನು ಪಡೆಯುವನು.

೧೦. ಅಲ್ಲಿ ಉಪವಾಸವಿದ್ದು ಒಂದು ರಾತ್ರಿಯನ್ನು ಕಳೆದವನು ಸಪ್ತರ್ಷಿಗಳಿರುವ ಉತ್ತಮ ಸ್ಥಾನಕ್ಕೆ ತೆರಳುವನು.

೧೧. ಮೂರುರಾತ್ರಿ ವಸಿಷ್ಠನ ಮುಂದೆ ವಾಸಿಸಿದವನು ಮುಪ್ಪು ಮರಣಗಳಿಲ್ಲದವನಾಗಿ ಮಹರ್ಲೋಕವನ್ನು ಸೇರುವನು.

೧೨. ವಸಿಷ್ಠನ ಮುಂದೆ ಒಂದು ತಿಂಗಳು ಉಪವಾಸಮಾಡಿದವನು ಮುಕ್ತಿಯನ್ನು ಪಡೆದು ಮರಳಿ ಸಂಸಾರವನ್ನು ಹೊಂದುವುದಿಲ್ಲ.

ಶ್ರಾವಣಸ್ಯ ಸಿತೇ ಪಕ್ಷೇ ಪೌರ್ಣಮಾಸ್ಯಾಂ ಸಮಾಹಿತಃ ।
ಋಷಿಂ ತರ್ಪಯತೇ ಯಸ್ತು ಬ್ರಹ್ಮಲೋಕಂ ಸ ಗಚ್ಛತಿ ॥ ೧೩ ॥
ವಸಿಷ್ಠಸ್ಯಾಗ್ರತೋ ಯಸ್ತು ಗಾಯತ್ರ್ಯಷ್ಟಶತಂ ಜಪೇತ್ ।
ಆಜನ್ಮಮರಣಾತ್ಪಾಪಾತ್ಸದ್ಯೋ ಮುಚ್ಯೇತ ಮಾನವಃ ॥ ೧೪ ॥
ವಾಮದೇವಂ ಯಜೇತ್ತತ್ರ ಯದಿ ಶ್ರದ್ಧಾಸಮನ್ವಿತಃ ।
ಅಗ್ನಿಷ್ಟೋಮಫಲಂ ರಾಜನ್ಸದ್ಯಃ ಪ್ರಾಪ್ನೋತಿ ಮಾನವಃ ॥ ೧೫ ॥
ತಸ್ಮಾತ್ಸರ್ವಪ್ರಯತ್ನೇನ ದ್ರಷ್ಟವ್ಯೋಽಸೌ ಮಹಾಮುನಿಃ ।
ಶುಚಿಭಿಃ ಶ್ರದ್ಧಯಾ ಯುಕ್ತಾಸ್ತೇ ಯಾಸ್ಯಂತಿ ಪರಂ ಪದಂ ॥ ೧೬ ॥
ತಸ್ಮಾತ್ಸರ್ವಾತ್ಮನಾ ರಾಜನ್ವಾಮದೇವಂ ಚ ಪೂಜಯೇತ್ ॥ ೧೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ವಸಿಷ್ಠಾಶ್ರಮಮಾಹಾತ್ಮ್ಯವರ್ಣನಂ ನಾಮ
ಷಷ್ಠೋಽಧ್ಯಾಯಃ

---

೧೩. ಅಲ್ಲಿ ಶ್ರಾವಣಶುದ್ಧ ಹುಣ್ಣಿಮೆಯ ದಿನ ಒಮ್ಮನಸ್ಸಿನಿಂದ ಋಷಿತರ್ಪಣ ಮಾಡಿದವನು ಬ್ರಹ್ಮಲೋಕಕ್ಕೆ ಹೋಗುವನು.

೧೪. ವಸಿಷ್ಠನ ಮುಂದೆ ಎಂಟನೂರು ಗಾಯತ್ರಿಗಳನ್ನು ಜಪಿಸಿದವನು ಹುಟ್ಟಿದ ಮೊದಲ್ಗೊಂಡು ಮರಣಕಾಲದವರೆಗೆ ಮಾಡಿದ ಪಾಪಗಳಿಂದ ಮುಕ್ತನಾಗುವನು.

೧೫. ಅಲ್ಲಿ ಶ್ರದ್ಧೆಯಿಂದ ಮಹೇಶ್ವರನನ್ನು ಪೂಜಿಸಿದವನು ಅಗ್ನಿಷ್ಟೋಮದ ಫಲವನ್ನು ಕೂಡಲೆ ಪಡೆಯುವನು.

೧೬. ಆದ್ದರಿಂದ ಆ ವಸಿಷ್ಠಮುನಿಯನ್ನು ಶುದ್ಧವಾಗಿ ಶ್ರದ್ಧೆಯಿಂದ ದರ್ಶನ ಮಾಡಬೇಕು. ಹೀಗೆ ಮಾಡಿದವರು ಉತ್ತಮ ಪದವಿಯನ್ನು ಪಡೆಯುವರು.

೧೭. ಆದ್ದರಿಂದಲೆ ಸರ್ವ ವಿಧದಿಂದಲೂ ಮಹೇಶ್ವರನನ್ನು ಪೂಜಿಸಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ವಸಿಷ್ಠಾಶ್ರಮಮಾಹಾತ್ಮ್ಯವರ್ಣನವೆಂಬ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತಮೋಽಧ್ಯಾಯಃ

### ಅಚಲೇಶ್ವರಪ್ರಭಾವವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಸುಪುಣ್ಯಮಚಲೇಶ್ವರಂ ।
ಯಂ ದೃಷ್ಟ್ವಾ ಸಿದ್ಧಿಮಾಪ್ನೋತಿ ನರಃ ಶ್ರದ್ಧಾಸಮನ್ವಿತಃ ॥ ೧ ॥
ತತ್ರ ಕೃಷ್ಣಚತುರ್ದಶ್ಯಾಂ ಯಃ ಶ್ರಾದ್ಧಂ ಕುರುತೇ ನರಃ ।
ಆಶ್ವಿನೇ ಫಾಲ್ಗುನೇ ವಾಪಿ ಸ ಯಾತಿ ಪರಮಾಂ ಗತಿಂ ॥ ೨ ॥
ಯಸ್ತು ಪೂಜಯತೇ ಭಕ್ತ್ಯಾ ದಕ್ಷಿಣಾಂ ದಿಶಮಾಸ್ಥಿತಃ ।
ಪುಷ್ಪೈಃ ಪತ್ರೈಃ ಫಲೈಶ್ಚೈವ ಸೋಽಶ್ವಮೇಧಫಲಂ ಲಭೇತ್ ॥ ೩ ॥
ಪಂಚಾಮೃತೇನ ಯಸ್ತತ್ರ ತರ್ಪಣಂ ಕುರುತೇ ನರಃ ।
ಸೋಽಪಿ ದೇವಸ್ಯ ಸಾಂನಿಧ್ಯಂ ಶಿವಲೋಕಮವಾಪ್ನುಯಾತ್ ॥ ೪ ॥
ಪ್ರದಕ್ಷಿಣಾಂತೇ ಯಸ್ತಸ್ಯ ಪ್ರಣಾಮಂ ಕುರುತೇ ನರಃ ।
ನಶ್ಯಂತಿ ಸರ್ವಪಾಪಾನಿ ಪ್ರದಕ್ಷಿಣಪದೇಪದೇ ॥ ೫ ॥

---

### ಕನ್ನಡದ ಅನುವಾದ

### ಅಚಲೇಶ್ವರಪ್ರಭಾವವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಪುಣ್ಯಕರನಾದ ಅಚಲೇಶ್ವರನೆಡೆಗೆ ಹೋಗಬೇಕು. ಅವನನ್ನು ಶ್ರದ್ಧೆಯಿಂದ ದರ್ಶನಮಾಡಿದವನು ಸಿದ್ಧಿಯನ್ನು ಹೊಂದುವನು.

೨. ಅಲ್ಲಿ ಆಶ್ವಿನ ಅಥವಾ ಫಾಲ್ಗುನಮಾಸದ ಕೃಷ್ಣಚತುರ್ದಶೀ ದಿನ ಶ್ರಾದ್ಧ ಮಾಡಿದವನು ಉತ್ತಮ ಗತಿಯನ್ನು ಪಡೆಯುವನು.

೩. ದಕ್ಷಿಣ ದಿಕ್ಕನ್ನು ಹೊಂದಿ ಆ ಅಚಲೇಶ್ವರನನ್ನು ಪುಷ್ಪ, ಪತ್ರ, ಫಲಗಳಿಂದ ಪೂಜಿಸಿದ ಮಾನವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೪. ಅಲ್ಲಿ ಅಚಲೇಶ್ವರನನ್ನು ಪಂಚಾಮೃತದಿಂದ ತೃಪ್ತಿಗೊಳಿಸುವ ಮಾನವನು ಶಿವಲೋಕದಲ್ಲಿ ಶಂಕರನ ಸಮೀಪವನ್ನು ಸೇರುವನು.

೫. ಪ್ರದಕ್ಷಿಣೆಯ ಅಂತ್ಯದಲ್ಲಿ ಅವನಿಗೆ ನಮಸ್ಕಾರ ಮಾಡುವವನ ಸಕಲ ಪಾಪಗಳೂ ಪ್ರದಕ್ಷಿಣೆಯ ಪ್ರತಿ ಹೆಜ್ಜೆಯಲ್ಲಿಯೂ ನಾಶವಾಗುವುವು.

ತತ್ರಾಶ್ಚರ್ಯಮಭೂತ್ಪೂರ್ವಂ ತತ್ತ್ವಂ ಶೃಣು ಮಹಾಮತೇ ।
ಮಯಾ ಪೂರ್ವಂ ಶ್ರುತಂ ಸ್ವರ್ಗೇ ನಾರದಾಚ್ಛಕ್ರಸನ್ನಿಧೌ ॥ ೬ ॥
ತತ್ರ ಪೂರ್ವಂ ಶುಕೋ ನೀಡಂ ವೃಕ್ಷೇ ಚೈವಾಕರೋದ್ದ್ವಿಜಃ ।
ಗತಾಗತೇನ ನೀಡಸ್ಯ ಕುರುತೇ ತಂ ಪ್ರದಕ್ಷಿಣಾಂ ॥ ೭ ॥
ನ ಚ ಭಕ್ತ್ಯಾ ಮಹಾರಾಜ ಪಕ್ಷಿಯೋನಿಸಮುದ್ಭವಃ ।
ಅಥಾಸೌ ಮೃತ್ಯುಮಾಪನ್ನಃ ಕಾಲೇನ ಮಹತಾ ಶುಕಃ ॥ ೮ ॥
ಸಂಜಾತಃ ಪಾರ್ಥಿವೇ ವಂಶೇ ರಾಜಾ ವೇಣುರತಿ ಸ್ಮೃತಃ ।
ಜಾತಿಸ್ಮರೋ ಮಹಾರಾಜ ಸರ್ವಶತ್ರುನಿಕೃಂತನಃ ॥ ೯ ॥
ಸ ತಂ ಸ್ಮೃತ್ವಾ ಪ್ರಭಾವಂ ಹಿ ಪ್ರದಕ್ಷಿಣಾಸಮುದ್ಭವಂ ।
ಅಚಲೇಶ್ವರಮಾಸಾದ್ಯ ಪ್ರದಕ್ಷಿಣಾಮಥಾಕರೋತ್ ॥ ೧೦ ॥
ನಕ್ತಂ ದಿನಂ ಮಹಾರಾಜ ನಾನ್ಯತ್ಕಿಂಚಿತ್ಕರೋತಿ ಸಃ ।
ನ ತಥಾ ತಪಸೇ ಯತ್ನೋ ನ ನೈವೇದ್ಯೇ ಕಥಂಚನ ॥ ೧೧ ॥
ನ ಪುಷ್ಪೇ ಧೂಪದಾನೇ ಚ ಪ್ರದಕ್ಷಿಣಾಪರಃ ಸದಾ ।
ಕೇನಚಿತ್ತ್ವಥ ಕಾಲೇನ ಮುನಯೋಽತ್ರ ಸಮಾಗತಾಃ ॥ ೧೨ ॥

---

೬. ಪ್ರಾಜ್ಞನೆ! ಅಲ್ಲಿ ಹಿಂದೆ ನಡೆದ ಒಂದು ಆಶ್ಚರ್ಯದ ವಿಷಯವನ್ನು ಕೇಳು. ಅದನ್ನು ನಾನು ಹಿಂದೆ ಸ್ವರ್ಗದಲ್ಲಿ ಇಂದ್ರನ ಹತ್ತಿರ ನಾರದನಿಂದ ಕೇಳಿದ್ದೇನೆ.

೭. ಹಿಂದೆ ಅಲ್ಲಿ ಒಂದು ಗಿಣಿಯು ಮರದಲ್ಲಿ ಗೂಡನ್ನು ಕಟ್ಟಿಕೊಂಡು ಆ ಗೂಡಿಗೆ ಹೋಗುವಾಗಲೂ, ಬರುವಾಗಲೂ ಅಚಲೇಶ್ವರನಿಗೆ ಪ್ರದಕ್ಷಿಣೆ ಮಾಡುತ್ತಿದ್ದಿತು.

೮-೯. ಆದರೆ ಆ ಪಕ್ಷಿಜಾತಿಯಲ್ಲಿ ಜನಿಸಿದ ಗಿಣಿಯು ಭಕ್ತಿಯಿಂದ ಪ್ರದಕ್ಷಿಣೆ ಮಾಡುತ್ತಿರಲಿಲ್ಲ, ತರುವಾಯ ಬಹುಕಾಲದ ಮೇಲೆ ಮೃತವಾದ ಆ ಗಿಣಿಯು ರಾಜನ ವಂಶದಲ್ಲಿ ಜನಿಸಿ ಪೂರ್ವಜನ್ಮದ ಸ್ಮರಣೆಯುಳ್ಳವನೂ, ಶತ್ರುಗಳನ್ನು ನಾಶಗೊಳಿಸುವವನೂ ಆದ ವೇಣುವೆಂಬ ದೊರೆಯಾಯಿತು.

೧೦. ಆ ವೇಣುರಾಜನು ಹಿಂದಿನ ಜನ್ಮದಲ್ಲಿ ತಾನು ಮಾಡಿದ ಪ್ರದಕ್ಷಿಣೆಯ ಪ್ರಭಾವವನ್ನು ಸ್ಮರಿಸಿ ಅಚಲೇಶ್ವರನನ್ನು ಹೊಂದಿ ಪ್ರದಕ್ಷಿಣೆ ಮಾಡುತ್ತಿದ್ದನು.

೧೧-೧೪. ದೊರೆಯೆ! ಅವನು ಹಗಲು ರಾತ್ರಿ ತಪಸ್ಸು, ನೈವೇದ್ಯ, ಪುಷ್ಪ, ಧೂಪಗಳೇ ಮೊದಲಾದ ಇತರ ಕಾರ್ಯಗಳಲ್ಲಿ ಆಸಕ್ತನಾಗದೆ ಪ್ರದಕ್ಷಿಣೆ ಮಾತ್ರದಲ್ಲಿ ನಿರತನಾದನು. ಕೆಲವು ಕಾಲದ ಮೇಲೆ ಅಲ್ಲಿಗೆ ನಾರದ, ಶೌನಕ, ಹಾರೀತ, ದೇವಲ,

ನಾರದಃ ಶೌನಕಶ್ಚೈವ ಹಾರೀತೋ ದೇವಲಸ್ತಥಾ ।
ಗಾಲವಃ ಕಪಿಲೋ ನಂದಃ ಸುಹೋತ್ರಃ ಕಶ್ಯಪೋ ನೃಪಃ ॥ ೧೩ ॥
ಏತೇ ಚಾನ್ಯೇ ಚ ಬಹವೋ ದೇವವ್ರತಪರಾಯಣಾಃ ।
ಕೇಚಿತ್ಸ್ನಾನಂ ಕಾರಯಂತಿ ತಸ್ಯ ಲಿಂಗಸ್ಯ ಭಕ್ತಿತಃ ॥ ೧೪ ॥
ಅನ್ಯೇ ಚ ವಿವಿಧಾಂ ಪೂಜಾಂ ಜಪಮನ್ಯೇ ಸಮಾಹಿತಾಃ ।
ಏಕೇ ನೃತ್ಯಂತಿ ರಾಜೇಂದ್ರ ಗಾಯಂತಿ ಚ ತಥಾ ಪರೇ ॥ ೧೫ ॥
ಬಲಿಮನ್ಯೇ ಪ್ರಯಚ್ಛಂತಿ ಸ್ತುತಿಂ ಕುರ್ವಂತಿ ಚಾಪರೇ ।
ಅಥಾಶ್ಚರ್ಯಂ ಪರಂ ದೃಷ್ಟ್ವಾ ಪ್ರದಕ್ಷಿಣಾಪರಂ ನೃಪಂ ॥ ೧೬ ॥
ಪರಂ ಕೌತುಕಮಾಪನ್ನಾ ವಾಕ್ಯಮೇತದಥಾಬ್ರುವನ್ ।
ಪ್ರದಕ್ಷಿಣಾಸಮುದ್ಭೂತಂ ಕಾರಣಂ ಜ್ಞಾತುಮಿಚ್ಛವಃ ॥ ೧೭ ॥

ಋಷಯ ಊಚುಃ :—

ಕಸ್ಮಾತ್ತ್ವಂ ಪಾರ್ಥಿವಶ್ರೇಷ್ಠ ಪ್ರದಕ್ಷಿಣಾಪರಃ ಸದಾ ।
ದೇವಸ್ಯಾಸ್ಯ ವಿಶೇಷೇಣ ಸತ್ಯಂ ನೋ ವಕ್ತುಮರ್ಹಸಿ ॥ ೧೮ ॥
ನ ದದಾಸಿ ಜಲಂ ಲಿಂಗೇ ಪ್ರಭೂತಂ ಸುಮನೋಹರಂ ।
ಪುಷ್ಪಧೂಪಾದಿಕಂ ವಾಥ ಸ್ತೋತ್ರಾಣಿ ವಿವಿಧಾನಿ ಚ ॥ ೧೯ ॥

---

ಗಾಲವ, ಕಪಿಲ, ನಂದ, ಸುಹೋತ್ರ, ಕಶ್ಯಪ ಮೊದಲಾದ ವೇದವ್ರತನಿರತರಾದ ಬಹುಮಂದಿ ಮುನಿಗಳು ಅಲ್ಲಿಗೆ ಬಂದರು. ಅವರಲ್ಲಿ ಕೆಲವರು ಆ ಲಿಂಗಕ್ಕೆ ಭಕ್ತಿಯಿಂದ ಅಭಿಷೇಕಮಾಡಿದರು.

೧೫. ಇತರರು ಬಗೆ ಬಗೆಯ ಪೂಜೆಯನ್ನೂ, ಜಪವನ್ನೂ ಮಾಡಿದರು. ಇನ್ನು ಕೆಲವರು ಕುಣಿದರು. ಮತ್ತೆ ಕೆಲವರು ಗಾನಮಾಡಿದರು.

೧೬–೧೭. ಕೆಲವರು ಬಲಿಯನ್ನಿತ್ತರು. ಕೆಲವರು ಸ್ತುತಿಸಿದರು. ಬಳಿಕ ಅವರು ಪ್ರದಕ್ಷಿಣೆ ಮಾಡುತ್ತಿರುವ ದೊರೆಯನ್ನು ಕಂಡು ಅತ್ಯಾಶ್ಚರ್ಯದಿಂದಲೂ ಕುತೂಹಲದಿಂದಲೂ ಅವನು ಪ್ರದಕ್ಷಿಣೆಮಾಡಲು ಕಾರಣವನ್ನು ತಿಳಿಯಲೋಸುಗ ಇಂತೆಂದರು.

೧೮. ಋಷಿಗಳು ಹೇಳುತ್ತಾರೆ:—ದೊರೆಯೆ! ನೀನು ಯಾವಾಗಲೂ ಈ ಅಚಲೇಶ್ವರನಿಗೆ ಏಕೆ ಪ್ರದಕ್ಷಿಣೆ ಮಾಡುತ್ತಿರುವೆ. ನಿಜವಾಗಿ ಹೇಳು.

೧೯. ಲಿಂಗಕ್ಕೆ ಮನೋಹರ ಜಲದಿಂದ ಅಭಿಷೇಕಮಾಡುವುದಿಲ್ಲ, ಪುಷ್ಪ ಧೂಪ ಮೊದಲಾದುವುಗಳನ್ನರ್ಪಿಸುವುದಿಲ್ಲ. ನಾನಾ ಬಗೆಯ ಸ್ತೋತ್ರಗಳಿಂದ ಶಂಕರನನ್ನು ಸ್ತುತಿಸುವುದಿಲ್ಲ.

ಸಮರ್ಥೋಽಸಿ ತಥಾನ್ಯೇಷಾಂ ದಾನಾನಾಂ ತ್ವಂ ಮಹೀಪತೇ ।
ಏತನ್ನಃ ಕೌತುಕಂ ಸರ್ವಂ ಯಥಾವದ್ವಕ್ತುಮರ್ಹಸಿ ॥ ೨೦ ॥

ವೇಣುರುವಾಚ :—

ಯದಹಂ ಸಂಪ್ರವಕ್ಷ್ಯಾಮಿ ಶ್ರೂಯತಾಂ ದ್ವಿಜಸತ್ತಮಾಃ ।
ಪೂರ್ವದೇಹಾಂತರೇ ವೃತ್ತಂ ಸರ್ವಂ ಸತ್ಯಂ ವಿಶೇಷತಃ ॥ ೨೧ ॥
ಪ್ರಾಸಾದೇಽಸ್ಮಿನ್ಪುರಾ ಪಕ್ಷೀ ಶುಕೋಽಹಂ ಸ್ಥಿತವಾಂಸ್ತದಾ ।
ಕೃತವಾಂಶ್ಚ ತದಾ ದೇವಂ ಪ್ರದಕ್ಷಿಣಾಮಹರ್ನಿಶಂ ॥ ೨೨ ॥
ಕೃಪಯಾಽಸ್ಯ ಪ್ರಭಾವಾಚ್ಚ ಜಾತೋ ಜಾತಿಸ್ಮರಸ್ತ್ವಹಂ ।
ಅಧುನಾ ಪರಯಾ ಭಕ್ತ್ಯಾ ಯತ್ಕರೋಮಿ ಪ್ರದಕ್ಷಿಣಾಂ ॥ ೨೩ ॥
ನ ಜಾನೇ ಕಿಂ ಫಲಂ ಮೇಽದ್ಯ ದೇವಸ್ಯಾಸ್ಯ ಪ್ರಸಾದತಃ ।
ಏತಸ್ಮಾತ್ಕಾರಣಾಚ್ಚಾಹಂ ನಾನ್ಯತ್ಕಿಂಚಿತ್ಕರೋಮಿ ಭೋಃ ॥ ೨೪ ॥

ಪುಲಸ್ತ್ಯ ಉವಾಚ :—

ವೇಣುವಾಕ್ಯಂ ತತಃ ಶ್ರುತ್ವಾ ಮುನಯಃ ಸಂಶಿತವ್ರತಾಃ ।
ವಿಸ್ಮಯೋತ್ಫುಲ್ಲನಯನಾಃ ಸಾಧುಸಾಧ್ವಿತಿ ಚಾಬ್ರುವನ್ ॥ ೨೫ ॥

---

೨೦. ದೊರೆಯೆ ! ನೀನು ಹಾಗೆಯೇ ಇತರ ದಾನಗಳನ್ನೀಯಲೂ ಶಕ್ತನಾಗಿರುವೆ. ಈ ವಿಷಯದಲ್ಲಿ ನಮಗೆ ಬಹಳ ಕುತೂಹಲವುಂಟಾಗಿದೆ. ಎಲ್ಲವನ್ನೂ ನೀನು ಹೇಳಲರ್ಹನಾಗಿರುವೆ.

೨೧. ವೇಣುವು ಹೇಳುತ್ತಾನೆ :—ದ್ವಿಜವರ್ಯರೆ ! ನನ್ನ ಹಿಂದಿನ ಜನ್ಮದಲ್ಲಿ ನಡೆದ ಒಂದು ಸತ್ಯವಾದ ಸಮಾಚಾರವನ್ನು ಹೇಳುವೆನು. ಕೇಳಿರಿ.

೨೨. ನಾನು ಹಿಂದೆ ದೇವಾಲಯದಲ್ಲಿ ಗಿಣಿಯಾಗಿ ವಾಸಮಾಡುತ್ತ ಅಚಲೇಶ್ವರನನ್ನು ಹಗಲು ರಾತ್ರಿ ಪ್ರದಕ್ಷಿಣೆ ಮಾಡುತ್ತಿದ್ದೆನು.

೨೩. ಈಗ ನಾನು ಈ ಶಂಕರನ ದಯೆಯಿಂದಲೂ, ಪ್ರಭಾವದಿಂದಲೂ ಪೂರ್ವಜಾತಿ ಸ್ಮರಣೆಯುಳ್ಳವನಾಗಿ ಅತಿಶಯಭಕ್ತಿಯಿಂದ ಪ್ರದಕ್ಷಿಣೆ ಮಾಡುವೆನು.

೨೪. ಈ ಅಚಲೇಶ್ವರನ ಅನುಗ್ರಹದಿಂದ ಈಗ ನನಗೆ ಯಾವ ಫಲವುಂಟಾಗುವುದೆಂಬುದನ್ನು ಅರಿಯೆನು. ನಾನು ಈ ಕಾರಣದಿಂದ ಬೇರೆ ಏನನ್ನೂ ಮಾಡುವುದಿಲ್ಲ.

೨೫ ಪುಲಸ್ತ್ಯನು ಹೇಳುತ್ತಾನೆ:—ಬಳಿಕ ತೀಕ್ಷ್ಣವ್ರತವುಳ್ಳ ಮುನಿಗಳು ವೇಣುವಾಕ್ಯವನ್ನು ಕೇಳಿ ಆಶ್ಚರ್ಯದಿಂದ ಒಳ್ಳೆಯದೆಂದರು.

ತತಃ ಪ್ರದಕ್ಷಿಣಪರಾಃ ಸರ್ವೇ ಸರ್ವೇ ತತ್ರ ಮಹರ್ಷಯಃ ।
ಬಭೂವುರ್ಮುನಯಃ ಸರ್ವೇ ಶ್ರದ್ಧಯಾ ಪರಯಾ ಯುತಾಃ ॥ ೨೬ ॥
ಸೋಽಪಿ ರಾಜಾ ಮಹಾಭಾಗೋ ವೇಣುಃ ಶಂಭೋಃ ಪ್ರಸಾದತಃ ।
ಶಾಶ್ವತಂ ಸ್ಥಾನಮಾಪನ್ನೋ ದುರ್ಲಭಂ ತ್ರಿದಶೈರಪಿ ॥ ೨೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಅಚಲೇಶ್ವರಪ್ರಭಾವವರ್ಣನಂ ನಾಮ
ಸಪ್ತಮೋಽಧ್ಯಾಯಃ

---

೨೬. ಅನಂತರ ಆ ಮುನಿಗಳೆಲ್ಲ ಅತಿಶ್ರದ್ಧೆಯಿಂದ ಅಚಲೇಶ್ವರನ ಪ್ರದಕ್ಷಿಣೆಯಲ್ಲಿ ನಿರತರಾದರು.

೨೭. ಮಹಾತ್ಮನಾದ ವೇಣುರಾಜನು ಶಂಕರನ ಅನುಗ್ರಹದಿಂದ ದೇವತೆಗಳಿಗೂ ದುರ್ಲಭವಾದ ಶಾಶ್ವತ ಸ್ಥಾನವನ್ನು ಪಡೆದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡ ಮೂರನೆಯ ಅರ್ಬುದಖಂಡದಲ್ಲಿ
ಅಚಲೇಶ್ವರಪ್ರಭಾವವರ್ಣನವೆಂಬ
ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಷ್ಟಮೋಽಧ್ಯಾಯಃ

### ಭದ್ರಕರ್ಣಹ್ರದತ್ರಿನೇತ್ರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಭದ್ರಕರ್ಣಂ ಮಹಾಹ್ರದಂ ।
ತ್ರಿನೇತ್ರಾಭಾಃ ಶಿಲಾ ಯತ್ರ ದೃಶ್ಯಂತೇಽದ್ಯಾಪಿ ಭೂರಿಶಃ ॥ ೧ ॥
ತಸ್ಯೈವ ಪಶ್ಚಿಮೇ ಭಾಗೇ ಲಿಂಗಮಸ್ತಿ ಪಿನಾಕಿನಃ ।
ಯಂ ದೃಷ್ಟ್ವಾ ಮಾನವಸ್ತತ್ರ ತ್ರಿನೇತ್ರಸದೃಶೋ ಭವೇತ್ ॥ ೨ ॥
ಭದ್ರಕರ್ಣಗಣೋನಾಮ ಪುರಾಸೀಚ್ಛಿವವಲ್ಲಭಃ ।
ತೇನಾತ್ರ ಸ್ಥಾಪಿತಂ ಲಿಂಗಂ ಹ್ರದಶ್ಚೈವ ವಿನಿರ್ಮಿತಃ ॥ ೩ ॥
ಕೇನಚಿತ್ತ್ವಥ ಕಾಲೇನ ಸಂಗ್ರಾಮೇ ದಾನವೈಃ ಸಹ ।
ಯುಯುಧೇ ಪುರತಃ ಶಂಭೋರ್ನಾನಾಗಣಸಮನ್ವಿತಃ ॥ ೪ ॥
ನಷ್ಟೇ ಸ್ಕಂದೇ ಹತೇ ಸೈನ್ಯೇ ವೀರಭದ್ರೇ ಪರಾಜಿತೇ ।
ಗತಾಸ್ತೇ ಭಯಸಂತ್ರಸ್ತಾ ಮಹಾಕಾಲೇ ವಿನಿರ್ಜಿತೇ ॥ ೫ ॥

---

### ಕನ್ನಡದ ಅನುವಾದ

### ಭದ್ರಕರ್ಣಹ್ರದತ್ರಿನೇತ್ರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ನೃಪೇಂದ್ರ! ತರುವಾಯ ಭದ್ರಕರ್ಣ ಮಹಾಹ್ರದದೆಡೆಗೆ ಹೋಗಬೇಕು ಅಲ್ಲಿ ಈಗಲೂ ತ್ರಿನೇತ್ರಶಂಕರನಂತಿರುವ ಅನೇಕ ಶಿಲೆಗಳು ಕಾಣುತ್ತಿರುವುವು.

೨. ಅದರ ಪಶ್ಚಿಮದಲ್ಲಿ ಶಂಕರ ಲಿಂಗವಿರುವುದು. ಆ ಲಿಂಗವನ್ನು ನೋಡಿದ ಮಾನವನು ಶಂಕರನಂತಾಗುವನು.

೩. ಹಿಂದೆ ಭದ್ರಕರ್ಣನೆಂಬ ಶಿವಪ್ರಿಯನಾದ ಪ್ರಮಥಗಣನೊಬ್ಬನಿದ್ದನು. ಅವನು ಇಲ್ಲಿ ಲಿಂಗವನ್ನು ಪ್ರತಿಷ್ಠೆಮಾಡಿ ಹ್ರದವನ್ನು ನಿರ್ಮಿಸಿದನು.

೪: ಒಂದಾನೊಂದು ಕಾಲದಲ್ಲಿ ಅವನು ಅನೇಕ ಗಣಗಳೊಡನೆ ಶಿವನ ಮುಂದೆ ದಾನವರೊಡನೆ ಯುದ್ಧಮಾಡಿದನು.

೫. ಆ ಯುದ್ಧದಲ್ಲಿ ಷಣ್ಮುಖನು ಅದೃಶ್ಯನಾಗಲು ಸೈನ್ಯವು ನಾಶವಾಗಲು ವೀರಭದ್ರ ಮಹಾಕಾಲರು ಸೋತು ಹೋಗಲು ಆ ಗಣಗಳೆಲ್ಲ ಭಯದಿಂದ ಹೊರಟು ಹೋದುವು.

ಬಲವಾನ್ನಮುಚಿರ್ನಾಮ ದಾನವೋ ಬಲವತ್ತರಃ ।
ಖಡ್ಗಚರ್ಮಧರಃ ಶೀಘ್ರಂ ಮಹೇಶ್ವರಮುಪಾದ್ರವತ್ ॥ ೭ ॥
ಭದ್ರಕರ್ಣಸ್ತು ತಂ ದೃಷ್ಟ್ವಾ ದಾನವಂ ತದನಂತರಂ ।
ಪತಂತಂ ಸಂಮುಖಸ್ತಸ್ಯ ತಿಷ್ಠತಿಷ್ಠೇತಿ ಚಾಬ್ರವೀತ್ ॥ ೭ ॥
ಛಿತ್ವಾಽಸಿಮಸಿನಾ ತಸ್ಯ ಚರ್ಮ ಚಾಪಿ ಮಹಾಬಲಃ ।
ಸ್ತನಯೋರಂತರೇ ದೈತ್ಯಂ ಕೋಪಾವಿಷ್ಟೋಽಹನನ್ನೃಪ ॥ ೮ ॥
ಅಥಾಸೌ ನಿಹತಸ್ತೇನ ಪ್ರವಿಶ್ಯ ವಿಪುಲಂ ತಮಃ ।
ನಿಪಪಾತ ಮಹೀಪೃಷ್ಠೇ ವಾಯುಭಗ್ನ ಇವ ದ್ರುಮಃ ॥ ೯ ॥
ವಧಂ ಪ್ರಾಪ್ತಸ್ತು ದೈತ್ಯೋಽಸೌ ನತ್ವಾ ಹರಮಸೌ ಸ್ಥಿತಃ ।
ಸತ್ಯೇ ಸ್ಥಿತಂ ಚ ತಂ ದೃಷ್ಟ್ವಾ ತತಸ್ತುಷ್ಟೋ ಮಹೇಶ್ವರಃ ॥ ೧೦ ॥

ಶ್ರೀ ಭಗವಾನುವಾಚ :—

ತವ ವೀರ್ಯೇಣ ಸಂತುಷ್ಟೋ ಧರ್ಮೇಣ ಚ ವಿಶೇಷತಃ ।
ವರಂ ವರಯ ಭದ್ರಂ ತೇ ನಿತ್ಯಂ ಯೋ ಹೃದಯೇ ಸ್ಥಿತಃ ॥ ೧೧ ॥

---

೭. ಆಗ ನಮುಚಿಯೆಂಬ ದಾನವನು ಸೈನ್ಯದೊಡನೆ ಗುರಾಣಿ, ಕತ್ತಿಗಳನ್ನು ಹಿಡಿದುಕೊಂಡು ಶಿವನೆಡೆಗೆ ಓಡಿಬಂದನು.

೭. ಭದ್ರಕರ್ಣನು ಎದುರಾಗಿ ಬರುತ್ತಿರುವ ಆ ನಮುಚಿಯನ್ನು ನೋಡಿ ನಿಲ್ಲು ನಿಲ್ಲು ಎಂದನು.

೮. ಮಹಾಬಲಿಷ್ಠನಾದ ಅವನು ಆ ನಮುಚಿಯ ಕತ್ತಿಯನ್ನೂ ಗುರಾಣಿಯನ್ನೂ ಕತ್ತಿಯಿಂದ ಕತ್ತರಿಸಿ ಅವನ ಎದೆಯ ಮೇಲೆ ಕೋಪದಿಂದ ಹೊಡೆದನು.

೯. ಬಳಿಕ ಆ ಭದ್ರಕರ್ಣನಿಂದ ಹೊಡೆಯಲ್ಪಟ್ಟ ನಮುಚಿಯು ಮೂರ್ಛೆಗೊಂಡು ಗಾಳಿಯಿಂದ ಮುರಿದ ಮರದಂತೆ ನೆಲದಮೇಲೆ ಬಿದ್ದನು.

೧೦. ಹೀಗೆ ಈ ನಮುಚಿದೈತ್ಯನು ಹತನಾಗಲು ಭದ್ರಕರ್ಣನು ಶಿವನನ್ನು ವಂದಿಸಿ ನಿಂತಿರಲು ಸತ್ಯವಂತನಾದ ಇವನನ್ನು ನೋಡಿ ಮಹೇಶ್ವರನು ಸಂತುಷ್ಟನಾದನು.

೧೧. ಶ್ರೀ ಭಗವಂತನು ಹೇಳುತ್ತಾನೆ :—ಭದ್ರಕರ್ಣ ! ನಿನ್ನ ಪರಾಕ್ರಮದಿಂದಲೂ, ಧರ್ಮದಿಂದಲೂ ನಾನು ಸಂತುಷ್ಟನಾಗಿರುವೆನು. ನಿನಗಭೀಷ್ಟವಾದ ವರವನ್ನು ಕೇಳಿಕೊ.

ಭದ್ರಕರ್ಣ ಉವಾಚ :—
ಯನ್ಮಯಾ ಸ್ಥಾಪಿತಂ ಲಿಂಗಮರ್ಬುದೇ ಸುರಸತ್ತಮ ।
ಅತ್ರಾಸ್ತು ತವ ಸಾಂನಿಧ್ಯಂ ಹ್ರದೇಽಸ್ಮಿಂಶ್ಚ ಸ್ಥಿರೋ ಭವ ॥ ೧೨ ॥
ಶ್ರೀ ಭಗವಾನುವಾಚ :—
ಮಾಘಮಾಸೇ ಚತುರ್ದಶ್ಯಾಂ ಕೃಷ್ಣಪಕ್ಷೇ ಸದಾ ಮಮ ।
ಸಾಂನಿಧ್ಯಂ ಚ ವಿಶೇಷೇಣ ಹ್ರದೇ ಲಿಂಗೇ ಭವಿಷ್ಯತಿ ॥ ೧೩ ॥
ಭದ್ರಕರ್ಣಹ್ರದೇ ಸ್ನಾತ್ವಾ ತ್ರಿನೇತ್ರಂ ಯಃ ಸಮಾಹಿತಃ ।
ದ್ರಕ್ಷ್ಯತೇ ಸ ತು ಮೇ ಸ್ಥಾನಂ ಶಾಶ್ವತಂ ಯಾಸ್ಯತಿ ಧ್ರುವಂ ॥ ೧೪ ॥
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ಪೂಜಯಿತ್ವಾ ಚ ತಲ್ಲಿಂಗಂ ಶಿವಲೋಕಂ ಸ ಗಚ್ಛತಿ ॥ ೧೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಭದ್ರಕರ್ಣಹ್ರದತ್ರಿನೇತ್ರಮಾಹಾತ್ಮ್ಯವರ್ಣನಂನಾಮ
। ಅಷ್ಟಮೋಽಧ್ಯಾಯಃ ॥

---

೧೨. ಭದ್ರಕರ್ಣನು ಹೇಳುತ್ತಾನೆ :—ಸುರೋತ್ತಮ ! ನಾನು ಈ ಅರ್ಬುದ ತೀರ್ಥದಲ್ಲಿ ಸ್ಥಾಪಿಸಿರುವ ಲಿಂಗದಲ್ಲಿ ನೀನು ಯಾವಾಗಲೂ ಸನ್ನಿಹಿತನಾಗಿರು. ಈ ಮಡುವಿನಲ್ಲಿಯೂ ಸ್ಥಿರವಾಗಿ ನೆಲಸು.

೧೩. ಶ್ರೀ ಭಗವಂತನು ಹೇಳುತ್ತಾನೆ :—ಮಾಘಕೃಷ್ಣ ಚತುರ್ದಶೀ ದಿನ ಈ ಹ್ರದದಲ್ಲಿಯೂ, ಲಿಂಗದಲ್ಲಿಯೂ ವಿಶೇಷವಾಗಿ ನಾನು ಸನ್ನಿಹಿತನಾಗಿರುವೆನು.

೧೪. ಭದ್ರಕರ್ಣ ! ಈ ಹ್ರದದಲ್ಲಿ ಮಿಂದು ಸಾವಧಾನ ಮನಸ್ಸಿನಿಂದ ನನ್ನನ್ನು ನೋಡುವ ಮಾನವನು ನಿಶ್ಚಯವಾಗಿಯೂ ಶಾಶ್ವತ ಸ್ಥಾನಕ್ಕೆ ತೆರಳುವನು.

೧೫. ಆದ್ದರಿಂದ ಸಕಲ ಪ್ರಯತ್ನದಿಂದ ಅಲ್ಲಿ ಮಿಂದು ಆ ಲಿಂಗವನ್ನು ಪೂಜಿಸಿದವನು ಶಿವಲೋಕಕ್ಕೆ ಹೋಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಶ್ರೀಸ್ಕಾಂದಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಭದ್ರಕರ್ಣಹ್ರದತ್ರಿನೇತ್ರಮಾಹಾತ್ಮ್ಯ ವರ್ಣನವೆಂಬ
ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ನವಮೋಽಧ್ಯಾಯಃ

### ಕೇದಾರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಕೇದಾರಮಿತಿ ವಿಖ್ಯಾತಂ ಸರ್ವಪಾಪಹರಂ ನೃಣಾಂ ॥ ೧ ॥
ಯತ್ರ ಮಂದಾಕಿನೀ ಪುಣ್ಯಾ ಸರಸ್ವತ್ಯಾ ಸಮಾಗತಃ ।
ತತ್ರ ಸ್ನಾತೋ ನರೋ ರಾಜನ್ ಮುಚ್ಯತೇ ಸರ್ವಕಿಲ್ಬಿಷೈಃ ॥ ೨ ॥
ಶೃಣು ರಾಜನ್ಯಥಾವೃತ್ತಮಿತಿಹಾಸಂ ಪುರಾತನಂ ।
ಋಷಿಭಿರ್ಬಹುಧಾ ಗೀತಮರ್ಬುದೇ ಪರ್ವತೋತ್ತಮೇ ॥ ೩ ॥
ಅಜಪಾಲೋ ನೃಪಶ್ರೇಷ್ಠಃ ಸೂರ್ಯವಂಶಸಮುದ್ಭವಃ ।
ಸಪ್ತದ್ವೀಪವತೀಂ ಪೃಥ್ವೀಂ ಸ ಪಾತಿ ನಾತ್ರ ಸಂಶಯಃ ॥ ೪ ॥

---

### ಕನ್ನಡದ ಅನುವಾದ

### ಕೇದಾರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ರಾಜಶ್ರೇಷ್ಠನೇ ! ಮೂರುಲೋಕಗಳಲ್ಲಿಯೂ ಪ್ರಸಿದ್ಧಹೊಂದಿಯೂ, ಮಾನವರ ಸಕಲ ಪಾಪಗಳನ್ನೂ ಹೋಗಲಾಡಿಸುವ ಕೇದಾರವೆಂಬ ತೀರ್ಥವನ್ನು ಹೊಂದಬೇಕು.

೨. ಈ ಕೇದಾರದಲ್ಲಿ ಪುಣ್ಯತಮಳಾದ ಗಂಗೆಯು ಸರಸ್ವತಿಯೊಂದಿಗೆ ಬಂದು ಸೇರಿರುವಳು. ದೊರಯೆ ! ಇಲ್ಲಿ ಸ್ನಾನಮಾಡಿದ ಮನುಷ್ಯನು ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದುವನು.

೩. ದೊರೆಯೆ ! ಈ ಅರ್ಬುದ ಪರ್ವತದಲ್ಲಿರುವ ಈ ತೀರ್ಥದಲ್ಲಿ ನಡೆದ ಒಂದು ಕಥೆಯನ್ನು ಋಷಿಗಳು ಈ ರೀತಿ ಹೇಳಿರುತ್ತಾರೆ.

೪-೬. ಸೂರ್ಯವಂಶದಲ್ಲಿ ಹುಟ್ಟಿದ ಅಜಪಾಲನೆಂಬ ಅರಸು, ಏಳು ದ್ವೀಪಗಳಿಂದ ಕೂಡಿದ ಭೂಮಂಡಲಗಳನ್ನು ಆಳುತ್ತಿದ್ದನು. ಇದರಲ್ಲಿ ಸಂಶಯವಿಲ್ಲ. ಅವನಿಗೆ, ಆನೆಗಳಾಗಲಿ, ಕಾಲಾಳುಗಳಾಗಲಿ, ಕುದುರೆಗಳಾಗಲಿ, ರಥಗಳಾಗಲಿ, ಕೋಶವಾಗಲಿ ಯಾವುದೂ ಇರಲಿಲ್ಲ. ಪ್ರಜೆಗಳಿಂದ ಹೆಚ್ಚಾಗಿ ಕಪ್ಪಕಾಣಿಕೆ

ನ ಹಸ್ತಿನೋ ನ ಪಾದಾತಾ ನ ಚಾಶ್ವಾಸ್ತಸ್ಯ ಭೂಪತೇಃ ।
ನ ರಥಾಶ್ಚ ಮಹಾರಾಜ ನ ಕೋಶಾಶ್ಚ ತಥಾವಿಧಾಃ ॥ ೫ ॥
ನ ಗೃಹ್ಣಾತಿ ಕರಂ ರಾಜನ್ಪ್ರಜಾಭ್ಯೋಽಥಾಧಿಕಂ ನೃಪ ।
ರಾಜ್ಯಂ ಸ ಈದೃಶಂ ಚಕ್ರೇ ಸರ್ವಲೋಕಹಿತೇ ರತಃ ॥ ೬ ॥
ಜಾತಾಪರಾಧೋ ಭೂಪೃಷ್ಠೇ ಜಾಯತೇ ಚೇತ್ಕಥಂಚನ ।
ತಂ ಗತ್ವಾ ನಿಗ್ರಹಂ ತಸ್ಯ ಚಕ್ರುಃ ಶಸ್ತ್ರಾಣಿ ತತ್ಕ್ಷಣಾತ್ ॥ ೭ ॥
ವಿನಮಸ್ಯ ನರೇಂದ್ರಸ್ಯ ವರ್ತಮಾನಸ್ಯ ಭೂತಲೇ ।
ಸುಖೇನ ರಮತೇ ಲೋಕೋ ರಾಜ್ಯೇ ನಿಹತಕಂಟಕೇ ॥ ೮ ॥
ಕಾಮಂ ವರ್ಷತಿ ಪರ್ಜನ್ಯಃ ಸಸ್ಯಾನಿ ರಸವಂತಿ ಚ ।
ಗಾವಃ ಪ್ರಭೂತದುಗ್ಧಾಶ್ಚ ವಿದ್ಯಮಾನೇ ನರಾಧಿಪೇ ॥ ೯ ॥
ಕೇನಚಿತ್ತ್ವಥ ಕಾಲೇನ ವಸಿಷ್ಠೋ ಭಗವಾನ್ಮುನಿಃ ।
ತೀರ್ಥಯಾತ್ರಾಪ್ರಸಂಗೇನ ತಸ್ಯ ಗೇಹಮುಪಾಗತಃ ॥ ೧೦ ॥
ತಂ ದೃಷ್ಟ್ವಾ ಪೂಜಯಾಮಾಸ ಶಾಸ್ತ್ರದೃಷ್ಟೇನ ವರ್ತ್ಮನಾ ।
ಪ್ರತ್ಯುತ್ಥಾನಾಭಿವಾದಾಭ್ಯಾಮರ್ಘ್ಯಪಾದ್ಯಾದಿಭಿಸ್ತಥಾ ॥ ೧೧ ॥

---

ಗಳನ್ನೂ, ತೆಗೆದುಕೊಳ್ಳುತ್ತಿರಲಿಲ್ಲ. ಎಲ್ಲರ ಹಿತಕ್ಕಾಗಿ ಸುಖವಾಗಿ ರಾಜ್ಯಭಾರಮಾಡುತ್ತಿದ್ದನು.

೭. ಯಾರಾದರೂ ಭೂಮಿಯಲ್ಲಿ ತಪ್ಪುಮಾಡಿದರೆ, ಆಯುಧಗಳು ತಾವೇ ಅವರಲ್ಲಿಗೆ ಹೋಗಿ ಅವರನ್ನು ನಿಗ್ರಹಿಸುತ್ತಿದ್ದವು.

೮-೯. ಹೀಗೆ ಆ ದೊರೆಯಿರಲಾಗಿ, ಶತ್ರುಗಳಿಲ್ಲದೇ ರಾಜ್ಯವು ಸುಖವಾಗಿತ್ತು ಪರ್ಜನ್ಯನು ಯಾವಾಗಲೂ ಬೇಕಾದ ಮಳೆಯನ್ನು ಸುರಿಸುತ್ತಿದ್ದನು. ಸಸ್ಯಗಳು ಚೆನ್ನಾಗಿ ಬೆಳೆದು ರಸವತ್ತಾದುವು. ಗೋವುಗಳು ಹೆಚ್ಚಾಗಿ ಹಾಲನ್ನು ಕೊಡುತ್ತಿದ್ದುವು.

೧೦. ಒಂದಾನೊಂದು ದಿನ ಪೂಜ್ಯನಾದ ವಸಿಷ್ಠಮುನಿಯು ತೀರ್ಥಯಾತ್ರೆಯ ಕ್ರಮದಿಂದ ಅವನ ಮನೆಗೆ ಬಂದನು.

೧೧. ಆ ದೊರೆಯು ಆ ಮುನಿಯನ್ನು ಕಂಡು ಅವನನ್ನು ಶಾಸ್ತ್ರವಿಧಿಯಂತೆ ಅಭ್ಯುತ್ಥಾನ, ನಮಸ್ಕಾರ, ಅರ್ಘ್ಯ, ಪಾದ್ಯ ಇವೇ ಮೊದಲಾದವುಗಳಿಂದ ಪೂಜಿಸಿದನು.

ಏವಂ ಸಂಪೂಜಿತಸ್ತೇನ ಭಕ್ತ್ಯಾ ಪರಮಯಾ ನೃಪ ।
ಸುಖೋಪವಿಷ್ಟೋ ವಿಶ್ರಾಂತೋ ವಸಿಷ್ಠೋ ಮುನಿಸತ್ತಮಃ ।
ರಾಜರ್ಷೀಣಾಂ ಕಥಾಶ್ಚಕ್ರೇ ದೇವರ್ಷೀಣಾಂ ತಥೈವ ಚ ॥ ೧೨ ॥
ತತಃ ಕಥಾವಸಾನೇ ತು ಕಸ್ಮಿಂಶ್ಚಿನ್ನೃಪಸತ್ತಮ ।
ಪಪ್ರಚ್ಛ ವಿನಯೋಪೇತಸ್ತಂ ಮುನಿಂ ಶಂಸಿತವ್ರತಂ ॥ ೧೩ ॥

ಅಜಪಾಲ ಉವಾಚ :—

ಅತೀತಾನಾಗತಂ ವಿಪ್ರ ವರ್ತಮಾನಂ ತಥೈವ ಚ ।
ತ್ವಂ ವೇತ್ಸಿ ಸಕಲಂ ಬ್ರಹ್ಮಂಸ್ತಪಶ್ಚರ್ಯಾಪ್ರಭಾವತಃ ॥ ೧೪ ॥
ಕೌತುಕಂ ಹೃದಿ ಮೇ ಜಾತಂ ವರ್ತತೇ ಮುನಿಪುಂಗವ ।
ಪ್ರಸಾದಃ ಕ್ರಿಯತಾಂ ಮಹ್ಯಂ ಕಥಯಸ್ವ ಪ್ರಸಾದತಃ ॥ ೧೫ ॥

ವಸಿಷ್ಠ ಉವಾಚ :—

ಬ್ರೂಹಿ ಪಾರ್ಥಿವಶಾರ್ದೂಲ ಯತ್ತೇ ಮನಸಿ ವರ್ತತೇ ।
ಕಥಯಿಷ್ಯಾಮಿ ತತ್ಸರ್ವಂ ಯದ್ಯಪಿ ಸ್ಯಾತ್ಸುದುರ್ಲ್ಲಭಂ ॥ ೧೬ ॥

ರಾಜೋವಾಚ :—

ಕೇನ ಕರ್ಮವಿಪಾಕೇನ ಮಮೈತದ್ರಾಜ್ಯಮುತ್ತಮಂ ।
ನಿಷ್ಕಂಟಕಂ ಸದಾ ಕ್ಷೇಮಂ ಸರ್ವಕಾಮಸಮನ್ವಿತಂ ॥ ೧೭ ॥

---

೧೨. ರಾಜನೆ! ಅವನು ಅತಿ ಭಕ್ತಿಯಿಂದ ಪೂಜಿಸಲು ವಿಶ್ರಾಂತಿಗೊಂಡು ಸುಖವಾಗಿ ಕುಳಿತಿರುವ ವಸಿಷ್ಠಮುನಿವರ್ಯನು ರಾಜರ್ಷಿ, ದೇವರ್ಷಿಗಳ ಕಥೆಗಳನ್ನು ಹೇಳಿದನು.

೧೩. ತರುವಾಯ ಅಜಪಾಲನು ಯಾವುದೊ ಒಂದು ಕಥೆಯ ಕೊನೆಯಲ್ಲಿ ವಿನಿಯದಿಂದ ಪ್ರತಿಯೊದ ಅವನನ್ನು ಹೀಗೆ ಪ್ರಶ್ನೆಮಾಡಿದನು.

೧೪. ಅಜಪಾಲನು ಹೇಳುತ್ತಾನೆ :—ದ್ವಿಜನೆ ! ನೀನು ತಪಸ್ಸಿನ ಸಾಮರ್ಥ್ಯದಿಂದ ಭೂತ, ಭವಿಷ್ಯದ್ವರ್ತಮಾನ ಕಾಲಗಳ ಸಕಲ ವೃತ್ತಾಂತವನ್ನರಿತಿರುವೆ.

೧೫. ಮುನಿವರ್ಯನೆ! ನನಗೆ ಬಹಳ ಕುತೂಹಲವುಂಟಾಗಿದೆ. ಅನುಗ್ರಹಿಸಿ ನನಗೆ ಹೇಳು.

೧೬. ವಸಿಷ್ಠನು ಹೇಳುತ್ತಾನೆ :—ನೃಪವರ್ಯ! ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು. ಅದು ಹೇಳಲಶಕ್ಯವಾಗಿದ್ದರೂ ಹೇಳುವೆನು.

೧೭. ರಾಜನು ಹೇಳುತ್ತಾನೆ :—ನನ್ನೀ ರಾಜ್ಯವು ಯಾವ ಕರ್ಮದ ಪರಿಣಾಮದಿಂದ ಶತ್ರುಗಳಿಲ್ಲದಿರುವುದೂ, ಸಕಲೇಷ್ಟಾರ್ಥಗಳಿಂದ ಕೂಡಿರುವುದೂ ಆಗಿದೆ ?

ನ ದೀನೋ ನ ಚ ದುಃಖಾರ್ತೋ ವ್ಯಾಧಿಗ್ರಸ್ತೋ ನ ಕೋಽಪಿ ಚ ।
ವಿದ್ಯತೇ ಮಮ ರಾಜ್ಯೇ ಚ ನ ದರಿದ್ರೋ ಮಹಾಮುನೇ ॥ ೧೮ ॥
ನಾರೀಯಂ ಮಮ ಸಾಧ್ವೀ ಚ ಪ್ರಾಣೇಭ್ಯೋಽಪಿ ಗರೀಯಸೀ ।
ಮಚ್ಚಿತ್ತಾ ಮದ್ಗತಪ್ರಾಣಾ ನಿತ್ಯಂ ಮಮ ಹಿತೇ ರತಾ ।
ಅನಯಾ ಚಿಂತಿತಂ ಬ್ರಹ್ಮನ್ಸರ್ವಂ ವಿಸ್ತರತೋ ವದ ॥ ೧೯ ॥
ಕಿಂ ದಾನಸ್ಯ ಪ್ರಭಾವೇನ ವ್ರತಯಾಗಸ್ಯ ವಾ ಮುನೇ ।
ತಪಸೋ ವಾ ಮುನಿಶ್ರೇಷ್ಠ ವ್ರತಸ್ಯ ನಿಯಮಸ್ಯ ಚ ॥ ೨೦ ॥
ಜನ್ಮಾಂತರಕೃತಂ ಪುಣ್ಯಂ ಪರಂ ಕೌತೂಹಲಂ ಹಿ ಮೇ ।
ಕಥಯಸ್ವ ಪ್ರಸಾದೇನ ವಿಸ್ತರೇಣ ದ್ವಿಜೋತ್ತಮ ॥ ೨೧ ॥

ವಸಿಷ್ಠ ಉವಾಚ :—

ಶೃಣು ಸರ್ವಂ ಮಹೀಪಾಲ ವಿಸ್ತರೇಣ ಚ ಕಥ್ಯತೇ ।
ನ ಚ ಮನ್ಯುಸ್ತ್ವಯಾ ಕಾರ್ಯೋ ನ ಚ ವ್ರೀಡಾ ಮಹಾಮತೇ ॥ ೨೨ ॥
ಅನ್ಯದೇಹಾಂತರೇ ರಾಜನ್ ಶೂದ್ರಜಾತಿಸಮುದ್ಭವಃ ।
ಶೂದ್ರಜಾತಿರಿಯಂ ಸಾಧ್ವೀ ತವ ಪತ್ನೀ ಹ್ಯಭೂತ್ಪುರಾ ॥ ೨೩ ॥
ಕೇನಚಿತ್ತ್ವಥ ಕಾಲೇನ ದುರ್ಭಿಕ್ಷೇ ಸಮುಪಸ್ಥಿತೇ ।
ಅನ್ನಕ್ಷಯಾನ್ಮಹಾರಾಜ ಸರ್ವಲೋಕಃ ಕ್ಷುಧಾರ್ದಿತಃ ॥ ೨೪ ॥

---

೧೮. ಮಹರ್ಷಿಯೆ ! ನನ್ನ ರಾಜ್ಯದಲ್ಲಿ ದೀನನೂ, ದುಃಖಗೊಂಡವನೂ, ಕಾಯಿಲೆಯವನೂ, ದರಿದ್ರನಾದವನೂ, ಯಾವನೂ ಇರುವುದಿಲ್ಲ.

೧೯. ಪತಿವ್ರತೆಯೂ, ನನಗೆ ಪ್ರಾಣಗಳಿಗಿಂತ ಶ್ರೇಷ್ಠಳೂ, ನನ್ನಲ್ಲಿಯೇ ಮನಸ್ಸುಳ್ಳವಳೂ, ಯಾವಾಗಲೂ ನನ್ನ ಹಿತದಲ್ಲಿ ನಿರತಳೂ ಆದ ನನ್ನ ಪತ್ನಿಯು ಆಲೋಚಿಸಿರುವುದನ್ನೆಲ್ಲ ವಿಸ್ತಾರವಾಗಿ ಹೇಳು.

೨೦ ೨೧. ಮುನಿಯೆ ! ದಾನ, ವ್ರತ, ಯಾಗ, ತಪಸ್ಸು, ನಿಯಮ, ಜನ್ಮಾಂತರದ ಪುಣ್ಯ ಇವುಗಳಲ್ಲಿ ಯಾವುದರ ಪ್ರಭಾವದಿಂದ ನನಗೆ ಹೀಗಾಗಿರುವುದು ? ಇದರ ವಿಷಯದಲ್ಲಿ ನನಗೆ ಅತ್ಯಂತ ಕುತೂಹಲವುಂಟಾಗಿದೆ. ಅನುಗ್ರಹಿಸಿ ಅದನ್ನು ನನಗೆ ವಿಸ್ತಾರವಾಗಿ ಹೇಳು.

೨೨. ವಸಿಷ್ಠನು ಹೇಳುತ್ತಾನೆ :—ದೊರೆಯೆ ! ಎಲ್ಲವನ್ನೂ ವಿಸ್ತಾರವಾಗಿ ಹೇಳುವೆನು ಕೇಳು. ನೀನು ಕೋಪಗೊಳ್ಳಬಾರದು. ನಾಚಿಕೆಪಡಬಾರದು.

೨೩. ದೊರೆಯೆ ! ನೀನು ಜನ್ಮಾಂತರದಲ್ಲಿ ಶೂದ್ರಜಾತಿಯಲ್ಲಿ ಜನಿಸಿರುವೆ. ಪತಿವ್ರತೆಯಾದ ಈ ನಿನ್ನ ಪತ್ನಿಯು ಹಿಂದೆ ಶೂದ್ರಳಾಗಿದ್ದಳು.

೨೪. ಒಂದಾನೊಂದು ಕಾಲದಲ್ಲಿ ದುರ್ಭಿಕ್ಷವುಂಟಾಗಲು ಅನ್ನವಿಲ್ಲದಿರುವುದರಿಂದ ಸಮಸ್ತ ಜನಗಳೂ ಹಸಿವಿನಿಂದ ಪೀಡಿತರಾದರು.

ತತಸ್ತ್ವಂ ಭಾರ್ಯಯಾ ಸಾರ್ಧಮನ್ಯದೇಶಾಂತರೇ ಗತಃ ।
ಸಮಾರುಹ್ಯ ಚ ಕೃಚ್ಛ್ರೇಣ ಕಸ್ಮಿಂಶ್ಚಿದ್ಗಿರಿನಿರ್ಝರೇ ॥ ೨೫ ॥
ತ್ವಯಾ ದೃಷ್ಟಂ ಮನೋಹಾರಿ ಶುಭಂ ಪಂಕಜಕಾನನಂ ।
ತತ್ರ ಸ್ನಾತ್ವಾ ಪಯಃ ಪೀತ್ವಾ ಪಿತೃದೇವಾಃ ಪ್ರತರ್ಪಿತಾಃ ॥ ೨೬ ॥
ಮನಸಾ ಚಿಂತಿತಂ ಹ್ಯೇತತ್ಪದ್ಮಾನ್ಯಾದಾಯ ಕರೋಮ್ಯಹಂ ।
ವಿಕ್ರಯಂ ಯೇನ ಚಾಹಾರೋ ಭವೇನ್ಮಮ ಚ ಸರ್ವಥಾ ॥ ೨೭ ॥
ತತಃ ಪದ್ಮಾನಿ ಭೂರೀಣಿ ಗೃಹೀತ್ವಾ ಭಾರ್ಯಯಾ ಸಹ ।
ಗತೋ ಯತ್ರ ಜನೋ ಭೂರಿ ಗತಃ ಪಾರ್ಥಿವಸತ್ತಮ ॥ ೨೮ ॥
ನ ಕೇಽಪಿ ಪ್ರತಿಗೃಹ್ಣಂತಿ ಲೋಕಾ ದುರ್ಭಿಕ್ಷಪೀಡಿತಾಃ ।
ಭ್ರಮಿತಸ್ತ್ವಂ ಚ ಸರ್ವತ್ರ ಶ್ರಾಂತೋ ವೈರಾಗ್ಯಮಾಗತಃ ॥ ೨೯ ॥
ತತೋ ದಿನಾವಸಾನೇ ತು ಗುಹಾಮೇಕಾಂ ಸಮಾಶ್ರಿತಃ ।
ಭೂಮೌ ಪದ್ಮಾನಿ ನಿಕ್ಷಿಪ್ಯ ಕ್ಷುಧಾವಿಷ್ಟಃ ಪ್ರಸುಪ್ತವಾನ್ ॥ ೩೦ ॥
ಏತಸ್ಮಿನ್ನೇವ ಕಾಲೇ ತು ಕರ್ಣಯೋಸ್ತೇ ಸಮಾಗತಃ ।
ಪಠತಾಂ ದ್ವಿಜಮುಖ್ಯಾನಾಂ ಧ್ವನಿರ್ವೇದಪುರಾಣಯೋಃ ॥ ೩೧ ॥

---

೨೫–೨೬. ನೀನು ಭಾರ್ಯೆಯೊಡನೆ ದೇಶಾಂತರಕ್ಕೆ ಹೋಗಿ ಒಂದು ಪರ್ವತವನ್ನೇರಿ ಅದರಲ್ಲಿರುವ ನದಿಯಲ್ಲಿ ಬೆಳೆದಿರುವ ಮನೋಹರವಾದ ಕಮಲವನ್ನು ಕಂಡು ಆ ನದಿಯಲ್ಲಿ ಮಿಂದು ನೀರನ್ನು ಕುಡಿದು ಪಿತೃದೇವತೆಗಳಿಗೆ ತರ್ಪಣಮಾಡಿರುವೆ.

೨೭. ನೀನು ಅನಂತರ ಈ ಪದ್ಮಗಳನ್ನು ತೆಗೆದುಕೊಂಡು ಹೋಗಿ ಮಾರಿದರೆ ನನಗೆ ಆಹಾರವು ಲಭಿಸುವುದು ಎಂದು ಮನಸ್ಸಿನಲ್ಲಿ ಆಲೋಚಿಸಿದೆ.

೨೮. ನೃಪವರ್ಯ! ಬಳಿಕ ನೀನು ಅನೇಕ ಕಮಲಗಳನ್ನು ತೆಗೆದುಕೊಂಡು ಪತ್ನಿಯೊಡನೆ ಬಹು ಜನಗಳಿರುವ ಸ್ಥಳಕ್ಕೆ ತೆರಳಿದೆ.

೨೯. ದುರ್ಭಿಕ್ಷದಿಂದ ಪೀಡಿತರಾದ ಯಾವ ಜನರೂ ಅದನ್ನು ತೆಗೆದುಕೊಳ್ಳದಿರಲು ಎಲ್ಲೆಡೆಯಲ್ಲಿಯೂ ಅಲೆದು ಬಳಲಿದ ನೀನು ವೈರಾಗ್ಯಗೊಂಡೆ.

೩೦. ಅನಂತರ ಸಾಯಂಕಾಲ ನೀನು ಒಂದು ಗುಹೆಯನ್ನು ಆಶ್ರಯಿಸಿ ನೆಲದಲ್ಲಿ ಪದ್ಮಗಳನ್ನೆಸೆದು ಹಸಿವಿನಿಂದ ಪೀಡಿತನಾಗಿ ಮಲಗಿದೆ.

೩೧. ಈ ಸಮಯದಲ್ಲಿ ವೇದಪುರಾಣಗಳನ್ನು ಪಠಿಸುವ ದ್ವಿಜವರ್ಯರ ಧ್ವನಿಯನ್ನು ಕೇಳಿದೆ.

ತಂ ಶ್ರುತ್ವಾ ಸಹಸೋತ್ಥಾಯ ಜ್ಞಾತ್ವಾ ಜಾಗರಣಂ ತತಃ ।
ಪದ್ಮಾನ್ಯಾದಾಯ ತತ್ರೈವ ಸಭಾರ್ಯಃ ಶಿವಮಂದಿರೇ ॥ ೩೨ ॥
ತತ್ರ ನಾಗವತೀ ವೇಶ್ಯಾ ಶಿವರಾತ್ರಿಪರಾಯಣಾ ।
ಕೇದಾರೇ ಪರಯಾ ಭಕ್ತ್ಯಾ ಕರೋತಿ ನಿಶಿ ಜಾಗರಂ ॥ ೩೩ ॥
ತಸ್ಯಾಃ ಪಾರ್ಶ್ವೇ ಸ್ಥಿತಾ ದಾಸೀ ತ್ವಯಾ ಪೃಷ್ಟಾ ನರೇಶ್ವರ ।
ದೇವಸ್ಯ ಪುರತೋ ಬಾಲೇ ಕಿಮರ್ಥಂ ರಾತ್ರಿಜಾಗರಂ ॥ ೩೪ ॥
ತಯೋಕ್ತಂ ಶಿವರಾತ್ರ್ಯಾಂ ವೈ ವೇಶ್ಯೇಯಂ ವರವರ್ಣಿನೀ ।
ಕುರುತೇ ನಾಗವತೀ ನಾಮ ರಾತ್ರೌ ಭಕ್ತ್ಯಾ ಚ ಜಾಗರಂ ॥ ೩೫ ॥
ಯಃ ಶ್ರದ್ಧಾಭಕ್ತಿಸಂಯುಕ್ತಂ ಕುರುತೇ ರಾತ್ರಿಜಾಗರಂ ।
ಪೂಜಯಿತ್ವಾ ಮಹಾದೇವಂ ಸ ಯಾತಿ ಪರಮಂ ಪದಂ ॥ ೩೬ ॥
ಕೃತ್ವೋಪವಾಸಂ ಪದ್ಮೈರ್ಯಃ ಪೂಜಯೇತ್ತ್ರ್ಯಂಬಕಂ ನರಃ ।
ಸ ಯಾತಿ ರುದ್ರಸಾಲೋಕ್ಯಂ ಸೇವ್ಯಮಾನೋಽಪ್ಸರೋಗಣೈಃ ॥ ೩೭ ॥
ಸಕಾಮೋ ಲಭತೇ ಕಾಮಾನ್ದೇವೈರಪಿ ಸುದುರ್ಲಭಾನ್ ।
ತ್ವಂ ಪದ್ಮಾನಿ ಮೇ ದೇಹಿ ಕಾಂಚನಂ ಚ ಪಲತ್ರಯಂ ।
ಏತೇಷಾಂ ಮೂಲ್ಯಮಾದಾಯ ಪ್ರಾಣಾಧಾರಂ ಸಮಾಚರ ॥ ೩೮ ॥

---

೩೨. ನೀನು ಅದನ್ನು ಕೇಳಿ ಕೂಡಲೆ ಎದ್ದು ಬ್ರಾಹ್ಮಣರ ಜಾಗರಣೆಯನ್ನರಿತು ಕಮಲಗಳನ್ನು ತೆಗೆದುಕೊಂಡು ಪತ್ನಿಯೊಡನೆ ಅಲ್ಲಿಯೆ ವಾಸಿಸಿದೆ.

೩೩. ಆಗ ಆ ಕೇದಾರಕ್ಷೇತ್ರದಲ್ಲಿ ನಾಗವತಿಯೆಂಬ ವೇಶ್ಯೆಯು ಶಿವರಾತ್ರಿ ವ್ರತವನ್ನಾಚರಿಸುತ್ತ ರಾತ್ರಿ ಅತಿಭಕ್ತಿಯಿಂದ ಜಾಗರಣೆ ಮಾಡುತ್ತಿದ್ದಳು.

೩೪. ರಾಜನೆ! ನೀನು ಅವಳ ಪಕ್ಕದಲ್ಲಿರುವ ದಾಸಿಯನ್ನು, "ಬಾಲಕಿಯೆ! ನೀನು ಏತಕ್ಕೆ ರಾತ್ರಿ ಶಿವನ ಮುಂದೆ ಜಾಗರಣೆ ಮಾಡುತ್ತಿರುವೆ?" ಎಂದು ಕೇಳಿದೆ.

೩೫. ಅವಳು ಇಂತೆಂದಳು. "ನಾಗವತಿಯೆಂಬ ಈ ವೇಶ್ಯೆಯು ಭಕ್ತಿಯಿಂದ ರಾತ್ರಿ ಜಾಗರಣೆಯನ್ನು ಮಾಡುತ್ತಿದ್ದಾಳೆ.

೩೬. ಶ್ರದ್ಧಾಭಕ್ತಿಯಿಂದ ಸಹಿತನಾಗಿ ರಾತ್ರಿ ಜಾಗರಣೆಮಾಡಿ ಮಹೇಶ್ವರನನ್ನು ಪೂಜಿಸಿದವನು ಉತ್ತಮ ಪದವಿಯನ್ನು ಹೊಂದುವನು.

೩೭. ಉಪವಾಸಮಾಡಿ ಪದ್ಮಗಳಿಂದ ಮಹೇಶ್ವರನನ್ನು ಪೂಜಿಸಿದವನು ಅಪ್ಸರರ ಸಮೂಹದಿಂದ ಸೇವಿಸಲ್ಪಡುತ್ತ ರುದ್ರಲೋಕಕ್ಕೆ ಹೋಗುವನು.

೩೮. ದೇವತೆಗಳಿಗೂ ದುರ್ಲಭವಾದ ಇಷ್ಟಾರ್ಥಗಳನ್ನು ಪಡೆಯುವನು. ನೀನು ಈ ಪದ್ಮಗಳನ್ನು ಕೊಟ್ಟು ಇವುಗಳಿಗೆ ಬೆಲೆಯಾಗಿ ಚಿನ್ನದ ಈ ಮೂರು ಪಲಗಳನ್ನು ತೆಗೆದುಕೊಂಡು ಜೀವನಮಾಡು".

ತತಸ್ತ್ವಂ ಭಾರ್ಯಯಾ ಚೋಕ್ತೋ ಗೃಹ್ಯಮಾಣೇ ಚ ಕಾಂಚನೇ ।
ನ ಗ್ರಾಹ್ಯಂ ಮೂಲ್ಯಮೇತೇಷಾಂ ತ್ವಯಾ ನಾಥ ಕಥಂಚನ ॥ ೩೯ ॥
ಉಪವಾಸೋ ಬಲಾಜ್ಜಾತೋ ಹ್ಯನ್ನಾಭಾವಾದ್ದ್ವಯೋರಪಿ ।
ಪದ್ಮೈರೇಭಿರ್ಹರಃ ಪೂಜ್ಯೋ ದ್ವಾಭ್ಯಾಮೇವಾದ್ಯ ನಿಶ್ಚಯಂ ॥ ೪೦ ॥
ಇದಂ ತ್ವಯಾಽದ್ಯ ಕರ್ತವ್ಯಂ ತ್ಯಾಜ್ಯಮಸ್ಮಾಸ್ತು ಕಾಂಚನಂ ।
ಭಾರ್ಯಾಯಾ ವಚನಂ ಶ್ರುತ್ವಾ ತೈಃ ಪದ್ಮೈಃ ಪೂಜಿತಃ ಶಿವಃ ॥ ೪೧ ॥
ಶ್ರದ್ಧಯಾ ಚ ಸಭಾರ್ಯೇಣ ಜಾಗರಂ ಚ ಶಿವಾಗ್ರತಃ ।
ಕೃತಂ ತ್ವಯಾ ಮಹಾರಾಜ ಭಾರ್ಯಯಾ ಶಿವಮಂದಿರೇ ॥ ೪೨ ॥
ಪುರಾಣಶ್ರವಣಂ ಜಾತಂ ತವ ಪಾರ್ಥಿವಸತ್ತಮ ।
ಶಿವರಾತ್ರ್ಯಾಂ ಮಹಾರಾಜ ಪದ್ಮೈಸ್ತು ಪೂಜಿತಃ ಶಿವಃ ॥ ೪೩ ॥
ಕೇದಾರಸ್ಯಾಗ್ರತೋ ಭಕ್ತ್ಯಾ ರಾತ್ರೌ ಜಾಗರಣಂ ತಥಾ ।
ಕೃತಂ ತ್ವಯಾ ಮಹಾರಾಜ ಏಕಾಗ್ರೇಣ ಚ ಚೇತಸಾ ॥ ೪೪ ॥
ತತಃ ಪ್ರಭಾತೇ ಸಂಜಾತೇ ಭಿಕ್ಷಾಂ ಕೃತ್ವಾ ಚ ಪಾರಣಾ ।
ಕೃತಾ ತ್ವಯಾ ಮಹಾರಾಜ ಶಿವಾಗ್ರೇ ಸಹ ಭಾರ್ಯಯಾ ॥ ೪೫ ॥

---

೩೯. ನೀನು ಚಿನ್ನದ ಪಲಗಳನ್ನು ತೆಗೆದುಕೊಳುತ್ತಿರಲು ನಿನ್ನ ಪತ್ನಿಯು ನಾಥ! ನೀನು ಇದಕ್ಕೆ ಬೆಲೆಯನ್ನು ತೆಗೆದುಕೊಳ್ಳಕೂಡದು.

೪೦. ಅನ್ನವಿಲ್ಲದಿರುವುದರಿಂದ ನಮ್ಮಿಬ್ಬರಿಗೆ ಬಲಾತ್ಕಾರದಿಂದ ಉಪವಾಸ ವಾಗಿರುವುದು. ನಾವಿಬ್ಬರೂ ಈ ಪದ್ಮಗಳಿಂದ ಶಿವನನ್ನು ಪೂಜಿಸೋಣ.

೪೧. ನೀನು ಈಗ ಶಿವನನ್ನು ಪೂಜೆಮಾಡಬೇಕು. ಇವಳಿಂದ ಚಿನ್ನವನ್ನು ತೆಗೆದು ಕೊಳ್ಳಬೇಡ. ಎನ್ನಲು ನೀನು ಪತ್ನಿಯಮಾತಿನಂತೆ ತಾವರೆ ಹೂವುಗಳಿಂದ ಶಿವನನ್ನು ಪೂಜಿಸಿದೆ.

೪೨. ಮಹಾರಾಜ! ನೀನು ಶಿವಮಂದಿರದಲ್ಲಿ ಶ್ರದ್ಧೆಯಿಂದ ಪತ್ನಿಯೊಡನೆ ಜಾಗರಣೆ ಮಾಡಿರುವೆ.

೪೩–೪೪. ದೊರೆಯೆ! ನೀನು ಶಿವರಾತ್ರಿ ದಿನ ಪುರಾಣವನ್ನು ಕೇಳಿ ಶಿವನನ್ನು ಪೂಜಿಸಿದೆ. ರಾತ್ರಿ ಕೇದಾರೇಶ್ವರನ ಮುಂದೆ ಭಕ್ತಿಯಿಂದಲೂ, ಚಿತ್ತೈಕಾಗ್ರ್ಯ ದಿಂದಲೂ ಜಾಗ್ರರಣೆ ಮಾಡಿರುವೆ.

೪೫. ತರುವಾಯ ಬೆಳಗಾಗಲು ಭಿಕ್ಷಾಟನೆಮಾಡಿ ಪತ್ನಿಯೊಡನೆ ಪಾರಣೆ ಮಾಡಿರುವೆ.

ತತಃ ಕಾಲಾಂತರೇಚ್ಚೈವ ಕಾಲಧರ್ಮಂ ಗತೋ ಭವಾನ್ ।
ಭಾರ್ಯೇಯಂ ಚ ತ್ವಯಾ ಸಾರ್ಧಂ ಸಂಪ್ರವಿಷ್ಟಾ ಹುತಾಶನಂ ॥ ೪೬ ॥
ತತೋ ಜಾತಾ ಮಹಾರಾಜ ದಶಾರ್ಣಾಧಿಪತೇಃ ಸುತಾ ।
ವೈದೇಹೇ ನಗರೇ ರಾಜಾ ಜಾತಸ್ತ್ವಂ ಪಾರ್ಥಿವೋತ್ತಮ ॥ ೪೭ ॥
ಅಜಪಾಲ ಇತಿ ಖ್ಯಾತೋ ನಾಮ್ನಾ ಚ ಧರಣೀತಲೇ ।
ಸರ್ವೇಷಾಂ ಪ್ರಾಣಿನಾಂ ತ್ವಂ ಚ ವಲ್ಲಭೋ ನೃಪಸತ್ತಮ ॥ ೪೮ ॥
ಏತಸ್ಮಾತ್ಕಾರಣಾಜ್ಜಾತಾ ಭಾರ್ಯೇಯಂ ಪ್ರಾಣಸಂಮತಾ ।
ಭೂಯೋಽಪಿ ತವ ಸಂಜಾತಾ ಯನ್ಮಾಂ ತ್ವಾಂ ಪರಿಪೃಚ್ಛಸಿ ॥ ೪೯ ॥
ತಸ್ಯ ದೇವಸ್ಯ ಮಾಹಾತ್ಮ್ಯಾತ್ಕೇದಾರಸ್ಯ ಮಹೀಪತೇಃ ।
ರಾಜ್ಯಂ ತೇ ಸುಖದಂ ಸ್ವಾನಾಂ ತಥಾ ನಿಹತಕಂಟಕಂ ॥ ೫೦ ॥
ಪ್ರಾಪ್ತಂ ತ್ವಯಾ ಮಹಾರಾಜ ಕೇದಾರಸ್ಯ ಪ್ರಸಾದತಃ ।
ಯೇ ತ್ವಂ ಸೈನ್ಯಹೀನೋಽಪಿ ಪೃಥಿವೀಂ ಪರಿರಕ್ಷಸಿ ॥ ೫೧ ॥

ಪುಲಸ್ತ್ಯ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಸ ರಾಜಾ ವಿಸ್ಮಯಾನ್ವಿತಃ ।
ಗಮನಾಯ ಮತಿಂ ಚಕ್ರೇ ಕೇದಾರಂ ಪ್ರತಿ ಭೂಮಿಪಃ ॥ ೫೨ ॥

---

೪೬. ಅನಂತರ ನೀನು ಕಾಲಾಂತರದಲ್ಲಿ ಮೃತನಾಗಲು ನಿನ್ನೀ ಪತ್ನಿಯು ನಿನ್ನೊಡನೆ ಅಗ್ನಿಪ್ರವೇಶಮಾಡಿದಳು.

೪೭. ಮಹಾರಾಜ! ಬಳಿಕ ಅವಳು ದಶಾರ್ಣದೇಶದ ದೊರೆಯ ಮಗಳಾಗಿಯೂ, ನೀನು ವಿದೇಹನಗರದ ದೊರೆಯೂ ಆಗಿರುವಿರಿ.

೪೮. ನೀನು ಅಜಪಾಲನೆಂದು ಪ್ರಸಿದ್ಧನಾಗಿ ಪ್ರಪಂಚದ ಸಕಲ ಪ್ರಾಣಿಗಳಿಗೂ ಪ್ರಿಯನಾದೆ.

೪೯. ಈ ಕಾರಣದಿಂದಲೇ ನಿನಗೆ ಇವಳು ಮರಳಿ ಪ್ರಾಣಪ್ರಿಯಳಾದ ಪತ್ನಿಯಾದಳು. ಇದನ್ನೇ ನೀನು ಕೇಳುತ್ತಿರುವೆ.

೫೦. ದೊರೆಯೆ! ಆ ಕೇದಾರೇಶ್ವರನ ಮಾಹಾತ್ಮ್ಯದಿಂದಲೆ ನಿನ್ನ ರಾಜ್ಯವು ಪ್ರಜೆಗಳಿಗೆ ಸುಖವನ್ನುಂಟುಮಾಡುವುದೂ, ಶತ್ರುಗಳಿಲ್ಲದಿರುವುದೂ ಆಗಿರುವುದು.

೫೧. ಮಹಾರಾಜ! ನೀನು ಕೇದಾರೇಶ್ವರನ ಅನುಗ್ರಹದಿಂದ ಸೈನ್ಯವಿಲ್ಲದವನಾದರೂ ಭೂಮಿಯನ್ನು ಕಾಪಾಡುತ್ತಿರುವೆ.

೫೨. ಪುಲಸ್ತ್ಯನು ಹೇಳುತ್ತಾನೆ :—ಆ ರಾಜನು ಅವನ ಆ ಮಾತನ್ನು ಕೇಳಿ ಆಶ್ಚರ್ಯದಿಂದ ಕೇದಾರಕ್ಕೆ ಹೋಗಲು ಆಲೋಚಿಸಿದನು.

ಸ ಗತ್ವಾ ಪರ್ವತೇ ರಮ್ಯೇ ಪೂಜಯಿತ್ವಾ ಚ ತಂ ವಿಭುಂ ।
ಶಿವರಾತ್ರಿಪರಃ ಸಮ್ಯಗ್ವರ್ಷೇ ವರ್ಷೇ ಬಭೂವ ಹ ॥ ೫೩ ॥
ಪುತ್ರಂ ರಾಜ್ಯೇ ಚ ಸಂಸ್ಥಾಪ್ಯ ತತೋಽರ್ಬುದಮಥಾಗಮತ್ ।
ಪ್ರಾಪ್ತೋ ಮುಕ್ತಿಂ ತತೋ ಭೂಯಃ ಸಭಾರ್ಯಸ್ತತ್ರಭಾವತಃ ॥ ೫೪ ॥
ಏತತ್ತೇ ಸರ್ವಮಾಖ್ಯಾತಂ ಕೇದಾರಸ್ಯ ಮಹೀಪತೇ ।
ಮಾಹಾತ್ಮ್ಯಂ ಶುಭದಂ ನೃಣಾಂ ಸರ್ವಪಾಪಪ್ರಣಾಶನಂ ॥ ೫೫ ॥
ಮಾಘಫಾಲ್ಗುನಯೋರ್ಮಧ್ಯೇ ಕೃಷ್ಣಪಕ್ಷೇ ಚತುರ್ದಶೀ ।
ಶಿವರಾತ್ರಿರಿತಿ ಖ್ಯಾತಾ ಭೂತಲೇಽಸ್ಮಿನ್ಮಹಾಮತೇ ॥ ೫೬ ॥
ತಸ್ಯಾಂ ತು ಸರ್ವಥಾ ರಾಜನ್ಯಾತ್ರಾಂ ತಸ್ಯ ಸಮಾಚರೇತ್ ।
ಕೇದಾರಸ್ಯ ಮಹಾರಾಜ ಪ್ರಕುರ್ಯಾತ್ಪೂಜನಂ ನೃಪ ॥ ೫೭ ॥
ಮಾಘಕೃಷ್ಣಚತುರ್ದಶ್ಯಾಂ ಯಃ ಕುರ್ಯಾತ್ತತ್ರ ಜಾಗರಂ ।
ಕೃತೋಪವಾಸೋ ನೃಪತೇ ಶಿವಲೋಕಂ ಸಗಚ್ಛತಿ ॥ ೫೮ ॥
ಸ್ನಾತ್ವಾ ಗಂಗಾಸರಸ್ವತ್ಯೋಃ ಸಂಗಮೇ ಸರ್ವಕಾಮದೇ ।
ಯೇ ಪ್ರಪಶ್ಯಂತಿ ಕೇದಾರಂ ತೇ ಯಾಸ್ಯಂತಿ ಪರಾಂ ಗತಿಂ ॥ ೫೯ ॥

---

೫೩. ಅವನು ಮನೋಹರವಾದ ಆ ಪರ್ವತಕ್ಕೆ ಹೋಗಿ ಮಹೇಶ್ವರನನ್ನು ಪೂಜಿಸಿ ಪ್ರತಿವರ್ಷವೂ ಶಿವರಾತ್ರಿವ್ರತನಿರತನಾದನು.

೫೪. ಅವನು ಮಗನನ್ನು ರಾಜ್ಯದಲ್ಲಿ ಸ್ಥಾಪಿಸಿ ಅರ್ಬುದ ಪರ್ವತಕ್ಕೆ ಬಂದು ಅದರ ಮಾಹಾತ್ಮ್ಯೆಯಿಂದ ಪತ್ನಿಯೊಡನೆ ಮೋಕ್ಷವನ್ನು ಪಡೆದನು.

೫೫. ದೊರೆಯೆ! ನಿನಗೆ ಮನುಷ್ಯರಿಗೆ ಮಂಗಳವನ್ನುಂಟುಮಾಡುವುದೂ, ಸಕಲ ಪಾಪಗಳನ್ನು ಪರಿಹರಿಸುವುದೂ ಆದ ಕೇದಾರದ ಮಾಹಾತ್ಮ್ಯವನೆಲ್ಲ ಹೇಳಿ ರುವೆನು.

೫೬. ಪ್ರಾಜ್ಞನೆ! ಮಾಘ ಫಾಲ್ಗುನಮಾಸಗಳ ಮಧ್ಯದ ಕೃಷ್ಣಪಕ್ಷದ ಚತುರ್ದಶಿಯು ಶಿವರಾತ್ರಿಯೆನ್ನಿಸಿಕೊಳ್ಳುವುದು.

೫೭. ಆ ದಿನ ಮನುಷ್ಯನು ಅರ್ಬುದ ಪರ್ವತಕ್ಕೆ ಹೋಗಿ ಕೇದಾರೇಶ್ವರನ ಪೂಜೆಯನ್ನು ಮಾಡಬೇಕು.

೫೮. ಮಾಘ ಕೃಷ್ಣ ಚತುರ್ದಶೀ ದಿನ ಉಪವಾಸಮಾಡಿ ಅಲ್ಲಿ ಜಾಗರಣೆ ಗೈದವನು ಶಿವಲೋಕವನ್ನು ಸೇರುವನು.

೫೯. ಸಕಲೇಷ್ಟಾರ್ಥಗಳನ್ನು ಕೊಡುವ ಗಂಗಾ ಸರಸ್ವತೀ ಸಂಗಮದಲ್ಲಿ ಮಿಂದು ಕೇದಾರೇಶ್ವರನ ದರ್ಶನಗೈಯ್ಯುವ ಮಾನವನು ಉತ್ತಮ ಗತಿಯನ್ನು ಪಡೆಯುವನು.

ಕುಂಡೇ ಕೇದಾರಸಂಜ್ಞೇ ಯಃ ಪ್ರಪಿಬೇದ್ವಿಮಲಂ ಜಲಂ ।
ಸಪ್ತ ಪೂರ್ವಾನ್ಸಪ್ತ ಪರಾನ್ಪೂರ್ವಜಾಂಸ್ತಾರಯೇತ್ತು ಸಃ ॥ ೬೦ ॥
ಯಚ್ಚೈತಚ್ಛೃಣುಯಾನ್ನಿತ್ಯಂ ಭಕ್ತ್ಯಾ ಪರಮಯಾ ನೃಪಃ ।
ಸೋಽಪಿ ಪಾಪೈರ್ವಿನಿಮುಚ್ಯೇತ ಕೇದಾರಸ್ಯ ಪ್ರಭಾವತಃ ॥ ೬೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕೇದಾರಮಾಹಾತ್ಮ್ಯವರ್ಣನಂ ನಾಮ
ನವಮೋಽಧ್ಯಾಯಃ

---

೬೦. ಕೇದಾರ ಕುಂಡದ ಶುದ್ಧ ನೀರನ್ನು ಕುಡಿಯುವ ಮಾನವನು ತನ್ನ ಹಿಂದಿನ ಏಳುಜನ ಪಿತೃಗಳನ್ನೂ ಮುಂದಿನ ಏಳು ಏಳು ಜನಗಳನ್ನೂ ಉದ್ಧರಿಸುವನು

೬೧. ಈ ಮಾಹಾತ್ಮ್ಯವನ್ನು ಭಕ್ತಿಯಿಂದ ಕೇಳುವ ಮಾನವನು ಕೇದಾರೇಶ್ವರನ ಪ್ರಭಾವದಿಂದ ಪಾಪಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಪುರಾಣದ ಏಳನೆಯಪ್ರಭಾಸಖಂಡದ
ಮೂರನೆಯ ಅರ್ಬುದಖಂಡದಲ್ಲಿ ಕೇದಾರಮಾಹಾತ್ಮ್ಯವರ್ಣನ ವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ದಶಮೋಽಧ್ಯಾಯಃ

## ಸರ್ವತೀರ್ಥಾಗಮನವರ್ಣನಂ

ಯಯಾತಿರುವಾಚ :—

ಕೇದಾರಂ ಶ್ರೂಯತೇ ಬ್ರಹ್ಮನ್ಪರ್ವತೇ ಚ ಹಿಮಾಚಲೇ ।
ಗಂಗಾ ತಸ್ಮಾದ್ವಿನಿಷ್ಕ್ರಾಂತಾ ಪ್ರವಿಷ್ಟಾ ಪೂರ್ವಸಾಗರಂ ॥ ೧ ॥
ತಥಾ ಸರಸ್ವತೀ ದೇವೀ ಭೂತವೃಕ್ಷಾದ್ವಿನಿರ್ಗತಾ ।
ಪಶ್ಚಿಮಂ ಸಾಗರಂ ಪ್ರಾಪ್ತಾ ಗೃಹಿತ್ವಾ ವಡವಾನಲಂ ॥ ೨ ॥
ಕಥಮತ್ರ ಸಮಾಯಾತಃ ಕೇದಾರಶ್ಚಾತ್ರ ಕೌತುಕಂ ।
ಸರ್ವಂ ವಿಸ್ತರತೋ ಬ್ರೂಹಿ ವಿಚಿತ್ರಂ ಮಮ ಭೂಸುರ ॥ ೩ ॥

ಪುಲಸ್ತ್ಯ ಉವಾಚ :—

ಸತ್ಯಮೇತನ್ಮಹಾರಾಜ ಯನ್ಮಾಂಽತ್ರ ಪರಿಪೃಚ್ಛಸಿ ।
ಶೃಣುಷ್ವಾವಹಿತೋ ಭೂತ್ವಾ ಯಥಾ ಜಾತಂ ಶ್ರುತಂ ತು ವೈ ॥ ೪ ॥

---

## ಕನ್ನಡದ ಅನುವಾದ

### ಸಕಲತೀರ್ಥಾಗಮನವರ್ಣನ

೧. ಯಯಾತಿಯು ಹೇಳುತ್ತಾನೆ :—ಹಿಮಾಚಲದಲ್ಲಿ ಕೇದಾರಕ್ಷೇತ್ರವಿರುವುದು. ಆದರಿಂದ ಗಂಗೆಯು ಹುಟ್ಟಿ ಪೂರ್ವ ಸಮುದ್ರವನ್ನು ಸೇರಿದಳು.

೨. ಹಾಗೇಯೇ ಮಾವಿನ ಮರದಿಂದ ಹುಟ್ಟಿದ ಸರಸ್ವತೀ ನದಿಯು ಬಡವಾನಲವನ್ನು ತೆಗೆದುಕೊಂಡು ಪಶ್ಚಿಮ ಸಮುದ್ರವನ್ನು ಸೇರಿತು.

೩. ಬ್ರಾಹ್ಮಣನೆ! ಕೇದಾರನು ಇಲ್ಲಿಗೆ ಹೇಗೆ ಬಂದನು ? ವಿಚಿತ್ರವಾದ ಈ ವಿಷಯವನ್ನೆಲ್ಲ ವಿಸ್ತಾರವಾಗಿ ಹೇಳು. ನನಗೆ ಕುತೂಹಲವುಂಟಾಗಿರುವುದು.

೪. ಪುಲಸ್ತ್ಯನು ಹೇಳುತ್ತಾನೆ :—ಮಹಾರಾಜ ! ನೀನು ನನ್ನನ್ನು ಪ್ರಶ್ನೆ ಮಾಡಿರುವುದು ನ್ಯಾಯವಾಗಿದೆ. ಇದು ಹೇಗೆ ಉಂಟಾಯಿತೆಂಬುದನ್ನು ನಾನು ಕೇಳಿರುವೆನು. ಅದನ್ನು ನೀನು ಸಾವಧಾನಮನಸ್ಸಿನಿಂದ ಕೇಳು.

ಗಂಗಾದ್ಯಾನಿ ಚ ತೀರ್ಥಾನಿ ಕೇದಾರಾದ್ಯಾ ದಿವೌಕಸಃ ।
ಮಯಾ ಸಹ ಪುರಾ ದೇವಾಃ ಶಕ್ರಾದ್ಯಾ ನೃಪಸತ್ತಮಾಃ ॥ ೫ ॥
ಬ್ರಹ್ಮಾಣಂ ಪ್ರತಿ ರಾಜೇಂದ್ರ ಗತಾಃ ಸರ್ವೇ ಮಹರ್ಷಯಃ ।
ಸರ್ವೇ ತತ್ರ ಕಥಾಶ್ಚಕ್ರುರ್ಧರ್ಮ್ಯಾ ನಾನಾ ಪೃಥಕ್ಪೃಥಕ್ ॥ ೬ ॥
ಸಮುದಾಯೇ ಚ ದೇವಾನಾಂ ಸರ್ವತೀರ್ಥಾನಿ ಪಾರ್ಥಿವ ।
ಕ್ಷೇತ್ರಾಣ್ಯುಪಸ್ಥಿತಾನ್ಯೇವ ವನಾನ್ಯುಪವನಾನಿ ಚ ॥ ೭ ॥
ತತಃ ಕಥಾಪ್ರಸಂಗೇನ ಇಂದ್ರಃ ಪ್ರಾಹ ಚತುರ್ಮುಖಂ ।
ಕೌತುಕೇನ ಸಮಾಯುಕ್ತಃ ಪಪ್ರಚ್ಛ ನೃಪಸತ್ತಮ ॥ ೮ ॥

ಇಂದ್ರ ಉವಾಚ :—

ಭಗವನ್ಪುಣ್ಯಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ಸಾಂಪ್ರತಂ ।
ಪ್ರಮಾಣಂ ಚೈವ ಸರ್ವೇಷಾಂ ಕೃತಾದೀನಾಂ ಪೃಥಗ್ವಿಧಂ ॥ ೯ ॥

ಬ್ರಹ್ಮೋವಾಚ :—

ಲಕ್ಷಂ ಸಪ್ತದಶ ಪ್ರೋಕ್ತಂ ಯುಗಮಾನಂ ಸುರಾಧಿಪ ।
ಅಷ್ಟಾವಿಂಶತಿಭಿಃ ಸಾರ್ಧಂ ಸಹಸ್ರೈಃ ಕೃತಮುಚ್ಯತೇ ॥ ೧೦ ॥
ಲಕ್ಷದ್ವಾದಶಭಿಃ ಪ್ರೋಕ್ತಂ ಯುಗಂ ತ್ರೇತಾಭಿಸಂಜ್ಞಿತಂ ।
ಷಣ್ಣವತ್ಯಧಿಕೈಶ್ಚೈವ ಸಹಸ್ರೈಃ ಪರಿಮಾಣಿತಂ ॥ ೧೧ ॥

---

೫-೬. ದೊರೆಯೆ! ಗಂಗಾತೀರ್ಥಗಳೂ, ಕೇದಾರಾದಿ ದೇವತೆಗಳೂ, ಇಂದ್ರಾದಿ ದೇವತೆಗಳೂ, ಮಹರ್ಷಿಗಳೂ ನನ್ನೊಡನೆ ಬ್ರಹ್ಮನೆಡೆಗೆ ಹೋದರು. ಅಲ್ಲಿ ಅವರೆಲ್ಲ ನಾನಾವಿಧವಾದ ಕಥೆಗಳನ್ನು ಹೇಳುತ್ತಿದ್ದರು.

೭. ಆ ದೇವತೆಗಳ ಸಮೂಹದಲ್ಲಿ ಸಕಲ ತೀರ್ಥಗಳೂ, ಕ್ಷೇತ್ರಗಳೂ, ವನಗಳೂ, ಉದ್ಯಾನಗಳೂ ಇದ್ದುವು.

೮. ಬಳಿಕ ಕಥಾ ಸಂದರ್ಭದಿಂದ ಇಂದ್ರನು ಬ್ರಹ್ಮನನ್ನು ಕುರಿತು ಕುತೂಹಲದಿಂದ ಹೀಗೆ ಪ್ರಶ್ನೆಮಾಡಿದನು.

೯. ಇಂದ್ರನು ಹೇಳುತ್ತಾನೆ :—ಪೂಜ್ಯನೆ! ಈಗ ಪುಣ್ಯಕರವಾದ ಮಾಹಾತ್ಮ್ಯವನ್ನೂ, ಕೃತಾದಿ ಸಕಲಯುಗಗಳ ಬೇರೆ ಬೇರೆ ವರ್ಷಪ್ರಮಾಣವನ್ನೂ ಕೇಳಲು ಬಯಸುವೆನು.

೧೦. ಬ್ರಹ್ಮನು ಹೇಳುತ್ತಾನೆ :—ಕೃತಯುಗವು ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರ್ಷ ಪ್ರಮಾಣವುಳ್ಳದು.

೧೧. ತ್ರೇತಾಯುಗವು ಹನ್ನೆರಡು ಲಕ್ಷ ತೊಂಬತ್ತಾರು ಸಾವಿರ ವರ್ಷ ಪರಿಮಾಣವುಳ್ಳದು.

ಲಕ್ಷಾಣ್ಯಷ್ಟೌ ಚತುಃಷಷ್ಟಿಸಹಸ್ರೈಃ ಪರಿಕೀರ್ತಿತಂ ।
ತತೋ ವೈ ದ್ವಾಪರಂ ನಾಮ ಯುಗಂ ದೇವಪ್ರಕೀರ್ತಿತಂ ॥ ೧೨ ॥
ಲಕ್ಷೈಶ್ಚತುರ್ಭಿರ್ವಿಖ್ಯಾತೋ ದ್ವಾತ್ರಿಂಶದ್ಭಿಃ ಕಲಿಸ್ತಥಾ ।
ಸಹಸ್ರೈಶ್ಚ ಸುರಶ್ರೇಷ್ಠ ಯುಗಮಾನಮಿತೀರಿತಂ ॥ ೧೩ ॥
ಚತುಷ್ಪದಃ ಕೃತೇ ಧರ್ಮಃ ಶುಕ್ಲವರ್ಣೋ ಜನಾರ್ದನಃ ।
ನ ದುರ್ಭಿಕ್ಷಂ ನ ಚ ವ್ಯಾಧಿಸ್ತಸ್ಮಿನ್ಭವತಿ ವೈ ಕ್ವಚಿತ್ ॥ ೧೪ ॥
ಕ್ರಿಯತೇ ಚ ತದಾ ಧರ್ಮೋ ನಾಕಾಲೇ ಮರಣಂ ನೃಣಾಂ ।
ಲಾಂಗಲೇನ ವಿನಾ ಸಸ್ಯಂ ಭೂರಿಕ್ಷೀರಾಶ್ಚ ಧೇನವಃ ॥ ೧೫ ॥
ಕಾಮಃ ಕ್ರೋಧೋ ಭಯಂ ಲೋಭೋ ಮತ್ಸರಶ್ಚಾಭ್ಯಸೂಯತಾ ।
ತಸ್ಮಿನ್ಯುಗೇ ಸಹಸ್ರಾಕ್ಷ ನ ಭವಂತಿ ಕದಾಚನ ॥ ೧೬ ॥
ತತಸ್ತ್ರೇತಾಯುಗೇ ಜಾತಸ್ತ್ರಿಪಾದೋ ಧರ್ಮ ಏವ ಚ ।
ಚಿರಾಯುಷೋ ನರಾಸ್ತಸ್ಮಿನ್ರಕ್ತವರ್ಣೋ ಜನಾರ್ದನಃ ॥ ೧೭ ॥
ತಸ್ಮಿನ್ಯಜ್ಞಾಃ ಪ್ರವರ್ತಂತೇ ಪ್ರಾಣಿನಾಮಿಷ್ಟದಾಯಿನಃ ।
ನ ಕಾಮಾದಿಪ್ರವೃತ್ತಿಶ್ಚ ತಸ್ಮಿನ್ಸಂಜಾಯತೇ ನೃಣಾಂ ॥ ೧೮ ॥

---

೧೨. ದ್ವಾಪರಯುಗವು ಎಂಟು ಲಕ್ಷ ಅರುವತ್ತನಾಲ್ಕು ಸಾವಿರ ವರ್ಷ ಪರಿಮಾಣವುಳ್ಳದು

೧೩. ಕಲಿಯುಗವು ನಾಲ್ಕು ಲಕ್ಷ ಮೂವತ್ತೆರಡು ಸಾವಿರವರ್ಷ ಪರಿಮಾಣ ವುಳ್ಳದು.

೧೪–೧೫. ಕೃತಯುಗದಲ್ಲಿ ಧರ್ಮವು ನಾಲ್ಕುಲಕ್ಷ ಪಾದಗಳಿಂದ ನೆಲೆಸುವುದು. ಆದ ವಿಷ್ಣುವು ಶುಕ್ಲವರ್ಣನಾಗಿರುವನು. ದುರ್ಭಿಕ್ಷವೂ, ವ್ಯಾಧಿಯೂ ಉಂಟಾಗು ವುದಿಲ್ಲ. ಮನುಷ್ಯರು ಅಕಾಲದಲ್ಲಿ ಮೃತರಾಗುವುದಿಲ್ಲ. ಭೂಮಿಯಲ್ಲಿ ಉಳದೆ ಸಸ್ಯವು ಬೆಳೆಯುವುದು. ಗೋವುಗಳು ಹೆಚ್ಚಾಗಿ ಹಾಲನ್ನು ಕೊಡುವುವು.

೧೬. ದೇವೇಂದ್ರ ! ಆ ಯುಗದಲ್ಲಿ ಯಾವಾಗಲೂ ಕಾಮ, ಕ್ರೋಧ, ಭಯ, ಲೋಭ, ಮಾತ್ಸರ್ಯಗಳಿರುವುದಿಲ್ಲ.

೧೭. ಅನಂತರ ತ್ರೇತಾಯುಗದಲ್ಲಿ ಧರ್ಮವು ಮೂರು ಪಾದಗಳಿಂದಿರುವುದು. ಅಲ್ಲಿ ಜನರು ಚಿರಂಜೀವಿಗಳಾಗಿರುವರು ವಿಷ್ಣುವು ರಕ್ತವರ್ಣನಾಗಿರುವನು.

೧೮. ಅದರಲ್ಲಿ ಪ್ರಾಣಿಗಳಿಗೆ ಇಷ್ಟವನ್ನುಂಡುಮಾಡುವ ಯಜ್ಞಗಳು ನಡೆಯುವುವು. ಮನುಷ್ಯರಿಗೆ ಕಾಮಾದಿ ಪ್ರವೃತ್ತಿಯುಂಟಾಗುವುದಿಲ್ಲ.

ತಪಸಾ ಬ್ರಹ್ಮಚರ್ಯೇಣ ಸ್ನಾನೈರ್ದಾನೈಃ ಪೃಥಗ್ವಿಧೈಃ ।
ತಥಾ ಯಜ್ಞೈರ್ಜಪೈರ್ಹೋಮೈಸ್ತತ್ರ ವೃತ್ತಿರ್ಭವೇನ್ನೃಣಾಂ ॥ ೧೯ ॥
ತತಸ್ತು ದ್ವಾಪರಂ ನಾಮ ತೃತೀಯಂ ಯುಗಮುಚ್ಯತೇ ।
ದ್ವಿಪದೋ ಧರ್ಮಃ ಸಂಜಾತಃ ಪೀತವರ್ಣೋ ಜನಾರ್ದನಃ ॥ ೨೦ ॥
ಫಲಾಕಾಂಕ್ಷಾಪ್ರವೃತ್ತಾನಿ ಜಪಯಜ್ಞತಪಾಂಸಿ ಚ ।
ಸತ್ಯಾನೃತಾನ್ವಿತೋ ಲೋಕೋ ದ್ವಾಪರೇ ಸುರಸತ್ತಮ ॥ ೨೧ ॥
ತತ್ರಾನ್ಯೋನ್ಯಂ ಮಹೀಪಾಲಾ ಯುಯುಧುರ್ವಸುಧಾತಲೇ ।
ಸುಪೂತಾಶ್ಚ ದಿವಂ ಯಾಂತಿ ಯಜ್ಞೈರಿಷ್ಟ್ವಾ ಜನಾರ್ದನಂ ॥ ೨೨ ॥
ತತಃ ಕಲಿಯುಗಂ ಘೋರಂ ಚತುರ್ಥಂ ತು ಪ್ರವರ್ತತೇ ।
ಏಕಪಾದೋ ಭವೇದ್ಧರ್ಮಃ ಸಂತ್ರಸ್ತೋ ನಿತ್ಯಪೂಜನೇ ॥ ೨೩ ॥
ಕೃಷ್ಣವರ್ಣೋ ಭವೇದ್ವಿಷ್ಣುಃ ಪಾಪಾಧಿಕ್ಯಂ ಪ್ರವರ್ತತೇ ।
ಮಾಯಾ ಚ ಮತ್ಸರಶ್ಚೈವ ಕಾಮಃ ಕ್ರೋಧಸ್ತಥಾ ಭಯಂ ॥ ೨೪ ॥
ಅರ್ಥಲುಬ್ಧಾಸ್ತಥಾ ಭೂಪಾ ಲೋಭಮೋಹತತಾನ್ವಿತಾಃ ।
ಅಲ್ಪಾಯುಷೋ ನರಾಸ್ತತ್ರ ಅಲ್ಪಸಸ್ಯಾ ಚ ಮೇದಿನೀ ॥ ೨೫ ॥

---

೧೯. ಮನುಷ್ಯರು ತಪಸ್ಸು, ಬ್ರಹ್ಮಚರ್ಯ, ಸ್ನಾನ, ದಾನ, ನಾನಾ ವಿಧಯಜ್ಞ, ಹೋಮ, ಇವುಗಳಲ್ಲಿ ನಿರತರಾಗುವರು.

೨೦. ಅನಂತರ ದ್ವಾಪರ ಎಂಬ ಮೂರನೆಯ ಯುಗವುಂಟಾಗುವುದು. ಅದರಲ್ಲಿ ಧರ್ಮವು ಎರಡು ಪಾದಗಳಿಂದ ನೆಲೆಸುವುದು. ವಿಷ್ಣುವು ಹಳದಿಬಣ್ಣವುಳ್ಳವನಾಗಿರುವನು.

೨೧. ಸುರೇಂದ್ರ ! ಅದರಲ್ಲಿ ಜಪ, ಯಜ್ಞ, ತಪಸ್ಸುಗಳು ಫಲಾಕಾಂಕ್ಷೆಯಿಂದ ನಡೆಯುವುವು. ಜನರು ಸತ್ಯ ಮತ್ತು ಸುಳ್ಳುಗಳೆರಡರಲ್ಲಿಯೂ ನಿರತರಾಗಿರುವರು.

೨೨. ಈ ದ್ವಾಪರಯುಗದಲ್ಲಿ ಭೂಮಂಡಲದ ದೊರೆಗಳು ಪರಸ್ಪರ ಯುದ್ಧ ಮಾಡುವರು. ಯಜ್ಞಗಳಿಂದ ವಿಷ್ಣುವನ್ನು ಪೂಜಿಸಿ ಪವಿತ್ರರಾಗಿ ಸ್ವರ್ಗಕ್ಕೆ ತೆರಳುವರು.

೨೩. ತರುವಾಯ ಭಯಂಕರವಾದ ನಾಲ್ಕನೆ ಕಲಿಯುಗವು ಉಂಟಾಗುವುದು. ಅದರಲ್ಲಿ ಧರ್ಮವು ನಿತ್ಯ ಪೂಜೆಯಲ್ಲಿ ಭಯಗೊಂಡು ಒಂದೇ ಪಾದದಿಂದ ಇರುವುದು.

೨೪. ವಿಷ್ಣುವು ಕೃಷ್ಣವರ್ಣನಾಗಿರುವನು. ಅಧಿಕ ಪಾಪವುಂಟಾಗುವುದು. ಮಾಯೆ, ಮಾತ್ಸರ್ಯ, ಕಾಮ, ಕ್ರೋಧ, ಭಯಗಳುಂಟಾಗುವುವು.

೨೫. ಅದರಲ್ಲಿ ದೊರೆಗಳು ದ್ರವ್ಯ, ಲೋಭ, ಮೋಹಗಳಲ್ಲಿ ನಿರತರಾಗುವರು. ಮಾನವರು ಅಲ್ಪಾಯುಷ್ಯವುಳ್ಳವರಾಗುವರು. ಭೂಮಿಯು ಅಲ್ಪಸಸ್ಯಗಳುಳ್ಳದಾಗುವುದು.

ಅಲ್ಪಕ್ಷೀರಾಸ್ತಥಾ ಗಾವಃ ಸತ್ಯಹೀನಾ ದ್ವಿಜಾತಯಃ ।
ತತ್ರ ಮಾಯಾವಿನೋ ಲೋಕಾ ಜೈಹ್ವ್ಯೋಪಸ್ಥ್ಯಪರಾಯಣಾಃ ॥ ೨೬ ॥
ಸತ್ಯಹೀನಾಸ್ತಥಾ ಪಾಪಾ ಭವಿಷ್ಯಂತಿ ಕಲೌ ಯುಗೇ ।
ತತ್ರ ಷೋಡಶಮೇ ವರ್ಷೇ ನರಾಃ ಪಲಿತಕುಂತಲಾಃ ॥ ೨೭ ॥
ನಾರ್ಯೋ ದ್ವಾದಶಮೇ ವರ್ಷೇ ಭವಿಷ್ಯಂತಿ ಸುಗರ್ಭಿತಾಃ ।
ಭವಿಷ್ಯತಿ ಕ್ರಮಾದ್ವರ್ಣಸಂಕರಶ್ಚ ಸುರಾಧಿಪ ॥ ೨೮ ॥
ಏಕಾಕಾರಾ ಭವಿಷ್ಯಂತಿ ಸರ್ವವರ್ಣಾಶ್ರಮಶ್ಚ ವೈ ।
ನಾಶಂ ಯಾಸ್ಯಂತಿ ಯಜ್ಞಾಶ್ಚ ಕುಲಧರ್ಮಃ ಸನಾತನಃ ॥ ೨೯ ॥
ವ್ಯರ್ಥಾನಿ ತತ್ರ ತೀರ್ಥಾನಿ ಮ್ಲೇಚ್ಛಸ್ಪೃಷ್ಟಾನಿ ಸರ್ವಶಃ ।
ಭವಿಷ್ಯಂತಿ ಸುರಶ್ರೇಷ್ಠ ಪ್ರಭಾವರಹಿತಾನಿ ಚ ॥ ೩೦ ॥
ಏತಚ್ಛ್ರುತ್ವಾ ತತೋ ವಾಕ್ಯಂ ಬ್ರಹ್ಮಣೋಽವ್ಯಕ್ತಜನ್ಮನಃ ।
ತತ್ರ ಸ್ಥಿತಾನಿ ತೀರ್ಥಾನಿ ಬ್ರಹ್ಮಾಣಮಿದಮಬ್ರುವನ್ ॥ ೩೧ ॥

ತೀರ್ಥಾನ್ಯೂಚು :—

ಕಥಂ ವಯಂ ಭವಿಷ್ಯಾಮಃ ಸಂಪ್ರಾಪ್ತೇ ದಾರುಣೇ ಕಲೌ ।
ಸ್ಥಾನಂ ನೋ ಬ್ರೂಹಿ ದೇವೇಶ ಸ್ಥಾತವ್ಯಂ ಚ ಸದೈವ ಹಿ ॥ ೩೨ ॥

---

೨೬–೨೭. ಗೋವುಗಳು ಸ್ವಲ್ಪ ಹಾಲುಳ್ಳವೂ, ಬ್ರಾಹ್ಮಣರು ಸತ್ಯಬಾಹ್ಯರೂ, ಮಾನವರು ಕಪಟಿಗಳೂ, ನಾಲಿಗೆ, ಉಪಸ್ಥಗಳಲ್ಲಿ ನಿರತರೂ, ಸತ್ಯವಿಲ್ಲದವರೂ, ಪಾಪಿಗಳೂ ಆಗುವರು. ಮನುಷ್ಯರು ಹದಿನಾರನೆ ವಯಸ್ಸಿನಲ್ಲಿ ನೆರೆತ ಕೂದಲುಳ್ಳವರಾಗುವರು.

೨೮. ದೇವೇಂದ್ರ! ಸ್ತ್ರೀಯರು ಹನ್ನೆರಡನೆಯ ವಯಸ್ಸಿನಲ್ಲಿ ಗರ್ಭಿಣಿಯರಾಗುವರು. ಕ್ರಮವಾಗಿ ಜಾತಿಸಾಂಕರ್ಯವಾಗುವುದು.

೨೯. ಸಕಲ ಜಾತಿ, ಆಶ್ರಮಗಳು ಒಂದೇ ವಿಧವಾಗುತ್ತವೆ. ಯಜ್ಞಗಳೂ, ಅನಾದಿಯಾದ ಕುಲಧರ್ಮವೂ ಹಾಳಾಗುವುವು.

೩೦. ಸಕಲ ತೀರ್ಥಗಳನ್ನೂ ಮ್ಲೇಚ್ಛರು ಮುಟ್ಟುವುದರಿಂದ ಅವು ನಿಷ್ಫಲಗಳೂ, ಪ್ರಭಾವವಿಲ್ಲದುವೂ ಆಗುವುವು.

೩೧. ತರುವಾಯ ಪಿತಾಮಹನ ಈ ನುಡಿಯನ್ನು ಕೇಳಿ ಅಲ್ಲಿರುವ ತೀರ್ಥಗಳು ಬ್ರಹ್ಮನನ್ನು ಕುರಿತು ಹೀಗೆಂದುವು.

೩೨. ತೀರ್ಥಗಳು ಹೇಳುತ್ತವೆ:—ಪಿತಾಮಹ! ಭಯಂಕರವಾದ ಕಲಿಯುಗವು ಬರಲು ನಾವು ಹೇಗಿರುವೆವು? ನಾವು ಯಾವಾಗಲೂ ವಾಸಮಾಡಲರ್ಹವಾದ ಸ್ಥಳವಾವುದು.

ಬ್ರಹ್ಮೋವಾಚ :—
ಅರ್ಬುದಃ ಪರ್ವತಶ್ರೇಷ್ಠ ಕಲಿಸ್ತತ್ರ ನ ವಿದ್ಯತೇ ।
ಅತಸ್ತತ್ರ ಚ ಗಂತವ್ಯಂ ತೀರ್ಥೈರಾಯತನೈಃ ಸಹ ॥ ೩೩ ॥
ಅಪಿ ಕೃತ್ವಾ ಮಹತ್ಪಾಪಮರ್ಬುದಂ ಪ್ರೇಕ್ಷತೇ ತು ಯಃ ।
ಕಲಿದೋಷವಿನಿರ್ಮುಕ್ತಃ ಸ ಯಾಸ್ಯತಿ ಪರಾಂ ಗತಿಂ ॥ ೩೪ ॥

ಪುಲಸ್ತ್ಯ ಉವಾಚ :—
ಏವಮುಕ್ತ್ವಾ ಚತುರ್ವಕ್ತ್ರೋ ಬ್ರಹ್ಮಲೋಕಂ ಗತೋ ನೃಪ ।
ತತಃ ಸರ್ವಾಣಿ ತೀರ್ಥಾನಿ ಗತಾನಿ ಚ ಕಲೌ ಯುಗೇ ॥ ೩೫ ॥
ಭೂಮಾವರ್ಬುದಶೈಲೇಂದ್ರೇ ಸಂಸ್ಥಿತಾನಿ ಕಲೇರ್ಭಯಾತ್ ।
ಗಂಗಾ ಸರಸ್ವತೀ ಚೈವ ಯಮುನಾ ಪುಷ್ಕರಾಣಿ ಚ ॥ ೩೬ ॥
ಕುರುಕ್ಷೇತ್ರಂ ಪ್ರಭಾಸಂ ಚ ಬ್ರಹ್ಮಾವರ್ತಂ ತಥೈವ ಚ ।
ತಿಸ್ರಃಕೋಟ್ಯೋಽರ್ಧಕೋಟಿಶ್ಚ ಯಾನಿ ತೀರ್ಥಾನಿ ಭೂತಲೇ ॥ ೩೭ ॥
ತೇಷಾಂ ವಾಸಶ್ಚ ಸಂಜಾತಃ ಪರ್ವತೇಽರ್ಬುದಸಂಜ್ಞಿಕೇ ।
ಏವಂ ತತ್ರ ಸಮಾಪನ್ನಾ ಗಂಗಾ ಚೈವ ಸರಸ್ವತೀ ॥ ೩೮ ॥
ತತ್ರ ಶಾಂತಾ ನರಾಃ ಸಮ್ಯಕ್ಪರಂ ನಿರ್ವಾಣಮಾಪ್ನುಯುಃ ।
ಶ್ರಾದ್ಧಂ ಕೃತ್ವಾ ಮಹಾರಾಜ ಸ್ವರ್ಗೇ ಯಾಂತಿ ಚ ಪೂರ್ವಜಾಃ ॥ ೩೯ ॥

---

೩೩. ಬ್ರಹ್ಮನು ಹೇಳುತ್ತಾನೆ :—ಅರ್ಬುದವೆಂಬ ಒಂದು ಶ್ರೇಷ್ಠ ಪರ್ವತವಿರುವುದು. ಅಲ್ಲಿ ಕಲಿಯಿರುವುದಿಲ್ಲ ಆದುದರಿಂದ ನೀವೂ ದೇವಾಲಯಗಳೂ ಅಲ್ಲಿಗೆ ಹೋಗಿರಿ.

೩೪. ಅತಿಶಯಪಾಪವನ್ನು ಮಾಡಿದವನೂ ಅರ್ಬುದ ಕ್ಷೇತ್ರವನ್ನು ದರ್ಶನ ಮಾಡಿದರೆ ಕಲಿ ದೋಷಮುಕ್ತನಾಗಿ ಉತ್ತಮ ಗತಿಯನ್ನು ಪಡೆಯುವನು.

೩೫–೩೮. ಪುಲಸ್ತ್ಯನು ಹೇಳುತ್ತಾನೆ:—ಬ್ರಹ್ಮನು ಹೀಗೆಂದು ತನ್ನ ಲೋಕಕ್ಕೆ ತೆರಳಿದನು. ಅನಂತರ ಕಲಿಯುಗದಲ್ಲಿ ಸಕಲ ತೀರ್ಥಗಳೂ ಅರ್ಬುದ ಪರ್ವತಕ್ಕೆ ಹೋದುವು. ಅಲ್ಲಿ ಕಲಿಯ ಭಯದಿಂದ ಗಂಗಾ, ಸರಸ್ವತೀ, ಯಮುನಾ, ಪುಷ್ಕರ, ಕುರುಕ್ಷೇತ್ರ, ಪ್ರಭಾಸ, ಬ್ರಹ್ಮಾವರ್ತ ಮೊದಲಾದ ಭೂಮಿಯಲ್ಲಿರುವ ಮೂರುವರೆ ಕೋಟಿ ತೀರ್ಥಗಳು ನೆಲೆಸಿದುವು. ಗಂಗಾ, ಸರಸ್ವತೀ ನದಿಗಳು ಅಲ್ಲಿ ನೆಲಸಲು ಇದೇ ಕಾರಣವಾಗಿರುವುದು.

೩೯. ಅಲ್ಲಿ ಶಾಂತರಾದ ಮಾನವರು ಮೋಕ್ಷವನ್ನು ಹೊಂದುವರು. ಶ್ರಾದ್ಧ ಮಾಡಿದವನ ಪೂರ್ವಪಿತೃಗಳು ಸ್ವರ್ಗಲೋಕಕ್ಕೆ ತೆರಳುವರು.

ಶೃಣು ತತ್ರಾಭವತ್ಪೂರ್ವಂ ಯದಾಶ್ಚರ್ಯಂ ಮಹಾಮತೇ ।
ಋಷಿರ್ಮಂಕಣಕೋನಾಮ ಸರಸ್ವತ್ಯಾಸ್ತಟೇ ಸ್ಥಿತಃ ॥ ೪೦ ॥
ತಪಸ್ತೇಪೇ ಸುಧರ್ಮಾತ್ಮಾ ಕಾಮಕ್ರೋಧವಿವರ್ಜಿತಃ ।
ತಸ್ಯೈವಂ ವರ್ತಮಾನಸ್ಯ ಕ್ಷುತಮಾಸೀತ್ಕದಾಚನ ॥ ೪೧ ॥
ಪಿತ್ತಂ ಪ್ರಪತಿತಂ ತತ್ರ ತಚ್ಚ ರಕ್ತಮಯಂ ಬಭೌ ।
ತದ್ದೃಷ್ಟ್ವಾಽತೀವ ಹೃಷ್ಟಃ ಸ ಮಂಕಣರ್ಷಿರ್ಬಭೂವ ಹ ॥ ೪೨ ॥
ಸಿದ್ಧೋಽಹಮಿತಿ ವಿಜ್ಞಾಯ ತತೋ ನೃತ್ಯಂ ಚಕಾರ ಸಃ ।
ತಸ್ಯೈವಂ ವರ್ತಮಾನಸ್ಯ ಜಗತ್ಸ್ಥಾವರಜಂಗಮಂ ॥ ೪೩ ॥
ತತ್ರ ಸಂಕ್ಷೋಭಮಾಪನ್ನಂ ಸಾಗರಾ ಅಪಿ ಚುಕ್ಷುಭುಃ ।
ಗೃಹಕೃತ್ಯಾನಿ ಸಂತ್ಯಜ್ಯ ಸರ್ವೇ ವಿಸ್ಮಯಮಾಗತಾಃ ॥ ೪೪ ॥
ತಸ್ಯೈವಂ ನೃತ್ಯಮಾನಸ್ಯ ಸರ್ವೇ ಲೋಕಾ ನೃಪೋತ್ತಮ ।
ನನೃತುಃ ಪಾರ್ಥಿವಶ್ರೇಷ್ಠ ಪ್ರಭಾವಾತ್ತಸ್ಯ ತನ್ಮುನೇಃ ॥ ೪೫ ॥
ತತೋ ದೇವಗಣಾಃ ಸರ್ವೇ ಗತ್ವಾ ಕಾಮನಿಷೂದನಂ ।
ಯಥಾಽಯಂ ನೃತ್ಯತೇ ನೈವ ತಥಾ ಕುರು ಮಹೇಶ್ವರ ॥ ೪೬ ॥

---

೪೦–೪೧. ಅಲ್ಲಿ ಹಿಂದೆ ನಡೆದ ಅದ್ಭುತ ವಿಷಯವೊಂದನ್ನು ಕೇಳು. ಸರಸ್ವತೀ ನದಿಯ ದಡದಲ್ಲಿ ವಾಸವಾಗಿರುವ ಮಂಕಣಕನೆಂಬ ಮುನಿಯು ಕಾಮ ಕ್ರೋಧಗಳನ್ನು ತ್ಯಜಿಸಿ ಅಲ್ಲಿ ತಪಸ್ಸನ್ನು ಮಾಡಿದನು. ಅವನು ಹೀಗಿರುತ್ತಿರಲು ಒಂದಾನೊಂದು ದಿನ ಅವನಿಗೆ ಹಸಿವಾಯಿತು.

೪೨. ಅಲ್ಲಿ ಅವನ ಪಿತ್ತವು ಕೆಳಗೆ ಬೀಳಲು ಅದು ರಕ್ತಮಯವಾಗಿ ಪ್ರಕಾಶಿಸಿತು. ಮಂಕಣರ್ಷಿಯು ಅದನ್ನು ನೋಡಿ ಸಂತೋಷಗೊಂಡನು.

೪೩–೪೪. ಅವನು ನಾನು ಸಿದ್ಧನಾಗಿರುವೆನೆಂದು ತಿಳಿದು ಕುಣಿದನು. ಅವನು ಹೀಗಿರಲು ಸ್ಥಾವರಜಂಗಮಾತ್ಮಕ ಪ್ರಪಂಚವೂ, ಸಮುದ್ರಗಳೂ ಕ್ಷೋಭೆಗೊಂಡುವು. ಎಲ್ಲರೂ ತಮ್ಮ ಮನೆಯ ಕೆಲಸಗಳನ್ನು ಬಿಟ್ಟು ಆಶ್ಚರ್ಯಗೊಂಡರು.

೪೫. ನರೇಂದ್ರ ! ಅವನು ಹೀಗೆ ಕುಣಿಯುತ್ತಿರಲು ಅವನ ಪ್ರಭಾವದಿಂದ ಸಮಸ್ತ ಜನರು ಕುಣಿದರು.

೪೬. ಬಳಿಕ ಸಮಸ್ತ ದೇವತೆಗಳೂ ಮಹೇಶ್ವರನೆಡೆಗೆ ಹೋಗಿ," ಮಹೇಶ್ವರ ! ಈ ಮುನಿಯು ಕುಣಿಯದಂತೆ ಮಾಡೆಂದರು".

ಅಥ ಬ್ರಾಹ್ಮಣರೂಪೇಣ ಶಂಭುನೋಕ್ತೋ ದ್ವಿಜೋತ್ತಮಃ ।
ತ್ವಯಾ ಬ್ರಹ್ಮಂಸ್ತಪಸ್ತಪ್ತಮಧುನಾ ನೃತ್ಯತೇ ಕಥಂ ॥ ೪೭ ॥

ಮಂಕಣ ಉವಾಚ :—

ಕಿಂ ನ ಪಶ್ಯಸಿ ಹೇ ಬ್ರಹ್ಮನ್ರಕ್ತಂ ಪಿತ್ತಂ ಚ ಮೇ ಸ್ಥಿತಂ ।
ಸಂಜಾತಂ ಸಿದ್ಧಿಮಾಪನ್ನೋ ರಕ್ತಂ ಪಿತ್ತಂ ಯತೋ ಮಮ ॥ ೪೮ ॥
ಏತಸ್ಮಾತ್ಕಾರಣಾದ್ಧರ್ಷಾದ್ದ್ವಿಜ ನೃತ್ಯಂ ಕರೋಮ್ಯಹಂ ।
ಏವಮುಕ್ತಸ್ತತಸ್ತೇನ ದೇವದೇವೋ ಮಹೇಶ್ವರಃ ॥ ೪೯ ॥
ತರ್ಜನ್ಯಾ ತಾಡಯಾಮಾಸ ಸ್ವಾಂಗುಷ್ಠಂ ನೃಪಸತ್ತಮ ।
ತತೋಂಗುಷ್ಠಾದ್ವಿನಿಷ್ಕ್ರಾಂತಂ ಭಸ್ಮ ವೈ ಬಿಸಪಾಂಡುರಂ ॥ ೫೦ ॥
ತತೋ ಮಂಕಣಕಂ ಪ್ರಾಹ ಪಶ್ಯ ವಿಪ್ರ ಕರಾನ್ಮಮ ।
ಶುಭ್ರಂ ಭಸ್ಮ ವಿನಿಷ್ಕ್ರಾಂತಂ ಪಶ್ಯ ಮೇ ದ್ವಿಜ ಕೌತುಕಂ ॥ ೫೧ ॥

ಪುಲಸ್ತ್ಯ ಉವಾಚ :—

ತದ್ದೃಷ್ಟ್ವಾ ವಿಸ್ಮಿತೋ ವಿಪ್ರೋ ಜ್ಞಾತ್ವಾ ತಂ ವೃಷಭಧ್ವಜಂ ।
ಜಾನುಭ್ಯಾಮವನಿಂ ಗತ್ವಾ ವಾಕ್ಯಮೇತದುವಾಚ ಹ ॥ ೫೨ ॥

---

೪೭. ಅನಂತರ ಶಿವನು ಬ್ರಾಹ್ಮಣರೂಪದಿಂದ ಅವನೆಡೆಗೆ ಹೋಗಿ, "ಬ್ರಾಹ್ಮಣ! ನೀನು ತಪಸ್ಸನ್ನು ಮಾಡಿರುವೆ. ಈಗ ಏಕೆ ಕುಣಿಯುತ್ತಿರುವೆ ?" ಎಂದು ಕೇಳಿದನು.

೪೮. ಮಂಕಣನು ಹೇಳುತ್ತಾನೆ.—ಬ್ರಾಹ್ಮಣ ! ನನ್ನ ಪಿತ್ತವು ರಕ್ತಮಯವಾಗಿರುವುದನ್ನು ನೀನು ನೋಡುವುದಿಲ್ಲವೊ ? ನನ್ನ ಪಿತ್ತವು ರಕ್ತಮಯವಾಗಿರುವುದರಿಂದ ನಾನು ಸಿದ್ಧಿಯನ್ನು ಪಡೆದಿರುವೆನು.

೪೯–೫೦. ಇದರಿಂದುಂಟಾದ ಸಂತೋಷದಿಂದ ನಾನು ಕುಣಿಯುತ್ತೇನೆ. ಹೀಗೆ ಮಂಕಣನು ಹೇಳಲು ಮಹೇಶ್ವರನು ತರ್ಜನಿಯಿಂದ ತನ್ನ ಅಂಗುಷ್ಠದ ಬೆರಳನ್ನು ಹೊಡೆದನು. ಆಗ ಆ ಬೆರಳಿನಿಂದ ತಾವರೆ ದಂಟಿನಂತೆ ಬೆಳ್ಳಗಾದ ಭಸ್ಮವು ಹೊರಟಿತು.

೫೧. ಆಗ ಶಿವನು ಮಂಕಣನನ್ನು ಕುರಿತು, "ಬ್ರಾಹ್ಮಣ ! ನೋಡು ನನ್ನ ಕೈಯಿಂದ ಶುಭ್ರವಾದ ಭಸ್ಮವು ಹೊರಟಿರುವುದು. ಈ ಕೌತುಕವನ್ನು ನೋಡು" ಎಂದನು.

೫೨. ಅದನ್ನು ನೋಡಿ ಆಶ್ಚರ್ಯಗೊಂಡ ಆ ಮಂಕಣನು ಅವನನ್ನು ಶಿವನೆಂದರಿತು ಮೊಣಕಾಲನ್ನೂರಿ ವಂದಿಸಿ ಇಂತೆಂದನು.

ಮಂಕಣ ಉವಾಚ :—

ನೂನಂ ಭವಾನ್ಮಹಾದೇವಃ ಸಾಕ್ಷಾದ್ದೃಷ್ಟಃ ಪ್ರಸೀದ ಮೇ ।
ನಿಶ್ಚಿತಂ ತ್ವಂ ಮಯಾ ಜ್ಞಾತ್ವಾ ಏತನ್ಮೇ ಹೃದಿ ವರ್ತತೇ ॥ ೫೩ ॥

ನಾನ್ಯಸ್ಯಾಯಂ ಪ್ರಭಾವಶ್ಚ ತ್ವಯಾ ಯೋ ಮೇ ಪ್ರದರ್ಶಿತಃ ।
ಮಾಂ ಸಮುದ್ಧರ ದೇವೇಶ ಕೃಪಾಂ ಕೃತ್ವಾ ಮಹೇಶ್ವರ ॥ ೫೪ ॥

ಶ್ರೀ ಮಹಾದೇವ ಉವಾಚ :—

ಸಮ್ಯಗ್ಜ್ಞಾತೋಽಸ್ಮಿ ವಿಪ್ರೇಂದ್ರ ತ್ವಯಾಽಹಂ ನಾತ್ರ ಸಂಶಯಃ ।
ವರಂ ವರಯ ಭದ್ರಂ ತೇ ನೃತ್ಯಾಧಿಕ್ಯಂ ಯತಃ ಕೃತಂ ॥ ೫೫ ॥

ಮಂಕಣ ಉವಾಚ :—

ಯೇಽತ್ರ ಸ್ನಾನಂ ಪ್ರಕುರ್ವಂತಿ ಸರಸ್ವತ್ಯಾಂ ಸಮಾಹಿತಾಃ ।
ತ್ವತ್ಪ್ರಸಾದಾತ್ಫಲಂ ತೇಷಾಂ ರಾಜಸೂಯಾಶ್ವಮೇಧಯೋಃ ॥ ೫೬ ॥

ಶ್ರೀ ಮಹಾದೇವ ಉವಾಚ :—

ಯೇಽತ್ರ ಸ್ನಾನಂ ಕರಿಷ್ಯಂತಿ ಸರಸ್ವತ್ಯಾಂ ಸಮಾಹಿತಾಃ ।
ತೇ ಯಾಸ್ಯಂತಿ ಪರಂ ಸ್ಥಾನಂ ಜರಾಮರಣವರ್ಜಿತಂ ॥ ೫೭ ॥

ಅತ್ರ ಗಂಗಾಸರಸ್ವತ್ಯೋಃ ಸಂಗಮೋ ಲೋಕವಿಶ್ರುತೇ ।
ಶ್ರಾದ್ಧಂ ಕುರ್ಯುರ್ದ್ವಿಜಶ್ರೇಷ್ಠ ತೇ ಯಾಸ್ಯಂತಿ ಪರಾ ಗತಿಂ ॥ ೫೮ ॥

---

೫೩. ಮಂಕಣನು ಹೇಳುತ್ತಾನೆ :—ನೀನು ನಿಶ್ಚಯವಾಗಿಯೂ ಪ್ರತ್ಯಕ್ಷನಾದ ಮಹೇಶ್ವರನು. ನನ್ನನ್ನು ಅನುಗ್ರಹಿಸು. ನಿಶ್ಚಯವಾಗಿಯೂ ನಾನು ನಿನ್ನನ್ನರಿತಿರುವೆನು ಎಂದು ಆಲೋಚಿಸುತ್ತೇನೆ.

೫೪. ನೀನು ನನಗೆ ತೋರಿಸಿದ ಪ್ರಭಾವವು ಬೇರೆ ಯಾರಲ್ಲಿಯೂ ಇಲ್ಲ. ಮಹೇಶ್ವರ ! ನನ್ನನ್ನು ದಯೆಯಿಂದ ಉದ್ಧರಿಸು.

೫೫. ಶ್ರೀ ಮಹಾದೇವನು ಹೇಳುತ್ತಾನೆ :—ಬ್ರಾಹ್ಮಣ ! ನೀನು ನಿಶ್ಚಯವಾಗಿಯೂ ನನ್ನನ್ನು ಸರಿಯಾಗಿ ತಿಳಿದುಕೊಂಡಿರುವೆ. ವರವನ್ನು ಕೇಳಿಕೊ. ನೀನು ಅತಿಶಯವಾಗಿ ನೃತ್ಯಮಾಡಿದ್ದರಿಂದ ನಿನಗೆ ಮಂಗಳವಾಗಲಿ.

೫೬. ಮಂಕಣನು ಹೇಳುತ್ತಾನೆ :—ಈ ಸರಸ್ವತೀನದಿಯಲ್ಲಿ ಸಾವಧಾನ ಮನಸ್ಸಿನಿಂದ ಮಿಂದವರಿಗೆ ನಿನ್ನ ಅನುಗ್ರಹದಿಂದ ರಾಜಸೂಯ, ಅಶ್ವಮೇಧಯಾಗ ಗಳ ಫಲವು ಲಭಿಸಲಿ.

೫೭. ಶ್ರೀ ಮಹಾದೇವನು ಹೇಳುತ್ತಾನೆ :—ಈ ಸರಸ್ವತೀ ನದಿಯಲ್ಲಿ ಸಾವಧಾನಮನಸ್ಸಿನಿಂದ ಮಿಂದವರು ಜರಾಮರಣಗಳಿಲ್ಲದ ಉತ್ತಮಸ್ಥಾನಕ್ಕೆ ಸೇರಳುವರು.

೫೮. ಪ್ರಪಂಚದಲ್ಲಿ ಪ್ರಸಿದ್ಧವಾದ ಈ ಗಂಗಾ ಸರಸ್ವತೀ ಸಂಗಮದಲ್ಲಿ ಶ್ರಾದ್ಧ ಮಾಡಿದವರು ಉತ್ತಮ ಗತಿಯನ್ನು ಪಡೆಯುವರು.

ಸುವರ್ಣಂ ಯೇಽತ್ರ ದಾಸ್ಯಂತಿ ಯಥಾಶಕ್ತ್ಯಾ ದ್ವಿಜೋತ್ತಮೇ ।
ಸರ್ವಪಾಪವಿನಿರ್ಮುಕ್ತಾಸ್ತೇ ಯಾಸ್ಯಂತಿ ಪರಾಂ ಗತಿಂ ॥ ೫೯ ॥
ಇತ್ಯುಕ್ತ್ವಾಂತರ್ದಧೇ ರಾಜನ್ದೇವದೇವೋ ಮಹೇಶ್ವರಃ ॥ ೬೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಸರ್ವತೀರ್ಥಾಗಮನವರ್ಣನಂ ನಾಮ
ದಶಮೋಽಧ್ಯಾಯಃ

---

೫೯. ಇಲ್ಲಿ ಶಕ್ತ್ಯನುಸಾರ ಬ್ರಾಹ್ಮಣೋತ್ತಮನಿಗೆ ಸುವರ್ಣದಾನ ಮಾಡಿದವರು. ಸಕಲ ಪಾಪಮುಕ್ತರಾಗಿ ಉತ್ತಮ ಗತಿಯನ್ನು ಹೊಂದುವರು.

೬೦. ದೊರೆಯೆ! ಮಹೇಶ್ವರನು ಹೀಗೆ ಹೇಳಿ ಅಂತರ್ಧಾನವಾದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಸರ್ವತೀರ್ಥಾಗಮನವರ್ಣನವೆಂಬ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಏಕಾದಶೋಽಧ್ಯಾಯಃ

## ಕೋಟೀಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ದೇವಂ ಕೋಟೀಶ್ವರಂ ಪರಂ ।
ಯಂ ದೃಷ್ಟ್ವಾ ಮಾನವಃ ಸಮ್ಯಕ್ಪರಾಂ ಸಿದ್ಧಿಮವಾಪ್ನುಯಾತ್ ॥ ೧ ॥
ಶೃಣು ತತ್ರಾಭವತ್ಪೂರ್ವಂ ಯದಾಶ್ಚರ್ಯಂ ಮಹೀಪತೇ ।
ದಕ್ಷಿಣಸ್ಥಾ ಮುನಿವರಾಃ ಕೋಟಿಸಂಖ್ಯಾಪ್ರಮಾಣತಃ ॥ ೨ ॥
ಅನ್ಯೋನ್ಯಂ ಸ್ಪರ್ಧಯಾ ಸರ್ವೇ ಹೇಲಯಾಽರ್ಬುದಮಾಗತಾಃ ।
ಅಹಂ ಪೂರ್ವಮಹಂ ಪೂರ್ವಂ ಪ್ರಪಶ್ಯಾಮ್ಯಚಲೇಶ್ವರಂ ॥ ೩ ॥
ಆಗಮಿಷ್ಯತಿ ಯಃ ಪಶ್ಚಾದ್ಬ್ರಾಹ್ಮಣಃ ಶ್ವಾ ಭವಿಷ್ಯತಿ ।
ಪಾಪೀಯಾನ್ಭಕ್ತಿರಹಿತಃ ಶ್ರದ್ಧಾಹೀನೋ ಭವಿಷ್ಯತಿ ॥ ೪ ॥

---

### ಕನ್ನಡದ ಅನುವಾದ

### ಕೋಟೀಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೇಂದ್ರ ! ಅನಂತರ ಕೋಟೀಶ್ವರನೆಡೆಗೆ ಹೋಗಬೇಕು. ಅವನನ್ನು ದರ್ಶನಮಾಡಿದ ಮಾನವನು ಉತ್ತಮ ಸಿದ್ಧಿಯನ್ನು ಹೊಂದುವನು.

೨-೩. ದೊರೆಯೆ ! ಆ ಅರ್ಬುದದಲ್ಲಿ ಹಿಂದೆ ನಡೆದ ಆಶ್ಚರ್ಯವನ್ನು ಕೇಳು. ದಕ್ಷಿಣ ದೇಶದ ಕೋಟಿಮಂದಿ ಮುನಿವರ್ಯರೆಲ್ಲರೂ ನಾನು ಮೊದಲು ಅಚಲೇಶ್ವರನನ್ನು ನೋಡುವೆನು. ನಾನು ಮೊದಲು ನೋಡುವೆನು ಎಂದು ಪರಸ್ಪರ ಸ್ಪರ್ಧೆಯಿಂದ ಅರ್ಬುದಕ್ಕೆ ಬಂದರು.

೪. ಅನಂತರ ಅರ್ಬುದವನ್ನು ಸೇರುವ ಬಾಹ್ಮಣನು ಪಾಪಿಷ್ಠನೂ, ಭಕ್ತಿ ಶ್ರದ್ಧೆಯಿಲ್ಲದವನೂ ಆಗಿ ನಾಯಿಯಂತಾಗುವನು.

ಇತ್ಯೇವಂ ಸ್ಪರ್ಧಮಾನಾಸ್ತೇ ಹೇಲಯಾಽರ್ಬುದಮಾಗತಾಃ ।
ತತಃ ಸರ್ವೇ ಯತಾತ್ಮಾನಃ ಸಮ್ಯಗ್ವ್ರತಪರಾಯಣಾಃ ॥ ೫ ॥
ಶಾಂತಾಸ್ತಪಸ್ವಿನಃ ಸರ್ವೇ ವೇದವಿದ್ಯಾವಿಶಾರದಾಃ ।
ತೇಷಾಮಾಹಿತಮಾಜ್ಞಾಯ ಸಮ್ಯಕ್ಕಾಮನಿಷೂದನಃ ॥ ೬ ॥
ಕೃಪಯಾ ಪರಯಾವಿಷ್ಟೋ ಭಕ್ತಿಭಾವಾನ್ಮಹೇಶ್ವರಃ ।
ಕೋಟಿಂ ಕೃತ್ವಾಽಽತ್ಮಲಿಂಗಾನಾಂ ತಸ್ಮಿನ್ಸ್ಥಾನೇ ವ್ಯವಸ್ಥಿತಃ ॥ ೭ ॥
ಕಸ್ಮಿನ್ನೇವ ಕಾಲೇ ತು ಸರ್ವೈರ್ದೃಷ್ಟೋ ಮಹೇಶ್ವರಃ ।
ಮುನಿಭಿಶ್ಚ ನೃಪಶ್ರೇಷ್ಠ ಕೋಟಿಸಂಖ್ಯೈಃ ಪೃಥಕ್ಪೃಥಕ್ ॥ ೮ ॥
ಅಥ ತೇ ಮುನಯಃ ಸರ್ವೇ ಸಮಂ ದೃಷ್ಟ್ವಾ ಮಹೇಶ್ವರಂ ।
ವಿಸ್ಮಯೋತ್ಫುಲ್ಲನಯನಾಃ ಸಾಧುಸಾಧ್ವಿತಿ ಚಾಬ್ರುವನ್ ॥ ೯ ॥
ಭಕ್ತಿಯುಕ್ತಾ ದ್ವಿಜಾಃ ಸರ್ವೇಽಸ್ತುವಂಸ್ತೇ ವೈದಿಕೈಃಸ್ತವೈಃ ।
ತೇಷಾಂ ತುಷ್ಟಸ್ತತಃ ಶಂಭುರ್ವಾಕ್ಯಮೇತದುವಾಚ ಹ ॥ ೧೦ ॥

ಶ್ರೀ ಮಹಾದೇವ ಉವಾಚ :—

ತುಷ್ಟೋಽಹಂ ಮುನಯಃ ಸರ್ವೇ ಶ್ರದ್ಧಯಾ ಪರಯಾ ಹಿ ವಃ ।
ವರಂ ವೈ ವ್ರಿಯತಾಂ ಶೀಘ್ರಂ ಸರ್ವೈಶ್ಚೈವ ಪೃಥಕ್ಪೃಥಕ್ ॥ ೧೧ ॥

---

೫–೭. ಹೀಗೆ ಪರಸ್ಪರ ಸ್ಪರ್ಧೆಯುಳ್ಳ ಜಿತೇಂದ್ರಿಯರೂ, ವ್ರತನಿರತರೂ, ಶಾಂತರೂ, ತಪಸ್ವಿಗಳೂ, ವೇದವಿದ್ಯಾಪಾರಂಗತರೂ ಆದ ಆ ಬ್ರಾಹ್ಮಣರು ಅರ್ಬುದಕ್ಕೆ ಬಂದರು. ಮನ್ಮಥನಾಶಕನಾದ ಪರಮೇಶ್ವರನು ಅವರ ಇಷ್ಟವನ್ನರಿತು ಅವರ ಭಕ್ತಿಗೆ ಮೆಚ್ಚಿ ಅತ್ಯಂತ ದಯೆಗೊಂಡು ತಾನು ಕೋಟಿ ಸಂಖ್ಯೆಯ ಲಿಂಗಗಳಾಗಿ ಅಲ್ಲಿ ನೆಲೆಸಿದನು.

೮. ಆದರಿಂದ ಒಂದೇ ಸಮಯದಲ್ಲಿ ಕೋಟಿಮಂದಿ ಬ್ರಾಹ್ಮಣರು ಆ ಮಹೇಶ್ವರನನ್ನು ಪ್ರತ್ಯೇಕವಾಗಿ ದರ್ಶನಗೈದರು.

೯. ಅನಂತರ ಆ ಸಮಸ್ತ ಮುನಿಗಳು ಒಂದೇಸಾರಿ ಮಹೇಶ್ವರನನ್ನು ಕಂಡು ಆಶ್ಚರ್ಯದಿಂದ ಒಳ್ಳೆಯದು. ಒಳ್ಳೆಯದು ಎಂದರು.

೧೦. ಅವರೆಲ್ಲ ಭಕ್ತಿಯಿಂದ ವೇದೋಕ್ತ ಸ್ತೋತ್ರಗಳಿಂದ ಅವನನ್ನು ಸ್ತುತಿಸಲು ಆದರಿಂದ ಸಂತೋಷಗೊಂಡ ಶಿವನು ಇಂತೆಂದನು.

೧೧. ಶ್ರೀ ಮಹಾದೇವನು ಹೇಳುತ್ತಾನೆ:—ಮುನಿಗಳೆ! ನಾನು ನಿಮ್ಮೆಲ್ಲರ ಅತ್ಯಂತ ಶ್ರದ್ಧೆಯಿಂದ ಸಂತುಷ್ಟನಾಗಿದ್ದೇನೆ. ನೀವೆಲ್ಲ. ಪ್ರತ್ಯೇಕವಾಗಿ ವರವನ್ನು ಶೀಘ್ರವಾಗಿ ಕೇಳಿಕೊಳ್ಳಿರಿ.

ಋಷಯ ಊಚುಃ :—

ಏಷ ಏವ ವರೋಽಸ್ಮಾಕಂ ಸರ್ವೇಷಾಂ ಹೃದಿ ವರ್ತಿತಃ ।
ಯುಗಪದ್ದರ್ಶನಾದೇವ ಜಾಯತಾಂ ಫಲಮುತ್ತಮಂ ॥ ೧೨ ॥

ಶ್ರೀ ಮಹಾದೇವ ಉವಾಚ :—

ನ ವೃಥಾ ದರ್ಶನಂ ಮೇ ಸ್ಯಾದ್ವಿಶೇಷಾದ್ಬ್ರಾಹ್ಮಣಸ್ಯ ಚ ।
ದರ್ಶನಂ ಯೇ ಕರಿಷ್ಯಂತಿ ತೇಷಾಂ ಚ ತೀರ್ಥಜಂ ಫಲಂ ॥ ೧೩ ॥

ಮುನಯ ಊಚುಃ :—

ಅವಶ್ಯಂ ಯದಿ ದಾತವ್ಯೋ ವರೋಽಸ್ಮಾಕಂ ಮಹೇಶ್ವರ ।
ಏಕಂ ಕೋಟಿಮಯಂ ಲಿಂಗಂ ಕ್ರಿಯತಾಂ ವೃಷಭಧ್ವಜ ॥ ೧೪ ॥
ಯಸ್ಮಿನ್ದೃಷ್ಟೇ ಫಲಂ ನೄಣಾಂ ಜಾಯತೇ ಕೋಟಿಲಿಂಗಜಂ ।
ಏವಮೇಷ ವರೋಽಸ್ಮಾಕಂ ದೀಯತಾಂ ವೃಷಭಧ್ವಜ ॥ ೧೫ ॥

ಪುಲಸ್ತ್ಯ ಉವಾಚ :—

ಏವಂ ಸಂಪ್ರಾರ್ಥಮಾನಾನಾಂ ಮುನೀನಾಂ ಭಾವಿತಾತ್ಮನಾಂ ।
ನಿರ್ಭಿದ್ಯ ಪರ್ವತಶ್ರೇಷ್ಠಂ ಸಹಸಾ ಲಿಂಗಮುದ್ಗತಂ ॥ ೧೬ ॥
ಏತಸ್ಮಿನ್ನೇವ ಕಾಲೇ ತು ವಾಗುವಾಚಾಶರೀರಿಣೀ ।
ಕೃಪಯಾ ಪರಯಾ ಸರ್ವಾಂಸ್ತಾನೃಷೀನ್ವಸುಧಾಧಿಪ ॥ ೧೭ ॥

---

೧೨. ನಮ್ಮೆಲ್ಲರ ಮನಸ್ಸಿನಲ್ಲಿರುವ ವರವು ಇದೇ. ಒಂದೇಸಲ ನಿನ್ನನ್ನು ದರ್ಶನ ಮಾಡುವುದರಿಂದ ಉತ್ತಮ ಫಲವುಂಟಾಗಲಿ.

೧೩. ಶ್ರೀ ಮಹಾದೇವನು ಹೇಳುತ್ತಾನೆ:—ವಿಶೇಷವಾಗಿ ಬ್ರಾಹ್ಮಣನಿಗೆ ನನ್ನ ದರ್ಶನವು ವ್ಯರ್ಥವಾಗದಿರಲಿ. ನನ್ನನ್ನು ದರ್ಶನ ಮಾಡಿದವರಿಗೆ ತೀರ್ಥಜನ್ಯವಾದ ಫಲವುಂಟಾಗಲಿ.

೧೪. ಮುನಿಗಳು ಹೇಳುತ್ತಾರೆ:—ಮಹೇಶ್ವರ ಅವಶ್ಯವಾಗಿ ನಮಗೆ ನೀನು ವರವನ್ನು ಕೊಡುವುದಾದರೆ ಒಂದು ಕೋಟಿಲಿಂಗವನ್ನು ನಿರ್ಮಿಸು.

೧೫. ವೃಷಭಧ್ವಜ ! ಆ ಒಂದು ಲಿಂಗವನ್ನು ನೋಡಿದ ಮಾನವರಿಗೆ ಕೋಟಿ ಲಿಂಗಗಳನ್ನು ದರ್ಶನ ಮಾಡಿದ ಫಲವು ಲಭಿಸಲಿ. ಇದೇ ನಮ್ಮ ವರವು ಇದನ್ನು ಕೊಡು.

೧೬. ಪುಲಸ್ತ್ಯನು ಹೇಳುತ್ತಾನೆ :—ಹೀಗೆ ಮುನಿಗಳು ಬೇಡಿಕೊಳ್ಳುತ್ತಿರಲು ಲಿಂಗವು ಆ ಪರ್ವತವನ್ನು ಭೇದಿಸಿ ಕೂಡಲೇ ಆವಿರ್ಭವಿಸಿತು.

೧೭. ದೊರೆಯೇ ಈ ಸಮಯದಲ್ಲಿ ಅಶರೀರವಾಣಿಯು ಅತ್ಯಂತ ದಯೆಯಿಂದ ಆ ಸಮಸ್ತ ಮುನಿಗಳನ್ನು ಕುರಿತು ಹೀಗೆ ನುಡಿಯಿತು.

ವಾಗುವಾಚ :—
ಕೋಟೀಶ್ವರಾಖ್ಯಂ ಮೇ ಲಿಂಗಂ ಲೋಕೇ ಖ್ಯಾತಿಂ ಗಮಿಷ್ಯತಿ ।
ಮಾಘಕೃಷ್ಣಚತುರ್ದಶ್ಯಾಂ ಯಶ್ಚೈನಂ ಪೂಜಯಿಷ್ಯತಿ ॥ ೧೮ ॥
ಸರ್ವಂ ಕೋಟಿಗುಣಂ ತಸ್ಯ ಫಲಂ ವಿಪ್ರಾ ಭವಿಷ್ಯತಿ ।
ದಾಕ್ಷಿಣಾತ್ಯೋ ನರೋ ಯಸ್ತು ಶ್ರಾದ್ಧಮತ್ರ ಕರಿಷ್ಯತಿ ॥ ೧೯ ॥
ಫಲಂ ಕೋಟಿಗುಣಂ ತಸ್ಯ ಗಯಾಶ್ರಾದ್ಧಸಮಂ ಭವೇತ್ ।
ತಸ್ಮಾದ್ವಿಶೇಷತಃ ಪೂಜ್ಯಂ ಮಮ ಲಿಂಗಂ ಚ ಮಾನವೈಃ ॥ ೨೦ ॥
ಪುಲಸ್ತ್ಯ ಉವಾಚ :—
ಏವಮುಕ್ತ್ವಾ ತು ಸಾ ವಾಣೀ ವಿರರಾಮ ಮಹೀಪತೇ ।
ತತಸ್ತೇ ಮುನಯಃ ಸರ್ವೇ ಗಂಧಧೂಪಾನುಲೇಪನೈಃ ॥ ೨೧ ॥
ತಲ್ಲಿಂಗಂ ಪೂಜಯಾಮಾಸುಃ ಶ್ರದ್ಧಯಾ ಪರಯಾ ನೃಪ ।
ಪೂಜಯಿತ್ವಾ ಗತಾಃ ಸಿದ್ಧಿಂ ಸರ್ವೇ ಲಿಂಗಪ್ರಸಾದತಃ ॥ ೨೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕೋಟೀಶ್ವರಮಾಹಾತ್ಮ್ಯವರ್ಣನಂ ನಾಮ
ಏಕಾದಶೋಽಧ್ಯಾಯಃ

---

೧೮–೨೦. ಅಶರೀರವಾಣಿಯು ಹೇಳುತ್ತದೆ :—ಬ್ರಾಹ್ಮಣರೆ ! ಕೋಟೀಶ್ವರವೆಂಬ ನನ್ನ ಲಿಂಗವು ಪ್ರಪಂಚದಲ್ಲಿ ಪ್ರಸಿದ್ಧವಾಗುವುದು. ಮಾಘ ಕೃಷ್ಣ ಚತುರ್ದಶೀ ದಿನ ಈ ಲಿಂಗವನ್ನು ಪೂಜಿಸಿದ ಮಾನವನಿಗೆ ಎಲ್ಲವೂ ಕೋಟಿಯಷ್ಟು ಫಲವನ್ನುಂಟು ಮಾಡುವುವು. ದಕ್ಷಿಣದೇಶದ ಮನುಷ್ಯನು ಇಲ್ಲಿ ಶ್ರಾದ್ಧವನ್ನು ಮಾಡಿದರೆ ಅದು ಕೋಟಿಯಷ್ಟಾಗಿ ಗಯಾಶ್ರಾದ್ಧಕ್ಕೆ ಸಮವಾಗುವುದು. ಆದುದರಿಂದ ಮಾನವರು ವಿಶೇಷವಾಗಿ ನನ್ನ ಲಿಂಗವನ್ನು ಪೂಜಿಸಬೇಕು.

೨೧–೨೨. ಪುಲಸ್ತ್ಯನು ಹೇಳುತ್ತಾನೆ :—ಆ ಅಶರೀರವಾಣಿಯು ಹೀಗೆ ಹೇಳಿ ಸುಮ್ಮನಾಗಲು ಮುನಿಗಳೆಲ್ಲ ಗಂಧ ಧೂಪಾದಿಗಳಿಂದ ಆ ಲಿಂಗವನ್ನು ಅತ್ಯಂತ ಶ್ರದ್ಧೆಯಿಂದ ಪೂಜಿಸಿ ಅದರ ಪ್ರಸಾದದಿಂದ ಸಿದ್ಧಿಯನ್ನು ಪಡೆದರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಕೋಟೀಶ್ವರಮಾಹಾತ್ಮ್ಯವರ್ಣನವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಾದಶೋಽಧ್ಯಾಯಃ

### ರೂಪತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ರೂಪತೀರ್ಥಮನುತ್ತಮಂ ।
ಸರ್ವಪಾಪಹರಂ ನೄಣಾಂ ರೂಪಸೌಭಾಗ್ಯದಾಯಕಂ ॥ ೧ ॥
ತತ್ರ ಪೂರ್ವಂ ವಪುರ್ನಾಮ್ನಾ ಲೋಕೇ ಖ್ಯಾತಾ ವರಾಪ್ಸರಾಃ ।
ಸಿದ್ಧಿಂ ಗತಾ ಮಹಾರಾಜ ಯಥಾಪೂರ್ವಂ ನಿಗದ್ಯತೇ ॥ ೨ ॥
ಪುರಾಽಽಸೀತ್ಕಾಚಿದಾಭೀರೀ ವಿರೂಪಾ ವಿಕೃತಾನನಾ ।
ಲಂಬೋದರೀ ಚ ಕುಗ್ರೀವಾ ಸ್ಥೂಲದಂತಶಿರೋರುಹಾ ॥ ೩ ॥
ಏಕದಾ ಫಲಮಾದಾತುಂ ಭ್ರಮಮಾಣಾಽರ್ಬುದಾಚಲೇ ।
ಮಾಘಶುಕ್ಲತೃತೀಯಾಯಾಂ ಪತಿತಾ ಗಿರಿನಿರ್ಝರೇ ॥ ೪ ॥

---

### ಕನ್ನಡದ ಅನುವಾದ

### ರೂಪತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೇಂದ್ರ ! ತರುವಾಯ ಮನುಷ್ಯರ ಸಕಲ ಪಾಪಗಳನ್ನು ಪರಿಹರಿಸುವುದೂ, ಸೌಂದರ್ಯಸೌಭಾಗ್ಯಗಳನ್ನೀಯುವುದೂ ಆದ ರೂಪತೀರ್ಥಕ್ಕೆ ಹೋಗಬೇಕು.

೨. ಆ ರೂಪತೀರ್ಥದಲ್ಲಿ ಹಿಂದೆ ವಪು ಎಂದು ಪ್ರಸಿದ್ಧಳಾದ ಅಪ್ಸರಸ್ತ್ರೀಯು ಸಿದ್ಧಿಯನ್ನು ಪಡೆದಿರುವಳು. ಅದನ್ನು ನಿನಗೆ ಹೇಳುವೆನು.

೩. ಹಿಂದೆ ಕುರೂಪಿಣಿಯೂ, ವಿಕಾರ ಮುಖವುಳ್ಳವಳೂ, ಸ್ಥೂಲವಾದ ಹಲ್ಲು ತಲೆಕೂದಲೂಉಳ್ಳವಳೂ ಆದ ಒಬ್ಬ ಶೂದ್ರ ಸ್ತ್ರೀಯಿದ್ದಳು.

೪. ಅವಳು ಒಂದಾನೊಂದು ದಿನ ಹಣ್ಣನ್ನು ತೆಗೆದುಕೊಳ್ಳಲು ಅರ್ಬುದ ಪರ್ವತದಲ್ಲಿ ಸಂಚರಿಸುತ್ತ ಮಾಘಶುದ್ಧ ತದಿಗೆಯದಿನ ಗಿರಿನದಿಯಲ್ಲಿ ಬಿದ್ದಳು.

ದಿವ್ಯಮಾಲ್ಯಾಂಬರಧರಾ ದಿವ್ಯೈರಂಗೈಃ ಸಮನ್ವಿತಾ ।
ಪದ್ಮನೇತ್ರಾ ಸುಕೇಶಾಂತಾ ಸರ್ವಲಕ್ಷಣಲಕ್ಷಿತಾ ॥ ೫ ॥
ಸಾ ಸಂಜಾತಾ ಮಹಾರಾಜ ತೀರ್ಥಸ್ಯಾಸ್ಯ ಪ್ರಭಾವತಃ ।
ಏತಸ್ಮಿನ್ನೇವ ಕಾಲೇ ತು ಶಕ್ರಸ್ತತ್ರ ಸಮಾಗತಃ ॥ ೬ ॥
ಕ್ರೀಡಾರ್ಥಂ ಪರ್ವತಶ್ರೇಷ್ಠೇ ತಾಂ ದದರ್ಶ ಶುಭೇಕ್ಷಣಾಂ ।
ತತಃ ಕಾಮಶರೈರ್ವಿದ್ಧಸ್ತಾಮುವಾಚ ಸುಮಧ್ಯಮಾಂ ॥ ೭ ॥

ಇಂದ್ರ ಉವಾಚ :—

ಕಾ ತ್ವಂ ವದ ವರಾರೋಹೇ ಕಿಮರ್ಥಂ ತ್ವಮಿಹಾಗತಾ ।
ದೇವೀ ವಾ ನಾಗಕನ್ಯಾ ವಾ ಸಿದ್ಧಾ ವಿದ್ಯಾಧರೀ ತು ವಾ ॥ ೮ ॥
ಮನೋ ಮೇಽಪಹೃತಂ ಸುಭ್ರೂಸ್ತ್ವಯಾ ಚ ಪದ್ಮನೇತ್ರಯಾ ।
ಶಕ್ರೋಽಹಂ ಸರ್ವದೇವೇಶೋ ಭಜ ಮಾಂ ಚಾರುಹಾಸಿನಿ ॥ ೯ ॥

ನಾರ್ಯುವಾಚ :—

ಆಭೀರೀ ತ್ರಿದಶಾಧೀಶ ತಥಾಹಂ ಬಹುಭರ್ತೃಕಾ ।
ಫಲಾರ್ಥಂ ತು ಸಮಾಯಾತಾ ಪತಿತಾ ಗಿರಿನಿರ್ಝರೇ ॥ ೧೦ ॥

---

೫-೭. ಮಹಾರಾಜ ! ಅವಳು ಈ ತೀರ್ಥದ ಪ್ರಭಾವದಿಂದ ಕೂಡಲೆ ದಿವ್ಯ ಮಾಲೆಯನ್ನು ಧರಿಸಿದವಳೂ, ದಿವ್ಯವಾದ ಅಂಗಗಳಿಂದ ಸಹಿತಳೂ, ಪದ್ಮದಂತೆ ಕಣ್ಣುಗಳುಳ್ಳವಳೂ, ಮನೋಹರವಾದ ಕೂದಲುಗಳುಳ್ಳವಳೂ, ಸಮಸ್ತ ಲಕ್ಷಣಗಳಿಂದ ಕೂಡಿದವಳೂ ಆದಳು. ಈ ಸಮಯದಲ್ಲಿ ಆ ಪರ್ವತದಲ್ಲಿ ಕ್ರೀಡೆಗಾಗಿ ಬಂದ ಇಂದ್ರನು ಸುಂದರವಾದ ಕೂದಲುಗಳುಳ್ಳ ಅವಳನ್ನು ಕಂಡು ಮನ್ಮಥಬಾಣಗಳಿಂದ ಪೀಡಿತನಾಗಿ ಇಂತೆಂದನು.

೮. ಇಂದ್ರನು ಹೇಳುತ್ತಾನೆ :—ಸುಂದರಿಯೆ ! ನೀನಾರು ? ನಾಗಕನ್ಯೆಯೊ ?, ಸಿದ್ಧಳೊ, ವಿದ್ಯಾಧರಿಯೊ ? ಏಕೆ ಇಲ್ಲಿಗೆ ಬಂದಿರುವೆ ? ಹೇಳು.

೯. ಕಮಲಾಕ್ಷಿಯಾದ ನೀನು ನನ್ನ ಮನಸ್ಸನ್ನು ಸೆಳೆದಿರುವೆ. ನಾನು ಸಕಲ ದೇವತೆಗಳರಸನಾದ ದೇವೇಂದ್ರನು. ನೀನು ನನ್ನನ್ನು ಸೇವಿಸು.

೧೦. ನಾರಿಯು ಹೇಳುತ್ತಾಳೆ :—ದೇವರಾಜ ! ನಾನು ಅನೇಕ ಪತಿಗಳುಳ್ಳ ಶೂದ್ರಸ್ತ್ರೀಯು. ಹಣ್ಣನ್ನು ತೆಗೆದುಕೊಳ್ಳುವುದಕ್ಕಾಗಿ ಇಲ್ಲಿಗೆ ಬಂದು ಗಿರಿನದಿಯಲ್ಲಿ ಬಿದ್ದೆನು.

ಸ್ನಾತ್ವಾ ರೂಪಮಿದಂ ಪ್ರಾಪ್ತಾ ಸುರೂಪಂ ಚ ಶುಭಂ ಮಯಾ ।
ದುರ್ಲ್ಲಭಸ್ತ್ವಂ ಹಿ ದೇವಾನಾಂ ಕಿಂ ಪುನರ್ಮರ್ತ್ಯಜನ್ಮನಾಂ ॥ ೧೧ ॥
ವಶಗಾಸ್ತೇ ಸುರಾಸ್ಸರ್ವೇ ಮಯಿ ಕಿಂ ಕ್ರಿಯತೇ ಸ್ಪೃಹಾ ।
ಭಜ ಮಾಂ ತ್ರಿದಶಾಧೀಶ ಯಥಾಕಾಮಂ ಸುರಾಧಿಪ ॥ ೧೨ ॥

ಪುಲಸ್ತ್ಯ ಉವಾಚ :—.

ಏವಮುಕ್ತಸ್ತಯಾ ಶಕ್ರಃ ಕಾಮಯಾಮಾಸ ತಾಂ ತದಾ ।
ನಿವೃತ್ತಮದನೋ ಭೂತ್ವಾ ತಾಮುವಾಚ ಸುಮಧ್ಯಮಾಂ ॥ ೧೩ ॥

ಇಂದ್ರ ಉವಾಚ :—

ವರಂ ವರಯ ಕಲ್ಯಾಣಿ ಯತ್ತೇ ಮನಸಿ ವರ್ತತೇ ।
ವಿನಯಾತ್ತವ ತುಷ್ಟೋಽಹಂ ದಾಸ್ಯಾಮಿ ವರಮುತ್ತಮಂ ॥ ೧೪ ॥

ನಾರ್ಯುವಾಚ :—

ಮಾಘಶುಕ್ಲತೃತೀಯಾಯಾಂ ನರೋ ವಾ ವನಿತಾ ತಥಾ ।
ಸ್ನಾನಂ ಯಃ ಕುರುತೇ ಭಕ್ತ್ಯಾ ಪ್ರೀತಾಃ ಸ್ಯುಃ ಸರ್ವದೇವತಾಃ ॥ ೧೫ ॥
ಸುರೂಪಂ ಜಾಯತಾಂ ತೇಷಾಂ ದುರ್ಲ್ಲಭಂ ತ್ರಿದಶೈರಪಿ ।
ಮಾಂ ನಯ ತ್ವಂ ಸಹಸ್ರಾಕ್ಷ ಸುರಾವಾಸಂ ಸುರಾಧಿಪ ॥ ೧೬ ॥

---

೧೧. ನಾನು ಹಾಗೆ ಆ ಗಿರಿನದಿಯಲ್ಲಿ ಮಿಂದುದರಿಂದ ಈ ಸುಂದರವಾದ ರೂಪವನ್ನು ಪಡೆದೆನು. ನೀನು ದೇವತೆಗಳಿಗೆ ದುರ್ಲಭನು ಮನುಷ್ಯರಿಗೆ ದುರ್ಲಭನೆಂದು ಹೇಳಬೇಕಾಗಿರುವುದಿಲ್ಲ.

೧೨. ದೇವತೆಗಳೆಲ್ಲ ನಿನ್ನ ಅಧೀನದಲ್ಲಿರುವರು. ನನ್ನನ್ನು ಏಕೆ ಕಾಮಿಸುವೆ? ದೇವೇಂದ್ರ! ನನ್ನಿಷ್ಟದಂತೆ ನನ್ನನ್ನು ಭೋಗಿಸು.

೧೩. ಪುಲಸ್ತ್ಯನು ಹೇಳುತ್ತಾನೆ:—ಅವಳು ಹೀಗೆನ್ನಲು ದೇವೇಂದ್ರನು ಅವಳನ್ನು ಕಾಮಿಸಿ ಮನ್ಮಥ ಸುಖವನ್ನನುಭವಿಸಿ ಇಂತೆಂದನು.

೧೪. ಇಂದ್ರನು ಹೇಳುತ್ತಾನೆ:—ಎಲೌ ಮಂಗಳಕರಳೆ! ನಿನಗಿಷ್ಟವಾದ ವರವನ್ನು ಕೇಳಿಕೊ. ನಿನ್ನ ವಿನಯದಿಂದ ನಾನು ಸಂತುಷ್ಟನಾಗಿರುವೆನು. ನಿನಗುತ್ತಮವಾದ ವರವನ್ನೀಯುವೆನು

೧೫. ನಾರಿಯು ಹೇಳುತ್ತಾಳೆ:—ಮಾಘ ಶುಕ್ಲತದಿಗೆ ದಿನ ಗಂಡಸಾಗಲಿ, ಹೆಂಗಸಾಗಲಿ ಇಲ್ಲಿ ಭಕ್ತಿಯಿಂದ ಮಿಂದರೆ ಸಕಲದೇವತೆಗಳೂ ತೃಪ್ತರಾಗಲಿ.

೧೬. ದೇವರಾಜ! ಅವರಿಗೆ ದೇವತೆಗಳಿಗೆ ದುರ್ಲಭವಾದ ಸೌಂದರ್ಯವುಂಟಾಗಲಿ ನನ್ನನನ್ನು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗು.

ಪುಲಸ್ತ್ಯ ಉವಾಚ :—

ಏವಮಸ್ತ್ವಿತಿ ತಾಮುಕ್ತ್ವಾ ಗೃಹೀತ್ವಾ ತಾಂ ಸುರಾಧಿಪಃ ।
ವಿಮಾನೇ ಚ ತಯಾ ಸಾರ್ಧಂ ಜಗಾಮ ತ್ರಿದಿವಂ ಪ್ರತಿ ॥ ೧೭ ॥
ವಪುಃ ಪ್ರಾಪ್ತಂ ತಯಾ ಯಸ್ಮಾತ್ತಸ್ಮಾತ್ಸಾರ್ಥಿವಸತ್ತಮ ।
ನಾಮ್ನಾ ವಪುರಿತಿ ಖ್ಯಾತಾ ಸಾ ಬಭೂವ ವರಾಪ್ಸರಾಃ ॥ ೧೮ ॥
ಮಾಘಶುಕ್ಲ ತೃತೀಯಾಯಾಂ ದೇವಾಸ್ತಸ್ಮಿಞ್ಜಲಾಶಯೇ ।
ಸ್ನಾನಂ ಸರ್ವೇ ಪ್ರಕುರ್ವಂತಿ ಪ್ರಭಾತೇ ಭಕ್ತಿಸಂಯುತಾಃ ॥ ೧೯ ॥
ತತ್ರಾನ್ಯಾ ದೇವಕನ್ಯಾಶ್ಚ ಸಿದ್ಧಯಕ್ಷಾಂಗನಾಸ್ತಥಾ ।
ಯಸ್ತತ್ರ ಕುರುತೇ ಸ್ನಾನಂ ತಸ್ಮಿನ್ಕಾಲೇ ನರಾಧಿಪ ॥ ೨೦ ॥
ರೂಪಂ ಚ ಲಭತೇ ತಾದೃಗ್ಯಾದೃಗ್ಲಬ್ಧಂ ತಯಾ ಪುರಾ ।
ಸರ್ವೇ ತತ್ರ ಭವಿಷ್ಯಂತಿ ಸಿದ್ಧವಿದ್ಯಾಧರೋರಗಾಃ ॥ ೨೧ ॥
ತಸ್ಯೈವ ಪೂರ್ವದಿಗ್ಭಾಗೇ ಬಿಲಮಸ್ತಿ ಸುಶೋಭನಂ ।
ಯತ್ರಾಗತ್ಯ ಪ್ರಕುರ್ವಂತಿ ಸ್ನಾನಂ ಪಾತಾಲಕನ್ಯಕಾಃ ॥ ೨೨ ॥
ತತ್ರ ಸ್ನಾತ್ವಾ ಗೃಹೀತ್ವಾಪೋ ಬಿಲೇ ತಸ್ಮಿನ್ವ್ರಜಂತಿ ತಾಃ ।
ತತ್ರ ವೈನಾಯಕೇ ಪೀಠೇ ಮಹತ್ಪಾಷಾಣಜಂ ಜಲಂ ॥ ೨೩ ॥

---

೧೭. ಪುಲಸ್ತ್ಯನು ಹೇಳುತ್ತಾನೆ:—ದೇವೇಂದ್ರನು ಹಾಗೆಯೇ ಆಗಲೆಂದು ಅವಳನ್ನು ಕುರಿತು ಹೇಳಿ ಅವಳನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ದೇವಲೋಕಕ್ಕೆ ತೆರಳಿದನು.

೧೮. ದೊರೆಯೆ! ಆವಳು ಉತ್ತಮ ಶರೀರವನ್ನು ಪಡೆದುದರಿಂದ ವಪು ಎಂದು ಪ್ರಸಿದ್ಧಳಾದ ಅಪ್ಸರಸ್ತ್ರೀಯಾದಳು.

೧೯–೨೧. ಮಾಘ ಶುಕ್ಲ ತದಿಗೆ ದಿನ ಬೆಳಗ್ಗೆ ದೇವತೆಗಳೂ ದೇವಕನ್ಯೆಯರೂ, ಸಿದ್ಧಯಕ್ಷಾಂಗನೆಯರೂ ಆ ಗಿರಿನದಿಯಲ್ಲಿ ಭಕ್ತಿಯಿಂದ ಸ್ನಾನಮಾಡುವರು. ಆ ಸಮಯದಲ್ಲಿ ಅಲ್ಲಿ ಮಿಂದ ಮಾನವಸ್ತ್ರೀಯರು ಆ ವಪ್ರವು ಹೊಂದಿದಂತೆ ಉತ್ತಮ ರೂಪವನ್ನು ಪಡೆದು ಸಿದ್ಧ, ವಿದ್ಯಾಧರ, ಉರಗಸ್ತ್ರೀಯರಾಗುವರು.

೨೨. ಆ ಜಲಾಶಯದ ಪೂರ್ವದಿಕ್ಕಿನಲ್ಲಿ ಮನೋಹರವಾದ ಒಂದು ಬಿಲವಿದೆ. ಅಲ್ಲಿ ಪಾತಾಳ ಕನ್ಯೆಯರು ಬಂದು ಸ್ನಾನಮಾಡುವರು.

೨೩. ಅವರು ಮಿಂದು ಅಲ್ಲಿ ವಿನಾಯಕ ಪೀಠದಲ್ಲಿರುವ ದೊಡ್ಡ ಕಲ್ಲಿನಿಂದ ಸುರಿದ ನೀರನ್ನು ತೆಗೆದುಕೊಂಡು ಆ ಬಿಲಕ್ಕೆ ಹೋಗುವರು.

ತೇನೋದಕೇನ ಸಂಯುಕ್ತಃ ಸಿದ್ಧೋ ಭವತಿ ಮಾನವಃ ।
ಗೃಹೀತ್ವಾ ತಜ್ಜಲಂ ಯಸ್ತು ಯತ್ರ ಯತ್ರಾಭಿಗಚ್ಛತಿ ॥ ೨೪ ॥
ಸ್ವರ್ಗೇ ವಾ ಭೂತಲೇ ವಾಪಿ ನ ಕೇನಾಪಿ ಪ್ರಧೃಷ್ಯತೇ ।
ತತ್ರಾಸ್ತಿ ವಿವರದ್ವಾರೇ ತಿಲಕೋನಾಮ ಪಾದಪಃ ॥ ೨೫ ॥
ತಸ್ಯ ಪುಷ್ಪೈಃ ಫಲೈಶ್ಚೈವ ಸರ್ವಂ ಕಾರ್ಯಂ ಪ್ರಸಿಧ್ಯತಿ ।
ಭಕ್ಷಣಾದ್ಧಾರಣಾದ್ವಾಪಿ ಸಿದ್ಧೋ ಭವತಿ ಮಾನವಃ ॥ ೨೬ ॥
ತಸ್ಮಿನ್ಬಿಲೇ ತು ಪಾಷಾಣಾಃ ಸಮಂತಾಚ್ಛಂಖಸನ್ನಿಭಾಃ ।
ತೇನೋದಕೇನ ಸಂಸ್ಪೃಷ್ಟಾ ಭವಂತಿ ಚ ಹಿರಣ್ಮಯಾಃ ॥ ೨೭ ॥
ವಂಧ್ಯಾ ನಾರೀ ಜಲಂ ತತ್ರ ಯಾ ಪಿಬೇತ್ತಿಲಕಾನ್ವಿತಂ ।
ಅಪಿ ವರ್ಷಶತಾಬ್ದಾ ಚ ಸದ್ಯೋ ಗರ್ಭವತೀ ಭವೇತ್ ॥ ೨೮ ॥
ವ್ಯಾಧಿಗ್ರಸ್ತೋಽಪಿ ಯೋ ಮರ್ತ್ಯಃ ಸ್ನಾನಂ ತತ್ರ ಸಮಾಚರೇತ್ ।
ನೀರೋಗೋ ಜಾಯತೇ ಸದ್ಯೋ ಗ್ರಹಗ್ರಸ್ತೋ ವಿಮುಚ್ಯತೇ ॥ ೨೯ ॥
ಭೂತಪ್ರೇತಪಿಶಾಚಾನಾಂ ದೋಷಃ ಸದ್ಯಃ ಪ್ರಣಶ್ಯತಿ ।
ತೇನೋದಕೇನ ಸಂಸ್ಪೃಷ್ಟೇ ಸರ್ವಂ ನಶ್ಯತಿ ದುಷ್ಕೃತಂ ॥ ೩೦ ॥

---

೨೪–೨೫. ಆ ನೀರಿನಿಂದ ಸಹಿತನಾದ ಮಾನವನು ಸಿದ್ಧನಾಗುವನು. ಆ ನೀರನ್ನು ತೆಗೆದುಕೊಂಡು ಮನುಷ್ಯನು ಸ್ವರ್ಗ ಅಥವಾ ಪಾತಾಳಗಳಲ್ಲಿ ಎಲ್ಲಲ್ಲಿ ಹೋಗುವನೋ, ಅಲ್ಲಿ ಅವನನ್ನು ಯಾರೂ ತಿರಸ್ಕರಿಸುವುದಿಲ್ಲ. ಆ ವಿವರದ ಬಾಗಿಲಿನಲ್ಲಿ ತಿಲಕವೆಂಬ ಒಂದು ಮರವಿದೆ.

೨೬. ಅದರ ಪುಷ್ಪಫಲಗಳಿಂದ ಸಕಲ ಕಾರ್ಯಗಳೂ ಸಿದ್ಧಿಸುವುವು. ಮನುಷ್ಯನು ಅವುಗಳನ್ನು ಧರಿಸುವುದರಿಂದಾಗಲಿ, ತಿನ್ನುವುದರಿಂದಾಗಲಿ ಸಿದ್ಧನಾಗುವನು.

೨೭. ಆ ಬಿಲದ ಸುತ್ತಲೂ ಶಂಖಗಳಂತಿರುವ ಕಲ್ಲುಗಳು ಅದರ ನೀರಿನ ಸ್ಪರ್ಶದಿಂದ ಚಿನ್ನದಂತಾಗುವುವು.

೨೮. ಅಲ್ಲಿ ನೂರುವರ್ಷಗಳಿಂದ ಬಂಜೆಯಾಗಿರುವ ಹೆಂಗಸೂ ತಿಲಕವೃಕ್ಷದಿಂದ ಸಹಿತವಾದ ನೀರನ್ನು ಕುಡಿದರೆ ಕೂಡಲೆ ಗರ್ಭಿಣಿಯಾಗುವಳು.

೨೯. ಕಾಯಿಲೆಯುವನಾಗಲಿ, ಪಿಶಾಚಹಿಡಿದವನಾಗಲಿ ಅಲ್ಲಿ ಮಿಂದರೆ ಕೂಡಲೆ ರೋಗವಿಲ್ಲದವನೂ, ಪಿಶಾಚಮುಕ್ತನೂ ಆಗುವನು.

೩೦. ಅದರ ನೀರಿನ ಸ್ಪರ್ಶದಿಂದ ಭೂತ, ಪ್ರೇತ, ಪಿಶಾಚಗಳ ದೋಷವೂ, ಪಾಪವೂ ಕೂಡಲೆ ಪರಿಹಾರವಾಗುವುವು.

ಅಪಿ ಕೀಟಪತಂಗಾ ಯೇ ಪಿಶಾಚಾಃ ಪಕ್ಷಿಣೋ ಮೃಗಾಃ ।
ತೇನೋದಕೇನ ಯೇ ಸ್ಪೃಷ್ಟಾಃ ಸದ್ಯೋ ಯಾಸ್ಯಂತಿ ಸದ್ಗತಿಂ ॥ ೩೧ ॥

ಯಯಾತಿರುವಾಚ :—

ಅತ್ಯದ್ಭುತಮಿದಂ ಬ್ರಹ್ಮನ್ಮಾಹಾತ್ಮ್ಯಂ ಭವತಾ ಮಮ ।
ಕಥಿತಂ ರೂಪತೀರ್ಥಸ್ಯ ನ ಭೂತಂ ನ ಭವಿಷ್ಯತಿ ॥ ೩೨ ॥
ಕಿಮತ್ರ ಕಾರಣಂ ಬ್ರಹ್ಮನ್ಸರ್ವೇಭ್ಯೋಽಧಿಕಂ ಸ್ಮೃತಂ ।
ಸರ್ವಂ ವಿಸ್ತರತೋ ಬ್ರೂಹಿ ಪರಂ ಕೌತಹಲಂ ಹಿ ಮೇ ॥ ೩೩ ॥

ಪುಲಸ್ತ್ಯ ಉವಾಚ :—

ತತ್ರ ಪೂರ್ವಂ ತಪಸ್ತಪ್ತಮದಿತ್ಯಾ ನೃಪಸತ್ತಮ ।
ಇಂದ್ರೇ ರಾಜ್ಯಪರಿಭ್ರಷ್ಟೇ ಬಲೌ ತ್ರೈಲೋಕ್ಯನಾಯಕೇ ।
ಅವತೀರ್ಣಶ್ಚತುರ್ಬಾಹುರದಿತ್ಯಾಂ ನೃಪಸತ್ತಮ ॥ ೩೪ ॥
ತಸ್ಮಿಞ್ಜಾತೇ ಮಹಾವಿಷ್ಣಾವದಿತ್ಯಾ ಚಾಸುರಾಂತಕೇ ।
ಗುಪ್ತಯಾ ವಿವರದ್ವಾರೇ ಭಯಾದ್ದಾನವಸಂಭವಾತ್ ॥ ೩೫ ॥
ಜಾತಮಾತ್ರೋ ಹರಿಸ್ತಸ್ಮಿನ್ಸ್ಥಾಪಿತೋ ನಿರ್ಝರೇ ತಯಾ ।
ತಸ್ಮಾತ್ಪವಿತ್ರತಾಂ ಪ್ರಾಪ್ತಂ ತೀರ್ಥಂ ನೃಣಾಮಭೀಷ್ಟದಂ ॥ ೩೬ ॥

---

೩೧. ಅದರ ನೀರಿನ ಸ್ಪರ್ಶದಿಂದ ಕೀಟ, ಪತಂಗಗಳೂ, ಪಿಶಾಚಗಳೂ, ಪಶುಪಕ್ಷಿಗಳೂ ಕೂಡಲೆ ಸದ್ಗತಿಯನ್ನು ಪಡೆಯುವುವು.

೩೨. ಯಯಾತಿಯು ಹೇಳುತ್ತಾನೆ :—ಬ್ರಾಹ್ಮಣನೆ! ನೀನು ಹಿಂದೆಯೂ, ಮುಂದೆಯೂ, ಕೇಳದಿರುವ ರೂಪ ತೀರ್ಥದ ಆಶ್ಚರ್ಯಕರವಾದ ಮಾಹಾತ್ಮ್ಯವನ್ನು ಹೇಳಿರುವೆ.

೩೩. ಬ್ರಾಹ್ಮಣ! ಈ ರೂಪತೀರ್ಥವು ಎಲ್ಲಕ್ಕಿಂತಲೂ ಅಧಿಕವಾಗಿರಲು ಕಾರಣವೇನು? ಎಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳು. ಅತ್ಯಂತ ಕುತೂಹಲವುಂಟಾಗಿದೆ.

೩೪. ಪುಲಸ್ತ್ಯನು ಹೇಳುತ್ತಾನೆ .—ನೃಪೇಂದ್ರ! ಹಿಂದೆ ಇಂದ್ರನು ರಾಜ್ಯಭ್ರಷ್ಟನಾದ್ದರಿಂದ ಬಲಿಯು ಮೂರುಲೋಕಗಳಿಗೆ ಒಡೆಯನಾಗಲು ಅದಿತಿಯು ತಪಸ್ಸನ್ನಾಚರಿಸಿದಳು. ಆಗ ಅವಳಲ್ಲಿ ವಿಷ್ಣುವು ಅವತರಿಸಿದನು.

೩೫-೩೬. ಅಸುರ ನಾಶಕನಾದ ವಿಷ್ಣುವು ಅದಿತಿಯ ಗರ್ಭದಲ್ಲಿ ಜನಿಸಲು ಕೂಡಲೆ ಅದಿತಿಯು ದಾನವರಿಂದ ಭಯಗೊಂಡು ಗುಪ್ತವಾಗಿ ಆ ಬಿಲದ್ವಾರದಲ್ಲಿರುವ ಗಿರಿನದಿಯಲ್ಲಿ ಆ ಶಿಶುವನ್ನು ಇಟ್ಟಳು. ಆದರಿಂದ ಪಾವಿತ್ರ್ಯವನ್ನು ಪಡೆದ ಆ ತೀರ್ಥವು ಮನುಷ್ಯರಿಗೆ ಇಷ್ಟಾರ್ಥವನ್ನೀಯುವುದು.

ನ ಚಾನ್ಯತ್ಕಾರಣಂ ರಾಜನ್ಸತ್ಯಮೇತನ್ಮಯೋದಿತಂ ।
ಮಾಘಶುಕ್ಲತೃತೀಯಾಯಾಂ ತತ್ರ ಜಾತಸ್ತ್ರಿವಿಕ್ರಮಃ ॥ ೩೭ ॥
ತಿಲಕಃ ಸರ್ವವೃಕ್ಷಾಗ್ರ್ಯಃ ಪುತ್ರವತ್ಪರಿಪಾಲಿತಃ ।
ಅದಿತ್ಯಾ ಸೇವಿತೋ ನಿತ್ಯಂ ಸ್ವಹಸ್ತೇನ ಜಲೈಃ ಶುಭೈಃ ॥ ೩೮ ॥
ಏತತ್ತೇ ಸರ್ವಮಾಖ್ಯಾತಂ ತೀರ್ಥಮಾಹಾತ್ಮ್ಯಮುತ್ತಮಂ ।
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ಸರ್ವಕಾಮಪ್ರದಂ ನೄಣಾಮಿಹ ಲೋಕೇ ಪರತ್ರ ಚ ॥ ೩೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ ರೂಪತೀರ್ಥಮಾಹಾತ್ಮ್ಯವರ್ಣನಂನಾಮ ॥ ದ್ವಾದಶೋಽಧ್ಯಾಯಃ ॥

---

೩೭. ಬೇರೆ ಏನೂ ಕಾರಣವಿಲ್ಲ. ನಾನು ಸತ್ಯವಾಗಿ ನುಡಿದಿರುವೆನು. ತ್ರಿವಿಕ್ರಮನು ಅಲ್ಲಿ ಮಾಘಶುಕ್ಲ ತದಿಗೆ ದಿನ ಹುಟ್ಟಿರುವನು.

೩೮. ಆ ತಿಲಕವೃಕ್ಷವನ್ನು ಅದಿತಿಯು ತನ್ನ ಕೈಯಿಯಿಂದ ನೀರನ್ನೆರೆದು ನಿತ್ಯವೂ ತನ್ನ ಮಕ್ಕಳಂತೆ ಕಾಪಾಡುತ್ತಿದ್ದಳು.

೩೯. ನಿನಗೆ ಈ ಉತ್ತಮವಾದ ತೀರ್ಥಮಾಹಾತ್ಮ್ಯವನ್ನೆಲ್ಲ ಹೇಳಿರುವೆನು ಆದ್ದರಿಂದ ಸಕಲ ಪ್ರಯತ್ನದಿಂದಲೂ ಅಲ್ಲಿ ಸ್ನಾನಮಾಡಬೇಕು. ಆ ತೀರ್ಥವು ಈ ಲೋಕದಲ್ಲಿಯೂ ಸಕಲೇಷ್ಟಾರ್ಥಗಳನ್ನೀಯುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ ರೂಪತೀರ್ಥಮಾಹಾತ್ಮ್ಯವರ್ಣನವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ತ್ರಯೋದಶೋಽಧ್ಯಾಯಃ

## ಹೃಷೀಕೇಶಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಅಂಬರೀಷಸ್ಯ ರಾಜರ್ಷೇರೈಶಾನ್ಯಾಂ ಪಾಪನಾಶನಂ ॥ ೧ ॥
ಯತ್ರ ಸ್ವಯಂ ಹೃಷೀಕೇಶಃ ಕಾಲೇ ಚ ಕಲಿಸಂಜ್ಞಕೇ ।
ತಸ್ಯ ವಾಕ್ಯಾದೃತಸ್ತೀರ್ಥೇ ಸ್ವಯಂ ಹಿ ಪರಿತಿಷ್ಠತಿ ॥ ೨ ॥
ಪುರಾಸೀತ್ಪೃಥಿವೀಪಾಲೋ ಹ್ಯಂಬರೀಷೋ ಯುಗೇ ಕೃತೇ ।
ಹರಿಮಾರಾಧಯಾಮಾಸ ತಪಸ್ತೇಪೇ ಸುದುಷ್ಕರಂ ॥ ೩ ॥
ತಸ್ಮಿಂಸ್ತೀರ್ಥೇ ಸ ರಾಜೇಂದ್ರೋ ಮಿತಭಕ್ಷೋ ಜಿತೇಂದ್ರಿಯಃ ।
ಸಹಸ್ರಮೇಕಂ ವರ್ಷಾಣಾಂ ತತ ಆಸೀತ್ಫಲಾಶನಃ ॥ ೪ ॥
ಸಹಸ್ರೇ ದ್ವೇ ತತೋ ರಾಜಞ್ಜೀರ್ಣಪರ್ಣಾಶನೋಽಭವತ್ ।
ಸಹಸ್ರೇ ದ್ವೇ ತತೋ ಭೂಯೋ ಜಲಾಹಾರೋ ಬಭೂವ ಹ ॥ ೫ ॥

---

### ಕನ್ನಡದ ಅನುವಾದ

### ಹೃಷೀಕೇಶಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೋತ್ತಮ ! ಬಳಿಕ ಮೂರುಲೋಕಗಳಲ್ಲಿ ಪ್ರಸಿದ್ಧವಾದ ಈಶಾನ್ಯ ದಿಕ್ಕಿನಲ್ಲಿರುವ ಅಂಬರೀಷ ರಾಜನ ಹೃಷೀಕೇಶ ತೀರ್ಥಕ್ಕೆ ಹೋಗಬೇಕು.

೨. ಆ ತೀರ್ಥದಲ್ಲಿ ಕಲಿಯುಗದಲ್ಲಿ ಅಂಬರೀಷನ ವಾಕ್ಯದಂತೆ ಹೃಷೀಕೇಶನು ನೆಲೆಸಿರುವನು.

೩. ಹಿಂದೆ ಕೃತಯುಗದಲ್ಲಿ ಅಂಬರೀಷನೆಂಬ ದೊರೆಯಿದ್ದನು. ಅವನು ವಿಷ್ಣುವನ್ನು ಪೂಜಿಸಿ ದುಷ್ಕರವಾದ ತಪಸ್ಸನ್ನಾಚರಿಸಿದನು.

೪. ಆ ಅಂಬರೀಷನು ಆ ತೀರ್ಥದಲ್ಲಿ ಒಂದುಸಾವಿರ ವರ್ಷಕಾಲ ಮಿತಾಹಾರಿಯೂ, ಜಿತೇಂದ್ರಿಯನೂ ಆಗಿ ತಪಸ್ಸನ್ನು ಮಾಡಿ ಬಳಿಕ ಹಣ್ಣನ್ನು ತಿನ್ನುತ್ತಿದ್ದನು.

೫–೬. ಅನಂತರ ಎರಡುಸಾವಿರ ವರ್ಷಕಾಲ ಒಣಗಿದ ಎಲೆಗಳನ್ನೂ ತಿನ್ನುತ್ತಲೂ, ತರುವಾಯ ಎರಡುಸಾವಿರ ವರ್ಷಕಾಲ ಜಲವನ್ನು ಕುಡಿಯುತ್ತಲೂ ಇದ್ದನು.

ಸಹಸ್ರತ್ರಿತಯಂ ರಾಜನ್ವಾಯುಭಕ್ಷೋ ಬಭೂವ ಹ ।
ಚಿಂತಯನ್ಪುಂಡರೀಕಾಕ್ಷಂ ಮಾನಸೇ ಶ್ರದ್ಧಯಾನ್ವಿತಃ ॥ ೬ ॥
ದಶ ವರ್ಷಸಹಸ್ರಾಂತೇ ತತಶ್ಚ ನೃಪಸತ್ತಮ ।
ತುತೋಷ ಭಗವಾನ್ವಿಷ್ಣುಸ್ತಸ್ಯಾಸೌ ದರ್ಶನಂ ದದೌ ॥ ೭ ॥
ಕೃತ್ವಾ ದೇವಪತೇ ರೂಪಮಾರುಹ್ಯೈರಾವತಂ ಗಜಂ ।
ಅಬ್ರವೀದ್ವರದೋಽಸ್ಮೀತಿ ಅಂಬರೀಷಂ ನರಾಧಿಪಂ ॥ ೮ ॥

ಇಂದ್ರ ಉವಾಚ :—

ವರಂ ವರಯ ಭದ್ರಂ ತೇ ರಾಜನ್ಯನ್ಮನಸೀಪ್ಸಿತಂ ।
ತ್ವಾಂ ದೃಷ್ಟ್ವಾ ಭಕ್ತಿಸಂಯುಕ್ತಮಾಗತೋಽಹಮಸಂಶಯಂ ॥ ೯ ॥

ಅಂಬರೀಷ ಉವಾಚ :—

ಮುಕ್ತಿಂ ದಾತುಮಶಕ್ತೋಽಸಿ ತ್ವಂ ಚ ವೃತ್ರನಿಷೂದನ ।
ತವ ಪ್ರಸಾದಾದ್ದೇವೇಶ ತ್ರೈಲೋಕ್ಯಂ ಮಮ ವರ್ತತೇ ।
ಸ್ವಾಗತಂ ಗಚ್ಛ ದೇವೇಶ ನ ವರೋ ರೋಚತೇ ಮಮ ॥ ೧೦ ॥
ಸರ್ವಥಾ ದಾಸ್ಯತೇ ಮಹ್ಯಂ ವರಂ ತುಷ್ಟಶ್ಚತುರ್ಭುಜಃ ।
ತದಾಹಂ ಪ್ರತಿಗೃಹ್ಣಾಮಿ ಗಚ್ಛ ದೇವ ನಮೋಽಸ್ತು ತೇ ॥ ೧೧ ॥

---

ಮೂರುಸಾವಿರ ವರ್ಷಕಾಲ ಮನಸ್ಸಿನಲ್ಲಿ ಶ್ರದ್ಧೆಯಿಂದ ಪುಂಡರೀಕಾಕ್ಷನನ್ನು ಧ್ಯಾನಿಸುತ್ತ ವಾಯುಭಕ್ಷನೂ ಆಗಿದ್ದನು.

೭. ತರುವಾಯ ಹತ್ತುಸಾವಿರ ವರ್ಷಗಳ ಕೊನೆಯಲ್ಲಿ ಪೂಜ್ಯನಾದ ವಿಷ್ಣುವು ಸಂತುಷ್ಟನಾಗಿ ಆವನಿಗೆ ದರ್ಶನವನ್ನಿತ್ತನು.

೮. ಆ ವಿಷ್ಣುವು ದೇವೇಂದ್ರನ ರೂಪವನ್ನು ಧರಿಸಿ ಐರಾವತವನ್ನೇರಿ ಅಂಬರೀಷನನ್ನು ಕುರಿತು ವರವನ್ನು ಕೇಳು ; ಕೊಡವೆನೆಂದನು.

೯. ಇಂದ್ರನು ಹೇಳುತ್ತಾನೆ :—ನಾನು ಭಕ್ತಿಯುಳ್ಳ ನಿನ್ನನ್ನು ನೋಡಿ ಇಲ್ಲಿಗೆ ಬಂದಿರುವೆನು. ನಿನಗಿಷ್ಟವಾದ ವರವನ್ನು ಕೇಳಿಕೊ.

೧೦. ಅಂಬರೀಷನು ಹೇಳುತ್ತಾನೆ :—ದೇವರಾಜ ! ನೀನು ಮುಕ್ತಿಯನ್ನೀಯಲು ಅಸಮರ್ಥನಾಗಿರುವೆ. ನಿನ್ನ ಅನುಗ್ರಹದಿಂದ ಮೂರುಲೋಕಗಳೂ ನನ್ನ ಅಧೀನದಲ್ಲಿರುವುವು. ನಿನಗೆ ಸುಖಾಗಮನವಾಗಲಿ ಹೊರಡು. ನನಗೆ ವರವು ರುಚಿಸುವುದಿಲ್ಲ.

೧೧. ಸಂತುಷ್ಟನಾದ ವಿಷ್ಣುವು ನನಗೆ ವರವನ್ನು ಕೊಡುವನು. ಆಗ ನಾನು ತೆಗೆದುಕೊಳ್ಳುವೆನು. ನೀನು ಹೋಗು; ನಿನಗೆ ನಮಸ್ಕಾರವು.

೨3

ಇಂದ್ರ ಉವಾಚ :—

ವರಂ ವರಯ ರಾಜರ್ಷೇ ಯತ್ತೇ ಮನಸಿ ವರ್ತತೇ ।
ಬ್ರಹ್ಮವಿಷ್ಣುತ್ರಿನೇತ್ರಾಣಾಮಹಮೀಶೋ ನೃಪೋತ್ತಮ ॥ ೧೨ ॥
ಅನ್ಯೇಷಾಂ ಚೈವ ದೇವಾನಾಂ ತ್ರೈಲೋಕ್ಯಸ್ಯಾಪ್ಯಹಂ ವಿಭುಃ ।
ವರಂ ವರಯ ತಸ್ಮಾತ್ತ್ವಂ ಪ್ರಸಾದಾನ್ಮೇ ಸುದುರ್ಲಭಂ ॥ ೧೩ ॥
ಪ್ರಸನ್ನೇ ಮಯಿ ರಾಜೇಂದ್ರ ಪ್ರಸನ್ನಾಃ ಸರ್ವದೇವತಾಃ ।
ಕುರು ಮೇ ವಚನಂ ರಾಜನ್ಗೃಹ್ಯತಾಂ ವರಮುತ್ತಮಂ ॥ ೧೪ ॥

ಅಂಬರೀಷ ಉವಾಚ :—

ರಾಜಾ ತ್ವಂ ಸರ್ವದೇವಾನಾಂ ತ್ರೈಲೋಕ್ಯಸ್ಯ ತಥೇಶ್ವರಃ ।
ಸಪ್ತದ್ವೀಪವತೀ ರಾಜಾ ಅಹಂ ವೃತ್ರನಿಷೂದನ ॥ ೧೫ ॥
ಹೃಷೀಕೇಶಸ್ಯ ಸದ್ಭಕ್ತಂ ವಿದ್ಧಿ ಮಾಂ ತಾತ ನಿಶ್ಚಯಂ ।
ಆಗತಶ್ಚ ಹೃಷೀಕೇಶೋ ವರಂ ದಾಸ್ಯತ್ಯಸಂಶಯಂ ॥ ೧೬ ॥

ಇಂದ್ರ ಉವಾಚ :—

ದದತೋ ಮಮ ಭೂಪಾಲ ನ ಗೃಹ್ಣಾಸಿ ವರಂ ಯದಿ ।
ವಜ್ರಂ ತ್ವಾಂ ಪ್ರೇರಯಿಷ್ಯಾಮಿ ವಧಾಯ ಕೃತನಿಶ್ಚಯಃ ॥ ೧೭ ॥

೧೨. ಇಂದ್ರನು ಹೇಳುತ್ತಾನೆ :—ರಾಜರ್ಷಿಯೆ! ನಿನಗಿಷ್ಟವಾದ ವರವನ್ನು ಕೇಳಿಕೊ. ನಾನು ಬ್ರಹ್ಮ, ವಿಷ್ಣು ಮಹೇಶ್ವರರಿಗೆ ಒಡೆಯನಾಗಿರುವೆನು.

೧೩. ನಾನು ಇತರ ದೇವತೆಗಳಿಗೂ, ಮೂರು ಲೋಕಗಳಿಗೂ ಸ್ವಾಮಿಯಾಗಿರುವೆನು. ಆದ್ದರಿಂದ ದುರ್ಲಭವಾದ ವರವನ್ನೂ ಕೇಳಿಕೊ. ನನ್ನ ಅನುಗ್ರಹದಿಂದ ಅದು ನಿನಗೆ ಲಭಿಸುವುದು.

೧೪. ದೊರೆಯೆ! ನಾನು ಪ್ರಸನ್ನನಾದರೆ ಸಕಲದೇವತೆಗಳೂ ಸಂತುಷ್ಟರಾಗುವರು. ನನ್ನ ಮಾತನ್ನು ನಡೆಯಿಸು. ಉತ್ತಮವಾದ ವರವನ್ನು ತೆಗೆದುಕೊ.

೧೫. ಅಂಬರೀಷನು ಹೇಳುತ್ತಾನೆ :—ದೇವೇಂದ್ರ! ನೀನು ಸಕಲ ದೇವತೆಗಳಿಗೂ, ಮೂರುಲೋಕಗಳಿಗೂ ಒಡೆಯನು. ನಾನು ಸಪ್ತದ್ವೀಪಗಳುಳ್ಳ ಈ ಮೇದಿನಿಗೆ ಒಡೆಯನು.

೧೬. ಅಪ್ಪ! ನನ್ನನ್ನು ಹೃಷೀಕೇಶನ ಭಕ್ತನನ್ನಾಗಿ ತಿಳಿ. ಆ ಹೃಷೀಕೇಶನು ಬಂದು ನನಗೆ ನಿಶ್ಚಯವಾಗಿಯೂ ವರವನ್ನೀಯುವನು.

೧೭. ಇಂದ್ರನು ಹೇಳುತ್ತಾನೆ :—ದೊರೆಯೆ! ನಾನು ವರವನ್ನು ಕೊಡುತ್ತಿದ್ದರೂ ನೀನು ತೆಗೆದುಕೊಳ್ಳದಿದ್ದರೆ ನಿನ್ನನ್ನು ಕೊಲ್ಲುವುದಕ್ಕೆ ವಜ್ರಾಯುಧವನ್ನು ಪ್ರೇರಿಸುವೆನು.

ಏವಮುಕ್ತ್ವಾ ಸಹಸ್ರಾಕ್ಷಃ ಸೃಕ್ಕಿಣೀ ಪರಿಲೇಲಿಹನ್ ।
ಕುಲಿಶಂ ಭ್ರಾಮಯಾಮಾಸ ಗೃಹೀತ್ವಾ ದಕ್ಷಿಣೇ ಕರೇ ॥ ೧೮ ॥
ತಸ್ಯೈವಂ ಭ್ರಾಮ್ಯಮಾಣಸ್ಯ ಮಹೋತ್ಪಾತಾ ಬಭೂವಿರೇ ।
ತತಃ ಪರ್ವತಶೃಂಗಾಣಿ ವಿಶೀರ್ಣಾನಿ ಸಮಂತತಃ ॥ ೧೯ ॥
ಆವೃತಂ ಗಗನಂ ಮೇಘೈರ್ವಿಘೂರ್ಣ್ವದ್ಭಿರ್ಮಹೀಂ ತದಾ ।
ನ ಕಿಂಚಿದ್ದೃಶ್ಯತೇ ತತ್ರ ಸರ್ವಂ ಸಂತಮಸಾವೃತಂ ॥ ೨೦ ॥
ಏತಸ್ಮಿನ್ನೇವ ಕಾಲೇ ತು ಸ ರಾಜಾ ಹರಿವತ್ಸಲಃ ।
ನಿಮೀಲ್ಯ ಲೋಚನೇ ಸ್ವೀಯೇ ಸಮಾಧಿಸ್ಥೋ ಬಭೂವ ಹ ॥ ೨೧ ॥
ತತಸ್ತುಷ್ಟೋ ಜಗನ್ನಾಥಃ ಸಾಕ್ಷಾತ್ಪ್ರತ್ಯಕ್ಷತಾಂ ಗತಃ ।
ಐರಾವತಃ ಸ ಗರುಡಸ್ತತ್ಕ್ಷಣಾತ್ಸಮಜಾಯತ ॥ ೨೨ ॥
ತಮುವಾಚ ಹೃಷೀಕೇಶೋ ಮೇಘಗಂಭೀರಯಾ ಗಿರಾ ।
ಧ್ಯಾನಸ್ಥಿತಂ ನೃಪಶ್ರೇಷ್ಠಂ ಶಂಖಚಕ್ರಗದಾಧರಃ ॥ ೨೩ ॥

ಶ್ರೀಭಗವಾನುವಾಚ :—

ಪರಿತುಷ್ಟೋಽಸ್ಮಿ ತೇ ವತ್ಸಾನನ್ಯಭಕ್ತ ಜನೇಶ್ವರ ।
ವರಂ ವರಯ ಭದ್ರಂ ತೇ ಯದ್ಯಪಿ ಸ್ಯಾತ್ಸುದುರ್ಲಭಂ ॥ ೨೪ ॥

---

೧೮. ಇಂದ್ರನು ಹೀಗೆಂದು ಕಟವಾಯಿಯನ್ನು ನೆಕ್ಕುತ್ತ ವಜ್ರಾಯುಧವನ್ನು ಬಲಗೈಯಿಂದ ಹಿಡಿದುಕೊಂಡು ತಿರುಗಿಸಿದನು.

೧೯. ಅವನು ಹೀಗೆ ತಿರುಗಿಸುತ್ತಿರಲು ಮಹೋತ್ಪಾತಗಳುಂಟಾದುವು. ಸುತ್ತಲೂ ಪರ್ವತದ ಶಿಖರಗಳು ಪುಡಿಯಾದುವು.

೨೦. ಮೇಘಗಳು ಭೂಮಿಯನ್ನು ನಡುಗಿಸುತ್ತ ಆಕಾಶವನ್ನು ಆವರಿಸಿದುವು. ಎಲ್ಲವೂ ಕತ್ತಲೆಯಿಂದ ಮುಚ್ಚಿರುವುದರಿಂದ ಯಾವ ವಸ್ತುವೂ ಕಾಣುತ್ತಿರಲಿಲ್ಲ.

೨೧. ಈ ಸಮಯದಲ್ಲಿ ವಿಷ್ಣುಭಕ್ತನಾದ ಆ ಅಂಬರೀಷನು ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ಧ್ಯಾನಾಸಕ್ತನಾದನು.

೨೨. ಅನಂತರ ಜಗದೊಡೆಯನಾದ ವಿಷ್ಣುವು ಪ್ರತ್ಯಕ್ಷನಾದನು. ಆ ಐರಾವತವು ಕೂಡಲೆ ಗರುಡನಾಯಿತು.

೨೩. ಶಂಖ, ಚಕ್ರ, ಗದೆಗಳನ್ನು ಧರಿಸಿದ ವಿಷ್ಣುವು ಧ್ಯಾನಾಸಕ್ತನಾದ ಆ ಅಂಬರೀಷನನ್ನು ಕುರಿತು ಮೇಘನಾದದಂತೆ ಗಂಭೀರವಾದ ಮಾತಿನಿಂದ ಇಂತೆಂದನು.

೨೪. ಶ್ರೀ ಭಗವಂತನು ಹೇಳುತ್ತಾನೆ :—ಮಹಾರಾಜ! ಮಗು! ಅನ್ಯದೇವತೆಗಳಲ್ಲಿ ಭಕ್ತಿಯಿಲ್ಲದ ನಿನ್ನಲ್ಲಿ ಸಂತುಷ್ಟನಾಗಿರುವೆನು. ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನು.

ಅಂಬರೀಷ ಉವಾಚ :—

ಯದಿ ಪ್ರಸನ್ನೋ ಭಗವಾನ್ಯದಿ ದೇಯೋ ವರೋ ಮಮ ।
ಸಂಸಾರಾಬ್ಧೇಸ್ತಾರಣಾಯ ವರದೋ ಭವ ಮೇ ಹರೇ ॥ ೨೫ ॥

ಪುಲಸ್ತ್ಯ ಉವಾಚ :—

ಅಥಾಹ ಭಗವಾನ್ವಿಷ್ಣುರಂಬರೀಷಂ ಜನಾಧಿಪಂ ।
ಜ್ಞಾನಯೋಗಂ ಸುವಿಸ್ತೀರ್ಣಂ ಸಂಸಾರಕ್ಷಯಕಾರಣಂ ॥ ೨೬ ॥
ಯಸ್ಮಿಞ್ಜ್ಞಾತೇ ನರಃ ಸದ್ಯಃ ಸಂಸಾರಾನ್ಮುಚ್ಯತೇ ನೃಪ ।
ಶ್ರುತ್ವಾ ಸ ನೃಪತಿಃ ಸಮ್ಯಕ್ಪ್ರಣಮ್ಯೋವಾಚ ಕೇಶವಂ ॥ ೨೭ ॥

ಅಂಬರೀಷ ಉವಾಚ :—

ಭಗವನ್ಯಸ್ತ್ವಯಾ ಪ್ರೋಕ್ತೋ ಯೋಗೋಽಯಂ ಮಮ ವಿಸ್ತರಾತ್ ।
ದುರ್ಜ್ಞೇಯಃ ಸ ನೃಣಾಂ ದೇವ ವಿಶೇಷಾಚ್ಚ ಕಲೌ ಯುಗೇ ॥ ೨೮ ॥
ಅಪಿ ಚೇತ್ತ್ವಪ್ರಸನ್ನೋಽಸಿ ಕ್ರಿಯಾಯೋಗಂ ಬ್ರವೀಹಿ ಮೇ ।
ಲೋಕಾನಾಂ ತಾರಣಾರ್ಥಾಯ ಶಂಖಚಕ್ರಗದಾಧರ ॥ ೨೯ ॥

ಪುಲಸ್ತ್ಯ ಉವಾಚ :—

ತತಸ್ತಸ್ಮೈ ನರೇಂದ್ರಾಯ ಕ್ರಿಯಾಯೋಗಂ ಜನಾರ್ದನಃ ।
ಯಥಾಯೋಗ್ಯಂ ನೃಪಶ್ರೇಷ್ಠ ಕಥಯಾಮಾಸ ಕೇಶವಃ ॥ ೩೦ ॥

---

೨೫. ಅಂಬರೀಷನು ಹೇಳುತ್ತಾನೆ:—ಪೂಜ್ಯನೆ! ನೀನು ಪ್ರಸನ್ನನಾಗಿದ್ದರೆ ವರವನ್ನು ಕೊಡುವುದಾದರೆ ಸಂಸಾರಸಮುದ್ರವನ್ನು ದಾಟುವಂತೆ ವರವನ್ನು ಕೊಡು.

೨೬. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ಪೂಜ್ಯನಾದ ವಿಷ್ಣುವು ದೊರೆಯಾದ ಅಂಬರೀಷನಿಗೆ ಸಂಸಾರವನ್ನು ನೀಗಿಸುವ ಜ್ಞಾನಯೋಗವನ್ನು ವಿಸ್ತಾರವಾಗಿ ಉಪದೇಶಮಾಡಿದನು.

೨೭. ಆ ಜ್ಞಾನಯೋಗದಿಂದ ಮನುಷ್ಯನು ಕೂಡಲೆ ಸಂಸಾರದಿಂದ ಮುಕ್ತನಾಗುವನು. ಆ ದೊರೆಯು ಅದನ್ನು ಚೆನ್ನಾಗಿ ಕೇಳಿ ವಿಷ್ಣುವನ್ನು ವಂದಿಸಿ ಇಂತೆಂದನು.

೨೮. ಅಂಬರೀಷನು ಹೇಳುತ್ತಾನೆ:—ಪೂಜ್ಯನೆ! ನೀನು ವಿಸ್ತಾರವಾಗಿ ನನಗೆ ಉಪದೇಶಮಾಡಿದ ಜ್ಞಾನಯೋಗವು ಕಲಿಯುಗದ ಜನರಿಗೆ ತಿಳಿಯಲಶಕ್ಯವಾದುದು.

೨೯. ಶಂಖ, ಚಕ್ರ, ಗದೆಗಳನ್ನು ಧರಿಸಿದ ಓ ಹರಿಯೆ! ನೀನು ಪ್ರಸನ್ನನಾಗಿದ್ದರೆ ಜನರನ್ನುದ್ಧರಿಸುವುದಕ್ಕಾಗಿ ಕ್ರಿಯಾಯೋಗವನ್ನು ಹೇಳು.

೩೦. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ವಿಷ್ಣುವು ಆ ದೊರೆಗೆ ಉಚಿತರೀತಿಯಿಂದ ಕ್ರಿಯಾಯೋಗವನ್ನು ಹೇಳಿದನು.

ತಂ ಶ್ರುತ್ವಾ ತುಷ್ಟಹೃದಯೋಽಂಬರೀಷೋ ವಾಕ್ಯಮಬ್ರವೀತ್ ॥ ೩೧ ॥

ಅಂಬರೀಷ ಉವಾಚ :—

ಯದಿ ತುಷ್ಟೋಽಸಿ ಭಗವನ್ರೂಪೇಣಾನೇನ ಮಾಧವ ।
ಮಮಾಶ್ರಮೇ ತ್ವಂ ದೇವೇಶ ಸದಾ ಸನ್ನಿಹಿತೋ ಭವ ॥ ೩೨ ॥
ಯತಸ್ತ್ವತ್ಪ್ರತಿಮಾಮೇಕಾಮರ್ಚಯಾಮಿ ವಿಧಾನತಃ ।
ಪೂಜಯಿಷ್ಯಂತಿ ಲೋಕಾಸ್ತ್ವಾಂ ಶಂಖಚಕ್ರಗದಾಧರಂ ॥ ೩೩ ॥

ಪುಲಸ್ತ್ಯ ಉವಾಚ :

ತಥೋಕ್ತೋ ಮಾಧವೇನಾಸೌ ಚಕಾರ ಹರಿಮಂದಿರಂ ।
ಪ್ರತಿಮಾಂ ಪೂಜಯಾಮಾಸ ಗಂಧಪುಷ್ಪಾನುಲೇಪನೈಃ ॥ ೩೪ ॥
ತತಃ ಕಾಲೇನ ಮಹತಾ ಭಗವಾನ್ವಿಷ್ಣುರ್ಮಂದಿರೇ ।
ತೇನೈವ ವಪುಷಾ ಪ್ರಾಪ್ತಃ ಸಪುತ್ರಃ ಸಹಬಾಂಧವಃ ॥ ೩೫ ॥
ಅದ್ಯಾಪಿ ಭಗವಾನ್ವಿಷ್ಣುಃ ಸತ್ಯವಾಕ್ಯೇನ ಭೂಪತೇಃ ।
ಸದಾ ಸಂನಿಹಿತೋ ವಿಷ್ಣುಸ್ತಸ್ಮಿನ್ನವಸರೇ ಕಲೌ ॥ ೩೬ ॥
ತದಾರಭ್ಯ ಮಹಾರಾಜ ಕ್ರಿಯಾಯೋಗೋ ಧರಾತಲೇ ।
ಪ್ರವೃತ್ತಃ ಪ್ರತಿಮಾಕಾರಃ ಕಾಲೇ ಚ ಕಲಿಸಂಜ್ಞಕೇ ॥ ೩೭ ॥

---

೩೧. ಅಂಬರೀಷನು ಅದನ್ನು ಕೇಳಿ ಸಂತೋಷಗೊಂಡು ಇಂತೆಂದನು.

೩೨. ಅಂಬರೀಷನು ಹೇಳುತ್ತಾನೆ:—ಮಾಧವ! ನೀನು ನನಗೆ ಮೆಚ್ಚಿದ್ದರೆ ಈ ರೂಪದಿಂದ ಯಾವಾಗಲೂ ನನ್ನ ಆಶ್ರಮದಲ್ಲಿ ಸನ್ನಿಹಿತನಾಗಿರು.

೩೩. ಆ ನಿನ್ನ ಪ್ರತಿಮೆಯನ್ನು ನಾನು ವಿಧಿಯಂತೆ ಪೂಜಿಸುವೆನು. ಜನರೂ ಶಂಖ, ಚಕ್ರ, ಗದೆಗಳನ್ನು ಧರಿಸಿದ ನಿನ್ನನ್ನು ಪೂಜಿಸುವರು.

೩೪. ವಿಷ್ಣುವು ಹಾಗೆಯೇ ಆಗಲೆನ್ನಲು ಈ ಅಂಬರೀಷನು ಹರಿಮಂದಿರವನ್ನು ನಿರ್ಮಿಸಿ ಆ ಹರಿಯ ಪ್ರತಿಮೆಯನ್ನು ವಿಧಿಯಿಂದ ಪೂಜಿಸಿದನು.

೩೫. ಅನಂತರ ಬಹುಕಾಲದ ಮೇಲೆ ಪೂಜ್ಯನಾದ ವಿಷ್ಣುವು ಅದೇ ಶರೀರದಿಂದ ಬಂಧುಗಳೊಡನೆ ಆ ಆಲಯಕ್ಕೆ ಬಂದನು.

೩೬. ಕಲಿಯುಗದಲ್ಲಿ ಈಗಲೂ ವಿಷ್ಣುವು ಅಂಬರೀಷರಾಜನ ಮಾತಿನಂತೆ ಆ ಮಂದಿರದಲ್ಲಿ ಯಾವಾಗಲೂ ನೆಲಸಿರುವನು.

೩೭. ಮಹಾರಾಜ! ಅದು ಮೊದಲ್ಗೊಂಡು ಭೂಮಿಯಲ್ಲಿ ಪ್ರತಿಮಾರ್ಚನೆ ರೂಪವಾದ ಕ್ರಿಯಾಯೋಗವು ನಡೆಯುತ್ತಿರುವುದು.

ಯಸ್ತಂ ಪೂಜಯತೇ ಭಕ್ತ್ಯಾ ಹೃಷೀಕೇಶೇ ನೃಪಾರ್ಬುದೇ ।
ಸ ಯಾತಿ ವಿಷ್ಣುಸಾಲೋಕ್ಯಂ ಪ್ರಸಾದಾಚ್ಚ ಹರೇರ್ನೃಪ ॥ ೩೮ ॥
ಏಕಾದಶ್ಯಾಂ ಮಹಾರಾಜ ಜಾಗರಂ ಯಃ ಸದಾ ನೃಪ ।
ಕರಿಷ್ಯತಿ ನಿರಾಹಾರೋ ಹೃಷೀಕೇಶಾಗ್ರತಃ ಸ್ಥಿತಃ ।
ಸ ಯಾಸ್ಯತಿ ಪರಂ ಸ್ಥಾನಂ ದುರ್ಲ್ಲಭಂ ತ್ರಿದಶೈರಪಿ ॥ ೩೯ ॥
ಯತ್ಪುಣ್ಯಂ ಕಪಿಲಾದಾನೇ ಕಾರ್ತಿಕ್ಯಾಂ ಜ್ಯೇಷ್ಠಪುಷ್ಕರೇ ।
ತತ್ಫಲಂ ಲಭತೇ ಮರ್ತ್ಯೋ ಹೃಷೀಕೇಶಸ್ಯ ದರ್ಶನಾತ್ ॥ ೪೦ ॥
ಶುಕ್ಲೇ ವಾ ಯದಿ ವಾ ಕೃಷ್ಣೇ ಸಂಪ್ರಾಪ್ತೇ ಹರಿವಾಸರೇ ।
ಯಃ ಪಶ್ಯತಿ ಹೃಷೀಕೇಶಮಶ್ವಮೇಧಫಲಂ ಲಭೇತ್ ॥ ೪೧ ॥
ತಸ್ಮಾತ್ಸರ್ವಪ್ರಯತ್ನೇನ ಪೂಜಯೇತ್ತು ವಿಧಾನತಃ ।
ಯಸ್ತತ್ರ ಚತುರೋ ಮಾಸಾನ್ಸಮ್ಯಗ್ವ್ರತಪರಾಯಣಃ ।
ಅಭ್ಯರ್ಚಯೇದ್ಧೃಷೀಕೇಶಂ ನ ಸ ಭೂಯೋಽಭಿಜಾಯತೇ ॥ ೪೨ ॥

---

೩೮. ದೊರೆಯೆ ! ಅರ್ಬುದದಲ್ಲಿ ಹೃಷಿಕೇಶಕ್ಷೇತ್ರದಲ್ಲಿರುವ ಆ ಹರಿಯನ್ನು ಭಕ್ತಿಯಿಂದಾರಾಧಿಸುವ ಮಾನವನು ಆ ವಿಷ್ಣುವಿನ ಅನುಗ್ರಹದಿಂದ ವೈಕುಂಠಲೋಕಕ್ಕೆ ಹೋಗುವನು.

೩೯. ಮಹಾರಾಜ ! ಏಕಾದಶಿಯ ದಿನ ಆ ಹೃಷೀಕೇಶನ ಮುಂದೆ ಉಪವಾಸ ಮಾಡಿ ಜಾಗರಣೆಗೈಯ್ಯುವವನು ದೇವತೆಗಳಿಗೂ ದುರ್ಲಭವಾದ ಉತ್ತಮ ಸ್ಥಾನಕ್ಕೆ ತೆರಳುವನು.

೪೦. ಕಾರ್ತಿಕಮಾಸದಲ್ಲಿ ಜ್ಯೇಷ್ಠ ಪುಷ್ಕರದಲ್ಲಿ ಕಪಿಲಗೋವನ್ನು ದಾನಮಾಡಿದ ಪುಣ್ಯವು ಹೃಷೀಕೇಶನ ದರ್ಶನದಿಂದ ಲಭಿಸುವುದು.

೪೧. ಶುಕ್ಲ ಅಥವಾ ಕೃಷ್ಣಪಕ್ಷದ ಏಕಾದಶಿಯ ದಿನ ಹೃಷೀಕೇಶನನ್ನು ದರ್ಶನ ಮಾಡಿದರೆ ಅಶ್ವಮೇಧಯಾಗದ ಫಲವು ಲಭಿಸುವುದು.

೪೨ ಆದುದರಿಂದ ಆ ಹೃಷೀಕೇಶನನ್ನು ನಾಲ್ಕು ತಿಂಗಳು ವ್ರತನಿರತನಾಗಿ ವಿಧಿಯಂತೆ ಪೂಜಿಸಿದವನು ಮರಳಿ ಜನಿಸುವುದಿಲ್ಲ.

ಏಕಃ ಸರ್ವಾಣಿ ತೀರ್ಥಾನಿ ಕರೋತಿ ನೃಪಸತ್ತಮ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೪೩ ॥
ಏಕೋ ದಾನಾನಿ ಸರ್ವಾಣಿ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೪೪ ॥
ಏಕಃ ಕನ್ಯಾಸಹಸ್ರಂ ತು ಪ್ರದದ್ಯಾಚ್ಚ ಯಥಾವಿಧಿ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೪೫ ॥
ಸೂರ್ಯಗ್ರಹೇ ಕುರುಕ್ಷೇತ್ರೇ ದದ್ಯಾದ್ದಾನಮನುತ್ತಮಂ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೪೬ ॥
ಅಗ್ನಿಷ್ಟೋಮಾದಿಭಿರ್ಯಜ್ಞೈರ್ಯಜತ್ಯೇಕಃ ಸದಕ್ಷಿಣೈಃ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೪೭ ॥
ಏಕೋ ಹಿಮಾಲಯಂ ಗತ್ವಾ ತ್ಯಜತಿ ಸ್ವಕಲೇವರಂ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೪೮ ॥
ಏಕಸ್ತು ಭೃಗುಪಾತೇನ ತ್ಯಜೇದ್ದೇಹಂ ಸುತೀರ್ಥಕೇ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೪೯ ॥
ಏಕಃ ಪ್ರಾಯೋಪವೇಶೇನ ಪ್ರಾಣಾಂಸ್ತ್ಯಜತಿ ಮಾನವಃ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೫೦ ॥
ಬ್ರಹ್ಮಜ್ಞಾನಂ ವದತ್ಯೇಕಃ ಶ್ರುತ್ವಾ ಜ್ಞಾನವಿಶಾರದಃ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೫೧ ॥
ಗಯಾಶ್ರಾದ್ಧಂ ಕರೋತ್ಯೇಕಃ ಪಿತೃಪಕ್ಷೇ ನೃಪೋತ್ತಮ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೫೨ ॥
ಚಾಂದ್ರಾಯಣಸಹಸ್ರಂ ಚ ಕರೋತ್ಯೇಕಃ ಸಮಾಹಿತಃ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೫೩ ॥

---

೪೨—೫೫. ಸಾವಧಾನ ಮನಸ್ಸಿನಿಂದ ನಾಲ್ಕು ತಿಂಗಳು ಹೃಷೀಕೇಶನನ್ನು ದರ್ಶನಮಾಡಿದವನು ಸಕಲ ತೀರ್ಥಯಾತ್ರೆಯನ್ನು ಮಾಡಿದವನಂತೆಯೂ, ಸಕಲ ದಾನಗಳನ್ನು ಬ್ರಾಹ್ಮಣರಿಗೆ ದಾನಮಾಡಿದವನಂತೆಯೂ, ವಿಧಿಯಂತೆ ಸಹಸ್ರ ಕನ್ಯಾದಾನ ಮಾಡಿದವನಂತೆಯೂ, ಸೂರ್ಯಗ್ರಹಣಕಾಲದಲ್ಲಿ ಕುರುಕ್ಷೇತ್ರದಲ್ಲಿ ದಾನಮಾಡಿದವನಂತೆಯೂ, ದಕ್ಷಿಣೆಗಳಿಂದಸಹಿತವಾದ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿದವನಂತೆಯೂ, ಹಿಮಾಲಯದಲ್ಲಿ ಮೃತನಾದವನಂತೆಯೂ, ಒಳ್ಳೆಯ ತೀರ್ಥದಲ್ಲಿ ಬೆಟ್ಟದ ಜರಿಯಿಂದ ಬಿದ್ದವನಂತೆಯೂ, ಪ್ರಾಯೋಪವೇಶದಿಂದ ಪ್ರಾಣವನ್ನು ನೀಗಿಸಿಕೊಂಡವನಂತೆಯೂ, ಬ್ರಹ್ಮಜ್ಞಾನವನ್ನು ಕೇಳಿ ಹೇಳುವ ಜ್ಞಾನಿಯಂತೆಯೂ, ಪಿತೃಪಕ್ಷದಲ್ಲಿ

ವ್ರತಂ ತಪಃ ಸಹಸ್ರಾಬ್ದಮೇಕಃ ಸಮ್ಯಕ್ಚರೇನ್ನರಃ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೫೪ ॥
ಏಕಸ್ತು ಚತುರೋ ವೇದಾನ್ಸಮ್ಯಕ್ಪಠತಿ ಬ್ರಾಹ್ಮಣಃ ।
ಪಶ್ಯತ್ಯನ್ಯೋ ಹೃಷೀಕೇಶಂ ಚಾತುರ್ಮಾಸ್ಯಂ ಸಮಾಹಿತಃ ॥ ೫೫ ॥
ಬಹುನಾ ಕಿಮಿಹೋಕ್ತೇನ ಶೃಣು ಸಂಕ್ಷೇಪತೋ ನೃಪ ।
ಏಕತಸ್ತು ಭವೇತ್ಸರ್ವಮೇಕತೋ ಹರಿದರ್ಶನಂ ॥ ೫೬ ॥
ತಸ್ಮಾತ್ಸರ್ವಪ್ರಯತ್ನೇನ ಸ್ಥಾತವ್ಯಂ ಹರಿಸಂನಿಧೌ ।
ಅಂಬರೀಷಸ್ಯ ರಾಜರ್ಷೇಃ ಸ್ಥಾನಕೇ ಪಾಪನಾಶನೇ ॥ ೫೭ ॥
ಏಕತಸ್ತು ಹೃಷೀಕೇಶ ಏಕತಃ ಕರ್ಣಿಕೇಶ್ವರಃ ।
ತಯೋರ್ಮಧ್ಯೇ ಮೃತಾ ಯೇ ಚ ಮಾನವಾ ನೃಪಸತ್ತಮ ॥ ೫೮ ॥
ಅಪಿ ಕೃತ್ವಾ ಮಹತ್ಪಾಪಂ ಗಚ್ಛಂತಿ ಹರಿಸನ್ನಿಧೌ ।
ಹೃಷೀಕೇಶಂ ಸಮಾಲೋಕ್ಯ ಸದ್ಯೋ ಮುಕ್ತಿಮವಾಪ್ನುಯಾತ್ ॥ ೫೯ ॥
ಪುಷ್ಪಮೇಕಂ ಹೃಷೀಕೇಶೇ ಯಶ್ಚಾರೋಪಯತೇ ನೃಪ ।
ಸುಖಸೌಭಾಗ್ಯಸಂಯುಕ್ತ ಇಹ ಲೋಕೇ ಪರತ್ರ ಚ ॥ ೬೦ ॥

---

ಗಯಾಶ್ರಾದ್ಧಗೈದವನಂತೆಯೂ, ಸಹಸ್ರ ಚಾಂದ್ರಾಯಣ ವ್ರತವನ್ನಾಚರಿಸಿದವನಂತೆಯೂ, ನಾಲ್ಕು ವೇದಗಳನ್ನು ಪಠಿಸುವ ಬ್ರಾಹ್ಮಣನಂತೆಯೂ ಆಗುವನು.

೫೬. ದೊರೆಯೆ ! ಹೆಚ್ಚು ಹೇಳಿ ಪ್ರಯೋಜನವೇನು ? ಸಂಕ್ಷೇಪವಾಗಿ ಕೇಳು. ಹರಿ ದರ್ಶನದಿಂದ ಸಮಸ್ತವನ್ನೂ ಮಾಡಿದಂತಾಗುವುದು.

೫೭. ಆದ್ದರಿಂದ ಪಾಪವನ್ನು ಪರಿಹರಿಸುವ ಅಂಬರೀಷರಾಜನ ಕ್ಷೇತ್ರದಲ್ಲಿ ವಿಷ್ಣುವಿನ ಹತ್ತಿರ ವಾಸಿಸಬೇಕು.

೫೮–೫೯. ಅಲ್ಲಿ ಒಂದೆಡೆಯಲ್ಲಿ ಹೃಷಿಕೇಶನೂ, ಇನ್ನೊಂದೆಡೆಯಲ್ಲಿ ಕರ್ಣಿಕೇಶ್ವರನೂ ಇರುವರು. ಅವರಿಂದ ಅಲ್ಲಿ ಮೃತರಾದ ಮಾನವರು ಮಹಾಪಾಪವನ್ನೆಸಗಿದ್ದರೂ ಹರಿಯ ಸನ್ನಿಧಿಗೆ ಹೋಗುವರು. ಹೃಷೀಕೇಶನನ್ನು ದರ್ಶನಮಾಡಿದವನು ಕೂಡಲೆ ಮುಕ್ತನಾಗುವನು.

೬೦. ದೊರೆಯೆ! ಒಂದು ಪುಷ್ಪವನ್ನು ಹೃಷೀಕೇಶನಿಗೆ ಸಮರ್ಪಿಸಿದವನೂ ಇಹ ಪರಗಳಲ್ಲಿ ಸುಖಸೌಭಾಗ್ಯಗಳಿಂದ ಕೂಡಿರುವನು.

ಹೃಷೀಕೇಶಸ್ಯ ಯೋ ಭಕ್ತ್ಯಾ ಕರಿಷ್ಯತ್ಯನುಲೇಪನಂ ।
ಸ ಯಾಸ್ಯತಿ ಪರಂ ಸ್ಥಾನಂ ಜರಾಮರಣವರ್ಜಿತಂ ॥ ೬೧ ॥

ಸಂಮಾರ್ಜನಂ ಚ ತಸ್ಯಾಗ್ರೇ ಯಃ ಕರೋತಿ ಸಮಾಹಿತಃ ।
ಯಾವತ್ಯೋ ರೇಣವಸ್ತತ್ರ ತಾವದ್ವರ್ಷಶತಾನಿ ಸಃ ।
ಮೋದತೇ ವಿಷ್ಣುಲೋಕಸ್ಥೋ ನಾತ್ರ ಕಾರ್ಯಾ ವಿಚಾರಣಾ ॥ ೬೨ ॥

ಕಾರ್ತಿಕೇ ಶುಕ್ಲಪಕ್ಷೇ ಚ ಏಕಾದಶ್ಯಾಂ ನೃಪೋತ್ತಮ ।
ದೀಪಮಾರೋಪಯೇದ್ಯಸ್ತು ಹೃಷೀಕೇಶಾಗ್ರತೋ ನೃಪ ॥ ೬೩ ॥
ಯಥಾಯಥಾ ಪ್ರಕಾಶೇತ ಪಾಪಂ ಜನ್ಮಾಂತರಾರ್ಜಿತಂ ।
ತಥಾತಥಾ ವ್ರಜೇನ್ನಾಶಂ ತಸ್ಯ ಕಾಯಾದಶೇಷತಃ ॥ ೬೪ ॥
ಪಂಚಾಮೃತೇನ ಯಃ ಪೂಜಾಂ ಹೃಷೀಕೇಶೇ ಕರಿಷ್ಯತಿ ।
ದಧ್ನಾ ಕ್ಷೀರೇಣ ವಾ ಯಸ್ತು ನ ಸ ಭೂಯೋಽಭಿಜಾಯತೇ ॥ ೬೫ ॥

ತಸ್ಮಾತ್ಸರ್ವಪ್ರಯತ್ನೇನ ಹೃಷೀಕೇಶಂ ಸಮರ್ಚಯೇತ್ ।
ಸಂಸಾರಬಂಧತೋ ರಾಜನ್ಮುಕ್ತಿಮಾಪ್ನೋತಿ ಮಾನವಃ ॥ ೬೬ ॥

---

೬೧. ಹೃಷೀಕೇಶನಿಗೆ ಭಕ್ತಿಯಿಂದ ಗಂಧವನ್ನು ಲೇಪನ ಮಾಡಿದವನೂ ಮುಪ್ಪುಮರಣಗಳಿಲ್ಲದ ಉತ್ತಮಸ್ಥಾನವನ್ನು ಪಡೆಯುವನು.

೬೨. ಅವನ ಮುಂದೆ ಗುಡಿಸುವವನು ಆ ಧೂಳಿನ ಸಂಖ್ಯೆಯಷ್ಟು ಶತಮಾನ ಗಳಕಾಲ ವಿಷ್ಣುಲೋಕದಲ್ಲಿ ಆನಂದಪಡುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೬೩–೬೪. ಹೃಷೀಕೇಶನ ಮುಂದೆ ಕಾರ್ತಿಕ ಶುದ್ಧ ಏಕಾದಶೀದಿನ ದೀಪಗಳನ್ನು ಹೊತ್ತಿಸಿದವನ ಪಾಪವು, ಆ ದೀಪವು ಜ್ವಲಿಸಿದ ಹಾಗೆಲ್ಲ ದೇಹವನ್ನು ಬಿಟ್ಟು ಸಂಪೂರ್ಣವಾಗಿ ತೊಲಗುವುದು.

೬೫. ಪಂಚಾಮೃತದಿಂದಾಗಲಿ, ಮೊಸರು, ಹಾಲುಗಳಿಂದಾಗಲಿ ಹೃಷೀಕೇಶ ನಿಗೆ ಅಭಿಷೇಕಮಾಡಿ ಪೂಜಿಸಿದವನು ಮರಳಿ ಜನಿಸುವುದಿಲ್ಲ.

೬೬. ಆದ್ದರಿಂದ ಹೃಷೀಕೇಶನನ್ನು ಪೂಜಿಸಬೇಕು. ಅದರಿಂದ ಮಾನವನು ಸಂಸಾರ ಮುಕ್ತನಾಗುವನು.

**ಹೃಷೀಕೇಶೇ ವಿಶೇಷೇಣ ಕರ್ತವ್ಯಂ ಪೂಜನಂ ಸದಾ ॥ ೬೭ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಹೃಷೀಕೇಶಮಾಹಾತ್ಮ್ಯವರ್ಣನಂ ನಾಮ
ತ್ರಯೋದಶೋಽಧ್ಯಾಯಃ

---

೬೭. ಹೃಷೀಕೇಶನಿಗೆ ವಿಶೇಷವಾಗಿ ಪೂಜೆಯನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಹೃಷೀಕೇಶಮಾಹಾತ್ಮ್ಯವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಚತುರ್ದಶೋಽಧ್ಯಾಯಃ

### ಸಿದ್ಧೇಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ದೇವಂ ಸಿದ್ಧೇಶ್ವರಂ ಪರಂ ।
ಸಿದ್ಧಿದಂ ಪ್ರಾಣಿನಾಂ ಸಮ್ಯಕ್ಸಿದ್ಧೇನ ಸ್ಥಾಪಿತಂ ಪುರಾ ॥ ೧ ॥
ತತ್ರ ವಿಶ್ವಾವಸುರ್ನಾಮ ಸಿದ್ಧಸ್ತೇಪೇ ಮಹಾತಪಃ ।
ಬಹುವರ್ಷಾಣಿ ಸಂಸ್ಥಾಪ್ಯ ಶಿವಂ ಭಕ್ತಿಪರಾಯಣಃ ॥ ೨ ॥
ಜಿತಕ್ರೋಧೋ ಜಿತಮದೋ ಜಿತಸರ್ವೇಂದ್ರಿಯಕ್ರಿಯಃ ।
ತಾವದ್ವರ್ಷಸಹಸ್ರಾಂತೇ ಭಗವಾನ್ವೃಷಭಧ್ವಜಃ ।
ತುತೋಷ ನೃಪತೇಸ್ತಸ್ಯ ಸ್ವಯಂ ದರ್ಶನಮಾಯಯೌ ॥ ೩ ॥
ಅಬ್ರವೀತ್ತಂ ಮಹಾದೇವೋ ವರದೋಽಸ್ಮೀತಿ ಪಾರ್ಥಿವ ॥ ೪ ॥

---

### ಕನ್ನಡದ ಅನುವಾದ

### ಸಿದ್ಧೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ನೃಪಶ್ರೇಷ್ಠ! ಬಳಿಕ ಸಿದ್ಧನು ಸ್ಥಾಪಿಸಿರುವ ಪ್ರಾಣಿಗಳಿಗೆ ಸಿದ್ಧಿಯನ್ನೀಯುವ ಸಿದ್ಧೇಶ್ವರನೆಡೆಗೆ ಹೋಗಬೇಕು.

೨–೩. ಅಲ್ಲಿ ವಿಶ್ವಾವಸುವೆಂಬ ಸಿದ್ಧನು ಭಕ್ತಿಯಿಂದ ಶಿವನನ್ನು ಪ್ರತಿಷ್ಠೆಮಾಡಿ ಅನೇಕ ವರ್ಷಗಳಕಾಲ ಕೋಪ, ಮದ, ಇಂದ್ರಿಯಗಳನ್ನು ಜಯಿಸಿ ಮಹಾತಪಸ್ಸನ್ನಾಚರಿಸಿದನು. ಪೂಜ್ಯನಾದ ಪರಮೇಶ್ವರನು ಸಾವಿರ ವರ್ಷಗಳ ಕೊನೆಯಲ್ಲಿ ಸಂತುಷ್ಟನಾಗಿ ದೊರೆಗೆ ದರ್ಶನವನ್ನಿತ್ತನು.

೪. ಅವನು ಆ ದೊರೆಯನ್ನು ಕುರಿತು, "ಪಾರ್ಥಿವ! ನಿನಗೆ ವರವನ್ನೀಯುವೆ" ನೆಂದನು.

ಶ್ರೀ ಭಗವಾನುವಾಚ :—
ವರಂ ವರಯ ಭದ್ರಂ ತೇ ಯತ್ತೇ ಮನಸಿ ವರ್ತತೇ ।
ದಾಸ್ಯಾಮಿ ತೇ ಪ್ರಸನ್ನೋಽಹಂ ಯದ್ಯಪಿ ಸ್ಯಾತ್ಸುದುರ್ಲಭಂ ॥ ೫ ॥
ವಿಶ್ವಾವಸುರುವಾಚ :—
ಏತಲ್ಲಿಂಗಂ ಸುರಶ್ರೇಷ್ಠ ಧ್ಯಾತ್ವಾ ಮನಸಿ ನಿಶ್ಚಯಂ ।
ಸರ್ವಾನ್ಕಾಮಾನವಾಪ್ನೋತು ಪ್ರಸಾದಾತ್ತವ ಶಂಕರ ॥ ೬ ॥
ಪುಲಸ್ತ್ಯ ಉವಾಚ :—
ಏವಮಸ್ತ್ವಿತಿ ಸ ಪ್ರೋಚ್ಯ ತತ್ರೈವಾಂತರಧೀಯತ ।
ಸಿದ್ಧೇಶ್ವರಂ ತತೋ ಗತ್ವಾ ಸಿದ್ಧಿಂ ಯಾತಿ ಸಹಸ್ರಶಃ ॥ ೭ ॥
ಪ್ರಭಾವಾತ್ತಸ್ಯ ಲಿಂಗಸ್ಯ ಕಾಮಾನಿಷ್ಟಾನವಾಪ್ನುಯುಃ ।
ತತೋ ಧರ್ಮಕ್ರಿಯಾಃ ಸರ್ವಾ ಗತಾ ನಾಶಂ ಧರಾತಲೇ ॥ ೮ ॥
ನ ಕಶ್ಚಿದ್ಯಜತೇ ಯಜ್ಞೈರ್ನ ದಾನಾನಿ ಪ್ರಯಚ್ಛತಿ ।
ಸಿದ್ಧೇಶ್ವರಪ್ರಸಾದೇನ ಸಿದ್ಧಿಂ ಯಾಂತಿ ನರಾ ಭುವಿ ॥ ೯ ॥
ಉಚ್ಛಿನ್ನೇಷು ಚ ಯಜ್ಞೇಷು ದಾನೇಷು ನೃಪಸತ್ತಮ ।
ಇಂದ್ರಾದ್ಯಾಸ್ತ್ರಿದಶಾಃ ಸರ್ವೇ ಪರಂ ದುಃಖಮುಪಾಗತಾಃ ॥ ೧೦ ॥

---

೫. ಶ್ರೀ ಭಗವಂತನು ಹೇಳುತ್ತಾನೆ:—ನಾನು ನಿನಗೆ ಪ್ರಸನ್ನನಾಗಿರುವೆನು. ನಿನ್ನ ಮನಸ್ಸಿಗೆ ಬೇಕಾದ ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನು.

೬. ವಿಶ್ವಾವಸುವು ಹೇಳುತ್ತಾನೆ:—ಶಂಕರ! ಈ ಲಿಂಗವನ್ನು ಮನಸ್ಸಿನಲ್ಲಿ ಧ್ಯಾನಿಸಿದ ಮಾನವನು ನಿನ್ನ ಅನುಗ್ರಹದಿಂದ ಸಮಸ್ತೇಷ್ಟಾರ್ಥಗಳನ್ನು ಪಡೆಯಲಿ.

೭. ಪುಲಸ್ತ್ಯನು ಹೇಳುತ್ತಾನೆ:—ಆ ಶಂಕರನು ಹೀಗೆಯೇ ಆಗಲೆಂದು ಹೇಳಿ ಅಲ್ಲಿಯೇ ಅಡಗಿ ಹೋದನು. ಬಳಿಕ ಮಾನವರೆಲ್ಲರೂ ಸಿದ್ಧೇಶ್ವರನೆಡೆಗೆ ಹೋಗಿ ಸಿದ್ಧಿಯನ್ನು ಹೊಂದಿದರು.

೮. ಆ ಲಿಂಗದ ಪ್ರಭಾವದಿಂದ ಇಷ್ಟಾರ್ಥಗಳನ್ನು ಪಡೆದರು. ಅನಂತರ ಭೂಮಿಯಲ್ಲಿ ಸಕಲ ಧರ್ಮಕ್ರಿಯೆಗಳೂ ನಷ್ಟವಾದುವು.

೯. ಭೂಮಿಯಲ್ಲಿ ಯಾವನೂ ಯಾಗಮಾಡುತ್ತಿರಲಿಲ್ಲ. ದಾನಗಳನ್ನು ಕೊಡುತ್ತಿರಲಿಲ್ಲ. ಮನುಷ್ಯರೆಲ್ಲರೂ ಸಿದ್ಧೇಶ್ವರನ ಪ್ರಸಾದದಿಂದ ಸಿದ್ಧಿಯನ್ನು ಪಡೆಯುತ್ತಿದ್ದರು.

೧೦. ಮಹಾರಾಜ! ಯಜ್ಞದಾನಗಳು ನಷ್ಟವಾಗಲು ಇಂದ್ರಾದಿದೇವತೆಗಳೆಲ್ಲ ಅತ್ಯಂತದುಃಖಗೊಂಡರು.

ಜ್ಞಾತ್ವಾ ಯಜ್ಞವಿಘಾತಂ ಚ ತದ್ವಿಘಾತಾಯ ವಾಸವಃ ।
ವಜ್ರೇಣಾಚ್ಛಾದಯಾಮಾಸ ಯಥಾ ಸಿದ್ಧಿರ್ನ ಜಾಯತೇ ॥ ೧೧ ॥
ತಥಾಪಿ ಸಂನಿಧೌ ತಸ್ಯ ಸಿದ್ಧೇಶಸ್ಯ ನೃಪೋತ್ತಮ ।
ಕರ್ಮಣೋ ಜಾಯತೇ ಸಿದ್ಧಿಃ ಪಾತಕಸ್ಯ ಪರಿಕ್ಷಯಃ ॥ ೧೨ ॥
ಯಸ್ತು ಮಾಘಚತುರ್ದಶ್ಯಾಂ ಸೋಮವಾರೇ ನೃಪೋತ್ತಮ ।
ಶುಕ್ಲಾಯಾಂ ವಾಥ ಕೃಷ್ಣಾಯಾಂ ಸ್ಪೃಷ್ಟ್ವಾ ಸಿದ್ಧೋ ಭವೇನ್ನರಃ ॥೧೩॥
ಅದ್ಯಾಪಿ ಜಾಯತೇ ಸಿದ್ಧಿಃ ಸತ್ಯಮೇತನ್ಮಯೋದಿತಂ ।
ತಸ್ಮಾತ್ಸಿದ್ಧೇಶ್ವರಂ ಗತ್ವಾ ನತ್ವಾ ಯಾಸ್ಯತಿ ಸದ್ಗತಿಂ ॥ ೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಸಿದ್ಧೇಶ್ವರಮಾಹಾತ್ಮ್ಯವರ್ಣನಂ ನಾಮ
ಚತುರ್ದಶೋಽಧ್ಯಾಯಃ

---

೧೧. ಇಂದ್ರನು ಯಜ್ಞವು ನಿಂತು ಹೋಗಲು ಕಾರಣವನ್ನರಿತು ಅದನ್ನು ಪರಿಹರಿಸಲು ವಜ್ರಾಯುಧದಿಂದ ಜನರಿಗೆ ಸಿದ್ಧಿಯಾಗದಂತೆ ಲಿಂಗವನ್ನು ಮುಚ್ಚಿದನು.

೧೨. ಹಾಗಾದರೂ ಆ ಸಿದ್ಧೇಶ್ವರನ ಸಮೀಪದಲ್ಲಿ ಕರ್ಮಸಿದ್ಧಿಯೂ, ಪಾಪ ನಾಶವೂ ಆಗುತ್ತಿದ್ದವು.

೧೩. ಮಾಘಮಾಸದ ಶುಕ್ಲ ಅಥವಾ ಕೃಷ್ಣ ಪಕ್ಷದ ಚತುರ್ದಶೀ, ಸೋಮವಾರ ದಿನ ಆ ಲಿಂಗವನ್ನು ಮುಟ್ಟಿದವನು ಸಿದ್ಧನಾಗುವನು.

೧೪. ಈಗಲೂ ಸಿದ್ಧಿಯುಂಟಾಗುವುದು. ನಾನು ಹೇಳಿರುವುದು ಸತ್ಯವಾದುದು. ಆದ್ದರಿಂದ ಸಿದ್ಧೇಶ್ವರನೆಡೆಗೆ ಹೋಗಿ ಅವನನ್ನು ವಂದಿಸಿದರೆ ಸದ್ಗತಿಯು ಲಭಿಸುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಸಿದ್ಧೇಶ್ವರಮಾಹಾತ್ಮ್ಯವರ್ಣನವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚದಶೋಽಧ್ಯಾಯಃ

### ಶುಕ್ರೇಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತಃ ಶುಕ್ರೇಶ್ವರಂ ಗಚ್ಛೇಚ್ಛುಕ್ರೇಣ ಸ್ಥಾಪಿತಂ ಪುರಾ ।
ಯಂ ದೃಷ್ಟ್ವಾ ಮಾನವಃ ಸದ್ಯಃ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥
ದೃಷ್ಟ್ವಾ ದೈತ್ಯಾನ್ಪುರಾ ದೇವೈರ್ನಿರ್ಜಿತಾನ್ನೃಪಸತ್ತಮ ।
ಚಿಂತಯಾಮಾಸ ಮೇಧಾವೀ ಭಾರ್ಗವಸ್ತಾನ್ಪ್ರತಿ ದ್ವಿಜಃ ॥ ೨ ॥
ಕಥಂ ದೈತ್ಯಾಃ ಸುರಾಞ್ಜಿತ್ವಾ ಪ್ರಾಪ್ಸ್ಯಂತಿ ಚ ಮಹಾಯಶಃ ।
ಆರಾಧ್ಯ ಶಂಕರಂ ಸಿದ್ಧಿಂ ಗಚ್ಛಾಮಿ ಮನಸೇಪ್ಸಿತಾಂ ॥ ೩ ॥
ಏವಂ ಸ ನಿಶ್ಚಯಂ ಕೃತ್ವಾ ಗತೋಽರ್ಬುದಮಥಾಚಲಂ ।
ಭೂಮೇರ್ವಿವರಮಾಸಾದ್ಯ ತಪಸ್ತೇಪೇ ಸುದಾರುಣಂ ॥ ೪ ॥

---

### ಕನ್ನಡದ ಅನುವಾದ

### ಶುಕ್ರೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ಹಿಂದೆ ಶುಕ್ರನು ಪ್ರತಿಷ್ಠೆ ಮಾಡಿರುವ ಶುಕ್ರೇಶ್ವರನೆಡೆಗೆ ಹೋಗಬೇಕು. ಅವನನ್ನು ನೋಡಿದ ಮನುಷ್ಯನು ಕೂಡಲೆ ಸಕಲ ಪಾಪಗಳಿಂದ ಮುಕ್ತನಾಗುವನು.

೨-೩. ಹಿಂದೆ ಬುದ್ಧಿಶಾಲಿಯಾದ ಶುಕ್ರಾಚಾರ್ಯನು ದೇವತೆಗಳು ದೈತ್ಯರನ್ನು ಸೋಲಿಸಿದ್ದನ್ನು ನೋಡಿ ದೈತ್ಯರು ಹೇಗೆ ದೇವತೆಗಳನ್ನು ಸೋಲಿಸಿ ಕೀರ್ತಿಯನ್ನು ಗಳಿಸುವರು ? ನಾನು ಶಂಕರನನ್ನು ಆರಾಧಿಸಿ ಇಷ್ಟಸಿದ್ಧಿಯನ್ನು ಪಡೆಯುವೆನು. ಎಂದಾಲೋಚಿಸಿದನು.

೪. ಶುಕ್ರಾಚಾರ್ಯನು ಹೀಗೆ ಆಲೋಚಿಸಿ ಅರ್ಬುದಾಚಲಕ್ಕೆ ಹೋಗಿ ಭೂಮಿಯ ವಿವರವನ್ನು ಹೊಂದಿ ಭಯಂಕರ ತಪಸ್ಸನ್ನು ಮಾಡಿದನು.

ಶಿವಲಿಂಗಂ ಪ್ರತಿಷ್ಠಾಪ್ಯ ಧೂಪಗಂಧಾನುಲೇಪನೈಃ ।
ಅನಿಶಂ ಪೂಜಯಾಮಾಸ ಶ್ರದ್ಧಯಾ ಪರಯಾನ್ವಿತಃ ॥ ೫ ॥
ತತೋ ವರ್ಷಸಹಸ್ರಾಂತೇ ತುತೋಷ ಭಗವಾಞ್ಛಿವಃ ।
ತಸ್ಯ ಸಂದರ್ಶನಂ ದತ್ವಾ ವಾಕ್ಯಮೇತದುವಾಚ ಹ ॥ ೬ ॥
ಶ್ರೀ ಮಹಾದೇವ ಉವಾಚ :—
ಪರಿತುಷ್ಟೋಽಸ್ಮಿ ತೇ ವಿಪ್ರ ಭಕ್ತ್ಯಾ ತವ ದ್ವಿಜೋತ್ತಮ ।
ವರಂ ವರಯ ಭದ್ರಂ ತೇ ಯದ್ಯಪಿ ಸ್ಯಾತ್ಸುದುರ್ಲಭಂ ॥ ೭ ॥
ಶುಕ್ರಉವಾಚ :—
ಯದಿ ತುಷ್ಟೋ ಮಹಾದೇವ ವಿದ್ಯಾಂ ದೇಹಿ ಮಹೇಶ್ವರ ।
ಯಯಾ ಜೀವಂತಿ ಸಂಪ್ರಾಪ್ತಾ ಮೃತ್ಯುಂ ಸಂಖ್ಯೇಽಪಿ ಜಂತವಃ ॥ ೮ ॥
ಪುಲಸ್ತ್ಯ ಉವಾಚ :—
ಪ್ರದಾಯ ವೈ ಶಿವಸ್ತಸ್ಮೈ ತಾಂ ವಿದ್ಯಾಂ ನೃಪಸತ್ತಮ ।
ಅಬ್ರವೀಚ್ಚ ಪುನಃ ಶುಕ್ರಂ ವರಮನ್ಯಂ ವೃಣೀಷ್ವ ಮೇ ॥ ೯ ॥
ಶುಕ್ರಉವಾಚ :—
ಏತತ್ಕಾರ್ತಿಕಮಾಸಸ್ಯ ಶುಕ್ಲಾಷ್ಟಮ್ಯಾಂ ತು ಯಃ ಸ್ಪೃಶೇತ್ ।
ತತೋ ಲಿಂಗಂ ಪೂಜಯೇಚ್ಚ ಯಃ ಪುಮಾಞ್ಛ್ರದ್ಧಯಾನ್ವಿತಃ ॥ ೧೦ ॥

---

೫. ಅವನು ಅಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಆ ಲಿಂಗವನ್ನು ಧೂಪ, ಗಂಧಗಳಿಂದ ಅತಿಶಯ ಭಕ್ತಿಯಿಂದ ಯಾವಾಗಲೂ ಪೂಜಿಸಿದನು.

೬. ಅನಂತರ ನೂರುವರ್ಷಗಳ ತರುವಾಯ ಪೂಜ್ಯನಾದ ಶಿವನು ಸಂತುಷ್ಟನಾಗಿ ಅವನಿಗೆ ವರವನ್ನಿತ್ತು ಇಂತೆಂದನು.

೭. ಶ್ರೀ ಮಹಾದೇವನು ಹೇಳುತ್ತಾನೆ :—ಬ್ರಾಹ್ಮಣ! ನಿನ್ನ ಭಕ್ತಿಯಿಂದ ನಾನು ಸಂತುಷ್ಟನಾಗಿರುವೆನು. ವರವನ್ನು ಕೇಳಿಕೋ ನಿನಗೆ ಮಂಗಳವಾಗಲಿ, ಅದು ದುರ್ಲಭವಾದರೂ ಕೊಡುವೆನು.

೮. ಶುಕ್ರನು ಹೇಳುತ್ತಾನೆ :—ಮಹೇಶ್ವರ! ನೀನು ಸಂತುಷ್ಟನಾಗಿದ್ದರೆ ನನಗೆ ಯುದ್ಧದಲ್ಲಿ ಮೃತರಾದವರನ್ನು ಮರಳಿ ಬದುಕಿಸುವ ವಿದ್ಯೆಯನ್ನು ಕೊಡು.

೯. ಪುಲಸ್ತ್ಯನು ಹೇಳುತ್ತಾನೆ :—ಮಹಾರಾಜ! ಶಿವನು ಆ ಶುಕ್ರನಿಗೆ ಆ ವಿದ್ಯೆಯನ್ನಿತ್ತು ಮರಳಿ ಬೇರೆ ವರವನ್ನು ಕೇಳಿಕೊ ಎಂದನು.

೧೦—೧೧. ಶುಕ್ರನು ಹೇಳುತ್ತಾನೆ :—ಕಾರ್ತಿಕಮಾಸದ ಶುಕ್ಲಾಷ್ಟಮಿಾ ದಿನ ಈ ಲಿಂಗವನ್ನು ಮುಟ್ಟಿ ಶ್ರದ್ಧೆಯಿಂದ ಪೂಜಿಸಿದವನು ಆ ಮಹೇಶ್ವರನ ಅನುಗ್ರಹದಿಂದ

ಅಲ್ಪಮೃತ್ಯುಭಯಂ ತಸ್ಯ ಮಾ ಭೂತ್ತವ ಪ್ರಸಾದತಃ ।
ಇಷ್ಟಾನ್ಕಾಮಾನವಾಪ್ನೋತು ಇಹ ಲೋಕೇ ಪರತ್ರ ಚ ॥ ೧೧ ॥

ಪುಲಸ್ತ್ಯ ಉವಾಚ :—

ಏವಮಸ್ತ್ವಿತಿ ಸ ಪ್ರೋಚ್ಯ ತತ್ರೈವಾಂತರಧೀಯತ ।
ಶುಕ್ರೋಽಪಿ ದಾನವಾನ್ಸಂಖ್ಯೇ ಹತಾನ್ದೇವೈರನೇಕಶಃ ॥ ೧೨ ॥
ವಿದ್ಯಾಯಾಶ್ಚ ಪ್ರಭಾವೇನ ಜೀವಯಾಮಾಸ ತಾನ್ಮುನಿಃ ।
ತಸ್ಯಾಗ್ರೇಽಸ್ಮಿನ್ಮಹಾಕುಂಡಂ ನಿರ್ಮಲಂ ಪಾಪನಾಶನಂ ॥ ೧೩ ॥
ತತ್ರ ಸ್ನಾತೋ ನರಃ ಸಮ್ಯಕ್ಪಾತಕೈಶ್ಚ ಪ್ರಮುಚ್ಯತೇ ।
ತತ್ರ ಶ್ರಾದ್ಧೇನ ರಾಜೇಂದ್ರ ತುಷ್ಟಾ ಯಾಂತಿ ಪಿತಾಮಹಾಃ ॥ ೧೪ ॥
ತರ್ಪಿತಾಃ ಸಲಿಲೇನೈವ ಕಿಂ ಪುನಃ ಪಿಂಡದಾನತಃ ।
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ॥ ೧೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಶುಕ್ರೇಶ್ವರಮಾಹಾತ್ಮ್ಯವರ್ಣನಂ ನಾಮ
ಪಂಚದಶೋಽಧ್ಯಾಯಃ

---

ಸ್ವಲ್ಪವೂ ಮೃತ್ಯುವಿನಿಂದ ಹೆದರದೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಕಾಮಿತಾರ್ಥವನ್ನು ಪಡೆಯಲಿ.

೧೨–೧೩. ಪುಲಸ್ತ್ಯನು ಹೇಳುತ್ತಾನೆ :—ಅವನು ಹಾಗೆಯೇ ಆಗಲೆಂದು ಅಲ್ಲಿಯೆ ಅದೃಶ್ಯನಾದನು. ಶುಕ್ರಾಚಾರ್ಯನೂ ಯುದ್ಧದಲ್ಲಿ ದೇವತೆಗಳ ಕೊಂದ ದಾನವರನ್ನು ತನ್ನ ವಿದ್ಯೆಯ ಪ್ರಭಾವದಿಂದ ಬದುಕಿಸಿದನು. ಆ ಶುಕ್ರೇಶ್ವರನ ಮುಂದೆ ನಿರ್ಮಲವಾದ ಪಾಪವನ್ನು ಪರಿಹರಿಸುವ ಮಹಾ ಕುಂಡವೊಂದಿರುವುದು.

೧೪. ಅಲ್ಲಿ ಮಿಂದ ಮನುಷ್ಯನು ಪಾಪದಿಂದ ಮುಕ್ತನಾಗುವನು. ಅಲ್ಲಿ ಶ್ರಾದ್ಧ ಮಾಡುವುದರಿಂದ ಪಿತಾಮಹರು ಸಂತುಷ್ಟರಾಗುವರು. ಪಿಂಡ ಪ್ರದಾನದಿಂದ ತೃಪ್ತರಾಗುವರೆಂದು ಹೇಳಬೇಕಾಗಿಲ್ಲ. ಆದ್ದರಿಂದ ಅಲ್ಲಿ ಸ್ನಾನಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಶುಕ್ರೇಶ್ವರಮಾಹಾತ್ಮ್ಯವರ್ಣನವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷೋಡಶೋಽಧ್ಯಾಯಃ

### ಮಣಿಕರ್ಣಿಕೇಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ತೀರ್ಥಂ ಪಾಪಪ್ರಣಾಶನಂ ।
ಮಣಿಕರ್ಣಿಕಸಂಜ್ಞಂ ತು ಸರ್ವಲೋಕೇಷು ವಿಶ್ರುತಂ ॥ ೧ ॥
ಯತ್ರ ಸಿದ್ಧಿಂ ಗತಾ ರಾಜನ್ವಾಲಖಿಲ್ಯಾ ಮಹರ್ಷಯಃ ।
ತೈಸ್ತತ್ರ ನಿರ್ಮಿತಂ ಕುಂಡಂ ಸುರಮ್ಯಂ ಗಿರಿಗಹ್ವರೇ ॥ ೨ ॥
ತೇಷಾಂ ತತ್ರೋಪವಿಷ್ಟಾನಾಂ ಮುನೀನಾಂ ಭಾವಿತಾತ್ಮನಾಂ ।
ಮಹಾಶ್ಚರ್ಯಮಭೂತ್ತತ್ರ ತತ್ತ್ವಂ ಶೃಣು ನರಾಧಿಪ ॥ ೩ ॥
ಕಿರಾತವನಿತಾ ಕಾಚಿನ್ನಾಮ್ನಾ ಚ ಮಣಿಕರ್ಣಿಕಾ ।
ಅತಿಕೃಷ್ಣಾ ವಿರೂಪಾಕ್ಷೀ ಕರಾಲಾ ಭೀಷಣಾಕೃತಿಃ ॥ ೪ ॥
ತೃಷಾರ್ತಾ ತತ್ರ ಸಂಪ್ರಾಪ್ತಾ ಮಧ್ಯಂದಿನಗತೇ ರವೌ ।
ಗ್ರಸ್ತೇ ರಾಹುಣಾ ಸೂರ್ಯೇ ಪ್ರವಿಷ್ಟಾ ಸಲಿಲೇ ತು ಸಾ ॥ ೫ ॥

---

ಕನ್ನಡದ ಅನುವಾದ

ಮಣಿಕರ್ಣಿಕೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಮಹಾರಾಜ ! ತರುವಾಯ ಪಾಪವನ್ನು ಪರಿಹರಿಸುವುದೂ, ಮೂರುಲೋಕಗಳಲ್ಲಿ ಪ್ರಸಿದ್ಧವಾದುದೂ ಆದ ಮಣಿಕರ್ಣಿಕೆಯೆಂಬ ತೀರ್ಥಕ್ಕೆ ಹೋಗಬೇಕು.

೨. ಅಲ್ಲಿ ಸಿದ್ಧಿಯನ್ನು ಪಡೆದ ವಾಲಖಿಲ್ಯರೆಂಬ ಮಹರ್ಷಿಗಳು ಮನೋಹರವಾದ ಕುಂಡವನ್ನು ಪರ್ವತದ ಗುಹೆಯಲ್ಲಿ ನಿರ್ಮಿಸಿರುವರು.

೩. ಅಲ್ಲಿ ಮುನಿಗಳು ಧ್ಯಾನಾಸಕ್ತರಾಗಿ ಕುಳಿತಿರಲು ಅತ್ಯಂತ ಆಶ್ಚರ್ಯವುಂಟಾಯಿತು, ಅದನ್ನು ಕೇಳು.

೪–೫. ಅತ್ಯಂತ ಕೃಷ್ಣಳೂ, ವಿಕಾರವಾದ ಕಣ್ಣುಗಳುಳ್ಳವಳೂ, ಭಯಂಕರಳೂ, ಬಾಯಾರಿಕೆಗೊಂಡವಳೂ ಆದ ಮಣಿಕರ್ಣಿಕೆಯೆಂಬ ಒಬ್ಬ ಬೇಡರಸ್ತ್ರೀಯು ಮಧ್ಯಾಹ್ನ ಸಮಯದಲ್ಲಿ ಸೂರ್ಯನು ರಾಹುಗ್ರಸ್ತನಾಗಿರಲು ಆ ಕುಂಡದ ನೀರನ್ನು ಪ್ರವೇಶಿಸಿದಳು.

ಏತಸ್ಮಿನ್ನೇವ ಕಾಲೇ ತು ದಿವ್ಯರೂಪವಪುರ್ಧರಾ ।
ಮುನೀನಾಂ ಪಶ್ಯತಾಂ ಚೈವ ವಿನಿಷ್ಕ್ರಾಂತಾ ಸುಮಧ್ಯಮಾ ॥ ೬ ॥
ಅಥಾ ತಸ್ಯಾಃ ಪತಿಃ ಪ್ರಾಪ್ತಸ್ತದನ್ವೇಷಣತತ್ಪರಃ ।
ಪಪ್ರಚ್ಛ ತಾಂ ವರಾರೋಹಾಂ ಪತ್ನ್ಯಾ ದುಃಖೇನ ದುಃಖಿತಃ ॥ ೭ ॥
ಮಮ ಭಾರ್ಯಾತ್ರ ಸಂಪ್ರಾಪ್ತಾ ಯದಿ ದೃಷ್ಟಾ ಸುಮಧ್ಯಮೇ ।
ಶೀಘ್ರಂ ವದ ವರಾರೋಹೇ ಬಾಲಕೋಽಯಂ ತದುದ್ಭವಂ ॥ ೮ ॥
ತೃಷಾರ್ತಶ್ಚ ಕ್ಷುಧಾವಿಷ್ಟೋ ರುದತೇ ಚ ಮುಹುರ್ಮುಹುಃ ।
ದೃಷ್ಟ್ವಾ ಚೇತ್ಕಥ್ಯತಾಂ ಸುಭ್ರೂರ್ವಿನಾಽಯಂ ತಾಂ ಮರಿಷ್ಯತಿ ॥ ೯ ॥

ಸ್ತ್ರ್ಯುವಾಚ :—

ಸಾಽಹಂ ತೇ ದಯಿತಾ ಕಾಂತ ತೀರ್ಥಸ್ಯಾಸ್ಯ ಪ್ರಭಾವತಃ ।
ದಿವ್ಯರೂಪಮಿದಂ ಪ್ರಾಪ್ತಾ ದೇವೈರಪಿ ಸುದುರ್ಲಭಂ ॥ ೧೦ ॥
ತ್ವಂ ಚಾಪಿ ಸಲಿಲೇ ಹ್ಯಸ್ಮಿನ್ಕುರು ಸ್ನಾನಂ ತ್ವರಾನ್ವಿತಃ ।
ಪ್ರಾಪ್ತ್ಯಸಿ ತ್ವಂ ವರಂ ರೂಪಂ ಯಥಾ ಪ್ರಾಪ್ತಂ ಮಯಾಽನಘ ॥ ೧೧ ॥
ಅಥಾಽಸೌ ಸಹ ಪುತ್ರೇಣ ಪ್ರವಿಷ್ಟಸ್ತತ್ರ ನಿರ್ಝರೇ ।
ವಿಮುಕ್ತೇ ಭಾಸ್ಕರೇ ರಾಜನ್ನಿರೂಪಶ್ಚಾಭವತ್ಪುನಃ ॥ ೧೨ ॥

---

೬. ಈ ಸಮಯದಲ್ಲಿ ಮುನಿಗಳು ನೋಡುತ್ತಿರುವಾಗಲೆ ಆ ಹೆಂಗಸು ದಿವ್ಯ ರೂಪವನ್ನು ಧರಿಸಿ ಅಲ್ಲಿಂದ ಹೊರಟಳು.

೭. ತರುವಾಯ ಅವಳ ಗಂಡನು ಪತ್ನೀವಿಯೋಗದಿಂದ ದುಃಖಗೊಂಡು ಅವ ಳನ್ನು ಹುಡುಕುತ್ತ ಆ ತನ್ನ ಪತ್ನಿಯನ್ನೆ ಹೀಗೆ ಪ್ರಶ್ನೆಮಾಡಿದನು.

೮-೯. ಸುಂದರಿಯೆ ! ನನ್ನ ಪತ್ನಿಯು ಇಲ್ಲಿಗೆ ಬಂದಿರುವಳು. ಅವಳನ್ನು ನೀನು ನೋಡಿದ್ದರೆ ಶೀಘ್ರವಾಗಿ ಹೇಳು. ಹಸಿವು ಬಾಯಾರಿಕೆಗಳಿಂದ ವ್ಯಥೆಗೊಂಡ ಅವಳ ತನಯನಾದ ಈ ಬಾಲಕನು ಬಾರಿಬಾರಿಗೂ ಅಳುತ್ತಿರುವನು. ಅವಳನ್ನು ನೀನು ನೋಡಿದ್ದರೆ ಹೇಳು. ಅವಳಿಲ್ಲದಿದ್ದರೆ ಈ ಬಾಲಕನು ಸಾಯುವನು.

೧೦. ಹೆಂಗಸು ಹೇಳುತ್ತಾಳೆ :— ಪತಿಯೆ ! ನಾನು ನಿನ್ನ ಪತ್ನಿಯು. ನಾನು ಈ ತೀರ್ಥದ ಮಾಹಾತ್ಮ್ಯದಿಂದ ದೇವತೆಗಳಿಗೂ ದುರ್ಲಭವಾದ ಈ ದಿವ್ಯರೂಪ ವನ್ನು ಪಡೆದಿರುವೆನು.

೧೧. ನೀನೂ ಶೀಘ್ರವಾಗಿ ಈ ನೀರಿನಲ್ಲಿ ಸ್ನಾನಮಾಡು. ನನ್ನಂತೆಯೇ ನೀನೂ ದಿವ್ಯರೂಪವನ್ನು ಹೊಂದುವೆ.

೧೨. ಅನಂತರ ಸೂರ್ಯನು ಗ್ರಹಣವಿಲ್ಲದವನಾಗಲು ಇವನು ಮಗನೊಡನೆ ಆ ನಿರಿನದಿಯನ್ನು ಪ್ರವೇಶಿಸಿದನು ಅದರಿಂದ ವಿಕಾರ ರೂಪವನ್ನು ಪಡೆದನು.

ದುಃಖೇನ ಮೃತ್ಯುಮಾಪನ್ನಸ್ತಸ್ಮಿನ್ನೇವ ಜಲಾಶಯೇ ।
ಅಥ ಸಾ ಭೃರ್ತಶೋಕಾಚ್ಚ ಮರಣೇ ಕೃತನಿಶ್ಚಯಾ ॥ ೧೩ ॥
ಚಿತಿಂ ಕೃತ್ವಾ ಸಮಂ ತೇನ ಜ್ವಾಲಯಾಮಾಸ ಪಾವಕಂ ।
ಅಥ ತೇ ಮುನಯೋ ದೃಷ್ಟ್ವಾ ತಥಾಶೀಲಾಂ ಶುಭಾಂಗನಾಂ ॥ ೧೪ ॥
ಕೃಪಯಾ ಪರಯಾವಿಷ್ಟಾಸ್ತಾಮೂಚುರ್ವಿಸ್ಮಯಾನ್ವಿತಾಃ ।
ಸರ್ವೇ ತಸ್ಯಾಶ್ಚ ಸಂದೃಷ್ಟ್ವಾ ಸಾಹಸಂ ಚ ನೃಪೋತ್ತಮ ॥ ೧೫ ॥

ಋಷಯ ಊಚು :—

ದಿವ್ಯರೂಪಂ ತ್ವಯಾ ಪ್ರಾಪ್ತಂ ದೇವೈರಪಿ ಸುದುರ್ಲಭಂ ।
ಕಸ್ಮಾದೇನಂ ಸುಪಾಪ್ಮಾನಮನುಗಚ್ಛಸಿ ಭಾಮಿನಿ ॥ ೧೬ ॥

ಸ್ತ್ರ್ಯುವಾಚ :—

ಪತಿವ್ರತಾಹಂ ವಿಪ್ರೇಂದ್ರಾಃ ಸದಾ ಭರ್ತೃಪರಾಯಣಾ ।
ಕಿಂ ರೂಪೇಣ ಕರಿಷ್ಯಾಮಿ ವಿನಾ ಪತ್ಯಾ ನಿಜೇನ ಚ ॥ ೧೭ ॥
ವಿರೂಪೋ ವಾ ಸುರೂಪೋ ವಾ ದರಿದ್ರೋ ವಾ ಧನಾಧಿಪಃ ।
ಸ್ತ್ರೀಣಾಮೇಕಃ ಪತಿರ್ಭರ್ತಾ ಗತಿರ್ನಾನ್ಯಾ ಜಗತ್ತ್ರಯೇ ॥ ೧೮ ॥

---

೧೩–೧೫. ಅದರಿಂದವನು ದುಃಖಗೊಂಡು ಅದೇ ನೀರಿನಲ್ಲಿ ಮೃತನಾದನು. ತರುವಾಯ ಅವನ ಪತ್ನಿಯು ಗಂಡನ ಮೃತಿಯಿಂದ ದುಃಖಗೊಂಡು ಸಾಯಬೇಕೆಂದು ನಿಶ್ಚಯಿಸಿ ಚಿತೆಯನ್ನು ರಚಿಸಿ ಅವನೊಡನೆ ಅಗ್ನಿಯನ್ನು ಉರಿಸಿದಳು. ಮುನಿಗಳು ಹಾಗೆ ಸಾಹಸ ಮಾಡುತ್ತಿರುವ ಸುಂದರಿಯಾದ ಅವಳನ್ನು ನೋಡಿ ಆಶ್ಚರ್ಯಗೊಂಡು ಅತಿ ದಯೆಯಿಂದ ಅವಳನ್ನು ಕುರಿತು ಇಂತೆಂದರು.

೧೬. ಋಷಿಗಳು ಹೇಳುತ್ತಾರೆ :—ಅಂಗನೆ ! ನೀನು ದೇವತೆಗಳಿಗೂ ದುರ್ಲಭವಾದ ದಿವ್ಯರೂಪವನ್ನು ಪಡೆದಿರುವೆ. ಈ ಪಾಪಿಷ್ಠನನ್ನು ಏಕೆ ಹಿಂಬಾಲಿಸುವೆ ?

೧೭. ಹೆಂಗಸು ಹೇಳುತ್ತಾರೆ :—ಬ್ರಾಹ್ಮಣರೆ! ನಾನು ಯಾವಾಗಲೂ ಪತಿಯಲ್ಲಿ ನಿರತಳಾದ ಪತಿವ್ರತೆಯು. ನಾನು ಪತಿಯಿಲ್ಲದ ಈ ಸೌಂದರ್ಯದಿಂದ ಏನು ಮಾಡಿಯೇನು ?

೧೮. ಗಂಡನು ಕುರೂಪಿಯಾಗಲಿ ಸುಂದರನಾಗಲಿ, ಬಡವನಾಗಲಿ, ಹಣಗಾರನಾಗಲಿ ಹೆಂಗಸಿಗೆ ಪತಿಯೊಬ್ಬನೆ ಮೂರುಲೋಕದಲ್ಲಿಯೂ ರಕ್ಷಕನು. ಬೇರೆ ಗತಿಯಿಲ್ಲ.

ಬಾಲಕೋऽಯಂ ಮುನಿಶ್ರೇಷ್ಠಾ ಭವಚ್ಛರಣಮಾಗತಃ ।
ಅಹಂ ಕಾಂತೇನ ಸಂಯುಕ್ತಾ ಪ್ರವಿಶಾಮಿ ಹುತಾಶನಂ ॥ ೧೯ ॥

ಪುಲಸ್ತ್ಯ ಉವಾಚ :—

ಅಥ ತೇ ಮುನಯಃ ಸರ್ವೇ ಜ್ಞಾತ್ವಾ ತಸ್ಯಾಃ ಸುನಿಶ್ಚಯಂ ।
ಕೃಪಯಾ ಪರಯಾವಿಷ್ಟಾಃ ಸಂವೀಕ್ಷ್ಯ ಚ ಪರಸ್ಪರಂ ॥ ೨೦ ॥
ತತೋ ಜೀವಾಪಯಾಮಾಸುಸ್ತತ್ಪತಿಂ ತೇ ಮುನೀಶ್ವರಾಃ ।
ಸದ್ರೂಪೇಣ ಸಮಾಯುಕ್ತಂ ದಿವ್ಯಲಕ್ಷಣಲಕ್ಷಿತಂ ॥ ೨೧ ॥
ಏತಸ್ಮಿನ್ನೇವ ಕಾಲೇ ತು ವಿಮಾನಂ ಮನಸೇಪ್ಸಿತಂ ।
ದೇವಕನ್ಯಾಸಮಾಕೀರ್ಣಂ ಸದ್ಯಸ್ತತ್ರ ಸಮಾಗತಂ ॥ ೨೨ ॥
ಅಥ ತೌ ದಂಪತೀ ತೇಷಾಂ ಮುನೀನಾಂ ಭಾವಿತಾತ್ಮನಾಂ ।
ಪುರತಃ ಪ್ರಣಿಪತ್ಯಾಥ ಪ್ರಸ್ಥಿತೌ ತ್ರಿದಿವಂ ಪ್ರತಿ ॥ ೨೩ ॥
ಅಥ ತೈರ್ಮುನಿಭಿಃ ಪ್ರೋಕ್ತಾ ಸಾ ನಾರೀ ಮಣಿಕರ್ಣಿಕಾ ।
ವರಂ ವರಯ ಕಲ್ಯಾಣಿ ಸರ್ವೇ ತುಷ್ಟಾ ವಯಂ ತವ ॥ ೨೪ ॥
ಪತಿವ್ರತತ್ವೇನ ತುಷ್ಟಾಃ ಸತ್ಯೇನ ಚ ವಿಶೇಷತಃ ।
ನಾಸ್ಮಾಕಂ ದರ್ಶನಂ ವ್ಯರ್ಥಂ ಜಾಯತೇ ಚ ಕಥಂಚನ ॥ ೨೫ ॥

---

೧೯. ಮುನಿವರ್ಯರೆ ! ಈ ಬಾಲಕನು ನಿಮ್ಮನ್ನು ಮರೆಹೊಕ್ಕಿರುವನು. ನಾನು ಪತಿಯೊಡನೆ ಬೆಂಕಿಯನ್ನು ಪ್ರವೇಶಿಸುವೆನು.

೨೦-೨೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ಆ ಮುನಿಗಳೆಲ್ಲ ಅವಳ ದೃಢ ನಿಶ್ಚಯವನ್ನು ತಿಳಿದು ಅತಿ ದಯೆಯಿಂದ ಪರಸ್ಪರ ನೋಡಿ ಅವಳ ಪತಿಯನ್ನು ಬದುಕಿಸಿ ಅವನನ್ನು ಸುಂದರ ರೂಪದಿಂದಲೂ, ದಿವ್ಯ ಲಕ್ಷಣಗಳಿಂದಲೂ ಸಹಿತನನ್ನಾಗಿ ಮಾಡಿದರು.

೨೨. ಈ ಸಮಯದಲ್ಲಿ ಅಲ್ಲಿಗೆ ದೇವಕನ್ಯೆಯರು ತುಂಬಿರುವ ಪ್ರಿಯವಾದ ವಿಮಾನವು ಕೂಡಲೆ ಬಂದಿತು.

೨೩. ಅನಂತರ ಆ ದಂಪತಿಗಳು ಜ್ಞಾನಿಗಳಾದ ಆ ಮುನಿಗಳಿಗೆ ವಂದಿಸಿ ದೇವಲೋಕಕ್ಕೆ ಹೊರಟರು.

೨೪-೨೫. ಅನಂತರ ಆ ಮುನಿಗಳು ಆ ಮಣಿಕರ್ಣಿಕೆಯನ್ನು ಕುರಿತು, "ನಿನ್ನ ಪಾತಿವ್ರತ್ಯದಿಂದಲೂ, ಸತ್ಯದಿಂದಲೂ, ನಾವು ಸಂತುಷ್ಟರಾಗಿದ್ದೇವೆ. ನಮ್ಮ ದರ್ಶನವು ಹೇಗೂ ವ್ಯರ್ಥವಾಗುವುದಿಲ್ಲ. ವರವನ್ನು ಕೇಳಿಕೊ" ಎಂದರು.

ಮಣಿಕರ್ಣಿಕೋವಾಚ :—

ಯದಿ ಮಾಂ ಮುನಯಸ್ತುಷ್ಟಾಃ ಪ್ರಯಚ್ಛಥ ವರಂ ಮುದಾ ।
ಯದತ್ರಾಸ್ತಿ ಮಹಾಲಿಂಗಂ ಮನ್ನಾಮ್ನಾ ತತ್ಪ್ರವಿಷ್ಯತಿ ॥ ೨೬ ॥
ಏತದೇವ ಮಮಾಭೀಷ್ಟಂ ನಾನ್ಯದಸ್ತಿ ಪ್ರಯೋಜನಂ ।
ಸರ್ವೇಷಾಂ ಚ ಪ್ರಸಾದೇನ ಸ್ವರ್ಗಂ ಗಚ್ಛಾಮಿ ಸಾಂಪ್ರತಂ ॥ ೨೭ ॥

ಋಷಯ ಊಚುಃ :—

ಏವಂ ಭವತು ತೇ ಖ್ಯಾತಿಸ್ತೀರ್ಥಲಿಂಗೇ ವರಾನನೇ ।
ತವ ನಾಮಾನ್ವಿತಂ ಜಾತಂ ತೀರ್ಥಂ ವೈ ಮಣಿಕರ್ಣಿಕಾ ॥ ೨೮ ॥

ಪುಲಸ್ತ್ಯ ಉವಾಚ :—

ಭರ್ತ್ರಾ ಸಹ ದಿವಂ ಪ್ರಾಪ್ತಾ ಪುತ್ರೇಣೈವ ಸಮನ್ವಿತಾ ।
ವಾಲಖಿಲ್ಯಾಸ್ತಪೋನಿಷ್ಠಾ ವಿಶೇಷಾಸ್ತತ್ರ ಸಂಸ್ಥಿತಾಃ ॥ ೨೯ ॥
ತತ್ರ ಸೂರ್ಯಗ್ರಹೇ ಪ್ರಾಪ್ತೇ ಸ್ನಾನದಾನಾದಿಕಾಃ ಕ್ರಿಯಾಃ ।
ಯಃ ಕರೋತಿ ಫಲಂ ತಸ್ಯ ಕುರುಕ್ಷೇತ್ರಸಮಂ ಭವೇತ್ ॥ ೩೦ ॥
ಯಂಯಂ ಕಾಮಮಭಿಧ್ಯಾಯ ಸ್ನಾನಂ ತತ್ರ ಕರೋತಿ ಯಃ ।
ತಂತಂ ಪ್ರಾಪ್ನೋತಿ ರಾಜೇಂದ್ರ ಸಮ್ಯಗ್ಧ್ಯಾನಸಮನ್ವಿತಃ ॥ ೩೧ ॥

---

೨೬. ಮಣಿಕರ್ಣಿಕೆಯು ಹೇಳುತ್ತಾಳೆ:—ಮುನಿಗಳೆ! ನೀವು ಸಂತುಷ್ಟರಾಗಿ ನನಗೆ ಸಂತೋಷದಿಂದಲೇ ವರವನ್ನೀಯುವುದಾದರೆ ಈ ಮಹಾಲಿಂಗವು ನನ್ನ ಹೆಸರಿನಿಂದ ಪ್ರಸಿದ್ಧವಾಗಲಿ.

೨೭. ಇದೇ ನನ್ನ ಅಭೀಷ್ಟವು. ಬೇರೆ ಏನೂ ಪ್ರಯೋಜನವಾಗಬೇಕಾಗಿಲ್ಲ. ನಿಮ್ಮೆಲ್ಲರ ಅನುಗ್ರಹದಿಂದ ನಾನೀಗ ಸ್ವರ್ಗಕ್ಕೆ ತೆರಳುವೆನು.

೨೮. ಋಷಿಗಳು ಹೇಳುತ್ತಾರೆ :—ಸುಂದರಿಯೆ! ಈ ತೀರ್ಥಲಿಂಗದಲ್ಲಿ ನಿನ್ನ ನಾಮವು ಪ್ರಸಿದ್ಧವಾಗಿರಲಿ. ಈ ಮಣಿಕರ್ಣಿಕಾತೀರ್ಥವು ನಿನ್ನ ಹೆಸರಿನಿಂದ ಸಹಿತವಾಗಲಿ.

೨೯. ಪುಲಸ್ತ್ಯನು ಹೇಳುತ್ತಾನೆ :—ಆ ಮಣಿಕರ್ಣಿಕೆಯು ಪತಿಪುತ್ರರೊಡನೆ ಸ್ವರ್ಗಕ್ಕೆ ಹೋಗಲು ತಪೋನಿಷ್ಠರಾದ ವಾಲಖಿಲ್ಯರು ಅಲ್ಲಿಯೇ ನೆಲೆಸಿದರು.

೩೦. ಅಲ್ಲಿ ಸೂರ್ಯಗ್ರಹಣಕಾಲದಲ್ಲಿ ಸ್ನಾನದಾನಾದಿಗಳನ್ನು ಮಾಡುವವನಿಗೆ ಕುರುಕ್ಷೇತ್ರದ ಸ್ನಾನಕ್ಕೆ ಸಮಾನವಾದ ಫಲವು ಲಭಿಸುವುದು.

೩೧. ದೊರೆಯೆ! ಮನುಷ್ಯನು ಯಾವ ಯಾವ ಇಷ್ಟಾರ್ಥವನ್ನು ಚಿಂತಿಸಿ ಅಲ್ಲಿ ಸ್ನಾನಮಾಡುವನೋ ಅದನ್ನು ಪಡೆಯುವನು.

ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ತೀರ್ಥೇ ದಾನಂ ಯಥಾಶಕ್ತ್ಯಾ ದೇವರ್ಷಿಪಿತೃತರ್ಪಣಂ ॥ ೩೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಮಣಿಕರ್ಣೇಶ್ವರಮಾಹಾತ್ಮ್ಯವರ್ಣನಂ ನಾಮ
ಷೋಡಶೋಽಧ್ಯಾಯಃ

---

೩೨. ಆದ್ದರಿಂದ ಆ ತೀರ್ಥದಲ್ಲಿ ಮಿಂದು ಶಕ್ತ್ಯನುಸಾರ ದಾನ, ದೇವರ್ಷಿ ಪಿತೃತರ್ಪಣಗಳನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಪುರಾಣದ ಏಳನೆಯಪ್ರಭಾಸಖಂಡದ
ಮೂರನೆಯ ಅರ್ಬುದಖಂಡದಲ್ಲಿ ಮಣಿಕರ್ಣೇಶ್ವರಮಾಹಾತ್ಮ್ಯವರ್ಣನ ನೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತದಶೋಽಧ್ಯಾಯಃ

### ಪಂಗುತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ಪಂಗುತೀರ್ಥಂ ತತೋ ಗಚ್ಛೇತ್ಸರ್ವಪಾತಕನಾಶನಂ ।
ಯತ್ರ ಪೂರ್ವಂ ತಪಸ್ತಪ್ತಂ ಪಂಗುನಾ ಬ್ರಾಹ್ಮಣೇನ ಚ ॥ ೧ ॥
ಪಂಗುನಾಮಾ ದ್ವಿಜಃ ಪೂರ್ವಂ ಚ್ಯವನಸ್ಯಾನ್ವಯೇಽಭವತ್ ।
ಅಶಕ್ತಶ್ಚಲಿತುಂ ಭೂಮೌ ಪಂಗುಭಾವಾನ್ನೃಪೋತ್ತಮ ॥ ೨ ॥
ಗೃಹಕೃತ್ಯನಿಯುಕ್ತೋಽಸಾವೇಕದಾ ಬಾಂಧವೈರ್ನೃಪ ।
ಪಂಗುರ್ಗಂತುಂ ನ ಶಕ್ತೋಽಸೌ ಪರಂ ದುಃಖಮವಾಪ್ತವಾನ್ ॥ ೩ ॥
ಅಥಾಽಸೌ ತೈಃ ಪರಿತ್ಯಕ್ತೋ ಗತ್ವಾರ್ಬುದಮಥಾಚಲಂ ।
ಏಕಂ ಸರಃ ಸಮಾಸಾದ್ಯ ತಪಸ್ತೇಪೇ ಸುದಾರುಣಂ ॥ ೪ ॥

---

### ಕನ್ನಡದ ಅನುವಾದ

### ಪಂಗುತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ಸಕಲ ಪಾಪವನ್ನು ಪರಿಹರಿಸುವ ಪಂಗುತೀರ್ಥವೆಡೆಗೆ ಹೋಗಬೇಕು. ಅಲ್ಲಿ ಹಿಂದೆ ಕುಂಟನಾದ ಪಂಗುವೆಂಬ ಬ್ರಾಹ್ಮಣನು ತಪಸ್ಸನ್ನಾಚರಿಸಿರುವನು.

೨. ಹಿಂದೆ ಚ್ಯವನಮುನಿಯ ವಂಶದಲ್ಲಿ ಹುಟ್ಟಿದ ಪಂಗುವೆಂಬ ಬ್ರಾಹ್ಮಣನು ಕುಂಟನಾದ್ದರಿಂದ ಭೂಮಿಯಲ್ಲಿ ಚಲಿಸಲಶಕ್ತನಾಗಿದ್ದನು.

೩. ದೊರೆಯೆ! ಒಂದಾನೊಂದು ದಿನ ಬಾಂಧವರು ಪಂಗುವನ್ನು ಗೃಹಕಾರ್ಯದಲ್ಲಿ ನಿಯಮಿಸಲು ನಡೆಯಲಾಗದ ಅವನು ಅತ್ಯಂತದುಃಖಗೊಂಡನು.

೪. ಬಳಿಕ ಬಾಂಧವರಿಂದ ಬಿಡಲ್ಪಟ್ಟ ಅವನು ಅರ್ಬುದಾಚಲಕ್ಕೆ ಹೋಗಿ ಅಲ್ಲಿ ಒಂದು ಸರೋವರವನ್ನು ಹೊಂದಿ ಭಯಂಕರವಾದ ತಪಸ್ಸನ್ನಾಚರಿಸಿದನು.

ಲಿಂಗಂ ಸಂಸ್ಥಾಪ್ಯ ತತ್ರೈವ ಪೂಜಯಾಮಾಸ ತಂ ವಿಭುಂ ।
ಗಂಧಪುಷ್ಪಾದಿನೈವೇದ್ಯೈಃ ಸಮ್ಯಕ್ಛ್ರದ್ಧಾಸಮನ್ವಿತಃ ॥ ೫ ॥
ಶಿವಭಕ್ತಿಪರೋ ಜಾತೋ ವಾಯುಭಕ್ಷೋ ಬಭೂವ ಹ ।
ಜಪಹೋಮರತೋ ನಿತ್ಯಂ ಪಂಗುನಾಮಾ ದ್ವಿಜೋತ್ತಮಃ ॥ ೬ ॥
ತತಸ್ತುಷ್ಟೋ ಮಹಾದೇವೋ ಬ್ರಾಹ್ಮಣಂ ನೃಪಸತ್ತಮ ।
ಪಂಗುಂ ಪ್ರತಿ ಮಹಾರಾಜ ವಾಕ್ಯಮೇತದುವಾಚ ಹ ॥ ೭ ॥

ಈಶ್ವರ ಉವಾಚ :—

ಪಂಗೋ ತುಷ್ಟೋ ಮಹಾದೇವೋ ವರಂ ವರಯ ಸುವ್ರತ ।
ತವ ದಾಸ್ಯಾಮ್ಯಹಂ ಸರ್ವಂ ಯದ್ಯಪಿ ಸ್ಯಾತ್ಸುದುರ್ಲಭಂ ॥ ೮ ॥

ಪಂಗುರುವಾಚ :—

ನಾಮ್ನಾ ಮೇ ಖ್ಯಾತಿಮಾಯಾತು ತೀರ್ಥಮೇತತ್ಸುರೇಶ್ವರ ।
ಪಂಗುಭಾವೋಽತ್ರ ಮೇ ಯಾತು ಪ್ರಸಾದಾತ್ತವ ಶಂಕರ ॥ ೯ ॥
ತವಾಸ್ತು ಸತತಂ ಚಾತ್ರ ಸಾನ್ನಿಧ್ಯಂ ಸಹ ಭಾರ್ಯಯಾ ।
ಏವಮುಕ್ತಃ ಸ ತೇನಾಥ ವಿಪ್ರಂ ಪ್ರತಿ ವಚೋಽಬ್ರವೀತ್ ॥ ೧೦ ॥

---

೫. ಅವನು ಅಲ್ಲಿಯೇ ಒಂದು ಶಿವಲಿಂಗವನ್ನು ಪ್ರತಿಷ್ಠಿಸಿ ಅದನ್ನು ಗಂಧ ಪುಷ್ಪಾದಿಗಳಿಂದ ಅತ್ಯಂತ ಶ್ರದ್ಧೆಯಿಂದ ಪೂಜಿಸಿದನು.

೬. ಆ ಪಂಗುಬ್ರಾಹ್ಮಣನು ಶಿವಭಕ್ತಿನಿರತನೂ, ವಾಯುಭಕ್ಷನೂ, ಜಪ ಹೋಮಗಳಲ್ಲಿ ಆಸಕ್ತನೂ ಆದನು.

೭. ಬಳಿಕ ಸಂತುಷ್ಟನಾದ ಮಹಾದೇವನು ಪಂಗುಬ್ರಾಹ್ಮಣನನ್ನು ಕುರಿತು ಹೀಗೆಂದನು.

೮. ಈಶ್ವರನು ಹೇಳುತ್ತಾನೆ :—ಪಂಗುವೆ! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ವರವನ್ನು ಕೇಳಿಕೊ. ಆ ವರವು ದುರ್ಲಭವಾಗಿದ್ದರೂ ಕೊಡುವೆನು.

೯. ಪಂಗುವು ಹೇಳುತ್ತಾನೆ :—ಶಂಕರ! ನಿನ್ನ ಅನುಗ್ರಹದಿಂದ ಈ ತೀರ್ಥವು ನನ್ನ ಹೆಸರಿನಿಂದ ಪ್ರಸಿದ್ಧವಾಗಲಿ. ನನ್ನ ಕುಂಟುತನವು ಹೋಗಲಿ.

೧೦. ನೀನು ಪತ್ನಿಯೊಡನೆ ಯಾವಾಗಲೂ ಇಲ್ಲಿಯೇ ವಾಸವಾಗಿರು. ಪಂಗುವು ಹೀಗೆನ್ನಲು ಅವನನ್ನು ಕುರಿತು ಶಂಕರನು ಇಂತೆಂದನು.

ಈಶ್ವರ ಉವಾಚ :—

ನಾಮ್ನಾ ತವ ದ್ವಿಜಶ್ರೇಷ್ಠ ತೀರ್ಥಮೇತದ್ಭವಿಷ್ಯತಿ ।
ಖ್ಯಾತಿಂ ತಪಃಪ್ರಭಾವೇನ ತೀರ್ಥಂ ಯಾಸ್ಯತಿ ಸತ್ತಮ ॥ ೧೧ ॥
ಚೈತ್ರಶುಕ್ಲಚತುರ್ದಶ್ಯಾಂ ಸಾಂನಿಧ್ಯಂ ಮೇ ಭವೇತ್ತಥಾ ॥ ೧೨ ॥

ಪುಲಸ್ತ್ಯ ಉವಾಚ :—

ಸ್ನಾನಮಾತ್ರೇಣ ವಿಪ್ರೋಽಸೌ ದಿವ್ಯರೂಪಮವಾಪ ಹ ।
ತತ್ರ ತಸ್ಥೌ ಮಹಾದೇವೋ ಗೌರ್ಯಾ ಸಹ ಮಹೇಶ್ವರಃ ॥ ೧೩ ॥
ತಸ್ಮಿನ್ದಿನೇ ನೃಪಶ್ರೇಷ್ಠ ಸ್ನಾನಂ ತತ್ರ ಸಮಾಚರೇತ್ ।
ಸ ಪಂಗುತ್ವಾದ್ವಿನಿರ್ಮುಕ್ತೋ ದಿವ್ಯರೂಪಮವಾಪ್ನುಯಾತ್ ॥ ೧೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಪಂಗುತೀರ್ಥಮಾಹಾತ್ಮ್ಯವರ್ಣನಂನಾಮ
॥ ಸಪ್ತದಶೋಽಧ್ಯಾಯಃ ॥

---

೧೧. ಈಶ್ವರನು ಹೇಳುತ್ತಾನೆ :—ಬ್ರಾಹ್ಮಣೋತ್ತಮನೆ! ಈ ತೀರ್ಥವು ನಿನ್ನ ಹೆಸರನ್ನು ಹೊಂದುವುದು. ನಿನ್ನ ತಪಸ್ಸಿನ ಪ್ರಭಾವದಿಂದ ಈ ತೀರ್ಥವು ಪ್ರಸಿದ್ಧಿಗೊಳ್ಳುವುದು.

೧೨. ಹಾಗೆಯೇ ನಾನು ಚೈತ್ರಶುಕ್ಲ ಚತುರ್ದಶೀದಿನ ಇಲ್ಲಿ ಸನ್ನಿಹಿತನಾಗಿರುವೆನು.

೧೩. ಪುಲಸ್ತ್ಯನು ಹೇಳುತ್ತಾನೆ ;—ಈ ಬ್ರಾಹ್ಮಣನು ಸ್ನಾನಮಾತ್ರದಿಂದಲೇ ದಿವ್ಯರೂಪವನ್ನು ಹೊಂದಿದನು. ಅಲ್ಲಿ ಮಹೇಶ್ವರನು ಗೌರಿಯೊಡನೆ ನೆಲೆಸಿದನು.

೧೪. ಆ ದಿನ ಅಲ್ಲಿ ಮಿಂದವನು ಪಂಗುತ್ವದಿಂದ (ಕುಂಟತನದಿಂದ) ಮುಕ್ತನಾಗಿ ದಿವ್ಯರೂಪವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಶ್ರೀಸ್ಕಾಂದಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಪಂಗುತೀರ್ಥಮಾಹಾತ್ಮ್ಯ ವರ್ಣನನೆಂಬ
ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟಾದಶೋಽಧ್ಯಾಯಃ

## ಯಮತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಯಮತೀರ್ಥಮನುತ್ತಮಂ ।
ಮೋಚಕಂ ನರಕೇಭ್ಯಶ್ಚ ಪ್ರಾಣಿನಾಂ ಪಾಪನಾಶನಂ ॥ ೧ ॥
ಪುರಾ ಚಿತ್ರಾಂಗದೋ ನಾಮ ರಾಜಾ ಪರಮಲೋಭವಾನ್ ।
ನ ತೇನ ಸುಕೃತಂ ಕಿಂಚಿತ್ಕೃತಂ ಪಾರ್ಥಿವಸತ್ತಮ ॥ ೨ ॥
ಅತೀವ ನಿಷ್ಠುರೋ ದುಷ್ಟೋ ದೇವಬ್ರಾಹ್ಮಣಪೀಡಕಃ ।
ಪರದಾರಹರೋ ನಿತ್ಯಂ ಪರವಿತ್ತಹರಸ್ತಥಾ ॥ ೩ ॥
ಸತ್ಯಶೌಚವಿಹೀನಸ್ತು ಮಾಯಾಮತ್ಸರಸಂಯುತಃ ।
ಸ ಕದಾಚಿನ್ಮೃಗಯಾಸಕ್ತ ಆರೂಢೋಽರ್ಬುದಪರ್ವತೇ ॥ ೪ ॥
ಅಟನಾತ್ಸ ಪರಿಶ್ರಾಂತಃ ಕ್ಷುತ್ಪಿಪಾಸಾಸಮಾಕುಲಃ ।
ತೇನ ತತ್ರ ಹ್ರದಃ ಪ್ರಾಪ್ತಃ ಸ್ವಚ್ಛೋದಕಪ್ರಪೂರಿತಃ ॥ ೫ ॥

---

### ಕನ್ನಡದ ಅನುವಾದ

### ಯಮತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೇಂದ್ರ! ಬಳಿಕ ಪ್ರಾಣಿಗಳ ಪಾಪವನ್ನು ನೀಗಿಸಿ ನರಕಗಳಿಂದ ಬಿಡಿಸುವ ಉತ್ತಮವಾದ ಯಮತೀರ್ಥದೆಡೆಗೆ ಹೋಗಬೇಕು.

೨. ಹಿಂದೆ ಚಿತ್ರಾಂಗದನೆಂಬ ಅತ್ಯಂತ ಲೋಭಿಯಾದ ರಾಜನೋರ್ವನಿದ್ದನು. ಅವನು ಸ್ವಲ್ಪವೂ ಪುಣ್ಯವನ್ನಾಚರಿಸಲಿಲ್ಲ.

೩–೪. ಅತ್ಯಂತ ಕಠಿನನೂ, ದುಷ್ಟನೂ, ದೇವಬ್ರಾಹ್ಮಣರನ್ನು ಪೀಡಿಸುವವನೂ, ಪರರ ಪತ್ನಿಯನ್ನೂ ಹಣವನ್ನೂ ಅಪಹರಿಸುವವನೂ, ಸತ್ಯ, ಶೌಚಗಳಿಲ್ಲದವನೂ, ಮಾಯೆ, ಮಾತ್ಸರ್ಯಗಳುಳ್ಳವನೂ ಆದ ಅವನು ಒಂದಾನೊಂದು ದಿನ ಬೇಟೆಯಲ್ಲಿ ನಿರತನಾಗಿ ಅರ್ಬುದ ಪರ್ವತವನ್ನು ಹತ್ತಿದನು

೫–೭. ಅವನು ಸಂಚರಿಸುವುದರಿಂದ ಬಳಲಿದವನೂ, ಹಸಿವು ಬಾಯಾರಿಕೆಗಳಿಂದ ದುಃಖಗೊಂಡವನೂ ಆಗಿ ಶುದ್ಧವಾದ ನೀರಿನಿಂದ ತುಂಬಿರುವುದೂ,

ಪದ್ಮಿನೀಭಿಃ ಸಮಾಕೀರ್ಣೋ ಗ್ರಾಹನಕ್ರಝಷಾಕುಲಃ ।
ನಾನಾಪಕ್ಷಿಸಮಾಯುಕ್ತೋ ಮನೋಹಾರೀ ಸುವಿಸ್ತರಃ ॥ ೬ ॥
ತೃಷಾರ್ತಃ ಸಂಪ್ರವಿಷ್ಟಃ ಸ ತಸ್ಮಿನ್ನೇವ ಜಲಾಶಯೇ ।
ಗ್ರಾಹೇಣ ತತ್ಕ್ಷಣಾದ್ಧೃತ್ವಾ ಭಕ್ಷಿತೋ ನೃಪಸತ್ತಮ ॥ ೭ ॥
ತಸ್ಯಾರ್ಥೇ ನರಕಾ ರೌದ್ರಾ ನಿರ್ಮಿತಾಶ್ಚ ಯಮೇನ ಚ ।
ಯಮದೂತೈಸ್ತತಃ ಕ್ಷಿಪ್ತಃ ಸ ನೀತ್ವಾ ಪಾಪಕೃತ್ತಮಃ ॥ ೮ ॥
ತಸ್ಯ ಸ್ಪರ್ಶೇನ ತೇ ಸರ್ವೇ ನರಕಸ್ಥಾಃ ಸುಖಂ ಗತಾಃ ।
ತೇ ದೂತಾ ಧರ್ಮರಾಜಾಯ ವೃತ್ತಾಂತಂ ನರಕೋದ್ಭವಂ ।
ಆಚಖ್ಯುರ್ವಿಸ್ಮಯಾವಿಷ್ಟಾ ನರಕಸ್ಥಾನಾಂ ಸುಖೋದ್ಭವಂ ॥ ೯ ॥
ತದಾ ವೈವಸ್ವತಃ ಪ್ರಾಹ ಭೂಮಾವಸ್ತ್ಯರ್ಬುದಾಚಲಃ ।
ತತ್ರ ಮೇಽತಿಪ್ರಿಯಂ ತೀರ್ಥಂ ಯತ್ರ ತಪ್ತಂ ಮಯಾ ತಪಃ ॥ ೧೦ ॥
ತತ್ರಾಸೌ ಮೃತ್ಯುಮಾಪನ್ನೋ ಭಾತ್ಯಸ್ತ್ವಿಹ ಕಾರಣಂ ।
ತೈರುಕ್ತಂ ಸತ್ಯಮೇತದ್ಧಿ ಮೃತೋಽಸಾವರ್ಬುದಾಚಲೇ ।
ಗ್ರಾಹೇಣ ಸ ಧೃತಸ್ತತ್ರ ಮೃತ್ಯುಂ ಪ್ರಾಪ್ತೋ ನೃಪಾಧಮಃ ॥ ೧೧ ॥

---

ತಾವರೆಗಳಿಂದ ವ್ಯಾಪ್ತವೂ, ಮೊಸಳೆ ಮೀನಗಳುಳ್ಳದೂ, ಅನೇಕ ಪಕ್ಷಿಗಳುಳ್ಳದೂ, ಮನೋಹರವೂ, ವಿಸ್ತಾರವೂ, ಆದ ಆ ಕೊಳವನ್ನು ಪ್ರವೇಶಿಸಲು ಕೂಡಲೆ ಮೊಸಳೆಯು ಅವನನ್ನು ತಿಂದಿತು.

೮. ಯಮದೂತರು ಆ ಪಾಪಿಯನ್ನು ಕರೆದುಕೊಂಡು ಹೋಗಿ ಯಮನು ಅವನಿಗಾಗಿ ನಿರ್ಮಿಸಿರುವ ಭಯಂಕರ ನರಕದಲ್ಲಿ ಎಸೆದರು.

೯. ಆ ನರಕದಲ್ಲಿರುವವರೆಲ್ಲರೂ ಆ ಚಿತ್ರಾಂಗದನ ಸ್ಪರ್ಶದಿಂದ ಸೌಖ್ಯಗೊಂಡರು. ಆ ಯಮದೂತರು ಆಶ್ಚರ್ಯಗೊಂಡು ಧರ್ಮರಾಜನಿಗೆ ನರಕದ ಜನರಿಗುಂಟಾದ ಸುಖದ ವೃತ್ತಾಂತವನ್ನು ಹೇಳಿದರು.

೧೦. ಆಗ ಯಮನು ಹೀಗೆಂದನು: ಭೂಮಿಯಲ್ಲಿ ಅರ್ಬುದವೆಂಬ ಪರ್ವತವಿರುವುದು. ಅಲ್ಲಿ ನನಗೆ ಪ್ರಿಯವಾದ ತೀರ್ಥವಿರುವುದು. ಅಲ್ಲಿ ನಾನು ತಪಸ್ಸನ್ನು ಮಾಡಿರುವೆನು.

೧೧. ಇವನು ಅಲ್ಲಿ ಮೃತನಾಗಿರುವುದು ಇದಕ್ಕೆ ಕಾರಣವೆಂದು ತೋರುವುದು. ಆಗ ಯಮದೂತರು ಇದು ನಿಜವಾದುದು. ಇವನು ಅರ್ಬುದ ಪರ್ವತದಲ್ಲಿ ಮೊಸಳೆಯಿಂದ ಹಿಡಿಯಲ್ಪಟ್ಟು ಮೃತನಾಗಿರುವನು.

ಯಮ ಉವಾಚ :—
ಮುಚ್ಯತಾಮಾಶು ತೇನಾಯಂ ನಾನೇಯಾಶ್ಚಾಪರೇ ಜನಾಃ ।
ಯೇ ಮೃತಾ ಮಮ ತೀರ್ಥೇ ವೈ ಸರ್ವಪಾತಕನಾಶನೇ ॥ ೧೨ ॥
ತತಸ್ತೈಃ ಕಿಂಕರೈರ್ಮುಕ್ತೋ ಯಮವಾಕ್ಯಾನ್ನೃಪೋತ್ತಮ ।
ತ್ರಿವಿಷ್ಟಪಂ ಮುದಾ ಪ್ರಾಪ್ತಃ ಸೇವ್ಯಮಾನೋಽಪ್ಸರೋಗಣೈಃ ॥ ೧೩ ॥
ಯಸ್ತು ಭಕ್ತಿಸಮಾಯುಕ್ತಃ ಸ್ನಾನಂ ತತ್ರ ಸಮಾಚರೇತ್ ।
ಸ ಯಾತಿ ಪರಮಂ ಸ್ಥಾನಂ ಜರಾಮರಣವರ್ಜಿತಂ ॥ ೧೪ ॥
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ಚೈತ್ರಶುಕ್ಲತ್ರಯೋದಶ್ಯಾಂ ಯತ್ರ ಸಿದ್ಧಿಂ ಗತೋ ಯಮಃ ॥ ೧೫ ॥
ತಸ್ಮಿನ್ನೇವ ನರಃ ಸಮ್ಯಕ್ಶ್ರಾದ್ಧಕೃತ್ಯಂ ಸಮಾಚರೇತ್ ।
ಆಕಲ್ಪಂ ಪಿತರಸ್ತಸ್ಯ ಸ್ವರ್ಗೇ ತಿಷ್ಠಂತಿ ಪಾರ್ಥಿವ ॥ ೧೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಯಮತೀರ್ಥಮಾಹಾತ್ಮ್ಯವರ್ಣನಂ ನಾಮ
ಅಷ್ಟಾದಶೋಽಧ್ಯಾಯಃ

---

೧೨. ಯಮನು ಹೇಳುತ್ತಾನೆ :—ಇವನನ್ನು ಬಿಡಿರಿ. ಸಕಲ ಪಾಪಗಳನ್ನು ಪರಿಹರಿಸುವ ನನ್ನ ತೀರ್ಥದಲ್ಲಿ ಮೃತರಾದವರನ್ನು ನನ್ನ ಲೋಕಕ್ಕೆ ತರಬೇಡಿರಿ.

೧೩. ಬಳಿಕ ಯಮನ ಮಾತಿನಿಂದ ಆ ದೂತರು ಅವನನ್ನು ಬಿಡಲು ಅವನು ದೇವಲೋಕವನ್ನು ಹೊಂದಿ ಅಲ್ಲಿ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತಿದ್ದನು.

೧೪. ಅಲ್ಲಿ ಭಕ್ತಿಯಿಂದ ಮಿಂದ ಮಾನವನು ಮುಪ್ಪು ಮರಣಗಳಿಲ್ಲದ ಉತ್ತಮ ಸ್ಥಾನವನ್ನು ಪಡೆಯುವನು.

೧೫. ಆದ್ದರಿಂದ ಯಮನು ಸಿದ್ಧಿಯನ್ನು ಹೊಂದಿರುವ ಆ ತೀರ್ಥದಲ್ಲಿ ಚೈತ್ರ ಶುಕ್ಲ ತ್ರಯೋದಶೀದಿನ ಸ್ನಾನಮಾಡಬೇಕು.

೧೬. ಮನುಷ್ಯನು ಅಲ್ಲಿ ಶ್ರಾದ್ಧಗೈದರೆ ಅವನ ಪಿತೃಗಳು ಕಲ್ಪಾವಸಾನದವರೆಗೆ ಸ್ವರ್ಗದಲ್ಲಿ ನೆಲೆಸುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಯಮತೀರ್ಥಮಾಹಾತ್ಮ್ಯವರ್ಣನವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಏಕೋನವಿಂಶೋಽಧ್ಯಾಯಃ

## ವಾರಾಹತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ತೀರ್ಥಂ ಪಾಪಪ್ರಣಾಶನಂ ।
ವಾರಾಹಸ್ಯ ಹರೇರಿಷ್ಟಂ ಸದಾ ವಾಸಸುಖಪ್ರದಂ ॥ ೧ ॥
ವಾರಾಹೇಣಾವತಾರೇಣ ಪೃಥ್ವೀ ತತ್ರ ಸಮುದ್ಧೃತಾ ।
ಹರಿಣೋಕ್ತಾ ಸ್ಥಿರಾ ತಿಷ್ಠ ನ ಭೇತವ್ಯಂ ಕದಾಚನ ॥ ೨ ॥
ಅಹಂ ಚೇತೋ ಗಮಿಷ್ಯಾಮಿ ವೈಕುಂಠೇ ಚ ಪುನಃ ಶುಭೇ ।
ವರಂ ವರಯ ಕಲ್ಯಾಣಿ ಯದ್ಯದಿಷ್ಟಂ ಸುದುರ್ಲಭಂ ॥ ೩ ॥

ಪೃಥಿವ್ಯುವಾಚ :—

ಯದಿ ದೇಯೋ ವರೋ ಮಹ್ಯಂ ಶಂಖಚಕ್ರಗದಾಧರ ।
ಅನೇನ ವಪುಷಾ ತಿಷ್ಠ ಹ್ಯಸ್ಮಿಂಸ್ತೀರ್ಥೇ ಸದಾ ಹರೇ ॥ ೪ ॥

---

ಕನ್ನಡದ ಅನುವಾದ

## ವಾರಾಹತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಮಹಾರಾಜ ! ಬಳಿಕ ಪಾಪಗಳನ್ನು ಪರಿಹರಿಸುವುದೂ, ವಾಸಿಸುವುದರಿಂದ ಸುಖವನ್ನೀಯುವುದೂ, ವರಾಹರೂಪಿಯಾದ ವಿಷ್ಣುವಿಗೆ ಪ್ರಿಯವೂ ಆದ ತೀರ್ಥದೆಡೆಗೆ ಹೋಗಬೇಕು.

೨-೩. ಹರಿಯು ವರಾಹರೂಪವನ್ನು ಧರಿಸಿ ಭೂಮಿಯನ್ನು ಎತ್ತಿ ಆ ಭೂಮಿಯನ್ನು ಕುರಿತು ಹೀಗೆಂದನು. “ನೀನು ಯಾವಾಗಲೂ ಸ್ಥಿರವಾಗಿರು. ಹೆದರಬೇಡ. ನಾನು ಮರಳಿ ವೈಕುಂಠಲೋಕಕ್ಕೆ ತೆರಳುವೆನು. ಮಂಗಳಕರಳೆ ! ನಿನಗೆ ದುರ್ಲಭವಾದ ವರವನ್ನು ಕೇಳಿಕೊ”.

೪. ಪೃಥಿವಿಯು ಹೇಳುತ್ತದೆ :—ಶಂಖ, ಚಕ್ರ, ಗದೆಗಳನ್ನು ಧರಿಸಿರುವ ನಾರಾಯಣ ! ನೀನು ನನಗೆ ವರವನ್ನು ಕೊಡುವುದಾದರೆ ಈ ತೀರ್ಥದಲ್ಲಿ ಯಾವಾಗಲೂ ನೆಲಸಿರು.

ಹರಿರುವಾಚ :—

ಅನೇನ ವಪುಷಾ ದೇವಿ ಪರ್ವತೇಽರ್ಬುದಸಂಜ್ಞಕೇ ।
ಅಹಂ ಸ್ಥಾಸ್ಯಾಮಿ ತೇ ವಾಕ್ಯಾತ್ಸದಾ ಲೋಕಹಿತೇ ರತಃ ॥ ೫ ॥
ಮಮಾಗ್ರೇ ಯೋ ಹ್ರದಃ ಪುಣ್ಯಃ ಸುನಿರ್ಮಲಜಲಾನ್ವಿತಃ ।
ಮಾಘಮಾಸೇ ಸಿತೇ ಪಕ್ಷೆ ಏಕಾದಶ್ಯಾಂ ಸಮಾಹಿತಃ ॥ ೬ ॥
ತತ್ರ ಸ್ನಾತ್ವಾ ನರೋ ಭಕ್ತ್ಯಾ ಮುಚ್ಯತೇ ಬ್ರಹ್ಮಹತ್ಯಯಾ ।
ತತ್ರ ಶ್ರಾದ್ಧಂ ಕರಿಷ್ಯಂತಿ ಮನುಷ್ಯಾಃ ಶ್ರದ್ಧಯಾನ್ವಿತಾಃ ॥ ೭ ॥
ಪಿತೄಣಾಂ ಜಾಯತೇ ತೃಪ್ತಿರ್ಯಾವದಾಭೂತಸಂಪ್ಲವಂ ।
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ॥ ೮ ॥

ಪುಲಸ್ತ್ಯ ಉವಾಚ :—

ಇತ್ಯುಕ್ತ್ವಾಂತರ್ದಧೇ ರಾಜನ್ಗೋವಿಂದೋ ಗರುಡಧ್ವಜಃ ।
ತಸ್ಮಿನ್ದಿನೇ ನೃಪಶ್ರೇಷ್ಠ ಸ್ನಾತ್ವಾ ವ್ರತಂ ಸಮಾಚರೇತ್ ॥ ೯ ॥
ತರ್ಪಣಂ ಪಿಂಡದಾನಂ ಚ ಯಃ ಕುರ್ಯಾದ್ಭಕ್ತಿತತ್ಪರಃ ।
ಸ ಯಾತಿ ವಿಷ್ಣುಸಾಲೋಕ್ಯಂ ಪೂರ್ವಜೈಃ ಸಹ ಪಾರ್ಥಿವ ॥ ೧೦ ॥
ತತ್ರ ದಾನಂ ಪ್ರಶಂಸಂತಿ ಗತ್ವಾ ಬ್ರಾಹ್ಮಣಸತ್ತಮೇ ।
ಅಸ್ಮಿಂಸ್ತೀರ್ಥೇ ನೃಪಶ್ರೇಷ್ಠ ಗೋದಾನಂ ಚ ಕರೋತಿ ಯಃ ॥ ೧೧ ॥

---

೫. ಹರಿಯು ಹೇಳುತ್ತಾನೆ :—"ದೇವಿ ! ನಾನು ನಿನ್ನ ಈ ಮಾತಿನಂತೆ ಲೋಕಕ್ಕೆ ಹಿತವನ್ನು ಬಯಸುತ್ತ ಈ ಶರೀರದಿಂದಲೆ ಅರ್ಬುದ ಪರ್ವತದಲ್ಲಿ ನೆಲೆಸುವೆನು.

೬-೮. ನನ್ನ ಮುಂದಿರುವ ನಿರ್ಮಲ ಜಲದಿಂದ ಕೂಡಿದ ಈ ಸರೋವರದಲ್ಲಿ ಮಾಘಶುದ್ಧ ಏಕಾದಶೀ ದಿನ ಭಕ್ತಿಯಿಂದ ಮಿಂದ ಮಾನವನು ಬ್ರಹ್ಮಹತ್ಯೆಯಿಂದ ಮುಕ್ತನಾಗುವನು. ಅಲ್ಲಿ ಶ್ರದ್ಧೆಯಿಂದ ಶ್ರಾದ್ಧಗೈದ ಮಾನವರ ಪಿತೃಗಳು ಪ್ರಳಯ ಕಾಲದವರೆಗೆ ತೃಪ್ತರಾಗುವರು. ಆದ್ದರಿಂದ ಸಕಲ ಪ್ರಯತ್ನದಿಂದಲೂ ಅಲ್ಲಿ ಸ್ನಾನ ಮಾಡಬೇಕು.

೯. ಪುಲಸ್ತ್ಯನು ಹೇಳುತ್ತಾನೆ :—ಗರುಡಧ್ವಜನಾದ ವಿಷ್ಣುವು ಹೀಗೆ ಹೇಳಿ ಅದೃಶ್ಯನಾದನು. ಆ ದಿನ ಅಲ್ಲಿ ಭಕ್ತಿಯಿಂದ ಪಿಂಡಪ್ರದಾನ ತರ್ಪಣಗಳನ್ನು ಮಾಡಿದ ಮಾನವನು ತನ್ನ ಹಿಂದಿನ ಪಿತೃಗಳೊಡನೆ ವಿಷ್ಣುಲೋಕಕ್ಕೆ ತೆರಳುವನು.

೧೧-೨. ಅಲ್ಲಿ ಬ್ರಾಹ್ಮಣೋತ್ತಮನಲ್ಲಿ ಮಾಡಿದ ದಾನವು ಶ್ಲಾಘ್ಯವಾಗುವುದು. ಅಲ್ಲಿ ಗೋದಾನಮಾಡಿದವನು ಆ ಗೋವಿನ ರೋಮಗಳ ಸಂಖ್ಯೆಯಷ್ಟು

ರೋಮಸಂಖ್ಯಾನಿ ವರ್ಷಾಣಿ ಸ್ವರ್ಗೇ ತಿಷ್ಠತಿ ಮಾನವಃ ।
ತಸ್ಮಾತ್ಸರ್ವಾತ್ಮನಾ ರಾಜನ್ಗೋದಾನಂ ಚ ಸಮಾಚರೇತ್ ॥ ೧೨ ॥
ಏಕಾದಶ್ಯಾಂ ವಿಶೇಷೇಣ ಕರ್ತವ್ಯಂ ಸ್ನಾನಮುತ್ತಮಂ ।
ದಾನಂ ಕುರ್ಯಾದ್ಯಥಾ ಶಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೧೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಪಾರಾಪತೀರ್ಥಮಾಹಾತ್ಮ್ಯವರ್ಣನಂ ನಾಮ
ಏಕೋನವಿಂಶೋಽಧ್ಯಾಯಃ

---

ಕಾಲ ಸ್ವರ್ಗದಲ್ಲಿರುವನು. ಆದುದರಿಂದ ದೊರೆಯೆ ! ಅಲ್ಲಿ ಗೋದಾನವನ್ನು ಮಾಡಬೇಕು.

೧೩. ಏಕಾದಶೀ ದಿನ ದಿಂದು ಶಕ್ತ್ಯನುಸಾರ ದಾನಮಾಡಿದವನು ಉತ್ತಮ ಗತಿಯನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಪಾರಾಪತೀರ್ಥಮಾಹಾತ್ಮ್ಯವರ್ಣನವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ವಿಂಶೋಽಧ್ಯಾಯಃ

### ಚಂದ್ರಪ್ರಭಾಸತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :---

ತತೋ ಗಚ್ಛೇತ ಚಂದ್ರೇಶಂ ಪ್ರಭಾಸಂ ನೃಪಸತ್ತಮ ।
ಪ್ರಭಾ ತತ್ರ ಪುರಾ ಪ್ರಾಪ್ತಾ ಚಂದ್ರೇಣ ಸುಮಹಾತ್ಮನಾ ॥ ೧ ॥
ದಕ್ಷಸ್ಯ ಕನ್ಯಕಾ ರಾಜನ್ಸಪ್ತವಿಂಶತಿಸಂಖ್ಯಯಾ ।
ಊಢಾಶ್ಚಂದ್ರೇಣ ತಾಃ ಸರ್ವಾ ಅಶ್ವಿನೀಪ್ರಮುಖಾಃ ಪುರಾ ॥ ೨ ॥
ತಾಸಾಂ ಮಧ್ಯೇ ಚ ರೋಹಿಣ್ಯಾ ಸಹ ರೇಮೇ ಸ ನಿತ್ಯದಾ ।
ತ್ಯಕ್ತಾಃ ಸರ್ವಾಶ್ಚ ಚಂದ್ರೇಣ ದಕ್ಷಕನ್ಯಾಃ ಸುದುಃಖಿತಾಃ ।
ಗತ್ವಾ ಸ್ವಪಿತರಂ ನತ್ವಾ ಪ್ರಾಹುರಸ್ರಾವಿಲೇಕ್ಷಣಾಃ ॥ ೩ ॥
ವಯಂ ತ್ಯಕ್ತಾಃ ಪ್ರಜಾನಾಥ ನಿರ್ದೋಷಾಃ ಪತಿನಾ ತತಃ ।
ಶರಣಂ ತ್ವಾಮನುಪ್ರಾಪ್ತಾ ದುಃಖೇನ ಮಹತಾಽನ್ವಿತಾಃ ॥ ೪ ॥

---

### ಕನ್ನಡದ ಅನುವಾದ

### ಚಂದ್ರಪ್ರಭಾಸತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ಮಹಾತ್ಮನಾದ ಚಂದ್ರನು ಕಾಂತಿಯನ್ನು ಪಡೆದ ಚಂದ್ರಪ್ರಭಾಸ ತೀರ್ಥಕ್ಕೆ ಹೋಗಬೇಕು.

೨. ದೊರೆಯೆ ! ಹಿಂದೆ ಚಂದ್ರನು ದಕ್ಷನ ಮಕ್ಕಳಾದ ಅಶ್ವಿನೀ ಮೊದಲಾದ ಇಪ್ಪತ್ತೇಳು ಮಂದಿ ಕನ್ಯೆಯರನ್ನು ಮದುವೆಮಾಡಿಕೊಂಡನು.

೩. ಅವನು ಅವರ ಮಧ್ಯದಲ್ಲಿ ರೋಹಿಣಿಯೊಡನೆ ಯಾವಾಗಲೂ ವಿನೋದ ಪಡುತ್ತಿದ್ದನು. ಅವನು ತ್ಯಜಿಸಿದ ದಕ್ಷ ಕನ್ಯೆಯರು ಅತ್ಯಂತ ದುಃಖಗೊಂಡು ತಮ್ಮ ತಂದೆಯೆಡೆಗೆ ಹೋಗಿ ಅವನನ್ನು ವಂದಿಸಿ ಅಳುತ್ತ ಇಂತೆಂದರು.

೪. ತಂದೆಯೆ ! ನಮ್ಮ ಪತಿಯಾದ ಚಂದ್ರನು ನಿರ್ದುಷ್ಟರಾದ ನಮ್ಮನ್ನು ತ್ಯಜಿಸಿರುವನು. ಅದರಿಂದ ಅತಿ ದುಃಖಗೊಂಡ ನಾವು ನಿನ್ನನ್ನು ಮರೆಹೊಕ್ಕಿರುವೆವು.

ಗತಿರ್ಭವ ಸುರಶ್ರೇಷ್ಠ ಸರ್ವೇಷಾಂ ತ್ವಂ ಹಿತಂ ಕುರು ।
ಅಸ್ಮಾಕಮುಪದಿಶ್ಯೈನಂ ಚಂದ್ರಂ ಚ ರೋಹಿಣೀರತಂ ॥ ೫ ॥

ಪುಲಸ್ತ್ಯ ಉವಾಚ :—

ಸ ತಾಸಾಂ ವಚನಂ ಶ್ರುತ್ವಾ ಗತೋ ಯತ್ರ ನಿಶಾಕರಃ ।
ಅಬ್ರವೀಚ್ಚ ಸಮಂ ಪಶ್ಯ ಸರ್ವಾಸು ತನಯಾಸು ಮೇ ॥ ೬ ॥
ಅಥ ವ್ರೀಡಾಸಮಾಯುಕ್ತಶ್ಚಂದ್ರಸ್ತಂ ಪ್ರತ್ಯಭಾಷತ ।
ತವ ವಾಕ್ಯಂ ಕರಿಷ್ಯಾಮಿ ದಕ್ಷ ಗಚ್ಛ ನಮೋಸ್ತು ತೇ ॥ ೭ ॥
ಗತೇ ದಕ್ಷೇ ತತೋ ಭೂಯಶ್ಚಂದ್ರಮಾ ರೋಹಿಣೀರತಃ ।
ತ್ಯಕ್ತ್ವಾ ಚ ಕನ್ಯಕಾಃ ಸರ್ವಾಃ ಪ್ರಜಾಪತಿಸಮುದ್ಭವಾಃ ॥ ೮ ॥
ಅಥ ಗತ್ವಾ ಪುನಃ ಸರ್ವಾ ದಕ್ಷಮೂಚುಃ ಸುದುಃಖಿತಾಃ ।
ನ ಕೃತಂ ತವ ವಾಕ್ಯಂ ವೈ ಚಂದ್ರೇಣೈವ ದುರಾತ್ಮನಾ ॥ ೯ ॥
ದೌರ್ಭಾಗ್ಯದುಃಖಸಂತಪ್ತಾ ಮರಿಷ್ಯಾಮ ನ ಸಂಶಯಃ ।
ಅನೇನ ಜೀವಿತೇನಾಪಿ ಮರಣಂ ನಿಶ್ಚಯಂ ಭವೇತ್ ॥ ೧೦ ॥

ಪುಲಸ್ತ್ಯ ಉವಾಚ :—

ಅಥ ರೋಷಸಮಾಯುಕ್ತೋ ದಕ್ಷೋ ಗತ್ವಾಽಬ್ರವೀದ್ವಿಧುಂ ।
ಮಮ ವಾಕ್ಯಂ ತ್ವಯಾ ಚಂದ್ರ ಯಸ್ಮಾತ್ಪಾಪಕೃತಂ ನ ಹಿ ॥ ೧೧ ॥

---

೫. ಸುರೋತ್ತಮನೆ ! ನೀನು ರೋಹಿಣಿಯಲ್ಲಿ ಆಸಕ್ತನಾದ ಚಂದ್ರನಿಗೆ ಬುದ್ಧಿವಾದವನ್ನು ಹೇಳಿ ನಮ್ಮೆಲ್ಲರಿಗೆ ಹಿತವನ್ನುಂಟುಮಾಡು.

೬. ಪುಲಸ್ತ್ಯನು ಹೇಳುತ್ತಾನೆ :—ಆ ದಕ್ಷನು ಆ ಕನ್ಯೆಯರ ಮಾತನ್ನು ಕೇಳಿ ಚಂದ್ರನೆಡೆಗೆ ಹೋಗಿ ನನ್ನ ಮಕ್ಕಳನ್ನೆಲ್ಲ ಸಮವಾಗಿ ನೋಡಿಕೋ ಎಂದನು.

೭. ತರುವಾಯ ನಾಚಿಕೆಗೊಂಡ ಚಂದ್ರನು ದಕ್ಷನನ್ನು ಕುರಿತು, “ನಿನ್ನ ಮಾತನ್ನು ನಡೆಯಿಸುವೆನು. ನೀನು ಹೊರಡು; ನಿನಗೆ ನಮಸ್ಕಾರವು” ಎಂದನು.

೮. ದಕ್ಷನು ಹೊರಟು ಹೋಗಲು ಮರಳಿ ಚಂದ್ರನು ದಕ್ಷಪ್ರಜಾಪತಿಯ ಇತರ ಕನ್ಯೆಯರನ್ನು ತ್ಯಜಿಸಿ ರೋಹಿಣಿಯಲ್ಲಿಯೇ ಆಸಕ್ತನಾದನು.

೯–೧೦. ಅನಂತರ ಆ ಕನ್ಯೆಯರೆಲ್ಲ ಅತ್ಯಂತ ದುಃಖಗೊಂಡು ದಕ್ಷನನ್ನು ಕುರಿತು ದುಷ್ಟನಾದ ಚಂದ್ರನು ನಿನ್ನ ಮಾತನ್ನು ನಡೆಯಿಸಲಿಲ್ಲ. ದೌರ್ಭಾಗ್ಯದಿಂದ ದುಃಖಗೊಂಡ ನಾವು ನಿಶ್ಚಯವಾಗಿಯೂ ಮಡಿಯುವೆವು. ಹೀಗೆಯೇ ಬದುಕುವುದಾದರೆ ನಿಶ್ಚಯವಾಗಿಯೂ ಸಾಯುವೆವು ಎಂದರು.

೧೧–೧೨. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ರೋಷಗೊಂಡ ದಕ್ಷನು ಚಂದ್ರನೆಡೆಗೆ ಹೋಗಿ ಅವನನ್ನು ಕುರಿತು, “ಚಂದ್ರ! ನೀನು ನನ್ನ ಮಾತನ್ನು ನಡೆಯಿಸ

ಕ್ಷಯಮೇಷ್ಯಸಿ ತಸ್ಮಾತ್ತ್ವಂ ಯಕ್ಷ್ಮಣಾ ನಾಸ್ತಿ ಸಂಶಯಃ ।
ಏವಂ ದತ್ವಾ ತತಃ ಶಾಪಂ ಗತೋ ದಕ್ಷಃ ಸ್ವಮಾಲಯಂ ॥ ೧೨ ॥
ಯಕ್ಷ್ಮಣಾ ವ್ಯಾಪಿತಶ್ಚಂದ್ರಃ ಕ್ಷಯಂ ಯಾತಿ ದಿನೇದಿನೇ ।
ಕ್ಷೀಣೋ ದ್ಯುತಿವಿಹೀನಸ್ತು ಚಿಂತಯಾಮಾಸ ಚಂದ್ರಮಾಃ ॥ ೧೩ ॥
ಕಿಂ ಕರ್ತವ್ಯಂ ಮಯಾ ತತ್ರ ಹ್ಯಸ್ಮಿಞ್ಛಾಪೇ ಸುದಾರುಣೇ ।
ಅಥ ಕಿಂ ಪೂಜಯಿಷ್ಯಾಮಿ ಸರ್ವಕಾಮಪ್ರದಂ ಶಿವಂ ॥ ೧೪ ॥
ಸ ಏವಂ ನಿಶ್ಚಯಂ ಕೃತ್ವಾ ಗತೋಽರ್ಬುದಮಥಾಚಲಂ ।
ತಪಸ್ತೇಪೇ ಜಿತಕ್ರೋಧೋ ಜಪಹೋಮಪರಾಯಣಃ ॥ ೧೫ ॥
ತಸ್ಮೈ ತುಷ್ಟೋ ಮಹಾದೇವೋ ವರ್ಷಾಣಾಮಯುತೇ ಗತೇ ।
ಅಬ್ರವೀದ್ವರದೋಽಸ್ಮೀತಿ ತತೋಽಸ್ಮೈ ದರ್ಶನಂ ದದೌ ॥ ೧೬ ॥

ಈಶ್ವರ ಉವಾಚ :—

ವರಂ ವರಯ ಭದ್ರಂ ತೇ ಯತ್ತೇ ಮನಸಿ ವರ್ತತೇ ।
ತವ ದಾಸ್ಯಾಮ್ಯಹಂ ಚಂದ್ರ ಯದ್ಯಪಿ ಸ್ಯಾತ್ಸುದುರ್ಲಭಂ ॥ ೧೭ ॥

ಚಂದ್ರ ಉವಾಚ :—

ವ್ಯಾಧಿಕ್ಷಯಂ ಸುರಶ್ರೇಷ್ಠ ಕುರು ಮೇ ತ್ರಿಪುರಾಂತಕ ।
ಯಕ್ಷ್ಮಣಾಂ ವ್ಯಾಪಿತೋ ದೇಹೋ ಮಮಾಯಂ ಚ ಜಗತ್ಪತೇ ॥ ೧೮ ॥

---

ದಿರುವುದರಿಂದ ಕ್ಷಯರೋಗಪೀಡಿತನಾಗಿ ನಾಶಗೊಳ್ಳುವೆ. ಎಂದು ಶಾಪವಿತ್ತು ತನ್ನ ಮನೆಗೆ ಹೋದನು.

೧೩. ಕ್ಷಯರೋಗಪೀಡಿತನಾಗಿ ಚಂದ್ರನು ದಿನೇ ದಿನೇ ಕ್ಷಯಿಸುತ್ತ ಕಾಂತಿಯಿಲ್ಲದವನಾಗಿ ಚಿಂತಿಸಿದನು.

೧೪. ಈ ಭಯಂಕರ ಶಾಪವು ನನಗೆ ಬಂದಿರುವುದರಿಂದ ನಾನೀಗ ಏನನ್ನು ಮಾಡಲಿ. ಹೆಚ್ಚು ವಿಚಾರಮಾಡಿ ಪ್ರಯೋಜನವೇನು ? ಸಕಲೇಷ್ಟಾರ್ಥಗಳನ್ನು ಕೊಡುವ ಶಿವನನ್ನು ಪೂಜಿಸುವೆನು.

೧೫. ಅವನು ಹೀಗೆ ನಿಶ್ಚಯಿಸಿ ಅರ್ಬುದಾಚಲಕ್ಕೆ ಹೋಗಿ ಕೋಪವನ್ನು ಜಯಿಸಿ ಜಪ ಹೋಮಗಳಲ್ಲಿ ನಿರತನಾಗಿ ತಪಸ್ಸನ್ನು ಮಾಡಿದನು.

೧೬. ಹೀಗೆ ಹತ್ತು ಸಾವಿರ ವರ್ಷಗಳು ಕಳೆಯಲು ಮಹೇಶ್ವರನು ಸಂತೋಷಗೊಂಡು ಪ್ರತ್ಯಕ್ಷನಾಗಿ ನಿನಗೆ ವರವನ್ನು ಕೊಡುವೆನೆಂದನು.

೧೭. ಈಶ್ವರನು ಹೇಳುತ್ತಾನೆ :—ಚಂದ್ರ ! ನಿನಗಿಷ್ಟವಾದ ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ನಾನು ಕೊಡುವೆನು.

೧೮. ಚಂದ್ರನು ಹೇಳುತ್ತಾನೆ :—ಸುರೋತ್ತಮನೂ, ತ್ರಿಪುರಾಂತಕನೂ, ಜಗದೊಡೆಯನೂ ಆದ ಮಹೇಶ್ವರನೆ! ನನ್ನೀ ದೇಹವು ಕ್ಷಯರೋಗದಿಂದ ವ್ಯಾಪಿಸಿರುವುದು. ನೀನು ಈ ಕಾಯಿಲೆಯನ್ನು ನಿವಾರಿಸು.

ಈಶ್ವರ ಉವಾಚ :—

ದಕ್ಷಶಾಪೇನ ತೇ ಚಂದ್ರ ಯಕ್ಷ್ಮಾ ಕಾಯೇ ವ್ಯವಸ್ಥಿತಃ ।
ನ ಶಕ್ತೋ ಹ್ಯನ್ಯಥಾ ಕರ್ತುಂ ಶಾಪಸ್ತಸ್ಯ ಮಹಾತ್ಮನಃ ॥ ೧೯ ॥
ತಸ್ಮಾತ್ತ್ವಂ ತಸ್ಯ ತಾಃ ಸರ್ವಾಃ ಕನ್ಯಕಾ ಮಮ ವಾಕ್ಯತಃ ।
ನಿಶಾಕರ ಸಮಂ ಪಶ್ಯ ತವ ವ್ಯಾಧಿರ್ಗಮಿಷ್ಯತಿ ॥ ೨೦ ॥
ಕೃಷ್ಣೇ ಕ್ಷಯಶ್ಚ ತೇ ಚಂದ್ರ ಶುಕ್ಲೇ ವೃದ್ಧಿರ್ಭವಿಷ್ಯತಿ ।
ವರಂ ವರಯ ಭದ್ರಂ ತೇ ಅನ್ಯಮಿಷ್ಟಂ ಸುದುರ್ಲಭಂ ॥ ೨೧ ॥

ಚಂದ್ರ ಉವಾಚ :—

ಚಂದ್ರಗ್ರಹೇ ನರೋ ಯೋಽತ್ರ ಸೋಮವಾರೇ ಚ ಶಂಕರ ।
ಭಕ್ತ್ಯಾ ಸ್ನಾನಂ ಕರೋತ್ಯೇವ ಸ ಯಾತು ಪರಮಾಂ ಗತಿಂ ॥ ೨೨ ॥
ಪಿಂಡದಾನೇನ ದೇವೇಶ ಸ್ವರ್ಗಂ ಗಚ್ಛಂತು ಪೂರ್ವಜಾಃ ।
ಪ್ರಸಾದಾತ್ತವ ದೇವೇಶ ತೀರ್ಥಂ ಭವತು ಮುಕ್ತಿದಂ ॥ ೨೩ ॥

ಈಶ್ವರ ಉವಾಚ :—

ಭವಿಷ್ಯಂತಿ ನರೋಽತ್ರೈವ ವಿಪಾಪ್ಮಾನೋ ನಿಶಾಕರ ।
ಯಸ್ಮಾತ್ಪ್ರಭಾ ತ್ವಯಾ ಪ್ರಾಪ್ತಾ ತೀರ್ಥೇಽಸ್ಮಿನ್ವಿಮಲೋದಕೇ ॥ ೨೪ ॥

---

೧೯. ಈಶ್ವರನು ಹೇಳುತ್ತಾನೆ :—ಚಂದ್ರ ! ದಕ್ಷಶಾಪದಿಂದ ಕ್ಷಯರೋಗವು ನಿನ್ನ ದೇಹವನ್ನು ಆವರಿಸಿರುವುದು. ಮಹಾತ್ಮನಾದ ಆ ದಕ್ಷನ ಶಾಪವನ್ನು ವ್ಯತ್ಯಾಸಗೊಳಿಸಲು ನಾನು ಸಮರ್ಥನಲ್ಲ.

೨೦. ಆದ್ದರಿಂದ ನೀನು ನನ್ನ ಮಾತಿನಂತೆ ಅವನ ಕನ್ಯೆಯರನ್ನೆಲ್ಲ ಸಮವಾಗಿ ನೋಡು. ನಿನ್ನ ಕಾಯಿಲೆಯು ಪರಿಹಾರವಾಗುವುದು.

೨೧. ಚಂದ್ರ ! ಕೃಷ್ಣಪಕ್ಷದಲ್ಲಿ ನಿನಗೆ ಕ್ಷಯವೂ, ಶುಕ್ಲಪಕ್ಷದಲ್ಲಿ ವೃದ್ಧಿಯೂ ಆಗುವುದು. ಮಂಗಳಕರನೆ ! ನಿನಗಿಷ್ಟವಾದ ಬೇರೆ ದುರ್ಲಭ ವರವನ್ನು ಕೇಳಿಕೊ.

೨೨. ಚಂದ್ರನು ಹೇಳುತ್ತಾನೆ :—ಶಂಕರ ! ಸೋಮವಾರ ಚಂದ್ರಗ್ರಹಣ ಕಾಲದಲ್ಲಿ ಇಲ್ಲಿ ಭಕ್ತಿಯಿಂದ ಮಿಂದವನು ಉತ್ತಮ ಗತಿಯನ್ನು ಪಡೆಯಲಿ.

೨೩. ದೇವೇಶ ! ನಿನ್ನ ಅನುಗ್ರಹದಿಂದ ಇಲ್ಲಿ ಪಿಂಡಪ್ರದಾನ ಮಾಡುವವನ ಪಿತೃಗಳು ಸ್ವರ್ಗಕ್ಕೆ ತೆರಳಲಿ. ಇದು ಮುಕ್ತಿಯನ್ನೀಯುವ ತೀರ್ಥವಾಗಲಿ.

೨೪–೨೭. ಈಶ್ವರನು ಹೇಳುತ್ತಾನೆ :—ಚಂದ್ರ ! ಇಲ್ಲಿ ಮಿಂದ ಮಾನವರು ಪಾಪರಹಿತರಾಗುವರು ನೀನು ಶುದ್ಧವಾದ ಜಲವುಳ್ಳ ಈ ತೀರ್ಥದಲ್ಲಿ ಕಾಂತಿಯನ್ನು

ಪ್ರಭಾಸತೀರ್ಥಂ ವಿಖ್ಯಾತಂ ತಸ್ಮಾದೇತದ್ಭವಿಷ್ಯತಿ ।
ಯತ್ರ ಸೋಮಗ್ರಹೇ ಪ್ರಾಪ್ತೇ ಸೋಮವಾರೇ ವಿಶೇಷತಃ ॥ ೨೫ ॥
ಕರಿಷ್ಯಂತಿ ನರಾಃ ಸ್ನಾನಂ ತೇ ಯಾಸ್ಯಂತಿ ಪರಾಂ ಗತಿಂ ।
ಯೇಽತ್ರ ಶ್ರಾದ್ಧಂ ಕರಿಷ್ಯಂತಿ ಪಿಂಡದಾನಂ ತಥಾ ನರಾಃ ॥ ೨೬ ॥
ಗಯಾಶ್ರಾದ್ಧಸಮಂ ಪುಣ್ಯಂ ತೇಷಾಂ ಚಂದ್ರ ಭವಿಷ್ಯತಿ ।
ತಥಾ ದಾನಂ ಪ್ರಕರ್ತವ್ಯಂ ಸೋಮಲೋಕೈರ್ಗ್ರಹೇ ತವ ॥ ೨೭ ॥

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ವಿರೂಪಾಕ್ಷಸ್ತತ್ರೈವಾಂತರಧೀಯತ ।
ಚಂದ್ರೋಽಪಿ ಬುಭುಜೇ ಸರ್ವಾಃ ಪತ್ನೀಶ್ಚ ದಕ್ಷಸಂಭವಾಃ ॥ ೨೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೋಽರ್ಬುದಖಂಡೇ
ಚಂದ್ರಪ್ರಭಾಸತೀರ್ಥಮಾಹಾತ್ಮ್ಯ ವರ್ಣನಂ ನಾಮ
॥ ವಿಂಶೋಽಧ್ಯಾಯಃ ॥

---

ಪಡೆಯುವುದರಿಂದ ಇದು ಪ್ರಭಾಸತೀರ್ಥವೆಂದು ಪ್ರಸಿದ್ಧವಾಗುವುದು. ಇಲ್ಲಿ ಸೋಮವಾರ ಚಂದ್ರಗ್ರಹಣ ಕಾಲದಲ್ಲಿ ಮಿಂದ ಮಾನವರು ಉತ್ತಮ ಗತಿಯನ್ನು ಪಡೆಯುವರು. ಇಲ್ಲಿ ಶ್ರಾದ್ಧಗೈದು ಪಿಂಡಪ್ರದಾನ ಮಾಡಿದ ಮಾನವರಿಗೆ ಗಯಾಶ್ರಾದ್ಧಕ್ಕೆ ಸಮವಾದ ಪುಣ್ಯವು ಉಂಟಾಗುವುದು. ಹಾಗೆಯೇ ನಿನ್ನ ಗ್ರಹಣಕಾಲದಲ್ಲಿ ದಾನ ಮಾಡಬೇಕು.

೨೮. ಪುಲಸ್ತ್ಯನು ಹೇಳುತ್ತಾನೆ :—ಶಂಕರನು ಹೀಗೆಂದು ಹೇಳಿ ಅಲ್ಲಿಯೇ ಅಡಗಿಹೋದನು. ಚಂದ್ರನೂ ದಕ್ಷನ ಮಕ್ಕಳಾದ ಆ ಪತ್ನಿಯರನ್ನೆಲ್ಲ ಸಮವಾಗಿ ಭೋಗಿಸಿದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಚಂದ್ರಪ್ರಭಾಸತೀರ್ಥಮಾಹಾತ್ಮ್ಯವರ್ಣನವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಏಕವಿಂಶೋಽಧ್ಯಾಯಃ

### ಪಿಂಡೋದಕತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಪಿಂಡೋದಕಮನುತ್ತಮಂ ।
ತೀರ್ಥಂ ಯತ್ರ ತಪಸ್ತಪ್ತಂ ಪಿಂಡೋದಕದ್ವಿಜಾತಿನಾ ॥ ೧ ॥
ಪುರಾ ಪಿಂಡೋದಕೋನಾಮ ಬ್ರಾಹ್ಮಣೋಽಭೂನ್ಮಹಾಮತೇ ।
ಮಂದಪ್ರಜ್ಞೋಽಲ್ಪಮೇಧಾವೀ ಸೋಪಾಧ್ಯಾಯೇನ ಪಾಠಿತಃ ॥ ೨ ॥
ಅಶಕ್ತೋಽಧ್ಯಯನಂ ಕರ್ತುಂ ಜಾಡ್ಯಭಾವಾನ್ಮಹೀಪತೇ ।
ಸ ವೈರಾಗ್ಯಂ ಪರಂ ಗತ್ವಾ ಸಂಪ್ರಾಪ್ತೋ ಗಿರಿಗಹ್ವರೇ ॥ ೩ ॥
ಏತಸ್ಮಿನ್ನೇವ ಕಾಲೇ ತು ತತ್ರೈವ ಚ ಸರಸ್ವತೀ ।
ವೀಣಾವಿನೋದಸಂಯುಕ್ತಾ ವಿವಿಕ್ತೇ ತಮುಪಸ್ಥಿತಾ ॥ ೪ ॥
ತಂ ದೃಷ್ಟ್ವಾ ಬ್ರಾಹ್ಮಣಂ ಖಿನ್ನಂ ವೈರಾಗ್ಯೇಣ ಸಮನ್ವಿತಂ ।
ಕೃಪಾವಿಷ್ಟಾ ಮಹಾದೇವೀ ವಾಕ್ಯಮೇತದುವಾಚ ಚ ॥ ೫ ॥

---

ಕನ್ನಡದ ಅನುವಾದ

### ಪಿಂಡೋದಕತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೋತ್ತಮ ! ಬಳಿಕ ಪಿಂಡೋದಕನೆಂಬ ಬ್ರಾಹ್ಮಣನು ತಪಸ್ಸನ್ನು ಮಾಡಿರುವ ಪಿಂಡೋದತೀರ್ಥಕ್ಕೆ ಹೋಗಬೇಕು.

೨. ಪ್ರಾಜ್ಞನೆ ! ಹಿಂದೆ ಪಿಂಡೋದಕನೆಂಬ ಬ್ರಾಹ್ಮಣನೋರ್ವಸಿದ್ಧನು ಮೂಢನೂ, ಬುದ್ಧಿಶಾಲಿಯಲ್ಲದವನೂ ಆದ ಅವನನ್ನು ಉಪಾಧ್ಯಾಯನು ಓದಿಸಿದನು.

೩. ಮೂಢನಾದ್ದರಿಂದ ಅಧ್ಯಯನ ಮಾಡಲಶಕ್ತನಾದ ಅವನು ವಿರಕ್ತನಾಗಿ ಪರ್ವತದ ಗುಹೆಯನ್ನು ಹೊಂದಿದನು.

೪. ಈ ಸಮಯದಲ್ಲಿ ಅಲ್ಲಿಗೆ ಸರಸ್ವತಿಯು ವೀಣೆಯಿಂದ ವಿನೋದಗೊಳ್ಳುತ್ತ ರಹಸ್ಯವಾಗಿ ಬಂದಳು.

೫. ಅವಳು ಖಿನ್ನನಾಗಿ ವೈರಾಗ್ಯಗೊಂಡ ಅವಳನ್ನು ಕಂಡು ದಯೆಯಿಂದ ಇಂತೆಂದಳು.

ಸರಸ್ವತ್ಯುವಾಚ :—
ಕಸ್ಮಾತ್ತ್ವಂ ಖಿದ್ಯಸೇ ವಿಪ್ರ ವಿರಕ್ತ ಇವ ಭಾಸಸೇ ।
ಕಸ್ಮಾನ್ನ ಹೃಷ್ಯಸಿ ಹೃದಾ ಕಸ್ಮಾದತ್ರ ತ್ವಮಾಗತಃ ।
ವದ ಶೀಘ್ರಂ ಮಹಾಭಾಗ ತವಾಂತಿಕೇ ವಸಾಮ್ಯಹಂ ॥ ೬ ॥
ಪಿಂಡೋದಕ ಉವಾಚ :—
ಅಹಂ ವೈರಾಗ್ಯಮಾಪನ್ನ ಉಪಾಧ್ಯಾಯತಿರಸ್ಕೃತಃ ।
ಜ್ಞಾನಹೀನೋ ಮಹಾಭಾಗೇ ಮೃತ್ಯುಂ ವಾಂಛಾಮಿ ಸಾಂಪ್ರತಂ ॥ ೭ ॥
ನ ಮೇ ಸರಸ್ವತೀ ದೇವೀ ಜಿಹ್ವಾಗ್ರೇ ಪರಿವರ್ತತೇ ।
ಕಾರಣಂ ನಾನ್ಯದಸ್ತೀಹ ಮೃತ್ಯೋರ್ಮಮ ವರಾನನೇ ॥ ೮ ॥
ದೃಷ್ಟೋಽಕಸ್ಮಾತ್ತ್ವಯಾ ಚಾಹಂ ತತೋ ಯಾಸ್ಯಾಮಿ ಚಾನ್ಯತಃ ।
ಮರಣಂ ಹಿ ಮಮ ಶ್ರೇಯೋ ಮೂಕಭಾವಾನ್ನ ಜೀವಿತಂ ॥ ೯ ॥
ಸರಸ್ವತ್ಯುವಾಚ :—
ಅಹಂ ಸರಸ್ವತೀ ದೇವೀ ಸದಾಸ್ಮಿನ್ಸ್ವರಪರ್ವತೇ । ॥ ೧೦ ॥

---

೬. ಸರಸ್ವತಿಯು ಹೇಳುತ್ತಾಳೆ :—ಬ್ರಾಹ್ಮಣ ನೀನು ವ್ಯಥೆಗೊಂಡಿರುವೆ ? ವಿರಕ್ತನಂತೆ ಕಾಣುತ್ತೀಯೆ. ನಿನಗೆ ಮನಸ್ಸಿನಲ್ಲಿ ಏಕೆ ಸಂತೋಷವಿಲ್ಲ ? ಇಲ್ಲಿಗೆ ಏಕೆಬಂದಿರುವೆ ? ಮಹಾತ್ಮನೆ ! ಶೀಘ್ರವಾಗಿ ಹೇಳು. ನಾನು ನಿನ್ನ ಹತ್ತಿರವೇ ವಾಸ ಮಾಡುವೆನು.

೭. ಪಿಂಡೋದಕನು ಹೇಳುತ್ತಾನೆ :—ಉಪಾಧ್ಯಾಯನಿಂದ ತಿರಸ್ಕಾರಗೊಂಡ ನಾನು ವೈರಾಗ್ಯವನ್ನು ಹೊಂದಿರುವೆನು. ಮಹಾತ್ಮಳೆ ! ಜ್ಞಾನವಿಲ್ಲದ ನಾನು ಈಗ ಸಾಯಬಯಸುವೆನು.

೮. ನನ್ನ ನಾಲಿಗೆಯ ತುದಿಯಲ್ಲಿ ಸರಸ್ವತಿಯು ನೆಲಸಿಲ್ಲ. ಸುಂದರಿಯೆ! ನಾನು ಸಾಯಲು ಬೇರೆ ಕಾರಣವಿಲ್ಲ.

೯. ಅಕಸ್ಮಾತ್ತಾಗಿ ನೀನು ನನ್ನನ್ನು ನೋಡಿದೆ. ಆದ್ದರಿಂದ ನಾನು ಬೇರೆ ಕಡೆಗೆ ಹೋಗುವೆನು. ಮೂಕನಂತೆ ಬದುಕುವುದಕ್ಕಿಂತ ನನಗೆ ಮರಣವೇ ಶ್ರೇಯಸ್ಕರವು.

೧೦. ಸರಸ್ವತಿಯು ಹೇಳುತ್ತಾಳೆ :—ಬ್ರಾಹ್ಮಣ ! ಸರಸ್ವತೀದೇವಿಯಾದ ನಾನು ಈ ಪರ್ವತದಲ್ಲಿ ತ್ರಯೋದಶೀ ದಿನ ಪ್ರದೋಷಕಾಲದಲ್ಲಿ ವಾಸಿಸುವೆನು. ಆದ್ದರಿಂದ ನಿನಗೆ ಇಷ್ಟವಾದ ದುರ್ಲಭವರವನ್ನು ಕೇಳಿಕೊ.

ಪಿಂಡೋದಕ ಉವಾಚ :—
ಪ್ರಸಾದಾತ್ತವ ವೈ ವಾಣಿ ಸರ್ವಜ್ಞತ್ವಂ ಮಮೇಪ್ಸಿತಂ ।
ಏತತ್ತೀರ್ಥಂ ತು ಮನ್ನಾಮ್ನಾ ಖ್ಯಾತಿಂ ಯಾತು ಶುಚಿಸ್ಮಿತೇ ॥ ೧೧ ॥
ಸರಸ್ವತ್ಯುವಾಚ :—
ಅದ್ಯಪ್ರಭೃತಿ ಸರ್ವಜ್ಞೋ ಹ್ಯತ್ರ ಲೋಕೇ ಭವಿಷ್ಯಸಿ ।
ನಾಮ್ನಾ ತವ ತಥಾ ತೀರ್ಥಮೇತತ್ಖ್ಯಾತಿಂ ಪ್ರಯಾಸ್ಯತಿ ॥ ೧೨ ॥
ನಿಶಾಮುಖೇ ತ್ರಯೋದಶ್ಯಾಂ ಯೋಽತ್ರ ಸ್ನಾನಂ ಕರಿಷ್ಯತಿ ।
ಭವಿಷ್ಯತಿ ಸ ಸರ್ವಜ್ಞೋ ಯದ್ಯಪಿ ಸ್ಯಾತ್ಸುಮಂದಧೀಃ ॥ ೧೩ ॥
ಅತ್ರ ಮೇ ಸತತಂ ವಾಸೋ ಭವಿಷ್ಯತಿ ದ್ವಿಜೋತ್ತಮ ।
ಯಸ್ಮಾತ್ತಸ್ಮಾತ್ಸದಾ ಸ್ನಾನಂ ಕರ್ತವ್ಯಂ ಸುಸಮಾಹಿತೈಃ ॥ ೧೪ ॥
ಏವಮುಕ್ತ್ವಾ ತತೋ ದೇವೀ ತತ್ರೈವಾಂತರಧೀಯತ ।
ಪಿಂಡೋದಕೋ ಹಿ ಸರ್ವಜ್ಞೋ ಭೂತ್ವಾಥ ಸ್ವಗೃಹಂ ಯಯೌ ।
ವ್ಯಸ್ಮಾಪಯಜ್ಜನಾನ್ಸರ್ವಾಂಸ್ತತ್ತೀರ್ಥಸ್ಯ ಸಮಾಶ್ರಯಾತ್ ॥ ೧೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ ಪಿಂಡೋದಕತೀರ್ಥಮಾಹಾತ್ಮ್ಯವರ್ಣನಂನಾಮ ಏಕವಿಂಶೋಽಧ್ಯಾಯಃ

---

೧೧. ಪಿಂಡೋದಕನು ಹೇಳುತ್ತಾನೆ:—ಸರಸ್ವತಿಯೇ! ನಿನ್ನ ಅನುಗ್ರಹದಿಂದ ನನಗೆ ಸರ್ವಜ್ಞತ್ವವು ದೊರೆಯಲಿ. ಈ ತೀರ್ಥವು ನನ್ನ ಹೆಸರಿನಿಂದ ವಿಖ್ಯಾತವಾಗಲಿ.

೧೨. ಸರಸ್ವತಿಯು ಹೇಳುತ್ತಾಳೆ:—ಬ್ರಾಹ್ಮಣ! ನೀನು ಈ ದಿನ ಮೊದಲುಗೊಂಡು ಈ ಲೋಕದಲ್ಲಿ ಸರ್ವಜ್ಞನಾಗುವೆ. ಹಾಗೆಯೇ ಈ ತೀರ್ಥವು ನಿನ್ನ ಹೆಸರಿನಿಂದ ಪ್ರಸಿದ್ಧಿಗೊಳ್ಳುವುದು.

೧೩. ತ್ರಯೋದಶಿಯದಿನ ಪ್ರದೋಷಕಾಲದಲ್ಲಿ ಇಲ್ಲಿ ಮಿಂದವನು ಮೂಢನಾದರೂ ಸರ್ವಜ್ಞನಾಗುವನು.

೧೪. ನಾನು ಇಲ್ಲಿ ಯಾವಾಗಲೂ ವಾಸಮಾಡುವುದರಿಂದ ಮಾನವರು ಯಾವಾಗಲೂ ಇಲ್ಲಿ ಸ್ನಾನಮಾಡಬೇಕು.

೧೫. ಆ ಸರಸ್ವತಿಯು ಹೀಗೆ ನುಡಿದು ಅಲ್ಲಿಯೇ ಅದೃಶ್ಯಳಾದಳು. ಬಳಿಕ ಪಿಂಡೋದಕನು ಸರ್ವಜ್ಞನಾಗಿ ತನ್ನ ಮನೆಗೆ ತೆರಳಿ ಆ ತೀರ್ಥದ ಪ್ರಭಾವದಿಂದ ಸರ್ವಜ್ಞನಾಗಿ ಜನರನ್ನೆಲ್ಲ ವಿಸ್ಮಯಗೊಳಿಸಿದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಪಿಂಡೋದಕತೀರ್ಥಮಾಹಾತ್ಮ್ಯವರ್ಣನವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ದ್ವಾವಿಂಶೋಽಧ್ಯಾಯಃ

### ಶ್ರೀಮಾತೃಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—
ತತೋ ಗಚ್ಛೇನ್ನೃಪಶ್ರೇಷ್ಠ ಶ್ರೀಮಾತರಮನಿಂದಿತಾಂ ।
ಸರ್ವಕಾಮಪ್ರದಾಂ ನೃಣಾಮಿಹ ಲೋಕೇ ಪರತ್ರ ಚ ॥ ೧ ॥
ಯಾ ಚ ಸರ್ವಮಯಾ ಶಕ್ತಿರ್ಯಯಾ ವ್ಯಾಪ್ತಮಿದಂ ಜಗತ್ ।
ಸಾ ತಸ್ಮಿನ್ಪರ್ವತೇ ಸಾಕ್ಷಾತ್ಸ್ವಯಂ ವಾಸಮರೋಚಯತ್ ॥ ೨ ॥
ಪುರಾ ದೇವಯುಗೇ ರಾಜಾ ಕಲಿಂಗೋನಾಮ ದಾನವಃ ।
ಜರಾಮರಣಹೀನೋಽಸೌ ದೇವಾನಾಂ ಚ ಭಯಂಕರಃ ॥ ೩ ॥
ತೇನ ಸರ್ವಮಿದಂ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ।
ಬಲಪ್ರಭಾವತಃ ಸ್ವರ್ಗೋ ಜಿತಸ್ತೇನ ಸುರಾಧಿಪಃ ।
ಬ್ರಹ್ಮಲೋಕಮನುಪ್ರಾಪ್ತೋ ದೇವೈಃ ಸರ್ವೈಃ ಸಮನ್ವಿತಃ ॥ ೪ ॥

---

ಕನ್ನಡದ ಅನುವಾದ

### ಶ್ರೀಮಾತೃಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ನೃಪೋತ್ತಮ! ಬಳಿಕ ಅನಿಂದಿತ ರೂಪವುಳ್ಳವಳೂ, ಮನುಷ್ಯರಿಗೆ ಇಹಪರಗಳಲ್ಲಿ ಸಕಲೇಷ್ಟಾರ್ಥಗಳನ್ನೀಯುವವಳೂ ಆದ ಶ್ರೀಮಾತೆಯೆಡೆಗೆ ಹೋಗಬೇಕು.

೨. ಜಗತ್ತನ್ನು ಸರ್ವಶಕ್ತಿ ಸ್ವರೂಪದಿಂದ ವ್ಯಾಪಿಸಿರುವ ಅವಳು ಆ ಪರ್ವತದಲ್ಲಿ ವಾಸಿಸಲು ಬಯಸಿದಳು.

೩. ಹಿಂದೆ ದೇವಯುಗದಲ್ಲಿ ಜರಾಮರಣಗಳಿಲ್ಲದವನೂ, ದೇವತೆಗಳಿಗೆ ಭಯಂಕರನೂ ಆದ ಕಲಿಂಗನೆಂಬ ದಾನವರಾಜನಿದ್ದನು.

೪. ಅವನು ಈ ಮೂರು ಲೋಕಗಳನ್ನು ವ್ಯಾಪಿಸಿ ಬಲಪ್ರಭಾವದಿಂದ ಇಂದ್ರನನ್ನು ಗೆದ್ದು ಸ್ವರ್ಗವನ್ನು ವಶಪಡಿಸಿಕೊಳ್ಳಲು ಇಂದ್ರನು ದೇವತೆಗಳೊಡನೆ ಬ್ರಹ್ಮಲೋಕಕ್ಕೆ ತೆರಳಿದನು.

ತೇನ ದೈತ್ಯೇನ ಸರ್ವೇಽಪಿ ತ್ರಾಸಿತಾಃ ಸುರಮಾನವಾಃ ।
ಕಲಿಂಗೋನಾಮ ದೈತ್ಯಃ ಸ ಸ್ವಯಮಿಂದ್ರೋ ಬಭೂವ ಹ ॥ ೫ ॥
ವಸವೋ ಮರುತಃ ಸಾಧ್ಯಾ ವಿಶ್ವೇದೇವಾಃ ಸುರರ್ಷಯಃ ।
ತೇನ ಸರ್ವೇ ಕೃತಾ ದೈತ್ಯಾ ಯಥಾಯೋಗ್ಯಂ ನರಾಧಿಪ ॥ ೬ ॥
ಯಜ್ಞಭಾಗಾನ್ಸ್ವಯಂ ಸರ್ವೇ ಬುಭುಜುಸ್ತೇ ಚ ದಾನವಾಃ ।
ತಪೋಽರ್ಥೇ ಚ ತತೋ ದೇವಾ ಗತಾಃ ಸರ್ವೇಽರ್ಬುದಾಚಲಂ ॥ ೭ ॥
ಅದ್ಯಾಪಿ ದೇವತಾಖ್ಯಾತಂ ತ್ರೈಲೋಕ್ಯೇ ಖ್ಯಾತಿಮಾಗತಂ ।
ತತ್ರ ವ್ರತಪರಾಃ ಸರ್ವೇ ಪತ್ರಮೂಲಫಲಾಶಿನಃ ॥ ೮ ॥
ಅವ್ಯಕ್ತಾಃ ಪರಮತ್ರಾಸಾದ್ಧ್ಯಾಯಂತಸ್ತೇ ಚ ಸಂಸ್ಥಿತಾಃ ।
ಪಂಚಾಗ್ನಿಸಾಧಕಾಃ ಕೇಚಿತ್ತತ್ರ ವ್ರತಪರಾಯಣಾಃ ॥ ೯ ॥
ಏಕಾಹಾರಾ ನಿರಾಹಾರಾ ವಾಯುಭಕ್ಷಾಸ್ತಥಾ ಪರೇ ।
ಅನ್ಯೇ ಮಾಸೋಪವಾಸಾಶ್ಚ ಚಾಂದ್ರಾಯಣಪರಾಯಣಾಃ ॥ ೧೦ ॥
ಕೃಚ್ಛ್ರಸಾಂತಪನೇ ನಿಷ್ಠಾ ಮಹಾಪಾರಾಕಿಣಃ ಪರೇ ।
ಅಂಬುಭಕ್ಷಾ ವಾಯುಭಕ್ಷಾಃ ಫೇನಪಾಶ್ಚೋಷ್ಮಪಾಃ ಪರೇ ॥ ೧೧ ॥

---

೫. ಅವನು ಸಮಸ್ತ ಸುರನರರನ್ನು ಭಯಗೊಳಿಸಿ ತಾನೇ ಇಂದ್ರನಾದನು.

೬. ದೊರೆಯೆ! ಆಗ ಕಲಿಂಗದಾನವನು ಯೋಗ್ಯತಾನುಸಾರವಾಗಿ ಸಕಲ ದೈತ್ಯರನ್ನೇ ವಸುಗಳು, ಮರುತ್ತುಗಳು, ಸಾಧ್ಯರು, ವಿಶ್ವೇದೇವತೆಗಳು, ಸುರರ್ಷಿಗಳ ನ್ನಾಗಿ ಮಾಡಿದನು.

೭. ಆ ದಾನವರೆಲ್ಲ ತಾವೇ ಯಜ್ಞಭಾಗಗಳನ್ನು ಭುಂಜಿಸಿದರು. ಅನಂತರ ಸಮಸ್ತ ದೇವತೆಗಳೂ ತಪಸ್ಸಿಗಾಗಿ ಅರ್ಬುದಾಚಲಕ್ಕೆ ಹೋದರು.

೮—೧೩. ಈಗಲೂ ಆ ತೀರ್ಥವು ಮೂರು ಲೋಕಗಳಲ್ಲಿ ಪ್ರಸಿದ್ಧವಾಗಿರುವುದು. ಆ ದೇವತೆಗಳೆಲ್ಲ ಅಲ್ಲಿ ವ್ರತನಿಷ್ಠರೂ, ಎಲೆ, ಗೆಣಸು, ಹಣ್ಣುಗಳನ್ನು ತಿನ್ನುವವರೂ, ಅವ್ಯಕ್ತರೂ ಆಗಿ ಅತ್ಯಂತ ಭಯದಿಂದ ಶಕ್ತಿದೇವತೆಯನ್ನು ಧ್ಯಾನಿಸುತ್ತ ವಾಸ ಮಾಡಿದರು. ಅವರಲ್ಲಿ ಕೆಲವರು ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನು ಮಾಡುವವರೂ ವ್ರತನಿರತರೂ, ಏಕಭುಕ್ತರೂ, ಆಹಾರವಿಲ್ಲದವರೂ, ವಾಯುವನ್ನು ಮಾತ್ರ ಸೇವಿಸುವವರೂ, ಆಗಿದ್ದರು. ಇನ್ನು ಕೆಲವರು ಒಂದು ತಿಂಗಳು ಉಪವಾಸ ಮಾಡುವವರೂ, ಚಾಂದ್ರಾಯಣ ನಿರತರೂ, ಕೃಚ್ಛ್ರಸಾಂತಪನ ವ್ರತಾಸಕ್ತರೂ, ಮಹಾಪಾರಾಕವ್ರತನಿರತರೂ ಆಗಿದ್ದರು. ಮತ್ತೆ ಕೆಲವರು ನೀರನ್ನು ಕುಡಿಯು ವವರೂ, ಗಾಳಿಯನ್ನು ಸೇವಿಸುವವರೂ, ನೊರೆಯನ್ನೂ, ಹಬೆಯನ್ನೂ ಕುಡಿಯು ವವರೂ ಆಗಿದ್ದರು. ಕೆಲವರು ಜಪಹೋಮಾಸಕ್ತರೂ, ಧ್ಯಾನನಿರತರೂ ಆಗಿದ್ದರು.

ಜಪಹೋಮಪರಾಶ್ಚಾನ್ಯೇ ಧ್ಯಾನಾಸಕ್ತಾಸ್ತಥಾ ಪರೇ ।
ಬಲಿನೈವೇದ್ಯದಾನೈಶ್ಚ ಗಂಧಧೂಪೈರ್ನರಾಧಿಪ ॥ ೧೨ ॥
ಪೂಜಯಂತಃ ಪರಾಂ ಶಕ್ತಿಂ ದೇವೀಂ ಸ್ವಕಾರ್ಯಹೇತವೇ ।
ಏವಂ ತೇಷಾಂ ವ್ರತಸ್ಥಾನಾಂ ತಪಸಾ ಭಾವಿತಾತ್ಮನಾಂ ।
ವಿಮುಕ್ತಿರಭವದ್ರಾಜನ್ಸರ್ವೇಷಾಂ ಕರ್ಮಬಂಧನಾತ್ ॥ ೧೩ ॥
ತತಃ ಪೂರ್ಣೇ ಸಹಸ್ರಾಂತೇ ವರ್ಷಾಣಾಂ ನೃಪಸತ್ತಮ ।
ದೇವೀ ಪ್ರತ್ಯಕ್ಷತಾಂ ಪ್ರಾಪ್ತಾ ಕನ್ಯಕಾರೂಪಧಾರಿಣೀ ॥ ೧೪ ॥
ಪೂರ್ವಂ ಜಾತಾ ಮಹಾರಾಜ ಧೂಮಮೂರ್ತಿರ್ಭಯಾವಹಾ ।
ತತೋ ಜ್ವಾಲಾ ತತಃ ಕನ್ಯಾ ಶುಕ್ಲವಾಸಾನುಲೇಪನಾ ।
ದೃಷ್ಟ್ವಾ ತಾಂ ತುಷ್ಟುವುರ್ದೇವಾಃ ಕೃತಾಂಜಲಿಪುಟಾಸ್ತತಃ ॥ ೧೫ ॥

ದೇವಾ ಊಚುಃ :—

ನಮೋಽಸ್ತು ಸರ್ವಗೇ ದೇವಿ ನಮಸ್ತೇ ಸರ್ವಪೂಜಿತೇ ।
ನಮಸ್ತೇ ಶಿವಗೇಽಚಿಂತ್ಯೇ ನಮಸ್ತೇ ತ್ರಿದಶಾಶ್ರಯೇ ॥ ೧೬ ॥
ನಮಸ್ತೇ ಪರಮಾದೇವಿ ಬ್ರಹ್ಮಯೋನೇ ನಮೋನಮಃ ।
ಅರ್ಧಮಾತ್ರೇಽಕ್ಷರೇ ಚೈವ ತಸ್ಯಾರ್ಧಾರ್ಧೇ ನಮೋನಮಃ ॥ ೧೭ ॥

---

ಹೀಗೆ ಅವರು ಬಲಿ, ನೈವೇದ್ಯ, ದಾನ, ಗಂಧ, ಧೂಪಗಳಿಂದ ತಮ್ಮ ಕಾರ್ಯ ಸಿದ್ಧಿಗಾಗಿ ಪರಶಕ್ತಿಯನ್ನು ಪೂಜಿಸುತ್ತಿರಲು ವ್ರತನಿರತರೂ,ತಪಸ್ವಿಗಳೂ ಆದ ಅವರಿಗೆ ಕರ್ಮ ಬಂಧನದಿಂದ ಬಿಡುಗಡೆಯಾಯಿತು.

೧೪. ಅನಂತರ ಒಂದುಸಾವಿರ ವರ್ಷವು ಕಳೆಯಲು ದೇವಿಯು ಕನ್ಯಾರೂಪ ದಿಂದ ಪ್ರತ್ಯಕ್ಷಳಾದಳು.

೧೫. ಮಹಾರಾಜ! ಮೊದಲು ಭಯಂಕರ ಹೊಗೆಯೂ, ಅನಂತರ ಜ್ವಾಲೆಯೂ ಬಳಿಕ ಶುಕ್ಲವಸ್ತ್ರವನ್ನುಧರಿಸಿ ಗಂಧಲಿಪ್ತಳಾದ ಕನ್ಯೆಯೂ ಆವಿರ್ಭವಿ ಸಿದಳು. ದೇವತೆಗಳು ಅವಳನ್ನು ಕಂಡು ಅಂಜಲಿಬದ್ಧರಾಗಿ ಸ್ತುತಿಸಿದರು.

೧೬. ದೇವತೆಗಳು ಹೇಳುತ್ತಾರೆ:—ಸರ್ವವ್ಯಾಪಿನಿಯೂ, ಸಮಸ್ತರಿಂದ ಪೂಜಿಸಲ್ಪಟ್ಟವಳೂ, ಸ್ವೇಚ್ಛೆಯಿಂದ ಸಂಚರಿಸುವವಳೂ, ಅಚಿಂತ್ಯಳೂ, ದೇವತೆಗಳಿಗೆ ಆಶ್ರಯಳೂ ಆದ ಓ ದೇವಿ! ನಿನಗೆ ನಮಸ್ಕಾರವು.

೧೭. ಉತ್ತಮ ದೇವಿಯೂ, ಬ್ರಹ್ಮನಿಗೆ ಕಾರಣಳೂ, ಅರ್ಧಮಾತ್ರಾರೂಪಳೂ, ಅಕ್ಷರಳೂ, ಅದರ ಅರ್ಧಾರ್ಧರೂಪಳೂ ಆದ ಎಲೈ ದೇವಿಯೆ! ನಿನಗೆ ನಮಸ್ಕಾರವು.

ನಮಸ್ತೇ ಪದ್ಮಪತ್ರಾಕ್ಷಿ ವಿಶ್ವಮಾತರ್ವರೋಪಮಃ ।
ನಮಸ್ತೇ ವರದೇ ದೇವಿ ರಜಃಸತ್ತ್ವತಮೋಮಯಿ ॥ ೧೮ ॥
ಸ್ವಸ್ವರೂಪಸ್ಥಿತೇ ದೇವಿ ತ್ವಂ ಚ ಸಂಸಾರಲಕ್ಷಣಂ ।
ತ್ವಂ ಬುದ್ಧಿಸ್ತ್ವಂ ಧೃತಿಃ ಕ್ಷಾಂತಿಸ್ತ್ವಂ ಸ್ವಾಹಾ ತ್ವಂ ಸ್ವಧಾ ಕ್ಷಮಾ ॥ ೧೯ ॥
ತ್ವಂ ವೃದ್ಧಿಸ್ತ್ವಂ ಗತಿಃ ಕರ್ತ್ರೀ ಶಚೀ ಲಕ್ಷ್ಮೀಶ್ಚ ಪಾರ್ವತೀ ।
ಸಾವಿತ್ರೀ ತ್ವಂ ಚ ಗಾಯತ್ರೀ ಅಜೇಯಾ ಪಾಪನಾಶಿನೀ ॥ ೨೦ ॥
ಯಚ್ಚಾನ್ಯದತ್ರ ದೇವೇಶಿ ತ್ರೈಲೋಕ್ಯೇಽಸ್ತೀತಿ ಸಂಜ್ಞಿತಂ ।
ತದ್ರೂಪಂ ತಾವಕಂ ದೇವಿ ಪರ್ವತೇಷು ಚ ಸಂಸ್ಥಿತಂ ॥ ೨೧ ॥
ವಹ್ನಿನಾ ಚ ಯಥಾ ಕಾಷ್ಠಂ ತಂತುನಾ ಚ ಯಥಾ ಪಟಃ ।
ತಥಾ ತ್ವಯಾ ಜಗದ್ವ್ಯಾಪ್ತಂ ಗುಪ್ತಾ ತ್ವಂ ಸರ್ವತಃ ಸ್ಥಿತಾ ॥ ೨೨ ॥

ಪುಲಸ್ತ್ಯ ಉವಾಚ :—

ಏವಂ ಸ್ತುತಾ ಜಗನ್ಮಾತಾ ತಾನುವಾಚ ಸುರೋತ್ತಮಾನ್ ।
ವರೋ ಮೇ ಯಾಚ್ಯತಾಂ ಶೀಘ್ರಮಭೀಷ್ಟಃ ಸುರಸತ್ತಮಾಃ ॥ ೨೩ ॥

---

೧೮. ಪದ್ಮದಳದಂತೆ ಕಣ್ಣುಳ್ಳವಳೂ, ಪ್ರಪಂಚಮಾತೆಯೂ, ವರವನ್ನು ಕೊಡುವವಳೂ,ರಜಃ, ಸತ್ವ, ತಮೋಗುಣ ಸ್ವರೂಪಳೂ ಆದ ಓ ದೇವಿಯೆ! ನಿನಗೆ ನಮಸ್ಕಾರವು.

೧೯. ಸ್ವಂಸ್ವ ರೂಪದಿಂದ ಇರುವ ದೇವಿಯೆ! ನೀನು ಸಂಸಾರ ಲಕ್ಷಣಳೂ, ಬುದ್ಧಿ, ಧೃತಿ, ಕ್ಷಾಂತಿ, ಸ್ವಾಹಾ, ಸ್ವಧಾ, ಕ್ಷಮಾರೂಪಳೂ ಆಗಿರುವೆ.

೨೦. ನೀನು ವೃದ್ಧಿ, ಗತಿ, ಕರ್ತ್ರೀ, ಶಚೀ, ಲಕ್ಷ್ಮೀ, ಪಾರ್ವತೀ, ಸಾವಿತ್ರೀ, ಗಾಯತ್ರೀ,ರೂಪಳೂ, ಜಯಸಲಶಕ್ಯಳೂ, ಪಾಪವನ್ನು ಪರಿಹರಿಸುವವಳೂ ಆಗಿರುವೆ.

೨೧. ದೇವೇಶಿ! ಇನ್ನೂ ಮೂರುಲೋಕಗಳಲ್ಲಿಯೂ, ಪರ್ವತಗಳಲ್ಲಿಯೂ ಯಾವ ಯಾವ ವಸ್ತುಗಳಿರುವುವೊ, ನೀನು ಅವುಗಳೆಲ್ಲವುಗಳ ಸ್ವರೂಪಳಾಗಿರುವೆ.

೨೨. ಬೆಂಕಿಯಿಂದ ಕಟ್ಟಿಗೆಯಂತೆಯೂ, ನೂಲಿನಿಂದ ಬಟ್ಟೆಯಂತೆಯೂ, ನಿನ್ನಿಂದ ಜಗತ್ತು ವ್ಯಾಪ್ತವಾಗಿರುವುದು. ನೀನು ಎಲ್ಲೆಡೆಯಲ್ಲಿಯೂ ಇರುವೆ.

೨೩. ಪುಲಸ್ತ್ಯನು ಹೇಳುತ್ತಾನೆ :—ದೇವತೆಗಳು ಹೀಗೆ ಸ್ತುತಿಸಲು ಜಗನ್ಮಾತೆಯು ಅವರನ್ನು ಕುರಿತು ಇಂತೆಂದಳು. ಸುರವರ್ಯರೆ! ನೀವು ಶೀಘ್ರವಾಗಿ ಇಷ್ಟವಾದ ವರವನ್ನು ಬೇಡಿರಿ.

ಕಿಮತ್ರ ಗುಪ್ತಭಾವೇನ ತಿಷ್ಠಥ ಶ್ವಭ್ರಮಧ್ಯಗಾಃ ।
ಮದ್ಭಕ್ತಾನಾಂ ಭಯಂ ನಾಸ್ತಿ ತ್ರೈಲೋಕ್ಯೇಽಪಿ ಚರಾಚರೇ ॥ ೨೪ ॥
ದೇವಾ ಊಚುಃ :—
ಕಲಿಂಗೇನ ವಯಂ ದೇವಿ ನಿರಸ್ತಾಃ ಸಂಗರೇ ಮುಹುಃ ।
ತೇನ ವ್ಯಾಪ್ತಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೨೫ ॥
ಯಜ್ಞಭಾಗೋ ಹೃತೋಽಸ್ಮಾಕಂ ದೈತ್ಯಾನಾಂ ಸ ಪ್ರಕಲ್ಪಿತಃ ।
ತೇನ ಸ್ವರ್ಗಃ ಸಮಾಕ್ರಾಂತಃ ಸುರಾಃ ಸರ್ವೇ ನಿರಾಕೃತಾಃ ॥ ೨೬ ॥
ಹತ್ವಾ ದೈತ್ಯಾನ್ಯಥಾ ಭೂಯಃ ಶಕ್ರಃ ಸ್ವಪದಮಾಪ್ನುಯಾತ್ ।
ತಥಾ ಕುರು ಮಹಾಭಾಗೇ ವರ ಏಷೋಽಸ್ಮದೀಪ್ಸಿತಃ ॥ ೨೭ ॥
ದೇವ್ಯುವಾಚ :—
ಯಥಾ ಯೂಯಂ ಮಯಾ ಸೃಷ್ಟಾಸ್ತಥೈವಾಯಂ ಮಹಾಸುರಃ ।
ವಿಶೇಷೋ ನಾಸ್ತಿ ಮೇ ಕಶ್ಚಿದುಭಯೋಃ ಸುರಸತ್ತಮಾಃ ॥ ೨೮ ॥
ತಸ್ಮಾತ್ತಾನ್ವಾರಯಿಷ್ಯಾಮಿ ಶಕ್ರಾದ್ಯಾಂಸ್ತ್ರಿದಿವಾತ್ಪುನಃ ।
ಏವಮುಕ್ತ್ವಾ ವರಾರೋಹಾ ಪ್ರೇಷಯಾಮಾಸ ಪಾರ್ಥಿವ ॥ ೨೯ ॥

---

೨೪. ನೀವು ಏಕೆ ಈ ಕುಣಿಯ ನಡುವೆ ಗುಟ್ಟಾಗಿ ಅವಿತಿರುವಿರಿ ? ಚರಾಚರಾತ್ಮಕವಾದ ಈ ಪ್ರಪಂಚದಲ್ಲಿ ನನ್ನ ಭಕ್ತರಿಗೆ ಭಯವಿಲ್ಲ.

೨೫. ದೇವತೆಗಳು ಹೇಳುತ್ತಾರೆ :—ದೇವಿ ! ಕಲಿಂಗನು ಯುದ್ಧದಲ್ಲಿ ನಮ್ಮನ್ನು ಓಡಿಸಿರುವನು. ಅವನು ಚರಾಚರಾತ್ಮಕವಾದ ಮೂರುಲೋಕಗಳನ್ನೂ ವ್ಯಾಪಿಸಿರುವನು.

೨೬. ಅವನು ನಮ್ಮ ಯಜ್ಞಭಾಗವನ್ನು ಅಪಹರಿಸಿ ದೈತ್ಯರಿಗೆ ಕೊಟ್ಟಿರುವನು. ಸ್ವರ್ಗವನ್ನು ಆಕ್ರಮಿಸಿ ದೇವತೆಗಳನ್ನು ಅಲ್ಲಿಂದ ಹೊರಡಿಸಿರುವನು.

೨೭. ಮಹಾತ್ಮಳೆ ! ದೇವರಾಜನು ದೈತ್ಯರನ್ನು ವಧಿಸಿ ತನ್ನ ಸ್ಥಾನವನ್ನು ಪಡೆಯುವಂತೆ ಮಾಡು. ಇದೇ ನಮಗಿಷ್ಟವಾದ ವರವು.

೨೮. ದೇವಿಯು ಹೇಳುತ್ತಾಳೆ :—ನಾನು ನಿಮ್ಮನ್ನು ಸೃಷ್ಟಿಸಿರುವಂತೆ ಈ ಕಲಿಂಗ ದೈತ್ಯನನ್ನೂ ಸೃಷ್ಟಿಮಾಡಿದ್ದೇನೆ. ಸುರವರ್ಯರಿರಾ ! ನನಗೆ ದೇವದಾನವರಲ್ಲಿ ಭೇದವಿಲ್ಲ.

೨೯-೩೦: ಆದ್ದರಿಂದ ಆ ದಾನವರನ್ನು ದೇವಲೋಕದಿಂದ ತಡೆಯುವೆನು. ಹೀಗೆಂದುಹೇಳಿ, ಆ ಶ್ರೀಮಾತೆಯು ದೂತನಮೂಲಕ ಕಲಿಂಗದೈತ್ಯನಿಗೆ ನೀನುಸ್ವರ್ಗ

ದೂತಂ ಕಲಿಂಗದೈತ್ಯಾಯ ತ್ಯಜ ತ್ವಂ ತ್ರಿದಿವಂ ದ್ರುತಂ ।
ಸ ಗತ್ವಾ ಬಾಷ್ಕಲಿಂ ದೈತ್ಯಂ ಸಾಮಪೂರ್ವಂ ವಚೋಽಬ್ರವೀತ್ ॥ ೩೦ ॥

ದೂತ ಉವಾಚ :—

ಯಾ ಸಾ ಸರ್ವಗತಾ ದೇವೀ ಶಕ್ತಿರೂಪಾ ಶುಚಿಸ್ಮಿತಾ ।
ಶ್ರೀಮಾತಾ ಜಗತಾಂ ಮಾತಾ ದೇವೈರಾರಾಧಿತಾ ಪರಾ ।
ತೇಷಾಂ ತುಷ್ಟಾ ಚ ದೇವೀ ತ್ವಾಮಿದಂ ವಚನಮಬ್ರವೀತ್ ॥ ೩೧ ॥
ಸ್ವಸ್ಥಾನಂ ಗಚ್ಛ ಶೀಘ್ರಂ ತ್ವಂ ಶಕ್ರೋ ಯಾತು ತ್ರಿವಿಷ್ಟಪಂ ।
ಮದ್ವಾಕ್ಯಾದ್ದಾನವಶ್ರೇಷ್ಠ ದೇವತ್ವಂ ನ ಭವೇತ್ತವ ॥ ೩೨ ॥

ಪುಲಸ್ತ್ಯ ಉವಾಚ :—

ಸ ದೂತವಚನಂ ಶ್ರುತ್ವಾ ದಾನವೋ ಮದಗರ್ವಿತಃ ।
ಅಹಂ ಲೋಕೇಶ್ವರೋ ಮತ್ವಾ ಸಗರ್ವಮಿದಮಬ್ರವೀತ್ ॥ ೩೩ ॥

ಬಾಷ್ಕಲಿರುವಾಚ :—

ಕಾ ಶ್ರೀಮಾತೇತಿ ಕೇ ದೇವಾ ನಾಸ್ಮತ್ಸ್ವರ್ಗಂ ತ್ಯಜಾಮ್ಯಹಂ ।
ನ ತಾಂ ಜಾನಾಮಿ ತಾಂಶ್ಚೈವ ಗತ್ವಾ ಬ್ರೂಹಿ ಮಮಾಜ್ಞಯಾ ॥ ೩೪ ॥

---

ವನ್ನು ಕೂಡಲೆ ಬಿಡೆಂದು ಹೇಳಿಕಳುಹಿಸಿದಳು. ಆ ದೂತನು ಕಲಿಂಗ ದೈತ್ಯನನ್ನು ಹೊಂದಿ ಸಮಾಧಾನದಿಂದ ದೇವಿಯ ಆಜ್ಞೆಯನ್ನು ತಿಳಿಸಿದನು.

೩೧. ದೂತನು ಹೇಳುತ್ತಾನೆ :—ಸರ್ವವ್ಯಾಪಿನಿಯೂ, ಶಕ್ತಿರೂಪಳೂ, ಶುದ್ಧವಾದ ನಗೆಯುಳ್ಳವಳೂ, ಜಗನ್ಮಾತೆಯೂ ಆದ ಶ್ರೀಮಾತೆಯು ದೇವತೆಗಳಿಂದ ಆರಾಧಿಸಲ್ಪಟ್ಟವಳಾಗಿ ಅವರಿಗೊಲಿದು ನಿನ್ನನ್ನು ಕುರಿತು ಇಂತೆಂದಳು.

೩೨. "ದಾನವೋತ್ತಮ! ನೀನು ನನ್ನ ಮಾತಿನಿಂದ ಶೀಘ್ರವಾಗಿ ನಿನ್ನ ಸ್ಥಳಕ್ಕೆ ಹೋಗು. ದೇವರಾಜನು ಸ್ವರ್ಗಕ್ಕೆ ಹೋಗಲಿ. ನಿನಗೆ ದೇವತ್ವವುಂಟಾಗಲಾರದು".

೩೩. ಪುಲಸ್ತ್ಯನು ಹೇಳುತ್ತಾನೆ :—ಆ ದಾನವನು ದೂತನ ಮಾತನ್ನು ಕೇಳಿ ಮದಗೊಂಡು ನಾನು ಲೋಕೇಶ್ವರನೆಂದರಿತು ಅಹಂಕಾರದಿಂದ ಇಂತೆಂದನು.

೩೪. ಬಾಷ್ಕಲಿಯು ಹೇಳುತ್ತಾನೆ :—ಶ್ರೀಮಾತೆಯಾರು ? ದೇವತೆಗಳಾರು ? ನಾನು ಸ್ವರ್ಗವನ್ನು ಬಿಡಲಾರೆನು. ನಾನು ಅವಳನ್ನೂ, ಆ ದೇವತೆಗಳನ್ನೂ ಅರಿಯೆನೆಂದು ನನ್ನ ಅಪ್ಪಣೆಯಂತೆ ಅಲ್ಲಿಗೆ ಹೋಗಿ ಹೇಳು,

ನ ಭವದ್ಭ್ಯಸ್ತ್ವಹಂ ಸ್ವರ್ಗಂ ಪ್ರಯಚ್ಛಾಮಿ ಕಥಂಚನ ।
ದೂತೋಽವಧ್ಯೋ ಭವೇದ್ರಾಜ್ಞಾಮಪಿ ವೈರೇ ಸುದಾರುಣೇ ।
ಏತಸ್ಮಾತ್ಕಾರಣಾದ್ದೂತ ನ ತ್ವಾಂ ಪ್ರಾಣೈರ್ವಿಯೋಜಯೇ ॥ ೩೫ ॥
ಶ್ರೀಮಾತಾಂ ಯದಿ ಮೇ ದೂತ ದರ್ಶಯಿಷ್ಯಸಿ ಚೇತ್ತತಃ ।
ಅಭೀಷ್ಟಾನ್ಸಂಪ್ರದಾಸ್ಯಾಮಿ ಸತ್ಯಮೇವ ಬ್ರವೀಮ್ಯಹಂ ॥ ೩೬ ॥
ಅಹಂ ತ್ವಯಾ ಸಮಂ ತತ್ರ ಗಮಿಷ್ಯೇ ಯತ್ರ ಸ್ಥಿತಾ ಚ ಸಾ ।
ನಿಗ್ರಹಂ ಚ ಕರಿಷ್ಯಾಮಿ ವಾಕ್ಯಂ ಮೇ ಸತ್ಯಕಾರಣಂ ॥ ೩೭ ॥

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ಮದೋನ್ಮತ್ತೋ ದೂತೇನ ಚ ಸ ದಾನವಃ ।
ಅರ್ಬುದಂ ಪ್ರಯಯೌ ತೂರ್ಣಂ ರೋಷೇಣ ಮಹತಾ ವೃತಃ ॥ ೩೮ ॥
ದೃಷ್ಟ್ವಾ ಬಾಷ್ಕಲಿನಾಯಾಂತಂ ದೇವಾಃ ಶಕ್ರಪುರೋಗಮಾಃ ।
ವಾರ್ಯಮಾಣಾಸ್ತದಾ ದೇವ್ಯಾ ಪಲಾಯನಪರಾಯಣಾಃ ॥ ೩೯ ॥
ಭಯೇನ ಮಹತಾವಿಷ್ಟಾ ದಿಶೋ ಭೇಜುಃ ಸಮಂತತಃ ।
ಅಥಾಸೌ ಬಾಷ್ಕಲಿಃ ಪ್ರಾಪ್ತಃ ಸೈನ್ಯೇನ ಮಹತಾ ವೃತಃ ॥ ೪೦ ॥
ಶ್ರೀಮಾತಾ ತಿಷ್ಠತೇ ಯತ್ರ ಪರ್ವತೇಽರ್ಬುದಸಂಜ್ಞಕೇ ।
ದೂತಂ ಚ ಪ್ರೇಷಯಾಮಾಸ ತಮುವಾಚ ನರಾಧಿಪಃ ॥ ೪೧ ॥

---

೩೫. ನಾನು ಯಾವ ಬಗೆಯಿಂದಲೂ ನಿಮಗೆ ಸ್ವರ್ಗವನ್ನು ಕೊಡಲಾರೆನು. ಭಯಂಕರವಾದ ದ್ವೇಷದಲ್ಲಿಯೂ ರಾಜರು ದೂತನನ್ನು ಕೊಲ್ಲಬಾರದಾದ ಕಾರಣ ನಾನು ನಿನ್ನನೀಗ ಕೊಲ್ಲುವುದಿಲ್ಲ.

೩೬. ದೂತ ! ನೀನು ನನಗೆ ಶ್ರೀಮಾತೆಯನ್ನು ತೋರಿಸಿದರೆ ನಿನಗೆ ಇಷ್ಟಾರ್ಥವನ್ನು ನೀಡುವೆನು. ಇದು ನಿಜ.

೩೭. ನಾನು ನಿನ್ನೊಡನೆ ಅವಳಿರುವ ಸ್ಥಳಕ್ಕೆ ಬಂದು ಅವಳನ್ನು ಕೊಲ್ಲುವೆನು. ಈ ನನ್ನ ಮಾತು ನಿಜವಾದುದು.

೩೮. ಪುಲಸ್ತ್ಯನು ಹೇಳುತ್ತಾನೆ: —ಮದೋನ್ಮತ್ತನಾದ ಆ ದೈತ್ಯನು ಹೀಗೆಂದು ನುಡಿದು ದೂತನೊಡನೆಶೀಘ್ರವಾಗಿ ಅತ್ಯಂತಕೋಪದಿಂದ ಅರ್ಬುದಾಚಲಕ್ಕೆ ಹೋದನು.

೩೯. ಹೀಗೆ ಕನಲಿ ಬರುತ್ತಿರುವ ಕಲಿಂಗ ದಾನವನನ್ನು ಇಂದ್ರನೇ ಮೊದಲಾದ ದೇವತೆಗಳು ನೋಡಿ ದೇವಿಯು ತಡೆಯುತ್ತಿದ್ದರೂ ಓಡಲುದ್ಯುಕ್ತರಾದರು.

೪೦—೪೧. ಅವರು ಅತಿ ಭಯದಿಂದ ದಿಕ್ಕು ದಿಕ್ಕುಗಳನ್ನು ಸೇರಿದರು. ಬಳಿಕ ಈ ಕಲಿಂಗ ದಾನವನು ದೊಡ್ಡ ಸೈನ್ಯದೊಡನೆ ಶ್ರೀಮಾತೆಯಿರುವ ಅರ್ಬುದ ಪರ್ವತಕ್ಕೆ ಬಂದು ದೂತನಿಗೆ ಹೀಗೆ ಹೇಳಿಕಳುಹಿಸಿದನು.

ಬಾಷ್ಕಲಿರುವಾಚ :—

ಗಚ್ಛ ದೂತವರ ಬ್ರೂಹಿ ಶ್ರೀಮಾತರಮನಿಂದಿತಾಂ ।
ಭಾರ್ಯಾ ಮೇ ಭವ ಸುಶ್ರೋಣಿ ಅಹಂ ತೇ ವಶಗಃ ಸದಾ ॥ ೪೨ ॥
ಭವಿಷ್ಯತಿ ಹಿ ಮೇ ರಾಜ್ಯಂ ಸರ್ವಂ ವಶಗತಂ ತವ ।
ಅನ್ಯಥಾ ಧರ್ಷಯಿಷ್ಯಾಮಿ ಸರ್ವೈಃ ಸಾರ್ಧಂ ಸುರೋತ್ತಮೈಃ ॥ ೪೩ ॥
ಕಿಮಿಂದ್ರೇಣಾಲ್ಪವೀರ್ಯೇಣ ಕಿಮನ್ಯೈಶ್ಚ ವರಾನನೇ ।
ಸಹಸ್ರಾಕ್ಷೋ ನ ಮೇ ತುಲ್ಯೋ ನ ಮೇ ತುಲ್ಯಾಃ ಸುರಾಸುರಾಃ ॥ ೪೪ ॥

ಪುಲಸ್ತ್ಯ ಉವಾಚ :—

ಏತಚ್ಛ್ರುತ್ವಾ ತತೋ ಗತ್ವಾ ಸ ದೂತಃ ಸಂನ್ಯವೇದಯತ್ ।
ತಸ್ಯ ಸರ್ವಂ ಯಥಾವಾಕ್ಯಂ ತೇನೋಕ್ತಂ ಚ ಮಹೀಪತೇ ॥ ೪೫ ॥
ತತಃ ಶ್ರುತ್ವಾ ಸ್ಮಿತಂ ಕೃತ್ವಾ ಚಿಂತಯಾಮಾಸ ಭಾಮಿನೀ ।
ಜರಾಮರಣಹೀನೋಽಯಂ ದೈತ್ಯೇಂದ್ರಃ ಶಂಭುನಾ ಕೃತಃ ॥ ೪೬ ॥
ಕಥಮಸ್ಯ ಮಯಾ ಕಾರ್ಯೋ ನಿಗ್ರಹೋ ದೇವತಾಕೃತೇ ।
ಪುನಶ್ಚಿಂತಯತೇ ಯಾವತ್ತಾ ದೇವೀ ದಾನವಂ ಪ್ರತಿ ।
ತಾವತ್ತತ್ರಾಗತಃ ಶೀಘ್ರಂ ಸ ಕಾಮೇನ ಪರಿಪ್ಲುತಃ ॥ ೪೭ ॥

---

೪೨–೪೩. ಬಾಷ್ಕಲಿಯು (ಕಲಿಂಗ ದಾನವನು) ಹೇಳುತ್ತಾನೆ :— ದೂತನೇ ! ನೀನು ಅನಿಂದಿತೆಯಾದ ಆ ಶ್ರೀಮಾತೆಯೆಡೆಗೆ ಹೋಗಿ ಅವಳನ್ನು ಕುರಿತು, " ನೀನು ನನಗೆ ರಾಣಿಯಾಗು. ಯಾವಾಗಲೂ ನಾನು ನಿನ್ನ ಅಧೀನದಲ್ಲಿರುವೆನು. ನನ್ನ ರಾಜ್ಯವನ್ನೆಲ್ಲ ನಿನ್ನ ಅಧೀನ ಮಾಡುವೆನು. ಹಾಗೆ ಮಾಡದಿದ್ದರೆ ಸಕಲ ದಾನವರೊಡನೆ ನಿನ್ನನ್ನು ಹಿಂಸಿಸುವೆನು.

೪೪. ಸ್ವಲ್ಪ ಶಕ್ತಿಯುಳ್ಳ ಇಂದ್ರನಿಂದಲೂ, ಇತರರಿಂದಲೂ ಏನುಪ್ರಯೋಜನ? ಆ ಇಂದ್ರನೂ ಇತರ ಸುರಾಸುರರೂ ನನಗೆ ಸಮಾನರಲ್ಲ.

೪೫. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ದೂತನು ಅವನು ಹೇಳಿದ ಮಾತನ್ನೆಲ್ಲ ಶ್ರೀಮಾತೆಯೆಡೆಗೆ ಹೋಗಿ ತಿಳಿಸಿದನು.

೪೬. ಅದನ್ನು ಕೇಳಿ ಶ್ರೀಮಾತೆಯು ನಕ್ಕು, 'ಮಹೇಶ್ವರನು ಇವನಿಗೆ ಮುಪ್ಪು ಮರಣಗಳಿಲ್ಲದಂತೆ ಮಾಡಿರುವನು.

೪೭. ದೇವತೆಗಳಿಗಾಗಿ ನಾನು ಇವನನ್ನು ಹೇಗೆ ವಧಿಸಲಿ?' ಎಂದು ಆಲೋಚಿಸುತ್ತಿರಲು ಆ ದಾನವನು ಕಾಮಪೀಡಿತನಾಗಿ ಶೀಘ್ರವಾಗಿ ಅವಳೆಡೆಗೆ ಬಂದನು.

ಅಥ ದೃಷ್ಟಿನಿಪಾತೇನ ಸಾ ದೇವೀ ದಾನವಾಧಿಪಂ ।
ವ್ಯಲೋಕಯತ್ತತಸ್ತಸ್ಯಾ ನಿಶ್ಚಯಃ ಸಂಬಭೂವ ಹ ॥ ೪೮ ॥
ತತೋ ಜಹಾಸ ಸಾ ದೇವೀ ಶನಕೈರ್ಸ್ಸಪಸತ್ತಮ ।
ಮುಖಾತ್ತಸ್ಯಾಸ್ತತಃ ಸೈನ್ಯಂ ನಿಷ್ಕ್ರಾಂತಮತಿಭೀಷಣಂ ॥ ೪೯ ॥
ಹಸ್ತಿನೋ ಹಯವರ್ಯಾಶ್ಚ ಪಾದಾತಾಶ್ಚ ಪೃಥಗ್ವಿಧಾಃ ।
ರಥಸಾಹಸ್ರಮಾರೂಢಾ ಯೋಧಾಶ್ಚಾಪಿ ಸಹಸ್ರಶಃ ॥ ೫೦ ॥
ತೈಃ ಸೈನ್ಯಂ ದಾನವೇಶಸ್ಯ ಸರ್ವಂ ಶಸ್ತ್ರೈರ್ನಿಪಾತಿತಂ ।
ಪಶ್ಯತಸ್ತಸ್ಯ ದೈತ್ಯಸ್ಯ ನಿಶ್ಚಲಸ್ಯಾಸುರಸ್ಯ ಚ ॥ ೫೧ ॥
ಹತೇ ಸೈನ್ಯಬಲೇ ತಸ್ಮಿನ್ನಿಂದ್ರಾದ್ಯಾಸ್ತ್ರಿದಿವೌಕಸಃ ।
ತಾಮೂಚುರ್ವಚನಂ ದೇವಿ ದಾನವಂ ಹಂತುಮರ್ಹಸಿ ।
ನಾಸ್ಮಿಞ್ಜೀವತಿ ನೋ ರಾಜ್ಯಂ ಸ್ವರ್ಗೇ ದೇವಿ ಭವಿಷ್ಯತಿ ॥ ೫೨ ॥

ಪುಲಸ್ತ್ಯ ಉವಾಚ :—

ಶ್ರುತ್ವಾ ತದ್ವಚನಂ ತೇಷಾಂ ಜ್ಞಾತ್ವಾ ತಂ ಮೃತ್ಯುವರ್ಜಿತಂ ।
ಪರ್ವತಸ್ಯ ಮಹಾಶೃಂಗಂ ದತ್ವಾ ತಸ್ಯೋಪರಿ ಸ್ವಯಂ ॥ ೫೩ ॥

---

೪೮. ಅನಂತರ ಆ ಶ್ರೀಮಾತೆಯು ಆ ದಾನವನನ್ನು ನೋಡಲು ಅವಳಿಗೆ ಕರ್ತವ್ಯ ವಿಷಯದಲ್ಲಿ ನಿಶ್ಚಯವು ಹೊಳೆಯಿತು.

೪೯. ತರುವಾಯ ಅವಳು ಮೆಲ್ಲನೆ ನಗಲು ಅವಳ ಬಾಯಿಯಿಂದ ಅತ್ಯಂತ ಭಯಂಕರವಾದ ಸೈನ್ಯವು ಹೊರಟಿತು.

೫೦. ಆ ಸೈನ್ಯದಲ್ಲಿ ಆನೆಗಳೂ, ಉತ್ತಮವಾದ ಕುದುರೆಗಳೂ, ನಾನಾಬಗೆಯ ಕಾಲಾಳುಗಳೂ, ಸಾವಿರಾರು ರಥವನ್ನೇರಿದ ಸಾವಿರಾರು ಮಂದಿ ಭಟರೂ ಇದ್ದರು.

೫೧. ಆ ದೇವೀಸೈನ್ಯವು ಆ ಕಲಿಂಗ ದೈತ್ಯನು ನಿಶ್ಚಲವಾಗಿ ನೋಡುತ್ತಿರುವಾಗಲೆ ಅವನ ಸೈನ್ಯವನ್ನು ಬಾಣಗಳಿಂದ ಕೆಡವಿತು.

೫೨. ಅವನ ಸೈನ್ಯವನ್ನೆಲ್ಲ ಕೊಲ್ಲಲು ಇಂದ್ರಾದಿ ದೇವತೆಗಳು ದೇವಿಯನ್ನು ಕುರಿತು, 'ನೀನು ಈ ದಾನವನನ್ನು ವಧಿಸು. ಇವನು ಬದುಕಿರಲು ನಮ್ಮ ಸ್ವರ್ಗರಾಜ್ಯವು ಉಳಿಯುವುದಿಲ್ಲ' ಎಂದರು.

೫೩–೫೪. ಪುಲಸ್ತ್ಯನು ಹೇಳುತ್ತಾನೆ :—ದೇವಿಯು ದೇವತೆಗಳ ಮಾತನ್ನು ಕೇಳಿ ಅವನಿಗೆ ಸಾವಿಲ್ಲವೆಂಬುದನ್ನರಿತು ಅವನಮೇಲೆ ಪರ್ವತ ಶಿಖರವನ್ನಿರಿಸಿ ಅವನ ಮೇಲೆ ಕಾಮರೂಪಿಣಿಯಾದ ತಾನು ನಿಂತಳು, ದೊರೆಯೆ ! ಅವಳು ಈಗಲೂ

ನಿವಿಷ್ಟಾ ಸಾ ಜಗನ್ಮಾತಾ ಶ್ರೀಮಾತಾ ಕಾಮರೂಪಿಣೀ ।
ಹಿತಾಯ ಜಗತಾಂ ರಾಜನ್ನದ್ಯಾಪಿ ಪರಪರ್ವತೇ ।
ತತ್ರೈವ ವಸತೇ ಸಾಕ್ಷಾನ್ನೃಣಾಂ ಕಾಮಪ್ರದಾಯಿನೀ ॥ ೩೪ ॥
ಏತಸ್ಮಿನ್ನೇವ ಕಾಲೇ ತು ಸರ್ವೇ ದೇವಾಃ ಸವಾಸವಾಃ ।
ತುಷ್ಟುವುಸ್ತಾಂ ಮಹಾಶಕ್ತಿಂ ಭಯಹಂತ್ರೀಂ ಪ್ರಹರ್ಷಿತಾಃ ॥ ೩೫ ॥
ಪ್ರಸನ್ನಾಽಭೂತ್ತತೋ ದೇವೀ ತೇಷಾಂ ತತ್ರ ನರಾಧಿಪ ।
ಸ್ವಂಸ್ವಂ ಸ್ಥಾನಂ ಸುರಾಃ ಸರ್ವೇ ಪರಿಯಾಂತು ಗತವ್ಯಥಾಃ ।
ಗತ್ವಾ ಸ್ಥಾನಂ ಸ್ವಕಂ ಚಕ್ರೇ ಪರಿಪಾಂತು ಗತವ್ಯಥಾಃ ॥ ೩೬ ॥
ವರಂ ವರಯ ದೇವೇಂದ್ರ ಬ್ರೂಹಿ ಯತ್ತೇ ಮನೋಗತಂ ।
ತತ್ಸರ್ವಂ ಸಂಪ್ರದಾಸ್ಯಾಮಿ ತುಷ್ಟಾಹಂ ಭಕ್ತಿತಸ್ತವ ॥ ೩೭ ॥

ಇಂದ್ರ ಉವಾಚ :—

ಯದಿ ತುಷ್ಟಾಸಿ ಮೇ ದೇವಿ ಶಾಶ್ವತೇ ಭಕ್ತಿವತ್ಸಲೇ ।
ಅತ್ರೈವ ಸ್ಥೀಯತಾಂ ತಾವತ್ಸ್ವರ್ಗೇ ಯಾವದಹಂ ವಿಭುಃ ॥ ೩೮ ॥
ಪ್ರಶಾಸ್ಮಿ ರಾಜ್ಯಂ ದೇವೇಶಿ ಶಾಶ್ವತೇ ಭಕ್ತವತ್ಸಲೇ ।
ಅಜರಶ್ಚಾಮರಶ್ಚೈವ ಯತೋ ದೈತ್ಯಃ ಸುರೇಶ್ವರಿ ॥ ೩೯ ॥

---

ಜಗತ್ತಿನ ಹಿತಕ್ಕಾಗಿ ಆ ಉತ್ತಮ ಪರ್ವತದಲ್ಲಿ ಮನುಷ್ಯರಿಗೆ ಇಷ್ಟಾರ್ಥವನ್ನು ನೀಡುತ್ತ ವಾಸಿಸುತ್ತಿರುವಳು.

೩೫. ಈ ಸಮಯದಲ್ಲಿ ಇಂದ್ರಾದಿ ಸಮಸ್ತ ದೇವತೆಗಳು ಹರ್ಷಗೊಂಡು ಆ ಮಹಾಶಕ್ತಿದೇವತೆಯನ್ನು ಸ್ತುತಿಸಿದರು.

೩೬. ದೊರೆಯೆ ! ಅನಂತರ ದೇವಿಯು ಅವರಿಗೊಲಿದು, "ದೇವತೆಗಳೆ ! ನೀವು ವ್ಯಥೆಯಿಲ್ಲದೆ ನಿಮ್ಮ ನಿಮ್ಮ ಸ್ಥಾನಕ್ಕೆ ತೆರಳಿರಿ. ಅಲ್ಲಿ ನಿಮ್ಮ ನಿಮ್ಮ ಸ್ಥಾನವನ್ನು ಸುಖದಿಂದ ಕಾಪಾಡಿರಿ.

೩೭. ದೇವೇಂದ್ರ ! ನಾನು ನಿನ್ನ ಭಕ್ತಿಗೆ ಮೆಚ್ಚಿರುವೆನು. ನಿನಗಿಷ್ಟವಾದ ವರವನ್ನು ಕೇಳಿಕೊ. ಅದನ್ನೆಲ್ಲ ಕೊಡುವೆನು" ಎಂದಳು.

೩೮–೪೦. ಇಂದ್ರನು ಹೇಳುತ್ತಾನೆ :—ಶಾಶ್ವತಳೂ, ಭಕ್ತಿಪ್ರಿಯಳೂ ಆದ ದೇವಿಯೆ ! ನೀನು ನನ್ನಲ್ಲಿ ಸಂತುಷ್ಟಳಾಗಿದ್ದರೆ ನಾನು ಸ್ವರ್ಗರಾಜ್ಯವನ್ನು ಆಳುತ್ತಿರುವ ವರೆಗೆಶಿವನು ಮುಪ್ಪುಮರಣಗಳಿಲ್ಲದಂತೆ ಮಾಡಿರುವ ಈ ದೈತ್ಯನುನಿಶ್ಚಲನಾಗಿರುವಂತೆ

ಹರೇಣ ನಿರ್ಮಿತಃ ಪೂರ್ವಂ ಯೇನ ತಿಷ್ಠತಿ ನಿಶ್ಚಲಃ
ಪ್ರಸಾದಾತ್ತವ ಲೋಕಾಶ್ಚ ತ್ರಯಃ ಸಂತು ನಿರಾಮಯಾಃ || ೬೦ ||
ಅತ್ರ ತ್ವಾಂ ಪೂಜಯಿಷ್ಯಾಮೋ ವಯಂ ಸರ್ವೇ ಸಮೇತ್ಯ ಚ ।
ಚೈತ್ರಶುಕ್ಲಚತುರ್ದಶ್ಯಾಂ ದೃಷ್ಟ್ವಾ ತ್ವಾಂ ಯಾಂತು ಸದ್ಗತಿಂ || ೬೧ ||

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ಸಹಸ್ರಾಕ್ಷಃ ಸರ್ವದೇವೈಃ ಸಮನ್ವಿತಃ ।
ಹೃಷ್ಟಸ್ತ್ರಿವಿಷ್ಟಪಂ ಪ್ರಾಪ್ತೋ ದೇವ್ಯಾಸ್ತಸ್ಯಾಃ ಪ್ರಭಾವತಃ || ೬೨ ||
ಸಾಪಿ ತತ್ರ ಸ್ಥಿತಾ ದೇವೀ ದೇವಾನಾಂ ಹಿತಕಾಮ್ಯಯಾ || ೬೩ ||
ಯಸ್ತಾಂ ಪಶ್ಯತಿ ಚೈತ್ರಸ್ಯ ಚತುರ್ದಶ್ಯಾಂ ಸಿತೇ ನೃಪ ।
ಸ ಯಾತಿ ಪರಮಂ ಸ್ಥಾನಂ ಜರಾಮರಣವರ್ಜಿತಂ || ೬೪ ||
ಕಿಂ ವ್ರತೈರ್ನಿಯಮೈರ್ವಾಪಿ ದಾನೈರ್ದತ್ತೈರ್ನರಾಧಿಪ ।
ಸರ್ವೇ ತದ್ದರ್ಶನಸ್ಯಾಪಿ ಕಲಾಂ ನಾರ್ಹಂತಿ ಷೋಡಶೀಂ || ೬೫ ||
ತತ್ರೈವ ಪಾದುಕೇ ದಿವ್ಯೇ ತಯಾ ನ್ಯಸ್ತೇ ನರಾಧಿಪ ।
ಯಸ್ತೌ ಪಶ್ಯತಿ ಭೂಯೋಽಸೌ ಸಂಸಾರಂ ನ ಹಿ ಪಶ್ಯತಿ ।
ಸರ್ವಾನ್ಕಾಮಾನವಾಪ್ನೋತಿ ಇಹಲೋಕೇ ಪರತ್ರ ಚ || ೬೬ ||

---

ಮಾಡಿ ಇಲ್ಲಿಯೇ ವಾಸಿಸು. ನಿನ್ನ ಅನುಗ್ರಹದಿಂದ ಮೂರುಲೋಕಗಳು ಸುಖವಾಗಿರಲಿ.

೬೧. ಚೈತ್ರಶುಕ್ಲ ಚತುರ್ದಶಿಯ ದಿನ ನಾವೆಲ್ಲರೂ ಒಟ್ಟುಗೂಡಿ ನಿನ್ನನ್ನು ಪೂಜಿಸುವೆವು. ಆ ದಿನ ನಿನ್ನನ್ನು ದರ್ಶನ ಮಾಡಿದವನು ಸದ್ಗತಿಯನ್ನು ಪಡೆಯಲಿ.

೬೨. ಪುಲಸ್ತ್ಯನು ಹೇಳುತ್ತಾನೆ :—ದೇವೇಂದ್ರನು ಹೀಗೆ ಹೇಳಿ ಸಕಲ ದೇವತೆಗಳೊಡನೆ ಸಂತೋಷದಿಂದ ಆ ದೇವಿಯ ಪ್ರಭಾವದಿಂದ ಸ್ವರ್ಗಕ್ಕೆ ಹೋದನು.

೬೩. ಆ ದೇವಿಯೂ ದೇವತೆಗಳಿಗೆ ಹಿತವನ್ನುಂಟುಮಾಡಲು ಅಲ್ಲಿಯೇ ಇದ್ದಳು.

೬೪. ರಾಜನೆ! ಚೈತ್ರಶುದ್ಧ ಚತುರ್ದಶಿಯದಿನ ಅವಳನ್ನು ನೋಡಿದ ಮಾನವನು ಮುಪ್ಪುಮರಣಗಳಿಲ್ಲದ ಉತ್ತಮಸ್ಥಾನಕ್ಕೆ ತೆರಳುವನು.

೬೫. ದೊರೆಯೆ! ವ್ರತ, ನಿಯಮ, ದಾನಗಳಿಂದೇನು ಪ್ರಯೋಜನ? ಅದೆಲ್ಲವೂ ಅವನ ದರ್ಶನದ ಹದಿನಾರನೆ ಒಂದಂಶಕ್ಕೆ ಸಾಟಿಯಲ್ಲ.

೬೬. ಅವಳು ಅಲ್ಲಿಯೇ ತನ್ನ ದಿವ್ಯ ಪಾದುಕೆಗಳನ್ನು ಇಟ್ಟಿದ್ದುವಳು. ಅವುಗಳನ್ನು ನೋಡಿದ ಮಾನವನು ಮರಳಿ ಸಂಸಾರವನ್ನು ನೋಡುವುದಿಲ್ಲ. ಇಹಪರಗಳಲ್ಲಿ ಸಕಲೇಷ್ಟಾರ್ಥಗಳನ್ನೂ ಪಡೆಯುವನು

ಯಯಾತಿರುವಾಚ :—

ಕಸ್ಮಿನ್ಕಾಲೇ ದ್ವಿಜಶ್ರೇಷ್ಠ ದೇವ್ಯಾ ಮುಕ್ತೇಽತ್ರ ಪಾದುಕೇ ।
ಕಸ್ಮಾಚ್ಚ ಕಾರಣಾದ್ಬ್ರೂಹಿ ಸರ್ವಂ ವಿಸ್ತರತೋ ಮಮ ॥ ೬೭ ॥

ಪುಲಸ್ತ್ಯ ಉವಾಚ :—

ತಾಂ ದೇವೀಂ ಮಾನವಾಃ ಸರ್ವೇ ಸಂವೀಕ್ಷ್ಯ ನೃಪಸತ್ತಮ ।
ಪ್ರಾಪ್ನುವಂತಿ ಪರಾಂ ಸಿದ್ಧಿಂ ದ್ವಿವಿಧಾಂ ಧರ್ಮಕಾರಿಣಃ ॥ ೬೮ ॥
ಏತಸ್ಮಿನ್ನೇವ ಕಾಲೇ ತು ಯಜ್ಞದಾನಾದಿಕಾಃ ಕ್ರಿಯಾಃ ।
ಪ್ರಣಷ್ಟಾ ಭೂತಲೇ ರಾಜಂಸ್ತೀರ್ಥಯಾತ್ರಾವ್ರತೋದ್ಭವಾಃ ॥ ೬೯ ॥
ಶೂನ್ಯಾಸ್ತೇ ನರಕಾಃ ಸರ್ವೇ ಸಂಬಭೂವುರ್ಯಮಸ್ಯ ಯೇ ।
ಯಜ್ಞಭಾಗವಿಹೀನಾಶ್ಚ ದೇವಾಃ ಕಷ್ಟಮುಪಾಗತಾಃ ॥ ೭೦ ॥
ಅಥ ಸರ್ವೇ ನೃಪಶ್ರೇಷ್ಠ ದೇವಾಸ್ತತ್ರ ಸಮಾಗತಾಃ ।
ಊಚುರ್ಗತ್ವಾರ್ಬುದಂ ತತ್ರ ಶ್ರೀಮಾತರಮಥೇಶ್ವರೀಂ ॥ ೭೧ ॥

ದೇವಾ ಊಚುಃ :—

ಅಗ್ನಿಷ್ಟೋಮಾದಿಕಾಃ ಸರ್ವಾಃ ಕ್ರಿಯಾ ನಷ್ಟಾಃ ಸುರೇಶ್ವರಿ ।
ಮರ್ತ್ಯಲೋಕೇ ವಯಂ ತೇನ ಕರ್ಮಣಾತೀವ ಪೀಡಿತಾಃ ॥ ೭೨ ॥

---

೬೭. ಯಯಾತಿಯು ಹೇಳುತ್ತಾನೆ:—ದ್ವಿಜವರ್ಯನೆ! ದೇವಿಯು ಅಲ್ಲಿ ಯಾವಾಗ ತನ್ನ ಪಾದುಕೆಗಳನ್ನು ಬಿಟ್ಟಳು? ಎಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳು.

೬೮. ಪುಲಸ್ತ್ಯನು ಹೇಳುತ್ತಾನೆ:—ನೃಪೋತ್ತಮ! ಮಾನವರೆಲ್ಲ ಆ ದೇವಿಯನ್ನು ಕಂಡು ಈ ಲೋಕ ಮತ್ತು ಪರಲೋಕದ ಎರಡು ವಿಧವಾದ ಉತ್ತಮ ಸಿದ್ಧಿಯನ್ನು ಹೊಂದುವರು.

೬೯. ಈ ಕಾಲದಲ್ಲಿಯೇ ಭೂಮಿಯಲ್ಲಿ ಯಜ್ಞದಾನಾದಿಗಳೂ, ತೀರ್ಥಯಾತ್ರೆ, ವ್ರತ ಮೊದಲಾದುವುಗಳೂ ನಷ್ಟವಾದುವು.

೭೦. ಯಮನ ನರಕಗಳೆಲ್ಲ ಬರಿದಾದುವು. ದೇವತೆಗಳು ಯಜ್ಞಭಾಗವಿಲ್ಲದೆ ಕಷ್ಟವನ್ನು ಹೊಂದಿದರು.

೭೧. ಬಳಿಕ ಸಕಲ ದೇವತೆಗಳೂ ಅರ್ಬುದಾಚಲಕ್ಕೆ ಹೋಗಿ ಶ್ರೀಮಾತೆಯನ್ನು ಕುರಿತು ಹೀಗೆ ತಿಳಿಸಿದರು.

೭೨. ದೇವತೆಗಳು ಹೇಳುತ್ತಾರೆ:—ಸುರೇಶ್ವರಿ! ಭೂಲೋಕದಲ್ಲಿ ಅಗ್ನಿಷ್ಟೋಮ ಮೊದಲಾದ ಕ್ರಿಯೆಗಳು ನಷ್ಟವಾದುವು. ಅದರಿಂದ ನಾವು ಪೀಡಿತರಾಗಿರುವೆವು.

ದೃಷ್ಟ್ವಾ ತ್ವಾಂ ದೇವಿ ಪಾಪ್ಮಾನಃ ಸಿದ್ಧಿಂ ಯಾಂತಿ ಸಪೂರ್ವಜಾಃ ।
ತಸ್ಮಾದ್ಯಥಾ ವಯಂ ಪುಷ್ಟಿಂ ವ್ರಜಾಮಸ್ತೇ ಪ್ರಸಾದತಃ ॥ ೨೩ ॥
ನ ನಿಷ್ಕ್ರಾಮತಿ ದೈತ್ಯಶ್ಚ ಬಾಷ್ಕಲಿಸ್ತ್ವಂ ತಥಾ ಕುರು ॥ ೨೪ ॥

ಪುಲಸ್ತ್ಯ ಉವಾಚ :—

ತೇಷಾಂ ತದ್ವಚನಂ ಶ್ರುತ್ವಾ ಸಂಚಿಂತ್ಯ ಸುಚಿರಂ ತದಾ ।
ಮುಕ್ತ್ವಾ ಸ್ವೇ ಪಾದುಕೇ ತತ್ರ ಕೃತ್ವಾ ಚಾಶ್ಮಸಮುದ್ಭವೇ ।
ದೇವಾನುವಾಚ ರಾಜೇಂದ್ರ ಸರ್ವಾನಾರ್ತಿಮುಪಾಗತಾನ್ ॥ ೨೫ ॥

ಶ್ರೀ ದೇವ್ಯುವಾಚ :—

ಯುಷ್ಮದ್ವಾಕ್ಯೇನ ತ್ಯಕ್ತೋ ಹಿ ಮಯಾಽಯಂ ಪರ್ವತೋತ್ತಮಃ ।
ವಿನ್ಯಸ್ತೇ ಪಾದುಕೇ ತಸ್ಯ ರಕ್ಷಾರ್ಥಂ ಬಾಷ್ಕಲೇಃ ಸುರಾಃ ॥ ೨೬ ॥
ಮತ್ಪಾದುಕಾಭರಾಕ್ರಾಂತೋ ನ ಸ ದೈತ್ಯಃ ಸುರೋತ್ತಮಾಃ ।
ಸ್ಥಾನಾತ್ಪ್ರಚಲಿತುಂ ಶಕ್ತಃ ಸ್ತಂಭಿತಃ ಸ್ಯಾದ್ಯಥಾ ಮಯಾ ॥ ೨೭ ॥
ಏತಚ್ಛಾಸ್ತ್ರಂ ಮಯಾ ಕೃತ್ಸ್ನಂ ಪಾದುಕಾರ್ಥಂ ವಿನಿರ್ಮಿತಂ ।
ಅಧ್ಯಾತ್ಮಿಕಂ ಹಿತಾರ್ಥಾಯ ಪ್ರಾಣಿನಾಂ ಪೃಥಿವೀತಲೇ ॥ ೨೮ ॥

---

೨೩–೨೪. ದೇವಿ! ನಿನ್ನನ್ನು ನೋಡಿದ ಪಾಪಿಗಳೂ ತಮ್ಮ ಪಿತೃಗಳೊಡನೆ ಸಿದ್ಧಿಯನ್ನು ಹೊಂದುತ್ತಾರೆ. ಆದ್ದರಿಂದ ನಾವು ನಿನ್ನ ಅನುಗ್ರಹದಿಂದ ಪುಷ್ಟಿಯನ್ನು ಹೊಂದುವಂತೆಯೂ, ಆ ಕಲಿಂಗದಾನವನು ಅಲ್ಲಿಂದ ಹೊರಡದಂತೆಯೂ ಮಾಡು.

೨೫. ಪುಲಸ್ತ್ಯನು ಹೇಳುತ್ತಾನೆ:—ದೇವಿಯು ಅವರ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ಕಲ್ಲಿನ ತನ್ನ ಪಾದುಕೆಗಳನ್ನು ಅಲ್ಲಿರಿಸಿ ದುಃಖಗೊಂಡ ದೇವತೆಗಳನ್ನು ಕುರಿತು ಇಂತೆಂದಳು.

೨೬. ಶ್ರೀದೇವಿಯು ಹೇಳುತ್ತಾಳೆ:—ಎಲೈ ದೇವತೆಗಳೆ! ನಿಮ್ಮ ಮಾತಿನಂತೆ ನಾನು ಈ ಪರ್ವತವನ್ನು ಬಿಟ್ಟು ಆ ಕಲಿಂಗ ದೈತ್ಯನ ರಕ್ಷಣೆಗಾಗಿ ನನ್ನ ಪಾದುಕೆಗಳನ್ನಿಟ್ಟಿರುವೆನು.

೨೭. ನನ್ನ ಪಾದುಕೆಯ ಭಾರದಿಂದ ಆಕ್ರಮಿಸಲ್ಪಟ್ಟ ಆ ದೈತ್ಯನನ್ನು ಚಲಿಸದಂತೆ ತಡೆದಿರುವೆನು.

೨೮. ಭೂಮಿಯಲ್ಲಿ ಪ್ರಾಣಿಗಳ ಹಿತಕ್ಕಾಗಿ ಪಾದುಕಾಪೂಜೆಯನ್ನೂ ಈ ಆಧ್ಯಾತ್ಮಿಕ ಶಾಸ್ತ್ರವನ್ನೂ ಸಂಪೂರ್ಣವಾಗಿ ರಚಿಸಿರುವೆನು.

ಶಾಸ್ತ್ರಮಾರ್ಗೇಣ ಚಾನೇನ ಭಕ್ತ್ಯಾ ಯಃ ಪಾದುಕೇ ಮಮ ।
ಪೂಜಯಿಷ್ಯತಿ ಸಿದ್ಧಿಃ ಸ್ಯಾತ್ತಸ್ಯ ಮದ್ದರ್ಶನೋದ್ಭವಾ ॥ ೭೯ ॥
ಚೈತ್ರಶುಕ್ಲಚತುರ್ದಶ್ಯಾಮಹಮತ್ರಾರ್ಬುದೇ ಸದಾ ।
ಅಹೋರಾತ್ರಂ ವಸಿಷ್ಯಾಮಿ ಸುಗುಪ್ತಾ ಗಿರಿಗಹ್ವರೇ ॥ ೮೦ ॥
ಪರ್ವತೋಽಯಂ ಮಮಾಭೀಷ್ಟೋ ನ ಚ ತ್ಯಕ್ತುಂ ಮನೋ ದಧೇ ।
ತಥಾಪಿ ಸಂಪರಿತ್ಯಕ್ತೋ ಯುಷ್ಮಾಕಂ ಹಿತಕಾಮ್ಯಯಾ ॥ ೮೧ ॥

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ತು ಸಾ ದೇವೀ ಸಮಂತಾದ್ದೇವಕಿಂನರೈಃ ।
ಸ್ತೂಯಮಾನಾ ಯಯೌ ಸ್ವರ್ಗಂ ಮುಕ್ತ್ವಾ ತೇ ಪಾದುಕೇ ಶುಭೇ ॥
ಅದ್ಯಾಪಿ ಸಿದ್ಧಿಮಾಯಾಂತಿ ಯೋಗಿನೋ ಧ್ಯಾನತತ್ಪರಾಃ ।
ತನ್ನಿಷ್ಠಾಸ್ತದ್ಗತಪ್ರಾಣಾ ಯಥಾ ದೇವ್ಯಾಃ ಪ್ರದರ್ಶನಾತ್ ॥ ೮೩ ॥
ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ಶ್ರೀಮಾತಾಸಂಭವಂ ಪುಣ್ಯಂ ಪಾದುಕಾಭ್ಯಾಂ ಚ ಭೂಮಿಪ ॥ ೮೪ ॥

---

೭೯. ಈ ಶಾಸ್ತ್ರ ಮಾರ್ಗದಿಂದ ಭಕ್ತಿಯಿಂದ ಈ ನನ್ನ ಪಾದುಕೆಗಳನ್ನು ಪೂಜಿಸಿದವನಿಗೆ ನನ್ನ ದರ್ಶನದಿಂದುಂಟಾಗುವ ಸಿದ್ಧಿಯು ಲಭಿಸುವುದು.

೮೦. ನಾನು ಚೈತ್ರಶುಕ್ಲ ತ್ರಯೋದಶೀ ದಿನ ಈ ಅರ್ಬುದಾಚಲದ ಗುಹೆಯಲ್ಲಿ ಗುಟ್ಟಾಗಿ ಹಗಲು ರಾತ್ರಿ ವಾಸಿಸುವೆನು.

೮೧. ನನಗಿಷ್ಟವಾದ ಈ ಪರ್ವತವನ್ನು ಬಿಡಲು ನನಗೆ ಮನಸ್ಸಿಲ್ಲ. ಹಾಗಾದೂರ ನಿಮಗೆ ಹಿತವನ್ನುಂಟುಮಾಡಲು ಇದನ್ನು ಬಿಟ್ಟಿರುವೆನು.

೮೨. ಪುಲಸ್ತ್ಯನು ಹೇಳುತ್ತಾನೆ :—ಆ ದೇವಿಯು ಹೀಗೆ ಹೇಳಿ ಸುತ್ತಲೂ ದೇವ, ಕಿನ್ನರರಿಂದ ಸ್ತುತಿಸಲ್ಪಡುತ್ತ ಮಂಗಳಕರವಾದ ಪಾದುಕೆಗಳನ್ನು ಅಲ್ಲಿ ತ್ಯಜಿಸಿ ಸ್ವರ್ಗಕ್ಕೆ ತೆರಳಿದಳು.

೮೩. ಈಗಲೂ ಧ್ಯಾನಾಸಕ್ತರೂ, ಅವಳಲ್ಲಿಡಲ್ಪಟ್ಟ ಮನಸ್ಸುಳ್ಳವರೂ ಆದ ಯೋಗಿಗಳು ದೇವಿಯ ದರ್ಶನದಿಂದ ಸಿದ್ಧಿಯನ್ನು ಪಡೆಯುವರು

೮೪. ಎಲೈ ದೊರೆಯೇ! ನಾನು ಕೇಳಿದ ಶ್ರೀಮಾತೆಯ ಮತ್ತು ಅವಳ ಪಾದುಕೆಯ ದರ್ಶನದಿಂದುಂಟಾಗುವ ಪುಣ್ಯಪ್ರಭಾವವನ್ನೆಲ್ಲ ನಿನಗೆ ಹೇಳಿರುವೆನು.

**ಯಸ್ತ್ವೇತತ್ಪಠತೇ ಭಕ್ತ್ಯಾ ಶ್ಲಾಘತೇ ವಾಽಥ ಯೋ ನರಃ ।**
**ಸರ್ವಪಾಪೈರ್ಮಹಾರಾಜ ಮುಚ್ಯತೇ ಜ್ಞಾನತತ್ಪರಃ ॥ ೮೫ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಶ್ರೀಮಾತಾಮಾಹಾತ್ಮ್ಯವರ್ಣನಂ ನಾಮ
ದ್ವಾವಿಂಶೋಽಧ್ಯಾಯಃ

---

೮೫. ಇದನ್ನು ಭಕ್ತಿಯಿಂದ ಪಠಿಸುವವನೂ, ಹೊಗಳುವವನೂ ಸಮಸ್ತ ಪಾಪಮುಕ್ತನಾಗಿ ಜ್ಞಾನನಿಷ್ಠನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಶ್ರೀಮಾತಾಮಾಹಾತ್ಮ್ಯವರ್ಣನವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತ್ರಯೋವಿಂಶೋಽಧ್ಯಾಯಃ

## ಶುಕ್ಲತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಶುಕ್ಲತೀರ್ಥಮನುತ್ತಮಂ ।
ಯತ್ಪ್ರಾಪ್ತಿಮಗಮತ್ಪೂರ್ವಂ ಸಕಾಶಾದ್ದಾಶವರ್ಗತಃ ॥ ೧ ॥
ಪುರಾಽಽಸೀದ್ರಜಕೋ ನಾಮ್ನಾ ಶಮಿಲಾಕ್ಷೋ ಮಹೀಪತೇ ।
ನೀಲೀಮಧ್ಯೇ ತು ವಸ್ತ್ರಾಣಿ ಪ್ರಕ್ಷಿಪ್ತಾನಿ ಮಹೀಪತೇ ॥ ೨ ॥
ಅಥಾಽಸೌ ಭಯಮಾಪನ್ನೋ ಜ್ಞಾತ್ವಾ ವಸ್ತ್ರವಿಡಂಬನಂ ।
ದೇಶಾಂತರಂ ಪ್ರಸ್ಥಿತೋಽಸೌ ಸ್ವಕುಟುಂಬಸಮಾವೃತಃ ॥ ೩ ॥
ಅಥ ತಸ್ಯ ಸುತಾ ರಾಜನ್ದಾಶಕನ್ಯಾಸಖೀ ಶುಭಾ ।
ದುಃಖೇನ ಮಹತಾವಿಷ್ಟಾ ಹ್ಯಾತ್ಯಂತಿಕಮುಪಾದ್ರವತ್ ॥ ೪ ॥

---

### ಕನ್ನಡದ ಅನುವಾದ

#### ಶುಕ್ಲತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೇಂದ್ರ ! ಬಳಿಕ ಬೆಸ್ತರಿಂದ ಪ್ರಸಿದ್ಧಿಯನ್ನು ಪಡೆದ ಉತ್ತಮವಾದ ಶುಕ್ಲತೀರ್ಥದೆಡೆಗೆ ಹೋಗಬೇಕು.

೨. ದೊರೆಯೆ ! ಹಿಂದೆ ಶಮಿಲಾಕ್ಷನೆಂಬ ಒಬ್ಬ ಅಗಸನಿದ್ದನು. ಅವನು ಭ್ರಾಂತಿಯಿಂದ ಬಟ್ಟೆಗಳನ್ನು ನೀಲಿಯ ನಡುವೆ ಎಸೆದನು.

೩. ಬಳಿಕ ಅವನು ವಸ್ತ್ರಗಳು ನೀಲವರ್ಣವಾಗಿರುವುದನ್ನು ಕಂಡು ತನ್ನ ಪತ್ನೀಪುತ್ರಾದಿಗಳೊಡನೆ ದೇಶಾಂತರಕ್ಕೆ ಓಡಿ ಹೋದನು.

೪. ಬಳಿಕ ಬೆಸ್ತರ ಹುಡುಗಿಯನ್ನು ಗೆಳತಿಯನ್ನಾಗಿ ಮಾಡಿಕೊಂಡ ಅವನ ಮಗಳು ಅತ್ಯಂತ ದುಃಖಗೊಂಡು ಆ ಬೆಸ್ತರ ಕನ್ಯೆಯ ಹತ್ತಿರ ಓಡಿದಳು.

ತಸ್ಯೈ ನಿವೇದಯಾಮಾಸ ಭಯಂ ವಸ್ತ್ರಸಮುದ್ಭವಂ ।
ನಿರ್ದೇಶಚಲನಂ ಚೈವ ಬಾಷ್ಪಗದ್ಗದಯಾ ಗಿರಾ ॥ ೫ ॥
ದಾಶಕನ್ಯಾಪಿ ದುಃಖೇನ ತಸ್ಯಾ ದುಃಖಸಮನ್ವಿತಾ ।
ಅಬ್ರವೀದ್ಬಾಷ್ಪಸಂಕ್ಲಿನ್ನಾ ನಿಶ್ವಸಂತೀ ಮುಹುರ್ಮುಹುಃ ॥ ೬ ॥

ದಾಶಕನ್ಯೋವಾಚ :—

ಅಸ್ತ್ಯುಪಾಯೋ ಮಹಾನತ್ರ ವಿದಿತೋ ಮಮ ಶೋಭನೇ ।
ಧ್ರುವಂ ತೇನ ಕೃತೇನೈವ ನಿರ್ಭಯಂ ತೇ ಚ ತೇ ಪಿತುಃ ॥ ೭ ॥
ಅತ್ರಾಸ್ತಿ ನಿರ್ಝರಂ ಸುಭ್ರೂರರ್ಬುದೇ ವರವರ್ಣಿನಿ ।
ತತ್ರ ಮೇ ಭ್ರಾತರಶ್ಚೈವ ತಥಾನ್ಯೇ ಮತ್ಸ್ಯಜೀವಿನಃ ॥ ೮ ॥
ಯಚ್ಚಾನ್ಯದಪಿ ತತ್ರೈವ ಕ್ಷಿಪ್ಯತೇ ಸಲಿಲೇ ಶುಭೇ ।
ತತ್ಸರ್ವಂ ಶುಕ್ಲತಾಮೇತಿ ಪಶ್ಯ ಮೇ ವಪುರೀದೃಶಂ ॥ ೯ ॥
ಸರ್ವೇಷಾಮೇವ ದಾಶಾನಾಂ ತಸ್ಯ ತೋಯಸ್ಯ ಮಜ್ಜನಾತ್ ।
ತಾನಿ ವಸ್ತ್ರಾಣಿ ತತ್ರೈವ ತಾತಸ್ತವ ಸುಮಧ್ಯಮೇ ।
ಜಲೇ ಪ್ರಕ್ಷಾಲಯೇತ್ಕ್ಷಿಪ್ರಂ ಪ್ರಯಾಸ್ಯಂತಿ ಸುಶುಕ್ಲತಾಂ ॥ ೧೦ ॥
ತ್ವಯಾತ್ರ ನ ಭಯಂ ಕಾರ್ಯಂ ಗತ್ವಾ ತಾತಂ ನಿವಾರಯ ।
ಪ್ರಸ್ಥಿತಂ ಪರದೇಶಾಯ ನಾತ್ರ ಕಾರ್ಯಾ ವಿಚಾರಣಾ ॥ ೧೧ ॥

---

೫. ಅಲ್ಲಿ ಅವಳು ಆ ಬೆಸ್ತರಕನ್ಯೆಗೆ ವಸ್ತ್ರದಿಂದುಂಟಾದ ಭಯವನ್ನೂ, ಕುಟುಂಬ ವರ್ಗದವರು ಪರದೇಶಕ್ಕೆ ಹೋಗಿರುವುದನ್ನೂ ಗದ್ಗದ ಧ್ವನಿಯಿಂದ ತಿಳಿಸಿದಳು.

೬. ದಾಶಕನ್ಯೆಯು ತಾನೂ ಆ ಅಗಸನ ಕನ್ಯೆಯ ದುಃಖದಿಂದ ಮರುಗಿ ಕಣ್ಣೀರನ್ನು ಸುರಿಸುತ್ತ ಬಾರಿ ಬಾರಿಗೂ ನಿಟ್ಟುಸಿರುಬಿಡುತ್ತ ಇಂತೆಂದಳು.

೭. ದಾಶಕನ್ಯೆಯು ಹೇಳುತ್ತಾಳೆ:—ಮಂಗಳಕರಳೆ! ಇದಕ್ಕೊಂದು ಉಪಾಯ ವಿದೆ. ಅದನ್ನು ಮಾಡಿದರೆ ನಿನಗೂ, ನಿನ್ನ ತಂದೆ ತಾಯಿಗಳಿಗೂ ಭಯವಿರುವುದಿಲ್ಲ.

೮. ಸುಂದರಿಯೆ! ಈ ಅರ್ಬುದಾಚಲದಲ್ಲಿ ಒಂದು ನದಿಯಿದೆ. ಅಲ್ಲಿ ನನ್ನ ಸಹೋದರರೂ, ಇತರ ಬೆಸ್ತರೂ ಇದ್ದಾರೆ.

೯. ನದಿಯಲ್ಲಿ ಹಾಕಿದ ವಸ್ತುಗಳೆಲ್ಲ ಬೆಳ್ಳಗಾಗುವುವು. ನನ್ನ ಇಂತಹ ಶರೀರವನ್ನು ನೋಡು.

೧೦. ಸಮಸ್ತ ಬೆಸ್ತರೂ ಅಲ್ಲಿ ಸ್ನಾನಮಾಡಿರುವುದರಿಂದ, ಅವರ ಶರೀರವು ಬೆಳ್ಳಗಾಗಿರುವುದನ್ನು ನೋಡು. ನಿನ್ನ ತಂದೆಯು ಆ ನೀಲವಾದ ಬಟ್ಟೆಗಳನ್ನು ಆ ನೀರಿನಲ್ಲಿ ತೊಳೆದರೆ ಕೂಡಲೆ ಅವು ಬೆಳ್ಳಗಾಗುವುವು.

೧೧. ನೀನು ಈ ವಿಷಯದಲ್ಲಿ ಹೆದರಬೇಡ. ಪರದೇಶಕ್ಕೆ ಪ್ರಯಾಣ ಮಾಡಿರುವ ನಿನ್ನ ತಂದೆಯನ್ನು ತಡೆ. ಈ ವಿಷಯದಲ್ಲಿ ಸಂದೇಹವಿಲ್ಲ.

ಪುಲಸ್ತ್ಯ ಉವಾಚ :—

ಸಾ ತಸ್ಯಾ ವಚನಂ ಶ್ರುತ್ವಾ ಗತ್ವಾ ಸರ್ವಂ ನ್ಯವೇದಯತ್ ।
ಜನಕಾಯ ಸುತಾ ತೂರ್ಣಂ ತತೋಽಸೌ ತುಷ್ಟಿಮಾಸ್ತವಾನ್ ॥ ೧೨ ॥
ಪ್ರಾತರುತ್ಥಾಯ ತೂರ್ಣಂ ಸ ನಿರ್ಝರಂ ತಮುಪಾದ್ರವತ್ ।
ಕ್ಷಿಪ್ತಮಾತ್ರಾಣಿ ರಾಜೇಂದ್ರ ತಾನಿ ವಸ್ತ್ರಾಣಿ ತೇನ ವೈ ॥ ೧೩ ॥
ತಸ್ಮಿಂಸ್ತೋಯೇಽತಿಶುಕ್ಲತ್ವಂ ಗತಾನಿ ಬಹುಲಾಂ ತತಃ ।
ಕಾಂತಿಮಾಪುಶ್ಚ ಪರಮಾಂ ತಥಾ ದೃಷ್ಟ್ವಾಂಬರಾಣಿ ಚ ॥ ೧೪ ॥
ಅಥಾಸೌ ವಿಸ್ಮಯಾವಿಷ್ಟಸ್ತಾನಿ ಚಾದಾಯ ಸತ್ವರಃ ।
ರಾಜ್ಞೇ ನಿವೇದಯಾಮಾಸ ವೃತ್ತಾಂತಂ ಚ ತದುದ್ಭವಂ ॥ ೧೫ ॥
ತತೋ ವಿಸ್ಮಯಮಾಪನ್ನಃ ಸ ರಾಜಾ ತತ್ರ ನಿರ್ಝರೇ ।
ಅನ್ಯಾನಿ ನೀಲೀರಕ್ತಾನಿ ವಸ್ತ್ರಾಣಿ ಚಾಕ್ಷಿಪಜ್ಜಲೇ ॥ ೧೬ ॥
ಸರ್ವಾಣಿ ಶುಕ್ಲತಾಂ ಯಾಂತಿ ವಿಶಿಷ್ಟಾನಿ ಭವಂತಿ ಚ ।
ಜ್ಞಾತ್ವಾ ತತಃ ಪರಂ ತೀರ್ಥಂ ಸ್ನಾನಂ ಚಕ್ರೇ ಯಥಾವಿಧಿ ॥ ೧೭ ॥
ತ್ಯಕ್ತ್ವಾ ರಾಜ್ಯಂ ಸ ತತ್ರೈವ ತಪಸ್ತೇಪೇ ಮಹೀಪತಿಃ ।
ತತಃ ಸಿದ್ಧಿಂ ಪರಾಂ ಪ್ರಾಪ್ತಸ್ತೀರ್ಥಸ್ಯಾಸ್ಯ ಪ್ರಭಾವತಃ ॥ ೧೮ ॥

---

೧೨. ಪುಲಸ್ತ್ಯನು ಹೇಳುತ್ತಾನೆ :—ಅವಳು ಬೆಸ್ತರ ಹುಡುಗಿಯ ಮಾತನ್ನು ಕೇಳಿ ಕೂಡಲೆ ತಂದೆಯ ಹತ್ತಿರಹೋಗಿ ಎಲ್ಲವನ್ನೂ ತಿಳಿಸಲು ಅವನು ಸಂತೋಷ ಗೊಂಡನು.

೧೩—೧೫. ಬಳಿಕ ಅವನು ಬೆಳಗ್ಗೆ ಎದ್ದು ಜಾಗ್ರತೆಯಾಗಿ ಆ ನದಿಗೆ ಹೋಗಿ ಆ ವಸ್ತ್ರಗಳನ್ನೆಲ್ಲ ನೀರಿನಲ್ಲಿ ನೆನೆಯಿಸಲು ಅವು ಮೊದಲಿಗಿಂತ ಹೆಚ್ಚು ಬೆಳ್ಳಗಾಗಿ ಅತಿಶಯ ಕಾಂತಿಯಿಂದ ಬೆಳಗಿದುವು. ಆ ಅಗಸನು ಆ ಬಟ್ಟೆಗಳನ್ನು ನೋಡಿ ಆಶ್ಚರ್ಯ ಗೊಂಡು ಅವುಗಳನ್ನು ತೆಗೆದುಕೊಂಡು ಶೀಘ್ರವಾಗಿ ರಾಜನೆಡೆಗೆ ಹೋಗಿ ಸಮಾಚಾರ ವನ್ನೆಲ್ಲ ತಿಳಿಸಿದನು.

೧೬. ರಾಜನು ಅದರಿಂದ ಆಶ್ಚರ್ಯಗೊಂಡು ಆ ನದಿಯಲ್ಲಿ ಇತರ ನೀಲೀ ಬಟ್ಟೆಗಳನ್ನು ಹಾಕಿದನು.

೧೭. ಅವೆಲ್ಲವೂ ಬೆಳ್ಳಗೂ, ಅತಿಶಯ ಕಾಂತಿಯುಳ್ಳವೂ ಆದುವು. ಅದರಿಂದ ದೊರೆಯು ಅದು ಉತ್ತಮ ತೀರ್ಥವೆಂದು ತಿಳಿದು ವಿಧಿಯಂತೆ ಅಲ್ಲಿ ಮಿಂದನು.

೧೮. ತರುವಾಯ ಅವನು ರಾಜ್ಯವನ್ನು ತ್ಯಜಿಸಿ ಅಲ್ಲಿಯೇ ತಪಸ್ಸನ್ನು ಮಾಡಿ ಆ ತೀರ್ಥದ ಪ್ರಭಾವದಿಂದ ಉತ್ತಮ ಸಿದ್ಧಿಯನ್ನು ಪಡೆದನು.

ಏಕಾದಶ್ಯಾಂ ನರಸ್ತತ್ರ ಯಃ ಶ್ರಾದ್ಧಂ ಕುರುತೇ ನೃಪ ।
ಸ ಕುಲಾನಿ ಸಮುದ್ಧೃತ್ಯ ದಶ ಯಾತಿ ದಿವಂ ತತಃ ।
ಸ್ನಾನೇನೈವ ವಿಪಾಪತ್ವಂ ತತ್ಕ್ಷಣಾದೇವ ಜಾಯತೇ ॥ ೧೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಶುಕ್ಲತೀರ್ಥಮಾಹಾತ್ಮ್ಯವರ್ಣನಂ ನಾಮ
ತ್ರಯೋವಿಂಶೋಽಧ್ಯಾಯಃ

---

೧೯. ಅಲ್ಲಿ ಏಕಾದಶೀ ದಿನ ಶ್ರಾದ್ಧಮಾಡಿದವನು ಹತ್ತು ವಂಶಗಳನ್ನುದ್ಧರಿಸಿ ಸ್ವರ್ಗಕ್ಕೆ ತೆರಳುವನು. ಸ್ನಾನಮಾಡಿದವನು ಕೂಡಲೆ ಪಾಪರಹಿತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಶುಕ್ಲತೀರ್ಥಮಾಹಾತ್ಮ್ಯವರ್ಣನವೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಚತುರ್ವಿಂಶೋಽಧ್ಯಾಯಃ

### ಕಾತ್ಯಾಯನೀಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಗುಹಾಮಧ್ಯನಿವಾಸಿನೀ ।
ದೇವೀ ಕಾತ್ಯಾಯನೀ ಯತ್ರ ಶುಂಭದಾನವನಾಶಿನೀ ॥ ೧ ॥
ಶುಂಭೋನಾಮ ಮಹಾದೈತ್ಯಃ ಪುರಾಽಽಸೀತ್ಪೃಥಿವೀತಲೇ ।
ತೇನ ಸರ್ವಂ ಜಗದ್ವ್ಯಾಪ್ತಂ ಜಿತ್ವಾ ದೇವಾನ್ರಣಾಜಿರೇ ॥ ೨ ॥
ಸ ಶಂಕರವರಾದ್ದೈತ್ಯೋ ದೇವದಾನವರಕ್ಷಸಾಂ ।
ಅವಧ್ಯೋ ಯೋಷಿತಂ ಮುಕ್ತ್ವಾ ಸರ್ವೇಷಾಂ ಪ್ರಾಣಿನಾಂ ಭುವಿ ॥ ೩ ॥
ತತೋ ದೇವಗಣಾಃ ಸರ್ವೇ ಗತ್ವಾಽರ್ಬುದಮಥಾಚಲಂ ।
ತಪಸ್ತೇಪುರ್ವಧಾರ್ಥಾಯ ಶುಂಭಸ್ಯ ಜಗತೀಪತೇ ।
ದೇವೀಮಾರಾಧಯಾಮಾಸುರ್ವ್ಯಕ್ತರೂಪಾಂ ಸುರೇಶ್ವರೀಂ ॥ ೪ ॥

---

### ಕನ್ನಡದ ಅನುವಾದ

### ಕಾತ್ಯಾಯನೀಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ಗುಹೆಯ ಮಧ್ಯದಲ್ಲಿ ವಾಸಿಸುವವಳೂ, ಶುಂಭನೆಂಬ ದಾನವನನ್ನು ನಾಶಗೊಳಿಸಿದವಳೂ ಆದ ಕಾತ್ಯಾಯನಿಯ ಸನ್ನಿಧಿಗೆ ಹೋಗಬೇಕು.

೨. ಹಿಂದೆ ಭೂಲೋಕದಲ್ಲಿ ಶುಂಭನೆಂಬ ಮಹಾ ದೈತ್ಯನೊಬ್ಬನಿದ್ದನು. ಅವನು ರಣರಂಗದಲ್ಲಿ ದೇವತೆಗಳನ್ನು ಗೆದ್ದು ಸಕಲ ಲೋಕಗಳನ್ನೂ ವ್ಯಾಪಿಸಿದನು.

೩. ಅವನು ಶಂಕರನ ವರದಿಂದ ಸ್ತ್ರೀಯರನ್ನುಳಿದು ಇತರ ದೇವ, ದಾನವ, ರಾಕ್ಷಸರೇ ಮೊದಲಾದ ಸಕಲ ಪ್ರಾಣಿಗಳಿಂದ ಅವಧ್ಯನಾದನು.

೪. ದೊರೆಯೆ! ಬಳಿಕ ಸಕಲ ದಿವಿಜರೂ ಅರ್ಬುದಾಚಲಕ್ಕೆ ಹೋಗಿ ತಪಸ್ಸನ್ನು ಮಾಡಿ ಶುಂಭನ ವಧೆಗಾಗಿ ಕಾತ್ಯಾಯನೀ ದೇವಿಯನ್ನು ಪೂಜಿಸಿದರು.

ಅಥ ತೇಷಾಂ ಪ್ರಸನ್ನಾ ಸಾ ದೃಷ್ಟಿಗೋಚರಮಾಗತಾ ।
ಅಬ್ರವೀದ್ವರದಾಸ್ಮೀತಿ ಬ್ರೂತ ಕಿಂ ಕರವಾಣಿ ಚ ॥ ೫ ॥

ದೇವಾ ಊಚುಃ :—

ಸರ್ವಂ ನೋಽಪಹೃತಂ ದೇವಿ ಶುಂಭೇನ ಸುದುರಾತ್ಮನಾ ।
ತಂ ನಿಷೂದಯ ಕಲ್ಯಾಣಿ ಸೋಽವಧ್ಯೋಽನ್ಯೈಃ ಸದಾ ರಣೇ ॥ ೬ ॥
ತ್ವಯಾ ಸಂರಕ್ಷಿತಾ ದೇವಿ ಪುರಾ ಬಾಷ್ಕಲಿತೋ ವಯಂ ।
ನಾನ್ಯಾಽಸ್ಮಾಕಂ ಗತಿರ್ಮಾತಸ್ತ್ವಾಂ ಮುಕ್ತ್ವಾ ಚಾರುಹಾಸಿನೀ ॥ ೭ ॥

ಪುಲಸ್ತ್ಯ ಉವಾಚ :—

ಏವಮುಕ್ತಾ ಸುರೈರ್ದೇವೀ ಗತ್ವಾ ಶುಂಭನಿಕೇತನಂ ।
ಅಜುಹಾವ ರಣೇ ಕ್ರುದ್ಧಾ ಭರ್ತ್ಸಯಿತ್ವಾ ಮುಹುರ್ಮುಹುಃ ॥ ೮ ॥
ಸ ತಯಾ ಯಾಚಿತೇ ಯುದ್ಧೇ ಜ್ಞಾತ್ವಾ ತಾಂ ಯೋಷಿತಂ ನೃಪ ।
ಅವಜ್ಞಾಯ ತತೋ ದೈತ್ಯಃ ಪ್ರೇಷಯಾಮಾಸ ದಾನವಾನ್ ॥ ೯ ॥
ಜೀವಗ್ರಾಹೇಣ ದುಷ್ಟೇಯಂ ಗೃಹ್ಯತಾಂ ಪರುಷಸ್ವನಾ ।
ಕ್ರಿಯತಾಂ ದಾರುಣೋ ದಂಡೋ ಮಮ ವಾಕ್ಯಾನ್ನ ಸಂಶಯಃ ॥ ೧೦ ॥
ಅಥ ತಸ್ಯ ಸಮಾದೇಶಾದ್ದಾನವಾಸ್ತಾಂ ತತೋ ದ್ರುತಂ ।
ಗತ್ವಾ ನಿರ್ಭರ್ತ್ಸಯಾಮಾಸುರ್ವೇಷ್ಟಯಿತ್ವಾ ದಿಶೋ ದಶ ॥ ೧೧ ॥

---

೫. ತರುವಾಯ ಆ ದೇವಿಯು ಪ್ರಸನ್ನಳಾಗಿ, "ಪ್ರತ್ಯಕ್ಷಳಾದಳು. ಅವಳು ಅವರಿಗೆ ವರವನ್ನೀಯುವೆನು. ನಿಮಗೆ ಏನನ್ನು ಕೊಡಲಿ" ಎಂದು ಕೇಳಿದಳು.

೬. ದೇವತೆಗಳು ಹೇಳುತ್ತಾರೆ :—ದೇವಿ ! ದುರಾತ್ಮನಾದ ಶುಂಭನು ನಮ್ಮ ಸರ್ವಸ್ವವನ್ನೂ ಅಪಹರಿಸಿರುವನು. ಮಂಗಳಕರಳೆ ! ಅವನನ್ನು ಕೊಲ್ಲು. ಅವನನ್ನು ಯುದ್ಧದಲ್ಲಿ ಬೇರೆಯಾರೂ ಕೊಲ್ಲಲಾರರು.

೭. ದೇವಿ ! ಹಿಂದೆ ನೀನು ನಮ್ಮನ್ನು ಕಲಿಂಗ ದಾನವನಿಂದ ಕಾಪಾಡಿರುವೆ. ತಾಯೆ ! ನಿನ್ನನ್ನು ಬಿಟ್ಟು ನಮಗೆ ಬೇರೆ ಯಾರೂ ಗತಿಯಿಲ್ಲ.

೮. ಪುಲಸ್ತ್ಯನು ಹೇಳುತ್ತಾನೆ :—ದೇವತೆಗಳು ಹೀಗೆನ್ನಲು ದೇವಿಯು ಶುಂಭನ ಮನೆಗೆ ಹೋಗಿ ಕೋಪದಿಂದ ಅವನನ್ನು ಹೆದರಿಸಿ ಯುದ್ಧಕ್ಕೆ ಕರೆದಳು.

೯. ಅವಳು ಆ ಶುಂಭನನ್ನು ಯುದ್ಧಕ್ಕೆ ಕರೆಯಲು ಅವನು, ಅವಳು ಹೆಂಗಸೆಂದು ತಿಳಿದು ಅವಮಾನಗೊಂಡು ದಾನವರನ್ನು ಕಳುಹಿಸಿದನು.

೧೦. ಆ ದಾನವರಿಗೆ ನನ್ನ ಮಾತಿನಂತೆ ಕಠಿನ ಧ್ವನಿಯುಳ್ಳ ಆ ದುಷ್ಟಳನ್ನು ಜೀವಸಹಿತವಾಗಿ ಹಿಡಿದು ಕಠಿನವಾಗಿ ಶಿಕ್ಷಿಸಿರಿ ಎಂದು ಆಜ್ಞೆಯಿತ್ತನು.

೧೧. ಆ ದಾನವರು ಶುಂಭನ ಅಪ್ಪಣೆಯಿಂದ ಶೀಘ್ರವಾಗಿ ಅವಳೆಡೆಗೆ ಹೋಗಿ ಹತ್ತು ದಿಕ್ಕುಗಳಲ್ಲಿಯೂ ಸುತ್ತಿಕೊಂಡು ಅವಳನ್ನು ಗದರಿಸಿದರು.

ತತೋಽವಲೋಕನಾದ್ದೈತ್ಯಾಸ್ತಯಾ ತೇ ಭಸ್ಮಸಾತ್ಕೃತಾಃ ।
ತತಃ ಶುಂಭಃ ಪ್ರಕುಪಿತಃ ಸ್ವಯಮೇವ ಸಮಾಯಯೌ ॥ ೧೨ ॥
ಅಬ್ರವೀತ್ತಿಷ್ಠತಿಷ್ಠೇತಿ ಖಡ್ಗಮುದ್ಯಮ್ಯ ಭೀಷಣಃ ।
ಸೋಽಪಿ ದೇವ್ಯಾ ಮಹಾರಾಜ ತಥಾ ಚೈವಾವಲೋಕಿತಃ ॥ ೧೩ ॥
ಅಭವದ್ಭಸ್ಮಸಾತ್ಸದ್ಯಃ ಪತಂಗ ಇವ ಪಾವಕಂ ।
ಹತೇ ತಸ್ಮಿಂಸ್ತತೋ ದೈತ್ಯಾಃ ಶೇಷಾಃ ಪಾರ್ಥಿವಸತ್ತಮ ।
ಭಿತ್ವಾ ರಸಾತಲಂ ಜಗ್ಮುಃ ಪಾತಾಲಂ ಭಯಸಂಯುತಾಃ ॥ ೧೪ ॥
ತತೋ ದೇವಗಣಾಃ ಸರ್ವೇ ತುಷ್ಟುವುಸ್ತಾಂ ಸುರೇಶ್ವರೀಂ ।
ಅಬ್ರುವಂಶ್ಚ ವರಂ ಬ್ರೂಹಿ ಯತ್ತೇ ಮನಸಿ ವರ್ತತೇ ॥ ೧೫ ॥

ದೇವ್ಯುವಾಚ :—

ತತ್ರೈವ ಪರ್ವತೇ ಸ್ಥಾಸ್ಯೇ ಹ್ಯರ್ಬುದೇಽಹಂ ಸುರೋತ್ತಮಾಃ ।
ಅಭೀಷ್ಟಃ ಪರ್ವತೋಽಸ್ಮಾಕಂ ಸ ಸದಾಽರ್ಬುದಸಂಜ್ಞಿತಃ ॥ ೧೬ ॥

ದೇವಾ ಊಚುಃ :—

ತತ್ರಸ್ಥಾಂ ತ್ವಾಂ ಸಮಾಲೋಕ್ಯ ಮರ್ತ್ಯಾ ಯಾಂತಿ ತ್ರಿವಿಷ್ಟಪಂ ।
ವಿನಾ ಯಜ್ಞೈಸ್ತಥಾ ದಾನೈಃ ಸ್ವರ್ಗಃ ಸಂಕೀರ್ಣತಾಂ ಗತಃ ।
ನಾನ್ಯತ್ಕಾರಣಮಸ್ತೀಹ ನಿಷೇಧಸ್ಯ ಸುರೇಶ್ವರಿ ॥ ೧೭ ॥

---

೧೨ ಬಳಿಕ ಆ ದಾನವರು ದೇವಿಯು ನೋಡಿದ ಕೂಡಲೆ ಬೂದಿಯಾಗಲು ಶುಂಭನು ಕೋಪಗೊಂಡು ತಾನೇ ಬಂದನು.

೧೩. ಮಹಾರಾಜ ! ಆ ದೈತ್ಯನು ಕತ್ತಿಯನ್ನು ಎತ್ತಿಕೊಂಡು ನಿಲ್ಲು ನಿಲ್ಲು ಎಂದನು. ದೇವಿಯೂ ಅವನನ್ನು ಹಾಗೆಯೇ ಕಂಡಳು.

೧೪. ಆ ಶುಂಭನು ಕೂಡಲೆ ಬೆಂಕಿಯಲ್ಲಿ ಪತಂಗವು ಬೂದಿಯಾಗುವಂತೆ ಬೂದಿಯಾದನು. ಅವನು ಮಡಿಯಲು ಉಳಿದ ದಾನವರು ಭೂಮಿಯನ್ನು ಸೀಳಿಕೊಂಡು ಭಯದಿಂದ ಪಾತಾಳಕ್ಕೆ ಹೋದರು.

೧೫. ತರುವಾಯ ಸಮಸ್ತ ದೇವತೆಗಳೂ ಆ ದೇವಿಯನ್ನು ಸ್ತುತಿಸಿ ನಿನಗಿಷ್ಟವಾದ ವರವನ್ನು ಕೇಳಿಕೊ ಎಂದರು.

೧೬. ದೇವಿಯು ಹೇಳುತ್ತಾಳೆ .— ದೇವತೆಗಳೆ! ನಾನು ಆ ಅರ್ಬುದ ಪರ್ವತದಲ್ಲಿ ಇರುವೆನು. ಆ ಪರ್ವತವು ನನಗೆ ಇಷ್ಟವಾದುದು.

೧೭. ದೇವತೆಗಳು ಹೇಳುತ್ತಾರೆ :—ಮಾನವರು ಆ ಪರ್ವತದಲ್ಲಿರುವ ನಿನ್ನನ್ನು ಕಂಡು ಸ್ವರ್ಗಕ್ಕೆ ತೆರಳುವರು. ಯಜ್ಞದಾನಗಳಿಲ್ಲದೆ ಜನರು ಸ್ವರ್ಗಕ್ಕೆ ಬರುವುದರಿಂದ ಆ ಸ್ವರ್ಗಲೋಕವು ತುಂಬಿ ಇಕ್ಕಟ್ಟಾಗಿರುವುದು. ಇದನ್ನು ತಡೆಯುವುದಕ್ಕೆ ಬೇರೆ ಕಾರಣವಿಲ್ಲ.

ದೇವ್ಯುವಾಚ :—
ತತ್ರಾಹಂ ವಿಜನೇ ರಮ್ಯೇ ಗುಹಾಮಧ್ಯೇ ಸುರೇಶ್ವರಾಃ ।
ಸ್ಥಾಸ್ಯಾಮಿ ವಿರಲಾಃ ಕೇಚಿದ್ಯಾಸ್ಯಂತಿ ಪ್ರಾಣಿನೋ ಮಮ ।
ದೃಷ್ಟಿಗೋಚರಮಾರ್ಗೇ ಹಿ ಗತ್ವಾ ತಂ ಪರ್ವತಂ ಪ್ರತಿ ॥ ೧೮ ॥
ದೇವಾ ಊಚುಃ :—
ಯದ್ಯೇವಂ ದೇವಿ ತೇಽಭೀಷ್ಟಮೇವಂ ಕುರು ಶುಚಿಸ್ಮಿತೇ ।
ವಯಂ ತ್ವಾಂ ತತ್ರ ದ್ರಕ್ಷ್ಯಾಮಃ ಶುಕ್ಲಾಷ್ಟಮ್ಯಾಂ ಸದಾ ಶುಚೇಃ ॥ ೧೯ ॥
ಪುಲಸ್ತ್ಯ ಉವಾಚ :—
ಏವಮುಕ್ತಾಃ ಸುರಾ ದೇವ್ಯಾ ಪ್ರಹೃಷ್ಟಾಸ್ತ್ರಿದಿವಂ ಯಯುಃ ।
ಸಾಪಿ ದೇವೀ ಗಿರೌ ತತ್ರ ಗತ್ವಾ ಚೈವಾರ್ಬುದೇ ನೃಪ ॥ ೨೦ ॥
ಗುಹಾಮಧ್ಯಂ ಸಮಾಸಾದ್ಯ ನಿತ್ಯಂ ಜಗದ್ಧಿತಾಯ ವೈ ।
ವಿವಿಕ್ತೇ ನ್ಯವಸತ್ಪ್ರೀತಾ ದುರ್ಲಭಾ ಸುರಮಾನವೈಃ ॥ ೨೧ ॥
ಯಸ್ತಾಂ ಪಶ್ಯತಿ ರಾಜೇಂದ್ರ ಶುಕ್ಲಾಷ್ಟಮ್ಯಾಂ ಸಮಾಹಿತಃ ।
ಅಭೀಷ್ಟಂ ಸ ಸದಾಪ್ನೋತಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೨೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕಾತ್ಯಾಯನೀಮಾಹಾತ್ಮ್ಯವರ್ಣನಂ ನಾಮ
ಚತುರ್ವಿಂಶೋಽಧ್ಯಾಯಃ

---

೧೮. ದೇವಿಯು ಹೇಳುತ್ತಾಳೆ :—ದೇವತೆಗಳೆ! ಅಲ್ಲಿ ನಾನು ನಿರ್ಜನವೂ, ಮನೋಹರವೂ ಆದ ಗುಹೆಯ ನಡುವೆ ವಾಸಿಸುವೆನು, ಕೆಲವರು ಮಾತ್ರ ನನ್ನನ್ನು ಸಂದರ್ಶಿಸಿ ಸ್ವರ್ಗಕ್ಕೆ ಹೋಗುವರು.

೧೯. ದೇವತೆಗಳು ಹೇಳುತ್ತಾರೆ :—ಶುದ್ಧವಾದ ಮಂದಹಾಸವುಳ್ಳವಳೆ! ನಿನ್ನಿಷ್ಟವು ಹೀಗಿದ್ದರೆ ಹೀಗೆಯೇ ಮಾಡು. ನಾವು ಅಲ್ಲಿರುವ ನಿನ್ನನ್ನು ಶುಕ್ಲಾಷ್ಟಮೀ ದಿನ ನೋಡುತ್ತೇವೆ.

೨೦–೨೧. ಪುಲಸ್ತ್ಯನು ಹೇಳುತ್ತಾನೆ :—ದೇವಿಯು ಹೀಗೆನ್ನಲು ದೇವತೆಗಳು ಸಂತೋಷಗೊಂಡು ಸ್ವರ್ಗಕ್ಕೆ ತೆರಳಿದರು. ಆ ದೇವಿಯೂ ಅರ್ಬುದ ಪರ್ವತಕ್ಕೆ ಹೋಗಿ ಗುಹೆಯ ಮಧ್ಯವನ್ನು ಹೊಂದಿ ಯಾವಾಗಲೂ ಜಗತ್ತಿನ ಹಿತಕ್ಕಾಗಿ ರಹಸ್ಯ ಸ್ಥಳದಲ್ಲಿ ಸುರಮಾನವರಿಗೆ ದುರ್ಲಭಳಾಗಿ ವಾಸಿಸಿದಳು.

೨೨. ಮಹಾರಾಜ! ಶುಕ್ಲಾಷ್ಟಮೀ ದಿನ ಅವಳನ್ನು ಸಾವಧಾನ ಮನಸ್ಸಿನಿಂದ ನೋಡಿದವನು ಇಷ್ಟಾರ್ಥವು ದುರ್ಲಭವಾಗಿದ್ದರೂ ಅದನ್ನು ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಕಾತ್ಯಾಯನೀಮಾಹಾತ್ಮ್ಯವರ್ಣನವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚವಿಂಶೋಽಧ್ಯಾಯಃ

### ಪಿಂಡಾರಕತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತಃ ಪಿಂಡಾರಕಂ ಗಚ್ಛೇತ್ತೀರ್ಥಂ ಪಾಪಹರಂ ನೃಪ ।
ಯತ್ರ ಪೂರ್ವಂ ತಪಸ್ತಪ್ತಂ ಮಂಕಿನಾ ಬ್ರಾಹ್ಮಣೇನ ಚ ।
ಸಿದ್ಧಿಂ ಗತಸ್ತಥಾ ರಾಜಂಸ್ತೀರ್ಥಸ್ಯಾಸ್ಯ ಪ್ರಭಾವತಃ ॥ ೧ ॥
ಪುರಾ ಮಂಕಿರಭೂದ್ವಿಪ್ರೋ ನಾಮಮಾತ್ರೇಣ ಭೂಪತೇ ।
ಮೂರ್ಖೋ ಬ್ರಾಹ್ಮಣಕೃತ್ಯಾನಾಮನಭಿಜ್ಞಃ ಸುಮಂದಧೀಃ ॥ ೨ ॥
ಅಥಾಸೌ ಪರ್ವತೇ ರಮ್ಯೇ ಲೋಕಾನಾಂ ನೃಪಸತ್ತಮ ।
ಮಹಿಷೀ ರಕ್ಷಯಾಮಾಸ ತತಃ ಪಿಂಡಾರಕರ್ಮಣಿ ॥ ೩ ॥
ಕಸ್ಯಚಿತ್ತ್ವಥ ಕಾಲಸ್ಯ ತೇನ ವಿತ್ತಮುಪಾರ್ಜಿತಂ ।
ದೂರಾತ್ಕೃಚ್ಛ್ರೇಣ ಚ ಸ್ತೋಕಂ ಜಗೃಹೇ ಗೋಯುಗಂ ತತಃ ॥ ೪ ॥

---

### ಕನ್ನಡದ ಅನುವಾದ

### ಪಿಂಡಾರಕತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ದೊರೆಯೆ! ತರುವಾಯ ಪಾಪವನ್ನು ನಿವಾರಿಸುವ ಪಿಂಡಾರಕತೀರ್ಥದೆಡೆಗೆ ಹೋಗಬೇಕು. ಈ ತೀರ್ಥದಲ್ಲಿ ಹಿಂದೆ ಮಂಕಿಯೆಂಬ ಬ್ರಾಹ್ಮಣನು ತಪಸ್ಸನ್ನುಮಾಡಿ ಇದರ ಪ್ರಭಾವದಿಂದ ಸಿದ್ಧಿಯನ್ನು ಹೊಂದಿರುವನು.

೨. ಮಹಾರಾಜ! ಹಿಂದೆ ಹೆಸರಿನಿಂದ ಮಾತ್ರ ಬ್ರಾಹ್ಮಣನೂ, ಮೂರ್ಖನೂ. ಬ್ರಾಹ್ಮಣ್ಯವನ್ನರಿಯದವನೂ, ಮಂದಬುದ್ಧಿಯೂ ಆದ ಮಂಕಿಯೆಂಬವನೊಬ್ಬ ನಿದ್ದನು.

೩–೪. ಬಳಿಕ ಇವನು ಮನೋಹರವಾದ ಪರ್ವತದಲ್ಲಿ ಜನರ ಎಮ್ಮೆಗಳನ್ನು ಮೇಯಿಸುತ್ತ ಈ ಕೆಲಸದಲ್ಲಿ ಹಣವನ್ನುಗಳಿಸಿ ದೂರದೇಶದಿಂದ ಎರಡು ಸಣ್ಣ ಎತ್ತುಗಳನ್ನು ಕೊಂಡು ಕೊಂಡು ಬಂದನು.

ತತಸ್ತದ್ದಮಯಾಮಾಸ ಗೋಯುಗಂ ನೃಪಸತ್ತಮ ।
ಅಥ ದೈವವಶಾದ್ರಾಜನ್ದಮಿತಂ ತಸ್ಯ ಗೋಯುಗಂ ॥ ೫ ॥
ನಿಬದ್ಧಮುಷ್ಟ್ರಮಾಸಾದ್ಯ ಗ್ರೀವಾದೇಶೇ ಬಲಾತ್ಸ್ಥಿತಂ ।
ಅಥೋಷ್ಟ್ರಸ್ತ್ವರಯಾ ರಾಜನ್ನುತ್ಥಿತಸ್ತ್ರಾಸತತ್ಪರಃ ॥ ೬ ॥
ಗೋಯುಗೇನ ಹಿ ಗ್ರೀವಾಯಾಂ ಲಂಬಮಾನೇನ ಭೂಪತೇ ।
ತದ್ದೃಷ್ಟ್ವಾ ಸುಮಹಾಶ್ಚರ್ಯಂ ವಿನಾಶಂ ಗೋಯುಗಸ್ಯ ತು ॥ ೭ ॥
ಮಂಕಿರ್ವೈರಾಗ್ಯಮಾಪನ್ನಸ್ತ್ಯಕ್ತ್ವಾ ಗ್ರಾಮಂ ವನಂ ಯಯೌ ।
ಸ ಗತ್ವಾ ನಿರ್ಝರಂ ಕಂಚಿದರ್ಬುದೇ ನೃಪಸತ್ತಮ ॥ ೮ ॥
ತ್ರಿಕಾಲಂ ಕುರುತೇ ಸ್ನಾನಂ ಗಾಯತ್ರೀಜಪಮುತ್ತಮಂ ।
ತೇನಾಸೌ ಗತಪಾಪೋಽಭೂದ್ದಿವ್ಯದರ್ಶೀ ಚ ಭೂಮಿಪ ॥ ೯ ॥
ಏತಸ್ಮಿನ್ನೇವ ಕಾಲೇ ತು ತೇನ ಮಾರ್ಗೇಣ ಶಂಕರಃ ।
ಸಹ ಗೌರ್ಯಾ ವಿನಿಷ್ಕ್ರಾಂತಃ ಕ್ರೀಡಾರ್ಥಂ ರಮ್ಯಪರ್ವತೇ ॥ ೧೦ ॥
ಸ ದೃಷ್ಟಃ ಸಹಸಾ ತೇನ ಪಿಂಡಾರೇಣ ಮಹಾತ್ಮನಾ ।
ಪ್ರಣಾಮಮಕರೋದ್ರಾಜಂಸ್ತತಸ್ತಂ ಶಂಕರೋಽಬ್ರವೀತ್ ॥ ೧೧ ॥
ನ ವೃಥಾ ದರ್ಶನಂ ಮೇ ಸ್ಯಾದ್ವರೋ ಮೇ ಗೃಹ್ಯತಾಂ ದ್ವಿಜ ।
ಯದಭೀಷ್ಟಂ ಮಹಾರಾಜ ಯದ್ಯಪಿ ಸ್ಯಾತ್ಸುದುರ್ಲಭಂ ॥ ೧೨ ॥

---

೫–೯. ಅನಂತರ ಆ ಎತ್ತುಗಳನ್ನು ಪಳಗಿಸಿದನು. ಒಂದು ದಿನ ಅವನು ಪಳಗಿಸಿದ ಆ ಎತ್ತುಗಳು ಅಲ್ಲಿ ಕಟ್ಟಿರುವ ಒಂಟೆಯ ಕತ್ತಿನಲ್ಲಿ ಸಿಕ್ಕಿಕೊಂಡುವು. ಕುತ್ತಿಗೆಯಲ್ಲಿ ಸಿಕ್ಕಿಕೊಂಡಿರುವ ಎತ್ತುಗಳಿಂದ ಭಯಗೊಂಡ ಒಂಟೆಯು ವೇಗದಿಂದ ಮೇಲಕ್ಕೇಳಲು, ಆ ಎತ್ತುಗಳು ಮಡಿದುವು. ಮಂಕಿಯು ಎತ್ತುಗಳ ಆಶ್ಚರ್ಯಕರವಾದ ಸಾವನ್ನು ಕಂಡು ವೈರಾಗ್ಯಗೊಂಡು ಗ್ರಾಮವನ್ನು ತ್ಯಜಿಸಿ ಕಾಡಿಗೆ ಹೋದನು. ಅವನು ಅರ್ಬುದ ಪರ್ವತಕ್ಕೆ ಸಾಗಿ ಅಲ್ಲಿರುವ ನದಿಯಲ್ಲಿ ತ್ರಿಕಾಲಗಳಲ್ಲಿ ಸ್ನಾನಮಾಡುತ್ತ ಗಾಯತ್ರಿಯನ್ನು ಜಪಿಸುತ್ತಿದ್ದನು. ಅದರಿಂದ ಅವನು ಪಾಪಮುಕ್ತನಾಗಿ ದಿವ್ಯಜ್ಞಾನಿಯಾದನು.

೧೦. ಈ ಸಮಯದಲ್ಲಿಯೇ ಶಂಕರನು ಆ ದಾರಿಯಿಂದ ಗೌರಿಯೊಡನೆ ಆ ರಮ್ಯ ಪರ್ವತದಲ್ಲಿ ವಿನೋದಪಡುವುದಕ್ಕಾಗಿ ಹೊರಟನು.

೧೧. ಆಗ ಆ ಪಿಂಡಾರ ಮಂಕಿಯು ಕೂಡಲೆ ಅವನನ್ನು ನೋಡಿ ನಮಸ್ಕರಿಸಲು ಶಂಕರನು ಅವನನ್ನು ಕುರಿತು ಇಂತೆಂದನು.

೧೨. "ಎಲೈ ದ್ವಿಜನೆ! ನನ್ನ ದರ್ಶನವು ನಿಷ್ಫಲವಾಗುವುದಿಲ್ಲ. ನಿನಗಿಷ್ಟವಾದ ವರವನ್ನು ಕೇಳಿಕೊ. ಅದು ದುರ್ಲಭವಾದರೂ ಕೊಡುವೆನು.

ಪಿಂಡಾರಕ ಉವಾಚ :—
ಗಣೋಽಹಂ ತವ ದೇವೇಶ ಭವಾನಿ ತ್ರಿಪುರಾಂತಕ ।
ಯಥಾ ತಥಾ ಕುರು ವಿಭೋ ನಾನ್ಯಸ್ಮೇ ಹೃದಿ ವರ್ತತೇ ॥ ೧೩ ॥
ಏತತ್ಪಿಂಡಾರಕಂ ತೀರ್ಥಂ ಮಮ ನಾಮ್ನಾ ಪ್ರಸಿಧ್ಯತು ॥ ೧೪ ॥
ಭಗವಾನುವಾಚ :—
ಭವಿಷ್ಯತಿ ಗಣೋಽಸ್ಮಾಕಂ ದೇಹಾಂತೇ ತ್ವಂ ದ್ವಿಜೋತ್ತಮ ।
ಏತತ್ಪಿಂಡಾರಕಂ ನಾಮ ತೀರ್ಥಮತ್ರ ಭವಿಷ್ಯತಿ ॥ ೧೫ ॥
ಅಹಮತ್ರ ಮಹಾಷ್ಟಮ್ಯಾಂ ನಿವೇಕ್ಷ್ಯಾಮಿ ಮಹಾಮತೇ ।
ಯೇ ಚ ಸ್ನಾನಂ ಕರಿಷ್ಯಂತಿ ಸಂಪ್ರಾಪ್ತೇ ಚಾಷ್ಟಮೀದಿನೇ ।
ತೇ ಯಾಸ್ಯಂತಿ ಪರಂ ಸ್ಥಾನಂ ಯತ್ರಾಹಂ ನಿತ್ಯಸಂಸ್ಥಿತಃ ॥ ೧೬ ॥
ಪುಲಸ್ತ್ಯ ಉವಾಚ :—
ಏವಮುಕ್ತ್ವಾ ಮಹಾದೇವಸ್ತತ್ರೈವಾಂತರಧೀಯತ ।
ಮಂಕಿಃ ಪಿಂಡಾರಕಸ್ತತ್ರ ತಪಸ್ತೇಪೇ ದಿವಾನಿಶಂ ॥ ೧೭ ॥
ತತಃ ಕಾಲೇನ ಮಹತಾ ತ್ಯಕ್ತ್ವಾ ದೇಹಂ ದಿವಂ ಗತಃ ।
ಯತ್ರಾಸ್ತೇ ಭಗವಾನ್ರುದ್ರೋ ಗಣಸ್ತತ್ರ ಬಭೂವ ಹ ॥ ೧೮ ॥
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ಮಂತ್ರೇಣ ಚಾಚರೇತ್ ॥ ೧೯ ॥

---

೧೩. ಪಿಂಡಾರಕನು ಹೇಳುತ್ತಾನೆ :—ಓ ತ್ರಿಪುರಾರಿಯೆ ! ನಾನು ನಿನ್ನ ಗಣನಾಗುವಂತೆ ಮಾಡು. ಬೇರೆ ಏನೂ ನನ್ನ ಮನಸ್ಸಿನಲಿಲ್ಲ.

೧೪. ಈ ತೀರ್ಥವು ಪಿಂಡಾರಕವೆಂಬ ನನ್ನ ಹೆಸರಿನಿಂದ ಪ್ರಸಿದ್ಧವಾಗಲಿ.

೧೫. ಭಗವಂತನು ಹೇಳುತ್ತಾನೆ:—ದ್ವಿಜವರ್ಯನೆ ! ನೀನು ಈ ದೇಹದ ಅವಸಾನದಲ್ಲಿ ನನ್ನ ಗಣನಾಗುವೆ. ಈ ತೀರ್ಥವು ಪಿಂಡಾರಕವೆಂದು ಪ್ರಸಿದ್ಧವಾಗುವುದು.

೧೬. ಪ್ರಾಜ್ಞನೆ ! ನಾನು ಮಹಾಷ್ಟಮಿ ದಿನ ಇಲ್ಲಿ ಸನ್ನಿಹಿತನಾಗಿರುವೆನು. ಆ ಅಷ್ಟಮಿ ದಿನ ನಾನು ಸನ್ನಿಹಿತನಾಗಿರುವ ಈ ಸ್ಥಳದಲ್ಲಿ ಮಿಂದವರು ಉತ್ತಮ ಸ್ಥಾನವನ್ನು ಪಡೆಯುವರು.

೧೭. ಪುಲಸ್ತ್ಯನು ಹೇಳುತ್ತಾನೆ :—ಶಂಕರನು ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನವಾದನು. ಪಿಂಡಾರಕ ಮಂಕಿಯು ಅಲ್ಲಿ ಹಗಲು ರಾತ್ರಿ ತಪಸ್ಸನ್ನು ಮಾಡಿದನು.

೧೮. ಬಳಿಕ ಬಹಳಕಾಲದ ಮೇಲೆ ಅವನು ಶರೀರವನ್ನು ತ್ಯಜಿಸಿ ಸ್ವರ್ಗಕ್ಕೆ ಹೋಗಿ ರುದ್ರನ ಬಳಿಯಲ್ಲಿ ಗಣನಾದನು.

೧೯. ಆದ್ದರಿಂದ ಅಲ್ಲಿ ಮಂತ್ರಪೂರ್ವಕವಾಗಿ ಸ್ನಾನಮಾಡಬೇಕು.

**ರಾಜೇಂದ್ರ ಮಹಿಷೀದಾನಮಥಾಷ್ಟಮ್ಯಾಂ ವಿಶೇಷತಃ ।**
**ಯ ಇಚ್ಛತಿ ಸದಾಽಭೀಷ್ಟಮಿಹ ಲೋಕೇ ಪರತ್ರ ಚ ॥ ೨೦ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಪಿಂಡಾರಕತೀರ್ಥಮಾಹಾತ್ಮ್ಯವರ್ಣನಂ ನಾಮ
ಪಂಚವಿಂಶೋಽಧ್ಯಾಯಃ

---

೨೦. ಮಹಾರಾಜ ! ಇಹಪರಲೋಕಗಳಲ್ಲಿ ಯಾವಾಗಲೂ ಇಷ್ಟಾರ್ಥಗಳನ್ನು ಬಯಸುವವನು ಅಲ್ಲಿ ಅಷ್ಟಮಿಯ ದಿನ ವಿಶೇಷವಾಗಿ ಎಮ್ಮೆಗಳನ್ನು ದಾನಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಪಿಂಡಾರಕತೀರ್ಥಮಾಹಾತ್ಮ್ಯವರ್ಣನವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷಡ್ವಿಂಶೋಽಧ್ಯಾಯಃ

### ಕನಖಲತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ತೀರ್ಥಂ ತ್ರೈಲೋಕ್ಯವಿಶ್ರುತಂ ।
ತಸ್ಮಿನ್ಕನಖಲಂನಾಮ ಪರ್ವತೇ ಪಾಪನಾಶನೇ ॥ ೧ ॥
ಶೃಣು ತತ್ರಾಽಭವತ್ಪೂರ್ವಂ ಯದಾಶ್ಚರ್ಯಂ ಮಹೀಪತೇ ।
ಪಾರ್ಥಿವಃ ಸುಮತಿರ್ನಾಮ ಸಂಪ್ರಾಪ್ತೋಽರ್ಬುದಪರ್ವತೇ ॥ ೨ ॥
ಸೂರ್ಯಗ್ರಹೇ ಮಹೀಪಾಲ ತೀರ್ಥಂ ಕನಖಲಂ ಗತಃ ।
ತೇನ ವಿಪ್ರಾರ್ಥಮಾನೀತಂ ಸುವರ್ಣಂ ಜಾತ್ಯಮೇವ ಹಿ ॥ ೩ ॥
ಪ್ರಭೂತಂ ಪತಿತಂ ತೋಯೇ ಪ್ರಮಾದಾತ್ತಸ್ಯ ಭೂಪತೇಃ ।
ನ ಲಬ್ಧಂ ತೇನ ಭೂಪಾಲ ಅನ್ವೇಷಣಪರೇಣ ಚ ॥ ೪ ॥

---

### ಕನ್ನಡದ ಅನುವಾದ

### ಕನಖಲತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನರೇಂದ್ರ ! ಬಳಿಕ ಮೂರುಲೋಕಗಳಲ್ಲಿ ಪ್ರಸಿದ್ಧವೂ, ಪಾಪವನ್ನು ಪರಿಹರಿಸುವುದೂ ಆದ ಆ ಅರ್ಬುದಪರ್ವತದಲ್ಲಿರುವ ಕನಖಲ ತೀರ್ಥಕ್ಕೆ ಹೋಗಬೇಕು.

೨. ದೊರೆಯೆ ! ಹಿಂದೆ ಆ ಪರ್ವತದಲ್ಲಿ ನಡೆದ ಆಶ್ಚರ್ಯಕರವಾದ ಒಂದು ಸಮಾಚಾರವನ್ನು ಕೇಳು. ಸುಮತಿಯೆಂಬ ಓರ್ವ ರಾಜನು ಅರ್ಬುದ ಪರ್ವತಕ್ಕೆ ಬಂದನು.

೩-೪. ಅವನು ಸೂರ್ಯಗ್ರಹಣ ಕಾಲದಲ್ಲಿ ಕನಖಲ ತೀರ್ಥಕ್ಕೆ ಹೋದನು. ಅಲ್ಲಿ ಅವನು ಬ್ರಾಹ್ಮಣರಿಗಾಗಿ ತಂದ ಉತ್ತಮ ಜಾತಿಯ ಸುವರ್ಣವು ಅವನ ಪ್ರಮಾದದಿಂದ ನೀರಿನಲ್ಲಿ ಬಿದ್ದಿತು. ಅವನು ಅಲ್ಲಿ ಎಷ್ಟು ಹುಡುಕಿದರೂ ಅದು ಸಿಗಲಿಲ್ಲ;

ತತಃ ಸ್ನಾತ್ವಾ ಗೃಹಂ ಪ್ರಾಪ್ತಃ ಪಶ್ಚಾತ್ತಾಪಸಮನ್ವಿತಃ ।
ತತಃ ಕಾಲೇನ ಮಹತಾ ಸ ಭೂಯಸ್ತತ್ರ ಚಾಗತಃ ॥ ೫ ॥

ಸ್ನಾನಾರ್ಥಂ ಭಾಸ್ಕರೇ ಗ್ರಸ್ತೇ ತಂ ಚ ದೇಶಮಪಶ್ಯತ ।
ಚಿಂತಯಾಮಾಸ ಮೇಧಾವೀ ಹ್ಯಸ್ಮಿನ್ದೇಶೇ ಸದಾ ಮಮ ॥ ೬ ॥
ಸುವರ್ಣಂ ಪತಿತಂ ಹಸ್ತಾನ್ನ ಚ ಲಬ್ಧಂ ಕಥಂಚನ ॥ ೭ ॥

ಪುಲಸ್ತ್ಯ ಉವಾಚ :—
ಏವಂ ಚಿಂತಯತಸ್ತಸ್ಯ ವಾಗುವಾಚಾಶರೀರಿಣೀ ।
ನಾತ್ರ ನಾಶೋಽಸ್ತಿ ರಾಜೇಂದ್ರ ಇಹ ಲೋಕೇ ಪರತ್ರ ಚ ॥ ೮ ॥

ಅತ್ರ ಕೋಟಿಗುಣಂ ಜಾತಂ ಸುವರ್ಣಂ ಯತ್ಪುರಾತನಂ ।
ಪಶ್ಚಾತ್ತಾಪಸ್ತ್ವಯಾ ಭೂರಿ ಕೃತೋ ಯದ್ದ್ರವ್ಯನಾಶನೇ ॥ ೯ ॥
ತಸ್ಮಾತ್ಸಂಖ್ಯಾ ಚ ಸಂಜಾತಾ ತಥೈವಾಕಲ್ಪಿತಸ್ಯ ಚ ।
ಯೇಽತ್ರ ಶ್ರದ್ಧಾಸಮಾಯುಕ್ತಾಃ ಸುವರ್ಣೈರ್ನೃಪಸತ್ತಮ ।
ಯತ್ನಾಚ್ಛ್ರಾದ್ಧಂ ಕರಿಷ್ಯಂತಿ ಸುವರ್ಣಂ ಚ ವಿಶೇಷತಃ ॥ ೧೦ ॥

---

೫–೭. ತರುವಾಯ ಅವನು ಅಲ್ಲಿ ನಿಂದು ಪಶ್ಚಾತ್ತಾಪಗೊಂಡು ಮನೆಗೆ ಹಿಂದಿರುಗಿದನು. ಅನಂತರ ಅವನು ಬಹಳಕಾಲದ ಮೇಲೆ ಸೂರ್ಯಗ್ರಹಣ ಕಾಲದಲ್ಲಿ ಸ್ನಾನಕ್ಕಾಗಿ ಅಲ್ಲಿಗೆ ಬಂದು ಆ ಸ್ಥಳವನ್ನು ಕಂಡನು. ಅಲ್ಲಿ ಅವನು ಹಿಂದೆ ನನ್ನ ಚಿನ್ನವು ಇಲ್ಲಿ ಬಿದ್ದಿರುವುದು. ಅದು ಸಿಗಲಿಲ್ಲ ಎಂದು ಚಿಂತಿಸಿದನು.

೮. ಪುಲಸ್ತ್ಯನು ಹೇಳುತ್ತಾನೆ :—ಅವನು ಹೀಗೆ ಚಿಂತಿಸುತ್ತಿರಲು ಅಶರೀರ ವಾಣಿಯಾಯಿತು. ದೊರೆಯೆ! ಇಲ್ಲಿರುವ ವಸ್ತುಗಳಿಗೆ ಇಹ ಪರಲೋಕಗಳಲ್ಲಿ ನಾಶವಿಲ್ಲ.

೯–೧೧. ಹಿಂದೆ ನೀನು ಕಳೆದುಕೊಂಡಿರುವ ಚಿನ್ನವು ಕೋಟಿಯಷ್ಟು ಹೆಚ್ಚಾಗಿರುವುದು. ನೀನು ಅದಕ್ಕಾಗಿ ಬಹಳವಾಗಿ ಪಶ್ಚಾತ್ತಾಪಪಟ್ಟುದರಿಂದ ಆ ಚಿನ್ನವು ನೀನು ಆಲೋಚಿಸಿದ ಸಂಖ್ಯೆಯಷ್ಟು ಹೆಚ್ಚಾಗಿರುವುದು. ನೃಪೇಂದ್ರ! ಇಲ್ಲಿ ಶ್ರದ್ಧೆಯಿಂದ ಸುವರ್ಣ ಶ್ರಾದ್ಧವಾಡಿದರೆ ಮತ್ತು ಚಿನ್ನವನ್ನು ಬ್ರಾಹ್ಮಣರಿಗೆ ದಾನಮಾಡಿದರೆ ಅದು

ಬ್ರಾಹ್ಮಣೇಭ್ಯಃ ಪ್ರದಾಸ್ಯಂತಿ ಸಂಖ್ಯಾ ತಸ್ಯ ನ ವಿದ್ಯತೇ ।
ಅತ್ರಾನ್ವೇಷಯ ದೇಶೇ ತ್ವಂ ಪ್ರಾಪ್ಸ್ಯಸೇ ನಾಽತ್ರ ಸಂಶಯಃ ॥ ೧೧ ॥
ಸ ಶ್ರುತ್ವಾ ಭಾರತೀಂ ತತ್ರ ಹ್ಯಾಕಾಶಾದುತ್ಥಿತಾಂ ನೃಪ ।
ಅನ್ವೇಷಮಾಣೋಽಸ್ಮಿನ್ದೇಶೇ ಸುವರ್ಣಂ ತಚ್ಚ ಲಬ್ಧವಾನ್ ॥ ೧೨ ॥
ಶುಭ್ರಂ ಕೋಟಿಗುಣಂ ಪ್ರಾಜ್ಯಂ ತತಸ್ತುಷ್ಟಿಂ ಸಮಾಗತಃ ।
ಜ್ಞಾತ್ವಾ ತೀರ್ಥಪ್ರಭಾವಂ ತಂ ಬ್ರಾಹ್ಮಣೇಭ್ಯಃ ಸಹಸ್ರಶಃ ।
ಪ್ರದದೌ ಚ ದಯಾಯುಕ್ತ ಉದ್ದಿಶ್ಯ ಪಿತೃದೇವತಾಃ ॥ ೧೩ ॥
ತತಸ್ತಸ್ಯ ಪ್ರಭಾವೇಣ ಸ ದಾನಸ್ಯ ಮಹೀಪತಿಃ ।
ಸಂಜಾತೋ ಧನದೋ ನಾಮ ಯಕ್ಷೋ ನಾನಾಧನಪ್ರದಃ ॥ ೧೪ ॥
ತತ್ರ ಯಃ ಕುರುತೇ ಶ್ರಾದ್ಧಂ ಗ್ರಹೇ ಸೂರ್ಯಸ್ಯ ಭೂಮಿಪ ।
ಆಕಲ್ಪಂ ಪಿತರಸ್ತಸ್ಯ ತೃಪ್ತಿಂ ಯಾಂತಿ ಸುತರ್ಪಿತಾಃ ॥ ೧೫ ॥
ಸ್ನಾನೇನ ಋಷಯೋ ದೇವಾಸ್ತುಷ್ಟಿಂ ಯಾಂತಿ ಮಹೋರಗಾಃ ।
ನಾಶಃ ಸಂಜಾಯತೇ ಸದ್ಯಃ ಪಾಪಸ್ಯ ಪೃಥಿವೀಪತೇ ॥ ೧೬ ॥

---

ಅಧಿಕವಾಗುವ ಸಂಖ್ಯೆಯು ಹೇಳಲಸಾಧ್ಯವು. ನೀನು ಇಲ್ಲಿ ಅದನ್ನು ಹುಡುಕು; ನಿಶ್ಚಯವಾಗಿಯೂ ಪಡೆಯುವೆ.

೧೨–೧೩. ಅವನು ಆಕಾಶದಲ್ಲಿ ಹುಟ್ಟಿದ ಆ ವಾಣಿಯನ್ನು ಕೇಳಿ ಚಿನ್ನವನ್ನು ಹುಡುಕಿ ಕೋಟಿಯಷ್ಟು ಹೆಚ್ಚಾಗಿ ಶುಭ್ರವಾದ ಆ ಸುವರ್ಣವನ್ನು ಪಡೆದು ಸಂತುಷ್ಟನಾದನು. ಆ ತೀರ್ಥದ ಮಾಹಾತ್ಮ್ಯವನ್ನರಿತು ಪಿತೃದೇವತೆಗಳನ್ನುದ್ದೇಶಿಸಿ ದಯೆಯಿಂದ ಸಾವಿರಾರು ಬ್ರಾಹ್ಮಣರಿಗೆ ಸುವರ್ಣಗಳನ್ನಿತ್ತನು.

೧೪. ತರುವಾಯ ಆ ಸುಮತಿರಾಜನು ಆ ದಾನದ ಪ್ರಭಾವದಿಂದ ಬಹು ಧನಗಳನ್ನೀಯುವ ಧನದನೆಂಬ ಯಕ್ಷನಾಗಿ ಜನಿಸಿದನು.

೧೫. ದೊರೆಯೆ ! ಸೂರ್ಯಗ್ರಹಣ ಕಾಲದಲ್ಲಿ ಅಲ್ಲಿ ಶ್ರಾದ್ಧಮಾಡಿದವನ ಪಿತೃಗಳು ಕಲ್ಪಾವಸಾನದ ವರೆಗೆ ತೃಪ್ತರಾಗಿರುವರು.

೧೬. ಮಹಾರಾಜ! ಅಲ್ಲಿ ಸ್ನಾನಮಾಡುವುದರಿಂದ ಋಷಿಗಳು, ದೇವತೆಗಳು, ಉರಗಗಳೂ ತೃಪ್ತಿಗೊಳ್ಳುವರು. ಪಾಪವು ಕೂಡಲೆ ನಾಶವಾಗುವುದು.

ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ಯಥಾಶಕ್ತ್ಯಾ ತಥಾ ದಾನಂ ಶ್ರಾದ್ಧಂ ಚ ನೃಪಸತ್ತಮ ॥ ೧೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕನಖಲತೀರ್ಥಮಾಹಾತ್ಮ್ಯವರ್ಣನಂನಾಮ
॥ ಷಡ್ವಿಂಶೋಽಧ್ಯಾಯಃ ॥

---

೧೭. ಆದ್ದರಿಂದ ಸರ್ವ ಪ್ರಯತ್ನದಿಂದಲೂ ಅಲ್ಲಿ ಸ್ನಾನಮಾಡಿ ಶಕ್ತ್ಯನುಸಾರ ದಾನವನ್ನೂ, ಶ್ರಾದ್ಧವನ್ನೂ ಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಶ್ರೀಸ್ಕಾಂದಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಕನಖಲತೀರ್ಥಮಾಹಾತ್ಮ್ಯ ವರ್ಣನವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಸಪ್ತವಿಂಶೋಽಧ್ಯಾಯಃ

### ಚಕ್ರತೀರ್ಥಪ್ರಭಾವವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಚಕ್ರತೀರ್ಥಮನುತ್ತಮಂ ।
ಯತ್ರ ಚಕ್ರಂ ಪುರಾ ಮುಕ್ತಂ ವಿಷ್ಣುನಾ ಪ್ರಭವಿಷ್ಣುನಾ ॥ ೧ ॥
ನಿಹತ್ಯ ದಾನವಾನ್ಸಂಖ್ಯೇ ಕೃತ್ವಾ ಸ್ನಾನಂ ಸುನಿರ್ಝರೇ ।
ವಿಷ್ಣುಃ ಪ್ರಾಕ್ಷಾಲಯತ್ತೋಯಂ ತೇನ ತನ್ಮೇಧ್ಯತಾಂ ಗತಂ ॥ ೨ ॥
ತತ್ರ ಶ್ರಾದ್ಧಂ ತು ಯಃ ಕುರ್ಯಾಚ್ಛಯನೇ ಬೋಧನೇ ಹರೇಃ ।
ಆಕಲ್ಪಂ ಪಿತರಸ್ತಸ್ಯ ತೃಪ್ತಿಂ ಯಾಂತಿ ನರಾಧಿಪ ॥ ೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽಬುದಖಂಡೇ
ಚಕ್ರತೀರ್ಥಪ್ರಭಾವವರ್ಣನಂನಾಮ
ಸಪ್ತವಿಂಶೋಽಧ್ಯಾಯಃ

---

### ಕನ್ನಡದ ಅನುವಾದ

### ಚಕ್ರತೀರ್ಥಪ್ರಭಾವವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ನೃಪೇಂದ್ರ! ಬಳಿಕ ಸಮರ್ಥನಾದ ವಿಷ್ಣುವು ಹಿಂದೆ ಚಕ್ರವನ್ನು ಬಿಟ್ಟ ಶ್ರೇಷ್ಠವಾದ ಚಕ್ರತೀರ್ಥದೆಡೆಗೆ ಹೋಗಬೇಕು.

೨. ವಿಷ್ಣುವು ದಾನವರನ್ನು ಯುದ್ಧದಲ್ಲಿ ಸದೆಬಡಿದು ಆ ಗಿರಿನದಿಯಲ್ಲಿ ಮಿಂದು ಚಕ್ರವನ್ನು ಅದರ ನೀರಿನಲ್ಲಿ ತೊಳೆದುದರಿಂದ ಅದು ಪವಿತ್ರ ತೀರ್ಥವಾಯಿತು.

೩. ದೊರೆಯೆ! ಅಲ್ಲಿ ಶಯನ ಮತ್ತು ಉತ್ಥಾನ ದ್ವಾದಶಿಗಳಲ್ಲಿ ಶ್ರಾದ್ಧ ಮಾಡಿದವನ ಪಿತೃಗಳು ಕಲ್ಪಾಂತ್ಯದವರೆಗೆ ತೃಪ್ತರಾಗುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಚಕ್ರತೀರ್ಥಪ್ರಭಾವವರ್ಣನವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಷ್ಟಾವಿಂಶೋಽಧ್ಯಾಯಃ

## ಮನುಷ್ಯತೀರ್ಥಪ್ರಭಾವವರ್ಣನಂ

ಪುಲಸ್ತ್ಯ ಉವಾಚ :—
ತತೋ ಗಚ್ಛೇನ್ನೃಪಶ್ರೇಷ್ಠ ಸುಪುಣ್ಯಂ ಮಾನುಷಂ ಹ್ರದಂ ।
ಯತ್ರ ಸ್ನಾತೋ ನರಃ ಸದ್ಯೋ ಮನುಷ್ಯೋ ಜಾಯತೇ ಸದಾ ॥ ೧ ॥
ನ ತಿರ್ಯಕ್ತ್ವಮವಾಪ್ನೋತಿ ಕೃತ್ವಾಽಪಿ ಬಹುಘಾತಕಂ ।
ತತ್ರಾಶ್ಚರ್ಯಮಭೂತ್ಪೂರ್ವಂ ಯತ್ತಚ್ಛೃಣು ನರಾಧಿಪ ॥ ೨ ॥
ಮೃಗಯೂಥಮನುಪ್ರಾಪ್ತಂ ವ್ಯಾಧವ್ಯಾಪ್ತಂ ಸಮಂತತಃ ।
ತೇ ಮೃಗಾ ಭಯಸಂತ್ರಸ್ತಾಃ ಪ್ರವಿಷ್ಟಾ ಜಲಮಧ್ಯತಃ ॥ ೩ ॥
ಸದ್ಯೋ ಮನುಷ್ಯತಾಂ ಪ್ರಾಪ್ತಾಃ ಪೂರ್ವಜಾತಿಸ್ಮರಾಸ್ತಥಾ ।
ಏತಸ್ಮಿನ್ನೇವ ಕಾಲೇ ತು ವ್ಯಾಧಾಸ್ತೇ ಸಮುಪಾಗತಾಃ ॥ ೪ ॥

---

## ಕನ್ನಡದ ಅನುವಾದ

### ಮನುಷ್ಯತೀರ್ಥಪ್ರಭಾವವರ್ಣನ

೧-೨. ಪುಲಸ್ತ್ಯನು ಹೇಳುತ್ತಾನೆ:—ನರೇಂದ್ರ! ಬಳಿಕ ಪುಣ್ಯಕರವಾದ ಮಾನುಷಹ್ರದಕ್ಕೆ ಹೋಗಬೇಕು. ಅಲ್ಲಿ ಮಿಂದ ಮಾನವನು ಅನೇಕ ಪಾಪಗಳನ್ನು ಮಾಡಿದವನಾದರೂ ತಿರ್ಯಗ್ಜಂತುವಾಗಿ ಜನಿಸದೆ ಉತ್ತಮ ಮಾನವನಾಗಿಯೆ ಹುಟ್ಟುವನು. ಅಲ್ಲಿ ಹಿಂದೆ ನಡೆದ ಒಂದು ಅದ್ಭುತವಿಷಯವನ್ನು ಕೇಳು

೩. ಒಂದು ಮೃಗಗಳ ಹಿಂಡು ಬೇಡರಿಂದ ಹಿಂಬಾಲಿಸಲ್ಪಟ್ಟು ಭಯದಿಂದ ನೀರಿನ ನಡುವೆ ಹೊಕ್ಕಿತು.

೪ ೫. ಆ ಮೃಗಗಳು ಕೂಡಲೆ ಮನುಷ್ಯ ಜನ್ಮವನ್ನು ತಾಳಿ ಹಿಂದಿನ ಜಾತಿ, ಸ್ಮರಣೆಯನ್ನು ಹೊಂದಿದುವು. ಈ ಸಮಯದಲ್ಲಿ ಆ ಬಿಲ್ಲುಬಾಣಗಳನ್ನು ಹಿಡಿದ

ಚಾಪಬಾಣಧರಾಃ ಸರ್ವೇ ಯಥಾ ವೈ ಯಮಕಿಂಕರಾಃ ।
ಪಪ್ರಚ್ಛುಶ್ಚ ಮೃಗಾನ್ಭೂಪ ಮಾನುಷತ್ವಮುಪಾಗತಾನ್ ॥ ೫ ॥
ಮೃಗಯೂಥಮನುಪ್ರಾಪ್ತಮಸ್ಮಿನ್ಸ್ಥಾನೇ ಜಲಾಶ್ರಯೇ ।
ಕೇನ ಮಾರ್ಗೇಣ ತದ್ಯಾತಂ ವದಧ್ವಂ ಸತ್ವರಂ ಹಿ ನಃ ।
ವಯಂ ಸರ್ವೇ ಪರಿಶ್ರಾಂತಾಃ ಕ್ಷುತ್ತೃಡ್ಭ್ಯಾಂ ಚ ವಿಶೇಷತಃ ॥ ೬ ॥

ಮನುಷ್ಯಾ ಊಚುಃ :—

ವಯಂ ತೇ ಹರಿಣಾಃ ಸರ್ವೇ ಮಾನುಷ್ಯಂ ಭಾವಮಾಶ್ರಿತಾಃ ।
ತೀರ್ಥಸ್ಯಾಸ್ಯ ಪ್ರಭಾವೇಣ ಸತ್ಯಮೇತದಸಂಶಯಂ ॥ ೭ ॥

ಪುಲಸ್ತ್ಯ ಉವಾಚ :—

ತತಸ್ತೇ ಶಬರಾಃ ಸರ್ವೇ ತ್ಯಕ್ತ್ವಾ ಚಾಪಾನಿ ಪಾರ್ಥಿವ ।
ಕೃತ್ವಾ ಸ್ನಾನಂ ಜಲೇ ತಸ್ಮಿನ್ಸದ್ಯಃ ಸಿದ್ಧಿಂ ಗತಾ ನೃಪ ॥ ೮ ॥
ತತಃ ಶಕ್ರಸ್ತು ತದ್ದೃಷ್ಟ್ವಾ ತೀರ್ಥಂ ಪಾಪಹರಂ ನೃಪ ।
ಪೂರಯಾಮಾಸ ಸರ್ವತ್ರ ಪಾಂಸುಭಿರ್ನೃಪಸತ್ತಮ ॥ ೯ ॥
ಅದ್ಯಾಪಿ ಮನುಜಾಸ್ತತ್ರ ಬುಧಾಷ್ಟಮ್ಯಾಂ ನರಾಧಿಪ ।
ಸ್ನಾನಂ ಯೇ ಪ್ರಕರಿಷ್ಯಂತಿ ತಿರ್ಯಕ್ತ್ವಂ ನ ವ್ರಜಂತಿ ತೇ ॥ ೧೦ ॥

---

ಬೇಡರು ಯಮದೂತರಂತೆ ಅಲ್ಲಿಗೆ ಬಂದು ಮನುಷ್ಯರಾದ ಜಿಂಕೆಗಳನ್ನು ಹೀಗೆ ಪ್ರಶ್ನಿಸಿದರು.

೬. ಈ ಕೊಳಕ್ಕೆ ಬಂದ ಮೃಗಗಳ ಹಿಂಡು ಯಾವದಾರಿಯಿಂದ ಹೋಯಿತು? ಕೂಡಲೆ ಹೇಳಿರಿ. ನಾವು ಹಸಿವು ಬಾಯಾರಿಕೆಯಿಂದ ಬಹಳವಾಗಿ ಬಳಲಿದ್ದೇವೆ.

೭. ಮನುಷ್ಯರು ಹೇಳುತ್ತಾರೆ :—ನಾವೆಲ್ಲ ಈ ತೀರ್ಥದ ಪ್ರಭಾವದಿಂದ ಮನುಷ್ಯರಾದ ಆ ಜಿಂಕೆಗಳಾಗಿದ್ದೇವೆ. ಇದು ನಿಜ.

೮. ಪುಲಸ್ತ್ಯನು ಹೇಳುತ್ತಾನೆ.—ದೊರೆಯೆ! ಬಳಿಕ ಆ ಬೇಡರೆಲ್ಲ ಬಿಲ್ಲುಗಳನ್ನು ತ್ಯಜಿಸಿ ಆ ಕೊಳದಲ್ಲಿ ಮಿಂದು ಕೂಡಲೆ ಸಿದ್ಧಿಯನ್ನು ಪಡೆದರು.

೯. ಅನಂತರ ಪಾಪವನ್ನು ನಿವಾರಿಸುವ ಆ ತೀರ್ಥವನ್ನು ನೋಡಿ ಇಂದ್ರನು ಎಲ್ಲೆಡೆಯಲ್ಲಿಯೂ ಧೂಳುಗಳಿಂದ ಅದನ್ನು ತುಂಬಿದನು.

೧೦. ಈಗಲೂ ಮನುಷ್ಯರು ಅಲ್ಲಿ ಅಷ್ಟಮಿ ಬುಧವಾರ ಮಿಂದರೆ ತಿರ್ಯಗ್ಜಂತುವಾಗುವುದಿಲ್ಲ.

**ಪಿತೃಮೇಧಫಲಂ ಕೃತ್ಸ್ನಂ ಶ್ರಾದ್ಧದಾನಾದವಾಪ್ನುಯುಃ** || ೧೧ ||

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಮಾನುಷತೀರ್ಥಪ್ರಭಾವವರ್ಣನಂ ನಾಮ
ಅಷ್ಟಾವಿಂಶೋಽಧ್ಯಾಯಃ

---

೧೧. ಶ್ರಾದ್ಧ ಮತ್ತು ದಾನಗಳಿಂದ ಸಂಪೂರ್ಣ ಪಿತೃಮೇಧದ ಫಲವನ್ನು ಹೊಂದುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಆರ್ಬುದ ಖಂಡದಲ್ಲಿ
ಮನುಷ್ಯತೀರ್ಥಪ್ರಭಾವವರ್ಣನವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕೋನತ್ರಿಂಶೋಽಧ್ಯಾಯಃ

### ಕಪಿಲಾತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಕಪಿಲಾತೀರ್ಥಮುತ್ತಮಂ ।
ಯತ್ರ ಸ್ನಾತೋ ನರಃ ಸಮ್ಯಙ್ಮುಚ್ಯತೇ ಸರ್ವಕಿಲ್ಬಿಷೈಃ ॥ ೧ ॥
ಪುರಾಽಭೂನ್ನೃಪತಿರ್ನಾಮ ಸುಪ್ರಭಃ ಪರವೀರಹಾ ।
ನಿತ್ಯಂ ಚ ಮೃಗಯಾಶೀಲೋ ಮೃಗಾಣಾಮಹಿತೇ ರತಃ ॥ ೨ ॥
ನ ತಥಾ ಸ್ತ್ರೀಷು ನೋ ಭೋಗೇ ನಾಶ್ವಯಾನೇ ಸ ವಾರಣೇ ।
ತಸ್ಯಾಭೂದನುರಾಗಶ್ಚ ಯಥಾ ಮೃಗವಿಮರ್ದನೇ ॥ ೩ ॥
ಸ ಕದಾಚಿನ್ನೃಪಶ್ರೇಷ್ಠ ಮೃಗಾಸಕ್ತೋಽರ್ಬುದಂ ಗತಃ ।
ಅಪಶ್ಯತ್ತಾನುದೇಶೇ ಚ ಮೃಗೀಂ ಶಿಶುಸಮಾವೃತಾಂ ॥ ೪ ॥

---

### ಕನ್ನಡದ ಅನುವಾದ

#### ಕಪಿಲಾತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಕಪಿಲಾ ತೀರ್ಥಕ್ಕೆ ಹೋಗಬೇಕು. ಅಲ್ಲಿ ಮಿಂದ ಮಾನವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

೨. ಹಿಂದೆ ಯಾವಾಗಲೂ ಬೇಟೆಯಾಡುವವನೂ, ಜಿಂಕೆಗಳಿಗೆ ಅಹಿತವನ್ನುಂಟುಮಾಡುವುದರಲ್ಲಿ ನಿರತನೂ ಆದ ಸುಪ್ರಭನೆಂಬ ಶತ್ರುನಾಶಕನಾದ ದೊರೆಯೋರ್ವನಿದ್ದನು.

೩. ಅವನಿಗೆ ಮೃಗಗಳನ್ನು ಕೊಲ್ಲುವುದರಲ್ಲಿರುವಂತೆ ಆಸಕ್ತಿಯು ಸ್ತ್ರೀಯರಲ್ಲಿಯೂ, ಸುಖಾನುಭವದಲ್ಲಿಯೂ, ಕುದುರೆ ಆನೆಗಳಲ್ಲಿ ಸಂಚರಿಸುವುದರಲ್ಲಿಯೂ ಇರಲಿಲ್ಲ.

೪–೫. ಅವನು ಒಂದಾನೊಂದು ದಿನ ಮೃಗವಧೆಯಲ್ಲಿ ನಿರತನಾಗಿ ಅರ್ಬುದಾಚಲಕ್ಕೆ ಹೋಗಿ ಅದರ ತಪ್ಪಲಲ್ಲಿ ಹಾಲನ್ನು ಕುಡಿಯುವುದರಲ್ಲಿ ಪ್ರೀತಿಯುಳ್ಳ ಶಿಶುವಿಗೆ

ಸ್ತನಂ ಧಯಂತೀಂ ಸುಸ್ನಿಗ್ಧಾಂ ಶಿಶೋಃ ಕ್ಷೀರಾನುರಾಗಿಣಃ ।
ಸಾ ತೇನ ವಿದ್ಧಾ ಬಾಣೇನ ಸಹಸಾ ನತಪರ್ವಣಾ ॥ ೫ ॥
ಅಥ ಸಾ ಪಾರ್ಥಿವಂ ದೃಷ್ಟ್ವಾ ಪ್ರಗೃಹೀತಶರಾಸನಂ ।
ದ್ವಿತೀಯಂ ಯೋಜಯಾನಂ ಚ ಮೃಗೀಬಾಣಂ ಸುನಿರ್ಮಲಂ ॥ ೬ ॥
ತತಃ ಸಾ ಕೋಪಸಂತಪ್ತಾ ಭೂಪಾಲಂ ಪ್ರತ್ಯಭಾಷತ ।
ನಾಯಂ ಧರ್ಮಃ ಸ್ಮೃತಃ ಕ್ಷಾತ್ರೋ ಯಸ್ತ್ವಯಾದ್ಯ ನಿಷೇವಿತಃ ॥ ೭ ॥
ಶಯಾನೋ ಮೈಥುನಾಸಕ್ತಃ ಸ್ತನಪೋ ವ್ಯಾಧಿಪೀಡಿತಃ ।
ನ ಹಂತವ್ಯೋ ಮೃಗೋ ರಾಜನ್ಮೃಗೀ ಚ ಶಿಶುನಾ ವೃತಾ ॥ ೮ ॥
ತದದ್ಯ ಮರಣಂ ಜಾತಂ ಮಮ ಸರ್ವಂ ನೃಪಾಧಮ ।
ತವ ಬಾಣಂ ಸಮಾಸಾದ್ಯ ಪುತ್ರಸ್ಯ ಚ ಮಯಾ ವಿನಾ ॥ ೯ ॥
ಯಸ್ಮಾದಹಮಧರ್ಮೇಣ ಹತಾ ಭೂಮಿಪತೇ ತ್ವಯಾ ।
ತಸ್ಮಾದತ್ರೈವ ಸಾನೌ ತ್ವಂ ರೌದ್ರವ್ಯಾಘ್ರೋ ಭವಿಷ್ಯಸಿ ॥ ೧೦ ॥

ಪುಲಸ್ತ್ಯ ಉವಾಚ :—

ತಚ್ಛ್ರುತ್ವಾ ಸುಮಹತ್ಪಾಪಂ ಸ ನೃಪೋ ಭಯಸಂಕುಲಂ ।
ತಾಂ ವೈ ಪ್ರಸಾದಯಾಮಾಸ ಪ್ರಾಣಶೇಷಾಂ ತದಾ ಮೃಗೀಂ ॥ ೧೧ ॥

---

ಹಾಲನ್ನು ಕುಡಿಸುತ್ತಿರುವ ಹೆಣ್ಣು ಜಿಂಕೆಯನ್ನು ನೋಡಿ ಅದನ್ನು ತೀಕ್ಷ್ಣವಾದ ಬಾಣದಿಂದ ಹೊಡೆದನು.

೬–೭. ತರುವಾಯ ಆ ಜಿಂಕೆಯು ಬಿಲ್ಲನ್ನು ಹಿಡಿದುಕೊಂಡು ಎರಡನೆ ಬಾಣವನ್ನು ಪ್ರಯೋಗಿಸಲು ಉದ್ಯುಕ್ತನಾದ ದೊರೆಯನ್ನು ಕಂಡು ಕುಪಿತವಾಗಿ ಇಂತೆಂದಿತು. "ದೊರೆಯೆ ! ನೀನೀಗ ಆಚರಿಸಿದುದು ಕ್ಷತ್ರಿಯ ಧರ್ಮವಲ್ಲ.

೮. ದೊರೆಯೆ ! ಮಲಗಿರುವುದೂ, ಮೈಥುನದಲ್ಲಿ ನಿರತವಾಗಿರುವುದೂ, ಹಾಲನ್ನು ಕುಡಿಯುತ್ತಿರುವುದೂ, ಕಾಯಿಲೆಯುಳ್ಳುದೂ, ಆದ ಗಂಡುಜಿಂಕೆಯೂ, ಮರಿಯೊಡನೆ ಇರುವ ಹೆಣ್ಣುಜಿಂಕೆಯೂ ಕೊಲ್ಲಲರ್ಹವಲ್ಲ.

೯. ಸಕಲ ರಾಜರಲ್ಲಿ ನೀಚನಾದ ದೊರೆಯೆ ! ನಾನು ನಿನ್ನ ಬಾಣದಿಂದ ಮೃತಳಾಗುವೆನು. ನಾನಿಲ್ಲದೆ ನನ್ನ ಮರಿಯೂ ಸಾಯುವುದು.

೧೦. ದೊರೆಯೆ ! ನೀನು ನನ್ನನ್ನು ಅಧರ್ಮದಿಂದ ಕೊಂದುದರಿಂದ ಇದೇ ಪರ್ವತದ ತಪ್ಪಲಿನಲ್ಲಿ ಭಯಂಕರವಾದ ಹುಲಿಯಾಗುವೆ.

೧೧. ಪುಲಸ್ತ್ಯನು ಹೇಳುತ್ತಾನೆ :—ದೊರೆಯು ತಾನು ಮಾಡಿರುವ ಆ ಮಹಾಪಾಪವನ್ನು ಕೇಳಿ ಭಯಗೊಂಡು ಸಾಯುತ್ತಿರುವ ಆ ಜಿಂಕೆಯನ್ನು ಸಮಾಧಾನಗೊಳಿಸಿದನು.

ಅವಿವೇಕಾನ್ಮಯಾ ಭದ್ರೇ ಹತಾ ತ್ವಂ ನಿರ್ಘೃಣೇನ ಚ
ಕುರು ಶಾಪವಿಮೋಕ್ಷಂ ತ್ವಂ ತಸ್ಮಾದ್ದೀನಸ್ಯ ಸನ್ಮೃಗಿ ॥ ೧೨ ॥
ಮೃಗ್ಯುವಾಚ :—
ಯದಾ ತು ಕಪಿಲಾಂನಾಮ ದ್ರಕ್ಷ್ಯಸೇ ತ್ವಂ ಪಯಸ್ವಿನೀಂ ।
ಧೇನುಂ ತಯಾ ಸಮಾಲಾಪಾತ್ಪ್ರಕೃತಿಂ ಯಾಸ್ಯಸೇ ಪುನಃ ॥ ೧೩ ॥
ಏವಮುಕ್ತ್ವಾ ಮೃಗೀ ರಾಜಾಗ್ರತಃ ಪ್ರಾಣೈರ್ವ್ಯಯುಜ್ಯತ ।
ಪೀಡಿತಾ ಶರಘಾತೇನ ಪುತ್ರಸ್ನೇಹಾದ್ವಿಶೇಷತಃ ॥ ೧೪ ॥
ಅಥಾಽಸೌ ಪಾರ್ಥಿವಃ ಸದ್ಯೋ ರೌದ್ರಾಸ್ಯಃ ಸಮಜಾಯತ ।
ವ್ಯಾಘ್ರೋ ದಂಷ್ಟ್ರಾಕರಾಲಶ್ಚ ತೀಕ್ಷ್ಣದಂತನಖಸ್ತಥಾ ।
ಭಕ್ಷಯಾಮಾಸ ತಾಂ ಸೇನಾಮಾತ್ಮೀಯಾಂ ಕ್ರೋಧಮೂರ್ಚ್ಛಿತಃ ॥ ೧೫ ॥
ತತಸ್ತೇ ಸೈನಿಕಾ ರಾಜಸ್ಹತಶೇಷಾಃ ಸುದುಃಖಿತಾಃ ।
ಸ್ವಗೃಹಾಣಿ ಯಯುಸ್ತತ್ರ ಯಥಾ ವೃತ್ತಂ ಜನೇ ಪುರೇ ॥ ೧೬ ॥
ನಿವೇದಯಂತೋ ವೃತ್ತಾಂತಂ ಚತ್ವರೇಷು ತ್ರಿಕೇಷು ಚ ।
ಯಥಾ ವೈ ವ್ಯಾಘ್ರತಾಂ ಪ್ರಾಪ್ತಃ ಸ ರಾಜಾಽರ್ಬುದಪರ್ವತೇ ॥ ೧೭ ॥
ತಚ್ಛ್ರುತ್ವಾ ವಚನಂ ತಸ್ಯ ಪುತ್ರಂ ಭೂರಿಪರಾಕ್ರಮಂ ।
ರಾಜ್ಯೇಽಭಿಷೇಚಯಾಮಾಸುರ್ನಾಮ್ನಾ ಖ್ಯಾತಂ ಮಹೌಜಸಂ ॥ ೧೮ ॥

---

೧೨. ಸಾಧುವಾದ ಜಿಂಕೆಯೆ! ನಿರ್ದಯನಾದ ನಾನು ಅವಿವೇಕದಿಂದ ನಿನ್ನನು ಕೊಂದೆನು. ಆದ್ದರಿಂದ ದೀನನಾದ ನನ್ನ ಶಾಪವನ್ನು ನೀಗಿಸು.

೧೩. ಮೃಗಿಯು ಹೇಳುತ್ತಾಳೆ:—ನೀನು ಕಪಿಲೆಯೆಂಬ ಹಸುವನ್ನು ಕಂಡು ಅದರೊಡನೆ ಮಾತಾಡುವುದರಿಂದ ಮೊದಲಿನ ಸ್ಥಿತಿಯನ್ನು ಹೊಂದುವೆ.

೧೪. ಆ ಜಿಂಕೆಯು ಹೀಗೆ ನುಡಿದು ಬಾಣದ ಹೊಡೆತದಿಂದಲೂ, ಪುತ್ರ ಸ್ನೇಹದಿಂದಲೂ ಪೀಡಿತವಾಗಿ ರಾಜನ ಮುಂದೆ ಮರಣಹೊಂದಿತು.

೧೫. ಅನಂತರ ಆ ದೊರೆಯು ಕೂಡಲೆ ಭಯಂಕರ ಮುಖವುಳ್ಳುದೂ, ಹಲ್ಲು ಗಳಿಂದ ಭಯಂಕರವೂ, ಹರಿತವಾದ ಹಲ್ಲು, ಉಗುರುಗಳುಳ್ಳುದೂ ಆದ ಹುಲಿಯಾಗಿ ಕೋಪದಿಂದ ತನ್ನ ಸೈನ್ಯವನ್ನೇ ಭಕ್ಷಿಸಿದನು.

೧೬–೧೭. ಬಳಿಕ ಹತಶೇಷರಾದ ಅವನ ಸೈನಿಕರು ಅತ್ಯಂತ ದುಃಖಿತರಾಗಿ ತಮ್ಮ ಮನೆಗಳನ್ನು ಸೇರಿ ಪಟ್ಟಣದ ಚೌಕಗಳಲ್ಲಿ ರಾಜನು ಅರ್ಬುದ ಪರ್ವತದಲ್ಲಿ ವ್ಯಾಘ್ರನಾದ ವೃತ್ತಾಂತವನ್ನು ನಡೆದಂತೆ ತಿಳಿಸಿದರು.

೧೮. ಪ್ರಜೆಗಳು ಆ ಮಾತನ್ನು ಕೇಳಿ ಮಹಾಜಸನೆಂದು ವಿಖ್ಯಾತನಾದ ಅವನ ಮಗನನ್ನು ರಾಜ್ಯದಲ್ಲಿ ಅಭಿಷೇಕಮಾಡಿದರು.

ಕಸ್ಯಚಿತ್ತ್ವಥ ಕಾಲಸ್ಯ ತಸ್ಮಿನ್ಸ್ನಾನೌನೃಪೋತ್ತಮ ।
ತೃಷಾರ್ತಂ ಗೋಕುಲಂ ಪ್ರಾಪ್ತಂ ಗೋಪಗೋಪೀಸಮಾಕುಲಂ ॥ ೧೯ ॥
ತತ್ರೈಕಾ ಗೌಃ ಪರಿಭ್ರಷ್ಟಾ ಸ್ವಯೂಥಾತ್ತೃಣತೃಷ್ಣಯಾ ।
ಕಪಿಲೇತಿ ಚ ವಿಖ್ಯಾತಾ ಸ್ವಯೂಥಸ್ಯಾಗ್ರಗಾಮಿನೀ ॥ ೨೦ ॥
ಅಚ್ಛಿನ್ನಾಗ್ರತೃಣಂ ಯಾ ತು ಸದಾ ಭಕ್ಷಯತೇ ನೃಪ ।
ಅಥ ಸಾ ಗಹ್ವರಂ ಪ್ರಾಪ್ತಾ ಗಿರೇಃ ಶೂನ್ಯಂ ಭಯಂಕರಂ ॥ ೨೧ ॥
ತತ್ರಾಸಸಾದ ತಾಂ ವ್ಯಾಘ್ರೋ ದಂಷ್ಟ್ರೋತ್ಕಟಮುಖಾವಹಃ ।
ಸಾ ತಂ ದೃಷ್ಟವತೀ ಪಾಪಂ ತ್ರಾಸಮಾಪ ಮೃಗೀವ ಹಿ ॥ ೨೨ ॥
ಸ್ಮರಂತೀ ಗೋಕುಲೇ ಬದ್ಧಂ ಸ್ವಸುತಂ ಕ್ಷೀರಪಾಯಿನಂ ।
ದುಃಖೇನ ರುದತೀಂ ತಾಂ ಸ ದೃಷ್ಟ್ವೋವಾಚ ಮೃಗಾಧಿಪಃ ॥ ೨೩ ॥

ವ್ಯಾಘ್ರ ಉವಾಚ :—

ಕಿಂ ವೃಥಾ ರುದ್ಯತೇ ಧೇನೋ ಮಾಂ ಪ್ರಾಪ್ಯ ನ ಹಿ ಜೀವಿತಂ ।
ವಿದ್ಯತೇ ಕಸ್ಯಚಿನ್ಮೂರ್ಖೇ ಸ್ಮರೇಷ್ಟಾಂ ದೇವತಾಂ ತತಃ ॥ ೨೪ ॥

---

೧೯. ಅನಂತರ ಒಂದಾನೊಂದು ದಿನ ಆ ತಪ್ಪಲಿಗೆ ಗೋಪ ಗೋಪಿಯರಿಂದ ಸಹಿತವಾದ ಗೋವುಗಳ ಸಮೂಹವು ಬಾಯಾರಿಕೆಗೊಂಡು ಬಂದಿತು.

೨೦. ಆ ಗೋವುಗಳ ಹಿಂದಿನ ಮುಂದೆ ಹೋಗುವ ಕಪಿಲೆಯೆಂಬ ಒಂದು ಗೋವು ಹುಲ್ಲಿನ ಆಶೆಯಿಂದ ತನ್ನ ಹಿಂಡಿನಿಂದ ತಪ್ಪಿಸಿಕೊಂಡಿತು.

೨೧. ಆ ಗೋವು ಕತ್ತರಿಸದ ಹುಲ್ಲಿನ ತುದಿಗಳನ್ನು ಮೇಯುತ್ತ ಪರ್ವತದ ಶೂನ್ಯವೂ, ಭಯಂಕರವೂ ಆದ ಗುಹೆಯನ್ನು ಪ್ರವೇಶಿಸಿತು.

೨೨. ಅಲ್ಲಿ ಹುಲ್ಲುಗಳಿಂದ ಭಯಂಕರವಾದ ಹುಲಿಯು ಆ ಕಪಿಲೆಯನ್ನು ಹಿಡಿದುಕೊಂಡಿತು. ಕಪಿಲೆಯು ಪಾಪಿಷ್ಠವಾದ ಆ ಹುಲಿಯನ್ನು ಕಂಡು ಹೆಣ್ಣು ಜಿಂಕೆಯಂತೆ ಹೆದರಿತು.

೨೩. ಹುಲಿಯು ಗೋಕುಲದಲ್ಲಿ ಕಟ್ಟಿರುವ ಹಾಲನ್ನು ಕುಡಿಯುವ ತನ್ನ ಕರುವನ್ನು ಸ್ಮರಿಸಿಕೊಂಡು ದುಃಖದಿಂದ ರೋದಿಸುತ್ತಿರುವ ಆ ಕಪಿಲೆಯನ್ನು ಕಂಡು ಇಂತೆಂದಿತು.

೨೪. ಹುಲಿಯು ಹೇಳುತ್ತದೆ:—ಮೂರ್ಖ ಧೇನುವೆ ! ನೀನು ವ್ಯರ್ಥವಾಗಿ ಏಕೆ ಅಳುತ್ತಿರುವೆ ? ನನ್ನೆಡೆಗೆ ಬಂದವರಾರೂ ಬದುಕಲಿಲ್ಲ. ನಿನ್ನಿಷ್ಟ ದೇವತೆಯನ್ನು ಸ್ಮರಿಸಿಕೊ.

ಕಪಿಲೋವಾಚ :—

ಸ್ವಜೀವಿತಭಯಾದ್ವ್ಯಾಘ್ರ ನ ರೋದಿಮಿ ಕಥಂಚನ ।
ಪುತ್ರೋ ಮೇ ಬಾಲಕೋ ಗೋಷ್ಠ್ಯಾಂ ಕ್ಷೀರಪಾಯೀ ಪ್ರತೀಕ್ಷತೇ॥ ೨೫ ॥
ನಾದ್ಯಾಪಿ ಸ ತೃಣಾನ್ಯತ್ತಿ ತೇನಾಹಂ ಶೋಕವಿಕ್ಲವಾ ।
ರೋದ್ಮಿ ವ್ಯಾಘ್ರ ಸುತಸ್ನೇಹಾತ್ಸತ್ಯೇನಾತ್ಮಾನಮಾಲಭೇ ॥ ೨೬ ॥
ಪಾಯಯಿತ್ವಾ ಸುತಂ ಬಾಲಂ ದೃಷ್ಟ್ವಾ ಪೃಷ್ಟ್ವಾ ಜನಂ ಸ್ವಕಂ ।
ಪುನಃ ಪ್ರತ್ಯಾಗಮಿಷ್ಯಾಮಿ ಯದಿ ತ್ವಂ ಮನ್ಯಸೇ ವಿಭೋ ॥ ೨೭ ॥

ವ್ಯಾಘ್ರ ಉವಾಚ :—

ಗತ್ವಾ ಸ್ವಸುತಸಾಂನಿಧ್ಯಂ ದೃಷ್ಟ್ವಾತ್ಮೀಯಂ ಚ ಗೋಕುಲಂ ।
ಪುನರಾಗಮನಂ ಯತ್ತೇ ನ ಚ ತಚ್ಛ್ರದ್ದಧಾಮ್ಯಹಂ ॥ ೨೮ ॥
ಭಯಾನ್ಮಾಂ ಭಾಷಸೇ ಚೈವಂ ನಾಸ್ತಿ ಪ್ರಾಣಸಮಂ ಭಯಂ ।
ತಸ್ಮಾತ್ಪ್ರಾಣಭಯಾನ್ನ ತ್ವಮಾಗಮಿಷ್ಯಸಿ ಧೇನುಕೇ ॥ ೨೯ ॥

ಕಪಿಲೋವಾಚ :—

ಶಪಥೈರಾಗಮಿಷ್ಯಾಮಿ ಸತ್ಯಮೇತಚ್ಛೃಣುಷ್ವ ಮೇ ।
ಪ್ರತ್ಯಯೋ ಯದಿ ತೇ ಭೂಯಾನ್ಮಾಂ ಮುಂಚ ತ್ವಂ ಮೃಗಾಧಿಪ ॥ ೩೦ ॥

---

೨೫. ಕಪಿಲೆಯು ಹೇಳುತ್ತದೆ:—ಹುಲಿಯೆ! ನಾನು ನನ್ನ ಪ್ರಾಣದ ಭಯದಿಂದ ಒಂದು ವೇಳೆಯೂ ಅಳುವುದಿಲ್ಲ. ಹಾಲನ್ನು ಕುಡಿಯುವ ನನ್ನ ಎಳೆ ಕರುವು ಕೊಟ್ಟಿಗೆಯಲ್ಲಿ ನನ್ನನ್ನು ನಿರೀಕ್ಷಿಸುತ್ತಿದೆ.

೨೬. ಆ ಕರುವು ಈಗಲೂ ಹುಲ್ಲನ್ನು ತಿನ್ನುವುದಿಲ್ಲ. ಆದರಿಂದ ನಾನು ದುಃಖಗೊಂಡು ಕರುವಿನಲ್ಲಿರುವ ಪ್ರೀತಿಯಿಂದ ಅಳುತ್ತಿದ್ದೇನೆ. ನಿಜವಾಗಿಯೂ ನಾನು ಸಾಯಲು ಬಯಸುವೆನು.

೨೭. ಸ್ವಾಮಿ! ನೀನು ಒಪ್ಪುವುದಾದರೆ ಕರುವಿಗೆ ಹಾಲನ್ನು ಕುಡಿಸಿ ಬಂಧು ಜನಗಳನ್ನು ನೋಡಿ ಅವರಿಗೆ ಹೇಳಿ ನಿನ್ನೆಡೆಗೆ ಮರಳಿ ಬರುವೆನು.

೨೮. ಹುಲಿಯು ಹೇಳುತ್ತದೆ:—ಹಸುವೆ! ನೀನು ಕರುವಿನ ಹತ್ತಿರಕ್ಕೆ ಹೋಗಿ ನಿನ್ನ ಗೋಕುಲವನ್ನು ನೋಡಿಕೊಂಡು ತಿರುಗಿ ಬರುತ್ತೀಯೆಂಬುದನ್ನು ನಾನು ನಂಬುವುದಿಲ್ಲ.

೨೯. ಹಸುವೆ! ನೀನು ಭಯದಿಂದ ನನ್ನೊಡನೆ ಹೀಗೆ ಹೇಳುತ್ತೀಯೆ ಪ್ರಾಣಭಯಕ್ಕೆ ಸಮಾನವಾದ ಭಯವಿಲ್ಲ. ಆದ್ದರಿಂದ ಪ್ರಾಣಭಯದಿಂದ ನೀನು ತಿರುಗಿ ಬರುವುದಿಲ್ಲ.

೩೦. ಕಪಿಲೆಯು ಹೇಳುತ್ತದೆ:—ಮೃಗರಾಜ! ಆಣೆಯಿಡುತ್ತೇನೆ. ನನ್ನ ಸತ್ಯವಾದ ನುಡಿಯನ್ನು ಕೇಳು. ನನ್ನಲ್ಲಿ ನಿನಗೆ ನಂಬಿಕೆಯಿದ್ದರೆ ನನ್ನನ್ನು ಬಿಡು.

ವ್ಯಾಘ್ರ ಉವಾಚ :—
ಬ್ರೂಹಿ ತಾಞ್ಛಪಥಾನ್ಭದ್ರೇ ಸಮಾಗಚ್ಛಸಿ ಯೈಃ ಪುನಃ ।
ತತೋಽಹಂ ಪ್ರತ್ಯಯಂ ಗತ್ವಾ ಮೋಚಯಿಷ್ಯಾಮಿ ವಾ ನ ವಾ ॥ ೩೧ ॥

ಕಪಿಲೋವಾಚ :—
ವೇದಾಧ್ಯಯನಸಂಪನ್ನಂ ಬ್ರಾಹ್ಮಣಂ ವಂಚಯೇತ್ತು ಯಃ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೨ ॥
ಗುರುದ್ರೋಹರತಾನಾಂ ಚ ಯತ್ಪಾಪಂ ಜಾಯತೇ ನೃಣಾಂ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೩ ॥
ಯತ್ಪಾಪಂ ಬ್ರಾಹ್ಮಣಂ ಹತ್ವಾ ಗಾಂ ಚ ಹತ್ವಾ ಪ್ರಜಾಯತೇ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೪ ॥
ಮಿತ್ರದ್ರೋಹೇ ಚ ಯತ್ಪಾಪಂ ಯತ್ಪಾಪಂ ಗುರುವಂಚಕೇ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೫ ॥
ಯೋ ಗಾಂ ಸ್ಪೃಶತಿ ಪಾದೇನ ಬ್ರಾಹ್ಮಣಂ ಪಾವಕಂ ತಥಾ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೬ ॥
ಕೂಪಾರಾಮತಡಾಗಾನಾಂ ಯೋ ಭಂಗಂ ಕುರುತೇ ನರಃ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೭ ॥

---

೩೧. ಹುಲಿಯು ಹೇಳುತ್ತದೆ :—ಮಂಗಳಕರಳೆ ! ನೀನು ಹಿಂತಿರುಗಿ ಬರುವ ವಿಷಯದಲ್ಲಿ ಮಾಡುವ ಶಪಥಗಳನ್ನು ಹೇಳು. ಅದರಿಂದ ನಾನು ನಂಬಿಕೆಗೊಂಡು ನಿನ್ನನ್ನು ಬಿಡುವೆನೋ. ಅಥವಾ ಬಿಡುವುದಿಲ್ಲವೋ ನೋಡೋಣ.

೩೨. ಕಪಿಲೆಯು ಹೇಳುತ್ತದೆ :—ನಾನು ಮರಳಿ ಬಾರದಿದ್ದರೆ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನನ್ನು ವಂಚಿಸಿದ್ದರಿಂದುಂಟಾಗುವ ಪಾಪವು ನನಗೆ ಸಂಭವಿಸುವುದು.

೩೩–೪೭. ನಾನು ಮರಳಿ ಬಾರದಿದ್ದರೆ ಗುರುದ್ರೋಹನಿರತರಾದ ಮನುಷ್ಯರಿಗುಂಟಾಗುವ ಪಾಪವೂ, ಬ್ರಾಹ್ಮಣ ಮತ್ತು ಗೋವನ್ನು ಕೊಂದ ಪಾಪವೂ, ಮಿತ್ರದ್ರೋಹದ ಪಾಪವೂ, ಗುರುವಂಚನೆಯ ಪಾಪವೂ, ಗೋವು, ಬ್ರಾಹ್ಮಣ, ಅಗ್ನಿಗಳನ್ನು ಕಾಲಿನಿಂದ ತುಳಿದ ಪಾಪವೂ, ಬಾವಿ, ಕೆರೆ, ತೋಟಗಳನ್ನು ಹಾಳುಮಾಡಿದ ಮಾನವನಿಗುಂಟಾಗುವ ಪಾಪವೂ, ಕೃತಘ್ನದುಷ್ಟ

ಕೃತಘ್ನಸ್ಯ ಚ ಯತ್ಪಾಪಂ ಸೂಚಕಸ್ಯ ಚ ಯದ್ಭವೇತ್ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೮ ॥
ಮದ್ಯಮಾಂಸರತಾನಾಂ ಚ ಯತ್ಪಾಪಂ ಜಾಯತೇ ನೃಣಾಂ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೩೯ ॥
ರಾಜಪೈಶುನ್ಯಕರ್ತ್ೃಣಾಂ ಯತ್ಪಾಪಂ ಜಾಯತೇ ನೃಣಾಂ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೦ ॥
ವೇದವಿಕ್ರಯ ಕರ್ತ್ೃಣಾಂ ಯತ್ಪಾಪಂ ಸಂಪ್ರಜಾಯತೇ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೧ ॥
ದೀಯಮಾನಂ ದ್ವಿಜಾತೀನಾಂ ನಿವಾರಯತಿ ಯೋಽಲ್ಪಧೀಃ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೨ ॥
ವಿಶ್ವಸ್ತಘಾತಕಾನಾಂ ಚ ಯತ್ಪಾಪಂ ಸಮುದಾಹೃತಂ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೩ ॥
ದ್ವಿಜದ್ವೇಷರತಾನಾಂ ಹಿ ಯತ್ಪಾಪಂ ಜಾಯತೇ ನೃಣಾಂ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೪ ॥
ಪರದಾರರತಾನಾಂ ಚ ಪಾಪಂ ಯಚ್ಚ ದುರಾತ್ಮನಾಂ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೫ ॥
ರಾತ್ರೌ ಯೇ ಪಾಪಕರ್ಮಾಣೋ ಭಕ್ಷಂತಿ ದಧಿಸಕ್ತುಕಾನ್ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೬ ॥
ವೃಂತಾಕಂ ಮೂಲಕಂ ಶ್ವೇತಂ ರಕ್ತಂ ಯೋಽಶ್ನಂತಿ ಗೃಂಜನಂ ।
ತೇನ ಪಾಪೇನ ಲಿಪ್ಯಾಮಿ ಯದ್ಯಹಂ ನಾಗಮೇ ಪುನಃ ॥ ೪೭ ॥

---

ಇವರಿಗುಂಟಾಗುವ ಪಾಪವೂ, ಮದ್ಯಮಾಂಸಗಳನ್ನು ತಿನ್ನುವ ಮಾನವರಿಗುಂಟಾಗುವ ಪಾಪವೂ, ದೊರೆಗೆ ಚಾಡಿ ಹೇಳುವ ಮನುಷ್ಯನಿಗುಂಟಾಗುವ ಪಾಪವೂ, ಹಣವನ್ನು ತೆಗೆದುಕೊಂಡು ವೇದವನ್ನು ಹೇಳಿಕೊಡುವವನಿಗುಂಟಾಗುವ ಪಾಪವೂ, ಬ್ರಾಹ್ಮಣರಿಗೆ ಮಾಡುವ ದಾನವನ್ನು ತಡೆಯುವವನಿಗುಂಟಾಗುವ ಪಾಪವೂ, ವಿಶ್ವಾಸಘಾತಕನಿಗುಂಟಾಗುವ ಪಾಪವೂ, ಬ್ರಾಹ್ಮಣ ದ್ವೇಷದಲ್ಲಿ ಆಸಕ್ತನಾದವನಿಗುಂಟಾಗುವ ಪಾಪವೂ, ಪರಸ್ತ್ರೀಯರಲ್ಲಿ ಆಸಕ್ತರಾದವರು, ರಾತ್ರಿಕಾಲದಲ್ಲಿ ದಧಿಸಕ್ತುವನ್ನು ತಿನ್ನುವವರು, ಬದನೇಕಾಯಿ, ಬಿಳಿ ಮತ್ತು ಕೆಂಪುಮುಲ್ಲಂಗಿ, ಬೆಳ್ಳುಳ್ಳಿ ಇವುಗಳನ್ನು ಭಕ್ಷಿಸುವವರು ಇವರಿಗುಂಟಾಗುವ ಪಾಪವು ನನಗೆ ಸಂಭವಿಸುವುದು.

ಪುಲಸ್ತ್ಯ ಉವಾಚ :—
ಸ ತಸ್ಯಾಃ ಶಪಥಾಞ್ಶ್ರುತ್ವಾ ವಿಸ್ಮಯೋತ್ಫುಲ್ಲಲೋಚನಃ ।
ಪ್ರತ್ಯಯಂ ಚ ತದಾ ಗತ್ವಾ ವ್ಯಾಘ್ರೋ ವಾಕ್ಯಮಥಾಬ್ರವೀತ್ ॥ ೪೮ ॥
ವ್ಯಾಘ್ರ ಉವಾಚ :—
ಗಚ್ಛ ತ್ವಂ ಗೋಕುಲೇ ಭದ್ರೇ ಪುನರಾಗಮನಂ ಕುರು ।
ನ ಚೈತದವಗಂತವ್ಯಂ ಯದಯಂ ವಂಚಿತೋ ಮಯಾ ॥ ೪೯ ॥
ಕಪಿಲೇ ಗಚ್ಛ ಪಶ್ಯ ತ್ವಂ ತನಯಂ ಸುತವತ್ಸಲೇ ।
ಪಾಯಯಿತ್ವಾ ಸ್ತನಂ ಪೂರ್ಣಮವಘ್ರಾಯ ಚ ಮೂರ್ಧನಿ ॥ ೫೦ ॥
ಮಾತರಂ ಭ್ರಾತರಂ ದೃಷ್ಟ್ವಾ ಸಖೀಃ ಸ್ವಜನಬಾಂಧವಾನ್ ।
ಸತ್ಯಮೇವಾಗ್ರತಃ ಕೃತ್ವಾ ನಾನ್ಯಥಾ ಕರ್ತುಮರ್ಹಸಿ ॥ ೫೧ ॥
ಪುಲಸ್ತ್ಯ ಉವಾಚ :—
ಸಾಽನುಜ್ಞಾತಾ ಮೃಗೇಂದ್ರೇಣ ಕಪಿಲಾ ಪುತ್ರವತ್ಸಲಾ ।
ಅಶ್ರುಪೂರ್ಣಮುಖೀ ದೀನಾ ಪ್ರಸ್ಥಿತಾ ಗೋಕುಲಂ ಪ್ರತಿ ॥ ೫೨ ॥
ವೇಪಮಾನಾ ಭಯೋದ್ವಿಗ್ನಾ ಶೋಕಸಾಗರಮಧ್ಯಗಾ ।
ಕರಿಣೀವ ಹಿ ರೌದ್ರೇಣ ಹರಿಣಾ ಸಾ ಬಲೀಯಸಾ ।
ತತಃ ಸ್ವಗೋಕುಲಂ ಪ್ರಾಪ್ತಾ ರಂಭಮಾಣಾ ಮುಹುರ್ಮುಹುಃ ॥ ೫೩ ॥

---

೪೮. ಪುಲಸ್ತ್ಯನು ಹೇಳುತ್ತಾನೆ:—ಆ ಹುಲಿಯು ಗೋವಿನ ಆ ಶಪಥಗಳನ್ನು ಕೇಳಿ ಆಶ್ಚರ್ಯಗೊಂಡು ಅದರ ಮಾತನ್ನು ನಂಬಿ ಹೀಗೆಂದಿತು.

೪೯. ಹುಲಿಯು ಹೇಳುತ್ತದೆ :—ಮಂಗಳಕರಳೆ ! ನೀನು ಗೋಕುಲಕ್ಕೆ ಹೋಗಿ ಹಿಂದಿರುಗಿ ಬಾ. ಈ ಸಿಂಹವನ್ನು ನಾನು ವಂಚಿಸಿದೆನೆಂದರಿಯಬೇಡ.

೫೦–೫೧. ಕರುವಿನಲ್ಲಿ ಪ್ರೀತಿಯುಳ್ಳ ಕಪಿಲೆಯೆ ! ನೀನು ಹೊರಡು. ಕರುವನ್ನು ನೋಡಿ ಅದಕ್ಕೆ ಪೂರ್ತಿಯಾಗಿ ಸ್ತನ್ಯವನ್ನಿತ್ತು ತಲೆಯಲ್ಲಿ ಆಘ್ರಾಣಿಸಿ, ತಾಯಿ, ಸಹೋದರ, ಸಖಿ, ಬಂಧುಬಾಂಧವರು ಇವರನ್ನು ನೋಡಿಕೊಂಡು ಸತ್ಯವನ್ನೇ ಮುಂದಿರಿಸಿಕೊಂಡು ಇಲ್ಲಿಗೆ ಬಾ. ಈ ಮಾತನ್ನು ಅನ್ಯಥಾ ಮಾಡಬೇಡ.

೫೨. ಪುಲಸ್ತ್ಯನು ಹೇಳುತ್ತಾನೆ :—ಕರುವಿನಲ್ಲಿ ಪ್ರೀತಿಯುಳ್ಳ ಆ ಕಪಿಲೆಯು ಸಿಂಹದ ಒಪ್ಪಿಗೆಯನ್ನು ಪಡೆದು ಕಣ್ಣೀರನ್ನು ಸುರಿಸುತ್ತ ದೀನಳಾಗಿ ಗೋಕುಲಕ್ಕೆ ತೆರಳಿತು.

೫೩. ಆ ಗೋವು ಬಲಿಷ್ಠವಾದ ಸಿಂಹದ ಭಯದಿಂದ ನಡುಗುತ್ತಿರುವ ಆನೆಯಂತೆ ನಡುಗುತ್ತ ಮರುಗುತ್ತ, ಕೂಗುತ್ತ ತನ್ನ ಗೋಕುಲಕ್ಕೆ ಬಂದಿತು.

ತಸ್ಯಾಃ ಶಬ್ದಂ ತತಃ ಶ್ರುತ್ವಾ ಜ್ಞಾತ್ವಾ ವತ್ಸಃ ಸ್ವಮಾತರಂ ।
ಸಂಮುಖಃ ಪ್ರಯಯೌ ತೂರ್ಣಮೂರ್ಧ್ವಪುಚ್ಛಃ ಪ್ರಹರ್ಷಿತಃ ॥ ೫೪ ॥
ಅಕಾಲಾಗಮನಂ ತಸ್ಯಾ ರೌದ್ರಂ ಭಂಭಾರವಂ ತಥಾ ।
ದೃಷ್ಟ್ವಾ ಶ್ರುತ್ವಾ ಚ ವತ್ಸೋಽಸೌ ಶಂಕಿತಃ ಪರಿಪೃಚ್ಛತಿ ॥ ೫೫ ॥

ವತ್ಸ ಉವಾಚ :—

ನ ತೇ ಪಶ್ಯಾಮಿ ಸೌಮ್ಯತ್ವಂ ದುರ್ಮನಾ ಇವ ಲಕ್ಷ್ಯಸೇ ।
ಕಿಮರ್ಥಮನ್ಯವೇಲಾಯಾಂ ಸಮಾಯಾತಾ ವದಸ್ವ ಮೇ ॥ ೫೬ ॥

ಕಪಿಲೋವಾಚ :—

ಪಿಬ ಪುತ್ರ ಸ್ತನಂ ಪಶ್ಚಾತ್ಕಾರಣಂ ಚಾಪಿ ಮೇ ಶೃಣು ।
ಆಗತಾಽಹಂ ತವ ಸ್ನೇಹಾತ್ಕುರು ತೃಪ್ತಿಂ ಯಥೇಪ್ಸಿತಾಂ ॥ ೫೭ ॥
ಅಪಶ್ಚಿಮಮಿದಂ ಪುತ್ರ ದುರ್ಲಭಂ ಮಾತೃದರ್ಶನಂ ।
ಮಯಾಽಪ್ಯ ಪುತ್ರ ಗಂತವ್ಯಂ ಶಪಥೈರಾಗತಾ ಯತಃ ॥ ೫೮ ॥
ವ್ಯಾಘ್ರಸ್ಯ ಕಾಮರೂಪಸ್ಯ ದಾತವ್ಯಂ ಜೀವಿತಂ ಮಯಾ ।
ತೇನಾಹಂ ಶಪಥೈರ್ಮುಕ್ತಾ ಕಾರಣಾತ್ತವ ಪುತ್ರಕ ॥ ೫೯ ॥

---

೫೪. ಬಳಿಕ ಕರುವು ಆ ಶಬ್ದವನ್ನು ಕೇಳಿ ತಾಯಿಯು ಬಂದಳೆಂದರಿತು ಶೀಘ್ರವಾಗಿ ಬಾಲವನ್ನು ಎತ್ತಿಕೊಂಡು ಸಂತೋಷದಿಂದ ಎದುರಾಗಿ ಓಡಿತು.

೫೫. ಆ ಕರುವು ತಾಯಿಯು ಅಕಾಲದಲ್ಲಿ ಬಂದಿರುವುದನ್ನು ನೋಡಿ, ಭಯಂಕರವಾದ ಭಂಭಾ ಶಬ್ದವನ್ನು ಕೇಳಿ ಕಳವಳಗೊಂಡು ಹೀಗೆ ಪ್ರಶ್ನಿಸಿತು:

೫೬. ಕರುವು ಹೇಳುತ್ತದೆ :—ಅಮ್ಮ ನೀನು ಸೌಮ್ಯಳಾಗಿಲ್ಲ. ವ್ಯಥೆಗೊಂಡವಳಂತೆ ಕಾಣುತ್ತಿರುವೆ. ನೀನು ಅಕಾಲದಲ್ಲಿ ಏಕೆ ಬಂದಿರುವೆ ? ನನಗೆ ಹೇಳು.

೫೭. ಕಪಿಲೆಯು ಹೇಳುತ್ತದೆ :—ಮಗು ! ಸ್ತನ್ಯವನ್ನು ಕುಡಿ, ಅನಂತರ ಕಾರಣವನ್ನು ಕೇಳು. ನಾನು ನಿನಗಾಗಿ ಸ್ನೇಹದಿಂದ ಬಂದಿರುವೆನು. ಇಷ್ಟಬಂದಂತೆ ಸ್ತನ್ಯವನ್ನು ಕುಡಿದು ತೃಪ್ತಿಪಡು.

೫೮. ಮಗು ! ಇದೇ ನನ್ನ ಕೊನೆಯ ದರ್ಶನವು. ಇನ್ನು ಮುಂದೆ ತಾಯಿಯ ದರ್ಶನವು ದುರ್ಲಭವಾಗುವುದು. ಮಗು ! ನಾನು ಶಪಥಗಳಿಂದ ಬಂದಿರುವುದರಿಂದ ಮರಳಿ ಈಗಲೇ ಹೋಗಬೇಕು.

೫೯. ನಾನು ನನ್ನ ಪ್ರಾಣವನ್ನು ಸ್ವೇಚ್ಛಾರೂಪಿಯಾದ ಹುಲಿಗೆ ಕೊಡಬೇಕು. ಮಗು ! ನಿನಗಾಗಿ ಆ ಸಿಂಹವು ನನ್ನನ್ನು ಶಪಥಗಳಿಂದ ಬಿಟ್ಟಿರುವುದು.

ಮಯಾಽದ್ಯ ತತ್ರ ಗಂತವ್ಯಂ ಮೃಗರಾಜಸಮೀಪತಃ ।
ಬದ್ಧಾ ಚ ಶಪಥೈಃ ಪುತ್ರ ದಾಸ್ಯಾಮಿ ಚ ಕಲೇವರಂ ॥ ೬೦ ॥

ವತ್ಸ ಉವಾಚ :—
ಅಹಂ ತತ್ರ ಗಮಿಷ್ಯಾಮಿ ಯತ್ರ ತ್ವಂ ಗಂತುಮಿಚ್ಛಸಿ ।
ಶ್ಲಾಘ್ಯಂ ಹಿ ಮರಣಂ ಮೇಽದ್ಯ ತ್ವಯಾ ಸಹ ನ ಸಂಶಯಃ ॥ ೬೧ ॥
ಏಕಾಕಿನಾಽಪಿ ಮರ್ತವ್ಯಂ ಯಸ್ಮಾನ್ಮಯಾ ತ್ವಯಾ ವಿನಾ ।
ಯದಿ ಮಾಂ ಸಹಿತಂ ತತ್ರ ತ್ವಯಾ ವ್ಯಾಘ್ರೋ ವಧಿಷ್ಯತಿ ॥ ೬೨ ॥
ಯಾ ಗತಿರ್ಮಾತೃಭಕ್ತಾನಾಂ ಧ್ರುವಂ ಸಾ ಮೇ ಭವಿಷ್ಯತಿ ।
ತಸ್ಮಾದವಶ್ಯಂ ಯಾಸ್ಯಾಮಿ ತ್ವಯಾ ಸಹ ನ ಸಂಶಯಃ ॥ ೬೩ ॥
ಅಥವಾಽತ್ರೈವ ತಿಷ್ಠ ತ್ವಂ ಶಪಥಾಃ ಸಂತು ಮೇ ತವ ।
ತವ ಸ್ಥಾನೇ ಪ್ರಯಾಸ್ಯಾಮಿ ಮಾತಸ್ತ್ವಂ ಯದಿ ಮನ್ಯಸೇ ॥ ೬೪ ॥
ಜನನ್ಯಾ ವಿಪ್ರಯುಕ್ತಸ್ಯ ಜೀವಿತಂ ನ ಹಿ ಮೇ ಪ್ರಿಯಂ ।
ನಾಸ್ತಿ ಮಾತೃಸಮಃ ಕಶ್ಚಿದ್ಬಾಲಾನಾಂ ಕ್ಷೀರಜೀವಿನಾಂ ॥ ೬೫ ॥
ನಾಸ್ತಿ ಮಾತೃಸಮೋ ನಾಥೋ ನಾಸ್ತಿ ಮಾತೃಸಮಾ ಗತಿಃ ।
ಯೇ ಮಾತೃನಿರತಾಃ ಪುತ್ರಾಸ್ತೇ ಯಾಂತಿ ಪರಮಾಂ ಗತಿಂ ॥ ೬೬ ॥

---

೬೦. ನಾನು ಈಗ ಹುಲಿಯ ಸಮೀಪಕ್ಕೆ ಹೋಗಿ ಶಪಥಮಾಡಿದಂತೆ ನನ್ನ ದೇಹವನ್ನು ಅದಕ್ಕೆ ಕೊಡುವೆನು.

೬೧. ಕರುವು ಹೇಳುತ್ತದೆ :—ಅಮ್ಮ ! ನೀನು ಎಲ್ಲಿಗೆ ಹೋಗಲು ಬಯಸು ವೆಯೊ, ನಾನೂ ಅಲ್ಲಿಗೆ ಹೋಗುವೆನು. ನನಗೆ ನಿನ್ನೊಡನೆ ಸಾಯುವುದು ಶ್ಲಾಘ್ಯ ವಾದುದು.

೬೨–೬೩. ಅಮ್ಮ ! ನೀನಿಲ್ಲದಿದ್ದರೆ ನಾನೊಬ್ಬನೆ ಸಾಯಬೇಕಾಗುವುದು. ಅಲ್ಲಿ ನಿನ್ನೊಡನೆ ಆ ಸಿಂಹವು ನನ್ನನ್ನೂ ಕೊಂದರೆ ತಾಯಿಯಲ್ಲಿ ಭಕ್ತಿಯುಳ್ಳವರಿಗಾಗುವ ಉತ್ತಮ ಗತಿಯು ನನಗೆ ಲಭಿಸುವುದು. ಆದ್ದರಿಂದ ನಾನು ನಿನ್ನೊಡನೆ ಅವಶ್ಯವಾಗಿ ಬರುವೆನು.

೬೪. ಅಥವಾ ನೀನು ಇಲ್ಲಿರು. ಆ ಶಪಥಗಳು ನನ್ನವಾಗಲಿ. ನೀನು ಒಪ್ಪುವು ದಾದರೆ ನಿನಗಾಗಿ ನಾನು ಹೋಗುವೆನು.

೬೫. ತಾಯಿಯಿಂದಗಲಿದ ನನಗೆ ಪ್ರಾಣವು ಪ್ರಿಯವಾಗುವುದಿಲ್ಲ. ಹಾಲಿನಿಂದ ಜೀವಿಸುವ ಶಿಶುಗಳಿಗೆ ತಾಯಿಗೆ ಸಮಾನವಾದವನೊಬ್ಬನೂ ಇಲ್ಲ.

೬೬. ತಾಯಿಗೆ ಸಮಾನನಾದ ಸ್ವಾಮಿಯೂ, ಗತಿಯೂ ಇಲ್ಲ. ತಾಯಿಯಲ್ಲಿ ಭಕ್ತಿಯುಳ್ಳ ಮಕ್ಕಳು ಉತ್ತಮ ಗತಿಯನ್ನು ಹೊಂದುವರು.

ಕಪಿಲೋವಾಚ :—

ಮಮೈವ ವಿಹಿತೋ ಮೃತ್ಯುರ್ನ ತೇ ಪುತ್ರಕ ಸಾಂಪ್ರತಂ ।
ನ ಚಾಯುಮನ್ಯಭೂತಾನಾಂ ಮೃತ್ಯುಃ ಸ್ಯಾದನ್ಯಮೃತ್ಯುತಃ ॥ ೧೭ ॥
ಅಪಶ್ಚಿಮಮಿದಂ ಪುತ್ರ ಮಾತುಃ ಸಂದೇಶಮುತ್ತಮಂ ।
ಶೃಣುಷ್ವಾವಹಿತೋ ಭೂತ್ವಾ ಪರಿಣಾಮಸುಖಾವಹಂ ॥ ೧೮ ॥
ವನೇ ಚರ ಸದಾ ವತ್ಸ ಅಪ್ರಮಾದಪರೋ ಭವ ।
ಪ್ರಮಾದಾತ್ಸರ್ವಭೂತಾನಿ ವಿನಶ್ಯಂತಿ ನ ಸಂಶಯಃ ॥ ೧೯ ॥
ನ ಚ ಲೋಭೇನ ಚರ್ತವ್ಯಂ ವಿಷಮಸ್ಥಂ ತೃಣಂ ಕ್ವಚಿತ್ ।
ಲೋಭಾದ್ವಿನಾಶೋ ಜಂತೂನಾಮಿಹ ಲೋಕೇ ಪರತ್ರ ಚ ॥ ೨೦ ॥
ಸಮುದ್ರಮಟವೀಂ ಯುದ್ಧಂ ವಿಶಂತೇ ಲೋಭಮೋಹಿತಾಃ ।
ಲೋಭಾದ್ಧಿ ಕಾರ್ಯಮತ್ಯುಗ್ರಂ ಕುರ್ವಂತಿ ತ್ಯಾಜ್ಯಏವ ಸಃ ॥ ೨೧ ॥
ಲೋಭಾತ್ಪ್ರಮಾದಾದ್ವಿಶ್ವಾಸಾತ್ಪುರುಷೋ ಬಾಧ್ಯತೇ ತ್ರಿಭಿಃ ।
ತಸ್ಮಾಲ್ಲೋಭೋ ನ ಕರ್ತವ್ಯೋ ನ ಪ್ರಮಾದೋ ಪಿ ವಿಶ್ವಸೇತ್ ॥ ೨೨ ॥
ಆತ್ಮಾ ಚ ಸತತಂ ಪುತ್ರ ರಕ್ಷಿತವ್ಯಃ ಪ್ರಯತ್ನತಃ ।
ಸರ್ವೇಭ್ಯಃ ಶ್ವಾಪದೇಭ್ಯಶ್ಚ ಮ್ಲೇಚ್ಛೇಭ್ಯಸ್ತಸ್ಕರಾದಿತಃ ॥ ೨೩ ॥

---

೧೭. ಕಪಿಲೆಯು ಹೇಳುತ್ತದೆ :—ಮಗು ! ನನಗೆ. ಮಾತ್ರ ಮರಣವು ಈಗ ವಿಹಿತವಾಗಿರುವುದು. ನಿನಗಲ್ಲ. ಒಬ್ಬರ ಮೃತ್ಯುವಿನಿಂದ ಮತ್ತೊಬ್ಬರಿಗೆ ಮೃತ್ಯುವುಂಟಾಗುವುದಿಲ್ಲ.

೧೮. ಮಗು ! ನಿನಗೆ ಇದೇ ತಾಯಿಯ ಕೊನೆಯ ಸಂದೇಶವು. ಅವಸಾನದಲ್ಲಿ ಸುಖವನ್ನುಂಟುಮಾಡುವ ಈ ಸಂದೇಶವನ್ನು ಸಾವಧಾನ ಮನಸ್ಸಿನಿಂದ ಕೇಳು.

೧೯. ಮಗು ! ಯಾವಾಗಲೂ ಕಾಡಿನಲ್ಲಿ ಜಾಗರೂಕತೆಯಿಂದ ಸಂಚರಿಸು. ಪ್ರಮಾದದಿಂದ ಸಕಲ ಪ್ರಾಣಿಗಳೂ ನಿಶ್ಚಯವಾಗಿ ಹಾಳಾಗುವುವು.

೨೦. ವಿಷಮಸ್ಥಳದಲ್ಲಿರುವ ಹುಲ್ಲನ್ನು ಆಶೆಯಿಂದ ಮೇಯಲು ಹೋಗಬೇಡ. ಪ್ರಾಣಿಗಳು ಇಹಪರ ಲೋಕಗಳಲ್ಲಿ ಅತ್ಯಾಶೆಯಿಂದ ಹಾಳಾಗುವುವು.

೨೧. ಜನರು ಅತ್ಯಾಶೆಯಿಂದ ಸಮುದ್ರ, ಕಾಡು, ಯುದ್ಧಗಳಿಗೆ ಹೋಗುವರು. ಅತಿ ಕಠಿನವಾದ ಕಾರ್ಯವನ್ನು ಮಾಡುವರು. ಆ ಲೋಭವನ್ನು ತ್ಯಜಿಸಬೇಕು.

೨೨. ಮನುಷ್ಯನು ಅತ್ಯಾಶೆ, ಪ್ರಮಾದ, ವಿಶ್ವಾಸ ಈ ಮೂರರಿಂದ ದುಃಖಗೊಳ್ಳುವನು. ಆದ್ದರಿಂದ ಲೋಭ, ಪ್ರಮಾದ, ವಿಶ್ವಾಸಗಳನ್ನು ಮಾಡಕೂಡದು.

೨೩–೨೪. ಮಗು ! ಕಾಡಿನಲ್ಲಿ ಮೇಯುತ್ತಿರುವ ನೀನು ಯಾವಾಗಲೂ ಸಮಸ್ತ ಹಿಂಸ್ರಜಂತುಗಳಿಂದಲೂ, ಕಳ್ಳರಿಂದಲೂ, ಮ್ಲೇಚ್ಛರಿಂದಲೂ ಪಾಪಿಷ್ಠಗಳಾದ ತಿರ್ಯ

ತಿರ್ಯಗ್ಭ್ಯಃ ಪಾಪಯೋನಿಭ್ಯಃ ಸದಾ ವಿಚರತಾ ವನೇ ।
ನ ಚ ಶೋಕಸ್ತ್ವಯಾ ಕಾರ್ಯಃ ಸರ್ವೇಷಾಂ ಮರಣಂ ಧ್ರುವಂ ॥ ೭೪ ॥
ಅಸ್ಮಾಕಂ ಪ್ರತಿವಾಚಂ ಚ ಶೃಣು ಶೋಕವಿನಾಶಿನೀಂ ।
ಯಥಾ ಹಿ ಪಥಿಕಃ ಕಶ್ಚಿಚ್ಛಾಯಾರ್ಥೀ ವೃಕ್ಷಮಾಸ್ಥಿತಃ ।
ವಿಶ್ರಾಂತಶ್ಚ ಪುನರ್ಯಾತಿ ತದ್ವದ್ಭೂತಸಮಾಗಮಃ ॥ ೭೫ ॥

ಪುಲಸ್ತ್ಯ ಉವಾಚ :—

ಏವಂ ಸಂಭಾಷ್ಯ ತಂ ವತ್ಸಮವಘ್ರಾಯ ಚ ಮೂರ್ಧನಿ ।
ಸ್ವಮಾತರಂ ಸಖೀವರ್ಗಂ ತತೋ ದ್ರಷ್ಟುಂ ಸಮಾಗತಾ ॥ ೭೬ ॥
ಅಬ್ರವೀಚ್ಚ ತತೋ ವಾಕ್ಯಂ ಪುತ್ರಶೋಕೇನ ದುಃಖಿತಾ ।
ಅಂಬಾಃ ಶೃಣುತ ಮೇ ವಾಕ್ಯಮಪಶ್ಚಿಮಮಿದಂ ಸ್ಫುಟಂ ॥ ೭೭ ॥
ಅನಾಥಮಬಲಂ ದೀನಂ ಫೇನಪಂ ಮಮ ಪುತ್ರಕಂ ।
ಮಾತೃಶೋಕಾಭಿಸಂತಪ್ತಂ ಸರ್ವಾಸ್ತಂ ಪಾಲಯಿಷ್ಯಥ ॥ ೭೮ ॥
ಭಾವಿನೀನಾಮಯಂ ಪುತ್ರಃ ಸಾಂಪ್ರತಂ ಚ ವಿಶೇಷತಃ ।
ಸ್ನಪನೀಯಃ ಪಾಯಿತವ್ಯಃ ಪ್ರೋಕ್ಷ್ಯಃ ಪಾಲ್ಯಃ ಸ್ವಪುತ್ರವತ್ ॥ ೭೯ ॥

---

ಗ್ಜಂತುಗಳಿಂದಲೂ ನಿನ್ನನ್ನು ಕಾಪಾಡಿಕೊ. ನೀನು ದುಃಖಿಸಬೇಡ. ಎಲ್ಲ ಪ್ರಾಣಿಗಳಿಗೂ ಸಾವು ನಿಶ್ಚಿತವಾಗಿರುವುದು.

೭೫. ದುಃಖವನ್ನು ಹೋಗಲಾಡಿಸುವ ನನ್ನ ಮಾತನ್ನು ಕೇಳು. ಪ್ರಾಣಿಗಳ ಮೇಳನವು ಮಾರ್ಗಸ್ಥನು ನೆರಳಿಗಾಗಿ ಮರವನ್ನಾಶ್ರಯಿಸಿ ವಿಶ್ರಾಂತಿಗೊಂಡು ಮರಳಿ ಹೊರಟು ಹೋಗುವಂತಾಗಿರುವುದು.

೭೬. ಪುಲಸ್ತ್ಯನು ಹೇಳುತ್ತಾನೆ :—ಆ ಕಪಿಲೆಯು ಆ ಕರುವನ್ನು ಕುರಿತು ಹೀಗೆ ಹೇಳಿ ಅದರ ತಲೆಯನ್ನು ಆಘ್ರಾಣಿಸಿ ತನ್ನ ತಾಯಂದಿರನ್ನೂ, ಸಖಿಯರನ್ನೂ ನೋಡಲು ಹೊರಟಿತು.

೭೭. ತರುವಾಯ ಪುತ್ರಶೋಕದಿಂದ ವ್ಯಥೆಗೊಂಡು ಇಂತೆಂದಿತು. ಮಾತೆಯರೆ ! ನನ್ನೀ ಕೊನೆಯ ಸ್ಪಷ್ಟವಾದ ಮಾತನ್ನು ಕೇಳಿರಿ.

೭೮. ಅನಾಥನೂ, ಬಲವಿಲ್ಲದವನೂ, ದೀನನೂ, ನೊರೆಯನ್ನು ಕುಡಿಯುವವನೂ, ತಾಯಿಯ ವಿಯೋಗದಿಂದ ದುಃಖಗೊಂಡವನೂ ಆದ ನನ್ನ ಬಾಲಕನನ್ನು ನೀವೆಲ್ಲ ಕಾಪಾಡಿರಿ.

೭೯. ಈ ನನ್ನ ಬಾಲಕನನ್ನು ಈಗಲೂ ಮುಂದೆಯೂ ನಿಮ್ಮ ಮಕ್ಕಳಂತೆ ಸ್ನಾನಮಾಡಿಸಿರಿ. ಹಾಲನ್ನು ಕುಡಿಸಿರಿ. ಕಾಪಾಡಿರಿ.

ಚರಂತಂ ವಿಷಮೇ ಸ್ಥಾನೇ ಚರಂತಂ ಪರಗೋಕುಲೇ ।
ಅಕಾರ್ಯೇಷು ಪ್ರವರ್ತಂತಂ ಹೇ ಸಖ್ಯೋ ವಾರಯಿಷ್ಯಥ ॥ ೪೦ ॥
ಕ್ಷಮಧ್ವಂ ಚ ಮಹಾಭಾಗಾ ಯಾಸ್ಯೇಽಹಂ ಸತ್ಯಸಂಶ್ರಯಾತ್ ।
ಯತ್ರಾಽಸೌ ತಿಷ್ಠತೇ ವ್ಯಾಘ್ರೋ ಮುಕ್ತಾಽಹಂ ಯೇನ ಸಾಂಪ್ರತಂ ॥೪೧॥
ಸರ್ವಾಸ್ತಾ ವಚನಂ ಶ್ರುತ್ವಾ ತಸ್ಯಾಃ ಶೋಕಸಮನ್ವಿತಾಃ ।
ವಿಷಾದಂ ಪರಮಂ ಗತ್ವಾ ವಾಕ್ಯಮೂಚುಃ ಸುದುಃಖಿತಾಃ ॥ ೪೨ ॥
ಕಪಿಲೇನೈವ ಗಂತವ್ಯಂ ನ ತೇ ದೋಷೋ ಭವಿಷ್ಯತಿ ।
ಪ್ರಾಣಾತ್ಯಯೇ ನ ದೋಷೋಽಸ್ತಿ ಸಂಪರಾಯೇ ಚ ದಾರುಣೇ ॥ ೪೩ ॥
ಅತ್ರ ಗಾಥಾ ಪುರಾ ಗೀತಾ ಮುನಿಭಿರ್ಧರ್ಮವಾದಿಭಿಃ ।
ಪ್ರಾಣಾತ್ಯಯೇ ಸಮುತ್ಪನ್ನೇ ಶಪಥೇ ನಾಸ್ತಿ ಪಾತಕಂ ॥ ೪೪ ॥

ಕಪಿಲೋವಾಚ :—

ಪ್ರಾಣಿನಾಂ ಪ್ರಾಣರಕ್ಷಾರ್ಥಂ ವದಾಮ್ಯೇವಾನೃತಂ ವಚಃ ।
ನಾತ್ಮಾರ್ಥಮುಪಯುಂಜಾಮಿ ಸ್ವಲ್ಪಮಪ್ಯನೃತಂ ಕ್ವಚಿತ್ ॥ ೪೫ ॥
ಅಶ್ವಮೇಧಸಹಸ್ರಂ ತು ಸತ್ಯಂ ಚ ತುಲಯಾ ಧೃತಂ ।
ಅಶ್ವಮೇಧಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ ॥ ೪೬ ॥

---

೪೦. ಗೆಳತಿಯರೆ! ವಿಷಮ ಸ್ಥಳದಲ್ಲಿಯೂ, ಇತರ ಗೋಕುಲದಲ್ಲಿಯೂ ಸಂಚರಿಸುವ ಅಕಾರ್ಯಗಳಲ್ಲಿ ಪ್ರವರ್ತಿಸುವ ನನ್ನ ಬಾಲಕನನ್ನು ತಡೆಯಿರಿ.

೪೧. ಭಾಗ್ಯಶಾಲಿನಿಯರೆ! ನಾನು ಸತ್ಯವನ್ನು ಪಾಲಿಸಲು ನನ್ನನ್ನು ಈಗ ಬಿಟ್ಟಿರುವ ಹುಲಿಯಿರುವ ಸ್ಥಳಕ್ಕೆ ಹೋಗುವೆನು.

೪೨. ಆ ಗೋವುಗಳೆಲ್ಲ ಅವರ ಮಾತನ್ನು ಕೇಳಿ ಅತ್ಯಂತ ದುಃಖಗೊಂಡು ಇಂತೆಂದುವು.

೪೩. "ಕಪಿಲೆಯೆ! ನೀನು ಹೋಗಬೇಡ. ಅದರಿಂದ ನಿನಗೆ ದೋಷವುಂಟಾಗುವುದಿಲ್ಲ. ಪ್ರಾಣನಾಶಕಾಲದಲ್ಲಿಯೂ, ಭಯಂಕರ ಯುದ್ಧದಲ್ಲಿಯೂ ದೋಷವಿಲ್ಲ.

೪೪. ಈ ವಿಷಯದಲ್ಲಿ ಧರ್ಮಬೋಧಕರಾದ ಮುನಿಗಳು ಪ್ರಾಣನಾಶಕಾಲದಲ್ಲಿ ಮಾಡಿದ ಶಪಥದಿಂದ ದೋಷವಿಲ್ಲವೆಂದು ಒಂದು ಗಾಥೆಯನ್ನು ಹೇಳಿರುತ್ತಾರೆ.

೪೫. ನಾನು ಇತರ ಪ್ರಾಣಿಗಳ ಪ್ರಾಣರಕ್ಷಣೆಗಾಗಿ ಸುಳ್ಳನ್ನು ಹೇಳುವೆನು. ನನಗಾಗಿ ಸ್ವಲ್ಪವೂ ಸುಳ್ಳನ್ನು ಹೇಳುವುದಿಲ್ಲ".

೪೬. ಕಪಿಲೆಯು ಹೇಳುತ್ತದೆ:—ಸಾವಿರ ಅಶ್ವಮೇಧ ಯಾಗಗಳನ್ನೂ, ಸತ್ಯವನ್ನೂ ತಕ್ಕಡಿಯಿಂದ ತೂಗಿದರೆ ಆ ಅಶ್ವಮೇಧಯಾಗಗಳಿಗಿಂತ ಸತ್ಯವೇ ಅಧಿಕವಾಗುವುದು.

ತಸ್ಮಾನ್ನಾನೃತಮಾತ್ಮಾನಂ ಕರಿಷ್ಯೇ ಜೀವಿತಾಶಯಾ ।
ಆಜ್ಞಾಪಯಂತು ಮಾಮಾರ್ಯಾ ಯಾಸ್ಯೇ ಯತ್ರ ಮೃಗಾಧಿಪಃ ॥ ೮೭ ॥

ವಯಸ್ಯಾ ಊಚುಃ :—

ಕಪಿಲೇ ತ್ವಂ ನಮಸ್ಕಾರ್ಯಾ ಸರ್ವೈರಪಿ ಸುರಾಸುರೈಃ ।
ಯತ್ತ್ವಂ ಪರಮಸತ್ಯೇನ ಪ್ರಾಣಾಂಸ್ತ್ಯಜಸಿ ದುಸ್ತ್ಯಜಾನ್ ॥ ೮೮ ॥
ಅವಶ್ಯಂ ನ ಚ ತೇ ಭಾವೀ ಮೃತ್ಯುಃ ಸತ್ಯಾತ್ಮಭಂಜನ ।
ಪ್ರಮಾಣಂ ಯದಿ ಸತ್ಯಂ ಹಿ ವ್ರಜ ಪಂಥಾಃ ಶಿವೋಽಸ್ತು ತೇ ॥ ೮೯ ॥

ಪುಲಸ್ತ್ಯ ಉವಾಚ :—

ಏವಮುಕ್ತಾ ಚ ಕಪಿಲಾ ಗತಾ ಯತ್ರ ಮೃಗಾಧಿಪಃ ।
ಅಥಾಽಸೌ ಕಪಿಲಾಂ ದೃಷ್ಟ್ವಾ ವಿಸ್ಮಯೋತ್ಫುಲ್ಲಲೋಚನಃ ।
ಅಬ್ರವೀತ್ಪ್ರಶ್ರಿತಂ ವಾಕ್ಯಂ ಹರ್ಷಗದ್ಗದಯಾ ಗಿರಾ ॥ ೯೦ ॥

ವ್ಯಾಘ್ರ ಉವಾಚ :—

ಸ್ವಾಗತಂ ತವ ಕಲ್ಯಾಣಿ ಕಪಿಲೇ ಸತ್ಯವಾದಿನಿ ।
ನ ಹಿ ಸತ್ಯವತಾಂ ಕಿಂಚಿದಶುಭಂ ವಿದ್ಯತೇ ಕ್ವಚಿತ್ ॥ ೯೧ ॥

---

೮೭. ಆದ್ದರಿಂದ ಬದುಕುವ ಆಶೆಯಿಂದ ನಾನು ಸುಳ್ಳುಗಾರಳಾಗುವುದಿಲ್ಲ. ಪೂಜ್ಯರೆ! ನನಗೆ ಅಪ್ಪಣೆಕೊಡಿರಿ ". ಹುಲಿಯೆಡೆಗೆ ಹೋಗುವೆನು.

೮೮. ಗೆಳತಿಯರು ಹೇಳುತ್ತಾರೆ:—ಕಪಿಲೆಯೆ! ನೀನು ಸತ್ಯಕ್ಕಾಗಿ ಬಿಡಲಶಕ್ಯವಾದ ಪ್ರಾಣವನ್ನು ತ್ಯಜಿಸುವುದರಿಂದ ದೇವಾಸುರರ ನಮಸ್ಕಾರಕ್ಕೆ ಅರ್ಹಳು.

೮೯. ಸತ್ಯವು ಪ್ರಮಾಣವಾಗಿದ್ದರೆ ನಿನಗೆ ಸತ್ಯದಿಂದ ನಿಜವಾಗಿಯೂ ಮೃತ್ಯುವು ಒದಗಲಾರದು. ನೀನು ಹೊರಡು. ನಿನ್ನ ದಾರಿಯು ಮಂಗಳಕರವಾಗಲಿ.

೯೦. ಪುಲಸ್ತ್ಯನು ಹೇಳುತ್ತಾನೆ :—ಸಖಿಯರು ಹೀಗೆನ್ನಲು ಕಪಿಲೆಯು ವ್ಯಾಘ್ರವೆಡೆಗೆ ಹೋಯಿತು. ಅನಂತರ ಆ ವ್ಯಾಘ್ರವು ಕಪಿಲೆಯನ್ನು ಕಂಡು ಆಶ್ಚರ್ಯಗೊಂಡು ಸಂತೋಷದಿಂದ ಗದ್ಗದವಾದ ಮಾತಿನಿಂದ ವಿನಯ ಪೂರ್ವಕವಾಗಿ ಇಂತೆಂದಿತು.

೯೧. ಹುಲಿಯು ಹೇಳುತ್ತದೆ :—ಸತ್ಯವನ್ನು ನುಡಿಯುವ ಮಂಗಳಕರಳಾದ ಕಪಿಲೆಯೆ! ನಿನಗೆ ಸುಖಾಗಮನವಾಗಲಿ. ಪ್ರಪಂಚದಲ್ಲಿ ಸತ್ಯವಂತರಿಗೆ ಒಂದೆಡೆಯಲ್ಲಿಯೂ ಅಶುಭವುಂಟಾಗುವುದಿಲ್ಲ.

ತ್ವಯೋಕ್ತಂ ಕಪಿಲೇ ಪೂರ್ವಂ ಶಪಥೈರಾಗಮಾಯ ಚ ।
ತೇನ ಮೇ ಕೌತುಕಂ ಜಾತಂ ಯಾತಾಽಽಗಚ್ಛೇತ್ಪುನಃ ಕಥಂ ॥ ೯೨ ॥
ತಸ್ಮಾದ್ಗಚ್ಛ ಮಯಾ ಮುಕ್ತಾ ಯತ್ರಾಽಸೌ ತನಯಸ್ತವ ।
ತಿಷ್ಠತೇ ಗೋಕುಲೇ ಬದ್ಧಃ ಕ್ಷೀರಪಾಯೀ ಸದುಃಖಿತಂ ॥ ೯೩ ॥
ಪುಲಸ್ತ್ಯ ಉವಾಚ :—
ಏತಸ್ಮಿನ್ನೇವ ಕಾಲೇ ತು ಸ ರಾಜಾ ಪ್ರಕೃತಿಂ ಗತಃ ।
ಮೃಗೀಶಾಪೇನ ನಿರ್ಮುಕ್ತೋ ದಿವ್ಯರೂಪವಪುರ್ಧರಃ ।
ತತೋಽಬ್ರವೀತ್ಪ್ರಹೃಷ್ಟಾತ್ಮಾ ಕಪಿಲಾಂ ಸತ್ಯವಾದಿನೀಂ ॥ ೯೪ ॥
ರಾಜೋವಾಚ :—
ಪ್ರಸಾದಾತ್ತವ ಮುಕ್ತೋಽಹಂ ಶಾಪಾದಸ್ಮಾತ್ಸುದಾರುಣಾಂ ।
ಕಿಂ ತೇ ಪ್ರಿಯಂ ಕರೋಮ್ಯದ್ಯ ಧೇನುಕೇ ಬ್ರೂಹಿ ಸತ್ವರಂ ॥ ೯೫ ॥
ಕಪಿಲೋವಾಚ :—
ಕೃತಕೃತ್ಯಾಸ್ಮಿ ರಾಜೇಂದ್ರ ಯತ್ತ್ವಂ ಮುಕ್ತೋಽಸಿ ಕಿಲ್ಬಿಷಾತ್ ।
ಪಿಪಾಸಾ ಬಾಧತೇತ್ಯರ್ಥಂ ಸಾಂಪ್ರತಂ ಜಲಮಾನಯ ॥ ೯೬ ॥

---

೯೨. ಕಪಿಲೆಯೆ! ನೀನು ಮರಳಿ ಬರುವ ವಿಷಯದಲ್ಲಿ ಶಪಥಗಳಿಂದ ಮಾತಾಡಿರುವೆ. ಅದರಿಂದ ನಾನು ತಪ್ಪಿಸಿಕೊಂಡು ಹೋದ ಹಸುವು ತಿರುಗಿ ಹೇಗೆ ಬಂದೀತು ಎಂದು ಕೌತುಕಗೊಂಡೆನು.

೯೩. ಅದ್ದರಿಂದ ನಿನ್ನನ್ನು ಬಿಟ್ಟಿರುವೆನು. ನೀನು ಗೋಕುಲದಲ್ಲಿ ಕಟ್ಟಲ್ಪಟ್ಟಿರುವುದೂ, ಹಾಲನ್ನು ಕುಡಿಯುವುದೂ, ದುಃಖಗೊಂಡಿರುವುದೂ ಆದ ನಿನ್ನ ಕರುವಿನ ಹತ್ತಿರಕ್ಕೆ ಹೋಗು.

೯೪. ಪುಲಸ್ತ್ಯನು ಹೇಳುತ್ತಾನೆ :—ಈ ಸಮಯದಲ್ಲಿ ಆ ದೊರೆಯು ಜಿಂಕೆಯ ಶಾಪದಿಂದ ಮುಕ್ತನಾಗಿ ತನ್ನ ಮೊದಲಿನ ಸ್ಥಿತಿಯನ್ನು ಹೊಂದಿ ದಿವ್ಯ ರೂಪವನ್ನು ಧರಿಸಿ ಸಂತೋಷದಿಂದ ಸತ್ಯವನ್ನು ಹೇಳುವ ಕಪಿಲೆಯನ್ನು ಕುರಿತು ಹೀಗೆಂದನು.

೯೫. ರಾಜನು ಹೇಳುತ್ತಾನೆ:—ಹಸುವೆ! ನಾನು ನಿನ್ನ ಅನುಗ್ರಹದಿಂದ ಈ ಭಯಂಕರ ಶಾಪದಿಂದ ಮುಕ್ತನಾದೆನು. ನಿನಗೆ ಯಾವ ಹಿತವನ್ನುಂಟುಮಾಡಲಿ. ಶೀಘ್ರವಾಗಿ ಹೇಳು.

೯೬–೯೭. ಕಪಿಲೆಯು ಹೇಳಿತು :—ರಾಜೇಂದ್ರ! ನೀನು ಪಾಪಮುಕ್ತನಾದ್ದರಿಂದ ನಾನು ಧನ್ಯಳಾಗಿರುವೆನು. ಈಗ ನನಗೆ ಬಾಯಾರಿಕೆಯು ಬಹಳವಾಗಿ

ನೈವಾನೃತ್ಯಂ ವಿಜಾನೀಹಿ ಸತ್ಯಮೇತನ್ಮಯೋದಿತಂ || ೯೭ ||

ಪುಲಸ್ತ್ಯ ಉವಾಚ :—

ಅಥಾಽಸೌ ಪಾರ್ಥಿವೋ ಹಸ್ತೇ ಚಾಪಮಾದಾಯ ಸತ್ವರಂ |
ಸಜ್ಯಂ ಕೃತ್ವಾ ಶರಂ ಗೃಹ್ಯ ಜಘಾನ ಧರಣೀತಲಂ || ೯೮ ||
ತತಃ ಸಲಿಲಮುತ್ತಸ್ಥೌ ನಿರ್ಮಲಂ ಶೀತಲಂ ಶುಭಂ |
ತತ್ರ ಸಾ ಕಪಿಲಾ ಸ್ನಾತ್ವಾ ವಿತೃಷಾ ಸಮಪದ್ಯತ || ೯೯ ||
ಏತಸ್ಮಿನ್ನಂತರೇ ಧರ್ಮಃ ಸ್ವಯಂ ತತ್ರ ಸಮಾಗತಃ |
ಅಬ್ರವೀತ್ಕಪಿಲಾಂ ಹೃಷ್ಟೋ ವರಂ ವರಯ ಶೋಭನೇ || ೧೦೦ ||
ತವ ಸತ್ಯೇನ ತುಷ್ಟೋಽಹಂ ನಾಸ್ತಿ ತೇ ಸದೃಶೀ ಕ್ವಚಿತ್ |
ತ್ರೈಲೋಕ್ಯೇ ಸಕಲೇ ಧೇನುರ್ನ ಭವಿಷ್ಯತಿ ನೈ ಶುಭೇ || ೧೦೧ ||

ಕಪಿಲೋವಾಚ :—

ಪ್ರಸಾದಾತ್ತವ ಗಚ್ಛೇಯಂ ಸಹ ರಾಜ್ಞಾ ಸಗೋಕುಲಾ |
ಸುಪ್ರಭೇಣ ಪದಂ ದಿವ್ಯಂ ಜರಾಮರಣವರ್ಜಿತಂ || ೧೦೨ ||
ಮನ್ನಾಮ್ನಾ ಖ್ಯಾತಿಮಾಯಾತು ಪುಣ್ಯಮೇತಜ್ಜಲಾಶಯಂ |
ಸರ್ವಪಾಪಹರಂ ನೄಣಾಂ ಸರ್ವಕಾಮಪ್ರದಂ ತಥಾ || ೧೦೩ ||

---

ಪೀಡಿಸುತ್ತಿದೆ. ನೀರನ್ನು ತೆಗೆದುಕೊಂಡು ಬಾ. ನಾನು ಹೇಳಿದುದು ಸುಳ್ಳೆಂದು ತಿಳಿಯಬೇಡ, ಸತ್ಯವಾದುದು.

೯೮. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ದೊರೆಯು ಕೈಯಲ್ಲಿ ಬಿಲ್ಲನ್ನು ತೆಗೆದುಕೊಂಡು ಶೀಘ್ರವಾಗಿ ಬಾಣವನ್ನು ಹೂಡಿ ಭೂಮಿಗೆ ಹೊಡೆದನು.

೯೯. ಭೂಮಿಯಿಂದ ನಿರ್ಮಲವೂ, ತಣ್ಣಗೂ ಇರುವ ನೀರು ಮೇಲಕ್ಕೆ ಉಕ್ಕಲು ಆ ಕಪಿಲೆಯು ಅಲ್ಲಿ ಮಿಂದು ಬಾಯಾರಿಕೆಯಿಲ್ಲದ್ದಾಯಿತು.

೧೦೦. ಇಷ್ಟರಲ್ಲಿ ಧರ್ಮವು ತಾನೇ ಅಲ್ಲಿಗೆ ಬಂದು ಕಪಿಲೆಯನ್ನು ಕುರಿತು ಸಂತೋಷದಿಂದ, " ಮಂಗಳಕರಳೆ! ವರವನ್ನು ಕೇಳಿಕೊ " ಎಂದಿತು.

೧೦೧. ನಾನು ನಿನ್ನ ಸತ್ಯದಿಂದ ಸಂತುಷ್ಟನಾಗಿರುವೆನು. ಮೂರು ಲೋಕಗಳಲ್ಲಿ ಎಲ್ಲಿಯೂ ನಿನ್ನಂತಹ ಹಸುವಿರುವುದಿಲ್ಲ.

೧೦೨. ಕಪಿಲೆಯು ಹೇಳುತ್ತಾಳೆ :—ಹುಲಿರಾಯನೆ ! ನಿನ್ನ ಅನುಗ್ರಹದಿಂದ ನಾನು ದೊರೆ, ಗೋಕುಲ, ನನ್ನ ಕರುವಾದ ಸುಪ್ರಭ ಇವರೊಡನೆ ಮುಪ್ಪು ಮರಣಗಳಿಲ್ಲದ ದಿವ್ಯ ಸ್ಥಾನವನ್ನು ಸೇರುವೆನು.

೧೦೩. ಮನುಷ್ಯರ ಸಕಲ ಪಾಪಗಳನ್ನು ಪರಿಹರಿಸುವುದೂ, ಇಷ್ಟಾರ್ಥಗಳನ್ನು ನೀಡುವುದೂ ಆದ ಈ ಪುಣ್ಯಕರವಾದ ಕೊಳವು ನನ್ನ ಹೆಸರಿನಿಂದ ಪ್ರಸಿದ್ಧಿಗೊಳ್ಳಲಿ.

ಧರ್ಮ ಉವಾಚ :—
ಯೇಽತ್ರ ಸ್ನಾನಂ ಕರಿಷ್ಯಂತಿ ಸುಪುಣ್ಯೇ ಸಲಿಲೇ ಶುಭೇ ।
ಚತುರ್ದಶ್ಯಾಂ ವಿಶೇಷೇಣ ತೇ ಯಾಸ್ಯಂತಿ ಪರಾಂ ಗತಿಂ ॥ ೧೦೪ ॥
ತವ ನಾಮ್ನಾ ಸುಪುಣ್ಯಂ ಹಿ ತೀರ್ಥಮೇತದ್ಭವಿಷ್ಯತಿ ।
ದರ್ಶಮುದ್ದಿಶ್ಯ ಮರ್ತ್ಯಸ್ತು ಪ್ರಾಪ್ಸ್ಯತೇ ಗೋಸಹಸ್ರಕಂ ।
ಸ್ನಾನಾಲ್ಲಕ್ಷಗುಣಂ ದಾನಾತ್ಪುಣ್ಯಂ ಚೈವ ತಥಾಽಕ್ಷಯಂ ॥ ೧೦೫ ॥
ಯೇಽತ್ರ ಶ್ರಾದ್ಧಂ ಕರಿಷ್ಯಂತಿ ಮಾನವಾಃ ಸುಸಮಾಹಿತಾಃ ।
ಸರ್ವದಾನಫಲಂ ತೇಷಾಂ ಭುಕ್ತಿಮುಕ್ತೀ ಮಹಾತ್ಮನಾಂ ॥ ೧೦೬ ॥
ಅಪಿ ಕೀಟಪತಂಗಾ ಯೇ ತೃಷಾರ್ತಾಃ ಸಲಿಲೇ ಶುಭೇ ।
ಮಜ್ಜಯಿಷ್ಯತಿ ಯಾಸ್ಯಂತಿ ತೇಽಪಿ ಸ್ಥಾನಂ ದಿವೌಕಸಾಂ ॥ ೧೦೭ ॥
ಕಿಂ ಪುನರ್ಭಕ್ತಿಸಂಯುಕ್ತಾ ಮಾನವಾಃ ಸತ್ಯವಾದಿನಃ ।
ಮನಸ್ವಿನೋ ಮಹಾಭಾಗಾಃ ಶ್ರದ್ಧಾವಂತೋ ವಿಚಕ್ಷಣಾಃ ॥ ೧೦೮ ॥
ಪುಲಸ್ತ್ಯ ಉವಾಚ :—
ಏತಸ್ಮಿನ್ನೇವ ಕಾಲೇ ತು ವಿಮಾನಾನಿ ಸಹಸ್ರಶಃ ।
ಸಮಾಯಾತಾನಿ ರಾಜೇಂದ್ರ ಕಪಿಲಾಯಾಃ ಪ್ರಭಾವತಃ ॥ ೧೦೯ ॥

---

೧೦೪. ಧರ್ಮನು ಹೇಳುತ್ತಾನೆ :—ಈ ಕೊಳದ ಪುಣ್ಯಕರವಾದ ನೀರಿನಲ್ಲಿ ಚತುರ್ದಶೀ ದಿನ ಮಿಂದವನು ಉತ್ತಮ ಗತಿಯನ್ನು ಪಡೆಯುವನು.

೧೦೫. ಪುಣ್ಯಕರವಾದ ಈ ತೀರ್ಥವು ನಿನ್ನ ಹೆಸರಿನಿಂದ ಪ್ರಸಿದ್ಧವಾಗುವುದು. ಮನುಷ್ಯನು ದರ್ಶಶ್ರಾದ್ಧದಲ್ಲಿ ಒಂದು ಗೋವನ್ನು ದಾನಮಾಡಿದರೆ ಸಾವಿರ ಗೋವುಗಳನ್ನು ಹೊಂದುವನು. ಸ್ನಾನದಿಂದ ಲಕ್ಷದಷ್ಟೂ, ದಾನದಿಂದ ಅಕ್ಷಯವೂ ಆದ ಪುಣ್ಯವನ್ನು ಪಡೆಯುವನು.

೧೦೬. ಇಲ್ಲಿ ಸಾವಧಾನ ಮನಸ್ಸಿನಿಂದ ಶ್ರಾದ್ಧಮಾಡಿದ ಮಹಾತ್ಮರಾದ ಮಾನವರು ಸಕಲ ದಾನಗಳ ಫಲವನ್ನೂ, ಭುಕ್ತಿ ಮುಕ್ತಿಗಳನ್ನು ಹೊಂದುವರು.

೧೦೭. ಈ ಶುಭ ಜಲದಲ್ಲಿ ಬಾಯಾರಿಕೆಗೊಂಡ ಕೀಟ ಪತಂಗಗಳು ಮಿಂದರೆ ಅವು ದೇವತೆಗಳ ಸ್ಥಾನಕ್ಕೆ ತೆರಳುವುವು.

೧೦೮. ಭಕ್ತಿಯುಳ್ಳವರೂ, ಸತ್ಯವನ್ನಾಡುವವರೂ, ಜ್ಞಾನಿಗಳೂ, ಮಹಾತ್ಮರೂ, ಶ್ರದ್ಧೆಯುಳ್ಳವರೂ, ಕುಶಲರೂ, ಆದ ಮಾನವರ ವಿಷಯದಲ್ಲಿ ಹೇಳತಕ್ಕದ್ದೇನಿದೆ.

೧೦೯. ಪುಲಸ್ತ್ಯನು ಹೇಳುತ್ತಾನೆ:—ದೊರೆಯೆ ! ಈ ಸಮಯದಲ್ಲಿ ಕಪಿಲೆಯ ಮಾಹಾತ್ಮ್ಯದಿಂದ ಸಾವಿರಾರು ವಿಮಾನಗಳು ಬಂದುವು.

ತಾಸ್ತ್ಯಾಯುಕ್ತಾಥ ಕಪಿಲಾ ಗೋಪಗೋಕುಲಸಂಕುಲಾ ।
ಸುಪ್ರಭೇಣ ಸಮಾಯುಕ್ತಾ ತತ್ಪದಂ ಪರಮಂ ಗತಾ ॥ ೧೧೦ ॥
ತಸ್ಮಾತ್ಸರ್ವಪ್ರಯತ್ನೇನ ತತ್ರ ಸ್ನಾನಂ ಸಮಾಚರೇತ್ ।
ಶ್ರಾದ್ಧಂ ಚೈವಾತ್ಮನಃ ಶಕ್ತ್ಯಾ ದಾನಂ ಪಾರ್ಥಿವಸತ್ತಮ ॥ ೧೧೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕಪಿಲಾತೀರ್ಥಮಾಹಾತ್ಮ್ಯವರ್ಣನಂ ನಾಮ
ಏಕೋನತ್ರಿಂಶೋಽಧ್ಯಾಯಃ

---

೧೧೦. ಅನಂತರ ಕಪಿಲೆಯು ಗೋಪಾಲಕರು, ಗೋವುಗಳ ಸಮೂಹ, ಸುಪ್ರಭ ಎಂಬ ತನ್ನ ಕರು ಇವರೊಡನೆ ವಿಮಾನವನ್ನೇರಿ ಉತ್ತಮ ಸ್ಥಾನಕ್ಕೆ ಹೋಯಿತು.

೧೧೧. ಪಾರ್ಥಿವೋತ್ತಮ! ಆದ್ದರಿಂದ ಇಲ್ಲಿ ತನ್ನ ಶಕ್ತ್ಯನುಸಾರ ಸ್ನಾನ, ಶ್ರಾದ್ಧ, ದಾನಗಳನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಪುರಾಣದ ಏಳನೆಯಪ್ರಭಾಸಖಂಡದ
ಮೂರನೆಯ ಅರ್ಬುದಖಂಡದಲ್ಲಿ ಕಪಿಲಾತೀರ್ಥಮಾಹಾತ್ಮ್ಯವರ್ಣನ ಎಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ತ್ರಿಂಶೋಽಧ್ಯಾಯಃ

### ಅಗ್ನಿತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ಅಗ್ನಿತೀರ್ಥಂ ತತೋ ಗಚ್ಛೇತ್ಪಾವನಂ ಪರಮಂ ನೃಣಾಂ ।
ತತ್ರ ವಹ್ನಿಃ ಪುರಾ ನಷ್ಟೋ ಲಬ್ಧಶ್ಚ ತ್ರಿದಶೈರಪಿ ॥ ೧ ॥

ಯಯಾತಿರುವಾಚ :—

ಕಿಮರ್ಥಂ ಭಗವನ್ವಹ್ನಿಃ ಪುರಾ ನಷ್ಟೋ ದ್ವಿಜೋತ್ತಮ ।
ಕಥಂ ತತ್ರೈವ ಲಬ್ಧಸ್ತು ಕೌತುಕಂ ಮೇ ಮಹಾಮುನೇ ॥ ೨ ॥

ಪುಲಸ್ತ್ಯ ಉವಾಚ :—

ಪುರಾ ವೃಷ್ಟಿನಿರೋಧೋಽಭೂದ್ಯಾವದ್ದ್ವಾದಶವತ್ಸರಾನ್ ।
ಸಂಶಯಂ ಪರಮಂ ಪ್ರಾಪ್ತಃ ಸರ್ವೋ ಲೋಕಃ ಕ್ಷುಧಾರ್ದಿತಃ ॥ ೩ ॥
ಪ್ರಾಯೋ ಮೃತೋ ಮೃತಪ್ರಾಯಃ ಶೇಷೋಽಭೂದ್ಧರಣೀತಲೇ ।
ನಷ್ಟಾ ಅರಣ್ಯಜಾ ಗ್ರಾಮ್ಯಾಃ ಪಶವಃ ಪಕ್ಷಿಣೋ ಮೃಗಾಃ ॥ ೪ ॥

---

### ಕನ್ನಡದ ಅನುವಾದ

### ಅಗ್ನಿತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಮಾನವರನ್ನು ಪವಿತ್ರಗೊಳಿಸುವ ಅಗ್ನಿತೀರ್ಥದೆಡೆಗೆ ಹೋಗಬೇಕು. ಅಲ್ಲಿ ಹಿಂದೆ ದೇವತೆಗಳು ನಷ್ಟವಾದ ಅಗ್ನಿಯನ್ನು ಮರಳಿ ಪಡೆದಿರುವರು.

೨. ಯಯಾತಿಯು ಹೇಳುತ್ತಾನೆ :—ಪೂಜ್ಯನೆ ! ಅಗ್ನಿಯು ಹಿಂದೆ ಏಕೆ ನಷ್ಟವಾಯಿತು ? ಅಲ್ಲಿಯೇ ಏಕೆ ಸಿಕ್ಕಿತು ? ಮುನಿಯೆ ! ಈ ವಿಷಯದಲ್ಲಿ ನನಗೆ ಕೇಳಬೇಕೆಂದು ಕುತೂಹಲವುಂಟಾಗಿದೆ.

೩. ಪುಲಸ್ತ್ಯನು ಹೇಳುತ್ತಾನೆ :—ಹಿಂದೆ ಹನ್ನೆರಡು ವರ್ಷಕಾಲ ಮಳೆಯಿಲ್ಲದಿರಲು ಹಸಿವಿನಿಂದ ಪೀಡಿತರಾದ ಸಮಸ್ತ ಜನರು ಪ್ರಾಣಸಂಶಯವನ್ನು ಹೊಂದಿದರು.

೪. ಭೂಮಿಯಲ್ಲಿ ಸಾಮಾನ್ಯವಾಗಿ ಎಲ್ಲ ಪ್ರಾಣಿಗಳೂ ಮೃತವಾದುವು. ಉಳಿದವು ಸತ್ತಂತೆಯೇ ಆದುವು. ಕಾಡು ನಾಡುಗಳ ಪಶು ಪಕ್ಷಿಗಳು ಮೃತವಾದುವು.

ಏವಂ ಕೃಚ್ಛ್ರಮನುಪ್ರಾಪ್ತೇ ಮರ್ತ್ಯಲೋಕೇ ನರಾಧಿಪಃ ।
ವಿಶ್ವಾಮಿತ್ರೋ ಮುನಿವರಃ ಸಂದೇಹಂ ಪರಮಂ ಗತಃ ॥ ೫ ॥
ಅನ್ನೌಷಧಿರಸಾಭಾವಾದಸ್ಥಿಶೇಷೋ ವ್ಯಜಾಯತ ।
ಅನ್ಯಸ್ಮಿನ್ದಿವಸೇ ಪ್ರಾಪ್ತಃ ಕ್ಷುತ್ಕ್ಷಾಮಃ ಪರ್ಯಟನ್ದಿಶಃ ॥ ೬ ॥
ಚಂಡಾಲನಿಲಯಂ ಪ್ರಾಪ್ತಃ ಕ್ಷುತ್ತೃಷಾಪೀಡಿತೋ ಭೃಶಂ ।
ತತ್ರಾಪಶ್ಯನ್ಮೃತಂ ಶ್ವಾನಂ ಶುಷ್ಕಂ ಪಾರ್ಥಿವಸತ್ತಮ ॥ ೭ ॥
ತಮಾದಾಯ ಗೃಹಂ ಪ್ರಾಪ್ತಃ ಪ್ರಕ್ಷಾಳ್ಯ ಸಲಿಲೇನ ತು ।
ಕ್ಷುತ್ಕ್ಷಾಮಃ ಪಾಚಯಾಮಾಸ ತತಸ್ತಂ ಪಾವಕೇಽಜುಹೋತ್ ॥ ೮ ॥
ಅಭಕ್ಷ್ಯಭಕ್ಷಣಂ ಜ್ಞಾತ್ವಾ ಹವ್ಯವಾಹಸ್ತತೋ ನೃಪ ।
ಶಕ್ರಸ್ಯೋಪರಿ ಮನ್ಯುಂ ಸ್ವಂ ಚಕ್ರೇಽತೀವ ಮಹೀಪತೇ ॥ ೯ ॥
ನಷ್ಟೌಷಧಿರಸೇ ಲೋಕೇ ಯುಕ್ತಮೇತದ್ಧಿ ಸಾಂಪ್ರತಂ ।
ಯಾದೃಗಾಪ್ತಂ ಹವಿಸ್ತಾದೃಗಗ್ನಿಭಕ್ಷ್ಯೋ ವಿಶಿಷ್ಯತೇ ॥ ೧೦ ॥
ನಾಭಕ್ಷ್ಯಂ ಭಕ್ಷಯಿಷ್ಯಾಮಿ ತ್ಯಜಿಷ್ಯೇ ಕ್ಷಿತಿಮಂಡಲಂ ।
ಯೇನ ಶಕ್ರಾದಯೋ ದೇವಾ ಯಾಂತಿ ಕಷ್ಟತರಾಂ ದಶಾಂ ॥ ೧೧ ॥

---

೫. ಭೂಮಿಪತಿಯೆ ! ಹೀಗೆ ಭೂಲೋಕದಲ್ಲಿ ಕಷ್ಟವೊದಗಲು ವಿಶ್ವಾಮಿತ್ರ ಮುನಿವರ್ಯನು ಪ್ರಾಣಸಂದೇಹವನ್ನು ಹೊಂದಿದನು.

೬. ಅವನು ಅನ್ನ, ಓಷಧಿ ರಸಗಳಿಲ್ಲದಿರುವುದರಿಂದ ಅಸ್ಥಿಮಾತ್ರಾವಶಿಷ್ಟನಾದನು. ಅವನು ಇನ್ನೊಂದು ದಿನ ದಿಕ್ಕುಗಳಲ್ಲಿ ಸಂಚರಿಸುತ್ತ ಹಸಿವಿನಿಂದ ಕೃಶನಾದನು.

೭. ಹಸಿವು ಬಾಯಾರಿಕೆಗಳಿಂದ ವ್ಯಥೆಗೊಂಡ ಅವನು ಚಂಡಾಲನ ಮನೆಗೆ ಹೋಗಿ ಅಲ್ಲಿ ಸತ್ತು ಒಣಗಿದ ನಾಯಿಯನ್ನು ಕಂಡನು.

೮. ಅದನ್ನು ಮನೆಗೆ ತಂದು ನೀರಿನಿಂದ ತೊಳೆದು ಬೇಯಿಸಿ ಅಗ್ನಿಯಲ್ಲಿ ಹೋಮಿಸಿದನು.

೯. ದೊರೆಯೆ ! ಬಳಿಕ ಅಗ್ನಿಯು ಅದು ತಿನ್ನಲರ್ಹವಲ್ಲವೆಂದರಿತು ಇಂದ್ರನ ಮೇಲೆ ಬಹಳ ರೋಷಗೊಂಡನು.

೧೦. ಲೋಕದಲ್ಲಿ ಓಷಧಿರಸವು ನಷ್ಟವಾಗಲು ಇದು ಈಗ ಯುಕ್ತವೊ ? ಸಿಕ್ಕಿದ್ದೆಲ್ಲ ಹವಿಸ್ಸೊ? ಅಗ್ನಿಯು ಭಕ್ಷಿಸುವ ವಸ್ತುವು ಉತ್ತಮವಾಗಿರಬೇಕು.

೧೧. ಅಭಕ್ಷ್ಯವನ್ನು ಭಕ್ಷಿಸಲಾರೆನು. ಭೂಮಂಡಲವನ್ನು ಬಿಟ್ಟು ಬಿಡುವೆನು. ಇದರಿಂದ ಇಂದ್ರಾದಿ ದೇವತೆಗಳು ಅತ್ಯಂತ ಕಷ್ಟಸ್ಥಿತಿಯನ್ನು ಹೊಂದುವರು.

ಏವಂ ಸಂಚಿಂತ್ಯ ಮನಸಾ ಸಕೋಪೋ ಹವ್ಯವಾಹನಃ ।
ಪ್ರಣಷ್ಟಃ ಸಕಲಂ ಹಿತ್ವಾ ಮರ್ತ್ಯಲೋಕಂ ಚರಾಚರಂ ॥ ೧೨ ॥
ಪ್ರಣಷ್ಟೇ ಸಹಸಾ ವಹ್ನಾವಗ್ನಿಷ್ಟೋಮಾದಿಕಾಃ ಕ್ರಿಯಾಃ ।
ಪ್ರಣಷ್ಟಾಸ್ತು ಜನಾಃ ಸರ್ವೇ ವಿಶೇಷಾತ್ಸಂಶಯಂ ಗತಾಃ ॥ ೧೩ ॥
ತತೋ ದೇವಗಣಾಃ ಸರ್ವೇ ಸಂದೇಹಂ ಪರಮಂ ಗತಾಃ ।
ಯಜ್ಞಭಾಗ ವಿಹೀನತ್ವಾನ್ಮಂತ್ರಂ ಚಕ್ರುಸ್ತತೋ ಮಿಥಃ ॥ ೧೪ ॥
ತ್ಯಕ್ತಸ್ತು ವಹ್ನಿನಾ ಮರ್ತ್ಯಸ್ತತೋ ನಾಶಂ ಗತಾ ನರಾಃ ।
ಶೇಷನಾಶಾದ್ವಯಂ ಸರ್ವೇ ವಿನಂಕ್ಷ್ಯಾಮೋ ನ ಸಂಶಯಃ ॥ ೧೫ ॥
ತಸ್ಮಾದನ್ವೇಷ್ಯತಾಂ ವಹ್ನಿರ್ಯತ್ರ ತಿಷ್ಠತಿ ಸಾಂಪ್ರತಂ ।
ಯಥಾ ಚರತಿ ಮರ್ತ್ಯೇ ಚ ತಥಾ ನೀತಿರ್ವಿಧೀಯತಾಂ ॥ ೧೬ ॥

ಪುಲಸ್ತ್ಯ ಉವಾಚ :—

ಏವಂ ತೇ ನಿಶ್ಚಯಂ ಕೃತ್ವಾ ಸರ್ವೇ ದೇವಾಃ ಸವಾಸವಾಃ ।
ಅನ್ವೇಷಯಂಸ್ತಥಾಗ್ನಿಂ ತೇ ಸಮಂತಾತ್ಕ್ಷಿತಿಮಂಡಲೇ ॥ ೧೭ ॥
ತತಸ್ತೇ ಪುರತೋ ದೃಷ್ಟ್ವಾ ಶುಕಂ ಶ್ರಾಂತಾ ದಿವೌಕಸಃ ।
ಪಪ್ರಚ್ಛುಃ ಶ್ರದ್ಧಯಾ ವಹ್ನಿರ್ಯದಿ ದೃಷ್ಟಃ ಪ್ರಕಥ್ಯತಾಂ ॥ ೧೮ ॥

---

೧೨. ಕುಪಿತನಾದ ಅಗ್ನಿದೇವನು ಹೀಗೆ ಮನಸ್ಸಿನಲ್ಲಿ ಆಲೋಚಿಸಿ ಚರಾಚರಾತ್ಮಕವಾದ ಭೂಮಂಡಲವನ್ನು ತ್ಯಜಿಸಿ ಅದೃಶ್ಯನಾದನು.

೧೩. ಅಗ್ನಿಯು ಕೂಡಲೆ ಅದೃಶ್ಯನಾಗಲು ಅಗ್ನಿಷ್ಟೋಮಾದಿಕ್ರಿಯೆಗಳು ಹಾಳಾದುವು. ಜನರೆಲ್ಲ ಪ್ರಾಣಸಂದೇಹವನ್ನು ಹೊಂದಿದರು.

೧೪. ಬಳಿಕ ಸಕಲ ದೇವತೆಗಳೂ ಯಜ್ಞಭಾಗವಿಲ್ಲದ್ದರಿಂದ ಅತ್ಯಂತ ಕಳವಳಗೊಂಡು ಪರಸ್ಪರ ಆಲೋಚಿಸಿದರು.

೧೫. ಅಗ್ನಿಯು ಭೂಲೋಕವನ್ನು ತ್ಯಜಿಸಿದ್ದರಿಂದ ಮನುಷ್ಯರು ನಾಶವಾದರು. ಅವರ ನಾಶದಿಂದ ಯಜ್ಞಾಂಶವಿಲ್ಲದ ಕಾರಣ ನಾವು ನಿಶ್ಚಯವಾಗಿಯೂ ಸಾಯುವೆವು.

೧೬. ಆದ್ದರಿಂದ ಈಗ ಅಗ್ನಿಯು ಎಲ್ಲಿರುವನೆಂದು ಹುಡುಕಿರಿ. ಅವನು ಭೂಲೋಕಲ್ಲಿ ಸಂಚರಿಸುವಂತೆ ಉಪಾಯವನ್ನು ಮಾಡಿರಿ.

೧೭. ಪುಲಸ್ತ್ಯನು ಹೇಳುತ್ತಾನೆ :—ಹೀಗೆ ಆ ಇಂದ್ರಾದಿ ದೇವತೆಗಳು ನಿಶ್ಚಯಿಸಿ ಭೂಮಂಡಲದಲ್ಲೆಲ್ಲ ಅಗ್ನಿಯನ್ನು ಹುಡುಕಿದರು.

೧೮. ಅನಂತರ ಬಳಲಿದ ಆ ದೇವತೆಗಳು ಮುಂದಿರುವ ಗಿಣಿಯನ್ನು ಕಂಡು ಶ್ರದ್ಧೆಯಿಂದ ನೀನು ಅಗ್ನಿಯನ್ನು ನೋಡಿದ್ದರೆ ಹೇಳು ಎಂದು ಪ್ರಶ್ನಿಸಿದರು.

ಶುಕಉವಾಚ :—
ಯೋಽಯಂ ವಂಶೋ ಮಹಾನಗ್ರೇ ಪ್ರದಗ್ಧೋ ವಹ್ನಿಸಂಗತಃ ।
ಪ್ರಣಷ್ಟೋ ಹವ್ಯವಾಹೋತ್ರ ಮಯಾ ದೃಷ್ಟೋ ಮಹಾದ್ಯುತಿಃ ॥ ೧೯ ॥
ಶುಕೇನಾವೇದಿತೋ ವಹ್ನಿಃ ಶಪ್ತ್ವಾ ತಂ ಮುಸುನಾ ವೃತಃ ।
ಗದ್ಗದಾ ಭಾವಿ ತೇ ವಾಣೀ ಪ್ರೋಕ್ತ್ವೇದಂ ಪ್ರಸ್ಥಿತೋ ದ್ರುತಂ ॥ ೨೦ ॥
ಪ್ರವಿವೇಶ ಶಮೀಗರ್ಭಮಶ್ವತ್ಥಂ ತರುಸತ್ತಮಂ ।
ತತ್ರಸ್ಥೋ ದ್ವಿಪರಾಜ್ಞಾ ಸ ಕಥಿತೋ ವಿಬುಧಾನ್ಪ್ರತಿ ॥ ೨೧ ॥
ಸ ತಂ ಪ್ರೋವಾಚ ತೇ ಜಿಹ್ವಾ ವಿಪರೀತಾ ಭವಿಷ್ಯತಿ ।
ತತೋ ಜಲಾಶಯಂ ಗತ್ವಾ ಪರ್ವತೇಽರ್ಬುದಸಂಜ್ಞಕೇ ॥ ೨೨ ॥
ಪ್ರವಿಷ್ಟೋ ಭಗವಾನ್ವಹ್ನಿರ್ಯಥಾ ದೇವೈರ್ನ ಲಕ್ಷ್ಯತೇ ।
ತತ್ರೋತ್ಥೇನ ದರ್ದುರೇಣ ತೇಷಾಂ ಪ್ರೋಕ್ತೋ ಹುತಾಶನಃ ॥ ೨೩ ॥
ಅತ್ರಾಸೌ ತಿಷ್ಠತೇ ವಹ್ನಿರ್ನಿರ್ಝರೇ ಪರ್ವತಸ್ಯ ಚ ।
ದಗ್ಧಾಶ್ಚ ಜಲಜಾಃ ಸರ್ವೇ ಸುತಪ್ತೇನೈವ ವಾರಿಣಾ ॥ ೨೪ ॥
ಕೃಚ್ಛ್ರಾದಹಂ ವಿನಿಷ್ಕ್ರಾಂತಸ್ತಸ್ಮಾನ್ಮೃತ್ಯುಮುಖಾತ್ಸುರಾಃ ।
ತಚ್ಛ್ರುತ್ವಾ ಯತ್ನಮಾಸ್ಥಾಯ ಪ್ರವಿಷ್ಟೋ ಹವ್ಯವಾಹನಃ ॥ ೨೫ ॥
ಭವಿಷ್ಯಸಿ ವಿಜಿಹ್ವಸ್ತ್ವಂ ಶಪ್ತ್ವಾ ತಂ ದರ್ದುರಂ ನೃಪಃ ॥ ೨೬ ॥

---

೧೯. ಗಿಣಿಯು ಹೇಳುತ್ತದೆ:—ಮುಂದೆ ಅಗ್ನಿಯ ಸಂಬಂಧದಿಂದ ಸುಟ್ಟು ಬೂದಿಯಾಗಿರುವ ಬಿದಿರಿನಲ್ಲಿ ಅತ್ಯಂತ ಕಾಂತಿಯುಳ್ಳ ಅಗ್ನಿಯನ್ನು ನೋಡಿರುವೆನು.

೨೦. ಗಿಣಿಯು ಹೀಗೆ ತಿಳಿಸಲು ಅಗ್ನಿಯು ಕುಪಿತನಾಗಿ ಅದನ್ನು ಕುರಿತು ನಿನ್ನ ಮಾತು ಗದ್ಗದವಾಗಲೆಂದು ಶಪಿಸಿ ಶೀಘ್ರವಾಗಿ ಹೊರಟನು.

೨೧. ಅನಂತರ ಅಗ್ನಿಯು ಶಮೀವೃಕ್ಷದೊಳಗಿರುವ ಅಶ್ವತ್ಥ ಮರವನ್ನು ಪ್ರವೇಶಿಸಲು ಅವನು ಅಲ್ಲಿರುವುದನ್ನು ದೇವತೆಗಳಿಗೆ ಆನೆಯು ತಿಳಿಸಿತು.

೨೨—೨೩. ಅಗ್ನಿಯು ಆ ಆನೆಗೆ ನಿನ್ನ ನಾಲಿಗೆಯು ವ್ಯತ್ಯಾಸವಾಗಲೆಂದು ಶಪಿಸಿ ಆರ್ಬುದ ಪರ್ವತದಲ್ಲಿರುವ ಕೊಳವನ್ನು ದೇವತೆಗಳು ಕಾಣದಂತೆ ಪ್ರವೇಶಿಸಿದನು. ಆಗ ಅವನು ಅಲ್ಲಿರುವುದನ್ನು ಅಲ್ಲಿ ಹುಟ್ಟಿದ ಕಪ್ಪೆಯು ದೇವತೆಗಳಿಗೆ ಹೀಗೆ ತಿಳಿಸಿತು.

೨೪. ದೇವತೆಗಳೆ! ಈ ಅರ್ಬುದ ಪರ್ವತದ ಕೊಳದಲ್ಲಿ ಅಗ್ನಿಯು ಇರುವನು. ಅವನಿಂದ ನೀರು ಕಾದಿರುವುದರಿಂದ ಜಲಚರ ಪ್ರಾಣಿಗಳೆಲ್ಲ ಸುಟ್ಟು ಹೋಗಿರುವುವು.

೨೫—೨೬. ನಾನು ಕಷ್ಟಪಟ್ಟು ಮೃತ್ಯು ಮುಖದಿಂದ ಪಾರಾದೆನು. ಆಗ ಅಲ್ಲಿರುವ ಅಗ್ನಿಯು ಆ ಕಪ್ಪೆಯ ಮಾತನ್ನು ಕೇಳಿ ಅದನ್ನು ನೀನು ನಾಲಿಗೆಯಿಲ್ಲದವನಾಗುವೆಯೆಂದು ಶಪಿಸಿದನು.

ತತೋ ದೇವಗಣಾಃ ಸರ್ವೇ ನಿಷ್ಕ್ರಾಂತಾಃ ಸಲಿಲಾಶ್ರಯಾತ್ |
ಸಂವೇಷ್ಟ್ಯ ತುಷ್ಟುವುಃ ಸರ್ವೇ ಸ್ತವೈರ್ವೇದೋದ್ಭವೈರ್ನೃಪ ‖ ೨೭ ‖
ದೇವಾ ಊಚುಃ :—
ತ್ವಮಗ್ನೇ ಸರ್ವಭೂತಾನಾಮಂತಶ್ಚರಸಿ ಪಾವಕ |
ತ್ವಯಾ ಹೀನಂ ಜಗತ್ಸರ್ವಂ ನಾಶಂ ಯಾಸ್ಯತಿ ಸತ್ವರಂ ‖ ೨೮ ‖
ತ್ವಂ ಮುಖಂ ಸರ್ವದೇವಾನಾಂ ತ್ವಯಿ ಲೋಕಾಃ ಪ್ರತಿಷ್ಠಿತಾಃ |
ಭೂಲೋಕೇ ಚ ತ್ವಯಾ ತ್ಯಕ್ತೇ ವಯಂ ಸರ್ವೇ ಸವಾಸವಾಃ |
ವಿನಾಶಮೇವ ಯಾಸ್ಯಾಮಸ್ತಸ್ಮಾತ್ತ್ವಂ ತ್ರಾತುಮರ್ಹಸಿ ‖ ೨೯ ‖
ತ್ವಂ ಬ್ರಹ್ಮಾ ತ್ವಂ ಮಹಾದೇವಸ್ತ್ವಂ ವಿಷ್ಣುಸ್ತ್ವಂ ದಿವಾಕರಃ |
ತ್ವಂ ಚಂದ್ರಸ್ತ್ವಂ ಚ ಧನದೋ ಮರುತ್ತ್ವಂ ಚ ಸುರೇಶ್ವರಃ ‖ ೩೦ ‖
ಇಂದ್ರಾದ್ಯಾ ವಿಬುಧಾಃ ಸರ್ವೇ ತ್ವದಾಯತ್ತಾ ಹುತಾಶನ |
ಕಿಮರ್ಥಂ ಭಗವನ್ಮರ್ತ್ಯಂ ತ್ಯಕ್ತ್ವಾ ತ್ವಮತ್ರ ಸಂಸ್ಥಿತಃ |
ಕಿಮರ್ಥಂ ಭಗವನ್ನಸ್ಮಾನನಾಗಾಂಸ್ತ್ಯಕ್ತುಮಿಚ್ಛಸಿ ‖ ೩೦ ‖
ಪುಲಸ್ತ್ಯ ಉವಾಚ :—
ವೇಷ್ಟಿತೋ ಭಗವಾನ್ಸಹ್ನಿರ್ದೇವೈಃ ಸ್ತುತಿಪರಾಯಣೈಃ |
ತಸ್ಯೈವ ನಿರ್ಝರಸ್ಯಾಥ ತಟಸ್ಥೋ ವಾಕ್ಯಮಬ್ರವೀತ್ ‖ ೩೧ ‖

---

೨೭. ಬಳಿಕ ದೇವತೆಗಳೆಲ್ಲ ಆ ಕೊಳವನ್ನು ಸುತ್ತುವರಿದು ವೇದೋಕ್ತ ಸ್ತೋತ್ರಗಳಿಂದ ಆ ಅಗ್ನಿಯನ್ನು ಸ್ತುತಿಸಿದರು.

೨೮. ದೇವತೆಗಳು ಹೇಳುತ್ತಾರೆ:—ಅಗ್ನಿಯೆ! ನೀನು ಸಕಲ ಪ್ರಾಣಿಗಳ ಹೃದಯಾಂತರಾಳದಲ್ಲಿ ಸಂಚರಿಸುವೆ. ನೀನಿಲ್ಲದಿದ್ದರೆ ಸಮಸ್ತ ಪ್ರಪಂಚವೂ ಜಾಗ್ರತೆಯಾಗಿಯೆ ನಾಶವಾಗುವುದು.

೨೯. ನೀನು ಸಮಸ್ತ ದೇವತೆಗಳಿಗೂ ಮುಖವಾಗಿರುವೆ. ನಿನ್ನಲ್ಲಿ ಲೋಕಗಳು ನೆಲೆಸಿರುವುವು. ನೀನು ಭೂಲೋಕವನ್ನು ತ್ಯಜಿಸಿದ ಕೂಡಲೆ ನಾವೆಲ್ಲ ಇಂದ್ರನೊಡನೆ ನಾಶವಾಗುವೆವು. ಆದ್ದರಿಂದ ನೀನು ನಮ್ಮನ್ನು ಕಾಪಾಡಲರ್ಹನಾಗಿರುವೆ.

೩೦. ನೀನು ಬ್ರಹ್ಮನೂ, ಮಹೇಶ್ವರನೂ, ವಿಷ್ಣುವೂ, ಸೂರ್ಯನೂ, ಚಂದ್ರನೂ, ಕುಬೇರನೂ, ಮರುತ್ತುಗಳೂ, ಇಂದ್ರನೂ ಆಗಿರುವೆ.

೩೦. ಅಗ್ನಿಯೆ! ಇಂದ್ರಾದಿ ವಿಬುಧರೆಲ್ಲರೂ ನಿನ್ನ ಅಧೀನದಲ್ಲಿರುವರು. ಪೂಜ್ಯನೆ! ನೀನು ಭೂಲೋಕವನ್ನು ತ್ಯಜಿಸಿ ಇಲ್ಲಿ ಏಕೆ ಇರುವೆ? ತಪ್ಪುಮಾಡದಿರುವ ನಮ್ಮನ್ನು ಏತಕ್ಕೆ ತ್ಯಜಿಸಲಿಚ್ಛಿಸುವೆ?

೩೧. ಪುಲಸ್ತ್ಯನು ಹೇಳುತ್ತಾನೆ:—ಪೂಜ್ಯನಾದ ಅಗ್ನಿಯನ್ನು ಸ್ತುತಿನಿರತರಾದ ದೇವತೆಗಳು ಸುತ್ತಿಕೊಳ್ಳಲು ಆ ಅಗ್ನಿಯು ಆ ಕೊಳದ ತಟದಲ್ಲಿ ನಿಂತು ಇಂತೆಂದನು.

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ಸುರಾಃ ಸರ್ವೇ ಸ್ವಂಸ್ವಂ ಸ್ಥಾನಂ ಯಯುಸ್ತತಃ ।
ವಹ್ನಿಶ್ಚ ಭಗವಾನ್ರಾಜನ್ಯಥಾಪೂರ್ವಮವರ್ತತ ॥ ೪೫ ॥
ಯಶ್ಚೈತತ್ಪಠತೇ ನಿತ್ಯಂ ಪ್ರಾತರುತ್ಥಾಯ ಚೋತ್ತಮಂ ।
ಅಗ್ನಿತೀರ್ಥಸ್ಯ ಮಾಹಾತ್ಮ್ಯಂ ಮುಚ್ಯತೇ ಸರ್ವಪಾತಕೈಃ ॥ ೪೬ ॥
ಅಹೋರಾತ್ರಕೃತಾತ್ಪಾಪಾತ್ಸ ಶೃಣ್ವನ್ನಪಿ ಮುಚ್ಯತೇ ॥ ೪೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಅಗ್ನಿತೀರ್ಥಮಾಹಾತ್ಮ್ಯವರ್ಣನಂ ನಾಮ
ತ್ರಿಂಶೋಽಧ್ಯಾಯಃ

---

೪೫. ಸಕಲ ದೇವತೆಗಳು ಹೀಗೆ ಹೇಳಿ ತಮ್ಮ ತಮ್ಮ ಸ್ಥಳಕ್ಕೆ ತೆರಳಿದರು. ಅಗ್ನಿಯೂ ಮೊದಲಿನಂತೆಯೇ ಭೂಲೋಕದಲ್ಲಿ ನೆಲಸಿದ್ದನು.

೪೬. ಬೆಳಿಗ್ಗೆ ಎದ್ದು ನಿತ್ಯವೂ ಈ ಅಗ್ನಿತೀರ್ಥದ ಉತ್ತಮವಾದ ಮಾಹಾತ್ಮ್ಯೆ ವನ್ನು ಪಠಿಸಿದ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೪೭. ಇದನ್ನು ಕೇಳಿದವನು ಒಂದು ದಿನ ಮಾಡಿದ ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಅಗ್ನಿತೀರ್ಥಮಾಹಾತ್ಮ್ಯವರ್ಣನವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕತ್ರಿಂಶೋಽಧ್ಯಾಯಃ

### ರಕ್ತಾನುಬಂಧಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ರಕ್ತಾನುಬಂಧಂ ವೈ ಗಚ್ಛೇತ್ತೀರ್ಥಂ ತ್ರೈಲೋಕ್ಯವಿಶ್ರುತಂ ।
ಯತ್ರ ಸ್ನಾತೋ ನರಃ ಸಮ್ಯಙ್ಮುಚ್ಯತೇ ಬ್ರಹ್ಮಹತ್ಯಯಾ ॥ ೧ ॥
ಪುರಾಽಽಸೀತ್ಪಾರ್ಥಿವೋ ನಾಮ ಇಂದ್ರಸೇನೋ ಮಹೀಪತಿಃ ।
ತಸ್ಯಾಽಽಸೀತ್ಸುಪ್ರಿಯಾ ಭಾರ್ಯಾ ಸುನಂದಾನಾಮ ಭಾಮಿನೀ ।
ಪತಿವ್ರತಾ ಪತಿಪ್ರಾಣಾ ಸದಾ ಪತ್ಯುಃ ಪ್ರಿಯೇ ಸ್ಥಿತಾ ॥ ೨ ॥
ಕಸ್ಯಚಿತ್ತ್ವಥ ಕಾಲಸ್ಯ ಸ ರಾಜಾ ಸಪರಿಗ್ರಹಃ ।
ಪರದೇಶಂ ಗತೋ ಹಂತುಂ ಶತ್ರುಸಂಘಂ ದುರಾಸದಂ ॥ ೩ ॥
ತಂ ನಿಹತ್ಯ ಧನಂ ಭೂರಿ ಗೃಹೀತ್ವಾ ಪ್ರಸ್ಥಿತೋ ಗೃಹಂ ।
ತತೋಽಗ್ರೇ ಪ್ರೇಷಯಾಮಾಸ ಸ ದೂತಂ ಕೃತ್ರಿಮಂ ನೃಪ ॥ ೪ ॥

---

### ಕನ್ನಡದ ಅನುವಾದ

### ರಕ್ತಾನುಬಂಧಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಅನಂತರ ಮೂರುಲೋಕಗಳಲ್ಲಿ ಪ್ರಸಿದ್ಧವಾದ ರಕ್ತಾನುಬಂಧ ತೀರ್ಥಕ್ಕೆ ಹೋಗಬೇಕು. ಇಲ್ಲಿ ಮಿಂದ ಮಾನವನು ಬ್ರಹ್ಮಹತ್ಯೆಯಿಂದ ಮುಕ್ತನಾಗುವನು.

೨. ಹಿಂದೆ ಇಂದ್ರಸೇನನೆಂಬ ದೊರೆಯಿದ್ದನು. ಅವನಿಗೆ ಪ್ರಿಯಳೂ, ಪತಿವ್ರತೆಯೂ, ಯಾವಾಗಲೂ ಪತಿಗೆ ಪ್ರಿಯವನ್ನಾಚರಿಸಲುದ್ಯುಕ್ತಳೂ ಆದ ಒಬ್ಬ ಸುನಂದೆಯೆಂಬ ಪತ್ನಿಯಿದ್ದಳು.

೩. ಒಂದಾನೊಂದು ದಿನ ಆ ರಾಜನು ಸೇನೆಯೊಡನೆ ಶತ್ರುಗಳನ್ನು ಕೊಲ್ಲಲು ಪರದೇಶಕ್ಕೆ ಹೋದನು.

೪. ದೊರೆಯೆ ! ಅವನು ಆ ಶತ್ರುವನ್ನು ಕೊಂದು ಬಹು ಧನವನ್ನು ತೆಗೆದುಕೊಂಡು ಮನೆಗೆ ಹೊರಟು ಮುಂದೆ ಕಪಟಿಯಾದ ಒಬ್ಬ ದೂತನನ್ನು ಸತಿಯೆಡೆಗೆ ಕಳುಹಿಸಿದನು.

ಸುನಂದಾಂ ಬ್ರೂಹಿ ಗತ್ವಾ ತ್ವಮಿಂದ್ರಸೇನೋ ಹತೋ ರಣೇ ।
ತದಾಕಾರಸ್ತತೋ ಲಕ್ಷ್ಯಃ ಪಾತಿವ್ರತ್ಯೇ ಮಮಾಜ್ಞಯಾ ॥ ೫ ॥
ಯದಿ ಸಾ ನಿಶ್ಚಯಂ ಗಚ್ಛೇನ್ಮರಣಂ ಪ್ರತಿ ಭಾಮಿನಿ ।
ತದಾ ರಕ್ಷ್ಯಾ ಪ್ರಯತ್ನೇನ ವಾಚ್ಯಂ ಹಾಸ್ಯಂ ಮಮೋದ್ಭವಂ ॥ ೬ ॥
ಏವಮುಕ್ತೋ ಗತೋ ದೂತಸ್ತತ್ಕ್ಷಣಾನ್ನೃಪಸತ್ತಮ ।
ತಸ್ಯೈ ನಿವೇದಯಾಮಾಸ ಯದುಕ್ತಂ ತೇನ ಭೂಭುಜಾ ॥ ೭ ॥
ಅಥ ತಸ್ಯ ವಚಃ ಶ್ರುತ್ವಾ ಸುನಂದಾ ಚಾರುಹಾಸಿನೀ ।
ಗತಪ್ರಾಣಾ ನೃಪಶ್ರೇಷ್ಠ ಪತಿಪ್ರಾಣಾ ಮಹಾಸತೀ ॥ ೮ ॥
ಯಸ್ಮಿನ್ಕಾಲೇ ಮೃತಾ ಸಾ ತು ಸುನಂದಾ ಶೀಲಮಂಡನಾ ।
ತಸ್ಮಿನ್ಕಾಲೇ ನೃಪಃ ಸೋಽಪಿ ತತ್ಪಾಪೇನ ಸಮಾಶ್ರಿತಃ ॥ ೯ ॥
ಅಥಾಪಶ್ಯದ್ದ್ವಿತೀಯಾಂ ಸ ಚ್ಛಾಯಾಂ ಗಾತ್ರಸ್ಯ ಚೋಪರಿ ।
ತಥಾ ಗುರುತರಂ ಕಾಯಂ ಸಾಲಸ್ಯಂ ಸಮಪದ್ಯತ ॥ ೧೦ ॥
ತೇಜೋಹೀನಂ ಸುದುರ್ಗಂಧಿ ವಿವರ್ಣಂ ನೃಪಸತ್ತಮ ।
ಅಥ ಪ್ರಾಪ್ತೋ ಗೃಹಂ ರಾಜಾ ಶ್ರುತ್ವಾ ಭಾರ್ಯಾಸಮುದ್ಭವಂ ॥ ೧೧ ॥

---

೫. ಮತ್ತು ಅವಳಿಗೆ ಇಂದ್ರಸೇನನು ಯುದ್ಧದಲ್ಲಿ ಮೃತನಾಗಿರುವನು ಎಂದು ಹೇಳು. ಆಗ ಪಾತಿವ್ರತ್ಯ ವಿಷಯದಲ್ಲಿ ಅವಳ ಆಕೃತಿಯನ್ನು ನೋಡು.

೬. ಅವಳು ನಾನು ಮೃತನಾಗಿರುವುದು ನಿಶ್ಚಯವೆಂದು ತಿಳಿದರೆ ಆಗ ಅವಳನ್ನು ಪ್ರಯತ್ನ ಪೂರ್ವಕವಾಗಿ ಕಾಪಾಡು. ನಾನು ಹಾಸ್ಯಕ್ಕಾಗಿ ಹೇಳಿಕಳುಹಿಸಿದ್ದೇನೆಂದು ಹೇಳು. ಎಂದು ಹೇಳಿಕಳುಹಿಸಿದನು.

೭. ದೊರೆಯೆ ! ರಾಜನು ದೂತನನ್ನು ಕುರಿತು ಹೀಗೆನ್ನಲು ಅವನು ಕೂಡಲೆ ದೊರೆಯು ಹೇಳಿದ್ದನ್ನು ಅವನ ಪತ್ನಿಗೆ ತಿಳಿಸಿದನು.

೮. ಬಳಿಕ ಅತ್ಯಂತ ಪತಿವ್ರತೆಯಾದ ಸುನಂದೆಯು ಅವನ ಮಾತನ್ನು ಕೇಳಿ ಕೂಡಲೆ ಮೃತಳಾದಳು.

೯. ಒಳ್ಳೆಯ ನಡತೆಯೇ ಅಲಂಕಾರವಾಗುಳ್ಳ ಆ ಸುನಂದೆಯು ಮೃತಳಾಗಲು ದೊರೆಯು ಆ ಪಾಪದಿಂದ ಲಿಪ್ತನಾದನು.

೧೦–೧೩. ತರುವಾಯ ಅವನು ತನ್ನ ದೇಹದ ಮೇಲೆ ಎರಡನೆಯ ನೆರಳನ್ನು ಕಂಡನು. ಹಾಗೆಯೇ ಅವನ ಶರೀರವು ಭಾರವೂ, ಆಲಸ್ಯವುಳ್ಳದೂ, ತೇಜಸಿಲ್ಲದಿರುವುದೂ, ದುರ್ಗುಣವುಳ್ಳದೂ, ಕಳೆಗುಂದಿರುವುದೂ ಆಯಿತು. ಅನಂತರ ದೊರೆಯು ಮನೆಗೆ ಹೋಗಿ ಪತ್ನಿಯು ಮೃತಳಾಗಿರುವುದನ್ನು ಕೇಳಿ ದುಃಖದಿಂದ ದೀನವಾಗಿ

ವಿನಾಶಂ ದುಃಖಶೋಕಾರ್ತಃ ಕರುಣಂ ಪರ್ಯದೇವಯತ್ ।
ಸ ಜ್ಞಾತ್ವಾ ಪಾಪಮಾತ್ಮಾನಂ ಸ್ತ್ರೀಹತ್ಯಾಸುವಿದೂಷಿತಂ ॥ ೧೨ ॥
ಬ್ರಾಹ್ಮಣಾನಾಂ ಸಮಾದೇಶಾತ್ತಥಾ ಯಾತ್ರಾಪರೋಽಭವತ್ ।
ಕೃತ್ವೌರ್ಧ್ವದೈಹಿಕಂ ತಸ್ಯಾ ಲಘುಮಾತ್ರಪರಿಗ್ರಹಃ ।
ವಾರಾಣಸ್ಯಾಂ ಗತಃ ಪೂರ್ವಂ ತತ್ರ ದಾನಂ ದದೌ ಬಹು ॥ ೧೩ ॥
ಕಪಾಲಮೋಚನೇ ತೀರ್ಥೇ ಸರ್ವಪಾಪಪ್ರಣಾಶನೇ ।
ತ್ರಿನೇತ್ರೋ ಯತ್ರ ನಿರ್ಮುಕ್ತಃ ಪುರಾ ವೈ ಬ್ರಹ್ಮಹತ್ಯಯಾ ॥ ೧೪ ॥
ತಸ್ಯ ಛಾಯಾ ದ್ವಿತೀಯಾ ಸಾ ನ ನಷ್ಟಾ ತತ್ರ ಭೂಪತೇ ।
ತತಃ ಕನಖಲಂ ಪ್ರಾಪ್ತಃ ಸುಪುಣ್ಯಂ ಶುದ್ಧಿದಂ ನೃಣಾಂ ॥ ೧೫ ॥
ತಥೈವ ಪುಷ್ಕರಾರಣ್ಯಂ ತಸ್ಮಾದಮರಕಂಟಕಂ ।
ಕುರುಕ್ಷೇತ್ರಂ ತತೋ ರಾಜನ್ಪ್ರಾಪ್ತೋಽಸೌ ನೃಪಸತ್ತಮಃ ॥ ೧೬ ॥
ಪ್ರಭಾಸಂ ಸೋಮತೀರ್ಥಂ ಚ ತತಸ್ತು ಕೃಮಿಜಾಂಗಲೇ ।
ಏಕಹಂಸಂ ತತೋ ರಾಜನ್ಪುಣ್ಯಪಾರಿಪ್ಲವಂ ತತಃ ॥ ೧೭ ॥
ರುದ್ರಕೋಟಿಂ ವಿರೂಪಾಕ್ಷಂ ತತಃ ಪಂಚನದಂ ನೃಪ ।
ಏವಮಾದೀನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ಪರಿಭ್ರಮನ್ಮಹೀಪಾಲ ಪರಿಶ್ರಾಂತೋ ನರಾಧಿಪಃ ॥ ೧೮ ॥

---

ಗೋಳಾಡಿದನು. ತಾನು ಸ್ತ್ರೀಹತ್ಯೆಯಿಂದುಂಟಾದ ಪಾಪವುಳ್ಳವನಾಗಿರುವೆನೆಂದು ತಿಳಿದು ಅವನು ಬ್ರಾಹ್ಮಣರ ಅಪ್ಪಣೆಯಿಂದ ತೀರ್ಥಯಾತ್ರಾ ನಿರತನಾದನು. ಆ ಪತ್ನಿಗೆ ಉತ್ತರಕ್ರಿಯೆಯನ್ನು ನೆರವೇರಿಸಿ ಸ್ವಲ್ಪ ಪರಿವಾರದೊಡನೆ ಕಾಶಿಗೆ ಹೋಗಿ ಅಲ್ಲಿ ಬಹಳವಾಗಿ ದಾನಮಾಡಿದನು.

೧೪–೧೫ ಅವನ ಎರಡನೆಯ ನೆರಳು ಹಿಂದೆ ಶಿವನ ಬ್ರಹ್ಮಹತ್ಯಾದೋಷವನ್ನು ನೀಗಿಸಿದ ಸಕಲ ಪಾಪಗಳನ್ನು ನಿವಾರಿಸುವ ಕಪಾಲಮೋಚನ ತೀರ್ಥದಲ್ಲಿಯೂ ಪರಿಹಾರವಾಗದಿರಲು ದೊರೆಯು ಆ ಬಳಿಕ ಪುಣ್ಯಕರವೂ, ಮಾನವರನ್ನು ಪವಿತ್ರಗೊಳಿಸುವುದೂ ಆದ ಕನಖಲ ತೀರ್ಥಕ್ಕೆ ಹೋದನು.

೧೬–೧೮. ದೊರೆಯೆ ! ಹಾಗೆಯೇ ಅವನು ಪುಷ್ಕರಾರಣ್ಯಕ್ಕೂ, ಅಮರಕಂಟಕ, ಕುರುಕ್ಷೇತ್ರ, ಪ್ರಭಾಸ, ಸೋಮತೀರ್ಥ, ಕೃಮಿಜಾಂಗಲ, ಏಕಹಂಸ, ಪುಣ್ಯಪಾರಿಪ್ಲವ ರುದ್ರಕೋಟಿ, ವಿರೂಪಾಕ್ಷ, ಪಂಚನದ ಮೊದಲಾದ ತೀರ್ಥಗಳಿಗೂ, ಪುಣ್ಯಕರಗಳಾದ ದೇವಾಲಯಗಳಿಗೂ ಹೋಗಿ ಆಯಾಸಗೊಂಡನು.

ತತೋ ವರ್ಷಸಹಸ್ರಾಂತೇ ಸಂಪ್ರಾಪ್ತೋಽರ್ಬುದಪರ್ವತೇ ।
ತತ್ರಾಪಶ್ಯನ್ನರಪತಿಸ್ತೀರ್ಥಾನ್ಯಾಯತನಾನಿ ಚ ॥ ೧೯ ॥
ತಪಸ್ವಿಸಂಘಾನ್ವಿವಿಧಾನ್ಬ್ರಾಹ್ಮಣಾನ್ವೇದಪಾರಗಾನ್ ।
ದದೌ ದಾನಾನಿ ಬಹುಶೋ ಬ್ರಾಹ್ಮಣೇಭ್ಯೋ ಯದೃಚ್ಛಯಾ ॥ ೨೦ ॥
ಪ್ರಾಪ್ತೋ ರಕ್ತಾನುಬಂಧಂ ಚ ತೀರ್ಥಂ ತತ್ರೈವ ಪರ್ವತೇ ।
ತತ್ರ ಸ್ನಾತೋ ವಿನಿಷ್ಕ್ರಾಂತೋ ಯಾವತ್ಪಶ್ಯತಿ ಭೂಮಿಪಃ ॥ ೨೧ ॥
ತಾವನ್ನ ದೃಶ್ಯತೇ ಚ್ಛಾಯಾ ದ್ವಿತೀಯಾ ಸ್ತ್ರೀವಧೋದ್ಭವಾ ।
ಲಘುತ್ವಂ ಸರ್ವಗಾತ್ರಾಣಿ ಸಂಪ್ರಾಪ್ತಾನಿ ಮಹೀಪತೇಃ ॥ ೨೨ ॥
ವಿಗಂಧತಾ ಪ್ರಣಷ್ಟಾ ಚ ತೇಜೋವೃದ್ಧಿಃ ಪರಾಭವತ್ ।
ತತೋ ಹೃಷ್ಟಮನಾ ಭೂತ್ವಾ ದತ್ತ್ವಾ ದಾನಾನಿ ಭೂರಿಶಃ ।
ಸ್ತೂಯಮಾನಶ್ಚತುರ್ದಿಕ್ಷು ಬಂಧುಭಿಃ ಪ್ರಸ್ಥಿತೋ ಗೃಹಂ ॥ ೨೩ ॥
ತತೋ ರಕ್ತಾನುಬಂಧಸ್ಯ ಸೀಮಾತಿಕ್ರಮಣಂ ನೃಪ ।
ಯಾವತ್ಕರೋತಿ ರಾಜೇಂದ್ರ ತಾವದಸ್ಯ ಪುನಸ್ತಥಾ ॥ ೨೪ ॥
ಸಾ ಚ್ಛಾಯಾ ದೃಶ್ಯತೇ ದೇಹೇ ದ್ವಿತೀಯಾ ನೃಪಸತ್ತಮ ।
ಸ ಏವ ಗಂಧೋ ಗಾತ್ರೇಷು ತೇಜೋಹಾನಿಶ್ಚ ಸಾ ನೃಪ ॥ ೨೫ ॥

---

೧೯–೨೦. ಬಳಿಕ ಅವನು ಸಾವಿರ ವರ್ಷಗಳ ಕೊನೆಯಲ್ಲಿ ಅರ್ಬುದ ಪರ್ವತವನ್ನು ಹೊಂದಿ ತೀರ್ಥಗಳನ್ನೂ, ದೇವಾಲಯಗಳನ್ನೂ, ಮುನಿಗಳ ಸಮೂಹವನ್ನೂ, ಬಗೆ ಬಗೆಯ ವೇದಪಾರಂಗತರಾದ ಬ್ರಾಹ್ಮಣರನ್ನೂ ನೋಡಿ ಸ್ವೇಚ್ಛೆಯಾಗಿ ಬ್ರಾಹ್ಮಣರಿಗೆ ಅನೇಕ ದಾನಗಳನ್ನಿತ್ತನು.

೨೧–೨೨. ಅದೇ ಪರ್ವತದಲ್ಲಿ ಆ ದೊರೆಯು ರಕ್ತಾನುಬಂಧವೆಂಬ ತೀರ್ಥವನ್ನು ಹೊಂದಿ ಅಲ್ಲಿ ಮಿಂದು ಮುಂದಕ್ಕೆ ಹೋಗಿ ನೋಡಲು ಸ್ತ್ರೀವಧೆಯಿಂದುಂಟಾದ ಎರಡನೆ ನೆರಳನ್ನು ನೋಡಲಿಲ್ಲ. ಅವನ ಅವಯವಗಳೆಲ್ಲ ಹಗುರವಾದುವು.

೨೩. ದುರ್ಗಂಧವು ದೂರವಾಯಿತು. ಅತ್ಯಂತ ತೇಜಸ್ಸುಂಟಾಯಿತು. ಅನಂತರ ಅವನು ಸಂತೋಷಗೊಂಡು ಅನೇಕ ದಾನಗಳನ್ನು ಕೊಟ್ಟು ನಾಲ್ಕು ದಿಕ್ಕುಗಳಲ್ಲಿಯೂ ಸ್ತುತಿಪಾಠಕರಿಂದ ಹೊಗಳಿಸಿಕೊಳ್ಳುತ್ತ ಮನೆಗೆ ಹೊರಟನು.

೨೪–೨೫. ದೊರೆಯೆ ! ಬಳಿಕ ಅವನು ರಕ್ತಾನುಬಂಧ ತೀರ್ಥದ ಎಲ್ಲೆಯನ್ನು ದಾಟಲು ತಿರುಗಿ ಅವನ ದೇಹದಲ್ಲಿ ಎರಡನೆಯ ನೆರಳು ಕಾಣಿಸಿಕೊಂಡಿತು. ಅದೇ ದುರ್ಗಂಧವೂ, ತೇಜೋಹಾನಿಯೂ ಉಂಟಾಯಿತು.

ತತೋ ದುಃಖಾಭಿಸಂತಪ್ತೋ ಗತಸ್ತತ್ರೈವ ತತ್ಕ್ಷಣಾತ್ ।
ರಕ್ತಬಂಧಮನುಪ್ರಾಪ್ತೋ ವಿಪಾಪ್ಮಾ ಸೋಽಭವನ್ನೃಪಃ ॥ ೨೬ ॥
ಸ ಜ್ಞಾತ್ವಾ ತೀರ್ಥಮಾಹಾತ್ಮ್ಯಂ ಪರಂ ಪಾರ್ಥಿವಸತ್ತಮಃ ।
ತತ್ರ ದಾರೂಣಿ ಚಾಹೃತ್ಯ ಚಿತಾಂ ಕೃತ್ವಾ ತತೋ ನೃಪ ।
ದಾನಂ ದತ್ತ್ವಾ ದ್ವಿಜಾಗ್ರೇಭ್ಯಃ ಪ್ರವಿಷ್ಟೋ ಹವ್ಯವಾಹನಂ ॥ ೨೭ ॥
ತತೋ ವಿಮಾನಮಾರುಹ್ಯ ಪರಿತ್ಯಜ್ಯ ಕಲೇವರಂ ।
ದಿವ್ಯಮಾಲ್ಯಾಂಬರಧರಃ ಶಿವಲೋಕಮುಪಾಗಮತ್ ॥ ೨೮ ॥
ಶಿವಲೋಕಮನುಪ್ರಾಪ್ತೇ ತಸ್ಮಿನ್ಪಾರ್ಥಿವಸತ್ತಮೇ ।
ದೇವರ್ಷಯಸ್ತದಾ ವಾಕ್ಯಮಿದಮಾಹುಃ ಸುವಿಸ್ಮಯಾತ್ ॥ ೨೯ ॥
ತೀರ್ಥೇಭ್ಯಸ್ತು ಪರಂ ತೀರ್ಥಮಿದಂ ವೈ ಪಾವನಂ ಪರಂ ।
ಇಂದ್ರಸೇನೋ ಹ್ಯತಃ ಪಾಪಾತ್ತೀರ್ಥಸಂಗಾದ್ವ್ಯಮುಚ್ಯತ ॥ ೩೦ ॥
ತತಃ ಪ್ರಭೃತಿ ತತ್ತೀರ್ಥಂ ಖ್ಯಾತಂ ಚ ಧರಣೀತಲೇ ।
ರಕ್ತಾನಾಂ ಪ್ರಾಣಿನಾಂ ಯಸ್ಮಾದನುಬಂಧಂ ಕರೋತಿ ಯತ್ ॥ ೩೧ ॥
ರಕ್ತಾನುಬಂಧಮಿತ್ಯೇವ ತಸ್ಮಾತ್ತತ್ಕೀರ್ತ್ಯತೇ ಕ್ಷಿತೌ ।
ತತ್ರ ಸಂತರ್ಪ್ಯ ವೈ ದೇವಾನ್ಯಃ ಶ್ರಾದ್ಧಂ ಕುರುತೇ ನೃಪಃ ॥ ೩೨ ॥

---

೨೬. ಬಳಿಕ ಅವನು ದುಃಖಗೊಂಡು ಕೂಡಲೆ ರಕ್ತಾನುಬಂಧ ತೀರ್ಥವನ್ನು ಹೊಂದಿ ಮರಳಿ ಪಾಪರಹಿತನಾದನು.

೨೭. ಆ ನೃಪವರ್ಯನು ಆ ತೀರ್ಥದ ಉತ್ತಮ ಮಾಹಾತ್ಮ್ಯವನ್ನು ತಿಳಿದು ಕಟ್ಟಿಗೆಗಳನ್ನು ತಂದು ಚಿತೆಯನ್ನು ರಚಿಸಿ ಬ್ರಾಹ್ಮಣರಿಗೆ ದಾನವನ್ನಿತ್ತು ಅಗ್ನಿಯನ್ನು ಪ್ರವೇಶಿಸಿದನು.

೨೮. ತರುವಾಯ ಶರೀರವನ್ನು ತ್ಯಜಿಸಿ ವಿಮಾನವನ್ನೇರಿ ದಿವ್ಯ ಮಾಲೆ, ಬಟ್ಟೆಗಳನ್ನು ಧರಿಸಿ ಶಿವಲೋಕವನ್ನು ಸೇರಿದನು.

೨೯. ಆ ದೊರೆಯು ಶಿವಲೋಕವನ್ನು ಸೇರಲು ದೇವರ್ಷಿಗಳು ಅತ್ಯಾಶ್ಚರ್ಯದಿಂದ ಇಂತೆಂದರು.

೩೦. ಈ ತೀರ್ಥವು ತೀರ್ಥಗಳಲ್ಲೆಲ್ಲ ಅತ್ಯಂತ ಪವಿತ್ರವಾದುದು. ಆದ್ದರಿಂದ ಇಂದ್ರಸೇನನು ಈ ತೀರ್ಥದ ಸಂಬಂಧದಿಂದ ಪಾಪಮುಕ್ತನಾದನು.

೩೧–೩೩. ಅದು ಮೊದಲ್ಗೊಂಡು ಆ ತೀರ್ಥವು ಅನುರಕ್ತವಾದ ಪ್ರಾಣಿಗಳನ್ನು ಅನುಸರಿಸುವುದರಿಂದ ರಕ್ತಾನುಬಂಧವೆಂದು ಲೋಕದಲ್ಲಿ ವಿಖ್ಯಾತವಾಗುವುದು. ಅಲ್ಲಿ

ತತ್ರ ಸಂಕ್ರಮಣೇ ಭಾನೋರ್ಯಃ ಸ್ನಾನಂ ಕುರುತೇ ನರಃ ।
ಶ್ರದ್ಧಯಾ ಪರಯಾ ಯುಕ್ತೋ ಮುಚ್ಯತೇ ಬ್ರಹ್ಮಹತ್ಯಯಾ ॥ ೩೩ ॥
ಪಿತೃಕ್ಷೇತ್ರೇ ಗಯಾಯಾಂ ಚ ಶ್ರಾದ್ಧಂ ಯಃ ಕುರುತೇ ನರಃ ।
ಗಯಾಶ್ರಾದ್ಧಸಮಂ ಪ್ರಾಹುಃ ಫಲಂ ತಸ್ಯ ಮಹರ್ಷಯಃ ॥ ೩೪ ॥
ಚಂದ್ರಸೂರ್ಯೋಪರಾಗೇ ಪಾ ಗೋದಾನಂ ನೃಪಸತ್ತಮ ।
ಯಃ ಕರೋತಿ ನರಸ್ತತ್ರ ಸ ಕುಲಾನ್ಸಪ್ತ ತಾರಯೇತ್ ॥ ೩೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ರಕ್ತಾನುಬಂಧಮಾಹಾತ್ಮ್ಯವರ್ಣನಂ ನಾಮ
ಏಕತ್ರಿಂಶೋಽಧ್ಯಾಯಃ

---

ದೇವತೆಗಳಿಗೆ ತರ್ಪಣ ಗೈದು ಶ್ರಾದ್ಧ ಮಾಡಿದವನೂ, ಸೂರ್ಯಸಂಕ್ರಾಂತಿ ಕಾಲದಲ್ಲಿ ಶ್ರದ್ಧೆಯಿಂದ ಮಿಂದವನೂ ಬ್ರಹ್ಮಹತ್ಯೆಯಿಂದ ಮುಕ್ತನಾಗುವನು.

೩೪. ಮತ್ತು ಪಿತೃಕ್ಷೇತ್ರವಾದ ಗಯೆಯಲ್ಲಿ ಮಾಡಿದ ಶ್ರಾದ್ಧದ ಫಲವನ್ನು ಪಡೆಯುವನು. ಎಂದು ಮಹರ್ಷಿಗಳು ಹೇಳುತ್ತಾರೆ.

೩೫. ನೃಪೋತ್ತಮ! ಅಲ್ಲಿ ಚಂದ್ರ ಸೂರ್ಯಗ್ರಹಣಕಾಲದಲ್ಲಿ ಗೋದಾನವನ್ನು ಮಾಡಿದವನು ಏಳು ಕುಲಗಳಲ್ಲಿ ಜನಿಸಿದವರನ್ನು ಉದ್ಧರಿಸುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ರಕ್ತಾನುಬಂಧಮಾಹಾತ್ಮ್ಯವರ್ಣನೆಂಬ
ಮುವ್ವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ।

## ದ್ವಾತ್ರಿಂಶೋಽಧ್ಯಾಯಃ

### ವಿನಾಯಕಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ಮಹಾವಿನಾಯಕಂ ಗಚ್ಛೇತ್ತತಃ ಪಾರ್ಥಿವಸತ್ತಮ ।
ಯಸ್ಮಿನ್ದೃಷ್ಟೇ ನೃಣಾಂ ಸದ್ಯೋ ನಿರ್ವಿಘ್ನತ್ವಂ ಪ್ರಜಾಯತೇ ॥ ೧ ॥

ಯಯಾತಿರುವಾಚ :—

ಕಥಂ ಮಹತ್ತ್ವಮಗಮತ್ಪೂರ್ವಂ ತತ್ರ ವಿನಾಯಕಃ ।
ಕಸ್ಮಿನ್ಕಾಲೇ ದ್ವಿಜಶ್ರೇಷ್ಠ ಸರ್ವಂ ವಿಸ್ತರತೋ ವದ ॥ ೨ ॥

ಪುಲಸ್ತ್ಯ ಉವಾಚ :—

ಪುರೋದ್ವರ್ತನಜಂ ಲೇಪಂ ಗೃಹೀತ್ವಾ ನೃಪ ಪಾರ್ವತೀ ।
ವಿನೋದಾರ್ಥಂ ಚಕಾರಾಥ ಬಾಲಕಂ ಸುಕುಮಾರಕಂ ॥ ೩ ॥
ಲೇಪಾಭಾವಾಚ್ಛಿರೋಹೀನಂ ಶೇಷಾಂಗಾವಯವಂ ನೃಪ ।
ಯಥೋಕ್ತಂ ನಿರ್ಮಯಿತ್ವಾ ತಂ ಸ್ಕಂದಂ ವಾಕ್ಯಮಬ್ರವೀತ್ ॥ ೪ ॥

---

### ಕನ್ನಡ ಅನುವಾದ

### ವಿನಾಯಕಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ದೊರೆಯೆ ! ಬಳಿಕ ಮಹಾ ವಿನಾಯಕ ನೆಡೆಗೆ ಹೋಗಬೇಕು. ಅವನನ್ನು ನೋಡಿದ ಕೂಡಲೆ ವಿಘ್ನಗಳು ಪರಿಹಾರವಾಗುವುದು.

೨. ದ್ವಿಜೋತ್ತಮ ! ಹಿಂದೆ ಅಲ್ಲಿ ವಿನಾಯಕನು ಯಾವಾಗ ಮಹತ್ವವನ್ನು ಹೊಂದಿದನು? ಎಲ್ಲವನ್ನೂ ವಿಸ್ತಾರವಾಗಿ ಹೇಳು.

೩. ಪುಲಸ್ತ್ಯನು ಹೇಳುತ್ತಾನೆ :—ದೊರೆಯೆ ! ಹಿಂದೆ ಪಾರ್ವತಿಯು ವಿನೋದಕ್ಕಾಗಿ ಮೈತೊಳೆಯುವ ಲೇಪನ ವಸ್ತುವನ್ನು ತೆಗೆದುಕೊಂಡು ಕೋಮಲನಾದ ಬಾಲಕನನ್ನು ರಚಿಸಿದಳು.

೪. ಲೇಪನ ವಸ್ತುವು ಸಾಕಾಗದೆ ಇರುವುದರಿಂದ ಅವಳು ತಲೆಯನ್ನು ಬಿಟ್ಟು ಉಳಿದ ಅವಯವಗಳುಳ್ಳ ಬಾಲಕನನ್ನು ನಿರ್ಮಿಸಿ ಸ್ಕಂದನನ್ನು ಕುರಿತು ಇಂತೆಂದಳು.

ಲೇಪಮಾನಯ ಭದ್ರಂ ತೇ ಶಿರೋಽರ್ಥಂ ಸ್ಕಂದ ಸತ್ವರಂ ।
ಯೇನಾಯಂ ಪುತ್ರಕೋ ಮೇ ಸ್ಯಾದ್ಭ್ರಾತಾ ತೇ ಪರದುರ್ಜಯಃ ॥ ೫ ॥
ತತೋ ಗೌರೀಸಮಾದೇಶಾಲ್ಲೇಪಾಲಬ್ಧ್ವಾ ನೃಪೋತ್ತಮ ।
ಮತ್ತಂ ಗಜವರಂ ದೃಷ್ಟ್ವಾ ಶಿರಸ್ತಸ್ಯ ಸಮಾನಯತ್ ॥ ೬ ॥
ತಸ್ಮಿನ್ನಿಯೋಜಯಾಮಾಸ ಗಾತ್ರೇ ಲೇಪಸಮುದ್ಭವೇ ।
ಮಹದ್ಧೀರಂ ಶಿರೋ ಭಾವಿ ಪುತ್ರ ತಸ್ಮಾತ್ತ್ವಯಾಽಽಹೃತಂ ॥ ೭ ॥
ಬ್ರುವಂತ್ಯಾಶ್ಚಾಪಿ ಪಾರ್ವತ್ಯಾ ಮಾ ಮೇತಿ ಚ ಮುಹುರ್ಮುಹುಃ ।
ನ್ಯಸ್ತೇ ಶಿರಸಿ ತದ್ಗಾತ್ರೇ ದೈವಯೋಗಾನ್ನರಾಧಿಪ ॥ ೮ ॥
ವಿಶೇಷಾನ್ನಾಯಕತ್ವಂ ಚ ಗಾತ್ರೇಭ್ಯಃ ಸಮಜಾಯತ ।
ಬಾಲಕಪ್ರತಿಮಂ ಕಾಂತಂ ಸರ್ವಲಕ್ಷಣಲಕ್ಷಿತಂ ॥ ೯ ॥
ತ್ರಿಗಂಭೀರಂ ಚತುರ್ಹಸ್ತಂ ಸಪ್ತರಕ್ತಂ ಮಹೀಪತೇ ।
ಷಡುನ್ನತಂ ಪಂಚದೀರ್ಘಂ ಪಂಚಸೂಕ್ಷ್ಮಂ ಸುಸುಂದರಂ ॥ ೧೦ ॥
ತ್ರಿವಿಸ್ತೀರ್ಣಂ ಮಹಾರಾಜ ದೃಷ್ಟ್ವಾ ಗೌರೀ ಸುವಿಸ್ಮಿತಾ ।
ಸಜೀವಂ ಕಾರಯಾಮಾಸ ಸ್ವಶಕ್ತ್ಯಾ ಶಕ್ತಿರೂಪಿಣೀ ॥ ೧೧ ॥

---

೫. ಸ್ಕಂದ! ಶೀಘ್ರವಾಗಿ ತಲೆಯನ್ನು ನಿರ್ಮಿಸಲೋಸುಗ ಲೇಪನ ವಸ್ತುವನ್ನು ತೆಗೆದುಕೊಂಡು ಬಾ. ಅದರಿಂದ ಶತ್ರುಗಳಿಗೆ ಜಯಿಸಲಾಗದ ನನ್ನ ಪುತ್ರನು ನಿನಗೆ ಸಹೋದರನಾಗುವನು.

೬. ದೊರೆಯೆ! ಬಳಿಕ ಗೌರಿಯ ಅಪ್ಪಣೆಯಂತೆ ಲೇಪನ ವಸ್ತುವು ಸಿಗದಿರಲು ಸ್ಕಂದನು ಮದಿಸಿದ ಆನೆಯನ್ನು ಕಂಡು ಅದರ ತಲೆಯನ್ನು ತಂದನು.

೭–೧೧. ಅದನ್ನು ಲೇಪನ ವಸ್ತುವಿನಿಂದ ಮಾಡಿದ ದೇಹದಲ್ಲಿಟ್ಟನು. ಆಗ ಪಾರ್ವತಿಯು,"ಮಗು! ಈ ತಲೆಯು ದೊಡ್ಡದಾಗಿರುವುದು. ಇದನ್ನು ಏಕೆ ತಂದಿರುವೆ? ಇಡಬೇಡವೆಂದು ಹೇಳುತ್ತಿದ್ದರೂ ಸ್ಕಂದನು ಆ ದೇಹದಲ್ಲಿಡಲು ಅದರಲ್ಲಿ ದೈವೇಚ್ಛೆಯಿಂದ ಶರೀರಕ್ಕಿಂತ ವಿಶೇಷವಾಗಿ ನಾಯಕತ್ವವು ಉಂಟಾಯಿತು ಪಾರ್ವತಿಯು ಮೂರುಕಡೆ ಗಂಭೀರನೂ, ನಾಲ್ಕು ತೋಳುಗಳುಳ್ಳವನೂ, ಏಳುಕಡೆ ಕೆಂಪಗಿರುವವನೂ, ಆರುಕಡೆ ಎತ್ತರನೂ, ಐದುಕಡೆ ಉದ್ದವಾಗಿರುವವನೂ, ಐದು ಕಡೆ ಸೂಕ್ಷ್ಮನೂ, ಅತ್ಯಂತಸುಂದರನೂ, ಮೂರರಲ್ಲಿ ವಿಸ್ತೀರ್ಣನೂ, ಆದ ಸಮಸ್ತ ಲಕ್ಷಣಗಳಿಂದ ಕೂಡಿರುವ ಬಾಲಕನಂತಿರುವ ಅವನನ್ನು ಕಂಡು ಆಶ್ಚರ್ಯಗೊಂಡು ತನ್ನ ಶಕ್ತಿಯಿಂದ ಜೀವದಿಂದ ಸಹಿತನನ್ನಾಗಿ ಮಾಡಿದಳು.

ಸ ಸಜೀವಃ ಕೃತೋ ದೇವ್ಯಾ ಸಮುತ್ತಸ್ಥೌ ಚ ತತ್ಕ್ಷಣಾತ್ ।
ಆದೇಶಂ ಯಾಚಯಾಮಾಸ ವಿನಯಾನತಕಂಧರಃ ॥ ೧೨ ॥
ತಂ ದೃಷ್ಟ್ವಾ ಚಾದ್ಭುತಾಕಾರಂ ಪ್ರೋಕ್ತ್ವಾ ಪುತ್ರಂ ಮುಹುರ್ಮುಹುಃ ।
ಶಂಭೋಃ ಸಕಾಶಮನಯತ್ಪ್ರಹೃಷ್ಟೇನಾಂತರಾತ್ಮನಾ ॥ ೧೩ ॥
ತತೋಽಬ್ರವೀತ್ಸುತಂ ದೇವ ಮನ್ಮೈವ ಗಾತ್ರಲೇಪಜಂ ।
ದೇವಿ ದೇವ ವರಾನಿತ್ಥಂ ಮಹತ್ತ್ವಂ ಯೇನ ಗಚ್ಛತಿ ॥ ೧೪ ॥

ಶ್ರೀ ಭಗವಾನುವಾಚ :—

ಶರೀರಸ್ಥಂ ಶಿರೋ ಮುಖ್ಯಂ ಯಸ್ಮಾತ್ಪರ್ವತನಂದಿನಿ ।
ಮಹತ್ತ್ವಿದಂ ಶಿರಃ ಪ್ರೋಕ್ತಂ ತ್ವಯಾ ಸ್ಕಂದೇನ ಯೋಜಿತಂ ॥ ೧೫ ॥
ವಿಶೇಷಾನ್ನಾಯಕತ್ವಂ ಚ ಗಾತ್ರೇ ಚಾಸ್ಯ ಯತಃ ಸ್ಥಿತಂ ।
ಮಹಾವಿನಾಯಕೋ ಹ್ಯೇಷ ತಸ್ಮಾನ್ನಾಮ್ನಾ ಭವಿಷ್ಯತಿ ॥ ೧೬ ॥
ಗಣಾನಾಂ ಚೈವ ಸರ್ವೇಷಾಮಾಧಿಪತ್ಯಂ ನಗಾತ್ಮಜೇ ।
ಅಸ್ಯ ದತ್ತಂ ಮಯಾ ಯಸ್ಮಾದ್ಭವಿಷ್ಯತಿ ಗಣಾಧಿಪಃ ॥ ೧೭ ॥
ಸರ್ವಕಾರ್ಯೇಷು ಯೇ ಮರ್ತ್ಯಾಃ ಪೂರ್ವಮೇನಂ ಗಣಾಧಿಪಂ ।
ಸ್ಮರಿಷ್ಯಂತಿ ನ ವೈ ತೇಷಾಂ ಕಾರ್ಯಹಾನಿರ್ಭವಿಷ್ಯತಿ ॥ ೧೮ ॥

---

೧೨. ದೇವಿಯು ಬದುಕಿಸಿದ ಕೂಡಲೆ ಅವನು ಮೇಲಕ್ಕೆದ್ದು ವಿನಯದಿಂದ ಕುತ್ತಿಗೆಯನ್ನು ಬಗ್ಗಿಸಿ ಅಪ್ಪಣೆಯನ್ನು ಬೇಡಿದನು.

೧೩–೧೪. ದೇವಿಯು ಆಶ್ಚರ್ಯಕರನಾದ ಅವನನ್ನು ನೋಡಿ ಇವನು ನನ್ನ ಮಗನೆಂದು ಸಂತೋಷಗೊಂಡ ಮನಸ್ಸಿನಿಂದ ಶಂಕರನೆಡೆಗೆ ಕರೆದುಕೊಂಡು ಹೋಗಿ "ನಾಥ! ಇವನು ನನ್ನ ಶರೀರ ಲೇಪನ ವಸ್ತುವಿನಿಂದುಂಟಾದ ಮಗನು. ಇವನು ಮಹತ್ವವನ್ನು ಪಡೆಯುವಂತೆ ವರವನ್ನು ನೀಡು". ಎಂದಳು.

೧೫–೧೬. ಶ್ರೀ ಭಗವಂತನು ಹೇಳುತ್ತಾನೆ :—ಪಾರ್ವತಿಯೆ! ಇವನ ಶರೀರದಲ್ಲಿ ನೀನು ಸ್ಕಂದನಿಂದ ಇಡಿಸಿರುವ ತಲೆಯು ದೊಡ್ಡದಾಗಿ ಮುಖ್ಯವಾಗಿರುವುದರಿಂದ ವಿಶೇಷವಾಗಿ ನಾಯಕರಾಗಿರುವುದು. ಆದರಿಂದ ಇವನು ಮಹಾ ವಿನಾಯಕನೆಂದು ಹೆಸರುಳ್ಳವನಾಗುವನು.

೧೭. ಹಿಮಾಲಯನ ಕುವರಿಯೆ! ನಾನು ಇವನಿಗೆ ಸಕಲ ಗಣಗಳ ಆಧಿಪತ್ಯವನ್ನಿತ್ತದ್ದರಿಂದ ಇವನು ಗಣಾಧಿಪನಾಗುವನು.

೧೮. ಈ ಗಣಾಧಿಪನನ್ನು ಸಕಲ ಕಾರ್ಯಗಳ ಮೊದಲು ಸ್ಮರಿಸಿದ ಮಾನವರ ಕಾರ್ಯವು ಕೆಡುವುದಿಲ್ಲ.

ತತೋಽಸ್ಯ ಪ್ರದದೌ ಸ್ಕಂದಃ ಪ್ರಕ್ರೀಡಾರ್ಥಂ ಕುಠಾರಕಂ ।
ತದೇವ ಚಾಯುಧಂ ತಸ್ಯ ಸುಪ್ರಿಯಂ ಹಿ ಸದಾಽಭವತ್ ॥ ೧೯ ॥
ತತೋ ಗೌರೀ ದದೌ ಭೋಜ್ಯಪಾತ್ರಂ ಮೋದಕಪೂರಿತಂ ।
ಪುತ್ರಸ್ನೇಹಾತ್ಸ ತತ್ಪ್ರಾಪ್ಯ ಲಾಸ್ಯಮೇವಂ ತದಾಽಕರೋತ್ ॥ ೨೦ ॥
ತಸ್ಯ ಭಕ್ಷ್ಯಸ್ಯ ಗಂಧೇನ ನಿಷ್ಕ್ರಾಂತೋ ಮೂಷಕೋ ಬಿಲಾತ್ ।
ಭಕ್ಷಣಾಚ್ಚಾಮರೋ ಜಾತಸ್ತಸ್ಯ ವಾಹ್ಯೋ ವ್ಯಜಾಯತ ॥ ೨೧ ॥

ಪುಲಸ್ತ್ಯ ಉವಾಚ :—

ಮಹಾವಿನಾಯಕೋ ಹ್ಯೇವಂ ತತ್ರ ಜ್ಞಾತೋ ಮಹೀಪತೇ ।
ತಸ್ಮಿನ್ದೃಷ್ಟೇ ಚ ಯತ್ಪುಣ್ಯಂ ತತ್ತ್ವಮೇಕಮನಾಃ ಶೃಣು ॥ ೨೨ ॥
ಬಾಲ್ಯೇ ವಯಸಿ ಯತ್ಪಾಪಂ ವಾರ್ಧಕೇ ಯೌವನೇಽಪಿ ಯತ್ ।
ಕರೋತಿ ಮಾನವೋ ರಾಜಂಸ್ತಸ್ಮಾತ್ಪಾಪಾತ್ಪ್ರಮುಚ್ಯತೇ ॥ ೨೩ ॥
ಮಾಘಮಾಸೇ ಸಿತೇ ಪಕ್ಷೇ ಚತುರ್ಥ್ಯಾಂ ಸಮುಪೋಷಿತಃ ।
ಯಸ್ತಂ ಪಶ್ಯತಿ ವಾಗ್ಮೀ ಸ ಸರ್ವಜ್ಞಶ್ಚ ಪ್ರಜಾಯತೇ ।
ತಸ್ಯಾಗ್ರೇ ಸುಮಹತ್ಕುಂಡಂ ಸ್ವಚ್ಛೋದಕಸುಪೂರಿತಂ ॥ ೨೪ ॥

---

೧೯. ಬಳಿಕ ಸ್ಕಂದನು ಇವನಿಗೆ ಆಟಕ್ಕಾಗಿ ಕೊಡಲಿಯನ್ನು ಕೊಡಲು ಅದೇ ಇವನಿಗೆ ಯಾವಾಗಲೂ ಪ್ರಿಯವಾದ ಆಯುಧವಾಯಿತು.

೨೦. ಅನಂತರ ಪಾರ್ವತಿಯು ಪುತ್ರ ಸ್ನೇಹದಿಂದ ಅವನಿಗೆ ಮೋದಕಗಳಿಂದ ತುಂಬಿದ ಊಟದ ಪಾತ್ರೆಯನ್ನು ಕೊಟ್ಟಳು. ಅವನು ಅದನ್ನು ತೆಗೆದುಕೊಂಡು ಕುಣಿದನು.

೨೧. ಆ ಭಕ್ಷ್ಯದ ವಾಸನೆಯಿಂದ ಇಲಿಯು ಬಿಲದಿಂದ ಹೊರಟು ಆ ಭಕ್ಷ್ಯವನ್ನು ತಿನ್ನುವುದರಿಂದ ಕೂಡಲೆ ಅಮರವಾಗಿ ಅವನಿಗೆ ವಾಹನವಾಯಿತು.

೨೨. ಪುಲಸ್ತ್ಯನು ಹೇಳುತ್ತಾನೆ :—ದೊರೆಯೆ ! ಹೀಗೆ ಮಹಾ ವಿನಾಯಕನು ಅಲ್ಲಿ ಉಂಟಾದನು. ನೀನು ಅವನನ್ನು ನೋಡಿದರೆ ಉಂಟಾಗುವ ಪುಣ್ಯವನ್ನು ಚಿತ್ತೈಕಾಗ್ರ್ಯದಿಂದ ಕೇಳು.

೨೩. ದೊರೆಯೆ ! ಮಾನವನು ಬಾಲ್ಯ, ಯೌವನ, ಮುಪ್ಪುಗಳಲ್ಲಿ ಮಾಡಿದ ಪಾಪವು ಪರಿಹಾರವಾಗುವುದು.

೨೪—೨೫. ಮಾಘಮಾಸದ ಶುಕ್ಲಪಕ್ಷ ಚತುರ್ಥಿಯದಿನ ಉಪವಾಸ ಮಾಡಿ ಆ ಮಹಾವಿನಾಯಕನನ್ನು ದರ್ಶನ ಗೈದವನು ಸರ್ವಜ್ಞನಾಗುವನು. ಅವನ ಮುಂದೆ ನಿರ್ಮಲ ಜಲದಿಂದ ತುಂಬಿದ ಮಹಾ ಕುಂಡವೊಂದಿರುವುದು. ಅಲ್ಲಿ ಮಿಂದು ಭಕ್ತಿ

ತತ್ರ ಸ್ನಾತ್ವಾ ನರೋ ಭಕ್ತ್ಯಾ ಯಃ ಪಶ್ಯತಿ ವಿನಾಯಕಂ ।
ತಸ್ಯಾನ್ವಯೇಽಪಿ ಸರ್ವಜ್ಞಾ ಜಾಯಂತೇ ಮಾನವಾ ನೃಪ ॥ ೨೫ ॥
ಗಣಾನಾಂ ತ್ವೇತಿ ಮಂತ್ರೇಣ ಕೃತ್ವಾ ವೈ ತ್ರಿಃ ಪ್ರದಕ್ಷಿಣಂ ।
ಯಸ್ತಂ ಪಶ್ಯತಿ ರಾಜೇಂದ್ರ ದುರಿತಂ ನ ಸ ಪಶ್ಯತಿ ॥ ೨೬ ॥
ತಸ್ಮಾತ್ಸರ್ವಪ್ರಯತ್ನೇನ ತಂ ಪ್ರಪಶ್ಯೇದ್ವಿನಾಯಕಂ ।
ಯ ಇಚ್ಛೇತ್ಸಕಲಾನ್ಕಾಮಾನಿಹ ಲೋಕೇ ಪರತ್ರ ಚ ॥ ೨೭ ॥
ಗೃಹಸ್ಥೋಽಪಿ ಚ ಯೋ ಭಕ್ತ್ಯಾ ಸ್ಮರೇತ್ಕಾರ್ಯ ಉಪಸ್ಥಿತೇ ।
ಅವಿಘ್ನಂ ತಸ್ಯ ತತ್ಸರ್ವಂ ಸಂಸಿದ್ಧಿಮುಪಗಚ್ಛತಿ ॥ ೨೮ ॥
ಪ್ರಾತರುತ್ಥಾಯ ಯೋ ಮರ್ತ್ಯಃ ಸ್ಮರೇದ್ದೇವಂ ವಿನಾಯಕಂ ।
ತಸ್ಯ ತದ್ದಿನಜಾತಾನಿ ಸಿದ್ಧಿಂ ಕೃತ್ಯಾನಿ ಯಾಂತಿ ಹಿ ॥ ೨೯ ॥
ವಿವಾಹೇ ಕಲಹೇ ಯುದ್ಧೇ ಪ್ರಸ್ಥಾನೇ ಕೃಷಿಕರ್ಮಣಿ ।
ಪ್ರವೇಶೇ ಚ ಸ್ಮರೇದ್ಯಸ್ತು ಭಕ್ತಿಪೂರ್ವಂ ವಿನಾಯಕಂ ;
ತಸ್ಯ ತದ್ವಾಂಛಿತಂ ಸರ್ವಂ ಪ್ರಸಾದಾತ್ತಸ್ಯ ಸಿದ್ಧ್ಯತಿ ॥ ೩೦ ॥
ಮಹಾವಿನಾಯಕೀಂ ಶಾಂತಿಂ ಯಃ ಕರೋತಿ ಸಮಾಹಿತಃ ।
ನ ತಂ ಪ್ರೇತಾ ಗ್ರಹಾ ರೋಗಾಃ ಪೀಡಯಂತಿ ವಿನಾಯಕಾಃ ॥ ೩೧ ॥

---

ಯಿಂದ ಮಹಾ ವಿನಾಯಕನನ್ನು ನೋಡಿದ ಮಾನವನ ವಂಶದಲ್ಲಿ ಸರ್ವಜ್ಞರಾದ ಮಾನವರು ಜನಿಸುವರು.

೨೬. ದೊರೆಯೆ! ಆ ಗಣೇಶನಿಗೆ "ಗಣಾನಾಂತ್ವಾ"ಎಂಬ ಮಂತ್ರದಿಂದ ಮೂರು ಪ್ರದಕ್ಷಿಣೆ ಮಾಡಿ ಅವನನ್ನು ನೋಡಿದ ಮಾನವನು ಪಾಪವನ್ನು ನೋಡುವುದಿಲ್ಲ.

೨೭. ಇಹಪರಲೋಕಗಳಲ್ಲಿ ಸಕಲೇಷ್ಟಾರ್ಥಗಳನ್ನು ಬಯಸುವವನು ಸಕಲ ಪ್ರಯತ್ನದಿಂದ ಆ ವಿನಾಯಕನನ್ನು ನೋಡಬೇಕು.

೨೮. ಗೃಹಸ್ಥನೂ ಕಾರ್ಯವೊದಗಲು ಭಕ್ತಿಯಿಂದ ಆ ಮಹಾ ವಿನಾಯಕನನ್ನು ಸ್ಮರಿಸಿದರೆ ಅವನ ಕಾರ್ಯವೆಲ್ಲ ವಿಘ್ನವಿಲ್ಲದೆ ಕೈಗೂಡುವುದು.

೨೯. ಬೆಳಗ್ಗೆ ಎದ್ದು ವಿನಾಯಕನನ್ನು ಭಕ್ತಿಯಿಂದ ಸ್ಮರಿಸಿದವನ ಆ ದಿನದ ಕಾರ್ಯಗಳೆಲ್ಲ ಸಿದ್ಧಿಯನ್ನು ಹೊಂದುವುವು.

೩೦. ಮದುವೆ, ಕಲಹ, ಯುದ್ಧ, ಪ್ರಯಾಣ, ವ್ಯವಸಾಯ, ಗೃಹಪ್ರವೇಶ ಇವುಗಳಲ್ಲಿ ವಿನಾಯಕನನ್ನು ಭಕ್ತಿಯಿಂದ ಸ್ಮರಿಸಿದವನ ಇಷ್ಟಾರ್ಥಗಳೆಲ್ಲ ಆ ವಿಘ್ನೇಶ್ವರನ ಅನುಗ್ರಹದಿಂದ ಕೈಗೂಡುವುವು.

೩೧. ಮಹಾ ವೈನಾಯಕೀ ಶಾಂತಿಯನ್ನು ಸಾವಧಾನ ಮನಸ್ಸಿನಿಂದ ಮಾಡಿದವನನ್ನು ಪ್ರೇತ, ಗ್ರಹ, ರೋಗ, ಪಿಶಾಚಾದಿಗಳು ಪೀಡಿಸುವುದಿಲ್ಲ.

ಯಯಾತಿರುವಾಚ :—
ಮಹಾವೈನಾಯಿಕೀಂ ಶಾಂತಿಂ ವದ ಮೇ ಮುನಿಸತ್ತಮ ।
ಕೇ ಮಂತ್ರಾಃ ಕಿಂ ವಿಧಾನಂ ಚ ಪರಂ ಕೌತೂಹಲಂ ಹಿ ಮೇ ॥ ೩೨ ॥
ಪುಲಸ್ತ್ಯ ಉವಾಚ :—
ಶುಕ್ಲಪಕ್ಷೇ ಶುಭೇ ವಾರೇ ನಕ್ಷತ್ರೇ ದೋಷವರ್ಜಿತೇ ।
ಶ್ರೇಷ್ಠಚಂದ್ರಬಲೇ ಶಾಂತಿಂ ಗಣೇಶಸ್ಯ ಸಮಾಚರೇತ್ ॥ ೩೩ ॥
ಪೂರ್ವೋತ್ತರೇ ಸಮೇ ದೇಶೇ ಕೃತ್ವಾ ವೇದಿಂ ಚ ಮಂಡಪಂ ।
ಮಧ್ಯೇ ಚಾಷ್ಟದಲಂ ಪದ್ಮಂ ಗೃಹ್ಯಸೂತ್ರಂ ಪ್ರಯೋಜಯೇತ್ ॥ ೩೪ ॥
ಇಂದ್ರಾದಿಲೋಕಪಾಲಾಂಶ್ಚ ದಿಕ್ಷು ಸರ್ವಾಸು ಭೂಪತೇ ।
ಗಣೇಶಪೂರ್ವಿಕಾಶ್ಚಾಪಿ ಮಾತರಶ್ಚ ವಿಶೇಷತಃ ॥ ೩೫ ॥
ಗಂಧಪುಷ್ಪೋಪಹಾರೈಶ್ಚ ಯಥೋಕ್ತೈರ್ಬಲಿವಿಸ್ತರೈಃ ।
ಶ್ವೇತವಸ್ತ್ರಯುಗಚ್ಛನ್ನಂ ಕಲಶಂ ಜಲಪೂರಿತಂ ॥ ೩೬ ॥
ತಸ್ಯೈವ ಪೂರ್ವದಿಗ್ಭಾಗೇ ಸಹಿರಣ್ಯಂ ಫಲಾನ್ವಿತಂ ॥ ೩೭ ॥
ಗಣಾನಾಂ ತ್ವೇತಿ ಮಂತ್ರೇಣ ಸಹಸ್ರಂ ಚಾಷ್ಟಸಂಯುತಂ ।
ಜಪೇತ್ತತ್ರ ತಥಾ ಚಾರೂನ್ಪಂಚಾಂಗಾನ್ನ್ಯಸತ್ತಮ ॥ ೩೮ ॥

---

೩೨. ಯಯಾತಿಯು ಹೇಳುತ್ತಾನೆ.—ಮುನಿವರ್ಯನೆ ! ಮಹಾ ವೈನಾಯಕೀ ಶಾಂತಿಯನ್ನು ನನಗೆ ಹೇಳು. ಅದರ ಮಂತ್ರಗಳಾವುವು ? ಕ್ರಮವಾದುದನ್ನು ತಿಳಿಯಲು ನನಗೆ ಕೂತೂಹಲವಿದೆ.

೩೩. ಪುಲಸ್ತ್ಯನು ಹೇಳುತ್ತಾನೆ :—ಶುಕ್ಲಪಕ್ಷದಲ್ಲಿ ಶುಭಗ್ರಹ ವಾರದಲ್ಲಿ ದೋಷವಿಲ್ಲದ ನಕ್ಷತ್ರದಲ್ಲಿ ಚಂದ್ರಬಲವು ಅಧಿಕವಾಗಿರುವಾಗ ಗಣೇಶ ಶಾಂತಿಯನ್ನಾ ಚರಿಸಬೇಕು.

೩೪. ಪೂರ್ವೋತ್ತರ ಸಮವಾದ ದೇಶದಲ್ಲಿ ಜಗಲಿಯನ್ನೂ, ಮಂಡಪವನ್ನೂ ರಚಿಸಿ ಮಧ್ಯದಲ್ಲಿ ಅಷ್ಟದಳ ಪದ್ಮವನ್ನು ಬರೆದು ಗೃಹ್ಯಸೂತ್ರದ ಪ್ರಯೋಗ ವಿಧಿಯನ್ನ ವಲಂಬಿಸಬೇಕು.

೩೫–೩೮. ದೊರೆಯೆ ! ಸಕಲ ದಿಕ್ಕುಗಳಲ್ಲಿ ಇಂದ್ರಾದಿ ಲೋಕಪಾಲಕರನ್ನೂ, ಗಣೇಶ ಮೊದಲಾದ ಮಾತೃಗಳನ್ನೂ ಪುಷ್ಪ, ಗಂಧಗಳಿಂದಲೂ, ಕಾಣಿಕೆಗಳಿಂದಲೂ, ಬಲಿಗಳಿಂದಲೂ ಮುಚ್ಚಲ್ಪಟ್ಟಿರುವುದೂ, ನೀರನ್ನು ತುಂಬಿರುವುದೂ, ಸುವರ್ಣ, ಫಲ ಗಳಿಂದ ಕೂಡಿರುವುದೂ ಆದ ಕಲಶವನ್ನು ಸ್ಥಾಪಿಸಿ ಸಾವಿರದ ಎಂಟುಸಾರಿ ಗಣಾನಾಂತ್ವಾ ಮಂತ್ರವನ್ನು ಜಪಿಸಿ ಪಂಚಾಂಗನ್ಯಾಸಗಳನ್ನು ಮಾಡಬೇಕು.

ವಿನಾಯಕಂ ಸಮುದ್ದಿಶ್ಯ ಪುರಃ ಕುಂಡೇ ಕರಾತ್ಮಕೇ ।
ಚತುರಸ್ರೇ ಯೋನಿಯುತೇ ಮೇಖಲಾಭಿರ್ವಿಭೂಷಿತೇ || ೩೯ ||
ಮಧುದೂರ್ವಾಕ್ಷತೈರ್ಹೋಮೈರ್ಗ್ರಹಹೋಮಾದನಂತರಂ ।
ಗಣಾನಾಂ ತ್ವೇತಿ ಮಂತ್ರೇಣ ದಶಸಾಹಸ್ರಿಕಸ್ತಥಾ || ೪೦ ||
ಕಾರ್ಯೋ ವೈ ಪಾರ್ಥಿವಶ್ರೇಷ್ಠ ಕಾರ್ಯಶ್ಚೋದಙ್ಮುಖೈರ್ದ್ವಿಜೈಃ ।
ಚತುರ್ಭಿಶ್ಚತುರೈ ರಾಜನ್ಪೀತವಸ್ತ್ರಾನುಲೇಪನೈಃ || ೪೧ ||
ಪೀತಾಂಬರಧರೈಶ್ಚೈವ ಧೃತಹೇಮಾಂಗುಲೀಯಕೈಃ ।
ತತೋ ಹೋಮಾವಸಾನೇ ತು ಯಜಮಾನಂ ನೃಪೋತ್ತಮ || ೪೨ ||
ಮೃಗಚರ್ಮೋಪರಿಸ್ಥಂ ಚ ಮಂತ್ರೈರೇಭಿರ್ವಿಧಾನತಃ ।
ಸ್ನಾಪಯೇತ್ಪ್ರಾಙ್ಮುಖಂ ಶಾಂತಂ ಶುಕ್ಲವಸ್ತ್ರಾವಗುಂಠಿತಂ || ೪೩ ||
ಇಮಂ ಮೇ ಗಂಗೇ ಯಮುನೇ ಪಂಚನದ್ಯಃ ಸುಪುಷ್ಕರೇ ।
ಶ್ರೀಸೂಕ್ತಸಹಿತಂ ವಿಷ್ಣೋಃ ಪಾವಮಾನಂ ವೃಷಾಕಪಿಂ || ೪೪ ||
ಸಮ್ಯಗುಚ್ಚಾರ್ಯ ವಿಘ್ನಾನಾಂ ತತೋ ನಾಶಂ ಪಪ್ರದ್ಯತೇ ।
ಗ್ರಹಾಃ ಸೌಮ್ಯತ್ವಮಾಯಾಂತಿ ಭೂತಾ ನಶ್ಯಂತಿ ತತ್ಕ್ಷಣಾತ್ || ೪೫ ||
ಆಧಯೋ ವ್ಯಾಧಯೋ ರೌದ್ರಾ ದುಷ್ಟರೋಗಾ ಜ್ವರಾದಯಃ ।
ಪ್ರಣಶ್ಯಂತಿ ದ್ರುತಂ ಸರ್ವೇ ತಥೋತ್ಪಾತಾಃ ಸುದಾರುಣಾಃ || ೪೬ ||

---

೩೯–೪೫. ಅನಂತರ ವಿನಾಯಕನ ಮುಂದೆ ಅವನನ್ನು ಉದ್ದೇಶಿಸಿ ಚೌಕವೂ, ಯೋನಿಸಹಿತವೂ, ಮೇಖಲೆಯಿಂದ ಅಲಂಕಾರಗೊಂಡುದೂ ಆದ ಕರರೂಪವಾದ ಕುಂಡದಲ್ಲಿ ಉತ್ತರಾಭಿಮುಖವಾಗಿ ಕುಳಿತಿರುವವರೂ, ಹಳದಿ ಬಣ್ಣದ ವಸ್ತ್ರ, ಅನಲೇಪನವುಳ್ಳವರೂ, ಸುವರ್ಣದ ಉಂಗುರವನ್ನು ಧರಿಸಿರುವವರೂ ಆದ ನಾಲ್ಕುಮಂದಿ ಬ್ರಾಹ್ಮಣರು ನವಗ್ರಹ ಹೋಮವನ್ನು ಮುಗಿಸಿದ ತರುವಾಯ ಜೇನು, ಗರಿಕೆ ಅಕ್ಷತೆಗಳಿಂದ ಹತ್ತು ಸಾವಿರ 'ಗಣಾನಾಂ' ತ್ವೇತಿ ಮಂತ್ರಗಳಿಂದ ಹೋಮ ಮಾಡಬೇಕು. ಅನಂತರ ಹೋಮವು ಮುಗಿಯಲು ಯಜಮಾನನನ್ನು ಕೃಷ್ಣಾಜಿನದ ಮೇಲೆ ಕುಳ್ಳಿರಿಸಿ ಪೂರ್ವಾಭಿಮುಖನೂ, ಶಾಂತನೂ, ಶುಕ್ಲವಸ್ತ್ರವನ್ನು ಹೊದ್ದಿರುವವನೂ ಆದ ಯಜಮಾನನನ್ನು "ಇಮಂ ಮೇ ಗಂಗೇ", "ಪಂಚನದ್ಯ ಸುಪುಷ್ಕರೇ" ಇತ್ಯಾದಿ ಮಂತ್ರಗಳಿಂದಲೂ, ಶ್ರೀಸೂಕ್ತ, ವಿಷ್ಣುಸೂಕ್ತ, ಪವಮಾನಸೂಕ್ತ, ವೃಷಾಕಪಿಸೂಕ್ತಗಳಿಂದಲೂ ಅಭಿಷೇಕ ಮಾಡಬೇಕು. ಆದರಿಂದ ವಿಘ್ನಗಳು ಪರಿಹಾರವಾಗುವುವು. ಗ್ರಹಗಳು ಸೌಮ್ಯರಾಗುವರು. ಭೂತಗಳು ಕೂಡಲೆ ನಾಶವಾಗುವುವು.

೪೬. ಮನೋವ್ಯಾಧಿಗಳೂ, ಸಾಮಾನ್ಯ ರೋಗಗಳೂ, ಭಯಂಕರವಾದ ದುಷ್ಟರೋಗಗಳೂ, ಜ್ವರ ಮೊದಲಾದುವೂ, ಭಯಂಕರವಾದ ಉತ್ಪಾತಗಳೂ ಪರಿಹಾರವಾಗುವುವು.

॥ ಶ್ರೀಃ ॥

## ಚತುಸ್ತ್ರಿಂಶೋಽಧ್ಯಾಯಃ

### ಕೃಷ್ಣತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ಕೃಷ್ಣತೀರ್ಥಂ ತತೋ ಗಚ್ಛೇತ್ಕೃಷ್ಣಸ್ಯ ದಯಿತಂ ಸದಾ ।
ಯತ್ರ ಸನ್ನಿಹಿತೋ ನಿತ್ಯಂ ಸ್ವಯಂ ವಿಷ್ಣುರ್ಮಹೀಪತೇ ॥ ೧ ॥

ಯಯಾತಿರುವಾಚ :—

ಕೃಷ್ಣತೀರ್ಥಂ ಕಥಂ ತತ್ರ ಜಾತಂ ಬ್ರಾಹ್ಮಣಸತ್ತಮ ।
ಕಸ್ಮಿನ್ಕಾಲೇ ಮುನೇ ಬ್ರೂಹಿ ಸರ್ವಂ ವಿಸ್ತರತೋ ಮಮ ॥ ೨ ॥

ಪುಲಸ್ತ್ಯ ಉವಾಚ :—

ತಸ್ಮಿನ್ನೇಕಾರ್ಣವೇ ನಷ್ಟೇ ಘೋರೇ ಸ್ಥಾವರಜಂಗಮೇ ।
ಚಂದ್ರಾರ್ಕಪವನೇ ನಷ್ಟೇ ಜ್ಯೋತಿಷಿ ಪ್ರಲಯಂ ಗತೇ ॥ ೩ ॥
ತತೋ ಯುಗಸಹಸ್ರಾಂತೇ ವಿಬುದ್ಧಃ ಕಮಲಾಸನಃ ।
ಏಕಾಕೀ ಚಿಂತಯಾಮಾಸ ಕಥಂ ಸೃಷ್ಟಿರ್ಭವೇದಿತಿ ॥ ೪ ॥
ಭ್ರಮಂಶ್ಚಾಪಿ ಚತುರ್ವಕ್ತ್ರೋ ಯಾವತ್ಪಶ್ಯತಿ ದೂರತಃ ।
ಚತುರ್ಭುಜಂ ವಿಶಾಲಾಕ್ಷಂ ಪುರುಷಂ ಪುರತಃ ಸ್ಥಿತಂ ॥ ೫ ॥

---

ಕನ್ನಡದ ಅನುವಾದ

### ಕೃಷ್ಣತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಕೃಷ್ಣನಿಗೆ ಪ್ರಿಯವಾದ ಕೃಷ್ಣತೀರ್ಥದೆಡೆಗೆ ಹೋಗಬೇಕು. ಅಲ್ಲಿ ವಿಷ್ಣುವು ಯಾವಾಗಲೂ ಸನ್ನಿಹಿತನಾಗಿರುವನು.

೨. ಯಯಾತಿಯು ಹೇಳುತ್ತಾನೆ :—ಮುನಿಯೆ ! ಆ ಕೃಷ್ಣತೀರ್ಥವು ಯಾವಾಗ ಅಲ್ಲಿ ಹೇಗೆ ಉಂಟಾಯಿತು ? ಎಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.

೩–೪. ಪುಲಸ್ತ್ಯನು ಹೇಳುತ್ತಾನೆ :—ಪ್ರಳಯಕಾಲದಲ್ಲಿ ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲ ಸಮುದ್ರಮಯವಾಗಲು ಚಂದ್ರ, ಸೂರ್ಯ, ಗಾಳಿ, ನಕ್ಷತ್ರಗಳು ನಷ್ಟವಾಗಲು ಸಾವಿರ ಯುಗಗಳ ಕೊನೆಯಲ್ಲಿ ಮಹಾವಿಷ್ಣುವು ಎಚ್ಚರಗೊಂಡು ಸೃಷ್ಟಿಯು ಹೇಗಾದೀತೆಂದು ಒಬ್ಬಂಟಿಗನಾಗಿಯೇ ಆಲೋಚಿಸಿದನು.

೫–೬. ಆಗ ಚತುರ್ಮುಖ ಬ್ರಹ್ಮನು ಸಂಚರಿಸುತ್ತ ದೂರದಲ್ಲಿ ನಾಲ್ಕು ತೋಳುಗಳುಳ್ಳವನೂ, ವಿಶಾಲವಾದ ಕಣ್ಣುಗಳುಳ್ಳವನೂ, ಆದ ಮಹಾವಿಷ್ಣುವನ್ನು ನೋಡಿ

ತಂ ಚೋವಾಚ ಚತುರ್ವಕ್ತ್ರಃ ಕಸ್ತ್ವಂ ಕೇನ ವಿನಿರ್ಮಿತಃ ।
ಕಿಮರ್ಥಮಿಹ ಸಂಪ್ರಾಪ್ತಃ ಸರ್ವಂ ವಿಸ್ತರತೋ ವದ ॥ ೬ ॥
ತಮುವಾಚಾಥ ಗೋವಿಂದಃ ಪ್ರಹಸಞ್ಶ್ಲಕ್ಷ್ಣಯಾ ಗಿರಾ ॥ ೭ ॥
ಅಹಮಾದ್ಯಃ ಪುಮಾನೇಕೋ ಮಯಾ ಸೃಷ್ಟೋ ಭವಾನಪಿ ।
ಸ್ರಷ್ಟುಮಿಚ್ಛಾಮಿ ಭೂಯೋಽಪಿ ಭೂತಗ್ರಾಮಂ ಚತುರ್ವಿಧಂ ॥ ೮ ॥
ಪುಲಸ್ತ್ಯ ಉವಾಚ :—
ತಸ್ಯ ತದ್ವಚನಂ ಶ್ರುತ್ವಾ ಕ್ರುದ್ಧೋ ದೇವಃ ಪಿತಾಮಹಃ ।
ಅಬ್ರವೀತ್ಪರುಷಂ ವಾಕ್ಯಂ ಭರ್ತ್ಸಯಂಶ್ಚ ಪುನಃಪುನಃ ॥ ೯ ॥
ಸೃಷ್ಟಸ್ತ್ವಂ ಹಿ ಮಯಾ ಮೂಢ ಪ್ರಥಮೋಽಹಮಸಂಶಯಂ ।
ತ್ವಾದೃಶಾನಾಂ ಸಹಸ್ರಾಣಿ ಕರಿಷ್ಯೇಽಹಮಸಂಶಯಂ ॥ ೧೦ ॥
ಏವಂ ವಿವದಮಾನೌ ತೌ ಮಿಥೋ ರಾಜನ್ಮಹಾದ್ಯುತೀ ।
ಸ್ಪರ್ಧಯಾ ರೋಷತಾಮ್ರಾಕ್ಷೌ ಯುಯುಧಾತೇ ಪರಸ್ಪರಂ ॥ ೧೧ ॥
ಮುಷ್ಟಿಭಿರ್ಬಾಹುಭಿಶ್ಚೈವ ನಖೈರ್ದಂತೈರ್ವಿಕರ್ಷಣೈಃ ।
ಏವಂ ವರ್ಷಸಹಸ್ರಂ ತು ತಯೋರ್ಯುದ್ಧಮವರ್ತತ ॥ ೧೨ ॥

---

ನೀನಾರು ? ನಿನ್ನನ್ಯಾರು ನಿರ್ಮಿಸಿದರು ? ನೀನು ಏಕೆ ಇಲ್ಲಿಗೆ ಬಂದಿರುವೆ ? ಎಲ್ಲವನ್ನೂ ವಿಸ್ತಾರವಾಗಿ ಹೇಳು ಎಂದನು.

೭–೮. ತರುವಾಯ ಗೋವಿಂದನು ನಗುತ್ತ ಮೃದು ನುಡಿಯಿಂದ, "ನಾನು ಆದಿ ಪುರುಷನು. ನಿನ್ನನ್ನು ನಾನು ಸೃಷ್ಟಿಸಿರುವೆನು. ಮರಳಿ ನಾಲ್ಕು ವಿಧವಾದ ಪ್ರಾಣಿಗಳ ಸಮೂಹವನ್ನು ಸೃಷ್ಟಿಸಲು ಬಯಸುವೆನು" ಎಂದನು.

೯. ಪುಲಸ್ತ್ಯನು ಹೇಳುತ್ತಾನೆ :—ಬ್ರಹ್ಮನು ಅವನ ಮಾತನ್ನು ಕೇಳಿ ಕುಪಿತನಾಗಿ ಬಾರಿ ಬಾರಿಗೂ ಗದರಿಸುತ್ತ ಕಠಿನವಾದ ಮಾತನ್ನಾಡಿದನು.

೧೦. ಮೂಢ ! ಆದಿಪುರುಷನಾದ ನಾನು ನಿನ್ನನ್ನು ಮೊದಲು ನಿಶ್ಚಯವಾಗಿಯೂ ಸೃಷ್ಟಿಸಿರುವೆನು. ನಾನು ನಿನ್ನಂತಹ ಸಾವಿರಾರು ಮಂದಿಗಳನ್ನು ನಿಶ್ಚಯವಾಗಿಯೂ ಸೃಷ್ಟಿಸುವೆನು.

೧೧. ಅತ್ಯಂತ ತೇಜಸ್ವಿಗಳಾದ ಅವರು ಹೀಗೆ ಪರಸ್ಪರ ವಾದಿಸುತ್ತ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವರಾಗಿ ಸ್ಪರ್ಧೆಯಿಂದ ಪರಸ್ಪರ ಜಗಳವಾಡಿದರು.

೧೨. ಮುಷ್ಟಿಗಳಿಂದಲೂ, ತೋಳುಗಳಿಂದಲೂ, ಉಗುರುಗಳಿಂದಲೂ, ಎಳೆದಾಡುವುದರಿಂದಲೂ ಅವರಿಬ್ಬರಿಗೆ ಸಾವಿರ ವರ್ಷಕಾಲ ಯುದ್ಧವು ನಡೆಯಿತು.

ಪೂಜಯೈತನ್ಮಹಾಭಾಗೇ ಶಿವಲಿಂಗಂ ಸುಪಾವನಂ ।
ತ್ವದ್ಭಕ್ತ್ಯಾ ಧರಣೀಪೃಷ್ಠಾನ್ನಿಃಸೃತಂ ಕಾಮದಂ ಮಹತ್ ॥ ೬ ॥
ಯೋ ಯಂ ಕಾಮಮಭಿಧ್ಯಾಯನ್ಪೂಜಯಿಷ್ಯತಿ ಮಾನವಃ ।
ಅನ್ಯೋಽಪಿ ತವಭಿಪ್ರೇತಂ ಪ್ರಾಪ್ಸ್ಯತೇ ನಾತ್ರ ಸಂಶಯಃ ॥ ೭ ॥
ಪಾರ್ಥೇಶ್ವರಾಖ್ಯಮೇತದ್ಧಿ ಲೋಕೇ ಖ್ಯಾತಿಂ ಗಮಿಷ್ಯತಿ ।
ಏವಮುಕ್ತ್ವಾ ತತೋ ವಾಣೀ ವಿರರಾಮ ಮಹೀಪತೇ ॥ ೮ ॥
ತತಃ ಸಾ ವಿಸ್ಮಯಾವಿಷ್ಟಾ ಪೂಜಯಾಮಾಸ ತತ್ತದಾ ।
ತತಃ ಪುತ್ರಶತಂ ಪ್ರಾಪ್ತಂ ದಿವ್ಯಂ ವಂಶಧರಂ ತಥಾ ॥ ೯ ॥
ತತಃ ಪ್ರಭೃತಿ ತಲ್ಲಿಂಗಂ ವಿಖ್ಯಾತಂ ಧರಣೀತಲೇ ।
ತತ್ರಾಸ್ತಿ ನಿರ್ಮಲಂ ತೋಯಂ ಗಿರಿಗಹ್ವರನಿಃಸೃತಂ ॥ ೧೦ ॥
ತತ್ರ ಸ್ನಾತ್ವಾ ನರಃ ಸಮ್ಯಗ್ಯಸ್ತಂ ಪಶ್ಯತಿ ಭಾವತಃ ।
ನ ಸ ಪಶ್ಯತಿ ಸಂಸಾರೇ ದುಃಖಂ ಸಂತಾನಸಂಭವಂ ॥ ೧೧ ॥
ಶುಕ್ಲಪಕ್ಷೇ ಚತುರ್ದಶ್ಯಾಂ ಜಾಗರಂ ತಸ್ಯ ಚಾಗ್ರತಃ ।
ಯಃ ಕರೋತಿ ನಿರಾಹಾರಃ ಸ ಪುತ್ರಂ ಲಭತೇ ಧ್ರುವಂ ॥ ೧೨ ॥

---

೬. ಭಾಗ್ಯಶಾಲಿನಿಯೆ ! ನೀನು ನಿನ್ನ ಭಕ್ತಿಯಿಂದ ಭೂಮಿಯಿಂದ ಆವಿರ್ಭವಿಸಿರುವುದೂ, ಪವಿತ್ರವೂ, ಇಷ್ಟಾರ್ಥವನ್ನು ನೀಡುವುದೂ ಆದ ಈ ಮಹೇಶ್ವರ ಲಿಂಗವನ್ನು ಪೂಜಿಸು.

೭. ಇಲ್ಲಿ ಇತರರೂ ಯಾವ ಯಾವ ಇಷ್ಟಾರ್ಥವನ್ನು ಚಿಂತಿಸುತ್ತ ಈ ಲಿಂಗವನ್ನು ಪೂಜಿಸುವರೊ ಅವರು ಆಯಾ ಇಷ್ಟಾರ್ಥವನ್ನು ಪಡೆಯುವರು.

೮. ಈ ಲಿಂಗವು ಪಾರ್ಥೇಶ್ವರನೆಂದು ಲೋಕದಲ್ಲಿ ವಿಖ್ಯಾತವಾಗುವುದು. ಅಶರೀರವಾಣಿಯು ಹೀಗೆ ಹೇಳಿ ಸುಮ್ಮನಾಯಿತು.

೯. ಬಳಿಕ ಅವಳು ಆಶ್ಚರ್ಯಗೊಂಡು ಆ ಲಿಂಗವನ್ನು ಪೂಜಿಸಿದಳು. ಅದರಿಂದ ಅವಳು ವಂಶೋದ್ಧಾರಕರಾದ ನೂರು ಮಂದಿ ಮಕ್ಕಳನ್ನು ಪಡೆದಳು.

೧೦–೧೧. ಅದು ಮೊದಲ್ಗೊಂಡು ಆ ಲಿಂಗವು ಭೂಮಿಯಲ್ಲಿ ಪ್ರಸಿದ್ಧಿಗೊಂಡಿತು. ಅಲ್ಲಿ ಪರ್ವತದ ಗುಹೆಯಿಂದ ಹೊರಟ ನಿರ್ಮಲ ಜಲವಿರುವುದು. ಅದರಲ್ಲಿ ಮಿಂದು ಭಕ್ತಿಯಿಂದ ಆ ಲಿಂಗವನ್ನು ನೋಡಿದ ಮಾನವನು ಸಂಸಾರದಲ್ಲಿ ಸಂತತಿಯಿಂದುಂಟಾದ ದುಃಖವನ್ನು ಅನುಭವಿಸುವುದಿಲ್ಲ.

೧೨. ಶುಕ್ಲಪಕ್ಷದ ಚತುರ್ದಶೀ ದಿನ ಆ ಲಿಂಗದ ಮುಂದೆ ಉಪವಾಸ ಮಾಡಿ ಜಾಗರಣೆಗೈವವನು ನಿಶ್ಚಯವಾಗಿಯೂ ಪುತ್ರನನ್ನು ಪಡೆಯುವನು.

**ಪಿಂಡನಿರ್ವಾಪಣಂ ತತ್ರ ಯಃ ಕರೋತಿ ಸಮಾಹಿತಃ ।**
**ತಸ್ಯ ಪುತ್ರತ್ವಮಾಯಾಂತಿ ಪಿತರಸ್ತತ್ಪ್ರಸಾದತಃ ॥ ೧೩ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಪಾರ್ಥೇಶ್ವರಮಾಹಾತ್ಮ್ಯವರ್ಣನಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ

---

೧೩. ಅಲ್ಲಿ ಸಾವಧಾನ ಮನಸ್ಸಿನಿಂದ ಪಿಂಡಪ್ರದಾನ ಮಾಡಿದವನಿಗೆ ಆ ಲಿಂಗದ ಅನುಗ್ರಹದಿಂದ ಪಿತೃಗಳು ಪುತ್ರರಾಗಿ ಜನಿಸುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಪಾರ್ಥೇಶ್ವರಮಾಹಾತ್ಮ್ಯವರ್ಣನವೆಂಬ
ಮುವ್ವತ್ತಮೂರನೆಯ ಅಧ್ಯಾಯವು ಮುಗಿದುದು.

ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ವಿನಾಯಕಸ್ಯ ಮಾಹಾತ್ಮ್ಯಂ ಮಹತ್ತ್ವಂ ಶಾಂತಿಕಂ ತಥಾ ॥ ೪೭ ॥
ಯಶ್ಚ ಕೀರ್ತಯತೇ ಸಮ್ಯಕ್ಚತುರ್ಥ್ಯಾಂ ಸುಸಮಾಹಿತಃ ।
ಶೃಣೋತಿ ವಾ ನೃಪಶ್ರೇಷ್ಠ ತಸ್ಯಾऽವಿಘ್ನಂ ಸದಾ ಭವೇತ್ ॥ ೪೮ ॥
ಯಂ ಯಂ ಕಾಮಮಭಿಧ್ಯಾಯನ್ಯಜೇಚ್ಚೇದಂ ಸಮಾಹಿತಃ ।
ತತ್ತದಾಪ್ನೋತಿ ನೂನಂ ಚ ಗಣನಾಥಪ್ರಸಾದತಃ ॥ ೪೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇऽರ್ಬುದಖಂಡೇ
ವಿನಾಯಕಮಾಹಾತ್ಮ್ಯವರ್ಣನಂ ನಾಮ
ದ್ವಾತ್ರಿಂಶೋऽಧ್ಯಾಯಃ

---

೪೭. ನೀನು ಕೇಳಿದ ವಿನಾಯಕನ ಮಾಹಾತ್ಮ್ಯವನ್ನೂ, ಅವನ ಮಹತ್ವವನ್ನೂ, ಶಾಂತಿಕ್ರಮವನ್ನೂ ಹೇಳಿದ್ದೇನೆ.

೪೮. ಈ ವಿನಾಯಕನ ಮಾಹಾತ್ಮ್ಯವನ್ನು ಚೌತಿ ದಿನ ಸಾವಧಾನ ಮನಸ್ಸಿನಿಂದ ಹೇಳುವ ಮತ್ತು ಕೇಳುವ ಮನುಷ್ಯನಿಗೆ ಯಾವಾಗಲೂ ವಿಘ್ನವುಂಟಾಗುವುದಿಲ್ಲ.

೪೯. ಯಾವ ಯಾವ ಇಷ್ಟಾರ್ಥವನ್ನು ಧ್ಯಾನಿಸುತ್ತ ಪೂಜಿಸುವನೊ, ಅದನ್ನು ನಿಶ್ಚಯವಾಗಿಯೂ ಗಣೇಶನ ಅನುಗ್ರಹದಿಂದ ಹೊಂದುತ್ತಾನೆ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ವಿನಾಯಕಮಾಹಾತ್ಮ್ಯವರ್ಣನವೆಂಬ
ಮುವ್ವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತ್ರಯಸ್ತ್ರಿಂಶೋಽಧ್ಯಾಯಃ

## ಪಾರ್ಥೇಶ್ವರಮಾಹಾತ್ಮ್ಯವರ್ಣನಂ

**ಪುಲಸ್ತ್ಯ ಉವಾಚ :—**

ತತಃ ಪಾರ್ಥೇಶ್ವರಂ ಗಚ್ಛೇದ್ದೇವಂ ಪಾತಕನಾಶನಂ ।
ಯಂ ದೃಷ್ಟ್ವಾ ಮಾನವಃ ಸಮ್ಯಙ್ಮುಚ್ಯತೇ ಸರ್ವಪಾತಕೈಃ ॥ ೧ ॥
ಪಾರ್ಥಾನಾಮ್ನ್ಯಭವತ್ಸಾಧ್ವೀ ದೇವಲಸ್ಯ ಪ್ರಿಯಾ ಸತೀ ।
ತಯಾ ಪೂರ್ವಂ ತಪಸ್ತಪ್ತಂ ತತ್ರ ಸ್ಥಾನೇ ಮಹೀಪತೇ ॥ ೨ ॥
ಸಾ ಪೂರ್ವಮಭವದ್ವಂಧ್ಯಾ ಋಷಿಪತ್ನೀ ಯಶಸ್ವಿನೀ ।
ವೈರಾಗ್ಯಂ ಪರಮಂ ಗತ್ವಾ ತತಶ್ಚೈವಾರ್ಬುದಂ ಗತಾ ॥ ೩ ॥
ವಾಯುಭಕ್ಷಾ ನಿರಾಹಾರಾ ಸಮಚಿತ್ತಾಽಽಸನೇ ಸ್ಥಿತಾ ।
ತತೋ ವರ್ಷಸಹಸ್ರಾಂತೇ ಭಕ್ತ್ಯಾ ತಸ್ಯಾ ಮಹೀಪತೇ ॥ ೪ ॥
ಉದ್ಭಿದ್ಯ ಧರಣೀಪೃಷ್ಠಂ ಸಹಸಾ ಲಿಂಗಮುತ್ಥಿತಂ ।
ಏತಸ್ಮಿನ್ನೇವ ಕಾಲೇ ತು ವಾಗುವಾಚಾಶರೀರಿಣೀ ॥ ೫ ॥

---

### ಕನ್ನಡದ ಅನುವಾದ

#### ಪಾರ್ಥೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :— ಬಳಿಕ ಪಾಪವನ್ನು ಪರಿಹರಿಸುವ ಪಾರ್ಥೇಶ್ವರನೆಡೆಗೆ ಹೋಗಬೇಕು. ಅವನನ್ನು ನೋಡಿದ ಮಾನವನ ಸಕಲ ಪಾಪಗಳೂ ಪರಿಹಾರವಾಗುವುವು.

೨. ದೊರೆಯೆ ! ಹಿಂದೆ ಅಲ್ಲಿ ದೇವಲನ ಪತಿವ್ರತೆಯಾದ ಪತ್ನಿ ಪಾರ್ಥಾ ಎಂಬವಳು ತಪಸ್ಸನ್ನಾಚರಿಸಿರುವಳು.

೩. ಬಂಜೆಯೂ, ಯಶಸ್ವಿನಿಯೂ ಆದ ಆ ದೇವಲಮುನಿಪತ್ನಿಯು ವಿರಕ್ತಳಾಗಿ ಅರ್ಬುದ ಪರ್ವತಕ್ಕೆ ಹೋದಳು.

೪-೫. ಅಲ್ಲಿ ಅವಳು ವಾಯುವನ್ನು ಭಕ್ಷಿಸುವವಳೂ, ಆಹಾರವಿಲ್ಲದವಳೂ ಚಿತ್ತೈಕಾಗ್ರ್ಯವುಳ್ಳವಳೂ ಆಗಿ ಆಸನದಲ್ಲಿ ಕುಳಿತು ತಪಸ್ಸನ್ನು ಮಾಡಿದಳು. ಬಳಿಕ ಸಾವಿರ ವರ್ಷಗಳ ತರುವಾಯ ಅವಳ ಭಕ್ತಿಯಿಂದ ಮಹೇಶ್ವರಲಿಂಗವು ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆದ್ದಿತು. ಈ ಸಮಯದಲ್ಲಿ ಅಶರೀರವಾಣಿಯಾಯಿತು.

ತತೋ ವರ್ಷಸಹಸ್ರಾಂತೇ ತಯೋರ್ಮಧ್ಯೇ ನೃಪೋತ್ತಮ ।
ಪ್ರಾದುರ್ಭೂತಂ ಮಹಾಲಿಂಗಂ ದಿವ್ಯಂ ತೇಜೋಮಯಂ ಶುಭಂ ॥ ೧೩ ॥
ಏತಸ್ಮಿನ್ನೇವ ಕಾಲೇ ತು ವಾಗುವಾಚಾಶರೀರಿಣೀ ।
ಯುದ್ಧಾದ್ಬ್ರಹ್ಮನ್ನಿವರ್ತಸ್ವ ತ್ವಂ ಚ ವಿಷ್ಣೋ ಮಮಾಜ್ಞಯಾ ॥ ೧೪ ॥
ಏತನ್ಮಾಹೇಶ್ವರಂ ಲಿಂಗಂ ಯೋಽಸ್ಯ ಚಾಂತೇ ಗಮಿಷ್ಯತಿ ।
ಸ ಜ್ಯೇಷ್ಠಃ ಸ ವಿಭುಃ ಕರ್ತಾ ಯುವಯೋರ್ನಾತ್ರ ಸಂಶಯಃ ॥ ೧೫ ॥
ಅಧೋಭಾಗಂ ವ್ರಜತ್ವೇಕ ಏಕಶ್ಚೋರ್ಧ್ವಂ ಮಮಾಜ್ಞಯಾ ।
ತಚ್ಛ್ರುತ್ವಾ ಸತ್ವರೋ ಬ್ರಹ್ಮಾ ವ್ಯೋಮಮಾರ್ಗಂ ಸಮಾಶ್ರಿತಃ ॥ ೧೬ ॥
ವಿದಾರ್ಯ ವಸುಧಾಂ ಕೃಷ್ಣೋಽಪ್ಯಧಸ್ತಾತ್ತತ್ವರಂ ಗತಃ ।
ಸ ಭಿತ್ವಾ ಸಪ್ತಪಾತಾಳಾನಧೋ ಯಾವತ್ಪ್ರಯಾತಿ ಚ ।
ತಾವತ್ಕಾಲಾಗ್ನಿರುದ್ರಸ್ತು ದೃಷ್ಟಸ್ತೇನ ಮಹಾತ್ಮನಾ ॥ ೧೭ ॥
ಗಂತುಮಿಚ್ಛಂಸ್ತತೋಽಧಸ್ತಾದ್ವ್ಯಾವದ್ವೇಗಂ ಕರೋತಿ ಸಃ ।
ತಾವತ್ತಸ್ಯಾರ್ಚಿಭಿರ್ದಗ್ಧಃ ಕೃಷ್ಣತ್ವಂ ಸಮುಪದ್ಯತ ॥ ೧೮ ॥
ತತೋ ಮೂರ್ಛಾಭಿಸಂತಪ್ತೋ ದಹ್ಯಮಾನೋಽದ್ಭುತಾಗ್ನಿನಾ ।
ನಿವರ್ತ್ಯ ಸಹಸಾ ವಿಷ್ಣುರ್ವೈಲಕ್ಷ್ಯಂ ಪರಮಂ ಗತಃ ॥ ೧೯ ॥

---

೧೩. ತರುವಾಯ ಸಾವಿರ ವರ್ಷಗಳ ಕೊನೆಯಲ್ಲಿ ಅವರೀರ್ವರ ನಡುವೆ ತೇಜಸ್ವಿಯಾದ ಮಹಾ ದಿವ್ಯ ಲಿಂಗವೊಂದು ಆವಿರ್ಭವಿಸಿತು.

೧೪. ಈ ಸಮಯದಲ್ಲಿ ಅಶರೀರವಾಣಿಯು ಹೀಗೆ ನುಡಿಯಿತು. "ಎಲೈ ಬ್ರಹ್ಮವಿಷ್ಣುಗಳೆ ನೀವು ನನ್ನ ಆಜ್ಞೆಯಂತೆ ಯುದ್ಧವನ್ನು ನಿಲ್ಲಿಸಿರಿ.

೧೫. ಈ ಮಾಹೇಶ್ವರ ಲಿಂಗದ ಕೊನೆಯನ್ನು ನಿಮ್ಮಿಬ್ಬರಲ್ಲಿ ಯಾವನು ಹೊಂದುವನೊ ಅವನೇ ಜ್ಯೇಷ್ಠನೂ, ವಿಭುವೂ, ಕರ್ತನೂ ಆಗಿರುವನು.

೧೬. ನನ್ನ ಆಜ್ಞೆಯಂತೆ ಒಬ್ಬನು ಕೆಳಗೂ, ಮತ್ತೊಬ್ಬನು ಮೇಲೂ ಹೋಗಲಿ" ಎನ್ನಲು ಬ್ರಹ್ಮನು ಅದನ್ನು ಕೇಳಿ ಶೀಘ್ರವಾಗಿ ಆಕಾಶ ಮಾರ್ಗವನ್ನಾಶ್ರಯಿಸಿದನು.

೧೭. ಮಹಾತ್ಮನಾದ ಆ ವಿಷ್ಣುವು ಭೂಮಿಯನ್ನು ಸೀಳಿ ಕೆಳಗೆ ಶೀಘ್ರವಾಗಿ ಹೋದನು. ಅವನು ಕೆಳಗಿನ ಏಳು ಲೋಕಗಳನ್ನು ಭೇದಿಸಿ ಹೋಗುತ್ತ ಕಾಲಾಗ್ನಿ ರುದ್ರನನ್ನು ಕಂಡನು.

೧೮. ಅವನು ಅದಕ್ಕಿಂತಲೂ ಕೆಳಗೆ ಹೋಗಲಿಚ್ಛಿಸಿ ವೇಗಗೊಂಡು ಆ ಕಾಲಾಗ್ನಿರುದ್ರನ ಜ್ವಾಲೆಯಿಂದ ಸುಡಲ್ಪಟ್ಟು ಕಪ್ಪಾದನು.

೧೯. ತರುವಾಯ ಆ ಅದ್ಭುತಾಗ್ನಿಯಿಂದ ಸುಡಲ್ಪಟ್ಟು ಮೂರ್ಛೆಗೊಂಡ ಅವನು ಕೂಡಲೆ ಹಿಂದಿರುಗಿ ಆಶ್ಚರ್ಯಗೊಂಡನು.

ತಚ್ಚ ಲಿಂಗಂ ಸಮಾಸಾದ್ಯ ಭಕ್ತ್ಯಾ ಪೂಜಾಕೃತಾ ತತಃ ।
ವೇದೋಕ್ತೈಃ ಪರಮೈಃ ಸೂಕ್ಷ್ಮೈಃ ಸ್ತುತಿಂ ಚಕ್ರೇ ಮಹೀಪತೇ ॥ ೨೦ ॥
ಬ್ರಹ್ಮಾಽಪಿ ವ್ಯೋಮಮಾರ್ಗೇಣ ಗತೋ ಹಂಸವಿಮಾನತಃ ।
ದಿವ್ಯಂ ವರ್ಷಸಹಸ್ರಂ ತು ತಸ್ಯಾಂತಂ ನಾಭ್ಯಪದ್ಯತ ॥ ೨೧ ॥
ತತೋ ವರ್ಷಸಹಸ್ರಾಂತೇ ಕೇತಕೀಂ ಸೋಽಪ್ಯಪಶ್ಯತ ।
ಆಯಾಂತೀಂ ವ್ಯೋಮಮಾರ್ಗೇಣ ತಯಾ ಪೃಷ್ಟಶ್ಚತುರ್ಮುಖಃ ॥ ೨೨ ॥
ಕ್ವ ತ್ವಯಾ ಗಮ್ಯತೇ ಬ್ರಹ್ಮನ್ನಿರಾಲಂಬೇ ಮಹಾಪಥಿ ।
ಶೂನ್ಯೇ ತತ್ತ್ವಂ ಸಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ॥ ೨೩ ॥

ಬ್ರಹ್ಮೋವಾಚ :—

ಮಮ ಸ್ಪರ್ಧಾ ಸಮುತ್ಪನ್ನಾ ವಿಷ್ಣುನಾ ಸಹ ಶೋಭನೇ ।
ಲಿಂಗಸ್ಯಾಸ್ಯ ಹಿ ಪರ್ಯಂತಂ ಯೋ ಲಭಿಷ್ಯತಿ ಚಾವಯೋಃ ॥ ೨೪ ॥
ಸ ಜ್ಯಾಯಾನಿತರೋ ಹೀನೋ ಹ್ಯೇತದುಕ್ತಂ ಪಿನಾಕಿನಾ ।
ಪ್ರಸ್ಥಿತೋಽಹಂ ತತಶ್ಚೋರ್ಧ್ವಮಧೋಮಾರ್ಗಂ ಗತೋ ಹರಿಃ ॥ ೨೫ ॥
ಲಬ್ಧ್ವಾ ಲಿಂಗಸ್ಯ ಪರ್ಯಂತಂ ಯಾಸ್ಯಾಮಿ ಕ್ಷಿತಿಮಂಡಲೇ ।
ತಸ್ಯ ತದ್ವಚನಂ ಶ್ರುತ್ವಾ ತತ್ಪುಷ್ಪಮಭ್ಯಭಾಷತ ॥ ೨೬ ॥

---

೨೦. ದೊರೆಯೆ ! ಅವನು ಅದೇ ಲಿಂಗವನ್ನು ಹೊಂದಿ ಭಕ್ತಿಯಿಂದ ಪೂಜಿಸಿ ವೇದೋಕ್ತವಾದ ಸೂಕ್ಷ್ಮ ಮಂತ್ರಗಳಿಂದ ಸ್ತುತಿಸಿದನು.

೨೧. ಬ್ರಹ್ಮನೂ ಹಂಸವಿಮಾನವನ್ನೇರಿ ಆಕಾಶ ಮಾರ್ಗದಿಂದ ಒಂದು ಸಾವಿರ ವರ್ಷಗಳ ಕಾಲ ಪ್ರಯಾಣ ಮಾಡಿದರೂ ಆ ಲಿಂಗದ ಕೊನೆಯನ್ನು ಹೊಂದಲಿಲ್ಲ.

೨೨. ತರುವಾಯ ಅವನು ಸಾವಿರ ವರ್ಷಗಳ ಕೊನೆಯಲ್ಲಿ ಆಕಾಶ ಮಾರ್ಗದಿಂದ ಬರುತ್ತಿರುವ ಕೇತಕೀಪುಷ್ಪವನ್ನು ನೋಡಿದನು. ಆ ಪುಷ್ಪವು ಬ್ರಹ್ಮನನ್ನು ಪ್ರಶ್ನಿಸಿತು.

೨೩. ಬ್ರಹ್ಮನೆ! ನೀನು ಆಶ್ರಯವಿಲ್ಲದ ಶೂನ್ಯವಾದ ಆಕಾಶದಲ್ಲಿ ಎಲ್ಲಿಗೆ ಹೋಗುತ್ತಿರುವೆ? ನಿಜಸ್ಥಿತಿಯನ್ನು ನನಗೆ ಹೇಳು. ತಿಳಿಯಲು ಅತ್ಯಂತ ಕುತೂಹಲವುಂಟಾಗಿದೆ.

೨೪–೨೬. ಬ್ರಹ್ಮನು ಹೇಳುತ್ತಾನೆ :—ಮಂಗಳಕರಳೆ! ನನಗೆ ವಿಷ್ಣುವಿನೊಡನೆ ಸ್ಪರ್ಧೆಯುಂಟಾಯಿತು. ಆಗ ಮಹೇಶ್ವರನು ನಿಮ್ಮೀರ್ವರಲ್ಲಿ ಈ ಲಿಂಗದ ಕೊನೆಯನ್ನು ಯಾವನು ನೋಡುವನೊ, ಅವನೇ ಜ್ಯೇಷ್ಠನು. ಇತರನು ಕನಿಷ್ಠನು. ಎಂದನು. ಬಳಿಕ ನಾನು ಮೇಲಕ್ಕೂ, ವಿಷ್ಣುವು ಕೆಳಕ್ಕೂ ಹೋದೆವು. ಈಗ ಲಿಂಗದ ಕೊನೆಯನ್ನು ಕಂಡು ಭೂಮಿಗೆ ತೆರಳುವೆನು". ಎನ್ನಲು ಆ ಮಾತನ್ನು ಕೇಳಿ ಕೇತಕಿಯು ಹೀಗೆ ನುಡಿಯಿತು.

ಏಕಾದಶ್ಯಾಂ ಮಹಾರಾಜ ನಿರಾಹಾರೋ ಜಿತೇಂದ್ರಿಯಃ ।
ಯಸ್ತತ್ರ ಜಾಗರಂ ಕೃತ್ವಾ ಲಿಂಗಸ್ಯಾಗ್ರೇ ಸುಭಕ್ತಿತಃ ॥ ೫೪ ॥
ಪ್ರಭಾತೇ ಕುರುತೇ ಶ್ರಾದ್ಧಂ ಯಸ್ತು ಶ್ರದ್ಧಾಸಮನ್ವಿತಃ ।
ಪಿತೄನ್ಸಂತಾರಯೇತ್ಸರ್ವಾನ್ಪೂರ್ವಜೈಃ ಸಹ ಧರ್ಮವಿತ್ ॥ ೫೫ ॥
ತಿಲಾನ್ಕೃಷ್ಣಾನ್ನರಸ್ತತ್ರ ಬ್ರಾಹ್ಮಣೇಭ್ಯೋ ದದಾತಿ ಯಃ ।
ಬ್ರಹ್ಮಹತ್ಯಾದಿಭಿಃ ಪಾಪೈಃ ಸ ಮರ್ತ್ಯೋ ಮುಚ್ಯತೇ ಧ್ರುವಂ ॥ ೫೬ ॥
ದರ್ಶನಾದೇವ ರಾಜೇಂದ್ರ ಕೃಷ್ಣತೀರ್ಥಸ್ಯ ಮಾನವಃ ।
ಮುಚ್ಯತೇ ಸರ್ವಪಾಪೇಭ್ಯೋ ನಾತ್ರ ಕಾರ್ಯಾ ವಿಚಾರಣಾ ॥ ೫೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕೃಷ್ಣತೀರ್ಥಮಾಹಾತ್ಮ್ಯವರ್ಣನಂ ನಾಮ
ಚತುಸ್ತ್ರಿಂಶೋಽಧ್ಯಾಯಃ

---

೫೪–೫೫. ಮಹಾರಾಜ ! ಏಕಾದಶೀ ದಿನ ಧರ್ಮಜ್ಞನಾದ ಮಾನವನು ನಿರಾಹಾರನೂ, ಜಿತೇಂದ್ರಿಯನೂ ಆಗಿ ಭಕ್ತಿಯಿಂದ ಆ ಲಿಂಗದ ಮುಂದೆ ಜಾಗರಣೆಮಾಡಿ ಬೆಳಗ್ಗೆ ಶ್ರದ್ಧೆಯಿಂದ ಶ್ರಾದ್ಧ ಮಾಡಿದವನು ತನ್ನ ಹಿಂದಿನವರೊಡನೆ ಸಕಲ ಪಿತೃಗಳನ್ನೂ ಉದ್ಧರಿಸುವನು.

೫೬. ಅಲ್ಲಿ ಬ್ರಾಹ್ಮಣರಿಗೆ ಕೃಷ್ಣತಿಲವನ್ನು ದಾನಮಾಡಿದ ಮಾನವನು ನಿಶ್ಚಯವಾಗಿಯೂ ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುವನು.

೫೭. ದೊರೆಯೆ ! ಮಾನವನು ಕೃಷ್ಣತೀರ್ಥದ ದರ್ಶನದಿಂದಲೆ ಸಕಲ ಪಾಪಗಳಿಂದ ಮುಕ್ತನಾಗುವನು. ಇದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಕೃಷ್ಣತೀರ್ಥಮಾಹಾತ್ಮ್ಯವರ್ಣನವೆಂಬ
ಮುಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚತ್ರಿಂಶೋಽಧ್ಯಾಯಃ

### ಮಾಮುಹ್ರದೋತ್ಪತ್ತಿವರ್ಣನಂ

ಪುಲಸ್ತ್ಯ ಉವಾಚ :–

ತತೋ ಗಚ್ಛೇನ್ನೃಪಶ್ರೇಷ್ಠ ತೀರ್ಥಂ ಪಾಪಪ್ರಣಾಶನಂ ।
ಮಾಮುಹ್ರದಮಿತಿ ಖ್ಯಾತಂ ತಸ್ಮಿನ್ಪರ್ವತರೋಧಸಿ ॥ ೧ ॥
ತತ್ರ ಸ್ನಾತೋ ನರಃ ಸಮ್ಯಕ್ ಶ್ರದ್ಧಾವಾನ್ಸುಸಮಾಹಿತಃ ।
ಮುಚ್ಯತೇ ಪಾತಕೈರ್ಘೋರೈಃ ಪೂರ್ವಜನ್ಮಕೃತೈರಪಿ ॥ ೨ ॥
ತಸ್ಯ ಪಶ್ಚಿಮದಿಗ್ಭಾಗೇ ಲಿಂಗಮಸ್ತಿ ಮಹೀಪತೇ ।
ಸರ್ವಕಾಮಪ್ರದಂ ನೄಣಾಂ ಸ್ಥಾಪಿತಂ ಮುದ್ಗಲೇನ ತು ॥ ೩ ॥
ಸ್ನಾತ್ವಾ ಮಾಮುಹ್ರದೇ ಪುಣ್ಯೇ ಯಸ್ತಲ್ಲಿಂಗಂ ಚ ಪಶ್ಯತಿ ।
ಶುಕ್ಲಪಕ್ಷೇ ಚತುರ್ದಶ್ಯಾಂ ಫಾಲ್ಗುನೇ ಮಾಸಿ ಮಾನವಃ ।
ಸ ಪ್ರಾಪ್ನೋತಿ ಪರಂ ಶ್ರೇಯಃ ಸರ್ವತೀರ್ಥೇಷು ದುರ್ಲಭಂ ॥ ೪ ॥
ಯಸ್ತತ್ರ ಕುರುತೇ ಶ್ರಾದ್ಧಂ ದಕ್ಷಿಣಾಂ ಮೂರ್ತಿಮಾಶ್ರಿತಃ ।
ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಂ ॥ ೫ ॥

---

ಕನ್ನಡದ ಅನುವಾದ

ಮಾಮುಹ್ರದೋತ್ಪತ್ತಿವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೇಂದ್ರ ! ತರುವಾಯ ಪಾಪವನ್ನು ನಿವಾರಿಸುವ ಆ ಅರ್ಬುದ ಪರ್ವತದ ತಪ್ಪಲಲ್ಲಿರುವ ಮಾಮುಹ್ರದಕ್ಕೆ ಹೋಗಬೇಕು.

೨. ಅಲ್ಲಿ ಶ್ರದ್ಧೆಯಿಂದ ಮಿಂದ ಮಾನವನು ಹಿಂದಿನ ಜನ್ಮದಲ್ಲಿ ಮಾಡಿದ ಘೋರ ಪಾಪಗಳಿಂದ ಮುಕ್ತನಾಗುವನು.

೩. ದೊರೆಯೆ ! ಅದರ ಪಶ್ಚಿಮ ದಿಕ್ಕಿನಲ್ಲಿ ನರರಿಗೆ ಸಕಲೇಷ್ಟಾರ್ಥಗಳನ್ನೂ ನೀಡುವ ಮುದ್ಗಲನು ಪ್ರತಿಷ್ಠೆಮಾಡಿದ ಲಿಂಗವಿದೆ.

೪. ಫಾಲ್ಗುನಶುಕ್ಲ ಚತುರ್ದಶೀ ದಿನ ಪುಣ್ಯಕರವಾದ ಮಾಮುಹ್ರದದಲ್ಲಿ ಮಿಂದು ಆ ಲಿಂಗವನ್ನು ದರ್ಶನ ಮಾಡಿದ ಮನುಷ್ಯನು ಸಕಲ ತೀರ್ಥಗಳಲ್ಲಿ ದುರ್ಲಭವಾದ ಉತ್ತಮ ಶ್ರೇಯಸ್ಸನ್ನು ಪಡೆಯುವನು.

೫. ಆ ಮಹೇಶ್ವರನೆಡೆಯಲ್ಲಿ ಶ್ರಾದ್ಧವನ್ನು ಮಾಡಿದವನ ಪಿತೃಗಳು ಪ್ರಳಯ ಕಾಲದ ವರೆಗೆ ತೃಪ್ತಿಗೊಳ್ಳುವರು.

ಏವಂ ಶಾಪೌ ತಯೋರ್ದತ್ವಾ ದೇವಃ ಪ್ರೋವಾಚ ಕೇಶವಂ ।
ಪ್ರಸನ್ನವದನೋ ಭೂತ್ವಾ ತದಾ ತುಷ್ಟೋ ಮಹೇಶ್ವರಃ ॥ ೪೧ ॥

ಭಗವಾನುವಾಚ :—

ವಾಸುದೇವ ಮಹಾಬಾಹೋ ತುಷ್ಟಸ್ತೇಽಹಂ ಮಹಾಮತೇ ।
ಸತ್ಯಸಂಭಾಷಣಾದೇವ ವರಂ ವರಯ ಸುವ್ರತ ॥ ೪೨ ॥

ಶ್ರೀ ವಾಸುದೇವ ಉವಾಚ :—

ಏಷ ಏವ ವರಃ ಶ್ಲಾಘ್ಯೋ ಯತ್ತ್ವಂ ತುಷ್ಟೋ ಮಹೇಶ್ವರಃ ।
ನ ಚಾಪುಣ್ಯವತಾಂ ದೇವ ತ್ವಂ ತುಷ್ಟಿಮಧಿಗಚ್ಛಸಿ ।
ಅವಶ್ಯಂ ಯದಿ ಮೇ ದೇಯೋ ವರೋ ದೇವೇಶ್ವರ ತ್ವಯಾ ॥ ೪೩ ॥
ಲಿಂಗಮೇತದನಂತಾಖ್ಯಂ ಲಘುತಾಂ ನಯ ಮಾ ಚಿರಂ ।
ಯೇನ ಸೃಷ್ಟಿರ್ಭವೇಲ್ಲೋಕೇ ವ್ಯಾಪ್ತಂ ವಿಶ್ವಮನೇನ ತು ॥ ೪೪ ॥

ಪುಲಸ್ತ್ಯ ಉವಾಚ :—

ತತಃ ಸಂಕ್ಷಿಪ್ಯ ತಲ್ಲಿಂಗಂ ಲಘುಕೃತ್ವಾ ಮಹೇಶ್ವರಃ ।
ಅಬ್ರವೀತ್ಕೇಶವಂ ಭೂಯಃ ಶೃಣು ವಾಕ್ಯಮಿದಂ ಹರೇ ॥ ೪೫ ॥
ಏತನ್ಮೇಧ್ಯತಮೇ ದೇಶೇ ಲಿಂಗಂ ಸ್ಥಾಪಯ ಮೇ ಹರೇ ।
ಪೂಜಯ ತ್ವಂ ವಿಧಾನೇನ ಪರಂ ಶ್ರೇಯಃ ಪ್ರಪತ್ಸ್ಯಸೇ ॥ ೪೬ ॥

---

೪೧. ಮಹೇಶ್ವರನು ಹೀಗೆ ಅವರಿಬ್ಬರಿಗೂ ಶಾಪವನ್ನಿತ್ತು ಪ್ರಸನ್ನನಾಗಿ ವಿಷ್ಣುವನ್ನು ಕುರಿತು ಇಂತೆಂದನು.

೪೨. ಭಗವಂತನು ಹೇಳುತ್ತಾನೆ :—ಆಜಾನುಬಾಹುವಾದ ವಿಷ್ಣುವೆ! ನೀನು ಸತ್ಯವನ್ನಾಡಿರುವುದರಿಂದ ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ಬೇಕಾದ ವರವನ್ನು ಕೇಳು.

೪೩-೪೪. ಶ್ರೀ ವಾಸುದೇವನು ಹೇಳುತ್ತಾನೆ :—ಮಹೇಶ್ವರ! ನೀನು ಸಂತುಷ್ಟನಾಗಿರುವುದೇ ನನಗೆ ಶ್ಲಾಘ್ಯವಾದ ವರವು. ಸ್ವಾಮಿ! ನೀನು ಪಾಪಿಗಳಲ್ಲಿ ಸಂತುಷ್ಟನಾಗುವುದಿಲ್ಲ. ದೇವೇಶ್ವರ! ನನಗೆ ನೀನು ಅವಶ್ಯವಾಗಿ ವರವನ್ನೀಯುವುದಾದರೆ ಈ ಅನಂತಾಖ್ಯ ಲಿಂಗವನ್ನು ಶೀಘ್ರವಾಗಿ ಸಣ್ಣದಾಗಿಮಾಡು. ಅದರಿಂದ ಇದರಿಂದ ವ್ಯಾಪ್ತವಾದ ಲೋಕದಲ್ಲಿ ಸೃಷ್ಟಿಕಾರ್ಯವಾದೀತು.

೪೫. ಪುಲಸ್ತ್ಯನು ಹೇಳುತ್ತಾನೆ :—ಮಹೇಶ್ವರನು ತರುವಾಯ ಆ ಲಿಂಗವನ್ನು ಸಂಕ್ಷೇಪಿಸಿ ಸಣ್ಣದಾಗಿ ಮಾಡಿ ಮರಳಿ ವಿಷ್ಣುವನ್ನು ಕುರಿತು ಈ ಮಾತನ್ನು ಹೇಳಿದನು.

೪೬. ವಿಷ್ಣುವೆ! ಈ ಮಧ್ಯಪ್ರದೇಶದಲ್ಲಿ ನನ್ನ ಲಿಂಗವನ್ನು ಸ್ಥಾಪಿಸಿ ವಿಧಿಯಂತೆ ಪೂಜಿಸು. ಅದರಿಂದ ನೀನು ಶ್ರೇಯಸ್ಸನ್ನು ಪಡೆಯುವೆ.

ಮಮ ತೇಜೋವಿನಿರ್ದಗ್ಧಃ ಕೃಷ್ಣತ್ವಂ ಹಿ ಯತೋ ಗತಃ ।
ಕೃಷ್ಣ ಏವ ತತೋ ನಾಮ ಲೋಕೇ ಖ್ಯಾತಿಂ ಗಮಿಷ್ಯತಿ ॥ ೪೭ ॥
ಕೃಷ್ಣಕೃಷ್ಣೇತಿ ತೇ ನಾಮ ಪ್ರಾತರುತ್ಥಾಯ ಮಾನವಃ ।
ಕೀರ್ತಯಿಷ್ಯತಿ ಯೋ ಭಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೪೮ ॥
ಪುಲಸ್ತ್ಯ ಉವಾಚ :—
ಏವಮುಕ್ತ್ವಾ ತಮೀಶಾನಸ್ತತ್ರೈವಾಂತರಧೀಯತ ।
ವಾಸುದೇವೋಽಪಿ ತಲ್ಲಿಂಗಂ ಗೃಹೀತ್ವಾಽಬುರ್ದಪರ್ವತೇ ।
ನಿರ್ಝರೇ ಸ್ಥಾಪಯಾಮಾಸ ಸುಪುಣ್ಯೇ ವಿಮಲೋದಕೇ ॥ ೪೯ ॥
ಕೃಷ್ಣತೀರ್ಥಂ ತತೋ ಜಾತಂ ನಾಮ್ನಾ ಹಿ ಧರಣೀತಲೇ ।
ಶೃಣು ಪಾರ್ಥಿವಶಾರ್ದೂಲ ತತ್ರ ಸ್ನಾತಸ್ಯ ಯತ್ಫಲಂ ॥ ೫೦ ॥
ಸ್ನಾತ್ವಾ ಕೃಷ್ಣಹ್ರದೇ ಪುಣ್ಯೇ ತಲ್ಲಿಂಗಂ ಪಶ್ಯತೇ ತು ಯಃ ।
ಸರ್ವತೀರ್ಥೋದ್ಭವಂ ಶ್ರೇಯಃ ಸ ಮರ್ತ್ಯೋ ಲಭತೇಽಖಿಲಂ ॥ ೫೧ ॥
ತಥಾ ಚ ಸರ್ವದಾನಾನಾಂ ನಿಷ್ಕಾಮಃ ಪ್ರಾಪ್ನುಯಾತ್ಫಲಂ ।
ಸಕಾಮೋಽಪಿ ಫಲಂ ಚೇಷ್ಟಂ ಯದ್ಯಪಿ ಸ್ಯಾತ್ಸುದುರ್ಲಭಂ ॥ ೫೨ ॥
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ಯ ಇಚ್ಛೇಚ್ಛಾಶ್ವತಂ ಶ್ರೇಯೋ ನಾತ್ರ ಕಾರ್ಯಾ ವಿಚಾರಣಾ ॥ ೫೩ ॥

---

೪೭. ನೀನು ನನ್ನ ತೇಜಸ್ಸಿನಿಂದ ಕೃಷ್ಣನಾದ ಕಾರಣ ನಿನ್ನ ಹೆಸರು ಕೃಷ್ಣನೆಂದೇ ಲೋಕದಲ್ಲಿ ಪ್ರಸಿದ್ಧವಾಗುವುದು.

೪೮. ಬೆಳಗ್ಗೆ ಎದ್ದು ಕೃಷ್ಣ ಕೃಷ್ಣ ಎಂದು ನಿನ್ನ ಹೆಸರನ್ನು ಭಕ್ತಿಯಿಂದ ಹೇಳುವ ಮಾನವನು ಉತ್ತಮ ಗತಿಯನ್ನು ಪಡೆಯುವನು.

೪೯. ಪುಲಸ್ತ್ಯನು ಹೇಳುತ್ತಾನೆ :—ಈಶ್ವರನು ಹೀಗೆ ಹೇಳಿ ಅಲ್ಲಿಯೇ ಅದೃಶ್ಯನಾದನು. ವಿಷ್ಣುವೂ ಆ ಲಿಂಗವನ್ನು ತೆಗೆದುಕೊಂಡು ಅರ್ಬುದ ಪರ್ವತದಲ್ಲಿರುವ ಪುಣ್ಯಕರವೂ, ನಿರ್ಮಲವಾದ ನೀರುಳ್ಳುದೂ ಆದ ಕೊಳದಲ್ಲಿ ಸ್ಥಾಪಿಸಿದನು.

೫೦. ಅದರಿಂದ ಭೂಮಿಯಲ್ಲಿ ಅದು ಕೃಷ್ಣತೀರ್ಥವೆಂದು ವಿಖ್ಯಾತವಾಯಿತು. ದೊರೆಯೇ ! ಅಲ್ಲಿ ಮಿಂದ ಮಾನವನಿಗಾಗುವ ಫಲವನ್ನು ಕೇಳು.

೫೧. ಪುಣ್ಯಕರವಾದ ಕೃಷ್ಣಹ್ರದದಲ್ಲಿ ಮಿಂದು ಆ ಶಿವಲಿಂಗವನ್ನು ನೋಡಿದ ಮಾನವನು ಸಮಸ್ತ ತೀರ್ಥಗಳಿಂದುಂಟಾಗುವ ಫಲವನ್ನು ಪಡೆಯುವನು.

೫೨. ಹಾಗೆಯೇ ನಿಷ್ಕಾಮನಾಗಿ ಮಾಡಿದ ದಾನಗಳ ಫಲವನ್ನು ಹೊಂದುವನು. ಸಕಾಮನಾದರೆ ದುರ್ಲಭವಾದ ಫಲವನ್ನು ಹೊಂದುವನು.

೫೩. ಆದ್ದರಿಂದ ಶಾಶ್ವತ ಶ್ರೇಯಸ್ಸನ್ನು ಬಯಸುವ ಮಾನವನು ಅಲ್ಲಿ ಸ್ನಾನ ಮಾಡಬೇಕು. ಈ ವಿಷಯದಲ್ಲಿ ವಿಚಾರಮಾಡಬೇಕಾಗಿರುವುದಿಲ್ಲ.

ವ್ಯರ್ಥಶ್ರಮೋಽಸಿ ಲೋಕೇಶ ನಾಂತೋ ಲಿಂಗಸ್ಯ ವಿದ್ಯತೇ ।
ಚತುರ್ಯುಗಸಹಸ್ರಾಣಾಂ ಕೋಟಿರೇಕಾ ಪಿತಾಮಹ ॥ ೨೭ ॥
ಲಿಂಗಮೂರ್ಧ್ನಃ ಪತಂತ್ಯಾ ಮೇ ಕಾಲೋ ಜಾತೋ ಮಹಾದ್ಯುತೇ ।
ತಥಾಪಿ ಕ್ಷಿತಿಪೃಷ್ಠಂ ತು ನ ಪ್ರಾಪ್ತಾಸ್ಮಿ ಕಥಂಚನ ॥ ೨೮ ॥
ಯಾವತ್ಕಾಲೇನ ಹಂಸಸ್ತೇ ಯೋಜನಂ ಸಂಪ್ರಗಚ್ಛತಿ ।
ತಾವತ್ಕಾಲೇನ ಗಚ್ಛಾಮಿ ಯೋಜನಾನಾಮಹಂ ಶತಂ ॥ ೨೯ ॥
ತಸ್ಮಾನ್ನಿವರ್ತನಂ ಯುಕ್ತಂ ಮಮ ವಾಕ್ಯೇನ ತೇ ವಿಭೋ ।
ದರ್ಶಯಿತ್ವಾ ಚ ಮಾಂ ವಿಷ್ಣೋರ್ಜ್ಯೇಷ್ಠತ್ವಂ ವ್ರಜ ಸಾಂಪ್ರತಂ ॥ ೩೦ ॥
ತತೋ ಹೃಷ್ಟಮನಾ ಭೂತ್ವಾ ಗೃಹೀತ್ವಾ ತಾಂ ಚತುರ್ಮುಖಃ ।
ಪುನರ್ವರ್ಷಸಹಸ್ರಾಂತೇ ಭೂಮಿಪೃಷ್ಠಮುಪಾಗತಃ ।
ದರ್ಶಯಾಮಾಸ ತಾಂ ವಿಷ್ಣೋರೇಷಾ ಲಿಂಗಸ್ಯ ಮೂರ್ಧತಃ ॥ ೩೧ ॥
ಮಯಾಽಽನೀತಾ ಶುಭಾ ಮಾಲಾ ಲಬ್ಧಶ್ಚಾಂತಂ ಚತುರ್ಭುಜ ।
ತ್ವಯಾ ಲಬ್ಧೋ ನ ಚಾಸತ್ಯಂ ವದ ಮೇ ಪುರುಷೋತ್ತಮ ॥ ೩೨ ॥

ವಿಷ್ಣುರುವಾಚ :—

ಅನಂತಸ್ಯಾಪ್ರಮೇಯಸ್ಯ ದೇವದೇವಸ್ಯ ಶೂಲಿನಃ ।
ನಾಹಂ ಶಕ್ತಃ ಪರಂ ಪಾರಂ ಗಂತುಂ ಬ್ರಹ್ಮನ್ಕಥಂಚನ ॥ ೩೩ ॥

---

೨೭–೨೮. ಬ್ರಹ್ಮನೆ! ನೀನು ನಿಷ್ಫಲವಾಗಿ ಆಯಾಸಗೊಂಡಿರುವೆ. ಈ ಲಿಂಗಕ್ಕೆ ಕಡೆಯೆಂಬುದೇ ಇಲ್ಲ. ಈ ಲಿಂಗದ ತಲೆಯಿಂದ ಬೀಳುತ್ತಿರುವ ನನಗೆ ಒಂದುಕೋಟಿ ಚತುರ್ಯುಗ ಸಹಸ್ರಗಳು ಕಳೆದುವು. ಹಾಗಾದರೂ ಭೂಮಿಯನ್ನು ಹೊಂದಲಿಲ್ಲ.

೨೯. ನಿನ್ನ ವಾಹನವಾದ ಹಂಸವು ಒಂದು ಯೋಜನ ದೂರ ಹೋಗುವಷ್ಟರಲ್ಲಿ ನಾನು ಒಂದು ನೂರು ಯೋಜನಗಳ ದೂರ ಹೋಗುವೆನು.

೩೦. ಆದ್ದರಿಂದ ನೀನು ನನ್ನ ಮಾತಿನಿಂದ ಹಿಂದಿರುಗುವುದು ಉಚಿತವು. ಈಗ ನೀನು ನನ್ನನ್ನು ವಿಷ್ಣುವಿಗೆ ತೋರಿಸಿ ಜ್ಯೇಷ್ಠನಾಗು.

೩೧–೩೨. ಚತುರ್ಮುಖನು ಬಳಿಕ ಸಂತೋಷಗೊಂಡು ಆ ಕೇತಕಿಯನ್ನು ತೆಗೆದುಕೊಂಡು ಒಂದು ಸಾವಿರ ವರ್ಷಗಳ ತರುವಾಯ ಭೂಮಿಗೆ ಬಂದು ಅದನ್ನು ವಿಷ್ಣುವಿಗೆ ತೋರಿಸಿ ನಾನು ಶುಭಮಾಲೆಯನ್ನು ಲಿಂಗದ ತಲೆಯಿಂದ ತಂದಿರುವೆನು. ನಾನು ಲಿಂಗದ ಕೊನೆಯನ್ನು ಕಂಡಿರುವೆನು. ನೀನು ನೋಡಿದೆಯಾ ? ನನ್ನಲ್ಲಿ ಸುಳ್ಳಾಡಬೇಡ ಎಂದನು.

೩೩. ವಿಷ್ಣುವು ಹೇಳುತ್ತಾನೆ:—ಎಲೈ ಬ್ರಹ್ಮನೆ! ಅನಂತನೂ, ಅಮಿತನೂ, ಆದ ಶಿವನ ಅಂತವನ್ನು ನಾನು ನೋಡಲು ಸಮರ್ಥನಲ್ಲ.

ಯದಿ ತ್ವಯಾಽಸ್ಯ ಪರ್ಯಂತೋ ಲಬ್ಧೋ ಬ್ರಹ್ಮನ್ಕಥಂಚನ ।
ತತ್ತೇ ತುಷ್ಟಿಂ ಗತೋ ನೂನಂ ದೇವದೇವೋ ಮಹೇಶ್ವರಃ ॥ ೩೪ ॥
ನಾನ್ಯಥಾ ಚಾಸ್ಯ ಪರ್ಯಂತೋ ದೃಶ್ಯಂತೇ ಕೇನಚಿತ್ಕ್ವಚಿತ್ ।
ತಸ್ಮಾಜ್ಜ್ಯೇಷ್ಠೋ ಭವಾಞ್ಶ್ರೇಷ್ಠಃ ಕನಿಷ್ಠೋಽಹಮಸಂಶಯಂ ॥ ೩೫ ॥
ಪುಲಸ್ತ್ಯ ಉವಾಚ :—
ಏತಸ್ಮಿನ್ನೇವ ಕಾಲೇ ತು ಭಗವಾನ್ವೃಷಭಧ್ವಜಃ ।
ಕೋಪಂ ಚಕ್ರೇ ಮಹಾರಾಜ ಬ್ರಹ್ಮಾಣಂ ಪ್ರತಿ ತತ್ಕ್ಷಣಾತ್ ॥ ೩೬ ॥
ಅಥಾಹ ದರ್ಶನಂ ಗತ್ವಾ ಧಿಗ್ಧಿಗ್ವ್ಯರ್ಥಪ್ರಜಲ್ಪಕ ।
ಮಿಥ್ಯಾ ಪ್ರಜಲ್ಪಮಾನೇನ ಕಿಮಿದಂ ಸಾಹಸಂ ಕೃತಂ ॥ ೩೭ ॥
ಯಸ್ಮಾತ್ತ್ವಯಾ ಮೃಷಾ ಪ್ರೋಕ್ತಂ ಮಮ ಪರ್ಯಂತದರ್ಶನಂ ।
ತಸ್ಮಾತ್ತ್ವಂ ಸರ್ವವರ್ಣಾನಾಂ ಪೂಜಾರ್ಹೋ ನ ಭವಿಷ್ಯಸಿ ॥ ೩೮ ॥
ಯೇ ಚ ತ್ವಾಂ ಪೂಜಯಿಷ್ಯಂತಿ ಮಾನವಾ ಮೋಹಸಂಯುತಾಃ ।
ತೇ ಕೃಚ್ಛ್ರಂ ಪರಮಂ ಪ್ರಾಪ್ಯ ನಾಶಂ ಯಾಸ್ಯಂತಿ ಕೃತ್ಸ್ನಶಃ ॥ ೩೯ ॥
ಕೇತಕ್ಯಾ ಚ ತಥಾ ಪ್ರೋಕ್ತಂ ಯಸ್ಮಾತ್ತಸ್ಮಾತ್ತ್ವದುಷ್ಟಯಾ ।
ಅಸ್ಯಾ ಹಿ ಸ್ಪರ್ಶನಾಲ್ಲೋಕಃ ಶ್ವಪಾಕತ್ವಂ ಪ್ರಯಾಸ್ಯತಿ . ॥ ೪೦ ॥

---

೩೪. ಬ್ರಹ್ಮನೆ! ನೀನು ಈ ಲಿಂಗದ ಅಂತವನ್ನು ನೋಡಿದ್ದರೆ ಮಹೇಶ್ವರನು ನಿನ್ನಲ್ಲಿ ತುಷ್ಟನಾಗಿರುವನು.

೩೫. ಹಾಗಿಲ್ಲದಿದ್ದರೆ ಇವನ ಪಾರವನ್ನು ಯಾವನು ನೋಡುವನು? ಆದ್ದರಿಂದ ನೀನೇ ಜ್ಯೇಷ್ಠನು. ನಾನು ನಿಶ್ಚಯವಾಗಿಯೂ ಕನಿಷ್ಠನು.

೩೬. ಪುಲಸ್ತ್ಯನು ಹೇಳುತ್ತಾನೆ:—ಮಹಾರಾಜ! ಈ ಸಮಯದಲ್ಲಿ ಪೂಜ್ಯನಾದ ಮಹೇಶ್ವರನು ಬ್ರಹ್ಮನನ್ನು ಕುರಿತು ಕೂಡಲೆ ಕುಪಿತನಾದನು.

೩೭. ಅನಂತರ ಆ ಮಹೇಶ್ವರನು ಪ್ರತ್ಯಕ್ಷನಾಗಿ," ವ್ಯರ್ಥವಾಗಿ ಬಗಳುತ್ತಿರುವ ಬ್ರಹ್ಮನೆ! ನಿನಗೆ ಧಿಕ್ಕಾರವಿರಲಿ. ಸುಳ್ಳನ್ನಾಡುತ್ತಿರುವ ನೀನು ಎಂತಹ ಸಾಹಸ ಕಾರ್ಯವನ್ನು ಮಾಡಿರುವೆ.

೩೮. ನೀನು ನನ್ನ ಪಾರವನ್ನು ನೋಡಿರುವೆನೆಂದು ಸುಳ್ಳು ಹೇಳಿರುವುದರಿಂದ ಸಕಲ ಜಾತಿಯವರಿಗೂ ಪೂಜಾರ್ಹನಾಗುವುದಿಲ್ಲ.

೩೯. ಭ್ರಾಂತಿಯಿಂದ ನಿನ್ನನ್ನು ಪೂಜಿಸಿದ ಮಾನವರು ಅತ್ಯಂತ ಕಷ್ಟಕ್ಕೀಡಾಗಿ ಸಂಪೂರ್ಣವಾಗಿ ನಾಶಗೊಳ್ಳುವರು.

೪೦. ದುಷ್ಟವಾದ ಈ ಕೇತಕಿಯೂ ಹಾಗೆಯೆ ಸುಳ್ಳಾಡಿದ್ದರಿಂದ ಆದರ ಸ್ಪರ್ಶದಿಂದ ಜನರು ಚಂಡಾಲರಾಗುವರು.

ತತ್ರ ದಾನಂ ಪ್ರಶಂಸಂತಿ ನೀವಾರಾಣಾಂ ಮಹರ್ಷಯಃ ।
ಶಾಕಮೂಲಾದಿಭಿಃ ಶ್ರಾದ್ಧಂ ಪಿತೄಣಾಂ ತುಷ್ಟಿದಂ ನೃಪ ॥ ೬ ॥

ಯಯಾತಿರುವಾಚ :—

ಮಾಮುಹ್ರದಮಿತಿ ವಿಭೋ ಕಥಂ ನಾಮಾಽಭವತ್ಪುರಾ ।
ಮುದ್ಗಲಸ್ಯಾಶ್ರಮಂ ಬ್ರೂಹಿ ಮಮ ಸರ್ವಂ ವಿಧಾನತಃ ॥ ೭ ॥

ಪುಲಸ್ತ್ಯ ಉವಾಚ :—

ತತ್ರಸ್ಥಸ್ಯ ಪುರಾ ರಾಜನ್ಮುದ್ಗಲಸ್ಯ ಮಹಾತ್ಮನಃ ।
ವಿಮಾನವರಮಾದಾಯ ದೇವದೂತಃ ಸಮಾಗತಃ ॥ ೮ ॥
ಸೋಽಬ್ರವೀದ್ದೇವರಾಜ್ಞಾಹಂ ಪ್ರೇಷಿತೋ ಮುನಿಸತ್ತಮ ।
ತವಾರ್ಥಾಯಾಽಽರುಹ್ಯೈನಂ ತ್ವಂ ವಿಮಾನಂ ಗಮ್ಯತಾಂ ದಿವಿ ॥ ೯ ॥

ಮುದ್ಗಲ ಉವಾಚ :—

ಸ್ವರ್ಗಸ್ಯ ಯೇ ಗುಣಾ ದೂತ ಯೇ ಚ ದೋಷಾಃ ಪ್ರಕೀರ್ತಿತಾಃ ।
ತಾನ್ಮೇ ವದ ಕರಿಷ್ಯೇಽಹಂ ಶ್ರುತ್ವಾ ವೈ ಯತ್ಕ್ಷಮಂ ಭವೇತ್ ॥ ೧೦ ॥
ಬ್ರೂಹಿ ತಾನ್ಸಕಲಾನ್ದೂತ ತ್ವಾಗಮಿಷ್ಯಾಮಹಂ ತತಃ ॥ ೧೧ ॥

---

೬. ದೊರೆಯೆ! ಮಹರ್ಷಿಗಳು ಅಲ್ಲಿ ನವಣೆಯ ದಾನವು ಉತ್ತಮವಾದುದೆಂದು ಹೊಗಳುತ್ತಾರೆ. ಪಿತೃಗಳಿಗೆ ತರಕಾರಿ ಗೆಣಸು ಮೊದಲಾದುವುಗಳಿಂದ ಮಾಡಿದ ಶ್ರಾದ್ಧವು ಸಂತೋಷವನ್ನುಂಟುಮಾಡುವುದು.

೭. ಯಯಾತಿಯು ಹೇಳುತ್ತಾನೆ :—ಸ್ವಾಮಿ! ಹಿಂದೆ ಈ ಹ್ರದವು ಮಾಮುಹ್ರದವೆಂದು ಹೇಗೆ ಪ್ರಸಿದ್ಧವಾಯಿತು ? ಮುದ್ಗಲನ ಆಶ್ರಮವು ಹೇಗಾಯಿತು ? ಎಲ್ಲವನ್ನೂ ಕ್ರಮವಾಗಿ ಹೇಳು.

೮. ಪುಲಸ್ತ್ಯನು ಹೇಳುತ್ತಾನೆ :—ಹಿಂದೆ ಅಲ್ಲಿರುವ ಮಹಾತ್ಮನಾದ ಮುದ್ಗಲನಿಗಾಗಿ ವಿಮಾನವನ್ನು ತೆಗೆದುಕೊಂಡು ದೇವದೂತನು ಬಂದನು.

೯. ಅವನು ನಿನಗಾಗಿ ದೇವರಾಜನು ವಿಮಾನವನ್ನು ಕಳುಹಿಸಿರುವನು. ಇದನ್ನು ಏರಿ ಸ್ವರ್ಗಕ್ಕೆ ಪ್ರಯಾಣ ಮಾಡು ಎಂದನು.

೧೦. ಮುದ್ಗಲನು ಹೇಳುತ್ತಾನೆ :—ದೂತನೆ! ಸ್ವರ್ಗದಲ್ಲಿರುವ ಗುಣದೋಷಗಳನ್ನು ನನಗೆ ಹೇಳು. ನಾನು ಅದನ್ನು ಕೇಳಿ ಉಚಿತವಾದುದನ್ನು ಮಾಡುವೆನು.

೧೧. ದೂತ ! ಅವೆಲ್ಲವನ್ನೂ ಹೇಳು ಆಮೇಲೆ ನಾನು ಬರುತ್ತೇನೆ.

ದೇವದೂತ ಉವಾಚ :—
ಅಲಮೇತೇನ ದರ್ಪೇಣ ಕ್ರಿಯತಾಂ ಶಕ್ರಜಲ್ಪಿತಂ ।
ಪುಣ್ಯೈಃ ಸ್ವಕೈರ್ದ್ವಿಜಶ್ರೇಷ್ಠ ಸಮಾಗಚ್ಛೇರಿದಂ ತತಃ ॥ ೧೨ ॥
ಮುದ್ಗಲ ಉವಾಚ :—
ಅಶ್ರುತೈಸ್ತೈರ್ನ ಗಚ್ಛೇಽಹಮೇತನ್ಮೇ ಹೃದಿ ನಿಶ್ಚಿತಂ ।
ಕರಿಷ್ಯೇಽಹಂ ತಪೋ ಭೂರಿ ಪೂಜಯಿಷ್ಯೇ ಮಹೇಶ್ವರಂ ॥ ೧೩ ॥
ದೂತ ಉವಾಚ :—
ನ ಶಕ್ತಃ ಸರ್ವಗುಣಾನ್ವಕ್ತುಮಪಿ ವರ್ಷಶತೈರಪಿ ।
ಸಂಕ್ಷೇಪಾತ್ಕಥಯಿಷ್ಯಾಮಿ ಯದಿ ತೇ ನಿಶ್ಚಯಃ ಪರಃ ॥ ೧೪ ॥
ನಂದನಾದೀನಿ ರಮ್ಯಾಣಿ ತತ್ರ ದೇವವನಾನಿ ಚ ।
ಅನನ್ಯಸದೃಶಾ ಭೋಗಾಃ ಸದಾ ತೃಪ್ತಿರ್ದ್ವಿಜೋತ್ತಮ ॥ ೧೫ ॥
ಬುಭುಕ್ಷಾ ನೈವ ತೃಷ್ಣಾ ಚ ನಿದ್ರಾಲಸ್ಯೇ ನ ಚ ಪ್ರಭೋ ।
ರಂಭಾದ್ಯಪ್ಸರಸೋ ಮುಖ್ಯಾ ಗಂಧರ್ವಾಸ್ತುಂಬರಾದಯಃ ॥ ೧೬ ॥
ರಮಯಂತಿ ನರಂ ತತ್ರ ಜನಃ ಸ್ವರ್ಗೇ ತಪೋಧನ ।
ಯಾವತ್ಪುಣ್ಯಕ್ಷಯಸ್ತಾವತ್ಪಶ್ಚಾತ್ಪಾತಮವಾಪ್ನುಯಾತ್ ॥ ೧೭ ॥

---

೧೨. ದೇವದೂತನು ಹೇಳುತ್ತಾನೆ :—ಈ ಅಹಂಕಾರವು ಸಾಕು. ಇಂದ್ರನ ಮಾತನ್ನು ನಡೆಯಿಸು. ದ್ವಿಜವರ್ಯನೆ! ನೀನು ನಿನ್ನ ಪುಣ್ಯಗಳಿಂದ ದೇವಲೋಕವನ್ನು ಸೇರುವೆ.

೧೩. ಮುದ್ಗಲನು ಹೇಳುತ್ತಾನೆ :—ಆ ಸ್ವರ್ಗದ ಗುಣದೋಷಗಳನ್ನು ನಾನು ಕೇಳದೆ ಅಲ್ಲಿಗೆ ಹೋಗಲಾರೆ. ಇದನ್ನು ನಾನು ನಿಶ್ಚಯಿಸಿರುವೆನು. ನಾನು ಬಹು ತಪಸ್ಸನ್ನಾಚರಿಸುವೆನು. ಮಹೇಶ್ವರನನ್ನು ಪೂಜಿಸುವೆನು.

೧೪. ದೂತನು ಹೇಳುತ್ತಾನೆ :—ದೇವಲೋಕದ ಗುಣಗಳನ್ನು ನೂರುವರ್ಷಗಳು ಹೇಳಿದರೂ ಸಾಧ್ಯವಿಲ್ಲ. ನೀನು ಹೀಗೆ ದೃಢವಾಗಿ ನಿಶ್ಚಯಿಸುವುದಾದರೆ ಅವುಗಳನ್ನು ಸಂಕ್ಷೇಪವಾಗಿ ಹೇಳುವೆನು.

೧೫. ದ್ವಿಜವರ್ಯನೆ! ಅಲ್ಲಿ ನಂದನ ಮೊದಲಾದ ರಮ್ಯೋದ್ಯಾನಗಳೂ, ಅಸಾಧಾರಣವಾದ ಭೋಗಗಳೂ ಯಾವಾಗಲೂ ತೃಪ್ತಿಯೂ ಇರುವುವು.

೧೬. ಅಲ್ಲಿ ಹಸಿವು, ಬಾಯಾರಿಕೆ, ನಿದ್ರೆ, ಆಲಸ್ಯ ಇವುಗಳಿಲ್ಲ. ಮುಖ್ಯರಾದ ರಂಭೆ ಮೊದಲಾದ ಅಪ್ಸರಸ್ತ್ರೀಯರೂ,ತುಂಬರಾದಿ ಗಂಧರ್ವರೂ ಮನುಷ್ಯನನ್ನು ಗೀತ ನೃತ್ಯಗಳಿಂದ ಬಹುವಾಗಿ ವಿನೋದಗೊಳಿಸುತ್ತಾರೆ.

೧೭. ಮುನಿಯೆ! ಅಲ್ಲಿ ಜನರು ಪುಣ್ಯವು ಮುಗಿಯುವವರೆಗೆ ಹೀಗೆ ವಾಸಿಸುವರು. ಅನಂತರ ಮರಳಿ ಭೂಮಿಗೆ ಬೀಳುವರು.

ಏಕ ಏವ ಮುನೇ ದೋಷಃ ಸ್ವರ್ಲೋಕೇ ಪ್ರತಿಭಾತಿ ಮೇ ।
ಸ ಏವ ಪತನಾಖ್ಯಸ್ತು ಸ್ವರ್ಗಿಣಾಂ ಚ ಭಯಾವಹಃ ॥ ೧೮ ॥
ನ ಪುಣ್ಯಂ ಲಭತೇ ತತ್ರ ಕರ್ತುಂ ವಿಪ್ರ ಕಥಂಚನ ।
ಕರ್ಮಭೂಮಿರಿಯಂ ಬ್ರಹ್ಮನ್ಭೋಗಭೂಮಿಸ್ತು ಸಾ ಸ್ಮೃತಾ ॥ ೧೯ ॥
ಯದತ್ರ ಕ್ರಿಯತೇ ಕರ್ಮ ಶುಭಂ ತತ್ರೋಪಭುಜ್ಯತೇ ।
ತಥಾ ದೃಷ್ಟ್ವಾ ವಿಮಾನಸ್ಥಾನ್ಭೂರಿಧರ್ಮಾದಿಸಂಯುತಾನ್ ॥ ೨೦ ॥
ಬಹುತೇಜೋನ್ವಿತಾನ್ಸ್ವರ್ಗೇ ಹ್ಯಲ್ಪಪುಣ್ಯೋ ದ್ವಿಜೋತ್ತಮ ।
ಪಶ್ಚಾತ್ತಾಪಜದುಃಖೇನ ಸ್ವರ್ಗಸ್ಥೋ ದುಃಖಿತಃ ಸದಾ ॥ ೨೧ ॥
ನ ಮಯಾ ಸುಕೃತಂ ಭೂರಿ ಕೃತಂ ಮರ್ತ್ಯೇ ಕಥಂಚನ ॥ ೨೨ ॥
ತಥಾ ಚ ಪತಮಾನಾಂಶ್ಚ ದೃಷ್ಟ್ವಾ ಚಾನ್ಯಾನ್ಸಹಸ್ರಶಃ ।
ಆತ್ಮನಶ್ಚ ಮಹದ್ದುಃಖಂ ಜಾಯತೇ ಚ ತದದ್ಭುತಂ ॥ ೨೩ ॥
ಏತತ್ತೇ ಸರ್ವಮಾಖ್ಯಾತಂ ಗುಣದೋಷಸಮುದ್ಭವಂ ।
ಸ್ವರ್ಗಸಂಚೇಷ್ಟಿತಂ ಬ್ರಹ್ಮನ್ಕುರುಷ್ವ ಯದಭೀಪ್ಸಿತಂ ॥ ೨೪ ॥

---

೧೮. ಮುನಿಯೆ! ಸ್ವರ್ಗವಾಸಿಗಳಿಗೆ ಭಯವನ್ನುಂಟುಮಾಡುವ ಆ ಪತನವೆಂಬುವೊಂದೇ ನನಗೆ ದೋಷವಾಗಿ ಕಾಣುವುದು.

೧೯. ದ್ವಿಜನೆ! ಅಲ್ಲಿ ಹೇಗೂ ಪುಣ್ಯ ಮಾಡಲು ಸಾಧ್ಯವಿಲ್ಲ. ಈ ಭೂಲೋಕವು ಕರ್ಮಭೂಮಿಯು. ಅದು ಭೋಗ ಭೂಮಿಯೆಂದು ಹೇಳಲ್ಪಡುವುದು.

೨೦–೨೨ ಈ ಭೂಮಿಯಲ್ಲಿ ಮಾಡಿದ ಶುಭ ಕರ್ಮದ ಫಲವನ್ನು ಅಲ್ಲಿ ಅನುಭವಿಸುತ್ತಾರೆ. ಹಾಗೆಯೇ ಅಲ್ಲಿ ಸ್ವಲ್ಪ ಪುಣ್ಯಮಾಡಿದವನು ವಿಮಾನದಲ್ಲಿ ಕುಳಿತಿರುವವರೂ, ಬಹು ಧರ್ಮಗಳಿಂದ ಸಹಿತರೂ, ಅತ್ಯಂತ ತೇಜಸ್ವಿಗಳೂ ಆದವರನ್ನು ನೋಡಿ ನಾನು ಭೂಮಿಯಲ್ಲಿ ಹೆಚ್ಚು ಪುಣ್ಯಗಳನ್ನು ಮಾಡಲಿಲ್ಲವಲ್ಲ ಎಂದು ಪಶ್ಚಾತ್ತಾಪಪಟ್ಟು ದುಃಖಿಸುವನು.

೨೩. ಸ್ವರ್ಗವಾಸಿಗೆ ಭೂಲೋಕದಲ್ಲಿ ಬೀಳುತ್ತಿರುವ ಸಾವಿರಾರು ಜನರನ್ನು ನೋಡಿ ತನಗೂ ಹಾಗೆಯೇ ಆಗುವುದೆಂದು ದುಃಖವುಂಟಾಗುತ್ತದೆ.

೨೪. ಬ್ರಾಹ್ಮಣ! ನಿನಗೆ ಸ್ವರ್ಗದಲ್ಲಿ ಗುಣದೋಷಗಳಿಂದುಂಟಾಗುವ ಕಾರ್ಯವನ್ನು ಹೇಳಿದ್ದೇನೆ. ನಿನಗಿಷ್ಟವಾದುದನ್ನು ಮಾಡು.

ಮುದ್ಗಲ ಉವಾಚ :—

ಪತನಸ್ಯ ಭಯಂ ಯತ್ರ ಪುಣ್ಯಹಾನಿರ್ನ ವರ್ಧನಂ ।
ತೇನ ಸ್ವರ್ಗೇಣ ಮೇ ದೂತ ನೈವ ಕಾರ್ಯಂ ಕಥಂಚನ ॥ ೨೫ ॥
ವಾಚ್ಯಸ್ತ್ವಯಾ ಮಮಾದೇಶಾದ್ದೇವರಾಜಃ ಸ್ಫುಟಂ ವಚಃ ।
ಕ್ಷಮ್ಯತಾಮಪರಾಧೋ ಮೇ ನ ಸ್ವರ್ಗಾಯ ಸ್ಪೃಹಾ ಮಮ ॥ ೨೬ ॥
ತತ್ಕರ್ಮಾಽಹಂ ಕರಿಷ್ಯಾಮಿ ಯೇನ ನೋ ಪತನಾದ್ಭಯಂ ।
ಸಾಧಯಿಷ್ಯಾಮಿ ತಾಂಲ್ಲೋಕಾನ್ಯೇ ಸದಾ ಪಾತವರ್ಜಿತಾಃ ॥ ೨೭ ॥

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ನೃಪಶ್ರೇಷ್ಠ ಮುದ್ಗಲಃ ಸ್ವರ್ಗನಿಸ್ಪೃಹಃ ।
ಸ್ಥಿತಸ್ತತ್ರೈವ ನಿರತಃ ಶಿವಧ್ಯಾನಪರಾಯಣಃ ॥ ೨೮ ॥
ಶ್ರುತ್ವಾ ದೂತೋಽಪಿ ಶಕ್ರಸ್ಯ ತಸ್ಯ ವಾಕ್ಯಂ ಸ ವಿಸ್ತರಂ ।
ಕಥಯಾಮಾಸ ಶಕ್ರಸ್ಯ ತಂ ಭೂಯಃ ಸೋಽಭ್ಯಭಾಷತ ॥ ೨೯ ॥
ದೇವದೂತಾಪ್ರಮಾಣಂ ಚ ವಿಮಾನಂ ಹಿ ತ್ವಯಾ ಕೃತಂ ।
ನ ಕೃತಂ ಕೇನಚಿತ್ಪೂರ್ವಂ ನ ಕರಿಷ್ಯತಿ ಕಶ್ಚನ ॥ ೩೦ ॥

---

೨೫. ಮುದ್ಗಲನು ಹೇಳುತ್ತಾನೆ :—ದೂತ! ಪತನದ ಭಯವು, ಪುಣ್ಯ ನಾಶವು, ಪುಣ್ಯದ ವೃದ್ಧಿಯಿಲ್ಲದಿರುವುದು ಇವುಗಳನ್ನು ಹೊಂದಿರುವ ಸ್ವರ್ಗದಿಂದ ನನಗೆ ಪ್ರಯೋಜನವಿಲ್ಲ.

೨೬. ನನ್ನ ಅಪರಾಧವನ್ನು ಕ್ಷಮಿಸು. ನನಗೆ ಸ್ವರ್ಗದ ಆಶೆಯಿಲ್ಲ ಎಂದು ಇಂದ್ರನಿಗೆ ನನ್ನ ಅಪ್ಪಣೆಯಿಂದ ನೀನು ಸ್ಪಷ್ಟವಾಗಿ ಹೇಳು.

೨೭. ನಾನು ಪತನದ ಭಯವಿಲ್ಲದಂತೆ ಕರ್ಮವನ್ನಾಚರಿಸುವೆನು. ಪತನವಿಲ್ಲದ ಶಾಶ್ವತ ಲೋಕಗಳನ್ನು ಸಾಧಿಸುವೆನು.

೨೮. ಪುಲಸ್ತ್ಯನು ಹೇಳುತ್ತಾನೆ :—ನೃಪವರ್ಯನೆ! ಮುದ್ಗಲನು ಹೀಗೆಂದು ನುಡಿದು ಸ್ವರ್ಗದಲ್ಲಿ ನಿರಾಶನಾಗಿ ಅಲ್ಲಿಯೇ ಶಿವಧ್ಯಾನನಿರತನಾಗಿ ಇದ್ದನು.

೨೯. ದೇವದೂತನು ಇಂದ್ರನಿಗೆ ಆ ಮುನಿಯು ಹೇಳಿದ ಮಾತನ್ನು ವಿಸ್ತಾರವಾಗಿ ಹೇಳಲು ಇಂದ್ರನು ಮರಳಿ ಇಂತೆಂದನು.

೩೦. "ದೂತ! ನೀನು ವಿಮಾನವನ್ನು ಮುದ್ಗಲನೆಡೆಗೆ ತೆಗೆದುಕೊಂಡು ಹೋಗಿರುವುದು ಸುಳ್ಳು. ಹೀಗೆ ಯಾರೂ ದೇವ ವಿಮಾನವನ್ನು ತಿರಸ್ಕರಿಸಲಿಲ್ಲ. ಮುಂದೆ ಒಬ್ಬನೂ ತಿರಸ್ಕರಿಸುವುದಿಲ್ಲ.

ತಸ್ಮಾತ್ತತ್ರ ದ್ರುತಂ ಗತ್ವಾ ಬಲಾದಾನಯ ತಂ ಮುನಿಂ ।
ಆನಯಸ್ವಾನ್ಯಥಾ ಶಾಪಂ ತವ ದಾಸ್ಯಾಮ್ಯಸಂಶಯಂ ॥ ೩೧ ॥
ಪುಲಸ್ತ್ಯ ಉವಾಚ :
ಶಕ್ರಸ್ಯ ವಚನಂ ಶ್ರುತ್ವಾ ದೇವದೂತೋ ಭಯಾನ್ವಿತಃ ।
ಪ್ರಸ್ಥಿತಃ ಸತ್ವರಂ ತತ್ರ ಮುದ್ಗಲೋ ಯತ್ರ ತಿಷ್ಠತಿ ॥ ೩೨ ॥
ಮುದ್ಗಲೋಽಪಿ ವಿಮಾನಸ್ಥಂ ಪುನರ್ದೃಷ್ಟ್ವಾ ಸಮಾಗತಂ ।
ಮಾಮುಹ್ರದೇ ಪ್ರವಿಶ್ಯಾಥ ವಾರಯಾಮಾಸ ತಂ ತದಾ ॥ ೩೩ ॥
ಸ ತಸ್ಯ ವಚನೇನೈವ ಸ್ತಂಭಿತೋ ಲಿಖಿತೋ ಯಥಾ ।
ಚಲಿತುಂ ನೈವ ಶಕ್ನೋತಿ ಪ್ರಭಾವಾತ್ತಸ್ಯ ಸನ್ಮುನೇಃ ॥ ೩೪ ॥
ಚಿರಕಾಲಗತಂ ಜ್ಞಾತ್ವಾ ದೂತಂ ತು ತ್ರಿದಶಾಧಿಪಃ ।
ಸ್ವಯಂ ತತ್ರಾಯಯೌ ಕೋಪಾದಾರುಹ್ಯೈರಾವಣಂ ಗಜಂ ॥ ೩೫ ॥
ಅಥ ದೃಷ್ಟ್ವಾ ತದಾ ದೂತಂ ಸ್ತಂಭಿತಂ ಮುದ್ಗಲೇನ ತು ।
ವಧಾರ್ಥಂ ತೂದ್ಯತಸ್ತಸ್ಯ ಸ ವಜ್ರಂ ಭ್ರಾಮಯಂಸ್ತದಾ ॥ ೩೬ ॥

---

೩೧. ಆದ್ದರಿಂದ ನೀನು ಶೀಘ್ರವಾಗಿ ಅಲ್ಲಿಗೆ ಹೋಗಿ ಮುನಿಯನ್ನು ಬಲಾತ್ಕಾರದಿಂದ ಇಲ್ಲಿಗೆ ಕರೆದುಕೊಂಡು ಬಾ, ಹಾಗೆಮಾಡದಿದ್ದರೆ ನಿನಗೆ ನಿಶ್ಚಯವಾಗಿಯೂ ಶಾಪವನ್ನೀಯುವೆನು.

೩೨. ಪುಲಸ್ತ್ಯನು ಹೇಳುತ್ತಾನೆ:—ದೇವದೂತನು ಇಂದ್ರನ ಮಾತನ್ನು ಕೇಳಿ ಭಯದಿಂದ ಶೀಘ್ರವಾಗಿ ಮುದ್ಗಲನೆಡೆಗೆ ಹೋದನು.

೩೩. ಮುದ್ಗಲನೂ ಪುನಃ ಬಂದ ವಿಮಾನದಲ್ಲಿರುವ ದೂತನನ್ನು ಕಂಡು ತಾನು ಮಾಮುಹ್ರದನನ್ನು ಪ್ರವೇಶಿಸಿ ಅವನನ್ನು ತಡೆದನು.

೩೪. ಮುನಿಯು ಮಾತಿನಿಂದಲೆ ಆ ದೂತನು ಬರೆಯಲ್ಪಟ್ಟ ಚಿತ್ರದಂತೆ ಸ್ತಬ್ಧವಾಗಿ ಅವನ ಪ್ರಭಾವದಿಂದ ಚಲಿಸಲು ಶಕ್ತನಾಗಲಿಲ್ಲ.

೩೫. ಇಂದ್ರನು ಆ ದೂತನ, ಬಹಳ ಹೊತ್ತಾದರೂ ಬಾರದಿರುವುದನ್ನರಿತು ತಾನೇ ಕೋಪದಿಂದ ಐರಾವತವನ್ನೇರಿ ಅಲ್ಲಿಗೆ ಬಂದನು.

೩೬. ಅಲ್ಲಿ ಅವನು ಮುದ್ಗಲನ್ನು ದೂತನನ್ನು ಸ್ತಂಭಿಸಿರುವುದನ್ನು ಕಂಡು ಆ ಮುದ್ಗಲನನ್ನು ಕೊಲ್ಲಲು ವಜ್ರಾಯುಧವನ್ನು ತಿರುಗಿಸಿದನು.

ಏತಸ್ಮಿನ್ನೇವ ಕಾಲೇ ತು ಉತ್ಪಾತಾಸ್ತತ್ರ ದಾರುಣಾಃ ।
ಅಪಸವ್ಯಂ ಮೃಗಾಶ್ಚಕ್ರುಃ ಪಶವಃ ಪಕ್ಷಿಣಶ್ಚ ಯೇ ।
ತಾನ್ದೃಷ್ಟ್ವಾ ಚಿಂತಯಾಮಾಸ ಮುದ್ಗಲೋ ವಿಸ್ಮಯಾನ್ವಿತಃ ॥ ೩೭ ॥
ಅಥ ದೃಷ್ಟ್ವಾಂಬರಗತಂ ವಜ್ರೋದ್ಯತಕರಂ ಹರಿಂ ।
ಸ್ತಂಭಯಾಮಾಸ ತಂ ಸದ್ಯೋ ದೃಷ್ಟಿಪಾತೇನ ಮುದ್ಗಲಃ ॥ ೩೮ ॥
ತತ್ರ ಶಕ್ರಃ ಸ್ತುತಿಂ ಚಕ್ರೇ ಭಗ್ನೋತ್ಸಾಹೋ ನೃಪೋತ್ತಮ ।
ಮುಂಚ ಮಾಂ ಬ್ರಾಹ್ಮಣಶ್ರೇಷ್ಠ ಯಾಸ್ಯಾಮಿ ತ್ರಿದಶಾಲಯಂ ॥ ೩೯ ॥
ಸ್ವರ್ಗೇ ವಾ ಯದಿ ವಾ ಮರ್ತ್ಯೇ ತಿಷ್ಠ ತ್ವಂ ಸ್ವೇಚ್ಛಯಾ ದ್ವಿಜ ।
ಮಯಾ ಕೃತಃ ಸಮುದ್ಯೋಗೋ ಹಿತಾರ್ಥಂ ತೇ ಮುನೇ ಹ್ಯಯಂ ॥ ೪೦ ॥
ವರಂ ವರಯ ಭದ್ರಂ ತೇ ನಿತ್ಯಂ ಯೋ ಮನಸಿ ಸ್ಥಿತಃ ।
ತಂ ತೇ ಸರ್ವಂ ಪ್ರದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೪೧ ॥
ಮುದ್ಗಲ ಉವಾಚ :—
ಏಷ ಏವ ವರಃ ಶ್ಲಾಘ್ಯೋ ಯತ್ತ್ವಂ ದೃಷ್ಟಃ ಸುರೇಶ್ವರ ।
ದರ್ಶನಂ ತೇ ಸಹಸ್ರಾಕ್ಷ ಸ್ವಪ್ನೇಷ್ವಪಿ ಸುದುರ್ಲಭಂ ॥ ೪೨ ॥

---

೩೭. ಈ ಸಮಯದಲ್ಲಿ ಅಲ್ಲಿ ಭಯಂಕರವಾದ ಉತ್ಪಾತಗಳುಂಟಾದುವು. ಜಿಂಕೆಗಳೂ, ಪಶುಗಳೂ, ಪಕ್ಷಿಗಳೂ ಅಪಸವ್ಯವಾಗಿ ಸಂಚರಿಸಿದುವು. ಮುದ್ಗಲನು ಅವುಗಳನ್ನು ನೋಡಿ ಆಶ್ಚರ್ಯದಿಂದ ಚಿಂತಿಸಿದನು.

೩೮. ತರುವಾಯ ಆ ಮುದ್ಗಲನು ಆಕಾಶದಲ್ಲಿ ವಜ್ರಾಯುಧವನ್ನು ಹಿಡಿದು ನಿಂತಿರುವ ಇಂದ್ರನನ್ನು ಕಂಡು ಅವನನ್ನು ಕೂಡಲೆ ದೃಷ್ಟಿಯಿಂದಲೇ ತಡೆದನು.

೩೯. ಅಲ್ಲಿ ಇಂದ್ರನು ಉತ್ಸಾಹವಿಲ್ಲದೆ ಅವನನ್ನು ಸ್ತುತಿಸಿದನು. "ಎಲೈ ಬ್ರಾಹ್ಮಣೋತ್ತಮ ! ನನ್ನನ್ನು ಬಿಡು. ನಾನು ದೇವಲೋಕಕ್ಕೆ ಹೋಗುವೆನು.

೪೦. ಬ್ರಾಹ್ಮಣ ! ನೀನು ಸ್ವರ್ಗದಲ್ಲಾಗಲಿ, ಭೂಲೋಕದಲ್ಲಾಗಲಿ ಇರು. ಮುನಿಯೆ ! ನಾನು ನಿನ್ನ ಹಿತಕ್ಕಾಗಿ ಈ ಕೆಲಸವನ್ನು ಮಾಡಿದೆನು.

೪೧. ನೀನು ಮನಸ್ಸಿನಲ್ಲಿರುವ ಮಂಗಳಕರವಾದ ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ನಿನಗೆ ಕೊಡುವೆನು.

೪೨. ಮುದ್ಗಲನು ಹೇಳುತ್ತಾನೆ:—ಸುರೇಂದ್ರ ! ನಿನ್ನ ದರ್ಶನವಾದುದೇ ನನಗೆ ಶ್ಲಾಘ್ಯವಾದ ವರವು. ನಿನ್ನ ದರ್ಶನವು ಸ್ವಪ್ನದಲ್ಲಿಯೂ ದುರ್ಲಭವಾದುದು.

ಅವಶ್ಯಂ ಯದಿ ಮೇ ದೇಯೋ ವರೋ ವೃತ್ರನಿಷೂದನ ।
ತ್ವತ್ಪ್ರಸಾದೇನ ಮೇ ಮೋಕ್ಷೋ ಜಾಯತಾಂ ಶೀಘ್ರಮೇವ ಹಿ ॥ ೪೩ ॥
ಮಾಮುಹ್ರದಂ ಸಮಾಗತ್ಯ ಮೂತಃ ಪ್ರೋಕ್ತೋ ಮಯಾ ಯತಃ ।
ತತೋ ಮಾಮುಹ್ರದಮಿತಿ ಖ್ಯಾತಿಂ ಯಾತು ಧರಾತಲೇ ॥ ೪೪ ॥
ತೀರ್ಥಮೇತತ್ಸಹಸ್ರಾಕ್ಷ ಸರ್ವಪಾಪಪ್ರಣಾಶನಂ ।
ಅತ್ರ ಸ್ನಾತ್ವಾ ದಿವಂ ಯಾಂತು ತ್ವತ್ಪ್ರಸಾದಾತ್ಸುರೇಶ್ವರ ॥ ೪೫ ॥
ಪಿಂಡದಾನಾತ್ಪರಾಂ ಪ್ರೀತಿಂ ಲಭಂತಾಂ ಪಿತರೋಽತ್ರ ಹಿ ॥ ೪೬ ॥

ಇಂದ್ರ ಉವಾಚ :—

ಮಾಮುಹ್ರದಮಿತಿ ಖ್ಯಾತಂ ತೀರ್ಥಮೇತದ್ಭವಿಷ್ಯತಿ ।
ವರಿಷ್ಠಂ ನಾತ್ರ ಸಂದೇಹೋ ಮತ್ಪ್ರಸಾದಾದ್ದ್ವಿಜೋತ್ತಮ ॥ ೪೭ ॥
ಅತ್ರ ಯೇ ಫಾಲ್ಗುನೇ ಮಾಸಿ ಪೌರ್ಣಮಾಸ್ಯಾಂ ಸಮಾಹಿತಾಃ ।
ಕರಿಷ್ಯಂತಿ ಪುನಃ ಸ್ನಾನಂ ತೇ ಯಾಸ್ಯಂತಿ ಪರಾಂ ಗತಿಂ ॥ ೪೮ ॥

---

೪೩. ವೃತ್ರಾರಿಯೆ! ನೀನು ನನಗೆ ಅವಶ್ಯವಾಗಿ ವರವನ್ನೀಯುವುದಾದರೆ ನಿನ್ನ ಅನುಗ್ರಹದಿಂದ ನನಗೆ ಶೀಘ್ರವಾಗಿ ಮೋಕ್ಷವಾಗಲಿ.

೪೪. ಮಡುವಿನಲ್ಲಿರುವ ನಾನು ನಿನ್ನ ದೂತನಿಗೆ ದೇವಲೋಕಕ್ಕೆ ಬರುವುದಿಲ್ಲ ವೆಂದು ಹೇಳಿರುವೆನು. ಆದ್ದರಿಂದ ಈ ಮಡುವು ಭೂಮಿಯಲ್ಲಿ ಮಾಮುಹ್ರದವೆಂದು ಪ್ರಸಿದ್ಧಿಗೊಳ್ಳಲಿ.

೪೫. ದೇವೇಂದ್ರ! ಈ ತೀರ್ಥವು ಸಕಲ ಪಾಪಗಳನ್ನು ಪರಿಹರಿಸುವುದರಿಂದ ಇಲ್ಲಿ ಮಿಂದವನು ನಿನ್ನ ಅನುಗ್ರಹದಿಂದ ಸ್ವರ್ಗಕ್ಕೆ ತೆರಳಲಿ.

೪೬. ಇಲ್ಲಿ ಪಿಂಡಪ್ರದಾನ ಮಾಡುವುದರಿಂದ ಪಿತೃಗಳು ಅತಿಶಯ ಪ್ರೀತಿಯನ್ನು ಹೊಂದಲಿ.

೪೭. ಇಂದ್ರನು ಹೇಳುತ್ತಾನೆ :—ಬ್ರಾಹ್ಮಣವರ್ಯನೆ! ಈ ಉತ್ತಮ ತೀರ್ಥವು ನನ್ನ ಅನುಗ್ರಹದಿಂದ ಮಾಮುಹ್ರದವೆಂದು ಪ್ರಸಿದ್ಧವಾಗುವುದು. ಸಂದೇಹವಿಲ್ಲ.

೪೮. ಇಲ್ಲಿ ಫಾಲ್ಗುನಮಾಸದ ಹುಣ್ಣಿಮೆ ದಿನ ಸಾವಧಾನಮನಸ್ಸಿನಿಂದ ಮಿಂದವರು ಉತ್ತಮ ಗತಿಯನ್ನು ಹೊಂದುವರು.

ಪಿಂಡಪ್ರದಾನಾದ್ಯಯಾತುಲ್ಯಂ ಲಪ್ಸ್ಯಂತೇ ಫಲಮುತ್ತಮಂ ।
ಪುಣ್ಯದಾನಫಲಂ ಚಾತ್ರ ಸಂಖ್ಯಾಹೀನಂ ದ್ವಿಜೋತ್ತಮ ॥ ೪೯ ॥
ಪುಲಸ್ತ್ಯ ಉವಾಚ :—
ಏವಮುಕ್ತ್ವಾ ಯಯೌ ಸ್ವರ್ಗಂ ದೂತಮಾದಾಯ ವಜ್ರಭೃತ್ ।
ಮುದ್ಗಲೋಽಪಿ ಪರಂ ಬ್ರಹ್ಮ ಚಿಂತಯನ್ ಹ್ಯನಿಶಂ ತತಃ ॥ ೫೦ ॥
ಶುದ್ಧಧ್ಯಾನಪರೋ ಭೂತ್ವಾ ಮೋಕ್ಷಂ ಪ್ರಾಪ್ತಸ್ತತೋಽಕ್ಷಯಂ ॥ ೫೧ ॥
ಅತ್ರ ಗಾಥಾ ಪುರಾ ಗೀತಾ ನಾರದೇನ ಮಹಾತ್ಮನಾ ।
ಬಹುವಿಪ್ರಸಮಾಯುಕ್ತೇ ಪರ್ವತೇಽಸ್ಮಿನ್ಮಹೀಪತೇ ॥ ೫೨ ॥
ಮಾಮುಹ್ರದೇ ನರಃ ಸ್ನಾತ್ವಾ ದೃಷ್ಟ್ವಾ ತಂ ಮುದ್ಗಲೇಶ್ವರಂ ।
ಇಹ ಭುಕ್ತ್ವಾಽಖಿಲಾನ್ಕಾಮಾನಂತೇ ಮುಕ್ತಿಮವಾಪ್ಸ್ಯತಿ ।
ಏತಸ್ಮಾತ್ಕಾರಣಾದ್ರಾಜನ್ಮಾಮುಹ್ರದಮಿತಿ ಸ್ಮೃತಂ ॥ ೫೩ ॥
ತತ್ತೀರ್ಥಂ ಸರ್ವತೀರ್ಥಾನಾಂ ಪ್ರವರಂ ಲೋಕವಿಶ್ರುತಂ ।
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ॥ ೫೪ ॥

---

೪೯. ದ್ವಿಜೇಂದ್ರ ! ಇಲ್ಲಿ ಮನುಷ್ಯರು ಪಿಂಡಪ್ರದಾನ ಮಾಡುವುದರಿಂದ ಉತ್ತಮ ಫಲವನ್ನು ಹೊಂದುವರು. ಇಲ್ಲಿ ಪುಣ್ಯದಾನದ ಫಲವು ಅಸಂಖ್ಯಾತವಾದುದು,

೫೦–೫೧. ಪುಲಸ್ತ್ಯನು ಹೇಳುತ್ತಾನೆ :—ಇಂದ್ರನು ಹೀಗೆಂದು ದೂತನನ್ನು ಕರೆದುಕೊಂಡು ಸ್ವರ್ಗಕ್ಕೆ ತೆರಳಿದನು. ಮುದ್ಗಲನೂ ಯಾವಾಗಲೂ ಪರಬ್ರಹ್ಮನನ್ನು ಧ್ಯಾನಿಸುತ್ತ ಅಕ್ಷಯವಾದ ಮೋಕ್ಷವನ್ನು ಪಡೆದನು.

೫೨–೫೩. ಇಲ್ಲಿ ಮಹಾತ್ಮನಾದ ನಾರದನು ಒಂದು ಗಾಥೆಯನ್ನು ಹಾಡಿರುವನು. ದೊರೆಯೆ ! ಅನೇಕ ಬ್ರಾಹ್ಮಣರಿರುವ ಈ ಪರ್ವತದ, ಮಾಮುಹ್ರದನಲ್ಲಿ ಮಿಂದು ಮುದ್ಗಲೇಶ್ವರನನ್ನು ನೋಡಿದ ಮಾನವನು ಈ ಲೋಕದಲ್ಲಿ ಸಕಲೇಷ್ಟಾರ್ಥಗಳನ್ನು ಅನುಭವಿಸಿ ಕೊನೆಯಲ್ಲಿ ಮುಕ್ತಿಯನ್ನು ಪಡೆಯುವನು. ದೊರೆಯೆ ! ಇದರಿಂದಲೇ ಇದು ಮಾಮುಹ್ರದವೆಂದು ಎನಿಸಿಕೊಳ್ಳುವುದು.

೫೪. ಆ ತೀರ್ಥವು ಸಕಲ ತೀರ್ಥಗಳಲ್ಲಿ ಪ್ರಸಿದ್ಧವೂ, ಉತ್ತಮವೂ ಆಗಿರುವುದು. ಆದ್ದರಿಂದ ಸಕಲ ಪ್ರಯತ್ನದಿಂದ ಅಲ್ಲಿ ಸ್ನಾನಮಾಡಬೇಕು.

ಮೋಕ್ಷಕಾಮೋ ವಿಶೇಷೇಣ ಯ ಇಚ್ಛೇತ್ಪರಮಂ ಪದಂ ।
ಚಂಡಿಕಾಶ್ರಮಮಾಸಾದ್ಯ ಕಿಂ ಪುನಃ ಪರಿತಪ್ಯತೇ ॥ ೫೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಮಾಮುಪ್ರದೋತ್ಪತ್ತಿವರ್ಣನಂ ನಾಮ
ಪಂಚತ್ರಿಂಶೋಽಧ್ಯಾಯಃ

---

೫೫. ಚಂಡಿಕಾಶ್ರಮವನ್ನು ಹೊಂದಿದ ಯಾವ ಮೋಕ್ಷಾರ್ಥಿಯು ಉತ್ತಮ ಪದವಿಯನ್ನು ಬಯಸುವನು ಮರಳಿ ಏತಕ್ಕೆ ತಪಸ್ಸನ್ನಾಚರಿಸುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಮಾಮುಪ್ರದೋತ್ಪತ್ತಿವರ್ಣನವೆಂಬ
ಮುವ್ವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷಟ್ತ್ರಿಂಶೋಽಧ್ಯಾಯಃ

### ಚಂಡಿಕಾಶ್ರಮೋತ್ಪತ್ತಿಮಾಹಾತ್ಮ್ಯವರ್ಣನಂ

ಯಯಾತಿರುವಾಚ :—

ಚಂಡಿಕಾಯಾ ದ್ವಿಜಶ್ರೇಷ್ಠ ಕಥಂ ತತ್ರಾಶ್ರಮೋಽಭವತ್ ।
ತಸ್ಮಿನ್ಕಾಲೇ ಫಲಂ ತೇನ ಕಿಂ ದೃಷ್ಟೇನ ಭವೇನ್ನೃಣಾಂ ॥ ೧ ॥

ಪುಲಸ್ತ್ಯ ಉವಾಚ :—

ಶೃಣು ರಾಜನ್ಪ್ರವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಯಾಂ ಶ್ರುತ್ವಾ ಮಾನವಃ ಸಮ್ಯಕ್ಸರ್ವಪಾಪೈಃ ಪ್ರಮುಚ್ಯತೇ ॥ ೨ ॥
ಪುರಾ ದೇವಯುಗೇ ರಾಜನ್ಮಹಿಷೋನಾಮ ದಾನವಃ ।
ಪಿತಾಮಹವರಾದ್ದೃಪ್ತಃ ಸರ್ವದೇವಭಯಂಕರಃ ॥ ೩ ॥
ತೇನ ಶಕ್ರಾದಯೋ ದೇವಾ ಜಿತಾಃ ಸಂಖ್ಯೇ ಸಹಸ್ರಶಃ ।
ಭಯಾತ್ತಸ್ಯ ದಿವಂ ಹಿತ್ವಾ ಗತಾಸ್ತೇ ವೈ ಯಥಾದಿಶಂ ॥ ೪ ॥
ತ್ರೈಲೋಕ್ಯಂ ಸ ವಶೇ ಕೃತ್ವಾ ಸ್ವಯಮಿಂದ್ರೋ ಬಭೂವ ಹ ॥ ೫ ॥

---

ಕನ್ನಡದ ಅನುವಾದ

### ಚಂಡಿಕಾಶ್ರಮೋತ್ಪತ್ತಿಮಾಹಾತ್ಮ್ಯವರ್ಣನ

೧. ಯಯಾತಿಯು ಹೇಳುತ್ತಾನೆ :—ದ್ವಿಜವರ್ಯನೆ ! ಚಂಡಿಕೆಯ ಆಶ್ರಮವು ಅಲ್ಲಿ ಯಾವಾಗ ಹೇಗಾಯಿತು ? ಅದನ್ನು ನೋಡುವುದರಿಂದ ಮಾನವರಿಗಾಗುವ ಫಲವೇನು ?

೨. ಪುಲಸ್ತ್ಯನು ಹೇಳುತ್ತಾನೆ :—ದೊರೆಯೆ ! ಪಾಪವನ್ನು ಪರಿಹರಿಸುವ ಈ ಕಥೆಯನ್ನು ಕೇಳಿದ ಮಾನವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೩. ದೊರೆಯೆ ! ಹಿಂದೆ ದೇವಯುಗದಲ್ಲಿ ಬ್ರಹ್ಮನ ವರದಿಂದ ಅಹಂಕಾರಗೊಂಡವನೂ, ಸಕಲ ದೇವತೆಗಳಿಗೆ ಭಯಂಕರನೂ ಆದ ಮಹಿಷನೆಂಬ ದಾನವನಿದ್ದನು.

೪. ಅವನು ಇಂದ್ರಾದಿ ದೇವತೆಗಳನ್ನು ಯುದ್ಧದಲ್ಲಿ ಗೆದ್ದನು. ಆ ದೇವತೆಗಳು ಅವನ ಭಯದಿಂದ ಸ್ವರ್ಗವನ್ನು ತ್ಯಜಿಸಿ ದಿಕ್ಕು ದಿಕ್ಕಿಗೆ ಹೊರಟುಹೋದರು.

೫. ಅವನು ಮೂರು ಲೋಕಗಳನ್ನೂ ತನ್ನ ಅಧೀನದಲ್ಲಿರಿಸಿಕೊಂಡು ತಾನೇ ಇಂದ್ರನಾದನು.

ಆದಿತ್ಯಾ ವಸವೋ ರುದ್ರಾ ನಾಸತ್ಯಾ ಮರುತಾಂ ಗಣಾಃ ।
ಕೃತಾಸ್ತೇನ ತಥಾ ದೈತ್ಯಾ ಯಥಾರ್ಹಂ ಬಲವತ್ತರಾಃ ॥ ೬ ॥
ವಹ್ನಿರ್ಭಯಂ ಸಮಾಪನ್ನಸ್ತ್ಯಕ್ತ್ವಾ ದೇವಗಣಾಂಸ್ತದಾ ।
ದಾನವೇಭ್ಯೋ ಹವಿರ್ಭಾಗಂ ದೇವೇಭ್ಯೋ ನ ಪ್ರಯಚ್ಛತಿ ॥ ೭ ॥
ಉದ್ಯೋತಂ ಕುರುತೇ ಸೂರ್ಯೋ ಯಾದೃಕ್ತಸ್ಯಾಭಿಸಂಮತಃ ।
ಯಜ್ಞಭಾಗಂ ವಿನಾಽಪ್ಯೇಷ ಭಯಾತ್ಪಾರ್ಥಿವಸತ್ತಮ ॥ ೮ ॥
ಲೋಕಪಾಲಾಸ್ತಥಾ ಸರ್ವೇ ತಸ್ಯ ಕರ್ಮ ಪ್ರಚಕ್ರಿರೇ ।
ದಾಸವತ್ಪಾರ್ಥಿವಶ್ರೇಷ್ಠ ಯಜ್ಞಭಾಗಂ ವಿನಾಕೃತಾಃ ॥ ೯ ॥
ಕಸ್ಯಚಿತ್ತ್ವಥ ಕಾಲಸ್ಯ ಸರ್ವೇ ದೇವಾಃ ಸಮೇತ್ಯ ತು ।
ಪಪ್ರಚ್ಛುರ್ವಿನಯೋಪೇತಾ ವಿಪ್ರಶ್ರೇಷ್ಠಂ ಬೃಹಸ್ಪತಿಂ ॥ ೧೦ ॥
ಭಗವನ್ಕಿಂ ವಯಂ ಕುರ್ಮಃ ಕುತ್ರ ಯಾಮೋ ನಿರಾಶ್ರಯಾಃ ।
ತಸ್ಮಾದ್ಬ್ರೂಹಿ ಕ್ಷಯೋಪಾಯಂ ಮಹಿಷಸ್ಯ ದುರಾತ್ಮನಃ ॥ ೧೧ ॥
ಏವಮುಕ್ತೋ ಗುರುರ್ದೇವೈರ್ಧ್ಯಾತ್ವಾ ಕಾಲಂ ಚಿರಂ ನೃಪ ।
ತತಸ್ತಾಂಸ್ತ್ರಿದಶಾನ್ಪ್ರಾಹ ಜೀವಯನ್ನಿವ ಭೂಪತೇಃ ॥ ೧೨ ॥

---

೬. ಬಲಿಷ್ಠರಾದ ದೈತ್ಯರನ್ನೆ ಆದಿತ್ಯರು, ವಸುಗಳು, ರುದ್ರರು ಅಶ್ವಿನೀದೇವತೆಗಳು, ಮರುತ್ತುಗಳು ಇವರ ಸ್ಥಾನದಲ್ಲಿರಿಸಿದನು.

೭. ಅಗ್ನಿಯು ಭಯಗೊಂಡು ದೇವತೆಗಳನ್ನು ಬಿಟ್ಟು ದಾನವರಿಗೆ ಹವಿರ್ಭಾಗವನ್ನು ಕೊಡುವನು. ದೇವತೆಗಳಿಗೆ ಕೊಡುವುದಿಲ್ಲ.

೮. ಪಾರ್ಥಿವೇಂದ್ರ ! ಸೂರ್ಯನು ಭಯದಿಂದ ತಾನು ಯಜ್ಞಭಾಗವನ್ನು ಪಡೆಯದೆ ಆ ಮಹಿಷನಿಗಿಷ್ಟವಾದ ಕಾರ್ಯವನ್ನೆಸಗುವನು.

೯. ಹಾಗೆಯೇ ಸಕಲ ಲೋಕಪಾಲಕರು ಯಜ್ಞಭಾಗವನ್ನು ತ್ಯಜಿಸಿ ಸೇವಕರಂತೆ ಅವನ ಕೆಲಸವನ್ನು ಮಾಡಿದರು.

೧೦. ಕೆಲವು ಕಾಲದ ಮೇಲೆ ಸಮಸ್ತ ದೇವತೆಗಳೂ ಸೇರಿ ವಿನಯದಿಂದ ದ್ವಿಜವರ್ಯನಾದ ಬೃಹಸ್ಪತಿಯನ್ನು ಹೀಗೆ ಪ್ರಶ್ನಿಸಿದರು.

೧೧. "ಪೂಜ್ಯನೆ! ನಾವು ಏನನ್ನು ಮಾಡೋಣ. ಆಶ್ರಯವಿಲ್ಲದ ನಾವು ಎಲ್ಲಿಗೆ ಹೋಗೋಣ. ಆದ್ದರಿಂದ ದುಷ್ಟನಾದ ಮಹಿಷನನ್ನು ಕೊಲ್ಲುವ ಉಪಾಯವನ್ನು ಹೇಳು.

೧೨. ದೇವತೆಗಳು ಹೀಗೆನ್ನಲು ಬೃಹಸ್ಪತಿಯು ಬಹಳ ಹೊತ್ತು ಆಲೋಚಿಸಿ ದೇವತೆಗಳನ್ನು ಕುರಿತು ಅವರನ್ನು ಬದುಕಿಸುವನಂತೆ ಇಂತೆಂದನು.

ಬೃಹಸ್ಪತಿರುವಾಚ :—
ಬ್ರಹ್ಮಲಬ್ಧವರೋ ದೈತ್ಯಃ ಪೌರುಷೇ ಚ ವ್ಯವಸ್ಥಿತಃ ।
ಅವಧ್ಯಃ ಸರ್ವದೇವಾನಾಂ ಮುಕ್ತ್ವೈಕಾಂ ಯೋಷಿತಂ ಸುರಾಃ ।
ವ್ರಜಧ್ವಂ ಸಹಿತಾಸ್ತಸ್ಮಾದರ್ಬುದಂ ಪರ್ವತೋತ್ತಮಂ ॥ ೧೩ ॥
ತಪೋಽರ್ಥಂ ತತ್ರ ಸಂಸಿದ್ಧಿರ್ಜಾಯತಾಮಚಿರಾದ್ಧಿ ವಃ ।
ಶಕ್ತಿರೂಪಾಂ ಪರಾಂ ದೇವೀಂ ಚಂಡಿಕಾಂ ಕಾಮರೂಪಿಣೀಂ ॥ ೧೪ ॥
ಆರಾಧಯಧ್ವಮೇಕಾಂತೇ ಯಯಾ ವ್ಯಾಪ್ತಮಿದಂ ಜಗತ್ ।
ಸಾ ತುಷ್ಟಾ ವೈ ವಧಾರ್ಥಂ ತು ಮಹಿಷಸ್ಯ ದುರಾತ್ಮನಃ ॥ ೧೫ ॥
ಕರಿಷ್ಯತಿ ಸಮುದ್ಯೋಗಮವತಾರಸಮುದ್ಭವಂ ।
ತಸ್ಯಾ ಹಸ್ತೇನ ಸೋಽವಶ್ಯಂ ವಧಂ ಪ್ರಾಪ್ಸ್ಯತಿ ದುರ್ಮತಿಃ ॥ ೧೬ ॥
ಅಹಂ ವಃ ಕೀರ್ತಯಿಷ್ಯಾಮಿ ಶಕ್ತಿಮಂತ್ರಮನುತ್ತಮಂ ।
ಪೂಜಾವಿಧಾನಸಂಯುಕ್ತಂ ಭುಕ್ತಿಮುಕ್ತಿಪ್ರದಂ ಶುಭಂ ॥ ೧೭ ॥
ಪುಲಸ್ತ್ಯ ಉವಾಚ :—
ಏವಮುಕ್ತಾಃ ಸುರಾಃ ಸರ್ವೇ ಹರ್ಷೇಣ ಮಹತಾನ್ವಿತಾಃ ।
ತೇನೈವ ಸಹಿತಾ ರಾಜನ್ಗತಾಃ ಪರ್ವತಮರ್ಬುದಂ ॥ ೧೮ ॥

---

೧೩-೧೬. ಬೃಹಸ್ಪತಿಯು ಹೇಳುತ್ತಾನೆ :—ದೇವತೆಗಳೆ ! ಬ್ರಹ್ಮನಿಂದ ವರವನ್ನು ಪಡೆದು ಪರಾಕ್ರಮವನ್ನೆಸಗುವ ಆ ಮಹಿಷನನ್ನು ಒಬ್ಬ ಸ್ತ್ರೀಯನ್ನು ಬಿಟ್ಟು ಬೇರೆ ಯಾರೂ ಕೊಲ್ಲಲಾರರು. ಆದ್ದರಿಂದ ನೀವೆಲ್ಲ ಸೇರಿ ತಪಸ್ಸಿಗಾಗಿ ಅರ್ಬುದ ಪರ್ವತಕ್ಕೆ ಹೋಗಿರಿ. ಶೀಘ್ರವಾಗಿ ನಿಮ್ಮ ತಪಸ್ಸು ಫಲೋನ್ಮುಖವಾಗಲಿ. ನೀವು ಪರಾಶಕ್ತಿರೂಪಳೂ, ಸ್ವೇಚ್ಛಾರೂಪಿಣಿಯೂ ಆದ ಚಂಡಿಕೆಯನ್ನು ರಹಸ್ಯದಲ್ಲಿ ಆರಾಧಿಸಿರಿ. ಈ ಜಗತ್ತನ್ನು ವ್ಯಾಪಿಸಿರುವ ಅವಳು ಸಂತುಷ್ಟಳಾಗಿ ದುರಾತ್ಮನಾದ ಮಹಿಷನ ವಧೆಗಾಗಿ ಅವತರಿಸುವಳು. ಆ ದುರುಳನು ಅವಳ ಕೈಯಿಂದ ಅವಶ್ಯವಾಗಿ ಮಡಿಯುವನು.

೧೭. ನಾನು ನಿಮಗೆ ಪೂಜಾವಿಧಿಯಿಂದ ಸಹಿತವೂ, ಭುಕ್ತಿಮುಕ್ತಿಗಳನ್ನೀಯುವುದೂ ಆದ ಉತ್ತಮ ಶಕ್ತಿಮಂತ್ರವನ್ನು ಉಪದೇಶ ಮಾಡುವೆನು.

೧೮. ಪುಲಸ್ತ್ಯನು ಹೇಳುತ್ತಾನೆ.—ಬೃಹಸ್ಪತಿಯು ಹೀಗೆನ್ನಲು ದೇವತೆಗಳೆಲ್ಲ ಅತ್ಯಂತ ಸಂತೋಷದಿಂದ ಸಹಿತರಾಗಿ ಆ ಬೃಹಸ್ಪತಿಯೊಡನೆ ಅರ್ಬುದಾಚಲಕ್ಕೆ ತೆರಳಿದರು.

ತತ್ರ ಸ್ನಾತಾಞ್ಛುಚೀನ್ಸರ್ವಾನ್ದೀಕ್ಷಯಾಮಾಸ ಗೀಷ್ಪತಿಃ ।
ಶಕ್ತಿಯೈಃ ಪರಮೈರ್ಮಂತ್ರೈಃ ಸದ್ಯಃ ಸಿದ್ಧಿಕರೈರ್ನೃಪ ॥ ೧೯ ॥
ಸಾರ್ಧಯಾಮತ್ರಯಂ ತತ್ರ ಪರಿವಾರಸಮನ್ವಿತಾಃ ।
ಬಲಿಪೂಜೋಪಹಾರೈಶ್ಚ ಗಂಧಮಾಲ್ಯಾನುಲೇಪನೈಃ ॥ ೨೦ ॥
ಮಂತ್ರೇಣ ವಿವಿಧೇನೈವ ಚಾರುಸ್ತೋತ್ರೇಣ ಭಕ್ತಿತಃ ।
ಪ್ರಾರ್ಥಯಂತಸ್ತಥಾ ನಿತ್ಯಂ ದೀಪಜ್ಯೋತಿಃ ಸಮಾಹಿತಾಃ ॥ ೨೧ ॥
ನಿರ್ಮಮಾ ನಿರಹಂಕಾರಾ ಗುರುಭಕ್ತಿಪರಾಯಣಾಃ ।
ಅಂಗನ್ಯಾಸಸಮಾಯುಕ್ತಾಃ ಸಮದರ್ಶಿತ್ವಮಾಗತಾಃ ॥ ೨೨ ॥
ಏವಂ ಸಂತಿಷ್ಠಮಾನಾನಾಂ ತೇಷಾಂ ಪಾರ್ಥಿವಸತ್ತಮ ।
ಸಪ್ತ ಮಾಸಾ ವ್ಯತಿಕ್ರಾಂತಾಸ್ತತಸ್ತುಷ್ಟಾ ಸುರೇಶ್ವರೀ ॥ ೨೩ ॥
ದೀಪಜ್ಯೋತಿಃಸಮಾವೇಶಾತ್ತೇಷಾಂ ಗಾತ್ರೇಷು ಪಾರ್ಥಿವ ।
ಮಂತ್ರೇಣ ಪರಿಪೂತಾನಾಂ ಪರಂ ತೇಜೋ ವ್ಯವರ್ಧತ ॥ ೨೪ ॥
ದ್ವಾದಶಾರ್ಕಪ್ರಭಾ ಜಾತಾಃ ಷಣ್ಮಾಸಾಭ್ಯಂತರೇಣ ತೇ ।
ಅಥ ತಾಂಸ್ತೇಜಸಾ ಯುಕ್ತಾಞ್ಜ್ಞಾತ್ವಾ ಜೀವೋ ಮಹೀಪತೇ ॥ ೨೫ ॥

---

೧೯. ಬೃಹಸ್ಪತಿಯು ಅಲ್ಲಿ ಮಿಂದು ಶುದ್ಧರಾದ ಆ ದೇವತೆಗಳನ್ನು ಕೂಡಲೆ ಸಿದ್ಧಿಯನ್ನುಂಟುಮಾಡುವ ಉತ್ತಮವಾದ ಶಕ್ತಿ ಮಂತ್ರದಿಂದ ದೀಕ್ಷೆಗೊಳಿಸಿದನು.

೨೦—೨೨. ಅಲ್ಲಿ ಅವರು ಮೂರುವರೆ ಯಾಮಕಾಲ ಪರಿವಾರ ಸಹಿತರೂ, ಬಲಿ, ಪೂಜೆ, ಕಾಣಿಕೆ, ನಾನಾವಿಧ ಮಂತ್ರ, ಮನೋಹರ ಸ್ತೋತ್ರ ಇವುಗಳಿಂದ ನಿತ್ಯವೂ ಪಾರ್ಥಿಸುವವರೂ, ದ್ವೀಪಜ್ವಾಲೆಯಿಂದ ಸಹಿತರೂ, ಅಹಂಕಾರ ಮಮಕಾರ ವಿಲ್ಲದವರೂ, ಗುರುಭಕ್ತಿನಿರತರೂ, ಅಂಗನ್ಯಾಸಗಳುಳ್ಳವರೂ ಸಮದರ್ಶಿಗಳೂ ಆಗಿದ್ದರು.

೨೩. ದೊರೆಯೆ! ಹೀಗೆ ಅವರು ಇರಲು ಏಳು ತಿಂಗಳು ಕಳೆದುವು. ಆಗ ದೇವಿಯು ಸಂತುಷ್ಟಳಾದಳು.

೨೪. ಮಂತ್ರದಿಂದ ಶುದ್ಧವಾದ ಅವರ ದೇಹಗಳಲ್ಲಿ ದೀಪಜ್ಯೋತಿಯ ಸಂಬಂಧದಿಂದ ಅತ್ಯಂತ ತೇಜಸ್ಸು ವೃದ್ಧಿಗೊಂಡಿತು.

೨೫—೨೭. ಅವರು ಆರು ತಿಂಗಳೊಳಗೆ ದ್ವಾದಶಾದಿತ್ಯರಂತೆ ಕಾಂತಿಯುಳ್ಳವ ರಾದರು. ದೊರೆಯೆ! ಅನಂತರ ಬೃಹಸ್ಪತಿಯು ಅವರು ತೇಜಸ್ವಿಗಳಾಗಿರುವು

ಮಂಡಲಂ ರಚಯಾಮಾಸ ಸರ್ವಸಿದ್ಧಿಪ್ರದಾಯಕಂ ।
ಉಪವೇಶ್ಯ ತತಃ ಸರ್ವಾನ್ಸಮಸ್ತಾಂಸ್ತ್ರಿದಶಾಲಯಾನ್ ॥ ೨೬ ॥
ತೇಷಾಂ ಶರೀರಗಂ ತೇಜಃ ಶಕ್ತಿಯೈರ್ಮಂತ್ರಸತ್ತಮೈಃ ।
ಆಕೃಷ್ಯ ನ್ಯಸಯಾಮಾಸ ಮಂಡಲೇ ತತ್ರ ಪಾರ್ಥಿವ ॥ ೨೭ ॥
ತತಸ್ತೇಜೋಮಯೀ ಕನ್ಯಾ ತತ್ರ ಜಾತಾ ಸ್ವರೂಪಿಣೀ ।
ಶಕ್ತಿರೂಪಾ ಮಹಾಕಾಯಾ ದಿವ್ಯಲಕ್ಷಣಲಕ್ಷಿತಾ ॥ ೨೮ ॥
ಇಂದ್ರಸ್ತಸ್ಯೈ ದದೌ ವಜ್ರಂ ಸ್ವಪಾಶಂ ಚ ಜಲೇಶ್ವರಃ ।
ಶಕ್ತಿಂ ಚ ಭಗವಾನಗ್ನಿಃ ಸಿಂಹಯಾನಂ ಧನಾಧಿಪಃ ॥ ೨೯ ॥
ಅನ್ಯೇ ಚೈವ ಗಣಾಃ ಸರ್ವೇ ನಿಜಶಸ್ತ್ರಾಣಿ ಹರ್ಷಿತಾಃ ।
ತಸ್ಯೈ ದದುರ್ನೃಪಶ್ರೇಷ್ಠ ಸ್ತುತಿಂ ಚಕ್ರುಃ ಸಮಾಹಿತಾಃ ॥ ೩೦ ॥

ದೇವಾ ಊಚುಃ :—

ನಮಸ್ತೇ ದೇವದೇವೇಶಿ ನಮಸ್ತೇ ಕಾಂಚನಪ್ರಭೇ ।
ನಮಸ್ತೇ ಪದ್ಮಪತ್ರಾಕ್ಷಿ ನಮಸ್ತೇ ಜಗದಂಬಿಕೇ ॥ ೩೧ ॥
ನಮಸ್ತೇ ವಿಶ್ವರೂಪೇ ಚ ನಮಸ್ತೇ ವಿಶ್ವಸಂಸ್ತುತೇ ।
ತ್ವಂ ಮತಿಸ್ತ್ವಂ ಧೃತಿಃ ಕಾಂತಿಸ್ತ್ವಂ ಸುಧಾ ತ್ವಂ ವಿಭಾವರೀ ॥ ೩೨ ॥

---

ದನ್ನರಿತು, ಸಕಲ ಸಿದ್ಧಿಯನ್ನೀಯುವ ಮಂಡಲವನ್ನು ರಚಿಸಿ ಆ ದೇವತೆಗಳನ್ನೆಲ್ಲ ಕುಳ್ಳಿರಿಸಿ ಆ ಮಂಡಲದಲ್ಲಿ ಶಕ್ತಿಮಂತ್ರಗಳಿಂದ ಅವರ ಶರೀರದ ತೇಜಸ್ಸನ್ನು ಆಕರ್ಷಿಸಿ ಇಟ್ಟನು.

೨೮. ಅನಂತರ ಅಲ್ಲಿ ತೇಜೋರೂಪಳೂ, ಶಕ್ತಿರೂಪಳೂ, ದೊಡ್ಡದೇಹವುಳ್ಳವಳೂ, ದಿವ್ಯಲಕ್ಷಣಗಳುಳ್ಳವಳೂ ಆದ ಕನ್ಯೆಯು ಉದ್ಭವಿಸಿದಳು.

೨೯–೩೦. ಇಂದ್ರನು ಅವಳಿಗೆ ವಜ್ರವನ್ನೂ, ವರುಣನು ತನ್ನ ಪಾಶವನ್ನೂ, ಅಗ್ನಿಯು ಶಕ್ತಿಯನ್ನೂ, ಕುಬೇರನು ಸಿಂಹವಾಹನವನ್ನೂ, ಇತರ ಗಣಗಳು ತಮ್ಮ ಶಸ್ತ್ರಗಳನ್ನೂ, ಸಂತೋಷದಿಂದ ಕೊಟ್ಟು ಸಾವಧಾನ ಮನಸ್ಸಿನಿಂದ ಅವಳನ್ನು ಸ್ತುತಿಸಿದರು.

೩೧. ದೇವತೆಗಳು ಹೇಳುತ್ತಾರೆ :—ದೇವದೇವೇಶಿಯೂ, ಸುವರ್ಣದಂತೆ ಕಾಂತಿಯುಳ್ಳವಳೂ, ತಾವರೆ ದಳದಂತೆ ಕಣ್ಣುಗಳುಳ್ಳವಳೂ, ಜಗನ್ಮಾತೆಯೂ ಆದ ದೇವಿಯೇ ! ನಿನಗೆ ನಮಸ್ಕಾರವು.

೩೨–೩೪. ವಿಶ್ವರೂಪಳೂ, ಸಮಸ್ತರಿಂದ ಸ್ತುತಿಸಲ್ಪಡುವವಳೂ ಆದ ದೇವಿಯೆ! ನಿನಗೆ ನಮಸ್ಕಾರವು. ನೀನು ಮತಿಯೂ, ಧೈರ್ಯವೂ, ಕಾಂತಿಯೂ, ಅಮೃತವೂ, ರಾತ್ರಿಯೂ, ಕ್ಷಮೆಯೂ, ಬುದ್ಧಿಯೂ, ಪ್ರಭೆಯೂ, ಸ್ವಾಹೆಯೂ, ಸಾವಿತ್ರಿಯೂ,

ಕ್ಷಮಾ ಬುದ್ಧಿಃ ಪ್ರಭಾ ಸ್ವಾಹಾ ಸಾವಿತ್ರೀ ಕಮಲಾ ಸತೀ ।
ತ್ವಂ ಗೌರೀ ತ್ವಂ ಮಹಾಮಾಯಾ ಚಾಮುಂಡಾ ತ್ವಂ ಸರಸ್ವತೀ ॥ ೩೩ ॥
ಭೈರವೀ ಭೀಷಣಾಕಾರಾ ಚಂಡಮುಂಡಾಸಿಧಾರಿಣೀ ।
ಭೂತಪ್ರಿಯಾ ಮಹಾಕಾಯಾ ಘಟಾಲೀ ವಿಕ್ರಮೋತ್ಕಟಾ ॥ ೩೪ ॥
ಮದ್ಯಮಾಂಸಪ್ರಿಯಾ ನಿತ್ಯಂ ಭಕ್ತತ್ರಾಣಪರಾಯಣಾ ।
ತ್ವಯಾ ವ್ಯಾಪ್ತಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೩೫ ॥

ಪುಲಸ್ತ್ಯ ಉವಾಚ :—

ಏವಂ ಸ್ತುತಾ ಸುರೈಃ ಸರ್ವೈಸ್ತತೋ ದೇವೀ ಪ್ರಹರ್ಷಿತಾ ।
ತಾನಬ್ರವೀದ್ವರಂ ಸರ್ವಾ ಗೃಹ್ಣಂತು ಮಮ ದೇವತಾಃ । ॥ ೩೬ ॥

ದೇವಾ ಊಚುಃ :—

ದಾನವೋ ಮಹಿಷೋನಾಮ ಪಿತಾಮಹವರಾನ್ವಿತಃ ।
ಅವಧ್ಯಃ ಸರ್ವಭೂತಾನಾಂ ದೇವಾನಾಂ ಚ ತಥಾ ಕೃತಃ ॥ ೩೭ ॥
ಮುಕ್ತ್ವೈಕಾಂ ಯೋಷಿತಂ ದೇವಿ ತಸ್ಮಾತ್ತ್ವಂ ವಿನಿಪಾತಯ ॥ ೩೮ ॥

ದೇವ್ಯುವಾಚ :—

ಗಚ್ಛಧ್ವಂ ತ್ರಿದಶಾಃ ಸರ್ವೇ ಸ್ವಾನಿ ಸ್ಥಾನಾನಿ ನಿರ್ವೃತಾಃ ॥ ೩೯ ॥

---

ಲಕ್ಷ್ಮಿಯೂ, ಪಾರ್ವತಿಯೂ, ಮಹಾಮಾಯೆಯೂ, ಚಾಮುಂಡಿಯೂ, ಸರಸ್ವತಿಯೂ, ಭೈರವಿಯೂ, ಭಯಂಕರವಾದ ಆಕಾರವುಳ್ಳವಳೂ, ಭಯಂಕರವಾದ ಮುಂಡ, ಕತ್ತಿಗಳನ್ನು ಧರಿಸಿದವಳೂ, ಭೂತಪ್ರಿಯಳೂ, ದೊಡ್ಡ ಶರೀರವುಳ್ಳವಳೂ, ಪರಾಕ್ರಮದಿಂದ ಭಯಂಕರಳೂ, ಮದ್ಯ, ಮಾಂಸಗಳಲ್ಲಿ ಪ್ರೀತಿಯುಳ್ಳವಳೂ, ಯಾವಾಗಲೂ ಭಕ್ತರನ್ನು ಕಾಪಾಡುವುದರಲ್ಲಿ ಆಸಕ್ತಳೂ ಆಗಿರುವೆ. ನೀನು ಚರಾಚರಾತ್ಮಕವಾದ ಮೂರು ಲೋಕಗಳನ್ನು ವ್ಯಾಪಿಸಿರುವೆ.

೩೬. ಪುಲಸ್ತ್ಯನು ಹೇಳುತ್ತಾನೆ :— ದೇವತೆಗಳು ಹೀಗೆ ಸ್ತುತಿಸಲು ಆ ದೇವಿಯು ಸಂತೋಷಗೊಂಡು ಅವರನ್ನು ಕುರಿತು, " ಎಲೈ ದೇವತೆಗಳೆ ! ನೀವೆಲ್ಲ ನನ್ನಿಂದ ವರವನ್ನು ವರಿಸಿರಿ " ಎಂದಳು.

೩೭–೩೮. ದೇವತೆಗಳು ಹೇಳುತ್ತಾರೆ :— ದೇವಿ ! ಮಹಿಷನೆಂಬ ದಾನವನು ಬ್ರಹ್ಮನಿಂದ ವರವನ್ನು ಪಡೆದು ಒಬ್ಬ ಸ್ತ್ರೀಯನ್ನು ಬಿಟ್ಟು ಸಕಲ ಪ್ರಾಣಿಗಳಿಗೂ, ದೇವತೆಗಳಿಗೂ ಅವಧ್ಯನಾಗಿರುವನು ಆದ್ದರಿಂದ ನೀನನವನನ್ನು ವಧಿಸು.

೩೯. ದೇವಿಯು ಹೇಳುತ್ತಾಳೆ :— ದೇವತೆಗಳೇ ! ನೀವೆಲ್ಲ ಸುಖದಿಂದ ನಿಮ್ಮ ಸ್ಥಾನಗಳಿಗೆ ತೆರಳಿರಿ.

ಅಹಂ ತಂ ಸೂದಯಿಷ್ಯಾಮಿ ಸಮಯೋ ಪರ್ಯುಪಸ್ಥಿತೇ ।
ಏವಮುಕ್ತಾ ಗತಾಃ ಸರ್ವೇ ದೇವಾಃ ಸ್ಥಾನಾನಿ ಹರ್ಷಿತಾಃ ॥ ೪೦ ॥
ದೇವೀ ತತ್ರೈವ ಸಂಹೃಷ್ಟಾ ಸ್ಥಿತಾ ಪರ್ವತಕೋಽಧಸಿ ।
ಕಸ್ಯಚಿತ್ತ್ವಥ ಕಾಲಸ್ಯ ನಾರದೋ ಭಗವಾನ್ಮುನಿಃ ॥ ೪೧ ॥
ತತ್ರ ದೇವೀಂ ಚ ಸಂದೃಷ್ಟ್ವಾ ತೀರ್ಥಯಾತ್ರಾಪರಾಯಣಃ ।
ತ್ರಿವಿಷ್ಟಪಮನುಪ್ರಾಪ್ತೋ ಮಹಿಷೋ ಯತ್ರ ತಿಷ್ಠತಿ ॥ ೪೨ ॥
ತತ್ರ ದೃಷ್ಟ್ವಾ ಮುನಿಂ ಪ್ರಾಪ್ತಂ ಪ್ರಣಮ್ಯ ಮಹಿಷಾಸುರಃ ।
ವಿನಯೇನ ಸಮಾಯುಕ್ತೋ ಹ್ಯಭ್ಯುತ್ಥಾನಮಥಾಕರೋತ್ ॥ ೪೩ ॥
ತತಸ್ತಂ ಪೂಜಯಾಮಾಸ ಮಧುಪರ್ಕಾರ್ಘ್ಯವಿಷ್ಟರೈಃ ।
ಸುಖಾಸೀನಂ ಸುವಿಶ್ರಾಂತಂ ಜ್ಞಾತ್ವಾ ವಾಕ್ಯಮುವಾಚ ಹ ॥ ೪೪ ॥
ಕುತೋ ಭವಾನಿತಃ ಪ್ರಾಪ್ತಃ ಕಿಮರ್ಥಂ ಮುನಿಸತ್ತಮ ।
ಅಮೀ ಪುತ್ರಾಸ್ತಥಾ ರಾಜ್ಯಂ ಕಲತ್ರಾಣಿ ಧನಾನಿ ಚ ॥ ೪೫ ॥
ಅಹಂ ಭೃತ್ಯಸಮಾಯುಕ್ತಃ ಕಿಮನೇನ ದ್ವಿಜೋತ್ತಮ ।
ಸರ್ವಂ ತೇಽಹಂ ಪ್ರದಾಸ್ಯಾಮಿ ಬ್ರೂಹಿ ಯೇನ ಪ್ರಯೋಜನಂ ॥ ೪೬ ॥

---

೪೦. ಕಾಲವೊದಗಲು ನಾನು ಆ ದೈತ್ಯನನ್ನು ಕೊಲ್ಲುವೆನು". ದೇವಿಯು ಹೀಗೆ ಹೇಳಲು ದೇವತೆಗಳೆಲ್ಲ ಸಂತೋಷದಿಂದ ತಮ್ಮ ಸ್ಥಾನಗಳಿಗೆ ಹೋದರು.

೪೧–೪೨. ದೇವಿಯು ಸಂತೋಷದಿಂದ ಆ ಪರ್ವತದ ತಪ್ಪಲಲ್ಲಿ ಇದ್ದಳು. ಕೆಲವು ಕಾಲದ ಮೇಲೆ ತೀರ್ಥಯಾತ್ರಾ ನಿರತನಾದ ನಾರದ ಮಹಾಮುನಿಯು ಅಲ್ಲಿ ದೇವಿಯನ್ನು ನೋಡಿ ಮಹಿಷನು ವಾಸವಾಗಿರುವ ಸ್ವರ್ಗಕ್ಕೆ ತೆರಳಿದನು.

೪೩. ಅಲ್ಲಿ ಮಹಿಷಾಸುರನು ನಾರದ ಮುನಿಯನ್ನು ಕಂಡು ವಂದಿಸಿ ವಿನಯದಿಂದ ಮೇಲಕ್ಕೆದ್ದನು.

೪೪. ಅನಂತರ ಅವನನ್ನು ಮಧುಪರ್ಕ, ಅರ್ಘ್ಯ, ಆಸನಗಳಿಂದ ಪೂಜಿಸಿ ಅವನು ವಿಶ್ರಾಂತಿಗೊಂಡು ಸುಖವಾಗಿ ಕುಳಿತಿರುವುದನ್ನು ತಿಳಿದು ಇಂತೆಂದನು.

೪೫–೪೬. "ಮುನಿವರ್ಯನೆ ! ನೀನು ಏತಕ್ಕಾಗಿ ಇಲ್ಲಿಗೆ ಬಂದಿರುವೆ? ಈ ನನ್ನ ಪುತ್ರರೂ, ರಾಜ್ಯವೂ, ಪತ್ನಿಯರೂ, ದ್ರವ್ಯಗಳೂ, ಭೃತ್ಯರಿಂದ ಕೂಡಿದ ನಾನೂ ನಿನ್ನ ಅಧೀನರು. ಈ ಮಾತಿನಿಂದೇನು ? ಎಲ್ಲವನ್ನೂ ನಿನಗೀಯುವೆನು. ನಿನಗೆ ಯಾವುದ ರಿಂದ ಏನು ಪ್ರಯೋಜನವಾಗಬೇಕು?

ನಾರದ ಉವಾಚ :—
ಅಭಿನಂದಾಮಿ ತೇ ಸರ್ವಮೇತತ್ತ್ವಯ್ಯುಪಪದ್ಯತೇ ।
ನಿಃಸ್ಪೃಹಾ ಹಿ ವಯಂ ನಿತ್ಯಂ ಮುನಿಧರ್ಮಂ ಸಮಾಶ್ರಿತಾಃ ॥ ೪೭ ॥
ಕೌತೂಹಲಾದಿಹ ಪ್ರಾಪ್ತಶ್ಚಿರಾತ್ತೇ ದರ್ಶನಂ ಗತಃ ।
ಮರ್ತ್ಯಲೋಕಾತ್ಸಮಾಯಾತೋ ಯಾಸ್ಯಾಮಿ ಬ್ರಹ್ಮಣಃ ಪದಂ ॥ ೪೮ ॥
ಮಹಿಷಾಸುರ ಉವಾಚ :—
ಕ್ವಚಿದ್ದೃಷ್ಟಂ ತ್ವಯಾ ಕಿಂಚಿದಾಶ್ಚರ್ಯಂ ಭೂತಲೇ ಮುನೇ ।
ದೈವಂ ವಾ ಮಾನುಷಂ ವಾಪಿ ದಾನವಾ ಲಂಭಿತಾ ವಿಭೋ ॥ ೪೯ ॥
ನಾರದ ಉವಾಚ :—
ಅತ್ಯಾಶ್ಚರ್ಯಂ ಮಯಾ ದೃಷ್ಟಂ ದಾನವೇಂದ್ರ ಧರಾತಲೇ ।
ಯನ್ನ ದೃಷ್ಟಂ ಕ್ವಚಿತ್ಪೂರ್ವಂ ತ್ರೈಲೋಕ್ಯೇ ಸಚರಾಚರೇ ॥ ೫೦ ॥
ಅಸ್ತ್ಯರ್ಬುದ ಇತಿ ಖ್ಯಾತಃ ಪರ್ವತೋ ಧರಣೀತಲೇ ।
ಸರ್ವರ್ತುಪುಷ್ಪಿತೈರ್ವೃಕ್ಷೈಃ ಶೋಭಿತಃ ಸ್ವರ್ಗಸನ್ನಿಭಃ ॥ ೫೧ ॥
ಬಕುಲೈಶ್ಚಂಪಕೈಶ್ಚಾಮ್ರೈರಶೋಕೈಃ ಕರ್ಣಿಕಾರಕೈಃ ।
ಶಾಲೈಸ್ತಾಲೈಶ್ಚ ಖರ್ಜೂರೈರ್ವಟೈರ್ಭಲ್ಲಾತಕೈರ್ಧವೈಃ ॥ ೫೨ ॥

---

೪೭. ನಾರದನು ಹೇಳುತ್ತಾನೆ :—ನಿನ್ನೆಲ್ಲ ಮಾತಿಗೂ ನಾನು ಸಂತೋಷಪಡುವೆನು. ಇದೆಲ್ಲ ನಿನಗೆ ಸಾಧ್ಯವು. ಮುನಿಧರ್ಮವನ್ನಾಶ್ರಯಿಸಿದ ನಾವು ಆಶೆಯಿಲ್ಲದವರು.

೪೮. ಬಹುಕಾಲದ ಮೇಲೆ ನಾನು ಭೂಮಿಯಿಂದ ಇಲ್ಲಿಗೆ ಬಂದು ಕುತೂಹಲದಿಂದ ನಿನಗೆ ದರ್ಶನವನ್ನಿತ್ತಿರುವೆನು. ಈಗ ಬ್ರಹ್ಮಲೋಕಕ್ಕೆ ತೆರಳುವೆನು.

೪೯. ಮಹಿಷಾಸುರನು ಹೇಳುತ್ತಾನೆ :—ಮುನಿಯೆ ! ನೀನು ಭೂಮಿಯಲ್ಲಿ ಎಲ್ಲಿಯಾದರೂ ಆಶ್ಚರ್ಯಕರವಾದ ಒಂದು ವಿಷಯವನ್ನು ನೋಡಿದೆಯೊ ? ಸ್ವಾಮಿ ! ದಾನವರು ಅಂತಹ ದೈವ ಅಥವಾ ಮಾನುಷ ಸಂಬಂಧವಾದ ಆಶ್ಚರ್ಯಕರವಾದ ವಸ್ತುವನ್ನು ಪಡೆದಿರುವರೊ ?

೫೦. ನಾರದನು ಹೇಳುತ್ತಾನೆ :—ದಾನವೋತ್ತಮನೇ ನಾನು ಚರಾಚರಾತ್ಮಕವಾದ ಮೂರುಲೋಕಗಳಲ್ಲಿ ಕಾಣದ ಒಂದು ಆಶ್ಚರ್ಯವನ್ನು ಭೂಮಿಯಲ್ಲಿ ನೋಡಿರುವೆನು.

೫೧—೫೪. ಭೂಮಿಯಲ್ಲಿ ಎಲ್ಲ ಋತುಗಳಲ್ಲಿಯೂ ಹೂವನ್ನು ಬಿಡುವ ಬಕುಲ, ಸಂಪಿಗೆ, ಮಾವು, ಅಶೋಕ, ಬೆಟ್ಟತಾವರೆ, ಸಾಲ, ತಾಳೆ, ಖರ್ಜೂರ, ಆಲ, ಭಲ್ಲಾ

ಸರಲೈಃ ಪನಸೈರ್ವೃಕ್ಷೈಸ್ತಿಂದುಕೈಃ ಕರವೀರಕೈಃ ।
ಮಂದಾರೈಃ ಪಾರಿಜಾತೈಶ್ಚ ಮಲಯೈಶ್ಚಂದನೈಸ್ತಥಾ ॥ ೫೩ ॥
ಪುಷ್ಪಜಾತಿವಿಶೇಷೈಶ್ಚ ಸುಗಂಧೈರಪ್ಯನೇಕಶಃ ।
ಖಾದ್ಯೈಃ ಸರ್ವೈಸ್ತಥಾ ಲೇಹ್ಯೈಶ್ಚೋಷ್ಯೈಃ ಫಲವರೈರ್ವೃತಃ ॥ ೫೪ ॥
ನ ಸ ವೃಕ್ಷೋ ನ ಸಾ ವಲ್ಲೀ ನೌಷಧೀ ಸಾ ಧರಾತಲೇ ।
ನ ತತ್ರ ಯಾಽಸುರಜ್ಯೇಷ್ಠ ಪರ್ವತೇ ವೀಕ್ಷಿತಾ ಮಯಾ ॥ ೫೫ ॥
ಪಕ್ಷಿಣೋ ಮಧುರಾರಾವಾಶ್ಚಕೋರಶಿಖಿಚಾತಕಾಃ ।
ಕೋಕಿಲಾ ಧಾರ್ತರಾಷ್ಟ್ರಾಶ್ಚ ಭ್ರಮರಾಃ ಶ್ವೇತಪತ್ರಕಾಃ ॥ ೫೬ ॥
ಯೇಷಾಂ ಶಬ್ದಂ ಸಮಾಕರ್ಣ್ಯ ಮುನಯೋಽಪಿ ಸಮಾಹಿತಾಃ ।
ಕ್ಷೋಭಂ ಯಾಂತಿ ತ್ರಿಕಾಲಜ್ಞಾಃ ಕಂದರ್ಪಶರಪೀಡಿತಾಃ ॥ ೫೭ ॥
ನಿರ್ಝರಾಣಿ ಸುರಮ್ಯಾಣಿ ನದ್ಯಶ್ಚ ವಿಮಲೋದಕಾಃ ।
ಪದ್ಮಿನೀಖಂಡಸಂಯುಕ್ತಾ ಹ್ರದಾಃ ಶತಸಹಸ್ರಶಃ ॥ ೫೮ ॥
ಪದ್ಮಪತ್ರವಿಶಾಲಾಕ್ಷಾ ಮಧ್ಯಕ್ಷಾಮಾಃ ಶುಚಿಸ್ಮಿತಾಃ ।
ವಿವೇಕಿನೋ ನರಾಸ್ತತ್ರ ಶಾಸ್ತ್ರವ್ರತಸಮನ್ವಿತಾಃ ॥ ೫೯ ॥

---

ತಕ, ಧವ, ಸರಳ, ಹಲಸು, ತಿಂದುಕ, ಕಣಗಲೆ, ಮಂದಾರ, ಪಾರಿಜಾತ, ಗಂಧ ಮೊದಲಾದ, ಮರಗಳಿಂದಲೂ, ಅನೇಕ ಸುಗಂಧವಾದ ಹೂವಿನ ಮರಗಳಿಂದಲೂ, ಖಾದ್ಯ, ಲೇಹ್ಯ, ಚೋಷ್ಯಗಳಾದ ಉತ್ತಮ ಫಲಗಳಿಂದಲೂ ಸಹಿತವಾದ ಅರ್ಬುದ ವೆಂಬ ಪರ್ವತವಿದೆ.

೫೫. ದಾನವೋತ್ತಮ ! ಆ ಪರ್ವತದಲ್ಲಿ ನಾನು ನೋಡದ ಮರವಾಗಲಿ, ಲತೆ ಯಾಗಲಿ, ಔಷಧಿಯಾಗಲಿ ಭೂಮಿಯಲ್ಲಿಲ್ಲ.

೫೬–೫೭. ಅಲ್ಲಿ ತ್ರಿಕಾಲಜ್ಞಾನಿಗಳಾದ ಮುನಿಗಳೂ ಇಂಪಾಗಿ ಕೂಗುವ ಚಕೋರ, ನವಿಲು, ಚಾತಕ, ಕೋಗಿಲೆ, ಹಂಸ, ತುಂಬಿ ಇವುಗಳ ಶಬ್ದವನ್ನು ಕೇಳಿ ಮಾನವರು ಮನ್ಮಥ ಬಾಣಗಳಿಂದ ಪೀಡಿತರಾಗಿ ಚಂಚಲಚಿತ್ತರಾಗುವರು.

೫೮. ಅಲ್ಲಿ ಮನೋಹರಗಳಾದ ಕೊಳಗಳೂ, ಶುದ್ಧವಾದ ನೀರುಳ್ಳ ನದಿಗಳೂ, ತಾವರೆ ಬಳ್ಳಿಗಳಿಂದ ಕೂಡಿದ ಸಾವಿರಾರು ಮಡುಗಳೂ ಇವೆ.

೫೯. ಅಲ್ಲಿ ಮನುಷ್ಯರು ತಾವರೆ ದಳದಂತೆವಿಶಾಲವಾದ ಕಣ್ಣುಗಳುಳ್ಳವರೂ, ಕೃಶವಾದ ನಡುವುಳ್ಳವರೂ, ಬೆಳುನಗೆಯುಳ್ಳವರೂ, ವಿವೇಕಿಗಳೂ, ಶಾಸ್ತ್ರ ನಿಯಮ ಗಳಿಂದ ಕೂಡಿದವರೂ ಆಗಿರುವರು.

ಕಿಂ ಚಾತ್ರ ಬಹುನೋಕ್ತೇನ ಯತ್ಕಿಂಚಿತ್ತತ್ರ ಪರ್ವತೇ ।
ಸ್ವೇದಜಾಂಡಜಸಂಜ್ಞೇಯಾ ಉದ್ಭಿಜ್ಜಾಶ್ಚ ಜರಾಯುಜಾಃ ।
ಸರ್ವಲೋಕೋತ್ತರಾಸ್ತತ್ರ ದೃಶ್ಯಂತೇ ಪರ್ವತೋತ್ತಮೇ ॥ ೬೦ ॥
ದಶಯೋಜನವಿಸ್ತಾರೋ ದ್ವಾಭ್ಯಾಂ ಸಂಹಿತಪರ್ವತಃ ।
ಉಚ್ಚೈಃ ಪಂಚ ಚ ಸ ಶ್ರೀಮಾನ್ಮರ್ತ್ಯೇ ಸ್ವರ್ಗೋ ವ್ಯಜಾಯತ ॥ ೬೧ ॥
ತತ್ರಾಽಹಂ ಕೌತುಕಾವಿಷ್ಟ ಇತಶ್ಚೇತಶ್ಚ ವೀಕ್ಷಯನ್ ।
ಸರ್ವಾಶ್ಚರ್ಯಮಯೀಂ ನಾರೀಮಪಶ್ಯಂ ಲೋಕಸುಂದರೀಂ ॥ ೬೨ ॥
ನ ದೇವೀ ನಾಪಿ ಗಂಧರ್ವೀ ನಾಸುರೀ ನ ಚ ಮಾನುಷೀ ।
ತಾದೃಗ್ರೂಪಾ ಮಯಾ ದೃಷ್ಟಾ ನ ಶ್ರುತಾ ಚ ವರಾಂಗನಾ ॥ ೬೩ ॥
ರತಿಃ ಪ್ರೀತಿರುಮಾ ಲಕ್ಷ್ಮೀಃ ಸಾವಿತ್ರೀ ಚ ಸರಸ್ವತೀ ।
ತಸ್ಯಾ ರೂಪಸ್ಯ ಲೇಶೇನ ನೈತಾಸ್ತುಲ್ಯಾಃ ಸ್ತ್ರಿಯೋಽಖಿಲಾಃ ॥ ೬೪ ॥
ಅಹಂ ದೃಷ್ಟ್ವಾ ತಥಾರೂಪಾಂ ನಾರೀಂ ಕಾಮೇನ ಪೀಡಿತಃ ।
ತದಾ ದಾನವಶಾರ್ದೂಲ ವೈಕ್ಲವ್ಯಂ ಪರಮಂ ಗತಃ ॥ ೬೫ ॥
ತತೋ ಧೈರ್ಯಮವಷ್ಟಭ್ಯ ಮಯಾ ಮನಸಿ ಚಿಂತಿತಂ ।
ನ ಕರಿಷ್ಯೇ ಸಮಾಲಾಪಂ ತಯಾ ಸಹ ಚ ಕರ್ಹಿಚಿತ್ ॥ ೬೬ ॥

---

೬೦. ಹೆಚ್ಚು ಮಾತಿನಿಂದೇನು. ಆ ಉತ್ತಮ ಪರ್ವತದಲ್ಲಿರುವ ಕ್ರಿಮಿ ಕೀಟಗಳೂ, ಪಕ್ಷಿಗಳೂ, ಮರಗಳೂ, ಪಶುಗಳೂ ಸಮಸ್ತಲೋಕ ವಿಲಕ್ಷಣಗಳಾಗಿ ಕಾಣಿಸುವುವು.

೬೧. ಹತ್ತುಯೋಜನ ವಿಸ್ತಾರವೂ, ಎರಡು ಪರ್ವತಗಳಿಂದ ಕೂಡಿರುವುದೂ, ಐದುಯೋಜನ ಎತ್ತರವೂ ಆಗಿರುವ ಆ ಪರ್ವತವು ಭೂಮಿಯಲ್ಲಿ ಸ್ವರ್ಗವಾಯಿತು.

೬೨. ಅಲ್ಲಿ ನಾನು ಕುತೂಹಲದಿಂದ ಇಲ್ಲಿ ಅಲ್ಲಿ ನೋಡುತ್ತ ಸಕಲಾಶ್ಚರ್ಯ ರೂಪಳೂ, ಲೋಕಸುಂದರಿಯೂ ಆದ ಒಬ್ಬ ಸ್ತ್ರೀಯನ್ನು ಕಂಡೆನು

೬೩. ನಾನು ಅಂತಹ ಯಾವ ದೇವ, ಗಂಧರ್ವ, ಅಸುರ, ಮಾನುಷ, ಸ್ತ್ರೀಯನ್ನೂ ನೋಡಲಿಲ್ಲ, ಕೇಳಲೂ ಇಲ್ಲ.

೬೪. ರತಿ, ಪ್ರೀತಿ, ಪಾರ್ವತೀ, ಲಕ್ಷ್ಮಿ, ಸಾವಿತ್ರೀ, ಸರಸ್ವತೀ ಇವರಾರೂ ಅವಳ ಸೌಂದರ್ಯಕ್ಕೆ ಲೇಶದಿಂದಲೂ ಸಮಾನರಲ್ಲ.

೬೫. ದಾನವೇಂದ್ರ ! ಆಗ ನಾನು ಅಂತಹ ನಾರಿಯನ್ನು ಕಂಡು ಮನ್ಮಥ ಪೀಡಿತನಾಗಿ ಅತ್ಯಂತ ವ್ಯಥೆಗೊಂಡೆನು.

೬೬. ಅನಂತರ ನಾನು ದೀನನಾಗಿ ಮನಸ್ಸಿನಲ್ಲಿ ಹೀಗೆ ಆಲೋಚಿಸಿದೆನು. ನಾನು ಅವಳೊಡನೆ ಒಂದೆಡೆಯಲ್ಲಿಯೂ ಮಾತಾಡುವುದಿಲ್ಲ.

ಯಸ್ಯಾ ದರ್ಶನಮಾತ್ರೇಣ ಕಾಮೋ ಮೇ ಹೃದಿ ವರ್ಧಿತಃ ।
ತಸ್ಯಾಃ ಸಂಭಾಷಣೇನೈವ ಕಿಂ ಭವಿಷ್ಯತಿ ಮೇ ಪುನಃ ॥ ೧೭ ॥
ಚಿರಕಾಲಂ ತಪಸ್ತಪ್ತಂ ಬ್ರಹ್ಮಚರ್ಯೇಣ ವೈ ಮಯಾ ।
ನಾಶಂ ಯಾಸ್ಯತಿ ತತ್ಸರ್ವಂ ವಿಷಯೈರ್ನಿರ್ಜಿತಸ್ಯ ಚ ।
ತಸ್ಮಾದ್ಗಚ್ಛಾಮಿ ಚಾನ್ಯತ್ರ ಯಾವನ್ನ ವಿಕೃತಿರ್ಭವೇತ್ ॥ ೧೮ ॥
ನಾರೀನಾಮ ತಪೋವಿಘ್ನಂ ಪೂರ್ವಂ ಸೃಷ್ಟಂ ಸ್ವಯಂಭುವಾ ।
ಅರ್ಗಲಾ ಸ್ವರ್ಗಮಾರ್ಗಸ್ಯ ಸೋಪಾನಂ ನರಕಸ್ಯ ಚ ॥ ೧೯ ॥
ತಾವದ್ಧೈರ್ಯಂ ತಪಃ ಸತ್ಯಂ ತಾವತ್ಸ್ಥೈರ್ಯಂ ಕುಲತ್ರಪಾ ।
ಯಾವತ್ಪಶ್ಯತಿ ನೋ ನಾರೀಮೇಕಾಂತೇ ಚ ವಿಶೇಷತಃ ॥ ೨೦ ॥
ಏತತ್ಸಂಚಿಂತ್ಯ ಬಹುಧಾ ನಿಮೀಲ್ಯ ನಯನೇ ತತಃ ।
ಅಪ್ರಜಲ್ಪ್ಯ ವರಾರೋಹಾಂ ತಾಮಹಂ ಚಾತ್ರ ಸಂಸ್ಥಿತಃ ॥ ೨೧ ॥

ಪುಲಸ್ತ್ಯ ಉವಾಚ :—

ನಾರದಸ್ಯ ವಚಃ ಶ್ರುತ್ವಾ ಮಹಿಷಃ ಕಾಮಪೀಡಿತಃ ।
ಶ್ರವಣಾದಪಿ ರಾಜೇಂದ್ರ ಪುನಃ ಪಪ್ರಚ್ಛ ತಂ ಮುನಿಂ ॥ ೨೨ ॥

---

೧೭. ಯಾವಳ ದರ್ಶನದಿಂದ ನನ್ನ ಮನಸ್ಸಿನಲ್ಲಿ ಕಾಮವು ಹೆಚ್ಚಿತೊ, ಅವಳೊಡನೆ ಸಂಭಾಷಣೆ ಮಾಡುವುದರಿಂದ ನನಗೆ ಮತ್ತೇನಾಗುವುದೊ !

೧೮. ನಾನು ಬಹುಕಾಲದಿಂದ ಬ್ರಹ್ಮಚರ್ಯೆಯಿಂದ ತಪಸ್ಸನ್ನು ಮಾಡಿರುವೆನು. ವಿಷಯಗಳಿಂದ ಜಿತನಾದ ನನ್ನ ತಪಸ್ಸೆಲ್ಲ ನಾಶವಾಗುವುದು. ಆದ್ದರಿಂದ ನನ್ನಮನಸ್ಸು ವಿಕಾರಗೊಳ್ಳುವುದರೊಳಗಾಗಿಯೇ ನಾನು ಬೇರೆ ಕಡೆಗೆ ಹೋಗುವೆನು.

೧೯. ಹಿಂದೆ ಬ್ರಹ್ಮನು ತಪಸ್ಸಿಗೆ ವಿಘ್ನಮಾಡುವ ಹೆಂಗಸೆಂಬ ವಸ್ತುವನ್ನು ಸೃಷ್ಟಿಸಿರುವನು. ಆ ಹೆಂಗಸು ಸ್ವರ್ಗಮಾರ್ಗಕ್ಕೆ ಅಗ್ಗಣಿಯೂ, ನರಕಕ್ಕೆ ಮೆಟ್ಟಲೂ ಆಗಿರುವಳು.

೨೦. ಹೆಂಗಸನ್ನು ರಹಸ್ಯದಲ್ಲಿ ನೋಡದಿರುವ ವರೆಗೆ ಧೈರ್ಯ, ತಪಸ್ಸು, ಸತ್ಯ, ಸ್ಥೈರ್ಯ, ನಾಚಿಕೆಗಳು ಇರುವುವು.

೨೧. ಇದನ್ನು ನಾನು ಬಹುಪ್ರಕಾರವಾಗಿ ಆಲೋಚಿಸಿ ಕಣ್ಣುಗಳನ್ನು ಮುಚ್ಚಿ ಅವಳೊಡನೆ ಮಾತನಾಡದೆ ಇಲ್ಲಿಗೆ ಬಂದೆನು.

೨೨. ಪುಲಸ್ತ್ಯನು ಹೇಳುತ್ತಾನೆ :—ಮಹಿಷಾಸುರನು ನಾರದನ ಮಾತನ್ನು ಕೇಳುವುದರಿಂದಲೇ ಕಾಮಪೀಡಿತನಾಗಿ ಮರಳಿ ಆ ಮುನಿಯನ್ನು ಪ್ರಶ್ನಿಸಿದನು.

ಮಹಿಷಾಸುರ ಉವಾಚ :—

ಕಾಽಸೌ ಬ್ರಾಹ್ಮಣಶಾರ್ದೂಲ ತಾದೃಗ್ರೂಪಾ ವರಾಂಗನಾ ।
ಯಸ್ಯಾಃ ಸಂದರ್ಶನಾದೇವ ಭವಾನೇವಂ ಸ್ಮರಾನ್ವಿತಃ ॥ ೭೩ ॥
ದೇವೀ ವಾ ಮಾನುಷೀ ವಾಪಿ ಯಕ್ಷಿಣೀ ಪನ್ನಗೀ ಮುನೇ ।
ಕುಮಾರೀ ವಾ ಸಕಾಂತಾ ವಾ ಬ್ರೂಹಿ ಸರ್ವಂ ಸವಿಸ್ತರಂ ॥ ೭೪ ॥

ನಾರದ ಉವಾಚ :—

ನ ಸಾ ಪೃಷ್ಟಾ ಮಯಾ ಕಿಂಚಿನ್ನ ಜಾನಾಮಿ ತದನ್ವಯಂ ।
ಏತನ್ಮೇ ವರ್ತತೇ ಚಿತ್ತೇ ಸಾ ಕುಮಾರೀ ಯಶಸ್ವಿನೀ ॥ ೭೫ ॥
ಅಕ್ಷಮಾಲಾಧರಾ ಬಾಲಾ ಕಮಂಡಲುಸಮನ್ವಿತಾ ।
ತಪಸ್ತೇಪೇ ಗಿರೌ ತತ್ರ ಹೇತುನಾ ಕೇನಚಿಚ್ಛುಭಾ ॥ ೭೬ ॥
ಸೋಽಹಂ ಯಾಸ್ಯಾಮಿ ದೈತ್ಯೇಶ ಬ್ರಹ್ಮಲೋಕಂ ಸನಾತನಂ ।
ನೋತ್ಸಹೇ ತತ್ಕಥಾಂ ಕರ್ತುಂ ಕಾಮಬಾಣಭಯಾತುರಃ ॥ ೭೭ ॥
ಏವಮುಕ್ತ್ವಾ ತತೋ ರಾಜನ್ಬ್ರಹ್ಮಲೋಕಂ ಗತೋ ಮುನಿಃ ।
ಮಹಿಷೋಽಪಿ ಸ್ಮರಾವಿಷ್ಟಶ್ಚರಂ ತಸ್ಯಾಃ ಸಮಾದಿಶತ್ ॥ ೭೮ ॥

---

೭೩. ಮಹಿಷಾಸುರನು ಹೇಳುತ್ತಾನೆ :— ದ್ವಿಜವರ್ಯನೆ! ಯಾವಳ ದರ್ಶನದಿಂದಲೆ ನೀನು ಹೀಗೆ ಕಾಮಪೀಡಿತನಾಗಿರುವೆಯೊ, ಅಂತಹ ಆ ಉತ್ತಮಾಂಗನೆಯು ಯಾರು?

೭೪. ಅವಳು ದೇವಾಂಗನೆಯೊ? ಮನುಷ್ಯ ರಮಣಿಯೊ?, ಯಕ್ಷಸ್ತ್ರೀಯೊ? ನಾಗನಾರಿಯೊ? ಕನ್ಯೆಯೊ? ಮದುವೆಯಾದವಳೊ? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು.

೭೫. ನಾರದನು ಹೇಳುತ್ತಾನೆ :— ನಾನು ಅವಳನ್ನು ಏನೂ ಕೇಳಲಿಲ್ಲ. ಅವಳ ವಂಶವನ್ನರಿಯೆನು. ಕೀರ್ತಿಮತಿಯಾದ ಆ ಸ್ತ್ರೀಯು ಕುಮಾರಿಯೆಂದು ನಾನು ಭಾವಿಸುತ್ತೇನೆ

೭೬. ಸುಂದರಿಯಾದ ಆ ಬಾಲೆಯು ಯಾವುದೊ ಒಂದು ಕಾರಣದಿಂದ ಜಪಸರವನ್ನು ಧರಿಸಿ, ಕಮಂಡಲುವಿನಿಂದ ಸಹಿತಳಾಗಿ ಆ ಪರ್ವತದಲ್ಲಿ ತಪಸ್ಸನ್ನಾಚರಿಸಿದಳು.

೭೭. ದೈತ್ಯೇಶ! ನಾನು ಅನಾದಿಯಾದ ಬ್ರಹ್ಮಲೋಕಕ್ಕೆ ತೆರಳುವೆನು. ಕಾಮಬಾಣದ ಭಯದಿಂದ ವ್ಯಥೆಗೊಂಡ ನಾನು ಅವಳ ವಿಷಯದಲ್ಲಿ ಮಾತಾಡಲು ಬಯಸುವುದಿಲ್ಲ.

೭೮. ದೊರೆಯೆ! ಮುನಿಯು ಹೀಗೆ ಹೇಳಿ ಬ್ರಹ್ಮಲೋಕಕ್ಕೆ ಹೋದನು. ಮಹಿಷನೂ ಮನ್ಮಥ ಪೀಡಿತನಾಗಿ ಅವಳ ಬಳಿಗೆ ದೂತನನ್ನು ಕಳುಹಿಸಿದನು.

ಗತ್ವಾ ಭವಾನ್ದ್ರುತಂ ತತ್ರ ದೃಷ್ಟ್ವಾ ತಾಂ ಚ ವರಾಂಗನಾಂ ।
ಕಿಮರ್ಥಂ ಸಾ ತಪಸ್ತೇಪೇ ಕೋ ವೈ ತಸ್ಯಾಃ ಪರಿಗ್ರಹಃ || ೭೯ ||
ಅಥಾಽಸೌ ಮಹಿಷಾದೇಶಾದ್ದೂತೋ ಗತ್ವಾರ್ಬುದಾಚಲಂ ।
ದೃಷ್ಟ್ವಾ ತಾಂ ಪದ್ಮಗರ್ಭಾಭಾಂ ಜ್ಞಾತ್ವಾ ಸರ್ವವಿಚೇಷ್ಟಿತಂ || ೮೦ ||
ತಸ್ಮೈ ನಿವೇದಯಾಮಾಸ ಮಹಿಷಾಯ ಸವಿಸ್ಮಯಃ ।
ದೃಷ್ಟಾ ದೈತ್ಯವರ ಸ್ತ್ರೀ ಚ ಸರ್ವಲಕ್ಷಣಲಕ್ಷಿತಾ || ೮೧ ||
ದೇವತೇಜೋಭವಾ ಕನ್ಯಾ ಸಾಽದ್ಯಾಪಿ ವರವರ್ಣಿನೀ ।
ತ್ವದ್ವಧಾರ್ಥಂ ತಪಸ್ತೇಪೇ ಕೌಮಾರವ್ರತಮಾಶ್ರಿತಾ || ೮೨ ||
ಏವಂ ತತ್ರ ಭವಂತೀ ಸ್ಮ ಪೃಷ್ಟಾಃ ಸರ್ವೇ ತಪಸ್ವಿನಃ ।
ಸತ್ಯಮೇತನ್ಮಹಾಭಾಗ ಕುರುಷ್ವ ಯದನಂತರಂ || ೮೩ ||
ತಸ್ಯಾ ರೂಪಂ ವಯಃ ಕಾಂತಿಂ ವರ್ಣಿತುಂ ನೈವ ಶಕ್ಯತೇ ।
ನಾಲಾಪಂ ಕುರುತೇ ಬಾಲಾ ಸಾ ಕೇನಾಪಿ ಸಮಂ ವಿಭೋ || ೮೪ ||

ಪುಲಸ್ತ್ಯ ಉವಾಚ :—

ತಚ್ಛ್ರುತ್ವಾ ಮಹಿಷೋ ವಾಕ್ಯಂ ಭೂಯಃ ಕಾಮನಿಪೀಡಿತಃ ।
ದೂತಂ ಸಂಪ್ರೇಷಯಾಮಾಸ ದಾನವಂ ಚ ವಿಚಕ್ಷಣಂ || ೮೫ ||

---

೭೯. ಆ ದೂತನನ್ನು ಕುರಿತು, "ಎಲೈ ದೂತನೇ! ನೀನು ಅಲ್ಲಿಗೆ ಶೀಘ್ರವಾಗಿ ಹೋಗಿ ಆ ಸುಂದರಿಯನ್ನೀಕ್ಷಿಸಿ ಅವಳು ಏತಕ್ಕೆ ತಪಸ್ಸನ್ನು ಮಾಡುತ್ತಿರುವಳು? ಅವಳ ಪತಿಯಾರು; ತಿಳಿದುಕೊಂಡು ಬಾ ಎಂದು ಹೇಳಿ ಕಳುಹಿಸಿದನು

೮೦–೮೧. ತರುವಾಯ ಈ ದೂತನು ಮಹಿಷನ ಅಪ್ಪಣೆಯಂತೆ ಅರ್ಬುದ ಪರ್ವತಕ್ಕೆ ಹೋಗಿ ಆ ಸುಂದರಿಯನ್ನು ಕಂಡು ಅವಳ ಕಾರ್ಯವನ್ನೆಲ್ಲ ತಿಳಿದು ಹಿಂದಿರುಗಿ ಬಂದು ಆಶ್ಚರ್ಯ ಸಹಿತನಾಗಿ ಆ ಮಹಿಷನಿಗೆ ಹೀಗೆ ತಿಳಿಸಿದನು. ದೈತ್ಯೇಂದ್ರ! ಸಮಸ್ತ ಲಕ್ಷಣಗಳಿಂದೊಪ್ಪುವ ಆ ನಾರೀಮಣಿಯನ್ನು ನೋಡಿದೆನು.

೮೨. ದೇವತೆಗಳ ತೇಜಸ್ಸಿನಿಂದ ಹುಟ್ಟಿದ ಆ ಕನ್ಯೆಯು ಈಗಲೂ ನಿನ್ನ ವಧೆಗಾಗಿ ಕೌಮಾರವ್ರತವನ್ನಾಶ್ರಯಿಸಿ ತಪಸ್ಸನ್ನು ಮಾಡುತ್ತಿರುವಳು.

೮೩. ಅಲ್ಲಿರುವ ಮುನಿಗಳನ್ನೆಲ್ಲ ಕೇಳಲು ಅವರು ಹೀಗೆಯೇ ಹೇಳಿದರು. ಮಹಾಭಾಗ್ಯವಂತನೆ! ಇದು ನಿಜ. ಮುಂದೆ ಮಾಡಬೇಕಾದ ಕಾರ್ಯವನ್ನು ಮಾಡು.

೮೪. ಅವಳ ರೂಪ, ವಯಸ್ಸು, ಕಾಂತಿ ಇವುಗಳನ್ನು ವರ್ಣಿಸಲು ಸಾಧ್ಯವಿಲ್ಲ. ಆ ಬಾಲೆಯು ಯಾರೊಡನೆಯೂ ಮಾತಾಡುವುದಿಲ್ಲ".

೮೫. ಪುಲಸ್ತ್ಯನು ಹೇಳುತ್ತಾನೆ:— ಮಹಿಷನು ಆ ದೂತನ ಮಾತನ್ನು ಕೇಳಿ ಅತ್ಯಂತ ಕಾಮಪೀಡಿತನಾಗಿ ವಿಚಕ್ಷಣನೆಂಬ ಒಬ್ಬ ದಾನವ ದೂತನನ್ನು ಅವಳೆಡೆಗೆ ಕಳುಹಿಸಿದನು.

A ... 484

ವಿಚಕ್ಷಣ ದ್ರುತಂ ಗತ್ವಾ ಸುದರ್ಶೇ ತಾಂ ತಪಸ್ವಿನೀಂ ।
ಸಾಮಭೇದಪ್ರದಾನೇನ ದಂಡೇನಾಪಿ ಸಮಾನಯ ॥ ೮೬ ॥
ಅಥಾಽಸೌ ಪ್ರಯಯೌ ಶೀಘ್ರಂ ಪ್ರಣಿಪತ್ಯ ವಿಚಕ್ಷಣಃ ।
ಅರ್ಬುದೇ ಪರ್ವತಶ್ರೇಷ್ಠೇ ಯತ್ರ ಸಾ ಪರಮೇಶ್ವರೀ ।
ಪ್ರಣಮ್ಯ ವಿನಯೋಪೇತೋ ವಾಕ್ಯಮೇತದುವಾಚ ಹ ॥ ೮೭ ॥
ಮಹಿಷೋನಾಮ ವಿಖ್ಯಾತಸ್ತ್ರೈಲೋಕ್ಯಾಧಿಪತಿರ್ಬಲೀ ।
ದನುವಂಶಸಮುದ್ಭೂತಃ ಕಾಮರೂಪಸಮನ್ವಿತಃ ॥ ೮೮ ॥
ಸ ತ್ವಾಂ ವಾಂಛತಿ ಕಲ್ಯಾಣಿ ಧರ್ಮಪತ್ನೀಂ ಸ್ವಧರ್ಮತಃ ।
ತಸ್ಮಾದ್ವರಯ ಭದ್ರಂ ತೇ ಸರ್ವಕಾಮಪ್ರದಂ ಪತಿಂ ॥ ೮೯ ॥
ಯದಿ ಸ್ಯಾತ್ತವ ಕಾಂತೋಽಸೌ ತ್ವಂ ಚ ತಸ್ಯ ತಥಾ ಪ್ರಿಯಾ ।
ತತ್ಕೃತಾರ್ಥಂ ದ್ವಯೋರೇವ ಯೌವನಂ ನಾತ್ರ ಸಂಶಯಃ ॥ ೯೦ ॥
ಏವಮುಕ್ತಾ ತತಸ್ತೇನ ದೇವೀ ವಚನಬ್ರವೀತ್ ।
ಕಿಂಚಿತ್ಕೋಪಸಮಾಯುಕ್ತಾ ಮುಹುಃ ಪ್ರಸ್ಫುರಿತಾಧರಾ ॥ ೯೧ ॥

---

೮೬. ಅವನನ್ನು ಕುರಿತು ಹೀಗೆಂದನು. "ವಿಚಕ್ಷಣ! ನೀನು ನನಗಾಗಿ ಆ ಕನ್ಯೆಯೆಡೆಗೆ ಹೋಗಿ ಅವಳನ್ನು ಸಾಮ, ಭೇದ ಅಥವಾ ದಂಡೋಪಾಯದಿಂದ ಇಲ್ಲಿಗೆ ಕರೆದುಕೊಂಡು ಬಾ".

೮೭. ಬಳಿಕ ಈ ದೂತನು ನಮಸ್ಕರಿಸಿ ಹೊರಟು ಅರ್ಬುದ ಪರ್ವತಕ್ಕೆ ಹೋಗಿ ಆ ದೇವಿಗೆ ವಂದಿಸಿ ವಿನಯದಿಂದ ಹೀಗೆಂದನು.

೮೮-೮೯. ಮಂಗಳಕರಳೆ! ಪ್ರಸಿದ್ಧನೂ, ತ್ರೈಲೋಕ್ಯಾಧಿಪತಿಯೂ, ಬಲಿಷ್ಠನೂ, ದಾನವನೂ, ಸ್ವೇಚ್ಛಾರೂಪಿಯೂ ಆದ ಮಹಿಷನೆಂಬವನು ನಿನ್ನನ್ನು ಧರ್ಮ ಪತ್ನಿಯನ್ನಾಗಿ ಮಾಡಿಕೊಳ್ಳಲು ಬಯಸುವನು. ಆದ್ದರಿಂದ ನೀನು ಸಕಲೇಷ್ಟಾರ್ಥಗಳನ್ನೀಯುವ ಅವನನ್ನು ಪತಿಯನ್ನಾಗಿ ವರಿಸು.

೯೦. ನೀನು ಅವನ ಪತ್ನಿಯೂ ಅವನು ನಿನ್ನ ಪತಿಯೂ ಆದರೆ ನಿಮ್ಮಿರ್ವರ ಯೌವನವು ಧನ್ಯ. ಸಂದೇಹವಿಲ್ಲ.

೯೧. ದೂತನು ಹೀಗೆನ್ನಲು ದೇವಿಯು ಸ್ವಲ್ಪ ಕೋಪಗೊಂಡು ತುಟಿಯನ್ನದುರಿಸುತ್ತ ಇಂತೆಂದಳು.

ದೇವ್ಯುವಾಚ :—

ಅವಧ್ಯಃ ಸರ್ವಥಾ ದೂತಃ ಸರ್ವತ್ರ ಪರಿಕೀರ್ತಿತಃ ।
ಅವಸ್ಥಾಸು ತತೋ ನ ತ್ವಂ ಸಹಸಾ ಭಸ್ಮಸಾತ್ಕೃತಃ ॥ ೯೨ ॥
ಗತ್ವಾ ಬ್ರೂಹಿ ದುರಾಚಾರಂ ಮಹಿಷಂ ದಾನವಾಧಮಂ ।
ನಾಹಂ ಶಕ್ಯಾ ತ್ವಯಾ ಪಾಪ ಲಬ್ಧುಂ ನಾನ್ಯೇನ ಕೇನಚಿತ್ ॥ ೯೩ ॥
ವಧಾರ್ಥಂ ತೇ ಸಮುದ್ಯೋಗ ಏಷ ಸರ್ವೋ ಮಯಾ ಕೃತಃ ।
ತಸ್ಯಾಸ್ತದ್ವಚನಂ ಶ್ರುತ್ವಾ ಮಹಿಷಂ ಸ ಪುನರ್ಯಯೌ ॥ ೯೪ ॥
ಭಯೇನ ಮಹತಾವಿಷ್ಟಸ್ತಸ್ಯಾ ರೂಪೇಣ ವಿಸ್ಮಿತಃ ।
ಸರ್ವಂ ನಿವೇದಯಾಮಾಸ ಮಹಿಷಾಯ ವಿಚೇಷ್ಟಿತಂ ।
ತಸ್ಯಾಶ್ಚೈವ ತಥಾಽಽಲಾಪಾಸ್ಪೃಹತ್ವಂ ಚ ಕೃತ್ಸ್ನಶಃ ॥ ೯೫ ॥
ತಚ್ಛ್ರುತ್ವಾ ಮಹಿಷೋ ರಾಜನ್ಕಾಮಬಾಣಪ್ರಪೀಡಿತಃ ।
ಸೇನಾಪತಿಂ ಸಮಾಹೂಯ ವಾಕ್ಯಮೇತದುವಾಚ ಹ ॥ ೯೬ ॥
ಅರ್ಬುದೇ ಪರ್ವತೇ ಸೇನಾಂ ಕಲ್ಪಯಸ್ವ ಸುದುರ್ಧರಾಂ ।
ಹಸ್ತ್ಯಶ್ವಕಲ್ಪಿತಾಂ ಭೀಮಾಂ ರಥಪತ್ತಿಸಮಾಕುಲಾಂ ॥ ೯೭ ॥

---

೯೨. ದೇವಿಯು ಹೇಳುತ್ತಾಳೆ:—ಎಲ್ಲಾ ಸ್ಥಿತಿಗಳಲ್ಲಿಯೂ ದೂತನನ್ನು ಕೊಲ್ಲಬಾರದು. ಆದ್ದರಿಂದಲೇ ನಾನು ನಿನ್ನನ್ನು ಕೂಡಲೆ ಬೂದಿಮಾಡಲಿಲ್ಲ.

೯೩. ದಾನವಾಧಮನಾದ ದುಷ್ಟಮಹಿಷನೆಡೆಗೆ ಹೋಗಿ ಹೇಳು. ಪಾಪಿಷ್ಠನೆ! ನಾನು ನಿನ್ನಿಂದಲಾಗಲಿ, ಬೇರೆಯಾರಿಂದಲಾಗಲಿ ಹೊಂದಲು ಶಕ್ಯಳಲ್ಲ.

೯೪. ನಿನ್ನ ವಧೆಗೋಸ್ಕರ ನಾನು ಈ ಸಮಸ್ತ ಉದ್ಯೋಗವನ್ನೂ ಮಾಡಿರುವೆನು". ಅವನು ಅವಳ ಮಾತನ್ನು ಕೇಳಿ ಮಹಿಷನೆಡೆಗೆ ಮರಳಿ ಹೋದನು.

೯೫. ಅವನು ಅತ್ಯಂತ ಭಯಗೊಂಡವನೂ, ಅವಳ ರೂಪದಿಂದ ಆಶ್ಚರ್ಯಗೊಂಡವನೂ ಆಗಿ ಅವಳ ಕಾರ್ಯವನ್ನೂ, ಮಾತಾಡಲಿಚ್ಛೆಯಿಲ್ಲದಿರುವುದನ್ನೂ ಸಂಪೂರ್ಣವಾಗಿ ಮಹಿಷನಿಗೆ ತಿಳಿಸಿದನು.

೯೬. ಅದನ್ನು ಕೇಳಿ ಕಾಮಬಾಣಗಳಿಂದ ಪೀಡಿತನಾದ ಮಹಿಷನು ಸೇನಾಪತಿಯನ್ನು ಕರೆದು ಇಂತೆಂದನು.

೯೭. ಅರ್ಬುದ ಪರ್ವತದಲ್ಲಿ ತಡೆಯಲಶಕ್ಯವೂ, ಆನೆ, ಕುದುರೆಗಳಿಂದ ಕೂಡಿರುವುದೂ, ಭಯಂಕರವೂ, ರಥ, ಕಾಲಾಳುಗಳಿಂದ ವ್ಯಾಪ್ತವೂ ಆದ ಸೇನೆಯನ್ನು ಸಿದ್ಧಗೊಳಿಸು.

ತತೋಽಸೌ ಕಲ್ಪಯಾಮಾಸ ಚತುರಂಗಾಂ ವರೂಥಿನೀಂ ।
ಪತಾಕಾಚ್ಛತ್ರಶಬಲಾಂ ವಾದಿತ್ರಾರಾವಭೂಷಿತಾಂ ॥ ೯೮ ॥
ತತೋ ದ್ವಿಪಾಶ್ಚ ಸಂನದ್ಧಾ ದೃಶ್ಯಂತೇಽಧಿಷ್ಠಿತಾ ಭಟೈಃ ।
ಇತಶ್ಚೇತಶ್ಚ ಧಾವಂತಃ ಸಪಕ್ಷಾಃ ಪರ್ವತಾ ಇವ ॥ ೯೯ ॥
ಅಶ್ವಾಶ್ಚೈವಾಸ್ಯಕಲ್ಮಾಷಾ ವಾಯುವೇಗಾಃ ಸುವರ್ಚಸಃ ।
ಅಂಗತ್ರಾಣಸಮಾಯುಕ್ತಾಃ ಶತಶೋಽಥ ಸಹಸ್ರಶಃ ॥ ೧೦೦ ॥
ವಿಮಾನಪ್ರತಿಮಾಕಾರಾ ರಥಾಸ್ತೇನ ಪ್ರಕಲ್ಪಿತಾಃ ।
ಕಿಂಕಿಣೀಜಾಲಸದ್ಘಂಟಾಪತಾಕಾಭಿರಲಂಕೃತಾಃ ॥ ೧೦೧ ॥
ಪತ್ತಯಶ್ಚ ಮಹಾಕಾಯಾ ಮಹೇಷ್ವಾಸಾ ಮಹಾಬಲಾಃ ।
ಅಸಿಚರ್ಮಧರಾಶ್ಚಾನ್ಯೇ ಪ್ರಾಸಪಟ್ಟಿಶಪಾಣಯಃ ॥ ೧೦೨ ॥
ಲಕ್ಷಮೇಕಂ ಮತಂಗಾನಾಂ ರಥಾನಾಂ ತ್ರಿಗುಣಂ ತತಃ ।
ಅಶ್ವಾ ದಶಗುಣಾ ರಾಜನ್ನಸಂಖ್ಯಾತಾಃ ಪದಾತಯಃ ॥ ೧೦೩ ॥
ತತಶ್ಚಾರ್ಬುದಮಾಸಾದ್ಯ ವೇಷ್ಟಯಿತ್ವಾ ಸ ದೂರತಃ ।
ಸಂಮಿತ್ರೈಃ ಸಚಿವೈಃ ಸಾರ್ಧಂ ತದಂತಿಕಮುಪಾದ್ರವತ್ ॥ ೧೦೪ ॥

---

೯೮. ತರುವಾಯ ಅವನು ಚತುರಂಗಗಳುಳ್ಳದೂ, ಪತಾಕೆ, ಛತ್ರಗಳಿಂದ ತುಂಬಿರುವುದೂ, ವಾದ್ಯ ಧ್ವನಿಗಳಿಂಗ ಅಲಂಕಾರಗೊಂಡುದೂ ಆದ ಸೇನೆಯನ್ನು ಸಿದ್ಧಗೊಳಿಸಿದನು.

೯೯. ಅನಂತರ ಭಟರಿಂದ ಸಹಿತರಾಗಿ ಸಿದ್ಧವಾದ ಆನೆಗಳು ಇಲ್ಲಿ ಅಲ್ಲಿ ಓಡಾಡುತ್ತ ರೆಕ್ಕೆಗಳಿಂದ ಕೂಡಿದ ಪರ್ವತಗಳಂತೆ ಕಂಡವು.

೧೦೦. ನಾನಾ ಬಣ್ಣವುಳ್ಳವೂ, ಗಾಳಿಯಂತೆ ವೇಗವುಳ್ಳವೂ, ಒಳ್ಳೆ ಕಾಂತಿಯುಳ್ಳವೂ, ಕವಚದಿಂದ ಕೂಡಿದುವೂ ಆದ ಸಾವಿರಾರು ಕುದುರೆಗಳು ಸಿದ್ಧವಾದುವು.

೧೦೧. ಅವನು ವಿಮಾನದಂತಿರುವುವೂ, ಕಿರುಘಂಟೆ, ದೊಡ್ಡಘಂಟೆ, ಪತಾಕೆ ಇವುಗಳಿಂದ ಅಲಂಕಾರಗೊಂಡುವೂ ಆದ ರಥಗಳನ್ನು ಸಿದ್ಧಮಾಡಿದನು.

೧೦೨. ದೊಡ್ಡ ಶರೀರವುಳ್ಳವರೂ, ಮಹಾಚಾಪವುಳ್ಳವರೂ, ಅತಿ ಬಲಿಷ್ಠರೂ, ಖಡ್ಗ ಗುರಾಣಿಗಳನ್ನೂ, ಪ್ರಾಸ, ಪಟ್ಟಿಶಗಳನ್ನೂ ಹಿಡಿದವರೂ ಆದ ಕಾಲಾಳುಗಳನ್ನು ತಂದು ನಿಲ್ಲಿಸಿದನು.

೧೦೩. ಒಂದುಲಕ್ಷ ಆನೆಗಳು, ಮೂರುಲಕ್ಷ ರಥಗಳು, ಮೂವತ್ತುಲಕ್ಷ ಕುದುರೆಗಳು, ಲೆಕ್ಕವಿಲ್ಲದ ಕಾಲಾಳುಗಳು ಅರ್ಬುದಪರ್ವತದಲ್ಲಿ ನೆಲೆಸಿದುವು.

೧೦೪. ಅವನು ಅರ್ಬುದ ಪರ್ವತವನ್ನು ಹೊಂದಿ ದೂರದಿಂದಲೆ ಅದನ್ನು ಸುತ್ತಿ ಮಿತಪರಿವಾರರಾದ ಮಂತ್ರಿಗಳೊಡನೆ ಆ ದೇವಿಯೆಡೆಗೆ ಹೋದನು.

ಧ್ಯಾನಸ್ಥಾಂ ವೀಕ್ಷ್ಯ ತಾಂ ದೇವೀಂ ಕಂದರ್ಪಶರಪೀಡಿತಃ ।
ತತೋಽಬ್ರವೀತ್ಸ ತಾಂ ವಾಕ್ಯಂ ವಿನಯೇನ ಸಮನ್ವಿತಃ ॥ ೧೦೫ ॥
ಶ್ರುತ್ವಾ ತವೇದೃಶಂ ರೂಪಮಹಂ ಪ್ರಾಪ್ತೋ ವರಾನನೇ ।
ಗಾಂಧರ್ವೇಣ ವಿವಾಹೇನ ತಸ್ಮಾತ್ತ್ವಂ ವರಯ ಮಾಂ ದ್ರುತಂ ॥ ೧೦೬ ॥
ಷಷ್ಟಿರ್ಭಾರ್ಯಾಸಹಸ್ರಾಣಿ ಮಮ ಸಂತಿ ಶುಚಿಸ್ಮಿತೇ ।
ಕೃತ್ವಾ ಮಾಂ ದರ್ಪಿತಂ ಕಾಂತಂ ತಾಸಾಂ ತ್ವಂ ಸ್ವಾಮಿನೀ ಭವ ॥ ೧೦೭ ॥
ಅನರ್ಹಂ ತೇ ತಪೋ ಬಾಲೇ ಭುಂಕ್ಷ್ವ ಭೋಗಾನ್ಯಥೇಪ್ಸಿತಾನ್ ।
ತ್ರೈಲೋಕ್ಯಸ್ವಾಮಿನೀ ಭೂತ್ವಾ ಮಯಾ ಸಾರ್ಧಮಹರ್ನಿಶಂ ॥ ೧೦೮ ॥
ಏವಮುಕ್ತ್ವಾಪಿ ಸಾ ತೇನ ನೋತ್ತರಂ ಪ್ರತ್ಯಭಾಷತ ।
ತತಃ ಕಾಮಸಮಾವಿಷ್ಟಸ್ತದಂತಿಕಮುಪಾಯಯೌ ॥ ೧೦೯ ॥
ತತಸ್ತಂ ಲೋಲುಪಂ ದೃಷ್ಟ್ವಾ ಸಾ ದೇವೀ ಕೋಪಸಂಯುತಾ ।
ಅಸ್ಮರತ್ಸ್ವಾಹನಂ ಸಿಂಹಂ ಸಮಾಯಾತಃ ಸ ಸಾಽಽರುಹತ್ ॥ ೧೧೦ ॥

---

೧೦೫. ಅವನು ಧ್ಯಾನನಿರತಳಾದ ಆ ದೇವಿಯನ್ನು ನೋಡಿ ಮದನ ಬಾಣಗಳಿಂದ ಪೀಡಿತನಾದ ಅವಳನ್ನು ಕುರಿತು ವಿನಯದಿಂದ ಇಂತೆಂದನು.

೧೦೬. "ಸುಂದರಿಯೆ ! ನಾನು ನಿನ್ನ ಇಂತಹ ರೂಪವನ್ನು ಕೇಳಿ ಇಲ್ಲಿಗೆ ಬಂದಿರುವೆನು. ಆದ್ದರಿಂದ ನೀನು ನನ್ನನ್ನು ಗಾಂಧರ್ವ ವಿವಾಹದ ಕ್ರಮದಿಂದ ಶೀಘ್ರವಾಗಿ ವರಿಸು.

೧೦೭. ಶುಭ್ರವಾದ ನಗೆಯುಳ್ಳವಳೆ! ನನಗೆ ಅರುವತ್ತು ಸಾವಿರ ಪತ್ನಿಯರಿರುವರು. ನೀನು ನನ್ನನ್ನು ಅಹಂಕಾರಗೊಂಡ ಪತ್ನಿಯನ್ನಾಗಿಸಿ ಅವರಿಗೆಲ್ಲ ಯಜಮಾನಿಸಿಯಾಗು.

೧೦೮. ಬಾಲೆಯೆ ! ನಿನಗೆ ತಪಸ್ಸು ಉಚಿತವಲ್ಲ. ನೀನು ಮೂರುಲೋಕಗಳಿಗೆ ಸ್ವಾಮಿನಿಯಾಗಿ ಹಗಲು ರಾತ್ರಿ ನನ್ನೊಡನೆ ಇಷ್ಟಬಂದ ಭೋಗಗಳನ್ನನ್ನು ಭವಿಸು".

೧೦೯. ಅವನು ಹೀಗೆಂದರೂ ಅವಳು ಉತ್ತರಕೊಡಲಿಲ್ಲ. ಬಳಿಕ ಅವನು ಕಾಮಪೀಡಿತನಾಗಿ ಅವಳ ಹತ್ತಿರಕ್ಕೆ ಹೋದನು.

೧೧೦. ಬಳಿಕ ದೇವಿಯು ಅವನು ಕಾಮಪೀಡಿತನಾಗಿರುವುದನ್ನು ನೋಡಿ ಕೋಪಗೊಂಡು ತನ್ನ ವಾಹನವಾದ ಸಿಂಹವನ್ನು ಸ್ಮರಿಸಿ, ಅದು ಕೂಡಲೆ ಬರಲು ಅದನ್ನೇರಿದಳು.

ಅಬ್ರವೀತ್ಪುರುಷಂ ವಾಕ್ಯಂ ಗಚ್ಛ ಗಚ್ಛೇತಿ ಚಾಸಕೃತ್ ।
ನೋ ಚೇತ್ತ್ವಾಂ ಚ ವಧಿಷ್ಯಾಮಿ ಸ್ಥಾನೇಽಸ್ಮಿನ್ದಾನವಾಧಮ ॥ ೧೧೧ ॥
ಅಥಾಽಸೌ ಸಚಿವೈಃ ಸಾರ್ಧಂ ಸಮಂತಾತ್ಪರ್ಯವೇಷ್ಟಯತ್ ।
ಪ್ರಗ್ರಹಾರ್ಥಂ ತು ತಾ ದೇವೀಂ ಕಾಮಬಾಣಪ್ರಪೀಡಿತಃ ॥ ೧೧೨ ॥
ತತೋ ಜಹಾಸ ಸಾ ದೇವೀ ಸಶಬ್ದಂ ಪರಮೇಶ್ವರೀ ।
ತಸ್ಮಾದಹರ್ನಿಶಂ ಸಾರ್ಧಂ ನಿಷ್ಕ್ರಾಂತಾಃ ಪುರುಷಾ ಘನಾಃ ॥ ೧೧೩ ॥
ಸುಸನ್ನದ್ಧಾಃ ಸಶಸ್ತ್ರಾಶ್ಚ ರೋಷೇಣ ಮಹತಾಽನ್ವಿತಾಃ ।
ತತಸ್ತಾನಬ್ರವೀದ್ದೇವೀ ಪಾಪೋಽಯಂ ವಧ್ಯತಾಮಿತಿ ॥ ೧೧೪ ॥
ತತಸ್ತೇ ಸಹಿತಾಃ ಸರ್ವೇ ಮಹಿಷಂ ಸಮುಪಾದ್ರವನ್ ।
ತಿಷ್ಠ ತಿಷ್ಠೇತಿ ಜಲ್ಪಂತೋ ಮುಂಚಂತೋಽಸ್ತ್ರಾಣಿ ಭೂರಿಶಃ ॥ ೧೧೫ ॥
ತತಃ ಸಮಭವದ್ಯುದ್ಧಂ ಗಣಾನಾಂ ದಾನವೈಃ ಸಹ ।
ತತಸ್ತೇ ಸಚಿವಾಃ ಸರ್ವೇ ವೈವಸ್ವತಗೃಹಂ ಗತಾಃ ॥ ೧೧೬ ॥
ಅಥಾಽಸೌ ಮಹಿಷೋ ರುಷ್ಟಃ ಸಚಿವೈರ್ವಿನಿಪಾತಿತೈಃ ।
ಸ್ವಸೈನ್ಯಮಾನಯಾಮಾಸ ತಸ್ಮಿನ್ಪರ್ವತರೋಧಸಿ ॥ ೧೧೭ ॥

---

೧೧೧. "ನೀಚ ದಾನವ! ನೀನು ಇಲ್ಲಿಂದ ಹೊರಡು. ಹಾಗೆ ಮಾಡದಿದ್ದರೆ ಈ ಸ್ಥಳದಲ್ಲಿಯೇ ನಿನ್ನನ್ನು ವಧಿಸುವೆನು". ಎಂದು ಅನೇಕ ಸಾರಿ ಕಠಿನವಾಗಿ ಹೇಳಿದಳು.

೧೧೨. ತರುವಾಯ ಇವನು ಕಾಮಪೀಡಿತನಾಗಿ ಅವಳನ್ನು ಹಿಡಿದುಕೊಳ್ಳುವುದಕ್ಕೆ ಮಂತ್ರಿಗಳೊಡನೆ ಸುತ್ತಲೂ ಸುತ್ತಿಕೊಂಡನು.

೧೧೩. ಅನಂತರ ಆ ಪರಮೇಶ್ವರಿಯೂ ಶಬ್ದಸಹಿತವಾಗಿ ನಗಲು ಅವಳಿಂದ ಅನೇಕ ಮಂದಿ ಪುರುಷರು ಹೊರಟರು.

೧೧೪. ಸನ್ನದ್ಧರೂ, ಆಯುಧ ಧರರೂ, ಅತ್ಯಂತ ಕೋಪಗೊಂಡವರೂ ಆದ ಅವರನ್ನು ಕುರಿತು ದೇವಿಯು ಈ ಪಾಪಿಷ್ಠನನ್ನು ಕೊಲ್ಲಿರಿ ಎಂದಳು.

೧೧೫. ಬಳಿಕ ಅವರು ಒಟ್ಟುಗೂಡಿ ಮಹಿಷನೆಡೆಗೆ ಹೋಗಿ ನಿಲ್ಲು, ನಿಲ್ಲು ಎನ್ನುತ್ತ ಬಹುವಾಗಿ ಆಯುಧಗಳನ್ನು ಪ್ರಯೋಗಿಸಿದರು.

೧೧೬. ತರುವಾಯ ಗಣಗಳು ದಾನವರೊಡನೆ ಯುದ್ಧಮಾಡಲು ಮಹಿಷನ ಮಂತ್ರಿಗಳು ಮೃತರಾದರು.

೧೧೭. ಆದರಿಂದ ಕುಪಿತನಾದ ಮಹಿಷನು ಆ ಪರ್ವತದ ತಪ್ಪಲಿಗೆ ತನ್ನ ಸೈನ್ಯವನ್ನು ಕರೆಯಿಸಿದನು.

ರಥಪ್ರವರಮಾರುಹ್ಯ ಸಾರಥಿಂ ಸಮಭಾಷತ ।
ನಯ ಮಾಂ ಸಾರಥೇ ತೂರ್ಣಂ ಯತ್ರ ಸಾಽಽಸ್ತೇ ವ್ಯವಸ್ಥಿತಾ ॥ ೧೧೮ ॥
ಹತ್ವೈನಾಮದ್ಯ ಯಾಸ್ಯಾಮಿ ಪಾರಂ ರೋಷಸ್ಯ ದುಸ್ತರಂ ।
ಏವಮುಕ್ತಸ್ತತೋ ರಾಜನ್ಪ್ರೇರಯಾಮಾಸ ಸಾರಥಿಃ ॥ ೧೧೯ ॥
ರಥಂ ತೇನೈವ ಮಾರ್ಗೇಣ ಯತ್ರ ಸಾ ತಿಷ್ಠತೇ ಧ್ರುವಂ ।
ಏತಸ್ಮಿನ್ನೇವ ಕಾಲೇ ತು ತತ್ರೋತ್ಪಾತಾಃ ಸುದಾರುಣಾಃ ॥ ೧೨೦ ॥
ಬಹವಸ್ತೇನ ಮಾರ್ಗೇಣ ಯೇನಾಸೌ ಪ್ರಸ್ಥಿತೋ ನೃಪ ।
ಸಂಮುಖಃ ಪ್ರವವೌ ವಾತೋ ರೂಕ್ಷಃ ಕರ್ಕರಸಂಯುತಃ ॥ ೧೨೧ ॥
ಪಪಾತ ಮಹತೀ ಚೋಲ್ಕಾ ನಿಹತ್ಯ ರವಿಮಂಡಲಂ ।
ಅಪಸವ್ಯಂ ಮೃಗಾಶ್ಚಕ್ರುಸ್ತಸ್ಯ ಮಾರ್ಗೇ ನೃಪೋತ್ತಮ ॥ ೧೨೨ ॥
ಉಪವಿಷ್ಟಾಸ್ತಥಾ ವಾಂತಾ ಬಹುಮೂತ್ರಂ ಪ್ರಸುಸ್ರುವುಃ ।
ರಥಧ್ವಜೇ ಸಮಾವಿಷ್ಟೋ ಗೃಧ್ರಃ ಶಬ್ದಮಥಾಕರೋತ್ ॥ ೧೨೩ ॥
ಸ ತಾನ್ಸರ್ವಾನನಾದೃತ್ಯ ಮಹೋತ್ಪಾತಾನ್ಸುದಾರುಣಾನ್ ।
ಪ್ರಯಯೌ ಸಂಮುಖಸ್ತಸ್ಯಾ ದೇವ್ಯಾಃ ಕೋಪಪರಾಯಣಃ ॥ ೧೨೪ ॥

---

೧೧೮–೧೨೧. ಅವನು ಉತ್ತಮವಾದ ರಥವನ್ನೇರಿ ಸಾರಥಿಯನ್ನು ಕುರಿತು "ಸಾರಥಿಯೆ! ಆ ದೇವಿಯಿರುವ ಸ್ಥಳಕ್ಕೆ ನನ್ನನ್ನು ಕರೆದುಕೊಂಡು ಹೋಗು. ಈಗ ಇವಳನ್ನು ಕೊಂದು ದುಸ್ತರವಾದ ಕೋಪದ ಕೊನೆಯನ್ನು ಹೊಂದುವೆನು". ಎನ್ನಲು ಸಾರಥಿಯು ಅವಳಿರುವ ಸ್ಥಳಕ್ಕೆ ರಥವನ್ನು ನಡೆಯಿಸಿದನು. ಈ ಸಮಯದಲ್ಲಿ ಈ ದಾನವನು ಹೊರಟ ದಾರಿಯಲ್ಲಿ ಭಯಂಕರಗಳಾದ ಉತ್ಪಾತಗಳುಂಟಾದುವು. ಕಲ್ಲುಗಳಿಂದ ಕೂಡಿದ ಕಠಿನವಾದ ಗಾಳಿಯು ಎದುರಾಗಿ ಬೀಸಿತು.

೧೨೨–೧೨೩. ದೊಡ್ಡ ಕೊಳ್ಳಿಯು ಸೂರ್ಯ ಮಂಡಲವನ್ನು ತಡೆದು ಕೆಳಗೆ ಬಿದ್ದಿತು. ಅವನ ಮಾರ್ಗದಲ್ಲಿ ಮೃಗಗಳು ಅಪಸವ್ಯವಾಗಿ ಸಂಚರಿಸಿ ಕುಳಿತು ಕೊಂಡು ವಮನಮಾಡಿದುವು. ಮತ್ತು ಬಹುವಾಗಿ ಮೂತ್ರವನ್ನು ಸುರಿಸುದುವು. ಹದ್ದು ರಥದಧ್ವಜದಲ್ಲಿ ಕುಳಿತುಕೊಂಡು ಕೂಗಿತು.

೧೨೪. ಅವನು ಆ ಎಲ್ಲ ಭಯಂಕರವಾದ ಮಹೋತ್ಪಾತಗಳನ್ನು ಲಕ್ಷಿಸದೆ ಕೋಪದಿಂದ ಆ ದೇವಿಯ ಅಭಿಮುಖವಾಗಿ ಹೋದನು.

ವಿಮುಂಚಂಶ್ಚ ಶರಾನ್ನಾದಾಂಸ್ತಿಷ್ಠತಿಷ್ಠೇತಿ ಚ ಬ್ರುವನ್ ।
ನ ಕಶ್ಚಿದ್ದೃಶ್ಯತೇ ತತ್ರ ತೇಷಾಂ ಮಧ್ಯೇ ನೃಪೋತ್ತಮ ॥ ೧೨೫ ॥
ಮಹಿಷಂ ರೋಷಸಂಯುಕ್ತಂ ಯೋ ವಾರಯತಿ ಸಂಗರೇ ।
ತೇನ ಹತ್ವಾ ಗಣಗಣಾನ್ಕೃತಂ ರುಧಿರಕರ್ದಮಂ ॥ ೧೨೬ ॥
ತತೋ ದೇವೀ ಸಮಾಸಾದ್ಯ ಪ್ರೋಕ್ತಾ ಗರ್ವೇಣ ಪಾರ್ಥಿವ ।
ನ ತ್ವಯಾ ಸಂಗರೋ ಭೀರು ನೂನಂ ಕರ್ತುಂ ಮನೋಚಿತಃ ॥ ೧೨೭ ॥
ನ ಚ ಬಾಲಿಶಿ ಮೇ ವೀರ್ಯಂ ನ ಸೌಭಾಗ್ಯಂ ನ ವಾ ಧನಂ ।
ನ ಕರೋಷಿ ಹಿ ತೇನ ತ್ವಂ ಮಮ ವಾಕ್ಯಂ ಕಥಂಚನ ॥ ೧೨೮ ॥
ನೂನಂ ತತ್ತ್ವೇನ ಜಾನಾಮಿ ಅವಲಿಪ್ತಾಸಿ ಭಾಮಿನಿ ।
ಕುರುಷ್ವಾದ್ಯಾಪಿ ಮೇ ವಾಕ್ಯಂ ಭಾರ್ಯಾ ಭವ ಮಮ ಪ್ರಿಯಾ ॥ ೧೨೯ ॥
ಸ್ತ್ರಿಯಂ ತ್ವಾಂ ನೋತ್ಸಹೇ ಹಂತುಂ ಪೌರುಷೇ ಚ ವ್ಯವಸ್ಥಿತಃ ।
ಅಸಕೃನ್ನಿರ್ಜಿತಃ ಸಂಖ್ಯೇ ಮಯಾ ಶಕ್ರಃ ಸುರೈಃ ಸಹ ॥ ೧೩೦ ॥
ತ್ರೈಲೋಕ್ಯೇ ನಾಸ್ತಿ ಮತ್ತುಲ್ಯಃ ಪುಮಾನ್ಕಶ್ಚಿಚ್ಚ ಬಾಲಿಶೇ ।
ಏವಮುಕ್ತಾ ತತೋ ದೇವೀ ಕೋಪೇನ ಮಹತಾಽನ್ವಿತಾ ॥ ೧೩೧ ॥

---

೧೨೫. ಅವನು ಸಿಂಹನಾದ ಮಾಡುತ್ತ ಬಾಣಗಳನ್ನು ಪ್ರಯೋಗಿಸುತ್ತ ನಿಲ್ಲು ನಿಲ್ಲು ಎಂದು ಹೇಳುತ್ತಿದ್ದನು. ಆಗ ಆ ಗಣಗಳ ನಡುವೆ ಯಾರೂ ಅಲ್ಲಿ ಕಾಣಲಿಲ್ಲ;

೧೨೬. ಸಮರದಲ್ಲಿ ಕೋಪಗೊಂಡ ಮಹಿಷನನ್ನು ಯಾರು ತಡೆಯುವರು. ಅವನು ಗಣಗಳನ್ನು ಕೊಂದು ರಕ್ತದ ಕೆಸರನ್ನುಂಟುಮಾಡಿದನು.

೧೨೭. ದೊರೆಯೆ! ಬಳಿಕ ಅವನು ದೇವಿಯನ್ನು ಕುರಿತು ಹೀಗೆಂದನು. "ಭಯಶಾಲಿನಿಯೆ! ನಿಶ್ಚಯವಾಗಿಯೂ ನಿನ್ನೊಡನೆ ನನಗೆ ಯುದ್ಧವು ಉಚಿತವಲ್ಲ.

೧೨೮. ಮೂಢಳೆ! ನಿನಗೆ ನನ್ನ ಸಾಮರ್ಥ್ಯವಾಗಲಿ, ಸೌಭಾಗ್ಯವಾಗಲಿ, ಹಣವಾಗಲಿ ನಿನಗೆ ತಿಳಿಯದು. ಆದರಿಂದ ನೀನು ನನ್ನ ಮಾತನ್ನು ನಡೆಯಿಸುವುದಿಲ್ಲ.

೧೨೯. ತರುಣಿಯೆ! ನೀನು ನಿಶ್ಚಯವಾಗಿಯೂ ಅಹಂಕಾರಗೊಂಡಿರುವೆ. ಈಗಲಾದರೂ ನನ್ನ ಮಾತನ್ನು ನಡೆಯಿಸಿ. ನನ್ನ ಭಾರ್ಯೆಯಾಗು.

೧೩೦. ಪರಾಕ್ರಮಶಾಲಿಯಾಗಿರುವ ನಾನು ಹೆಂಗಸಾದ ನಿನ್ನನ್ನು ಕೊಲ್ಲಲು ಬಯಸುವುದಿಲ್ಲ. ನಾನು ಅನೇಕ ಸಾರಿ ಯುದ್ಧದಲ್ಲಿ ದೇವತೆಗಳೊಡನೆ ಇಂದ್ರನನ್ನು ಸೋಲಿಸಿರುವೆನು.

೧೩೦–೧೩೧. ಮೂಢಳೆ! ಮೂರು ಲೋಕಗಳಲ್ಲಿ ನನಗೆ ಸರಿಯಾದ ಮನುಷ್ಯನು ಇಲ್ಲ. ಅವನು ಹೀಗೆನ್ನಲು ದೇವಿಯು ಅತ್ಯಂತ ಕುಪಿತಳಾಗಿ ಬಿಲ್ಲು

ಪ್ರಗೃಹ್ಯ ಸಶರಂ ಚಾಪಂ ವಾಕ್ಯಮೇತದುವಾಚ ಹ ।
ನಾಲಾಪೋ ಯುಜ್ಯತೇ ಪಾಪ ಕರ್ತುಂ ಸಹ ಮಮ ತ್ವಯಾ ॥ ೧೩೨ ॥
ಕುಮಾರ್ಯಾಃ ಕಾಮುಯುಕ್ತೇನ ತಥಾಪಿ ಶೃಣು ಮೇ ವಚಃ ।
ನ ತ್ವಯಾ ನಿರ್ಜಿತಃ ಶಕ್ರಃ ಸ್ವವೀರ್ಯೇಣ ರಣಾಜಿರೇ ॥ ೧೩೩ ॥
ಪಿತಾಮಹವರಂ ದೇವಾ ಮನ್ಯಂತೇ ದಾನವಾಧಮ ।
ಗೌರವಾತ್ತಸ್ಯ ತೇನ ತ್ವಮಾತ್ಮಾನಂ ಮನ್ಯಸೇಽಧಿಕಂ ॥ ೧೩೪ ॥
ಮುಕ್ತ್ವೈಕಾಂ ಕಾಮಿನೀಂ ಪಾಪ ತ್ವಂ ಕೃತಃ ಪದ್ಮಯೋನಿನಾ ।
ಅವಧ್ಯಃ ಸರ್ವಸತ್ವಾನಾಂ ಪುಂಸಾಂ ಜಾತೋ ಧರಾತಲೇ ॥ ೧೩೫ ॥
ಪಿತಾಮಹವರಃ ಸೋಽತ್ರ ಜಯಶೀಲೋಽಸಿ ದಾನವ ।
ಯದಿ ತೇ ಪೌರುಷಂ ಚಾಸ್ತಿ ತಚ್ಛೀಘ್ರಂ ಸಂಪ್ರದರ್ಶಯ ॥ ೧೩೬ ॥
ಏಷಾ ತ್ವಾಮಿಷುಭಿಸ್ತೀಕ್ಷ್ಣೈರ್ನಯಾಮಿ ಯಮಸಾದನಂ ।
ಏವಮುಕ್ತ್ವಾ ತತೋ ದೇವೀ ಶರನಷ್ಟೌ ಮುಮೋಚ ಹ ॥ ೧೩೭ ॥
ಚತುರ್ಭಿಶ್ಚತುರೋ ವಾಹನನಯದ್ಯಮಸಾದನಂ ।
ಸಾರಥೇಶ್ಚ ಶಿರಃ ಕಾಯಾಚ್ಛರೇಣೈಕೇನ ಚಾಕ್ಷಿಪತ್ ॥ ೧೩೮ ॥

---

ಬಾಣಗಳನ್ನು ತೆಗೆದುಕೊಂಡು ಇಂತೆಂದಳು. ಪಾಪಿಯೇ! ಕಾಮಿಯಾದ ನೀನು ಕನ್ಯೆಯಾದ ನನ್ನೊಡನೆ ಮಾತಾಡಲು ಯೋಗ್ಯನಲ್ಲ. ಆದರೂ ನನ್ನ ಮಾತನ್ನು ಕೇಳು. ನೀನು ಯುದ್ಧಾಂಗಣದಲ್ಲಿ ನಿನ್ನ ಶಕ್ತಿಯಿಂದ ಇಂದ್ರನನ್ನು ಜಯಿಸಲಿಲ್ಲ. ನೀಚ ದಾನವನೆ! ದೇವತೆಗಳು ಬ್ರಹ್ಮನ ವರವನ್ನು ಗೌರವಿಸುತ್ತಾರೆ. ಆದರಿಂದ ನೀನು ನಿನ್ನನ್ನು ಅಧಿಕನನ್ನಾಗಿ ತಿಳಿಯುವೆ.

೧೩೫. ಬ್ರಹ್ಮನು ಒಬ್ಬ ಸ್ತ್ರೀಯನ್ನು ಬಿಟ್ಟು ಭೂಮಿಯಲ್ಲಿ ಉಳಿದ ಸಕಲ ಪ್ರಾಣಿಗಳಿಗೆ ನಿನ್ನನ್ನು ಅವಧ್ಯನನ್ನಾಗಿ ಮಾಡಿರುವನು.

೧೩೬. ದಾನವ! ಬ್ರಹ್ಮನ ವರವು ಹೀಗಿರುವುದರಿಂದ ನೀನು ಜಯಶೀಲನಾಗಿರುವೆ. ನಿನ್ನಲ್ಲಿ ಪರಾಕ್ರಮವಿದ್ದರೆ ಅದನ್ನು ಶೀಘ್ರವಾಗಿ ತೋರಿಸು.

೧೩೭. ನಾನು ನಿನ್ನನ್ನು ಹರಿತವಾದ ಬಾಣಗಳಿಂದ ಯಮಪುರಿಗೆ ಒಯ್ಯುವೆನು". ದೇವಿಯು ಹೀಗೆ ಹೇಳಿ ಎಂಟು ಬಾಣಗಳನ್ನು ಪ್ರಯೋಗಿಸಿದಳು.

೧೩೮-೧೩೯. ನಾಲ್ಕು ಬಾಣಗಳಿಂದ ಅವನ ವಾಹನಗಳನ್ನು ಕೊಂದಳು. ಒಂದು ಬಾಣದಿಂದ ಸಾರಥಿಯ ತಲೆಯನ್ನು ಕತ್ತರಿಸಿದಳು. ಇನ್ನೊಂದು ಬಾಣದಿಂದ ಧ್ವಜವನ್ನು ಕತ್ತರಿಸಿದಳು. ಮತ್ತೊಂದು ಬಾಣದಿಂದ ಅವನ ಹೃದಯಕ್ಕೆ

ಧ್ವಜಂ ಚಿಚ್ಛೇದ ಚೈಕೇನ ಸತೋಽನ್ಯೇನ ಹೃದೆ ಕ್ಷತಃ ।
ಸ ಗಾತ್ರವಿದ್ಧೋ ವ್ಯಥಿತೋ ಧ್ವಜಯಷ್ಟಿಂ ಸಮಾಶ್ರಿತಃ ॥ ೧೪೯ ॥
ಮೂರ್ಛಯಾ ಸಹಿತೋ ರಾಜನ್ಕಿಂಚಿತ್ಕಾಲಮಧೋಮುಖಃ ।
ತತಃ ಸಚೇತನೋ ಭೂತ್ವಾ ಮುಮೋಚ ನಿಶಿತಾಞ್ಛರಾನ್ ॥ ೧೫೦ ॥
ದೇವೀ ಸಖೀಸಮಾಯುಕ್ತಾ ಸರ್ವದೇಹೇಷ್ವತಾಡಯತ್ ।
ತತಃ ಕ್ಷುರಪ್ರಬಾಣೇನ ಧನುಸ್ತಸ್ಯ ದ್ವಿಧಾಕರೋತ್ ॥ ೧೫೧ ॥
ಛಿನ್ನಧನ್ವಾ ತತೋ ದೈತ್ಯಶ್ಚರ್ಮಖಡ್ಗಸಮನ್ವಿತಃ ।
ವಿದ್ರಾವ್ಯ ಸಹಸಾ ದೇವೀಂ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೧೫೨ ॥
ತಸ್ಯ ಚಾಪತತಸ್ತೂರ್ಣಂ ಖಡ್ಗಂ ದ್ವಾಭ್ಯಾಂ ಹ್ಯಕೃಂತಯತ್ ।
ಶರಾಭ್ಯಾಮರ್ಧಬಾಣೇನ ಪ್ರಹಸ್ಯ ಪ್ರಾಸಮೇವ ಚ ॥ ೧೫೩ ॥
ವಿಶಸ್ತ್ರೋ ವಿರಥೋ ರಾಜನ್ಸ ತದಾ ದಾನವಾಧಮಃ ।
ತತೋಽಸ್ಮರಚ್ಛರಾನ್ಭೂಪ ಶಸ್ತ್ರಾಣಿ ವಿವಿಧಾನಿ ಚ ॥ ೧೫೪ ॥
ಬ್ರಹ್ಮಾಸ್ತ್ರಂ ಮನಸಿ ಧ್ಯಾಯಂಸ್ತೃಣಂ ತಸ್ಯೈ ಮುಮೋಚ ಸಃ ।
ಮುಕ್ತೇನಾಸ್ತ್ರೇಣ ತಸ್ಮಿಂಸ್ತು ಧೂಮವರ್ತಿರ್ವ್ಯಜಾಯತ ॥ ೧೫೫ ॥

---

ಹೊಡೆದಳು. ದೇಹದಲ್ಲಿ ತಾಡಿತನಾದ ಅವನು ವ್ಯಥೆಗೊಂಡು ಧ್ವಜಂಡದವನ್ನು ಆಶ್ರಯಿಸಿದನು

೧೫೦. ಅವನು ಸ್ವಲ್ಪಹೊತ್ತು ಮೂರ್ಛೆಗೊಂಡು ಕೆಳಮುಖನಾಗಿ ನಿಂತನು. ಅನಂತರ ಎಚ್ಚರಗೊಂಡು ತೀಕ್ಷ್ಣವಾದ ಬಾಣಗಳನ್ನು ಪ್ರಯೋಗಿಸಿದನು.

೧೫೧. ದೇವಿಯು ಸಖಿಯೊಡನೆ ಅವನ ಸಕಲಾಂಗಗಳಲ್ಲಿ ಹೊಡೆದಳು. ಅನಂತರ ಕ್ಷುರಪ್ರ ಬಾಣದಿಂದ ಅವನ ಬಿಲ್ಲನ್ನು ತುಂಡುಮಾಡಿದಳು.

೧೫೨. ಧನುಸ್ಸನ್ನು ಕತ್ತರಿಸಲು ಆ ದೈತ್ಯನು ಗುರಾಣಿ ಕತ್ತಿಗಳಿಂದ ಸಹಿತನಾಗಿ ಕೂಡಲೆ ದೇವಿಯನ್ನು ಅಟ್ಟಿ ಬಂದೂ ನಿಲ್ಲು ನಿಲ್ಲು ಎಂದನು.

೧೫೩. ಆ ದೇವಿಯು ನಕ್ಕು ಮೇಲೆ ಬೀಳುತ್ತಿರುವ ಅವನ ಕತ್ತಿಯನ್ನೂ ಪ್ರಾಸಾಯುಧಗಳನ್ನೂ, ಎರಡು ಬಾಣಗಳಿಂದಲೂ, ಅರ್ಧ ಬಾಣಗಳಿಂದಲೂ ಕತ್ತರಿಸಿದಳು.

೧೫೪. ಶಸ್ತ್ರವಿಲ್ಲದವನೂ, ರಥವಿಲ್ಲದವನೂ ಆದ ಆ ನೀಚ ದಾನವನ ಆಗ ಬಾಣಗಳನ್ನೂ, ವಿವಿಧ ಶಸ್ತ್ರಗಳನ್ನೂ ಸ್ಮರಿಸಿದನು.

೧೫೫. ಅವನು ಮನಸ್ಸಿನಲ್ಲಿ ಬ್ರಹ್ಮಾಸ್ತ್ರವನ್ನು ಧ್ಯಾನಿಸುತ್ತ ಅವಳ ಮೇಲೆ ಒಂದು ಹುಲ್ಲನ್ನು ಪ್ರಯೋಗಿಸಿದನು. ಅವನು ಆ ಅಸ್ತ್ರವನ್ನು ಪ್ರಯೋಗಿಸಲು ಧೂಮಜ್ವಾಲೆಯುಂಟಾಯಿತು.

ಏತಸ್ಮಿನ್ನೇವ ಕಾಲೇ ತು ಸಬ್ರಹ್ಮಾಸ್ತೇ ದಿವೌಕಸಃ ।
ಪರಂ ಭಯಮನುಪ್ರಾಪ್ತಾ ದೃಷ್ಟ್ವಾ ತಸ್ಯ ಪರಾಕ್ರಮಂ ॥ ೧೪೬ ॥
ತತೋ ದೇವೀ ಕ್ಷಣಂ ಧ್ಯಾತ್ವಾ ತದಸ್ತ್ರಂ ಪಾರ್ಥಿವೋತ್ತಮ ।
ಬ್ರಹ್ಮಾಸ್ತ್ರೇಣಾಹನತ್ತೂರ್ಣಂ ತತೋ ವ್ಯರ್ಥಂ ವ್ಯಜಾಯತ ॥ ೧೪೭ ॥
ಬ್ರಹ್ಮಾಸ್ತ್ರೇ ನಿಷ್ಫಲೇ ಜಾತೇ ಹ್ಯಾಗ್ನೇಯಂ ದಾನವೋತ್ತಮಃ ।
ಪ್ರೇಷಯಾಮಾಸ ತಾಂ ಕ್ರುದ್ಧೋ ಹ್ಯಹನದ್ವಾರುಣೇನ ಸಾ ॥ ೧೪೮ ॥
ಏವಂ ನಾನಾಪ್ರಕಾರಾಣಿ ತೇನ ಮುಕ್ತಾನಿ ಸಾ ತದಾ ।
ಅಸ್ತ್ರಾಣಿ ನಿಷ್ಫಲಾನ್ಯೇವ ಚಕ್ರೇ ದೇವೀ ಸಹಸ್ರಶಃ ॥ ೧೪೯ ॥
ಏವಂ ನಿಃಶೇಷಿತಾಸ್ತ್ರೋಽಸೌ ದಾನವೋ ಬಲವತ್ತರಃ ।
ಚಕಾರ ಪರಮಾಂ ಮಾಯಾಂ ದಿವ್ಯೈರಸ್ತ್ರೈಃ ಸುರೇಶ್ವರೀ ॥ ೧೫೦ ॥
ವೃಕ್ಷಿಪಚ್ಛ ಮಹಾಕಾಯಂ ಮಹಿಷಂ ಪರ್ವತಾಕೃತಿ ।
ದೀರ್ಘತೀಕ್ಷ್ಣವಿಷಾಣಾಭ್ಯಾಂ ಯುಕ್ತಮಂಜನಸಂನಿಭಂ ॥ ೧೫೧ ॥
ಸಿಂಹಸ್ಕಂಧಂ ಚ ಸಾ ದೇವೀ ತತಸ್ತಮಧ್ಯರೋಹತ ।
ಖಡ್ಗೇನ ತೀಕ್ಷ್ಣೇನ ಶಿರೋ ದೇವೀ ತಸ್ಯ ನ್ಯಕೃಂತತ ॥ ೧೫೨ ॥

---

೧೪೬. ಈ ಸಮಯದಲ್ಲಿ ಬ್ರಹ್ಮನಿಂದ ಸಹಿತರಾದ ದೇವತೆಗಳು ಅವನ ಪರಾಕ್ರಮವನ್ನು ಕಂಡು ಭಯಗೊಂಡರು.

೧೪೭. ತರುವಾಯ ದೇವಿಯು ಕ್ಷಣಕಾಲ ಆ ಬ್ರಹ್ಮಾಸ್ತ್ರವನ್ನು ಧ್ಯಾನಿಸಿ ಅದರಿಂದ ಅವನ ಅಸ್ತ್ರವನ್ನು ಹೊಡೆಯಲು ಅದು ವ್ಯರ್ಥವಾಯಿತು.

೧೪೮. ಆ ದಾನವೇಂದ್ರನು ತನ್ನ ಬ್ರಹ್ಮಾಸ್ತ್ರವು ವ್ಯರ್ಥವಾಗಲು ಕುಪಿತನಾಗಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ದೇವಿಯು ಅದನ್ನು ವಾರುಣಾಸ್ತ್ರದಿಂದ ಹೊಡೆದಳು.

೧೪೯. ಹೀಗೆ ಅವನು ಪ್ರಯೋಗಿಸಿದ ನಾನಾವಿಧವಾದ ಸಾವಿರಾರು ಆಯುಧಗಳನ್ನು ದೇವಿಯು ವ್ಯರ್ಥಗೊಳಿಸಿದಳು.

೧೫೦–೧೫೨. ಹೀಗೆ ಅಸ್ತ್ರಹೀನನಾದ ಬಲಿಷ್ಠ ದಾನವನು ಅತ್ಯಂತ ಮಾಯೆಯನ್ನು ಆಚರಿಸಲು ದೇವಿಯು ದೊಡ್ಡ ಶರೀರವುಳ್ಳವನೂ, ಪರ್ವತದ ಆಕಾರವುಳ್ಳವನೂ, ಉದ್ದವೂ, ಹರಿತವೂ ಆದ ಕೊಂಬುಗಳಿಂದ ಸಹಿತನೂ, ಕಾಡಿಗೆಯಂತೆ ಕಪ್ಪಗಿರುವವನೂ, ಸಿಂಹದಂತೆ ಹೆಗಲುಳ್ಳವನೂ ಆದ ಆ ಮಹಿಷನ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಅವನ ಮೇಲೆ ಏರಿ ಹರಿತವಾದ ಕತ್ತಿಯಿಂದ ಅವನ ತಲೆಯನ್ನು ಕತ್ತರಿಸಿದಳು.

ಶೂಲೇನ ಭೇದಯಾಮಾಸ ಪೃಷ್ಠದೇಶೇ ಸುರೇಶ್ವರೀ ।
ತತಃ ಕಲೇವರಾತ್ತಸ್ಯ ನಿಷ್ಕ್ರಾಮ ಮಹಾಸ್ಸುಮಾನ್ ॥ ೧೫೩ ॥

ಚರ್ಮಖಡ್ಗಧರೋ ರೌದ್ರಸ್ತಿಷ್ಠತಿಷ್ಠೇತಿ ಚಾಬ್ರವೀತ್ ।
ತಮುಷ್ಯೇವಂ ಗೃಹೀತ್ವಾ ತತ್ಕೇಶಪಾಶೇ ಸುರೇಶ್ವರೀ ॥ ೧೫೪ ॥

ನಿಸ್ತ್ರಿಂಶೇನಾಹನತ್ಕ್ರೋಧಾತ್ ಸ ಚ ಪ್ರಾಣೈರ್ವ್ಯಯುಜ್ಯತ ।
ದಾನವಃ ಪಾರ್ಥಿಶ್ರೇಷ್ಠ ಪಾರ್ಶ್ವೇ ಸಿಂಹವಿದಾರಿತೇ ॥ ೧೫೫ ॥

ತತೋ ಜಘಾನ ಭೂಯೋಽಪಿ ದಾನವಾನ್ಸಾರುಷಾನ್ವಿತಾ ।
ಹತಶೇಷಾಶ್ಚ ಯೇ ದೈತ್ಯಾ ನಿರ್ಭಿದ್ಯ ಧರಣೀತಲಂ ॥ ೧೫೬ ॥

ಪ್ರವಿಷ್ಟಾ ಭಯಸಂತ್ರಸ್ತಾಃ ಪಾತಾಲಂ ಜೀವಿತೈಷಿಣಃ ।
ತತೋ ದೇವಗಣಾಃ ಸರ್ವೇ ವಸವೋ ಮರುತೋಽಶ್ವಿನೌ ॥ ೧೫೭ ॥

ವಿಶ್ವೇದೇವಾಸ್ತಥಾ ಸಾಧ್ಯಾ ರುದ್ರಾ ಗುಹ್ಯಕಕಿನ್ನರಾಃ ।
ಆದಿತ್ಯಾಃ ಶಕ್ರಸಂಯುಕ್ತಾಃ ಸಮೇತ್ಯ ಪರಮೇಶ್ವರೀಂ ॥ ೧೫೮ ॥

ಸಮಂತಾದ್ದಿವ್ಯಪುಷ್ಪೈಶ್ಚ ತಾಂ ದೇವೀಂ ಸಮವಾಕಿರನ್ ।
ಸ್ತುವಂತೋ ವಿವಿಧೈಃ ಸ್ತೋತ್ರೈರ್ನಮಂತೋ ಭಕ್ತಿತತ್ಪರಾಃ ॥ ೧೫೯ ॥

---

೧೫೨–೧೫೫. ಬೆನ್ನನ್ನು ಶೂಲದಿಂದ ಸೀಳಿದಳು. ತರುವಾಯ ಅವನ ಶರೀರದಿಂದ ಗುರಾಣಿ, ಖಡ್ಗಗಳನ್ನು ಧರಿಸಿದವನೂ, ಭಯಂಕರನೂ ಆದ ಮಹಾಪುರುಷನೊಬ್ಬನು ಹೊರಟು ನಿಲ್ಲು ನಿಲ್ಲು ಎಂದನು. ದೇವಿಯು ಅವನ ತಲೆಕೂದಲನ್ನು ಹಿಡಿದು ಕತ್ತಿಯಿಂದ ಬಲವಾತ ಹೊಡೆಯಲು ಮೃತನಾದನು. ಅವನನ್ನು ಹತ್ತಿರದಲ್ಲಿರುವ ಸಿಂಹವು ಸೀಳಿತು.

೧೫೬–೧೫೯. ತರುವಾಯ ಅವಳು ಕುಪಿತಳಾಗಿ ಮರಳಿ ಆ ದಾನವರನ್ನು ಕೊಂದಳು. ಮಡಿದುಳಿದ ದೈತ್ಯರು ಭಯದಿಂದ ಭೂಮಿಯನ್ನು ಭೇದಿಸಿ ಬದುಕಲಿಚ್ಛೆಯಿಂದ ಪಾತಾಳವನ್ನು ಹೊಕ್ಕರು. ಅನಂತರ ಸಮಸ್ತ ದೇವತೆಗಳೂ, ವಸುಗಳೂ, ಮರುತ್ತುಗಳೂ, ವಿಶ್ವೇದೇವರೂ, ಸಾಧ್ಯ, ರುದ್ರ, ಗುಹ್ಯ, ಕಿನ್ನರ, ಆದಿತ್ಯರೂ, ದೇವೇಂದ್ರನೊಡನೆ ದೇವಿಯು ಎಡೆಗೆ ಹೋಗಿ ಅವಳನ್ನು ಬಗೆ ಬಗೆಯ ಸ್ತೋತ್ರಗಳಿಂದ ಸ್ತುತಿಸುತ್ತ, ಭಕ್ತಿಯಿಂದ ನಮಸ್ಕರಿಸುತ್ತ ಸುತ್ತಲೂ ದಿವ್ಯ ಪುಷ್ಪಗಳನ್ನು ಎರಚಿದರು.

ಯುಕ್ತಂ ಕೃತಂ ಮಹೇಶಾನಿ ಯದ್ಧತಃ ಪಾಪಕೃತ್ತಮಃ ।
ತ್ರೈಲೋಕ್ಯಂ ಸಕಲಂ ಧ್ವಸ್ತಂ ಪಾಪೇನಾನೇನ ಸುಂದರಿ ॥ ೧೬೦ ॥
ತ್ವಯಾ ಪತ್ತಂ ಪುನಾ ರಾಜ್ಯಂ ವಾಸವಸ್ಯ ತ್ರಿವಿಷ್ಟಪೇ ।
ತಸ್ಮಾದ್ವರಯ ಭದ್ರಂ ತೇ ವರಂ ಯನ್ಮನಸೀಪ್ಸಿತಂ ।
ಸರ್ವೇ ದೇವಾಃ ಪ್ರಸನ್ನಾಸ್ತೇ ಪ್ರದಾಸ್ಯಂತಿ ನ ಸಂಶಯಃ ॥ ೧೬೧ ॥

ದೇವ್ಯುವಾಚ :—

ಯದಿ ದೇವಾಃ ಪ್ರಸನ್ನಾ ಮೇ ಯದಿ ದೇಯೋ ವರೋ ಮಮ ।
ಆಶ್ರಮೋಽತ್ರೈವ ಮೇ ಪುಣ್ಯೋ ಜಾಯತಾಂ ಖ್ಯಾತಿಸಂಯುತಃ ॥೧೬೨॥
ಅಸ್ಮಿಂಶ್ಚಾಹಂ ಸದಾ ದೇವಾಃ ಸ್ಥಾಸ್ಯಾಮಿ ವರಪರ್ವತೇ ॥ ೧೬೩ ॥

ಬ್ರಹ್ಮೋವಾಚ :—

ರೂಪೇಣಾನೇನ ದೇವೇಶಿ ಯೇ ತ್ವಾಂ ದ್ರಕ್ಷ್ಯಂತಿ ಮಾನವಾಃ ।
ಆಶ್ರಮೇಽತ್ರ ಮಹಾಪುಣ್ಯೇ ತೇ ಯಾಸ್ಯಂತಿ ಪರಾಂ ಗತಿಂ ॥ ೧೬೪ ॥
ಬ್ರಹ್ಮಜ್ಞಾನಸಮಾಯುಕ್ತಾಸ್ತೇ ಭವಿಷ್ಯಂತಿ ಮಾನವಾಃ ॥ ೧೬೫ ॥
ಯಸ್ಮಾಚ್ಚಂಡಂ ಕೃತಂ ಕರ್ಮ ತ್ವಯಾ ದಾನವಸೂದನಾತ್ ।
ತಸ್ಮಾತ್ತ್ವಂ ಚಂಡಿಕಾನಾಮ ಲೋಕೇ ಖ್ಯಾತಿಂ ಗಮಿಷ್ಯಸಿ ॥ ೧೬೬ ॥

---

೧೬೦. ಮಹೇಶ್ವರಿ ! ಮೂರು ಲೋಕಗಳನ್ನು ಸಂಪೂರ್ಣವಾಗಿ ನಾಶಗೊಳಿಸಿದ ಪಾಪಿಯಾದ ಈ ದಾನವನನ್ನು ಕೊಂದು ಉಚಿತಕಾರ್ಯವನ್ನು ಮಾಡಿದೆ.

೧೬೧. ನೀನು ದೇವೇಂದ್ರನಿಗೆ ಮರಳಿ ದೇವರಾಜ್ಯವನಿತ್ತಿರುವೆ. ಆದ್ದರಿಂದ ನಿನ್ನ ಮನಸ್ಸಿಗಿಷ್ಟವಾದ ವರವನ್ನು ಕೇಳಿಕೊ. ಪ್ರಸನ್ನರಾದ ಸಮಸ್ತ ದೇವತೆಗಳೂ ನಿನಗೆ ಆ ವರವನ್ನು ನಿಜವಾಗಿಯೂ ಕೊಡುವರು.

೧೬೨. ದೇವಿಯು ಹೇಳುತ್ತಾಳೆ:—ದೇವತೆಗಳು ಪ್ರಸನ್ನರಾಗಿ ನನಗೆ ವರವನ್ನು ಕೊಡುವುದಾದರೆ ಇಲ್ಲಿಯೇ ಪುಣ್ಯಕರವಾದ ನನ್ನ ಆಶ್ರಮವು ಪ್ರಸಿದ್ಧಿಗೊಳ್ಳಲಿ.

೧೬೩. ದೇವತೆಗಳೆ ! ನಾನು ಇಲ್ಲಿ ಯಾವಾಗಲೂ ನೆಲಸಿರುವೆನು.

೧೬೪. ಬ್ರಹ್ಮನು ಹೇಳುತ್ತಾನೆ :—ದೇವೇಶ್ವರಿ ! ಮಹಾಪುಣ್ಯಕರವಾದ ಈ ನನ್ನ ಆಶ್ರಮದಲ್ಲಿ ನಿನ್ನನ್ನು ಈ ರೂಪದಿಂದ ನೋಡುವವರು ಉತ್ತಮ ಗತಿಯನ್ನು ಹೊಂದುವರು.

೧೬೫. ಆ ಮನುಷ್ಯರು ಬ್ರಹ್ಮಜ್ಞಾನಿಗಳಾಗುವರು.

೧೬೬. ನೀನು ಮಹಿಷ ದಾನವನನ್ನು ಕೊಂದು ಭಯಂಕರ ಕರ್ಮವನ್ನೆಸಗಿದ್ದರಿಂದ ಚಂಡಿಕೆಯೆಂದು ಲೋಕದಲ್ಲಿ ಪ್ರಸಿದ್ಧಳಾಗುವೆ.

33

ತವ ನಾಮ್ನಾ ತಥಾ ಖ್ಯಾತ ಆಶ್ರಮೋಽಯಂ ಭವಿಷ್ಯತಿ ॥ ೧೬೭ ॥
ಯೇಽತ್ರ ಕೃಷ್ಣಚತುರ್ದಶ್ಯಾಮಾಶ್ವಿನೇ ಮಾಸಿ ಶೋಭನೇ ।
ಪಿಂಡದಾನಂ ಕರಿಷ್ಯಂತಿ ಸ್ನಾನಂ ಕೃತ್ವಾ ಸಮಾಹಿತಾಃ ॥ ೧೬೮ ॥
ಗಯಾಶ್ರಾದ್ಧಫಲಂ ಕೃತ್ಸ್ನಂ ತೇಷಾಂ ದೇವಿ ಭವಿಷ್ಯತಿ ।
ತ್ವದ್ದರ್ಶನಾತ್ತಥಾ ಮುಕ್ತಿಃ ಪಾತಕಸ್ಯ ಭವಿಷ್ಯತಿ ॥ ೧೬೯ ॥

ಕೃಷ್ಣ ಉವಾಚ :—

ಏಕರಾತ್ರಿಂ ಭವಿಷ್ಯಂತಿ ಯೇಽತ್ರ ಶ್ರದ್ಧಾಸಮನ್ವಿತಾಃ ।
ಉಪವಾಸಪರಾಸ್ತೇಷಾಂ ಪಾಪಂ ಯಾಸ್ಯತಿ ಸಂಕ್ಷಯಂ ॥ ೧೭೦ ॥
ಪುತ್ರಹೀನಶ್ಚ ಯೋ ಮರ್ತ್ಯೋ ನಾರೀ ವಾಪಿ ಸಮಾಹಿತಾ ।
ತನ್ಮನಾಃ ಪಿಂಡದಾನಂ ವೈ ತಥಾ ಸ್ನಾನಂ ಕರಿಷ್ಯತಿ ।
ಅಪುತ್ರೋ ಲಭತೇ ಶೀಘ್ರಂ ಸುಪುತ್ರಂ ನಾತ್ರ ಸಂಶಯಃ ॥ ೧೭೧ ॥

ಇಂದ್ರ ಉವಾಚ :—

ಭ್ರಷ್ಟರಾಜ್ಯೋ ನೃಪೋ ಯೋಽತ್ರ ಸ್ನಾನಂ ದಾನಂ ಕರಿಷ್ಯತಿ
ಸರ್ವಶತ್ರುಕ್ಷಯಸ್ತಸ್ಯ ರಾಜ್ಯಾವಾಪ್ತಿರ್ಭವಿಷ್ಯತಿ ॥ ೧೭೨ ॥

ಅಗ್ನಿರುವಾಚ :—

ಅತ್ರಾಗತ್ಯ ಶುಚಿಃ ಶ್ರಾದ್ಧಂ ಯಃ ಕರಿಷ್ಯತಿ ಮಾನವಃ ।
ಆತ್ಮವಿತ್ತಾನುಸಾರೇಣ ತಸ್ಯ ಯಜ್ಞಫಲಂ ಭವೇತ್ ॥ ೧೭೩ ॥

---

೧೬೭. ಈ ಆಶ್ರಮವು ನಿನ್ನ ಹೆಸರಿನಿಂದ ಪ್ರಸಿದ್ಧಿಗೊಳ್ಳುವುದು.

೧೬೮-೧೬೯. ಇಲ್ಲಿ ಮಂಗಳಕರವಾದ ಆಶ್ವಿನ ಕೃಷ್ಣ ಚತುರ್ದಶೀದಿನ ಸಾವಧಾನ ಮನಸ್ಸಿನಿಂದ ಮಿಂದು ಪಿಂಡಪ್ರದಾನ ಮಾಡಿದವರಿಗೆ ಸಂಪೂರ್ಣವಾಗಿ ಗಯಾಶ್ರಾದ್ಧದ ಫಲವು ಉಂಟಾಗುವುದು. ಹಾಗೆಯೇ ನಿನ್ನ ದರ್ಶನದಿಂದ ಪಾಪವು ಮುಕ್ತವಾಗುವುದು.

೧೭೦. ಕೃಷ್ಣನು ಹೇಳುತ್ತಾನೆ :—ಇಲ್ಲಿ ಒಂದುರಾತ್ರಿ ಶ್ರದ್ಧೆಯಿಂದ ಉಪವಾಸ ಮಾಡಿದವರ ಪಾಪವು ನಾಶವಾಗುವುದು.

೧೭೧. ಮಕ್ಕಳಿಲ್ಲದ ಗಂಡಸಾಗಲಿ ಹೆಂಗಸಾಗಲಿ ಇಲ್ಲಿ ಸಾವಧಾನ ಮನಸ್ಸಿನಿಂದ ಮಿಂದು ಪಿಂಡದಾನ ಮಾಡಿದರೆ ಸುಪುತ್ರನನ್ನು ನಿಜವಾಗಿಯೂ ಪಡೆಯುವರು.

೧೭೨. ಇಂದ್ರನು ಹೇಳುತ್ತಾನೆ:—ಇಲ್ಲಿ ರಾಜ್ಯಭ್ರಷ್ಟನಾದ ದೊರೆಯು ಸ್ನಾನ ದಾನಗಳನ್ನು ಮಾಡಿದರೆ ಅವನ ಸಕಲ ಶತ್ರುಗಳೂ ನಾಶವಾಗುವರು. ರಾಜ್ಯ ಲಾಭವಾಗುವುದು.

೧೭೩. ಅಗ್ನಿಯು ಹೇಳುತ್ತಾನೆ:—ಮನುಷ್ಯನು ಇಲ್ಲಿಗೆ ಬಂದು ತನ್ನ ಪ್ರತ್ಯಕ್ಷಾನುಗುಣವಾಗಿ ಶ್ರಾದ್ಧಮಾಡಿದರೆ ಯಜ್ಞದ ಫಲವು ಲಭಿಸುವುದು.

ಯಮ ಉವಾಚ :—

ಅತ್ರ ಸ್ನಾತ್ವಾ ತಿಲಾನ್ಯಸ್ತು ಬ್ರಾಹ್ಮಣೇಭ್ಯಃ ಪ್ರದಾಸ್ಯತಿ ।
ಅಲ್ಪಮೃತ್ಯುಭಯಂ ತಸ್ಯ ನ ಕದಾಚಿದ್ಭವಿಷ್ಯತಿ ॥ ೧೭೪ ॥

ರಾಕ್ಷಸಾ ಊಚುಃ :—

ಪಿಂಡದಾನಂ ನರಾ ಯೇಽತ್ರ ಕರಿಷ್ಯಂತಿ ತವಾಽಽಶ್ರಮೇ ।
ಪ್ರೇತೋತ್ಥಂ ನ ಭಯಂ ತಸ್ಯ ದೇವಿ ಕ್ವಾಪಿ ಭವಿಷ್ಯತಿ ॥ ೧೭೫ ॥

ವರುಣ ಉವಾಚ :—

ಸ್ನಾನಾರ್ಥಂ ಬ್ರಾಹ್ಮಣೇಂದ್ರಾಣಾಂ ಯೋಽತ್ರ ತೋಯಂ ಪ್ರದಾಸ್ಯತಿ ।
ವಿಮಲಸ್ತು ಸದಾ ಭಾವಿ ಇಹ ಲೋಕೇ ಪರತ್ರ ಚ ॥ ೧೭೬ ॥

ವಾಯುರುವಾಚ :—

ವಿಲೇಪನಾನಿ ಶುಭ್ರಾಣಿ ಸುಗಂಧಾನಿ ವಿಶೇಷತಃ ।
ಯೋಽತ್ರ ದಾಸ್ಯತಿ ವಿಪ್ರೇಭ್ಯೋ ನೀರೋಗಃ ಸ ಭವಿಷ್ಯತಿ ॥ ೧೭೭ ॥

ಧನದ ಉವಾಚ :—

ಯೋಽತ್ರ ವಿತ್ತಂ ಯಥಾಶಕ್ತ್ಯಾ ಬ್ರಾಹ್ಮಣೇಭ್ಯಃ ಪ್ರದಾಸ್ಯತಿ ।
ನ ಭವಿಷ್ಯತಿ ಲೋಕೇ ಸ ವಿತ್ತಹೀನಃ ಕಥಂಚನ ॥ ೧೭೮ ॥

---

೧೭೪. ಯಮನು ಹೇಳುತ್ತಾನೆ:—ಇಲ್ಲಿ ಮಿಂದು ಬ್ರಾಹ್ಮಣರಿಗೆ ತಿಲದಾನ ಮಾಡುವವನಿಗೆ ಸ್ವಲ್ಪವೂ ಮೃತ್ಯುಭಯವುಂಟಾಗುವುದಿಲ್ಲ.

೧೭೫. ರಾಕ್ಷಸರು ಹೇಳುತ್ತಾರೆ :—ದೇವಿ ! ನಿನ್ನ ಆಶ್ರಮದಲ್ಲಿ ಪಿಂಡಪ್ರದಾನ ಮಾಡಿದ ಮಾನವರಿಗೆ ಒಂದೆಡೆಯಲ್ಲಿಯೂ ಪ್ರೇತಭಯವುಂಟಾಗುವುದಿಲ್ಲ.

೧೭೬. ವರುಣನು ಹೇಳುತ್ತಾನೆ:—ಮನುಷ್ಯರು ಇಲ್ಲಿ ಬ್ರಾಹ್ಮಣರಿಗೆ ಸ್ನಾನಕ್ಕಾಗಿ ನೀರನ್ನು ದಾನಮಾಡಿದರೆ ಇಹ ಪರಲೋಕಗಳಲ್ಲಿ ಶುದ್ಧರಾಗುವರು.

೧೭೭. ವಾಯುವು ಹೇಳುತ್ತಾನೆ :—ಇಲ್ಲಿ ಬ್ರಾಹ್ಮಣರಿಗೆ ಶುಭ್ರವೂ,ಸುಗಂಧವೂ ಆದ ವಿಲೇಪನ ದ್ರವ್ಯಗಳನ್ನು ದಾನಮಾಡಿದವರು ರೋಗವಿಲ್ಲದವರಾಗುವರು.

೧೭೮. ಧನದನು ಹೇಳುತ್ತಾನೆ :—ಇಲ್ಲಿ ಬ್ರಾಹ್ಮಣರಿಗೆ ಶಕ್ತ್ಯನುಸಾರ ದ್ರವ್ಯವನ್ನು ದಾನಮಾಡಿದವನು ಈ ಲೋಕದಲ್ಲಿ ದ್ರವ್ಯಹೀನನಾಗುವುದಿಲ್ಲ.

ಈಶ್ವರ ಉವಾಚ :—
ಯೋಽತ್ರ ವ್ರತಪರೋ ಭೂತ್ವಾ ಚಾತುರ್ಮಾಸ್ಯಂ ವಸಿಷ್ಯತಿ ।
ಇಹ ಲೋಕೇ ಪರೇ ಚೈವ ತಸ್ಯ ಭಾವಿ ಸದಾ ಸುಖಂ ॥ ೧೭೯ ॥

ವಸವ ಊಚುಃ :—
ತ್ರಿರಾತ್ರಂ ಯೋ ನರಃ ಸಮ್ಯಗುಪವಾಸಂ ಕರಿಷ್ಯತಿ ।
ಆಜನ್ಮಮರಣಾತ್ಪಾಪಾನ್ಮುಕ್ತಃ ಸ ಚ ಭವಿಷ್ಯತಿ ॥ ೧೮೦ ॥

ಆದಿತ್ಯ ಉವಾಚ :—
ಅತ್ರಾಶ್ರಮಪದೇ ಪುಣ್ಯೇ ಯೇ ನರಾ ಭಕ್ತಿಸಂಯುತಾಃ ।
ಛತ್ರೋಪಾನತ್ಪ್ರದಾತಾರಸ್ತೇಷಾಂ ಲೋಕಾಃ ಸನಾತನಾಃ ॥ ೧೮೧ ॥

ಅಶ್ವಿನಾವೂಚತುಃ :—
ಮಿಷ್ಟಾನ್ನಂ ಶ್ರದ್ಧಯೋಪೇತೋ ಬ್ರಾಹ್ಮಣಾಯ ಪ್ರದಾಸ್ಯತಿ ।
ಯೋಽತ್ರ ತಸ್ಯ ಪರಾ ಪ್ರೀತಿರ್ಭವಿಷ್ಯತ್ಯವಿನಾಶಿನೀ ॥ ೧೮೨ ॥

ತೀರ್ಥಾನ್ಯೂಚುಃ :—
ಅದ್ಯಪ್ರಭೃತಿ ಸರ್ವೇಷಾಂ ತೀರ್ಥಾನಾಮಿಹ ಸಂಸ್ಥಿತಿಃ ।
ಭವಿಷ್ಯತಿ ವಿಶೇಷೇಣ ಹ್ಯಾಶ್ರಮೇ ಲೋಕವಿಶ್ರುತೇ ॥ ೧೮೩ ॥

---

೧೭೯. ಈಶ್ವರನು ಹೇಳುತ್ತಾನೆ :—ಇಲ್ಲಿ ಚಾತುರ್ಮಾಸ್ಯವ್ರತಪರರಾಗಿ ವಾಸಿಸುವವರಿಗೆ ಇಹ ಪರಲೋಕಗಳಲ್ಲಿ ಸುಖವುಂಟಾಗುವುದು.

೧೮೦. ವಸುಗಳು ಹೇಳುತ್ತಾರೆ :—ಮೂರುರಾತ್ರಿ ಇಲ್ಲಿ ನಿಯಮದಿಂದ ಉಪವಾಸ ಮಾಡುವವನು ಹುಟ್ಟಿದ ಮೊದಲ್ಗೊಂಡು ಸಾಯುವವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

೧೮೧. ಆದಿತ್ಯನು ಹೇಳುತ್ತಾನೆ :—ಪುಣ್ಯಕರವಾದ ಈ ಆಶ್ರಮದಲ್ಲಿ ಭಕ್ತಿಯಿಂದ ಛತ್ರ, ಪಾದರಕ್ಷೆಗಳನ್ನು ದಾನಮಾಡುವವರು ಶಾಶ್ವತ ಲೋಕಗಳನ್ನು ಪಡೆಯುವರು.

೧೮೨. ಅಶ್ವಿನೀ ದೇವತೆಗಳು ಹೇಳುತ್ತಾರೆ :—ಇಲ್ಲಿ ಬ್ರಾಹ್ಮಣನಿಗೆ ಶ್ರದ್ಧೆಯಿಂದ ಮೃಷ್ಟಾನ್ನವನ್ನು ದಾನಮಾಡಿದವನಿಗೆ ಸ್ಥಿರವಾದ ಸಂತೋಷವುಂಟಾಗುವುದು.

೧೮೩. ತೀರ್ಥಗಳು ಹೇಳುತ್ತಾರೆ :—ಇದು ಮೊದಲ್ಗೊಂಡು ಲೋಕಪ್ರಸಿದ್ಧವಾದ ಈ ಆಶ್ರಮದಲ್ಲಿ ಸಮಸ್ತ ತೀರ್ಥಗಳೂ ನೆಲೆಸುವುವು.

ಕೃಷ್ಣಪಕ್ಷೇ ಚತುರ್ದಶ್ಯಾಮಾಶ್ವಿನೇ ಮಾಸಿ ಭಕ್ತಿತಃ ।
ಉಪವಾಸಪರೋ ಭೂತ್ವಾ ಯೋಽತ್ರ ಸ್ನಾನಂ ಕರಿಷ್ಯತಿ ।
ಸರ್ವೇಷಾಮೇವ ತೀರ್ಥಾನಾಂ ಸ ಫಲಂ ಹಿ ಲಭಿಷ್ಯತಿ ॥ ೧೮೪ ॥

ಗಂಧರ್ವಾ ಊಚುಃ :—

ಗೀತವಾದ್ಯಾನಿ ಯಶ್ಚಾತ್ರ ಪ್ರಕರಿಷ್ಯತಿ ಮಾನವಃ ।
ಸಪ್ತಜನ್ಮಾಂತರಾಣ್ಯೇವ ರೂಪವಾನ್ಸ ಭವಿಷ್ಯತಿ ॥ ೧೮೫ ॥

ಋಷಯ ಊಚುಃ :—

ಆಶ್ರಮೇಽಸ್ಮಿಂಸ್ತ್ರಿರಾತ್ರಂ ಯ ಉಪವಾಸಂ ಕರಿಷ್ಯತಿ ।
ಚಾಂದ್ರಾಯಣಸಹಸ್ರಸ್ಯ ಫಲಂ ತಸ್ಯ ಭವಿಷ್ಯತಿ ॥ ೧೮೬ ॥

ಪುಲಸ್ತ್ಯ ಉವಾಚ :—

ಏವಂ ಸರ್ವೇ ವರಾನ್ದತ್ತ್ವಾ ದೇವ್ಯೈ ದೇವಾ ನೃಪೋತ್ತಮ।
ತದಾಜ್ಞಯಾ ದಿವಂ ಜಗ್ಮುರ್ದೇವೀ ತತ್ರೈವ ಸಂಸ್ಥಿತಾ ॥ ೧೮೭ ॥
ಅಥ ಮರ್ತ್ಯಾ ದಿವಂ ಜಗ್ಮುರ್ದೃಷ್ಟ್ವಾ ದೇವೀಂ ತದಾಶ್ರಮೇ ।
ಅನಾಯಾಸೇನ ಸಂಪೂರ್ಣಸ್ತತೋ ಮರ್ತ್ಯೈಸ್ತ್ರಿವಿಷ್ಟಪಃ ॥ ೧೮೮ ॥
ಅಗ್ನಿಷ್ಟೋಮಾದಿಕಾಃ ಸರ್ವಾಃ ಕ್ರಿಯಾ ನಷ್ಟಾ ಧರಾತಲೇ ।
ಧರ್ಮಕ್ರಿಯಾಸ್ತಥಾ ಚಾನ್ಯಾ ಮುಕ್ತ್ವಾ ದೇವ್ಯಾಃ ಪ್ರಪೂಜನಂ ॥ ೧೮೯ ॥

---

೧೮೪. ಆಶ್ವಿನ ಕೃಷ್ಣ ಚತುರ್ದಶೀ ದಿನ ಭಕ್ತಿಯಿಂದ ಇಲ್ಲಿ ಉಪವಾಸಮಾಡಿ ಸ್ನಾನಗೈಯುವವರಿಗೆ ಸಕಲ ತೀರ್ಥಗಳ ಫಲವು ಲಭಿಸುವುದು.

೧೮೫. ಗಂಧರ್ವನುಹೇಳುತ್ತಾನೆ :—ಇಲ್ಲಿ ಸಂಗೀತ, ವಾದ್ಯಗಳನ್ನು ಮಾಡುವವರು ಏಳು ಜನ್ಮಗಳಲ್ಲಿ ಸೌಂದರ್ಯವುಳ್ಳವರಾಗುವರು

೧೮೬. ಋಷಿಗಳು ಹೇಳುತ್ತಾರೆ:—ಈ ಆಶ್ರಮದಲ್ಲಿ ಮೂರು ರಾತ್ರಿ ಉಪವಾಸ ಮಾಡುವವನು ಸಾವಿರ ಚಾಂದ್ರಾಯಣ ವ್ರತಗಳ ಫಲವನ್ನು ಪಡೆಯುವನು.

೧೮೭. ಪುಲಸ್ತ್ಯನು ಹೇಳುತ್ತಾನೆ :—ದೇವತೆಗಳು ಹೀಗೆ ದೇವಿಗೆ ಸಮಸ್ತ ವರಗಳನ್ನಿತ್ತು ಅವಳ ಆಜ್ಞೆಯಿಂದ ಸ್ವರ್ಗಕ್ಕೆ ತೆರಳಿದರು. ದೇವಿಯು ಅಲ್ಲಿಯೇ ಇದ್ದಳು.

೧೮೮. ಬಳಿಕ ಮಾನವರು ಆ ಆಶ್ರಮದಲ್ಲಿ ದೇವಿಯನ್ನು ದರ್ಶನಮಾಡಿ ಆಯಾಸವಿಲ್ಲದೆ ಸ್ವರ್ಗಕ್ಕೆ ಹೋದರು. ಅದರಿಂದ ಸ್ವರ್ಗವು ಮನುಷ್ಯರಿಂದ ತುಂಬಿತು.

೧೮೯. ಭೂಮಿಯಲ್ಲಿ ದೇವಿಯ ಪೂಜೆಯೊಂದಲ್ಲದೆ ಇತರ ಅಗ್ನಿಷ್ಟೋಮಾದಿ ಸಕಲ ಕ್ರಿಯೆಗಳೂ ನಷ್ಟವಾದುವು.

ತತೋ ಭೀತಃ ಸಹಸ್ರಾಕ್ಷಃ ಸಂಮಂತ್ರ್ಯ ಗುರುಣಾ ಸಹ ।
ಆಹ್ವಯಾಮಾಸ ವೇಗೇನ ಕಾಮಂ ಕ್ರೋಧಂ ಭಯಂ ಮದಂ ॥ ೧೯೦ ॥
ವ್ಯಾಮೋಹಂ ಗೃಹಪುತ್ರೋತ್ಥಂ ತೃಷ್ಣಾಮಾಯಾಸಮನ್ವಿತಂ ।
ಗತ್ವಾ ಯೂಯಂ ದ್ರುತಂ ಮರ್ತ್ಯೇ ಸ್ಥಾತುಕಾಮಾನ್ನರಾನ್ನಿ್ರಯುಃ ॥
ಚಂಡಿಕಾಯತನೇ ಪುಣ್ಯೇ ಸೇವಧ್ವಂ ಹಿ ಮಮಾಜ್ಞಯಾ ।
ವಿಶೇಷೇಣಾಶ್ವಿನೇ ಮಾಸಿ ಕೃಷ್ಣಪಕ್ಷೇಽಂತ್ಯವಾಸರೇ ॥ ೧೯೨ ॥
ಏವಮುಕ್ತಾಸ್ತತಃ ಸರ್ವೇ ಕಾಮಾದ್ಯಾಸ್ತೇ ದ್ರುತಂ ಯಯುಃ ।
ಮರ್ತ್ಯಲೋಕೇ ಮಹಾರಾಜ ರಕ್ಷಾಂ ಚಕ್ರುಶ್ಚ ಸರ್ವಶಃ ॥ ೧೯೩ ॥
ಏವಂ ಜ್ಞಾತ್ವಾ ದ್ರುತಂ ಗಚ್ಛ ತತ್ರ ಪಾರ್ಥಿವಸತ್ತಮ ।
ಯದೀಚ್ಛಸಿ ಪರಂ ಶ್ರೇಯ ಇಹ ಲೋಕೇ ಪರತ್ರ ಚ ॥ ೧೯೪ ॥
ಯೋ ಯಾತಿ ಚಂಡಿಕಾಂ ದ್ರಷ್ಟುಮರ್ಬುದಂ ಪ್ರತಿ ಪಾರ್ಥಿವ ।
ನೃತ್ಯಂತಿ ಪಿತರಸ್ತಸ್ಯ ಗರ್ಜಂತಿ ಚ ಪಿತಾಮಹಾಃ ॥ ೧೯೫ ॥
ತಾರಯಿಷ್ಯತಿ ನಃ ಸರ್ವಾನ್ಸ ಪುತ್ರೋ ಯ ಇಹಾಶ್ರಮೇ ।
ಚಂಡಿಕಾಯಾಃ ಪ್ರಗತ್ವಾಽಥ ಕುರ್ಯಾಚ್ಛ್ರಾದ್ಧಂ ಸಮಾಹಿತಃ ॥ ೧೯೬ ॥

---

೧೯೦–೧೯೨. ಬಳಿಕ ಭಯಗೊಂಡ ಇಂದ್ರನು ಬೃಹಸ್ಪತಿಯೊಡನೆ ಆಲೋಚಿಸಿ ಶೀಘ್ರವಾಗಿ ಕಾಮ, ಕ್ರೋಧ, ಭಯ, ಮದ, ಗೃಹ ಪುತ್ರಸಂಬಂಧವಾದ ವ್ಯಾಮೋಹ, ಮಾಯೆಯಿಂದ ಸಹಿತವಾದ ಆಶೆ ಇವುಗಳನ್ನು ಕರೆಯಿಸಿ ನೀವು ಶೀಘ್ರವಾಗಿ ಭೂಲೋಕದಲ್ಲಿ ಆಶ್ವಿನ ಕೃಷ್ಣ ಚತುರ್ದಶೀ ಶನಿವಾರ ದಿನ ಪುಣ್ಯಕರವಾದ ಚಂಡಿಕಾಲಯದಲ್ಲಿ ವಾಸಿಸಲಪೇಕ್ಷಿಸುವ ಮನುಷ್ಯರನ್ನು ನನ್ನ ಅಪ್ಪಣೆಯಿಂದ ಸೇವಿಸಿರಿ ಎಂದನು.

೧೯೩. ಇಂದ್ರನು ಹೀಗೆ ಹೇಳಲು ಕಾಮಾದಿಗಳೆಲ್ಲ ಶೀಘ್ರವಾಗಿ ತೆರಳಿ ಭೂಲೋಕವನ್ನು ರಕ್ಷಿಸಿದುವು.

೧೯೪. ನರೇಂದ್ರ ! ನೀನು ಇಹಪರಲೋಕಗಳಲ್ಲಿ ಶ್ರೇಯಸ್ಸನ್ನು ಬಯಸುವುವಾದರೆ ಇದನ್ನರಿತು ಶೀಘ್ರವಾಗಿ ಅಲ್ಲಿಗೆ ಹೋಗು.

೧೯೫–೧೯೬. ಚಂಡಿಕೆಯನ್ನು ನೋಡಲು ಅರ್ಬುದಾಚಲಕ್ಕೆ ತೆರಳುವವನ ಪಿತೃಗಳು ನಮ್ಮ ಪುತ್ರನು ಈ ಆಶ್ರಮದಲ್ಲಿ ಶ್ರಾದ್ಧಗೈದು ನಮ್ಮನ್ನೆಲ್ಲ ಉದ್ಧಾರಮಾಡುವನೆಂದು ಕುಣಿಯುವರು. ಪಿತಾಮಹರು ಗರ್ಜಿಸುವರು.

ಏಕಯಾ ಲಭ್ಯತೇ ರಾಜ್ಯಂ ಸ್ವರ್ಗಶ್ಚೈವ ದ್ವಿತೀಯಯಾ ।
ತೃತೀಯಯಾ ಭವೇನ್ಮೋಕ್ಷೋ ಯಾತ್ರಯಾ ತತ್ರ ಪಾರ್ಥಿವ ॥ ೧೯೭ ॥
ತಸ್ಮಾತ್ಸರ್ವಪ್ರಯತ್ನೇನ ಯಾತ್ರಾಂ ತತ್ರ ಸಮಾಚರೇತ್ ।
ಅರ್ಬುದೇ ಪರ್ವತಶ್ರೇಷ್ಠೇ ಸರ್ವತೀರ್ಥಮಯೇ ಶುಭೇ ॥ ೧೯೮ ॥
ತತ್ರ ಶ್ಲೋಕಃ ಪುರಾ ಗೀತೋ ನಾರದೇನ ಮಹರ್ಷಿಣಾ ।
ಸ್ನಾತ್ವಾ ತತ್ರಾಶ್ರಮೇ ಪುಣ್ಯೇ ಬಹುವಿಪ್ರಸಮಾಗಮೇ ॥ ೧೯೯ ॥
ಪುನಂತ್ಯೇವಾನ್ಯತೀರ್ಥಾನಿ ಸ್ನಾನದಾನೈರಸಂಶಯಂ ।
ಅರ್ಬುದಾಲೋಕನಾದೇವ ವಿಪಾಪ್ಮಾ ತತ್ರ ಜಾಯತೇ ॥ ೨೦೦ ॥
ಯಃ ಶೃಣೋತಿ ಸದಾಖ್ಯಾನಮೇತಚ್ಛ್ರದ್ಧಾಸಮನ್ವಿತಃ ।
ಸ ಪ್ರಾಪ್ನೋತಿ ನರಶ್ರೇಷ್ಠ ಕಾಮಾನ್ಮನಸಿ ವಾಂಛಿತಾನ್ ॥ ೨೦೧ ॥
ಯಸ್ಯೈತತ್ತಿಷ್ಠತೇ ಗೇಹೇ ಲಿಖಿತಂ ಪುಸ್ತಕಂ ನೃಪ ।
ತಸ್ಯಾಪಿ ವಾಂಛಿತಾಃ ಕಾಮಾಃ ಸಂಪದ್ಯಂತೇ ದಿನೇದಿನೇ ॥ ೨೦೨ ॥

---

೧೯೭. ದೊರೆಯೆ ! ಅಲ್ಲಿ ಪ್ರಥಮ ಯಾತ್ರೆಯಿಂದ ರಾಜ್ಯವೂ, ದ್ವಿತೀಯ ಯಾತ್ರೆಯಿಂದ ಸ್ವರ್ಗವೂ, ತೃತೀಯ ಯಾತ್ರೆಯಿಂದ ಮೋಕ್ಷವೂ ಉಂಟಾಗುವುದು.

೧೯೮. ಆದ್ದರಿಂದ ಮಾನವರು ಸಕಲ ಪ್ರಯತ್ನವನ್ನೆಸಗಿ ಸಮಸ್ತ ತೀರ್ಥರೂಪವಾದ ಆ ಅರ್ಬುದ ಪರ್ವತದ ಯಾತ್ರೆಯನ್ನು ಮಾಡಬೇಕು.

೧೯೯-೨೦೦. ಈ ವಿಷಯದಲ್ಲಿ ಹಿಂದೆ ನಾರದ ಮಹರ್ಷಿಯು ಒಂದು ಶ್ಲೋಕವನ್ನು ಹೇಳಿರುವನು; ಅನೇಕ ಮಂದಿ ಬ್ರಾಹ್ಮಣರಿರುವ ಪುಣ್ಯಕರವಾದ ಆ ಆಶ್ರಮದಲ್ಲಿ ಮಿಂದು ದಾನಮಾಡುವುದರಿಂದ ಇತರ ತೀರ್ಥಗಳು ಪವಿತ್ರವಾಗುವುವು. ಮನುಷ್ಯನು ಅರ್ಬುದ ಪರ್ವತದ ದರ್ಶನದಿಂದಲೇ ಬ್ರಾಹ್ಮಣನಾಗಿ ಜನಿಸುವನು.

೨೦೧. ನರೇಂದ್ರ ! ಈ ಶುಭಾಖ್ಯಾನವನ್ನು ಶ್ರದ್ಧೆಯಿಂದ ಕೇಳಿದವನು ಮನಸ್ಸಿನ ಸಕಲೇಷ್ಟಗಳನ್ನೂ ಹೊಂದುವನು.

೨೦೨. ದೊರೆಯೆ ! ಯಾವನ ಮನೆಯಲ್ಲಿ ಈ ಉಪಾಖ್ಯಾನವನ್ನು ಬರೆದ ಪುಸ್ತಕವು ಇರುವುದೊ, ಅದನ ಇಷ್ಟಾರ್ಥಗಳೆಲ್ಲ ಪ್ರತಿದಿನವೂ ಕೈಗೂಡುವುವು.

ಪಠತಿ ಶ್ರದ್ಧಯೋಪೇತೋ ಯೋ ವಾ ಭೂಮಿಪತೇ ನರಃ ।
ಸೋಽಪಿ ಯಾತ್ರಾಫಲಂ ರಾಜಂಲ್ಲಭತೇ ಪುರುಷೋತ್ತಮಃ ॥ ೨೦೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಚಂಡಿಕಾಶ್ರಮೋತ್ಪತ್ತಿಮಾಹಾತ್ಮ್ಯವರ್ಣನಂನಾಮ
ಷಟ್ತ್ರಿಂಶೋಽಧ್ಯಾಯಃ

---

೨೦೩. ಇದನ್ನು ಶ್ರದ್ಧೆಯಿಂದ ಪಠಿಸುವ ಪುರುಷೋತ್ತಮ ಮಾನವನು ಯಾತ್ರಾ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಚಂಡಿಕಾಶ್ರಮೋತ್ಪತ್ತಿಮಾಹಾತ್ಮ್ಯವರ್ಣನವೆಂಬ
ಮುವ್ವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತತ್ರಿಂಶೋಽಧ್ಯಾಯಃ

### ನಾಗೋದ್ಭವತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ನಾಗಹ್ರದಂ ತತೋ ಗಚ್ಛೇತ್ತೀರ್ಥಂ ಪಾಪಪ್ರಣಾಶನಂ ।
ಯತ್ರ ನಾಗೈಸ್ತಪಸ್ತಪ್ತಂ ರಮ್ಯೇ ಪರ್ವತರೋಧಸಿ ॥ ೧ ॥
ಕದ್ರೂಶಾಪಂ ಪುರಾ ಶ್ರುತ್ವಾ ನಾಗಾಃ ಸರ್ವೇ ಭಯಾತುರಾಃ ।
ಪಪ್ರಚ್ಛುರ್ನಾಗರಾಜಂ ತ ಶೇಷಂ ಪ್ರಣತಕಂಧರಾಃ ॥ ೨ ॥
ಮಾತೃಶಾಪೇನ ಸಂತಪ್ತಾ ವಯಂ ಪನ್ನಗಸತ್ತಮ ।
ಕಿಂ ಕುರ್ಮಃ ಕ್ವ ಚ ಗಚ್ಛಾಮಃ ಶಾಪಮೋಕ್ಷೋ ಭವೇತ್ಕಥಂ ॥ ೩ ॥

ಶೇಷ ಉವಾಚ :—

ಪ್ರಸಾದಿತಾ ಮಯಾ ಮಾತಾ ಶಾಪಮುಕ್ತಿಕೃತೇ ಪುರಾ ।
ತಯೋಕ್ತಂ ಯೇ ತಪೋಯುಕ್ತಾ ಧರ್ಮಾತ್ಮಾನಃ ಸುಸಂಯತಾಃ ॥ ೪ ॥
ನ ದಹಿಷ್ಯತಿ ತಾನ್ವಹ್ನಿರ್ಯಜ್ಞೇ ಪಾರಿಕ್ಷಿತಸ್ಯ ಹಿ ।
ತಸ್ಮಾದ್ಗತ್ವಾರ್ಬುದಂ ನಾಮ ಪರ್ವತಂ ಧರಣೀತಲೇ ॥ ೫ ॥

---

### ಕನ್ನಡದ ಅನುವಾದ

### ನಾಗೋದ್ಭವತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ಪಾಪವನ್ನು ಪರಿಹರಿಸುವ ನಾಗಹ್ರದ ತೀರ್ಥಕ್ಕೆ ಹೋಗಬೇಕು. ಮನೋಹರವಾದ ಅರ್ಬುದ ಪರ್ವತದ ತಪ್ಪಲಲ್ಲಿರುವ ಆ ನಾಗತೀರ್ಥದಲ್ಲಿ ನಾಗಗಳು ತಪಸ್ಸನ್ನಾಚರಿಸಿರುವುವು.

೨. ಹಿಂದೆ ನಾಗಗಳೆಲ್ಲ ಕದ್ರೂಶಾಪವನ್ನು ಕೇಳಿ ಭಯಗೊಂಡು ನಾಗರಾಜನಾದ ಶೇಷನನ್ನು ಕುರಿತು ತಲೆತಗ್ಗಿಸಿ ಹೀಗೆ ಪ್ರಶ್ನಿಸಿದುವು.

೩. "ಪನ್ನಗರಾಜ ! ನಾವು ತಾಯಿಯ ಶಾಪದಿಂದ ವ್ಯಥೆಗೊಂಡಿದ್ದೇವೆ. ಏನು ಮಾಡೋಣ ! ಎಲ್ಲಿಗೆ ಹೋಗೋಣ ! ಹೇಗೆ ಶಾಪಮೋಕ್ಷವಾದೀತು.?"

೪–೭. ಶೇಷನು ಹೇಳುತ್ತಾನೆ :—ನಾನು ಹಿಂದೆ ಶಾಪಮೋಕ್ಷಕ್ಕಾಗಿ ತಾಯಿಯನ್ನು ಪ್ರಸನ್ನಳನ್ನಾಗಿ ಮಾಡಲು ಅವಳು ಹೀಗೆಂದಳು. ಪರೀಕ್ಷಿತನ ಯಜ್ಞಾಗ್ನಿಯು ತಪಸ್ವಿ

ತತ್ರ ಯೂಯಂ ತಪೋಯುಕ್ತಾ ಭವಧ್ವಂ ಸುಸಮಾಹಿತಾಃ ।
ಯತ್ರಾಸ್ತೇ ಸಾ ಸ್ವಯಂ ದೇವೀ ಚಂಡಿಕಾ ಕಾಮರೂಪಿಣೀ ॥ ೬ ॥
ಯಸ್ಯಾಃ ಸಂಕೀರ್ತನೇನಾಪಿ ನಶ್ಯಂತಿ ವಿಪದೋ ಧ್ರುವಂ ।
ಆರಾಧಯಧ್ವಮನಿಶಂ ತಾಂ ದೇವೀಂ ಮಮ ವಾಕ್ಯತಃ ॥ ೭ ॥
ತಸ್ಯಾಃ ಪ್ರಸಾದತಃ ಸರ್ವೇ ಭವಿಷ್ಯಥ ಗತಜ್ವರಾಃ ।
ಏತಮೇವಾತ್ರ ಪಶ್ಯಾಮಿ ಹ್ಯುಪಾಯಂ ನಾಗಸತ್ತಮಾಃ ।
ದೈವೋ ವಾ ಮಾನುಷೋ ವಾಪಿ ನಾನ್ಯೋ ವೋ ಮುಕ್ತಿಕಾರಕಃ ॥ ೮ ॥

ಪುಲಸ್ತ್ಯ ಉವಾಚ :—

ಏವಮುಕ್ತಾಸ್ತತೋ ನಾಗಾ ನಾಗರಾಜೇನ ಪಾರ್ಥಿವ ।
ಪ್ರಣಮ್ಯ ತಂ ತತೋ ಜಗ್ಮುರರ್ಬುದಂ ಪರ್ವತಂ ಪ್ರತಿ ॥ ೯ ॥
ತೇ ಭಿತ್ವಾ ಧರಣೀಪೃಷ್ಠಂ ಪರ್ವತೇ ತದನಂತರಂ ।
ನಿಜಗ್ಮುರ್ಬಿಲಮಾರ್ಗೇಣ ಕೃತ್ವಾ ಶ್ವಭ್ರಂ ಸುವಿಸ್ತರಂ ॥ ೧೦ ॥
ತತೋ ಧೃತವ್ರತಾಃ ಸರ್ವೇ ದೇವೀ ಭಕ್ತಿಪರಾಯಣಾಃ ।
ವಸಂತಿ ಭಕ್ತಿಸಂಯುಕ್ತಾಶ್ಚಂಡಿಕಾರಾಧನಾಯ ತೇ ॥ ೧೧ ॥

---

ಗಳೂ, ಧರ್ಮಾತ್ಮರೂ, ಇಂದ್ರಿಯನಿಗ್ರಹವುಳ್ಳವರೂ ಆದವರನ್ನು ಸುಡುವುದಿಲ್ಲ. ಆದ್ದರಿಂದ ನೀವು ಭೂಮಿಯಲ್ಲಿರುವ ಅರ್ಬುದ ಪರ್ವತಕ್ಕೆ ಹೋಗಿ ಸಾವಧಾನ ಮನಸ್ಸಿನಿಂದ ತಪಸ್ಸನ್ನಾಚರಿಸಿರಿ. ಅಲ್ಲಿರುವ ಚಂಡಿಕೆಯ ನಾಮಸಂಕೀರ್ತನೆಯಿಂದಲೇ ಆಪತ್ತುಗಳು ನಿಶ್ಚಯವಾಗಿಯೂ ನಾಶವಾಗುವುವು. ನನ್ನ ಮಾತಿನಿಂದ ನೀವು ಆ ದೇವಿಯನ್ನು ಯಾವಾಗಲೂ ಪೂಜಿಸಿರಿ.

೮. ಅವಳ ಅನುಗ್ರಹದಿಂದಲೆ ನೀವೆಲ್ಲ ವ್ಯಥೆಯಿಲ್ಲದವರಾಗುವಿರಿ. ನಾಗ ಶ್ರೇಷ್ಠರೆ ! ಈ ವಿಷಯದಲ್ಲಿ: ಇದೇ ಉಪಾಯವೆಂದರಿಯುವೆನು ಮೋಕ್ಷ ವನ್ನುಂಟುಮಾಡುವ ಬೇರೆ ದೈವ, ಮಾನುಷೋಪಾಯಗಳಿಲ್ಲ.

೯. ಪುಲಸ್ತ್ಯನು ಹೇಳುತ್ತಾನೆ:—ದೊರೆಯೆ ! ಶೇಷನು ಹೀಗೆನ್ನಲು ಸರ್ಪಗಳು ಅವನನ್ನು ವಂದಿಸಿ ಅರ್ಬುದ ಪರ್ವತಕ್ಕೆ ತೆರಳಿದುವು.

೧೦. ಅನಂತರ ಅವುಗಳು ಭೂಮಿಯನ್ನು ಭೇದಿಸಿ ವಿಸ್ತಾರವಾದ ಕುಣಿಯನ್ನು ಮಾಡಿ ಬಿಲಮಾರ್ಗದಿಂದ ಅರ್ಬುದಪರ್ವತಕ್ಕೆ ಹೋದುವು.

೧೧. ಅವು ಅಲ್ಲಿ ವ್ರತವನ್ನು ತಾಳಿ ದೇವಿಯ ಆರಾಧನೆಗಾಗಿ ಭಕ್ತಿಯಿಂದ ವಾಸಿಸಿದುವು.

ತಸ್ಥುಸ್ತತ್ರ ಸದಾ ಹೋಮಂ ಕುರ್ವಂತೋ ಜಾಪ್ಯಮುತ್ತಮಂ ।
ಏಕಾಹಾರಾ ನಿರಾಹಾರಾ ವಾಯುಭಕ್ಷಾಸ್ತಥಾ ಪರೇ ॥ ೧೨ ॥
ದಂತೋಲೂಖಲಿನಃ ಕೇಚಿದಶ್ಮಕುಟ್ಟಾಸ್ತಥಾ ಪರೇ ।
ಪಂಚಾಗ್ನಿಸಾಧಕಾಶ್ಚಾನ್ಯೇ ಸದ್ಯಃ ಪ್ರಕ್ಷಾಲಕಾಸ್ತಥಾ ॥ ೧೩ ॥
ಗೀತಂ ವಾದ್ಯಂ ತಥಾ ಚಕ್ರುರನ್ಯೇ ದೇವಾಃ ಪುರಸ್ತದಾ ।
ಅನನ್ಯಶ್ರದ್ಧಯೋಪೇತಾಂಸ್ತಾನ್ದೃಷ್ಟ್ವಾ ಪನ್ನಗೋತ್ತಮಾನ್ ॥ ೧೪ ॥
ತತೋ ದೇವೀ ಸುಸಂತುಷ್ಟಾ ವಾಕ್ಯಮೇತದುವಾಚ ಹ ॥ ೧೫ ॥

ದೇವ್ಯುವಾಚ :—

ಪರಿತುಷ್ಟಾಸ್ಮಿ ವೋ ವತ್ಸಾಃ ಕಿಮರ್ಥಂ ತಪತೇ ತಪಃ ।
ವರಯಧ್ವಂ ವರಂ ಮತ್ತೋ ಯಃ ಸ್ಥಿತೋ ಭವತಾಂ ಹೃದಿ ॥ ೧೬ ॥

ನಾಗಾ ಊಚುಃ :—

ಮಾತೃಶಾಪೇನ ಸಂತಪ್ತಾ ವಯಂ ದೇವಿ ನಿರಾಶ್ರಯಾಃ ।
ನಾಗರಾಜಸಮಾದೇಶಾಚ್ಛರಣಂ ತ್ವಾಂ ಸಮಾಗತಾಃ ॥ ೧೭ ॥

---

೧೨–೧೫. ಆ ಸರ್ಪಗಳು ಅಲ್ಲಿ ಯಾವಾಗಲೂ ಹೋಮವನ್ನು ಮಾಡುವವೂ, ಉತ್ತಮ ಮಂತ್ರವನ್ನು ಜಪಿಸುವವೂ, ಆಗಿದ್ದುವು. ಅವುಗಳಲ್ಲಿ ಕೆಲವು ಒಂದೇ ಊಟವುಳ್ಳವೂ, ಇನ್ನು ಕೆಲವು ಉಪವಾಸಮಾಡುವವೂ, ಮತ್ತೆ ಕೆಲವು ವಾಯುವನ್ನು ಭಕ್ಷಿಸುವವೂ, ಕೆಲವು ಹಲ್ಲೆ ಒರಳಾಗುಳ್ಳವೂ, ಕೆಲವು ಕಲ್ಲಿನಿಂದ ಕುಟ್ಟಿದ ವಸ್ತುಗಳನ್ನು ತಿನ್ನುವವೂ, ಕೆಲವು ಪಂಚಾಗ್ನಿ ಮಧ್ಯದಲ್ಲಿರುವವೂ, ಕೆಲವು ಬಂದ ಹಣವನ್ನು ಕೂಡಲೆ ಧರ್ಮಕಾರ್ಯಕ್ಕೆ ಖರ್ಚುಮಾಡುವವೂ ಆಗಿದ್ದುವು. ಇತರ ದೇವತೆಗಳು ಮುಂದೆ ಅವು ಗೀತ, ವಾದ್ಯಗಳನ್ನು ಮಾಡಿದುವು. ದೇವಿಯು ಅಸಾಧಾರಣವಾದ ಶ್ರದ್ಧೆಯಿಂದ ಕೂಡಿದ ಆ ಉತ್ತಮ ಸರ್ಪಗಳನ್ನು ನೋಡಿ ಸಂತುಷ್ಟಳಾಗಿ ಇಂತೆಂದಳು.

೧೬. ದೇವಿಯು ಹೇಳುತ್ತಾಳೆ:—ಮಕ್ಕಳೆ! ನಿಮ್ಮಲ್ಲಿ ಸಂತುಷ್ಟಳಾಗಿದ್ದೇನೆ. ನೀವು ಏಕೆ ತಪಸ್ಸನ್ನು ಮಾಡುತ್ತಿರುವಿರಿ? ನಿಮ್ಮ ಮನಸ್ಸಿನಲ್ಲಿರುವ ವರವನ್ನು ಕೇಳಿ ಕೊಳ್ಳಿರಿ.

೧೭. ನಾಗಗಳ ಹೇಳುತ್ತವೆ:—ದೇವಿ! ಆಶ್ರಯವಿಲ್ಲದ ನಾವು ತಾಯಿಯ ಶಾಪದಿಂದ ಸಂತಾಪಗೊಂಡಿದ್ದೇವೆ. ಶೇಷನ ಆಜ್ಞೆಯಂತೆ ಈಗ ನಿನ್ನನ್ನು ಮರೆಹೊಕ್ಕಿರುತ್ತೇವೆ.

ಸಾ ತ್ವಂ ರಕ್ಷ ಭಯಾತ್ತಸ್ಮಾಚ್ಛಾಪವಹ್ನಿಸಮುದ್ಭವಾತ್ ।
ವಯಂ ಮಾತ್ರಾ ಪುರಾ ಶಪ್ತಾಃ ಕಸ್ಮಿಂಶ್ಚಿತ್ಕಾರಣಾಂತರೇ ।
ಪಾರೀಕ್ಷಿತಸ್ಯ ಯಜ್ಞೇ ವಃ ಪಾವಕೋ ಭಕ್ಷಯಿಷ್ಯತಿ ॥ ೧೮ ॥

ದೇವ್ಯುವಾಚ :—

ಯಾವತ್ತಸ್ಯ ಭವೇದ್ಯಜ್ಞಸ್ತಾವದ್ಯೂಯಂ ಮಮಾಂತಿಕೇ ।
ಸಂತಿಷ್ಠತ ವಿನಾ ಭೀತ್ಯಾ ಭೋಗಾನ್ಭುಙ್ಧ್ವಂ ಸುಪುಷ್ಕಲಾನ್ ॥ ೧೯ ॥
ಸಮಾಪ್ತೇ ಚ ಕ್ರತೌ ಭೂಯೋ ಗಂತಾರಃ ಸ್ವಂ ನಿಕೇತನಂ ।
ಯುಷ್ಮಾಭಿರ್ಭೇದಿತಂ ಯಸ್ಮಾದೇತತ್ಪರ್ವತಕಂದರಂ ॥ ೨೦ ॥
ನಾಗಹ್ರದಂ ತು ತತ್ತೀರ್ಥಮೇತದ್ಭಾವಿ ಧರಾತಲೇ ।
ಅತ್ರ ಯಃ ಶ್ರಾವಣೇ ಮಾಸಿ ಪಂಚಮ್ಯಾಂ ಭಕ್ತಿತತ್ಪರಃ ॥ ೨೧ ॥
ಕರಿಷ್ಯತಿ ನರಃ ಸ್ನಾನಂ ತಸ್ಯ ನಾಹಿಕೃತಂ ಭಯಂ ।
ಭವಿಷ್ಯತಿ ಪುನಃ ಶ್ರಾದ್ಧಾತ್ಪಿತ್ನ್ಸ್ವಾಂಸ್ತಾರಯಿಷ್ಯತಿ ॥ ೨೨ ॥
ಯೇ ಭೋಗಾ ಭೂತಲೇ ಖ್ಯಾತಾ ಯೇ ದಿವ್ಯಾ ಯೇ ಚ ಮಾನುಷಾಃ ।
ತಾನ್ಸರ್ವಾನ್ಸ ನರೋ ನಿತ್ಯಂ ಲಭಿಷ್ಯತಿ ನ ಸಂಶಯಃ ॥ ೨೩ ॥

ಪುಲಸ್ತ್ಯ ಉವಾಚ :—

ತತೋ ಹೃಷ್ಟಾ ಬಭೂವುಸ್ತೇ ಮುಕ್ತ್ವಾ ತದ್ದಾರುಣಂ ಭಯಂ ।
ದೇವ್ಯಾಃ ಶರಣಮಾಪನ್ನಾಸ್ತಸ್ಥುಸ್ತತ್ರ ನಗೋತ್ತಮೇ ॥ ೨೪ ॥

---

೧೮. ಆ ನೀನು ಶಾಪಾಗ್ನಿಯಿಂದುಂಟಾದ ಭಯದಿಂದ ನಮ್ಮನ್ನು ರಕ್ಷಿಸು. ಹಿಂದೆ ನಮ್ಮ ಮಾತೆಯು ಯಾವುದೊ ಒಂದು ಕಾರಣದಿಂದ, ಪರೀಕ್ಷಿತನ ಯಜ್ಞ ಪಾವಕನು ನಿಮ್ಮನ್ನು ದಹಿಸುವನೆಂದು ಶಾಪವಿತ್ತನು.

೧೯. ದೇವಿಯು ಹೇಳುತ್ತಾಳೆ :—ನೀವು ಆ ಪರೀಕ್ಷಿತನ ಯಜ್ಞವು ಮುಗಿಯು ವವರೆಗೆ ನನ್ನ ಹತ್ತಿರ ಭಯವಿಲ್ಲದೆ ವಾಸಿಸುತ್ತ ಪುಷ್ಕಲ ಭೋಗಗಳನ್ನನುಭವಿಸಿರಿ.

೨೦–೨೨. ಯಜ್ಞವೆಲ್ಲ ಮುಗಿದ ಮೇಲೆ ನೀವು ನಿಮ್ಮ ಮನೆಗೆ ಹಿಂದಿರುಗಿರಿ ನೀವು ಈ ಪರ್ವತದ ಗುಹೆಯನ್ನು ಭೇದಿಸಿರುವುದರಿಂದ ಇದು ಭೂಮಿಯಲ್ಲಿ ನಾಗ ಹ್ರದವೆಂದು ವಿಖ್ಯಾತವಾಗುವುದು. ಇಲ್ಲಿ ಶ್ರಾವಣಮಾಸದ ಪಂಚಮಿಯ ದಿನ ಭಕ್ತಿ ಯಿಂದ ಮಿಂದವನಿಗೆ ಸರ್ಪಭಯವಿರುವುದಿಲ್ಲ. ಶ್ರಾದ್ಧ ಮಾಡುವುದರಿಂದ ಪಿತೃಗಳನ್ನು ದ್ಧರಿಸುವನು.

೨೩. ಅವನು ಭೂಮಿಯಲ್ಲಿ ನಿತ್ಯವೂ ಪ್ರಸಿದ್ಧವಾದ ದಿವ್ಯ ಮಾನುಷ ಭೋಗ ಗಳನ್ನು ನಿಶ್ಚಯವಾಗಿಯೂ ಹೊಂದುವನು.

೨೪. ಅನಂತರ ದೇವಿಯನ್ನು ಮರೆಹೊಕ್ಕಿರುವ ಆ ನಾಗಗಳು ಸಂತೋಷ ಗೊಂಡು ಆ ಭಯಂಕರ ಭಯವನ್ನು ತೊರೆದು ಆ ಉತ್ತಮ ಶೈಲದಲ್ಲಿ ನೆಲೆಸಿದುವು.

ತತಃ ಕಾಲೇನ ಮಹತಾ ಸತ್ರೇ ಪಾರೀಕ್ಷಿತಸ್ಯ ಚ ।
ನಿರ್ವೃತ್ತೇ ತೇ ತದಾ ಜಗ್ಮುಃ ಸುನಿರ್ವೃತ್ತಾ ರಸಾತಲಂ ॥ ೨೫ ॥
ದೇವ್ಯಾ ಚೈವಾಭ್ಯನುಜ್ಞಾತಾಃ ಪ್ರಣಿಪತ್ಯ ಮುಹುರ್ಮುಹುಃ ।
ಕೃಚ್ಛ್ರಾತ್ಪಾರ್ಥಿವಶಾರ್ದೂಲ ತದ್ಭಕ್ತ್ಯಾ ನಿಶ್ಚಲೀಕೃತಾಃ ॥ ೨೬ ॥
ಅದ್ಯಾಪಿ ಕೃಷ್ಣಪಂಚಮ್ಯಾಂ ಶ್ರಾವಣೇ ಮಾಸಿ ಪಾರ್ಥಿವ ।
ಸಾನ್ನಿಧ್ಯಂ ತತ್ರ ಕುರ್ವಂತಿ ದೇವೀದರ್ಶನಲಾಲಸಾಃ ॥ ೨೭ ॥
ತಸ್ಮಾತ್ಸರ್ವಪ್ರಯತ್ನೇನ ಶ್ರಾದ್ಧಂ ತತ್ರ ಸಮಾಚರೇತ್ ।
ಸ್ನಾನಂ ಚ ಪಾರ್ಥಿವಶ್ರೇಷ್ಠ ಯ ಇಚ್ಛೇಚ್ಛ್ರೇಯ ಆತ್ಮನಃ ॥ ೨೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ನಾಗೋದ್ಭವತೀರ್ಥಮಾಹಾತ್ಮ್ಯವರ್ಣನಂ ನಾಮ
ಸಪ್ತತ್ರಿಂಶೋಽಧ್ಯಾಯಃ

---

೨೫–೨೬. ತರುವಾಯ ಆ ನಾಗಗಳು ಬಹುಕಾಲದ ಮೇಲೆ ಪರೀಕ್ಷಿತನ ಸತ್ರವು ಸಮಾಪ್ತಿಗೊಳ್ಳಲು ದೇವಿಯ ಅಪ್ಪಣೆಯನ್ನು ಪಡೆದು ಆಕೆಯನ್ನು ಬಹು ಬಾರಿ ವಂದಿಸಿ ಭಕ್ತಿಯಿಂದ ಸ್ತಬ್ಧರಾಗಿ ಕಷ್ಟದಿಂದ ಪಾತಾಳಕ್ಕೆ ಹೋದುವು.

೨೭. ಈಗಲೂ ನಾಗಗಳು ಶ್ರಾವಣ ಕೃಷ್ಣಪಂಚಮೀ ದಿನ ದೇವಿಯನ್ನು ನೋಡಲೋಸುಗ ಅಲ್ಲಿ ಸನ್ನಿಹಿತವಾಗಿರುವುದು.

೨೮. ನೃಪೇಂದ್ರ ! ಆದ್ದರಿಂದ ತನಗೆ ಶ್ರೇಯಸ್ಸು ಲಭಿಸಲು ಪ್ರಯತ್ನಿಸುವವನು ಆ ತೀರ್ಥದಲ್ಲಿ ಮಿಂದು ಶ್ರಾದ್ಧಗೈಯ್ಯಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ನಾಗೋದ್ಭವತೀರ್ಥಮಾಹಾತ್ಮ್ಯವರ್ಣನವೆಂಬ
ಮುವ್ವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಷ್ಟತ್ರಿಂಶೋಽಧ್ಯಾಯಃ

## ಶಿವಗಂಗಾಕುಂಡೋತ್ಪತ್ತಿವರ್ಣನಂ

ಪುಲಸ್ತ್ಯ ಉವಾಚ :—

ಕುಂಡಂ ತು ಶಿವಗಂಗಾಖ್ಯಂ ತತೋ ಗಚ್ಛೇನ್ಮಹೀಪತೇ ।
ಯತ್ರ ಸಾ ಜಾಹ್ನವೀ ಗುಪ್ತಾ ತಿಷ್ಠತೇ ಭೂಮಿಸತ್ತಮ ॥ ೧ ॥
ತಸ್ಯಾಂ ಸ್ನಾತೋ ನರಃ ಸಮ್ಯಕ್ಸರ್ವತೀರ್ಥಫಲಂ ಲಭೇತ್ ।
ಮುಚ್ಯತೇ ಪಾತಕಾತ್ಕೃತ್ಸ್ನಾದ್ದಾಜನ್ಮಮರಣಾಂತಿಕಾತ್ ॥ ೨ ॥

ಯಯಾತಿರುವಾಚ :—

ಕಿಮರ್ಥಂ ತತ್ರ ಸಾ ಗುಪ್ತಾ ಜಾಹ್ನವೀ ತಿಷ್ಠತೇ ವಿಭೋ ।
ಕಸ್ಮಿನ್ಕಾಲೇ ಸಮಾಯಾತಾ ಪರಂ ಕೌತೂಹಲಂ ಹಿ ಮೇ ॥ ೩ ॥

ಪುಲಸ್ತ್ಯ ಉವಾಚ :—

ಯದಾ ಪ್ರಸಾದಿತೋ ದೇವೈರ್ಭಗವಾನ್ವೃಷಭಧ್ವಜಃ ।
ಅರ್ಬುದೇಽಸ್ಮಿನ್ಸದಾ ಸ್ಥೇಯಮಚಲೇನ ತ್ವಯಾ ವಿಭೋ ॥ ೪ ॥

---

ಕನ್ನಡದ ಅನುವಾದ

## ಶಿವಗಂಗಾಕುಂಡೋತ್ಪತ್ತಿಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:— ದೊರೆಯೆ! ಬಳಿಕ ಶಿವಗಂಗಾ ಎಂಬ ಕುಂಡದೆಡೆಗೆ ಹೋಗಬೇಕು. ಅಲ್ಲಿ ಗಂಗೆಯು ಗುಪ್ತಳಾಗಿರುವಳು.

೨. ಅಲ್ಲಿ ಮಿಂದ ಮಾನವನು ತೀರ್ಥಫಲವನ್ನು ಪಡೆದು ಹುಟ್ಟಿದಂದಿನಿಂದಲ್ಗೊಂಡು ಮರಣಕಾಲದ ವರೆಗೆ ಮಾಡಿದ ಸಂಪೂರ್ಣ ಪಾಪಗಳಿಂದ ಮುಕ್ತನಾಗುವವನು.

೩. ಯಯಾತಿಯು ಹೇಳುತ್ತಾನೆ :— ಸ್ವಾಮಿ ! ಅಲ್ಲಿ ಗಂಗೆಯು ಏತಕ್ಕೆ ಗುಪ್ತಳಾಗಿರುವಳು ? ಅವಳು ಯಾವಾಗ ಅಲ್ಲಿಗೆ ಬಂದಳು ? ಇದನ್ನು ಕೇಳಲು ನನಗೆ ಅತ್ಯಂತ ಕೌತೂಹಲವುಂಟಾಗಿದೆ.

೪-೮. ಪುಲಸ್ತ್ಯನು ಹೇಳುತ್ತಾನೆ :— ಹಿಂದೆ ಯಾವುದೊ ಒಂದು ಕಾರಣದಿಂದ ಅತ್ಯಂತ ಕೋಪಗೊಂಡ ವಾಲಖಿಲ್ಯ ಮಹರ್ಷಿಗಳು ಮಹೇಶ್ವರನ ಲಿಂಗವನ್ನು ಶಾಪದಿಂದ ಕೆಳಗೆ ಬೀಳಿಸಲು ದೇವತೆಗಳು ಆ ಶಂಕರನನ್ನು ಒಲಿಸಿ ಸ್ವಾಮಿ ನೀನು

ತತ್ರ ಸಂಸ್ಥಾಪಿತೇ ಲಿಂಗೇ ಸ್ವಯಂ ದೇವೇನ ಶಂಭುನಾ ।
ಯತ್ಪಾತಿತಂ ಪುರಾ ಲಿಂಗಂ ವಾಲಖಿಲ್ಯೈರ್ಮಹರ್ಷಿಭಿಃ ॥ ೫ ॥
ಅತಿಕೋಪಸಮಾಯುಕ್ತೈಃ ಕಸ್ಮಿಂಶ್ಚಿತ್ಕಾರಣಾಂತರೇ ।
ತದಾ ದೇವೇನ ಪ್ರತಿಜ್ಞಾತಂ ಸರ್ವೇಷಾಂ ತ್ರಿದಿವೌಕಸಾಂ ॥ ೬ ॥
ಅಚಲೇ ತು ಮಯಾಽತ್ರೈವ ಸ್ಥಾತವ್ಯಂ ನಾತ್ರ ಸಂಶಯಃ ।
ತತಃ ಕಾಲೇನ ಮಹತಾ ವಸತಸ್ತಸ್ಯ ತತ್ರ ಚ ॥ ೭ ॥
ಅಚಲೇಶ್ವರರೂಪಸ್ಯ ಗಂಗಾ ಚಿತ್ತೇ ವ್ಯಜಾಯತ ।
ಕಥಂ ನಿತ್ಯಂ ತಯಾ ಸಾರ್ಧಂ ಭವಿಷ್ಯತಿ ಸಮಾಗಮಃ ॥ ೮ ॥
ಅಥ ಜಾನಾತಿ ಸೋ ಗೌರೀ ಮಾನಿನೀ ಪರಮೇಶ್ವರೀ ।
ತಸ್ಯೈವಂ ಚಿಂತಯಾನಸ್ಯ ಬಹುಶೋ ನೃಪಸತ್ತಮ ॥ ೯ ॥
ಉಪಾಯಂ ಸುಮಹದ್ಧ್ಯಾತ್ವಾ ಜಾಹ್ನವೀ ಸಂಗಸಂಭವಂ ।
ತೇನಾದಿಷ್ಟಾ ಗಣಾಃ ಸರ್ವೇ ನಂದಿಭೃಂಗಿಪುರಃಸರಾಃ ॥ ೧೦ ॥
ಅಭಿಪ್ರಾಯೋಽಸ್ತಿ ಮೇ ಕಶ್ಚಿಜ್ಜಲಾಶ್ರಯವ್ರತೋದ್ಭವಃ ।
ಕ್ರಿಯತಾಮುತ್ತಮಂ ಕುಂಡಮಸ್ಮಿನ್ಪರ್ವತರೋಧಸಿ ॥ ೧೧ ॥
ತತ್ರಾಹಂ ಜಲಮಧ್ಯಸ್ಥಃ ಸ್ಥಾಸ್ಯಾಮಿ ಜಲತತ್ಪರಃ ।
ತಚ್ಛ್ರುತ್ವಾ ತ್ವರಿತಂ ಚಕ್ರುರ್ಗಣಾಃ ಕುಂಡಮನೇಕಶಃ ॥ ೧೨ ॥

---

ಯಾವಾಗಲೂ ಈ ಅರ್ಬುದಾಚಲದಲ್ಲಿ ಇರಬೇಕೆಂದು ಕೇಳಿಕೊಂಡರು. ಶಂಕರನು ತನ್ನ ಲಿಂಗವನ್ನು ಅಲ್ಲಿ ಪ್ರತಿಷ್ಠೆಮಾಡಿ ಸಮಸ್ತ ದೇವತೆಗಳ ಮುಂದೆ ನಾನು ಈ ಪರ್ವತದಲ್ಲಿ ಯಾವಾಗಲೂ ನೆಲೆಸುವೆನು ಎಂದು ಪ್ರತಿಜ್ಞೆ ಮಾಡಿದನು. ಅಚಲೇಶ್ವರನ ರೂಪದಿಂದ ಅಲ್ಲಿ ವಾಸಮಾಡುತ್ತಿರುವ ಆ ಶಂಕರನು ಮನಸ್ಸಿನಲ್ಲಿ ಬಹುಕಾಲದ ಮೇಲೆ ಗಂಗೆಯೊಡನೆ ನನಗೆ ಹೇಗೆ ಸಮಾಗಮವಾಗುವುದೆಂದು ಚಿಂತಿಸಿದನು.

೯. ನರೇಂದ್ರ! ಆ ಶಂಕರನು ಬಹಳವಾಗಿ ಚಿಂತಿಸುತ್ತಿದ್ದರೂ ಗೌರಿಯು ಅದನ್ನರಿಯಲಿಲ್ಲ

೧೦. ಅವನು ಗಂಗೆಯ ಸಮಾಗಮ ವಿಷಯದಲ್ಲಿ ದೊಡ್ಡ ಉಪಾಯವೊಂದನ್ನು ಆಲೋಚಿಸಿ ನಂದಿ ಭೃಂಗಿ ಮೊದಲಾದ ಗಣಗಳನ್ನು ಹೀಗೆ ಆಜ್ಞೆಮಾಡಿದನು.

೧೧. ನನಗೆ ಜಲಾಶ್ರಯ ವ್ರತ ಸಂಬಂಧವಾದ ಅಭಿಪ್ರಾಯವೊಂದಿದೆ. ಆದ್ದರಿಂದ ನೀವು ಈ ಪರ್ವತದ ತಪ್ಪಲಿನಲ್ಲಿ ಒಂದು ಕುಂಡವನ್ನು ನಿರ್ಮಿಸಿರಿ.

೧೨-೩. ಅಲ್ಲಿ ನಾನು ನೀರಿನ ನಡುವೆ ವ್ರತವನ್ನಾಚರಿಸುವೆನು. ಅದನ್ನು ಕೇಳಿ ಗಣಗಳು ಶೀಘ್ರವಾಗಿ ಸ್ವಚ್ಛಜಲದಿಂದ ತುಂಬಿರುವ ಸುಖವನ್ನುಂಟುಮಾಡುವ ಕುಂಡವನ್ನು ನಿರ್ಮಿಸಿದುವು. ಬಳಿಕ ಶಂಕರನು ಗಂಗೆಯ ಸಮಾಗಮದಲ್ಲಿ

ಸ್ವಚ್ಛೋದಕಸಮಾಕೀರ್ಣಂ ಸುತೀರ್ಥಂ ಸುಸುಖಾವಹಂ ।
ತತೋ ಗೌರೀಮನುಜ್ಞಾಪ್ಯ ಜಾಹ್ನವೀಸಂಗಲಾಲಸಃ ॥ ೧೩ ॥
ವ್ರತವ್ಯಾಜೇನ ದೇವೇಶೋ ವಿವೇಶ ತದನಂತರಂ ।
ಚಿಂತಯಾಮಾಸ ತತ್ರಸ್ಥೋ ಗಂಗಾಂ ತ್ರೈಲೋಕ್ಯಪಾವನೀಂ ॥ ೧೪ ॥
ಸಾ ಧ್ಯಾತಾ ತತ್‍ಕ್ಷಣಾತ್ತತ್ರ ಶಿವೇನ ಸಹ ಸಂಗತಾ ।
ಏವಂ ಸ ಭಗವಾಂಸ್ತತ್ರ ಜಾಹ್ನವೀಂ ಭಜತೇ ಸದಾ ॥ ೧೫ ॥
ತತ್ರ ವ್ಯಾಜೇನ ರಾಜೇಂದ್ರ ನ ತು ಗೌರೀ ವ್ಯಜಾನತ ।
ಕೈವಲ್ಯಜ್ಞಾನಸಂಪನ್ನಸ್ತತ್ರಾಯಾತಃ ಪರಿಭ್ರಮನ್ ॥ ೧೬ ॥
ಸ ತು ದೃಷ್ಟ್ವಾ ಮಹಾದೇವಂ ಜಲಸ್ಥಂ ವ್ರತಧಾರಿಣಂ ।
ಕಾಮಜ್ಯೈರಾಂಗಿಕೈರ್ಯುಕ್ತಂ ತತ್ರಾಽಸೌ ವಿಸ್ಮಯಾನ್ವಿತಃ ॥ ೧೭ ॥
ವಕ್ತ್ರನೇತ್ರವಿಕಾರೋಽಯಂ ಕಿಮಸ್ಯ ವ್ರತಧಾರಿಣಃ ।
ಈದೃಕ್ಕಾಮಸಮಾಯುಕ್ತಸ್ತತೋ ಧ್ಯಾನಸ್ಥಿತೋ ಮುನಿಃ ॥ ೧೮ ॥
ಅಥಾಪಶ್ಯದ್ಧ್ಯಾನದೃಷ್ಟ್ಯಾ ಗಂಗಾಸಕ್ತಂ ಮಹೇಶ್ವರಂ ।
ಗೌರ್ಯಾ ಭಯೇನ ಸವ್ಯಾಜಂ ತತೋ ವಿಸ್ಮಯಮಾಗತಃ ॥ ೧೯ ॥

---

ಆಶೆಯುಳ್ಳವನಾಗಿ ಗೌರಿಯನ್ನು ಕೇಳಿಕೊಂಡು ವ್ರತದ ನೆಪದಿಂದ ಆ ಕುಂಡವನ್ನು ಪ್ರವೇಶಿಸಿ ತ್ರಿಲೋಕಪಾವನೆಯಾದ ಗಂಗೆಯನ್ನು ಧ್ಯಾನಿಸಿದನು.

೧೫–೧೬. ಶಿವನು ಧ್ಯಾನಿಸಿದ ಕ್ಷಣಮಾತ್ರದಲ್ಲಿ ಗಂಗೆಯು ಅಲ್ಲಿಗೆ ಆಗಮಿಸಿ ಅವನೊಡನೆ ಸೇರಿದಳು. ಹೀಗೆ ಆ ಶಂಕರನು ವ್ರತದ ನೆಪದಿಂದ ಅಲ್ಲಿ ಗಂಗೆಯನ್ನು ಯಾವಾಗಲೂ ಸೇವಿಸುವನು. ಆದರೆ ಅದನ್ನು ಪರ್ವತರಾಜನ ಕುವರಿಯು ಅರಿಯಲಿಲ್ಲ. ಕೆಲವು ಕಾಲದ ಮೇಲೆ ಕೈವಲ್ಯ ಜ್ಞಾನಿಯಾದ ನಾರದ ಮಹಾ ಮುನಿಯು ಸಂಚರಿಸುತ್ತ ಅಲ್ಲಿಗೆ ಬಂದನು.

೧೭. ಅವನು ವ್ರತವನ್ನು ತಾಳಿ ಜಲವಾಸಿಯಾಗಿ ಕಾಮಚಿಹ್ನೆಗಳಿಂದ ಕೂಡಿರುವ ಮಹೇಶ್ವರನನ್ನೀಕ್ಷಿಸಿ ಆಶ್ಚರ್ಯಗೊಂಡನು.

೧೮. ವ್ರತವನ್ನುಧರಿರುವ ಈ ಶಂಕರನಿಗೆ ಇಂತಹ ಕಾಮದಿಂದ ಸಹಿತವಾದ ಮುಖ ಮತ್ತು ಕಣ್ಣುಗಳ ವಿಕಾರವು ಹೇಗುಂಟಾಯಿತು ? ಎಂದು ಚಿಂತಿಸಿದನು.

೧೯. ಬಳಿಕ ಅವನು ಧ್ಯಾನ ದೃಷ್ಟಿಯಿಂದ ಗೌರಿಯ ಭಯದಿಂದ ವ್ರತದ ನೆಪವನ್ನು ಹೇಳಿ ಗಂಗಾ ಸಂಗತನಾದ ಗಂಗಾಧರನನ್ನು ಕಂಡು ವಿಸ್ಮಯಗೊಂಡನು.

ತದಾ ಸ ಕಥಯಾಮಾಸ ಸರ್ವಂ ಹರವಿಚೇಷ್ಟಿತಂ || ೨೦ ||
ತತೋ ದೇವೀ ತ್ವರಾಯುಕ್ತಾ ಯಯೌ ಯತ್ರ ಮಹೇಶ್ವರಃ |
ಆತಾಮ್ರನಯನಾ ರೋಷಾದ್ವೇಪಮಾನಾ ಮುಹುರ್ಮುಹುಃ || ೨೧ ||
ತಾಂ ದೃಷ್ಟ್ವಾ ಕೋಪಸಂಯುಕ್ತಾಂ ಸಮಾಯಾತಾಂ ಮಹೇಶ್ವರೀಂ |
ಉವಾಚ ಜಾಹ್ನವೀ ಭೀತಾ ಜ್ಞಾತ್ವಾ ದಿವ್ಯೇನ ಚಕ್ಷುಷಾ || ೨೨ ||
ಆವಯೋಃ ಸಂಗಮೋ ದೇವೀ ನಾರದೇನ ನಿವೇದಿತಾ |
ಸೇಯಂ ರುಷ್ಟಾ ಸಮಾಯಾತಿ ಕುರುಷ್ವ ಯದನಂತರಂ || ೨೩ ||

ಶ್ರೀ ಮಹಾದೇವ ಉವಾಚ :—

ಕರ್ತವ್ಯಂ ಜಾಹ್ನವಿ ಶ್ರೇಯಃ ಪುರೋ ಗತ್ವಾ ನಗಾತ್ಮಜಾಂ |
ಅತ್ಯರ್ಥಂ ಮಾನಿನೀ ಹ್ಯೇಷಾ ಸಾಮ್ನಾ ಚ ವಶವರ್ತಿನೀ || ೨೪ ||
ತತ್ಕ್ಷಣಾಜ್ಜ್ವಾಯತೇ ಸಾಧ್ವೀ ತಸ್ಮಾತ್ಸಾಮಪರಾ ಭವ |
ನೋ ಚೇಚ್ಛಾಪಂ ಮಯಾ ಸಾರ್ಧಂ ತವ ದಾಸ್ಯತ್ಯಸಂಶಯಂ || ೨೫ ||
ಏವಮುಕ್ತಾ ಚ ರುದ್ರೇಣ ಜಾಹ್ನವೀ ನೃಪಸತ್ತಮ |
ಕುಂಡಾನ್ನಿರ್ಗತ್ಯ ಸಾ ಗಂಗಾ ಸಂಮುಖಂ ಪ್ರಯಯೌ ತದಾ || ೨೬ ||

---

೨೦–೨೧. ಆಗ ನಾರದನು ಗೌರಿಗೆ ಶಂಕರನ ಕಾರ್ಯವನ್ನುಸುರಿದನು. ಅನಂತರ ದೇವಿಯು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವಳಾಗಿ ಬಾರಿ ಬಾರಿಗೂ ನಡುಗುತ್ತ ತ್ವರೆಯಿಂದ ಮಹೇಶ್ವರನೆಡೆಗೆ ನಡೆತಂದಳು.

೨೨. ಜಾಹ್ನವಿಯು ದಿವ್ಯಚಕ್ಷುಸ್ಸಿನಿಂದ ಕುಪಿತಳಾಗಿ ಬಂದ ಮಹೇಶ್ವರಿಯನ್ನು ಕಂಡು ಇಂತೆಂದಳು.

೨೩. "ನಾಥ! ನಾರದಮುನಿಯು ನಮ್ಮಿರ್ವರ ಸಮಾಗಮವನ್ನು ತಿಳಿಸಿದ್ದರಿಂದ ದೇವಿಯು ಕ್ರುದ್ಧಳಾಗಿ ಬರುತ್ತಿರುವಳು. ಈಗ ಮಾಡಬೇಕಾದ ಕಾರ್ಯವನ್ನು ಮಾಡು.

೨೪–೨೫. ಶ್ರೀಮಹಾದೇವನು ಹೇಳುತ್ತಾನೆ :—ಗಂಗೆ! ನೀನು ಪಾರ್ವತಿಯನ್ನು ಎದುರುಗೊಂಡು ಆಕೆಗೆ ಶ್ರೇಯಸ್ಸನ್ನು ಕೋರು. ಅತ್ಯಂತ ಕುಪಿತಳಾದ ಈಕೆ ಸಾಮೋಪಾಯದಿಂದ ಕೂಡಲೆ ವಶಳಾಗುವಳು. ಆದ್ದರಿಂದ ಸಾಮಪರಳಾಗು. ಇಲ್ಲದಿದ್ದರೆ ನನಗೂ ನಿನಗೂ ನಿಶ್ಚಯವಾಗಿ ಶಾಪವನ್ನೀಯುವಳು.

೨೬. ಶಂಕರನು ಹೀಗೆನ್ನಲು ಜಾಹ್ನವಿಯು ಆ ಕುಂಡದಿಂದ ಹೊರಟು ಆ ಗೌರಿದೇವಿಗೆ ಎದುರಾಗಿ ಹೋಗಿ ಆಕೆಯನ್ನು ಕುರಿತು ಹೀಗೆಂದಳು.

ಗಂಗೋವಾಚ :—

ಪ್ರತ್ಯುದ್ಯಯೌ ಸಲಜ್ಜಾ ಚ ಕೃತಾಂಜಲಿಪುರಃಸರಾ ।
ಪ್ರಣಮ್ಯ ಶಿರಸಾ ಚೋಮಾಂ ತತಃ ಪ್ರಾಹ ಸ್ವಲಂಕೃತಾ ॥ ೨೭ ॥
ಪುರಾಽಹಂ ತವ ಕಾಂತೇನ ನಿಪತಂತೀ ನಭಸ್ತಲಾತ್ ।
ಧೃತಾ ದೇವಿ ತವಾಪ್ಯೇತದ್ವಿದಿತಂ ನೃಪತೇಃ ಕೃತೇ ॥ ೨೮ ॥
ಭಗೀರಥಾಭಿಧಾನಸ್ಯ ತತಃ ಸ್ನೇಹೋ ವ್ಯವರ್ಧತ ।
ಆವಯೋಸ್ತವ ಭೀತ್ಯಾ ಚ ನಾಭೂತ್ಕ್ವಾಪಿ ಸಮಾಗಮಃ ॥ ೨೯ ॥
ಅಧುನಾ ತವ ವಾಕ್ಯೇನ ಜಾನೇಽಹಂ ನ ಸುರೇಶ್ವರಿ ।
ಸಮಾಹೂತಾಽಸ್ಮಿ ರುದ್ರೇಣ ಕಿಂ ವಾ ಸ್ವಚ್ಛಂದತಃ ಶುಭೇ ॥ ೩೦ ॥
ತ್ರೈಲೋಕ್ಯಸ್ಯ ಪ್ರಭುರಯಂ ತನ್ನಿಷ್ಕ್ರಮ್ಯ ಕಥಂಚನ ।
ತಸ್ಮಾದತ್ರೈವ ಸಂಪ್ರಾಪ್ತಾ ಸತ್ಯಮೇತನ್ಮಯೋದಿತಂ ॥ ೩೧ ॥

ಪುಲಸ್ತ್ಯ ಉವಾಚ :—

ತಸ್ಯಾಸ್ತದ್ವಚನಂ ಶ್ರುತ್ವಾ ತತೋ ದೇವೀ ಪ್ರಹರ್ಷಿತಾ ।
ಪ್ರೋವಾಚ ಮಧುರಂ ವಾಕ್ಯಂ ಸತ್ಯಮೇತತ್ತ್ವಯೋದಿತಂ ॥ ೩೨ ॥
ತಸ್ಮಾದ್ವರಯ ಭದ್ರಂ ತೇ ವರಂ ಮತ್ತೋ ಯಥೇಪ್ಸಿತಂ ।
ಮುಕ್ತ್ವೈಕಂ ಪತಿಧರ್ಮಿತ್ವಂ ಮಮ ಕಾಂತಂ ಮಹೇಶ್ವರಂ ॥ ೩೩ ॥

---

೨೭. ಅಲಂಕೃತಳಾದ ಆ ಗಂಗೆಯು ಪಾರ್ವತಿಗೆ ಮುಗಿದು ಶಿರಬಾಗಿ ನಮಿಸಿ ನಾಚಿಕೆಯಿಂದ ಹೀಗೆ ನುಡಿದಳು.

೨೮–೨೯. ಗಂಗೆಯು ಹೇಳುತ್ತಾಳೆ :—ದೇವಿ! ನಾನು ಆಕಾಶದಿಂದ ಭಗೀರಥನಿಗಾಗಿ ಕೆಳಗೆ ಬೀಳುತ್ತಿರಲು ಈ ಮಹೇಶ್ವರನು ತಲೆಯಿಂದ ನನ್ನನ್ನು ಧರಿಸಿದನು. ಇದು ನಿನಗೂ ತಿಳಿದಿರುವುದು. ಆದರಿಂದ ನಮ್ಮಿಬ್ಬರಿಗೂ ಸ್ನೇಹವುಂಟಾಯಿತು. ಆದರೆ ನಿನ್ನ ಭಯದಿಂದ ಎಲ್ಲಿಯೂ ಸಮಾಗಮವಾಗಲಿಲ್ಲ.

೩೦. ಓ ಮಂಗಳಕರಳೆ! ಈಗ ಮಹೇಶ್ವರನು ನನ್ನನ್ನು ನಿನ್ನಮಾತಿನಿಂದ ಇಲ್ಲಿಗೆ ಕರೆಯಿಸಿದನೊ, ಅಥವಾ ತನ್ನಿಚ್ಛೆಯಿಂದಲೆ ಕರೆಯಿಸಿದನೊ ನಾನರಿಯೆನು.

೩೧. ಈ ಶಂಕರನು ತ್ರೈಲೋಕ್ಯನಾಥನು. ಆದ್ದರಿಂದ ನಾನು ಹೇಗೊ ಇಲ್ಲಿಗೆ ಬಂದಿರುವೆನು. ಸತ್ಯವಾದ ಈ ವಿಷಯವನ್ನು ನಾನು ಹೇಳಿದ್ದೇನೆ.

೩೨. ತರುವಾಯ ಆ ನಗನಂದಿನಿಯಾದ ಆ ದೇವಿಯು ಅವಳ ಆ ಮಾತನ್ನು ಕೇಳಿ ಹರ್ಷಗೊಂಡು ಸವಿಯಾಗಿ ಹೀಗೆಂದಳು. "ಎಲಾ ಗಂಗೇ ನೀನು ಹೇಳಿದ್ದು ನಿಜ.

೩೩. ಆದ್ದರಿಂದ ನೀನು ನನ್ನಿಂದ ನನ್ನ ಪತಿಯ ಪತ್ನೀತ್ವವೊಂದನ್ನು ತ್ಯಜಿಸಿ ಇಷ್ಟಬಂದ ವರವನ್ನು ಕೇಳಿಕೊ".

ಗಂಗೋವಾಚ :—

ಅಪಿ ದೌರ್ಭಾಗ್ಯಯುಕ್ತಾಽಹಂ ಭಾರ್ಯಾ ಜಾತಾಽಸ್ಮಿ ಶೂಲಿನಃ ।
ತಸ್ಮಾದೇಕಂ ದಿನಂ ದೇಹಿ ಕ್ರೀಡನಾರ್ಥಮನೇನ ತು ॥ ೩೪ ॥
ಚೈತ್ರಶುಕ್ಲತ್ರಯೋದಶ್ಯಾಮಹೋರಾತ್ರಂ ಸುರೇಶ್ವರಿ ।
ಶಿವಕುಂಡಂ ತಥಾಸ್ತ್ವೇತಸ್ಮಯಾ ಯಸ್ಮಾತ್ಸಮಾವೃತಂ ॥ ೩೫ ॥
ಶಿವಗಂಗಾಭಿಧಾನಂ ಚ ತಸ್ಮಾತ್ಕುಂಡಂ ಧರಾತಲೇ ।
ಖ್ಯಾತಿಂ ಯಾತು ಪ್ರಸಾದೇನ ತವ ಪರ್ವತನಂದಿನಿ ॥ ೩೬ ॥

ಪುಲಸ್ತ್ಯ ಉವಾಚ :—

ಏವಮಸ್ತ್ವಿತಿ ಸಾ ದೇವೀ ಪ್ರೋಚ್ಯ ಗಂಗಾಂ ಮಹಾನದೀಂ ।
ತತೋ ವಿಸರ್ಜಯಾಮಾಸ ತಾಮಾಲಿಂಗ್ಯ ಮುಹುರ್ಮುಹುಃ ॥ ೩೭ ॥
ಗತಾಯಾಮಥ ಗಂಗಾಯಾಮಧೋವಕ್ತ್ರಂ ಸುಲಜ್ಜಿತಂ ।
ಪಾಣೌ ಗೃಹ್ಯ ಯಯೌ ರುದ್ರಂ ಭ್ರಮಮಾಣಾ ಗೃಹಂ ಪ್ರತಿ ॥ ೩೮ ॥
ಏವಮೇತತ್ಪುರಾವೃತ್ತಂ ತಸ್ಮಿನ್ಕುಂಡೇ ನರಾಧಿಪ ।
ತಸ್ಮಾತ್ಸರ್ವಪ್ರಯತ್ನೇನ ಚತುರ್ದಶ್ಯಾಂ ಸಮಾಹಿತಃ ॥ ೩೯ ॥
ಶುಕ್ಲಾಯಾಂ ಚೈತ್ರಮಾಸೇ ತು ಸ್ನಾನಂ ತತ್ರ ಸಮಾಚರೇತ್ ।
ಸಾಂನ್ನಿಧ್ಯಾದ್ದೇವದೇವಸ್ಯ ಗಂಗಾಯಾಶ್ಚ ನೃಪೋತ್ತಮ ॥ ೪೦ ॥

---

೩೪. ಗಂಗೆಯು ಹೇಳುತ್ತಾಳೆ :—ನಾನು ದೌರ್ಭಾಗ್ಯವುಳ್ಳವಳಾದರೂ ಮಹೇಶ್ವರನಿಗೆ ಭಾರ್ಯೆಯಾದೆನು. ಆದ್ದರಿಂದ ಇವನೊಡನೆ ಕ್ರೀಡಿಸಲು ನನಗೊಂದು ದಿನವನ್ನು ಕೊಡು.

೩೫. ಸುರೇಶ್ವರಿ ! ಚೈತ್ರಶುಕ್ಲ ತ್ರಯೋದಶೀ ದಿನ ಹಗಲು ರಾತ್ರಿ ಈ ಶಿವಕುಂಡವು ನನ್ನೊಡನೆ ಸಂಗತವಾಗಿರಲಿ.

೩೬. ಆದರಿಂದಲೇ ಈ ಕುಂಡವು ಭೂಮಿಯಲ್ಲಿ ನಿನ್ನ ಅನುಗ್ರಹದಿಂದ ಶಿವಗಂಗೆ ಯೆಂಬ ಹೆಸರನ್ನು ಪಡೆದು ಪ್ರಸಿದ್ಧವಾಗಲಿ.

೩೭. ಪುಲಸ್ತ್ಯನು ಹೇಳುತ್ತಾನೆ :—ಆ ಶೈಲನಂದಿನಿಯು ಗಂಗಾಮಹಾದೇವಿಗೆ ಹಾಗೆಯೇ ಆಗಲೆಂದು ಹೇಳಿ ಅವಳನ್ನು ಆಲಿಂಗಿಸಿ ಕಳುಹಿಸಿದಳು.

೩೮. ಗಂಗೆಯು ಹೊರಟು ಹೋಗಲು ದೇವಿಯು ನಾಚಿಕೆಯಿಂದ ತಲೆಬಾಗಿಸಿಕೊಂಡಿರುವ ರುದ್ರನ ಕೈ ಹಿಡಿದುಕೊಂಡು ಮನೆಗೆ ಹೋದಳು.

೩೯–೪೦. ದೊರೆಯೆ ! ಆ ಕುಂಡದ ವೃತ್ತಾಂತವು ಹೀಗಿರುವುದು. ಆದ್ದರಿಂದ ಚೈತ್ರಶುದ್ಧ ಚತುರ್ದಶೀ ದಿನ ಮಹೇಶ್ವರ ಗಂಗೆಯರ ಸಾನ್ನಿಧ್ಯವಿರುವುದರಿಂದ ಅಲ್ಲಿ ಸ್ನಾನಮಾಡಬೇಕು.

ಯತ್ರ ಸಂಕ್ಷಯಮಾಯಾತಿ ಸರ್ವಂ ತತ್ರಾಶುಭಂ ಕೃತಂ ।
ತತ್ರ ಯೋ ವೃಷಭಂ ದದ್ಯಾದ್ಬ್ರಾಹ್ಮಣಾಯ ನೃಪೋತ್ತಮ ।
ತದ್ರೋಮಸಂಖ್ಯಯಾ ಸ್ವರ್ಗೇ ಸ ಪುಮಾನ್ವಸತಿ ಧ್ರುವಂ ॥ ೪೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಶಿವಗಂಗಾಕುಂಡೋತ್ಪತ್ತಿವರ್ಣನಂ ನಾಮ
ಅಷ್ಟತ್ರಿಂಶೋಽಧ್ಯಾಯಃ

---

೪೧. ಅಲ್ಲಿ ಮಾಡಿದ ಪಾಪವೆಲ್ಲ ನಾಶವಾಗುವುವು. ಅಲ್ಲಿ ಬ್ರಾಹ್ಮಣನಿಗೆ ವೃಷಭವನ್ನು ದಾನಮಾಡಿದವನು ಅದರ ರೋಮಗಳ ಸಂಖ್ಯೆಯಷ್ಟು ಕಾಲ ಸ್ವರ್ಗದಲ್ಲಿ ನಿಶ್ಚಯವಾಗಿಯೂ ವಾಸಿಸುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಶಿವಗಂಗಾಕುಂಡೋತ್ಪತ್ತಿವರ್ಣನವೆಂಬ
ಮುವ್ವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ।

# ಏಕೋನಚತ್ವಾರಿಂಶೋಽಧ್ಯಾಯಃ

## ಶಿವಲಿಂಗಮಹೇಶ್ವರಮಾಹಾತ್ಮ್ಯವರ್ಣನಪುರಸ್ಸರಸಕ್ತುದಾನಮಾಹಾತ್ಮ್ಯವರ್ಣನಂ

ಯಯಾತಿರುವಾಚ :—

ಯತ್ತ್ವಯಾ ಕೀರ್ತಿತಂ ಬ್ರಹ್ಮನ್ಪೂರ್ವಂ ದೇವೈಃ ಪ್ರಸಾದಿತಃ ।
ಲಿಂಗಂ ಸಂಸ್ಥಾಪಯಾಮಾಸ ಸ್ಥಿರರೂಪೋ ಮಹೇಶ್ವರಃ ॥ ೧ ॥
ಕಸ್ಮಾತ್ತತ್ಪಾತಿತಂ ಲಿಂಗಂ ವಾಲಖಿಲ್ಯೈರ್ಮಹಾತ್ಮಭಿಃ ।
ಕಸ್ಮಾತ್ತತ್ರಾಚಲೋ ಜಾತೋ ದೇವದೇವೋ ಮಹೇಶ್ವರಃ ॥ ೨ ॥
ಏತನ್ಮೇ ಕೌತುಕಂ ಸರ್ವಂ ಯಥಾವದ್ವಕ್ತುಮರ್ಹಸಿ ।
ತಸ್ಮಿನ್ದೃಷ್ಟೇ ಚ ಕಿಂ ಪುಣ್ಯಂ ನರಾಣಾಂ ತತ್ರ ಜಾಯತೇ ॥ ೩ ॥

ಪುಲಸ್ತ್ಯ ಉವಾಚ :—

ಮಹೇಶ್ವರಸ್ಯ ಮಾಹಾತ್ಮ್ಯಂ ಶೃಣು ಪಾರ್ಥಿವಸತ್ತಮ ।
ಅತ್ರ ತೇ ಕೀರ್ತಯಿಷ್ಯಾಮಿ ಪೂರ್ವವೃತ್ತಂ ಕಥಾಂತರಂ ॥ ೪ ॥

---

### ಕನ್ನಡದ ಅನುವಾದ

#### ಶಿವಲಿಂಗಮಹೇಶ್ವರಮಾಹಾತ್ಮ್ಯವರ್ಣನಪುರಸ್ಸರಸಕ್ತುದಾನಮಾಹಾತ್ಮ್ಯವರ್ಣನ

೧. ಯಯಾತಿಯು ಹೇಳುತ್ತಾನೆ :—ನೀನು ದೇವತೆಗಳಿಂದ ಸಂತೋಷಗೊಳಿಸಲ್ಪಟ್ಟ ಮಹೇಶ್ವರನು ಲಿಂಗವನ್ನು ಸ್ಥಾಪಿಸಿದನೆಂದು ಹೇಳಿದೆ.

೨. ಮಹಾತ್ಮರಾದ ವಾಲಖಿಲ್ಯರು ಏತಕ್ಕೆ ಅವನ ಲಿಂಗವನ್ನು ಕೆಡವಿದರು ? ಮಹೇಶ್ವರನು ಅಲ್ಲಿ ಏತಕ್ಕೆ ಅಚಲನಾದನು ?

೩. ಅವನನ್ನು ದರ್ಶನ ಮಾಡಿದ ಮಾನವರಿಗೆ ಯಾವ ಪುಣ್ಯವು ದೊರೆಯುವುದು ? ಇದನ್ನೆಲ್ಲ ಕೇಳಲು ನನಗೆ ಬಹು ಕುತೂಹಲವುಂಟಾಗಿದೆ. ನೀನಿದನ್ನು ಯಥಾಸ್ಥಿತವಾಗಿ ನನಗೆ ಹೇಳು.

೪. ಪುಲಸ್ತ್ಯನು ಹೇಳುತ್ತಾನೆ :—ನರೇಂದ್ರ ! ಮಹೇಶ್ವರನ ಮಾಹಾತ್ಮ್ಯೆವನ್ನು ಕೇಳು. ಇಲ್ಲಿ ಹಿಂದೆ ನಡೆದ ಒಂದು ಕಥೆಯನ್ನು ಹೇಳುವೆನು.

ಯದಾ ಪಂಚತ್ವಮಾಪನ್ನಾ ಸತೀ ಸತ್ಯಪರಾಕ್ರಮಾ ।
ಅಪಮಾನೇನ ದಕ್ಷಸ್ಯ ಯಜ್ಞೇ ನ ಚ ನಿಮಂತ್ರಿತಾ ॥ ೫ ॥
ತದಾ ಕಾಮೋ ಧೃತಂ ಗೃಹ್ಯ ಪುಷ್ಪಚಾಪಂ ತಮಭ್ಯಗಾತ್ ।
ಕಂದರ್ಪಂ ಸಹಸಾ ದೃಷ್ಟ್ವಾ ಸಂಧಿತೇಷುಂ ಸುದುರ್ಜಯಂ ॥ ೬ ॥
ಆಪತಂತಂ ಭಯಾತ್ತಸ್ಯ ಪ್ರಣಷ್ಟಸ್ತ್ರಿಪುರಾಂತಕಃ ।
ಸ ತದಾ ಭ್ರಮಮಾಣಶ್ಚ ಇತಶ್ಚೇತಶ್ಚ ಪಾರ್ಥಿವ ॥ ೭ ॥
ವಾಲಖಿಲ್ಯಾಶ್ರಮಂ ಪ್ರಾಪ್ತಃ ಪುಣ್ಯಂ ಸದ್ವೃಕ್ಷಶೋಭಿತಂ ।
ಸ ತತ್ರ ಭಗವಾಂಸ್ತೇಷಾಂ ದಾರೈರ್ದೃಷ್ಟಃ ಸುರೂಪವಾನ್ ॥ ೮ ॥
ದಿಗ್ವಾಸಾಃ ಸುಪ್ರಿಯಾಲಾಪಸ್ತತಸ್ತಾಃ ಕಾಮಮೋಹಿತಾಃ ।
ತ್ಯಕ್ತ್ವಾ ಪುತ್ರಗೃಹಾದ್ಯಂ ಚ ಸರ್ವಾಸ್ತತ್ಪೃಷ್ಠಸಂಸ್ಥಿತಾಃ ।
ಬಭೂವುಶ್ಚಾನಿಶಂ ರಾಜನ್ಮಾಂ ಭಜಸ್ವೇತಿ ಚಾಬ್ರುವನ್ ॥ ೯ ॥
ಚಕ್ರುರಾಲಿಂಗನಂ ಕಾಶ್ಚಿಚ್ಚುಂಬನಂ ಚ ತಥಾಪರಾಃ ।
ಅನ್ಯಾಸ್ತಸ್ಯ ಹಿ ಲಿಂಗಂ ತತ್ಸ್ಪೃಶಂತಿ ಚ ಮುಹುರ್ಮುಹುಃ ॥ ೧೦ ॥
ಸ ಚಾಪಿ ಭಗವಾಞ್ಛಂಭುರ್ನಿಷ್ಕಾಮಃ ಪರಮೇಶ್ವರಃ ।
ಜಗದ್ವ್ಯಾಪ್ತಿಂ ಸಮಾಶ್ರಿತ್ಯ ಸರ್ವಪ್ರಾಣಿಷು ವರ್ತತೇ ॥ ೧೧ ॥

---

೫-೯. ದಕ್ಷನು ಯಜ್ಞಕ್ಕೆ ಆಮಂತ್ರಣ ಮಾಡದಿರುವುದರಿಂದ ಅಪಮಾನಗೊಂಡ ಸತ್ಯ ಪರಾಕ್ರಮಳಾದ ಸತಿಯು ಮೃತಳಾಗಲು ಮನ್ಮಥನು ಶೀಘ್ರವಾಗಿ ಕುಸುಮ ಧನುಸ್ಸನ್ನು ಹಿಡಿದು ಅವನೆದುರಿಗೆ ಬಂದುನಿಂತನು. ತ್ರಿಪುರಾರಿಯು ಬಾಣಗಳನ್ನು ಜೋಡಿಸಿಕೊಂಡು ಬರುತ್ತಿರುವ ದುರ್ಜಯನಾದ ಕಂದರ್ಪನನ್ನು ಕೂಡಲೆ ಕಂಡು ಅವನು ಭಯದಿಂದ ಅದೃಶ್ಯನಾದನು. ಅವನು ಇಲ್ಲಿ ಅಲ್ಲಿ ಸಂಚರಿಸುತ್ತ ವೃಕ್ಷಗಳಿಂದ ರಮ್ಯವಾದ ವಾಲಖಿಲ್ಯರ ಪುಣ್ಯಾಶ್ರಮವನ್ನು ಸೇರಿದನು. ಅಲ್ಲಿ ವಾಲಖಿಲ್ಯರ ಪತ್ನಿಯರು ಸುಂದರನೂ, ದಿಗಂಬರನೂ, ಹಿತನುಡಿಯನ್ನು ನುಡಿಯುವವನೂ ಆದ ಆ ಶಂಕರನನ್ನು ಕಂಡು ಕಾಮಮೋಹಿತರಾಗಿ ತಮ್ಮ ಪುತ್ರ ಗೃಹಾದಿಗಳನ್ನು ತೊರೆದು ಯಾವಾಗಲೂ ಅವನನ್ನು ಹಿಂಬಾಲಿಸುತ್ತ ನನ್ನನ್ನು ಭೋಗಿಸೆಂದು ಹೇಳಿದರು.

೧೦. ಕೆಲವರು ಅವನನ್ನು ತಬ್ಬಿಕೊಂಡರು. ಇನ್ನು ಕೆಲವರು ಚುಂಬಿಸಿದರು. ಮತ್ತೆ ಕೆಲವರು ಅವನ ಲಿಂಗವನ್ನು ಬಾರಿ ಬಾರಿಗೂ ಮುಟ್ಟಿದರು.

೧೧. ನಿಷ್ಕಾಮನಾದ ಭಗವಾನ್ ಪರಮೇಶ್ವರನು ಜಗತ್ತನ್ನು ವ್ಯಾಪಿಸಿ ಸಕಲ ಪ್ರಾಣಿಗಳಲ್ಲಿರುವನು.

ಸ ಚಾಪಿ ಭಗವಾಞ್ಛಂಭುಸ್ತಾಸಾಂ ಸರತಿ ಪ್ರಾಂಗ್ಮುಖಃ ।
ಭ್ರಾಂತಸ್ತತ್ರಾಶ್ರಮೇ ತೇಷಾಂ ದಾರಾನ್ಕಾಮೇನ ಪೀಡಯನ್ ॥ ೧೨ ॥
ಅಥ ತೇ ಮುನಯೋ ದೃಷ್ಟ್ವಾ ವಿಕೃತಿಂ ದಾರಸಂಭವಾಂ ।
ಅಜಾನಂತೋ ಮಹಾದೇವಂ ರುಷ್ಟಾಸ್ತಸ್ಯ ಮಹಾತ್ಮನಃ ॥ ೧೩ ॥
ದದುಃ ಶಾಪಂ ಸುಸಂತಪ್ತಾಃ ಕಲತ್ರಾರ್ಥೇ ಪರಂತಪ ।
ಪತತಾಂ ಪತತಾಂ ಲಿಂಗಮೇತತ್ತೇ ಪಾಪಕೃತ್ತಮ ॥ ೧೪ ॥
ವಿಡಂಬಯಸಿ ನೋ ದಾರಾನಜಸ್ರಂ ಚಾಸ್ಯ ದರ್ಶನಾತ್ ।
ತತಶ್ಚೈವಾಪತಲ್ಲಿಂಗಂ ತತ್ಕ್ಷಣಾತ್ತತ್ಪುರದ್ವಿಷಃ ॥ ೧೫ ॥
ಬ್ರಹ್ಮವಾಕ್ಯೇನ ರಾಜರ್ಷೇ ಚಕಂಪೇ ವಸುಧಾ ತತಃ ।
ಶೀರ್ಣಾನಿ ಗಿರಿಶೃಂಗಾಣಿ ಚುಕ್ಷುಭುರ್ಮಕರಾಲಯಾಃ ॥ ೧೬ ॥
ತತೋ ದೇವಗಣಾಃ ಸರ್ವೇ ಭಯತ್ರಸ್ತಾ ನರಾಧಿಪ ।
ಅಕಾಲೇ ಪ್ರಲಯಂ ಮತ್ವಾ ತ್ರೈಲೋಕ್ಯೇ ಪರ್ಯವಸ್ಥಿತಂ ॥ ೧೭ ॥
ತತಃ ಪಿತಾಮಹಂ ಜಗ್ಮುಸ್ತಸ್ಮೈ ಸರ್ವಂ ನ್ಯವೇದಯನ್ ।
ಪ್ರಲಯಸ್ಯೇವ ಚಿಹ್ನಾನಿ ದೃಶ್ಯಂತೇ ಪರಮೇಶ್ವರ ॥ ೧೮ ॥

---

೧೨. ಅಂತಹ ಶಂಕರನು ಆ ಮುನಿಗಳ ಆಶ್ರಮದಲ್ಲಿ ಅವರ ಪತ್ನಿಯರನ್ನು ಕಾಮಪೀಡಿತರನ್ನಾಗಿ ಮಾಡುತ್ತ ಪೂರ್ವಮುಖನಾಗಿ ಸಂಚರಿಸಿದನು.

೧೩. ಬಳಿಕ ಆ ಮುನಿಗಳು ತಮ್ಮ ಪತ್ನಿಯರಿಗುಂಟಾದ ಕಾಮವಿಕಾರವನ್ನು ನೋಡಿ ಮಹಾದೇವನೆಂದರಿಯದೆ ಆ ಮಹಾತ್ಮನ ಮೇಲೆ ಕುಪಿತರಾದರು.

೧೪–೧೫. ಪತ್ನಿಯರಿಗಾಗಿ ಸಂತಾಪಗೊಂಡು, "ಎಲೈ ಪಾಪಿಯೆ! ನಮ್ಮ ಪತ್ನಿಯರನ್ನು ಯಾವಾಗಲೂ ದರ್ಶನದಿಂದ ಮೋಹಗೊಳಿಸುವುದರಿಂದ ನಿನ್ನ ಈ ಲಿಂಗವು ಬಿದ್ದು ಹೋಗಲಿ" ಎಂದು ಶಾಪವನ್ನಿತ್ತರು. ಕೂಡಲೆ ಆ ಮಹೇಶ್ವರನ ಲಿಂಗವು ನೆಲಕ್ಕೆ ಬಿದ್ದಿತು.

೧೬. ರಾಜರ್ಷಿಯೆ! ಬಳಿಕ ಬ್ರಾಹ್ಮಣರ ಮಾತಿನಿಂದ ಭೂಮಿಯು ನಡುಗಿತು. ಶೈಲಶಿಖರಗಳು ಒಡೆದು ಹೋದುವು. ಸಮುದ್ರಗಳು ಅಲ್ಲೋಲ ಕಲ್ಲೋಲ ವಾದುವು.

೧೭–೨೦. ದೊರೆಯೆ! ಅನಂತರ ದೇವತೆಗಳೆಲ್ಲ ಮೂರುಲೋಕಗಳಲ್ಲಿ ಅಕಾಲದಲ್ಲುಂಟಾದ ಪ್ರಳಯವನ್ನರಿತು ಭಯಗೊಂಡು ಬ್ರಹ್ಮನೆಡೆಗೆ ಹೋಗಿ ಹೀಗೆ ವಿಜ್ಞಾಪಿಸಿಕೊಂಡರು. ಪಿತಾಮಹ! ಪ್ರಳಯಕಾಲದ ಚಿಹ್ನೆಗಳು ಕಾಣುತ್ತಿವೆ. ಇದು ಎತಕ್ಕುಂಟಾಗಿದೆಯೆಂಬುದನ್ನು ನಾವು ತಿಳಿಯೆವು. ಬ್ರಹ್ಮನು ಅವರ

ಕಿಂ ನಿಮಿತ್ತಂ ಸುರಶ್ರೇಷ್ಠ ನ ಜಾನೀಮೋ ವಯಂ ಪ್ರಭೋ ।
ತೇಷಾಂ ತದ್ವಚನಂ ಶ್ರುತ್ವಾ ಚಿರಂ ಧ್ಯಾತ್ವಾ ಪಿತಾಮಹಃ ॥ ೧೯ ॥
ಅಬ್ರವೀತ್ಪಾತಿತಂ ಲಿಂಗಂ ವಾಲಖಿಲ್ಯೈಃ ಪಿನಾಕಿನಃ ।
ತೇನೈತೇ ದಾರುಣೋತ್ಪಾತಾಃ ಸಂಜಾತಾ ಭಯಸೂಚಕಾಃ ॥ ೨೦ ॥
ತಸ್ಮಾನ್ಮಯಾ ಸಮಾಯುಕ್ತಾಃ ಸರ್ವೇ ತತ್ರ ದಿವೌಕಸಃ ।
ವ್ರಜಂತು ಯೇನ ತಲ್ಲಿಂಗಂ ಸ್ಥಾನೇ ಸಂಸ್ಥಾಪಯೇಚ್ಛಿವಃ ॥ ೨೧ ॥
ಯಾವನ್ನೋ ಜಾಯತೇ ಲೋಕೇ ಪ್ರಲಯೋಽಕಾಲಸಂಭವಃ ।
ಏವಂ ಸಂಮಂತ್ರ್ಯ ತೇ ಸರ್ವೇ ತತೋಽರ್ಬುದಮುಪಾಯಯುಃ ॥ ೨೨ ॥
ವಾಲಖಿಲ್ಯಾಶ್ರಮೋ ಯತ್ರ ತಲ್ಲಿಂಗಂ ನಿಪಪಾತ ಹ ।
ತುಷ್ಟುವುರ್ವಿವಿಧೈಃ ಸೂಕ್ತೈರ್ವೇದೋಕ್ತೈರ್ವಿನಯಾನ್ವಿತಾಃ ॥ ೨೩ ॥

ದೇವಾ ಊಚುಃ :—

ನಮಸ್ತೇ ದೇವದೇವೇಶ ಭಕ್ತಾನಾಂ ಚಾಭಯಂಕರ ।
ನಮಸ್ತೇ ಸರ್ವವಾಸಾಯ ಸರ್ವಯಜ್ಞಮಯಾಯ ಚ ॥ ೨೪ ॥
ಸರ್ವೇಶ್ವರಾಯ ದೇವಾಯ ಪರಮಜ್ಯೋತಿಷೇ ನಮಃ ।
ನಮಃ ಸ್ಥೂಲಾಯ ಸೂಕ್ಷ್ಮಾಯ ಜ್ಞಾನಗಮ್ಯಾಯ ವೇಧಸೇ ॥ ೨೫ ॥

---

ಮಾತನ್ನು ಕೇಳಿ ಬಹಳ ಹೊತ್ತು ಚಿಂತಿಸಿ ಇಂತೆಂದನು. "ವಾಲಖಿಲ್ಯರು ಶಿವನ ಲಿಂಗವನ್ನು ಕೆಡವಿದ್ದಾರೆ. ಅದರಿಂದ ಇಂತಹ ಭಯಂಕರ ಉತ್ಪಾತಗಳುಂಟಾಗಿವೆ.

೨೧–೨೨. ಆದ್ದರಿಂದ ಸಕಲ ದೇವತೆಗಳೂ ನನ್ನೊಡನೆ ಅಲ್ಲಿಗೆ ಹೋಗಲಿ. ಶಾಪದಿಂದ ಶಿವನು ಅಕಾಲ ಪ್ರಳಯವಾಗದಂತೆ ಅಲ್ಲಿ ಲಿಂಗವನ್ನು ಸ್ಥಾಪಿಸಿಯಾನು. ಹೀಗೆ ಅವರೆಲ್ಲ ಆಲೋಚಿಸಿ ಅರ್ಬುದಾಚಲಕ್ಕೆ ಹೋದರು.

೨೩. ಆ ಲಿಂಗವು ಬಿದ್ದಿರುವ ವಾಲಖಿಲ್ಯಾಶ್ರಮದಲ್ಲಿ ಆ ದೇವತೆಗಳು ವಿನಯದಿಂದ ವೇದೋಕ್ತವಾದ ವಿವಿಧ ಸ್ತೋತ್ರಗಳಿಂದ ಶಿವನನ್ನು ಸ್ತುತಿಸಿದರು.

೨೪. ದೇವತೆಗಳು ಹೇಳುತ್ತಾರೆ :—ದೇವತೆಗಳೊಡೆಯನೂ, ಭಕ್ತರಿಗೆ ಅಭಯದಾತನೂ, ಸಕಲ ವಸ್ತುಗಳಿಗೆ ಆವಾಸಭೂತನೂ, ಸಮಸ್ತ ಯಜ್ಞರೂಪನೂ ಆದ ಶಂಕರ! ನಿನಗೆ ನಮಸ್ಕಾರವು.

೨೫. ಸಮಸ್ತರಿಗೊಡೆಯನೂ, ಉತ್ತಮಜ್ಯೋತಿರೂಪನೂ, ಸ್ಥೂಲ ಸೂಕ್ಷ್ಮರೂಪನೂ, ಜ್ಞಾನಗಮ್ಯನೂ ಆದ ಶಂಕರನೆ! ನಿನಗೆ ನಮಸ್ಕಾರವು.

೨೬–೨೭. ಮುಕ್ಕಣ್ಣನೂ, ಭಯಂಕರನೂ, ಪಿನಾಕಪಾಣಿಯೂ, ಆದ ಓ ಶಂಕರ! ನಿನಗೆ ನಮಸ್ಕಾರವು. ನೂಲಿನಲ್ಲಿ ಮಣಿಗಳ ಸಮೂಹದಂತೆ ನಿನ್ನಲ್ಲಿ ಈ ಸ್ಥಾವರ ಜಂಗಮಾತ್ಮಕ ಸಮಸ್ತ ಪ್ರಪಂಚವು ಸೇರಿಕೊಂಡಿರುವುದು. ಸೃಷ್ಟಿ

ತ್ರ್ಯಂಬಕಾಯ ಚ ಭೀಮಾಯ ಪಿನಾಕವರಪಾಣಯೇ ।
ತ್ವಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ || ೨೬ ||
ಸಂಸಾರೇ ವಿಬುಧಶ್ರೇಷ್ಠ ಜಗತ್ಸ್ಥಾವರಜಂಗಮಂ ।
ನ ತದಸ್ತಿ ತ್ರಿಲೋಕೇಽಸ್ಮಿನ್ಸೂಕ್ಷ್ಮಮಪಿ ಶಂಕರ ।
ಯತ್ತ್ವಯಾ ನ ಪ್ರಭೋ ವ್ಯಾಪ್ತಂ ಸೃಷ್ಟಿಸಂಹಾರಕಾರಣಾತ್ || ೨೭ ||
ಪೃಥಿವ್ಯಾದೀನಿ ಭೂತಾನಿ ತ್ವಯಾ ಸೃಷ್ಟಾನಿ ಕಾಮತಃ ।
ಯಾಸ್ಯಂತಿ ತಾನಿ ಭೂಯೋಪಿ ತವ ಕಾಯೇ ಜಗತ್ಪತೇ || ೨೮ ||
ಪ್ರಸೀದ ಭಗವಂಸ್ತಸ್ಮಾಲ್ಲಿಂಗಮೇತತ್ಸುರೇಶ್ವರ ।
ಸ್ಥಾನೇ ಸ್ಥಾಪಯ ಭದ್ರಂ ತೇ ಯಾವನ್ನ ಸ್ಯಾತ್ಪ್ರಜಾಕ್ಷಯಃ || ೨೯ ||

ಶ್ರೀ ಭಗವಾನುವಾಚ :—

ನಿರ್ವಿಕಾರಸ್ಯ ಮಲ್ಲಿಂಗಂ ವಾಲಖಿಲ್ಯೈಃ ಪ್ರಪಾತಿತಂ ।
ಕಥಂ ಭೂಯಃ ಪ್ರಗೃಹ್ಣಾಮಿ ಯಾವಚ್ಛುದ್ಧಿರ್ನ ಜಾಯತೇ || ೩೦ ||
ಶಕ್ತೋಽಹಂ ವಾಲಖಿಲ್ಯಾನಾಂ ನಿಗ್ರಹಂ ಕರ್ತುಮಂಜಸಾ ।
ಕಿಂತು ಮೇ ಬ್ರಾಹ್ಮಣಾ ಮಾನ್ಯಾಃ ಪೂಜ್ಯಾಶ್ಚ ಸುರಸತ್ತಮಾಃ || ೩೧ ||
ಅಚಲಂ ಲಿಂಗಮೇತದ್ಧಿ ನೋದ್ಧರ್ತುಂ ಶಕ್ಯತೇ ವಿಭೋ ।
ಏಕ ಏವಾತ್ರ ನಿರ್ದಿಷ್ಟ ಉಪಾಯೋ ನಾಪರಃ ಸ್ಮೃತಃ || ೩೨ ||

---

ಸಂಹಾರ ಕಾರಣನಾದ ನಿನ್ನಿಂದ ವ್ಯಾಪ್ತವಾಗದಿರುವ ಸೂಕ್ಷ್ಮವಾದ ವಸ್ತುವು ಈ ಮೂರು ಲೋಕಗಳಲ್ಲಿಲ್ಲ.

೨೮. ಎಲೈ ಜಗದೊಡೆಯನೆ! ನೀನು ಸ್ವೇಚ್ಛೆಯಿಂದ ಪೃಥಿವ್ಯಾದಿ ಭೂತಗಳನ್ನು ಸೃಷ್ಟಿಸಿರುವೆ. ಅವು ಮರಳಿ ನಿನ್ನ ಶರೀರದಲ್ಲಿ ಸೇರುವುವು.

೨೯. ಪೂಜ್ಯನೆ! ಪ್ರಸನ್ನನಾಗು. ಪ್ರಜೆಗಳು ನಾಶವಾಗುವುದರೊಳಗಾಗಿ ಈ ಲಿಂಗವನ್ನು ಅದರ ಸ್ಥಾನದಲ್ಲಿ ಸ್ಥಾಪಿಸು.

೩೦. ಶ್ರೀ ಭಗವಂತನು ಹೇಳುತ್ತಾನೆ:—ವಿಕಾರವಿಲ್ಲದ ನನ್ನ ಲಿಂಗವನ್ನು ವಾಲಖಿಲ್ಯರು ಕೆಡವಿದ್ದಾರೆ. ಅದನ್ನು ತಿರುಗಿ ನಾನು ಶುದ್ಧಿಯಾಗದಿರುವವರೆಗೆ ಹೇಗೆ ಸ್ವೀಕರಿಸುವೆನು ?

೩೧. ನಾನು ಶೀಘ್ರವಾಗಿ ವಾಲಖಿಲ್ಯರನ್ನು ನಿಗ್ರಹಿಸಲು ಶಕ್ತನು. ದೇವೋತ್ತಮರೆ! ಆದರೆ ನನಗೆ ಬ್ರಾಹ್ಮಣರು ಪೂಜ್ಯರು.

೩೨. "ಸ್ವಾಮಿ! ಈ ಲಿಂಗವು ನಿಶ್ಚಲವಾದುದು. ಇದನ್ನು ಎತ್ತಲು ಸಾಧ್ಯವಿಲ್ಲ. ಇದರ ವಿಷಯದಲ್ಲಿ ಒಂದು ಉಪಾಯ ಮಾತ್ರವಿರುವುದು. ಬೇರೆ ಯಾವುದೂ ಇಲ್ಲ.

ಯದಿ ಮೇ ತ್ವಂ ಪುರಾ ಲಿಂಗಂ ಪೂಜಯೇಥಾಃ ಪಿತಾಮಹ ।
ತತೋ ದೇವಗಣಾಃ ಸರ್ವೇ ತತೋ ವಿಪ್ರಾಸ್ತತೋಽಪರೇ ॥ ೩೩ ॥
ತತೋ ವೈ ಶಾಂತಿಮಾಗಚ್ಛೇಜ್ಜಗತ್ಸ್ಥಾವರಜಂಗಮಂ ॥ ೩೪ ॥

ಪುಲಸ್ತ್ಯ ಉವಾಚ :—

ಏವಮುಕ್ತಃ ಸ ಭಗವಾಞ್ಛಂಕರೇಣ ನೃಪೋತ್ತಮ ।
ತತಸ್ತಂ ಪೂಜಯಾಮಾಸ ಬ್ರಹ್ಮಾ ಪೂರ್ವಂ ಸುಭಕ್ತಿತಃ ॥ ೩೫ ॥
ಬ್ರಹ್ಮಣೋಽನಂತರಂ ವಿಷ್ಣುಸ್ತತಃ ಶಕ್ರಸ್ತತೋಽಪರೇ ।
ವಾಲಖಿಲ್ಯಾದಯೋ ವಿಪ್ರಾ ಮಂತ್ರೈಶ್ಚ ಶತರುದ್ರಿಯೈಃ ॥ ೩೬ ॥
ತತಸ್ತೇ ದಾರುಣೋತ್ಪಾತಾ ಉಪಶಾಂತಾಶ್ಚ ತತ್ಕ್ಷಣಾತ್ ।
ಅಭವತ್ಸುಮುಖೋ ಲೋಕೋ ವೃತ್ತೋ ಗಂಧವಹೋ ಮೃದುಃ ॥ ೩೭ ॥
ಅಥೋವಾಚ ಮಹಾದೇವಃ ಸರ್ವಾಂಸ್ತಾಂಸ್ತ್ರಿದಶಾಲಯಾನ್ ।
ವೃಣುಧ್ವಂ ಸುವರಂ ಸರ್ವೇ ಮತ್ತೋ ಯನ್ಮನಸೀಪ್ಸಿತಂ ॥ ೩೮ ॥

ದೇವಾ ಊಚುಃ :—

ತವ ಲಿಂಗಸ್ಯ ಸಂಸ್ಪರ್ಶಾದಪಿ ಪಾಪಕೃತೋ ನರಾಃ ।
ಸ್ವರ್ಗಂ ಯಾಸ್ಯಂತಿ ದೇವೇಶ ನಾಶಂ ಯಾಸ್ಯತಿ ಕಿಲ್ಬಿಷಂ ।
ವ್ರತದಾನಾನಿ ಸರ್ವಾಣಿ ತೀರ್ಥಯಾತ್ರಾಯುತಾನಿ ಚ ॥ ೩೯ ॥

---

೩೩–೩೪. ಪಿತಾಮಹ! ನೀನು ಮೊದಲು, ಅನಂತರ ದೇವತೆಗಳು, ಆ ಮೇಲೆ ಇತರ ಬ್ರಾಹ್ಮಣರು ಈ ಲಿಂಗವನ್ನು ಪೂಜಿಸಿದರೆ ಸ್ಥಾವರ ಜಂಗಮಾತ್ಮಕ ಪ್ರಪಂಚವು ಶಾಂತವಾಗುವುದು.

೩೫. ಪುಲಸ್ತ್ಯನು ಹೇಳುತ್ತಾನೆ:—ದೊರೆಯೆ! ಪೂಜ್ಯನಾದ ಶಂಕರನು ಹೀಗೆ ಹೇಳಲು, ಬ್ರಹ್ಮನು ಮೊದಲು ಭಕ್ತಿಯಿಂದ ಅದನ್ನು ಪೂಜಿಸಿದನು.

೩೬. ಅನಂತರ ವಿಷ್ಣುವೂ, ಬಳಿಕ ಇಂದ್ರನೂ, ತರುವಾಯ ವಾಲಖಿಲ್ಯರೇ ಮೊದಲಾದ ಬ್ರಾಹ್ಮಣರೂ ಶತರುದ್ರಿಯದಿಂದ ಆ ಲಿಂಗವನ್ನು ಪೂಜಿಸಿದರು.

೩೭. ಕೂಡಲೆ ಆ ಭಯಂಕರ ಉತ್ಪಾತಗಳು ಶಾಂತವಾದುವು. ಲೋಕವು ಸುಮುಖವಾಯಿತು. ಗಾಳಿಯು ಮೃದುವಾಯಿತು.

೩೮. ಅನಂತರ ಮಹಾದೇವನು ಸಮಸ್ತ ದೇವತೆಗಳನ್ನು ಕುರಿತು ನೀವೆಲ್ಲ ನನ್ನಿಂದ ಇಷ್ಟವಾದ ವರವನ್ನು ಕೇಳಿಕೊಳ್ಳಿರಿ ಎಂದನು.

೩೯. ದೇವತೆಗಳು ಹೇಳುತ್ತಾರೆ:—ದೇವಾಧಿಪ! ನಿನ್ನ ಲಿಂಗದ ಸ್ಪರ್ಶದಿಂದ ಪಾಪಿಷ್ಠರಾದ ಮಾನವರು ಸ್ವರ್ಗಕ್ಕೆ ತೆರಳುವರು. ಪಾಪವು ನಾಶವಾಗುವುದು. ಸಕಲ ವ್ರತದಾನಗಳೂ ಅನೇಕ ತೀರ್ಥಯಾತ್ರೆಗಳೂ ಇಲ್ಲವಾದುವು.

ತಸ್ಮಾದ್ವಜ್ರೇಣ ದೇವೇಂದ್ರಸ್ತ್ವೈತಲ್ಲಿಂಗಮುತ್ತಮಂ ।
ಛಾದಯಿಷ್ಯತಿ ಸರ್ವತ್ರ ಯದಿ ತ್ವಂ ಮನ್ಯಸೇ ಪ್ರಭೋ ॥ ೪೦ ॥

ಶ್ರೀ ಭಗವಾನುವಾಚ :—

ಅಭಿಪ್ರಾಯೋ ಮಮಾಪ್ಯೇಷ ವರ್ತತೇ ಹೃದಿ ಪದ್ಮಜ ।
ಏವಂ ಕರೋತು ದೇವೇಂದ್ರಃ ಸರ್ವಧರ್ಮವಿವೃದ್ಧಯೇ ॥ ೪೧ ॥

ಪುಲಸ್ತ್ಯ ಉವಾಚ :—

ತತಃ ಸಂಛಾದಯಾಮಾಸ ವಜ್ರೇಣ ತ್ರಿದಶಾಧಿಪಃ ।
ತಲ್ಲಿಂಗಂ ಸರ್ವಮರ್ತ್ಯಾನಾಂ ಯಥಾಽದೃಶ್ಯಂ ವ್ಯಜಾಯತ ॥ ೪೨ ॥
ಅದ್ಯಾಪಿ ವಜ್ರಸಂಸ್ಪರ್ಶಾತ್ತತ್ಸಾನ್ನಿಧ್ಯಂ ಗತೋ ನರಃ ।
ಆಜನ್ಮಮರಣಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೪೩ ॥
ಮಾಹಾತ್ಮ್ಯಂ ಕೀರ್ತಿತಂ ಯಸ್ಮಾತ್ತಲ್ಲಿಂಗೇ ಶಂಕರೇಣ ತು ।
ವಜ್ರೇಣಾಚ್ಛಾದಿತಂ ಚೈವ ಶಕ್ರೇಣೈವ ಧರಾತಲೇ ॥ ೪೪ ॥
ತತಃ ಪ್ರಭೃತಿ ಲಿಂಗಸ್ಯ ಮರ್ತ್ಯೇ ಪೂಜಾ ವ್ಯಜಾಯತ ।
ಪುರಾಸೀಚ್ಛಂಕರಃ ಪೂಜ್ಯೋ ಯಥಾನ್ಯೇ ತ್ರಿದಶಾಲಯಾಃ ॥ ೪೫ ॥

---

೪೦. ಆದ್ದರಿಂದ ನೀನಿದನ್ನು ಒಪ್ಪುವೆಯಾದರೆ ಈ ಉತ್ತಮ ಲಿಂಗವನ್ನು ದೇವೇಂದ್ರನು ವ್ರಜದಿಂದ ಸಂಪೂರ್ಣವಾಗಿ ಮುಚ್ಚುವನು.

೪೧. ಶ್ರೀ ಭಗವಂತನು ಹೇಳುತ್ತಾನೆ :—ಪಿತಾಮಹ! ನನ್ನ ಮನಸ್ಸಿನಲ್ಲಿಯೂ ಈ ಅಭಿಪ್ರಾಯವಿದೆ. ದೇವೇಂದ್ರನು ಸಕಲ ಧರ್ಮಗಳ ವೃದ್ಧಿಗಾಗಿ ಹೀಗೆಯೇ ಮಾಡಲಿ.

೪೨. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ದೇವರಾಜನು ವಜ್ರಾಯುಧದಿಂದ ಆ ಲಿಂಗವು ಸಮಸ್ತ ಮನುಷ್ಯರಿಗೆ ಅದೃಶ್ಯವಾಗುವಂತೆ ಮುಚ್ಚಿದನು.

೪೩. ಈಗಲೂ ವಜ್ರವು ಮುಚ್ಚಿರುವ ಆ ಲಿಂಗದೆಡೆಗೆ ಹೋದ ಮಾನವನು ಹುಟ್ಟಿದ ಮೊದಲ್ಗೊಂಡು ಮರಣ ಕಾಲದವರೆಗೆ ಮಾಡಿದ ಪಾಪದಿಂದ ನಿಶ್ಚಯವಾಗಿಯೂ ಮುಕ್ತನಾಗುವನು.

೪೪. ಶಂಕರನು ಆ ಲಿಂಗದ ಮಾಹಾತ್ಮ್ಯವನ್ನು ಹೇಳಿರುವುದರಿಂದ ಇಂದ್ರನು ವಜ್ರಾಯುಧದಿಂದ ಅದನ್ನು ಮುಚ್ಚಿದನು.

೪೫. ಅದು ಮೊದಲ್ಗೊಂಡು ಭೂಲೋಕದಲ್ಲಿ ಲಿಂಗ ಪೂಜೆಯುಂಟಾಯಿತು. ಹಾಗೂ ಶಂಕರನು ಇತರ ದೇವತೆಗಳಂತೆ ಪೂಜ್ಯನಾದನು.

ಏವಮೇತತ್ಪುರಾವೃತ್ತಮರ್ಬುದೇ ಪರ್ವತೋತ್ತಮೇ ।
ಲಿಂಗಸ್ಯ ಪತನಾತ್ಪೂಜಾಂ ಯನ್ಮಾಂ ತ್ವಂ ಪರಿಪೃಚ್ಛಸಿ ॥ ೪೬ ॥
ಫಾಲ್ಗುನಾಂತಚತುರ್ದಶ್ಯಾಂ ನೈವೇದ್ಯಂ ನೂತನೈರ್ಯವೈಃ ।
ಯೋ ದದಾತ್ಯಚಲೇಶಾಯ ಸ ಭೂಯೋ ನೇಹ ಜಾಯತೇ ॥ ೪೭ ॥
ಬ್ರಾಹ್ಮಣಾನ್ಭೋಜಯೇದ್ಯಸ್ತು ಭಕ್ತ್ಯಾ ತಸ್ಮಿನ್ನವೈರ್ಯವೈಃ ।
ಯವಸಂಖ್ಯಾಪ್ರಮಾಣಾನಿ ಯುಗಾನಿ ದಿವಿ ಮೋದತೇ ॥ ೪೮ ॥
ತತ್ರ ದಾನಂ ಪ್ರಶಂಸಂತಿ ಸಕ್ತೂನಾಂ ಮುನಿಸತ್ತಮಾಃ ।
ನೂತನಾನಾಂ ಮಹಾರಾಜ ಯತಃ ಪ್ರೋಕ್ತಂ ಪುರಾರಿಣಾ ॥ ೪೯ ॥
ಕಿಂ ದಾನೈರ್ವಿವಿಧೈರ್ದತ್ತೈಃ ಕಿಂ ಯಜ್ಞೈಶ್ಚ ಸುವಿಸ್ತರೈಃ ।
ಕಿಂ ತೀರ್ಥೈರ್ವಿವಿಧೈರ್ಹೋಮೈಸ್ತಪೋಭಿಃ ಕಿಂ ಚ ಕಷ್ಟದೈಃ ॥ ೫೦ ॥
ಫಾಲ್ಗುನಾಂತಚತುರ್ದಶ್ಯಾಂ ಸುಮಹೇಶ್ವರಸನ್ನಿಧೌ ।
ಧರ್ಮಾಣ್ಯೇತಾನಿ ಸರ್ವಾಣಿ ಕಲಾಂ ನಾರ್ಹಂತಿ ಷೋಡಶೀಂ ॥ ೫೧ ॥
ಶೃಣು ರಾಜನ್ಪುರಾವೃತ್ತಂ ತತ್ರಾಶ್ಚರ್ಯಂ ಯದುತ್ತಮಂ ।
ಕಶ್ಚಿತ್ಪಾಪಸಮಾಚಾರಃ ಕುಷ್ಠೀ ಕ್ಷಾಮತನುರ್ನರಃ ॥ ೫೨ ॥

---

೪೬. ಹೀಗೆ ಅರ್ಬುದಪರ್ವತದಲ್ಲಿ ಹಿಂದೆ ಲಿಂಗವು ಪತನವಾದ್ದರಿಂದ ಪೂಜೆಯು ಆರಂಭವಾಯಿತು. ನೀನು ಇನ್ನೇನನ್ನು ಕೇಳುವೆ?

೪೭. ಫಾಲ್ಗುನ ಕೃಷ್ಣ ಚತುರ್ದಶೀದಿನ ನೂತನ ಯವಗಳಿಂದ ಅಚಲೇಶನಿಗೆ ನೈವೇದ್ಯವನ್ನು ಸಮರ್ಪಿಸುವವನು ಮರಳಿ ಜನಿಸುವುದಿಲ್ಲ.

೪೮. ಆ ಅರ್ಬುದಪರ್ವತದಲ್ಲಿ ಬ್ರಾಹ್ಮಣರಿಗೆ ಹೊಸ ಯವಗಳಿಂದ ಭಕ್ತಿಯಿಂದ ಭೋಜನ ಮಾಡಿಸುವವನು ಯವಸಂಖ್ಯೆಯೆಷ್ಟು ಯುಗಗಳ ಕಾಲ ದೇವಲೋಕದಲ್ಲಿ ಆನಂದಿಸುವನು.

೪೯. ಮುನಿವರ್ಯರೆ! ಅಲ್ಲಿ ನೂತನ ಸಕ್ತುದಾನವನ್ನು ಪ್ರಾಜ್ಞರು ಹೊಗಳುವರು. ಇದನ್ನು ಮಹೇಶ್ವರನೇ ಹೇಳಿರುವನು.

೫೦. ವಿವಿಧ ದಾನಗಳಿಂದಲೂ, ವಿಸ್ತಾರವಾದ ಯಜ್ಞಗಳಿಂದಲೂ, ವಿವಿಧ ತೀರ್ಥ ಹೋಮ, ಕಷ್ಟವನ್ನುಂಟುಮಾಡುವ ತಪಸ್ಸು ಇವುಗಳಿಂದಲೂ ಏನು ಪ್ರಯೋಜನ?

೫೧. ಫಾಲ್ಗುನ ಕೃಷ್ಣಚತುರ್ದಶೀದಿನ ಮಹೇಶ್ವರನ ಹತ್ತಿರ ಮಾಡಿದ ಈ ಧರ್ಮಗಳ ಹದಿನಾರನೆಯ ಕಲೆಗೆ ಈ ದಾನಾದಿಗಳು ಸಾಟಿಯಾಗಲಾರವು.

೫೨–೫೪. ದೊರೆಯೆ! ಹಿಂದೆ ಅಲ್ಲಿ ನಡೆದ ಒಂದು ಆಶ್ಚರ್ಯಕರವಾದ ವಿಷಯವನ್ನು ಕೇಳು. ಅಲ್ಲಿಗೆ ಪಾಪ ವೃತ್ತಿಯುಳ್ಳವನೂ, ಕುಷ್ಠರೋಗವುಳ್ಳವನೂ, ಕೃಶ

ಭಿಕ್ಷಾರ್ಥಮಾಗತಸ್ತತ್ರ ಲೋಕೈರನ್ಯೈಃ ಸಮನ್ವಿತಃ ।
ತೇನ ಭಿಕ್ಷಾರ್ಜಿತಂ ತತ್ರ ಸಕ್ತೂನಾಂ ಕುಡವಂ ನೃಪ ॥ ೫೩ ॥
ತತೋ ರೋಗಪರಿಕ್ಲೇಶಾದ್ಭೋಜನಂ ನ ಚಕಾರ ಸಃ ।
ದಾಹಾರ್ದಿತೋ ಜಲೇ ತಸ್ಮಿನ್ಸ್ನಾತೋ ಭಕ್ತಿವಿವರ್ಜಿತಃ ।
ಸಕ್ತೂನ್ಕೃತ್ವೋಪಧಾನೇ ತಾನ್ಸ ಚ ಸುಪ್ತೋ ನಿಶಾಗಮೇ ॥ ೫೪ ॥
ತತೋ ನಿದ್ರಾಭಿಭೂತಸ್ಯ ಸಾರಮೇಯೋ ಜಹಾರ ಚ ।
ಭಕ್ಷಯಾಮಾಸ ಯುಕ್ತೋಽನ್ಯೈಃ ಸಾರಮೇಯೈರ್ಬುಭುಕ್ಷಿತಃ ॥ ೫೫ ॥
ಅಥಾಽಸೌ ವಿಸ್ಮಯಾದ್ರಾಜನ್ಪಂಚತ್ವಂ ಸಮುಪಸ್ಥಿತಃ ।
ತತೋ ಜಾತಿಸ್ಮರೋ ಜಾತೋ ವಿದರ್ಭಾಧಿಪತೇರ್ಗೃಹೇ ॥ ೫೬ ॥
ಭೀಮೋನಾಮ ನೃಪಶ್ರೇಷ್ಠ ದಮಯಂತೀ ಪಿತಾ ಹಿ ಯಃ ।
ತಂ ಪ್ರಭಾವಂ ಚ ವಿಜ್ಞಾಯ ಸಕ್ತೂನಾಂ ತತ್ರ ಪರ್ವತೇ ॥ ೫೭ ॥
ಫಾಲ್ಗುನಾಂತಚತುರ್ದಶ್ಯಾಂ ವರ್ಷೇ ವರ್ಷೇ ಜಗಾಮ ಸಃ ।
ಕೃತ್ವಾ ಚೈವೋಪವಾಸಂ ತು ರಾತ್ರೌ ಜಾಗರಣಂ ತಥಾ ॥ ೫೮ ॥
ಅಚಲೇಶ್ವರಸಾನ್ನಿಧ್ಯೇ ದದೌ ಸಕ್ತೂಂಸ್ತತೋ ಬಹೂನ್ ।
ಸಹಿರಣ್ಯಾನ್ದ್ವಿಜೇಂದ್ರಾಣಾಂ ಪಶುಪಕ್ಷಿಮೃಗೇಷು ಚ ॥ ೫೯ ॥

---

ದೇಹನೂ ಆದ ಒಬ್ಬ ಮನುಷ್ಯನು ಭಿಕ್ಷೆಗಾಗಿ ಇತರ ಜನರೊಡನೆ ಬಂದನು. ಅವನು ಭಿಕ್ಷೆಯಿಂದ ಸಂಪಾದಿಸಿದ ಒಂದು ಕುಡವದ ಅರಳು ಹಿಟ್ಟನ್ನು ರೋಗದ ವೇದನೆಯಿಂದ ತಿನ್ನದೆ ಆ ಕೊಳದ ನೀರಿನಲ್ಲಿ ಭಕ್ತಿಯಿಲ್ಲದೆ ಮಿಂದು ಆ ಹಿಟ್ಟನ್ನು ತಲೆದಿಂಬು ಮಾಡಿ ರಾತ್ರಿಯಾಗಲು ಮಲಗಿದನು.

೫೫. ಬಳಿಕ ಅವನು ನಿದ್ರೆಮಾಡಿರಲು ಹಸಿವುಗೊಂಡ ಒಂದು ನಾಯಿಯು ಆ ಸಕ್ತುವನ್ನು ಅಪಹರಿಸಿ ಇತರ ನಾಯಿಗಳೊಡನೆ ತಿಂದಿತು.

೫೬. ಬಳಿಕ ಇವನು ಕಾಯಿಲೆಯಿಂದ ಮೃತನಾಗಿ ವಿದರ್ಭರಾಜನ ಮನೆಯಲ್ಲಿ ಜನಿಸಿ ಪೂರ್ವಜನ್ಮದ ಸ್ಮರಣೆಯುಳ್ಳವನಾದನು.

೫೭—೫೯ ದಮಯಂತಿಯ ತಂದೆಯಾದ ಭೀಮರಾಜನು ಆ ಪರ್ವತದಲ್ಲಿ ನಡೆದ ಸಕ್ತುವಿನ ಪ್ರಭಾವವನ್ನು ತಿಳಿದು ಪ್ರತಿವರ್ಷವೂ ಫಾಲ್ಗುನ ಕೃಷ್ಣ ಚತುರ್ದಶೀ ದಿನ ಅಚಲೇಶ್ವರನ ಸಮೀಪದಲ್ಲಿ ಉಪವಾಸ ಜಾಗರಣೆಗಳನ್ನು ಮಾಡಿ ಬ್ರಾಹ್ಮಣರಿಗೂ, ಪಶು, ಪಕ್ಷಿ, ಮೃಗಗಳಿಗೂ ಸುವರ್ಣಸಹಿತವಾದ ಅರಳು ಹಿಟ್ಟನ್ನು ದಾನಮಾಡಿದನು.

ಅಥ ತೇ ಮುನಯಃ ಸರ್ವೇ ಗಾಲವಪ್ರಮುಖಾ ನೃಪ ।
ಪಪ್ರಚ್ಛುಃ ಕೌತುಕಾವಿಷ್ಟಾಃ ಸಕ್ತುದಾನಕೃತೇ ನೃಪಂ ॥ ೬೦ ॥

ಋಷಯ ಊಚುಃ :—

ಹಸ್ತ್ಯಶ್ವರಥದಾನಾನಾಂ ಶಕ್ತಿರಸ್ತಿ ತವಾದ್ಭುತಾ ।
ತಸ್ಮಾತ್ಸಕ್ತೂನ್ಪ್ರಮುಕ್ತ್ವಾ ತ್ವಂ ನಾನ್ಯದ್ದಾತುಮಿಹೇಚ್ಛಸಿ ॥ ೬೧ ॥

ಪುಲಸ್ತ್ಯ ಉವಾಚ :—

ಅಥಾಽಸೌ ಕಥಯಾಮಾಸ ಪೂರ್ವಪ್ರೋತತ್ಸಮುದ್ಭವಂ ।
ಸಕ್ತುದಾನಸ್ಯ ಮಾಹಾತ್ಮ್ಯಂ ಮುನೀನಾಂ ಭಾವಿತಾತ್ಮನಾಂ ॥ ೬೨ ॥
ಪೂರ್ವಂ ಭಕ್ತ್ಯಾ ವಿಹೀನಸ್ಯ ಶುನಾ ವೈ ಸಕ್ತವೋ ಹೃತಾಃ ।
ತತ್ಪ್ರಭಾವಾದಿಯಂ ಪ್ರಾಪ್ತಿರ್ಮಮ ಜಾತಾ ದ್ವಿಜೋತ್ತಮಾಃ ॥ ೬೩ ॥
ಸಾಂಪ್ರತಂ ಭಕ್ತಿದತ್ತಾನಾಂ ಕಿಂ ಸ್ಯಾಜ್ಜಾನಾಮಿ ನೋ ಫಲಂ ।
ಏತಸ್ಮಾತ್ಕಾರಣಾದ್ದಾನಂ ಸಕ್ತೂನಾಂ ಪ್ರಕರೋಮ್ಯಹಂ ।
ತೀರ್ಥೇಽಸ್ಮಿನ್ಭಕ್ತಿ ಸಂಯುಕ್ತಃ ಸತ್ಯೇನಾತ್ಮಾನಮೂಲಭೇ ॥ ೬೪ ॥

ಪುಲಸ್ತ್ಯ ಉವಾಚ :—

ತತಸ್ತೇ ಮುನಯೋ ಹೃಷ್ಟಾಃ ಸಾಧುಸಾಧ್ವಿತಿ ಚಾಬ್ರುವನ್ ।
ಚಕ್ರುಶ್ಚೈವಾತ್ಮ ಶಕ್ತ್ಯಾ ತೇ ಸಕ್ತೂನಾಂ ದಾನಮುತ್ತಮಂ ॥ ೬೫ ॥

---

೬೦. ತರುವಾಯ ಗಾಲವ ಮೊದಲಾದ ಮುನಿಗಳು ಕುತೂಹಲಗೊಂಡವರಾಗಿ ಸಕ್ತುದಾನ ವಿಷಯದಲ್ಲಿ ರಾಜನನ್ನು ಪ್ರಶ್ನಿಸಿದರು.

೬೧. ಋಷಿಗಳು ಹೇಳುತ್ತಾರೆ :—ದೊರೆಯೆ ! ನಿನಗೆ ಆನೆ ಕುದುರೆ, ರಥ ಇವುಗಳನ್ನು ದಾನಮಾಡಲು ಶಕ್ತಿಯಿದೆ. ಆದರೂ ಸಕ್ತುವನ್ನು ದಾನಮಾಡಿ ಇತರ ಯಾವ ವಸ್ತುಗಳನ್ನೂ ನೀಡಲು ಏಕೆ ಬಯಸುವುದಿಲ್ಲ ?

೬೨. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಇವನು ಜ್ಞಾನಿಗಳಾದ ಮುನಿಗಳಿಗೆ ಈ ಅರ್ಬುದ ಪರ್ವತದಲ್ಲಿ ಉಂಟಾದ ಸಕ್ತುದಾನದ ಮಾಹಾತ್ಮ್ಯವನ್ನು ಹೇಳಿದನು.

೬೩. ಬ್ರಾಹ್ಮಣವರ್ಯರೆ ! ಹಿಂದೆ ಭಕ್ತಿಯಿಲ್ಲದ ನನ್ನ ಸಕ್ತುವನ್ನು ನಾಯಿಯು ಅಪಹರಿಸಿರುವುದರಿಂದ ನಾನು ಹೀಗೆ ರಾಜನಾಗಿ ಜನಿಸಿದೆನು.

೬೪. ಈಗ ಭಕ್ತಿಯಿಂದ ದಾನಮಾಡಿದ ಈ ಸಕ್ತುವಿಗೆ ಯಾವ ಫಲವು ದೊರೆಯುವುದೊ ನಾನರಿಯೆ. ಈ ಕಾರಣದಿಂದ ಈ ತೀರ್ಥದಲ್ಲಿ ಭಕ್ತಿಯಿಂದ ಸಕ್ತುವನ್ನು ದಾನಮಾಡುವೆನು. ನಿಜವಾಗಿಯೂ ಪರಮಾತ್ಮನನ್ನು ಹೊಂದುವೆನು.

೬೫. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಮುನಿಗಳು ಸಂತೋಷಗೊಂಡು ಒಳ್ಳೆಯದು ಎಂದರು. ತಮ್ಮ ಶಕ್ತ್ಯನುಸಾರ ಉತ್ತಮವಾದ ಸಕ್ತು ದಾನವನ್ನು ಮಾಡಿದರು.

ಏಷ ಪ್ರಭಾವೋ ರಾಜರ್ಷೇ ಸಕ್ತುದಾನಸ್ಯ ಕೀರ್ತಿತಃ ।
ಮಹೇಶ್ವರಸ್ಯ ಮಾಹಾತ್ಮ್ಯಂ ಸತ್ಯಂ ಚಾಪಿ ಪ್ರಕೀರ್ತಿತಂ ॥ ೬೬ ॥
ಯಶ್ಚೈತಚ್ಛೃಣುಯಾದ್ಭಕ್ತ್ಯಾ ಕಥ್ಯಮಾನಂ ದ್ವಿಜಾನನಾತ್ ।
ಅಹೋರಾತ್ರಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೬೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಶಿವಲಿಂಗಮಹೇಶ್ವರಮಾಹಾತ್ಮ್ಯವರ್ಣನಪುರಃಸರಸಕ್ತುದಾನಮಾಹಾತ್ಮ್ಯವರ್ಣನಂ ನಾಮ
ಏಕೋನಚತ್ವಾರಿಂಶೋಽಧ್ಯಾಯಃ

---

೬೬. ರಾಜರ್ಷಿಯೆ! ಹೀಗೆ ನಿನಗೆ ಸಕ್ತುದಾನದ ಮಾಹಾತ್ಮ್ಯವನ್ನೂ ಮಹೇಶ್ವರನ ಮಾಹಾತ್ಮ್ಯವನ್ನೂ ಹೇಳಿರುವೆನು.

೬೭. ಬ್ರಾಹ್ಮಣರ ಬಾಯಿಯಿಂದ ಇದನ್ನು ಭಕ್ತಿಯಿಂದ ಕೇಳಿದವನು ಒಂದು ದಿನ ಮಾಡಿದ ಪಾಪದಿಂದ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಶಿವಲಿಂಗಮಹೇಶ್ವರಮಾಹಾತ್ಮ್ಯವರ್ಣನಪುರಃಸರಸಕ್ತುದಾನವರ್ಣನವೆಂಬ
ಮುವ್ವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಚತ್ವಾರಿಂಶೋಽಧ್ಯಾಯಃ

### ಕಾಮೇಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತಃ ಕಾಮೇಶ್ವರಂ ಗಚ್ಛೇತ್ತತ್ರ ಕಾಮಪ್ರತಿಷ್ಠಿತಂ ।
ಯಸ್ಮಿನ್ದೃಷ್ಟೇ ಸದಾ ಮರ್ತ್ಯಃ ಸುರೂಪಃ ಸುಪ್ರಭೋ ಭವೇತ್ ॥ ೧ ॥

ಯಯಾತಿರುವಾಚ :—

ತ್ವಯಾ ಪ್ರೋಕ್ತಂ ಪುರಾ ಶಂಭುಃ ಕಾಮಬಾಣಭಯಾತ್ಕಿಲ ।
ವಾಲಖಿಲ್ಯಾಶ್ರಮಂ ಪ್ರಾಪ್ತೋ ಯತ್ರ ಲಿಂಗಂ ಪಪಾತ ಹ ॥ ೨ ॥
ಸ ಕಥಂ ಪೂಜಿತಸ್ತೇನ ಶಂಭುರ್ಮೇ ಕೌತುಕಂ ಮಹತ್ ।
ವದ ಸರ್ವಂ ದ್ವಿಜಶ್ರೇಷ್ಠ ಕಾಮೇಶ್ವರನಿವೇಶನಂ ॥ ೩ ॥

ಪುಲಸ್ತ್ಯ ಉವಾಚ :—

ಮುಕ್ತಲಿಂಗೇಽಪಿ ದೇವೇಶೇ ನ ಸ್ಮರಸ್ತಂ ಮುಮೋಚ ಹ ।
ದರ್ಶಯನ್ನಾತ್ಮನೋ ಬಾಣಂ ತಸ್ಯಾಽಸೌ ಪೃಷ್ಠತಃ ಸ್ಥಿತಃ ॥ ೪ ॥

---

ಕನ್ನಡದ ಅನುವಾದ

### ಕಾಮೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ಕಾಮನು ಪ್ರತಿಷ್ಠೆಮಾಡಿರುವ ಕಾಮೇಶ್ವರನೆಡೆಗೆ ಹೋಗಬೇಕು. ಆ ಕಾಮೇಶ್ವರನನ್ನು ದರ್ಶನ ಮಾಡಿದ ಮಾನವನು ಸೌಂದರ್ಯವುಳ್ಳವನೂ, ಒಳ್ಳೆಯ ಕಾಂತಿಯುಳ್ಳವನೂ ಆಗುವನು.

೨. ಯಯಾತಿಯು ಹೇಳುತ್ತಾನೆ :—ನೀನು ಹಿಂದೆ ಶಂಕರನು ಮನ್ಮಥ ಬಾಣ ಭಯದಿಂದ ವಾಲಖಿಲ್ಯಾಶ್ರಮಕ್ಕೆ ಹೋದನು. ಅಲ್ಲಿ ಅವನ ಲಿಂಗವು ಬಿದ್ದಿತೆಂದು ಹೇಳಿರುವೆ.

೩. ಅಂತಹ ಶಿವನನ್ನು ಮನ್ಮಥನು ಹೇಗೆ ಪೂಜಿಸಿದನು? ಈ ವಿಷಯದಲ್ಲಿ ನನಗೆ ಬಹಳ ಕೌತೂಹಲವುಂಟಾಗಿದೆ. ಈ ಕಾಮೇಶ್ವರನ ನಿವೇಶನದ ವಿಷಯವನ್ನೆಲ್ಲ ಹೇಳು.

೪. ಪುಲಸ್ತ್ಯನು ಹೇಳುತ್ತಾನೆ ;—ಶಿವನ ಲಿಂಗವು ಕೆಳಗೆ ಬಿದ್ದು ಹೋದರೂ ಮನ್ಮಥನು ಅವನನ್ನು ಬಿಡದೆ ತನ್ನ ಬಾಣವನ್ನು ತೋರಿಸುತ್ತ ಹಿಂಭಾಗದಲ್ಲಿ ಇದ್ದನು.

ತತೋ ವಾರಾಣಸೀಂ ಪ್ರಾಪ್ತಸ್ತದ್ಭಯಾತ್ತ್ರಿಪುರಾಂತಕಃ ।
ತತ್ರಾಽಪಿ ಚ ತಥಾ ದೃಷ್ಟ್ವಾ ಧೃತಚಾಪಂ ಮನೋಽಭವಂ ॥ ೫ ॥
ತತಃ ಪ್ರಯಾಗಮಾಪನ್ನಃ ಕೇದಾರಂ ಚ ತತಃ ಪರಂ ।
ನೈಮಿಷಂ ಭದ್ರಕರ್ಣಂ ಚ ಜಂಬೂಮಾರ್ಗೇ ತ್ರಿಪುಷ್ಕರಂ ॥ ೬ ॥
ಗೋಕರ್ಣಂ ಚ ಪ್ರಭಾಸಂ ಚ ಪುಣ್ಯಂ ಚ ಕೃಮಿಜಾಂಗಲಂ ।
ಗಂಗಾದ್ವಾರಂ ಗಯಾಶೀರ್ಷಂ ಕಾಲಾಭೀಷ್ಟಂ ವಟೇಶ್ವರಂ ॥ ೭ ॥
ಕಿಂ ವಾ ತೇನ ಬಹೂಕ್ತೇನ ತೀರ್ಥಾನ್ಯಾಯತನಾನಿ ಚ ।
ಅಸಂಖ್ಯಾನಿ ಗತೋ ದೇವಃ ಕಾಮಂ ಚ ದದೃಶೇ ತಥಾ ॥ ೮ ॥
ಯತ್ರಯತ್ರ ಮಹಾದೇವಸ್ತದ್ಭಯಾನ್ನೃಪ ಗಚ್ಛತಿ ।
ತತ್ರ ತತ್ರ ಪುನಃ ಕಾಮಂ ಪ್ರಪಶ್ಯತಿ ಧೃತಾಯುಧಂ ॥ ೯ ॥
ಕಸ್ಯಚಿತ್ತ್ವಥ ಕಾಲಸ್ಯ ಪುನಃ ಪ್ರಾಪ್ತೋಽರ್ಬುದಂ ಪ್ರತಿ ।
ತತ್ರಾಪಶ್ಯತ್ತಥಾ ಕಾಮಮಾಕರ್ಣಾಕರ್ಷಿತಾಯುಧಂ ।
ಆಕುಂಚಿತೈಕಪಾದಂ ಚ ಸ್ಥಿರದೃಷ್ಟಿಂ ನೃಪೋತ್ತಮ ॥ ೧೦ ॥
ಅಥಾಽಸೌ ಭಗವಾಞ್ಛಾಂತಃ ಪ್ರಿಯಾದುಃಖಸಮನ್ವಿತಃ ।
ಕ್ರೋಧಂ ಚಕ್ರೇ ವಿಶೇಷೇಣ ದೃಷ್ಟ್ವಾ ತಂ ಪುರತಃ ಸ್ಥಿತಂ ॥ ೧೧ ॥

---

೫–೮. ಅನಂತರ ತ್ರಿಪುರಾಂತಕನು ಆ ಕಾಮನ ಭಯದಿಂದ ಕಾಶಿಯನ್ನು ಸೇರಿದನು. ಅಲ್ಲಿಯೂ ಅವನು ಬಿಲ್ಲನ್ನು ಹಿಡಿದಿರುವ ಮನ್ಮಥನನ್ನು ನೋಡಿ ಪ್ರಯಾಗ, ಕೇದಾರ, ನೈಮಿಷ, ಭದ್ರಕರ್ಣ, ಜಂಬೂಮಾರ್ಗ, ತ್ರಿಪುಷ್ಕರ, ಗೋಕರ್ಣ, ಪ್ರಭಾಸ, ಕೃಮಿಜಾಂಗಲ, ಗಂಗಾದ್ವಾರ, ಗಯಾಶೀರ್ಷ, ಕಾಲಾಭೀಷ್ಟ, ವಟೇಶ್ವರಗಳಿಗೂ, ಇನ್ನೂ ಇತರ ಅಸಂಖ್ಯಾತ ತೀರ್ಥಗಳಿಗೂ, ದೇವಾಲಯಗಳಿಗೂ ಹೋದರೂ ಮನ್ಮಥನನ್ನು ಹಾಗೆಯೇ ಕಂಡನು.

೯. ಆ ಮಹಾದೇವನು ಎಲ್ಲೆಲ್ಲಿಗೆ ಆ ಮನ್ಮಥನ ಭಯದಿಂದ ಹೋಗುವನೊ ಅಲ್ಲಲ್ಲಿ ಹಾಗೆಯೇ ಆಯುಧವನ್ನು ಹಿಡಿದಿರುವ ಕಾಮನನ್ನು ನೋಡುವನು.

೧೦. ದೊರೆಯೆ! ಒಂದಾನೊಂದು ಕಾಲದಲ್ಲಿ ಆ ಮಹಾದೇವನು ಮರಳಿ ಅರ್ಬುದಕ್ಕೆ ಬಂದು ನೋಡಲು ಹಾಗೆಯೇ ಹೆದೆಯೇರಿಸಿದ ಬಿಲ್ಲುಳ್ಳವನೂ, ಸಂಕೋಚಗೊಂಡ ಒಂದು ಕಾಲುಳ್ಳವನೂ, ಸ್ಥಿರ ದೃಷ್ಟಿಯುಳ್ಳವನೂ ಆದ ಮನ್ಮಥನನ್ನು ಕಂಡನು.

೧೧. ತರುವಾಯ ಶಾಂತನೂ, ಪ್ರಿಯೆಯ ದುಃಖದಿಂದ ಸಹಿತನೂ ಆದ ಈ ಶಂಕರನು ಮುಂದಿರುವ ಆ ಕಾಮನನ್ನು ಈಕ್ಷಿಸಿ ಬಹಳವಾಗಿ ಕೋಪಗೊಂಡನು.

ತಸ್ಯ ಕೋಪಾಭಿಭೂತಸ್ಯ ತೃತೀಯಾನ್ನಯನಾನ್ನೃಪ ।
ನಿಶ್ಚಕ್ರಾಮ ಮಹಾಜ್ವಾಲಾ ಯಯಾಽಸೌ ಭಸ್ಮಸಾತ್ಕೃತಃ ॥ ೧೨ ॥
ಸಚಾಪಃ ಸಶರೋ ರಾಜಂಸ್ತಸ್ಮಿನ್ಪರ್ವತರೋಧಸಿ ।
ಶಂಕರೋ ರೋಷಪರ್ಯಂತಂ ಗತ್ವಾ ಸೌಖ್ಯಮವಾಪ್ತವಾನ್ ॥ ೧೩ ॥
ಕೈಲಾಸಂ ಪರ್ವತಶ್ರೇಷ್ಠಂ ಜಗಾಮ ಸುರಪೂಜಿತಃ ।
ದಗ್ಧೇ ಮನೋಭವೇ ಭಾರ್ಯಾ ರತಿರಸ್ಯ ಪತಿವ್ರತಾ ।
ವ್ಯಲಪತ್ಕರುಣಂ ದೀನಾ ಪತಿಶೋಕಪರಿಪ್ಲುತಾ ॥ ೧೪ ॥
ತತೋ ದಾರೂಣಿ ಚಾಹೃತ್ಯ ಚಿತಿಂ ಕೃತ್ವಾ ನರಾಧಿಪ ।
ಆರುರೋಹಾಗ್ನಿಸಂದೀಪ್ತಾಂ ಚಿತಿಂ ಸಾ ಪತಿದುಃಖಿತಾ ।
ತಾವದಾಕಾಶಗಾಂ ವಾಣೀಂ ಶುಶ್ರಾವ ಚ ಯಶಸ್ವಿನೀ ॥ ೧೫ ॥

ವಾಗುವಾಚ :—

ಮಾ ಪುತ್ರಿ ಸಾಹಸಂ ಕಾರ್ಷೀಸ್ತಪಸಾ ತಿಷ್ಠ ಸುಂದರಿ ।
ಭೂಯಃ ಪ್ರಾಪ್ಸ್ಯಸಿ ಭರ್ತಾರಂ ಕಾಮಂ ತುಷ್ಟೇನ ಶಂಭುನಾ ॥ ೧೬ ॥
ಸಾ ಶ್ರುತ್ವಾ ತಾಂ ತದಾ ವಾಣೀಂ ಸಮುತ್ತಸ್ಥೌ ಸುಮಧ್ಯಮಾ ।
ದೇವಮಾರಾಧಯಾಮಾಸ ದಿವಾನಕ್ತಮತಂದ್ರಿತಾ ।
ವ್ರತೈರ್ದಾನೈರ್ಜಪೈರ್ಹೋಮೈರುಪವಾಸೈಸ್ತಥಾ ಪರೈಃ ॥ ೧೭ ॥

---

೧೨-೧೩. ಹೀಗೆ ಕೋಪಗೊಂಡ ಅವನ ಮೂರನೆ ನಯನದಿಂದ ಮಹಾಜ್ವಾಲೆಯು ಹೊರಡಲು ಬಿಲ್ಲು ಬಾಣಗಳಿಂದ ಕೂಡಿದ ಮನ್ಮಥನು ಅದರಿಂದ ಬೂದಿಯಾದನು. ಶಂಕರನು ಆ ಪರ್ವತದ ತಪ್ಪಲಿನಲ್ಲಿ ಕೋಪದ ಅವಸಾನವನ್ನು ಹೊಂದಿ ಸುಖಿಸಿದನು.

೧೪-೧೫. ಆ ಮಹಾದೇವನು ಅನಂತರ ದೇವತೆಗಳಿಂದ ಪೂಜಿತನಾಗಿ ಕೈಲಾಸ ಪರ್ವತಕ್ಕೆ ಹೋದನು. ಮನ್ಮಥನು ಭಸ್ಮವಾಗಲು ಪತಿವ್ರತೆಯಾದ ಅವನ ಪತ್ನಿ ರತಿಯು ಪತಿಮರಣದಿಂದ ದುಃಖಿತಳಾಗಿ ದೀನವಾಗಿ ಗೋಳಾಡಿ ಕಟ್ಟಿಗೆಗಳನ್ನು ತಂದು ಚಿತಿಯನ್ನು ರಚಿಸಿ ಅಗ್ನಿಯಿಂದ ಜ್ವಲಿಸುತ್ತಿರುವ ಆ ಚಿತಿಯನ್ನೇರಿದಳು. ಆಗ ಅವಳು ಒಂದು ಆಕಾಶವಾಣಿಯನ್ನು ಕೇಳಿದಳು.

೧೬. ಆಕಾಶವಾಣಿಯು ಹೇಳುತ್ತದೆ :—ವತ್ಸೆ ! ಸುಂದರಿ ! ಸಾಹಸ ಮಾಡಬೇಡ. ತಪಸ್ಸನ್ನು ಮಾಡು. ಅದರಿಂದ ಒಲಿದ ಶಿವನಿಂದ ಮರಳಿ ಪತಿಯನ್ನು ಪಡೆಯುವೆ.

೧೭. ಆ ರತಿಯು ಆಕಾಶವಾಣಿಯನ್ನು ಕೇಳಿ ಮೇಲಕ್ಕೆದ್ದು ಹಗಲು ರಾತ್ರಿ ಆಲಸ್ಯವಿಲ್ಲದೆ ಶಂಕರನನ್ನು ವ್ರತ, ದಾನ, ಜಪ, ಹೋಮ, ಉಪವಾಸಗಳಿಂದ ಆರಾಧಿಸಿದಳು.

ತತೋ ವರ್ಷಸಹಸ್ರಾಂತೇ ತುಷ್ಟಸ್ತಸ್ಯಾ ಮಹೇಶ್ವರಃ ।
ಅಬ್ರವೀದ್ವಸ ಕಲ್ಯಾಣಿ ವರಂ ಯನ್ಮನಸಿ ಸ್ಥಿತಃ ॥ ೧೮ ॥
ರತಿರುವಾಚ :—
ಯದಿ ತುಷ್ಟೋಽಸಿ ಮೇ ದೇವ ಭಗವಂಲ್ಲೋಕಭಾವನ ।
ಅಕ್ಷತಾಂಗಃ ಪುನಃ ಕಾಮಃ ಕಾಂತೋ ಮೇ ಜಾಯತಾಂ ಪತಿಃ ॥ ೧೯ ॥
ಏವಮುಕ್ತೇ ತಯಾ ವಾಕ್ಯೇ ತತ್ಕ್ಷಣಾತ್ಸಮುಪಸ್ಥಿತಃ ।
ಯಥಾ ಸುಪ್ತೋ ಮಹಾರಾಜ ಯದ್ವದ್ರೂಪಃ ಸ ಹರ್ಷಿತಃ ॥ ೨೦ ॥
ಇಕ್ಷುಂಚಾಪಮಯಂ ಚಾಪಂ ಪುಷ್ಪಬಾಣಸಮನ್ವಿತಂ ।
ಭೃಗುಶ್ರೇಣಿಮಯ್ಯಾ ಮೌರ್ವ್ಯಾ ಶೋಭಿತಂ ಸುಮನೋಹರಂ ॥ ೨೧ ॥
ತತೋ ರತಿಸಮಾಯುಕ್ತಃ ಪ್ರಣಿಪತ್ಯ ಮಹೇಶ್ವರಂ ।
ಅನುಜ್ಞಾತಸ್ತು ತೇನೈವ ಸ್ವವ್ಯಾಪಾರೇಽಭ್ಯವರ್ತತ ॥ ೨೨ ॥
ಸ ದೃಷ್ಟ್ವಾ ಶಿವಮಾಹಾತ್ಮ್ಯಂ ಶ್ರದ್ಧಾಂ ಕೃತ್ವಾ ನೃಪೋತ್ತಮ ।
ಶಿವಂ ಸಂಸ್ಥಾಪಯಾಮಾಸ ಪರ್ವತೇಽರ್ಬುದಸಂಜ್ಞಿತೇ ॥ ೨೩ ॥
ಯಸ್ಮಿನ್ದೃಷ್ಟೇ ಮಹಾರಾಜ ನಾರೀ ವಾ ಯದಿ ವಾ ನರಃ ।
ಸಪ್ತಜನ್ಮಾಂತರಾಣ್ಯೇವ ನ ದೌರ್ಭಾಗ್ಯಮವಾಪ್ನುಯಾತ್ ॥ ೨೪ ॥

---

೧೮. ಬಳಿಕ ಸಾವಿರ ವರ್ಷಗಳ ಕೊನೆಯಲ್ಲಿ ಮಹೇಶ್ವರನು ಅವಳಿಗೆ ಒಲಿದು "ಮಂಗಳಕರಳೆ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ" ಎಂದನು.

೧೯. ರತಿಯು ಹೇಳುತ್ತಾಳೆ :—ಜಗತ್ತನ್ನು ಸೃಷ್ಟಿಸುವ ಶಂಕರ! ನೀನು ಸಂತುಷ್ಟನಾಗಿದ್ದರೆ ಮನ್ಮಥನು ಸದೇಹನಾಗಿ ಮರಳಿ ನನಗೆ ಪತಿಯಾಗಲಿ.

೨೦. ಅವಳು ಹೀಗೆನ್ನಲು ಮನ್ಮಥನು ಮಲಗಿದ್ದವನು ಎದ್ದಂತೆ ಸಂತೋಷದಿಂದ ಕೂಡಲೆ ಸಮೀಪಕ್ಕೆ ಬಂದನು.

೨೧. ಆ ರತಿಯು ಕಬ್ಬಿನ ಜಳವೆಯ ಬಿಲ್ಲನ್ನು ಹಿಡಿದವನೂ, ಕುಸುಮಬಾಣವುಳ್ಳವನೂ, ದುಂಬಿಯ ಸಾಲೆಂಬ ನಾಣಿನಿಂದ ಅಲಂಕಾರಗೊಂಡವನೂ, ಸುಂದರನೂ ಆದ ಮದನನನ್ನು ಕಂಡಳು.

೨೨. ಅನಂತರ ಮನ್ಮಥನು ರತಿಯೊಡನೆ ಆ ಶಿವನನ್ನು ವಂದಿಸಿ ಅವನ ಅನುಮತಿಯಿಂದ ತನ್ನ ಕಾರ್ಯದಲ್ಲಿ ತೊಡಗಿದನು.

೨೩. ಅವನು ಶಿವನ ಮಾಹಾತ್ಮ್ಯವನ್ನು ನೋಡಿ ಶ್ರದ್ಧೆಗೊಂಡು ಅವನನ್ನು ಅರ್ಬುದ ಪರ್ವತದಲ್ಲಿ ಪ್ರತಿಷ್ಠೆಮಾಡಿದನು.

೨೪. ಮಹಾರಾಜ! ಅವನನ್ನು ನೋಡಿದ ಹೆಂಗಸಾಗಲಿ, ಗಂಡಸಾಗಲಿ ಏಳು ಜನ್ಮಗಳಲ್ಲಿ ದೌರ್ಭಾಗ್ಯವನ್ನು ಹೊಂದುವುದಿಲ್ಲ.

ಏವಮೇತನ್ಮಯಾ ಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ಕಾಮೇಶ್ವರಸ್ಯ ಮಾಹಾತ್ಮ್ಯಂ ಕಾಮದಾಹಂ ಸವಿಸ್ತರಂ ॥ ೨೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕಾಮೇಶ್ವರಮಾಹಾತ್ಮ್ಯವರ್ಣನಂ ನಾಮ
ಚತ್ವಾರಿಂಶೋಽಧ್ಯಾಯಃ

---

೨೫. ಹೀಗೆ ನಾನು ನಿನಗೆ ಕಾಮದಹನ ರೂಪವಾದ ಕಾಮೇಶ್ವರದ ಮಹಾತ್ಮ್ಯೆವನ್ನು ವಿಸ್ತಾರವಾಗಿ ಹೇಳಿರುವೆನು. ನೀನು ತಿರುಗಿ ಏನನ್ನು ಕೇಳುವೆ ?

ಅಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಕಾಮೇಶ್ವರಮಾಹಾತ್ಮ್ಯವರ್ಣನ ಎಂಬ
ನಲವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕಚತ್ವಾರಿಂಶೋಽಧ್ಯಾಯಃ

### ಮಾರ್ಕಂಡೇಯಾಶ್ರಮಪದೋತ್ಪತ್ತಿವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಮಾರ್ಕಂಡೇಯಸ್ಯ ಚಾಶ್ರಮಂ ।
ಯತ್ರ ಪೂರ್ವಂ ತಪಸ್ತಪ್ತಂ ಮಾರ್ಕಂಡೇನ ಮಹಾತ್ಮನಾ ॥ ೧ ॥
ಮೃಕಂಡು ಬ್ರಾಹ್ಮಣೋನಾಮ ಪುರಾಽಽಸೀತ್ತ್ಸಂಶಿತವ್ರತಃ ।
ಅಂತೇ ವಯಸಿ ಸಂಜಾತಸ್ತಸ್ಯ ಪುತ್ರೋಽತಿಸುಂದರಃ ॥ ೨ ॥
ಸರ್ವಲಕ್ಷಣಸಂಪೂರ್ಣಃ ಶಾಂತಃ ಸೂರ್ಯಸಮಪ್ರಭಃ ।
ಕಸ್ಯಚಿತ್ತ್ವಥ ಕಾಲಸ್ಯ ತಸ್ಯಾಶ್ರಮಪದೇ ನೃಪ ॥ ೩ ॥
ಆಗತೋ ಬ್ರಾಹ್ಮಣೋ ಜ್ಞಾನೀ ಕಶ್ಚಿತ್ಸಾಮುದ್ರವಿಚ್ಛುಭಃ ।
ತತೋಽಸೌ ಕ್ರೀಡಮಾನಸ್ತು ಬಾಲಕಃ ಪಂಚವಾರ್ಷಿಕಃ ॥ ೪ ॥
ಆನಾಸಾಗ್ರಶಿಖಾಗ್ರಾಭ್ಯಾಂ ಚಿರಂ ಚೈವಾವಲೋಕಿತಃ ।
ತತೋಽಹಸತ್ಸ ಸಹಸಾ ತಂ ಮೃಕಂಡೋ ಹ್ಯಲಕ್ಷಯತ್ ॥ ೫ ॥

---

ಕನ್ನಡದ ಅನುವಾದ

### ಮಾರ್ಕಂಡೇಯಾಶ್ರಮಪದೋತ್ಪತ್ತಿವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪವರ್ಯನೇ! ತರುವಾಯ ಮಾರ್ಕಂಡೇಯಾಶ್ರಮಕ್ಕೆ ಹೋಗಬೇಕು. ಅಲ್ಲಿ ಹಿಂದೆ ಮಹಾತ್ಮನಾದ ಮಾರ್ಕಂಡನು ತಪಸ್ಸನ್ನಾಚರಿಸಿರುವನು.

೨–೫. ಹಿಂದೆ ಕಠಿನ ವ್ರತವುಳ್ಳ ಮೃಕಂಡನೆಂಬ ಬ್ರಾಹ್ಮಣನೋರ್ವನಿದ್ದನು. ಅವನಿಗೆ ಮುಪ್ಪಿನಲ್ಲಿ ಅತ್ಯಂತ ಸುಂದರನೂ, ಸಮಸ್ತ ಲಕ್ಷಣಗಳುಳ್ಳವನೂ, ಶಾಂತನೂ, ಸೂರ್ಯನಂತೆ ಕಾಂತಿಯುಳ್ಳವನೂ ಆದ ಪುತ್ರನು ಹುಟ್ಟಿದನು. ಒಂದಾನೊಂದು ದಿನ ಅವನ ಆಶ್ರಮಕ್ಕೆ ಜ್ಞಾನಿಯೂ, ಸಾಮುದ್ರಿಕಾ ಶಾಸ್ತ್ರವನ್ನು ಅರಿತವನೂ ಆದ ಒಬ್ಬ ಬ್ರಾಹ್ಮಣನು ಬಂದನು. ಅವನು ಆಡುತ್ತಿರುವ ಐದುವರ್ಷದ ಬಾಲಕನಾದ ಮಾರ್ಕಂಡೇಯನನ್ನು ಮೂಗಿನ ಕೊನೆ ತಲೆಯಕೊನೆಗಳವರೆಗೆ ಬಹಳ ಹೊತ್ತು ಕಂಡು ನಕ್ಕನು. ಕೂಡಲೆ ಅದನ್ನು ಮೃಕಂಡನು ನೋಡಿದನು.

ಅಥಾಬ್ರವೀಚ್ಚಿರಂ ದೃಷ್ಟಸ್ತ್ವಯಾ ಪುತ್ರೋ ಮಮ ದ್ವಿಜ ।
ತತೋ ಹಸಿತವಾನ್ಭೂಯಃ ಕಿಮಿದಂ ಕಾರಣಂ ವದ ॥ ೬ ॥
ಅಸಕೃತ್ಸ ಮೃಕಂಡೇನ ಯಾವತ್ಪೃಷ್ಟೋ ದ್ವಿಜೋತ್ತಮಃ ।
ಉಪರೋಧವಶಾತ್ತಸ್ಮೈ ಯಥಾರ್ಥಂ ಸಂನ್ಯವೇದಯತ್ ॥ ೭ ॥
ಅಸ್ಯ ಬಾಲಸ್ಯ ಚಿಹ್ನಾನಿ ಯಾನಿ ಕಾಯೇ ದ್ವಿಜೋತ್ತಮ ।
ಅಜರಶ್ಚಾಮರಶ್ಚೈವ ತೈರ್ಭವೇತ್ಪುರುಷಃ ಕಿಲ ॥ ೮ ॥
ಷಣ್ಮಾಸೇನಾಸ್ಯ ಬಾಲಸ್ಯ ನೂನಂ ಮೃತ್ಯುರ್ಭವಿಷ್ಯತಿ ।
ಏತಸ್ಮಾತ್ಕಾರಣಾದ್ಧಾಸ್ಯಂ ಮಯಾಕಾರಿ ದ್ವಿಜೋತ್ತಮ ।
ಅನೃತಂ ನೋಕ್ತಪೂರ್ವಂ ಮೇ ವೈರಿಷ್ವಪಿ ಕದಾಚನ ॥ ೯ ॥

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ತು ಸ ಜ್ಞಾನೀ ಉಷಿತ್ವಾ ತತ್ರ ಶರ್ವರೀಂ ।
ಮೃಕಂಡೇನಾಭ್ಯನುಜ್ಞಾತ ಇಷ್ಟಂ ದೇಶಂ ಜಗಾಮ ಹ ॥ ೧೦ ॥
ಮೃಕಂಡೋಽಪಿ ಸುತಂ ಜ್ಞಾತ್ವಾ ತತಃ ಕ್ಷೀಣಾಯುಷಂ ನೃಪ ।
ಪಂಚವಾರ್ಷಿಕಮಪ್ಯಾರ್ತಶ್ಚಕಾರೋಪನಯಾನ್ವಿತಂ ॥ ೧೧ ॥

---

೬. ಬಳಿಕ ಮೃಕಂಡನು, "ಬ್ರಾಹ್ಮಣ! ನೀನು ನನ್ನ ಮಗನನ್ನು ಬಹಳ ಹೊತ್ತು ನೋಡಿ ನಕ್ಕಿರುವೆ. ಇದಕ್ಕೇನು ಕಾರಣ ? ಹೇಳು".

೭. ಹೀಗೆ ಮೃಕಂಡನು ಅನೇಕ ಸಲ ಕೇಳಿ ಬಲಾತ್ಕಾರ ಮಾಡಿದ್ದರಿಂದ ಬ್ರಾಹ್ಮಣನು ಯಥಾರ್ಥ ವಿಷಯವನ್ನು ತಿಳಿಸಿದನು.

೮. "ಬ್ರಾಹ್ಮಣ ! ಈ ಬಾಲಕನ ದೇಹದಲ್ಲಿರುವ ಚಿಹ್ನೆಗಳಿಂದ ಪುರುಷನು ಜರಾಮರಣಗಳಿಲ್ಲದವನಾಗುವನು.

೯. ಈ ಬಾಲಕನು ಆರುತಿಂಗಳುಗಳೊಳಗೆ ನಿಶ್ಚಯವಾಗಿಯೂ ಮೃತನಾಗುವನು. ಇದರಿಂದ ನಾನು ನಕ್ಕೆನು. ನಾನು ಶತ್ರುಗಳಲ್ಲಿಯೂ ಸಹ ಒಂದು ಸಾರಿಯೂ ಸುಳ್ಳಾಡಲಿಲ್ಲ".

೧೦. ಪುಲಸ್ತ್ಯನು ಹೇಳುತ್ತಾನೆ :—ಆ ಜ್ಞಾನಿಯು ಹೀಗೆಂದು ಆ ರಾತ್ರಿ ಅಲ್ಲಿ ವಾಸಮಾಡಿ ಮೃಕಂಡನ ಅನುಮತಿಯಂತೆ ತನಗಿಷ್ಟವಾದ ದೇಶಕ್ಕೆ ಹೋದನು.

೧೧. ಮೃಕಂಡನೂ ತನ್ನ ಸುತನು ಅಲ್ಪಾಯುವೆಂದರಿತು ದುಃಖಗೊಂಡು ಆ ಬಾಲಕನಿಗೆ ಐದನೆ ವರ್ಷದಲ್ಲಿಯೇ ಉಪನಯನ ಮಾಡಿದನು.

ಶ್ರುತಾಧ್ಯಯನಸಂಪನ್ನಂ ಯಂಯಂ ಪಶ್ಯಸಿ ಚಾಗ್ರತಃ ।
ತಸ್ಯಾಭಿವಾದನಂ ಕಾರ್ಯಂ ತ್ವಯಾ ಪುತ್ರಕ ನಿತ್ಯಶಃ ॥ ೧೨ ॥
ತತಶ್ಚಕ್ರೇ ಬ್ರಹ್ಮಚಾರೀ ಪಿತುರ್ವಾಕ್ಯಂ ವಿಶೇಷತಃ ॥ ೧೩ ॥
ಬಾಲಂ ವೃದ್ಧಂ ಯುವಾನಂ ಚ ಯಂ ಯಂ ಪಶ್ಯತಿ ಚಕ್ಷುಷಾ ।
ನಮಸ್ಕರೋತಿ ತಂ ಸರ್ವಂ ಬ್ರಾಹ್ಮಣಂ ವಿನಯಾನ್ವಿತಃ ॥ ೧೪ ॥
ಕಸ್ಯಚಿತ್ತ್ವಥ ಕಾಲಸ್ಯ ತಸ್ಯಾಶ್ರಮಸಮೀಪತಃ ।
ಸಪ್ತರ್ಷಯಃ ಸಮಾಯಾತಾಸ್ತೀರ್ಥಯಾತ್ರಾಪರಾಯಣಾಃ ॥ ೧೫ ॥
ಅಥ ತಾನ್ಸತ್ವರಂ ಗತ್ವಾ ವಂದಯಾಮಾಸ ಪಾರ್ಥಿವ ।
ಬಾಲಃ ಸ ವಿನಯೋಪೇತಃ ಸರ್ವಾಂಶ್ಚೈವ ಯಥಾಕ್ರಮಂ ॥ ೧೬ ॥
ದೀರ್ಘಾಯುರ್ಭವ ತೈರುಕ್ತಃ ಸ ಬಾಲಸ್ತುಷ್ಟಿತತ್ಪರೈಃ ।
ಆಸ್ಥಿತಾಶ್ಚ ಯಥಾಭೀಷ್ಟಂ ದೇಶಂ ಬಾಲಂ ವಿಸಜ್ಯ ತಂ ॥ ೧೭ ॥
ತೇಷಾಂ ಮಧ್ಯೇಽಂಗಿರಾನಾಮ ದಿವ್ಯಜ್ಞಾನಸಮನ್ವಿತಃ ।
ತೇನಾವಲೋಕಿತೋ ಬಾಲಃ ಸೂಕ್ಷ್ಮದೃಷ್ಟ್ಯಾ ಪರಂತಪ ॥ ೧೮ ॥

---

೧೨. ಅವನು ತನ್ನ ಬಾಲಕನಿಗೆ, "ಮಗು ! ನೀನು ವೇದಾಧ್ಯಯನ ಸಂಪನ್ನರಾದವರನ್ನು ನೋಡಿದಾಗ ಅವರಿಗೆ ನಮಸ್ಕರಿಸು" ಎಂದು ಆಜ್ಞೆ ಮಾಡಿದನು.

೧೩. ಬ್ರಹ್ಮಚಾರಿಯಾದ ಬಾಲಕನು ತಂದೆಯ ಮಾತನ್ನು ಅತಿಶಯವಾಗಿ ನೆರವೇರಿಸಿದನು.

೧೪. ಅವನು ಕಣ್ಣಿನಿಂದ ಬಾಲಕ,ಮುದುಕ, ಯುವಕರಾದ ಯಾವ ಬ್ರಾಹ್ಮಣ ನೋಡಿದರೂ ಕೂಡಲೆ ಅವರಿಗೆ ವಿನಯದಿಂದ ವಂದಿಸುತ್ತಿದ್ದನು.

೧೫. ಒಂದಾನೊಂದು ದಿನ ಅವನ ಆಶ್ರಮದ ಹತ್ತಿರಕ್ಕೆ ತೀರ್ಥಯಾತ್ರಾ ನಿರತರಾದ ಸಪ್ತರ್ಷಿಗಳು ಬಂದರು.

೧೬. ದೊರೆಯೆ ! ಆ ಬಾಲಕನು ಶೀಘ್ರವಾಗಿ ಅವರೆಡೆಗೆ ಹೋಗಿ ವಿನಯದಿಂದ ಅವರನ್ನೆಲ್ಲ ಕ್ರಮವಾಗಿ ನಮಸ್ಕರಿಸಿದನು.

೧೭. ಸಂತೋಷಗೊಂಡ ಆ ಮುನಿಗಳು ಆ ಬಾಲಕನನ್ನು ಕುರಿತು ದೀರ್ಘಾಯುಷ್ಮಂತನಾಗೆಂದು ಹೇಳಿ ಅವನನ್ನು ಅಲ್ಲಿಯೇ ಬಿಟ್ಟು ತಮಗಿಷ್ಟವಾದ ದೇಶಕ್ಕೆ ತೆರಳಿದರು.

೧೮. ಶತ್ರುನಾಶಕನಾದ ದೊರೆಯೆ! ಅವರ ಮಧ್ಯದಲ್ಲಿ ದಿವ್ಯಜ್ಞಾನಿಯಾದ ಅಂಗಿರನು ಸೂಕ್ಷ್ಮದೃಷ್ಟಿಯಿಂದ ಆ ಬಾಲಕನನ್ನು ಕಂಡನು.

ಅಥ ತಾನಬ್ರವೀತ್ಸರ್ವಾನ್ಸ್ಮುನೀನ್ಕಿಂಚಿತ್ಸವಿಸ್ಮಯಃ ।
ದೀರ್ಘಾಯುರ್ನ ಚ ಬಾಲೋಽಯಂ ಯುಷ್ಮಾಭಿಃ ಸಂಪ್ರಕೀರ್ತಿತಃ ॥
ಗಮಿಷ್ಯತಿ ಕುಮಾರೋಽಯಂ ನಿಧನಂ ಪಂಚಮೇ ದಿನೇ ।
ತಸ್ಮ ಯುಕ್ತಂ ಹಿ ನೋ ವಾಕ್ಯಮಸತ್ಯಂ ದ್ವಿಜಸತ್ತಮಾಃ ॥ ೨೦ ॥
ಯಥಾಽಯಂ ಚಿರಜೀವೀ ಸ್ಯಾತ್ತಥಾ ನೀತಿರ್ವಿಧೀಯತಾಂ ।
ಅಥ ತೇ ಮುನಯೋ ಭೀತಾ ಮಿಥ್ಯಾವಾಕ್ಯಸ್ಯ ಪಾರ್ಥಿವ ॥ ೨೧ ॥
ಬಾಲಕಂ ತಂ ಸಮಾದಾಯ ಬ್ರಹ್ಮಲೋಕಂ ಗತಾಸ್ತದಾ ।
ತತ್ರ ದೃಷ್ಟ್ವಾ ಚತುರ್ವಕ್ತ್ರಂ ನಮಶ್ಚಕ್ರುರ್ಮುನೀಶ್ವರಾಃ ॥ ೨೨ ॥
ತೇಷಾಮನಂತರಂ ತೇನ ಬಾಲಕೇನಾಭಿವಾದಿತಃ ।
ದೀರ್ಘಾಯುರ್ಭವ ತೇನಾಽಪಿ ಬ್ರಹ್ಮಣೋಕ್ತಃ ಸ ಬಾಲಕಃ ॥ ೨೩ ॥
ತತಃ ಸಪ್ತರ್ಷಯೋ ಹೃಷ್ಟಾಃ ಸ್ವಚಿತ್ತೇ ನೃಪಸತ್ತಮ ।
ಸುಖಾಸೀನಾನ್ಸ ವಿಶ್ರಾಂತಾನಬ್ರವೀನ್ಮುನಿಪುಂಗವಾನ್ ॥ ೨೪ ॥
ಬ್ರಹ್ಮೋವಾಚ :—
ಪರಿಪೃಚ್ಛತ ಕಿಂ ಕಾರ್ಯಂ ಕುತೋ ಯೂಯಮಿಹಾಗತಾಃ ॥ ೨೫ ॥

---

೧೯. ತರುವಾಯ ಅವನು ಆ ಮುನಿಗಳನ್ನೆಲ್ಲ ಕುರಿತು ಆಶ್ಚರ್ಯದಿಂದ ಸಹಿತನಾಗಿ,"ನೀವು ಹೇಳಿದಂತೆ ಈ ಬಾಲಕನು ದೀರ್ಘಾಯುಷ್ಮಂತನಲ್ಲ.

೨೦. ದ್ವಿಜವರ್ಯರೆ! ಇವನು ಇಲ್ಲಿಂದ ಐದನೆಯ ದಿವಸ ಮಡಿಯುವನು. ನಮ್ಮ ಮಾತು ಸುಳ್ಳಾಗುವುದು ಉಚಿತವಲ್ಲ,

೨೧–೨೩. ಇವನು ಚಿರಂಜೀವಿಯಾಗುವಂತೆ ಉಪಾಯವನ್ನು ಮಾಡಿರಿ". ಎಂದನು. ತರುವಾಯ ಆ ಮುನಿಗಳು ಸುಳ್ಳುಮಾತಿನಿಂದ ಹೆದರಿ ಆ ಬಾಲಕನನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದರು. ಅಲ್ಲಿ ಅವರು ಬ್ರಹ್ಮನನ್ನು ವಂದಿಸಲು ಆ ಬಾಲಕನೂ ನಮಸ್ಕಾರಮಾಡಿದನು. ಬ್ರಹ್ಮನೂ ದೀರ್ಘಾಯುಷ್ಮಂತನಾಗೆಂದು ಆಶೀರ್ವದಿಸಿದನು.

೨೪. ಅನಂತರ ಸಪ್ತರ್ಷಿಗಳು ತಮ್ಮ ಮನಸ್ಸಿನಲ್ಲಿಯೇ ಸಂತೋಷಗೊಂಡರು. ಬ್ರಹ್ಮನು ವಿಶ್ರಾಂತಿಗೊಂಡು ಸುಖವಾಗಿ ಕುಳಿತಿರುವ ಆ ಮುನಿವರ್ಯರನ್ನು ಕುರಿತು ಇಂತೆಂದನು.

೨೫. ಬ್ರಹ್ಮನು ಹೇಳುತ್ತಾನೆ:—ನೀವು ಇಲ್ಲಿಗೆ ಯಾವ ಕೆಲಸಕ್ಕಾಗಿ ಬಂದಿರುವಿರಿ? ಹೇಳಿರಿ.

ಋಷಯ ಊಚುಃ :—
ತೀರ್ಥಯಾತ್ರಾಪ್ರಸಂಗೇನ ಭ್ರಮಮಾಣಾ ಮಹೀತಲಂ ।
ಅರ್ಬುದಂ ಪರ್ವತಂನಾಮ ತಸ್ಯ ತೀರ್ಥೇಷು ವೈ ಗತಾಃ ॥ ೨೬ ॥
ಅಥಾಗತ್ಯ ದ್ರುತಂ ದೂರಾದ್ಬಾಲೇನಾನೇನ ವಂದಿತಾಃ ।
ದೀರ್ಘಾಯುರ್ಭವ ಸಂದಿಷ್ಟಸ್ತತಶ್ಚಾಯಮನೇಕಧಾ ।
ಪಂಚಮೇ ದಿವಸೇಽಸ್ಯಾಪಿ ಮೃತ್ಯುರ್ದೇವ ಭವಿಷ್ಯತಿ ॥ ೨೭ ॥
ಯಥಾ ವಯಂ ತ್ವಯಾ ಸಾರ್ಧಮಸತ್ಯಾ ನ ಚತುರ್ಮುಖ ।
ಭವಾಮೋಽಸ್ಯ ಕೃತೇ ದೇವ ತಥಾ ಕಿಂಚಿದ್ವಿಧೀಯತಾಂ ॥ ೨೮ ॥
ಅಥ ಬ್ರಹ್ಮಾ ಪ್ರಹೃಷ್ಟಾತ್ಮಾ ದೃಷ್ಟ್ವಾ ತಂ ಮುನಿದಾರಕಂ ।
ಮತ್ಪ್ರಸಾದಾದಯಂ ಬಾಲೋ ಭಾವೀ ಕಲ್ಪಾಯುರಬ್ರವೀತ್ ॥ ೨೯ ॥
ತತಸ್ತೇ ಮುನಯೋ ಹೃಷ್ಟಾಸ್ತಮಾದಾಯ ಗೃಹಂ ಪ್ರತಿ ।
ಪ್ರಸ್ಥಿತಾ ಬ್ರಹ್ಮಲೋಕಾತ್ತು ನಮಸ್ಕೃತ್ವಾ ಚತುರ್ಮುಖಂ ॥ ೩೦ ॥
ಅಥ ತಸ್ಯ ಪಿತಾ ತತ್ರ ಮೃಕಂಡುರ್ಮುನಿಸತ್ತಮಃ ।
ತತೋ ಭಾರ್ಯಾಸಮಾಯುಕ್ತೋ ವಿಲಲಾಪ ಸುದುಃಖಿತಃ ॥ ೩೧ ॥
ಹಾ ಪುತ್ರಪುತ್ರ ಕರುಣಂ ರುದಿತ್ವಾ ಧರ್ಮವತ್ಸಲಃ ।
ಅನಾಮಂತ್ರ್ಯ ಚ ಮಾಂ ಕಸ್ಮಾದ್ದೀರ್ಘಂ ಪಂಥಾನಮಾಶ್ರಿತಃ ॥ ೩೨ ॥

---

೨೬. ಋಷಿಗಳು ಹೇಳುತ್ತಾರೆ :—ನಾವು ತೀರ್ಥಯಾತ್ರೆಯ ಪ್ರಸಂಗದಿಂದ ಭೂಮಿಯಲ್ಲಿ ಸಂಚರಿಸುತ್ತ ಅರ್ಬುದ ಪರ್ವತದಲ್ಲಿರುವ ತೀರ್ಥಗಳಿಗೆ ಹೋದೆವು.

೨೭. ಅಲ್ಲಿ ಈ ಬಾಲಕನು ಶೀಘ್ರವಾಗಿ ಬಂದು ದೂರದಿಂದ ನಮ್ಮನ್ನು ವಂದಿಸಿದನು. ನಾವೂ ದೀರ್ಘಾಯುಷ್ಮಂತನಾಗೆಂದು ಹರಸಿದೆವು. ಸ್ವಾಮಿ! ಇಲ್ಲಿಂದ ಐದನೆ ದಿನ ಈ ಕುಮಾರನು ಮಡಿಯುವನು.

೨೮. ಚತುರ್ಮುಖ! ನೀನೂ ನಾವೂ ಅಸತ್ಯವಾದಿಗಳಾಗಂತೆ ಇವನಿಗೆ ಏನನ್ನಾದರೂ ಮಾಡು.

೨೯. ತರುವಾಯ ಚತುರ್ಮುಖನು ಸಂತೋಷಗೊಂಡು ಆ ಬಾಲಕನನ್ನು ನೋಡಿ ನನ್ನ ಅನುಗ್ರಹದಿಂದ ಇವನು ಕಲ್ಪಕಾಲದವರೆಗೆ ಜೀವಿಸುವನೆಂದನು.

೩೦. ಆನಂತರ ಮುನಿಗಳು ಸಂತೋಷಗೊಂಡು ಬ್ರಹ್ಮನನ್ನು ವಂದಿಸಿ ಬ್ರಹ್ಮಲೋಕದಿಂದ ಆ ಬಾಲಕನೊಡನೆ ಮನೆಗೆ ಹೊರಟರು.

೩೧. ಇತ್ತ ಆ ಬಾಲಕನ ತಂದೆಯಾದ ಮೃಕಂಡನು ಭಾರ್ಯೆಯೊಡನೆ ದುಃಖದಿಂದ ಗೋಳಾಡಿದನು.

೩೨. "ಅಯ್ಯೋ! ಮಗು ! ಧರ್ಮಪ್ರಿಯನಾದ ನೀನು ದೀನವಾಗಿ ರೋದಿಸುತ್ತಿರುವ ನನ್ನನ್ನು ಕೇಳದೆ ದೂರದ ದಾರಿಯನೇಕೆ ಹಿಡಿದೆ?

ಅಕೃತ್ವಾಪಿ ಕ್ರಿಯಾಃ ಕಾರ್ಯಾಃ ಕಥಂ ಮೃತ್ಯುವಶಂ ಗತಃ ।
ಸೋಽಹಂ ತ್ವಯಾ ವಿನಾ ಪುತ್ರ ನ ಜೀವಾಮಿ ಕಥಂಚನ ॥ ೩೩ ॥
ಏವಂ ವಿಲಪತಸ್ತಸ್ಯ ಬಹುಧಾ ನೃಪಸತ್ತಮ ।
ಬಾಲಶ್ಚಾಭ್ಯಾಗತಸ್ತತ್ರ ಯತ್ರ ದೇಶೇ ಪುರಾ ಸ್ಥಿತಃ ॥ ೩೪ ॥
ಅಥಾಸೌ ಪ್ರಯಯೌ ಬಾಲಃ ಪ್ರಹೃಷ್ಟೇನಾಂತರಾತ್ಮನಾ ।
ತಂ ದೃಷ್ಟ್ವಾ ಪಥಿ ತಾತಶ್ಚ ಸಂಪ್ರಹೃಷ್ಟೋ ಬಭೂವ ಹ ॥ ೩೫ ॥
ಪಪ್ರಚ್ಛಾಂಕಂ ಸಮಾರೋಪ್ಯ ಚಿರಾಗಮನಕಾರಣಂ ।
ತತಃ ಸ ಕಥಯಾಮಾಸ ಸರ್ವಂ ಮುನಿವಿಚೇಷ್ಟಿತಂ ।
ದರ್ಶನಂ ಬ್ರಹ್ಮಲೋಕಸ್ಯ ಪದ್ಮಯೋನೇರ್ವರಂ ತಥಾ ॥ ೩೬ ॥

ಬಾಲಕ ಉವಾಚ :—

ಅಜರಶ್ಚಾಮರಶ್ಚಾಹಂ ಕೃತಸ್ತಾತ ಸ್ವಯಂಭುವಾ ।
ತಸ್ಮಾತ್ತ್ವತ್ಯಂ ಮದರ್ಥೇ ತೇ ವ್ಯೇತ್ವಸೌ ಮಾನಸೋ ಜ್ವರಃ ॥ ೩೭ ॥
ಸೋಽಹಮಾರಾಧಯಿಷ್ಯಾಮಿ ತತ್ರೈವ ಚತುರಾನನಂ ।
ಕೃತ್ವಾಽಽಶ್ರಮಪದಂ ರಮ್ಯಮರ್ಬುದೇ ಪರ್ವತೋತ್ತಮೇ ॥ ೩೮ ॥

---

೩೩. ಮಗು! ನೀನು ಮಾಡಬೇಕಾದ ಕೆಲಸಗಳನ್ನು ಮಾಡದೆ ಹೇಗೆ ಮೃತ್ಯುವಿನ ಅಧೀನನಾದೆ? ನೀನಿಲ್ಲದೆ ನಾನು ಹೇಗೂ ಬದಕುವುದಿಲ್ಲ".

೩೪. ನೃಪವರ್ಯನೆ! ಆ ಮೃಕಂಡನು ಬಗೆ ಬಗೆಯಾಗಿ ಹೀಗೆ ಆಳುತ್ತಿರಲು ಆ ಬಾಲಕನು ತಾನು ಹಿಂದೆ ಇದ್ದ ಸ್ಥಳಕ್ಕೆ ಮರಳಿ ಬಂದನು.

೩೫. ಅವನು ತಂದೆಯ ಹತ್ತಿರಕ್ಕೆ ಸಂತೋಷದಿಂದ ಹೋಗಲು ದಾರಿಯಲ್ಲಿಯೇ ಅವನನ್ನು ನೋಡಿ ತಂದೆಯು ಹರ್ಷಗೊಂಡನು.

೩೬. ಮೃಕಂಡನು ಅವನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ವಿಳಂಬವಾಗಿ ಬರಲು ಕಾರಣವನ್ನು ಕೇಳಿದನು. ಆ ಬಾಲಕನು ಮುನಿಗಳ ಸಮಸ್ತ ಕಾರ್ಯಗಳನ್ನೂ ಬ್ರಹ್ಮಲೋಕ ದರ್ಶನವನ್ನೂ, ಬ್ರಹ್ಮನ ವರವನ್ನೂ ತಿಳಿಸಿದನು.

೩೭. ಬಾಲಕನು ಹೇಳುತ್ತಾನೆ:—ತಂದೆಯೆ! ಬ್ರಹ್ಮನು ನನ್ನನ್ನು ಜರಾಮರಣಗಳಿಲ್ಲದವನನ್ನಾಗಿ ಮಾಡಿರುವನು. ಆದ್ದರಿಂದ ನನಗಾಗಿ ನಿನ್ನ ಮನಸ್ಸಿನಲ್ಲಿ ಉಂಟಾದ ವ್ಯಥೆಯು ನೀಗಲಿ.

೩೮. ನಾನು ಅರ್ಬುದ ಪರ್ವತದಲ್ಲಿ ರಮ್ಯವಾದ ಆಶ್ರಮವನ್ನು ರಚಿಸಿ ಬ್ರಹ್ಮನನ್ನು ಆರಾಧಿಸುವೆನು.

ಅಮೃತಸ್ರಾವಿ ತದ್ವಾಕ್ಯಂ ಶ್ರುತ್ವಾ ಪುತ್ರಸ್ಯ ಸ ದ್ವಿಜಃ ।
ಮೃಕಂಡು ಹರ್ಷಸಂಯುಕ್ತೋ ವಾಚಮಿತ್ಯಬ್ರವೀಚ್ಚ ತಂ ॥ ೩೯ ॥
ಮಾರ್ಕಂಡೋಽಪಿ ದ್ರುತಂ ಗತ್ವಾ ರಮ್ಯಮರ್ಬುದಪರ್ವತಂ ।
ತಪಸ್ತೇಪೇ ಸುವಿಸ್ತೀರ್ಣಂ ಧ್ಯಾಯನ್ದೇವಂ ಪಿತಾಮಹಂ ॥ ೪೦ ॥
ತಸ್ಯಾಶ್ರಮಪದೇ ಪುಣ್ಯೇ ಶ್ರಾವಣೇ ಮಾಸಿ ಪಾರ್ಥಿವ ।
ಪೌರ್ಣಮಾಸ್ಯಾಂ ವಿಶೇಷೇಣ ಯಃ ಕುರ್ಯಾತ್ಪಿತೃತರ್ಪಣಂ ।
ಪಿತೃಮೇಧಫಲಂ ತಸ್ಯ ಸಕಲಂ ಸ್ಯಾದಸಂಶಯಂ ॥ ೪೧ ॥
ಋಷಿಯೋಗೇನ ಯಸ್ತತ್ರ ತರ್ಪಯೇದ್ಬ್ರಾಹ್ಮಣೋತ್ತಮಾನ್ ।
ಬ್ರಹ್ಮಲೋಕೇ ಚಿರಂ ವಾಸಸ್ತಸ್ಯ ಸಂಜಾಯತೇ ನೃಪ ॥ ೪೨ ॥
ಯಃ ಸ್ನಾನಂ ಕುರುತೇ ತತ್ರ ಸಮ್ಯಕ್ಛ್ರದ್ಧಾಸಮನ್ವಿತಃ ।
ನಾಲ್ಪಮೃತ್ಯುಭಯಂ ತಸ್ಯ ಕುಲೇ ಕ್ವಾಪಿ ಪ್ರಜಾಯತೇ ॥ ೪೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಮಾರ್ಕಂಡೇಯಾಶ್ರಮಪದೋತ್ಪತ್ತಿವರ್ಣನಂ ನಾಮ
ಏಕಚತ್ವಾರಿಂಶೋಽಧ್ಯಾಯಃ

---

೩೯. ಆ ಮೃಕಂಡನು ಅಮೃತದಂತಿರುವ ಮಗನ ಆ ಮಾತನ್ನು ಕೇಳಿ ಸಂತೋಷದಿಂದ ಅವನನ್ನು ಕುರಿತು ಇಂತೆಂದನು.

೪೦. ಮಾರ್ಕಂಡನೂ ಶೀಘ್ರವಾಗಿ ಅರ್ಬುದ ಪರ್ವತಕ್ಕೆ ಹೋಗಿ ಬ್ರಹ್ಮದೇವನನ್ನು ಧ್ಯಾನಿಸುತ್ತ ಅತಿಶಯವಾದ ತಪಸ್ಸನ್ನಾಚರಿಸಿದನು.

೪೧. ದೊರೆಯೆ! ಪುಣ್ಯಕರವಾದ ಅವನ ಆಶ್ರಮದಲ್ಲಿ ಶ್ರಾವಣ ಶುದ್ಧ ಹುಣ್ಣಿಮೆದಿನ ಪಿತೃತರ್ಪಣವನ್ನು ಮಾಡಿದವನು ಸಂಪೂರ್ಣ ಪಿತೃಮೇಧ ಫಲವನ್ನು ಪಡೆಯುವನು.

೪೨. ದೊರೆಯೆ! ಅಲ್ಲಿ ಋಷಿಯೋಗದಿಂದ ಬ್ರಾಹ್ಮಣೋತ್ತಮರನ್ನು ತೃಪ್ತಿಗೊಳಿಸಿದವನಿಗೆ ಬ್ರಹ್ಮಲೋಕದಲ್ಲಿ ಬಹುಕಾಲವಾಸವು ಲಭಿಸುವುದು.

೪೩. ಅಲ್ಲಿ ಶ್ರದ್ಧೆಯಿಂದ ಮಿಂದವನ ವಂಶದಲ್ಲಿ ಎಲ್ಲಿಯೂ ಅಲ್ಪ ಮೃತ್ಯು ಭಯವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಮಾರ್ಕಂಡೇಯಾಶ್ರಮಪದೋತ್ಪತ್ತಿವರ್ಣನಸಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಿಚತ್ವಾರಿಂಶೋಽಧ್ಯಾಯಃ

### ಉದ್ದಾಲಕೇಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಲಿಂಗಂ ಪಾಪಹರಂ ಪರಂ ।
ಉದ್ದಾಲಕೇನ ಮುನಿನಾ ಸ್ಥಾಪಿತಂ ಲೋಕವಿಶ್ರುತಂ ॥ ೧ ॥
ತಸ್ಮಿನ್ಸ್ಪೃಷ್ಟೇಽಥ ವಾ ದೃಷ್ಟೇ ಪೂಜಿತೇ ಚ ವಿಶೇಷತಃ ।
ಸರ್ವರೋಗವಿನಿರ್ಮುಕ್ತೋ ಗಾರ್ಹಸ್ಥ್ಯಂ ಪ್ರಾಪ್ನುಯಾನ್ನರಃ ॥ ೨ ॥
ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ॥ ೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಉದ್ಧಾಲಕೇಶ್ವರಮಾಹಾತ್ಮ್ಯವರ್ಣನಂ ನಾಮ
ದ್ವಿಚತ್ವಾರಿಂಶೋಽಧ್ಯಾಯಃ

---

### ಕನ್ನಡದ ಅನುವಾದ

### ಉದ್ಧಾಲಕೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ನೃಪೋತ್ತಮ! ಬಳಿಕ ಉದ್ದಾಲಕ ಮುನಿಯು ಪ್ರತಿಷ್ಠೆಮಾಡಿರುವುದೂ, ಲೋಕಪ್ರಸಿದ್ಧವೂ, ಪಾಪವನ್ನು ಪರಿಹರಿಸುವುದೂ ಆದ ಲಿಂಗವೆಡೆಗೆ ಹೋಗಬೇಕು.

೨. ಮನುಷ್ಯನು ಆ ಲಿಂಗವನ್ನು ಮುಟ್ಟುವುದರಿಂದಾಗಲಿ, ದರ್ಶನಮಾಡುವುದರಿಂದಾಗಲಿ, ಪೂಜಿಸುವುದರಿಂದಾಗಲಿ ಸಕಲ ರೋಗ ಮುಕ್ತನಾಗಿ ಗಾರ್ಹಸ್ಥ್ಯವನ್ನು ಹೊಂದುವನು.

೩. ಸಕಲ ಪಾಪಮುಕ್ತನಾಗಿ ಶಿವಲೋಕದಲ್ಲಿ ಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಉದ್ದಾಲಕೇಶ್ವರಮಾಹಾತ್ಮ್ಯವರ್ಣನವೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ತ್ರಯಶ್ಚತ್ವಾರಿಂಶೋಽಧ್ಯಾಯಃ

ಸಿದ್ಧೇಶ್ವರಮಹಿಮಾನುವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಸಿದ್ಧಲಿಂಗಂ ಸುಸಿದ್ಧಿದಂ ।
ಸಿದ್ಧೈಸ್ತು ಸ್ಥಾಪಿತಂ ಲಿಂಗಂ ಸರ್ವಪಾತಕನಾಶನಂ ॥ ೧ ॥
ತತ್ರಾಸ್ತಿ ಶೋಭನಂ ಕುಂಡಂ ಸುನಿರ್ಮಲಜಲಾನ್ವಿತಂ ।
ತತ್ರ ಸ್ನಾತೋ ನರಃ ಸಮ್ಯಙ್ಮುಚ್ಯತೇ ಬ್ರಹ್ಮಹತ್ಯಯಾ ॥ ೨ ॥
ಯಂ ಯಂ ಕಾಮಮಭಿಧ್ಯಾಯಂಸ್ತತ್ರ ಸ್ನಾತಿ ನರೋ ನೃಪ ।
ಅವಶ್ಯಂ ತಮವಾಪ್ನೋತಿ ನಿಷ್ಠಾಂತೇ ಚ ಪರಾಂ ಗತಿಂ ॥ ೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ ಸಿದ್ಧೇಶ್ವರಮಹಿಮಾನುವರ್ಣನಂನಾಮ ತ್ರಯಶ್ಚತ್ವಾರಿಂಶೋಽಧ್ಯಾಯಃ

---

ಕನ್ನಡದ ಅನುವಾದ

ಸಿದ್ಧೇಶ್ವರಮಹಿಮಾನುವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ನೃಪೇಂದ್ರ! ತರುವಾಯ ಸಿದ್ಧರು ಸ್ಥಾಪಿಸಿರುವುದೂ, ಸಕಲ ಪಾಪಗಳನ್ನು ಪರಿಹರಿಸುವುದೂ, ಸಿದ್ಧಿಯನ್ನೀಯುವುದೂ ಆದ ಸಿದ್ಧಲಿಂಗದೆಡೆಗೆ ಹೋಗಬೇಕು.

೨. ಅಲ್ಲಿ ಶುದ್ಧಜಲದಿಂದ ತುಂಬಿರುವ ಮನೋಹರವಾದ ಒಂದು ಕುಂಡವಿರುವುದು. ಅಲ್ಲಿ ಮಿಂದ ಮನುಷ್ಯನು ಸಂಪೂರ್ಣವಾಗಿ ಬ್ರಹ್ಮಹತ್ಯೆಯಿಂದ ಮುಕ್ತನಾಗುವನು.

೩. ಮನುಷ್ಯನು ಯಾವ ಯಾವ ಇಷ್ಟಾರ್ಥಗಳನ್ನು ನೆನೆಯಿಸಿಕೊಂಡು ಅಲ್ಲಿ ಸ್ನಾನಮಾಡುವನೋ; ಅವಶ್ಯವಾಗಿ ಅದನ್ನೂ, ದೇಹಾವಸಾನದಲ್ಲಿ ಉತ್ತಮ ಗತಿಯನ್ನೂ ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಮಹಾಪುರಾಣದ ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ ಸಿದ್ಧೇಶ್ವರಮಹಿಮಾನುವರ್ಣನವೆಂಬ ನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಚತುಶ್ಚತ್ವಾರಿಂಶೋಽಧ್ಯಾಯಃ

## ಗಜತೀರ್ಥಪ್ರಭಾವವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಗಜತೀರ್ಥಮನುತ್ತಮಂ ।
ಯತ್ರ ಪೂರ್ವಂ ತಪಸ್ತಪ್ತಂ ದಿಗ್ಗಜೈರ್ಭಾವಿತಾತ್ಮಭಿಃ ॥ ೧ ॥
ಭೂಭಾರಧರಣೈಶ್ಚಾನ್ಯೈರೈರಾವಣಮುಖೈರ್ನೃಪ ।
ತತ್ರ ಸ್ನಾತೋ ನರಃ ಸಮ್ಯಗ್ಗಜದಾನಫಲಂ ಲಭೇತ್ ॥ ೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಗಜತೀರ್ಥಪ್ರಭಾವವರ್ಣನಂ ನಾಮ
॥ ಚತುಶ್ಚತ್ವಾರಿಂಶೋಽಧ್ಯಾಯಃ ॥

---

## ಕನ್ನಡದ ಅನುವಾದ

### ಗಜತೀರ್ಥಪ್ರಭಾವವರ್ಣನ

೧–೨. ಪುಲಸ್ತ್ಯನು ಹೇಳುತ್ತಾನೆ :—ನೃಪೋತ್ತಮ! ತರುವಾಯ ಗಜತೀರ್ಥದೆಡೆಗೆ ಹೋಗಬೇಕು. ಅಲ್ಲಿ ಹಿಂದೆ ಜ್ಞಾನಿಗಳಾದ ಭೂಮಿಯನ್ನು ಧರಿಸಿರುವ ಐರಾವತ ಮೊದಲಾದ ದಿಗ್ಗಜಗಳು ತಪಸ್ಸನ್ನಾಚರಿಸಿರುವುವು. ಅಲ್ಲಿ ಮಿಂದವನು ಗಜದಾನದ ಫಲವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಗಜತೀರ್ಥಪ್ರಭಾವವರ್ಣನವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಪಂಚಚತ್ವಾರಿಂಶೋಽಧ್ಯಾಯಃ

### ಶ್ರೀ ದೇವಖಾತೋತ್ಪತ್ತಿಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ದೇವಖಾತಂ ತತೋ ಗಚ್ಛೇತ್ಸುಪುಣ್ಯಂ ತೀರ್ಥಮುತ್ತಮಂ ।
ಯಾತ್ಸ್ವಾತ್ಯತಿರ್ನಿಬುಧೈಃ ಸರ್ವೈಃ ಸ್ವಯಮೇವ ವ್ಯಧೀಯತ ॥ ೧ ॥
ತತ್ರ ಯಃ ಕುರುತೇ ಶ್ರಾದ್ಧಮಮಾವಾಸ್ಯಾಂ ವಿಶೇಷತಃ ।
ಕನ್ಯಾಗತೇ ರವೌ ರಾಜನ್ಸ ಲಭೇತ್ಪರಮಂ ಪದಂ ।
ಪಿತ್ರ್ಯಾನ್ಸ ತಾರಯತ್ಯೇವಂ ಪ್ರಾಪ್ತಾನಪಿ ಸುದುರ್ಗತಿಂ ॥ ೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಶ್ರೀದೇವಖಾತೋತ್ಪತ್ತಿಮಾಹಾತ್ಮ್ಯವರ್ಣನಂನಾಮ
॥ ಪಂಚಚತ್ವಾರಿಂಶೋಽಧ್ಯಾಯಃ ॥

---

### ಕನ್ನಡದ ಅನುವಾದ

### ಶ್ರೀ ದೇವಖಾತೋತ್ಪತ್ತಿಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ಪುಣ್ಯಕರವಾದ ದೇವಖಾತ ತೀರ್ಥವೆಡೆಗೆ ಹೋಗಬೇಕು. ಇದನ್ನು ದೇವತೆಗಳು ತಾವೇ ಪ್ರಸಿದ್ಧಗೊಳಿಸಿರುವರು.

೨. ಅಲ್ಲಿ ಸೂರ್ಯನು ಕನ್ಯಾರಾಶಿಯಲ್ಲಿರುವಾಗ ಮನುಷ್ಯನು ಅಮಾವಾಸ್ಯೆ ದಿನ ಶ್ರಾದ್ಧಗೈದರೆ ಉತ್ತಮ ಸ್ಥಾನವನ್ನು ಹೊಂದುವನು. ಅವನು ಪಿತೃಗಳು ದುರ್ಗತಿಯನ್ನು ಹೊಂದಿದ್ದರೂ ಅವರನ್ನು ಉದ್ಧರಿಸುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಶ್ರೀಸ್ಕಾಂದಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಶ್ರೀದೇವಖಾತೋತ್ಪತ್ತಿಮಾಹಾತ್ಮ್ಯ ವರ್ಣನವೆಂಬ
ನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಷಟ್ಚತ್ವಾರಿಂಶೋಽಧ್ಯಾಯಃ

## ವ್ಯಾಸತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ವ್ಯಾಸೇಶ್ವರಂ ಗಚ್ಛೇದ್ವ್ಯಾಸೇನ ಸ್ಥಾಪಿತಂ ಹಿ ಯತ್ ।
ತಂ ದೃಷ್ಟ್ವಾ ಜಾಯತೇ ಮರ್ತ್ಯೋ ಮೇಧಾವೀ ಮತಿರ್ಮಾ ಶುಚಿಃ ।
ಸಪ್ತಜನ್ಮಾಂತರಾಣ್ಯೇವ ವ್ಯಾಸಸ್ಯ ವಚನಂ ಯಥಾ ॥ ೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೋಽರ್ಬುದಖಂಡೇ
ವ್ಯಾಸತೀರ್ಥಮಾಹಾತ್ಮ್ಯವರ್ಣನಂ
ಷಟ್ಚತ್ವಾರಿಂಶೋಽಧ್ಯಾಯಃ

---

## ಕನ್ನಡದ ಅನುವಾದ

## ವ್ಯಾಸತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ವ್ಯಾಸನು ಸ್ಥಾಪಿಸಿರುವ ವ್ಯಾಸೇಶ್ವರನೆಡೆಗೆ ಹೋಗಬೇಕು. ಅವನನ್ನು ದರ್ಶನ ಗೈದ ಮಾನವನು ವ್ಯಾಸನ ವಾಕ್ಯದಂತೆ ಏಳು ಜನ್ಮಗಳಲ್ಲಿ ಬುದ್ಧಿಶಾಲಿಯೂ, ಶುದ್ಧನೂ ಆಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ವ್ಯಾಸತೀರ್ಥಮಾಹಾತ್ಮ್ಯವರ್ಣನಂ
ನಲವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತಚತ್ವಾರಿಂಶೋಽಧ್ಯಾಯಃ

### ಗೌತಮಾಶ್ರಮತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—
ತತೋ ಗಚ್ಛೇನ್ನೃಪಶ್ರೇಷ್ಠ ಸುಪೂರ್ಣಂ ಗೌತಮಾಶ್ರಮಂ ।
ಯತ್ರ ಪೂರ್ವಂ ತಪಸ್ತಪ್ತಂ ಗೌತಮೇನ ಮಹಾತ್ಮನಾ ॥ ೧ ॥
ಪುರಾಽಽಸೀದ್ಗೌತಮೋನಾಮ ಮುನಿಃ ಪರಮಧಾರ್ಮಿಕಃ ।
ಸ ಭಕ್ತ್ಯಾಽಽರಾಧಯಾಮಾಸ ದೇವದೇವಂ ಮಹೇಶ್ವರಂ ॥ ೨ ॥
ಭಕ್ತ್ಯಾಽಽರಾಧಯಮಾನಸ್ಯ ನಿರ್ಭಿದ್ಯ ಧರಣೀತಲಂ ।
ಸಮುತ್ತಸ್ಥೌ ಮಹಲ್ಲಿಂಗಂ ಪರಂ ಮಾಹೇಶ್ವರಂ ನೃಪ ॥ ೩ ॥
ಏತಸ್ಮಿನ್ನೇವ ಕಾಲೇ ತು ನಾಗುವಾಚಾಶರೀರಿಣೀ ।
ಪೂಜಯೈತನ್ಮಹಲ್ಲಿಂಗಂ ತ್ವದ್ಭಕ್ತ್ಯಾ ಸಮುಪಸ್ಥಿತಂ ।
ವರಂ ವರಯ ಭದ್ರಂ ತೇ ಯತ್ತೇ ಮನಸಿ ವರ್ತತೇ ॥ ೪ ॥

---

### ಕನ್ನಡದ ಅನುವಾದ

#### ಗೌತಮಾಶ್ರಮತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪೇಂದ್ರ ! ತರುವಾಯ ಗೌತಮಾಶ್ರಮಕ್ಕೆ ಹೋಗಬೇಕು. ಅಲ್ಲಿ ಹಿಂದೆ ಮಹಾತ್ಮನಾದ ಗೌತಮನು ತಪಸ್ಸನ್ನು ಮಾಡಿರುವನು.

೨. ಹಿಂದೆ ಅತ್ಯಂತ ಧಾರ್ಮಿಕನಾದ ಗೌತಮನೆಂಬ ಮುನಿಯೋರ್ವನಿದ್ದನು. ಅವನು ಭಕ್ತಿಯಿಂದ ಮಹೇಶ್ವರನನ್ನು ಆರಾಧಿಸಿದನು.

೩. ದೊರೆಯೆ ! ಹೀಗೆ ಆ ಮುನಿಯು ಮಹೇಶ್ವರನನ್ನು ಪೂಜಿಸುತ್ತಿರಲು ಮಹೇಶ್ವರಲಿಂಗವು ಭೂಮಿಯನ್ನು ಭೇದಿಸಿ ಉದ್ಭವಿಸಿತು.

೪. ಈ ಸಮಯದಲ್ಲಿ ಅಶರೀರವಾಣಿಯಾಯಿತು : "ಗೌತಮ ! ನಿನ್ನ ಭಕ್ತಿಗೆ ಮೆಚ್ಚಿ ಉದ್ಭವಿಸಿದ ಈ ಲಿಂಗವನ್ನು ನೀನು ಪೂಜಿಸು. ನೀನು ಅಭೀಷ್ಟವಾದ ವರವನ್ನು ಕೇಳಿಕೊ."

ಗೌತಮ ಉವಾಚ :—
ಅತ್ರಾಶ್ರಮಪದೇ ದೇವ ತ್ವಯಾ ಶಂಭೋ ಜಗತ್ಪತೇ ।
ಸದಾ ಕಾರ್ಯಂ ಹಿ ಸಾನ್ನಿಧ್ಯಂ ಯದಿ ತುಷ್ಟೋ ಮಮ ಪ್ರಭೋ ॥ ೫ ॥
ಯಸ್ತ್ವಾಂ ಪಶ್ಯತಿ ಸದ್ಭಕ್ತ್ಯಾ ಬ್ರಹ್ಮಲೋಕಂ ಸ ಗಚ್ಛತು ॥ ೬ ॥
ಆಕಾಶವಾಣ್ಯುವಾಚ :—
ಮಾಘಮಾಸೇ ಚತುರ್ದಶ್ಯಾಂ ಯೋಽತ್ರ ಮಾಂ ದೀಕ್ಷಯಿಷ್ಯತಿ ।
ಕೃಷ್ಣಾಯಾಂ ಬ್ರಾಹ್ಮಣಶ್ರೇಷ್ಠ ಸ ಯಾಸ್ಯತಿ ಪರಾಂ ಗತಿಂ ॥ ೭ ॥
ಏವಮುಕ್ತ್ವಾ ತತೋ ವಾಣೀ ವಿರರಾಮ ಮಹೀಪತೇ ।
ತತ್ರಾಸ್ತಿ ಕುಂಡಮಪರಂ ಪವಿತ್ರಂ ಜಲಪೂರಿತಂ ।
ತತ್ರ ಸ್ನಾತೋ ನರಃ ಸದ್ಯಃ ಕುಲಂ ತಾರಯತೇಽಖಿಲಂ ॥ ೮ ॥
ಯಸ್ತತ್ರ ಕುರುತೇ ಶ್ರಾದ್ಧಂ ವಿಶೇಷಾದಿಂದುಸಂಕ್ಷಯೇ ।
ಗಯಾಶ್ರಾದ್ಧಫಲಂ ತಸ್ಯ ಸಕಲಂ ಜಾಯತೇ ಧ್ರುವಂ ॥ ೯ ॥
ತತ್ರ ದಾನಂ ಪ್ರಶಂಸಂತಿ ತಿಲಾನಾಂ ಮುನಿಪುಂಗವಾಃ ।
ತಿಲಸಂಖ್ಯಾನಿ ವರ್ಷಾಣಿ ದಾನಾತ್ಸ್ವರ್ಗೇ ವಸೇನ್ನೃಪ ॥ ೧೦ ॥

---

೫. ಗೌತಮನು ಹೇಳುತ್ತಾನೆ : ಶಂಕರ ! ನೀನು ನನಗೆ ಮೆಚ್ಚಿ ಒಲಿದಿರುವುದಾದರೆ ಈ ಆಶ್ರಮದಲ್ಲಿ ಯಾವಾಗಲೂ ನೆಲಸು.

೬. ನಿನ್ನನ್ನು ಭಕ್ತಿಯಿಂದ ನೋಡುವ ಮಾನವನು ಬ್ರಹ್ಮ ಲೋಕವನ್ನು ಸೇರಲಿ.

೭. ಆಕಾಶವಾಣಿಯು ಹೇಳುತ್ತದೆ :—ಬ್ರಾಹ್ಮಣೋತ್ತಮ ! ಮಾಘ ಕೃಷ್ಣ ಚತುರ್ದಶೀ ದಿನ ಇಲ್ಲಿ ನನ್ನನ್ನು ನೋಡಿದ ಮಾನವನು ಉತ್ತಮ ಗತಿಯನ್ನು ಪಡೆಯುವನು.

೮. ಆಕಾಶವಾಣಿಯು ಹೀಗೆ ನುಡಿದು ಸುಮ್ಮನಾಯಿತು. ಅಲ್ಲಿ ಪವಿತ್ರವಾದ ನೀರಿನಿಂದ ತುಂಬಿರುವ ಮತ್ತೊಂದು ಕುಂಡವಿದೆ. ಅಲ್ಲಿ ಮಿಂದ ಮಾನವನು ತನ್ನ ಸಮಸ್ತ ಕುಲಗಳನ್ನೂ ಉದ್ಧರಿಸುವನು.

೯. ವಿಶೇಷವಾಗಿ ಅಮಾವಾಸ್ಯೆ ದಿನ ಅಲ್ಲಿ ಸ್ನಾನಮಾಡುವವನಿಗೆ ಸಂಪೂರ್ಣ ಗಯಾಶ್ರಾದ್ಧ ಫಲವು ಲಭಿಸುವುದು.

೧೦. ಅಲ್ಲಿ ತಿಲದಾನವನ್ನು ಮುನಿವರ್ಯರು ಹೊಗಳುತ್ತಾರೆ. ತಿಲವನ್ನು ದಾನಮಾಡುವವನು ಅದರ ಸಂಖ್ಯೆಯಷ್ಟು ವರ್ಷಕಾಲ ಸ್ವರ್ಗದಲ್ಲಿ ವಾಸಿಸುವನು.

ಅರ್ಬುದೇ ಗೌತಮಿಾಯಾತ್ರಾ ಸಿಂಹಸ್ಥೇ ಚ ಬೃಹಸ್ಪತೌ ।
ಅಮಾಯಾಂ ಸೋಮವಾರೇಣ ದ್ವಿಷಡ್ಗೋದಾವರೀ ಫಲಂ ॥ ೧೧ ॥
ಷಷ್ಟಿವರ್ಷಸಹಸ್ರಾಣಿ ಭಾಗೀರಥ್ಯವಗಾಹನೇ ।
ಸಕೃದ್ಗೋದಾವರೀಸ್ನಾನಾತ್ಸಿಂಹಸ್ಥೇ ಚ ಬೃಹಸ್ಪತೌ ॥ ೧೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಗೌತಮಾಶ್ರಮತೀರ್ಥಮಾಹಾತ್ಮ್ಯವರ್ಣನಂನಾಮ
ಸಪ್ತಚತ್ವಾರಿಂಶೋಽಧ್ಯಾಯಃ

---

೧೧. ಬೃಹಸ್ಪತಿಯು ಸಿಂಹರಾಶಿಯಲ್ಲಿರಲು ಸೋಮವಾರ ಅಮಾವಾಸ್ಯೆ ದಿನ ಅರ್ಬುದದಲ್ಲಿರುವ ಗೌತಮತೀರ್ಥದ ಯಾತ್ರೆಯಿಂದ ಹನ್ನೆರಡು ಗೋದಾವರೀ ಯಾತ್ರಾ ಫಲವು ಲಭಿಸುವುದು.

೧೨. ಬೃಹಸ್ಪತಿಯು ಸಿಂಹರಾಶಿಯಲ್ಲಿರಲು ಒಂದುಸಾರಿ ಗೋದಾವರೀ ಸ್ನಾನ ಮಾಡುವುದರಿಂದ ಆರುವತ್ತುಸಾವಿರ ವರ್ಷಕಾಲ ಗಂಗೆಯಲ್ಲಿ ಮಿಂದ ಫಲವು ದೊರೆಯುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಗೌತಮಾಶ್ರಮತೀರ್ಥಮಾಹಾತ್ಮ್ಯವರ್ಣನವೆಂಬ
ನಲವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಷ್ಟಚತ್ವಾರಿಂಶೋಽಧ್ಯಾಯಃ

### ಕುಲಸಂತಾರಣತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—
ಕುಲಸಂತಾರಣಂ ಗಚ್ಛೇತ್ತತ್ರ ತೀರ್ಥಮನುತ್ತಮಂ ।
ಯತ್ರ ಸ್ನಾತೋ ನರಃ ಸಮ್ಯಕ್ಕುಲಂ ತಾರಯತೇಽಖಿಲಂ ॥ ೧ ॥
ದಶಪೂರ್ವಾನ್ಪರಿಷ್ಯಾಂಶ್ಚ ತಥಾತ್ಮಾನಂ ನೃಪೋತ್ತಮ ।
ಉದ್ಧರೇಚ್ಛ್ರದ್ಧಯಾ ಯುಕ್ತಸ್ತತ್ರ ದಾನೇನ ಮಾನವಃ ॥ ೨ ॥
ಆಸೀದಪ್ರಸ್ತುತೋ ನಾಮ ರಾಜಾ ಪೂರ್ವಂ ಸ ಪಾಪಕೃತ್ ।
ನಾಪಿ ದಾನಂ ತಥಾ ಜ್ಞಾನಂ ನ ಧ್ಯಾನಂ ನ ಚ ಸತ್ಕ್ರಿಯಾ ॥ ೩ ॥
ತಸ್ಮಿನ್ ಶಾಸತಿ ಲೋಕಾನಾಂ ನಾಸೀತ್ಸೌಖ್ಯಂ ಕದಾಚನ ।
ಪರದಾರರುಚಿರ್ನಿತ್ಯಂ ಮಹಾದಂಡಪರಶ್ಚ ಸಃ ॥ ೪ ॥
ನ್ಯಾಯತೋಽನ್ಯಾಯತೋ ವಾಪಿ ಕರೋತಿ ಧನಸಂಗ್ರಹಂ ।
ಸ ಘಾತಯತಿ ಲೋಕಾಂಶ್ಚ ನಿರ್ದೋಷಾನ್ಪಾಪಕೃತ್ತಮಃ ॥ ೫ ॥

---

### ಕನ್ನಡದ ಅನುವಾದ

#### ಕುಲಸಂತಾರಣತೀರ್ಥಮಾಹಾತ್ಮ್ಯವರ್ಣನೆ

೧. ಪುಲಸ್ತ್ಯನು ಹೇಳುತ್ತಾನೆ:—ಅನಂತರ ಅಲ್ಲಿರುವ ಕುಲಸಂತಾರಣ ತೀರ್ಥಕ್ಕೆ ಹೋಗಬೇಕು. ಅಲ್ಲಿ ಮಿಂದ ಮಾನವನು ತನ್ನ ಸಮಸ್ತ ಕುಲಗಳನ್ನೂ ಉದ್ಧರಿಸುವನು.

೨. ಅಲ್ಲಿ ಶ್ರದ್ಧೆಯಿಂದ ದಾನಮಾಡುವುದರಿಂದ ಹಿಂದಿನ ಮತ್ತು ಮುಂದಿನ ಹತ್ತು ಮಂದಿ ಪಿತೃಗಳನ್ನೂ, ತನ್ನನ್ನೂ ಉದ್ಧರಿಸುವನು

೩–೫. ಹಿಂದೆ ಅಪ್ರಸ್ತುತನೆಂಬ ಪಾಪಿಯಾದ ದೊರೆಯೋರ್ವನಿದ್ದನು. ಅವನು ರಾಜ್ಯವಾಳುತ್ತಿರಲು ದಾನ, ಜ್ಞಾನ, ಧ್ಯಾನ, ಸತ್ಕರ್ಮಗಳಿರಲಿಲ್ಲ. ಪ್ರಜೆಗಳಿಗೆ ಸೌಖ್ಯವಿರಲಿಲ್ಲ. ಅವನು ಯಾವಾಗಲೂ ಪರರ ಪತ್ನಿಯರಲ್ಲಿ ಪ್ರೀತಿಯುಳ್ಳವನೂ, ಅತ್ಯಂತವಾಗಿ ಶಿಕ್ಷಿಸುವವನೂ, ನ್ಯಾಯದಿಂದಾಗಲಿ, ಅನ್ಯಾಯದಿಂದಾಗಲಿ ಧನವನ್ನು ಗಳಿಸುವನೂ, ನಿರ್ದುಷ್ಟರಾದ ಪ್ರಜೆಗಳನ್ನು ಕೊಲ್ಲಿಸುವವನೂ ಆಗಿದ್ದನು.

ತತೋ ವಾರ್ಧಕ್ಯಮಾಪನ್ನಸ್ತಥಾಪಿ ನ ಶಮಂ ಗತಃ ।
ಕಸ್ಯಚಿತ್ತ್ವಥ ಕಾಲಸ್ಯ ಪಿತೃಭಿಃ ಪ್ರತಿಬೋಧಿತಃ ।
ತಂ ಪ್ರಸುಪ್ತಂ ಸಮಾಸಾದ್ಯ ನಾರಕೇಯೈಃ ಸುದುಃಖಿತೈಃ ॥ ೬ ॥

ಪಿತರ ಊಚುಃ :—

ವಯಂ ಶುದ್ಧಸಮಾಚಾರಾ ನಿತ್ಯಂ ಧರ್ಮಪರಾಯಣಾಃ ।
ದಾನಯಜ್ಞತಪಃಶೀಲಾಃ ಸ್ವದಾರನಿರತಾಸ್ತಥಾ ॥ ೭ ॥
ಸ್ವಕರ್ಮಭಿಃ ಕುಲಾಂಗಾರ ದಿವಂ ಪ್ರಾಪ್ತಾ ಯಥಾರ್ಹತಃ ।
ಕುಪುತ್ರಂ ತ್ವಾಂ ಸಮಾಸಾದ್ಯ ನರಕಂ ಸಮುಪಸ್ಥಿತಾಃ ।
ತಸ್ಮಾದುದ್ಧರ ನಃ ಸರ್ವಾನ್ಕೃತ್ವಾ ಕಿಂಚಿಚ್ಛುಭಾರ್ಜನಂ ॥ ೮ ॥
ಕರ್ಮಭಿಸ್ತವ ಪಾಪಾತ್ಮನ್ವಯಂ ನರಕಮಾಶ್ರಿತಾಃ ।
ನರಕಂ ದಶ ಯಾಸ್ಯಂತಿ ಭವಿಷ್ಯಾಶ್ಚ ತಥಾ ಭವಾನ್ ॥ ೯ ॥
ಏವಮುಕ್ತ್ವಾ ಚ ತೇ ಸರ್ವೇ ಪಿತರಸ್ತು ಸುದುಃಖಿತಾಃ ।
ಯಾತಾಶ್ಚ ನರಕಂ ಭೂಯಃ ಪ್ರಬುದ್ಧಃ ಸೋಽಪಿ ಪಾರ್ಥಿವಃ ॥ ೧೦ ॥
ತತೋ ದುಃಖಮನುಪ್ರಾಪ್ತಃ ಪಿತೃವಾಕ್ಯಾನಿ ಸಂಸ್ಮರನ್ ।
ರುರೋದ ಪ್ರಾತರುತ್ಥಾಯ ತಂ ಭಾರ್ಯಾ ಪ್ರತ್ಯಭಾಷತ ॥ ೧೧ ॥

---

೬. ಅವನು ಮುಪ್ಪನ್ನು ಹೊಂದಿದರೂ ಶಾಂತನಾಗಲಿಲ್ಲ. ಒಂದಾನೊಂದು ದಿನ ಅವನು ನಿದ್ರಿಸುತ್ತಿರಲು ನರಕ ದುಃಖವನ್ನನುಭವಿಸುತ್ತಿರುವ ಅವನ ಪಿತೃಗಳು ಬಂದು ಎಚ್ಚರಿಸಿದರು.

೭–೮. "ಕುಲಕ್ಕೆ ಬೆಂಕಿಯಂತಿರುವ ಪುತ್ರನೆ! ಶುದ್ಧವಾದ ನಡತೆಯುಳ್ಳವರೂ, ಯಾವಾಗಲೂ ಧರ್ಮತತ್ಪರರೂ, ದಾನ, ಯಜ್ಞ, ತಪಶ್ಶೀಲರೂ, ಸ್ವಪತ್ನೀರತರೂ ಆದ ನಾವು ನಮ್ಮ ಕರ್ಮಗಳನ್ನನುಸರಿಸಿ ಸ್ವರ್ಗವನ್ನು ಹೊಂದಿದೆವು. ಈಗ ಕುಪುತ್ರನಾದ ನಿನ್ನನ್ನು ಪಡೆದಿರುವುದರಿಂದ ನರಕವನ್ನು ಹೊಂದಿದೆವು. ಆದ್ದರಿಂದ ನೀನು ಸ್ವಲ್ಪ ಶುಭಕಾರ್ಯವನ್ನೆಸಗಿ ನಮ್ಮನ್ನೆಲ್ಲ ಉದ್ಧರಿಸು.

೯. ನಿನ್ನ ಪಾಪಕರ್ಮದಿಂದ ನಾವು ನರಕವಾಸಿಗಳಾದೆವು. ಹಾಗೆಯೇ ಹಿಂದಿನ ಮತ್ತು ಮುಂದಿನ ಹತ್ತುಮಂದಿ ಪಿತೃಗಳೂ, ನೀನೂ ನರಕಕ್ಕೆ ಹೋಗುವಿರಿ".

೧೦ ಆ ಪಿತೃಗಳೆಲ್ಲ ಹೀಗೆ ನುಡಿದು ಅತಿಶಯ ದುಃಖದಿಂದ ಮರಳಿ ನರಕಕ್ಕೆ ತೆರಳಿದರು. ಆ ದೊರೆಯೂ ಎಚ್ಚರಗೊಂಡನು.

೧೧, ಅನಂತರ ಅವನು ಬೆಳಗ್ಗೆ ಎದ್ದು ಪಿತೃಗಳ ಮಾತುಗಳನ್ನು ಸ್ಮರಿಸುತ್ತ ಅತ್ತನು. ಆಗ ಅವನ ಪತ್ನಿಯು ಹೀಗೆ ಪ್ರಶ್ನಿಸಿದಳು.

ಇಂದುಮತ್ಯುವಾಚ :—

ಕಿಮರ್ಥಂ ರಾಜಶಾರ್ದೂಲ ತ್ವಂ ರೋದಿಷಿ ಮಹಾಸ್ವನಂ ।
ಕಥಂ ತೇ ಕುಶಲಂ ರಾಜ್ಯೇ ಶರೀರೇ ವಾ ಪುರೇಽಥವಾ ॥ ೧೨ ॥

ರಾಜೋವಾಚ :—

ಮಯಾ ದೃಷ್ಟೋಽದ್ಯ ಸ್ವಪ್ನಾಂತೇ ಪಿತಾಹ್ಯಥ ಪಿತಾಮಹಃ ।
ಅಪಶ್ಯಂ ದುಃಖಿತಾನ್ದೇವಿ ತಾಭ್ಯಾಮಥಾಗ್ರಜಾನ್ಪಿತ್ರ್ಯಾನ್ ॥ ೧೩ ॥
ಉಪಾಲಬ್ಧೋಽಸ್ಮಿ ತೈಃ ಸರ್ವೈಸ್ತ್ವಕರ್ಮಭಿರೀದೃಶೈಃ ।
ದಾರುಣೇ ನರಕೇ ಪ್ರಾಪ್ತಾ ಅಧರ್ಮಾದಿವಿಚೇಷ್ಟಿತೈಃ ॥ ೧೪ ॥
ಅಥಾನ್ಯೇ ದಶ ಯಾಸ್ಯಂತಿ ಭವಿಷ್ಯಾಶ್ಚ ಭವಾನಪಿ ।
ತಸ್ಮಾತ್ಕೃತ್ವಾ ಶುಭಂ ಕರ್ಮ ದುರ್ಗತೇಶ್ಚೋದ್ಧಾರಯಸ್ವ ನಃ ॥ ೧೫ ॥
ಏವಮುಕ್ತಃ ಪ್ರಬುದ್ಧೋಽಹಂ ಪಿತೃಭಿರ್ವರವರ್ಣಿನಿ ।
ತೇನಾಹಂ ದುಃಖಮಾಪನ್ನಸ್ತದ್ವಾಕ್ಯಂ ಹೃದಿ ಸಂಸ್ಮರನ್ ॥ ೧೬ ॥

ಇಂದುಮತ್ಯುವಾಚ :—

ಸತ್ಯಮೇತನ್ಮಹಾರಾಜ ಯದುಕ್ತೋಽಸಿ ಪಿತಾಮಹೈಃ ।
ನ ತ್ವಯಾ ಸುಕೃತಂ ಕರ್ಮ ಸಂಸ್ಮರೇಽಹಂ ಕೃತಂ ಪುರಾ ॥ ೧೭ ॥

---

೧೨. ಇಂದುಮತಿಯು ಹೇಳುತ್ತಾಳೆ :—ನೃಪೋತ್ತಮ! ನೀನು ಏತಕ್ಕೆ ಹೀಗೆ ಗಟ್ಟಿಯಾಗಿ ಅಳುತ್ತಿರುವೆ · ನಿನ್ನ ರಾಜ್ಯ ಶರೀರ, ಅಥವಾ ಪಟ್ಟಣಗಳಲ್ಲೆಲ್ಲ ಸೌಖ್ಯವಷ್ಟೆ?

೧೩. ರಾಜನು ಹೇಳುತ್ತಾನೆ :—ದೇವಿ! ನಾನು ಈಗ ಸ್ವಪ್ನದಲ್ಲಿ ದುಃಖಗೊಂಡಿರುವ ಪಿತೃ ಪಿತಾಮಹರನ್ನೂ, ಅವರ ಪಿತೃ ಪಿತಾಮಹರೇ ಮೊದಲಾದವರನ್ನೂ ನೋಡಿದೆನು.

೧೪. ಅವರೆಲ್ಲ ನನ್ನನ್ನು ಹೀಗೆ ನಿಂದಿಸಿದರು. "ನಿನ್ನೀ ಅಧರ್ಮಕಾರ್ಯಗಳಿಂದ ನಾವು ದಾರುಣ ನರಕವನ್ನು ಸೇರಿರುವೆವು.

೧೫. ಹಿಂದಿನ ಮತ್ತು ಮುಂದಿನ ಹತ್ತು ಮಂದಿ ಪಿತೃಗಳೂ, ನೀನೂ ನರಕವನ್ನು ಹೊಂದುವಿರಿ. ಆದ್ದರಿಂದ ನೀನು ಶುಭಕರ್ಮವನ್ನಾಚರಿಸಿ ನಮ್ಮನ್ನು ನರಕದಿಂದ ಉದ್ಧರಿಸು".

೧೬. ಆ ಪಿತೃಗಳು ಹೀಗೆನ್ನಲು ನಾನು ಎಚ್ಚರಗೊಂಡು ಅವರ ಮಾತನ್ನು ನೆನೆಯುತ್ತ ದುಃಖಗೊಂಡಿದ್ದೇನೆ.

೧೭. ಇಂದುಮತಿಯು ಹೇಳುತ್ತಾಳೆ :—ಮಹಾರಾಜ! ಪಿತಾಮಹರು ಹೇಳಿರುವ ಈ ಮಾತು ನಿಜ. ನೀನು ಹಿಂದೆ ಪುಣ್ಯಕರ್ಮವನ್ನು ಮಾಡಲಿಲ್ಲ. ಅದನ್ನು ನಾನು ಸ್ಮರಿಸುವುದಿಲ್ಲ.

ಯಥಾ ಸುಪುತ್ರಮಾಸಾದ್ಯ ತರಂತಿ ಪಿತರೋ ನೃಪ ।
ಕುಪುತ್ರೇಣ ತಥಾ ಯಾಂತಿ ನರಕಂ ನಾತ್ರ ಸಂಶಯಃ ॥ ೧೮ ॥
ಸ ತ್ವಮಾಹೂಯ ವಿಪ್ರೇಂದ್ರಾನ್ಧರ್ಮಶಾಸ್ತ್ರವಿಚಕ್ಷಣಾನ್ ।
ಪೃಷ್ಟ್ವಾ ತಾನ್ಕುರು ಯಚ್ಛ್ರೇಯಃ ಪಿತೄಣಾಮಾತ್ಮನಾ ಸಹ ॥ ೧೯ ॥
ಆನಯಾಮಾಸ ರಾಜಾಽಸೌ ತತೋ ವಿಪ್ರಾನನೇಕಶಃ ।
ವೇದವೇದಾಂಗತತ್ತ್ವಜ್ಞಾನ್ಧರ್ಮಶಾಸ್ತ್ರವಿಚಕ್ಷಣಾನ್ ।
ಉವಾಚ ವಿನಯೋಪೇತೋ ಭಾರ್ಯಯಾ ಸಹಿತೋ ಹಿತಾನ್ ॥ ೨೦ ॥

ರಾಜೋವಾಚ :—

ಕರ್ಮಣಾ ಕೇನ ಪಿತರೋ ನಿರಯಸ್ಥಾ ದ್ವಿಜೋತ್ತಮಾಃ ।
ಸ್ವರ್ಗಂ ಯಾಂತಿ ಸುಪುತ್ರೇಣ ತಾರಿತಾಃ ಪ್ರೋಚ್ಯತಾಂ ಸ್ಫುಟಂ ॥ ೨೧ ॥

ಬ್ರಾಹ್ಮಣಾ ಊಚುಃ :—

ಪಿತೃಮೇಧೇನ ರಾಜೇಂದ್ರ ಕೃತೇನ ವಿಧಿಪೂರ್ವಕಂ ।
ನಿರಯಸ್ಥಾ ದಿವಂ ಯಾಂತಿ ಯದ್ಯಪಿ ಸ್ಯುಃ ಸುಪಾಪಿನಃ ॥ ೨೨ ॥

ರಾಜೋವಾಚ :—

ದೀಕ್ಷಯಂತು ದ್ವಿಜಾಃ ಸರ್ವೇ ತದರ್ಥಂ ಮಾಂ ಧೃತವ್ರತಂ ।
ಯತ್ಕಿಂಚಿದತ್ರ ಕರ್ತವ್ಯಂ ಪ್ರೋಚ್ಯತಾಮಖಿಲಂ ಹಿ ತತ್ ॥ ೨೩ ॥

---

೧೮. ದೊರೆಯೆ ! ಪಿತೃಗಳು ಸತ್ಪುತ್ರರನ್ನು ಪಡೆದು ಹೇಗೆ ನರಕವನ್ನು ದಾಟು ವರೊ ; ಹಾಗೆಯೇ ಕುಪುತ್ರನಿಂದ ನರಕವನ್ನೂ ಹೊಂದುವರು.

೧೯ ಆದ್ದರಿಂದ ನೀನು ಧರ್ಮಶಾಸ್ತ್ರ ನಿಪುಣರಾದ ಬ್ರಾಹ್ಮಣರನ್ನು ಕರೆಯಿಸಿ ಅವರನ್ನು ಕೇಳಿ ನಿನಗೂ ಪಿತೃಗಳಿಗೂ ಶ್ರೇಯಸ್ಸಾಗುವ ಕಾರ್ಯವನ್ನೆಸಗು.

೨೦. ಬಳಿಕ ರಾಜನು ವೇದ, ವೇದಾಂಗಗಳ ತತ್ತ್ವಗಳನ್ನರಿತವರೂ, ಧರ್ಮ ಶಾಸ್ತ್ರ ಕುಶಲರೂ ಆದ ಬಹುಮಂದಿ ಬ್ರಾಹ್ಮಣರನ್ನು ಕರೆಯಿಸಿ ವಿನಯದಿಂದ ಪತ್ನಿ ಯೊಡನೆ ಅವರನ್ನು ಕುರಿತು ಇಂತೆಂದನು.

೨೧. ರಾಜನು ಹೇಳುತ್ತಾನೆ :—ಬ್ರಾಹ್ಮಣೋತ್ತಮರೆ ! ನರಕದಲ್ಲಿರುವ ಪಿತೃ ಗಳು ಸುಪುತ್ರನ ಯಾವ ಕರ್ಮದಿಂದ ಉದ್ಧೃತರಾಗಿ ಸ್ವರ್ಗವನ್ನು ಸೇರುವರು ? ಸ್ಪಷ್ಟವಾಗಿ ಹೇಳಿರಿ.

೨೨. ಬ್ರಾಹ್ಮಣರು ಹೇಳುತ್ತಾರೆ :—ಮಹಾರಾಜ ! ನರಕದಲ್ಲಿರುವ ಪಿತೃಗಳು ಪಾಪಿಗಳಾದಾಗ್ಯೂ ವಿಧಿಯಂತೆಮಾಡಿದ ಪಿತೃಯಜ್ಞದಿಂದ ಸ್ವರ್ಗವನ್ನು ಹೊಂದುವರು.

೨೩. ರಾಜನು ಹೇಳುತ್ತಾನೆ :—ಬ್ರಾಹ್ಮಣರೆ! ನೀವೆಲ್ಲ ವ್ರತವನ್ನು ಧರಿಸಿರುವ ನನ್ನನ್ನು ದೀಕ್ಷೆಗೊಳಿಸಿರಿ. ನಾನು ಮಾಡಬೇಕಾದ್ದನ್ನೆಲ್ಲ ಹೇಳಿರಿ.

ತಥೋಕ್ತಾಸ್ತೇ ನೃಪೇಂದ್ರೇಣ ಬ್ರಾಹ್ಮಣಾಃ ಸತ್ಯವಾದಿನಃ ।
ಸಮಗ್ರಾಃ ಪ್ರಾರ್ಥಿವಂ ಪ್ರೋಚುರ್ಯುಕ್ತಂ ಯಜ್ಞಕರ್ಮಣಿ ॥ ೨೪ ॥
ದೀಕ್ಷಾ ಗ್ರಾಹ್ಯಾ ನೃಪಶ್ರೇಷ್ಠ ಪುರಶ್ಚರಣಮಾದಿತಃ ।
ಕೃತ್ವಾ ಕಾರ್ಯವಿಶುದ್ಧ್ಯರ್ಥಂ ತತಃ ಶ್ರೇಯಸ್ಕರೀ ಭವೇತ್ ॥ ೨೫ ॥
ಸ ತ್ವಂ ಪಾಪಸಮಾಚಾರೋ ಬಾಲ್ಯಾತ್ಪ್ರಭೃತಿ ಪಾರ್ಥಿವ ।
ಅಸಂಖ್ಯಂ ಪಾತಕಂ ತಸ್ಮಾತ್ತೀರ್ಥಯಾತ್ರಾಂ ಸಮಾಚರ ॥ ೨೬ ॥
ಸರ್ವತೀರ್ಥಾಭಿಷಿಕ್ತಸ್ತ್ವಂ ಯದಾಸ್ಯಾ ನೃಪಸತ್ತಮ ।
ಪ್ರಾಯಶ್ಚಿತ್ತೇನ ಯೋಗ್ಯಃ ಸ್ಯಾಸ್ತತೋ ಯಜ್ಞಸ್ಯ ನಾನ್ಯಥಾ ॥ ೨೭ ॥
ಪ್ರಭಾಸಾದೀನಿ ತೀರ್ಥಾನಿ ಯಾನಿ ಸಂತಿ ಧರಾತಲೇ ।
ಗಂತವ್ಯಂ ತೇಷು ಸರ್ವೇಷು ಸ್ನಾನಂ ಕುರು ಸಮಾಹಿತಃ ॥ ೨೮ ॥
ಮನಸಾ ಗಚ್ಛ ದುರ್ಗಾಣಿ ದದದ್ದಾನಮನುತ್ತಮಂ ।
ನಶ್ಯೇತ್ತೇನಾಶುಭಂ ಕಿಂಚಿದಪಿ ಬ್ರಹ್ಮವಧೋದ್ಭವಂ ।
ಯನ್ನ ಯಾತಿ ನೃಣಾಂ ರಾಜಂಸ್ತೀರ್ಥಸ್ನಾನಾದಿನಾ ಭುವಿ ॥ ೨೯ ॥

ಪುಲಸ್ತ್ಯ ಉವಾಚ :—

ವಿಪ್ರಾಣಾಂ ವಚನಂ ಶ್ರುತ್ವಾ ಸ ರಾಜಾ ಶ್ರದ್ಧಯಾನ್ವಿತಃ ।
ತೀರ್ಥಯಾತ್ರಾಪರೋ ಭೂತ್ವಾ ಪರಿಬಭ್ರಾಮ ಮೇದಿನೀಂ ॥ ೩೦ ॥

---

೨೪. ರಾಜನು ಹಾಗೆ ಹೇಳಲು ಸತ್ಯವಂತರಾದ ಸಕಲ ಬ್ರಾಹ್ಮಣರೂ ಯಜ್ಞಕರ್ಮಕ್ಕೆ ಉಕ್ತವಾದುದನ್ನು ಹೇಳಿದರು.

೨೫. ನೃಪೇಂದ್ರ ! ದೀಕ್ಷಾಬದ್ಧನಾಗಿ ಮೊದಲಿನಿಂದ ಕಾಯಶುದ್ಧಿಗಾಗಿ ಪುರಶ್ಚರಣ ಮಾಡಿದರೆ ಶ್ರೇಯಸ್ಸುಂಟಾಗುವುದು.

೨೬. ಬಾಲ್ಯ ಮೊದಲ್ಗೊಂಡು ಪಾಪ ನಡತೆಯುಳ್ಳ ನೀನು ಲೆಕ್ಕವಿಲ್ಲದಷ್ಟು ಪಾಪವನ್ನು ಮಾಡಿರುವೆ. ಆದ್ದರಿಂದ ತೀರ್ಥಯಾತ್ರೆಯನ್ನು ಮಾಡು.

೨೭. ನೀನು ಸಕಲ ತೀರ್ಥಗಳಲ್ಲಿಯೂ ಮಿಂದರೆ ಪ್ರಾಯಶ್ಚಿತ್ತದಿಂದ ಯಜ್ಞ ಮಾಡಲರ್ಹನಾಗುವೆ. ಹಾಗೆ ಮಾಡದಿದ್ದರೆ ಯೋಗ್ಯನಾಗಲಾರೆ.

೨೮. ಭೂಮಿಯಲ್ಲಿರುವ ಪ್ರಭಾಸಾದಿ ತೀರ್ಥಗಳಿಗೆ ಹೋಗಿ ಅವುಗಳಲ್ಲಿ ಸಾವಧಾನ ಮನಸ್ಸಿನಿಂದ ಸ್ನಾನಮಾಡು

೨೯. ದುರ್ಗಮವಾದ ತೀರ್ಥಗಳನ್ನು ಮನಸ್ಸಿನಿಂದ ಸ್ಮರಿಸಿ ಉತ್ತಮವಾದ ದಾನವನ್ನಿತ್ತರೆ ತೀರ್ಥಸ್ನಾನಾದಿಗಳಿಂದ ನೀಗದ ಬ್ರಾಹ್ಮಣ ವಧೆಯಿಂದುಂಟಾದ ಮಹಾ ಪಾಪವು ಸ್ವಲ್ಪವಾಗಿ ಪರಿಹಾರವಾದೀತು.

೩೦-೩೧. ಪುಲಸ್ತ್ಯನು ಹೇಳುತ್ತಾನೆ:—ಆ ದೊರೆಯು ಬ್ರಾಹ್ಮಣರ ಮಾತನ್ನು ಕೇಳಿ ಶ್ರದ್ಧೆಯಿಂದ ತೀರ್ಥಯಾತ್ರಾನಿರತ. ಮಿತಾಹಾರಿಯೂ. ಬಹಳವಾದಾನಗಿ ವನ್ನಿ

ನಿಯತೋ ನಿಯತಾಹಾರೋ ವದದ್ದಾನಾನಿ ಭೂರಿಶಃ ।
ರಾಜ್ಯೇ ಪುತ್ರಂ ಪ್ರತಿಷ್ಠಾಪ್ಯ ವಸುಂ ಸತ್ಯಪರಾಕ್ರಮಂ ॥ ೩೧ ॥
ಕಸ್ಯಚಿತ್ತ್ವಥ ಕಾಲಸ್ಯ ತೀರ್ಥಯಾತ್ರಾನುಷಂಗತಃ ।
ಯಾತೋಽಸೌ ನೃಪತಿಶ್ಚೈವ ಹ್ಯರ್ಬುದೇ ನಿರ್ಮಲೋದಕಂ ॥ ೩೨ ॥
ಸ ಸ್ನಾನಮಕರೋತ್ತತ್ರ ಶ್ರದ್ಧಾಪೂತೇನ ಚೇತಸಾ ।
ಸ್ನಾತಮಾತ್ರಸ್ಯ ತಸ್ಯಾಥ ತಸ್ಮಿನ್ನೇವ ಜಲಾಶಯೇ ॥ ೩೩ ॥
ವಿಮುಕ್ತಾಃ ಪಿತರೋ ರೌದ್ರಾನ್ನರಕಾತ್ಸುಪ್ರಹರ್ಷಿತಾಃ ।
ತತೋ ದಿವ್ಯವಿಮಾನಸ್ಥಾ ದಿವ್ಯಮಾಲ್ಯಾಂಬರಾನ್ವಿತಾಃ ॥ ೩೪ ॥
ತಮೂಚುಸ್ತಾರಿತಾಃ ಸರ್ವೇ ವಯಂ ಪುತ್ರ ತ್ವಯಾಽಧುನಾ ।
ತೀರ್ಥಸ್ಯಾಸ್ಯ ಪ್ರಭಾವೇಣ ಭವಿಷ್ಯಾಶ್ಚ ತಥಾ ದಶ ॥ ೩೫ ॥
ಆತ್ಮಾ ಚ ಪಾರ್ಥಿವಶ್ರೇಷ್ಠ ಸ್ನಾನಾಚ್ಚ ಜಲತರ್ಪಣಾತ್ ।
ಯಸ್ಮಾತ್ಕುಲಂ ತ್ವಯಾ ಪುತ್ರ ತೀರ್ಥೇಽಸ್ಮಿಂಸ್ತಾರಿತಂ ತತಃ ॥ ೩೬ ॥
ಕುಲಸಂತಾರಣಂ ನಾಮ ತೀರ್ಥಮೇತದ್ಭವಿಷ್ಯತಿ ।
ತಸ್ಮಾತ್ತ್ವಮಪಿ ರಾಜೇಂದ್ರ ಸಹಾಽಸ್ಮಾಭಿರ್ದಿವಂ ಪ್ರತಿ ।
ಆಗಚ್ಛಾನೇನ ದೇಹೇನ ತೀರ್ಥಸ್ಯಾಸ್ಯ ಪ್ರಭಾವತಃ ॥ ೩೭ ॥

---

ಯುವವನೂ ಆಗಿ ರಾಜ್ಯದಲ್ಲಿ ಪರಾಕ್ರಮಶಾಲಿಯಾದ ವಸುವೆಂಬ ತನಯನನ್ನು ಸ್ಥಾಪಿಸಿದನು.

೩೨. ಒಂದಾನೊಂದು ದಿನ ಅವನು ತೀರ್ಥಯಾತ್ರಾ ಸಂಬಂಧವಾಗಿ ಅರ್ಬುದದಲ್ಲಿರುವ ನಿರ್ಮಲೋದಕ ತೀರ್ಥಕ್ಕೆ ಹೋದನು.

೩೩–೩೭. ಅವನು ಅಲ್ಲಿ ಶ್ರದ್ಧೆಯುಳ್ಳ ಮನಸ್ಸಿನಿಂದ ಸ್ನಾನಮಾಡಲು ಅವನ ಪಿತೃಗಳು ಭಯಂಕರವಾದ ನರಕದಿಂದ ಮುಕ್ತರೂ, ಸಂತೋಷಗೊಂಡವರೂ, ದಿವ್ಯ ಮಾಲ್ಯಧಾರಿಗಳೂ ಆಗಿ ಅವರನ್ನು ಕುರಿತು. "ಮಗು ! ನೀನು ಈಗ ಇಲ್ಲಿ ಮಿಂದು ತರ್ಪಣ ಮಾಡಿದ್ದರಿಂದ ಈ ತೀರ್ಥದ ಪ್ರಭಾವದಿಂದ ನಮ್ಮನ್ನೂ ಹಿಂದಿನ ಮತ್ತು ಮುಂದಿನ ಹತ್ತು ಮಂದಿ ಪಿತೃಗಳನ್ನೂ, ನಿನ್ನನ್ನೂ ಉದ್ಧಾರ ಮಾಡಿರುವೆ. ಮಗು ! ನೀನು ಈ ತೀರ್ಥದಲ್ಲಿ ಕುಲವನ್ನು ಉದ್ಧಾರ ಮಾಡಿದ್ದರಿಂದ ಇದು ಕುಲಸಂತಾರಣವೆಂದು ಪ್ರಸಿದ್ಧವಾಗುವುದು. ಆದ್ದರಿಂದ ದೊರೆಯೆ! ನೀನು ಈಗ ಈ ದೇಹದಿಂದಲೇ ಈ ತೀರ್ಥದ ಪ್ರಭಾವದಿಂದ ನನ್ನೊಡನೆ ಸ್ವರ್ಗಕ್ಕೆ ಬಾ" ಎಂದರು.

ಪುಲಸ್ತ್ಯ ಉವಾಚ :
ಏವಮುಕ್ತಃ ಸ ರಾಜೇಂದ್ರೋ ದಿವ್ಯಕಾಂತಿವಪುಸ್ತದಾ ।
ತಂ ವಿಮಾನಮಥಾರುಹ್ಯ ಗತಃ ಸ್ವರ್ಗಂ ಚ ತೈಃ ಸಹ ॥ ೩೮ ॥
ಏಷ ಪ್ರಭಾವೋ ರಾಜರ್ಷೇ ಕುಲಸಂತಾರಣಸ್ಯ ಚ ।
ಮಯಾ ತೇ ವರ್ಣಿತಃ ಸಮ್ಯಗ್ಭೂಯಃ ಕಿಂ ಪರಿಪೃಚ್ಛಸಿ ॥ ೩೯ ॥
ಯಯಾತಿರುವಾಚ :—
ಸ ಕಿಂಪ್ರಭಾವೋ ರಾಜಾ ಸ ತಥಾ ಪಾಪಸಮನ್ವಿತಃ ।
ಸ್ವದೇಹೇನ ಗತಃ ಸ್ವರ್ಗಮೇತನ್ಮೇ ಕೌತುಕಂ ಮಹತ್ ॥ ೪೦ ॥
ಪುಲಸ್ತ್ಯ ಉವಾಚ :—
ರಾಕಾಸೋಮವ್ಯತೀಪಾತಸಮಕಾಲೇ ನೃಪೋತ್ತಮ ।
ಸ ಸ್ನಾತೋ ಯತ್ರ ಭೂಪಾಲಸ್ತನ್ಮಹಚ್ಛ್ರೇಯಸೇ ಪರಂ ॥ ೪೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕುಲಸಂತಾರಣತೀರ್ಥಮಾಹಾತ್ಮ್ಯವರ್ಣನಂ ನಾಮ
ಅಷ್ಟಚತ್ವಾರಿಂಶೋಽಧ್ಯಾಯಃ

---

೩೮. ಪುಲಸ್ತ್ಯನು ಹೇಳುತ್ತಾನೆ :—ಅವರು ಹೀಗೆನ್ನಲು ಆ ದೊರೆಯು ದಿವ್ಯಕಾಂತಿಯುಳ್ಳ ದೇಹವನ್ನು ಧರಿಸಿ ಅವರೊಡನೆ ಆ ವಿಮಾನವನ್ನೇರಿ ಸ್ವರ್ಗಕ್ಕೆ ತೆರಳಿದನು.

೩೯. ದೊರೆಯೆ ! ಈ ಕುಲಸಂತಾರಣ ತೀರ್ಥಮಾಹಾತ್ಮ್ಯವನ್ನು ನಾನು ನಿನಗೆ ಹೇಳಿರುವೆನು. ಮರಳಿ ಏನನ್ನು ಕೇಳಿರುವೆ ?

೪೦. ಯಯಾತಿಯು ಹೇಳುತ್ತಾನೆ :—ಪಾಪವನ್ನು ಆಚರಿಸಿದ ಆ ರಾಜನು ಸದೇಹನಾಗಿ ಸ್ವರ್ಗಕ್ಕೆ ತೆರಳಿರುವನಷ್ಟೆ. ಅವನು ಎಂತಹ ಮಾಹಾತ್ಮ್ಯಯುಳ್ಳವನು ? ಇದನ್ನು ಕೇಳಲು ನನಗೆ ಅತ್ಯಂತ ಕೌತೂಹಲವುಂಟಾಗಿದೆ.

೪೧. ಪುಲಸ್ತ್ಯನು ಹೇಳುತ್ತಾನೆ :—ದೊರೆಯೆ ! ಅವನು ಕುಲಸಂತಾರಣ ತೀರ್ಥದಲ್ಲಿ ಹುಣ್ಣಿಮೆ ವ್ಯತೀಪಾತಗಳು ಕೂಡಿದ ದಿನ ಮಿಂದುದರಿಂದ ಆ ಮಹಾ ಶ್ರೇಯಸ್ಸುಂಟಾಯಿತು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಕುಲಸಂತಾರಣತೀರ್ಥಮಾಹಾತ್ಮ್ಯವರ್ಣನವೆಂಬ
ನಲವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಏಕೋನಪಂಚಾಶತ್ತಮೋಽಧ್ಯಾಯಃ

## ರಾಮತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ರಾಮತೀರ್ಥಂ ತತೋ ಗಚ್ಛೇತ್ಪುಣ್ಯಮೃಷಿನಿಷೇವಿತಂ ।
ತತ್ರ ಸ್ನಾತಸ್ಯ ಮರ್ತ್ಯಸ್ಯ ಜಾಯತೇ ಪಾಪಸಂಕ್ಷಯಃ ॥ ೧ ॥
ಪಿತೄಣಾಂ ಚ ಪುರಾ ತುಷ್ಟಿರ್ಯಾವದಾಭೂತಸಂಪ್ಲವಂ ।
ಪುರಾಸೀದ್ಭಾರ್ಗವೋ ರಾಮಃ ಸರ್ವಶಸ್ತ್ರಭೃತಾಂ ವರಃ ॥ ೨ ॥
ತೇನ ಪೂರ್ವಂ ತಪಸ್ತಪ್ತಂ ಶತ್ರೂಣಾಮಿಚ್ಛತಾ ಕ್ಷಯಂ ।
ತತಃ ಪಾಶುಪತಂ ನಾಮ ತಸ್ಯಾಸ್ತ್ರಂ ಪರಮಂ ದದೌ ॥ ೩ ॥
ತತಸ್ತುಷ್ಟೋ ಮಹಾದೇವೋ ಗತೇ ವರ್ಷಶತತ್ರಯೇ ।
ಅಬ್ರವೀದ್ವರದೋಽಸ್ಮೀತಿ ಸ ವವ್ರೇ ಶತ್ರುಸಂಕ್ಷಯಂ ॥ ೪ ॥
ತತಃ ಪಾಶುಪತಂ ನಾಮ ತಸ್ಯಾಸ್ತ್ರಂ ಪರಮಂ ದದೌ ।
ಸ್ಮರಣೇನಾಪಿ ಶತ್ರೂಣಾಂ ಯಸ್ಯ ಸಂಜಾಯತೇ ಕ್ಷಯಃ ॥ ೫ ॥

---

ಕನ್ನಡದ ಅನುವಾದ

## ರಾಮತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ತರುವಾಯ ಪುಣ್ಯಕರವೂ, ಋಷಿಗಳಿಂದ ಸೇವಿಸಲ್ಪಟ್ಟುದೂ, ಆದ ರಾಮತೀರ್ಥಕ್ಕೆ ಹೋಗಬೇಕು. ಅಲ್ಲಿ ಮಿಂದ ಮಾನವನ ಪಾಪವು ಪರಿಹಾರವಾಗುವುದು.

೨–೪. ಪಿತೃಗಳೂ ಪ್ರಳಯಕಾಲದವರೆಗೆ ತೃಪ್ತಿಗೊಳ್ಳುವರು. ಹಿಂದೆ ಸಕಲ ಧನುರ್ಧಾರಿಗಳಲ್ಲಿ ಶ್ರೇಷ್ಠನಾದ ಭಾರ್ಗವರಾಮನಿದ್ದನು. ಅವನು ಶತ್ರುಗಳನ್ನು ನಾಶಗೊಳಿಸಲು ಶಂಕರನನ್ನು ಕುರಿತು ತಪಸ್ಸನ್ನು ಮಾಡಿದನು. ಅದರಿಂದ ಮುನ್ನೂರು ವರ್ಷಗಳ ತರುವಾಯ ಒಲಿದ ಶಂಕರನು ವರವನ್ನು ಕೊಡುವೆನು ಎಂದನು. ಆ ಭಾರ್ಗವ ರಾಮನು ಶತ್ರು ನಾಶವನ್ನು ವರಿಸಿದನು.

೫. ತರುವಾಯ ಮಹೇಶ್ವರನು ಅವನಿಗೆ ಸ್ಮರಣಮಾತ್ರದಿಂದ ಶತ್ರುಗಳನ್ನು ನಾಶಗೊಳಿಸುವ ಪಾಶುಪತವೆಂಬ ಅಸ್ತ್ರವನ್ನಿತ್ತನು.

ಅಬ್ರವೀದ್ವಚನಂ ಚಾಪಿ ಪ್ರಹಸ್ಯ ವೃಷಭಧ್ವಜಃ ।
ಜಾಮದಗ್ನ್ಯ ಮಹಾಬಾಹೋ ಶೃಣು ಮೇ ಪರಮಂ ವಚಃ ॥ ೬ ॥
ಅಸ್ತ್ರೇಣಾನೇನ ಯುಕ್ತಸ್ತ್ವಮಜೇಯಃ ಸರ್ವದೇಹಿನಾಂ ।
ಭವಿಷ್ಯಸಿ ನ ಸಂದೇಹೋ ಮತ್ಪ್ರಸಾದಾದ್ಭೃಗೂದ್ವಹ ॥ ೭ ॥
ಏತಜ್ಜಲಾಶಯಂ ಪುಣ್ಯಂ ತ್ರೈಲೋಕ್ಯೇ ಸಚರಾಚರೇ ।
ರಾಮತೀರ್ಥಮಿತಿ ಖ್ಯಾತಂ ಮತ್ಪ್ರಸಾದಾದ್ಭವಿಷ್ಯತಿ ॥ ೮ ॥
ಯೇಽತ್ರ ಶ್ರಾದ್ಧಂ ಕರಿಷ್ಯಂತಿ ಪೌರ್ಣಮಾಸ್ಯಾಂ ಸಮಾಹಿತಾಃ ।
ಸಂಪ್ರಾಪ್ತೇ ಕಾರ್ತಿಕೇ ಮಾಸಿ ಕೃತ್ತಿಕಾಯೋಗಸಂಯುತೇ ॥ ೯ ॥
ಪಿತೃಮೇಧಫಲಂ ಶೇಷಾಮಶೇಷಂ ಚ ಭವಿಷ್ಯತಿ ।
ತಥಾ ಶತ್ರುಕ್ಷಯೋ ರಾಜನ್ವಾಸಃ ಸ್ವರ್ಗೇಷು ಚಾಕ್ಷಯಃ ॥ ೧೦ ॥

ಪುಲಸ್ತ್ಯ ಉವಾಚ :—

ಏವಮುಕ್ತ್ವಾ ಮಹಾದೇವಸ್ತತಶ್ಚಾದರ್ಶನಂ ಗತಃ ।
ರಾಮೋಽಪ್ಯಸೂದಯತ್ಕ್ಷತ್ರಂ ಪಿತೃದುಃಖೇನ ದುಖಿತಃ ॥ ೧೧ ॥
ತ್ರಿಃಸಪ್ತ ತರ್ಪಯಾಮಾಸ ಪಿತ್ರ್ಯಾಂಸತ್ರ ಪ್ರಹರ್ಷಿತಃ ।
ಜಮದಗ್ನೌ ಮೃತೇ ತೇನ ಪ್ರತಿಜ್ಞಾತಂ ಮಹಾತ್ಮನಾ ॥ ೧೨ ॥

---

೬. ಮತ್ತು ನಕ್ಕು ಇಂತೆಂದನು. "ಪರಾಕ್ರಮಶಾಲಿಯಾದ ಜಾಮದಗ್ನ್ಯ ! ನೀನು ನನ್ನ ಉತ್ತಮವಾದ ಮಾತನ್ನು ಕೇಳು.

೭. ಈ ಅಸ್ತ್ರದಿಂದ ಸಹಿತನಾದ ನಿನ್ನನ್ನು ನನ್ನ ಅನುಗ್ರಹದಿಂದ ಯಾರೂ ಜಯಿಸಲಾರರು.

೮. ನನ್ನ ಅನುಗ್ರಹದಿಂದ ಪುಣ್ಯಕರವಾದ ಈ ಕೊಳವು ಮೂರು ಲೋಕಗಳಲ್ಲಿ ರಾಮತೀರ್ಥವೆಂದು ಪ್ರಸಿದ್ಧವಾಗುವುದು.

೯—೧೦. ಕೃತ್ತಿಕಾ ನಕ್ಷತ್ರದಿಂದ ಕೂಡಿದ ಕಾರ್ತಿಕ ಶುದ್ಧ ಪೂರ್ಣಿಮಾ ದಿನ ಇಲ್ಲಿ ಸಾವಧಾನ ಮನಸ್ಸಿನಿಂದ ಶ್ರಾದ್ಧಗೈಯ್ಯುವವರಿಗೆ ಸಂಪೂರ್ಣವಾದ ಪಿತೃಮೇಧ ಫಲವು ಲಭಿಸುವುದು. ಹಾಗೆಯೇ ಶತ್ರುನಾಶವೂ ಆಗುವುದು. ಸ್ವರ್ಗದಲ್ಲಿ ಶಾಶ್ವತ ವಾಸವೂ ದೊರೆಯುವುದು".

೧೧—೧೫. ಮಹಾದೇವನು ಹೀಗೆ ನುಡಿದು ಅದೃಶ್ಯನಾದನು. ಪರಶುರಾಮನೂ ತಂದೆಯ ವಧೆಯಿಂದ ದುಃಖಿತನಾಗಿ ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಸಂತೋಷ ದಿಂದ ಪಿತೃಗಳಿಗೆ ತರ್ಪಣಮಾಡಿದನು. ಜಮದಗ್ನಿಯು ಮೃತನಾಗಲು ಮಹಾತ್ಮ ನಾದ ರಾಮನು ತಾಯಿಯ ಶರೀರದಲ್ಲಿರುವ ಇಪ್ಪತ್ತೊಂದು ಘಾಯಗಳನ್ನೂ ಆಯುಧ ಗಳ ಸಮೂಹವನ್ನೂ, ನೋಡಿ ಬ್ರಾಹ್ಮಣರ ಸಭೆಯಲ್ಲಿ ಕ್ಷತ್ರಿಯರು ಮುನಿಯಾದ

ದೃಷ್ಟ್ವಾ ಮಾತುಃ ಕ್ಷತಾನ್ಯಂಗೇ ತ್ರಿಃಸಪ್ತ ಮನುಜಾಧಿಪ ।
ಶಸ್ತ್ರಜಾತಾನಿ ವಿಪ್ರಾಣಾಂ ಸಮಾಜೇ ಸಮುಪಸ್ಥಿತೇ ॥ ೧೩ ॥
ಪಿತಾ ಮೇ ನಿಹತೋ ಯಸ್ಮಾತ್ಕ್ಷತ್ರಿಯೈಸ್ತಾಪಸೋ ದ್ವಿಜಃ ।
ಅಯುಧ್ಯಮಾನ ಏವಾಥ ತಸ್ಮಾತ್ಕೃತ್ವಾ ತ್ರಿಸಪ್ತ ವೈ ॥ ೧೪ ॥
ಕ್ಷತ್ರಹೀನಾಮಹಂ ಪೃಥ್ವೀಂ ಪ್ರದಾಸ್ಯೇ ಸಲಿಲಂ ಪಿತುಃ ।
ತತ್ಸರ್ವಂ ತಸ್ಯ ಸಂಜಾತಂ ತೀರ್ಥಮಾಹಾತ್ಮ್ಯತೋ ನೃಪ ॥ ೧೫ ॥
ತಸ್ಮಾತ್ಸರ್ವಪ್ರಯತ್ನೇನ ಶ್ರಾದ್ಧಂ ತತ್ರ ಸಮಾಚರೇತ್ ।
ಕ್ಷತ್ರಿಯಶ್ಚ ವಿಶೇಷೇಣ ಯ ಇಚ್ಛೇಚ್ಛತ್ರುಸಂಕ್ಷಯಂ ॥ ೧೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ರಾಮತೀರ್ಥಮಾಹಾತ್ಮ್ಯವರ್ಣನಂ ನಾಮ
ಏಕೋನಪಂಚಾಶತ್ತಮೋಽಧ್ಯಾಯಃ

---

ನನ್ನ ತಂದೆಯನ್ನು ವಧಿಸಿದ್ದರಿಂದ ನಾನು ಯುದ್ಧಮಾಡದೆ ಈ ಭೂಮಿಯನ್ನು ಇಪ್ಪತ್ತೊಂದು ಸಾರಿ ಕ್ಷತ್ರಿಯರಿಲ್ಲದನ್ನಾಗಿಸಿ ತಂದೆಗೆ ತರ್ಪಣಗೈಯ್ಯುವೆನು ಎಂದು ಪ್ರತಿಜ್ಞೆ ಮಾಡಿದ್ದನು ದೊರೆಯೆ! ಅದೆಲ್ಲಆ ತೀರ್ಥಮಾಹಾತ್ಮ್ಯದಿಂದ ಆವನಿಗೆ ಕೈಗೂಡಿತು.

೧೬. ಆದ್ದರಿಂದ ಅಲ್ಲಿ ಶ್ರಾದ್ಧಮಾಡಬೇಕು. ಶತ್ರುನಾಶವನ್ನು ಬಯಸುವ ಕ್ಷತ್ರಿಯನು ವಿಶೇಷವಾಗಿ ಶ್ರಾದ್ಧಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ರಾಮತೀರ್ಥಮಾಹಾತ್ಮ್ಯವರ್ಣನವೆಂಬ
ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚಾಶತ್ತಮೋಽಧ್ಯಾಯಃ

### ಕೋಟಿತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—
ಕೋಟಿತೀರ್ಥಂ ತತೋ ಗಚ್ಛೇತ್ಸರ್ವಪಾತಕನಾಶನಂ ।
ತೀರ್ಥಾನಾಂ ಯತ್ರ ಸಂಜಾತಃ ಕೋಟಿಃ ಪಾರ್ಥಿವ ಹೇಲಯಾ ॥ ೧ ॥
ಯದಾ ಸ್ಯಾತ್ಕಲಿಕಾಲಸ್ತು ರೌದ್ರೋ ರಾಜನ್ಮಹೀತಲೇ ।
ಮ್ಲೇಚ್ಛಭೂತಾ ಜನಾಃ ಸರ್ವೇ ತತ್ಸ್ಪರ್ಶಾತ್ತೀರ್ಥವಿಪ್ಲವಃ ॥ ೨ ॥
ತಿಸ್ರಃ ಕೋಟ್ಯೋಽರ್ಧಕೋಟಿಶ್ಚ ತೀರ್ಥಾನಾಂ ಭೂಮಿವಾಸಿನಾಂ ।
ತೇಷಾಂ ಕೋಟಿಸ್ತತೋಽವಾತ್ಸೀತ್ಪರ್ವತೇಽರ್ಬುದಸಂಜ್ಞಕೇ ॥ ೩ ॥
ಪುಷ್ಕರೇ ಚ ತಥಾ ಕೋಟಿಃ ಕುರುಕ್ಷೇತ್ರೇ ಚ ಪಾರ್ಥಿವ ।
ವಾರಾಣಸ್ಯಾಮರ್ಧಕೋಟಿಃ ಸ್ತುತಾ ದೇವೈಃ ಸವಾಸವೈಃ ।
ರಾಜನ್ನೇತಾನಿ ರಕ್ಷಂತಿ ಸರ್ವೇ ದೇವಾಃ ಸವಾಸವಾಃ ॥ ೪ ॥

---

### ಕನ್ನಡದ ಅನುವಾದ

### ಕೋಟಿತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಸಕಲ ಪಾಪಗಳನ್ನು ಪರಿಹರಿಸುವ ಕೋಟಿತೀರ್ಥದೆಡೆಗೆ ಹೋಗಬೇಕು. ಅಲ್ಲಿ ಅನಾಯಾಸವಾಗಿ ಕೋಟಿತೀರ್ಥಗಳು ಉಂಟಾಗಿರುವುವು.

೨-೩. ದೊರೆಯೆ! ಪ್ರಪಂಚದಲ್ಲಿ ಭೀಕರವಾದ ಕಲಿಯುಗವು ಸಂಭವಿಸಿ ಜನರೆಲ್ಲ ಮ್ಲೇಚ್ಛರಾಗಲು ಅವರ ಸ್ಪರ್ಶದಿಂದ ತೀರ್ಥಗಳು ಕೆಡುತ್ತಿರಲು ಭೂಮಿಯಲ್ಲಿರುವ ಮೂರುವರೆ ಕೋಟಿ ತೀರ್ಥಗಳಲ್ಲಿ ಒಂದುಕೋಟಿ ತೀರ್ಥಗಳು ಅರ್ಬುದ ಪರ್ವತದಲ್ಲಿ ನೆಲೆಸಿದುವು.

೪. ಹಾಗೆಯೇ ಪುಷ್ಕರ ಕ್ಷೇತ್ರದಲ್ಲಿ ಒಂದುಕೋಟಿ ತೀರ್ಥಗಳೂ, ಕುರುಕ್ಷೇತ್ರದಲ್ಲಿ ಒಂದುಕೋಟಿ ತೀರ್ಥಗಳೂ. ಕಾಶಿಯಲ್ಲಿ ಅರ್ಧಕೋಟಿ ತೀರ್ಥಗಳೂ ವಾಸಿಸುವುವು. ದೊರೆಯೆ! ಇಂದ್ರಾದಿ ಸಕಲ ದೇವತೆಗಳು ಅವುಗಳನ್ನು ಸ್ತುತಿಸಿ ರಕ್ಷಿಸುವರು.

ಯದಾ ಯದಾ ಭಯಾತ್ತಾರ್ನಿ ಮ್ಲೇಚ್ಛಸ್ಪರ್ಶಾತ್ಸಮಂತತಃ ।
ಸ್ಥಾನೇಷ್ವೇತೇಷು ತಿಷ್ಠಂತಿ ತೀರ್ಥಾನ್ಸುಕ್ತೇಷು ಸತ್ವರಂ ॥ ೫ ॥
ಕೋಟಿತೀರ್ಥಾನಿ ತ್ರೀಣ್ಯೇವಂ ತತ್ರ ಜಾತಾನಿ ಭೂತಲೇ ।
ಅರ್ಧಕೋಟಿಸಮೇತಾನಿ ಸರ್ವಪಾಪಹರಾಣಿ ಚ ॥ ೬ ॥
ತಸ್ಮಾತ್ಸರ್ವಪ್ರಯತ್ನೇನ ಸ್ನಾನಂ ತತ್ರ ಸಮಾಚರೇತ್ ।
ಕೃಷ್ಣಪಕ್ಷೇ ತ್ರಯೋದಶ್ಯಾಂ ನಭಸ್ಯೇ ಚ ವಿಶೇಷತಃ ॥ ೭ ॥
ತತ್ರ ಸ್ನಾನಾದಿಕಂ ಸರ್ವಂ ಜಪಹೋಮಾದಿಕಂ ಚ ಯತ್ ।
ಸರ್ವಂ ಕೋಟಿಗುಣಂ ರಾಜಂಸ್ತತ್ಪ್ರಸಾದಾದಸಂಶಯಂ ॥ ೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕೋಟಿತೀರ್ಥಮಾಹಾತ್ಮ್ಯವರ್ಣನಂ ನಾಮ
ಪಂಚಾಶತ್ತಮೋಽಧ್ಯಾಯಃ

---

೫. ತೀರ್ಥಗಳು ಮ್ಲೇಚ್ಛರ ಸ್ಪರ್ಶದಿಂದ ಭಯಗೊಂಡ ಹಾಗೆಲ್ಲ ಈ ಸ್ಥಳಗಳಲ್ಲಿ ಶೀಘ್ರವಾಗಿ ಬಂದು ವಾಸಮಾಡುವುವು.

೬. ಹೀಗೆ ಆ ಭೂಮಿಯಲ್ಲಿರುವ ಮೂರುವರೆ ಕೋಟಿ ತೀರ್ಥಗಳು ಸಕಲ ಪಾಪಗಳನ್ನು ಪರಿಹರಿಸುವುವು.

೭. ಆದ್ದರಿಂದ ಭಾದ್ರಪದ ಕೃಷ್ಣತ್ರಯೋದಶೀ ದಿನ ಅಲ್ಲಿ ಸ್ನಾನ ಮಾಡಬೇಕು.

೮. ದೊರೆಯೆ ! ಆ ಕ್ಷೇತ್ರದ ಅನುಗ್ರಹದಿಂದ ನಿಜವಾಗಿಯೂ ಅಲ್ಲಿ ಮಾಡಿದ ಸ್ನಾನ, ಜಪ, ಹೋಮಾದಿಗಳು ಕೋಟಿಯಷ್ಟು ಹೆಚ್ಚಾಗುವುವು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಕೋಟಿತೀರ್ಥಮಾಹಾತ್ಮ್ಯವರ್ಣನ ವೆಂಬ
ಐವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಏಕಪಂಚಾಶತ್ತಮೋಽಧ್ಯಾಯಃ

## ಚಂದ್ರೋದ್ಭೇದತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಚಂದ್ರೋದ್ಭೇದಮನುತ್ತಮಂ ।
ತೀರ್ಥಂ ಪಾಪಹರಂ ನೄಣಾಂ ನಿಶಾನಾಥೇನ ನಿರ್ಮಿತಂ ॥ ೧ ॥
ಪ್ರತಿಜ್ಞಾತಂ ಯದಾ ರಾಜನ್ಗ್ರಹಣೇ ಚಂದ್ರಸೂರ್ಯಯೋಃ ।
ರಾಹುಣಾ ಕೃತವೈರೇಣ ಛಿನ್ನೇ ಶಿರಸಿ ರಾಹುಣಾ ॥ ೨ ॥
ತದಾ ಭಯಾನ್ವಿತಶ್ಚಂದ್ರೋ ಮತ್ವಾ ದೈತ್ಯಂ ದುರಾಸದಂ ।
ಪೀಯೂಷಭಕ್ಷಣೋದ್ಯುಕ್ತಂ ತತಶ್ಚಾರ್ಬುದಮಭ್ಯಗಾತ್ ॥ ೩ ॥
ತತ್ರ ಭಿತ್ವಾ ಗಿರೇಃ ಶೃಂಗೇ ಕೃತ್ವಾ ವಿವರಮುತ್ತಮಂ ।
ಪ್ರವಿಷ್ಟಸ್ತಸ್ಯ ಮಧ್ಯೇ ತು ತಪಸ್ತೇಪೇ ಸುದುಶ್ಚರಂ ॥ ೪ ॥
ತತಃ ಕಾಲೇನ ಮಹತಾ ತುಷ್ಟಸ್ತಸ್ಯ ಮಹೇಶ್ವರಃ ।
ಅಬ್ರವೀದ್ವೃಣು ಭದ್ರಂ ತೇ ವರಂ ಯತ್ತೇ ಹೃದಿ ಸ್ಥಿತಂ ॥ ೫ ॥

---

ಕನ್ನಡದ ಅನುವಾದ

## ಚಂದ್ರೋದ್ಭೇದತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ನೃಪವರ್ಯನೆ ! ತರುವಾಯ ಚಂದ್ರನು ನಿರ್ಮಿಸಿರುವ ಮನುಷ್ಯರ ಪಾಪವನ್ನು ಪರಿಹರಿಸುವ ಚಂದ್ರೋದ್ಭೇದ ತೀರ್ಥಕ್ಕೆ ಹೋಗಬೇಕು.

೨.೩. ವಿಷ್ಣುವು ತಲೆಯನ್ನು ಕತ್ತರಿಸಲು ಚಂದ್ರ ಸೂರ್ಯರಲ್ಲಿ ದ್ವೇಷಗೊಂಡ ರಾಹುವು ಅವರನ್ನು ನುಂಗುವುದಾಗಿ ಪ್ರತಿಜ್ಞೆ ಮಾಡಲು ಅದರಿಂದ ಭೀತನಾದ ಚಂದ್ರನು ಅಮೃತವನ್ನು ಕುಡಿಯಲುದ್ಯುಕ್ತನಾದ ಆ ದೈತ್ಯನು ಕೊಲ್ಲಲಶಕ್ಯನೆಂದು ಭಾವಿಸಿ ಅರ್ಬುದ ಪರ್ವತಕ್ಕೆ ಬಂದನು.

೪. ಅಲ್ಲಿ ಅವನು ಗಿರಿಯ ಶಿಖರವನ್ನು ಭೇದಿಸಿ ಉತ್ತಮವಾದ ಬಿಲವೊಂದನ್ನು ರಚಿಸಿ ಅದನ್ನು ಪ್ರವೇಶಿಸಿ ಅಸಾಧ್ಯವಾದ ತಪಸ್ಸನ್ನಾಚರಿಸಿದನು.

೫. ಬಳಿಕ ಬಹುಕಾಲದ ಮೇಲೆ ಅವನತಪಸ್ಸಿಗೆ ಮೆಚ್ಚಿದ ಮಹೇಶ್ವರನು ನಿನಗಭೀಷ್ಟವಾದ ವರವನ್ನು ಕೇಳಿಕೊ. ಎಂದನು.

ಚಂದ್ರ ಉವಾಚ :—
ಪ್ರತಿಜ್ಞಾತಂ ಸುರಶ್ರೇಷ್ಠ ರಾಹುಣಾ ಗ್ರಹಣಂ ಮಮ ।
ಬಲವಾನೇಷ ದುರ್ಧರ್ಷಃ ಪ್ರಕೃತ್ಯಾ ಸಿಂಹಿಕಾಸುತಃ ॥ ೬ ॥
ಸಾಂಪ್ರತಂ ಭಕ್ಷಿತಂ ತೇನ ಪೀಯೂಷಂ ಸುರಸತ್ತಮ ।
ಅಹಂ ಮಧ್ಯೇ ಧೃತಶ್ಚಾಪಿ ರಾಹುಣಾಽಸೌ ದುರಾಸದಃ ॥ ೭ ॥
ಪೀಯೂಷಪಾನೇಽಮೃತೇ ದೇವ ದೇವೈಃ ಪೂರ್ವಂ ಪರಾಜಿತೈಃ ।
ದೈವತಂ ರೂಪಮಾಸ್ಥಾಯ ದಾನವೋಽಸೌ ಸಮಾಗತಃ ॥ ೮ ॥
ಅಪಿಬಚ್ಚಾಮೃತಂ ರಾಹುಸ್ತೇನಾಸ್ಯ ಮೃತ್ಯುವರ್ಜಿತಂ ।
ಅಮೃತಂ ಚಾಕ್ಷಯಂ ಜಾತಂ ಶಿರೋ ದೇವಭಯಪ್ರದಂ ॥ ೯ ॥
ತತೋ ದೇವೈಃ ಕೃತಂ ಸಾಮ ಗ್ರಹಮಧ್ಯೇ ಪ್ರತಿಷ್ಠಿತಃ ।
ಪ್ರತಿಜ್ಞಾತೇ ಗ್ರಹೇಽಸ್ಮಾಕಂ ತತೋ ಮೇ ಭಯಮಾವಿಶತ್ ॥ ೧೦ ॥
ಭಯಾತ್ತಸ್ಯ ಸುರಶ್ರೇಷ್ಠ ಭಿತ್ವಾ ಶೃಂಗಂ ಗಿರೇರಿದಂ ।
ಕೃತಂ ಶ್ವಭ್ರಮಗಾಧಂ ಚ ತಪೋಽರ್ಥಂ ಸುರಸತ್ತಮ ।
ತಸ್ಮಾದತ್ರ ಪ್ರಸಾದಂ ಮೇ ಕುರು ಕಾಮನಿಷೂದನ ॥ ೧೧ ॥

---

೬. ಚಂದ್ರನು ಹೇಳುತ್ತಾನೆ :—ಸುರವರ್ಯನೆ! ರಾಹುವು ನನ್ನನ್ನು ನುಂಗುವುದಾಗಿ ಪ್ರತಿಜ್ಞೆ ಮಾಡಿದ್ದಾನೆ. ಸಿಂಹಿಕೆಯ ಮಗನಾದ ಈರಾಹುವು ಸ್ವಭಾವದಿಂದಲೇ ಜಯಿಸಲಶಕ್ಯನು.

೭. ಈ ರಾಹುವು ಹಿಡಿಯಲಶಕ್ಯನಾದ ನನ್ನನ್ನು ನಡುವೆ ಹಿಡಿದು ಈಗ ಅಮೃತವನ್ನು ಕುಡಿದಿರುವನು.

೮–೯. ಸ್ವಾಮಿ! ಹಿಂದೆ ಸುರರು ಅಮೃತನ್ನು ಕುಡಿಯುತ್ತಿರಲು ಅವರಿಂದ ಸೋತ ರಾಹುವು ದೇವರೂಪವನ್ನು ತಾಳಿ ಬಂದು ಅಮೃತವನ್ನು ಕುಡಿದನು. ಇವನ ತಲೆಯು ಮೃತ್ಯುವಿಲ್ಲದುದೂ, ನಾಶವಿಲ್ಲದುದೂ, ದೇವತೆಗಳಿಗೆ ಭಯವನ್ನುಂಟು ಮಾಡುವುದೂ ಆಯಿತು.

೧೦. ತರುವಾಯ ದೇವತೆಗಳು ಸಮಾಧಾನಮಾಡಿ ಅವನನ್ನು ಗ್ರಹಗಳ ನಡುವೆ ಸ್ಥಾಪಿಸಲು ಅವನು ನನ್ನನ್ನು ನುಂಗುವುದಾಗಿ ಪ್ರತಿಜ್ಞೆ ಮಾಡಿದ್ದರಿಂದ ನನಗೆ ಭಯವುಂಟಾಯಿತು.

೧೧. ಕಾಮಾರಿಯೇ! ಆದ್ದರಿಂದ ಅವನಿಂದ ಭಯಗೊಂಡ ನಾನು ಗಿರಿಯ ಶಿಖರವನ್ನು ಭೇದಿಸಿ ತಪಸ್ಸಿಗಾಗಿ ಆಳವಾದ ಕುಣಿಯನ್ನು ರಚಿಸಿದೆನು. ಆದ್ದರಿಂದ ನನನ್ನು ಅನುಗ್ರಹಿಸು.

ಭಗವಾನುವಾಚ :—
ಅವಧ್ಯಃ ಸರ್ವದೇವಾನಾಮಜೇಯಃ ಸ ಮಹಾಬಲಃ ।
ಕರಿಷ್ಯತಿ ಗ್ರಹಂ ನೂನಂ ರಾಹುಃ ಕೋಪಪರಾಯಣಃ ।
ಪರಂ ತವ ನಿಶಾನಾಥ ಕರಿಷ್ಯೇಽಹಂ ಪ್ರತಿಕ್ರಿಯಾಂ ॥ ೧೨ ॥
ಗ್ರಹಣೇ ತವ ಸಂಪ್ರಾಪ್ತೇ ಸ್ನಾನದಾನಾದಿಕಾಃ ಕ್ರಿಯಾಃ ।
ಕರಿಷ್ಯಂತಿ ಜನಾ ಲೋಕೇ ಸಮ್ಯಕ್ಶ್ರೇಯಃ ಸಮನ್ವಿತಾಃ ॥ ೧೩ ॥
ತಾಭಿಸ್ತವ ನ ಸಂತಾಪಃ ಸ್ವಲ್ಪೋಽಪ್ಯೇವಂ ಭವಿಷ್ಯತಿ ।
ಅಕ್ಷಯಂ ಸುಕೃತಂ ತೇಷಾಂ ಕೃತಂ ಕರ್ಮ ಭವಿಷ್ಯತಿ ॥ ೧೪ ॥
ಗ್ರಹಣೇ ತವ ಸಂಜಾತೇ ಮಮ ವಾಕ್ಯಾದಸಂಶಯಂ ।
ಏತದ್ಭಿನ್ನಂ ತ್ವಯಾ ಯಸ್ಮಾತ್ತ್ವೇಽಪೂರ್ಥಂ ಶಿಖರಂ ಗಿರೇಃ ।
ಚಂದ್ರೋದ್ಭೇದಮಿತಿ ಖ್ಯಾತಂ ತೀರ್ಥಂ ಲೋಕೇ ಭವಿಷ್ಯತಿ ॥ ೧೫ ॥
ಗ್ರಹಣೇ ತವ ಸಂಪ್ರಾಪ್ತೇ ಯೋಽತ್ರ ಸ್ನಾನಂ ಕರಿಷ್ಯತಿ ।
ನ ತಸ್ಯ ಪುನರೇವಾತ್ರ ಜನ್ಮ ಲೋಕೇ ಭವಿಷ್ಯತಿ ॥ ೧೬ ॥
ಯೋ ವಾ ಸೋಮದಿನೇ ಸ್ನಾನಂ ದರ್ಶನಂ ತತ್ರ ಚಾಚರೇತ್ ।
ತವ ಲೋಕೇ ಧ್ರುವಂ ವಾಸಸ್ತಸ್ಯ ಚಂದ್ರ ಭವಿಷ್ಯತಿ ॥ ೧೭ ॥

---

೧೨. ಭಗವಂತನು ಹೇಳುತ್ತಾನೆ:—ನಿಶಾಕರ! ಕೊಲ್ಲಲಾಗದವನೂ, ಸಮಸ್ತ ದೇವತೆಗಳಿಗೆ ಅಜೇಯನೂ, ಅತಿಶಯ ಬಲಿಷ್ಠನೂ, ಆದ ರಾಹುವು ನಿಶ್ಚಯವಾಗಿಯೂ ಕುಪಿತನಾಗಿ ನಿನ್ನನ್ನು ನುಂಗುವನು. ಆದರೆ ನಾನು ಅದಕ್ಕೆ ಪ್ರತೀಕಾರವನ್ನು ಮಾಡುವೆನು.

೧೩. ನಿನಗೆ ರಾಹು ಗ್ರಹಣವು ಸಂಭವಿಸಲು ಲೋಕದಲ್ಲಿ ಜನರು ಶ್ರದ್ಧೆಯಿಂದ ಸ್ನಾನದಾನಾದಿಕಾರ್ಯಗಳನ್ನೆಸಗುವರು.

೧೪–೧೫. ಅವುಗಳಿಂದ ನಿನಗೆ ಗ್ರಹಣಕಾಲದಲ್ಲಿ ನನ್ನ ಮಾತಿನಿಂದ ಸ್ವಲ್ಪವೂ ಸಂತಾಪ ಉಂಟಾಗುವುದಿಲ್ಲ. ಅವರು ಮಾಡಿದ ಕರ್ಮವು ಅಕ್ಷಯ ಸುಕೃತವನ್ನುಂಟು ಮಾಡುವುದು. ನೀನು ತಪಸ್ಸಿಗಾಗಿ ಈ ಗಿರಿಶಿಖರವನ್ನು ಭೇದಿಸಿರುವುದರಿಂದ ಇದು ಚಂದ್ರೋದ್ಭೇದ ತೀರ್ಥವೆಂದು ವಿಖ್ಯಾತವಾಗುವುದು.

೧೬. ನಿನ್ನ ಗ್ರಹಣ ಕಾಲದಲ್ಲಿ ಇಲ್ಲಿ ಮಿಂದವನು ಮರಳಿ ಭೂಮಿಯಲ್ಲಿ ಜನಿಸುವುದಿಲ್ಲ.

೧೭. ಚಂದ್ರ! ಸೋಮವಾರದಿನ ಅಲ್ಲಿ ಮಿಂದು ನಿನ್ನನ್ನು ದರ್ಶನಮಾಡು ವವನು ನಿಜವಾಗಿಯೂ ನಿನ್ನ ಲೋಕದಲ್ಲಿ ವಾಸಿಸುವನು.

ಏವಮುಕ್ತ್ವಾ ಸ ಭಗವಾಂಸ್ತತ್ರೈವಾಂತರ್ದಧೇ ಹರಃ ।
ಚಂದ್ರೋಽಪಿ ಪ್ರಯಯೌ ಹೃಷ್ಟಃ ಸ್ವಸ್ಥಾನಂ ನೃಪಸತ್ತಮ ॥ ೧೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಚಂದ್ರೋದ್ಭೇದಮಹಾತ್ಮ್ಯವರ್ಣನಂ ನಾಮ
ಏಕಪಂಚಾಶತ್ತಮೋಽಧ್ಯಾಯಃ

---

೧೮. ದೊರೆಯೆ! ಪೂಜ್ಯನಾದ ಶಂಕರನು ಹೀಗೆ ನುಡಿದು ಅದೃಶ್ಯನಾಗಲು ಚಂದ್ರನೂ ಹರ್ಷಗೊಂಡು ತನ್ನ ಸ್ಥಾನಕ್ಕೆ ತೆರಳಿದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಚಂದ್ರೋದ್ಭೇದಮಹಾತ್ಮ್ಯವರ್ಣನವೆಂಬ
ಐವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಿಪಂಚಾಶತ್ತಮೋಽಧ್ಯಾಯಃ

### ಈಶಾನೀಶಿಖರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಈಶಾನೀಶಿಖರಂ ಮಹತ್ ।
ಯತ್ರ ಗೌರ್ಯಾ ತಪಸ್ತಪ್ತಂ ಸುಪುಣ್ಯಂ ಲೋಕವಿಶ್ರುತಂ ॥ ೧ ॥
ಯಸ್ಯ ಸಂದರ್ಶನೇನಾಪಿ ನರಃ ಪಾಪಾತ್ಪ್ರಮುಚ್ಯತೇ ।
ಲಭತೇ ಚಾತಿಸೌಭಾಗ್ಯಂ ಸಪ್ತಜನ್ಮಾಂತರಾಣಿ ಚ ॥ ೨ ॥

ಯಯಾತಿರುವಾಚ :—

ಕಸ್ಮಿನ್ಕಾಲೇ ತಪಸ್ತಪ್ತಂ ದೇವ್ಯಾ ತತ್ರ ಮುನೀಶ್ವರ ।
ಕಿಮರ್ಥಂ ಚ ಮಹತ್ತ್ವೇತತ್ಕೌತುಕಂ ವಕ್ತುಮರ್ಹಸಿ ॥ ೩ ॥

ಪುಲಸ್ತ್ಯ ಉವಾಚ :—

ಶೃಣು ರಾಜನ್ಕಥಾಂ ದಿವ್ಯಾಮದ್ಭುತಾಂ ಲೋಕವಿಶ್ರುತಾಂ ।
ಯಸ್ಯಾಃ ಸಂಶ್ರವಣಾದೇವ ಮುಚ್ಯತೇ ಸರ್ವಪಾತಕೈಃ ॥ ೪ ॥

---

### ಕನ್ನಡದ ಅನುವಾದ

### ಈಶಾನೀಶಿಖರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ದೊರೆಯೆ! ಬಳಿಕ ಪುಣ್ಯಕರವೂ, ಲೋಕವಿಖ್ಯಾತವೂ ಆದ ಈ ಈಶಾನೀಶಿಖರಕ್ಕೆ ಹೋಗಬೇಕು. ಅಲ್ಲಿ ಗೌರೀದೇವಿಯು ತಪಸ್ಸನ್ನಾಚರಿಸಿರುವಳು.

೨. ಮನುಷ್ಯನು ಅದನ್ನು ನೋಡುವುದರಿಂದ ಪಾಪಮುಕ್ತನಾಗಿ ಏಳು ಜನ್ಮಗಳಲ್ಲಿ ಮಹಾ ಸೌಭಾಗ್ಯವನ್ನು ಹೊಂದುವನು.

೩. ಯಯಾತಿಯು ಹೇಳುತ್ತಾನೆ:— ಮುನಿವರ್ಯನೆ! ದೇವಿಯು ಅಲ್ಲಿ ಯಾವಾಗ ಏತಕ್ಕೆ ತಪಸ್ಸನ್ನು ಮಾಡಿದಳು? ಈ ವಿಷಯದಲ್ಲಿ ನನಗೆ ಅತಿಶಯವಾದ ಕೌತೂಹಲವುಂಟಾಗಿದೆ. ಇದನ್ನು ನನಗೆ ಹೇಳು.

೪. ಪುಲಸ್ತ್ಯನು ಹೇಳುತ್ತಾನೆ:—ದೊರೆಯೆ! ದಿವ್ಯವೂ, ಆಶ್ಚರ್ಯಕರವೂ, ಲೋಕಪ್ರಸಿದ್ಧವೂ ಆದ ಕಥೆಯನ್ನು ಕೇಳು. ಇದನ್ನು ಕೇಳುವುದರಿಂದಲೆ ಮಾನವನು ಸಕಲ ಪಾಪಮುಕ್ತನಾಗುವನು.

ಪುರಾ ಗೌರ್ಯಾ ಸಮಾಸಕ್ತಂ ಜ್ಞಾತ್ವಾ ದೇವಾಃ ಸವಾಸವಾಃ ।
ಮಂತ್ರಂ ಚಕ್ರುರ್ಭಯಾವಿಷ್ಟಾ ಏಕಾಂತೇ ಸಮುಪಾಶ್ರಿತಾಃ ॥ ೫ ॥
ವೀರ್ಯಂ ಯದಿ ತ್ರಿನೇತ್ರಸ್ಯ ಕ್ಷೇತ್ರೇ ಗೌರ್ಯಾಃ ಪತಿಷ್ಯತಿ ।
ಅಸ್ಮಾಕಂ ಪತನಂ ನೂನಂ ಜಗತಶ್ಚ ಭವಿಷ್ಯತಿ ॥ ೬ ॥
ಸಂತತೇಸ್ತು ವಿನಾಶಾಯ ತತೋ ಗಚ್ಛಾಮಹೇ ವಯಂ ॥ ೭ ॥
ಏವಂ ಸಂಮಂತ್ರ್ಯ ದೇವಾಸ್ತೇ ಕೈಲಾಸಂ ಪರ್ವತಂ ಗತಾಃ ।
ತತಸ್ತು ನಂದಿನಾ ಸರ್ವೇ ನಿಷಿದ್ಧಾಃ ಸಮಯಂ ವಿನಾ ॥ ೮ ॥

ನಂದ್ಯುವಾಚ :—

ಏಕಾಂತೇ ಭಗವಾನ್ರುದ್ರಃ ಸಹ ಗೌರ್ಯಾ ಹ್ಯವಸ್ಥಿತಂ ।
ತಸ್ಮಾದ್ದೇವಗಣಾಃ ಸರ್ವೇ ಗಚ್ಛಧ್ವಂ ನಿಲಯಂ ಸ್ವಕಂ ॥ ೯ ॥
ಅಥ ದೇವಗಣಾಃ ಸರ್ವೇ ವಂಚಯಿತ್ವಾ ಚ ತಂ ಗಣಂ ।
ಪ್ರೈಷಯಂಸ್ತತ್ರ ವಾಯುಂ ಚ ಗುಪ್ತಮೂಚುರ್ವಚಸ್ತ್ವಿದಂ ॥ ೧೦ ॥
ಗತ್ವಾ ವಾಯೋ ಭವಂ ಬ್ರೂಹಿ ನ ಕಾರ್ಯಾ ಸಂತತಿಸ್ತ್ವಯಾ ।
ಏವಂ ದೇವಗಣಾ ದೇವ ಪ್ರಾರ್ಥಯಂತಿ ಭಯಾತುರಾಃ ॥ ೧೧ ॥

---

೫. ಹಿಂದೆ ಇಂದ್ರಾದಿ ದೇವತೆಗಳು ಮಹೇಶ್ವರನು ಗೌರಿಯೊಡನೆ ಸೇರಿರುವುದನ್ನು ತಿಳಿದು ಭಯದಿಂದ ರಹಸ್ಯದಲ್ಲಿ ಹೀಗೆ ಆಲೋಚಿಸಿದರು.

೬. "ತ್ರಿಣಯನನ ವೀರ್ಯವು ಗೌರಿಯ ಶರೀರದಲ್ಲಿ ಸೇರಿದರೆ ನಾವೂ, ಪ್ರಪಂಚವೂ ನಿಶ್ಚಯವಾಗಿಯೂ ನಾಶವಾಗುವೆವು.

೭–೮. ಆದ್ದರಿಂದ ಶಿವನ ಸಂತತಿಯ ನಾಶಕ್ಕಾಗಿ ನಾವು ಹೋಗೋಣ" ಆ ದೇವತೆಗಳು ಹೀಗೆ ಆಲೋಚಿಸಿ ಕೈಲಾಸಪರ್ವತಕ್ಕೆ ಹೋಗಲು ಅವಕಾಶವಿಲ್ಲದುದರಿಂದ ನಂದಿಯು ಅವರನ್ನೆಲ್ಲ ತಡೆದನು.

೯. ನಂದಿಯು ಹೇಳುತ್ತಾನೆ:—ದೇವತೆಗಳೆ! ಪೂಜ್ಯನಾದ ರುದ್ರನು ಗೌರಿಯೊಡನೆ ಇರುವನು. ಆದ್ದರಿಂದ ನೀವು ನಿಮ್ಮ ಆಲಯಕ್ಕೆ ಹಿಂದಿರುಗಿರಿ.

೧೦–೧೧. ತರುವಾಯ ಸಮಸ್ತ ದೇವತೆಗಳು ಆ ನಂದಿಯನ್ನು ವಂಚಿಸಿ ವಾಯುವನ್ನು ಕುರಿತು, "ವಾಯುವೆ! ನೀನು ಶಿವನೆಡೆಗೆ ಹೋಗಿ ಅವನಿಗೆ ನೀನು ಸಂತತಿಯನ್ನು ಸೃಷ್ಟಿಸಬೇಡ". ಎಂದು ಭಯಗೊಂಡ ದೇವತೆಗಳು ಪ್ರಾರ್ಥಿಸುತ್ತಾರೆ. ಎಂದು ಹೇಳು ಎಂದು ಹೇಳಿ ಕಳುಹಿಸಿದರು.

ತತೋ ವಾಯುರ್ದ್ರುತಂ ಗತ್ವಾ ಸ್ಥಿತೋ ಯತ್ರ ಮಹೇಶ್ವರಃ ।
ಉಚ್ಚೈರ್ಜಗಾದ ತದ್ವಾಕ್ಯಂ ಯದುಕ್ತಂ ತ್ರಿದಶಾಲಯೈಃ ॥ ೧೨ ॥
ತತಸ್ತು ಭಗವಾನ್ ಶರ್ವೋ ವ್ರೀಡಯಾ ಪರಯಾ ಯುತಃ ।
ಗೌರೀಂ ತ್ಯಕ್ತ್ವಾ ಸಮುತ್ತಸ್ಥೌ ಬಾಢಮಿತ್ಯೇವ ಚಾಬ್ರವೀತ್ ॥ ೧೩ ॥
ತತೋ ಗೌರೀ ಸುದುಃಖಾರ್ತಾ ಶಶಾಪ ತ್ರಿದಶಾಲಯಾನ್ ॥ ೧೪ ॥

ಗೌರ್ಯುವಾಚ :—

ಯಸ್ಮಾದಹಂ ಕೃತಾ ದೇವೈಃ ಪುತ್ರಹೀನಾ ಸಮಾಗತೈಃ ।
ತಸ್ಮಾತ್ತೇಽಪಿ ಭವಿಷ್ಯಂತಿ ಸಂತಾನೇನ ವಿವರ್ಜಿತಾಃ ॥ ೧೫ ॥
ಯಸ್ಮಾದ್ವಾಯೋ ಸಮಾಯಾತಃ ಸ್ಥಾನೇಽಸ್ಮಿಞ್ಜನವರ್ಜಿತೇ ।
ತಸ್ಮಾತ್ಕಾಯವಿನಿರ್ಮುಕ್ತಸ್ತ್ವಂ ಭವಿಷ್ಯಸಿ ಸರ್ವದಾ ॥ ೧೬ ॥
ಏವಮುಕ್ತ್ವಾ ತತೋ ದೀರ್ಘಂ ಭರ್ತುಃ ಕೋಪಪರಾಯಣಾ ।
ತ್ಯಕ್ತ್ವಾ ಪಾರ್ಶ್ವಂ ಗತಾ ರಾಜನ್ನರ್ಬುದಂ ನಗಸತ್ತಮಂ ॥ ೧೭ ॥
ಸುತಾರ್ಥಂ ಸಾ ತಪಸ್ತೇಪೇ ಯತವಾಕ್ಕಾಯಮಾನಸಾ ।
ತತೋ ವರ್ಷಸಹಸ್ರಾಂತೇ ದೇವದೇವೋ ಮಹೇಶ್ವರಃ ॥ ೧೮ ॥

---

೧೨. ಆಮೇಲೆ ವಾಯುವು ಶೀಘ್ರವಾಗಿ ಶಿವನೆಡೆಗೆ ಹೋಗಿ ದೇವತೆಗಳು ಹೇಳಿದ ಮಾತನ್ನು ಘಟ್ಟಿಯಾಗಿ ಹೇಳಿದನು.

೧೩. ಅದರಿಂದ ಅತ್ಯಂತ ನಾಚಿಕೆಗೊಂಡ ಶಂಕರನು ಗೌರಿಯನ್ನು ತ್ಯಜಿಸಿ ಮೇಲಕ್ಕೆದ್ದು ಹಾಗೆಯೇ ಆಗಲೆಂದನು.

೧೪. ಅನಂತರ ಬಹು ದುಃಖಗೊಂಡ ಶಂಕರಿಯು ಸುರರನ್ನು ಹೀಗೆ ಶಪಿಸಿದಳು.

೧೫. ಗೌರಿಯು ಹೇಳುತ್ತಾಳೆ:—ದೇವತೆಗಳು ಒಟ್ಟುಗೂಡಿ ನನಗೆ ಪುತ್ರ ನಿಲ್ಲದಂತೆ ಮಾಡಿದ್ದರಿಂದ ಅವರೂ ಸಂತತಿಹೀನರಾಗುವರು.

೧೬. ವಾಯುವೆ! ನೀನು ಈ ನಿರ್ಜನಸ್ಥಳಕ್ಕೆ ಬಂದದ್ದರಿಂದ ಯಾವಾಗಲೂ ಶರೀರವಿಲ್ಲದವನಾಗುವೆ.

೧೭. ಗೌರಿಯು ಅತ್ಯಂತ ಕೋಪದಿಂದ ಹೀಗೆಂದು ನುಡಿದು ಗಂಡನ ಪಾರ್ಶ್ವ ವನ್ನು ತ್ಯಜಿಸಿ ಅರ್ಬುದಾಚಲಕ್ಕೆ ಹೋದಳು.

೧೮—೧೯. ಆವಳು ಅಲ್ಲಿ ಮಾತು, ದೇಹ, ಮನಸ್ಸುಗಳನ್ನು ಜಯಿಸಿ ಸುತನಿಗಾಗಿ ತಪಸ್ಸನ್ನು ಮಾಡಿದಳು. ತರುವಾಯ ಸಾವಿರ ವರ್ಷಗಳ ಕೊನೆಯಲ್ಲಿ

ಇಂದ್ರಾದ್ಯೈರ್ವಿಬುಧೈಃ ಸಾರ್ಧಂ ತದಂತಿಕಮುಪಾಗಮತ್ ।
ಅಥ ಶಕ್ರೋ ವಿನೀತಾತ್ಮಾ ದೇವೀಂ ತಾಂ ಪ್ರತ್ಯಭಾಷತ ॥ ೧೯ ॥
ಏಷ ದೇವಃ ಶಿವಃ ಪ್ರಾಪ್ತಸ್ತವ ಪಾರ್ಶ್ವಂ ಸ್ವಲಜ್ಜಯಾ ।
ನಾಯಾತಿ ತತ್ಪ್ರಸಾದೋಽಸ್ಯ ಕ್ರಿಯತಾ ಮಹತೀ ಭವ ॥ ೨೦ ॥

ದೇವ್ಯುವಾಚ :—

ತ್ಯಕ್ತಾಽಹಂ ತವ ವಾಕ್ಯೇನ ಪತಿನಾ ಸಮಯಾನ್ವಿತಾ ।
ಪುತ್ರಂ ಲಬ್ಧ್ವಾ ಪ್ರಯಾಸ್ಯಾಮಿ ತಸ್ಯ ಪಾರ್ಶ್ವೇ ಸುರೇಶ್ವರ ॥ ೨೧ ॥
ತಸ್ಯಾಸ್ತಂ ನಿಶ್ಚಯಂ ಜ್ಞಾತ್ವಾ ಸ್ವಯಂ ದೇವಃ ಸಮಾಯಯೌ ।
ಅಬ್ರವೀತ್ಪ್ರಹಸನ್ವಾಕ್ಯಂ ಪ್ರಸಾದಃ ಕ್ರಿಯತಾಮಿತಿ ॥ ೨೨ ॥
ದೃಷ್ಟಿದಾನೇನ ದೇವೇಶಿ ಭಾಷಣೇನ ವರಾನನೇ ।
ಮಯಾ ದೇವಹಿತಂ ಕಾರ್ಯಂ ಸರ್ವಾವಸ್ಥಾಸು ಪಾರ್ವತಿ ॥ ೨೩ ॥
ಅಕಾಲೇ ತೇನ ಮುಕ್ತಾಽಸಿ ನಿವೃತ್ತಿಃ ಸುರತೇ ಕೃತಾ ।
ಪುತ್ರಾರ್ಥಂ ತೇ ಸಮಾರಂಭೋ ಯತಶ್ಚಾಸೀತ್ಸುರೇಶ್ವರಿ ॥ ೨೪ ॥

---

ಮಹೇಶ್ವರನು ಇಂದ್ರಾದಿ ದೇವತೆಗಳೊಡನೆ ಅವಳ ಹತ್ತಿರ ಬಂದನು. ಇಂದ್ರನು ವಿನಯದಿಂದ ಆ ದೇವಿಯನ್ನು ಕುರಿತು ಇಂತೆಂದನು.

೨೦. "ದೇವಿ! ಮಹೇಶ್ವರನು ಬಂದಿರುವನು. ನಾಚಿಕೆಯಿಂದ ಅವನು ನಿನ್ನ ಹತ್ತಿರ ಬರುವುದಿಲ್ಲ. ಆದ್ದರಿಂದ ಇವನಿಗೆ ಅನುಗ್ರಹಮಾಡು. ನೀನು ಮಹಾದೇವಿಯಾಗು".

೨೧. ದೇವಿಯು ಹೇಳುತ್ತಾಳೆ:—ದೇವರಾಜ! ನನ್ನ ಪತಿಯು ನಿನ್ನ ಮಾತಿನಿಂದ ನನ್ನನ್ನು ತ್ಯಜಿಸಿರುವನು. ನಾನು ಕಾಲಾಂತರದಲ್ಲಿ ಪುತ್ರನನ್ನು ಪಡೆದು ಅವನ ಹತ್ತಿರಕ್ಕೆ ಹೋಗುವೆನು.

೨೨–೨೩. ಶಂಕರನು ಅವಳ ದೃಢನಿರ್ಣಯವನ್ನರಿತು ತಾನೇ ಅವಳ ಹತ್ತಿರ ಬಂದು ನಗುತ್ತ ಸುಂದರಿಯೆ! ನೋಡುವುದರಿಂದಲೂ, ಮಾತಾಡುವುದರಿಂದಲೂ ನನಗೆ ಅನುಗ್ರಹಿಸು ಪಾರ್ವತಿಯೆ! ನಾನು ಎಲ್ಲ ಸ್ಥಿತಿಯಲ್ಲಿಯೂ ದೇವತೆಗಳಿಗೆ ಹಿತವನ್ನುಂಟುಮಾಡಬೇಕು.

೨೪. ಆದ್ದರಿಂದ ಪುತ್ರನಿಗಾಗಿ ಪ್ರಯತ್ನಿಸುತ್ತಿರುವ ನಿನ್ನನ್ನು ತ್ಯಜಿಸಿ ಸುರತಕ್ಕೆ ವಿಘ್ನವನ್ನುಂಟುಮಾಡಿದೆನು.

ತಸ್ಮಾತ್ತೇ ಭವಿತಾ ಪುತ್ರೋ ನಿಜದೇಹಸಮುದ್ಭವಃ ।
ಮತ್ಪ್ರಸಾದಾದಸಂದಿಗ್ಧಂ ಚತುರ್ಥೇ ದಿವಸೇ ಪ್ರಿಯೇ ॥ ೨೫ ॥
ನಿಜಾಂಗಮಲಮಾದಾಯ ಯಾದೃಗ್ರೂಪಂ ಸುರೇಶ್ವರಿ ।
ಕರಿಷ್ಯಸಿ ಸ ಸಂದೇಹಸ್ತಾದೃಗೇವ ಭವಿಷ್ಯತಿ ॥ ೨೬ ॥
ಸದ್ಯೋ ದೇವಗಣಾನಾಂ ಚ ದೈತ್ಯಾನಾಂ ಚ ವಿಶೇಷತಃ ।
ತಥಾ ವೈ ಸರ್ವಮರ್ತ್ಯಾನಾಂ ಸಿದ್ಧಿದೋ ಬಹುರೂಪಧೃಕ್ ॥ ೨೭ ॥
ಏವಮುಕ್ತಾ ತ್ರಿನೇತ್ರೇಣ ಪರಿತುಷ್ಟಾ ಸುರೇಶ್ವರೀ ।
ಆಲಾಪಂ ಪತಿನಾ ಚಕ್ರೇ ಸಾರ್ಧಂ ಹರ್ಷಸಮನ್ವಿತಾ ॥ ೨೮ ॥
ಚತುರ್ಥೇ ದಿವಸೇ ಪ್ರಾಪ್ತೇ ತತಃ ಸ್ನಾತ್ವಾ ಶಿವಾ ನೃಪ ।
ತದೋದ್ವರ್ತನಜಂ ಲೇಪಂ ಗೃಹೀತ್ವಾ ಕೌತುಕಾತ್ಕಿಲ ।
ಚತುರ್ಭುಜಂ ಚಕಾರಾಽಥ ಹರವಾಕ್ಯಾದ್ವಿನಾಯಕಂ ॥ ೨೯ ॥
ತತಃ ಸಜೀವತಾಂ ಪ್ರಾಪ್ಯ ಹರವಾಕ್ಯೇನ ತಂ ತದಾ ।
ವಿಶೇಷೇಣ ಮಹಾರಾಜ ನಾಯಕೋಽಸೌ ಕೃತಃ ಕ್ಷಿತೌ ।
ಸರ್ವೇಷಾಂ ಚೈವ ಮರ್ತ್ಯಾನಾಂ ತತೋ ಖ್ಯಾತೋ ಬಭೂವ ಹ ॥ ೩೦ ॥

---

೨೫. ಪ್ರಿಯಳೆ! ಆದ್ದರಿಂದ ಇಲ್ಲಿಂದ ನಾಲ್ಕನೆ ದಿನದಲ್ಲಿ ನನ್ನ ಅನುಗ್ರಹದಿಂದ ನಿನ್ನ ಶರೀರದಿಂದಲೇ ಪುತ್ರನು ಜನಿಸುವನು.

೨೬. ಸುರೇಶ್ವರಿ! ನೀನು ನಿನ್ನ ದೇಹದ ಕೊಳೆಯನ್ನು ತೆಗೆದುಕೊಂಡು ಎಂತಹರೂಪದ ಪುತ್ರನನ್ನು ನಿರ್ಮಿಸುವೆಯೋ ಅವನು ಅಂತಹವನೇ ಆಗುವನು.

೨೭–೨೮. ಅವನು ಅನೇಕ ರೂಪಗಳನ್ನು ಧರಿಸಿ ದೇವ, ದೈತ್ಯ, ಮರ್ತ್ಯರಿಗೆಲ್ಲ ಸಿದ್ಧಿಯನ್ನೀಯುವನು. ಮಹೇಶ್ವರನು ಹೀಗೆ ಹೇಳಲು ದೇವಿಯು ಸಂತೋಷ ಗೊಂಡು ಅವನೊಡನೆ ಮಾತಾಡಿದಳು.

೨೯. ಅನಂತರ ನಾಲ್ಕನೆ ದಿವಸವು ಬರಲು ಪಾರ್ವತಿಯು ಮಿಂದು ತನ್ನ ಶರೀರದ ಕೊಳೆಯನ್ನು ತೆಗೆದುಕೊಂಡು ಕುತೂಹಲದಿಂದ ಶಿವನ ಮಾತಿನಂತೆ ನಾಲ್ಕು ತೋಳುಗಳುಳ್ಳ ವಿನಾಯಕನನ್ನು ನಿರ್ಮಿಸಿದಳು.

೩೦–೩೧. ತರುವಾಯ ಶಿವನ ಮಾತಿನಿಂದ ಅವನನ್ನು ಜೀವಸಹಿತನನ್ನಾಗಿಸಿ ಭೂಮಿಯಲ್ಲಿರುವ ಸಕಲ ಮಾನವರಿಗೆ ಅತಿಶಯನಾದ ಒಡೆಯನನ್ನಾಗಿ ಮಾಡಿದಳು.

ವಿನಾಯಕ ಇತಿ ಶ್ರೀಮಾನ್ಪೂಜ್ಯಸ್ತ್ರೈಲೋಕ್ಯವಾಸಿನಾಂ ।
ಸರ್ವೇಷಾಂ ದೇವಮುಖ್ಯಾನಾಂ ಬಭೂವ ಹಿ ವಿನಾಯಕಃ ॥ ೩೧ ॥
ತತೋ ದೇವಗಣಾಃ ಸರ್ವೇ ದೇವೀಪ್ರಿಯಹಿತೇ ರತಾಃ ।
ತಸ್ಮೈ ವರಾನ್ವರಾನ್ದಿವ್ಯಾನ್ದತ್ತ್ವೋಚುರ್ದೇವೀಂ ಚ ಪಾರ್ಥಿವ ॥ ೩೨ ॥

ದೇವಾ ಊಚುಃ :—

ತವಾಯಂ ತನಯೋ ದೇವಿ ಸರ್ವೇಷಾಂ ನಃ ಪುರಸ್ಸರಃ ।
ಪ್ರಥಮ ಪೂಜಿತೇ ಚಾಸ್ಮಿನ್ಪೂಜಾ ಗ್ರಾಹ್ಯಾ ತತಃ ಸುರೈಃ ॥ ೩೩ ॥
ಏತಚ್ಛೃಂಗಂ ಗಿರೇ ರಮ್ಯಂ ತವ ಸಂಸೇವನಾಚ್ಛುಭೇ ।
ಸರ್ವಪಾಪಹರಂ ನೃಣಾಂ ದರ್ಶನಾಚ್ಚ ಭವಿಷ್ಯತಿ ॥ ೩೪ ॥
ಯೇಽತ್ರ ಸ್ನಾನಂ ಕರಿಷ್ಯಂತಿ ಸುಪುಣ್ಯೇ ಸಲಿಲಾಶ್ರಯೇ ।
ತೇ ಯಾಸ್ಯಂತಿ ಪರಂ ಸ್ಥಾನಂ ಜರಾಮರಣವರ್ಜಿತಂ ॥ ೩೫ ॥
ಮಾಘಮಾಸೇ ತೃತೀಯಾಯಾಂ ಶುಕ್ಲಾಯಾಂ ಯೇ ಸಮಾಹಿತಾಃ ।
ಸಪ್ತಜನ್ಮಾಂತರಾಣ್ಯೇವ ಭವಿಷ್ಯಂತಿ ಸುಖಾನ್ವಿತಾಃ ॥ ೩೬ ॥

---

ಆದರಿಂದವನು ವಿನಾಯಕನೆಂದು ವಿಖ್ಯಾತನಾಗಿ ತ್ರೈಲೋಕ್ಯವಾಸಿಗಳಾದ ಸಮಸ್ತ ದೇವದಾನವರಿಗೆ ವಿನಾಯಕನಾದನು.

೩೨. ದೊರೆಯೆ! ಬಳಿಕ ಸಮಸ್ತ ದೇವತೆಗಳು ದೇವಿಗೆ ಪ್ರಿಯವನ್ನುಂಟು ಮಾಡುವುದರಲ್ಲಿ ನಿರತರಾಗಿ ಆವಳಿಗೆ ದಿವ್ಯ ವರಗಳನ್ನಿತ್ತು ಆವಳನ್ನು ಕುರಿತು ಇಂತೆಂದರು.

೩೩. ದೇವತೆಗಳು ಹೇಳುತ್ತಾರೆ:—ದೇವಿ! ನಿನ್ನ ಈ ಪುತ್ರನು ನಮ್ಮೆಲ್ಲರಿಗೆ ಮುಂದಾಳಾಗುವನು. ಇವನನ್ನು ಮೊದಲು ಪೂಜಿಸಿದರೆ ಆನಂತರ ದೇವತೆಗಳು ಪೂಜೆಯನ್ನು ಸ್ವೀಕರಿಸುವರು.

೩೪. ರಮ್ಯವಾದ ಈ ಪರ್ವತಶಿಖರವನ್ನು ನೀನು ಸೇವಿಸಿರುವುದರಿಂದ ಇದ ದರ್ಶನದಿಂದ ಮನುಷ್ಯರ ಸಕಲ ಪಾಪಗಳನ್ನು ನಿವಾರಿಸುವುದು.

೩೫–೩೬. ಈ ಪವಿತ್ರ ಜಲಾಶಯದಲ್ಲಿ ಮಾಘ ಶುಕ್ಲ ತದಿಗೆದಿನ ಸಾವಧಾನ ಮನಸ್ಸಿನಿಂದ ಮಿಂದವರು ಜರಾಮರಣಗಳಿಲ್ಲದ ಉತ್ತಮಸ್ಥಾನವನ್ನು ಪಡೆಯುವರು. ಮತ್ತು ಏಳು ಜನ್ಮಗಳಲ್ಲಿ ಸುಖಿಗಳಾಗುವರು.

**ಏವಮುಕ್ತ್ವಾ ಸುರಾಃ ಸರ್ವೇ ಸ್ವಸ್ಥಾನಂ ತು ತತೋ ಗತಾಃ ।**
**ದೇವೋಽಪಿ ಸಹಿತೋ ದೇವ್ಯಾ ಕೈಲಾಸಂ ಪರ್ವತಂ ಗತಃ ॥ ೩೭ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಈಶಾನೀಶಿಖರಮಾಹಾತ್ಮ್ಯವರ್ಣನಂನಾಮ
ದ್ವಿಪಂಚಾಶತ್ತಮೋಽಧ್ಯಾಯಃ

---

೩೭. ದೇವತೆಗಳು ಹೀಗೆಂದು ಹೇಳಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಶಂಕರನೂ ದೇವಿಯೊಡನೆ ಕೈಲಾಸಕ್ಕೆ ಹೋದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಈಶಾನೀಶಿಖರಮಾಹಾತ್ಮ್ಯವರ್ಣನವೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ತ್ರಿಪಂಚಾಶತ್ತಮೋಽಧ್ಯಾಯಃ

### ಬ್ರಹ್ಮಪದೋತ್ಪತ್ತಿಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇದ್ಬ್ರಹ್ಮಪದಂ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಯತ್ರ ಪೂರ್ವಂ ಪದಂ ನ್ಯಸ್ತಂ ಬ್ರಹ್ಮಣಾ ಲೋಕಕಾರಿಣಾ ॥ ೧ ॥
ಪುರಾ ಬ್ರಹ್ಮಾದಯೋ ದೇವಾಸ್ತತ್ರ ಸರ್ವೇ ಸಮಾಹಿತಾಃ ।
ಅರ್ಬುದೇ ಪರ್ವತೇ ರಮ್ಯ ಋಷಯಶ್ಚ ಸುನಿರ್ಮಲಾಃ ॥ ೨ ॥
ಅಚಲೇಶ್ವರಯಾತ್ರಾಯಾಂ ಸುಭಕ್ತ್ಯಾ ಭಾವಿತಾ ನೃಪ ।
ಅಥ ತೇ ಮುನಯಃ ಸರ್ವೇ ಪ್ರೋಚುರ್ದೇವಂ ಪಿತಾಮಹಂ ॥ ೩ ॥

ಋಷಯ ಊಚು :—

ಪ್ರಭೂತನಿಯಮೈರ್ಹೋಮೈರ್ವ್ರತಸ್ನಾನೈಶ್ಚ ನಿತ್ಯಶಃ ।
ಉಪವಾಸೈಶ್ಚ ನಿರ್ವಿಣ್ಣಾ ವಯಂ ಸರ್ವೇ ಪಿತಾಮಹ ॥ ೪ ॥
ತಸ್ಮಾತ್ಸದುಪದೇಶಂ ತ್ವಂ ಕಿಂಚಿದ್ದಾತುಮಿಹಾರ್ಹಸಿ ।
ತರಾಮೋ ಯೇನ ದೇವೇಶ ದುರ್ಗಂ ಸಂಸಾರಸಾಗರಂ ॥ ೫ ॥

---

ಕನ್ನಡದ ಅನುವಾದ

### ಬ್ರಹ್ಮಪದೋತ್ಪತ್ತಿಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ತ್ರಿಭುವನಪ್ರಸಿದ್ಧವಾದ ಬ್ರಹ್ಮಪದ ತೀರ್ಥಕ್ಕೆ ಹೋಗಬೇಕು. ಅಲ್ಲಿ ಹಿಂದೆ ಸೃಷ್ಟಿಕರ್ತನಾದ ಚತುರ್ಮುಖನು ತನ್ನ ಪಾದವನ್ನಿಟ್ಟಿರುವನು.

೨–೩. ಹಿಂದೆ ಬ್ರಹ್ಮಾದಿ ದೇವತೆಗಳೂ, ಪರಿಶುದ್ಧರಾದ ಮುನಿಗಳೂ ಭಕ್ತಿಯಿಂದ ಅಚಲೇಶ್ವರ ಯಾತ್ರೆಗೆ ಹೋದರು. ಆಗ ಮುನಿಗಳು ಪಿತಾಮಹನನ್ನು ಕುರಿತು ಇಂತೆಂದರು.

೪. ಋಷಿಗಳು ಹೇಳುತ್ತಾರೆ:—ಪಿತಾಮಹ! ನಾವು ಬಹು ನಿಯಮ, ಹೋಮ, ವ್ರತ, ಸ್ನಾನ, ಉಪವಾಸ ಇವುಗಳಿಂದ ಯಾವಾಗಲೂ ಖೇದಗೊಂಡಿದ್ದೇವೆ.

೫. ಆದ್ದರಿಂದ ನಮಗೆ ಯಾವುದಾದರೊಂದು ಸದುಪದೇಶವನ್ನು ಮಾಡು. ಅದರಿಂದ ನಾವು ದುರ್ಗಮವಾದ ಸಂಸಾರಸಾಗರವನ್ನು ದಾಟುವೆವು.

ಅಯಾಚಿತೋಪಚಾರೈಶ್ಚ ಜಪಹೋಮೈಃ ಸುದುಷ್ಕರೈಃ ।
ಮಂತ್ರೈರ್ವ್ರತೈಸ್ತಥಾ ದಾನೈಃ ಸ್ವರ್ಗಪ್ರಾಪ್ತಿಂ ವದಸ್ವ ನಃ || ೬ ||
ತೇಷಾಂ ತದ್ವಚನಂ ಶ್ರುತ್ವಾ ತದಾ ದೇವಃ ಕೃಪಾನ್ವಿತಃ ।
ಚಿಂತಯಾಮಾಸ ಸುಚಿರಮಿಹ ಕಿಂಚಿತ್ಪ್ರಹಸ್ಯ ಚ || ೭ ||
ತತಃ ಸ್ವಕಂ ಪದಂ ತ್ಯಕ್ತ್ವಾ ರಮ್ಯೇ ಪರ್ವತರೋಧಸಿ ।
ಅಥೋವಾಚ ಮುನೀನ್ಸರ್ವಾನ್ಬ್ರಹ್ಮಾ ಸಂಶ್ಲಕ್ಷ್ಣಯಾ ಗಿರಾ || ೮ ||

ಬ್ರಹ್ಮೋವಾಚ :—

ಏತನ್ಮಹಾಪದಂ ರಮ್ಯಂ ಸರ್ವಪಾತಕನಾಶನಂ ।
ಸ್ಪೃಶಂತು ಋಷಯಃ ಸರ್ವೇ ತತೋ ಯಾಸ್ಯಥ ಸದ್ಗತಿಂ || ೯ ||
ವಿನಾ ಸ್ನಾನೇನ ದಾನೇನ ವ್ರತಹೋಮಜಪಾದಿಭಿಃ ।
ಹಿತಾರ್ಥಂ ಸರ್ವಲೋಕಾನಾಂ ಮಯಾ ನ್ಯಸ್ತಂ ಪದಂ ಶುಭಂ || ೧೦ ||
ಅಸ್ಮಿನ್ಪದೇ ಮಯಾ ನ್ಯಸ್ತೇ ಯಾಂತಿ ಲೋಕಾಃ ಸಹಸ್ರಶಃ ।
ಸ್ಪೃಶಂತು ಋಷಯಃ ಸರ್ವೇ ದೇವಾಶ್ಚಾಪಿ ಪದಂ ಮಮ || ೧೧ ||

---

೬. ಯಾಚನೆಯಿಲ್ಲದ ಉಪಚಾರ, ಮಾಡಲಾಗದ ಜಪ, ಹೋಮ, ಮಂತ್ರ, ವ್ರತ, ದಾನ ಇವುಗಳಿಂದ ಲಭಿಸುವ ಸ್ವರ್ಗವನ್ನು ತಿಳಿಸು.

೭. ಆಗ ಬ್ರಹ್ಮನು ಅವರ ಆ ಮಾತನ್ನು ಕೇಳಿ ದಯೆಗೊಂಡು ಸ್ವಲ್ಪ ನಕ್ಕು ಬಹಳ ಹೊತ್ತು ಆಲೋಚಿಸಿದನು.

೮. ತರುವಾಯ ತನ್ನ ಪಾದವನ್ನು ಆ ರಮ್ಯ ಪರ್ವತದ ತಪ್ಪಲಿನಲ್ಲಿರಿಸಿ ಸಕಲ ಮುನಿಗಳನ್ನು ಕುರಿತು ಮೃದು ನುಡಿಯಿಂದ ಇಂತೆಂದನು.

೯–೧೦. ಮುನಿಗಳೇ! ನೀವೆಲ್ಲ ಸಕಲ ಪಾಪಗಳನ್ನು ಪರಿಹರಿಸುವ ಈ ಮಹಾ ಪಾದವನ್ನು ಮುಟ್ಟಿರಿ. ಅದರಿಂದ ಸ್ನಾನ, ದಾನ, ವ್ರತ, ಹೋಮ, ಜಪ ಮೊದಲಾದುವುಗಳಿಲ್ಲದೆಯೆ ಸದ್ಗತಿಯನ್ನು ಪಡೆಯುವಿರಿ. ನಾನು ಸಕಲ ಜನರ ಹಿತಕ್ಕಾಗಿ ಈ ಪಾದವನ್ನಿಲ್ಲಿಟ್ಟಿರುವೆನು.

೧೧. ನಾನಿಟ್ಟಿರುವ ಈ ಪಾದದಿಂದ ಸಾವಿರಾರು ಮಂದಿ ನರರು ಸದ್ಗತಿಯನ್ನು ಪಡೆಯುವರು. ಸಮಸ್ತ ಋಷಿಗಳೂ, ದೇವತೆಗಳೂ ಎಲ್ಲರೂ ನನ್ನ ಪಾದವನ್ನು ಮುಟ್ಟಲಿ.

ಏಕೈವಾತ್ರ ಪ್ರಕರ್ತವ್ಯಾ ಶ್ರದ್ಧಾ ವಾಽವ್ಯಭಿಚಾರಿಣೀ ।
ಯಶ್ಚ ಶ್ರದ್ಧಾನ್ವಿತಃ ಸಮ್ಯಕ್ಪದಮೇತನ್ಮುನೀಶ್ವರಾಃ ॥ ೧೨ ॥
ಪೂಜಯಿಷ್ಯತಿ ಸಂಪ್ರಾಪ್ತೇ ಕಾರ್ತಿಕೇ ಪೂರ್ಣಿಮಾದಿನೇ ।
ತೋಯೈಃ ಫಲೈಶ್ಚ ವಿವಿಧೈರ್ಗಂಧಮಾಲ್ಯಾನುಲೇಪನೈಃ ॥ ೧೩ ॥
ಬ್ರಾಹ್ಮಣಾನ್ಭೋಜಯಿತ್ವಾ ತು ಮಿಷ್ಟಾನ್ನೇನ ಸ್ವಶಕ್ತಿತಃ ।
ಸ ಯಾಸ್ಯತಿ ನ ಸಂದೇಹೋ ಮಮ ಲೋಕಂ ಸುದುರ್ಲಭಂ ॥ ೧೪ ॥

ಪುಲಸ್ತ್ಯ ಉವಾಚ :—

ತತೋ ಮುನಿಗಣಾಃ ಸರ್ವೇ ಸಮ್ಯಕ್ಛ್ರದ್ಧಾಸಮನ್ವಿತಾಃ ।
ಪೂಜಯಿತ್ವಾ ಪದಂ ತತ್ರ ಬ್ರಹ್ಮಲೋಕಂ ಸಮಾಗತಾಃ ॥ ೧೫ ॥
ತಸ್ಮಾತ್ಸರ್ವಪ್ರಯತ್ನೇನ ಪದಂ ಪೂಜ್ಯಂ ನರೋತ್ತಮ ।
ಪಿತಾಮಹಪದಂ ಸಮ್ಯಕ್ಛ್ರದ್ಧಯಾ ಸ್ವರ್ಗದಾಯಕಂ ॥ ೧೬ ॥
ಅನ್ಯತ್ಕೌತೂಹಲಂ ರಾಜನ್ಮಹದ್ದೃಷ್ಟಂ ಮಹಾದ್ಭುತಂ ।
ಪದಸ್ಯ ತಸ್ಯ ಯಚ್ಛ್ರುತ್ವಾ ಜಾಯತೇ ವಿಸ್ಮಯೋ ಮಹಾನ್ ॥ ೧೭ ॥
ಆಯಾಮವಿಸ್ತರೇಣಾಽಪಿ ಪ್ರಾಪ್ತೇ ಕೃತಯುಗೇ ನೃಪ ।
ನ ಸಂಖ್ಯಾ ಜಾಯತೇ ರಾಜಞ್ಛುಕ್ಲವರ್ಣಸ್ಯ ಮಾನವೈಃ ॥ ೧೮ ॥

---

೧೨–೧೪. ಇಲ್ಲಿ ನಿರ್ವ್ಯಾಜವಾದ ಶ್ರದ್ಧೆಯನ್ನು ಮಾಡಬೇಕು. ಮುನಿವರ್ಯರೆ! ಕಾರ್ತಿಕ ಮಾಸದ ಹುಣ್ಣಿಮೆ ದಿನ ನೀರು, ಫಲ, ನಾನಾಬಗೆಯ ಗಂಧಮಾಲ್ಯಾದಿಗಳಿಂದ ನನ್ನನ್ನು ಚೆನ್ನಾಗಿ ಶ್ರದ್ಧೆಯಿಂದ ಪೂಜಿಸಿ ಶಕ್ತ್ಯನುಸಾರ ಮಿಷ್ಟಾನ್ನದಿಂದ ಬ್ರಾಹ್ಮಣರಿಗೆ ಭೋಜನ ಮಾಡಿಸಿದವನು ನಿಜವಾಗಿಯೂ ದುರ್ಲಭವಾದ ನನ್ನ ಲೋಕವನ್ನು ಹೊಂದುವನು.

೧೫. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಅಲ್ಲಿ ಸಮಸ್ತ ಮುನಿಗಳು ಶ್ರದ್ಧೆಯಿಂದ ಆ ಪಾದವನ್ನು ಪೂಜಿಸಿ ಬ್ರಹ್ಮಲೋಕಕ್ಕೆ ತೆರಳಿದರು.

೧೬. ಮಹಾರಾಜ! ಆದ್ದರಿಂದ ಮಾನವರು ಸಕಲಪ್ರಯತ್ನದಿಂದ ಸ್ವರ್ಗವನ್ನೀಯುವ ಆ ಪಿತಾಮಹಪಾದವನ್ನು ಶ್ರದ್ಧೆಯಿಂದ ಪೂಜಿಸಬೇಕು.

೧೭. ದೊರೆಯೆ! ಆ ಪಾದದ ಮಾಹಾತ್ಮ್ಯವನ್ನು ಕೇಳಿ ಉಂಟಾಗುವಷ್ಟು ಬೇರೊಂದು ಆಶ್ಚರ್ಯವನ್ನು ನೀನು ನೋಡಿರುವೆಯೊ?

೧೮. ಕೃತಯುಗದಲ್ಲಿ ಶುಕ್ಲವರ್ಣವಾಗಿರುವ ಆ ಪಾದದ ಉದ್ದ ಮತ್ತು ಅಗಲಗಳ ಸಂಖ್ಯೆಯನ್ನು ಮಾನವರು ಅರಿಯುವುದಿಲ್ಲ.

ತತಸ್ತ್ರೇತಾಯುಗೇ ಪ್ರಾಪ್ತೇ ರಕ್ತವರ್ಣಂ ಪ್ರದೃಶ್ಯತೇ ।
ಸುವ್ಯಕ್ತಂ ಸಂಖ್ಯಯಾ ಯುಕ್ತಂ ಸರ್ವಲೋಕನಮಸ್ಕೃತಂ ॥ ೧೯ ॥
ದ್ವಾಪರೇ ಕಪಿಲಂ ತಚ್ಚ ಲಘುಮಾತ್ರಂ ಪ್ರದೃಶ್ಯತೇ ।
ಕಲೌ ಕೃಷ್ಣಂ ಸುಸೂಕ್ಷ್ಮಂ ಚ ರಮ್ಯೇ ಪರ್ವತರೋಧಸಿ ॥ ೨೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಬ್ರಹ್ಮಪದೋತ್ಪತ್ತಿಮಾಹಾತ್ಮ್ಯವರ್ಣನಂ ನಾಮ
ತ್ರಿಪಂಚಾಶತ್ತಮೋಽಧ್ಯಾಯಃ

---

೧೯. ಬಳಿಕ ತ್ರೇತಾಯುಗದಲ್ಲಿ ರಕ್ತವರ್ಣವಾಗುವ ಆ ಪಾದದ ಉದ್ದ ಮತ್ತು ಅಗಲಗಳ ಸಂಖ್ಯೆಯು ಸ್ಪಷ್ಟವಾಗಿ ತಿಳಿಯುವುದು.

೨೦. ಅದು ಅರ್ಬುದಾಚಲದ ತಪ್ಪಲಿನಲ್ಲಿ ದ್ವಾಪರಯುಗದಲ್ಲಿ ಕಪಿಲ ವರ್ಣವಾಗಿ ಸಣ್ಣಗೂ, ಕಲಿಯುಗದಲ್ಲಿ ಕೃಷ್ಣವರ್ಣವಾಗಿ ಸೂಕ್ಷ್ಮವಾಗಿಯೂ ಕಾಣಿಸುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಬ್ರಹ್ಮಪದೋತ್ಪತ್ತಿಮಾಹಾತ್ಮ್ಯವರ್ಣನ ವೆಂಬ
ಐವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

## ಚತುಷ್ಪಂಚಾಶತ್ತಮೋಽಧ್ಯಾಯಃ

### ತ್ರಿಪುಷ್ಕರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತಸ್ತ್ರಿಪುಷ್ಕರಂ ಗಚ್ಛೇದಭೀಷ್ಟಂ ಪದ್ಮಜಸ್ಯ ಚ ।
ಬ್ರಹ್ಮಣಾ ತತ್ಸಮಾನೀತಂ ಪರ್ವತೇಽರ್ಬುದಸಂಜ್ಞಕೇ ॥ ೧ ॥
ವಸಿಷ್ಠಸ್ಯ ಪುರಾ ಸತ್ರೇ ವರ್ತಮಾನೇ ನರಾಧಿಪ ।
ತಸ್ಮಿನ್ನಗೇ ಸಮಾಯಾತಾ ಬ್ರಹ್ಮಾದ್ಯಾಶ್ಚ ಸರೋತ್ತಮಾಃ ॥ ೨ ॥
ಪ್ರತಿಜ್ಞಾತಂ ಮಹಾರಾಜ ಬ್ರಹ್ಮಣಾವ್ಯಕ್ತಜನ್ಮನಾ ।
ಯಾವತ್ಸ್ಥಾಸ್ಯೇ ನೃಲೋಕೇಽಸ್ಮಿಂಸ್ತಾವತ್ಸಂಧ್ಯಾಂ ತ್ರಿಪುಷ್ಕರೇ ॥
ವಂದಯಿಷ್ಯಾಮಿ ಸಂಪ್ರಾಪ್ತೇ ಸಂಧ್ಯಾಕಾಲೇ ಸಮಾಹಿತಃ ॥ ೩ ॥
ಏತಸ್ಮಿನ್ನೇವ ಕಾಲೇತು ಪ್ರಸ್ಥಿತಃ ಪುಷ್ಕರಂ ಪ್ರತಿ ।
ಸಂಧ್ಯಾರ್ಥಂ ಪದ್ಮಜೋ ಯಾವದ್ವಸಿಷ್ಠಸ್ತಾವದಬ್ರವೀತ್ ॥ ೪ ॥

---

### ಕನ್ನಡದ ಅನುವಾದ

### ತ್ರಿಪುಷ್ಕರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ಬ್ರಹ್ಮನು ಅರ್ಬುದಪರ್ವತಕ್ಕೆ ತೆಗೆದುಕೊಂಡುಬಂದಿರುವ ಅವನಿಗೆ ಪ್ರಿಯವಾದ ತ್ರಿಪುಷ್ಕರಕ್ಕೆ ಹೋಗಬೇಕು.

೨. ದೊರೆಯೆ! ಹಿಂದೆ ಆ ಶೈಲದಲ್ಲಿ ವಸಿಷ್ಠನ ಯಾಗವು ನಡೆಯುತ್ತಿರಲು ಬ್ರಹ್ಮಾದಿಸುರೋತ್ತಮರು ಅಲ್ಲಿಗೆ ಬಂದರು.

೩. ಅವ್ಯಕ್ತಜನ್ಮನಾದ ಪಿತಾಮಹನು ನಾನು ಭೂಲೋಕದಲ್ಲಿರುವವರೆಗೆ ಸಂಧ್ಯಾಕಾಲದಲ್ಲಿ ತ್ರಿಪುಷ್ಕರದಲ್ಲಿ ಸಂಧ್ಯಾವಂದನೆಯನ್ನು ಮಾಡುವೆನು, ಎಂದು ಪ್ರತಿಜ್ಞೆ ಮಾಡಿದನು.

೪. ಅದರಂತೆ ಬ್ರಹ್ಮನು ಸಂಧ್ಯಾವಂದನೆಗಾಗಿ ತ್ರಿಪುಷ್ಕರಕ್ಕೆ ಹೊರಡಲು ವಸಿಷ್ಠಮುನಿಯು ಇಂತೆಂದನು.

ವಸಿಷ್ಠ ಉವಾಚ:—

ಕರ್ಮಕಾಲಶ್ಚ ಸಂಪ್ರಾಪ್ತೋ ಯಜ್ಞೇಽಸ್ಮಿನ್ಸುರಸತ್ತಮ ।
ಸ ವಿನಾ ನ ತ್ವಯಾ ದೇವ ಸಿದ್ಧಿಂ ಯಾಸ್ಯತಿ ಕರ್ಹಿಚಿತ್ ॥ ೫ ॥

ತಸ್ಮಾದಾನಯ ಚಾತ್ರೈವ ಪದ್ಮಯೋನೇ ತ್ರಿಪುಷ್ಕರಂ ।
ಸಂಧ್ಯೋಪಾಸ್ತಿಂ ತತಃ ಕೃತ್ವಾ ತತ್ರ ಭೂಯಃ ಸುರೇಶ್ವರ ॥
ಬ್ರಹ್ಮತ್ವಂ ಕುರು ದೇವೇಶ ಸತ್ರೇ ಚಾಸ್ಮಿನ್ದಯಾನಿಧೇ ॥ ೬ ॥
ಏವಮುಕ್ತೋ ವಸಿಷ್ಠೇನ ಬ್ರಹ್ಮಾ ಲೋಕಪಿತಾಮಹಃ ।
ಧ್ಯಾತ್ವಾ ತತ್ರಾನಯಾಮಾಸ ಜ್ಯೇಷ್ಠಮಧ್ಯಕನಿಷ್ಠಕಂ ॥
ಪುಷ್ಕರತ್ರಿತಯಂ ಚಾಗಾತ್ಸಪುಣ್ಯೇ ಸಲಿಲಾಶಯೇ ॥ ೭ ॥
ತತಃ ಪ್ರಭೃತಿ ಸಂಜಾತಮರ್ಬುದೇಽಸ್ಮಿಂಸ್ತ್ರಿಪುಷ್ಕರಂ ॥ ೮ ॥

ತತ್ರ ಯಃ ಕಾರ್ತಿಕೇ ಮಾಸಿ ಪೌರ್ಣಮಾಸ್ಯಾಂ ಸಮಾಹಿತಃ ।
ಸ್ನಾನಂ ಕರೋತಿ ದಾನಂ ಚ ತಸ್ಯ ಲೋಕಾಃ ಸನಾತನಾಃ ॥ ೯ ॥

---

೫. ವಸಿಷ್ಠನು ಹೇಳುತ್ತಾನೆ:—ಪಿತಾಮಹ! ಈ ಯಜ್ಞದಲ್ಲಿ ನಿನ್ನ ಸಂಧ್ಯಾವಂದನೆಯ ವೇಳೆಯು ಒದಗಿರುವುದು. ನೀನು ಇಲ್ಲದಿದ್ದರೆ ಕರ್ಮವು ಎಲ್ಲಿಯೂ ಸಿದ್ಧಿಸಲಾರದು.

೬. ದಯಾಳುವಾದ ಚತುರ್ಮುಖನೇ! ಆದ್ದರಿಂದ ನೀನು ಇಲ್ಲಿಗೆ ತ್ರಿಪುಷ್ಕರವನ್ನು ತಂದು ಸಂಧ್ಯಾವಂದನೆಯನ್ನು ಪೂರಯಿಸಿ ಈ ಯಜ್ಞದಲ್ಲಿ ಬ್ರಹ್ಮತ್ವವನ್ನು ಹೊಂದು.

೭. ವಸಿಷ್ಠನು ಹೀಗೆನ್ನಲು ಬ್ರಹ್ಮನು ಚಿಂತಿಸಿ ಜ್ಯೇಷ್ಠ, ಮಧ್ಯ, ಕನಿಷ್ಠಕ ಎಂಬ ಮೂರು ಪುಷ್ಕರಗಳನ್ನು ಆ ಕೊಳಕ್ಕೆ ತರಿಸಿದನು.

೮. ಅದು ಮೊದಲ್ಗೊಂಡು ಅರ್ಬುದ ಪರ್ವತದಲ್ಲಿ ತ್ರಿಪುಷ್ಕರಕ್ಷೇತ್ರವು ಉಂಟಾಯಿತು.

೯. ಅಲ್ಲಿ ಕಾರ್ತಿಕಮಾಸದಲ್ಲಿ ಹುಣ್ಣಿಮೆ ದಿನ ಸ್ನಾನದಾನಗಳನ್ನು ಮಾಡುವವನಿಗೆ ಶಾಶ್ವತ ಲೋಕಗಳು ಲಭಿಸುವುವು.

**ತಸ್ಯ ಚೋತ್ತರದಿಗ್ಭಾಗೇ ಸಾವಿತ್ರೀಕುಂಡಮುತ್ತಮಂ ।**
**ಸ್ನಾನದಾನಾದಿಕಂ ಕುರ್ವನ್ಯತ್ರ ಯಾತಿ ಶುಭಾಂ ಗತಿಂ ॥ ೧೦ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾऽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇऽರ್ಬುದಖಂಡೇ
ತ್ರಿಪುಷ್ಕರಮಾಹಾತ್ಮ್ಯವರ್ಣನಂ ನಾಮ
ಚತುಷ್ಪಂಚಾಶತ್ತಮೋऽಧ್ಯಾಯಃ

---

೧೦. ಆ ತ್ರಿಪುಷ್ಕರದ ಉತ್ತರ ದಿಕ್ಕಿನಲ್ಲಿ ಉತ್ತಮವಾದ ಸಾವಿತ್ರೀಕುಂಡ ವಿರುವುದು. ಅಲ್ಲಿ ಸ್ನಾನದಾನಾದಿಗಳನ್ನು ಮಾಡುವವನು ಸದ್ಗತಿಯನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ತ್ರಿಪುಷ್ಕರಮಾಹಾತ್ಮ್ಯವರ್ಣನವೆಂಬ
ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚಪಂಚಾಶತ್ತಮೋಽಧ್ಯಾಯಃ

### ರುದ್ರಹ್ರದಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಪುಣ್ಯಂ ರುದ್ರಹ್ರದಂ ಶುಭಂ ।
ಯತ್ರ ಸ್ನಾತೋ ನರೋ ಭಕ್ತ್ಯಾ ಗಣಾಧೀಶತ್ವಮಾಪ್ನುಯಾತ್ ॥ ೧ ॥
ಪುರಾ ಹತ್ವಾಂಧಕಂ ದೈತ್ಯಂ ಸಗಣೋ ವೃಷಭಧ್ವಜಃ ।
ತತಃ ಸ್ನಾತೋ ಹ್ರದಂ ಕೃತ್ವಾ ತತೋ ರುದ್ರಹ್ರದೋಽಭವತ್ ॥ ೨ ॥
ಚತುರ್ದಶ್ಯಾಂ ಮಹಾರಾಜ ಯಸ್ತತ್ರ ಕುರುತೇ ನರಃ ।
ಸ್ನಾನಂ ತಸ್ಯ ಭವೇತ್ಪುಣ್ಯಂ ಸರ್ವತೀರ್ಥಸಮುದ್ಭವಂ ॥ ೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ರುದ್ರಹ್ರದಮಾಹಾತ್ಮ್ಯವರ್ಣನಂ ನಾಮ
ಪಂಚಪಂಚಾಶತ್ತಮೋಽಧ್ಯಾಯಃ

---

### ಕನ್ನಡದ ಅನುವಾದ

### ರುದ್ರಹ್ರದಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಪುಣ್ಯಕರವಾದ ರುದ್ರಹ್ರದಕ್ಕೆ ಹೋಗಬೇಕು. ಅಲ್ಲಿ ಭಕ್ತಿಯಿಂದ ಮಿಂದವನು ಗಣಾಧೀಶನಾಗುವನು.

೨. ಹಿಂದೆ ರುದ್ರನು ಅಂಧಕಾಸುರನನ್ನು ಕೊಂದು ಪ್ರಮಥ ಗಣಗಳೊಡನೆ ಅಲ್ಲಿ ಹ್ರದವನ್ನು ರಚಿಸಿ ಅದರಲ್ಲಿ ಮಿಂದನು. ಅದರಿಂದ ಅದು ರುದ್ರಹ್ರದವಾಯಿತು.

೩. ಮಹಾರಾಜ ! ಚತುರ್ದಶೀ ದಿನ ಅಲ್ಲಿ ಮಿಂದ ಮಾನವನಿಗೆ ಸಕಲ ತೀರ್ಥಗಳಲ್ಲಿ ಮಿಂದ ಪುಣ್ಯವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ರುದ್ರಹ್ರದಮಾಹಾತ್ಮ್ಯವರ್ಣನವೆಂಬ
ಐವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷಟ್ಪಂಚಾಶತ್ತಮೋಽಧ್ಯಾಯಃ

### ಗುಹೇಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಗುಹೇಶ್ವರಮನುತ್ತಮಂ ।
ಗುಹಾಮಧ್ಯೇ ಗತಂ ಲಿಂಗಂ ಸಿದ್ಧೈಃ ಸಂಪೂಜಿತಂ ಪುರಾ ॥ ೧ ॥
ಯಂ ಯಂ ಕಾಮಮಭಿಧ್ಯಾಯ ಸಂಪೂಜಯತಿ ಮಾನವಃ ।
ತಂ ತಂ ಸಂಲಭತೇ ರಾಜನ್ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥ ೨ ॥
ಅವಿಯುಕ್ತವನಂ ಗಚ್ಛೇತ್ತತಃ ಪಾರ್ಥಿವಸತ್ತಮ ।

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಗುಹೇಶ್ವರಮಾಹಾತ್ಮ್ಯವರ್ಣನಂ ನಾಮ
ಷಟ್ಪಂಚಾಶತ್ತಮೋಽಧ್ಯಾಯಃ

---

### ಕನ್ನಡದ ಅನುವಾದ

### ಗುಹೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ತರುವಾಯ ಮಹಾರಾಜ! ಹಿಂದೆ ಸಿದ್ಧರು ಗುಹೆಯ ಮಧ್ಯದಲ್ಲಿ ಪೂಜಿಸಿರುವ ಗುಹೇಶ್ವರಲಿಂಗದೆಡೆಗೆ ಹೋಗಬೇಕು.

೨. ಅಲ್ಲಿ ಮಾನವನು ಯಾವ ಯಾವ ಇಷ್ಟವನ್ನು ಚಿಂತಿಸಿ ಆ ಲಿಂಗವನ್ನು ಪೂಜಿಸುವನೋ, ಆಯಾ ಅಭೀಷ್ಟವನ್ನು ಪಡೆಯುವನು. ನಿಷ್ಕಾಮನು ಮೋಕ್ಷವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಗುಹೇಶ್ವರಮಾಹಾತ್ಮ್ಯವರ್ಣನವೆಂಬ
ಐವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತಪಂಚಾಶತ್ತಮೋಽಧ್ಯಾಯಃ

### ಅವಿಯುಕ್ತಕ್ಷೇತ್ರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ಯಸ್ಮಿನ್ದೃಷ್ಟೇ ನರೋಽಭೀಷ್ಟೈರ್ನ ವಿಯುಜ್ಯೇತ ಕರ್ಹಿಚಿತ್ ॥ ೧ ॥
ತತ್ರ ಪೂರ್ವಂ ಶಚೀ ರಾಜನ್ಪ್ರವಿಷ್ಟಾ ದುಃಖಸಂಯುತಾ ।
ನಹುಷೇಣ ಹೃತೇ ರಾಜ್ಯೇ ದೇವೇಂದ್ರಸ್ಯ ಮಹಾತ್ಮನಃ ॥ ೨ ॥
ತತ್ಪ್ರಭಾವಾತ್ಪುನಃ ಪ್ರಾಪ್ತೋ ವಿಯುಕ್ತೋಽಪಿ ಶತಕ್ರತುಃ ।
ತತಸ್ತಸ್ಯ ವರೋ ದತ್ತೋ ವನಸ್ಯ ಹಿ ತಯಾ ನೃಪ ॥ ೩ ॥
ನರೋ ವಾ ಯದಿ ವಾ ನಾರೀ ವಿಯುಕ್ತಾತ್ರ ವನೇ ಶುಭೇ ।
ಪ್ರಿಯೈರ್ನಿವಾಸ ಏಕಸ್ಮಿನ್ರಾತ್ರಿಮೇಕಾಂ ವಸಿಷ್ಯತಿ ॥ ೪ ॥
ಸ ತೇನ ಲಭತೇ ಸಂಗಂ ಭೂಯ ಏವ ಯಥಾ ಮಯಾ ।
ಪ್ರಿಯೈಃ ಸ ಲಭತೇ ವಾಸಮೇಕರಾತ್ರಂ ವಸನ್ನೃಪ ॥ ೫ ॥

---

ಕನ್ನಡದ ಅನುವಾದ

### ಅವಿಯುಕ್ತಕ್ಷೇತ್ರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ಮಹಾರಾಜ! ಬಳಿಕ ಅವಿಯುಕ್ತವನಕ್ಕೆ ಹೋಗಬೇಕು. ಅದನ್ನು ನೋಡಿದ ಮಾನವನು ಒಂದುಸಲವೂ ಇಷ್ಟಾರ್ಥಹೀನ ನಾಗುವುದಿಲ್ಲ.

೨. ಹಿಂದೆ ನಹುಷನು ದೇವೇಂದ್ರನ ರಾಜ್ಯವನ್ನು ಅಪಹರಿಸಲು ಶಚಿಯು ದುಃಖಗೊಂಡು ಆ ವನವನ್ನು ಹೊಕ್ಕಳು.

೩. ಇಂದ್ರನು ಆ ವನದ ಮಾಹಾತ್ಮ್ಯೆಯಿಂದ ಮರಳಿ ಶಚಿಯನ್ನು ಪಡೆದನು. ಅದರಿಂದ ಶಚಿಯು ಆ ವನಕ್ಕೆ ಹೀಗೆ ವರವನ್ನಿತ್ತಳು.

೪–೫. ಪ್ರಿಯರಿಂದ ವಿಯುಕ್ತನಾದ ಗಂಡಸಾಗಲಿ, ಹೆಂಗಸಾಗಲಿ ಈ ವನದಲ್ಲಿ ಒಂದು ರಾತ್ರಿ ವಾಸಿಸಿದರೆ ನನ್ನಂತೆಯೇ ಮರಳಿ ಪ್ರಿಯರೊಡನೆ ಸೇರುವರು.

ಫಲದಾನಂ ಪ್ರಶಂಸಂತಿ ತತ್ರ ಬ್ರಾಹ್ಮಣಸತ್ತಮಾಃ ।
ವಂಧ್ಯಾನಾಂ ಚ ವಿಶೇಷೇಣ ಯತಃ ಪುತ್ರಫಲಂ ಲಭೇತ್ ॥ ೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಅನಿಯುಕ್ತಕ್ಷೇತ್ರಮಾಹಾತ್ಮ್ಯವರ್ಣನಂನಾಮ
। ಸಪ್ತಪಂಚಾಶತ್ತಮೋಽಧ್ಯಾಯಃ ॥

---

೬. ಅಲ್ಲಿ ಬ್ರಾಹ್ಮಣೋತ್ತಮರು ಫಲದಾನವನ್ನು ಶ್ಲಾಘಿಸುತ್ತಾರೆ. ಬಂಜೆಯು ಫಲವನ್ನಿತ್ತರೆ ಪುತ್ರನನ್ನು ಪಡೆಯುವಳು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಶ್ರೀಸ್ಕಾಂದಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಅನಿಯುಕ್ತಕ್ಷೇತ್ರಮಾಹಾತ್ಮ್ಯ ವರ್ಣನವೆಂಬ
ಐವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟಪಂಚಾಶತ್ತಮೋಽಧ್ಯಾಯಃ

ಉಮಾಮಹೇಶ್ವರತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ಉಮಾಮಹೇಶ್ವರಂ ಗಚ್ಛೇತ್ತತೋ ರಾಜನ್ಸುಪುಣ್ಯದಂ ।
ಸ್ಥಾಪಿತಂ ಭಕ್ತಿಯುಕ್ತೇನ ಧುಂಧುಮಾರೇಣ ಯತ್ಪುರಾ ॥ ೧ ॥
ದಾಂಪತ್ಯಂ ಪೂಜಯೇದ್ಭಕ್ತ್ಯಾ ಯಸ್ತತ್ರ ಮನುಜಾಧಿಪ ।
ಸಪ್ತಜನ್ಮಾಂತರಾಣ್ಯೇವ ನ ಸ ದೌರ್ಭಾಗ್ಯಮಾಪ್ನುಯಾತ್ ॥ ೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಉಮಾಮಹೇಶ್ವರತೀರ್ಥಮಾಹಾತ್ಮ್ಯವರ್ಣನಂ ನಾಮ
॥ ಅಷ್ಟಪಂಚಾಶತ್ತಮೋಽಧ್ಯಾಯಃ ॥

---

### ಕನ್ನಡದ ಅನುವಾದ

ಉಮಾಮಹೇಶ್ವರತೀರ್ಥಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ಹಿಂದೆ ಧುಂಧುಮಾರನು ಭಕ್ತಿಯಿಂದ ಸ್ಥಾಪಿಸಿರುವ ಪುಣ್ಯಕರವಾದ ಉಮಾಮಹೇಶ್ವರ ತೀರ್ಥಕ್ಕೆ ಹೋಗಬೇಕು.

೨. ದೊರೆಯೆ! ಅಲ್ಲಿ ದಂಪತಿಗಳನ್ನು ಭಕ್ತಿಯಿಂದ ಪೂಜಿಸಿದವನು ಏಳು ಜನ್ಮಗಳಲ್ಲಿ ದೌರ್ಭಾಗ್ಯವನ್ನು ಹೊಂದುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ
ಏಳನೆಯ ಪ್ರಭಾಸಖಂಡದ ಮೂರನೆಯಅರ್ಬುದಖಂಡದಲ್ಲಿ
ಉಮಾಮಹೇಶ್ವರತೀರ್ಥಮಾಹಾತ್ಮ್ಯವರ್ಣನವೆಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

ಏಕೋನಸಪ್ತತಿತಮೋಽಧ್ಯಾಯಃ

ಮಹೌಜಸತೀರ್ಥಪ್ರಭಾವವರ್ಣನಂ

ಪುಲಸ್ತ್ಯ ಉವಾಚ :—

ತತೋ ಮಹೌಜಸಂ ಗಚ್ಛೇತ್ತೀರ್ಥಂ ಪಾತಕನಾಶನಂ ।
ಯಸ್ಮಿನ್ ಸ್ನಾತೋ ನರೋ ರಾಜಂಸ್ತೇಜಸಾ ಯುಜ್ಯತೇ ಧ್ರುವಂ ॥
ಬ್ರಹ್ಮಹತ್ಯಾಗ್ನಿನಾ ಶಕ್ರಃ ಪುರಾ ದೈನ್ಯಂ ಪರಂ ಗತಃ ॥ ೧ ॥
ನಿಃಶ್ರೀಕಸ್ತೇಜಸಾ ಹೀನೋ ದುರ್ಗಂಧೇನ ಸಮನ್ವಿತಃ ।
ಪರಿತ್ಯಕ್ತಃ ಸುರೈಃ ಸರ್ವೈರ್ವಿಷಾದಂ ಪರಮಂ ಗತಃ ॥ ೨ ॥
ತತಃ ಪಪ್ರಚ್ಛ ದೇವೇಂದ್ರೋ ದ್ವಿಜಶ್ರೇಷ್ಠಂ ಬೃಹಸ್ಪತಿಂ ।
ಭಗವಂಸ್ತೇಜಸೋ ವೃದ್ಧಿಃ ಕಥಂ ಸ್ಯಾನ್ಮೇ ಯಥಾ ಪುರಾ ॥ ೩ ॥

ಬೃಹಸ್ಪತಿರುವಾಚ :—

ತೀರ್ಥಯಾತ್ರಾಂ ಸುರಶ್ರೇಷ್ಠ ಕುರುಷ್ವ ಧರಣೀತಲೇ ।
ತೀರ್ಥಂ ವಿನಾ ಧ್ರುವಂ ವೃದ್ಧಿಸ್ತೇಜಸೋ ನ ಭವಿಷ್ಯತಿ ॥ ೪ ॥

---

ಕನ್ನಡದ ಅನುವಾದ

ಮಹೌಜಸತೀರ್ಥಪ್ರಭಾವವರ್ಣನ

೧—೨. ಪುಲಸ್ತ್ಯನು ಹೇಳುತ್ತಾನೆ:—ಬಳಿಕ ಪಾಪವನ್ನು ನೀಗಿಸುವ ಮಹೌಜಸ ತೀರ್ಥಕ್ಕೆ ಹೋಗಬೇಕು. ಇಲ್ಲಿ ಮಿಂದ ಮಾನವನು ನಿಜವಾಗಿಯೂ ತೇಜಸ್ವಿಯಾಗುವನು. ಹಿಂದೆ ಇಂದ್ರನು ಬ್ರಹ್ಮಹತ್ಯೆಯೆಂಬ ಅಗ್ನಿಯಿಂದ ಅತ್ಯಂತ ದೀನನೂ, ಕಾಂತಿಯಿಲ್ಲದವನೂ, ದುರ್ಗಂಧನೂ ಆಗಲು ಅವನನ್ನು ಸಮಸ್ತ ದೇವತೆಗಳು ತ್ಯಜಿಸಿದರು. ಆದರಿಂದವನು ಅತ್ಯಂತ ದುಃಖಗೊಂಡನು.

೩. ಬಳಿಕ ದೇವರಾಜನು ಬ್ರಾಹ್ಮಣೋತ್ತಮನಾದ ಬೃಹಸ್ಪತಿಯನ್ನು ಕುರಿತು ಪೂಜ್ಯನೆ! ನನ್ನ ತೇಜಸ್ಸು ಮೊದಲಿನಂತೆ ಹೇಗೆ ಹೆಚ್ಚೀತು? ಎಂದು ಪ್ರಶ್ನಿಸಿದನು.

೪. ಬೃಹಸ್ಪತಿಯು ಹೇಳುತ್ತಾನೆ:—ದೇವೇಂದ್ರ! ಭೂಮಿಯಲ್ಲಿ ತೀರ್ಥಯಾತ್ರೆಯನ್ನು ಮಾಡು. ತೀರ್ಥವಿಲ್ಲದೆ ನಿಶ್ಚಯವಾಗಿಯೂ ತೇಜಸ್ಸು ಹೆಚ್ಚಲಾರದು.

ತತಸ್ತೀರ್ಥಾನ್ಯನೇಕಾನಿ ಭ್ರಾಂತ್ವಾ ಶಕ್ರೋ ನರಾಧಿಪ ।
ಕ್ರಮೇಣೈವಾರ್ಬುದಂ ಪ್ರಾಪ್ತಸ್ತತ್ರ ದೃಷ್ಟ್ವಾ ಜಲಾಶಯಂ ।
ಸ್ನಾನಂ ಚಕ್ರೇ ತತಃ ಶ್ರಾಂತೋ ಮಹೌಜಾಃ ಪ್ರತ್ಯಪದ್ಯತ ॥ ೫ ॥
ದುರ್ಗಂಧೇನ ವಿನಿರ್ಮುಕ್ತಸ್ತತೋ ದೇವೈಃ ಸಮಾವೃತಃ ।
ಉವಾಚ ಪ್ರಹಸನ್ವಾಕ್ಯಂ ಶೃಣುಧ್ವಂ ಸರ್ವದೇವತಾಃ ॥ ೬ ॥
ಯೇಽತ್ರ ಸ್ನಾನಂ ಕರಿಷ್ಯಂತಿ ಪ್ರಾಪ್ತೇ ಶಕ್ರೋಚ್ಛ್ರಯೇ ಸದಾ ।
ಆಶ್ವಿನೇ ಶುಕ್ಲಪಕ್ಷಾಂತೇ ತೇ ಯಾಸ್ಯಂತಿ ಪರಾಂ ಗತಿಂ ।
ಸುಶ್ರೀಕಾಶ್ಚ ಭವಿಷ್ಯಂತಿ ಸದಾ ಜನ್ಮನಿ ಜನ್ಮನಿ ॥ ೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಮಹೌಜಸತೀರ್ಥಪ್ರಭಾವವರ್ಣನಂ ನಾಮ
ಏಕೋನಷಷ್ಟಿತಮೋಽಧ್ಯಾಯಃ

---

೫. ದೊರೆಯೆ! ಬಳಿಕ ಇಂದ್ರನು ಅನೇಕ ತೀರ್ಥಗಳಲ್ಲಿ ಸಂಚರಿಸಿ ಕ್ರಮವಾಗಿ ಅರ್ಬುದ ಪರ್ವತಕ್ಕೆ ಬಂದು ಅಲ್ಲಿರುವ ಕೊಳವನ್ನು ನೋಡಿ ಬಳಲಿದವನಾಗಿ ಅದರಲ್ಲಿ ಮಿಂದು ಅತ್ಯಂತ ತೇಜಸ್ವಿಯಾದನು.

೬-೭. ಅನಂತರ ದುರ್ವಾಸನೆಯಿಲ್ಲದವನಾಗಿ ದೇವತೆಗಳೊಡನೆ ಸೇರಿ ನಗುತ್ತ ಹೀಗೆಂದನು. ಎಲೈ ಸಮಸ್ತ ದೇವತೆಗಳೆ! ಕೇಳಿರಿ. ಆಶ್ವಿನಶುಕ್ಲಪಕ್ಷದ ಪೂರ್ಣಿಮಾ ದಿನ ಈ ಶಕ್ರೋಚ್ಛ್ರಯ ತೀರ್ಥದಲ್ಲಿ ಮಿಂದವರು ಉತ್ತಮ ಗತಿಯನ್ನು ಹೊಂದುವರು. ಪ್ರತಿ ಜನ್ಮದಲ್ಲಿಯೂ ಒಳ್ಳೆ ಕಾಂತಿಯುಳ್ಳವರಾಗುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಮಹೌಜಸತೀರ್ಥಪ್ರಭಾವವರ್ಣನವೆಂಬ
ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ।

## ಷಷ್ಟಿತಮೋಽಧ್ಯಾಯಃ

### ಜಂಬೂತೀರ್ಥಪ್ರಭಾವವರ್ಣನಂ

ಪುಲಸ್ತ್ಯ ಉವಾಚ :—

ತತೋ ಗಚ್ಛೇನ್ನೃಪಶ್ರೇಷ್ಠ ಜಂಬೂತೀರ್ಥಮನುತ್ತಮಂ ।
ತತ್ರ ಸ್ನಾತೋ ನರಃ ಸಮ್ಯಗಿಷ್ಟಂ ಫಲಮವಾಪ್ನುಯಾತ್ ॥
ಜಂಬೂದ್ವೀಪಸಮುತ್ಥಾನಾಂ ತೀರ್ಥಾನಾಂ ನೃಪಸತ್ತಮ ॥ ೧ ॥
ಆಸೀತ್ಪುರಾ ನಿಮಿರ್ನಾಮ ಕ್ಷತ್ರಿಯಃ ಸೂರ್ಯವಂಶಜಃ ।
ವಯಸಃ ಪರಿಣಾಮೇ ಸ ಪರ್ವತಂ ಚಾರ್ಬುದಂ ಗತಃ ॥ ೨ ॥
ಪ್ರಾಯೋಪವೇಶನಂ ಕೃತ್ವಾ ಸ್ಥಿತಸ್ತತ್ರ ಸಮಾಹಿತಃ ।
ಅಥಾಜಗ್ಮುರ್ಮುನಿಗಣಾಸ್ತಸ್ಯ ಪಾರ್ಶ್ವೇ ಸಹಸ್ರಶಃ ॥ ೩ ॥
ಚಕ್ರುರ್ಧರ್ಮಕಥಾಂ ಪುಣ್ಯಾಂ ರಾಜರ್ಷೀಣಾಂ ಮಹಾತ್ಮನಾಂ ।
ದೇವರ್ಷೀಣಾಂ ಪುರಾಣಾನಾಂ ತಥಾನ್ಯೇಷಾಂ ಮಹಾತ್ಮನಾಂ ॥ ೪ ॥

---

### ಕನ್ನಡದ ಅನುವಾದ

### ಜಂಬೂತೀರ್ಥಪ್ರಭಾವವರ್ಣನ

೧. ಪುಲಸ್ತ್ಯನು ಹೇಳುತ್ತಾನೆ :—ಮಹಾರಾಜ! ಬಳಿಕ ಉತ್ತಮವಾದ ಜಂಬೂ ತೀರ್ಥಕ್ಕೆ ಹೋಗಬೇಕು. ಅಲ್ಲಿ ಮಿಂದ ಮಾನವನು ಜಂಬೂದ್ವೀಪದಲ್ಲಿರುವ ತೀರ್ಥಗಳ ಇಷ್ಟ ಫಲವನ್ನು ಹೊಂದುವನು.

೨. ಹಿಂದೆ ಕ್ಷತ್ರಿಯ ವಂಶದಲ್ಲಿ ಹುಟ್ಟಿದ ಸೂರ್ಯವಂಶದ ನಿಮಿ ಎಂಬ ದೊರೆ ಯಿದ್ದನು. ಅವನು ಮುಪ್ಪಿನಲ್ಲಿ ಅರ್ಬುದ ಪರ್ವತಕ್ಕೆ ಹೋದನು.

೩. ಅವನು ಅಲ್ಲಿ ಸ್ಥಿರಚಿತ್ತನಾಗಿ ಪ್ರಾಯೋಪವೇಶವನ್ನು ಮಾಡಲು ಸಾವಿರಾರು ಮುನಿಗಳು ಅವನ ಹತ್ತಿರಕ್ಕೆ ಬಂದರು.

೪. ಆ ಮುನಿಗಳು ಮಹಾತ್ಮರಾದ ರಾಜರ್ಷಿಗಳು, ದೇವರ್ಷಿಗಳು, ಇತರ ಮಹಾತ್ಮರು ಇವರ ಪುಣ್ಯಕರವಾದ ಧರ್ಮಕಥೆಯನ್ನು ಹೇಳಿದರು.

ತತಃ ಕಶ್ಚಿತ್ಕಥಾಂತೇ ಚ ಲೋಮಶೋನಾಮ ಸನ್ಮುನಿಃ ।
ಕೀರ್ತಯಾಮಾಸ ಮಾಹಾತ್ಮ್ಯಂ ಸರ್ವತೀರ್ಥಸಮುದ್ಭವಂ ॥ ೫ ॥
ತಚ್ಛ್ರುತ್ವಾ ಪಾರ್ಥಿವೋ ರಾಜನ್ನಿಮಿಃ ಪರಮದುರ್ಮನಾಃ ।
ಬಭೂವ ನ ಕೃತಂ ಪೂರ್ವಂ ಯತಸ್ತೀರ್ಥಾವಗಾಹನಂ ॥ ೬ ॥
ತತಃ ಪ್ರೋವಾಚ ತಂ ವಿಪ್ರಮಸ್ತ್ಯುಪಾಯೋ ದ್ವಿಜೋತ್ತಮ ।
ಕಶ್ಚಿದ್ಯೇನ ಚ ಸರ್ವೇಷಾಂ ತೀರ್ಥಾನಾಂ ಲಭ್ಯತೇ ಫಲಂ ॥ ೭ ॥

ಲೋಮಶ ಉವಾಚ:—

ದಯಾ ಮೇ ನೃಪ ಸಂಜಾತಾ ತ್ವಾಂ ದೃಷ್ಟ್ವಾ ದುಃಖಿತಂ ಭೃಶಂ ।
ತೀರ್ಥಯಾತ್ರಾಕೃತೇ ಯಸ್ಮಾತ್ಕರಿಷ್ಯೇಽಹಂ ತವ ಪ್ರಿಯಂ ॥ ೮ ॥
ಅತ್ರೈವ ಚಾನಯಿಷ್ಯಾಮಿ ಜಂಬೂದ್ವೀಪೋದ್ಭವಾನಿ ಚ ।
ಸರ್ವತೀರ್ಥಾನಿ ರಾಜೇಂದ್ರ ಮಂತ್ರಶಕ್ತ್ಯಾ ನ ಸಂಶಯಃ ॥ ೯ ॥
ಸ್ನಾನಂ ಕುರು ಮಹಾರಾಜ ಹ್ಯೇಕೀಭೂತೇಷು ತತ್ರ ಚ ।
ಅಸ್ಮಿಞ್ಜಲಾಶಯೇ ಪುಣ್ಯೇ ಸತ್ಯಮೇತದ್ಬ್ರವೀಮ್ಯಹಂ ॥ ೧೦ ॥
ಏವಮುಕ್ತ್ವಾ ಸ ವಿಪ್ರರ್ಷಿರ್ಧ್ಯಾನಂ ಚಕ್ರೇ ಸಮಾಹಿತಃ ।
ತತಸ್ತೀರ್ಥಾನಿ ಸರ್ವಾಣಿ ತತ್ರಾಯಾತಾನಿ ತತ್ಕ್ಷಣಾತ್ ॥ ೧೧ ॥

---

೫. ಕಥೆಯ ಕೊನೆಯಲ್ಲಿ ಲೋಮಶನೆಂಬ ಮುನಿಯು ಸಕಲ ತೀರ್ಥಗಳ ಮಾಹಾತ್ಮ್ಯವನ್ನು ಹೇಳಿದನು.

೬. ಅದನ್ನು ಕೇಳಿ ನಿಮಿರಾಜನು ಹಿಂದೆ ತೀರ್ಥಸ್ನಾನವನ್ನು ಮಾಡದ ಕಾರಣ ಅತ್ಯಂತ ವ್ಯಥೆಗೊಂಡನು.

೭. ಬಳಿಕ ಅವನು ಆ ಬ್ರಾಹ್ಮಣನನ್ನು ಕುರಿತು ಸಕಲ ತೀರ್ಥಗಳ ಫಲವನ್ನು ಹೊಂದಲು ಒಂದು ಉಪಾಯವಿದೆಯೆ ? ಎಂದು ಕೇಳಿದನು.

೮. ಲೋಮಶನು ಹೇಳುತ್ತಾನೆ :—ದೊರೆಯೆ! ತೀರ್ಥಯಾತ್ರೆಗಾಗಿ ದುಃಖಗೊಂಡ ನಿನ್ನನ್ನು ನೋಡಿ ನನಗೆ ಕರುಣೆಯುಂಟಾಗಿದೆ. ಆದರಿಂದ ನಿನಗೆ ಹಿತವನ್ನುಂಟುಮಾಡುವೆನು.

೯. ಮಹಾರಾಜ! ಮಂತ್ರಶಕ್ತಿಯಿಂದ ಜಂಬೂದ್ವೀಪದ ಸಮಸ್ತ ತೀರ್ಥಗಳನ್ನು ಇಲ್ಲಿಗೆ ತರಿಸುವೆನು.

೧೦. ದೊರೆಯೆ! ನೀನು ಈ ಕೊಳದಲ್ಲಿ ಒಂದಾಗಿ ಸೇರಿದ ಆ ತೀರ್ಥಗಳಲ್ಲಿ ಸ್ನಾನಮಾಡು. ನಾನು ನಿಜವಾಗಿ ಹೇಳುತ್ತಿರುವೆನು.

೧೧. ಆ ಬ್ರಾಹ್ಮಣನು ಹೀಗೆ ಹೇಳಿ ಚಿತ್ತೈಕಾಗ್ರ್ಯದಿಂದ ಧ್ಯಾನಿಸಲು ಸಮಸ್ತ ತೀರ್ಥಗಳು ಕೂಡಲೆ ಅಲ್ಲಿಗೆ ಬಂದುವು.

ಪ್ರತ್ಯಯಾರ್ಥಂ ಚ ರಾಜರ್ಷೇ ಜಂಬೂವೃಕ್ಷೋ ವ್ಯಜಾಯತ ।
ತತ್ರ ಸ್ನಾನಂ ನೃಪಶ್ಚಕ್ರೇ ಸರ್ವತೀರ್ಥಮಯೇ ಧ್ರುವೇ ॥ ೧೨ ॥
ಸದೇಹಶ್ಚ ಗತಃ ಸ್ವರ್ಗೇ ತೀರ್ಥಸ್ನಾನಾದನಂತರಂ ।
ತತಃ ಪ್ರಭೃತಿ ತತ್ತೀರ್ಥಂ ಜಂಬೂತೀರ್ಥಮನುಸ್ಮೃತಂ ॥ ೧೩ ॥
ಕನ್ಯಾಗತೇ ರವೌ ತತ್ರ ಯಃ ಶ್ರಾದ್ಧಂ ಕುರುತೇ ನರಃ ।
ಗಯಾಶೀರ್ಷಸಮಂ ತಸ್ಯ ಪುಣ್ಯಮಾಹುರ್ಮಹರ್ಷಯಃ ॥ ೧೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಜಂಬೂತೀರ್ಥಪ್ರಭಾವ ವರ್ಣನಂ ನಾಮ
ಷಷ್ಟಿತಮೋಽಧ್ಯಾಯಃ

---

೧೨–೧೩. ರಾಜರ್ಷಿಯೆ! ಅವನ ನಂಬಿಕೆಗಾಗಿ ಜಂಬೂ (ನೇರಳೆ ಮರ) ವೃಕ್ಷವು ಅಲ್ಲಿ ಉಂಟಾಯಿತು. ದೊರೆಯು ಸಕಲ ತೀರ್ಥರೂಪವಾದ ಅಲ್ಲಿ ಮಿಂದು ಕೂಡಲೆ ಸದೇಹನಾಗಿ ಸ್ವರ್ಗಕ್ಕೆ ಹೋದನು. ಅದು ಮೊದಲ್ಗೊಂಡು ಅದು ಜಂಬೂ ತೀರ್ಥವೆನ್ನಿಸಿಕೊಂಡಿತು.

೧೪. ಸೂರ್ಯನು ಕನ್ಯಾರಾಶಿಯಲ್ಲಿರುವಾಗ ಅಲ್ಲಿ ಶ್ರಾದ್ಧಮಾಡಿದವನಿಗೆ ಗಯಾಶೀರ್ಷಕ್ಕೆ ಸಮವಾದ ಪುಣ್ಯವು ಲಭಿಸುವುದೆಂದು ಮಹರ್ಷಿಗಳು ಹೇಳುತ್ತಾರೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಜಂಬೂತೀರ್ಥಪ್ರಭಾವ ವರ್ಣನವೆಂಬ
ಅರುವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕಷಷ್ಟಿತಮೋಽಧ್ಯಾಯಃ

### ಗಂಗಾಧರತೀರ್ಥಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ಗಂಗಾಧರಂ ತತೋ ಗಚ್ಛೇತ್ಸುಪುಣ್ಯಂ ವಿಮಲೋದಕಂ ।
ಯೇನ ಗಂಗಾ ಧೃತಾ ರಾಜನ್ನಿಪತಂತೀ ನಭಸ್ತಲಾತ್ ॥ ೧ ॥
ಆಹೂತಾ ದೇವದೇವನ ಹ್ಯಚಲೇಶ್ವರರೂಪಿಣಾ ।
ಹರೇಣ ರಭಸಾ ರಾಜಂಸ್ತತ್ಪುರಾ ಕಥಿತಂ ತವ ॥ ೨ ॥
ತತ್ರ ಯಃ ಕುರುತೇ ಸ್ನಾನಮಷ್ಟಮ್ಯಾಂ ಚ ಸಮಾಹಿತಃ ।
ಸ ಗಚ್ಛೇತ್ಪರಮಂ ಸ್ಥಾನಂ ದೇವೈರಪಿ ಸುದುರ್ಲಭಂ ॥ ೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಗಂಗಾಧರತೀರ್ಥಮಾಹಾತ್ಮ್ಯ ವರ್ಣನಂ ನಾಮ
ಏಕಷಷ್ಟಿತಮೋಽಧ್ಯಾಯಃ

---

### ಕನ್ನಡದ ಅನುವಾದ

### ಗಂಗಾಧರತೀರ್ಥಮಾಹಾತ್ಮ್ಯವರ್ಣನ

೧–೨. ಪುಲಸ್ತ್ಯನು ಹೇಳುತ್ತಾನೆ :—ಬಳಿಕ ಪುಣ್ಯಕರವಾದ ನಿರ್ಮಲ ಜಲವುಳ್ಳ ಗಂಗಾಧರತೀರ್ಥಕ್ಕೆ ಹೋಗಬೇಕು. ಅಚಲೇಶ್ವರರೂಪನಾದ ಮಹೇಶ್ವರನು ಗಂಗೆಯನ್ನು ಕರೆಯಲು ಆಕಾಶದಿಂದ ವೇಗದಿಂದ ಬೀಳುತ್ತಿರುವ ಆ ಗಂಗೆಯನ್ನು ಈ ತೀರ್ಥವು ಧರಿಸಿರುವುದು. ಇದನ್ನು ನಿನಗೆ ಹಿಂದೆ ಹೇಳಿರುವೆನು.

೩. ಇಲ್ಲಿ ಅಷ್ಟಮೀ ದಿನ ಸಾವಧಾನ ಮನಸ್ಸಿನಿಂದ ಸ್ನಾನಮಾಡಿದವನು ದೇವತೆಗಳಿಗೂ ಹೊಂದಲಾಗದ ಉತ್ತಮ ಸ್ಥಾನಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಗಂಗಾಧರತೀರ್ಥಮಾಹಾತ್ಮ್ಯವರ್ಣನವೆಂಬ
ಅರುವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ದ್ವಿಷಷ್ಟಿತಮೋಽಧ್ಯಾಯಃ

## ಕಟೇಶ್ವರಗಂಗೇಶ್ವರಮಾಹಾತ್ಮ್ಯವರ್ಣನಂ

ಪುಲಸ್ತ್ಯ ಉವಾಚ :—

ತತಃ ಕಟೇಶ್ವರಂ ಗಚ್ಛೇಲ್ಲಿಂಗಂ ಗೌರೀವಿನಿರ್ಮಿತಂ ।
ತಥಾ ಗಂಗೇಶ್ವರಂ ಚಾನ್ಯದ್ಗಂಗಯಾ ನಿರ್ಮಿತಂ ಸ್ವಯಂ ॥ ೧ ॥
ಪುರಾ ಸಮುಭವದ್ಯುದ್ಧಮುಮಾಯಾಃ ಸಹ ಗಂಗಯಾ ।
ಸೌಭಾಗ್ಯಂ ಪ್ರತಿ ರಾಜೇಂದ್ರ ತತೋ ಗೌರೀತ್ಯಭಾಷತ ॥ ೨ ॥
ಯಯಾ ಸಂಪೂಜಿತಃ ಶಂಭುಃ ಶೀಘ್ರಂ ಯಾಸ್ಯತಿ ದರ್ಶನಂ ।
ಸಾ ಸೌಭಾಗ್ಯವತೀ ನೂನಮಾವಯೋಃ ಸಂಭವಿಷ್ಯತಿ ॥ ೩ ॥
ಏವಮುಕ್ತಾ ತತೋ ಗಂಗಾ ಸತ್ವರೈತ್ಯಾತ್ರ ಪರ್ವತೇ ।
ಲಿಂಗಮನ್ವೇಷಯಾಮಾಸ ಚಿರಕಾಲಾದವಾಪ ಸಾ ॥ ೪ ॥

---

ಕನ್ನಡದ ಅನುವಾದ

ಕಟೇಶ್ವರಗಂಗೇಶ್ವರಮಾಹಾತ್ಮ್ಯವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ತರುವಾಯ ಗೌರಿಯು ನಿರ್ಮಿಸಿರುವ ಕಟೇಶ್ವರಲಿಂಗವೆಡೆಗೂ, ಗಂಗೆಯು ತಾನಾಗಿ ನಿರ್ಮಿಸಿರುವ ಗಂಗೇಶ್ವರನೆಡೆಗೂ ಹೋಗಬೇಕು.

೨. ಮಹಾರಾಜ! ಹಿಂದೆ ಸೌಭಾಗ್ಯದ ವಿಷಯದಲ್ಲಿ ಪಾರ್ವತಿಗೆ ಗಂಗೆಯೊಡನೆ ಜಗಳ ನಡೆಯಿತು. ಆಗ ಗೌರಿಯು ಹೀಗೆಂದಳು.

೩. ಯಾರು ಪೂಜಿಸಿದರೆ ಶಂಕರನು ಶೀಘ್ರವಾಗಿ ದರ್ಶನವನ್ನೀಯುವನೋ, ಅವಳು ನಮ್ಮಿಬ್ಬರಲ್ಲಿ ನಿಜವಾಗಿಯೂ ಸೌಭಾಗ್ಯವತಿಯು.

೪. ಗೌರಿಯು ಹೀಗೆ ಹೇಳಲು ಗಂಗೆಯು ಶೀಘ್ರವಾಗಿ ಆ ಪರ್ವತದಲ್ಲಿ ಲಿಂಗವನ್ನು ಹುಡುಕಿ ಬಹಳ ಹೊತ್ತಿನಮೇಲೆ ಅದನ್ನು ಹೊಂದಿದಳು.

ದೃಷ್ಟ್ವಾ ಗೌರ್ಯಾಥ ಕಟಕಂ ಪರ್ವತಸ್ಯ ಮನೋಹರಂ ।
ಲಿಂಗಾಕಾರಂ ಮಹಾರಾಜ ಪೂಜಯಾಮಾಸ ಸಾ ತದಾ ॥ ೫ ॥
ಸಮ್ಯಕ್ಛ್ರದ್ಧಾಸಮೋಪೇತಾ ತತಸ್ತುಷ್ಟೋ ಮಹೇಶ್ವರಃ ।
ಪ್ರದದೌ ದರ್ಶನಂ ತಸ್ಯಾ ವರದೋಽಸ್ಮೀತಿ ಚಾಬ್ರವೀತ್ ॥ ೬ ॥

ಗೌರ್ಯುವಾಚ :—

ಸಾಪತ್ನ್ಯೈಶ್ವರ್ಯಯಾ ದೇವ ಮಯಾ ಲಿಂಗಂ ಪ್ರಕಲ್ಪಿತಂ ।
ತಸ್ಮಾತ್ಕಟೇಶ್ವರಾಖ್ಯಾ ಚ ಲೋಕೇ ಚಾಸ್ಯ ಭವಿಷ್ಯತಿ ॥ ೭ ॥
ಯಾ ನಾರೀ ಪತಿನಾ ಮುಕ್ತಾ ಸಪತ್ನೀದುಃಖದುಃಖಿತಾ ।
ಅಸ್ಯ ಸಂದರ್ಶನಾದೇವ ಸಾ ಭವಿಷ್ಯತಿ ವಿಜ್ವರಾ ।
ಸುತಸೌಭಾಗ್ಯ ಸಂಪನ್ನಾ ಭರ್ತೃಪ್ರಾಣಸಮಾ ತಥಾ ॥ ೮ ॥
ಗಂಗಯಾರಾಧಿತೋ ದೇವ ಏವಮೇವ ವರಂ ದದೌ ।
ತಸ್ಮಾಲ್ಲಿಂಗದ್ವಯಂ ತಚ್ಚ ದ್ರಷ್ಟವ್ಯಂ ಮನುಜಾಧಿಪ ॥ ೯ ॥

---

೫–೬. ಬಳಿಕ ಗೌರಿಯು ಪರ್ವತದ ಮನೋಹರವಾದ ಲಿಂಗದಂತಿರುವ ತಪ್ಪಲನ್ನು ಕಂಡು ಶ್ರದ್ಧೆಯಿಂದ ಪೂಜಿಸಿದಳು. ಅದರಿಂದ ಸಂತುಷ್ಟನಾದ ಶಂಕರನು ಅವಳಿಗೆ ದರ್ಶನವನ್ನಿತ್ತು ವರವನ್ನು ಕೊಡುವೆನೆಂದನು.

೭. ನಾಥ! ನಾನು ಸವತಿಯ ಅಸೂಯೆಯಿಂದ ಲಿಂಗವನ್ನು ಕಲ್ಪಿಸಿರುವೆನು. ಆದ್ದರಿಂದ ಇದು ಲೋಕದಲ್ಲಿ ಕಟೇಶ್ವರನೆಂದು ಹೆಸರನ್ನು ಹೊಂದುವುದು.

೮. ಲೋಕದಲ್ಲಿ ಪತಿಯನ್ನಾಗಲಿ ಸವತಿಯ ದುಃಖದಿಂದ ವ್ಯಥೆಗೊಂಡ ಸ್ತ್ರೀಯು ಈ ಲಿಂಗವನ್ನು ನೋಡಿದರೆ ದುಃಖರಹಿತಳೂ, ಸುತ, ಸೌಭಾಗ್ಯಗಳಿಂದ ಕೂಡಿದವಳೂ, ಪತಿಗೆ ಪ್ರಾಣಸಮಳೂ ಆಗುವಳು.

೯. ದೊರೆಯೆ! ಗಂಗೆಯಿಂದ ಪೂಜಿತನಾದ ಶಂಕರನೂ ಹೀಗೆಯೇ ವರವನಿತ್ತನು. ಆದ್ದರಿಂದ ಆ ಎರಡು ಲಿಂಗಗಳನ್ನು ದರ್ಶನಮಾಡಬೇಕು.

ವಿಶೇಷತಶ್ಚ ನಾರೀಭಿಃ ಸಪತ್ನೀದೋಷಹಾನಿದಂ ।
ಸುಖಸೌಭಾಗ್ಯದಂ ನಿತ್ಯಂ ತಥಾಽಭೀಷ್ಟಪ್ರದಂ ನೃಣಾಂ ॥ ೧೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಕಟೇಶ್ವರಗಂಗೇಶ್ವರಮಾಹಾತ್ಮ್ಯವರ್ಣನಂನಾಮ
ದ್ವಿಷಷ್ಟಿತಮೋಽಧ್ಯಾಯಃ

---

೧೦. ವಿಶೇಷವಾಗಿ ಹೆಂಗಸರು ಸವತಿಯ ದೋಷವನ್ನು ಪರಿಹರಿಸುವುದೂ, ಸುಖಸೌಭಾಗ್ಯವನ್ನೀಯುವುದೂ, ಮಾನವರಿಗೆ ಇಷ್ಟವನ್ನು ನೀಡುವುದೂ ಆದ ಆ ಲಿಂಗವನ್ನು ನೋಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಕಟೇಶ್ವರಗಂಗೇಶ್ವರಮಾಹಾತ್ಮ್ಯವರ್ಣನವೆಂಬ
ಅರುವತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ತ್ರಿಷಷ್ಟಿತಮೋಽಧ್ಯಾಯಃ

## ಅರ್ಬುದಖಂಡಮಾಹಾತ್ಮ್ಯಫಲಶ್ರುತಿವರ್ಣನಂ

**ಪುಲಸ್ತ್ಯ ಉವಾಚ :—**

ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ಅರ್ಬುದಸ್ಯ ಮಹಾರಾಜ ಮಾಹಾತ್ಮ್ಯಂ ಹಿ ಸಮಾಸತಃ || ೧ ||
ವಿಸ್ತರೇಣ ಚ ಸಂಖ್ಯಾ ಸ್ಯಾದಪಿ ವರ್ಷಶತೈರಪಿ ।
ಅಸಂಖ್ಯಾನೀಹ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ||
ಪದೇಪದೇ ಗೃಹಾಣ್ಯೇವ ನಿರ್ಮಿತಾನಿ ಮಹರ್ಷಿಭಿಃ || ೨ ||
ನ ತತ್ತೀರ್ಥಂ ನ ಸಾ ಸಿದ್ಧಿರ್ನ ಸ ವೃಕ್ಷೋ ಮಹೀಪತೇ ।
ನ ಸಾ ನದೀ ನ ದೇವೇಶೋ ಯಸ್ಯ ತತ್ರಾಸ್ತಿ ನ ಸ್ಥಿತಿಃ || ೩ ||
ಯೇ ವಸಂತಿ ಮಹಾರಾಜ ಸುರಮ್ಯೇಽರ್ಬುದಪರ್ವತೇ ।
ನೂನಂ ತೇ ಪುಣ್ಯಕರ್ಮಾಣೋ ನ ವಸಂತಿ ತ್ರಿವಿಷ್ಟಪೇ || ೪ ||
ಕಿಂ ತಸ್ಯ ಜೀವಿತೇನಾರ್ಥಃ ಕಿಂ ಧನೈಃ ಕಿಂ ಜಪೈರ್ನೃಪ ।
ಯೋ ನ ಪಶ್ಯತಿ ಮಂದಾತ್ಮಾ ಸಮಂತಾದರ್ಬುದಾಚಲಂ || ೫ ||

---

ಕನ್ನಡದ ಅನುವಾದ

ಅರ್ಬುದಖಂಡಮಾಹಾತ್ಮ್ಯಫಲಶ್ರುತಿವರ್ಣನ

೧. ಪುಲಸ್ತ್ಯನು ಹೇಳುತ್ತಾನೆ:—ಮಹಾರಾಜ! ಈ ಅರ್ಬುದಾಚಲದ ಮಾಹಾತ್ಮ್ಯವನ್ನು ಸಂಕ್ಷೇಪವಾಗಿ ನಿನಗೆ ಹೇಳಿರುವೆನು. ನೀನು ಇನ್ನೇನನ್ನು ಕೇಳುವೆ?

೨. ವಿಸ್ತಾರವಾಗಿ ಅದನ್ನು ಹೇಳಲು ನೂರು ವರ್ಷಗಳಿಂದಲೂ ಸಾಧ್ಯವಿಲ್ಲ. ಮಹರ್ಷಿಗಳು ಈ ಪರ್ವತದಲ್ಲಿ ಅಸಂಖ್ಯಾತವಾದ ತೀರ್ಥಗಳನ್ನೂ, ಪುಣ್ಯಕರವಾದ ದೇವಾಲಯಗಳನ್ನೂ ಪ್ರತಿಹೆಜ್ಜೆಯಲ್ಲಿಯೂ ನಿರ್ಮಿಸಿರುವರು.

೩. ದೊರೆಯೆ! ಅಲ್ಲಿ ಯಾವುದಿಲ್ಲವೊ; ಅದು ತೀರ್ಥವೂ, ಸಿದ್ಧಿಯೂ, ವೃಕ್ಷವೂ, ನದಿಯೂ, ದೇವತೆಯೂ ಅಲ್ಲ.

೪. ಮಹಾರಾಜ! ರಮ್ಯವಾದ ಅರ್ಬುದಾಚಲದಲ್ಲಿ ವಾಸಿಸುವವರು ನಿಜವಾಗಿಯೂ ಪುಣ್ಯವಂತರು. ಅಂತಹವರು ದೇವಲೋಕದಲ್ಲಿಯೂ ವಾಸಿಸುವುದಿಲ್ಲ.

೫. ಅರ್ಬುದಾಚಲವನ್ನು ಸುತ್ತಲೂ ನೋಡದ ಮೂಢನ ಜೀವ, ಧನ, ಜಪಗಳಿಂದೇನು ಪ್ರಯೋಜನ?

ಅಪಿ ಕೀಟಪತಂಗಾ ಯೇ ಪಶವಃ ಪಕ್ಷಿಣೋ ಮೃಗಾಃ ।
ಸ್ವೇದಜಾಶ್ಚಾಂಡಜಾಶ್ಚಾಪಿ ಹ್ಯುದ್ಭಿಜ್ಜಾಶ್ಚ ಜರಾಯುಜಾಃ ॥ ೬ ॥
ತಸ್ಮಿನ್ಮೃತಾ ಮಹಾರಾಜ ನಿಷ್ಕಾಮಾಃ ಕಾಮತೋಽಪಿ ವಾ ।
ತೇ ಯಾಂತಿ ಶಿವಸಾಯುಜ್ಯಂ ಜರಾಮರಣವರ್ಜಿತಂ ॥ ೭ ॥
ಯುಚ್ಚೈತಚ್ಛೃಣುಯಾನ್ನಿತ್ಯಂ ಪುರಾಣಂ ಶ್ರದ್ಧಯಾನ್ವಿತಃ ।
ಅರ್ಬುದಸ್ಯ ಮಹಾರಾಜ ಸ ಯಾತ್ರಾಫಲಮಶ್ನುತೇ ॥ ೮ ॥
ತಸ್ಮಾತ್ಸರ್ವಪ್ರಯತ್ನೇನ ಯಾತ್ರಾಂ ತತ್ರ ಸಮಾಚರೇತ್ ।
ಯ ಇಚ್ಛೇದಾತ್ಮನಃ ಸಿದ್ಧಿಮಿಹ ಲೋಕೇ ಪರತ್ರ ಚ ॥ ೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ತೃತೀಯೇಽರ್ಬುದಖಂಡೇ
ಅರ್ಬುದಖಂಡಮಾಹಾತ್ಮ್ಯಫಲಶ್ರುತಿವರ್ಣನಂ ನಾಮ
ತ್ರಿಷಷ್ಟಿತಮೋಽಧ್ಯಾಯಃ

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಸಪ್ತಮೇ ಪ್ರಭಾಸಖಂಡೇ**
**ತೃತೀಯಮರ್ಬುದಖಂಡಂ ಸಂಪೂರ್ಣಂ**

---

೬-೭. ಮಹಾರಾಜ! ಅಲ್ಲಿ ಕಾಮದಿಂದಾಗಲಿ, ನಿಷ್ಕಾಮದಿಂದಾಗಲಿ ಮೃತವಾದ ಕೀಟ ಪತಂಗಗಳೂ, ಪಶುಪಕ್ಷಿಗಳೂ, ಸ್ವೇದಜಾಂಡಜಗಳೂ ಸಸ್ಯಗಳೂ, ಜರಾಯುಜಗಳೂ ಜರಾಮರಣಗಳಿಲ್ಲದ ಶಿವಸಾಯುಜ್ಯವನ್ನು ಹೊಂದುವುವು.

೮. ಮಹಾರಾಜ! ಈ ಪುರಾಣವನ್ನು ಶ್ರದ್ಧೆಯಿಂದ ಕೇಳುವವನು ಅರ್ಬುದಾಚಲದ ಯಾತ್ರಾಫಲವನ್ನು ಪಡೆಯುವನು.

೯. ಆದ್ದರಿಂದ ಇಹಪರಲೋಕಗಳಲ್ಲಿ ಸಿದ್ಧಿಯನ್ನು ಬಯಸುವವನು ಅರ್ಬುದಾಚಲದ ಯಾತ್ರೆಯನ್ನು ಮಾಡಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದಖಂಡದಲ್ಲಿ
ಅರ್ಬುದಖಂಡಮಾಹಾತ್ಮ್ಯಫಲಶ್ರುತಿವರ್ಣನವೆಂಬ
ಅರುವತ್ತಮೂರನೆಯ ಅಧ್ಯಾಯವು ಮುಗಿದುದು.

**ಇಲ್ಲಿಗೆ ಏಳನೆಯ ಪ್ರಭಾಸಖಂಡದಲ್ಲಿ ಮೂರನೆಯ**
**ಅರ್ಬುದಖಂಡವು ಮುಗಿದುದು.**

॥ ಶ್ರೀ ಗಣೇಶಾಯ ನಮಃ ॥

ಅಥ ಸ್ಕಾಂದೇ ಮಹಾಪುರಾಣೇ ಸಪ್ತಮೇ ಪ್ರಭಾಸಖಂಡೇ ಚತುರ್ಥಂ
ದ್ವಾರಕಾಮಾಹಾತ್ಮ್ಯಂ ಪ್ರಾರಭ್ಯತೇ
॥ ಪ್ರಥಮೋಽಧ್ಯಾಯಃ ॥

ಭಗವತ್ಸ್ಥಿತಿ ವಿಷಯೇ ಪ್ರಶ್ನಕರಣವರ್ಣನಂ

ಶೌನಕ ಉವಾಚ :—

ಕಥಂ ಸೂತ ಯುಗೇ ಹ್ಯಸ್ಮಿನ್ರೌದ್ರೇ ವೈ ಕಲಿಸಂಜ್ಞಕೇ ।
ಬಹುಪಾಖಂಡಸಂಕೀರ್ಣೇ ಪ್ರಾಪ್ಸ್ಯಾಮೋ ಮಧುಸೂದನಂ ॥ ೧ ॥
ಯುಗತ್ರಯೇ ವ್ಯತಿಕ್ರಾಂತೇ ಧರ್ಮಾಚಾರಪರೇ ಸದಾ ।
ಪ್ರಾಪ್ತೇ ಕಲಿಯುಗೇ ಘೋರೇ ಕ್ವ ವಿಷ್ಣುರ್ಭಗವಾನಿತಿ ॥ ೨ ॥

ಸೂತ ಉವಾಚ :—

ದಿವಂ ಯಾತೇ ಮಹಾರಾಜೇ ರಾಮೇ ದಶರಥಾತ್ಮಜೇ ।
ದುಷ್ಟರಾಜನ್ಯಭಾರೇಣ ಪೀಡಿತೇ ಧರಣೀತಲೇ ॥ ೩ ॥
ದೇವಾನಾಂ ಕಾರ್ಯಸಿದ್ಧ್ಯರ್ಥಂ ಭೂಭಾರಹರಣಾಯ ಚ ।
ವಸುದೇವಗೃಹೇ ಸಾಕ್ಷಾದಾವಿರ್ಭೂತೇ ಜನಾರ್ದನೇ ॥ ೪ ॥

---

ಕನ್ನಡದ ಅನುವಾದ

ಭಗವತ್ಸ್ಥಿತಿವಿಷಯಪ್ರಶ್ನಕರಣವರ್ಣನ

೧. ಶೌನಕನು ಹೇಳುತ್ತಾನೆ :—ಸೂತ! ಭಯಂಕರವಾದ ಈ ಪಾಷಂಡಿಗಳಿಂದ ತುಂಬಿರುವ ಕಲಿಯುಗದಲ್ಲಿ ಶ್ರೀ ಹರಿಯನ್ನು ಹೇಗೆ ಹೊಂದುವೆನು.

೨. ಧರ್ಮಾಚಾರಗಳಿಂದ ತುಂಬಿರುವ ಕೃತಾದಿ ಮೂರು ಯುಗಗಳು ಕಳೆಯಲು ಘೋರ ಕಲಿಯುಗವು ಬರಲು ಪೂಜ್ಯನಾದ ವಿಷ್ಣುವು ಎಲ್ಲಿರುವನು ?

೩–೧೫. ಸೂತನು ಹೇಳುತ್ತಾನೆ :—ದಶರಥನ ತನಯನಾದ ಶ್ರೀರಾಮನು ಸ್ವರ್ಗಕ್ಕೆ ತೆರಳಲು, ಭೂಮಿಯು ದುಷ್ಟಕ್ಷತ್ರಿಯರ ಭಾರದಿಂದ ಪೀಡಿತವಾಗಲು ದೇವತೆಗಳ ಕಾರ್ಯಕ್ಕಾಗಿಯೂ, ಭೂಮಿಭಾರದ ಪರಿಹಾರಕ್ಕಾಗಿಯೂ ಶ್ರೀ ವಿಷ್ಣುವು ವಸುದೇವನ ಮನೆಯಲ್ಲಿ ಅವತರಿಸಲು, ಕೃಷ್ಣನು ಗೋಕುಲಕ್ಕೆ ಹೋಗಿ ಪೂತನೆ

ನಂದವ್ರಜಂ ಗತೇ ದೇವೇ ಪೂತನಾಶೋಷಣೇ ಸತಿ ।
ಘಾತಿತೇ ಚ ತೃಣಾವರ್ತೇ ಶಕಟೇ ಪರಿವರ್ತಿತೇ ॥ ೫ ॥
ದಮಿತೇ ಕಾಲಿಯೇ ನಾಗೇ ಪ್ರಲಂಬೇ ಚ ನಿಷೂದಿತೇ ।
ಧೃತೇ ಗೋವರ್ಧನೇ ಶೈಲೇ ಪರಿತ್ರಾತೇ ಚ ಗೋಕುಲೇ ॥ ೬ ॥
ಸುರಭ್ಯಾ ಚಾಭಿಷಿಕ್ತೇ ತು ಇಂದ್ರೇ ಚ ವಿಮದೀಕೃತೇ ।
ರಾಸಕ್ರೀಡಾರತೇ ದೇವೇ ದಾರಿತೇ ಕೇಶಿದಾನವೇ ॥ ೭ ॥
ಅಕ್ರೂರವಚನಾದ್ದೇವೇ ಮಥುರಾಯಾಂ ಗತೇ ಹರೌ ।
ಹತೇ ಕುವಲಯಾಪೀಡೇ ಮಲ್ಲರಾಜೇ ಚ ಘಾತಿತೇ ॥ ೮ ॥
ಪಶ್ಯತಾಂ ದೇವದೈತ್ಯಾನಾಂ ಭೋಜರಾಜೇ ನಿಪಾತಿತೇ ।
ಯದುಪುರ್ಯಾಮಭಿಷಿಕ್ತ ಉಗ್ರಸೇನೇ ಸುರಾಧಿಪೇ ॥ ೯ ॥
ಜರಾಸಂಧಬಲೇ ರೌದ್ರೇ ಯವನೇ ಚ ಹತೇ ಕ್ಷಿತೌ ।
ರಾಜಸೂಯೇ ಕ್ರತುವರೇ ಚೈದ್ಯೇ ಚೈವ ನಿಪಾತಿತೇ ॥ ೧೦ ॥
ನಿವೃತ್ತೇ ಭಾರತೇ ಯುದ್ಧೇ ಭಾರೇ ಚ ಕ್ಷಪಿತೇ ಭುವಃ ।
ಯಾತ್ರಾವ್ಯಾಜಸಮಾನೀತೇ ಪ್ರಭಾಸಂ ಯಾದವೇ ಕುಲೇ ॥ ೧೧ ॥
ಮದ್ಯಪಾನಪ್ರಸಕ್ತೇ ತು ಪರಸ್ಪರವಧೋದ್ಯತೇ ।
ಕಲಹೇನಾತಿರೌದ್ರೇಣ ವಿನಷ್ಟೇ ಯಾದವೇ ಕುಲೇ ॥ ೧೨ ॥

---

ಯನ್ನು ತೃಣಾವರ್ತನನ್ನೂ ಕೊಲ್ಲಲು, ಶಕಟಾಸುರನನ್ನು ಉರುಳಿಸಲು, ಕಾಲಿಯ ನಾಗನನ್ನು ನಿಗ್ರಹಿಸಿ ಪ್ರಲಂಬನನ್ನು ಕೊಲ್ಲಲು, ಗೋವರ್ಧನಾಚಲವನ್ನು ಎತ್ತಿ ಗೋಕುಲವನ್ನು ಕಾಪಾಡಲು, ಕಾಮಧೇನುವಿನಿಂದ ಗೋವಿಂದ ಪದವಿಯಲ್ಲಿ ಅಭಿಷಿಕ್ತನಾಗಲು, ಇಂದ್ರನ ಮದವನ್ನಿಳಿಸಲು, ರಾಸಕ್ರೀಡಾಸಿರತನಾಗಿ ಕೇಶಿದಾನವನನ್ನು ವಧಿಸಲು ಅಕ್ರೂರನ ಮಾತಿನಿಂದ ಮಥುರೆಗೆ ಹೋಗಿ ಕುವಲಯಾಪೀಡ, ಮಲ್ಲ, ಕಂಸರನ್ನು ದೇವತೆಗಳೂ ದೈತ್ಯರೂ ನೋಡುತ್ತಿರುವಾಗಲೆ ಕೊಲ್ಲಲು, ಉಗ್ರಸೇನನು ಯದುಪುರಿಯಲ್ಲಿ ಅಭಿಷಕ್ತನಾಗಲು, ಜರಾಸಂಧನಸೈನ್ಯವೂ, ಯವನನೂಹತನಾಗಲು, ರಾಜಸೂಯಯಾಗದಲ್ಲಿ ಶಿಶುಪಾಲನು ಮೃತನಾಗಲು, ಭಾರತ ಯುದ್ಧವು ಮುಗಿದು ಭೂಭಾರವು ನೀಗಲು, ಯಾದವರು ಯಾತ್ರೆಯನೆ ಪದಿಂದಪ್ರ ಭಾಸಕ್ಕೆ ಬಂದು ಮದ್ಯವನ್ನು ಕುಡಿದು ಪರಸ್ಪರ ಜಗಳವಾಡಿ ನಷ್ಟರಾಗಲು, ಬಲರಾಮನು ಇಲ್ಲಿಯೇದೇಹವನ್ನು ತ್ಯಜಿಸಿ ಭೂಮಿಯಿಂದ ಹೊರಟುಹೋಗಲು, ಅಶ್ವತ್ಥವೃಕ್ಷದ ಬುಡದಲ್ಲಿ ಕುಳಿತಿದ್ದ ಕೃಷ್ಣನು ಬೇಡನ ಪ್ರಹಾರದಿಂದ ಘಾಯಗೊಂಡು ದೇಹವನ್ನು ತ್ಯಜಿಸಿ ತನ್ನ

ಗಾತ್ರಂ ಸಂತ್ಯಜ್ಯ ಚಾತ್ರೈವ ಗತೇಽಸಂತೇ ಧರಾತಲಾತ್ ।
ಅಶ್ವತ್ಥಮೂಲಮಾಶ್ರಿತ್ಯ ಸಮಾಸೀನೇ ಜನಾರ್ದನೇ ॥ ೧೩ ॥
ವ್ಯಾಧಪ್ರಹಾರಭಿನ್ನಾಂಗೇ ಪರಿತ್ಯಕ್ತೇ ಕಲೇಬರೇ ।
ಸ್ವಧಾಮ ಸಂಸ್ಥಿತೇ ದೇವೇ ಪಾರ್ಥೇ ಚ ಪುನರಾಗತೇ ॥ ೧೪ ॥
ಯದುಪುರ್ಯಾಂ ಪ್ಲಾವಿತಾಯಾಂ ಸಾಗರೇಣ ಸಮಂತತಃ ।
ಶಕ್ರಪ್ರಸ್ಥಂ ತತೋ ಗತ್ವಾ ಕಾರಯಿತ್ವಾ ಹರೇರ್ಗೃಹಂ ॥ ೧೫ ॥
ದ್ವಾಪರೇ ಚ ವ್ಯತಿಕ್ರಾಂತೇ ಧರ್ಮಾಧರ್ಮವ್ಯವಸ್ಥಿತೇ ।
ಸಂಪ್ರಾಪ್ತೇ ಚ ಮಹಾರೌದ್ರೇ ಯುಗೇ ವೈ ಕಲಿಸಂಜ್ಞಿತೇ ॥ ೧೬ ॥
ಕ್ಷೀಯಮಾಣೇ ಚ ಸದ್ಧರ್ಮೇ ವಿಧರ್ಮೇ ಪ್ರಬಲೇ ತಥಾ ।
ನಷ್ಟಧರ್ಮಕ್ರಿಯಾಯೋಗೇ ವೇದವಾದಬಹಿಷ್ಕೃತೇ ।
ಏಕಪಾದೇ ಸ್ಥಿತೇ ಧರ್ಮೇ ವರ್ಣಾಶ್ರಮವಿವರ್ಜಿತೇ ॥ ೧೭ ॥
ಅಸ್ಮಿನ್ಯುಗೇ ವಿಲುಲಿತೇ ಹ್ಯೃಷಯೋ ವನಚಾರಿಣಃ ।
ಸಮೇತ್ಯಾಮಂತ್ರಯನ್ಸರ್ವೇ ಗರ್ಗಚ್ಯವನಭಾರ್ಗವಾಃ ॥ ೧೮ ॥
ಅಸಿತೋ ದೇವಲೋ ಧೌಮ್ಯಃ ಕ್ರತುರುದ್ದಾಲಕಸ್ತಥಾ ।
ಏತೇ ಚಾನ್ಯೇ ಚ ಬಹವಃ ಪರಸ್ಪರಮಥಾಬ್ರುವನ್ ॥ ೧೯ ॥
ಪಶ್ಯಧ್ವಂ ಮುನಯಸ್ಸರ್ವೇ ಕಲಿವ್ಯಾಪ್ತಂ ದಿಗಂತರಂ ।
ಸಮಂತಾತ್ಪರಿಧಾವದ್ಭಿರ್ದಸ್ಯುಭಿರ್ಬಾಧ್ಯತೇ ಪ್ರಜಾಃ ॥ ೨೦ ॥

---

ಸ್ಥಾನಕ್ಕೆ ತೆರಳಲು, ಅರ್ಜುನನು ಹಿಂದಿರುಗಿ ಯಾದವರ ಪಟ್ಟಣವು ಸಮುದ್ರದಲ್ಲಿ ಮುಳುಗಿದ್ದರಿಂದ ಇಂದ್ರಪ್ರಸ್ಥದಲ್ಲಿ ಕೃಷ್ಣನ ಮನೆಯನ್ನು ರಚಿಸಲು, ಧರ್ಮಾಧರ್ಮಗಳಿಂದ ಮಿಶ್ರವಾದ ದ್ವಾಪರಯುಗವು ಕಳೆದು ಭಯಂಕರವಾದ ಕಲಿಯುಗವು ಬರಲು, ಸದ್ಧರ್ಮವು ಕ್ಷಯಿಸುತ್ತಿರಲು, ಅಧರ್ಮವು ಪ್ರಬಲವಾಗುತ್ತಿರಲು, ಧರ್ಮಕ್ರಿಯೆಗಳು ನಷ್ಟವಾಗಲು, ವೇದವಾಕ್ಯಗಳು ಬಹಿಷ್ಕಾರವನ್ನು ಪಡೆಯಲು, ಧರ್ಮವು ವರ್ಣಾಶ್ರಮವ್ಯವಸ್ಥೆಯಿಲ್ಲದೆ ಒಂದೇ ಪಾದದಿಂದ ನಿಲ್ಲಲು ಈ ದುಷ್ಟ ಯುಗದಲ್ಲಿ ವನವಾಸಿಗಳಾದ ಗರ್ಗ, ಚ್ಯವನ, ಭಾರ್ಗವ, ಅಸಿತ, ದೇವಲ, ಧೌಮ್ಯ, ಕ್ರತು, ಉದ್ದಾಲಕ, ಮೊದಲಾದ ಋಷಿಗಳೂ, ಇನ್ನೂ ಇತರ ಬಹುಮಂದಿ ಮುನಿಗಳೂ ಒಟ್ಟುಗೂಡಿ ಪರಸ್ಪರವಾಗಿ ಆಲೋಚಿಸಿದರು.

೨೦–೨೧. ಸಮಸ್ತ ಮುನಿಗಳೇ! ದಿಕ್ಕುಗಳನ್ನು ಕಲಿಯು ವ್ಯಾಪಿಸಿರುವುದನ್ನು ನೋಡಿರಿ. ಪ್ರಜೆಗಳನ್ನು ಅಧರ್ಮನಿರತರೂ, ಸತ್ಯ, ಸಾಧುತ್ವಗಳಿಲ್ಲದವರೂ ಆದ

ಅಧರ್ಮಪರಮೈಃ ಪುಂಭಿಃ ಸತ್ಯಾರ್ಜವನಿರಾಕೃತೈಃ ।
ಕಥಂ ಸ ಭಗವಾನ್ವಿಷ್ಣುಃ ಸಂಪ್ರಾಪ್ಯೋ ಮುನಿಸತ್ತಮಾಃ ॥ ೨೧ ॥
ಕೋ ವಾ ಭವಾಬ್ಧೌ ಪತತಸ್ತಾರಯಿಷ್ಯತಿ ಸಂಗತಾನ್ ।
ನ ಕಲೌ ಸಂಭವಸ್ತಸ್ಯ ತ್ರಿಯುಗೋ ಮಧುಸೂದನಃ ।
ತಂ ವಿನಾ ಪುಂಡರೀಕಾಕ್ಷಂ ಕಥಂ ಸ್ಯಾಮ ಕಲೌ ಯುಗೇ ॥ ೨೨ ॥
ತೇಷಾಂ ಚಿಂತಯತಾಮೇವಂ ದುಃಖಿತಾನಾಂ ತಪಸ್ವಿನಾಂ ।
ಉವಾಚ ವಚನಂ ತತ್ರ ಋಷಿರುದ್ದಾಲಕಸ್ತದಾ ॥ ೨೩ ॥

ಉದ್ದಾಲಕ ಉವಾಚ :—
ಯಾವನ್ನ ಕಲಿದೋಷೇಣ ಲಿಪ್ಯಾಮೋ ಮುನಿಸತ್ತಮಾಃ ।
ಅಪಾಪಾ ಬ್ರಹ್ಮಸದನಂ ಗಚ್ಛಾಮಃ ಪರಿಸಂಗತಾಃ ॥ ೨೪ ॥
ಪೃಚ್ಛಾಮೋ ಲೋಕಧಾತಾರಂ ಸ್ಥಿತಂ ವಿಷ್ಣುಂ ಕಲೌ ಯುಗೇ ।
ಯದಿ ವಿಷ್ಣುಃ ಕಲೌ ನ ಸ್ಯಾದ್ರುದ್ರೇಣ ಬ್ರಹ್ಮಣಾ ಸಹ ॥ ೨೫ ॥
ತಂ ವಿನಾ ಪುಂಡರೀಕಾಕ್ಷಂ ತ್ಯಕ್ಷ್ಯಾಮಃ ಸ್ವಂ ಕಲೇವರಂ ।
ವಿನಾ ಭಗವತಾ ಲೋಕೇ ಕಃ ಸ್ಥಾಸ್ಯತಿ ಕಲೌ ಯುಗೇ ॥ ೨೬ ॥

---

ಸ್ಯುಗಳು (ಕಳ್ಳರು) ಸುತ್ತಲೂ ಸಂಚರಿಸುತ್ತ ಪೀಡಿಸುತ್ತಿರುವರು. ಪೂಜ್ಯನಾದ ಆ ವಿಷ್ಣುವನ್ನು ಹೊಂದುವ ಬಗೆ ಹೇಗೆ ?

೨೨. ಸಂಸಾರಸಾಗರದಲ್ಲಿ ಮುಳುಗುತ್ತಿರುವ ಜನರನ್ನು ಯಾರು ಉದ್ಧರಿಸುವರು? ಕೃತಾದಿ ಮೂರು ಯುಗಗಳಲ್ಲಿ ಅವತರಿಸಿದ ವಿಷ್ಣುವು ಕಲಿಯುಗದಲ್ಲಿ ಅವತಾರಮಾಡುವುದಿಲ್ಲ. ಅವನಿಲ್ಲದೆ ಈ ಕಲಿಯುಗದಲ್ಲಿ ನಾವು ಹೇಗೆ ಇರುವೆವು?

೨೩. ದುಃಖಗೊಂಡ ಮುನಿಗಳು ಹೀಗೆ ಆಲೋಚಿಸುತ್ತಿರಲು ಅಲ್ಲಿದ್ದ ಉದ್ದಾಲಕನೆಂಬ ಮುನಿಯು ಇಂತೆಂದನು.

೨೪. ಉದ್ದಾಲಕನು ಹೇಳುತ್ತಾನೆ :—ಮುನಿವರ್ಯರೆ! ಇಲ್ಲಿ ಸೇರಿರುವ ಪಾಪವಿಲ್ಲದ ನಾವು ಕಲಿದೋಷದಿಂದ ಲಿಪ್ತರಾಗುವಷ್ಟರಲ್ಲಿ ಬ್ರಹ್ಮಲೋಕಕ್ಕೆ ಹೋಗೋಣ.

೨೫-೨೬. ಅಲ್ಲಿ ಸೃಷ್ಟಿಕರ್ತನಾದ ಬ್ರಹ್ಮನನ್ನು ವಿಷ್ಣುವು ಕಲಿಯುಗದಲ್ಲಿ ಎಲ್ಲಿರುವನೆಂದು ಕೇಳೋಣ. ವಿಷ್ಣುವು ಕಲಿಯುಗದಲ್ಲಿ ರುದ್ರಬ್ರಹ್ಮರೊಡನೆ ಇರದಿದ್ದಲ್ಲಿ ಆ ಪುಂಡರೀಕಾಕ್ಷನಿಂದ ಅಗಲಿದ ನಾವು ನಮ್ಮ ಶರೀರವನ್ನು ತ್ಯಜಿಸೋಣ. ಕಲಿಯುಗದಲ್ಲಿ ಆ ವಿಷ್ಣುವನ್ನು ಬಿಟ್ಟು ಯಾರು ತಾನೆ ಇರಲಾಗುವುದು.

ತಚ್ಛ್ರುತ್ವಾ ವಚನಂ ತಸ್ಯ ಋಷಯಃ ಸಂಶಿತವ್ರತಾಃ ।
ಸಾಧುಸಾಧ್ವಿತಿ ತೇ ಚೋಕ್ತ್ವಾ ಪ್ರಸ್ಥಿತಾ ಬ್ರಹ್ಮಣೋಽಂತಿಕಂ ॥ ೨೭ ॥
ಕಥಯಂತಃ ಕಥಾಂ ವಿಷ್ಣೋಃ ಸ್ವರೂಪಮನುವರ್ಣನಂ ।
ತಾಪಸಾಃ ಪ್ರಯಯುಃ ಸರ್ವೇ ಸಂಹೃಷ್ಟಾ ಬ್ರಹ್ಮಣೋಽಂತಿಕಂ ॥ ೨೮ ॥
ದದೃಶುಸ್ತೇ ತದಾ ದೇವಮಾಸೀನಂ ಪರಮಾಸನೇ ।
ಪಿತಾಮಹಂ ಭೂತಗಣೈರ್ಮೂರ್ತಾಮೂರ್ತೈರ್ವೃತಂ ತಥಾ ॥ ೨೯ ॥
ದೃಷ್ಟ್ವಾ ಚತುರ್ಮುಖಂ ದೇವಂ ದಂಡವತ್ಪ್ರಣತಾಃ ಕ್ಷಿತೌ ।
ಪ್ರಣಮ್ಯ ದೇವದೇವಂ ತು ಸ್ತೋತ್ರೇಣ ತುಷ್ಟುವುಸ್ತದಾ ॥ ೩೦ ॥

ಋಷಯ ಊಚುಃ :—

ನಮಸ್ತೇ ಪದ್ಮಸಂಭೂತ ಚತುರ್ವಕ್ತ್ರಾಕ್ಷಯಾವ್ಯಯ ।
ನಮಸ್ತೇ ಸೃಷ್ಟಿಕರ್ತ್ರೇ ತು ಪಿತಾಮಹ ನಮೋಽಸ್ತು ತೇ ॥ ೩೧ ॥
ಏವಂ ಸ್ತುತಃ ಸನ್ಮುನಿಭಿಃ ಸುಪ್ರೀತಃ ಕಮಲೋದ್ಭವಃ ।
ಪಾದ್ಯಾರ್ಘ್ಯೈರ್ಣಾಭಿವಂದ್ಯೈತಾನ್ಸಪ್ರಚ್ಛ ಮುನಿಪುಂಗವಾನ್ ॥ ೩೨ ॥

---

೨೭. ತೀಕ್ಷ್ಣಮತಿಯುಳ್ಳ ಆ ಮುನಿಗಳು ಉದ್ದಾಲಕನ ಆ ಮಾತನ್ನು ಕೇಳಿ ಒಳ್ಳೆಯದು ಒಳ್ಳೆಯದು ಎಂದು ನುಡಿದು, ಬ್ರಹ್ಮನೆಡೆಗೆ ಹೊರಟರು.

೨೮. ಅವರೆಲ್ಲರೂ ವಿಷ್ಣುವಿನ ಕಥೆಯನ್ನೂ, ಸ್ವರೂಪವನ್ನೂ ವರ್ಣಿಸುತ್ತ ಸಂತೋಷದಿಂದ ಬ್ರಹ್ಮನೆಡೆಗೆ ಹೋದರು.

೨೯. ಅಲ್ಲಿ ಉತ್ತಮಾಸನದಲ್ಲಿ ಕುಳಿತಿರುವವನೂ, ಸ್ಥಾವರಜಂಗಮಾತ್ಮಕ ಪ್ರಾಣಿಗಳಿಂದ ಕೂಡಿರುವವನೂ ಆದ ಚತುರ್ಮುಖನನ್ನು ಕಂಡರು.

೩೦. ಕೂಡಲೆ ಅವರು ಅವನಿಗೆ ಭೂಮಿಯಲ್ಲಿ ಸಾಷ್ಟಾಂಗ ಪ್ರಣಾಮಗೈದು ಹೀಗೆ ಸ್ತುತಿಸಿದರು.

೩೧. ಋಷಿಗಳು ಹೇಳುತ್ತಾರೆ :—ಪದ್ಮದಲ್ಲಿ ಜನಿಸಿದವನೂ, ನಾಲ್ಮೊಗನೂ, ನಾಶ, ವಿಕಾರಗಳಿಲ್ಲದವನೂ ಸೃಷ್ಟಿಸುವವನೂ ಆದ ಪಿತಾಮಹ! ನಿನಗೆ ನಮಸ್ಕಾರವು.

೩೨. ಮುನಿಗಳು ಹೀಗೆ ಸ್ತುತಿಸಲು ಕಮಲಸಂಭವನು ಸಂತುಷ್ಟನಾಗಿ ಈ ಮುನಿವರ್ಯರನ್ನು ಪಾದ್ಯಾರ್ಘ್ಯಗಳಿಂದ ಪೂಜಿಸಿ ಹೀಗೆ ಪ್ರಶ್ನೆಮಾಡಿದನು.

ಬ್ರಹ್ಮೋವಾಚ :
ಕಿಮಾಗಮನಕೃತ್ಯಂ ವೋ ಬ್ರೂತ ತತ್ತ್ವೇನ ಪುತ್ರಕಾಃ ।
ಕುಶಲಂ ವೋ ಮಹಾಭಾಗಾಃ ಪುತ್ರಶಿಷ್ಯಾಗ್ನಿಬಂಧುಷು ॥ ೩೩ ॥
ಋಷಯ ಊಚುಃ :—
ಭವತ್ಪ್ರಸಾದಾತ್ಸಕಲಂ ಪ್ರಾಪ್ತಂ ನಸ್ತಪಸಃ ಫಲಂ ।
ಯದ್ಭವಂತಂ ಪ್ರಪಶ್ಯಾಮಃ ಸರ್ವದೇವಂ ಗುರುಂ ಪ್ರಭುಂ ॥ ೩೪ ॥
ಶೃಣ್ವೇತತ್ಕಾರಣಂ ಶಂಭೋ ಏತೇ ಪ್ರಾಪ್ತಾಸ್ತವಾಂತಿಕಂ ।
ಯುಗತ್ರಯೇ ವ್ಯತಿಕ್ರಾಂತೇ ಕೃತಾದಿದ್ವಾಪರಾಂತಕೇ ॥ ೩೫ ॥
ಪ್ರಾಪ್ತೇ ಕಲಿಯುಗೇ ಘೋರೇ ಕ್ವ ವಿಷ್ಣುಃ ಪೃಥಿವೀತಲೇ ।
ಯಂ ದೃಷ್ಟ್ವಾ ಪರಮಾಂ ಮುಕ್ತಿಂ ಯಾಸ್ಯಾಮೋ ಮುಕ್ತಬಂಧನಾಃ ॥ ೩೬ ॥
ಬ್ರಹ್ಮೋವಾಚ :—
ಮತ್ಸ್ಯಕೂರ್ಮಾದಿರೂಪೈಶ್ಚ ಭಗವಾನ್ಜ್ಞಾಯತೇ ಮಯಾ ।
ವಿಷ್ಣೋಃ ಪಾರಮಿಕಂ ಮೂರ್ತಿಂ ನ ಜಾನಾಮಿ ದ್ವಿಜೋತ್ತಮಾ ॥ ೩೭ ॥
ಋಷಯ ಊಚುಃ :—
ಯದಿ ತ್ವಂ ನ ವಿಜಾನಾಸಿ ತಾತ ವಿಷ್ಣೋರವಸ್ಥಿತಂ ।
ಗತ್ವಾ ಪ್ರಯಾಗಂ ತತ್ರೈವ ಸಂತ್ಯಕ್ಷ್ಯಾಮಃ ಕಲೇವರಂ ॥ ೩೮ ॥

---

೩೩. ಬ್ರಹ್ಮನು ಹೇಳುತ್ತಾನೆ.—ಮಕ್ಕಳೆ! ನೀವು ಏತಕ್ಕೆ ಇಲ್ಲಿಗೆ ಬಂದಿರುವಿರಿ? ನಿಜವಾಗಿ ಹೇಳಿ. ನಿಮ್ಮ ಪುತ್ರರು, ಶಿಷ್ಯರು, ಅಗ್ನಿ, ಬಂಧುಗಳೆಲ್ಲ ಕ್ಷೇಮವಾಗಿರುವರೊ?

೩೪. ಋಷಿಗಳು ಹೇಳುತ್ತಾರೆ:—ಸರ್ವದೇವತೆಗಳಿಗೆ ಪೂಜ್ಯನಾದ ನಿನ್ನನ್ನು ನೋಡಿದ್ದರಿಂದ ನಿನ್ನ ಅನುಗ್ರಹದಿಂದ ನಮಗೆ ಸಕಲ ತಪಸ್ಸಿನ ಫಲವು ಲಭಿಸಿತು.

೩೫–೩೬. ಸುಖಜನಕನಾದ ಬ್ರಹ್ಮನೆ! ನಾವು ನಿನ್ನೆಡೆಗೆ ಬರಲು ಕಾರಣವನ್ನು ಕೇಳು. ಕೃತಾದಿದ್ವಾಪರಾಂತ ಮೂರುಯುಗಗಳು ಕೊನೆಗಾಣಲು ಘೋರ ಕಲಿಯುಗವು ಬರಲು ಭೂಮಿಯಲ್ಲಿ ವಿಷ್ಣುವೆಲ್ಲಿ? ಆವನನ್ನು ನೋಡಿ ನಾವು ಸಂಸಾರ ಬಂಧಮುಕ್ತರಾಗಿ ಮೋಕ್ಷವನ್ನು ಹೊಂದುವೆವು.

೩೭. ಬ್ರಹ್ಮನು ಹೇಳುತ್ತಾನೆ:—ದ್ವಿಜೋತ್ತಮರೆ! ನಾನು ವಿಷ್ಣುವಿನ ಮತ್ಸ್ಯಕೂರ್ಮಾದಿರೂಪಗಳನ್ನು ತಿಳಿದಿರುವೆನು. ಅವನ ಮೂಲರೂಪವನ್ನರಿಯೆನು.

೩೮. ಋಷಿಗಳು ಹೇಳುತ್ತಾರೆ:—ಪಿತಾಮಹ! ನೀನು ವಿಷ್ಣುವಿನ ಸ್ಥಿತಿಯನ್ನರಿಯದಿದ್ದರೆ ನಾವು ಪ್ರಯಾಗಕ್ಕೆ ಹೋಗಿ ಅಲ್ಲಿ ಶರೀರವನ್ನು ತ್ಯಜಿಸುವೆವು.

ಬ್ರಹ್ಮೋವಾಚ :—
ಮಾ ವಿಷಾದಂ ವ್ರಜಧ್ವಂ ಹಿ ಉಪದೇಕ್ಷ್ಯಾಮಿ ವೋ ಹಿತಂ ।
ಇತೋ ವ್ರಜಧ್ವಂ ಪಾತಾಲಂ ಯತ್ರಾಸ್ತೇ ದೈತ್ಯಸತ್ತಮಃ ॥ ೩೯ ॥
ತಂ ಗತ್ವಾ ಪರಿಪೃಚ್ಛಧ್ವಂ ಪ್ರಹ್ಲಾದಂ ದೈತ್ಯಸತ್ತಮಂ ।
ಸ ಜ್ಞಾಸ್ಯತಿ ಹರೇಃ ಸ್ಥಾನಂ ಯಾಥಾತಥ್ಯೇನ ಭೋ ದ್ವಿಜಾಃ ॥ ೪೦ ॥
ತಚ್ಛ್ರುತ್ವಾ ವಚನಂ ತಸ್ಯ ಬ್ರಹ್ಮಣಃ ಪರಮಾತ್ಮನಃ ।
ಪ್ರಣಿಪತ್ಯ ಚ ದೇವೇಶಂ ಪ್ರಸ್ಥಿತಾಸ್ತೇ ತಪೋಧನಾಃ ॥ ೪೧ ॥
ಜಗ್ಮುಃ ಸಂಹೃಷ್ಟಮನಸಃ ಸ್ತುವಂತೋ ದೈತ್ಯಸತ್ತಮಂ ।
ಧನ್ಯಃ ಸ ದೈತ್ಯರಾಜೋಽಯಂ ಯೋ ಜಾನಾತಿ ಜನಾರ್ದನಂ ॥ ೪೨ ॥
ಇತಿ ಸಂಚಿಂತಯಾನಾಸ್ತೇ ಪ್ರಾಪ್ತಾ ವೈ ಸುತಲಂ ದ್ವಿಜಾಃ ॥ ೪೩ ॥
ಗತ್ವಾ ತೇ ತಸ್ಯ ನಗರಂ ವಿವಿಶುರ್ಭವನೋತ್ತಮಂ ।
ದೂರಾದೇವ ಸ ತಾನ್ದೃಷ್ಟ್ವಾ ಬಲಿರ್ವೈರೋಚನಿಸ್ತದಾ ।
ಪ್ರತ್ಯುತ್ಥಾಯಾರ್ಚಯಾಂಚಕ್ರೇ ಪ್ರಹ್ಲಾದೇನ ಸಮನ್ವಿತಃ ॥ ೪೪ ॥
ಮಧುಪರ್ಕಂ ಚ ಗಾಂ ಚೈವ ದತ್ವಾ ಚಾರ್ಘ್ಯಂ ತಥೈವ ಚ ।
ಉವಾಚ ಪ್ರಾಂಜಲಿರ್ಭೂತ್ವಾ ಪ್ರಹೃಷ್ಟೇನಾಂತರಾತ್ಮನಾ ॥ ೪೫ ॥

---

೩೯. ಬ್ರಹ್ಮನು ಹೇಳುತ್ತಾನೆ:—ಮುನಿಗಳೇ! ನೀವು ವ್ಯಥೆಗೊಳ್ಳಬೇಡಿ. ನಿಮಗೆ ಹಿತವನ್ನು ಉಪದೇಶಿಸುವೆನು. ಇಲ್ಲಿಂದ ಪ್ರಹ್ಲಾದ ದೈತ್ಯೋತ್ತಮನಿರುವ ಪಾತಾಳಕ್ಕೆ ಹೋಗಿರಿ.

೪೦. ಅವನನ್ನು ಪ್ರಶ್ನೆಮಾಡಿರಿ. ಅವನು ವಿಷ್ಣುವಿನ ನಿಜಸ್ಥಿತಿಯನ್ನು ತಿಳಿದಿರುವನು.

೪೧. ಆ ಮುನಿಗಳು ಆ ಬ್ರಹ್ಮದೇವನ ಮಾತನ್ನು ಕೇಳಿ ಅವನನ್ನು ವಂದಿಸಿ ಹೊರಟರು.

೪೨—೪೩. ಅವರು ಸಂತೋಷಗೊಂಡ ಮನಸ್ಸುಳ್ಳವರಾಗಿ ದೈತ್ಯವರ್ಯನನ್ನು ಸ್ತುತಿಸುತ್ತ ಹೊರಟರು. ಅವರು ವಿಷ್ಣುವನ್ನರಿತ ಆ ದೈತ್ಯರಾಜನು ಧನ್ಯನು. ಎಂದು ಚಿಂತಿಸುತ್ತ ಸುತಳವನ್ನು ಸೇರಿದರು.

೪೪. ಆ ಮುನಿಗಳು ಆ ದೈತ್ಯರಾಜನ ನಗರಕ್ಕೆ ಹೋಗಿ ಅವನ ಮನೆಯನು ಹೊಕ್ಕರು. ವಿರೋಚನನ ತನಯನಾದ ಆ ಬಲಿಯು ಪ್ರಹ್ಲಾದನೊಡನೆ ಎದ್ದು ಅವರನ್ನು ಪೂಜಿಸಿ ಗೌರವಿಸಿದನು.

೪೫. ಅವನು ಮಧುಪರ್ಕ, ಗೋವು, ಅರ್ಘ್ಯಗಳನ್ನಿತ್ತು ಸಂತೋಷಗೊಂಡ ಮನಸ್ಸಿನಿಂದ ಕೈಮುಗಿದುಕೊಂಡು ಅವನು ಆ ಮುನಿಗಳುನ್ನು ಕುರಿತು, ಇಂತೆಂದನು.

ಸ್ವಾಗತಂ ವೋ ಮಹಾಭಾಗಾಃ ಸುವ್ಯುಷ್ಟಾ ರಜನೀ ಮಮ ।
ಭವತೋ ಯತ್ಪ್ರಪಶ್ಯಾಮಿ ಬ್ರೂತ ಕಿಂ ಕರವಾಣಿ ಚ ॥ ೪೬ ॥
ಏವಂ ಹಿ ದೈತ್ಯರಾಜೇನ ಸತ್ಕೃತಾಸ್ತೇ ದ್ವಿಜೋತ್ತಮಾಃ ।
ಊಚುಃ ಪ್ರಹೃಷ್ಟಮನಸೋ ದಾನವೇಂದ್ರಸುತಂ ತದಾ ॥ ೪೭ ॥

ಋಷಯ ಊಚುಃ :—

ಕಾರ್ಯಾರ್ಥಿನಸ್ತು ಸಂಪ್ರಾಪ್ತಾಃ ಪ್ರಹ್ಲಾದ ಹರಿವಲ್ಲಭ ।
ತದಸ್ಮಾಕಂ ಮಹಾಬಾಹೋ ಭವಾಂಸ್ತ್ರಾತಾ ಭವಾರ್ಣವಾತ್ ॥ ೪೮ ॥
ಕಥಂ ದೈತ್ಯ ಯುಗೇ ಹ್ಯಸ್ಮಿನ್ರೌದ್ರೇ ವೈ ಕಲಿಸಂಜ್ಞಕೇ ।
ಭವಿಷ್ಯಾಮೋ ವಿನಾ ವಿಷ್ಣುಂ ಭೀತಾನಾಮಭಯಪ್ರದಂ ॥ ೪೯ ॥
ಅಸ್ಮಿನ್ಯುಗೇ ಹ್ಯಧರ್ಮೇಣ ಜಿತೋ ಧರ್ಮಃ ಸನಾತನಃ ।
ಅನೃತೇನ ಜಿತಂ ಸತ್ಯಂ ವಿಪ್ರಾಶ್ಚ ವೃಷಲೈರ್ಜಿತಾಃ ॥ ೫೦ ॥
ವಿಟೈರ್ಜಿತಾ ವೇದಮಾರ್ಗಾಃ ಸ್ತ್ರೀಭಿಶ್ಚ ಪುರುಷಾ ಜಿತಾಃ । -
ಬ್ರಾಹ್ಮಣಾಶ್ಚಾಪಿ ವಧ್ಯಂತೇ ಮ್ಲೇಚ್ಛರಾಜನ್ಯರೂಪಿಭಿಃ ॥ ೫೧ ॥
ಅಸ್ಮಿನ್ನಿಲುಲಿತಪ್ರಾಯೇ ವರ್ಣಾಶ್ರಮವಿವರ್ಜಿತೇ ।
ಅವಿಲುಪ್ತೇ ವೇದಮಾರ್ಗೇ ಕ್ವ ವಿಷ್ಣುರ್ಭಗವಾನಿತಿ ॥ ೫೨ ॥

---

೪೬. ಮಹಾತ್ಮರೆ! ನಿಮಗೆ ಸುಖಾಗಮನವೇ? ನಾನು ನಿಮ್ಮನ್ನು ನೋಡಿದ್ದರಿಂದ ನನಗೆ ರಾತ್ರಿಯು ಸುಪ್ರಭಾತವಾಯಿತು. ನಿಮಗಾಗಿ ನಾನು ಈಗ ಏನನ್ನು ಮಾಡಲಿ.

೪೭. ಹೀಗೆ ದೈತ್ಯರಾಜನು ಸನ್ಮಾನಿಸಲು ಆ ಬ್ರಾಹ್ಮಣರು ಸಂತೋಷಗೊಂಡು ದಾನವೇಂದ್ರನ ಮಗನಾದ ಪ್ರಹ್ಲಾದನನ್ನು ಕುರಿತು ಇಂತೆಂದರು.

೪೮. ಋಷಿಗಳು ಹೇಳುತ್ತಾರೆ :— ಹರಿಪ್ರಿಯನಾದ ಪ್ರಹ್ಲಾದ! ನಾವು ಕಾರ್ಯಾರ್ಥಿಗಳಾಗಿ ನಿನ್ನೆಡೆಗೆ ಬಂದಿದ್ದೇವೆ. ಆದ್ದರಿಂದ ನೀನು ನಮ್ಮನ್ನು ಸಂಸಾರ ಸಾಗರದಿಂದ ರಕ್ಷಿಸು.

೪೯. ದೈತ್ಯರಾಜ! ನಾವು ಈ ಭಯಂಕರ ಕಲಿಯುಗದಲ್ಲಿ ಭಯಗೊಂಡವರಿಗೆ ಅಭಯವನ್ನೀಯುವ ವಿಷ್ಣುವನ್ನು ಬಿಟ್ಟು ಹೇಗೆ ತಾನೆ ಇರುವೆವು?

೫೦–೫೧. ಈ ಯುಗದಲ್ಲಿ ಅಧರ್ಮವು ಸನಾತನ ಧರ್ಮವನ್ನು ಜಯಿಸಿರುವುದು. ಸುಳ್ಳಿನಿಂದ ಸತ್ಯವೂ, ಶೂದ್ರರಿಂದ ಬ್ರಾಹ್ಮಣರೂ, ವಿಟರಿಂದ ವೇದಮಾರ್ಗಗಳೂ, ಹೆಂಗಸರಿಂದ ಗಂಡಸರೂ, ಸೋಲಿಸಲ್ಪಟ್ಟಿರುವರು. ಕ್ಷತ್ರಿಯ ರೂಪವನ್ನು ತಾಳಿದ ಮ್ಲೇಚ್ಛರು ಬ್ರಾಹ್ಮಣರನ್ನೂ ಕೊಲ್ಲುತ್ತಾರೆ.

೫೨. ವರ್ಣಾಶ್ರಮಗಳಿಲ್ಲದ ವೇದಮಾರ್ಗವು ಸಾಮಾನ್ಯವಾಗಿ ಹಾಳಾಗಿರಲು ಪೂಜ್ಯನಾದ ವಿಷ್ಣುವೆಲ್ಲಿರುವನು?

ವಿನಾ ಜ್ಞಾನಾದ್ವಿನಾ ಧ್ಯಾನಾದ್ವಿನಾ ಚೇಂದ್ರಿಯನಿಗ್ರಹಾತ್ ।
ಪ್ರಾಪ್ಯತೇ ಭಗವಾನ್ಯತ್ರ ತದ್ಗುಹ್ಯಂ ಕಥಯಸ್ವ ನಃ ॥ ೫೩ ॥
ದೈತ್ಯರಾಜ ತ್ವಮಸ್ಮಾಕಂ ಸುಹೃನ್ಮಾರ್ಗಪ್ರದರ್ಶಕಃ ।
ಕಥಯಸ್ವ ಮಹಾಭಾಗ ಯತ್ರ ತಿಷ್ಠತಿ ಕೇಶವಃ ॥ ೫೪ ॥
ಏವಂ ಸ ದ್ವಿಜಮುಖ್ಯೈಶ್ಚ ಸಂಪೃಷ್ಟೋ ದೈತ್ಯಸತ್ತಮಃ ।
ಪ್ರಣಮ್ಯ ಬ್ರಾಹ್ಮಣಾನ್ಸರ್ವಾನ್ ಭಕ್ತ್ಯಾ ಸಂಹೃಷ್ಟಮಾನಸಃ ॥ ೫೫ ॥
ಸ ನಮಸ್ಕೃತ್ಯ ದೇವೇಭ್ಯೋ ಬ್ರಹ್ಮಣೇ ಪರಮಾತ್ಮನೇ ।
ಭಗವದ್ಭಕ್ತಿಯುಕ್ತಃ ಸನ್ವ್ಯಾಹರ್ತುಮುಪಚಕ್ರಮೇ ॥ ೫೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇಽರ್ಬುದಖಂಡೇ ಕಲಿಭೀತಮಹರ್ಷಿಭಿ
ಬ್ರಹ್ಮಪಚನಾತ್ಪ್ರಹ್ಲಾದಸಂನಿಧೌ ಕಲಿಯುಗೇ
ಭಗವದ್ಭಕ್ತಿ ವಿಷಯೇ ಪ್ರಶ್ನಕರಣವರ್ಣನಂ ನಾಮ
ಪ್ರಥಮೋಽಧ್ಯಾಯ,

---

೫೩. ಜ್ಞಾನ, ಧ್ಯಾನ, ಇಂದ್ರಿಯ ನಿಗ್ರಹಗಳಿಲ್ಲದೆ ವಿಷ್ಣುವನ್ನು ಹೊಂದುವ ರಹಸ್ಯವಾದ ಮಾರ್ಗವನ್ನು ನಮಗೆ ಹೇಳು.

೫೪. ದೈತ್ಯರಾಜ! ನೀನು ನಮಗೆ ಮಾರ್ಗವನ್ನು ತೋರಿಸುವ ಮಿತ್ರನು. ಕೇಶವನೆಲ್ಲಿರುವನು? ಹೇಳು.

೫೫-೫೬. ದ್ವಿಜೋತ್ತಮರು ಹೀಗೆ ಕೇಳಲು ಆ ದೈತ್ಯರಾಜನು ಸಮಸ್ತ ಬ್ರಾಹ್ಮಣರನ್ನೂ ಭಕ್ತಿಯಿಂದ ವಂದಿಸಿ ಸಂತುಷ್ಟಮಾನಸನಾಗಿ ದೇವತೆಗಳಿಗೂ, ಬ್ರಹ್ಮದೇವನಿಗೂ ನಮಸ್ಕರಿಸಿ ಭಗವದ್ಭಕ್ತಿಯಿಂದ ಸಹಿತನಾಗಿ ಮಾತಾಡ ಲಾರಂಭಿಸಿದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ಮೂರನೆಯ ಅರ್ಬುದ ಖಂಡದಲ್ಲಿ
ಭಗವದ್ಭಕ್ತಿವಿಷಯ ಪ್ರಶ್ನಕರಣವರ್ಣನವೆಂಬ
ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ದ್ವಿತೀಯೋಽಧ್ಯಾಯಃ

## ರುಕ್ಮಿಣೀಶಾಪವೃತ್ತಾಂತವರ್ಣನಂ

ಪ್ರಹ್ಲಾದ ಉವಾಚ :—

ಸರ್ವೇಷಾಮಪಿ ಭೂತಾನಾಂ ದೈತ್ಯದಾನವರಕ್ಷಸಾಂ ।
ಭವಂತೋ ವೈ ಪೂಜ್ಯತಮಾ ದೇವಾದೀನಾಂ ತಥೈವ ಚ || ೧ ||
ಅನುಜ್ಞಯಾ ತು ಯುಷ್ಮಾಕಂ ಪ್ರಸಾದಾತ್ಕೇಶವಸ್ಯ ಹಿ ।
ಅಧಿಷ್ಠಾನಂ ಭಗವತಃ ಕಥಯಾಮಿ ನಿಬೋಧತ || ೨ ||
ಪಶ್ಚಿಮಸ್ಯ ಸಮುದ್ರಸ್ಯ ತೀರಮಾಶ್ರಿತ್ಯ ತಿಷ್ಠತಿ ।
ಕುಶಸ್ಥಲೀತಿ ಯಾ ಪೂರ್ವಂ ಕುಶೇನ ಸ್ಥಾಪಿತಂ ಪುರೀ || ೩ ||
ವಹತೇ ಗೋಮತೀ ಯತ್ರ ಸಾಗರೇಣ ಸಮಂತತಃ ।
ದ್ವಾರಾವತೀತಿ ಸಾ ಪುರೀ ಆನರ್ತೇಷು ಪ್ರಕೀರ್ತಿತಾ || ೪ ||
ತಸ್ಯಾಂ ವಸತಿ ವಿಶ್ವಾತ್ಮಾ ಸರ್ವಕಾಮಪ್ರದೋ ಹರಿಃ ।
ಕಲಾಷೋಡಶಸಂಯುಕ್ತೋ ಮೂರ್ತಿದ್ವಾದಶಕಾನ್ವಿತಃ || ೫ ||

---

ಕನ್ನಡದ ಅನುವಾದ

ರುಕ್ಮಿಣೀಶಾಪವೃತ್ತಾಂತವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ಸಮಸ್ತ ಪ್ರಾಣಿಗಳಿಗೂ, ದೈತ್ಯ, ದಾನವ, ರಾಕ್ಷಸರಿಗೂ, ದೇವತೆಗಳೇ ಮೊದಲಾದವರಿಗೂ ನೀವೇ ಪೂಜ್ಯರಾಗಿರುವಿರಿ.

೨. ನಿಮ್ಮ ಅನುಜ್ಞೆಯಿಂದಲೂ, ಶ್ರೀ ವಿಷ್ಣುವಿನ ಅನುಗ್ರಹದಿಂದಲೂ, ಆ ಭಗವಂತನ ಸ್ಥಿತಿಯನ್ನು ಹೇಳುವೆನು. ತಿಳಿದುಕೊಳ್ಳಿರಿ.

೩. ಪಶ್ಚಿಮ ಸಮುದ್ರದ ತೀರ್ಥದಲ್ಲಿ ಹಿಂದೆ ಕುಶನು ಸ್ಥಾಪಿಸಿದ ಕುಶಸ್ಥಲಿ ಯೆಂಬ ಪಟ್ಟಣವಿದೆ.

೪. ಅಲ್ಲಿ ಸುತ್ತಲೂ ಗೋಮತೀ ನದಿಯು ಸಾಗರದೊಡನೆ ಹರಿಯುತ್ತಿರುವುದು. ಆನರ್ತದೇಶದಲ್ಲಿರುವ ಅದನ್ನು ದ್ವಾರಾವತಿಯೆಂದು ಹೇಳುತ್ತಾರೆ.

೫. ಅಲ್ಲಿ ವಿಶ್ವಸ್ವರೂಪನೂ, ಸಕಲೇಷ್ಟದಾಯಕನೂ, ಷೋಡಶ ಕಲೆಗಳಿಂದ ಕೂಡಿರುವವನೂ, ದ್ವಾದಶಮೂರ್ತಿಸಹಿತನೂ ಆದ ವಿಷ್ಣುವು ವಾಸಿಸುವನು.

ತದೇವ ಪರಮಂ ಧಾಮ ತದೇವ ಪರಮಂ ಪದಂ ।
ದ್ವಾರಕಾ ಸಾ ಚ ವೈ ಧನ್ಯಾ ಯತ್ರಾಸ್ತೇ ಮಧುಸೂದನಃ ॥ ೬ ॥
ಯತ್ರ ಕೃಷ್ಣಶ್ಚತುರ್ಬಾಹುಃ ಶಂಖಚಕ್ರಗದಾಧರಃ ।
ನರಾ ಮುಕ್ತಿಂ ಪ್ರಯಾಸ್ಯಂತಿ ತತ್ರ ಗತ್ವಾ ಕಲೌ ಯುಗೇ ॥ ೭ ॥
ತಚ್ಛ್ರುತ್ವಾ ವಚನಂ ತಸ್ಯ ಪ್ರಹ್ಲಾದಸ್ಯ ಮಹಾತ್ಮನಃ ।
ವಿಸ್ಮಯಾವಿಷ್ಟಮನಸಸ್ತಮೂಚುರ್ಮುನಿಸತ್ತಮಾಃ ॥ ೮ ॥

ಋಷಯ ಊಚುಃ :—

ಕ್ಷಯಂ ಯದುಕುಲೇ ಯಾತೇ ಭಾರೇ ಚೋಪಹೃತೇ ಭುವಃ ।
ಪ್ರಭಾಸೇ ಯಾದವಶ್ರೇಷ್ಠಃ ಸ್ವಸ್ಥಾನಮಗಮದ್ಧರಿಃ ॥ ೯ ॥
ದ್ವಾರಾವತ್ಯಾಂ ಪ್ಲಾವಿತಾಯಾಂ ಸಮಂತಾತ್ಸಾಗರೇಣ ಹಿ ।
ಕಥಂ ಸ ಭಗವಾಂಸ್ತತ್ರ ಕಲೌ ದೈತ್ಯ ಪ್ರಕೀರ್ತ್ಯತೇ ॥ ೧೦ ॥
ಕಥಯಸ್ವ ಸುರಶ್ರೇಷ್ಠ ಕಥಂ ವಿಷ್ಣುರ್ಮಹೀತಲೇ ।
ಸ್ಥಿತಶ್ಚಾನರ್ತವಿಷಯ ಏತದ್ವಿಸ್ತರತೋ ವದ ॥ ೧೧ ॥

ಪ್ರಹ್ಲಾದ ಉವಾಚ :—

ಉಗ್ರಸೇನೇ ನರಪತೌ ಪ್ರಶಾಸತಿ ವಸುಂಧರಾಂ ॥
ಕೃಷ್ಣೋ ಯದುಪುರೀಮೇತಾಂ ಶೋಭಯಾಮಾಸ ಸರ್ವತಃ ॥ ೧೨ ॥

---

೬–೭. ಅಲ್ಲಿ ನಾಲ್ಕು ತೋಳುಗಳುಳ್ಳ, ಶಂಖಚಕ್ರಗದೆಗಳನ್ನು ಧರಿಸಿರುವ ವಿಷ್ಣುವು ವಾಸಿಸುವುದರಿಂದ ಆ ದ್ವಾರಾವತಿಯೇ ಉತ್ತಮ ಧಾಮವು ಮತ್ತು ಸ್ಥಾನವು. ಆ ದ್ವಾರಾವತಿಯೇ ಧನ್ಯವಾದುದು. ಕಲಿಯುಗದಲ್ಲಿ ಅಲ್ಲಿಗೆ ಹೋದ ಮಾನವರು ಮುಕ್ತರಾಗುವರು.

೮. ಮಹಾತ್ಮನಾದ ಆ ಪ್ರಹ್ಲಾದನಮಾತನ್ನುಕೇಳಿ ಮುನಿವರ್ಯರು ಆಶ್ಚರ್ಯಗೊಂಡವರಾಗಿ ಇಂತೆಂದರು.

೯. ಋಷಿಗಳು ಹೇಳುತ್ತಾರೆ :—ಯದುಕುಲವು ನಾಶವಾಗಿ ಭೂಭಾರವು ಪರಿಹೃತವಾಗಲು ಶ್ರೀಕೃಷ್ಣನು ಪ್ರಭಾಸದಲ್ಲಿರುವ ತನ್ನ ಸ್ಥಳಕ್ಕೆ ತೆರಳಿದನು.

೧೦. ದ್ವಾರಾವತಿಯು ಸಮುದ್ರದಲ್ಲಿ ಮುಳುಗಿರುವುದರಿಂದ ಆ ಕೃಷ್ಣನು ಕಲಿಯುಗದಲ್ಲಿ ಅಲ್ಲಿ ವಾಸವಾಗಿರುವನೆಂದು ಹೇಗೆ ಹೇಳುವೆ ?

೧೧. ದೇವತೆಗಳಿಗಿಂತಲೂ ಉತ್ತಮನಾದ ದೈತ್ಯರಾಜನೆ! ವಿಷ್ಣುವು ಭೂಮಿಯಲ್ಲಿ ಆನರ್ತದೇಶದಲ್ಲಿ ಹೇಗಿದ್ದಾನೆ ? ಇದನ್ನು ವಿಸ್ತಾರವಾಗಿ ಹೇಳು.

೧೨. ಪ್ರಹ್ಲಾದನು ಹೇಳುತ್ತಾನೆ :— ಉಗ್ರಸೇನರಾಜನು ರಾಜ್ಯವನ್ನು ಆಳುತ್ತಿರಲು ಕೃಷ್ಣನು ಯದುಪುರಿಯನ್ನು ಎಲ್ಲೆಡೆಯಲ್ಲಿಯೂ ಪ್ರಕಾಶಗೊಳಿಸಿದನು.

ರಮಮಾಣೇ ರಮಾನಾಥೇ ರಾಮಾಭಿಧಮಣೇ ಹರೌ ।
ಏಕದಾ ತು ಸಮಾಸೀನೇ ಸಭಾಯಾಂ ಯದುಸತ್ತಮೇ ॥ ೧೩ ॥
ಕಥಾಭಿಃ ಕ್ರಿಯಮಾಣಾಭಿರ್ವಿಚಿತ್ರಾಭಿರನೇಕಧಾ ।
ಉದ್ಧವಃ ಕಥಯಾಮಾಸ ಪ್ರಚಾರಂ ಯದುನಂದನಂ ॥ ೧೪ ॥
ಯಾತ್ರಯಾನುಸಂಪ್ರಾಪ್ತಂ ದುರ್ವಾಸಸಮಕಲ್ಮಷಂ ।
ಸ್ಥಿತಂ ತಂ ಗೋಮತೀತೀರೇ ಚಕ್ರತೀರ್ಥಸಮೀಪತಃ ॥ ೧೫ ॥
ತಚ್ಛ್ರುತ್ವಾ ಸಹಸೋತ್ಥಾಯ ಭಗವಾನ್ರುಕ್ಮಿಣೀಗೃಹಂ ।
ಜಗಾಮ ಹೃಷ್ಟಮನಸಾ ವಿಶ್ವಶಕ್ತಿರಧೋಕ್ಷಜಃ ॥ ೧೬ ॥
ಆಗತ್ಯೋವಾಚ ವೈದರ್ಭೀಂ ಸಂಪ್ರಾಪ್ತಂ ಋಷಿಸತ್ತಮಂ ।
ತಪೋನಿರ್ಧೂತಪಾಪ್ಮಾಯಮತ್ರಿಪುತ್ರೋ ಮಹಾತಪಾಃ ॥ ೧೭ ॥
ಆತಿಥ್ಯೇನಾರ್ಚಿತೋ ವಿಪ್ರೋ ದಾಸ್ಯತೇ ಚ ಮಹೋದಯಂ ।
ಗೃಹಿಣೀ ನ ಗೃಹೇ ಯಸ್ಯ ಸತ್ಪಾತ್ರಾಗಮನಂ ವೃಥಾ ॥ ೧೮ ॥
ತಸ್ಯ ದೇವಾ ನ ಗೃಹ್ಣಂತಿ ಪಿತರಶ್ಚ ತಥೋದಕಂ ।
ತದಾಗಚ್ಛಸ್ವ ಗಚ್ಛಾಮೋ ನಿಮಂತ್ರಯಿತುಮತ್ರಿಜಂ ॥ ೧೯ ॥

---

೧೩–೧೪. ಗೋಪಿಯರೊಡನೆ ವಿನೋದಪಡುತ್ತಿರುವ ಶ್ರೀ ಕೃಷ್ಣನು ಒಂದಾನೊಂದು ವೇಳೆ ಸಭೆಯಲ್ಲಿ ಕುಳಿತಿರಲು ಉದ್ಧವನು ಶ್ರೀ ಕೃಷ್ಣನನ್ನು ಕುರಿತು ವಿಚಿತ್ರವಾದ ಅನೇಕ ಕಥೆಗಳನ್ನು ಹೇಳುತ್ತ ಲೋಕವೃತ್ತಾಂತವನ್ನು ಹೇಳಿದನು.

೧೫. ಅದರಲ್ಲಿ ಯಾತ್ರಾಕ್ರಮದಿಂದ ಬಂದಿರುವವನೂ, ದೋಷರಹಿತನೂ, ಚಕ್ರತೀರ್ಥದ ಹತ್ತಿರ ಗೋಮತೀ ನದಿಯ ದಡದಲ್ಲಿರುವವನೂ ಆದ ದುರ್ವಾಸನ ವೃತ್ತಾಂತವನ್ನು ತಿಳಿಸಿದನು.

೧೬. ಅದನ್ನು ಕೇಳಿ ಶ್ರೀ ಕೃಷ್ಣನು ಸಂತೋಷಗೊಂಡು ಕೂಡಲೇ ಎದ್ದು ರುಕ್ಮಿಣಿಯ ಮನೆಗೆ ಹೋದನು.

೧೭. ಅವನು ಅಲ್ಲಿಗೆ ಹೋಗಿ ರುಕ್ಮಿಣಿಯನ್ನು ಕುರಿತು ಇಂತೆಂದನು. 'ತಪೋಸಿದ್ಧಿಯೂ, ನಿಷ್ಕಲ್ಮಷನೂ, ಆದ ದುರ್ವಾಸನು ಬಂದಿರುವನು.

೧೮. ಅತಿಥಿ ಸತ್ಕಾರದಿಂದ ಪೂಜಿತನಾದ ಅವನು ಅತಿಶಯ ಭಾಗ್ಯವನ್ನೀಯುವನು. ಮನೆಯಲ್ಲಿ ಪತ್ನಿಯಿಲ್ಲದಿದ್ದರೆ ಸತ್ಪಾತ್ರಾಗಮನವು ನಿಷ್ಫಲವಾಗುವುದು.

೧೯. ಅವನ ತರ್ಪಣೋದಕವನ್ನು ದೇವತೆಗಳೂ ಪಿತೃಗಳೂ ಸ್ವೀಕರಿಸುವುದಿಲ್ಲ. ಆದ್ದರಿಂದ ಅತ್ರಿತನಯನಾದ ದುರ್ವಾದನನ್ನು ನಿಮಂತ್ರಿಸುವುದಕ್ಕೆ ಹೋಗೋಣ ಬಾ'.

ತಥೇತ್ಯುಕ್ತ್ವಾ ತು ಸಾ ದೇವೀ ರಥಮಾರುರುಹೇ ಸತೀ ।
ರಥಮಾರುಹ್ಯ ದೇವೇಶೋ ರುಕ್ಮಿಣ್ಯಾ ಸಹಿತೋ ಹರಿಃ ।
ಜಗಾಮ ತತ್ರ ಯತ್ರಾಸ್ತೇ ದುರ್ವಾಸಾ ಮುನಿಸತ್ತಮಃ ॥ ೨೦ ॥
ದೃಷ್ಟ್ವಾ ಜ್ವಲಂತಂ ತಪಸಾ ಕೂಲೇ ನದನದೀಪತೇಃ ।
ಕಾಪಾಲಿಕಸ್ಯ ಪುರತಃ ಸುಸ್ನಾತಂ ವರಸೀಕರೈಃ ॥ ೨೧ ॥
ಪ್ರಣಮ್ಯ ಭಗವಾನ್ಭಕ್ತ್ಯಾ ಪಪ್ರಚ್ಛಾನಾಮಯಂ ತತಃ ।
ಪಶ್ಚಾದ್ವಿದರ್ಭತನಯಾ ರುಕ್ಮಿಣೀ ಪ್ರಣನಾಮ ತಂ ॥ ೨೨ ॥
ದುರ್ವಾಸಾಶ್ಚಾಪಿ ತೌ ದೃಷ್ಟ್ವಾ ದರ್ಶನಾರ್ಥಮುಪಾಗತೌ ।
ಪಪ್ರಚ್ಛ ಕುಶಲಂ ತತ್ರ ಸ್ವಾಗತೇನಾಭಿನಂದ್ಯ ಚ ॥ ೨೩ ॥

ದುರ್ವಾಸಾ ಉವಾಚ :—

ಕುಶಲಂ ಕೃಷ್ಣ ಸರ್ವತ್ರ ಕುತ್ರ ವಾಸಸ್ತವಾಧುನಾ ।
ಕತಿ ದಾರಾ ಧನಾಪತ್ಯಮೇತದ್ವಿಸ್ತರತೋ ವದ ॥ ೨೪ ॥

ಶ್ರೀಕೃಷ್ಣ ಉವಾಚ :—

ಸಮುದ್ರೇಣ ಪ್ರದತ್ತಾ ಮೇ ಭೂಮಿರ್ದ್ವಾದಶಯೋಜನಾ ।
ತಸ್ಯಾಂ ನಿವಸತೋ ಬ್ರಹ್ಮನ್ ಪುರೀ ಹೇಮಮಯೀ ಮಮ ॥ ೨೫ ॥

---

೨೦. ರುಕ್ಮಿಣಿಯು ಹಾಗೆಯೇ ಆಗಲೆಂದು ರಥವನ್ನು ಹತ್ತಿದಳು. ಶ್ರೀ ಕೃಷ್ಣನುರುಕ್ಮಿಣಿಯೊಡನೆ ರಥದಲ್ಲಿ ಕುಳಿತು ಮುನಿವರ್ಯನಾದ ದುರ್ವಾಸನಿರುವ ಸ್ಥಳಕ್ಕೆ ಹೋದನು.

೨೧–೨೨. ಅವನು ಸಮುದ್ರದ ದಡದಲ್ಲಿ ಮಹೇಶ್ವರನ ಮುಂದೆ ಸ್ವಚ್ಛ ಜಲದಿಂದ ಮಿಂದು ತಪಸ್ಸಿನಿಂದ ಜ್ವಲಿಸುತ್ತಿರುವ ಆ ಮುನಿಯನ್ನು ಕಂಡು ಭಕ್ತಿಯಿಂದ ವಂದಿಸಿ ಕುಶಲಪ್ರಶ್ನೆಮಾಡಿದನು. ತರುವಾಯ ವಿದರ್ಭರಾಜನ ಮಗಳಾದ ರುಕ್ಮಿಣಿಯು ಅವನನ್ನು ನಮಸ್ಕರಿಸಿದಳು.

೨೩. ದುರ್ವಾಸನೂ ತನ್ನ ದರ್ಶನಕ್ಕಾಗಿ ಬಂದಿರುವ ಅವರಿಬ್ಬರನ್ನೂ ಸುಖಾಗಮನ ಪ್ರಶ್ನೆಯಿಂದ ಅಭಿನಂದಿಸಿ ಕುಶಲ ಪ್ರಶ್ನೆಮಾಡಿದನು.

೨೪. ದುರ್ವಾಸನು ಹೇಳುತ್ತಾನೆ:—ಕೃಷ್ಣ ! ನಿನಗೆ ಎಲ್ಲ ವಿಷಯದಲ್ಲಿಯೂ ಕ್ಷೇಮವೆ ? ಈಗ ಎಲ್ಲಿ ವಾಸಿಸುತ್ತಿರುವೆ ? ನಿನಗೆ ಎಷ್ಟುಮಂದಿ ಹೆಂಡತಿಯರು ? ಹಣ, ಮಕ್ಕಳು ಈ ವಿಷಯಗಳನ್ನು ವಿಸ್ತಾರವಾಗಿ ಹೇಳು.

೨೫. ಶ್ರೀಕೃಷ್ಣನು ಹೇಳುತ್ತಾನೆ:— ಸಮುದ್ರರಾಜನು ನನಗೆ ಹನ್ನೆರಡು ಯೋಜನ ವಿಸ್ತೀರ್ಣದ ಭೂಮಿಯನ್ನಿತ್ತಿರುವನು. ಆ ಭೂಮಿಯಲ್ಲಿ ವಾಸಮಾಡುತ್ತಿರುವ ನನ್ನ ಪಟ್ಟಣವು ಸುವರ್ಣಮಯವಾದುದು.

ಪ್ರಾಸಾದಾಸ್ತತ್ರ ಸೌವರ್ಣಾ ನವಲಕ್ಷಾಣಿ ಸಂಖ್ಯಯಾ ।
ತಸ್ಯಾಂ ವಸಾಮಿ ಸಂಹೃಷ್ಟಸ್ತ್ವತ್ಪ್ರಸಾದಾತ್ಸುನಿರ್ಭಯಃ ॥ ೨೬ ॥
ತಚ್ಛ್ರುತ್ವಾ ವಚನಂ ತಸ್ಯ ವಿಸ್ಮಯಾವಿಷ್ಟಮಾನಸಃ ।
ಪ್ರತ್ಯುವಾಚ ಸ ದುರ್ವಾಸಾಃ ಪ್ರಹಸ್ಯ ಮಧುಸೂದನಂ ॥ ೨೭ ॥
ವಸಂತಿ ತಾವಕಾ ಯೇ ಚ ತೇಷಾಂ ಸಂಖ್ಯಾ ವದಸ್ವ ಭೋಃ ।
ಯಾವತ್ಯಶ್ಚ ಮಹಿಷ್ಯಸ್ತೇ ಪುತ್ರಾಃ ಪರಿಜನಾಸ್ತಥಾ ॥ ೨೮ ॥

ಶ್ರೀಕೃಷ್ಣ ಉವಾಚ :—

ಬ್ರಹ್ಮನ್ಷೋಡಶಸಾಹಸ್ರಂ ಭಾರ್ಯಾಶ್ಚಾಷ್ಟಾಧಿಕಾ ಮಮ ।
ತಾಸಾಂ ಮಧ್ಯೇಽಭೀಷ್ಟತಮಾ ವಿದರ್ಭಾಧಿಪತೇಃ ಸುತಾ ॥ ೨೯ ॥
ಏಕೈಕಸ್ಯಾ ದಶ ಸುತಾಃ ಕನ್ಯಾ ಚೈಕಾ ತಥಾ ಮುನೇ ।
ಷಟ್ಪಂಚಾಶದ್ಯದೂನಾಂ ತು ಕೋಟ್ಯಃ ಪರಿಜನೋ ಮಮ ॥ ೩೦ ॥
ಶೇಷಾಃ ಪ್ರಕೃತಯೋ ಬ್ರಹ್ಮಂಸ್ತೇಷಾಂ ಸಂಖ್ಯಾ ನ ವಿದ್ಯತೇ ।
ತಚ್ಛ್ರುತ್ವಾ ಚಿಂತಯಾಮಾಸ ಕಿಮೇತದಿತಿ ವಿಸ್ಮಿತಃ ॥ ೩೧ ॥

---

೨೬. ಆ ಪಟ್ಟಣದಲ್ಲಿ ನನ್ನ ಒಂಬತ್ತು ಲಕ್ಷ ಚಿನ್ನದ ಅರಮನೆಗಳಿವೆ. ನಿನ್ನ ಅನುಗ್ರಹದಿಂದ ಅವುಗಳಲ್ಲಿ ಭಯವಿಲ್ಲದೆ ಸಂತೋಷದಿಂದ ವಾಸಮಾಡುತ್ತಿದ್ದೇನೆ.

೨೭. ಆ ದುರ್ವಾಸನು ಕೃಷ್ಣನ ಆ ಮಾತನ್ನು ಕೇಳಿ ಆಶ್ಚರ್ಯಗೊಂಡು ನಕ್ಕು ಅವನನ್ನು ಕುರಿತು ಹೀಗೆಂದನು.

೨೮. ಆ ಮನೆಗಳಲ್ಲಿ ನಿನ್ನ ಎಷ್ಟುಮಂದಿ ಪತ್ನಿಯರೂ, ಸೇವಕರೂ ವಾಸ ಮಾಡುತ್ತಿದ್ದಾರೆ. ಹೇಳು.

೨೯. ಶ್ರೀಕೃಷ್ಣನು ಹೇಳುತ್ತಾನೆ:— ಬ್ರಾಹ್ಮಣನೆ! ನನಗೆ ಹದಿನಾರು ಸಾವಿರದ ಎಂಟುಮಂದಿ ಪತ್ನಿಯರು ಇರುವರು. ಅವರಲ್ಲಿ ವಿದರ್ಭರಾಜನ ಮಗಳಾದ ರುಕ್ಮಿಣಿಯು ನನಗೆ ಅತಿ ಪ್ರಿಯಳು.

೩೦. ಮುನಿಯೆ! ಒಬ್ಬೊಬ್ಬ ಪತ್ನಿಯಲ್ಲಿ ಹತ್ತುಮಂದಿ ಗಂಡುಮಕ್ಕಳೂ ಒಬ್ಬ ಕನ್ಯೆಯೂ ಹುಟ್ಟಿರುವರು ನನ್ನ ಸೇವಕರು, ಐವತ್ತಾರು ಕೋಟಿ.

೩೧. ಉಳಿದ ಪ್ರಜೆಗಳ ಸಂಖ್ಯೆ ಇಷ್ಟೆಂದು ಗೊತ್ತಿಲ್ಲ. ಇದನ್ನು ಕೇಳಿ ದುರ್ವಾಸನು ಇದೇನೆಂದು ಆಶ್ಚರ್ಯದಿಂದ ಚಿಂತಿಸಿದನು.

ಅಹೋ ಹ್ಯನಂತವೀರ್ಯಸ್ಯ ಮಾಯಾಮಾಶ್ರಿತ್ಯ ತಿಷ್ಠತಃ ।
ಅನಂತಾ ಸರ್ವಕರ್ತೃತ್ವೇ ಪ್ರವೃತ್ತಿರ್ದೃಶ್ಯತಾಮಿಯಂ ॥ ೩೨ ॥

ದುರ್ವಾಸಾ ಉವಾಚ :—

ಸ್ವಾಗತಂ ತೇ ಮಹಾಬಾಹೋ ಬ್ರೂಹಿ ಕಿಂ ಕರವಾಣಿ ತೇ ।
ದರ್ಶನೇನ ತ್ವದೀಯೇನ ಪ್ರೀತಿಮೇತಿ ಚ ಮೇ ಮನಃ ॥ ೩೩ ॥

ಶ್ರೀಕೃಷ್ಣ ಉವಾಚ :—

ಯದಿ ಪ್ರಸನ್ನೋ ಭಗವಂಸ್ತದಾಗಚ್ಛಸ್ವ ಮೇ ಗೃಹಂ ।
ಶಿರಸಾ ಧಾರ್ಯ ಪಾದಾಂಬು ಪ್ರಯಾಸ್ಯಾಮಿ ಪವಿತ್ರತಾಂ ॥ ೩೪ ॥

ದುರ್ವಾಸಾ ಉವಾಚ :—

ಅಕ್ಷಮಾಸಾರಸರ್ವಸ್ವಂ ಕಿಂ ಮಾಂ ನಯಸಿ ಮಾಧವ ।
ನಯ ಮಾಂ ಯದಿ ಮದ್ವಾಕ್ಯಂ ಕರೋಷಿ ಸಹ ಭಾರ್ಯಯಾ ॥ ೩೫ ॥

ಪ್ರಹ್ಲಾದ ಉವಾಚ :—

ಏವಮಸ್ತ್ವಿತಿ ಚೋಕ್ತ್ವಾ ಸ ಪ್ರಸ್ಥಿತಃ ಸ್ವರಥೇನ ಹಿ ।
ತಂ ದೃಷ್ಟ್ವಾ ಪ್ರಸ್ಥಿತಂ ವಿಷ್ಣುಂ ಪ್ರಹಸ್ಯೋವಾಚ ಭರ್ತ್ಸಯನ್ ॥ ೩೬ ॥

---

೩೨. ಅನಂತ ಶಕ್ತಿಯುಳ್ಳವನೂ, ಮಾಯೆಯನ್ನು ಆಶ್ರಯಿಸಿರುವವನೂ, ಆದ ಶ್ರೀಕೃಷ್ಣನ ಸರ್ವಕರ್ತೃತ್ವವಿಷಯವಾದ ಪ್ರವೃತ್ತಿಯು ಅಸಂಖ್ಯಾಕವಾಗಿ ಕಾಣುತ್ತಿರುವುದು.

೩೩. ದುರ್ವಾಸನು ಹೇಳುತ್ತಾನೆ:—ಪರಾಕ್ರಮಶಾಲಿಯಾದ ಕೃಷ್ಣ! ನಿನಗೆ ಸುಖಾಗಮನವೆ? ನಿನಗೆ ಏನನ್ನು ಮಾಡಲಿ. ನಿನ್ನ ದರ್ಶನದಿಂದ ನನ್ನ ಮನಸ್ಸು ಸಂತೋಷಗೊಳ್ಳುತ್ತಿದೆ.

೩೪. ಶ್ರೀಕೃಷ್ಣನು ಹೇಳುತ್ತಾನೆ:—ಪೂಜ್ಯನೆ! ನೀನು ಪ್ರಸನ್ನನಾಗಿದ್ದರೆ ನನ್ನ ಮನೆಗೆ ಬಾ. ನಿನ್ನ ಪಾದದ ನೀರನ್ನು ಕುಡಿದು ಪವಿತ್ರನಾಗುವೆನು.

೩೫. ದುರ್ವಾಸನು ಹೇಳುತ್ತಾನೆ:—ಮಾಧವ! ಅಸಹನೆಯ ಸ್ವಭಾವವುಳ್ಳ ನನ್ನನ್ನು ಏಕೆ ಕರೆದುಕೊಂಡು ಹೋಗುವೆ? ಪತ್ನಿಯೊಡನೆ ನನ್ನ ಮಾತನ್ನು ನಡೆಸುವುದಾದರೆ ಕರೆದುಕೊಂಡು ಹೋಗು.

೩೬. ಪ್ರಹ್ಲಾದನು ಹೇಳುತ್ತಾನೆ:—ಆ ಕೃಷ್ಣನು ಹಾಗೆಯೇ ಆಗಲೆಂದು ತನ್ನ ರಥದಿಂದ ಹೊರಟನು. ದುರ್ವಾಸನು ಹೊರಟ ಕೃಷ್ಣನನ್ನು ನೋಡಿ ನಕ್ಕು ಹೆದರಿಸುವವನಂತೆ ಇಂತೆಂದನು.

ದುರ್ವಾಸಾ ಉವಾಚ :—
ದುರ್ವಾಸಸಂ ನ ಜಾನಾಮಿ ಮುಂಚೇಮಾಸ್ತ್ವಯಸತ್ತಮಾ ।
ತ್ವಂ ಚ ಭಾರ್ಯಾ ತಥಾ ಚೇಯಂ ವಹತಂ ಸ್ವರಥೇನ ಮಾಂ ॥ ೩೭ ॥
ಶ್ರೀಕೃಷ್ಣ ಉವಾಚ :—
ಭಗವನ್ಯಥಾ ಪ್ರಬ್ರವೀಷಿ ವಿಪ್ರ ಕರ್ತಾಽಸ್ಮಿ ತತ್ತಥಾ ।
ತ್ವಯಾ ಕೃಪಾಲುನಾ ಬ್ರಹ್ಮನ್ಪಾರಿತೋಽಹಂ ಸ ಬಾಂಧವಃ ॥ ೩೮ ॥
ಪ್ರಹ್ಲಾದ ಉವಾಚ :—
ತೌ ತಥಾ ಋಷಿವರ್ಯೋಽಸೌ ಯುಕ್ತಾಂ ದೇವೀಂ ಸ್ವಕೇ ರಥೇ ।
ತಥೈವ ಪುಂಡರೀಕಾಕ್ಷಂ ಯಾಹಿ ಯಾಹೀತ್ಯಭಾಷತ ॥ ೩೯ ॥
ತಂ ದೃಷ್ಟ್ವಾ ದೇವತಾಃ ಸರ್ವಾ ವಹಮಾನಂ ರಥಂ ಹರಿಂ ।
ಸಾಧು ಸಾಧ್ವಿತಿ ಭಾಷಂತ ಊಚುಃ ಸರ್ವೇ ಪರಸ್ಪರಂ ॥ ೪೦ ॥
ಅಹೋ ಬ್ರಹ್ಮಣ್ಯದೇವಸ್ಯ ಪರಾಂ ಭಕ್ತಿಂ ಪ್ರಪಶ್ಯತ ।
ಸ್ಕಂಧೇ ಕೃತ್ವಾ ಧುರಂ ಯೋ ಹಿ ವಹತೇ ಭಾರ್ಯಯಾ ಸಹ ॥ ೪೧ ॥
ವಿಕೀರ್ಯಮಾಣಃ ಕುಸುಮೈಃ ಸುರಸಂಘೈರ್ಜನಾರ್ದನಃ ।
ಜಗಾಮ ಸ ರಥಂ ಗೃಹ್ಯ ಸಭಾರ್ಯೋ ದ್ವಾರಕಾಂ ಪ್ರತಿ ॥ ೪೨ ॥

---

೩೭. ದುರ್ವಾಸನು ಹೇಳುತ್ತಾನೆ:—ನೀನು ದುರ್ವಾಸನನ್ನು ತಿಳಿಯಲಿಲ್ಲವೆ? ಈ ಉತ್ತಮ ಕುದುರೆಯನ್ನು ಬಿಡು ನನ್ನನ್ನು ನಿನ್ನ ರಥದಲ್ಲಿ ಕುಳ್ಳಿರಿಸಿಕೊಂಡು ನೀನೂ ನಿನ್ನ ಪತ್ನಿಯೂ ಎಳೆದುಕೊಂಡು ಹೋಗಿರಿ.

೩೮. ಶ್ರೀಕೃಷ್ಣನು ಹೇಳುತ್ತಾನೆ :— ಬ್ರಾಹ್ಮಣ ! ನೀನು ಹೇಗೆ ಹೇಳುವೆಯೊ ಹಾಗೆ ಮಾಡುವೆನು. ಬಂಧುಗಳಿಂದ ಸಹಿತನಾದ ನನ್ನಲ್ಲಿ ದಯಾಳುವಾದ ನೀನು ಅಧಿಕಾರವನ್ನು ಹೊಂದಿರುವೆ.

೩೯. ಪ್ರಹ್ಲಾದನು ಹೇಳುತ್ತಾನೆ :— ಆ ಋಷಿವರ್ಯನು ಹಾಗೆ ತನ್ನ ರಥದಲ್ಲಿ ಬದ್ಧರಾಗಿರುವ ಕೃಷ್ಣರುಕ್ಮಿಣಿಯರನ್ನು ಮುಂದಕ್ಕೆ ಹೋಗಿರಿ ಎಂದನು.

೪೦. ರಥವನ್ನು ಎಳೆಯುತ್ತಿರುವ ಕೃಷ್ಣನನ್ನು ಕಂಡು ದೇವತೆಗಳು ಒಳ್ಳೆಯದು ಒಳ್ಳೆಯದು ಎಂದು ಪರಸ್ಪರವಾಗಿ ಮಾತಾಡಿಕೊಂಡರು.

೪೧. “ ಬ್ರಾಹ್ಮಣರನ್ನು ತನಗೆ ದೇವತೆಯೆಂದು ಭಾವಿಸಿರುವ ಕೃಷ್ಣನ ಭಕ್ತಿಯನ್ನು ನೋಡಿರಿ. ಈ ಕೃಷ್ಣನು ನೊಗವನ್ನು ಹೆಗಲ ಮೇಲೆ ಇಟ್ಟುಕೊಂಡು ಪತ್ನಿಯೊಡನೆ ರಥವನ್ನು ಎಳೆಯುತ್ತಿದ್ದಾನೆ ”.

೪೨. ಆ ಕೃಷ್ಣನು ದೇವತೆಗಳು ಹೂವನ್ನು ಎರಚುತ್ತಿರಲು ಪತ್ನಿಯೊಡನೆ ರಥವನ್ನು ಎಳೆದುಕೊಂಡು ದ್ವಾರಕೆಗೆ ಹೋದನು.

ಉಹ್ಯಮಾನೇ ರಥೇ ತಸ್ಮಿನ್ರುಕ್ಮಿಣೀ ತೃಷಿತಾಽಭವತ್ ।
ಉವಾಚ ಕೃಷ್ಣಂ ವೈದರ್ಭೀ ಶ್ರಮವ್ಯಾಕುಲಲೋಚನಾ ॥ ೪೩ ॥
ಶ್ರಾಂತಾ ಭಾರಪರಿಕ್ಲೇಷ್ವಾ ವಹತಿಃ ಕೋಪನಂ ದ್ವಿಜಂ ।
ಪಾಯಯಿತ್ವೋದಕಂ ಕಾಂತ ನಯ ಮಾಂ ಮಂದಿರಂ ಸ್ವಕಂ ॥ ೪೪ ॥
ತಚ್ಛ್ರುತ್ವಾ ವಚನಂ ತಸ್ಯಾಃ ಪಾದಾಕ್ರಾಂತ್ಯಾ ಧರಾತಲಾತ್ ।
ಆನಯಾಮಾಸ ಭಗವಾನ್ಗಂಗಾಂ ತ್ರಿಪಥಗಾಂ ಶುಭಾಂ ॥ ೪೫ ॥
ತದ್ದೃಷ್ಟ್ವಾ ನಿರ್ಮಲಂ ಶೀತಂ ಸುಗಂಧಂ ಪಾವನಂ ತಥಾ ।
ಪಪೌ ಪಿಪಾಸಿತಾ ದೇವೀ ರುಕ್ಮಿಣೀ ಜಾಹ್ನವೀಜಲಂ ॥ ೪೬ ॥
ಪೀತಂ ತಯಾ ಜಲಂ ದೃಷ್ಟ್ವಾ ಚುಕೋಪ ಋಷಿಸತ್ತಮಃ ।
ಜಜ್ವಾಲ ಜ್ವಲನಪ್ರಖ್ಯಃ ಶಶಾಪ ಪರಮೇಶ್ವರೀಂ ॥ ೪೭ ॥
ದುರ್ವಾಸಾ ಉವಾಚ :—
ಮಾಮಪೃಷ್ಟ್ವಾ ಜಲಂ ಯಸ್ಮಾತ್ಪೀತವತ್ಯಸಿ ರುಕ್ಮಿಣಿ ।
ತಸ್ಮಾತ್ಪಾನರತಾ ನಿತ್ಯಂ ಭವಿಷ್ಯಸಿ ನ ಸಂಶಯಃ ॥ ೪೮ ॥
ಅವಿಯುಕ್ತಾ ರಥಾದ್ಯಸ್ಮಾನ್ಮಾಮಪೃಷ್ಟ್ವಾ ಜಲಂ ತ್ವಯಾ ।
ಪೀತಂ ತಸ್ಮಾಚ್ಚ ಕೃಷ್ಣೇನ ವಿಯುಕ್ತಾ ತ್ವಂ ಭವಿಷ್ಯಸಿ ॥ ೪೯ ॥

---

೪೩. ಆ ಕೃಷ್ಣನು ರಥವನ್ನು ಎಳೆಯುತ್ತಿರಲು ರುಕ್ಮಿಣಿಯು ಬಾಯಾರಿಕೆಗೊಂಡು ಆಯಾಸದಿಂದ ವ್ಯಾಕುಲಗೊಂಡ ಕಣ್ಣುಗಳುಳ್ಳವಳಾಗಿ ಪತಿಯನ್ನು ಕುರಿತು ಇಂತೆಂದಳು.

೪೪. "ಪತಿಯೆ ! ಕೋಪಿಷ್ಠನಾದ ಈ ಬ್ರಾಹ್ಮಣನನ್ನು ಎಳೆಯುತ್ತಿರುವ ನಾನು ಆಯಾಸಗೊಂಡಿರುವೆನು. ನನಗೆ ನೀರನ್ನು ಕೊಟ್ಟು ಮನೆಗೆ ಕರೆದುಕೊಂಡು ಹೋಗು."

೪೫. ಕೃಷ್ಣನು ಆ ರುಕ್ಮಿಣಿಯ ಮಾತನ್ನು ಕೇಳಿ ಪಾದವನ್ನು ಒತ್ತಿ ಭೂಮಿಯಿಂದ ಗಂಗೆಯನ್ನು ಬರುವಂತೆ ಮಾಡಿದನು.

೪೬. ಬಾಯಾರಿಕೆಗೊಂಡ ರುಕ್ಮಿಣಿಯು ನಿರ್ಮಲವೂ, ತಣ್ಣಗೂ, ಸುಗಂಧವೂ, ಪವಿತ್ರವೂ ಆದ ಗಂಗೆಯ ನೀರನ್ನು ನೋಡಿ ಕುಡಿದಳು.

೪೭. ಅವಳು ನೀರನ್ನು ಕುಡಿದುದನ್ನು ನೋಡಿ ಆ ಮುನಿಯು ಬೆಂಕಿಯಂತೆ ಕೋಪದಿಂದ ಜ್ವಲಿಸಿ ರುಕ್ಮಿಣಿಯನ್ನು ಶಪಿಸಿದನು.

೪೮. ದುರ್ವಾಸನು ಹೇಳುತ್ತಾನೆ :—ರುಕ್ಮಿಣಿ ! ನೀನು ನನ್ನನ್ನು ಕೇಳದೆ ನೀರನ್ನು ಕುಡಿದುದರಿಂದ ಯಾವಾಗಲೂ ಕುಡಿಯುವುದರಲ್ಲಿ ಆಸಕ್ತಳಾಗುವೆ.

೪೯. ನೀನು ರಥದಿಂದ ಬಿಡಿಸಿಕೊಳ್ಳದೆಯೂ ನನ್ನನ್ನು ಕೇಳದೆಯೂ ನೀರನ್ನು ದಂಕುಡಿದುದರಿಂದ ಕೃಷ್ಣನ ವಿಯೋಗಗೊಳ್ಳುವೆ.

ಪ್ರಹ್ಲಾದ ಉವಾಚ :—

ಏತಾವದುಕ್ತ್ವಾ ವಚನಂ ಕ್ರೋಧಸಂರಕ್ತಲೋಚನಃ ।
ಪರಿತ್ಯಜ್ಯ ರಥಂ ವಿಪ್ರೋ ಭೂಮಾವೇವಾವತಿಷ್ಠತಿ ॥ ೫೦ ॥
ಏವಂ ಶಪ್ತಾ ತದಾ ದೇವೀ ರುರೋದಾತೀವ ವಿಹ್ವಲಾ ।
ಉವಾಚ ಕೃಷ್ಣಂ ಕರುಣಂ ಕಥಂ ಸ್ಥಾಸ್ಯೇ ತ್ವಯಾ ವಿನಾ ॥ ೫೧ ॥

ಶ್ರೀಕೃಷ್ಣಉವಾಚ :—

ಆಯಾಸ್ಯೇ ಪ್ರತ್ಯಹಂ ದೇವಿ ದ್ವಿಕಾಲಂ ಭವನಂ ತವ ।
ಯೋ ಮಾಂ ಪಶ್ಯತಿ ಚಾತ್ರಸ್ಥಂ ಸ ತ್ವಾಮೇವ ಪ್ರಪಶ್ಯತಿ ॥ ೫೨ ॥
ಮಾಂ ಹಿ ದೃಷ್ಟ್ವಾ ನರೋ ಯಸ್ತು ತ್ವಾಂ ನ ಪಶ್ಯತಿ ಭಕ್ತಿತಃ ।
ಅರ್ಧಂ ಯಾತ್ರಾ ಫಲಂ ತಸ್ಯ ಭವಿಷ್ಯತಿ ನ ಸಂಶಯಃ ॥ ೫೩ ॥
ಆಶ್ವಾಸ್ಯ ಚ ಪ್ರಿಯಾಮೇವಂ ಬ್ರಾಹ್ಮಣಂ ಯದುಸಂಪನಃ ।
ತತಃ ಪ್ರಸಾದಯಾಮಾಸ ದುರ್ವಾಸಸಮಕಲ್ಮಷಂ ॥ ೫೪ ॥
ಬಾಹ್ಯೋಪವನಮಧ್ಯೇ ತು ಪೂಜಯಾಮಾಸ ತಂ ತಥಾ ।
ಅವನಿಜ್ಯ ಸ್ವಯಂ ಪಾದಾ ವಿಪ್ರಪಾದಾವನೇಜನಂ ।
ಧಾರಯಾಮಾಸ ಶಿರಸಾ ಜಗತಃ ಪಾವನೋ ಹರಿಃ ॥ ೫೫ ॥

---

೫೦. ಪ್ರಹ್ಲಾದನು ಹೇಳುತ್ತಾನೆ :—ಆ ದುರ್ವಾಸನು ಹೀಗೆ ಹೇಳಿ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ರಥವನ್ನು ತ್ಯಜಿಸಿ ನೆಲದ ಮೇಲೆ ಕೂತನು.

೫೧. ಅವನು ಹೀಗೆ ಶಪಿಸಲು ದೇವಿಯು ಅತ್ಯಂತ ವ್ಯಥೆಯಿಂದ ಗೋಳಾಡಿ ಕೃಷ್ಣನನ್ನು ಕುರಿತು, “ನಿನ್ನನ್ನಗಲಿ ನಾನು ಹೇಗಿರುವೆನು” ಎಂದು ದೈನ್ಯದಿಂದ ಹೇಳಿದಳು.

೫೨. ಶ್ರೀಕೃಷ್ಣನು ಹೇಳುತ್ತಾನೆ :—ದೇವಿ ! ಎರಡು ಹೊತ್ತೂ ನಾನು ನಿನ್ನ ಮನೆಗೆ ಬರುವೆನು. ಇಲ್ಲಿರುವ ನನ್ನನ್ನು ನೋಡಿದವನು ನಿನ್ನನ್ನೇ ನೋಡುವೆನು.

೫೩. ನನ್ನನ್ನು ನೋಡಿ ನಿನ್ನನ್ನು ದರ್ಶನಮಾಡದ ಮಾನವನಿಗೆ ಅರ್ಧ ಯಾತ್ರಾ ಫಲವು ಉಂಟಾಗುವುದು.

೫೪. ಕೃಷ್ಣನು ಹೀಗೆ ರುಕ್ಮಿಣಿಯನ್ನು ಸಮಾಧಾನಗೊಳಿಸಿ ಬಳಿಕ ದೋಷರಹಿತನಾದ ದುರ್ವಾಸನನ್ನು ಸಮಾಧಾನ ಮಾಡಿದನು.

೫೫. ಜಗತ್ಪಾವನನಾದ ಕೃಷ್ಣನು ಹೊರಗಿನ ಉದ್ಯಾನವಲ್ಲಿ ಆ ದುರ್ವಾಸನನ್ನು ಪೂಜಿಸಿ ಅವನ ಕಾಲುಗಳನ್ನು ತಾನೇ ತೊಳೆದು ಆ ಜಲವನ್ನು ತಲೆಯಲ್ಲಿ ಧರಿಸಿದನು.

**ದತ್ವಾರ್ಘ್ಯಂ ಗಾಂ ಚ ವಿಪ್ರಾಯ ಮಧುಪರ್ಕಂ ಸ ಭಕ್ತಿತಃ |**
**ವಿಧಿವದ್ಭೋಜಯಾಮಾಸ ಷಡ್ರಸೇನ ದ್ವಿಜೋತ್ತಮಂ || ೫೬ ||**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾ ಮಾಹಾತ್ಮ್ಯೇ
ದುರ್ವಾಸದತ್ತ ರುಕ್ಮಿಣೀಶಾಪವೃತ್ತಾಂತವರ್ಣನಂ ನಾಮ
ದ್ವಿತೀಯೋಽಧ್ಯಾಯಃ.

---

೫೬. ಆ ಬ್ರಾಹ್ಮಣನಿಗೆ ಅರ್ಘ್ಯವನ್ನಿತ್ತು ಭಕ್ತಿಯಿಂದ ಗೋವನ್ನೂ, ಮಧುಪರ್ಕವನ್ನೂ ಕೊಟ್ಟು ವಿಧಿಯಂತೆ ಷಡ್ರಸದ ಅನ್ನವನ್ನು ಭೋಜನ ಮಾಡಿಸಿದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದುರ್ವಾಸ ರುಕ್ಮಿಣೀಶಾಪವೃತ್ತಾಂತವರ್ಣನವೆಂಬ
ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತೃತೀಯೋಽಧ್ಯಾಯಃ

## ರುಕ್ಮಿಣೀದುಃಖಮೋಚನವರ್ಣನಂ

ಋಷಯ ಊಚುಃ :—

ಅಹೋ ಬ್ರಹ್ಮಣ್ಯದೇವಸ್ಯ ಕೃಷ್ಣಸ್ಯಾಮಿತತೇಜಸಃ ।
ಮಹಿಮಾ ಯದಯಂ ನೈವ ಮೃಷಾ ಚಕ್ರೇ ಮುನೇರ್ವಚಃ ॥ ೧ ॥
ತೇನ ಚಕ್ರೇ ನ ರೋಷಂ ಸ ಸೇತುಪಾಲೋ ಜನಾರ್ದನಃ ।
ಭೃಗೋರ್ಯಶ್ಚರಣಾಘಾತಂ ದಧಾರ ಹೃದಿ ಲಾಂಛನಂ ॥ ೨ ॥
ಸಾ ತು ದೇವೀ ಕಥಂ ತೇನ ಪ್ರೇಯಸಾ ವಿಪ್ರಯೋಜಿತಾ ।
ಏಕಾಕಿನೀ ಸ್ಥಿತಾ ತತ್ರ ಕಥ್ಯತಾಮಸುರೇಶ್ವರ ॥ ೩ ॥
ಉತ್ಕಂಠಿತಾ ಅತಿ ವಯಂ ಶ್ರೋತುಂ ದ್ವಾರವತೀಂ ಮುದಾ ।
ಇದಮಾದೌ ಬುಭುತ್ಸಾಮಶ್ಚಿತ್ತಖೇದಾಪನುತ್ತಯೇ ॥ ೪ ॥

---

### ಕನ್ನಡದ ಅನುವಾದ

#### ರುಕ್ಮಿಣೀದುಃಖಮೋಚನವರ್ಣನ

೧. ಋಷಿಗಳು ಹೇಳುತ್ತಾರೆ :—ಬ್ರಾಹ್ಮಣರನ್ನು ದೇವತೆಯೆಂದು ತಿಳಿದಿರುವ ಅತಿಶಯ ತೇಜಸ್ಸುಳ್ಳ ಕೃಷ್ಣನ ಮಹಿಮೆಯು ಆಶ್ಚರ್ಯಕರವಾದುದು. ಅವನು ಮುನಿಯ ಮಾತನ್ನು ಸುಳ್ಳುಮಾಡಲಿಲ್ಲ.

೨. ಲೋಕ ಮರ್ಯಾದೆಯನ್ನು ಕಾಪಾಡುವ ಕೃಷ್ಣನು ಕುಪಿತನೂ ಆಗಲಿಲ್ಲ. ಅವನು ಭೃಗುವಿನ ಪಾದ ತಾಡನೆಯನ್ನು ಎದೆಯಲ್ಲಿ ಚಿಹ್ನೆಯಾಗಿ ಧರಿಸಿದನು.

೩. ದೈತ್ಯರಾಜ ! ಆ ರುಕ್ಮಿಣೀದೇವಿಯು ಪ್ರಿಯನಾದ ಕೃಷ್ಣನಿಂದ ವಿರಹ ಗೊಂಡು ಹೇಗೆ ಇದ್ದಳು ? ಇದನ್ನು ಹೇಳು.

೪. ನಾವು ದ್ವಾರವತಿಯ ವಿಷಯವನ್ನರಿಯಲು ಅತ್ಯಂತ ಉತ್ಸುಕರಾಗಿದ್ದೇವೆ. ಮನಸ್ಸಿನ ವ್ಯಥೆಯನ್ನು ಪರಿಹರಿಸಿಕೊಳ್ಳಲು ಇದನ್ನು ಮೊದಲು ತಿಳಿಯಲು ಬಯಸುವೆವು.

ಪ್ರಹ್ಲಾದ ಉವಾಚ :—
ಶ್ರೂಯತಾಮೃಷಯಃ ಸರ್ವೇ ಗದತೋ ಮಮ ವಿಸ್ತರಾತ್ ।
ಯಥಾ ಶಾಪೋದ್ಭವಂ ದುಃಖಂ ಮುಮೋಚ ಹರಿವಲ್ಲಭಾ ॥ ೫ ॥
ಅಥ ದುರ್ವಾಸಸಃ ಶಾಪಮವಾಪ್ಯಾರುಂತುದಂ ತದಾ ।
ಯಾದವೇಂದ್ರಸ್ಯ ಗೃಹಿಣೀ ಸಹಸಾ ಪರ್ಯದೇವಯತ್ ॥ ೬ ॥
ರುಕ್ಮಿಣ್ಯುವಾಚ :—
ಕಲ್ಯಾಣೀ ಬತ ವಾಣೀಯಂ ಲೌಕಿಕೀ ಸಂವಿಭಾವ್ಯತೇ ।
ಕೂಪಕೇ ಚೈವ ಸಿಂಧೌ ಚ ಪ್ರಮಾಣಾನ್ನಾಧಿಕಂ ಜಲಂ ॥ ೭ ॥
ಯದಾ ಸಾಽಹಂ ಭೂರಿಭಾಗ್ಯಾ ವೈ ಪ್ರಾಪ್ಯ ನಾಥಂ ಜಗತ್ಪತಿಂ ।
ಇಯಮೇಕಾಕಿನೀ ಜಾತಾ ಪೌಲಸ್ತ್ಯಾದ್ದೇವಹೇಲನಾತ್ ॥ ೮ ॥
ಕ್ವ ಮಂಗಲಾಲಯಃ ಶ್ರೀಮಾನನವದ್ಯಗುಣೋ ಹರಿಃ ।
ಅಲ್ಪಪುಣ್ಯಾ ಸುಸಂಬಾಧಾ ಕಾಮಿನೀ ಕ್ವಾತಿಚಂಚಲಾ ॥ ೯ ॥
ತಥಾಪಿ ಘಟಯಾಮಾಸ ಧಾತಾ ವಂಚನಕೋವಿದಃ ।
ವಿಧಾನಮಶುಭಾ ಯಾ ಮೇ ವಿಯೋಗವಿಷಮವ್ಯಥಂ ॥ ೧೦ ॥

---

೫. ಪ್ರಹ್ಲಾದನು ಹೇಳುತ್ತಾನೆ :—ಋಷಿಗಳೆ ! ಹರಿಪ್ರಿಯಳಾದ ರುಕ್ಮಿಣಿಯು ಶಾಪದಿಂದ ಉಂಟಾದ ದುಃಖವನ್ನು ಹೇಗೆ ನೀಗಿಸಿಕೊಂಡಳೆಂಬುದನ್ನು ನಾನು ವಿಸ್ತಾರವಾಗಿ ಹೇಳುವೆನು ಕೇಳಿರಿ.

೬. ಶ್ರೀಕೃಷ್ಣನ ಸತಿಯಾದ ರುಕ್ಮಿಣಿಯು ದುರ್ವಾಸನಿಂದ ಮರ್ಮವನ್ನು ಭೇದಿಸುವ ಶಾಪವನ್ನು ಹೊಂದಿ ಕೂಡಲೆ ಗೋಳಾಡಿದಳು.

೭. ರುಕ್ಮಿಣಿಯು ಹೇಳುತ್ತಾಳೆ :—ಬಾವಿಯಲ್ಲಾಗಲಿ, ಸಮುದ್ರದಲ್ಲಾಗಲಿ, ಪ್ರಮಾಣಕ್ಕಿಂತ ಅಧಿಕ ಜಲವು ಸಿಕ್ಕುವುದಿಲ್ಲ ಎಂಬ ಲೋಕದ ಮಾತು ಚೆನ್ನಾಗಿದೆ ಯೆಂದು ತಿಳಿಯುತ್ತೇನೆ.

೮. ಜಗದೊಡೆಯನಾದ ಶ್ರೀ ಕೃಷ್ಣನನ್ನು ಪತಿಯನ್ನಾಗಿ ಪಡೆದು ಅತಿಶಯ ಭಾಗ್ಯಶಾಲಿನಿಯಾದ ನಾನು ಈ ಪುಲಸ್ತ್ಯನ ದೇವನಿಂದೆಯಿಂದ ಒಬ್ಬಂಟಿಗಳಾದೆನು.

೯. ಮಂಗಳಕ್ಕೆ ಆಶ್ರಯನೂ, ನಿರ್ದುಷ್ಟ ಗುಣಗಳುಳ್ಳವನೂ ಆದ ಹರಿಯೆಲ್ಲಿ ? ಸ್ವಲ್ಪ ಪುಣ್ಯವುಳ್ಳವಳೂ, ಅತ್ಯಂತ ಕಷ್ಟವುಳ್ಳವಳೂ, ಅತಿ ಚಂಚಲಳೂ ಆದ ನಾನೆಲ್ಲಿ ?

೧೦. ಆದರೂ ವಂಚನೆಯಲ್ಲಿ ನಿಪುಣನಾದ ಬ್ರಹ್ಮನು ನಮ್ಮಿರ್ವರನ್ನು ಸೇರಿಸಿದ್ದಾನೆ. ಅಮಂಗಳ ಪ್ರಾಯಳಾದ ನನಗೆ ಈ ವಿರಹವೆಂಬ ವಿಷವು ವ್ಯಥೆಯಿಲ್ಲದ್ದು.

ಅನ್ಯಥಾ ವರ್ಣಗುರವಃ ಸ್ನಾತಾಸ್ತ್ರೈವಿದ್ಯವರ್ತ್ಮನಿ ।
ಕಥಂ ನು ಶಪ್ತುಮರ್ಹಂತಿ ಸ್ವಯಂ ಖಿನ್ನಾಮನಾಗಸಂ ॥ ೧೧ ॥
ವಿದಧೇ ವಜ್ರಮಯಂ ತು ಕಿಂನ್ವಿದಂ
ಹೃದಯಂ ಮೇಽತಿಕಠೋರಮೇವ ಹಿ ।
ಶತಧಾ ನ ವಿದೀರ್ಯತೇ ಯತಃ ।
ವಿರಹೇ ದುರ್ವಿಷಹೇ ಮಧುದ್ವಿಷಃ ॥ ೧೨ ॥
ಅಧಿಕೃತ್ಯ ಸುದುಶ್ಚರಂ ತಪಃ
ಪ್ರತಿಲಬ್ಧಃ ಪ್ರಥಮಂ ಮಯಾತ್ಮಜಃ ।
ತನಯೇನ ವಿನಾಕೃತಾಽಪ್ಯಹಂ
ನ ಮೃತಾ ಪಂಚಸು ವಾಸರೇಷ್ವಿಹ ॥ ೧೩ ॥
ಉಪಲಭ್ಯ ಸುದಾರುಣಾಮಿಮಾ
ಮಪಿ ಪೀಡಾಮವಿತಾಸ್ಮ್ಯಹಂ ತದಾ ।
ಯದಿದಂ ವಿಧುನೋತಿ ಕಲ್ಮಷಂ
ಖಲು ತನ್ಮಾಂ ಸಮುಪೇತ್ಯ ಲಕ್ಷವೃದ್ಧಿಂ ॥ ೧೪ ॥
ಇತಿ ಸಾಽತಿವಿಲಪ್ಯ ದುಃಖಿತಾರ್ತಾ
ಕುರರೀತುಲ್ಯತಯಾ ಶುಶೋಚ ವೇಗಾತ್ ।
ವಿರಹೇಣ ವಿಘೂರ್ಣಿತಾಶಯಾ
ದ್ವಿಜಶಾಪಾಪಹತಾ ಮುಮೂರ್ಛ ಸದ್ಯಃ ॥ ೧೫ ॥

---

೧೧. ಹಾಗಲ್ಲದ ಪಕ್ಷದಲ್ಲಿ ವೇದಮಾರ್ಗ ನಿಷ್ಣಾತರಾದ ಬ್ರಾಹ್ಮಣರು ತಾನಾಗಿಯೇ ವ್ಯಥೆಗೊಂಡ ತಪ್ಪಿಲ್ಲದ ನನ್ನನ್ನು ಹೇಗೆ ಶಪಿಸುತ್ತಾರೆ

೧೨. ಶ್ರೀಕೃಷ್ಣನ ಸಹಿಸಲಾಗದ ವಿರಹದಲ್ಲಿ ನನ್ನ ಹೃದಯವು ಅನೇಕ ಪ್ರಕಾರವಾಗಿ ಒಡೆಯದಿರುವುದರಿಂದ ಅತಿ ಕಠೋರವಾದ ಈ ಹೃದಯವು ವಜ್ರದಂತಾಗಿದೆಯೊ ಏನೋ !

೧೩. ಮಾಡಲಾಗದ ಕಠಿನ ತಪಸ್ಸನ್ನು ಮಾಡಿ ನಾನು ಮಗನನ್ನು ಪಡೆದಿರುವೆನು. ಅಂತಹ ಮಗನಿಂದ ಅಗಲಿದ್ದರೂ ನಾನು ಐದು ದಿನಗಳಲ್ಲಿ ಮೃತಳಾಗಲಿಲ್ಲ.

೧೪. ಈ ಅತಿ ದಾರುಣವಾದ ಪೀಡೆಯನ್ನು ಹೊಂದಿದ್ದರೂ ನಾನು ಬದುಕಿದ್ದೇನೆ. ಈ ಮಹಾಪಾಪವು ನನ್ನ ಆ ಪತಿವಿಯೋಗ ಪೀಡೆಯನ್ನು ಲಕ್ಷ ಸಂಖ್ಯೆಯಷ್ಟು ಹೆಚ್ಚುಮಾಡಿರುವುದು.

೧೫. ಬ್ರಾಹ್ಮಣಶಾಪವನ್ನು ಹೊಂದಿ ವಿರಹದಿಂದ ಭ್ರಮೆಗೊಂಡ ಆ ರುಕ್ಮಿಣಿಯು ಅಧಿಕವಾಗಿ ಗೋಳಾಡಿ ಕೂಡಲೆ ಮೂರ್ಛೆಗೊಂಡಳು.

ಅಥ ದುರ್ವಾಸಸಾ ಶಪ್ತಾ ರುಕ್ಮಿಣೀ ಕೃಷ್ಣವಲ್ಲಭಾ ।
ಮೂರ್ಛ್ಛನಾಮಾಪ ತತ್ರೈವ ಹ್ಯಾಜಗಾಮ ಪಯೋನಿಧಿಃ ॥ ೧೬ ॥
ಸುಧಾಶೀಕರಗರ್ಭೇಣ ಪದ್ಮಕಿಂಜಲ್ಕವಾಯುನಾ ।
ವ್ಯವೀಜಯದಿಮಾಂ ದೇವೀಂ ರುಕ್ಮಿಣೀಂ ಕೃಷ್ಣವಲ್ಲಭಾಂ ॥ ೧೭ ॥
ಏತಸ್ಮಿನ್ನಂತರೇ ತತ್ರ ವ್ಯೋಮಮಾರ್ಗೇಣ ನಾರದಃ ।
ಗಾಯನ್ಗುಣಾನ್ಭಗವತೋ ವೀಣಾಪಾಣಿಃ ಸಮಾಗತಃ ॥ ೧೮ ॥
ಸ ದೃಷ್ಟ್ವಾ ಸಿಂಧುನಾಶ್ವಾಸ್ಯಮಾನಾಂ ವಿಶ್ವಸ್ಯ ಮಾತರಂ ।
ಅವತೀರ್ಯ ಶ್ರುತಕಥೋ ಬೋಧಯಾಮಾಸ ನಾರದಃ ॥ ೧೯ ॥

ನಾರದ ಉವಾಚ :—

ಮಾ ಖೇದಂ ದೇವದೇವೇಶಿ ದೇವಿ ತ್ವಮಧಿಪೇ ಪತೌ ।
ದೂರೀಕೃತೇ ವಿಪ್ರಶಾಪಾತ್ಕುರು ಕಲ್ಯಾಣಿ ಧೀರತಾಂ ॥ ೨೦ ॥
ತ್ವಂ ಹಿ ಸಾಕ್ಷಾದ್ಭಗವತೀ ಕೃಷ್ಣಶ್ಚ ಪುರುಷೋತ್ತಮಃ ।
ಅವತೀರ್ಣೋ ಧರಾಭಾರಮಪನೇತುಂ ಯದೃಚ್ಛಯಾ ॥ ೨೧ ॥

---

೧೬. ಬಳಿಕ ದುರ್ವಾಸನಿಂದ ಶಾಪಗೊಂಡ ಕೃಷ್ಣನ ಸತಿಯಾದ ರುಕ್ಮಿಣಿಯು ಮೂರ್ಛೆಗೊಳ್ಳಲು ಅಲ್ಲಿಗೆ ಸಮುದ್ರವು ಬಂದಿತು.

೧೭. ಆ ಸಾಗರನು ಅಮೃತದ ಹನಿಗಳಿಂದ ಕೂಡಿರುವ ತಾವರೆಯ ಕೇಸರದ ಗಾಳಿಯಿಂದ ಕೃಷ್ಣ ಪ್ರಿಯೆಯಾದ ರುಕ್ಮಿಣೀ ದೇವಿಯನ್ನು ಬೀಸಿದನು.

೧೮. ಇಷ್ಟರಲ್ಲಿ ಅಲ್ಲಿಗೆ ನಾರದ ಮುನಿಯು ಭಗವಂತನ ಗುಣಗಳನ್ನು ಹಾಡುತ್ತ ವೀಣಾಪಾಣಿಯಾಗಿ ಆಕಾಶ ಮಾರ್ಗದಿಂದ ಬಂದನು.

೧೯. ಆ ನಾರದನು ಸಮುದ್ರನಿಂದ ಸಮಾಧಾನಗೊಳಿಸಲ್ಪಡುತ್ತಿರುವ ಜಗನ್ಮಾತೆಯಾದ ರುಕ್ಮಿಣಿಯನ್ನು ಕಂಡು ಕೆಳಗಿಳಿದು ನಡೆದ ಸಮಾಚಾರವನ್ನು ಕೇಳಿದವನಾಗಿ ಎಚ್ಚರಿಸಿದನು.

೨೦. ನಾರದನು ಹೇಳುತ್ತಾನೆ :—ದೇವಿ ! ಬ್ರಾಹ್ಮಣ ಶಾಪದಿಂದ ಪತಿಯನ್ನಗಲಿದ ನೀಲು ವ್ಯಥೆಪಡಬೇಡ. ಧೈರ್ಯಗೊಳ್ಳು.

೨೧. ನೀನು ಸಾಕ್ಷಾತ್ ಜಗನ್ಮಾತೆಯು. ಭೂಭಾರವನ್ನು ಪರಿಹರಿಸಲು ಸ್ವೇಚ್ಛೆಯಿಂದ ಅವತಾರ ಮಾಡಿದ ಕೃಷ್ಣನು ಪುರುಷೋತ್ತಮನು.

ದೇವೋ ಹ್ಯಸೌ ಪರಂ ಬ್ರಹ್ಮ ಸದಾऽನಿರ್ವಿಣ್ಣಮಾನಸಃ
ಮಾಯಾಶಕ್ತಿಸ್ತ್ವಮೇತಸ್ಯ ಸರ್ಗಸ್ಥಿತ್ಯಂತಕಾರಿಣಃ ॥ ೨೨ ॥
ಸಂಹೃತ್ಯ ನಿಖಿಲಂ ಶೇತೇ ಯಯಾऽಸೌ ಕಲಯಾ ಸ್ವರಾಟ್
ತದಾಪಿ ನ ವಿಯುಜ್ಯೇತ ತ್ವಯಾ ವಿಶ್ವಪತಿಃ ಪ್ರಭುಃ ॥ ೨೩ ॥
ಅವಿಯುಕ್ತಸ್ತ್ವಯಾ ನಿತ್ಯಂ ದೇವದೇವೋ ಜಗತ್ಪತಿಃ ।
ಲೀಲಾವತಾರೇಷ್ವೇತಸ್ಯ ಸರ್ವೇಷು ತ್ವಂ ಸಹಾಯಿನೀ ॥ ೨೪ ॥
ಯೋಗಂ ವಿಯೋಗಂ ಚ ತಥಾ ಸ ಯಾತ್ಯೇಷ ತ್ವಯಾऽನಘೇ ।
ವಿಡಂಬಯತಿ ಭೂತಾನಾಮುಪಕಾರಾಯ ಚೇಶ್ವರಃ ॥ ೨೫ ॥
ಆರಾಧನೀಯಾಃ ಸತತಂ ಭೂದೇವಾ ಭೂತಿಮೀಪ್ಸತಾ ।
ಪ್ರಕೋಪನೀಯಾ ನೈವೇತೇ ತತ್ವಜ್ಞಾ ಹಿ ತಪಸ್ವಿನಃ ॥ ೨೬ ॥
ಇತ್ಯೇವಂ ಶಿಕ್ಷಯಂಲ್ಲೋಕಂ ವಿಯೋಗಂ ತೇऽನುಮನ್ಯತೇ ।
ಮುನಿಶಾಪಾದ್ಧರಿಃ ಸಾಕ್ಷಾದ್ಗೂಢಃ ಕಪಟಮಾನುಷಃ ॥ ೨೭ ॥

---

೨೨. ಯಾವಾಗಲೂ ವ್ಯಥೆಯಿಲ್ಲದ ಮನಸ್ಸುಳ್ಳ ಈ ಕೃಷ್ಣನು ಪರಬ್ರಹ್ಮನು, ನೀನು ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ ಈ ಕೃಷ್ಣನ ಮಾಯಾಶಕ್ತಿಯು

೨೩. ಸ್ವಪ್ರಕಾಶನಾದ ಈ ಕೃಷ್ಣನು ನಿಖಿಲಜಗತ್ತನ್ನು ಯಾವ ಕಲೆಯಿಂದ ಸಂಹರಿಸಿ ಮಲಗುವನೊ, ಆಗಲೂ ನಿನ್ನಿಂದ ಅಗಲುವುದಿಲ್ಲ.

೨೪. ಜಗದೊಡೆಯನಾದ ಶ್ರೀಕೃಷ್ಣನು ನಿತ್ಯವೂ ನಿನ್ನೊಡನೆ ಇರುವನು ಇವನ ಸಮಸ್ತ ಲೀಲಾವತಾರಗಳಲ್ಲಿ ನೀನು ಸಹಾಯಕಳು.

೩೫. ನಿರ್ದುಷ್ಟಳೆ ! ಈ ಕೃಷ್ಣನು ನಿನ್ನೊಡನೆ ಸಂಬಂಧವನ್ನೂ, ವಿಯೋಗವನ್ನೂ ಹೊಂದುವುದಿಲ್ಲ. ಇವನು ಪ್ರಾಣಿಗಳ ಉಪಕಾರಕ್ಕಾಗಿ ಹಾಗೆ ವಿಡಂಬನ ಮಾಡುತ್ತಾನೆ.

೨೬. ಏಳಿಗೆಯನ್ನು ಬಯಸುವ ಮನುಷ್ಯನು ಯಾವಾಗಲೂ ಬ್ರಾಹ್ಮಣರನ್ನು ಪೂಜಿಸಬೇಕು. ಇವರನ್ನು ಕೋಪಗೊಳಿಸಬಾರದು. ಈ ತಪಸ್ವಿಗಳು ತತ್ವಜ್ಞಾನಿಗಳಷ್ಟೆ.

೨೭. ಹೀಗೆ ಕೃಷ್ಣನು ಜನರಿಗೆ ಬೋಧಿಸುತ್ತ ನಿನ್ನ ವಿಯೋಗವನ್ನು ಅನುಮೋದಿಸುತ್ತಾನೆ. ಕಪಟ ಮಾನುಷರೂಪನಾದ ಹರಿಯು ಮುನಿಶಾಪದಿಂದ ಗುಪ್ತನಾಗಿರುವನು

ಅಪಿ ಸ್ಮರಸಿ ಕಲ್ಯಾಣಿ ಜಾತೋ ರಘುಕುಲೇ ಸ್ವಯಂ ।
ಲೋಕಾನುಗ್ರಹಮುನ್ನಿರ್ಘ್ನ ಭೂಭಾರಹರಣೋತ್ಸುಕಃ ॥ ೨೮ ॥
ತಂ ಹರಿಂ ಜಗತಾಮೀಶಂ ರುಕ್ಮಿಣಿ ತ್ವಂ ನ ವೇತ್ಸಿ ಕಿಂ ।
ಪ್ರಾಣೇಭ್ಯೋಽಪಿ ಗರೀಯಾ ಸಮಯಂ ದೇವಃ ಸ ಏವ ಹಿ ॥ ೨೯ ॥
ಯೇನೇದಂ ಪೂರಿತಂ ವಿಶ್ವಂ ಬಹಿರಂತಶ್ಚ ಸುವ್ರತೇ ।
ಅಸಂಗಸ್ಯ ವಿಭೋಸ್ಸಂಗಃ ಕಥಂ ಸ್ಯಾದಿತಿ ಮನ್ಮತಿಃ ॥ ೩೦ ॥
ತಯಾ ತ್ವಯಾ ನಿಯುಕ್ತೋಽಸಾವಿತಿ ಪ್ರತ್ಯೇಮಿ ಸರ್ವಶಃ ।
ತನ್ನಿಮುಂಚಾಽಽಧಿಮುತ್ಯರ್ಥಮಾತ್ಮಾನಮನುಸಂಸ್ಮರ ।
ಪ್ರಸೀದ ಮಾತಃ ಸಂಧೇಹಿ ಧೀರತಾಂ ಸ್ವಮನೀಷಯಾ ॥ ೩೧ ॥
ಇತಿ ಬ್ರುವತಿ ದೇವರ್ಷಾವವಸಾನೇ ನದೀಪತಿಃ ।
ಪ್ರೋವಾಚ ವಚನಂ ತಸ್ಯೈ ವಾಚಾ ಮೃದುಸುವರ್ಣಯಾ ॥ ೩೨ ॥

ಸಮುದ್ರ ಉವಾಚ :—

ಯದಾಹ ದೇವಿ ದೇವರ್ಷಿರ್ನತ್ವಾ ತ್ವಾಂ ಸತ್ಯಮೇವ ತತ್ ।
ಗೀಯಸೇ ತ್ವಂ ಹಿ ವೇದೇಷು ನಿತ್ಯಂ ವಿಷ್ಣೋಃಸಹಾಯಿನೀ ॥ ೩೩ ॥

---

೨೮. ಮಂಗಳಕರಳಾದ ರುಕ್ಮಿಣಿಯೆ! ನೀನು ಜನರಿಗೆ ಅನುಗ್ರಹ ಮಾಡಲೋಸುಗ ಭೂಭಾರಹರಣೋದ್ಯುಕ್ತನೂ, ರಘುವಂಶದಲ್ಲಿ ಹುಟ್ಟಿದವನೂ ಆದ ಶ್ರೀರಾಮನನ್ನು ಸ್ಮರಿಸುವೆಯಾ ?

೨೯. ಜಗದೊಡೆಯನೂ, ಪ್ರಾಣಿಗಳಿಗಿಂತ ಉತ್ತಮನೂ ಆದ ಆ ವಿಷ್ಣುವನ್ನು ನೀನು ತಿಳಿಯುವುದಿಲ್ಲವೆ. ಇವನು ಅವನೇ.

೩೦. ಯಾವನಿಂದ ಈ ಜಗತ್ತು ಒಳಗೂ, ಹೊರಗೂ ತುಂಬಿರುವುದೊ ಆ ಅಂಗರಹಿತನಾದ ವಿಷ್ಣುವಿಗೆ ಹೇಗೆ ಸಂಗಮವು ಸಂಭವಿಸುವುದು, ಎಂದು ನಾನು ಆಲೋಚಿಸುವೆನು.

೩೧. ತಾಯಿ! ಈ ಹರಿಯು ಆ ನಿನ್ನಿಂದ ಎಲ್ಲ ಕಾರ್ಯಗಳಲ್ಲಿಯೂ ನಿಯಮಿತನಾಗುವನೆಂದು ನಾನು ತಿಳಿಯುತ್ತೇನೆ. ಆದ್ದರಿಂದ ನೀನು ಮನಸ್ಸಿನ ವ್ಯಥೆಯನ್ನು ತ್ಯಜಿಸು. ನಿನ್ನ ಸ್ಥಿತಿಯನ್ನು ಸ್ಮರಿಸು. ಪ್ರಸನ್ನಳಾಗು. ಧೈರ್ಯವನ್ನು ತಾಳು.

೩೨. ನಾರದಮುನಿಯು ಹೀಗೆ ನುಡಿಯಲು ನದಿಗಳ ಒಡೆಯನಾದ ಸಮುದ್ರನು ಮೃದುನುಡಿಯಿಂದ ಅವಳನ್ನು ಕುರಿತು ಇಂತೆಂದನು.

೩೩. ಸಮುದ್ರನು ಹೇಳುತ್ತಾನೆ :—ದೇವಿ! ನಾರದನು ನಿನ್ನನ್ನು ವಂದಿಸಿ ನುಡಿದ ಮಾತು ನಿಜವಾದುದು. ನೀನು ಯಾವಾಗಲೂ ವಿಷ್ಣುವಿಗೆ ಸಹಾಯಕಳಾಗಿರುವೆಯೆಂದು ವೇದಗಳು ಘೋಷಿಸುತ್ತಿವೆ.

ಪರಃ ಪುಮಾನೇಷ ನಿರಸ್ತವಿಗ್ರಹೋ
ಗೂಢೋಽಧಿಪಸ್ತೇ ವಿದಧಾತಿ ಭೂಯಃ ।
ವಿಶ್ವಂ ವ್ಯವಸ್ಥಾಪಯತಿ ಸ್ವರೋಚಿಷಾ
ತ್ವಯಾ ಸಹಾಯೇನ ಬಿಭರ್ತಿ ಮೂರ್ತಿಂ ॥ ೩೪ ॥
ತದೇಷ ಪರಿಖೇದಸ್ತೇ ನ ಮನಾಗಪಿ ಯುಜ್ಯತೇ ।
ವಕ್ಷಃಸ್ಥಲಸ್ಥಾ ಭವತೀ ನಿತ್ಯಂ ಶ್ರೀವತ್ಸಲಕ್ಷ್ಮಣಃ ॥ ೩೫ ॥
ಇಯಂ ಭಾಗೀರಥೀ ದೇವೀ ಮದಾದೇಶಾದುಪಾಗತಾ ।
ವಿನೋದಯಿಷ್ಯತ್ಯನಿಶಂ ತ್ವಾಂ ಹಿ ದೇವಿ ಶರೀರಿಣೀ ॥ ೩೬ ॥
ಏತಸ್ಯಾಃ ಸ್ವಾಸ್ಮೃದು ಸ್ವಾದು ಪಯಃ ಪೂರೋಪಶೋಭಿತಂ ।
ಪ್ರದೇಶೋಽಯಮಶೇಷೋಽಪಿ ಭವಿತಾ ತ್ವತ್ಸುಖಪ್ರದಃ ॥ ೩೭ ॥
ನಾನಾದ್ರುಮಲತಾಕೀರ್ಣಂ ನಿಕುಂಜೈರುಪಶೋಭಿತಂ ।
ಮಾತಂಗೈಶ್ಚ ಸಮಾಜುಷ್ಟಂ ಮಂಜುಗುಂಜನ್ಮಧುವ್ರತಂ ॥ ೩೮ ॥
ನವಪಲ್ಲವಭಂಗೀಭಿಃ ಕುಸುಮಸ್ತಬಕೈಃ ಶುಭೈಃ ।
ಫಲೈರಮೃತಕಲ್ಪೈಶ್ಚ ಮಂಜರೀರಾಜಿಭಿಸ್ತಥಾ ॥ ೩೯ ॥

---

೩೪. ಈ ಪುರುಷೋತ್ತಮನು ವಿಗ್ರಹವಿಲ್ಲದೆ ನಿನಗೆ ಅಧಿಪತಿಯಾಗಿ ಈ ಪ್ರಪಂಚವನ್ನು ತನ್ನ ತೇಜಸ್ಸಿನಿಂದ ವ್ಯವಸ್ಥೆಗೊಳಿಸುವನು. ನಿನ್ನ ಸಹಾಯದಿಂದ ಶರೀರವನ್ನು ಹೊಂದುವನು.

೩೫. ನೀನು ಶ್ರೀವತ್ಸಾಂಕನಾದ ಹರಿಯ ವಕ್ಷಸ್ಥಳದಲ್ಲಿ ನೆಲಸಿರುವೆ. ಆದ್ದರಿಂದ ನಿನಗೆ ಈ ಖೇದವು ಉಚಿತವಲ್ಲ.

೩೬. ದೇವಿ! ಈ ಭಾಗೀರಥಿಯು ನನ್ನ ಆಜ್ಞೆಯಂತೆ ದೇಹವನ್ನು ತಾಳಿ ನಿನ್ನೆಡೆಗೆ ಬಂದು ನಿನ್ನನ್ನು ಯಾವಾಗಲೂ ಸಂತೋಷಗೊಳಿಸುವಳು.

೩೭. ಈ ಸ್ಥಳವೆಲ್ಲ ಈ ಗಂಗೆಯ ಸ್ವಾದೂದಕದ ಪ್ರವಾಹದಿಂದ ಶೋಭೆಗೊಂಡು ನಿನಗೆ ಸುಖವನ್ನೀಯುವುದು.

೩೮–೪೦. ಈ ವನವು ಶೀಘ್ರವಾಗಿ ಅನೇಕ ವೃಕ್ಷ, ಲತೆಗಳಿಂದ ವ್ಯಾಪ್ತವೂ, ಪೊದೆಗಳಿಂದ ಅಲಂಕಾರಗೊಂಡುದೂ, ಆನೆಗಳಿಂದ ತುಂಬಿರುವುದೂ, ಇಂಪಾಗಿ ಕೂಗುವ ದುಂಬಿಗಳುಳ್ಳದೂ, ಹೊಸ ಚಿಗುರುಗಳಿಂದಲೂ, ಹೂವಿನ ಗೊಂಚಲುಗಳಿಂದಲೂ, ಅಮೃತಸಮಾನವಾದ ಫಲಗಳಿಂದಲೂ, ತೆನೆಗಳ ಸಮೂಹಗಳಿಂದಲೂ

ನಂದನಸ್ಯ ಶ್ರಿಯಾ ಜುಷ್ಟಂ ಮನೋನಯನನಂದನಂ ।
ವನಂ ರಮ್ಯತರಂ ಚಾತ್ರ ಹ್ಯಚಿರೇಣ ಭವಿಷ್ಯತಿ ॥ ೪೦ ॥
ತ್ವಯಾ ಸಂಬೋಧನೀಯಾಃ ಸ್ಮ ವಯಂ ಮಾತಃ ಸದೈವ ಹಿ ।
ಅಗಮ್ಯರೂಪಾ ವಿದ್ಯಾ ತ್ವಮಸ್ಮಾಭಿರ್ಬೋಧ್ಯಸೇ ಕಥಂ ॥ ೪೧ ॥
ತದಾಽಽಮನುಜಾನೀಹಿ ಪ್ರಸೀದ ಪರಮೇಶ್ವರಿ ।
ನಮಸ್ತೇ ವಿಶ್ವಜನನಿ ಭೂಯೋಽಪಿ ಚ ನಮೋನಮಃ ॥ ೪೨ ॥

ಪ್ರಹ್ಲಾದ ಉವಾಚ :—

ಏವಮುಕ್ತ್ವಾ ಜಗದ್ಧಾತ್ರೀಂ ಜಗ್ಮತುಸ್ತೌ ಯಥಾಗತಂ ।
ಆಜಗಾಮ ಚ ತತ್ರೈವ ದೇವೀ ಭಾಗೀರಥೀ ಸ್ವಯಂ ॥ ೪೩ ॥
ವನಂ ಸಮಭವತ್ತತ್ರ ದಿವ್ಯಭೂರುಹಸೇವಿತಂ ।
ಸೇವ್ಯಂ ಸಮಸ್ತಲೋಕಾನಾಂ ಫಲಪುಷ್ಪಸಮೃದ್ಧಿಮತ್ ॥ ೪೪ ॥
ಪ್ರಸಾದೇನ ಚ ಭೂತಾನಾಂ ಗಂಗಾಽಶೇಷಾಘಹಾರಿಣೀ ।
ಭೂಷಯಾಮಾಸ ತಂ ದೇಶಂ ಸಾ ಚ ವಿಷ್ಣುಪದೀ ಸರಿತ್ ॥ ೪೫ ॥

---

ಕೂಡಿರುವುದೂ, ನಂದನವನದಕಾಂತಿಯುಳ್ಳುದೂ, ಕಣ್ಮನಗಳಿಗೆ ಆನಂದ ವನ್ನುಂಟುಮಾಡುವುದೂ ಆಗುವುದು.

೪೧. ತಾಯೆ ! ಯಾವಾಗಲೂ ನೀನೇ ನಮಗೆ ಉಪದೇಶ ಮಾಡತಕ್ಕವಳಾಗಿ ರುವೆ. ತಿಳಿಯಲಾರದ ರೂಪವುಳ್ಳವಳೂ, ವಿದ್ಯಾ ಸ್ವರೂಪಳೂ ಆದ ನಿನಗೆ ನಾವು ಹೇಗೆ ಉಪದೇಶಿಸುವವರಾಗುವೆವು.

೪೨. ಆದ್ದರಿಂದ ಪರಮೇಶ್ವರಿ ! ಪ್ರಸನ್ನಳಾಗು. ನಮಗೆ ಹೊರಡಲು ಅನು ಮತಿಯನ್ನು ಕೊಡು. ಜಗನ್ಮಾತೆಯೆ ! ನಿನಗೆ ವಂದನೆಯು.

೪೩. ಆ ಸಮುದ್ರ ನಾರದರು ಜಗನ್ಮಾತೆಗೆ ಹೀಗೆ ಹೇಳಿ ತಮ್ಮ ದಾರಿಯನ್ನು ಹಿಡಿದು ಹೊರಟುಹೋದರು. ಅಲ್ಲಿಗೆ ಭಾಗಿರಥಿಯು ತಾನೇ ಬಂದಳು.

೪೪—೪೫. ಪಂಚ ಭೂತಗಳ ಅನುಗ್ರಹದಿಂದ ಆ ವನವು ದಿವ್ಯ ವೃಕ್ಷಗಳು ಳ್ಳುದೂ, ಸಮಸ್ತ ಜನರಿಗೆ ಸೇವಿಸಲರ್ಹವಾದುದೂ, ಫಲ ಪುಷ್ಪಗಳಿಂದ ಸಮೃದ್ಧಿ ಗೊಂಡುದೂ ಆಯಿತು. ಸಮಸ್ತ ಪಾಪಗಳನ್ನು ಪರಿಹರಿಸುವ ಗಂಗೆಯು ಆ ಪ್ರದೇಶ ವನ್ನು ಅಲಂಕಾರಗೊಳಿಸಿದಳು.

ದೇವೀ ಚ ಮುನಿವಾಕ್ಯೇನ ಗಂಗಾಯಾಶ್ಚ ವಿನೋದನಾತ್ ।
ಸೌಂದರ್ಯಾತ್ತಸ್ಯ ದೇಶಸ್ಯ ಕಿಂಚಿತ್ಸ್ವಾಸ್ಥ್ಯಮವಾಪ್ಯ ಹ ॥ ೪೬ ॥
ಅಥ ವಿಷ್ಣುಪದೀಂ ದೇವೀಂ ಶ್ರುತ್ವಾ ಸಾಗರಸಂಗತಾಂ ।
ಇತಸ್ತತಸ್ಸಮಾಜಗ್ಮುಃ ಶ್ರದ್ಧಧಾನಾಃ ಪಯಸ್ವಿನೀಂ ॥ ೪೭ ॥
ದ್ವಾರಕಾವಾಸಿನಶ್ಚೈವ ಜನಾಃ ಕಾನನಶೋಭಯಾ ।
ಹೃಷ್ಟಚಿತ್ತಾಃ ಸಮಾಜಗ್ಮುಃ ಅನಿಶಂ ರುಕ್ಮಿಣೀವನಂ ॥ ೪೮ ॥
ಶ್ರುತ್ವಾ ತದಖಿಲಂ ಸರ್ವಂ ದುರ್ವಾಸಾಃ ಶಾಂಭವೀ ಕಲಾ ।
ಚುಕೋಪ ಸ್ಮಯಮಾನಶ್ಚ ಭೂಯ ಏತದಭಾಷತ ॥ ೪೯ ॥

ದುರ್ವಾಸಾ ಉವಾಚ :—

ಕಃ ಪ್ರಭುಸ್ತ್ರಿಷು ಲೋಕೇಷು ಮಹ್ಯಂ ವಚನಮನ್ಯಥಾ ।
ವಿಧಾತುಮಪಿ ದೇವಾನಾಮಾದ್ಯೋ ಲೋಕಪಿತಾಮಹಃ ॥ ೫೦ ॥
ಕಿಂ ನ ಜಾನಾತಿ ಲೋಕೋಽಯಂ ಮಯಿ ರೋಷಕಷಾಯಿತೇ ।
ಶಕ್ರಂ ಪ್ರತಿ ತ್ರಿಭುವನಂ ಭ್ರಷ್ಟಶ್ರೀಕಮಭೂತ್ತದಾ ॥ ೫೧ ॥
ಮಮ ಶಾಪಮವಿಜ್ಞಾಯ ನಂದನಪ್ರತಿಮೇ ವನೇ ।
ಕಥಂ ಸಾ ರುಕ್ಮಿಣೀ ತತ್ರ ರಮತೇ ಜನಸೇವಿತೇ ॥ ೫೨ ॥

---

೪೬. ರುಕ್ಮಿಣಿಯೂ ನಾರದನ ಮಾತಿನಿಂದಲೂ, ಗಂಗೆಯ ಲಾಲನೆಯಿಂದಲೂ ಆ ಸ್ಥಳದ ಸೌಂದರ್ಯದಿಂದಲೂ ಸ್ವಲ್ಪ ಸುಖಗೊಂಡಳು.

೪೭–೪೮. ದ್ವಾರಕಾವಾಸಿಗಳಾದ ಜನರು ಪವಿತ್ರ ಜಲವುಳ್ಳ ಗಂಗೆಯು ಸಮುದ್ರದೊಡನೆ ಸೇರಿರುವುದನ್ನು ಕೇಳಿ ವನದ ಕಾಂತಿಯಿಂದ ಸಂತೋಷಗೊಂಡು ಈ ಕಡೆ ಆ ಕಡೆಯಿಂದ ರುಕ್ಮಿಣೀ ವನಕ್ಕೆ ಶ್ರದ್ಧೆಯಿಂದ ಬಂದರು.

೪೯. ಶಿವನ ಅಂಶ ರೂಪನಾದ ದುರ್ವಾಸನು ಅವುಗಳನ್ನೆಲ್ಲ ಕೇಳಿ ಕೋಪಿಸಿಕೊಂಡನು. ನಗುತ್ತ ಮರಳಿ ಇಂತೆಂದನು.

೫೦. ದುರ್ವಾಸನು ಹೇಳುತ್ತಾನೆ :—ಮೂರು ಲೋಕಗಳಲ್ಲಿ ದೇವತೆಗಳಲ್ಲಿ ಪ್ರಥಮನಾದ ಬ್ರಹ್ಮನೇ ಆಗಲಿ ಯಾವನು ನನ್ನ ಮಾತನ್ನು ವ್ಯತ್ಯಾಸಗೊಳಿಸಲು ಶಕ್ತನು ?

೫೧. ನಾನು ಇಂದ್ರನಲ್ಲಿ ಕುಪಿತನಾಗಲು ಮೂರು ಲೋಕಗಳು ಆಗ ಕಾಂತಿಹೀನವಾದುವು. ಎಂಬುದನ್ನು ಜನರು ತಿಳಿಯುವುದಿಲ್ಲವೋ.

೫೨. ಆ ರುಕ್ಮಿಣಿಯು ನನ್ನ ಶಾಪವನ್ನರಿಯದೆ ನಂದನವನದಂತಿರುವ ಜನರು ಸೇವಿಸುತ್ತಿರುವ ಆ ವನದಲ್ಲಿ ಹೇಗೆ ವಿನೋದಪಡುತ್ತಿರುವಳು ?

ತದೇತೇ ತರವಸ್ಸರ್ವೇ ಸಂತ್ವಭೋಜ್ಯಫಲಾ ನೃಣಾಂ ।
ವಿಭ್ರಷ್ಟಸರ್ವಸೌಭಾಗ್ಯಾಃ ಕುಸುಮಸ್ತಬಕೋಜ್ಝಿತಾಃ ॥ ೫೩ ॥
ಇಯಂ ತು ಶಾಪನಿರ್ದಗ್ಧಾ ಹರಚೂಡಾಮಣಿಃ ಸರಿತ್ ।
ವಾರ್ಯರ್ಸ್ಯಾಃ ಸ್ಯಾದಪೇಯಂ ತು ನೈವೇಹ ಸ್ಥಾತುಮರ್ಹತಿ ॥ ೫೪ ॥

ಪ್ರಹ್ಲಾದ ಉವಾಚ :—

ತದಾ ಸರ್ವಮಭೂತ್ತತ್ರ ಯದ್ಯದಾಹ ಚ ವೈ ಮುನಿಃ ।
ವಾಚಿ ವೀರ್ಯಂ ಹಿ ವಿಪ್ರಾಣಾಂ ನಿರ್ಮಿತಂ ವಿಷ್ಣುನಾ ಸ್ವಯಂ ॥ ೫೫ ॥
ಸಾ ತು ದೇವೀ ತಥಾ ವೃತ್ತಮವೇಕ್ಷ್ಯ ಭೃಶದುಃಖಿತಾ ।
ಮೇನೇ ದುರತ್ಯಯಂ ದೈವಮಾಪತತ್ತತ್ಪುನಃಪುನಃ ॥ ೫೬ ॥
ತತಸ್ತು ಸಾ ವಿನಿಶ್ಚಿತ್ಯ ಮರಣಂ ದುಃಖಭೇಷಜಂ ।
ಉತ್ತರೀಯಾಂಬರೇಣೈವ ಬಹಿಃ ಕಿಂಚಿತ್ಪ್ರಬಧ್ಯ ತು ॥ ೫೭ ॥
ಅಥಾವಬುಧ್ಯ ತತ್ಸರ್ವಂ ಸರ್ವಭೂತಗುಹಾಶಯಃ ।
ತಾಂ ಜ್ಞಾತ್ವಾ ಸತ್ವರಂ ಚಾಗಾತ್ಸುಪರ್ಣೇನ ದಯಾನಿಧಿಃ ॥ ೫೮ ॥
ದದರ್ಶ ತಾದೃಶೀಂ ದೇವೀಂ ಕಂಠಪಾಶಕರಾಂ ವಿಭುಃ ।
ಅಧಸ್ತಾತ್ತರುಶಾಖಾಯಾಂ ನಿಮೀಲಿತವಿಲೋಚನಾಂ ॥ ೫೯ ॥

---

೫೩. ಆದ್ದರಿಂದ ಈ ಮರಗಳೆಲ್ಲ ಮನುಷ್ಯರಿಗೆ ಅನುಭವಿಸಲನರ್ಹವಾದ ಫಲಗಳುಳ್ಳುವೂ, ಸಕಲಸೌಭಾಗ್ಯಗಳನ್ನು ಕಳೆದುಕೊಂಡುವೂ ಹೂವಿನ ಗೊಂಚಲುಗಳಿಲ್ಲದವೂ ಆಗಲಿ.

೫೪. ಈ ಶಿವ ಶಿರಶ್ಚೂಡಾಮಣಿಯಾದ ಗಂಗೆಯು ನನ್ನ ಶಾಪದಿಂದ ಕುಡಿಯಲನುಚಿತವಾದ ನೀರುಳ್ಳವಳಾಗಿ ಇಲ್ಲಿರಲು ಅನರ್ಹಳಾಗಲಿ.

೫೫. ಪ್ರಹ್ಲಾದನು ಹೇಳುತ್ತಾನೆ :—ಅಲ್ಲಿ ಆ ಮುನಿಯು ಹೇಳಿದ್ದೆಲ್ಲ ಆಯಿತು. ವಿಷ್ಣುವು ತಾನಾಗಿಯೇ ಬ್ರಾಹ್ಮಣರ ಮಾತಿನಲ್ಲಿ ಸಾಮರ್ಥ್ಯವನ್ನಿಟ್ಟಿರುವನಷ್ಟೆ!.

೫೬. ಆ ರುಕ್ಮಿಣಿಯು ಹಾಗೆ ಆಗಿರುವುದನ್ನೆಲ್ಲ ಈಕ್ಷಿಸಿ ಅತ್ಯಂತ ದುಃಖಗೊಂಡು ತನಗೆ ಮರಳಿ ಮರಳಿ ದುರದೃಷ್ಟವೊದಗುತ್ತಿದೆಯೆಂದರಿತಳು.

೫೭. ಬಳಿಕ ಅವಳು ಉತ್ತರಿದ ಬಟ್ಟೆಯನ್ನು ಕಟ್ಟಿಕೊಂಡು ಮಡಿಯುವುದೇ ತನ್ನ ದುಃಖ ರೋಗಕ್ಕೆ ಔಷಧವೆಂದರಿತಳು.

೫೮. ಬಳಿಕ ಸಮಸ್ತ ಪ್ರಾಣಿಗಳ ಹೃದ್ಗುಹೆಯಲ್ಲಿ ವಾಸಿಸುತ್ತಿರುವವನೂ, ದಯಾಳುವೂ ಆದ ಕೃಷ್ಣನು ಅದನ್ನೆಲ್ಲ ತಿಳಿದು ಶೀಘ್ರವಾಗಿ ಗರುಡನನ್ನೇರಿ ಅಲ್ಲಿಗೆ ಬಂದನು.

೫೯. ಅವನು ಕುತ್ತಿಗೆಗೆ ಹಗ್ಗವನ್ನು ಕಟ್ಟುತ್ತಿರುವವಳೂ, ಮರದ ಕೊಂಬೆ ಕೆಳಗೆ ಕಣ್ಣುಗಳನ್ನು ಮುಚ್ಚಿಕೊಂಡು ನಿಂತಿರುವವಳೂ ಆದ ರುಕ್ಮಿಣಿಯನ್ನು ಕಂಡನು.

ವಿಭ್ರಷ್ಟಭೂಷಣಗಣಾಂ ಕೃಶದೇಹವಲ್ಲೀಂ
ಮ್ಲಾನಾಲ್ಲನನಾಂಬುಜರುಚಂ ಮರಣೇ ಪ್ರಸಕ್ತಾಂ ।
ಮೇನೇ ಸ ವಿಗ್ರಹವತೀಂ ಕರುಣಾಂ ಕೃಪಾಲು
ಸ್ತಾಂ ಸೌಖ್ಯದಾಂ ಗುಣವತೀಂ ಪ್ರಣತಾರ್ತಿಹನ್ತ್ರೀಂ ॥೬೦॥
ಸಂಶ್ರುತ್ಯ ಸಾಪಿ ಪತಗಾಧಿಪತೇ ರವಂ ವೈ
ಪ್ರೋನ್ಮೀಲ್ಯ ನೇತ್ರಕಮಲೇಽಥ ದದರ್ಶ ಕೃಷ್ಣಂ ।
ಸಾಮಾನ್ಯತ ತ್ರಿಕವಿವರ್ತಿತಲೋಚನಾಬ್ಜಂ
ಪ್ರಾಪ್ತಂ ತಮಿಷ್ಟಸುಹೃದಂ ನಿಜಜೀವನಾಥಂ ॥೬೧॥
ಸಾ ರೋಮಹರ್ಷವಿವಶಾ ತ್ರಪಯಾ ಪರೀತಾ
ಕೋಪಾನುರಾಗಕಲುಷಾ ಕೃತವಿಪ್ರಲಾಪಾ ।
ಸಂವರ್ಧಿತದ್ವಿಗುಣಶೋಕಭರಾ ಚ ದೇವೀ
ನಾನಾರಸಂ ಬತ ದೃಶೋರ್ವಿಷಯಂ ಪ್ರಪೇದೇ ॥೬೨॥
ತಸ್ಯಾಃ ಸಸಾಧ್ವಸವಿಸರ್ಗಚಿಕೀರ್ಷಿತಾಯಾಃ
ಪಾಶಂ ವ್ಯಪೋಹ್ಯ ಕರಚಾರುಸರೋರುಹೇಣ ।
ಆದಾಯ ಪಾಣಿಮಮೃತೋಪಮಯಾ ಚ ವಾಚಾ
ಸಂಜೀವಯನ್ನಿದಮುದಾರಮುವಾಜಹಾರ ॥೬೩॥

---

೬೦. ದಯಾಳುವಾದ ಕೃಷ್ಣನು ಜಾರಿಹೋದ ಒಡವೆಗಳುಳ್ಳವಳೂ, ಕೃಶದೇಹಳೂ, ಬಾಡಿದ ಮುಖ ಕಮಲಗಳುಳ್ಳವಳೂ, ಮರಣೋದ್ಯುಕ್ತಳೂ, ಸೌಖ್ಯವನ್ನೀಯುವವಳೂ, ಗುಣಶಾಲಿನಿಯೂ, ನಮಸ್ಕಾರ ಮಾಡಿದವರ ದುಃಖವನ್ನು ನಿವಾರಿಸುವವಳೂ ಆದ ಆ ರುಕ್ಮಿಣಿಯನ್ನು ದೇಹವನ್ನು ಧರಿಸಿದ ಕರುಣೆಯೆಂದು ತಿಳಿದನು.

೬೧. ಅವಳು ಗರುಡನ ಧ್ವನಿಯನ್ನು ಕೇಳಿ ನೇತ್ರಕಮಲಗಳನ್ನು ತೆರೆದು ಕೃಷ್ಣನನ್ನು ನೋಡಿ ಅವನು ತನ್ನ ಇಷ್ಟಮಿತ್ರನಾದ ಪ್ರಿಯನೆಂದು ತಿಳಿದಳು.

೬೨. ರೋಮಾಂಚಗೊಂಡು ಪರವಶಳೂ, ನಾಚಿಕೆಯುಳ್ಳವಳೂ, ಕೋಪಪ್ರೀತಿಗಳಿಂದ ಮಿಶ್ರಳೂ, ಗೋಳಾಡುವವಳೂ, ಇಮ್ಮಡಿಯಾದ ಶೋಕವುಳ್ಳವಳೂ ಆದ ಆ ರುಕ್ಮಿಣಿಯು ಶೃಂಗಾರಾದಿ ಅನೇಕರಸಗಳಿಗೆ ವಿಷಯಳಾದವಳಂತೆ ಕಂಡಳು.

೬೩. ಶ್ರೀ ಕೃಷ್ಣನು ಭಯಂಕರ ಕಾರ್ಯವನ್ನೆಸಗಲು ಬಯಸುತ್ತಿರುವ ಆ ರುಕ್ಮಿಣಿಯ ಕಂಠಪಾಶವನ್ನು ಕರಕಮಲದಿಂದ ಬಿಡಿಸಿ ಅವಳ ಕೈಯನ್ನು ಹಿಡಿದುಕೊಂಡು ಅಮೃತಕ್ಕೆ ಸಮಾನವಾದ ನುಡಿಯಿಂದ ಅವಳನ್ನು ಎಚ್ಚರಗೊಳಿಸುತ್ತ ಹೀಗೆಂದನು.

ಶ್ರೀ ಕೃಷ್ಣ ಉವಾಚ :—

ಕಿಮೇತತ್ಸಾಹಸಂ ಭೀರು ಚಿಕೀರ್ಷಸ್ಯವಿಚಾರಿತಂ ।
ನನು ದೇವಿ ಮಮಾಚಕ್ಷ್ವ ಕಿಂ ನು ತೇ ಖೇದಕಾರಣಂ ॥ ೬೪ ॥
ತ್ವಂ ವಿದ್ಯಾಽಹಂ ಪರೋ ಬೋಧಸ್ತ್ವಂ ಮಾಯಾ ಚೇಶ್ವರಸ್ತ್ವಹಂ ।
ತ್ವಂ ಚ ಬುದ್ಧಿರಹಂ ಜೀವೋ ವಿಯೋಗಃ ಕಥಮಾವಯೋಃ ॥ ೬೫ ॥
ತ್ವಯಾ ವಿಮೋಹಿತಾತ್ಮಾನೋ ಭ್ರಾಮ್ಯಂತ್ಯಜಭವಾದಯಃ ।
ಸಾ ಕಥಂ ಕ್ಷುಭ್ಯಸಿ ತ್ವಂ ತು ಕಿಂ ಸ್ವಧಾಮ ನ ಬುಧ್ಯಸೇ ॥ ೬೬ ॥
ತ್ವಯಾ ಹಿ ಬದ್ಧಾ ಋಷಯಸ್ತೇ ಚರಂತೀಹ ಕರ್ಮಭಿಃ ।
ತಾಂ ತ್ವಾಂ ಕಥಮ್ನೃಷಿಃ ಶಪ್ತುಂ ಶಕ್ನುಯಾದ್ವರವರ್ಣಿನಿ ॥ ೬೭ ॥
ಶಿಕ್ಷಾರ್ಥಂ ತ್ವಿಹ ಲೋಕಾನಾಮೇವಂ ಮೇ ದೇವಿ ಚೇಷ್ಟಿತಂ ।
ಮನ್ಮಾಯಯಾ ಸಮಾವಿಷ್ಟಃ ವಿವಶಃ ಕುರುತೇ ಪುಮಾನ್ ।
ಪಶ್ಯ ಕೋಪಪರೀತಾತ್ಮಾ ಯಃ ಸ ಶಾಂತೋ ಮುನೀಶ್ವರಃ ॥ ೬೮ ॥

ಪ್ರಹ್ಲಾದ ಉವಾಚ :—

ಸೋಽಭ್ಯೇತ್ಯ ಭಕ್ತ್ಯಾ ನಮ್ರೋಽಥ ದುರ್ವಾಸಾ ಮುನಿಸತ್ತಮಃ ।
ವಿಚಾರ್ಯ ಮನಸಾ ಸರ್ವಂ ಪಶ್ಚಾತ್ತಾಪಮುಪಾಶ್ರಯತ್ ॥ ೬೯ ॥

---

೬೪. ಶ್ರೀ ಕೃಷ್ಣನು ಹೇಳುತ್ತಾನೆ :—ಭಯಶಾಲಿನಿಯೆ! ವಿಚಾರಮಾಡದೆ ಇಂತಹ ಸಾಹಸಕಾರ್ಯವನ್ನು ಏಕೆ ಮಾಡಲಿಚ್ಛಿಸುವೆ? ದೇವಿ! ನಿನ್ನ ವ್ಯಥೆಗೆ ಕಾರಣವೇನು ? ಅದನ್ನು ನನಗೆ ಹೇಳು.

೬೫. ನೀನು ವಿದ್ಯೆಯು. ನಾನು ಉತ್ತಮ ಜ್ಞಾನವು. ನೀನು ಮಾಯೆಯು. ನಾನು ಈಶ್ವರನು. ನೀನು ಬುದ್ಧಿಯು. ನಾನು ಜೀವನು. ನಮ್ಮಿಬ್ಬರಿಗೆ ವಿಯೋಗವು ಹೇಗೆ ?

೬೬. ನಿನ್ನಿಂದ ಬ್ರಹ್ಮೇಶಾದಿಗಳು ಮೋಹಗೊಂಡು ಭ್ರಾಂತರಾಗುವರು ಅಂಥ ನೀನು ಹೇಗೆ ಚಂಚಲಳಾಗುವೆ? ನೀನು ನಿನ್ನ ಸ್ಥಾನವನ್ನರಿಯೆಯಾ ?

೬೭. ಸುಂದರಿ! ಋಷಿಗಳು ನಿನ್ನಿಂದ ಕರ್ಮಬದ್ಧರಾಗಿ ಈ ಪ್ರಪಂಚದಲ್ಲಿ ಸಂಚರಿಸುತ್ತಾರೆ. ಆ ಋಷಿಯು ನಿನ್ನನ್ನು ಶಪಿಸಲು ಹೇಗೆ ಸಮರ್ಥನಾದಾನು?

೬೮. ದೇವಿ! ನಾನು ಲೋಕಶಿಕ್ಷಣಕ್ಕಾಗಿ ಹೀಗೆ ಹೂಡುತ್ತಿರುವೆನು. ಮನುಷ್ಯನು ನನ್ನ ಮಾಯೆಯಿಂದ ಆವಿಷ್ಟನಾಗಿ ಪರಾಧೀನತೆಯಿಂದ ಕಾರ್ಯವೆಸಗುವನು. ನೋಡು ಕುಪಿತನಾದ ಆ ಮುನಿಯು ಈಗ ಶಾಂತನಾಗಿರುವನು.

೬೯. ಪ್ರಹ್ಲಾದನು ಹೇಳುತ್ತಾನೆ :—ಆ ಸಮಯದಲ್ಲಿ ದುರ್ವಾಸ ಮುನಿಯಾದರೋ ಭಕ್ತಿಯಿಂದ ನಮ್ರನಾಗಿ ಮನಸ್ಸಿನಲ್ಲಿ ಆಲೋಚಿಸಿ ಪಶ್ಚಾತ್ತಾಪಗೊಂಡನು.

ಕಿಂ ಮಯಾ ಕೃತಮಿತ್ಯುಕ್ತ್ವಾ ತತ್ಸಮೀಪಮುಪಾಗಮತ್ ।
ಅಪತದ್ಭಿಲುಠನ್ಭೂಮೌ ದಂಡವಚ್ಚಾಶ್ರುಸಂಪ್ಲುತಃ ॥ ೭೦ ॥
ಪಿತರೌ ಜಗತೋ ದೇವೌ ಕ್ಷಮಯಾಮಾಸ ದೀನವತ್ ।
ತುಷ್ಟಾವ ಸೂಕ್ತವಾಕ್ಯೈಸ್ತು ರಹಸ್ಯೈರ್ಭಕ್ತಿಸಂಯುತಃ ॥ ೭೧ ॥
ಆಹ ಚೇದಂ ಜಗನ್ನಾಥಂ ಯದಿ ಮಯ್ಯಸ್ತ್ಯನುಗ್ರಹಃ ।
ತದಾ ಪುರೇವ ಸಂಯೋಗೋ ದೇವ ದೇವ್ಯಾ ವಿಧೀಯತಾಂ ॥ ೭೨ ॥
ಅಥ ಪ್ರಹಸ್ಯ ಗೋವಿಂದಸ್ತಮಾಹ ಮುನಿಸತ್ತಮಂ ।
ನ ಹಿ ತೇ ವಚನಂ ಜಾತು ಮೃಷಾ ಭವಿತುಮರ್ಹತಿ ॥ ೭೩ ॥
ಮಯೈವಂ ವಿಹಿತಃ ಸೇತುಃ ಕಥಮುಚ್ಛೇದ್ಯತಾಂ ದ್ವಿಜ ।
ಸದ್ಭಿರಾಚರಿತಂ ಸೇತುಃ ಸಿದ್ಧೋ ಲೋಕಸ್ಯ ಪಾಲಕಃ ॥ ೭೪ ॥
ದಿನೇದಿನೇ ದ್ವಿಕಾಲಂ ಚ ಆಯಾಸ್ಯೇ ಮುನಿಸತ್ತಮ ।
ವಿನೋದಯಿಷ್ಯೇ ತಾಂ ತಾಂ ತು ಮುನಿಕನ್ಯಾಂ ಚ ಕಾಮ್ಯಯಾ ॥ ೭೫ ॥
ತುಷ್ಯಾಮಿ ಸಾಧನೈರ್ನಾನ್ಯೈರ್ಮತ್ಕಥಾ ಕಥನೈರಪಿ ।
ಯಥಾ ಸಂಪೂಜ್ಯ ಮಾಮತ್ರ ಮಮ ಪ್ರೀತಿರ್ಭವಿಷ್ಯತಿ ॥ ೭೬ ॥

---

೭೦, ಅವನು ನಾನು ಎಂತಹ ಕಾರ್ಯವನ್ನು ಮಾಡಿದೆನು ? ಎಂದು ಅವಳ ಹತ್ತಿರ ಬಂದು ಕಣ್ಣೀರುಸುರಿಸುತ್ತ ಭೂಮಿಯಲ್ಲಿ ದಂಡಾಕಾರವಾಗಿ ಬಿದ್ದು ಹೊರಳಾಡಿದನು.

೭೧ ದೀನನಂತೆ ಜಗತ್ತಿನ ತಂದೆತಾಯಿಗಳಾದ ಆ ಕೃಷ್ಣ ರುಕ್ಮಿಣಿಯರ ಕ್ಷಮೆ ಬೇಡಿ ಅವರನ್ನು ರಹಸ್ಯವಾದ ಸೂಕ್ತವಾಕ್ಯಗಳಿಂದ ಭಕ್ತಿಪೂರ್ವಕವಾಗಿ ಸ್ತುತಿಸಿದನು.

೭೨. ಜಗದೊಡೆಯನಾದ ಕೃಷ್ಣನನ್ನು ಕುರಿತು "ಸ್ವಾಮಿ ! ನಿನಗೆ ನನ್ನಲ್ಲಿ ಅನುಗ್ರಹವಿದ್ದರೆ ನೀನು ಮೊದಲಿನಂತೆ ದೇವಿಯೊಡನೆ ಇರು". ಎಂದನು.

೭೩. ತರುವಾಯ ಕೃಷ್ಣನು ನಕ್ಕು ಆ ಮುನಿಯನ್ನು ಕುರಿತು ಇಂತೆಂದನು. "ನಿನ್ನ ಮಾತು ಯಾವಾಗಲೂ ಸುಳ್ಳಾಗಲಾರದು.

೭೪. ಬ್ರಾಹ್ಮಣ! ನಾನು ಮಾಡಿದ ನಿಯಮವನ್ನು ನಾನೇ ಹೇಗೆ ಹಾಳುಮಾಡಲಿ. ಸಜ್ಜನರು ಪ್ರಪಂಚದ ಪಾಲನೆಗಾಗಿ ಆ ನಿಯಮವನ್ನು ಆಚರಿಸಿರುವರು.

೭೫. ಮುನಿವರ್ಯನೆ! ಪ್ರತಿದಿನವೂ ಎರಡು ಕಾಲದಲ್ಲಿಯೂ, ನಾನು ಆ ರುಕ್ಮಿಣಿಯೆಡೆಗೆ ಬಂದು ಅವಳನ್ನೂ, ಆ ವಸಿಷ್ಠಕನ್ಯೆಯಾದ ಗೋಮತಿಯನ್ನೂ ಸಂತೋಷಗೊಳಿಸುವೆನು.

೭೬. ಇಲ್ಲಿರುವ ನನ್ನನ್ನು ಪೂಜಿಸಿದರೆ ನನಗೆ ಎಂತಹ ಪ್ರೀತಿಯುಂಟಾಗುವುದೋ; ಆ ಪ್ರೀತಿಯು ಇತರ ಸಾಧನಗಳಿಂದಲೂ, ನನ್ನ ಚರಿತೆಯ ಕಥನಗಳಿಂದಲೂ ಉಂಟಾಗುವುದಿಲ್ಲ.

ಯದಾ ಚ ಮಯಿ ವೈಕುಂಠಮಧಿರೂಢೇ ಮಹಾಮುನೇ ।
ಪ್ರವೇಕ್ಷ್ಯಾಮಿ ತದಾ ತೇಜೋ ಮಮ ಸರ್ವಂ ತ್ರಿವಿಕ್ರಮೇ ॥ ೭೭ ॥
ರುಕ್ಮಿಣೀಯಂ ಚ ಮನ್ಮೂರ್ತೇಃ ಸಂಯೋಗಂ ಪುನರೇಷ್ಯತಿ ।
ಇಯಂ ಭಾಗೀರಥೀ ಚಾಪಿ ಸಾಗರೇಣ ಸಮಾ ಗುಣೈಃ ।
ಇತ್ಯಕ್ತ್ವಾ ಹ್ಯಶೇಷದುಃಖಾನಿ ಸುಖಂ ಚೈವ ಗಮಿಷ್ಯತಿ ॥ ೭೮ ॥
ಅನುಗ್ರಹಂ ವಿಧಾಯ್ಯೈವಮೃಷಿಣಾ ಸಹ ಕೇಶವಃ ।
ವಿವೇಶ ಸ್ವಪುರೀಂ ತತ್ರ ವಿಧಾಯೋಪಾಂತಿಕಂ ಮುನಿಂ ॥ ೭೯ ॥
ಸಾಪಿ ದೇವೀ ಚ ಸಂಬುಧ್ಯ ತದಾ ತಸ್ಯ ವಿಚೇಷ್ಟಿತಂ ।
ಅನುಗ್ರಹಾದ್ಭಗವತೋ ಬಭೂವ ವಿಗತಜ್ವರಾ ॥ ೮೦ ॥
ಯತಶ್ಚ ಮುಕ್ತಾ ದುಃಖೇನ ತತ್ರ ದೇವೀ ಹರಿಪ್ರಿಯಾ ।
ತತೋ ಭಾಗೀರಥೀ ಸಾ ತು ಗದಿತಾ ದುಃಖಮೋಚಿನೀ ॥ ೮೧ ॥
ಅಮಾವಾಸ್ಯಾಂ ಪೌರ್ಣಮಾಸ್ಯಾಂ ಯಸ್ತಸ್ಯಾಸ್ಸಂಗಮೇ ಶುಭೇ ।
ಸ್ನಾಯಾದಶೇಷದುಃಖಾತ್ತು ಸ ನರಃ ಪರಿಮುಚ್ಯತೇ ॥ ೮೨ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ನವಮ್ಯಾಂ ಚಾವಲೋಕಿತಾ ।
ನರಾಣಾಂ ರುಕ್ಮಿಣೀ ದೇವೀ ಸರ್ವಾನ್ಕಾಮಾನ್ಪ್ರಯಚ್ಛತಿ ॥ ೮೩ ॥

---

೭೭. ಮಹರ್ಷಿಯೆ! ನಾನು ವೈಕುಂಠಕ್ಕೆ ತೆರಳಲು ನನ್ನ ತೇಜಸ್ಸು ತ್ರಿವಿಕ್ರಮ ಮೂರ್ತಿಯನ್ನು ಸೇರುವುದು.

೭೮. ಈ ರುಕ್ಮಿಣಿಯು ಮರಳಿ ನನ್ನ ಮೂರ್ತಿಯ ಸಂಬಂಧವನು ಹೊಂದುವಳು. ಗುಣಗಳಿಂದ ಸಮುದ್ರನಿಗೆ ಸಮಾನಳಾದ ಈ ಭಾಗೀರಥಿಯು ಸಮಸ್ತ ದುಃಖಗಳನ್ನೂ ತ್ಯಜಿಸಿ ಸುಖಗೊಳ್ಳುವಳು".

೭೯. ಶ್ರೀಕೃಷ್ಣನು ಹೀಗೆ ಅನುಗ್ರಹಿಸಿ ಮುನಿಯೊಡನೆ ತನ್ನ ನಗರಿಯನ್ನು ಹೊಕ್ಕು ಅವನನ್ನು ಅಲ್ಲಿ ಸಮೀಪದಲ್ಲಿ ವಾಸಿಸುವಂತೆ ಮಾಡಿದನು.

೮೦. ಆ ರುಕ್ಮಿಣೀದೇವಿಯು ಆಗ ಕೃಷ್ಣನ ಕೆಲಸವನ್ನರಿತು ಆ ಭಗವಂತನ ಅನುಗ್ರಹದಿಂದ ವ್ಯಥೆಯಿಲ್ಲದವಳಾದಳು.

೮೧. ಅಲ್ಲಿ ಕೃಷ್ಣ ಪತ್ನಿಯಾದ ರುಕ್ಮಿಣಿಯು ದುಃಖಮುಕ್ತಳಾದ್ದರಿಂದ ಆ ಗಂಗೆಯು ದುಃಖಮೋಚನಿಯೆಂದು ಹೆಸರನ್ನು ಪಡೆದಳು.

೮೨. ಆ ಗಂಗಾ ಸಂಗಮದಲ್ಲಿ ಅಮಾವಾಸ್ಯೆ ಪೌರ್ಣಿಮಾ ದಿನಗಳಲ್ಲಿ ಮಿಂದವನು ಸಕಲ ದುಃಖಗಳಿಂದ ಮುಕ್ತನಾಗುವನು.

೮೩. ರುಕ್ಮಿಣೀದೇವಿಯು ಅಷ್ಟಮೀ, ನವಮೀ, ಚತುರ್ದಶೀ ದಿನಗಳಲ್ಲಿ ದರ್ಶನ ಮಾಡಿದ ಮಾನವನಿಗೆ ಸಕಲೇಷ್ಟಾರ್ಥಗಳನ್ನು ಕೊಡುವಳು.

ಇತ್ಯೇತತ್ಕಥಿತಂ ದೇವ್ಯಾ ಋಷಯೋ ದುಃಖಮೋಚನಂ ।
ಅನುಗ್ರಹಶ್ಚ ದೇವಸ್ಯ ಕಿಂ ಭೂಯಃ ಶ್ರೋತುಮಿಚ್ಛಥ ॥ ೮೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ರುಕ್ಮಿಣೀದುಃಖಮೋಚನವರ್ಣನಂ ನಾಮ
ತೃತೀಯೋಽಧ್ಯಾಯಃ

---

೮೪. ಋಷಿಗಳೇ ! ಹೀಗೆ ನಿಮಗೆ ದೇವಿಯ ದುಃಖ ನಿವಾರಣೆಯನ್ನೂ, ಕೃಷ್ಣನ ಅನುಗ್ರಹವನ್ನೂ ಹೇಳಿರುವೆನು. ಮರಳಿ ಏನನ್ನು ಕೇಳಲು ಬಯಸುವಿರಿ

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯೆದಲ್ಲಿ
ರುಕ್ಮಿಣೀದುಃಖಮೋಚನವರ್ಣನವೆಂಬ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಚತುರ್ಥೋಽಧ್ಯಾಯಃ

### ದ್ವಾರಕಾಯಾತ್ರಾವಿಧಿವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ಏವಂ ಸಂಪೂಜಿತಸ್ತೇನ ಹರಿಣಾ ಬ್ರಾಹ್ಮಣೋತ್ತಮಃ ।
ಉವಾಚ ಪರಿಸಂತುಷ್ಟೋ ವರಂ ಬ್ರೂಹೀತಿ ಕೇಶವಂ ॥ ೧ ॥

ಶ್ರೀ ಕೃಷ್ಣ ಉವಾಚ :—

ಯದಿ ತುಷ್ಟೋಽಸಿ ಭಗವನ್ಯದಿ ದೇಯೋ ವರೋ ಮಮ ।
ಸ್ಥಾತವ್ಯಮತ್ರ ಭವತಾ ನ ತ್ಯಕ್ತವ್ಯಂ ಕದಾಚನ ॥ ೨ ॥

ದುರ್ವಾಸಾ ಉವಾಚ :—

ಯದಿ ತಿಷ್ಠಾಮ್ಯಹಂ ಕೃಷ್ಣ ತಥಾ ತ್ವಮಪಿ ಕೇಶವ ।
ತಿಷ್ಠಸ್ವ ಷೋಡಶಕಲೋ ನಿತ್ಯಂ ಮದ್ವಚನೇನ ಹಿ ॥ ೩ ॥

ಶ್ರೀ ಕೃಷ್ಣ ಉವಾಚ :—

ಯೇಽತ್ರ ಪಶ್ಯಂತಿ ಭಕ್ತ್ಯಾ ತ್ವಾಂ ಮಾಂ ಚಾಪಿ ದ್ವಿಜಸತ್ತಮ ।
ಕಿಂ ದಾಸ್ಯಸಿ ಫಲಂ ತೇಷಾಂ ಭಾವಿನಾಂ ಭಗವನ್ವದ ॥ ೪ ॥

---

### ಕನ್ನಡದ ಅನುವಾದ

### ದ್ವಾರಕಾಯಾತ್ರಾವಿಧಿವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ಶ್ರೀಕೃಷ್ಣನು ಹೀಗೆ ಪೂಜಿಸಲು ದುರ್ವಾಸನು ಸಂತೋಷಗೊಂಡು ವರವನ್ನು ಕೇಳಿಕೊ ಎಂದನು.

೨. ಶ್ರೀಕೃಷ್ಣನು ಹೇಳುತ್ತಾನೆ :—ಪೂಜ್ಯನೆ! ನೀನು ಸಂತುಷ್ಟನಾಗಿ ವರವನ್ನೀಯುವುದಾದರೆ ಇಲ್ಲಿಯೆ ವಾಸಿಸು. ಒಂದು ವೇಳೆಯೂ ಈ ಸ್ಥಳವನ್ನು ಬಿಡಕೂಡದು.

೩. ದುರ್ವಾಸನು ಹೇಳುತ್ತಾನೆ :—ಕೃಷ್ಣ ! ನಾನಿಲ್ಲಿರಬೇಕಾದರೆ ನೀನೂ ನನ್ನ ಮಾತಿನಂತೆ ಷೋಡಶ ಕಲೆಗಳಿಂದ ಇಲ್ಲಿ ವಾಸಿಸು.

೪. ಶ್ರೀಕೃಷ್ಣನು ಹೇಳುತ್ತಾನೆ :—ಪೂಜ್ಯನೆ! ಇಲ್ಲಿ ನನ್ನನ್ನೂ, ನಿನ್ನನ್ನೂ ದರ್ಶನ ಮಾಡುವ ಭಕ್ತರಿಗೆ ನೀನು ಏನು ಫಲವನ್ನೀಯುವೆ? ಹೇಳು.

ದುರ್ವಾಸಾ ಉವಾಚ :—
ಯಃ ಸ್ನಾತ್ವಾ ಸಂಗಮೇ ಕೃಷ್ಣ ಗೋಮತ್ಯಾಃ ಸಾಗರಸ್ಯ ಚ ।
ತ್ವಾಂ ಮಾಂ ಸಮರ್ಚತಿ ನರಃ ಸರ್ವಪಾಪೈಃ ಸ ಮುಚ್ಯತೇ ॥ ೫ ॥
ತಥಾನ್ಯಚ್ಛೃಣು ಕೃಷ್ಣಾತ್ರ ಸ್ನಾತ್ವಾ ದಾಸ್ಯತಿ ಯದ್ಧನಂ ।
ಮಮ ದತ್ತಸ್ಯ ದೇವೇಶ ಪ್ರಾಪ್ನುಯಾತ್ಷೋಡಶೋತ್ತರಂ ॥ ೬ ॥
ಶ್ರೀ ಕೃಷ್ಣ ಉವಾಚ :—
ಯೋ ನರಃ ಪೂಜಯಿತ್ವಾ ತ್ವಾಂ ಪೂಜಯಿಷ್ಯತಿ ಮಾಮಿಹ ।
ತಸ್ಯ ಮುಕ್ತಿಂ ಪ್ರದಾಸ್ಯಾಮಿ ಯಾ ಸುರೈರಪಿ ದುರ್ಲಭಾ ॥ ೭ ॥
ಪ್ರಹ್ಲಾದ ಉವಾಚ :—
ಪರಸ್ಪರಂ ವರೌ ದತ್ವಾ ಕೃಷ್ಣದುರ್ವಾಸಸೌ ಮುದಾ ।
ತತಃ ಪ್ರಭೃತಿ ವಿಪ್ರೇಂದ್ರಾಸ್ತಸ್ಮಿನ್ಸ್ಥಾನೇ ಹ್ಯತಿಷ್ಠತಾಂ ।
ವರದಾನಮಿತಿ ಪ್ರೋಕ್ತಂ ತತ್ತೀರ್ಥಂ ಸರ್ವಕಾಮದಂ ॥ ೮ ॥
ವರದಾನೇ ನರಃ ಸ್ನಾತೋ ಗೋಸಹಸ್ರಫಲಂ ಲಭೇತ್ ।
ವಿಷ್ಣುದೂರ್ವಾಸಸೋರ್ಯತ್ರ ವರದಾನಮಭೂತ್ಪುರಾ ॥ ೯ ॥
ತದಾಪ್ರಭೃತಿ ವಿಪ್ರೇಂದ್ರಾಸ್ತಿಷ್ಠತೇ ದ್ವಾರಕಾಂ ಹರಿಃ ।
ದುರ್ವಾಸಸಾ ಗಿರಾ ಬದ್ಧೋ ನ ಜಹಾತಿ ಕದಾಚನ ॥ ೧೦ ॥

---

೫. ದುರ್ವಾಸನು ಹೇಳುತ್ತಾನೆ :—ಕೃಷ್ಣ ! ಗೋಮತೀ ಸಮುದ್ರಗಳ ಸಂಗಮದಲ್ಲಿ ಮಿಂದು ನಿನ್ನನ್ನೂ ನನ್ನನ್ನೂ ಪೂಜಿಸುವ ಮಾನವನು ಸಕಲ ಪಾಪಗಳಿಂದ ಮುಕ್ತನಾಗುವನು.

೬. ಕೃಷ್ಣ ! ಹಾಗೆಯೇ ಇನ್ನೊಂದನ್ನು ಕೇಳು. ಇಲ್ಲಿ ಮಿಂದು ನನಗೆ ಧನವನ್ನು ದಾನಮಾಡುವವನು ಹದಿನಾರರಷ್ಟು ಹೆಚ್ಚು ಫಲವನ್ನು ಪಡೆಯುವನು.

೭. ಶ್ರೀಕೃಷ್ಣನು ಹೇಳುತ್ತಾನೆ :—ಇಲ್ಲಿ ನಿನ್ನನ್ನು ಪೂಜಿಸಿ ನನ್ನನ್ನು ಪೂಜಿಸುವವನಿಗೆ ದೇವತೆಗಳಿಗೂ ಹೊಂದಲಾಗದ ಮುಕ್ತಿಯನ್ನೀಯುವೆನು.

೮. ಪ್ರಹ್ಲಾದನು ಹೇಳುತ್ತಾನೆ :—ಕೃಷ್ಣ ದುರ್ವಾಸರು ಹೀಗೆ ಸಂತೋಷದಿಂದ ವರವನ್ನಿತ್ತು ಅದು ಮೊದಲ್ಗೊಂಡು ಅಲ್ಲಿ ನೆಲಸಿದರು. ಆ ತೀರ್ಥವು ಸಕಲೇಷ್ಟಾರ್ಥಗಳನ್ನೀಯುವ ವರದಾನ ತೀರ್ಥವೆಂದು ವಿಖ್ಯಾತವಾಯಿತು.

೯. ಹಿಂದೆ ಕೃಷ್ಣ ದುರ್ವಾಸರು ವರವನ್ನಿತ್ತ ತೀರ್ಥದಲ್ಲಿ ಮಿಂದ ಮಾನವನು ಸಾವಿರ ಗೋವುಗಳನ್ನು ದಾನ ಮಾಡಿದ ಫಲವನ್ನು ಪಡೆಯುವನು.

೧೦. ಬ್ರಾಹ್ಮಣೋತ್ತಮರೆ ! ಅದು ಮೊದಲ್ಗೊಂಡು ದುರ್ವಾಸನಿಂದ ನಿರ್ಬದ್ಧನಾದ ಕೃಷ್ಣನು ಆ ದ್ವಾರಕೆಯಲ್ಲಿ ವಾಸಿಸುವನು. ಒಂದು ಸಾರಿಯೂ ಅದನ್ನು ತ್ಯಜಿಸುವುದಿಲ್ಲ.

ಯತ್ರ ತ್ರೈವಿಕ್ರಮೀ ಮೂರ್ತಿರ್ವಹತೇ ಯತ್ರ ಗೋಮತೀ ।
ನರಾ ಮುಕ್ತಿಂ ಪ್ರಯಾಸ್ಯಂತಿ ಚಕ್ರತೀರ್ಥೇನ ಸಂಗತಾಃ ॥ ೧೧ ॥
ಕಲೇವರಂ ಪರಿತ್ಯಕ್ತಂ ಪ್ರಭಾಸೇ ಹರಿಣಾ ಯದಾ ।
ಕಲಾಭಿಃ ಸಹಿತಂ ತೇಜಸ್ತಸ್ಯಾಂ ಮೂರ್ತೌ ನಿವೇಶಿತಂ ॥ ೧೨ ॥
ತಸ್ಮಾತ್ಕಲಿಯುಗೇ ವಿಪ್ರಾ ನಾನ್ಯತ್ರ ಪ್ರಾಪ್ಯತೇ ಹರಿಃ ।
ಯದಿ ಕಾರ್ಯಂ ಹಿ ಕೃಷ್ಣೇನ ತತ್ರ ಗಚ್ಛತ ಮಾ ಚಿರಂ ॥ ೧೩ ॥

ಋಷಯ ಊಚುಃ :—

ಸಾಧು ಭಾಗವತಶ್ರೇಷ್ಠ ಸಾಧು ಮಾರ್ಗಪ್ರದರ್ಶಕ ।
ಯತ್ತ್ವಯಾ ಹಿ ಪರಿಜ್ಞಾತಂ ತನ್ನ ಜಾನಾತಿ ಕಶ್ಚನ ॥ ೧೪ ॥
ಕಿಂ ಫಲಂ ಗಮನೇ ತಸ್ಯಾಂ ಕಿಂ ಫಲಂ ಕೃಷ್ಣದರ್ಶನೇ ।
ಕಾನಿ ತೀರ್ಥಾನಿ ತತ್ರೈವ ಕೇ ದೇವಾಸ್ತದ್ವದಸ್ವ ನಃ ॥ ೧೫ ॥
ಕಸ್ಮಿನ್ಮಾಸೇ ತಿಥೌ ಕಸ್ಯಾಂ ಕಸ್ಮಿನ್ಪರ್ವಣಿ ಮಾನವೈಃ ।
ಗಂತವ್ಯಂ ಕಾನಿ ದೇಯಾನಿ ದಾನಾನಿ ದನುಜರ್ಷಭ ॥ ೧೬ ॥

ಸೂತ ಉವಾಚ :—

ಇತಿ ಪೃಷ್ಟಸ್ತದಾ ತೈಸ್ತು ಮಹಾಭಾಗವತೋಽಸುರಃ ।
ಕಥಯಾಮಾಸ ವಿಪ್ರೇಭ್ಯೋ ಭಗವದ್ಭಕ್ತಿಸಂಯುತಃ ॥ ೧೭ ॥

---

೧೧. ಅಲ್ಲಿ ತ್ರಿವಿಕ್ರಮನ ಮೂರ್ತಿಯಿರುವುದು. ಗೋಮತೀ ನದಿಯು ಹರಿತ್ತಿರುವುದು. ಚಕ್ರ ತೀರ್ಥವನ್ನು ಸೇರಿದ ಮಾನವರು ಮುಕ್ತಿಯನ್ನು ಪಡೆಯುವರು.

೧೨. ಕೃಷ್ಣನು ಪ್ರಭಾಸಕ್ಷೇತ್ರದಲ್ಲಿ ದೇಹವನ್ನು ತ್ಯಜಿಸಿದಾಗ ಅವನ ಕಲೆಗಳಿಂದ ಸಹಿತವಾದ ತೇಜಸ್ಸು ಆ ತ್ರಿವಿಕ್ರಮಮೂರ್ತಿಯಲ್ಲಿ ಇಡಲ್ಪಟ್ಟಿತು.

೧೩. ವಿಪ್ರರೆ! ಆದ್ದರಿಂದ ಕಲಿಯುಗದಲ್ಲಿ ಬೇರೆ ಕಡೆಯಲ್ಲಿ ಹರಿಯು ಸಿಕ್ಕುವುದಿಲ್ಲ. ನಿಮಗೆ ಕೃಷ್ಣನಿಂದ ಕಾರ್ಯವಾಗಬೇಕಾದರೆ ಶೀಘ್ರವಾಗಿ ಅಲ್ಲಿಗೆ ತೆರಳಿರಿ.

೧೪. ಋಷಿಗಳು ಹೇಳುತ್ತಾರೆ:—ಭಾಗವತೋತ್ತಮ! ಮಾರ್ಗದರ್ಶಕ! ಒಳ್ಳೆಯದು ಒಳ್ಳೆಯದು. ನೀನು ತಿಳಿದಿರುವುದನ್ನು ಯಾರೂ ತಿಳಿದಿರುವುದಿಲ್ಲ.

೧೫. ಅಲ್ಲಿಗೆ ಹೋಗುವುದರಿಂದ ಏನು ಫಲವು ಲಭಿಸುವುದು? ಕೃಷ್ಣನ ದರ್ಶನದಿಂದ ಎಂತಹ ಫಲವು ಆಗುವುದು? ಅಲ್ಲಿ ಯಾವ ತೀರ್ಥಗಳಿರುವುವು? ಯಾವ ದೇವತೆಗಳಿರುವರು? ಅದನ್ನು ನಮಗೆ ಹೇಳು.

೧೬. ದೈತ್ಯರಾಜ! ಅಲ್ಲಿಗೆ ಯಾವ ತಿಂಗಳು ಯಾವ ತಿಥಿಯಲ್ಲಿ ಯಾವ ಪರ್ವಕಾಲದಲ್ಲಿ ಮಾನವರು ಹೋಗಬೇಕು. ಯಾವದಾನವನ್ನು ಕೊಡಬೇಕು?

೧೭. ಸೂತನು ಹೇಳುತ್ತಾನೆ:—ಆ ಮುನಿಗಳು ಹೀಗೆ ಪ್ರಶ್ನಿಸಲು ಮಹಾಭಾಗವತನಾದ ಪ್ರಹ್ಲಾದನು ಬ್ರಾಹ್ಮಣರನ್ನು ಕುರಿತು ಭಕ್ತಿಯಿಂದ ಇಂತೆಂದನು.

ಪ್ರಹ್ಲಾದ ಉವಾಚ :—

ಭೋ ಭೂಮಿದೇವಾಃ ಶೃಣುತ ಪರಂ ಗುಹ್ಯಂ ಸನಾತನಂ ।
ಯತ್ಕಸ್ಯಚಿನ್ನ ಚಾಖ್ಯಾತಂ ತದ್ವದಾಮಿ ಸುವಿಸ್ತರಾತ್ ॥ ೧೮ ॥
ಯದಾ ಮತಿಂ ಚ ಕುರುತೇ ದ್ವಾರಕಾಗಮನಂ ಪ್ರತಿ ।
ತದಾ ನರಕನಿರ್ಮುಕ್ತಾ ಗಾಯಂತಿ ಪಿತರೋ ದಿವಿ ॥ ೧೯ ॥
ಯಾವತ್ಪದಾನಿ ಕೃಷ್ಣಸ್ಯ ಮಾರ್ಗೇ ಗಚ್ಛತಿ ಮಾನವಃ ।
ಪದೇ ಪದೇಽಶ್ವಮೇಧಸ್ಯ ಯಜ್ಞಸ್ಯ ಲಭತೇ ಫಲಂ ॥ ೨೦ ॥
ಯಾತ್ರಾರ್ಥಂ ದೇವದೇವಸ್ಯ ಯಃ ಪ್ರೇರಯತಿ ಚಾಪರಾನ್ ।
ಮಾನವಾನ್ನಾತ್ರ ಸಂದೇಹೋ ಲಭತೇ ವೈಷ್ಣವಂ ಪದಂ ॥ ೨೧ ॥
ದ್ವಾರಕಾಂ ಗಚ್ಛಮಾನಸ್ಯ ಯೋ ದದಾತಿ ಪ್ರತಿಶ್ರಯಂ ।
ತಥೈವ ಮಧುರಾಂ ವಾಚಂ ನಂದತೇ ಕ್ರೀಡತೇ ಹಿ ಸಃ ॥ ೨೨ ॥
ಅಧ್ವನಿ ಶ್ರಾಂತದೇಹಸ್ಯ ವಾಹನಂ ಯಃ ಪ್ರಯಚ್ಛತಿ ।
ಹಂಸಯುಕ್ತೇನ ಸ ನರೋ ವಿಮಾನೇನ ದಿವಂ ವ್ರಜೇತ್ ॥ ೨೩ ॥
ಯಾತ್ರಾಯಾಂ ಗಚ್ಛಮಾನಸ್ಯ ಮಧ್ಯಾಹ್ನೇ ಕ್ಷುಧಿತಸ್ಯ ಚ ।
ಅನ್ನಂ ದದಾತಿ ಯೋ ಭಕ್ತ್ಯಾ ಶೃಣು ತಸ್ಯಾಪಿ ಯದ್ಭವೇತ್ ॥ ೨೪ ॥

---

೧೮. ಪ್ರಹ್ಲಾದನು ಹೇಳುತ್ತಾನೆ:—ಎಲೈ ಬ್ರಾಹ್ಮಣರೆ! ಯಾರಿಗೂ ಹೇಳದ ಅತಿ ರಹಸ್ಯವಾದ ವಿಷಯವನ್ನು ಕೇಳಿರಿ. ವಿಸ್ತಾರವಾಗಿ ಹೇಳುವೆನು.

೧೯. ಮನುಷ್ಯನು ದ್ವಾರಕೆಗೆ ಹೋಗಲು ಆಲೋಚಿಸಿದಾಗ ಅವನ ಪಿತೃಗಳು ನರಕಮುಕ್ತರಾಗಿ ದೇವಲೋಕದಲ್ಲಿ ಹಾಡುತ್ತಾರೆ.

೨೦. ಮನುಷ್ಯನು ಕೃಷ್ಣನ ದಾರಿಯಲ್ಲಿ ಎಷ್ಟು ಹೆಜ್ಜೆಗಳನ್ನು ಇಡುವನೋ ಅವನು ಪ್ರತಿಹೆಜ್ಜೆಯಲ್ಲಿಯೂ ಅಶ್ವಮೇಧಯಜ್ಞದ ಫಲವನ್ನು ಪಡೆಯುತ್ತಾನೆ.

೨೧. ಶ್ರೀ ಕೃಷ್ಣನ ಯಾತ್ರೆಗಾಗಿ ಇತರ ಮನುಷ್ಯರನ್ನು ಪ್ರೇರಿಸುವವನು ವೈಷ್ಣವಲೋಕವನ್ನು ಪಡೆಯುವನು.

೨೨. ದ್ವಾರಕೆಗೆ ಹೋಗುವವನಿಗೆ ವಾಸಸ್ಥಳವನ್ನು ಕೊಡುವವನೂ, ಸವಿನುಡಿಯನ್ನು ನುಡಿಯುವನೂ ಆನಂದಗೊಳ್ಳುವರು.

೨೩. ದ್ವಾರಕೆ ಹೋಗುವಾಗ ದಾರಿಯಲ್ಲಿ ಬಳಲಿದವನಿಗೆ ವಾಹನವನ್ನೀಯುವವನು ಹಂಸಸಹಿತವಾದ ವಿಮಾನದಿಂದ ದೇವಲೋಕಕ್ಕೆ ತೆರಳುವನು.

೨೪. ಯಾತ್ರೆ ಹೋಗುತ್ತಿರುವಾಗ ಮಧ್ಯಾಹ್ನಕಾಲದಲ್ಲಿ ಭಕ್ತಿಯಿಂದ ಅನ್ನ ನೀಡಿದವನಿಗಾಗುವ ಪುಣ್ಯವನ್ನು ಕೇಳು.

ಗಯಾಶ್ರಾದ್ಧೇನ ಯತ್ಪುಣ್ಯಂ ಲಭತೇ ಮಾನವೋ ಭುವಿ ।
ಅನ್ನದಾನೇನ ತತ್ಪುಣ್ಯಂ ಪಿತೄಣಾಂ ತೃಪ್ತಿರಕ್ಷಯಾ ॥ ೨೫ ॥
ಉಪಾನಹೌ ತು ಯೋ ದದ್ಯಾತ್ ದ್ವಾರಕಾಂ ಪ್ರತಿ ಗಚ್ಛತಾಂ ।
ಕೃಷ್ಣಪ್ರಸಾದಾತ್ಸ ನರೋ ಗಜಸ್ಕಂಧೇನ ಗಚ್ಛತಿ ॥ ೨೬ ॥
ವಿಘ್ನಮಾಚರತೇ ಯಸ್ತು ದ್ವಾರಕಾಂ ಪ್ರತಿ ಗಚ್ಛತಾಂ ।
ನರಕೇ ಮಜ್ಜತೇ ಮೂಢಃ ಕಲ್ಪಮಾತ್ರಂ ತು ರೌರವೇ ॥ ೨೭ ॥
ಮಾರ್ಗಸ್ಥಿತಸ್ಯಯೋ ಧನ್ಯಃ ಪ್ರಯಚ್ಛತಿ ಕಮಂಡಲುಂ ।
ಪ್ರಪಾದಾನಸಹಸ್ರಸ್ಯ ಫಲಮಾಪ್ನೋತಿ ಮಾನವಃ ॥ ೨೮ ॥
ಯಾತ್ರಾಯಾಂ ಗಚ್ಛಮಾನಸ್ಯ ಪಾದಾಭ್ಯಂಗಂ ದದಾತಿ ಯಃ ।
ಪಾದಪ್ರಕ್ಷಾಲನಂ ಚೈವ ಸರ್ವಾನ್ಕಾಮಾನವಾಪ್ನುಯಾತ್ ॥ ೨೯ ॥
ಗಾಥಾಂ ಶೃಣೋತಿ ಯೋ ವಿಷ್ಣೋರ್ಗೀತಂ ಚ ಗಾಯತಃ ಪಥಿ ।
ದಾನಂ ದದಾತಿ ವಿಪ್ರೇಂದ್ರಾಸ್ತಸ್ಮಾದ್ಧನ್ಯತರೋ ನ ಹಿ ॥ ೩೦ ॥
ಕೈಲಾಸಶಿಖರಾವಾಸಂ ಶ್ವೇತಾಭ್ರಮಿವ ನಿರ್ಮಲಂ ।
ಪ್ರಾಸಾದಂ ಕೃಷ್ಣದೇವಸ್ಯ ಯಃ ಪಶ್ಯತಿ ನರೋತ್ತಮಃ ॥ ೩೧ ॥

---

೨೫. ಮಾನವನು ಗಯಾಶ್ರಾದ್ಧದಿಂದ ಹೊಂದುವ ಪುಣ್ಯವನ್ನು ಅನ್ನದಾನದಿಂದ ಪಡೆಯುವನು. ಆದರಿಂದ ಪಿತೃಗಳಿಗೆ ಶಾಶ್ವತ ತೃಪ್ತಿಯು ಲಭಿಸುವುದು.

೨೬. ದ್ವಾರಕೆಗೆ ಹೋಗುವವರಿಗೆ ಪಾದರಕ್ಷೆಯನ್ನು ದಾನಮಾಡುವವನು ಕೃಷ್ಣನ ಅನುಗ್ರಹದಿಂದ ಆನೆಯ ಮೇಲೆ ಪ್ರಯಾಣಮಾಡುವನು.

೨೭. ದ್ವಾರಕೆಗೆ ಹೋಗುವವರಿಗೆ ವಿಘ್ನಮಾಡುವ ಮೂಢನು ಕಲ್ಪ ಕಾಲದವರೆಗೆ ರೌರವ ನರಕದಲ್ಲಿ ಮುಳುಗುತ್ತಾನೆ.

೨೮. ಮಾರ್ಗದಲ್ಲಿರುವವನಿಗೆ ಕಮಂಡಲುವನ್ನು ದಾನಮಾಡುವವನು ಸಾವಿರ ಅರವಟ್ಟಿಗೆಗಳನ್ನು ದಾನಮಾಡಿದ ಫಲವನ್ನು ಪಡೆಯುವನು.

೨೯. ಯಾತ್ರಿಕನಿಗೆ ಪಾದಾಭ್ಯಂಗವನ್ನೂ, ಪಾದಪ್ರಕ್ಷಾಳನವನ್ನೂ ಕೊಡುವವನು ಸಕಲೇಷ್ಟಾರ್ಥಗಳನ್ನೂ ಹೊಂದುವನು.

೩೦. ದಾರಿಯಲ್ಲಿ ಹಾಡುತ್ತಿರುವವನಿಂದ ವಿಷ್ಣುವಿನ ಮೇಲಿನ ಗಾಥೆಯನ್ನು ಕೇಳುವನು, ಉತ್ತಮ ಬ್ರಾಹ್ಮಣರಿಗೆ ದಾನಮಾಡಿದವನು ಇವರಿಬ್ಬರಿಗಿಂತ ಧನ್ಯನಿಲ್ಲ.

೩೧. ಕೈಲಾಸ ಶಿಖರದಲ್ಲಿರುವ । ಶ್ವೇತ ಮೇಘದಂತೆ ನಿರ್ಮಲವಾದ ಆಲಯವನ್ನು ನೋಡುವವನಿಗಿಂತ ಧನ್ಯನಿಲ್ಲ.

ದೂರಾದ್ಧೇಮಮಯಂ ದೃಷ್ಟ್ವಾ ಕಲಶಂ ಧ್ವಜಸಂಯುತಂ ।
ವಾಹನಂ ಸುಪರಿತ್ಯಜ್ಯ ಲುಠತೇ ಧರಣೀಗತಃ ॥ ೩೨ ॥
ಪಂಚಸೂನಾಕೃತಂ ಪಾಪಂ ತಥಾऽಧರ್ಮಕೃತಂ ಚ ಯತ್ ।
ಕೃಮಿಕೀಟಪತಂಗಾಶ್ಚ ನಿಹತಾಃ ಪಥಿ ಗಚ್ಛತಾ ॥ ೩೩ ॥
ಪರಾನ್ನಂ ಪರಪಾನೀಯಮಸ್ಪೃಶ್ಯಸ್ಪರ್ಶಸಂಗಮಂ ।
ತತ್ಸರ್ವಂ ನಾಶಮಾಪ್ನೋತಿ ಭಗವತ್ಕೇತುದರ್ಶನಾತ್ ॥ ೩೪ ॥
ಪಠೇನ್ನಾಮಸಹಸ್ರಂ ತು ಸ್ತವರಾಜಮಥಾಪಿ ವಾ ।
ಗಜೇಂದ್ರಮೋಕ್ಷಣಂ ಚೈವ ಪಥಿ ಗಚ್ಛನ್ನನೈಃ ಶನೈಃ ॥ ೩೫ ॥
ಗಾಯಮಾನೋ ಭಗವತಃ ಪ್ರಾದುರ್ಭಾವಾನನೇಕಧಾ ।
ನೃತ್ಯದ್ಭಿರ್ಹರ್ಷಸಂಯುಕ್ತೈರ್ಹರ್ಷ್ಯಮಾಣಃ ಪುನಃಪುನಃ ।
ಸ್ವಯಂ ನೃತ್ಯನ್ಹರ್ಷಯುಕ್ತೋ ಭಕ್ತೋ ಗಚ್ಛೇದ್ಧರೇಃ ಪುರಂ ॥ ೩೬ ॥
ವಿಷ್ಣೋಃ ಕ್ರೀಡಾಕರಂ ಸ್ಥಾನಂ ಭುಕ್ತಿಮುಕ್ತಿಪ್ರದಾಯಕಂ ।
ಯಸ್ಮಿನ್ದೃಷ್ಟೇ ಕಲೌ ನೄಣಾಂ ಮುಕ್ತಿರೇವೋಪಜಾಯತೇ ॥ ೩೭ ॥

ಪ್ರಹ್ಲಾದ ಉವಾಚ :—

ಪೂರ್ವಂ ಹಿ ದೇವರಾಜೇನ ಬೃಹಸ್ಪತಿರುದಾರಧೀಃ ।
ಪ್ರಣಮ್ಯ ಪರಯಾ ಭಕ್ತ್ಯಾ ಪೃಷ್ಟಶ್ಚ ಸ ಮಹಾಮತಿಃ ॥ ೩೮ ॥

---

೩೨–೩೪. ದೂರದಿಂದಲೇ ಧ್ವಜದಿಂದ ಕೂಡಿರುವ ಸುವರ್ಣ ಕಲಶವನ್ನು ನೋಡಿ ವಾಹನವನ್ನು ತ್ಯಜಿಸಿ ಭೂಮಿಯಲ್ಲಿ ಹೊರಳಾಡುವವನ ಪಂಚಸೂನಾ ಸಂಬಂಧವಾದ ಪಾಪವೂ, ಅಧರ್ಮದಿಂದೆಸಗಿದ ದುರಿತವೂ, ದಾರಿಯಲ್ಲಿ ನಡೆಯುವಾಗ ಕ್ರಿಮಿ ಕೀಟ ಪತಂಗಗಳನ್ನು ಕೊಂದ ಪಾಪವೂ, ಪರಾನ್ನ, ಪರರ ನೀರು ಇವುಗಳನ್ನು ತೆಗೆದುಕೊಂಡ ಪಾಪವೂ, ಅಸ್ಪೃಶ್ಯ ಸ್ಪರ್ಶದಿಂದುಂಟಾದ ಪಾಪವೂ ಪರಿಹಾರವಾಗುವುವು.

೩೫–೩೭. ಭಕ್ತನು ಭಕ್ತಿ ಮುಕ್ತಿಗಳನ್ನೀಯುವ ಕೃಷ್ಣನ ಪಟ್ಟಣಕ್ಕೆ ಸಹಸ್ರನಾಮ, ಸ್ತವರಾಜ, ಅಥವಾ ಗಜೇಂದ್ರಮೋಕ್ಷ ಇವುಗಳನ್ನು ಮೆಲ್ಲ ಮೆಲ್ಲನೆ ಉಚ್ಚರಿಸುತ್ತ, ವಿಷ್ಣುವಿನ ಅನೇಕ ಅವತಾರಗಳನ್ನು ಕೊಂಡಾಡುತ್ತ ಸಂತೋಷದಿಂದ ಕುಣಿಯುತ್ತಿರುವ ಜನರೊಡನೆ ತಾನೂ ಕುಣಿಯುತ್ತ ಹೋಗಬೇಕು. ಕಲಿಯುಗದಲ್ಲಿ ಆ ಹರಿಯ ಪಟ್ಟಣವನ್ನು ನೋಡಿದರೆ ಮಾನವರಿಗೆ ಮೋಕ್ಷವು ಲಭಿಸುವುದು.

೩೮. ಪ್ರಹ್ಲಾದನು ಹೇಳುತ್ತಾನೆ :—ಹಿಂದೆ ಇಂದ್ರನು ಪ್ರಾಜ್ಞನಾದ ಬೃಹಸ್ಪತಿಯನ್ನು ಭಕ್ತಿಯಿಂದ ವಂದಿಸಿ ಹೀಗೆ ಪ್ರಶ್ನಿಸಿದನು.

ಇಂದ್ರ ಉವಾಚ :—

ದ್ವಾರಕಾಯಾಶ್ಚ ಮಾಹಾತ್ಮ್ಯಂ ಕಥಯಸ್ವ ಪ್ರಸಾದತಃ ।
ಚತುರ್ಯುಗಂ ಯಥಾ ಭಾಗೈರ್ಧರ್ಮವೃದ್ಧಿಂ ಜನೋ ಲಭೇತ್ ॥ ೩೯ ॥
ಏತಚ್ಛ್ರುತ್ವಾ ಮಹೇಂದ್ರಸ್ಯ ವಚನಂ ಮುನಿಸತ್ತಮಾಃ ।
ಬೃಹಸ್ಪತಿರುವಾಚೈನಂ ಮಹೇಂದ್ರಂ ದೇವಸಂವೃತಂ ॥ ೪೦ ॥

ಬೃಹಸ್ಪತಿರುವಾಚ :—

ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚ ಸುರಸತ್ತಮ ।
ಚತುರ್ಯುಗಮಿದಂ ಪ್ರೋಕ್ತಂ ತತ್ವತೋ ಮುನಿಸತ್ತಮೈಃ ॥ ೪೧ ॥
ಕೃತೇ ಧರ್ಮಶ್ಚತುಷ್ಪಾದೋ ವೇದಾದಿಫಲಮೇವ ಚ ।
ತೀರ್ಥಂ ದಾನಂ ತಪೋ ವಿದ್ಯಾ ಧ್ಯಾನಮಾಯುರರೋಗತಾ ॥ ೪೨ ॥
ಪಾದಹೀನಂ ಸರ್ವಮೇತದ್ಯುಗಂ ತ್ರೇತಾಭಿಧಂ ಪ್ರಭೋ ।
ಪಾದದ್ವಯಂ ದ್ವಾಪರೇ ತು ಸರ್ವಸ್ಯೈತಸ್ಯ ವಾಸವ ॥ ೪೩ ॥
ಪಾದೇನೈಕೇನ ತತ್ಸರ್ವಂ ವಿಭಾಗೇ ಪ್ರಥಮೇ ಕಲೌ ।
ಊರ್ಧ್ವಂ ವಿನಾಶಃ ಸರ್ವಸ್ಯ ಭವಿಷ್ಯತಿ ನ ಸಂಶಯಃ ॥ ೪೪ ॥

---

೩೯. ಇಂದ್ರನು ಹೇಳುತ್ತಾನೆ:—ದ್ವಾರಕೆಯ ಮಾಹಾತ್ಮ್ಯವನ್ನು ಅನುಗ್ರಹಿಸಿ ಹೇಳು. ಅದರಿಂದ ಜನರು ನಾಲ್ಕು ಯುಗಗಳಲ್ಲಿ ಅಂಶಾನುಸಾರವಾಗಿ ಧರ್ಮದ ವೃದ್ಧಿಯನ್ನು ಹೊಂದಿಯಾರು.

೪೦. ಮುನಿವರ್ಯರೆ! ಬೃಹಸ್ಪತಿಯು ಮಹೇಂದ್ರನ ಈ ಮಾತನ್ನು ಕೇಳಿ ದೇವತೆಗಳಿಂದ ಕೂಡಿರುವ ಅವನನ್ನು ಕುರಿತು ಇಂತೆಂದನು.

೪೧. ಬೃಹಸ್ಪತಿಯು ಹೇಳುತ್ತಾನೆ :—ದೇವರಾಜ! ಮುನಿವರ್ಯರು ಕೃತ, ತ್ರೇತಾ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳನ್ನು ಹೇಳುತ್ತಾರೆ.

೪೨. ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳಿಂದ ಕೂಡಿರುವುದು. ವೇದಾದಿ ಫಲವೂ, ತೀರ್ಥ, ದಾನ, ತಪಸ್ಸು, ವಿದ್ಯಾ, ಧ್ಯಾನ ಫಲಗಳೂ ಆಯುಸ್ಸು, ಆರೋಗ್ಯಗಳೂ ಸಂಪೂರ್ಣವಾಗಿರುವುವು.

೪೩. ತ್ರೇತಾಯುಗದಲ್ಲಿ ಧರ್ಮವು ಮೂರು ಪಾದಗಳಿಂದಲೂ ದ್ವಾಪರಯುಗದಲ್ಲಿ ಎರಡು ಪಾದಗಳಿಂದಲೂ ಇರುವುದು.

೪೪. ಕಲಿಯುಗದ ಆದಿಯಲ್ಲಿ ಧರ್ಮವು ಒಂದು ಪಾದದಿಂದಿರುವುದು. ಅನಂತರ ಧರ್ಮವು ಸಂಪೂರ್ಣವಾಗಿ ನಾಶವಾಗುವುದು.

ಮಂತ್ರಾಸ್ತೀರ್ಥಾನಿ ಯಜ್ಞಾಶ್ಚ ತಪೋ ದೈವಾದಿಕಂ ತಥಾ ।
ಪ್ರಗಚ್ಛಂತಿ ಸಮುಚ್ಛೇದಂ ವೇದಾಃ ಶಾಸ್ತ್ರಾಣಿ ಚೈವ ಹಿ ॥ ೪೫ ॥
ಮ್ಲೇಚ್ಛಪ್ರಾಯಾಶ್ಚ ಭೂಪಾಲಾ ಭವಿಷ್ಯಂತ್ಯಮರಾಧಿಪ ।
ಲೋಕಃ ಕರಿಷ್ಯತೇ ನಿಂದಾಂ ಸಾಧೂನಾಂ ವ್ರತಚಾರಿಣಾಂ ॥ ೪೬ ॥
ಪ್ರಹ್ಲಾದ ಉವಾಚ :—
ಶ್ರುತ್ವಾ ಬೃಹಸ್ಪತೇರ್ವಾಕ್ಯಮೇತತ್ತೀರ್ಥಸ್ಯ ಭೋ ದ್ವಿಜಾಃ ।
ಪ್ರಕಂಪಿತಾಃ ಸುರಾಃ ಸರ್ವೇ ಮ್ಲೇಚ್ಛಸಂಸರ್ಗಜಾದ್ಭಯಾತ್ ॥ ೪೭ ॥
ಬೃಹಸ್ಪತಿಂ ಸುರಗುರುಂ ಪಪ್ರಚ್ಛುರ್ವಿನಯಾನ್ವಿತಾಃ ।
ಮ್ಲೇಚ್ಛಸಂಸರ್ಗಜೋ ದೋಷೋ ಗಂಗಯಾಪಿ ನ ಪೂಯತೇ ॥ ೪೮ ॥
ಕಥಯಸ್ವ ಪ್ರಸಾದೇನ ಸ್ಥಾನಂ ಕಲಿವಿವರ್ಜಿತಂ ।
ಯತ್ರ ಗತ್ವಾ ನಿವತ್ಸ್ಯಾಮೋ ಯಾಸ್ಯಾಮೋ ನಿರ್ವೃತಿಂ ಪರಾಂ ॥ ೪೯ ॥
ಯೇನ ದುಃಖವಿನಿರ್ಮುಕ್ತಾ ಭವಿಷ್ಯಾಮೋ ಗತವ್ಯಥಾಃ ।
ಕೃಪಯಾ ಸುಮುಖೋ ಭೂತ್ವಾ ಬ್ರೂಹಿ ತೀರ್ಥಂ ಹಿತಾಯ ನಃ ॥ ೫೦ ॥
ಪ್ರಹ್ಲಾದ ಉವಾಚ :—
ಏತಚ್ಛ್ರುತ್ವಾ ಸುರೇಂದ್ರಸ್ಯ ವಾಕ್ಯಮಂಗಿರಸಾಂ ವರಃ ।
ಚಿರಂ ಧ್ಯಾತ್ವಾ ಜಗಾದೇದಂ ವಾಕ್ಯಂ ದೇವಪುರೋಹಿತಃ ॥ ೫೧ ॥

---

೪೫. ಆ ಕಲಿಯುಗದಲ್ಲಿ ಮಂತ್ರ, ತೀರ್ಥ, ಯಜ್ಞ, ತಪಸ್ಸು, ದೈವಾದಿಗಳು, ವೇದಶಾಸ್ತ್ರ ಇವುಗಳೆಲ್ಲ ಹಾಳಾಗುವುವು.

೪೬. ದೇವೇಂದ್ರ ! ರಾಜರು ಮ್ಲೇಚ್ಛಪ್ರಾಯರಾಗುವರು. ಜನರು ವ್ರತವನ್ನಾಚರಿಸುವ ಸಜ್ಜನರನ್ನು ನಿಂದಿಸುವರು.

೪೭. ಪ್ರಹ್ಲಾದನು ಹೇಳುತ್ತಾನೆ :—ಬ್ರಾಹ್ಮಣರೆ ! ಸಮಸ್ತ ದೇವತೆಗಳು ಈ ತೀರ್ಥಕ್ಕೆ ಮ್ಲೇಚ್ಛರ ಸಂಬಂಧವಾಗುವುದನ್ನರಿತು ಭಯದಿಂದ ನಡುಗಿದರು.

೪೮. ಅವರು ಬೃಹಸ್ಪತಿಯನ್ನು ಕುರಿತು ವಿನಯದಿಂದ ಹೀಗೆ ಪ್ರಶ್ನಿಸಿದರು. ಮ್ಲೇಚ್ಛಸಂಸರ್ಗದಿಂದುಂಟಾದ ದೋಷವನ್ನು ಗಂಗೆಯೂ ಹೋಗಲಾಡಿಸಲಾರಳು.

೪೯. ಕಲಿಯಿಲ್ಲದ ಸ್ಥಳವನ್ನು ಅನುಗ್ರಹಿಸಿ ಹೇಳು. ಅಲ್ಲಿಗೆ ನಾವು ಹೋಗಿ ವಾಸಿಸುತ್ತ ಅತಿಶಯ ಸುಖವನ್ನು ಹೊಂದುವೆವು.

೫೦. ಅದರಿಂದ ದುಃಖ ಮುಕ್ತರಾಗಿ ವ್ಯಥೆಯಿಲ್ಲದವರಾಗುವೆವು. ದಯೆಯಿಂದ ಸುಮುಖನಾಗಿ ನಮ್ಮ ಹಿತಕ್ಕೋಸ್ಕರ ಆ ತೀರ್ಥವನ್ನು ತಿಳಿಸು.

೫೧. ಪ್ರಹ್ಲಾದನು ಹೇಳುತ್ತಾನೆ :—ದೇವ ಪುರೋಹಿತನಾದ ಬೃಹಸ್ಪತಿಯು ಸುರೇಂದ್ರನ ಈ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ಇಂತೆಂದನು.

ಬೃಹಸ್ಪತಿರುವಾಚ :—

ಪಂಚಕ್ರೋಶಪ್ರಮಾಣಂ ಹಿ ತೀರ್ಥಂ ತೀರ್ಥವರೋತ್ತಮಮ್ ।
ದ್ವಾರಕಾನಾಮ ವಿಖ್ಯಾತಂ ಕಲಿದೋಷವಿವರ್ಜಿತಮ್ ॥ ೫೨ ॥
ವಿಷ್ಣುನಾ ನಿರ್ಮಿತಂ ಸ್ಥಾನಂ ಲೋಕಸ್ಯ ಗತಿದಾಯಕಂ ।
ಮುಕ್ತಿದಂ ಕಲಿಕಾಲೇ ತು ಜ್ಞಾನಹೀನಜನಸ್ಯ ಚ ॥ ೫೩ ॥
ಊಷರಂ ಕರ್ಮಣಾಂ ಕ್ಷೇತ್ರಂ ಪುಣ್ಯಂ ಪಾಪವಿನಾಶನಂ ।
ನ ಪ್ರರೋಹಂತಿ ಪಾಪಾನಿ ಪುನರ್ನಷ್ಟಾನಿ ತತ್ರ ವೈ ॥ ೫೪ ॥
ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನೀಹ ಮಹೀತಲೇ ॥ ೫೫ ॥
ಏವಂ ತೀರ್ಥಯುತಾ ತತ್ರ ದ್ವಾರಕಾ ಮುಕ್ತಿದಾಯಕಾ ।
ಸೇವನೀಯಾ ಪ್ರಯತ್ನೇನ ಪ್ರಾಪ್ಯ ಮಾನುಷ್ಯಮುತ್ತಮಂ ॥ ೫೬ ॥

ಪ್ರಹ್ಲಾದ ಉವಾಚ :—

ಬೃಹಸ್ಪತೇರ್ವಚಃ ಶ್ರುತ್ವಾ ಶತಕ್ರತುರಥಾಬ್ರವೀತ್ ।
ವಾಚಸ್ಪತೇ ಮಮ ಬ್ರೂಹಿ ದ್ವಾರವತ್ಯಾ ಮಹೋದಯಂ ।
ಗಮನೇ ಕಿಂ ಫಲಂ ಪ್ರೋಕ್ತಂ ಕೃಷ್ಣದೇವಸ್ಯ ದರ್ಶನೇ ॥ ೫೭ ॥

---

೫೨–೫೪. ಹತ್ತು ಮೈಲಿ ವಿಸ್ತೀರ್ಣವೂ, ತೀರ್ಥಗಳಲ್ಲಿ ಶ್ರೇಷ್ಠವೂ, ಕಲಿದೋಷವಿಲ್ಲದಿರುವುದೂ, ವಿಷ್ಣುವು ನಿರ್ಮಿಸಿರುವುದೂ, ಜನರಿಗೆ ಸದ್ಗತಿಯನ್ನೀಯುವುದೂ, ಕಲಿಕಾಲದಲ್ಲಿ ಜ್ಞಾನವಿಲ್ಲದ ಜನರಿಗೆ ಮೋಕ್ಷವನ್ನು ಕೊಡುವುದೂ, ಬಂಜರು ಭೂಮಿಯುಳ್ಳದೂ, ಪಾಪವನ್ನು ಪರಿಹರಿಸುವುದೂ ಆದ ದ್ವಾರಕೆಯೆಂಬ ಕ್ಷೇತ್ರವಿರುವುದು. ಅಲ್ಲಿ ನಷ್ಟವಾದ ಪಾಪವು ಮರಳಿ ಹೆಚ್ಚುವುದಿಲ್ಲ.

೫೫. ಅಲ್ಲಿ ಭೂಮಿಯಲ್ಲಿರುವ ಮೂರುವರೆ ಕೋಟಿ ತೀರ್ಥಗಳೂ ಇರುವುವು.

೫೬. ಉತ್ತಮವಾದ ಮನುಷ್ಯ ಜನ್ಮವನ್ನು ಪಡೆದ ಮಾನವನು ಹೀಗೆ ತೀರ್ಥಗಳಿಂದ ಸಹಿತವಾಗಿ ಮೋಕ್ಷವನ್ನೀಯುವ ಆ ದ್ವಾರಕಾ ನಗರವನ್ನು ಸೇವಿಸಬೇಕು.

೫೭–೫೮. ಪ್ರಹ್ಲಾದನು ಹೇಳುತ್ತಾನೆ :— ತರುವಾಯ ಇಂದ್ರನು ಬೃಹಸ್ಪತಿಯ ಮಾತನ್ನು ಕೇಳಿ ಹೀಗೆಂದನು. ಬೃಹಸ್ಪತಿಯೆ! ದ್ವಾರಾವತಿಯ ಮಾಹಾತ್ಮ್ಯೆವನ್ನೂ, ಅಲ್ಲಿಯ ಯಾತ್ರೆ, ಕೃಷ್ಣದೇವನ ದರ್ಶನ ಇವುಗಳ ಫಲವನ್ನೂ, ಇತರ ಮುಖ್ಯ

ಅನ್ಯಾನಿ ತತ್ರ ತೀರ್ಥಾನಿ ಮುಖ್ಯಾನಿ ವದ ಮೇ ಗುರೋ ।
ಯಥಾಽಭಿಷೇಕೇ ಗೋಮತ್ಯಾಃ ಫಲಂ ಯದಪಿ ಸಂಗಮೇ ॥ ೫೮ ॥

ಬೃಹಸ್ಪತಿರುವಾಚ :—

ಶ್ರೂಯತಾಂ ತಾತ ವಕ್ಷ್ಯಾಮಿ ಮಾಹಾತ್ಮ್ಯಂ ದ್ವಾರಕೋದ್ಭವಂ ।
ಮನುಷ್ಯರೂಪೋ ಭಗವಾನ್ಯತ್ರ ಕ್ರೀಡತಿ ಕೇಶವಃ ॥ ೫೯ ॥
ನಾರಾಯಣಃ ಸ ಈಶಾನೋ ಧ್ಯೇಯಶ್ಚಾದೌ ಜಗನ್ಮಯಃ ।
ಸ ಏವ ದೇವತಾಮುಖ್ಯಃ ಪುರೀಂ ದ್ವಾರವತೀಂ ಸ್ಥಿತಃ ॥ ೬೦ ॥
ಏಕೈಕಸ್ಮಿನ್ಪದೇ ದತ್ತೇ ಪುರೀಂ ದ್ವಾರವತೀಂ ಪ್ರತಿ ।
ಪುಣ್ಯಂ ಕ್ರತುಸಹಸ್ರೇಣ ಕಲೌ ಭವತಿ ದೇಹಿನಾಂ ॥ ೬೧ ॥
ಕಲೌ ಕೃಷ್ಣಪುರೀಂ ರಮ್ಯಾಂ ಯೇ ಗಚ್ಛಂತಿ ನರೋತ್ತಮಾಃ ।
ಕುಲಕೋಟಿಶತೈರ್ಯುಕ್ತಾಸ್ತೇ ಗಚ್ಛಂತಿ ಹರೇಃ ಪದಂ ॥ ೬೨ ॥
ಯೇ ಧ್ಯಾಯಂತಿ ಮನೋವೃತ್ತ್ಯಾ ಗಮನಂ ದ್ವಾರಕಾಂ ಪ್ರತಿ ।
ತೇಷಾಂ ವಿಲೀಯತೇ ಪಾಪಂ ಪೂರ್ವಜನ್ಮಾಯುತೈಃ ಕೃತಂ ॥ ೬೩ ॥

---

ತೀರ್ಥಗಳನ್ನೂ, ಗೋಮತೀ ಸಮುದ್ರ ಸಂಗಮದಲ್ಲಿ ಮಿಂದರೆ ಉಂಟಾಗುವ ಪುಣ್ಯವನ್ನೂ ನನಗೆ ಹೇಳು

೫೯. ಬೃಹಸ್ಪತಿಯು ಹೇಳುತ್ತಾನೆ :—ಮಗು ! ವಿಷ್ಣುವು ಮನುಷ್ಯರೂಪನಾಗಿ ವಿನೋದಪಡುತ್ತಿರುವ ದ್ವಾರಕೆಯ ಮಾಹಾತ್ಮ್ಯವನ್ನು ಹೇಳುವೆನು ಕೇಳು.

೬೦. ಜಗದೊಡೆಯನೂ, ಆದಿಯಲ್ಲಿ ಧ್ಯಾನಿಸಲರ್ಹನೂ, ಜಗತ್ಸ್ವರೂಪನೂ, ಮುಖ್ಯ ದೇವತೆಯೂ ಆದ ನಾರಾಯಣನು ಆ ದ್ವಾರವತಿಯಲ್ಲಿರುವನು.

೬೧. ಕಲಿಯುಗದಲ್ಲಿ ದ್ವಾರವತಿ ಯಾತ್ರೆಗೋಸ್ಕರ ಒಂದೊಂದು ಹೆಜ್ಜೆಯನ್ನಿಟ್ಟರೆ ಪ್ರಾಣಿಗಳಿಗೆ ಸಾವಿರ ಯಾಗ ಮಾಡಿದ ಪುಣ್ಯವು ದೊರೆಯುವುದು.

೬೨. ಕಲಿಯುಗದಲ್ಲಿ ಮನೋಹರವಾದ ಕೃಷ್ಣನ ಪಟ್ಟಣಕ್ಕೆ ಹೋಗುವ ಮಾನವರು ಅನೇಕ ವಂಶಗಳೊಡನೆ ವಿಷ್ಣುವಿನ ಸ್ಥಾನವನ್ನು ಹೊಂದುವರು.

೬೩. ಮನಸ್ಸಿನಿಂದ ದ್ವಾರಕೆಗೆ ಹೋಗುತ್ತೇನೆಂದು ಆಲೋಚಿಸಿದ ಮಾನವರ ಹತ್ತುಸಾವಿರ ಜನ್ಮಗಳಲ್ಲಿ ಮಾಡಿದ ಪಾಪವು ಪರಿಹಾರವಾಗುವುದು.

ಕೃಷ್ಣಸ್ಯ ದರ್ಶನೇ ಬುದ್ಧಿರ್ಜಾಯತೇ ಯಸ್ಯ ದೇಹಿನಃ ।
ವಕ್ತ್ರಾವಲೋಕನಾತ್ತಸ್ಯ ಪಾಪಂ ಯಾತಿ ಸಹಸ್ರಧಾ ॥ ೬೪ ॥
ಯೇ ಗತಾ ದ್ವಾರಕಾಯಾಂ ಚ ಯೇ ಮೃತಾಃ ಕೃಷ್ಣಸನ್ನಿಧೌ ।
ನ ತೇಷಾಂ ಪುನರಾವೃತ್ತಿರ್ಯಾವದಾಭೂತಸಂಪ್ಲವಂ ॥ ೬೫ ॥
ಸುಲಭಾ ಮಥುರಾ ಕಾಶೀ ಹ್ಯವಂತೀ ಚ ತಥಾ ಸುರಾಃ ।
ಅಯೋಧ್ಯಾ ಸುಲಭಾ ಲೋಕೇ ದುರ್ಲಭಾ ದ್ವಾರಕಾ ಕಲೌ ॥ ೬೬ ॥
ಗತ್ವಾ ಕೃಷ್ಣಪುರೀಂ ರಮ್ಯಾಂ ಷಣ್ಮಾಸಾತ್ಕೃಷ್ಣಸನ್ನಿಧೌ ।
ಜೀವನ್ಮುಕ್ತಾಸ್ತು ತೇ ಜ್ಞೇಯಾಃ ಸತ್ಯಮೇತತ್ಸುರೋತ್ತಮ ॥ ೬೭ ॥
ಕೃಷ್ಣಕ್ರೀಡಾಕರಂ ಸ್ಥಾನಂ ವಾಂಛಂತಿ ಮನಸಾ ಸುರಾಃ ।
ತೇಷಾಂ ಹೃದಿ ಸ್ಥಿತಂ ಪಾಪಂ ಕ್ಷಾಲಯೇತ್ಪ್ರೇತನಾಯಕಃ ॥ ೬೮ ॥
ಅತ್ಯುಗ್ರಾಣ್ಯಪಿ ಪಾಪಾನಿ ತಾವತ್ತಿಷ್ಠಂತಿ ವಿಗ್ರಹೇ ।
ಯಾವನ್ನ ಗಚ್ಛತಿ ನರಃ ಕಲೌ ದ್ವಾರವತೀಂ ಪ್ರತಿ ॥ ೬೯ ॥
ಪುಣ್ಯಸಂಖ್ಯಾ ಚ ತೀರ್ಥಾನಾಂ ಬ್ರಹ್ಮಣಾ ವಿಹಿತಾ ಪುರಾ ।
ದಾನಾಧ್ಯಯನಸಂಜ್ಞಾನಾಂ ಮುಕ್ತ್ವಾ ದ್ವಾರವತೀಂ ಕಲೌ ॥ ೭೦ ॥

---

೬೪. ಶ್ರೀಕೃಷ್ಣನನ್ನು ನೋಡಬೇಕೆಂದು ಆಲೋಚಿಸಿದವನ ಮುಖವನ್ನು ನೋಡಿದ ಕೂಡಲೆ ಪಾಪವು ಸಾವಿರ ವಿಧವಾಗಿ ನಾಶವಾಗುವುದು.

೬೫. ದ್ವಾರಕೆಗೆ ಹೋದವರೂ, ಕೃಷ್ಣನ ಹತ್ತಿರ ಮೃತರಾದವರೂ ಪ್ರಳಯ ಕಾಲದ ವರೆಗೆ ಹಿಂದಿರುಗುವುದಿಲ್ಲ.

೬೬. ದೇವತೆಗಳೆ ! ಕಲಿಯುಗದಲ್ಲಿ ಮಥುರೆ, ಕಾಶೀ, ಅವಂತೀ, ಅಯೋಧ್ಯೆ ಗಳು ಸುಲಭವಾಗಿ ದೊರೆಯುವುವು. ದ್ವಾರಕೆಯು ದುರ್ಲಭವಾದುದು.

೬೭. ರಮ್ಯವಾದ ಕೃಷ್ಣನ ನಗರಕ್ಕೆ ಹೋಗಿ ಆ ಕೃಷ್ಣನ ಹತ್ತಿರ ಆರುತಿಂಗಳು ವಾಸಮಾಡುವವರು ನಿಜವಾಗಿಯೂ ಜೀವನ್ಮುಕ್ತರೆಂದು ತಿಳಿಯಬೇಕು.

೬೮. ಎಲೈ ಸುರರೆ! ಮನಸ್ಸಿನಿಂದ ಕೃಷ್ಣನ ಕ್ರೀಡಾಸ್ಥಾನವನ್ನು ಅಪೇಕ್ಷಿಸುವವನ ಮನಸ್ಸಿನಲ್ಲಿರುವ ಪಾಪವನ್ನು ಯಮನು ತೊಳೆಯುವನು.

೬೯. ಮನುಷ್ಯನು ಕಲಿಯುಗದಲ್ಲಿ ದ್ವಾರವತಿಗೆ ಹೋಗುವವರೆಗೆ ಅವನ ಕಠಿನ ವಾದ ಪಾಪಗಳು ಶರೀರದಲ್ಲಿರುವುವು.

೭೦. ಕಲಿಯುಗದಲ್ಲಿ ಬ್ರಹ್ಮನು ದ್ವಾರವತಿಯನ್ನು ಬಿಟ್ಟು ಇತರ ತೀರ್ಥಗಳ ಮತ್ತು ದಾನಾಧ್ಯಯನಗಳ ಪುಣ್ಯಗಳನ್ನು ಎಣಿಸಿ ಹೇಳಿರುವನು.

ಚಕ್ರತೀರ್ಥೇ ತು ಯೋ ಗಚ್ಛೇತ್ಪ್ರಸಂಗೇನಾಪಿ ಮಾನವಃ ।
ಕುಲೈಕವಿಂಶತಿಯುತಃ ಸ ಗಚ್ಛೇತ್ಪರಮಂ ಪದಂ ॥ ೭೧ ॥
ಲೋಭೇನಾಪ್ಯಪರಾಧೇನ ದಂಭೇನ ಕಪಟೇನ ವಾ ।
ಚಕ್ರತೀರ್ಥಂ ತು ಯೋ ಗಚ್ಛೇನ್ನ ಪುನರ್ವಿಶತೇ ಭವಂ ॥ ೭೨ ॥
ಪ್ರಯಾಗೇ ಹ್ಯಸ್ಥಿಪಾತೇನ ಯತ್ಫಲಂ ಪರಿಕೀರ್ತಿತಂ ।
ತದೇವ ಶತಸಾಹಸ್ರಂ ಚಕ್ರತೀರ್ಥಾಸ್ಥಿಪಾತನಾತ್ ॥ ೭೩ ॥
ಪೃಥಿವ್ಯಾಂ ಚೈವ ತತ್ತೀರ್ಥಂ ಪರಮಂ ಪರಿಕೀರ್ತಿತಂ ।
ಚಕ್ರತೀರ್ಥಮಿತಿ ಖ್ಯಾತಂ ಬ್ರಹ್ಮಹತ್ಯಾವಿನಾಶನಂ ॥ ೭೪ ॥
ಯೇ ಯೇ ಕುಲೇ ಭವಿಷ್ಯಂತಿ ತತ್ಪೂರ್ವಂ ಮಾನವಾಃ ಕ್ಷಿತೌ ।
ಸರ್ವೇ ವಿಷ್ಣುಪುರಂ ಯಾಂತಿ ಚಕ್ರತೀರ್ಥಾಸ್ಥಿಪಾತನಾತ್ ॥ ೭೫ ॥
ಕಿಂ ಜಾತೈರ್ಬಹುಭಿಃ ಪುತ್ರೈರ್ಗಣನಾಪೂರಕಾತ್ಮಕೈಃ ।
ವರಮೇಕೋ ಭವೇತ್ಪುತ್ರಶ್ಚಕ್ರತೀರ್ಥಂ ತು ಯೋ ವ್ರಜೇತ್ ॥ ೭೬ ॥
ತಪಸಾ ಕಿಂ ಪ್ರತಪ್ತೇನ ದಾನೇನಾಧ್ಯಯನೇನ ಕಿಂ ।
ಸರ್ವಾವಸ್ಥೋಽಪಿ ಮುಚ್ಯೇತ ಗತಃ ಕೃಷ್ಣಪುರೀಂ ಯದಿ ॥ ೭೭ ॥

---

೭೧. ಆಕಸ್ಮಾತ್ತಾಗಿ ಚಕ್ರತೀರ್ಥಕ್ಕೆ ಹೋದ ಮಾನವನು ಇಪ್ಪತ್ತೊಂದು ಕುಲಗಳೊಡನೆ ಉತ್ತಮ ಸ್ಥಾನಕ್ಕೆ ತೆರಳುವನು.

೭೨. ಅತ್ಯಾಶೆಯಿಂದಾಗಲಿ, ತಪ್ಪಿನಿಂದಾಗಲಿ, ದಂಭದಿಂದಾಗಲಿ, ಕಪಟದಿಂದಾಗಲಿ ಚಕ್ರತೀರ್ಥಕ್ಕೆ ಹೋದ ಮಾನವನು ಮರಳಿ ಸಂಸಾರವನ್ನು ಪ್ರವೇಶಿಸುವುದಿಲ್ಲ.

೭೩. ಪ್ರಯಾಗದಲ್ಲಿ ಅಸ್ಥಿಯನ್ನು ಹಾಕುವುದರಿಂದುಂಟಾಗುವ ಫಲಕ್ಕಿಂತ ಚಕ್ರತೀರ್ಥದಲ್ಲಿ ಅಸ್ಥಿಯನ್ನು ಹಾಕುವುದರಿಂದ ಲಕ್ಷದಷ್ಟು ಹೆಚ್ಚು ಫಲವು ಲಭಿಸುವುದು.

೭೪. ಬ್ರಹ್ಮಹತ್ಯೆಯನ್ನು ನೀಗಿಸುವ ಚಕ್ರತೀರ್ಥವು ಭೂಮಿಯಲ್ಲಿ ಉತ್ತಮ ತೀರ್ಥವೆಂದೆನಿಸಿಕೊಳ್ಳುವುದು.

೭೫. ಚಕ್ರತೀರ್ಥದಲ್ಲಿ ಅಸ್ಥಿಯನ್ನು ಹಾಕುವುದರಿಂದ ಅವನ ಹಿಂದಿನ ಜನರೆಲ್ಲ ವಿಷ್ಣುಲೋಕಕ್ಕೆ ತೆರಳುವರು.

೭೬. ಸಂಖ್ಯಾಪೂರ್ತಿಗಾಗಿ ಹುಟ್ಟಿರುವ ಬಹುಮಂದಿ ಮಕ್ಕಳಿಂದೇನು ಪ್ರಯೋಜನ ? ಚಕ್ರತೀರ್ಥಕ್ಕೆ ಹೋಗುವ ಒಬ್ಬ ಮಗನು ಹುಟ್ಟಿದರೂ ಅವನೇ ಉತ್ತಮನು.

೭೭. ಕೃಷ್ಣನ ನಗರಿಗೆ ಹೋದವರಿಗೆ ತಪಸ್ಸಿನಿಂದಲೂ, ದಾನಾಧ್ಯಯನಗಳಿಂದಲೂ ಪ್ರಯೋಜನವಿಲ್ಲ. ಅವರು ಯಾವ ಸ್ಥಿತಿಯಲ್ಲಿದ್ದರೂ ಮುಕ್ತರಾಗುವರು.

ಕಲಿಕಾಲಕೃತೈರ್ದೋಷೈರತ್ಯುಗ್ರೈರಪಿ ಮಾನವಃ ।
ಕಲೌ ಕೃಷ್ಣಮುಖಂ ದೃಷ್ಟ್ವಾ ಲಿಪ್ಯತೇ ನ ಕದಾಚನ ॥ ೭೮ ॥
ದಾನಂ ಚಾಧ್ಯಯನಂ ಶೌಚಂ ಕಾರಣಂ ನ ಹಿ ಪುತ್ರಕ ।
ಹೀನವರ್ಣೋಽಪಿ ಪಾಪಾತ್ಮಾ ಗತಃ ಕೃಷ್ಣಪುರೀಂ ಯದಿ ॥ ೭೯ ॥
ವಾರಾಣಸ್ಯಾಂ ಕುರುಕ್ಷೇತ್ರೇ ನರ್ಮದಾಯಾಂ ಚ ಯತ್ಫಲಂ ।
ತತ್ಫಲಂ ನಿಮಿಷಾರ್ಧೇನ ದ್ವಾರವತ್ಯಾಂ ದಿನೇದಿನೇ ॥ ೮೦ ॥
ಧನ್ಯಾನಾಮಪಿ ಧನ್ಯಾಸ್ತೇ ದೇವಾನಾಮಪಿ ದೇವತಾಃ ।
ಕೃಷ್ಣೋಪರಿ ಮತಿರ್ಯೇಷಾಂ ಹೀಯತೇ ನ ಕದಾಚನ ॥ ೮೧ ॥
ಶ್ರವಣದ್ವಾದಶೀಯೋಗೇ ಗೋಮತ್ಯುದಧಿಸಂಗಮೇ ।
ಸ್ನಾತ್ವಾ ಕೃಷ್ಣಮುಖಂ ದೃಷ್ಟ್ವಾ ಲಿಪ್ಯತೇ ನೈವ ಸ ಕ್ವಚಿತ್ ॥ ೮೨ ॥
ಯಸ್ಯ ಕಸ್ಯಾಪಿ ಮಾಸಸ್ಯ ದ್ವಾದಶೀಂ ಪ್ರಾಪ್ಯ ಮಾನವಃ ।
ಕೃಷ್ಣಕ್ರೀಡಾಪುರೀಂ ದೃಷ್ಟ್ವಾ ಮುಕ್ತಃ ಸಂಸಾರಸಾಗರಾತ್ ॥ ೮೩ ॥
ಯೇಷಾಂ ಕೃಷ್ಣಾಲಯೇ ಪ್ರಾಣಾಃ ಗತಾಃ ಸುರಪತೇ ಕಲೌ ।
ಸ್ವರ್ಗಾನ್ನ ತೇಷಾಮಾವೃತ್ತಿಃ ಕಲ್ಪಕೋಟಿಶತೈರಪಿ ॥ ೮೪ ॥

---

೭೮. ಕಲಿಯುಗದಲ್ಲಿ ಕೃಷ್ಣನ ಮುಖವನ್ನು ನೋಡಿದ ಮನುಷ್ಯನು ಕಲಿಕಾಲದಿಂದುಂಟಾದ ಕಠಿನ ದೋಷಗಳಿಂದ ಲಿಪ್ತನಾಗುವುದಿಲ್ಲ.

೭೯. ಮಗು ! ದಾನ, ಅಧ್ಯಯನ, ಶೌಚ ಇವುಗಳು ಕಾರಣವಲ್ಲ. ಹೀನ ಜಾತಿಯಲ್ಲಿ ಹುಟ್ಟಿದ ಪಾಪಿಯೂ ಕೃಷ್ಣಪುರಿಗೆ ಹೋದರೆ ಮುಕ್ತನಾಗುವನು.

೮೦ ಕಾಶೀ, ಕುರುಕ್ಷೇತ್ರ, ನರ್ಮದಾ ಇವುಗಳಲ್ಲಿ ಉಂಟಾಗುವ ಫಲವು ದ್ವಾರವತಿಯಲ್ಲಿ ಅರ್ಧ ನಿಮಿಷದಲ್ಲಿ ಪ್ರತಿ ದಿನವೂ ಉಂಟಾಗುವುದು.

೮೧. ಕೃಷ್ಣನ ಮೇಲಿನ ಭಕ್ತಿಯು ಕಡಮೆಯಾಗದಿರುವವರು ಪುಣ್ಯವಂತರಿಗೂ ಪುಣ್ಯವಂತರು. ದೇವತೆಗಳಿಗೂ ದೇವತೆಗಳು.

೮೨. ಶ್ರಾವಣ ದ್ವಾದಶೀ ದಿನ ಗೋಮತೀ ಸಮುದ್ರಗಳ ಸಂಗಮ ಸ್ಥಳದಲ್ಲಿ ಮಿಂದು ಕೃಷ್ಣನ ಮುಖವನ್ನು ನೋಡಿದವನು ಪಾಪ ಲಿಪ್ತನಾಗುವುದಿಲ್ಲ.

೮೩. ಯಾವುದಾದರೂ ತಿಂಗಳ ದ್ವಾದಶೀ ದಿನ ಆ ಕೃಷ್ಣನ ವಿಹಾರದ ಪಟ್ಟಣವನ್ನು ನೋಡಿದ ನರನು ಸಂಸಾರ ಗುಹೆಯಿಂದ ಮುಕ್ತನಾಗುವನು.

೮೪. ದೇವರಾಜ ! ಕಲಿಯುಗದಲ್ಲಿ ದ್ವಾರಕೆಯಲ್ಲಿ ಮೃತರಾದವರು ಅನೇಕ ಕೋಟಿ ಕಲ್ಪಗಳ ಕಾಲ ಸ್ವರ್ಗದಿಂದ ಹಿಂದಿರುಗುವುದಿಲ್ಲ.

ವಿಜ್ಞೇಯಾ ಮಾನುಷಾ ವತ್ಸ ಗರ್ಭಸ್ಥಾಸ್ತೇ ಮಹೀತಲೇ ।
ದ್ವಾರವತ್ಯಾಂ ಸ ಯೈರ್ದೇವೋ ದೃಷ್ಟಃ ಕಂಸನಿಷೂದನಃ ॥ ೮೫ ॥
ದುರ್ಲಭೋ ದ್ವಾರಕಾವಾಸೋ ದುರ್ಲಭಂ ಕೃಷ್ಣದರ್ಶನಂ ।
ದುರ್ಲಭಂ ಗೋಮತೀಸ್ನಾನಂ ದುರ್ಲಭೋ ರುಕ್ಮಿಣೀಪತಿಃ ॥ ೮೬ ॥
ತಪಃ ಪರಂ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।
ದ್ವಾಪರೇ ತು ಪರೋ ಯಜ್ಞಃ ಕಲೌ ಕೇಶವಕೀರ್ತನಂ ॥ ೮೭ ॥
ಹೇಮಭಾರಸಹಸ್ರೈಸ್ತು ದತ್ತೈರ್ಯತ್ಫಲಮಾಪ್ಯತೇ ।
ದೃಷ್ಟ್ವಾ ತತ್ಕೋಟಿಗುಣಿತಂ ಹರೇಃ ಸರ್ವಪ್ರದಂ ಮುಖಂ ॥ ೮೮ ॥
ದ್ವಾರಕಾಯಾಂ ಚ ಯದ್ದತ್ತಂ ಶಂಖೋದ್ಧಾರೇ ತಥೈವ ಚ ।
ಪಿಂಡಾರಕೇ ಮಹಾತೀರ್ಥೇ ದತ್ತಂ ಚೈವಾಕ್ಷಯಂ ಭವೇತ್ ॥ ೮೯ ॥
ಗೋಮಹಿಷ್ಯಾದಿ ಯದ್ದತ್ತಂ ಸುವರ್ಣವಸನಾನಿ ಚ ।
ವೃಷೋ ಭೂಮಿಗ್ರಹೋ ರೂಪ್ಯಂ ಕನ್ಯಾದಾನಂ ತಥೈವ ಚ ॥ ೯೦ ॥
ಯಚ್ಚಾನ್ಯದಪಿ ದೇವೇಂದ್ರ ತ್ರಿಷು ಸ್ಥಾನೇಷು ಯಚ್ಛತಿ ।
ತನ್ಮುಕ್ತಿಕಾರಕಂ ಪ್ರೋಕ್ತಂ ಪಿತೄಣಾಮಾತ್ಮನಸ್ತಥಾ ॥ ೯೧ ॥

---

೮೫. ವತ್ಸ ! ದ್ವಾರಾವತಿಯಲ್ಲಿರುವ ಶ್ರೀಕೃಷ್ಣನನ್ನು ಕಾಣದ ಮನುಷ್ಯರು ಗರ್ಭದಲ್ಲಿರುವರೆಂದು ತಿಳಿಯಬೇಕು.

೮೬. ದ್ವಾರಕಾವಾಸವೂ, ಕೃಷ್ಣ ದರ್ಶನವೂ, ಗೋಮತೀಸ್ನಾನವೂ, ಕೃಷ್ಣನೂ ದುರ್ಲಭವು.

೮೭. ಕೃತಯುಗದಲ್ಲಿ ತಪಸ್ಸೂ, ತ್ರೇತಾಯುಗದಲ್ಲಿ ಜ್ಞಾನವೂ, ದ್ವಾಪರ ಯುಗದಲ್ಲಿ ಯಜ್ಞವೂ, ಕಲಿಯುಗದಲ್ಲಿ ಕೃಷ್ಣನಾಮ ಸಂಕೀರ್ತನೆಯೂ ಉತ್ತಮ ವಾದುವು.

೮೮. ಸಕಲೇಷ್ಟಾರ್ಥಗಳನ್ನು ನೀಡುವ ಶ್ರೀಕೃಷ್ಣನ ಮುಖದರ್ಶನದಿಂದ ಸಾವಿರ ಭಾರ ಚಿನ್ನವನ್ನು ದಾನಮಾಡಿದ ಪುಣ್ಯಕ್ಕಿಂತ ಕೋಟಿಯಷ್ಟು ಪುಣ್ಯವು ಲಭಿಸುವುದು.

೮೯. ದ್ವಾರಕೆ, ಶಂಖೋದ್ಧಾರ, ಪಿಂಡಾರಕ ಈ ಮಹಾ ತೀರ್ಥಗಳಲ್ಲಿ ಮಾಡಿದ ದಾನವು ಅಕ್ಷಯವಾಗುವುದು.

೯೦-೯೧. ಈ ಮೂರು ತೀರ್ಥಗಳಲ್ಲಿ ಗೋವು, ಎಮ್ಮೆ, ಸುವರ್ಣ, ವಸ್ತ್ರ, ವೃಷಭ, ಭೂಮಿ, ಬೆಳ್ಳಿ, ಕನ್ಯೆ, ಇವುಗಳನ್ನೂ ಇನ್ನೂ ಇತರ ವಸ್ತುಗಳನ್ನೂ ದಾನ ಮಾಡಿದರೆ ತನಗೂ, ಪಿತೃಗಳಿಗೂ ಮುಕ್ತಿಯುಂಟಾಗುವುದು,

ಊಷರಂ ಹಿ ಯತೋ ಲೋಕೇ ಕ್ಷೇತ್ರಮೇತತ್ಪ್ರಕೀರ್ತಿತಂ ।
ಅತೋ ಮುಕ್ತಿತರಂ ಸರ್ವಂ ದಾನಂ ಚೋಕ್ತಂ ಮಹರ್ಷಿಭಿಃ ॥ ೯೨ ॥
ಯತ್ಕಿಂಚಿತ್ಕುರುತೇ ತತ್ರ ದಾನಂ ಕ್ರೀಡಾವಗಾಹನಂ ।
ತದನಂತಫಲಂ ಪ್ರಾಹ ಭಗವಾನ್ಮಧುಸೂದನಃ ॥ ೯೩ ॥
ಪ್ರೇತತ್ವಂ ನೈವ ತಸ್ಯಾಸ್ತಿ ನ ಯಾಮ್ಯಾ ನಾರಕೀ ವ್ಯಥಾ ।
ಯೇನ ದ್ವಾರವತೀಂ ಗತ್ವಾ ಕೃತಂ ಕೃಷ್ಣಾವಲೋಕನಂ ॥ ೯೪ ॥
ವಾರಿಮಾತ್ರೇಣ ಗೋಮತ್ಯಾಂ ಪಿಂಡದಾನೇ ಕೃತೇ ಕಲೌ ।
ಪಿತೄಣಾಂ ಜಾಯತೇ ತೃಪ್ತಿರ್ಯಾವದಾಭೂತಿಸಂಪ್ಲವಂ ॥ ೯೫ ॥
ನಿತ್ಯಂ ಕೃಷ್ಣಪುರೀಂ ರಮ್ಯಾಂ ಯೇ ಸ್ಮರಂತಿ ಗೃಹಸ್ಥಿತಾಃ ।
ನಮಸ್ಯಾಃ ಸರ್ವಲೋಕಾನಾಂ ದೇವಾನಾಂ ಚ ಸುರೋತ್ತಮ ॥ ೯೬ ॥
ಬ್ರಹ್ಮಜ್ಞಾನಂ ಗಯಾಶ್ರಾದ್ಧಂ ಮರಣಂ ಗೋಗ್ರಹೇಷು ಚ ।
ವಾಸಃ ಪುಂಸಾಂ ದ್ವಾರಕಾಯಾಂ ಮುಕ್ತಿರೇಷಾ ಚತುರ್ವಿಧಾ ॥ ೯೭ ॥

---

೯೨. ಈ ಕ್ಷೇತ್ರಗಳು ಊಷರಗಳೆನ್ನಿಸಿಕೊಳ್ಳುವುದರಿಂದ ಮಹರ್ಷಿಗಳು ಇಲ್ಲಿ ಮಾಡಿದ ಸಕಲ ದಾನಗಳು ಮುಕ್ತಿಯನ್ನುಂಟುಮಾಡುವುವು ಎಂದಿರುವರು.

೯೩. ಅಲ್ಲಿ ಮಾಡಿದ ದಾನ, ಕ್ರೀಡಾ, ಸ್ನಾನಗಳು ಅನಂತ ಫಲವನ್ನು ನೀಡುವುವು ಎಂದು ಪೂಜ್ಯನಾದ ಕೃಷ್ಣನು ಹೇಳಿರುವನು.

೯೪. ದ್ವಾರವತಿಗೆ ಹೋಗಿ ಕೃಷ್ಣನನ್ನು ದರ್ಶನ ಮಾಡಿದವನಿಗೆ ಪ್ರೇತತ್ವ, ಯಮಲೋಕದ ನರಕಗಳು ಇವು ಸಂಭವಿಸುವುದಿಲ್ಲ.

೯೫. ಕಲಿಯುಗದಲ್ಲಿ ಗೋಮತೀನದಿಯ ನೀರಿನಿಂದ ಪಿಂಡಪ್ರದಾನ ಮಾಡಿದರೆ ಪಿತೃಗಳಿಗೆ ಪ್ರಳಯಕಾಲದ ವರೆಗೆ ತೃಪ್ತಿಯುಂಟಾಗುವುದು.

೯೬. ದೇವೇಂದ್ರ! ಮನೆಯಲ್ಲಿಯೇ ಇದ್ದು ರಮ್ಯವಾದ ಕೃಷ್ಣಪುರವನ್ನು ಸ್ಮರಿಸುವವರು ಸಮಸ್ತ ಜನರಿಗೂ, ದೇವತೆಗಳಿಗೂ ವಂದ್ಯರಾಗುವರು.

೯೭. ಮನುಷ್ಯರಿಗೆ ಬ್ರಹ್ಮಜ್ಞಾನ, ಗಯಾಶ್ರಾದ್ಧ, ಗೋಗ್ರಹಮರಣ, ದ್ವಾರಕಾವಾಸ ಇವುಗಳಿಂದ ನಾಲ್ಕು ವಿಧವಾದ ಮುಕ್ತಿಯುಂಟಾಗುವುದು.

ಬ್ರಹ್ಮಜ್ಞಾನೇನ ಮುಚ್ಯಂತೇ ಪ್ರಯಾಗೇ ಮರಣೇನ ವಾ ।
ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥ ೯೮ ॥
ಕೃತಾರ್ಥಃ ಕೃತಪುಣ್ಯೋಽಹಂ ಬ್ರವೀತ್ಯೇವಂ ಮಹೋದಧಿಃ ।
ಪವಿತ್ರಿತಂ ಚ ಮದ್ಗಾತ್ರಂ ಗೋಮತೀವಾರಿಸಂಪ್ಲವಾತ್ ॥ ೯೯ ॥
ಅತ್ಯುಗ್ರಾಣ್ಯಪಿ ಪಾಪಾನಿ ತಾವತ್ತಿಷ್ಠಂತಿ ವಿಗ್ರಹೇ ।
ಯಾವತ್ಸ್ನಾನಂ ಸ ಗೋಮತ್ಯಾಂ ವಾರಿಣಾ ಪಾಪಹಾರಿಣಾ ॥ ೧೦೦ ॥
ಚಕ್ರತೀರ್ಥೇ ನರಃ ಸ್ನಾತ್ವಾ ಗೋಮತ್ಯಾಂ ರುಕ್ಮಿಣೀಹ್ರದೇ ।
ದೃಷ್ಟ್ವಾ ಕೃಷ್ಣಮುಖಂ ರಮ್ಯಂ ಕುಲಾನಾಂ ತಾರಯೇಚ್ಛತಂ ॥ ೧೦೧ ॥

ಕೃಷ್ಣಂ ಚ ಯೇ ದ್ವಾರವತೀಂ ಮನುಷ್ಯಾಃ
ಸ್ಮರಂತಿ ನಿತ್ಯಂ ಹರಿಭಕ್ತಿಯುಕ್ತಾಃ ।
ವಿಧೂತಪಾಪಾಃ ಕಿಲ ಸಂಭವಾಂತೇ
ಗಚ್ಛಂತಿ ಲೋಕಂ ಪರಮಂ ಮುರಾರೇಃ ॥ ೧೦೨ ॥

ಅಧೌತಪಾದಃ ಪ್ರಥಮಂ ನಮಸ್ಕುರ್ಯಾದ್ಗಣೇಶ್ವರಂ ।
ಸರ್ವವಿಘ್ನವಿನಾಶಶ್ಚ ಜಾಯತೇ ನಾತ್ರ ಸಂಶಯಃ ॥ ೧೦೩ ॥

---

೯೮. ಬ್ರಹ್ಮಜ್ಞಾನದಿಂದಾಗಲಿ, ಪ್ರಯಾಗ ಮರಣದಿಂದಾಗಲಿ, ಕೃಷ್ಣನ ಹತ್ತಿರ ಗೋಮತೀ ನದಿಯ ನೀರಿನಲ್ಲಿ ಸ್ನಾನಮಾಡುವುದರಿಂದಾಗಲಿ ಮುಕ್ತಿಯುಂಟಾಗುವುದು.

೯೯. ಸಮುದ್ರನು, "ಗೋಮತೀನದಿಯ ನೀರಿನಲ್ಲಿ ಸ್ನಾನಮಾಡುವುದರಿಂದ ನನ್ನ ದೇಹವು ಪವಿತ್ರವಾಯಿತು. ನಾನು ಕೃತಾರ್ಥನೂ, ಕೃತಕೃತ್ಯನೂ ಆದೆನು" ಎಂದು ಹೇಳುತ್ತಾನೆ.

೧೦೦. ಪಾಪವನ್ನು ನಿವಾರಿಸುವ ಗೋಮತೀ ನದಿಯ ನೀರಿನಿಂದ ಸ್ನಾನ ಮಾಡದಿರುವ ವರೆಗೆ ದೇಹದಲ್ಲಿ ಅತಿ ಕಠಿನವಾದ ಪಾಪಗಳು ನೆಲಸಿರುವುವು.

೧೦೧. ಮನುಷ್ಯನು ಚಕ್ರತೀರ್ಥ, ಗೋಮತಿಯಲ್ಲಿರುವ ರುಕ್ಮಿಣೀಹ್ರದ ಇವುಗಳಲ್ಲಿ ಸ್ನಾನಮಾಡುವುದರಿಂದಲೂ, ಮನೋಹರವಾದ ಕೃಷ್ಣನ ಮುಖ ಸಂದರ್ಶನ ಮಾಡುವುದರಿಂದಲೂ ನೂರು ವಂಶಗಳನ್ನು ಉದ್ಧರಿಸುವನು.

೧೦೨. ಕೃಷ್ಣನನ್ನೂ, ದ್ವಾರವತಿಯನ್ನೂ ಹರಿಭಕ್ತಿಯುಕ್ತರಾಗಿ ನಿತ್ಯವೂ ಸ್ಮರಿಸುವ ಮಾನವರು ಪಾಪರಹಿತರಾಗಿ ದೇಹಾವಸಾನದಲ್ಲಿ ವಿಷ್ಣುಲೋಕವನ್ನು ಸೇರುವರು.

೧೦೩. ಮೊದಲು ಪಾದವನ್ನು ತೊಳೆಯದೆ ಗಣಪತಿಯನ್ನು ನಮಸ್ಕರಿಸಬೇಕು. ಆದರಿಂದ ನಿಜವಾಗಿಯೂ ಸಮಸ್ತ ವಿಘ್ನಗಳು ನಾಶವಾಗುವುವು.

ನೀಲೋತ್ಪಲದಲಶ್ಯಾಮಂ ಕೃಷ್ಣಂ ದೇವಕಿನಂದನಂ ।
ದಂಡವತ್ಪ್ರಣಮೇತ್ಪ್ರೀತ್ಯಾ ಪ್ರಣಮೇದಗ್ರಜಂ ಪುನಃ ॥ ೧೦೪ ॥
ಬಾಲ್ಯೇ ಚ ಯತ್ಕೃತಂ ಪಾಪಂ ಕೌಮಾರೇ ಯೌವನೇ ತಥಾ ।
ದರ್ಶನಾತ್ಕೃಷ್ಣದೇವಸ್ಯ ತನ್ನಶ್ಯೇನ್ನಾತ್ರ ಸಂಶಯಃ ॥ ೧೦೫ ॥
ವಾಚಾ ಚ ಮನಸಾ ಯಚ್ಚ ಕರ್ಮಣಾ ಸಮುಪಾರ್ಜಿತಂ ।
ಪಾಪಂ ಜನ್ಮಸಹಸ್ರೇಣ ತನ್ನಶ್ಯೇನ್ನಾತ್ರ ಸಂಶಯಃ ॥ ೧೦೬ ॥
ಹೇಮಭಾರಸಹಸ್ರೈಸ್ತು ದತ್ತೈರ್ಯತ್ಫಲಮಶ್ನುತೇ ।
ತತ್ಫಲಂ ಕೋಟಿಗುಣಿತಂ ಕೃಷ್ಣವಕ್ತ್ರಾವಲೋಕನಾತ್ ॥ ೧೦೭ ॥
ನಮಸ್ಕೃತ್ಯ ಚ ದೇವೇಶಂ ಪುಂಡರೀಕಾಕ್ಷಮಚ್ಯುತಂ ।
ದುರ್ವಾಸಸಂ ಮಹೇಶಾನಂ ದ್ವಾರಕಾಪರಿರಕ್ಷಕಂ ॥ ೧೦೮ ॥
ಪ್ರಣಮ್ಯ ಪರಯಾ ಭಕ್ತ್ಯಾ ವೈನತೇಯಸಮನ್ವಿತಂ ।
ದ್ವಾರಮಾಗತ್ಯ ಚ ಪುನಃ ಸ್ವರ್ಗದ್ವಾರೋಪಮಂ ಶುಭಂ ॥ ೧೦೯ ॥

---

೧೦೪. ಕನ್ನೈದಿಲೆ ಹೂವಿನಂತೆ ನೀಲವರ್ಣನೂ, ದೇವಕೀತನಯನೂ ಆದ ಕೃಷ್ಣನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ತರುವಾಯ ಅಣ್ಣನಾದ ಬಲರಾಮನನ್ನು ವಂದಿಸಬೇಕು.

೧೦೫. ಕೃಷ್ಣನ ದರ್ಶನದಿಂದ ಬಾಲ್ಯ, ಕೌಮಾರ, ಯೌವನಗಳಲ್ಲಿ ಮಾಡಿದ ಪಾಪವು ಪರಿಹಾರವಾಗುವುದು.

೧೦೬. ಮತ್ತು ಅನೇಕ ಜನ್ಮಗಳಲ್ಲಿ ಮಾತು, ಮನಸ್ಸು, ಕರ್ಮಗಳಿಂದ ಮಾಡಿದ ಪಾಪವು ಪರಹಾರವಾಗುವುದು.

೧೦೭. ಕೃಷ್ಣನ ಮುಖಾವಲೋಕನದಿಂದ ಸಹಸ್ರ ಹೇಮಭಾರಗಳನ್ನು ದಾನ ಮಾಡಿದ್ದಕ್ಕಿಂತ ಕೋಟಿಯಷ್ಟು ಹೆಚ್ಚು ಪುಣ್ಯವು ಲಭಿಸುವುದು.

೧೦೮–೧೧೦. ಪುಂಡರೀಕಾಕ್ಷನಾದ ಶ್ರೀಕೃಷ್ಣ, ದುರ್ವಾಸ, ದ್ವಾರಕಾ ಪಾಲಕನಾದ ಮಹೇಶ್ವರ, ಇವರನ್ನು ಅತಿಶಯ ಭಕ್ತಿಯಿಂದ ವಂದಿಸಿ ಗರುಡನಿಂದ ಕೂಡಿರುವ ಸ್ವರ್ಗ ದ್ವಾರದಂತಿರುವ ಬಾಗಿಲಿಗೆ ಬಂದು ಅಲ್ಲಿ ಮಿತ್ರ ಬಾಂಧವರೊಡನೆ ಅರ್ಥ

ವಿಶ್ರಮ್ಯ ಚ ಮುಹೂರ್ತಾರ್ಧಂ ಸುಹೃದ್ಭಿರ್ಬಾಂಧವೈರ್ವೃತಃ ।
ತತ್ರಾಶ್ರಿತಾನ್ಸಮಾಹೂಯ ಬ್ರಾಹ್ಮಣಾನ್ಮಂತ್ರಕೋವಿದಾನ್ ।
ಪೂಜಾದ್ರವ್ಯಂ ಸಮಾನೀಯ ತತಸ್ತೀರ್ಥಂ ವ್ರಜೇದ್ಬುಧಃ ॥ ೧೧೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾಯಾತ್ರಾವಿಧಿವರ್ಣನಂ ನಾಮ
ಚತುರ್ಥೋಽಧ್ಯಾಯಃ

---

ಮುಹೂರ್ತ ಕಾಲ ವಿಶ್ರಾಂತಿಗೊಂಡು ಅಲ್ಲಿ ವಾಸಿಸುತ್ತಿರುವ ಮಂತ್ರಜ್ಞರಾದ ಬ್ರಾಹ್ಮಣರನ್ನು ಕರೆಯಿಸಿ ಪೂಜಾದ್ರವ್ಯವನ್ನು ತರಿಸಿ ಬಳಿಕ ತೀರ್ಥಕ್ಕೆ ಹೋಗಬೇಕು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾರಕಾಯಾತ್ರಾವಿಧಿವರ್ಣನವೆಂಬ
ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚಮೋಽಧ್ಯಾಯಃ

### ಭಗವತ್ಪ್ರಾದುರ್ಭಾವ ಗೋಮತ್ಯುತ್ಪತ್ತಿ ಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ:—

ತತೋ ಗಚ್ಛೇದ್ದ್ವಿಜಶ್ರೇಷ್ಠಾ ಗೋಮತೀಂ ಕೃಷ್ಣಸಂಶ್ರಯಾಂ ।
ಯಸ್ಯಾ ದರ್ಶನಮಾತ್ರೇಣ ಮುಚ್ಯತೇ ಸರ್ವಪಾತಕೈಃ ।
ಸರ್ವಪಾಪವಿನಿರ್ಮುಕ್ತಃ ಕೃಷ್ಣಸಾಯುಜ್ಯಮಾಪ್ನುಯಾತ್ ॥ ೧ ॥
ದುರಿತೌಘಕ್ಷಯಕರಮಮಂಗಲ್ಯವಿನಾಶನಂ ।
ಸರ್ವಕಾಮಪ್ರದಂ ನೃಣಾಂ ಪ್ರಣಮೇದ್ಗೋಮತೀಜಲಂ ॥ ೨ ॥
ಮಹಾಪಾಪಕ್ಷಯಕರಮಗತೀನಾಂ ಗತಿಪ್ರದಂ ।
ಪೂರ್ವಪುಣ್ಯವಶಾತ್ಪ್ರಾಪ್ತಂ ಪ್ರಣಮೇದ್ಗೋಮತೀಜಲಂ ॥ ೩ ॥

ಋಷಯ ಊಚುಃ :—

ದೈತ್ಯೇಂದ್ರ ಸಂಶಯೋಽಸ್ಮಾಕಂ ತಂ ತ್ವಂ ಛೇತ್ತುಮಿಹಾರ್ಹಸಿ ।
ಇಯಂ ಕಾ ಗೋಮತೀ ತತ್ರ ಕೇನಾನೀತಾ ಮಹಾಮತೇ ॥ ೪ ॥

---

### ಕನ್ನಡದ ಅನುವಾದ

### ಭಗವತ್ಪ್ರಾದುರ್ಭಾವಗೋಮತ್ಯುತ್ಪತ್ತಿಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ದ್ವಿಜೋತ್ತಮರೆ ! ಬಳಿಕ ಕೃಷ್ಣನ ಹತ್ತಿರ ವಿರುವ ಗೋಮತೀ ನದಿಗೆ ಹೋಗಬೇಕು. ಇದನ್ನು ನೋಡುವುದರಿಂದ ಮನುಷ್ಯನು ಸಮಸ್ತ ಪಾಪಮುಕ್ತನಾಗಿ ಕೃಷ್ಣ ಸಾಯುಜ್ಯವನ್ನು ಹೊಂದುವನು.

೨–೩. ಪಾಪ ಸಮೂಹವನ್ನು ನಿವಾರಿಸುವುದೂ, ಅಶುಭವನ್ನು ಪರಿಹರಿಸುವುದೂ, ಸಕಲೇಷ್ಟಾರ್ಥಗಳನ್ನು ಕೊಡುವುದೂ, ಮಹಾಪಾತಕವನ್ನು ನೀಗಿಸುವುದೂ, ನಿರ್ಗತಿಕರಿಗೆ ಗತಿಯನ್ನೀಯುವುದೂ, ಪೂರ್ವ ಪುಣ್ಯವಶದಿಂದ ಲಭಿಸಿರುವುದೂ ಆದ ಗೋಮತೀ ಜಲವನ್ನು ವಂದಿಸಬೇಕು.

೪. ಋಷಿಗಳು ಹೇಳುತ್ತಾರೆ :—ದೈತ್ಯರಾಜ ! ನಮಗೊಂದು ಸಂಶಯವುಂಟಾಗಿದೆ. ಅದನ್ನು ನೀನು ಪರಿಹರಿಸಲರ್ಹನಾಗಿರುವೆ. ಪ್ರಾಜ್ಞನೆ ! ಈ ಗೋಮತಿ ನದಿಯು ಯಾವುದು ? ಅಲ್ಲಿಗೆ ಅದನ್ನು ಯಾರು ತಂದರು.

ಕೇನ ಕಾರ್ಯವಶೇನೇಹ ಸಂಪ್ರಾಪ್ತಾ ವರುಣಾಲಯಂ ।
ಸರ್ವಂ ಭಾಗವತಶ್ರೇಷ್ಠ ಹ್ಯೇತದ್ವಿಸ್ತರತೋ ವದ ॥ ೫ ॥

ಪ್ರಹ್ಲಾದ ಉವಾಚ :—

ಏಕಾರ್ಣವೇ ಪುರಾ ಭೂತೇ ನಷ್ಟೇ ಸ್ಥಾವರಜಂಗಮೇ ।
ತದಾ ಬ್ರಹ್ಮಾ ಸಮುಭವದ್ವಿಷ್ಣೋರ್ನಾಭಿಸರೋರುಹಾತ್ ॥ ೬ ॥

ಆದಿಷ್ಟಃ ಪ್ರಭುಣಾ ಬ್ರಹ್ಮಾ ಸೃಜಸ್ವ ವಿವಿಧಾಃ ಪ್ರಜಾಃ ।
ಇತಿ ಧಾತಾ ಸಮಾದಿಷ್ಟೋ ಹರಿಣಾ ಸೃಷ್ಟಿಕಾರಣೇ ॥ ೭ ॥

ಉಕ್ತ್ವಾ ಬಾಢಮಿತಿ ಬ್ರಹ್ಮಾ ತತಃ ಸೃಷ್ಟೌ ಮನೋ ದಧೇ ।
ಸಸರ್ಜ ಮಾನಸಾತ್ಸದ್ಯಃ ಸನಕಾದ್ಯಾನ್ಕುಮಾರಕಾನ್ ।
ಉವಾಚ ವಚನಂ ಬ್ರಹ್ಮಾ ಪ್ರಜಾಃ ಸೃಜತ ಪುತ್ರಕಾಃ ॥ ೮ ॥

ಬ್ರಹ್ಮಣೋ ವಚನಂ ಶ್ರುತ್ವಾ ತೇ ಕೃತಾಂಜಲಯೋಽಬ್ರುವನ್ ।
ಭಗವನ್ಭಗವದ್ರೂಪಂ ದ್ರಷ್ಟುಕಾಮಾ ವಯಂ ಪ್ರಭೋ ॥ ೯ ॥

ನ ಬಂಧಮನುವರ್ತಾಮಃ ಸೃಷ್ಟಿರೂಪಂ ದುರಾಸದಂ ।
ಇತ್ಯುಕ್ತ್ವಾ ತೇ ಯಯುಃ ಸರ್ವೇ ಸನಕಾದ್ಯಾಃ ಕುಮಾರಕಾಃ ॥ ೧೦ ॥

---

೫. ಆ ನದಿಯು ಏತಕ್ಕಾಗಿ ಸಮುದ್ರಕ್ಕೆ ಬಂದಿತು ? ಇದನ್ನೆಲ್ಲ ವಿಸ್ತಾರವಾಗಿ ಹೇಳು.

೬. ಪ್ರಹ್ಲಾದನು ಹೇಳುತ್ತಾನೆ :—ಹಿಂದೆ ಪ್ರಪಂಚವೆಲ್ಲ ಸಮುದ್ರವಾಗಲು ಸ್ಥಾವರಜಂಗಮಾತ್ಮಕ ಪ್ರಪಂಚವು ನಷ್ಟವಾಗಲು ಬ್ರಹ್ಮನು ವಿಷ್ಣುವಿನ ನಾಭಿಕಮಲದಿಂದ ಉದ್ಭವಿಸಿದನು.

೭-೮. ಹರಿಯು ಆ ಬ್ರಹ್ಮನನ್ನು ಬಗೆ ಬಗೆಯ ಪ್ರಜೆಗಳನ್ನು ಸೃಷ್ಟಿಸೆಂದು ಅಪ್ಪಣೆ ಮಾಡಲು ಅವನು ಅದನ್ನು ಒಪ್ಪಿ ಸೃಷ್ಟಿಮಾಡಲಿಚ್ಛಿಸಿ ಮನಸ್ಸಿನಿಂದ ಸನಕಾದಿಗಳನ್ನು ಸೃಷ್ಟಿಮಾಡಿದನು. ಅನಂತರ ಅವರನ್ನು ಕುರಿತು, "ಪುತ್ರರೆ ! ಪ್ರಜೆಗಳನ್ನು ಸೃಷ್ಟಿಸಿರಿ" ಎಂದನು.

೯-೧೦. ಆ ಸನಕಾದಿಗಳು ಬ್ರಹ್ಮನ ಮಾತನ್ನು ಕೇಳಿ ಕೈಮುಗಿದುಕೊಂಡು "ಪೂಜ್ಯನೆ ! ನಾವು ಭಗವಂತನ ರೂಪವನ್ನು ನೋಡಬಯಸುವೆವು. ಮಾಡಲಾಗದ ಸೃಷ್ಟಿರೂಪ ಬಂಧನವನ್ನು ಅನುಸರಿಸಲಾರೆವು". ಎಂದು ಹೇಳಿಹೊರಟು ಹೋದರು.

ಪಶ್ಚಿಮಾಂ ದಿಶಮಾಸ್ಥಾಯ ತೀರೇ ನದನದೀಪತೇಃ ।
ತೇಜೋಮಯಸ್ಯ ರೂಪಸ್ಯ ದ್ರಷ್ಟುಕಾಮಾ ಮಹಾತ್ಮನಃ ॥
ತಸ್ಮಿನ್ಮಾನಸಮಾಧಾಯ ತೇಪಿರೇ ಪರಮಂ ತಪಃ ॥ ೧೧ ॥
ಬಹುವರ್ಷಸಹಸ್ರೈಸ್ತು ಪ್ರಸನ್ನೇ ಧರಣೀಧರೇ ।
ಭಿತ್ವಾ ಜಲಂ ಸಮುತ್ತಸ್ಥೌ ತೇಜೋರೂಪಂ ದುರಾಸದಂ ॥ ೧೨ ॥
ಅನೇಕದೈತ್ಯದಮನಂ ಬಹುಯಂತ್ರವಿದಾರಣಂ ।
ಸೂರ್ಯಕೋಟಿಪ್ರಭಾಭಾಸಂ ಸಹಸ್ರಾರಂ ಸುದರ್ಶನಂ ॥ ೧೩ ॥
ತಂ ದೃಷ್ಟ್ವಾ ವಿಸ್ಮಿತಾಸ್ಸರ್ವೇ ಬ್ರಹ್ಮಪುತ್ರಾಃ ಪರಸ್ಪರಂ ।
ವೀಕ್ಷಮಾಣಾ ಭಗವತಃ ಪರಮಾಯುಧಮುತ್ತಮಂ ॥ ೧೪ ॥
ತಾನ್ವಿಲೋಕ್ಯ ತಥಾಭೂತಾನ್ವಾಗುವಾಚಾಶರೀರಿಣೀ ।
ಭೋ ಬ್ರಹ್ಮಪುತ್ರಾ ಭಗವಾಞ್ಶೀಘ್ರಮಾವಿರ್ಭವಿಷ್ಯತಿ ॥ ೧೫ ॥
ಅರ್ಹಣಾರ್ಥಂ ಭಗವತಃ ಶೀಘ್ರಮರ್ಘ್ಯಂ ಪ್ರಕಲ್ಪ್ಯತಾಂ ।
ಆಯುಧಂ ಲೋಕನಾಥಸ್ಯ ದ್ವಿಜಾಃ ಶೀಘ್ರಂ ಪ್ರಸಾದ್ಯತಾಂ ॥ ೧೬ ॥
ತಚ್ಛ್ರುತ್ವಾSಕಾಶವಚನಂ ತುಷ್ಟುವುಸ್ತೇ ಸುದರ್ಶನಂ ॥ ೧೭ ॥

---

೧೧. ಅವರು ಪಶ್ಚಿಮ ದಿಕ್ಕಿಗೆ ಹೋಗಿ ಸಮುದ್ರದ ದಡದಲ್ಲಿ ಪರಮಾತ್ಮನ ತೇಜೋಮಯವಾದ ರೂಪವನ್ನು ನೋಡಲಿಚ್ಛೆಯಿಂದ ಅವನಲ್ಲಿ ಮನಸ್ಸನ್ನಿಟ್ಟು ತಪಸ್ಸನ್ನು ಮಾಡಿದರು.

೧೨-೧೩. ಅನೇಕ ಸಾವಿರ ವರ್ಷಗಳ ತರುವಾಯ ಶ್ರೀ ವಿಷ್ಣುವು ಪ್ರಸನ್ನನಾಗಲು ತೇಜೋರೂಪವೂ, ಹೊಂದಲಶಕ್ಯವೂ, ಅನೇಕ ದೈತ್ಯರನ್ನು ನಾಶಗೊಳಿಸುವುದೂ, ಅನೇಕ ಯಂತ್ರಗಳನ್ನು ಸೀಳುವುದೂ, ಕೋಟಿ ಸೂರ್ಯರಂತೆ ಕಾಂತಿಯುಳ್ಳುದೂ ಆದ ಸಹಸ್ರಾರಗಳುಳ್ಳ ಸುದರ್ಶನವು ನೀರನ್ನು ಭೇದಿಸಿ ಮೇಲಕ್ಕೆದ್ದಿತು.

೧೪. ಬ್ರಹ್ಮತನಯರಾದ ಆ ಸನಕಾದಿಗಳು ಭಗವಂತನ ಆ ಆಯುಧವನ್ನು ನೋಡಿ ಪರಸ್ಪರವಾಗಿ ಈಕ್ಷಿಸುತ್ತ ಆಶ್ಚರ್ಯಗೊಂಡರು.

೧೫. ಹಾಗೆ ಆಶ್ಚರ್ಯಗೊಂಡಿರುವ ಅವರನ್ನು ಕಂಡು ಅಶರೀರವಾಣಿಯು ಇಂತೆಂದಿತು. "ಎಲೈ ಬ್ರಹ್ಮತನಯರೆ ! ವಿಷ್ಣುವು ಶೀಘ್ರವಾಗಿ ಆವಿರ್ಭವಿಸುವನು.

೧೬. ಅವನ ಪೂಜೆಗೆ ಶೀಘ್ರವಾಗಿ ಅರ್ಘ್ಯವನ್ನು ಸಿದ್ಧಮಾಡಿರಿ. ಅವನ ಈ ಚಕ್ರಾಯುಧವನ್ನು ಸಂತೋಷಗೊಳಿಸಿರಿ".

೧೭. ಆ ಸನಕಾದಿಗಳು ಅಶರೀರವಾಣಿಯನ್ನು ಕೇಳಿ ಸುದರ್ಶನವನ್ನು ಹೀಗೆ ಸ್ತುತಿಸಿದರು.

ಋಷಯ ಊಚುಃ :—
ಜ್ಯೋತಿರ್ಮಯ ನಮಸ್ತೇಽಸ್ತು ನಮಸ್ತೇ ಹರಿವಲ್ಲಭ ।
ಸುದರ್ಶನ ನಮಸ್ತೇಽಸ್ತು ಸಹಸ್ರಾರಾಕ್ಷರಾವ್ಯಯ ॥ ೧೮ ॥
ನಮಸ್ತೇ ಸೂರ್ಯರೂಪಾಯ ಬ್ರಹ್ಮರೂಪಾಯ ತೇ ನಮಃ ।
ಅಮೋಘಾಯ ನಮಸ್ತುಭ್ಯಂ ರಥಾಂಗಾಯ ನಮೋನಮಃ ॥ ೧೯ ॥
ಏವಂ ತೇ ಪೂಜಯಾಮಾಸುಃ ಸುಮನೋಭಿಸ್ತಥಾಕ್ಷತೈಃ ।
ಸ್ತವೈರ್ನಾನಾವಿಧೈಃ ಸ್ತುತ್ವಾ ಪ್ರಣೇಮುರ್ಹರಿವಲ್ಲಭಂ ॥
ತತ್ಪ್ರಸಾದ್ಯ ಸುನಾಭಂ ತು ಪ್ರಭುಸಂದರ್ಶನೋತ್ಸುಕಾಃ ॥ ೨೦ ॥
ಅಸ್ಮರನ್ಮನಸಾ ದೇವಂ ಬ್ರಹ್ಮಾಣಂ ಪಿತರಂ ಸ್ವಕಂ ।
ತೇಷಾಂ ತು ಚಿಂತಿತಂ ಜ್ಞಾತ್ವಾ ಬ್ರಹ್ಮಾ ಗಂಗಾಮಥಾಬ್ರವೀತ್ ॥ ೨೧ ॥
ಯಾಹಿ ಶೀಘ್ರಂ ಸರಿಚ್ಛ್ರೇಷ್ಠೇ ಪೃಥಿವ್ಯಾಂ ಹರಿಕಾರಣಾತ್ ।
ಗಾಂ ಗತಾ ತ್ವಂ ಮಹಾಭಾಗೇ ತತೋ ಬಹುಮತಾಸಿ ಮೇ ॥ ೨೨ ॥
ಉರ್ವ್ಯಾಂ ತೇ ಗೋಮತೀನಾಮ ಸುಪ್ರಸಿದ್ಧಂ ಭವಿಷ್ಯತಿ ॥ ೨೩ ॥

---

೧೮. ಋಷಿಗಳು ಹೇಳುತ್ತಾರೆ :—ತೇಜೋರೂಪನೂ, ವಿಷ್ಣುಪ್ರಿಯನೂ, ಸಾವಿರ ಅರಗಳುಳ್ಳವನೂ, ನಾಶವಿಲ್ಲದವನೂ ಆದ ಸುದರ್ಶನ! ನಿನಗೆ ನಮಸ್ಕಾರವು.

೧೯. ಸೂರ್ಯರೂಪನೂ, ಬ್ರಹ್ಮರೂಪನೂ, ಸಫಲನೂ, ರಥದ ಅವಯವವೂ ಆದ ಸುದರ್ಶನ! ನಿನಗೆ ನಮಸ್ಕಾರವು.

೨೦. ಹೀಗೆ ಸ್ತುತಿಸಿ ಅವರು ಹೂವುಗಳಿಂದಲೂ, ಅಕ್ಷತೆಗಳಿಂದಲೂ ಚಕ್ರವನ್ನು ಪೂಜಿಸಿದರು.

೨೧. ನಾನಾವಿಧ ಸ್ತೋತ್ರಗಳಿಂದ ಸ್ತುತಿಸಿ ಹರಿಪ್ರಿಯವಾದ ಚಕ್ರವನ್ನು ವಂದಿಸಿದರು. ಅದನ್ನು ಸಂತೋಷಗೊಳಿಸಿ ವಿಷ್ಣುವನ್ನು ನೋಡಲು ಕುತೂಹಲವುಳ್ಳವರಾಗಿ ಮನಸ್ಸಿನಿಂದ ತಮ್ಮ ತಂದೆಯಾದ ಬ್ರಹ್ಮನನ್ನು ಸ್ಮರಿಸಿದರು. ಬ್ರಹ್ಮನು ಅವರ ಅಭಿಪ್ರಾಯವನ್ನರಿತು ಗಂಗೆಯನ್ನು ಕುರಿತು ಇಂತೆಂದರು.

೨೨. "ನದಿಗಳಲ್ಲಿ ಉತ್ತಮಳಾದ ಗಂಗೆಯೆ! ನೀನು ವಿಷ್ಣುವಿಗಾಗಿ ಶೀಘ್ರವಾಗಿ ಭೂಮಿಗೆ ತೆರಳು. ಪುಣ್ಯಶಾಲಿನಿಯೆ! ನೀನು ಭೂಮಿಯನ್ನು ಸೇರಿ ನನಗೆ ಬಹು ಮಾನ ವಿಷಯಳಾಗುವೆ.

೨೩. ಭೂಮಿಯಲ್ಲಿ ನಿನಗೆ ಗೋಮತಿಯೆಂಬ ಹೆಸರು ಪ್ರಸಿದ್ಧವಾಗುವುದು.

ವಸಿಷ್ಠಸ್ಯಾನುಗಾ ಭೂತ್ವಾ ಯಾಹಿ ಶೀಘ್ರಂ ಧರಾತಲಂ ।
ತಾತಂ ಪುತ್ರೀವಾಸುಯಾತಾ ವಸಿಷ್ಠತನಯಾ ಭವ ॥ ೨೪ ॥
ಬಾಢಮಿತ್ಯೇವ ಸಾ ದೇವೀ ಪ್ರಸ್ಥಿತಾ ವರುಣಾಲಯಂ ।
ವಸಿಷ್ಠಸ್ತ್ವಗ್ರತೋ ಯಾತಿ ತಂ ಗಂಗಾ ಪೃಷ್ಠತೋಽನ್ವಗಾತ್ ॥ ೨೫ ॥
ತಾಂ ದೃಷ್ಟ್ವಾ ಮನುಜಾಸ್ಸರ್ವೇ ವಸಿಷ್ಠೇನ ಸಮನ್ವಿತಾಂ ।
ನಮಶ್ಚಕ್ರುರ್ಮಹಾಭಾಗಾಂ ಗಚ್ಛಂತೀಂ ಪಶ್ಚಿಮಾರ್ಣವಂ ॥ ೨೬ ॥
ಆವಿರ್ಬಭೂವ ತತ್ರೈವ ಯತ್ರ ತೇ ಮುನಯಃ ಸ್ಥಿತಾಃ ।
ದ್ರಷ್ಟುಕಾಮಾ ಹರೇ ರೂಪಂ ಶ್ರಿಯಾ ಜುಷ್ಟಂ ಚತುರ್ಭುಜಂ ॥ ೨೭ ॥
ದೃಷ್ಟ್ವಾ ವಸಿಷ್ಠಮನುಗಾಮಾಯಾಂತೀಂ ಸುರಪಾವನೀಂ ।
ಅವಾಕಿರನ್ಮಹಾಭಾಗಾಂ ಸುಮನೋಭಿಶ್ಚ ಸರ್ವಶಃ ॥ ೨೮ ॥
ದಿವ್ಯೈರ್ಮಾಲ್ಯೈಃ ಸುಗಂಧೈಶ್ಚ ಗಂಧಧೂಪೈಸ್ತಥಾಽಕ್ಷತೈಃ ।
ಸಂಪೂಜ್ಯ ಹೃಷ್ಟಮನಸಃ ಸಾಧುಸಾಧ್ವಿತಿ ಚಾಬ್ರುವನ್ ॥ ೨೯ ॥
ವಸಿಷ್ಠಂ ತೇಽಗ್ರಗಂ ದೃಷ್ಟ್ವಾ ಹ್ಯುದತಿಷ್ಠಂಸ್ತತೋ ದ್ವಿಜಾಃ ।
ಅರ್ಘ್ಯಾದಿಸತ್ಕ್ರಿಯಾಂ ಕೃತ್ವಾ ಪ್ರಹೃಷ್ಟಾ ಇದಮಬ್ರುವನ್ ॥ ೩೦ ॥

---

೨೪. ನೀನು ತಂದೆಯನ್ನು ಮಗಳು ಹಿಂಬಾಲಿಸುವಂತೆ ವಸಿಷ್ಠನನ್ನು ಅನುಸರಿಸಿ ಧರೆಗೆ ಹೋಗಿ ಆ ಮುನಿಗೆ ಮಗಳಾಗು.

೨೫. ಗಂಗೆಯು ಅದಕ್ಕೆ ಒಪ್ಪಿ ವಸಿಷ್ಠನು ಮುಂದೆ ಹೋಗುತ್ತಿರಲು ಅವನ ಹಿಂದೆ ಅನುಸರಿಸಿ ಸಮುದ್ರಕ್ಕೆ ಹೋದಳು.

೨೬. ಸಮಸ್ತ ಮಾನವರೂ ವಸಿಷ್ಠನೊಡನೆ ಪಶ್ಚಿಮ ಸಮುದ್ರಕ್ಕೆ ಹೋಗುತ್ತಿರುವ ಗಂಗೆಯನ್ನು ನೋಡಿ ನಮಸ್ಕಾರಮಾಡಿದರು.

೨೭. ಆವಳು ಮುನಿಗಳು ಲಕ್ಷ್ಮಿಯೊಡನೆ ಕೂಡಿರುವ ವಿಷ್ಣುವಿನ ರೂಪವನ್ನು ನೋಡಲು ಕಾದಿರುವ ಸ್ಥಳದಲ್ಲಿ ಆವಿರ್ಭವಿಸಿದಳು.

೨೮. ಆ ಮುನಿಗಳು ವಸಿಷ್ಠನೊಡನೆ ಬರುತ್ತಿರುವ ಮಹಾತ್ಮಳಾದ ಸುರನದಿಗೆ ಎಲ್ಲೆಡೆಯಲ್ಲಿಯೂ ಪುಷ್ಪಗಳನ್ನು ಎರಚಿದರು.

೨೯. ದಿವ್ಯಮಾಲ್ಯಗಳಿಂದಲೂ, ಸುಗಂಧವಾದ ಗಂಧಧೂಪಗಳಿಂದಲೂ ಅಕ್ಷತೆಗಳಿಂದಲೂ ಪೂಜಿಸಿ ಸಂತೋಷಗೊಂಡು ಒಳ್ಳೆಯದು ಒಳ್ಳೆಯದು ಎಂದರು.

೩೦. ಬಳಿಕ ಆ ದ್ವಿಜರು ಮುಂದಿರುವ ವಸಿಷ್ಠನನ್ನು ನೋಡಿ ಮೇಲಕ್ಕೆದ್ದು ಅರ್ಘ್ಯಾದಿಗಳಿಂದ ಪೂಜಿಸಿ ಸಂತೋಷದಿಂದ ಇಂತೆಂದರು.

ಯಸ್ಮಾತ್ತ್ವಯಾ ಸಮಾನೀತಾ ಹ್ಯಸ್ಮಿಲ್ಲೋಕೇ ಸರಿದ್ವರಾ ।
ತಸ್ಮಾತ್ತವ ಸುತೇತ್ಯೇವಂ ಖ್ಯಾತಿಂ ಲೋಕೇ ಗಮಿಷ್ಯತಿ ॥ ೩೧ ॥
ಗೋಃ ಸ್ವರ್ಗಾದಾಗತಾ ಯಸ್ಮಾದಿದಂ ಸ್ಥಾನಂ ಮತೀ ಮತಾ ।
ತಸ್ಮಾದ್ಧಿ ಗೋಮತೀನಾಮ ಖ್ಯಾತಿಂ ಲೋಕೇ ಗಮಿಷ್ಯತಿ ॥ ೩೨ ॥
ಅಸ್ಯಾ ದರ್ಶನಮಾತ್ರೇಣ ಮುಕ್ತಿಂ ಯಾಸ್ಯಂತಿ ಮಾನವಾಃ ।
ಕಿಂ ಪುನಃ ಸ್ನಾನದಾನಾದಿ ಕೃತ್ವಾ ಯಾಂತಿ ಹರೇಃ ಪದಂ ॥ ೩೩ ॥
ತಾಮೇವ ಚಾರ್ಘ್ಯಂ ದತ್ವಾ ತೇ ಯೋಗೀಂದ್ರಾ ಈಡಿರೇ ಹರಿಂ ।
ಪರಂ ಪುರುಷಸೂಕ್ತೇನ ಪುರುಷಂ ಶೇಷಶಾಯಿನಂ ॥ ೩೪ ॥
ಇತಿ ಸಂಸ್ತುವತಾಂ ತೇಷಾಂ ಹರಿರಾವಿರ್ಬಭೂವ ಹ ।
ಪೀತಕೌಶೇಯವಸನೋ ವನಮಾಲಾವಿಭೂಷಿತಃ ।
ದಿವ್ಯಮಾಲ್ಯಾನುಲಿಪ್ತಾಂಗೋ ವನಮಾಲಾವಿಭೂಷಿತಃ ॥ ೩೫ ॥
ಶೇಷಾಸನಗತಂ ದೇವಂ ದಿವ್ಯಾನೇಕೋದ್ಯತಾಯುಧಂ ।
ಜ್ವಲತ್ಕಿರೀಟಮುಕುಟಂ ಸ್ಫುರನ್ಮಕರಕುಂಡಲಂ ॥ ೩೬ ॥

---

೩೧. ನೀನು ಈ ಉತ್ತಮ ನದಿಯನ್ನು ಈ ಲೋಕಕ್ಕೆ ತಂದುದರಿಂದ ಇವಳು ನಿನ್ನ ಮಗಳೆಂದು ವಿಖ್ಯಾತಳಾಗುವಳು.

೩೨. ಇವಳು ಸ್ವರ್ಗದಿಂದ ಬಂದದ್ದರಿಂದಲೂ, ಈ ಸ್ಥಳವು ಮತೀ ಎಂದು ಪ್ರಸಿದ್ಧವಾದ್ದರಿಂದಲೂ ಗೋಮತೀ ಎಂದು ಪ್ರಸಿದ್ಧಳಾಗುವಳು.

೩೩. ಇವಳ ದರ್ಶನದಿಂದಲೇ ಮಾನವರು ಮುಕ್ತರಾಗುವರು. ಸ್ನಾನದಾನಾದಿಗಳನ್ನು ಮಾಡುವುದರಿಂದ ವೈಕುಂಠವನ್ನು ಸೇರುವರೆಂದು ಏನು ಹೇಳತಕ್ಕದ್ದು?.

೩೪. ಆ ಯೋಗೀಂದ್ರರು ಆ ಗಂಗೆಯನ್ನೆ ಹರಿಗೆ ಅರ್ಘ್ಯವಾಗಿ ಕೊಟ್ಟು ಶೇಷಶಾಯಿಯಾದ ಅವನನ್ನು ಪುರುಷಸೂಕ್ತದಿಂದ ಸ್ತುತಿಸಿದರು.

೩೫. ಹೀಗೆ ಅವರು ಸ್ತುತಿಗೈಯುತ್ತಿರುವಾಗಲೆ ಪೀತಾಂಬರಧಾರಿಯೂ, ವನಮಾಲೆಯಿಂದ ಅಲಂಕಾರಗೊಂಡವನೂ, ದಿವ್ಯಮಾಲೆ, ಅನುಲೇಪನ, ಆಭರಣಗಳುಳ್ಳವನೂ ಆದ ಹರಿಯು ಪ್ರತ್ಯಕ್ಷನಾದನು.

೩೬–೩೮. ಆ ಸಮಸ್ತ ಮುನಿಗಳೂ ಶೇಷಾಸನದಲ್ಲಿರುವವನೂ, ದಿವ್ಯವಾದ ಅನೇಕ ಆಯುಧಗಳುಳ್ಳವನೂ. ಜಾಜ್ವಲ್ಯಮಾನ ಕಿರೀಟವನ್ನು ಧರಿಸಿದವನೂ,

ಭಕ್ತಾಭಯಪ್ರದಂ ಶಾಂತಂ ಶ್ರೀವತ್ಸಾಂಕಂ ಮಹಾಭುಜಂ ।
ಸದಾ ಪ್ರಸನ್ನವದನಂ ಘನಶ್ಯಾಮಮಂ ಚತುರ್ಭುಜಂ ॥ ೩೭ ॥
ಪಾದಸಂವಾಹನಾಸಕ್ತಲಕ್ಷ್ಮ್ಯಾ ಜುಷ್ಟಂ ಮನೋಹರಂ ।
ತಂ ದೃಷ್ಟ್ವಾ ಮುನಯಃ ಸರ್ವೇ ಹರ್ಷೋತ್ಕರ್ಷಸಮನ್ವಿತಾಃ ।
ವಿಷ್ಣುಂ ತೇ ವಿಷ್ಣುಸೂಕ್ತೈಶ್ಚ ತುಷ್ಟುವುಃ ವೇದಸಂಭವೈಃ ॥ ೩೮ ॥
ಏವಂ ಸಂಸ್ತುವತಾಂ ತೇಷಾಂ ವಿಷ್ಣುರ್ದೀನಾನುಕಂಪಕಃ ।
ಉವಾಚ ಸುಪ್ರಸನ್ನೇನ ಮನಸಾ ದ್ವಿಜಸತ್ತಮಾನ್ ॥ ೩೯ ॥
ಶ್ರೀ ಭಗವಾನುವಾಚ :—
ಭೋಭೋಃ ಕುಮಾರಾಸ್ತುಷ್ಟೋಽಹಂ ಪ್ರದಾಸ್ಯಾಮಿ ಯಥೇಽಪ್ಸಿತಂ ।
ಭವಿಷ್ಯಥ ಜ್ಞಾನಯುತಾ ಅಸ್ಪೃಷ್ಟಾ ಮಮ ಮಾಯಯಾ ॥ ೪೦ ॥
ಯಸ್ಮಾನ್ಮೋಕ್ಷಾರ್ಥಿಭಿರ್ವಿಪ್ರಾಃ ಜಲೇನಾಹಂ ಪ್ರಸಾದಿತಃ ।
ತಸ್ಮಾದಿದಂ ಪದಂ ತೀರ್ಥಂ ಸರ್ವಕಾಮಪ್ರದಂ ಪರಂ ॥ ೪೧ ॥
ಅನುಗ್ರಹಾಯ ಭವತಾಂ ಯತ್ರ ಚಕ್ರಂ ಸುದರ್ಶನಂ ।
ನಿಸ್ಸೃತಂ ಪ್ರಥಮಂ ವಿಪ್ರಾ ಜಲಂ ಭಿತ್ವಾ ಮಮಾಗ್ರತಃ ॥ ೪೨ ॥

---

ಪ್ರಕಾಶಿಸುವ ಮಕರಕುಂಡಲಧಾರಿಯೂ, ಭಕ್ತರಿಗೆ ಅಭಯವನ್ನೀಯುವವನೂ, ಶಾಂತನೂ, ಶ್ರೀವತ್ಸವೆಂಬ ಮಚ್ಚೆಯುಳ್ಳವನೂ, ಉದ್ದವಾದ ತೋಳುಗಳುಳ್ಳವನೂ ಯಾವಾಗಲೂ ಪ್ರಸನ್ನವಾದ ಮುಖವುಳ್ಳವನೂ, ಮೇಘಶ್ಯಾಮಲನೂ, ನಾಲ್ಕು ಭುಜಗಳುಳ್ಳವನೂ ಕಾಲನ್ನು ಒತ್ತುವುದರಲ್ಲಿ ಆಸಕ್ತಳಾದ ಲಕ್ಷ್ಮಿಯಿಂದ ಸೇವಿಸಲ್ಪಟ್ಟವನೂ, ಸುಂದರನೂ ಆದ ಆ ವಿಷ್ಣುವನ್ನು ಕಂಡು ಅತ್ಯಾನಂದಭರಿತರಾಗಿ ವೇದೋಕ್ತಗಳಾದ ವಿಷ್ಣುಸೂಕ್ತಗಳಿಂದ ಸ್ತುತಿಸಿದರು.

೩೯. ಅವರು ಹೀಗೆ ಸ್ತುತಿಸುತ್ತಿರಲು ದೀನದಯಾಳುವಾದ ವಿಷ್ಣುವು ಪ್ರಸನ್ನವಾದ ಮನಸ್ಸಿನಿಂದ ಆ ಬ್ರಾಹ್ಮಣೋತ್ತಮರನ್ನು ಕುರಿತು ಇಂತೆಂದನು.

೪೦. ಶ್ರೀ ಭಗವಂತನು ಹೇಳುತ್ತಾನೆ :— ಎಲೈ ಕುಮಾರರೆ ! ನಾನು ನಿಮ್ಮ ವಿಷಯದಲ್ಲಿ ಮೆಚ್ಚಿರುವೆನು. ನಿಮಗಿಷ್ಟವಾದುದನ್ನು ಕೊಡುವೆನು. ನೀವು ನನ್ನ ಮಾಯೆಯ ಸಂಬಂಧವಿಲ್ಲದೆ ಜ್ಞಾನಿಗಳಾಗಿರಿ.

೪೧. ಮೋಕ್ಷವನ್ನು ಬಯಸುವ ನೀವು ಜಲದಿಂದ ನನ್ನನ್ನು ಸಂತೋಷಗೊಳಿಸಿದ ಕಾರಣ ಇದು ಸಕಲೇಷ್ಟಾರ್ಥಗಳನ್ನೀಯುವ ಉತ್ತಮ ತೀರ್ಥವಾಗಲಿ.

೪೨-೪೩. ವಿಪ್ರರೆ ! ನಿಮ್ಮನ್ನು ಅನುಗ್ರಹಿಸುವುದಕ್ಕಾಗಿ ಸುದರ್ಶನವು ಇಲ್ಲಿ ಮೊದಲು ನೀರನ್ನು ಭೇದಿಸಿಕೊಂಡು ನನ್ನ ಮುಂದೆ ಆವಿರ್ಭವಿಸಿದ್ದರಿಂದ ಇದು

ಚಕ್ರತೀರ್ಥಮಿತಿ ಖ್ಯಾತಂ ತಸ್ಮಾದೇತದ್ಭವಿಷ್ಯತಿ ।
ಮಮಾಪಿ ನಿಯತಂ ವಾಸೋ ಭವಿಷ್ಯತಿ ಮಹಾರ್ಣವೇ ॥ ೪೩ ॥
ಯೇಽತ್ರ ಸ್ನಾನಂ ಪ್ರಕುರ್ವಂತಿ ಪ್ರಸಂಗೇನಾಪಿ ಮಾನವಾಃ ।
ಚಕ್ರತೀರ್ಥೇ ದ್ವಿಜಶ್ರೇಷ್ಠಾಸ್ತೇಷಾಂ ಮುಕ್ತಿಃ ಕರೇ ಸ್ಥಿತಾ ॥ ೪೪ ॥
ಭವಂತೋಽಪಿ ಸದಾ ಹ್ಯತ್ರ ತಿಷ್ಠಧ್ವಂ ಚ ದ್ವಿಜರ್ಷಭಾಃ ।
ವಾಯುಭೂತಾಂತರಿಕ್ಷಸ್ಥಾಃ ಸರ್ವಕಾಮಸ್ಯ ದಾಯಕಾಃ ॥ ೪೫ ॥

ಪ್ರಹ್ಲಾದ ಉವಾಚ:—

ತಚ್ಛ್ರುತ್ವಾ ಹೃಷ್ಟಮನಸಃ ಕೃತ್ವಾರ್ಘ್ಯಂ ಸುರಪಾವನೀಂ ।
ಅವನಿಜ್ಯ ಹರೇಃ ಪಾದೌ ಮೂರ್ಧ್ನಾಽಪಶ್ಚಾಪ್ಯಧಾರಯನ್ ॥ ೪೬ ॥
ಪ್ರಕ್ಷಾಲ್ಯ ಸಾ ಹರೇಃ ಪಾದೌ ಪ್ರವಿಷ್ಟಾ ವರುಣಾಲಯಂ ।
ತಸ್ಮಿನ್ಮಹಾಪಾಪಹರಾ ಗೋಮತೀ ಸಾಗರಂ ಗತಾ ॥ ೪೭ ॥
ವರಂ ದತ್ವಾ ತತೋ ವಿಷ್ಣುಸ್ತತ್ರೈವಾಂತರಧೀಯತ ।
ಸನಕಾದ್ಯಾ ಬ್ರಹ್ಮಸುತಾಸ್ತಸ್ಥುಸ್ತತ್ರ ಸಮಾಹಿತಾಃ ॥ ೪೮ ॥

---

ಚಕ್ರತೀರ್ಥವೆಂದು ಪ್ರಖ್ಯಾತವಾಗುವುದು. ನಾನೂ ನಿಶ್ಚಯವಾಗಿ ಈ ಸಮುದ್ರದಲ್ಲಿ ವಾಸಿಸುವೆನು.

೪೪. ದ್ವಿಜೋತ್ತಮರೆ! ಅಕಸ್ಮಾತ್ತಾಗಿ ಈ ಚಕ್ರತೀರ್ಥದಲ್ಲಿ ಮಿಂದ ಮನುಷ್ಯರಿಗೆ ಕೈಯಲ್ಲಿಯೇ ಮೋಕ್ಷವು ನೆಲಸಿರುವುದು.

೪೫. ದ್ವಿಜೋತ್ತಮರೆ! ವಾಯುರೂಪರೂ, ಆಕಾಶದಲ್ಲಿರುವವರೂ ಸಕಲೇಷ್ಟಾರ್ಥಗಳನ್ನು ಕೊಡುವವರೂ ಆಗಿ ಇಲ್ಲಿಯೇ ನೆಲೆಸಿರಿ.

೪೬. ಪ್ರಹ್ಲಾದನು ಹೇಳುತ್ತಾನೆ:—ಆ ಮುನಿಗಳು ಅದನ್ನು ಕೇಳಿ ಸಂತೋಷಗೊಂಡ ಮನಸ್ಸುಳ್ಳವರಾಗಿ ಗಂಗೆಯನ್ನು ಅರ್ಘ್ಯವಾಗಿಸಿ ಹರಿಯ ಪಾದವನ್ನು ತೊಳೆದು ಆ ನೀರನ್ನು ತಲೆಯಲ್ಲಿ ಧರಿಸಿದರು.

೪೭. ಅತ್ಯಂತ ಪಾಪವನ್ನು ನಿವಾರಿಸುವ ಆ ಗೋಮತಿಯು ವಿಷ್ಣುವಿನ ಪಾದವನ್ನು ತೊಳೆದು ವರುಣನ ಮನೆಯಾದ ಸಮುದ್ರಕ್ಕೆ ತೆರಳಿದಳು.

೪೮–೪೯. ವಿಷ್ಣುವು ವರವನ್ನಿತ್ತು ಅಲ್ಲಿಯೇ ಮಾಯವಾದನು. ಬ್ರಹ್ಮತನಯರಾದ ಸನಕಾದಿಗಳು ಸಾವಧಾನ ಮನಸ್ಸಿನಿಂದ ಅಲ್ಲಿಯೇ ಇದ್ದರು. ಹೀಗೆ ಆ ಗೋಮತಿಯು

ಏವಂ ಸಾ ಗೋಮತೀ ತತ್ರ ಸಂಜಾತಾ ಸಾಗರಂಗಮಾ ।
ಸರ್ವಪಾಪಹರಾ ಪ್ರೋಕ್ತಾ ಪೂರ್ವಗಂಗೇತಿ ಯಾ ಶ್ರುತಾ ॥ ೪೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಗೋಮತ್ಯುತ್ಪತ್ತಿಮಾಹಾತ್ಮ್ಯವರ್ಣನಂ ನಾಮ
ಪಂಚಮೋಽಧ್ಯಾಯಃ

---

ಸಾಗರವನ್ನು ಸೇರಿದವಳೂ, ಸಕಲ ಪಾಪಗಳನ್ನು ಪರಿಹರಿಸುವವಳೂ, ಪೂರ್ವಗಂಗೆಯೆಂದು ವಿಖ್ಯಾತಳೂ ಆದಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಹಾತ್ಮ್ಯದಲ್ಲಿ
ಗೋಮತ್ಯುತ್ಪತ್ತಿಮಾಹಾತ್ಮ್ಯವರ್ಣನವೆಂಬ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷಷ್ಠೋಽಧ್ಯಾಯಃ

### ಗೋಪುತ್ರ್ಯಾದಧಿಸಂಗಮಸ್ನಾನದಾನಾದಿಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಸಾಧು ಸಾಧು ಮಹಾಭಾಗ ಪ್ರಹ್ಲಾದಅಸುರೋತ್ತಮ ।
ಯೇನ ನಃ ಕಲಿಮಧ್ಯೇ ತು ದರ್ಶಿತೋ ಭಗವಾನ್ಹರಿಃ ॥ ೧ ॥
ತ್ವನ್ಮುಖಕ್ಷೀರಸಿಂಧೂತ್ಥಾ ಕಥೇಯಮಮೃತೋಪಮಾ ।
ಕರ್ಣಾಭ್ಯಾಂ ಪಿಬತಾಂ ತೃಪ್ತಿರ್ಮುನೀನಾಂ ನ ಪ್ರಜಾಯತೇ ।
ಕಥಯಸ್ವ ಮಹಾಬಾಹೋ ತೀರ್ಥಯಾತ್ರಾಂ ಸುವಿಸ್ತರಾಂ ॥ ೨ ॥
ಅಸ್ಮಾಭಿಸ್ತತ್ರ ಗಂತವ್ಯಂ ವಹತೇ ಯತ್ರ ಗೋಮತೀ ।
ತಿಷ್ಠತೇ ಯತ್ರ ಭಗವಾಂಶ್ಚಕ್ರತೀರ್ಥಾವಲೋಕಕಃ ॥ ೩ ॥
ಭವಾಬ್ಧೌ ಪತಿತಾಂಸ್ತಾತ ಉದ್ಧರಸ್ವ ಮಹಾರ್ಣವಾತ್ ।
ತೀರ್ಥಯಾತ್ರಾವಿಧಾನಂ ಚ ಕಥಯಸ್ವ ಮಹಾಮತೇ ॥ ೪ ॥

---

### ಕನ್ನಡದ ಅನುವಾದ

### ಗೋಪುತ್ರ್ಯದಧಿಸಂಗಮಸ್ನಾನದಾನಾತಿಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಎಲೈ ಮಹಾತ್ಮನಾದ ಪ್ರಹ್ಲಾದನೇ! ಒಳ್ಳೆಯದು ಒಳ್ಳೆಯದು ನೀನು ನಮಗೆ ಕಲಿಮಧ್ಯದಲ್ಲಿ ಪೂಜ್ಯನಾದ ವಿಷ್ಣುವನ್ನು ತೋರಿಸಿರುವೆ.

೨. ನಿನ್ನ ಮುಖವೆಂಬ ಕ್ಷೀರಸಮುದ್ರದಿಂದ ಹುಟ್ಟಿದ ಅಮೃತದಂತಿರುವ ಈ ಕಥೆಯನ್ನು ಕಿವಿಯಿಂದ ಕೇಳುತ್ತಿರುವ ಮುನಿಗಳಿಗೆ ತೃಪ್ತಿಯುಂಟಾಗುವುದಿಲ್ಲ. ಮಹಾಬಾಹುವೆ! ನೀನು ಯಾತ್ರೆಯನ್ನು ನಮಗೆ ವಿಸ್ತಾರವಾಗಿ ಹೇಳು.

೩. ಚಕ್ರತೀರ್ಥವನ್ನು ಈಕ್ಷಿಸುವ ಶ್ರೀಕೃಷ್ಣನಿರುವ ಗೋಮತೀನದಿಯೆಡೆಗೆ ನಾವು ಹೋಗಬೇಕು.

೪. ತಾತ! ಸಂಸಾರ ಸಮುದ್ರದಲ್ಲಿ ಬೀಳುತ್ತಿರುವ ನಮ್ಮನ್ನು ಆ ಸಂಸಾರ ಸಾಗರದಿಂದ ಉದ್ಧರಿಸು. ನಮಗೆ ತೀರ್ಥಯಾತ್ರಾರೀತಿಯನ್ನೂ ಹೇಳು.

ಪ್ರಹ್ಲಾದ ಉವಾಚ :—

ಗತ್ವಾ ತು ಗೋಮತೀತೀರೇ ಪ್ರಣಮೇದ್ದಂಡವಚ್ಚ ತಾಂ ।
ಪ್ರಕ್ಷಾಲ್ಯ ಪಾಣಿಪಾದೌ ಚ ಕೃತ್ವಾ ಚ ಕರಯೋಃ ಕುಶಾ ॥ ೫ ॥
ಗೃಹೀತ್ವಾ ತು ಫಲಂ ಶುಭ್ರಮಕ್ಷತೈಶ್ಚ ಸಮನ್ವಿತಂ ।
ಪ್ರಾಙ್ಮುಖಃ ಪ್ರಯತೋ ಭೂತ್ವಾ ದದ್ಯಾದರ್ಘ್ಯಂ ವಿಧಾನತಃ ॥ ೬ ॥
ಬ್ರಹ್ಮಲೋಕಾತ್ಸಮಾಯಾತೇ ವಸಿಷ್ಠತನಯೇ ಶುಭೇ ।
ಸರ್ವಪಾಪವಿಶುದ್ಧ್ಯರ್ಥಂ ದದಾಮ್ಯರ್ಘ್ಯಂ ತು ಗೋಮತಿ ॥ ೭ ॥
ವಸಿಷ್ಠತನಯೇ ದೇವಿ ಸುರವಂದ್ಯೇ ಯಶಸ್ವಿನಿ ।
ತ್ರೈಲೋಕ್ಯವಂದಿತೇ ದೇವಿ ಪಾಪಂ ಮೇ ಹರ ಗೋಮತಿ ॥ ೮ ॥
ಇತ್ಯುಚ್ಚಾರ್ಯ ದ್ವಿಜಶ್ರೇಷ್ಠಾ ಮೃದಮಾಲಭ್ಯ ಪಾಣಿನಾ ।
ವಿಷ್ಣುಂ ಸಂಸ್ಮೃತ್ಯ ಮನಸಾ ಮಂತ್ರಮೇತದುದೀರಯೇತ್ ॥ ೯ ॥
ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ ।
ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ ॥ ೧೦ ॥

---

೫–೬. ಪ್ರಹ್ಲಾದನು ಹೇಳುತಾನೆ:—ಗೋಮತೀ ತೀರಕ್ಕೆ ಹೋಗಿ ಅವಳಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಅನಂತರ ಕೈಕಾಲುಗಳನ್ನು ತೊಳೆದುಕೊಂಡು ಕೈಯಲ್ಲಿ ದರ್ಭೆಯನ್ನು ಹಿಡಿದು ಅಕ್ಷತೆಗಳೊಡನೆ ಫಲವನ್ನು ಹಿಡಿದು ಪೂರ್ವಾಭಿಮುಖವಾಗಿ ನಿಂತು ಶುದ್ಧನಾಗಿ ವಿಧಿಯಂತೆ ಅರ್ಘ್ಯವನ್ನು ಕೊಡಬೇಕು.

೭. ಬ್ರಹ್ಮಲೋಕದಿಂದ ಬಂದವಳೂ, ವಸಿಷ್ಠನ ಮಗಳೂ ಆದ ಗೋಮತಿಯೆ! ಸಕಲ ಪಾಪ ಶುದ್ಧಿಗಾಗಿ ನಿನಗೆ ಅರ್ಘ್ಯವನ್ನು ಕೊಡುವೆನು.

೮. ವಸಿಷ್ಠನ ಮಗಳೂ, ದೇವತೆಗಳಿಂದ ನಮಸ್ಕೃತಳೂ, ಕೀರ್ತಿಮತಿಯೂ, ತ್ರಿಲೋಕ ಪೂಜ್ಯಳೂ ಆದ ಗೋಮತಿಯೆ! ನನ್ನ ಪಾಪವನ್ನು ನಿವಾರಿಸು.

೯. ದ್ವಿಜೋತ್ತಮರೆ! ಈ ಮಂತ್ರವನ್ನುಚ್ಚರಿಸಿ ಕೈಯಿಂದ ಮೃತ್ತಿಕೆಯನ್ನು ತೆಗೆದುಕೊಂಡು ಮನಸ್ಸಿನಿಂದ ವಿಷ್ಣುವನ್ನು ಸ್ಮರಿಸಿ ಈ ಮಂತ್ರವನ್ನು ಹೇಳಬೇಕು.

೧೦. ಅಶ್ವ, ರಥ, ವಿಷ್ಣು ಇವರಿಂದ ಆಕ್ರಾಂತಳಾದ ಭೂದೇವಿಯೆ! ಅನೇಕ ತೋಳುಗಳುಳ್ಳ ವರಾಹರೂಪಿಯಾದ ವಿಷ್ಣುವು ನಿನ್ನನ್ನು ಎತ್ತಿರುವನು.

ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ಪೂರ್ವಸಂಚಿತಂ ।
ತ್ವಯಾ ಹತೇನ ಪಾಪೇನ ಪೂತಃ ಸಂವತ್ಸರಂ ಭವೇತ್ ॥ ೧೧ ॥
ಇತ್ಯೇವಂ ಮೃದಮಾಲಿಪ್ಯ ಸ್ನಾನಂ ಕುರ್ಯಾದ್ಯಥಾವಿಧಿ ।
ಆಪೋ ಅಸ್ಮಾನಿತಿ ಸ್ನಾತ್ವಾ ಶೃಣುಧ್ವಂ ಯತ್ಫಲಂ ಲಭೇತ್ ॥ ೧೨ ॥
ಕುರುಕ್ಷೇತ್ರೇ ಚ ಯತ್ಪುಣ್ಯಂ ರಾಹುಗ್ರಸ್ತೇ ದಿವಾಕರೇ ।
ಸ್ನಾನಮಾತ್ರೇಣ ತತ್ಪುಣ್ಯಂ ಗೋಮತ್ಯಾಂ ಕೃಷ್ಣಸನ್ನಿಧೌ ॥ ೧೩ ॥
ಭಕ್ತ್ಯಾ ಸ್ನಾತ್ವಾ ತು ತತ್ರೈವಂ ಕುರ್ಯಾತ್ಕರ್ಮ ಯಥೋದಿತಂ ।
ದೇವಾನ್ಪಿತೄನ್ಮನುಷ್ಯಾಂಶ್ಚ ತರ್ಪಯೇದ್ಭಾವಸಂಯುತಃ ॥ ೧೪ ॥
ಯೇ ಚ ರೌರವಸಂಸ್ಥಾ ಹಿ ಯೇ ಚ ಕೀಟತ್ವಮಾಗತಾಃ ।
ಗೋಮತೀನೀರದಾನೇನ ಮುಕ್ತಿಂ ಯಾಂತಿ ನ ಸಂಶಯಃ ॥ ೧೫ ॥
ವಿನಾಪ್ಯಕ್ಷತದರ್ಭೈರ್ವಾ ವಿನಾ ಭಾವನಯಾ ತಥಾ ।
ವಾರಿಮಾತ್ರೇಣ ಗೋಮತ್ಯಾಂ ಗಯಾಶ್ರಾದ್ಧಫಲಂ ಲಭೇತ್ ॥ ೧೬ ॥

---

೧೧. ಮೃತ್ತಿಕೆಯೆ! ನಾನು ಹಿಂದೆ ಮಾಡಿದ ಪಾಪವನ್ನು ನಿವಾರಿಸು. ನೀನು ಪಾಪವನ್ನು ಪರಿಹರಿಸಿದರೆ ನಾನು ಒಂದು ವರ್ಷಕಾಲ ಪವಿತ್ರನಾಗುವೆನು".

೧೨. ಈ ಮಂತ್ರದಿಂದ ಮೃತ್ತಿಕೆಯನ್ನು ಹಚ್ಚಿಕೊಂಡು ವಿಧಿಯಂತೆ ಆಪೋ ಅಸ್ಮಾನಿತ್ಯಾದಿಮಂತ್ರದಿಂದ ಸ್ನಾನಮಾಡಬೇಕು. ಇದರಿಂದಾಗುವ ಫಲವನ್ನು ಕೇಳು

೧೩. ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಲಭಿಸುವ ಪುಣ್ಯವು ಗೋಮತೀ ನದಿಯಲ್ಲಿ ಕೃಷ್ಣನ ಹತ್ತಿರ ಸ್ನಾನಮಾಡುವುದರಿಂದ ದೊರೆಯುವುದು.

೧೪. ಅಲ್ಲಿ ಹೀಗೆ ಭಕ್ತಿಯಿಂದ ನಿಂದು ವಿಹಿತ ಕರ್ಮವನ್ನಾಚರಿಸಿ ದೇವ ಪಿತೃಮನುಷ್ಯರಿಗೆ ಭಕ್ತಿಯಿಂದ ತರ್ಪಣಮಾಡಬೇಕು.

೧೫. ಗೋಮತೀ ನೀರಿನಿಂದ ತರ್ಪಣಮಾಡುವುದರಿಂದ ರೌರವನರಕದಲ್ಲಿ ರುವವರೂ, ಕೀಟಗಳಾಗಿರುವವರೂ ನಿಶ್ಚಯವಾಗಿ ಮುಕ್ತರಾಗುವರು.

೧೬. ಗೋಮತಿಯಲ್ಲಿ ಅಕ್ಷತ ದರ್ಭೆಗಳಿಲ್ಲದೆಯೂ, ಭಕ್ತಿಯಿಲ್ಲದೆಯೂ ಜಲಮಾತ್ರದಿಂದ ತರ್ಪಣಮಾಡುವುದರಿಂದ ಗಯಾಶ್ರಾದ್ಧ ಫಲವು ಲಭಿಸುವುದು.

ತತಶ್ಚ ವಿಪ್ರಾನಾಹೂಯ ವೇದಜ್ಞಾಂಸ್ತೀರ್ಥಸಂಶ್ರಯಾನ್ ।
ವಿಶ್ವೇದೇವಾದಿ ಸಂಪೂಜ್ಯ ಪಿತೄಣಾಂ ಶ್ರಾದ್ಧಮಾಚರೇತ್ ॥ ೧೭ ॥
ಶ್ರದ್ಧಯಾ ಪರಯಾ ಯುಕ್ತಃ ಶ್ರಾದ್ಧಂ ಕೃತ್ವಾ ವಿಧಾನತಃ ।
ದಕ್ಷಿಣಾಂ ಚ ತತೋ ದದ್ಯಾತ್ಸುವರ್ಣಂ ರಜತಂ ತಥಾ ॥ ೧೮ ॥
ಸುವರ್ಣಶೃಂಗಸಹಿತಾಂ ರಾಜತಖುರಭೂಷಿತಾಂ ।
ರುಕ್ಮಪುಚ್ಛಾಂ ವಸ್ತ್ರಯುತಾಂ ತಾಮ್ರಪೃಷ್ಠಾಂ ಸವತ್ಸಕಾಂ ॥ ೧೯ ॥
ದದ್ಯಾದ್ವಿಪ್ರಂ ಸಮಭ್ಯರ್ಚ್ಯ ವಸ್ತ್ರಾಲಂಕಾರಭೂಷಣೈಃ ।
ಸಪ್ತಧಾನ್ಯಯುತಾಂ ದದ್ಯಾದ್ವಿಷ್ಣುರ್ಮೇ ಪ್ರೀಯತಾಮಿತಿ ॥ ೨೦ ॥
ಆಸೀಮಾಂತಂ ವಿಸೃಜ್ಯೈತಾನ್ಬ್ರಾಹ್ಮಣಾನ್ನಿಯತೇಂದ್ರಿಯಃ ।
ದೀನಾಂಧಕೃಪಣೇಭ್ಯಶ್ಚ ದಾನಂ ದದ್ಯಾತ್ಸ್ವಶಕ್ತಿತಃ ॥ ೨೧ ॥
ಗೋಮತೀ ಗೋಮಯಸ್ನಾನಂ ಗೋದಾನಂ ಗೋಪಿಚಂದನಂ ।
ದರ್ಶನಂ ಗೋಪಿನಾಥಸ್ಯ ಗಕಾರಾಃ ಪಂಚ ದುರ್ಲಭಾಃ ॥ ೨೨ ॥

---

೧೭. ಬಳಿಕ ಆ ನದಿಯ ದಡದಲ್ಲಿರುವ ವೇದಜ್ಞ ಬ್ರಾಹ್ಮಣರನ್ನು ಕರೆದು ವಿಶ್ವೇದೇವಾದಿಗಳನ್ನು ಪೂಜಿಸಿ ಪಿತೃಗಳಿಗೆ ಶ್ರಾದ್ಧ ಮಾಡಬೇಕು.

೧೮. ಅತಿಶಯ ಶ್ರದ್ಧೆಯಿಂದ ವಿಧಿಯುತ ಶ್ರಾದ್ಧಮಾಡಿ ಸುವರ್ಣ ಅಥವಾ ಬೆಳ್ಳಿಯನ್ನು ದಕ್ಷಿಣೆಯಾಗಿ ಕೊಡಬೇಕು.

೧೯–೨೦. ಅನಂತರ ಚಿನ್ನದ ಕೊಂಬುಗಳಿಂದ ಸಹಿತವೂ, ಬೆಳ್ಳಿಯ ಗೊರಸಿನಿಂದ ಅಲಂಕಾರಗೊಂಡುದೂ, ರತ್ನಾಲಂಕೃತವಾದ ಬಾಲವುಳ್ಳುದೂ, ವಸ್ತ್ರದಿಂದ ಸಹಿತವೂ, ತಾಮ್ರದ ಬೆನ್ನುಳ್ಳುದೂ, ಕರುವಿನಿಂದ ಕೂಡಿರುವುದೂ, ಸಪ್ತಧಾನ್ಯ ಸಹಿತವಾದುದೂ ಆದ ಗೋವನ್ನು ವಸ್ತ್ರಾಲಂಕಾರ ಭೂಷಣಗಳಿಂದ ಬ್ರಾಹ್ಮಣನನ್ನು ಪೂಜಿಸಿ ವಿಷ್ಣುವು ಪ್ರೀತನಾಗಲೆಂದು ದಾನಮಾಡಬೇಕು

೨೧. ಈ ಬ್ರಾಹ್ಮಣರನ್ನು ಎಲ್ಲೆಯವರೆಗೆ ಕಳುಹಿಸಿ ಜಿತೇಂದ್ರಿಯನಾಗಿ ತನ್ನ ಶಕ್ತ್ಯನುಸಾರ ದೀನ, ಕುರುಡ, ಕೃಪಣರಿಗೆ ದಾನವನ್ನೀಯಬೇಕು.

೨೨. ಗೋಮತೀ, ಗೋಮಯಸ್ನಾನ, ಗೋದಾನ, ಗೋಪೀಚಂದನ, ಗೋಪೀನಾಥನಾದ ಕೃಷ್ಣನ ದರ್ಶನ ಈ ಐದು ಗಕಾರಗಳು ದುರ್ಲಭವಾದುವು.

ತಸ್ಮಾಚ್ಚೈವ ಪ್ರಕರ್ತವ್ಯಂ ಗೋದಾನಂ ಗೋಮತೀತಟೇ ।
ಏವಂ ಕೃತ್ವಾ ದ್ವಿಜಶ್ರೇಷ್ಠಾ ಕೃತಕೃತ್ಯೋ ಭವೇನ್ನರಃ ॥ ೨೩ ॥
ಯೇ ಗತಾ ನರಕಂ ಘೋರಂ ಯೇ ಚ ಪ್ರೇತತ್ವಮಾಗತಾಃ ।
ಪೂರ್ವಕರ್ಮವಿಪಾಕೇನ ಸ್ಥಾವರತ್ವಂ ಗತಾಶ್ಚ ಯೇ ॥ ೨೪ ॥
ಪಿತೃಪಕ್ಷೇ ಚ ಯೇ ಕೇಚಿನ್ಮಾತೃಪಕ್ಷೇ ಕುಲೋದ್ಭವಾಃ ।
ಸರ್ವೇ ತೇ ಮುಕ್ತಿಮಾಯಾಂತಿ ಗೋಮತ್ಯಾ ದರ್ಶನಾತ್ಕಲೌ ॥ ೨೫ ॥
ಕೃತಂ ಶ್ರಾದ್ಧಂ ನರೈರ್ಯೈಸ್ತು ಗೋಮತ್ಯಾಂ ಭೂಸುರೋತ್ತಮಾಃ ।
ಹಯಮೇಧಸ್ಯ ಯಜ್ಞಸ್ಯ ಫಲಮಾಯಾಂತ್ಯಸಂಶಯಂ ॥ ೨೬ ॥
ಗಂಗಾಸ್ನಾನೇನ ಯತ್ಪುಣ್ಯಂ ಪ್ರಯಾಗೇ ಪರಿಕೀರ್ತಿತಂ
ತತ್ಪುಣ್ಯಂ ಸಮವಾಪ್ನೋತಿ ಗೋಮತ್ಯಾಂ ಶ್ರಾದ್ಧಕೃನ್ನರಃ ॥ ೨೭ ॥
ವಿಷ್ಣುಲೋಕಂ ಹಿ ಗಚ್ಛಂತಿ ಪಿತರಸ್ತತ್ಕುಲೋದ್ಭವಾಃ ।
ಅನೇಕಜನ್ಮಸಾಹಸ್ರಂ ಪಾಪಂ ಯಾತಿ ನ ಸಂಶಯಃ । ॥ ೨೮ ॥

---

೨೩. ಆದ್ದರಿಂದ ಗೋಮತಿಯ ದಡದಲ್ಲಿ ಗೋದಾನವನ್ನು ಕೊಡಬೇಕು ದ್ವಿಜವರ್ಯರೆ! ಹೀಗೆ ಮಾಡಿದ ಮಾನವನು ಧನ್ಯನಾಗುವನು.

೨೪–೨೫. ಪಿತೃಮಾತೃಪಕ್ಷಗಳಲ್ಲಿ ಘೋರ ನರಕಕ್ಕೆ ಹೋದವರೂ, ಪ್ರೇತರಾದವರೂ, ಹಿಂದಿನ ಜನ್ಮದ ಕರ್ಮಪರಿಣಾಮದಿಂದ ಸ್ಥಾವರಾದವರೂ ಇವರೆಲ್ಲರೂ ಕಲಿಯುಗದಲ್ಲಿ ಗೋಮತಿಯ ದರ್ಶನದಿಂದ ಮುಕ್ತರಾಗುವರು.

೨೬. ಭೂಸುರೋತ್ತಮರೆ! ಗೋಮತಿಯಲ್ಲಿ ಮಾಡಿದ ಶ್ರಾದ್ಧದಿಂದ ಅಶ್ವಮೇಧಯಾಗದ ಫಲವು ಲಭಿಸುವುದು.

೨೭. ಗೋಮತಿಯಲ್ಲಿ ಶ್ರಾದ್ಧಮಾಡಿದ ಮಾನವನು ಪ್ರಯಾಗದಲ್ಲಿರುವ ಗಂಗೆಯಲ್ಲಿ ಮಿಂದ ಪುಣ್ಯವನ್ನು ಪಡೆಯುವನು.

೨೮. ಅವನ ವಂಶದ ಪಿತೃಗಳು ವಿಷ್ಣುಲೋಕವನ್ನು ಹೊಂದುವರು. ಅನೇಕ ಸಾವಿರ ಜನ್ಮಗಳಲ್ಲಿ ಮಾಡಿದ ಪಾಪವು ತೊಲಗುವುದು.

ವಾಚಾ ಚ ಯತ್ಕೃತಂ ಪಾಪಂ ಕರ್ಮಣಾ ಮನಸಾ ತಥಾ ।
ತತ್ಸರ್ವಂ ವಿಲಯಂ ಯಾತಿ ಗೋಮತೀ ದರ್ಶನೇನ ಹಿ ॥ ೨೯ ॥
ಯೋ ನರಃ ಕಾರ್ತಿಕೇ ಸ್ನಾನಂ ಗೋಮತ್ಯಾಂ ಕುರುತೇ ದ್ವಿಜಾಃ ।
ಪ್ರಸನ್ನೋ ಭಗವಾಂಸ್ತಸ್ಯ ಲಕ್ಷ್ಮ್ಯಾ ಸಹನ ಸಂತಯಃ ॥ ೩೦ ॥
ಪ್ರತ್ಯಹಂ ಹುತಭೋಕ್ತಾರಂ ತರ್ಪಯೇತ್ಸುಸಮಾಹಿತಃ ।
ಪ್ರತ್ಯಹಂ ಷಡ್ರಸಂ ದೇಯಂ ಭೋಜನಂ ಚ ದ್ವಿಜಾತಯೇ ॥ ೩೧ ॥
ಪೂಜಯೇತ್ಕೃಷ್ಣದೇವಂ ಚ ಪ್ರತ್ಯಹಂ ಭಕ್ತಿತತ್ಪರಃ ।
ಯೇನ ಕೇನಾಪಿ ವಿಪ್ರೇಂದ್ರಾಃ ಸ್ಥಾತವ್ಯಂ ನಿಯಮೇನ ತು ॥ ೩೨ ॥
ಬ್ರಾಹ್ಮಣಾನುಜ್ಞಯಾ ತತ್ರ ಗೃಹ್ಣೀಯಾನ್ನಿಯಮಾನ್ನರಃ ।
ಸಂಪೂರ್ಣೇ ಕಾರ್ತಿಕೇ ಮಾಸಿ ಸಂಪ್ರಾಪ್ತೇ ಬೋಧವಾಸರೇ ॥ ೩೩ ॥
ಪಂಚಾಮೃತೇನ ದೇವೇಶಂ ಸ್ನಾಪಯೇತ್ತೀರ್ಥವಾರಿಣಾ ।
ಶ್ರೀಖಂಡಂ ಕುಂಕುಮೋನ್ಮಿಶ್ರಂ ಮೃಗನಾಭಿಸಮನ್ವಿತಂ ।
ವಿಲೇಪಯೇಚ್ಚ ದೇವೇಶಂ ಭಕ್ತ್ಯಾ ದಾಮೋದರಂ ಹರಿಂ । ೩೪ ॥

---

೨೯. ಗೋಮತಿಯ ದರ್ಶನದಿಂದ ವಾಕ್, ಮನಸ್ಸು, ಕರ್ಮಗಳಿಂದೆಸಗಿದ ಪಾಪವೆಲ್ಲ ನಾಶವಾಗುವುದು.

೩೦. ದ್ವಿಜರೆ! ಕಾರ್ತಿಕಮಾಸದಲ್ಲಿ ಗೋಮತೀನದಿಯಲ್ಲಿ ಮಿಂದ ಮಾನವರಿಗೆ ವಿಷ್ಣುವು ಲಕ್ಷ್ಮಿಯೊಡನೆ ಒಲಿಯುವನು.

೩೧. ಪ್ರತಿದಿನವೂ ಸಾವಧಾನಮನಸ್ಸಿನಿಂದ ಅಗ್ನಿಯನ್ನು ಸಂತೋಷಗೊಳಿಸಬೇಕು. ಬ್ರಾಹ್ಮಣನಿಗೆ ಷಡ್ರಸಾನ್ನವನ್ನು ಭೋಜನಮಾಡಿಸಬೇಕು.

೩೨. ದ್ವಿಜವರ್ಯರೆ! ಪ್ರತಿದಿನವೂ ಭಕ್ತಿಯಿಂದ ಕೃಷ್ಣದೇವನನ್ನು ಪೂಜಿಸಬೇಕು. ಯಾವುದಾದರೊಂದು ನಿಯಮದಿಂದಿರಬೇಕು.

೩೩–೩೪. ಅಲ್ಲಿ ಬ್ರಾಹ್ಮಣಾನುಜ್ಞೆಯಿಂದ ನಿಯಮನ್ನು ಸ್ವೀಕರಿಸಬೇಕು. ಕಾರ್ತಿಕಮಾಸವು ಪೂರ್ತಿಯಾಗಿ ಶ್ರೀಹರಿಯ ಉತ್ಥಾನದಿನವು ಪ್ರಾಪ್ತವಾಗಲು ಕೃಷ್ಣನನ್ನು ಪಂಚಾಮೃತದಿಂದಲೂ, ತೀರ್ಥಜಲದಿಂದಲೂ, ಸ್ನಾನಮಾಡಿಸಿ ಕುಂಕುಮ ಕಸ್ತೂರಿಯಿಂದ ಕೂಡಿದ ಗಂಧವನ್ನು ಅವನಿಗೆ ಲೇಪಿಸಬೇಕು.

ಕುಸುಮೈರ್ನಾರಿಂಸಂಭೂತೈಸ್ತುಲಸ್ಯಾ ಕರವೀರಕೈಃ ।
ತದ್ದೇಶಸಂಭವೈಃ ಪುಷ್ಪೈಃ ಪೂಜಯೇದ್ಗರುಡಧ್ವಜಂ ॥ ೩೫ ॥
ನೈವೇದ್ಯಂ ರುಚಿರಂ ದದ್ಯಾದ್ವಿಷ್ಣುರ್ಮೇ ಪ್ರೀಯತಾಮಿತಿ ।
ಗೀತವಾದ್ಯಾದಿನೃತ್ಯೇನ ತಥಾ ಪುಸ್ತಕವಾಚನೈಃ ॥ ೩೬ ॥
ರಾತ್ರೌ ಜಾಗರಣಂ ಕಾರ್ಯಂ ಸ್ತೋತ್ರೈರ್ನಾನಾವಿಧೈರಪಿ ।
ಆಹೂಯ ಬ್ರಾಹ್ಮಣಾನ್ಭಕ್ತ್ಯಾ ಭೋಜಯೇಚ್ಚ ಸ್ವಶಕ್ತಿತಃ ॥ ೩೭ ॥
ತತೋ ರಥಸ್ಥಿತಂ ದೇವಂ ಪೂಜಯೇದ್ಗರುಡಧ್ವಜಂ ।
ಕಾರ್ತಿಕಾಂತೇ ಚ ವಿಪ್ರೇಂದ್ರಾಃ ಗೋಮತ್ಯುದಧಿಸಂಗಮೇ ॥ ೩೮ ॥
ಸ್ನಾತ್ವಾ ಪಿತ್ರಾಂಶ್ಚ ಸಂತರ್ಪ್ಯ ಪೂಜಯೇಚ್ಚ ಜನಾರ್ದನಂ ।
ಸುವಸ್ತ್ರೈರ್ಭೂಷಣೈಶ್ಚಾಪಿ ಸಮಭ್ಯರ್ಚ್ಯ ರಮಾಪತಿಂ ।
ಅನುಜ್ಞಯಾ ತು ವಿಪ್ರಾಣಾಂ ವ್ರತಂ ಸಂಪೂರ್ಣತಾಂ ನಯೇತ್ ॥ ೩೯ ॥
ಏವಂ ಯಃ ಸ್ನಾತಿ ವಿಪ್ರೇಂದ್ರಾಃ ಕಾರ್ತಿಕೇ ಕೃಷ್ಣಸನ್ನಿಧೌ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೪೦ ॥

---

೩೫. ಕೃಷ್ಣನನ್ನು ಜಲದಲ್ಲಿ ಹುಟ್ಟಿದ ತಾವರೆ ಮೊದಲಾದ ಹೂವುಗಳಿಂದಲೂ ತುಲಸಿ, ಕಣಗಲೆಹೂವು, ಆ ದೇಶದಲ್ಲಿ ಬೆಳೆದ ಇತರ ಪುಷ್ಪ ಇವುಗಳಿಂದ ಅರ್ಚಿಸಬೇಕು.

೩೬–೩೭. ವಿಷ್ಣುವು ನನ್ನಲ್ಲಿ ಪ್ರೀತನಾಗಲೆಂದು ರುಚಿಯಾದ ನೈವೇದ್ಯವನು ಅರ್ಪಿಸಬೇಕು. ಸಂಗೀತ, ವಾದ್ಯ, ನೃತ್ಯ, ಪುಸ್ತಕವಾಚನ, ಬಗೆಬಗೆಯ ಸ್ತೋತ್ರ ಇವುಗಳಿಂದ ರಾತ್ರಿ ಜಾಗರಣೆ ಮಾಡಿ ಬ್ರಾಹ್ಮಣರನ್ನು ಕರೆದು ಭಕ್ತಿಯಿಂದ ತನ್ನ ಶಕ್ತ್ಯನುಸಾರ ಭೋಜನಮಾಡಿಸಬೇಕು.

೩೮–೩೯. ಬಳಿಕ ರಥಾರೂಢನಾದ ವಿಷ್ಣುವನ್ನು ಪೂಜಿಸಬೇಕು. ಬ್ರಾಹ್ಮಣೋತ್ತಮರೆ! ಕಾರ್ತಿಕ ಮಾಸದ ಕೊನೆಯಲ್ಲಿ ಗೋಮತೀಸಮುದ್ರಗಳ ಸಂಗಮದಲ್ಲಿ ಮಿಂದು ಪಿತೃತರ್ಪಣಮಾಡಿ ಕೃಷ್ಣನನ್ನು ಪೂಜಿಸಬೇಕು. ಮತ್ತು ವಸ್ತ್ರಭೂಷಣಗಳಿಂದ ವಿಷ್ಣುವನ್ನು ಅರ್ಚಿಸಿ ಬ್ರಾಹ್ಮಣರ ಅಪ್ಪಣೆಯಿಂದ ವ್ರತವನ್ನು ಸಂಪೂರ್ತಿಗೊಳಿಸಬೇಕು.

೪೦. ವಿಪ್ರೋತ್ತಮರೆ! ಹೀಗೆ ಕಾರ್ತಿಕ ಮಾಸದಲ್ಲಿ ಕೃಷ್ಣ ಸನ್ನಿಧಿಯಲ್ಲಿ ಮಿಂದವನು ಸಕಲ ಪಾಪಮುಕ್ತನಾಗಿ ವಿಷ್ಣುಲೋಕಕ್ಕೆ ತೆರಳುವನು.

ಮಾಘಸ್ನಾನಂ ನರೋ ಭಕ್ತ್ಯಾ ಗೋಮತ್ಯಾಂ ಕುರುತೇ ತು ಯಃ ।
ವೈನತೇಯೋದಯೇ ನಿತ್ಯಂ ಸಂತುಷ್ಟಃ ಸಹ ಭಾರ್ಯಯಾ ॥ ೪೧ ॥

ತಿಲಾ ಹಿರಣ್ಯಸಹಿತಾ ದೇಯಾ ಬ್ರಾಹ್ಮಣಸತ್ತಮೇ ।
ಮೋದಕಾ ಗುಡಸಂಮಿಶ್ರಾಃ ಪ್ರತ್ಯಹಂ ದಕ್ಷಿಣಾನ್ವಿತಾಃ ॥ ೪೨ ॥

ತಿಲೈರಾಜ್ಯಾಪ್ಲುತೈರ್ಹೋಮಃ ಕರ್ತವ್ಯಃ ಪ್ರತ್ಯಹಂ ನರೈಃ ।
ಹೋಮಾರ್ಥಂ ಸೇವಯೇದ್ವಹ್ನಿಂ ನ ಶೀತಾರ್ಥಂ ಕಥಾಚನ ॥ ೪೩ ॥

ಗೋಮತ್ಯಾಂ ಸ್ನಾತಿ ಯೋ ಭಕ್ತ್ಯಾ ಮಾಘಂ ಮಾಧವವಲ್ಲಭಂ ।
ಸಮಾಪ್ತೌ ರಕ್ತವಸ್ತ್ರಾಣಿ ಕಂಚುಕೋಷ್ಣೀಷಮೇವ ಚ ॥ ೪೪ ॥

ದದ್ಯಾದುಪಾನಹೌ ಭಕ್ತ್ಯಾ ಕುಂಕುಮಂ ಚ ವಿಶೇಷತಃ ।
ಕಂಬಲಂ ತೈಲಪಕ್ವಂ ಚ ವಿಷ್ಣುರ್ಮೇ ಪ್ರೀಯತಾಮಿತಿ ॥ ೪೫ ॥

ಸ್ವಾಮಿಕಾರ್ಯಮೃತಾನಾಂ ಚ ಸಂಗ್ರಾಮೇ ಶಸ್ತ್ರಸಂಕುಲೇ ।
ಗವಾರ್ಥೇ ಬ್ರಾಹ್ಮಣಾರ್ಥೇ ಚ ಮೃತಾನಾಂ ಯಾ ಗತಿಃ ಸ್ಮೃತಾ ॥ ೪೬ ॥

---

೪೧–೪೨. ಗೋಮತಿಯಲ್ಲಿ ಭಕ್ತಿಯಿಂದ ಅರುಣೋದಯಕಾಲದಲ್ಲಿ ನಿತ್ಯವೂ ಭಾರ್ಯೆಯೊಡನೆ ಸಂತೋಷದಿಂದ ಮಿಂದು ಬ್ರಾಹ್ಮಣೋತ್ತಮರಿಗೆ ಹಿರಣ್ಯಸಹಿತವಾದ ಎಳ್ಳನ್ನೂ, ಬೆಲ್ಲದಿಂದಕೂಡಿದ ಮೋದಕವನ್ನೂ ದಕ್ಷಿಣೆಯೊಡನೆ ದಾನಮಾಡಬೇಕು.

೪೩. ಎಳ್ಳನ್ನು ತುಪ್ಪದಿಂದ ನೆನೆಯಿಸಿ ಹೋಮಮಾಡಬೇಕು. ಅಗ್ನಿಯನ್ನು ಹೋಮಕ್ಕಾಗಿ ಸೇವಿಸಬೇಕಲ್ಲದೆ ಒಂದು ವೇಳೆಯೂ ಶೀತನಿವಾರಣೆಗಾಗಿ ಸೇವಿ ಬಾರದು.

೪೪–೪೫. ಕೃಷ್ಣನಿಗೆ ಪ್ರಿಯವಾದ ಮಾಘಮಾಸದಲ್ಲಿ ಭಕ್ತಿಯಿಂದ ಗೋಮತಿ ಯಲ್ಲಿ ಮಿಂದು ಬ್ರಾಹ್ಮಣರಿಗೆ, ಕೆಂಪುವಸ್ತ್ರ, ಅಂಗಿ, ರುಮಾಲು, ಪಾದರಕ್ಷೆ, ಕುಂಕುಮ, ಕಂಬಳಿ, ತೈಲಪಕ್ವವಾದ ಭಕ್ಷ್ಯ ಇವುಗಳನ್ನು ವಿಷ್ಣುವು ನನ್ನ ವಿಷಯದಲ್ಲಿ ಸುಪ್ರೀತ ನಾಗಲೆಂದು ದಾನಮಾಡಬೇಕು.

೪೬–೪೭. ಸ್ವಾಮಿಕಾರ್ಯಕ್ಕಾಗಿಯೂ, ಶಸ್ತ್ರಗಳಿಂದ ತುಂಬಿದ ಯುದ್ಧ ದಲ್ಲಿಯೂ ಗೋವು, ಬ್ರಾಹ್ಮಣ ಇವರಿಗಾಗಿಯೂ ಮೃತರಾದವರಿಗಾಗುವ ಸದ್ಗತಿಯಸ

ಮಾಘಸ್ನಾನೇ ಚ ಸಾ ಪ್ರೋಕ್ತಾ ಗೋಮತ್ಯಾಂ ನಾತ್ರ ಸಂಶಯಃ ।
ಸರ್ವದಾನಫಲಂ ತಸ್ಯ ಸರ್ವತೀರ್ಥಫಲಂ ತಥಾ ॥ ೪೭ ॥
ಮಾಘಸ್ನಾನಾನ್ನರೋ ಯಾತಿ ವಿಷ್ಣುಲೋಕಂ ಸನಾತನಂ ।
ಸರ್ವಾನ್ಕಾಮಾನವಾಪ್ನೋತಿ ಸಮಭ್ಯರ್ಚ್ಯ ಜನಾರ್ದನಂ ॥ ೪೮ ॥
ಮಾಘಂ ಯಃ ಕ್ಷಪತೇ ಸರ್ವಂ ಗೋಮತ್ಯುದಧಿಸಂಗಮೇ ।
ಬ್ರಾಹ್ಮಣಾನುಜ್ಞಯಾ ವಿಪ್ರಾಃ ಸರ್ವಂ ಸಂಪೂರ್ಣತಾಂ ವ್ರಜೇತ್ ॥ ೪೯ ॥
ಪಾಪಿನೋಽಪಿ ದ್ವಿಜಶ್ರೇಷ್ಠಾ ಯೇ ಸ್ನಾತಾ ಗೋಮತೀಜಲೇ ।
ಯಜ್ವನಾಂ ಚ ಗತಿಂ ಯಾಂತಿ ಪ್ರಸಾದಾಚ್ಚಕ್ರಪಾಣಿನಃ ॥ ೫೦ ॥
ಬ್ರಹ್ಮರುದ್ರಪದಾದೂರ್ಧ್ವಂ ಯತ್ಪದಂ ಚಕ್ರಪಾಣಿನಃ ।
ಸ್ನಾನಮಾತ್ರೇಣ ಗೋಮತ್ಯಾಂ ತತ್ಪ್ರೋಕ್ತಂ ಕೃಷ್ಣಸನ್ನಿಧೌ ॥ ೫೧ ॥
ಮಿತ್ರದ್ರೋಹೇ ಚ ಯತ್ಪಾಪಂ ಗುರುಘಾತಿನಿ ।
ತತ್ಪಾಪಂ ಸಮವಾಪ್ನೋತಿ ಯಾತ್ರಾಭಂಗಂ ಕರೋತಿ ಯಃ ॥ ೫೨ ॥

---

ಗೋಮತಿಯಲ್ಲಿ ಮಾಘಮಾಸಸ್ನಾನದಿಂದಾಗುವುದು. ಅಲ್ಲದೆ ಸಕಲದಾನಫಲವೂ, ಸಮಸ್ತ ತೀರ್ಥಫಲವೂ ಲಭಿಸುವುದು.

೪೮. ಮನುಷ್ಯನು ಮಾಘಮಾಸದಲ್ಲಿ ಸ್ನಾನಮಾಡುವುದರಿಂದ ವಿಷ್ಣುಲೋಕವನ್ನು ಹೊಂದುವನು. ಕೃಷ್ಣನನ್ನು ಪೂಜಿಸಿ ಸಕಲೇಷ್ಟಾರ್ಥಗಳನ್ನೂ ಪಡೆಯುವನು.

೪೯. ಬ್ರಾಹ್ಮಣರೆ! ಮನುಷ್ಯನು ಬ್ರಾಹ್ಮಣಾನುಜ್ಞೆಯಿಂದ ಮಾಘಮಾಸವೆಲ್ಲ ಗೋಮತೀ ಸಮುದ್ರಗಳ ಸಂಗಮದಲ್ಲಿ ಕಳೆದರೆ ಸಕಲವೂ ಸಂಪೂರ್ಣವಾಗುವುವು.

೫೦. ದ್ವಿಜವರ್ಯರೆ! ಪಾಪಿಗಳೂ ಗೋಮತಿಯ ನೀರಿನಲ್ಲಿ ಮಿಂದರೆ ಕೃಷ್ಣನ ಅನುಗ್ರಹದಿಂದ ಯಾಗಮಾಡಿದವರ ಗತಿಯನ್ನು ಪಡೆಯುವರು.

೫೧. ಗೋಮತಿಯಲ್ಲಿ ಕೃಷ್ಣಸನ್ನಿಧಿಯಲ್ಲಿ ಸ್ನಾನಮಾಡುವುದರಿಂದ ನರರು ಬ್ರಹ್ಮರುದ್ರರ ಸ್ಥಾನಗಳಿಗಿಂತ ಉನ್ನತ ಸ್ಥಾನದಲ್ಲಿರುವ ವಿಷ್ಣುವಿನ ಸ್ಥಾನವನ್ನು ಪಡೆಯುವರು.

೫೨. ದ್ವಾರಕಾಯಾತ್ರೆಗೆ ಅಡ್ಡಿಯನ್ನುಂಟು ಮಾಡಿದವನು ಮಿತ್ರದ್ರೋಹ, ಗುರುಹತ್ಯೆಗಳಿಂದಾಗುವ ಪಾಪವನ್ನು ಹೊಂದುವನು.

ಬ್ರಹ್ಮಸ್ವಹಾರಿಣಃ ಪಾಪಾಃ ತಥಾ ದೇವಸ್ವಹಾರಿಣಃ ।
ಸ್ನಾನಮಾತ್ರೇಣ ಶುಧ್ಯಂತಿ ಗೋಮತ್ಯಾಂ ನಾತ್ರ ಸಂಶಯಃ ॥ ೫೩ ॥
ಭೀತಾಽಭಯಪ್ರದಾನೇನ ಯತ್ಪುಣ್ಯಂ ಲಭತೇ ನರಃ ।
ತತ್ಪುಣ್ಯಂ ಸಮವಾಪ್ನೋತಿ ಗೋಮತ್ಯಾಂ ಸ್ನಾನಮಾತ್ರತಃ ॥ ೫೪ ॥
ಭೀತಾಽಭಯಪ್ರದಾನೇನ ಪುತ್ರಾನಿಷ್ಟಾನ್ನ ಸಂಶಯಃ ।
ಧನಕಾಮಸ್ತು ವಿಪುಲಂ ಲಭತೇ ಧನಮೂರ್ಜಿತಂ ॥ ೫೫ ॥
ಪ್ರಾಪ್ನುಯಾದೀಪ್ಸಿತಾನ್ಕಾಮಾದ್ಗೋಮತೀನೀರಸಂಗಮೇ ।
ಕೃತಕೃತ್ಯೋ ಭವೇದ್ವಿಪ್ರಾಃ ಋಣಾನ್ಮುಚ್ಯೇತ ಪೈತೃಕಾತ್ ॥ ೫೬ ॥
ಮನಸಾ ವಚಸಾ ಚೈವ ಕರ್ಮಣಾ ಯದುಪಾರ್ಜಿತಂ ।
ತತ್ಸರ್ವಂ ನಶ್ಯತೇ ಪಾಪಂ ಗೋಮತೀನೀರಸಂಗಮಾತ್ ॥ ೫೭ ॥
ಪೀತಾಂಬರಧರೋ ಭೂತ್ವಾ ತಥಾ ಗರುಡವಾಹನಃ ।
ವನಮಾಲೀ ಚತುರ್ಬಾಹುರ್ದಿವ್ಯಗಂಧಾನುಲೇಪನಃ ।
ಯಾತಿ ವಿಷ್ಣ್ವಾಲಯಂ ವಿಪ್ರಾ ಅಪುನರ್ಭವಲಕ್ಷಣಂ ॥ ೫೮ ॥

---

೫೩. ಬ್ರಾಹ್ಮಣ, ದೇವಸ್ವಗಳನ್ನು ಅಪಹರಿಸಿದ ಪಾಪಿಗಳು ಗೋಮತಿಯಲ್ಲಿ ಸ್ನಾನಮಾಡುವುದರಿಂದ ಶುದ್ಧರಾಗುವರು.

೫೪. ಗೋಮತೀಸ್ನಾನದಿಂದ ಭೀತರಿಗೆ ಅಭಯ ದಾನಮಾಡುವುದರಿಂದಾಗುವ ಪುಣ್ಯವು ಲಭಿಸುವುದು.

೫೫. ಲೋಕದಲ್ಲಿ ಮನುಷ್ಯರು ಭೀತರಿಗೆ ಅಭಯವನ್ನು ಕೊಡುವುದರಿಂದ ಇಷ್ಟಪುತ್ರರನ್ನು ಹೊಂದುವರು. ಧನಾಪೇಕ್ಷೆಯು ಅತಿಶಯವಾದ ಧನವನ್ನು ಪಡೆಯುವನು.

೫೬. ವಿಪ್ರರೆ! ಗೋಮತೀ ತೀರಸಂಗಮದಲ್ಲಿ ಮನುಷ್ಯರು ಇಷ್ಟಾರ್ಥಗಳನು ಪಡೆಯುವರು. ಮತ್ತು ಪಿತೃಋಣದಿಂದ ಮುಕ್ತರಾಗುವರು.

೫೭. ಗೋಮತೀ ತೀರ ಸಂಗಮದಿಂದ ಮನಸ್ಸಿನಿಂದಲೂ, ಮಾತಿನಿಂದಲೂ ಕರ್ಮದಿಂದಲೂ ಮಾಡಿದ ಪಾಪವೆಲ್ಲ ನಾಶವಾಗುವುವು.

೫೮. ಹಾಗೆಯೇ ಮಾನವನು ಪೀತಾಂಬರವನ್ನುಟ್ಟವನೂ, ಗರುಡವಾಹನನೂ, ವನಮಾಲೆಯನ್ನು ಧರಿಸಿದವನೂ, ನಾಲ್ಕು ತೋಳುಗಳುಳ್ಳವನೂ, ದಿವ್ಯಗಂಧಾನುಲಿಪ್ತನೂ ಆಗಿ ಮರಳಿ ಹಿಂದಿರುಗದ ವೈಕುಂಠಲೋಕಕ್ಕೆ ಹೋಗುವನು.

**ಗೋಮತೀಸ್ನಾನಮಾತ್ರೇಣ ಮಾನವೋ ನಾತ್ರ ಸಂಶಯಃ**
**ಸರ್ವಪಾಪವಿನಿರ್ಮುಕ್ತೋ ಯಾತಿ ವಿಷ್ಣುಂ ಸನಾತನಂ ॥ ೫೯ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾ ಮಾಹಾತ್ಮ್ಯೇ
ಗೋಮತ್ಯುದಧಿಸಂಗಮೇ ಸ್ನಾನದಾನಾದಿಮಾಹಾತ್ಮ್ಯವರ್ಣನಂ ನಾಮ
ಷಷ್ಠೋಽಧ್ಯಾಯಃ

---

೫೯. ಮನುಷ್ಯನು ಗೋಮತಿಯಲ್ಲಿ ಸ್ನಾನಮಾಡುವುದರಿಂದಲೇ ಸಮಸ್ತ ಪಾಪಮುಕ್ತನಾಗಿ ಅನಾದಿಯಾದ ವಿಷ್ಣುವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಗೋಮತ್ಯುದಧಿಸಂಗಮೇ ಸ್ನಾನದಾನಾದಿಮಾಹಾತ್ಮ್ಯವರ್ಣನವೆಂಬ
ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತಮೋಽಧ್ಯಾಯಃ

### ಚಕ್ರತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ತತೋ ಗಚ್ಛೇದ್ದ್ವಿಜಶ್ರೇಷ್ಠಾ ರಥಾಂಗಾಖ್ಯಂ ಮಹೋದಧಿಂ ।
ಚಕ್ರಾಂಕಾ ಯತ್ರ ಪಾಷಾಣಾ ದೃಶ್ಯಂತೇ ಮುಕ್ತಿಸಂಯುತಃ ॥ ೧ ॥
ಯೈಃ ಪೂಜ್ಯತೇ ಜಗನ್ನಾಥಃ ಪ್ರತ್ಯಹಂ ಭಾವಸಂಯುತೈಃ ।
ಸದಾ ನೇತ್ರೈರನಿಮೇಷೈರ್ವೀಕ್ಷ್ಯತೇ ಚ ಜನಾರ್ದನಃ ॥ ೨ ॥
ಯಚ್ಚ ಸಾಕ್ಷಾದ್ಭಗವತಾ ದೃಷ್ಟಂ ಕೃಷ್ಣೇನ ದೃಷ್ಟಿತಃ ।
ತತ್ತೀರ್ಥಂ ಸರ್ವಪಾಪಘ್ನಂ ಚಕ್ರಾಖ್ಯಂ ಪರಮಂ ಹರೇಃ ॥ ೩ ॥
ಯಸ್ಯ ಪ್ರಸಿದ್ಧಿಃ ಪರಮಾ ತ್ರೈಲೋಕ್ಯೇ ಸಚರಾಚರೇ ।
ಪ್ರಯಾಗಾದಧಿಕಂ ಯಚ್ಚ ಮುಕ್ತಿದಂ ಹ್ಯಸ್ತಿ ಪಾವನಂ . ॥ ೪ ॥

---

### ಕನ್ನಡದ ಅನುವಾದ

### ಚಕ್ರತೀರ್ಥಮಾಹಾತ್ಮ್ಯವರ್ಣನ

೧ ಶ್ರೀ ಪ್ರಹ್ಲಾದನು ಹೇಳುತ್ತಾನೆ :—ದ್ವಿಜೋತ್ತಮರೆ! ಬಳಿಕ ಚಕ್ರದ ಚಿಹ್ನೆಗಳುಳ್ಳ ಮುಕ್ತಿಯನ್ನೀಯುವ ಕಲ್ಲುಗಳು ಕಾಣುವ ರಥಾಂಗವೆಂಬ ಮಹೋದಧಿಯನ್ನು ಕುರಿತು ಹೋಗಬೇಕು.

೨. ಜಗದೊಡೆಯನಾದ ಕೃಷ್ಣನನ್ನು ಇಲ್ಲಿ ನಿತ್ಯವೂ ಭಕ್ತಿಯಿಂದ ಪೂಜಿಸಿದವರು ಯಾವಾಗಲೂ ರೆಪ್ಪೆಹಾಕದ ಕಣ್ಣುಗಳಿಂದ ದೇವತೆಗಳಾಗಿ ಕೃಷ್ಣನನ್ನು ಪ್ರತ್ಯಕ್ಷವಾಗಿ ಕಾಣುವರು.

೩. ಸಕಲ ಪಾಪಗಳನ್ನೂ ನೀಗಿಸುವ ಹರಿಯ ಚಕ್ರವೆಂಬ ತೀರ್ಥವನು ಪ್ರತ್ಯಕ್ಷವಾಗಿ ಕೃಷ್ಣನು ಕಣ್ಣಿನಿಂದ ನೋಡಿರುವನು.

೪. ಈ ಚಕ್ರತೀರ್ಥವು ಚರಾಚರಾತ್ಮಕ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿರುವುದು. ಇದು ಪ್ರಯಾಗಕ್ಕಿಂತ ಅಧಿಕವಾಗಿ ಮುಕ್ತಿಯನ್ನೀಯುವ ಪವಿತ್ರ ಕ್ಷೇತ್ರವಾಗಿರುವುದು.

ಸುರೈರಪಿ ಪ್ರಪೂಜ್ಯಂತೇ ಯತ್ರಾಂಗಾನಿ ಶರೀರಿಣಾಂ ।
ಅಂಕಿತಾನಿ ಚ ಚಕ್ರೇಣ ಷಣ್ಮಾಸಾನ್ನಾತ್ರ ಸಂಶಯಃ ॥ ೫ ॥
ಯದ್ದೃಷ್ಟ್ವಾ ಮುಚ್ಯತೇ ಪಾಪಾತ್ಪ್ರಸಂಗೇನಾಪಿ ಮಾನವಃ ।
ತತ್ತೀರ್ಥಂ ಸರ್ವತೀರ್ಥಾನಾಂ ಪಾವನಂ ಪ್ರವರಂ ಸ್ಮೃತಂ ॥ ೬ ॥
ತತ್ರ ಗತ್ವಾ ದ್ವಿಜಶ್ರೇಷ್ಠಾಃ ಪ್ರಕ್ಷಾಲ್ಯ ಚರಣೌ ಮುದಾ ।
ಕರೌ ಚಾಸ್ಯಂ ಚೈವ ಪುನಃ ಪ್ರಣಮೇದ್ದಂಡವತ್ಪುನಃ ॥ ೭ ॥
ಪ್ರಣಿಪತ್ಯ ಗೃಹೀತ್ವಾಽರ್ಘ್ಯಂ ಪಂಚರತ್ನಸಮನ್ವಿತಂ ।
ಸಪುಷ್ಪಾಕ್ಷತಗಂಧೈಸ್ತು ಫಲಹೇಮಸುಚಂದನೈಃ ॥ ೮ ॥
ಸಂಪನ್ನಮರ್ಘ್ಯಮಾದಾಯ ಮಂತ್ರಮೇತಮುದೀರಯೇತ್ ।
ಪ್ರತ್ಯಙ್ಮುಖಂ ಸುನಿಯತಃ ಸಂಮುಖೋ ವಾ ಮಹೋದಧೇಃ ॥ ೯ ॥
ಓಂ ನಮೋ ವಿಷ್ಣುರೂಪಾಯ ವಿಷ್ಣುಚಕ್ರಾಯ ತೇ ನಮಃ ।
ಗೃಹಾಣಾರ್ಘ್ಯಂ ಮಯಾ ದತ್ತಂ ಸರ್ವಕಾಮಪ್ರದೋ ಭವ ॥ ೧೦ ॥

ಅಗ್ನಿಶ್ಚ ತೇಜೋ ಮೃಡಯಾ ಚ ರುದ್ರೋ
ರೇತೋಧಾ ವಿಷ್ಣುರಮೃತಸ್ಯ ನಾಭಿಃ ।
ಏತದ್ಬ್ರುವನ್ಪಾಡವಾಃ ಸತ್ಯವಾಕ್ಯಂ ।
ತತೋಽವಗಾಹೇತ ಪತಿಂ ನದೀನಾ ॥ ೧೧ ॥

---

೫. ಇಲ್ಲಿ ಆರುತಿಂಗಳಕಾಲ ಚಕ್ರಾಂಕಿತಗಳಾದ ಪ್ರಾಣಿಗಳ ಅವಯವಗಳನ್ನು ದೇವತೆಗಳೂ ಪೂಜಿಸುತ್ತಾರೆ.

೬. ಆಕಸ್ಮಾತ್ತಾಗಿ ನೋಡುವುದರಿಂದಲೂ ಮಾನವರ ಪಾಪಗಳನ್ನು ನೀಗಿಸುವ ಆ ಪವಿತ್ರ ಚಕ್ರತೀರ್ಥವು ಸಕಲ ತೀರ್ಥಗಳಲ್ಲಿ ಉತ್ತಮವಾಗಿರುವುದು.

೭. ದ್ವಿಜೋತ್ತಮರೆ! ಮನುಷ್ಯರು ಅಲ್ಲಿಗೆ ಹೋಗಿ ಕೈ, ಕಾಲು, ಮುಖಗಳನ್ನು ತೊಳೆದುಕೊಂಡು ಸಾಷ್ಟಾಂಗನಮಸ್ಕಾರ ಮಾಡಬೇಕು.

೮-೯. ಹೀಗೆ ನಮಸ್ಕಾರಮಾಡಿ ಪಂಚರತ್ನ, ಪುಷ್ಪ, ಅಕ್ಷತ, ಗಂಧ, ಫಲ, ಸುವರ್ಣ ಇವುಗಳಿಂದ ಸಹಿತವಾದ ಅರ್ಘ್ಯವನ್ನು ಹಿಡಿದುಕೊಂಡು ಪಶ್ಚಿಮಾಭಿಮುಖವಾಗಿ ಅಥವಾ ಸಮುದ್ರಕ್ಕೆ ಅಭಿಮುಖವಾಗಿ ನಿಂತು ಈ ಮಂತ್ರವನ್ನುಚ್ಚರಿಸಬೇಕು.

೧೦. ವಿಷ್ಣುರೂಪನಾದ ವಿಷ್ಣುಚಕ್ರವೆ! ನಿನಗೆ ನಮಸ್ಕಾರ. ನಾನು ಕೊಟ್ಟ ಅರ್ಘ್ಯವನ್ನು ಸ್ವೀಕರಿಸಿ ಸಕಲೇಷ್ಟಾರ್ಥಗಳನ್ನು ಕೊಡು.

೧೧. ಬ್ರಾಹ್ಮಣರೆ! "ಅಗ್ನಿಶ್ಚ ತೇಜೋ ಮೃಡಯಾ ಚ ರುದ್ರೋ ರೇತೋಧಾ ವಿಷ್ಣುರಮೃತಸ್ಯ ನಾಭಿಃ" ಈ ಮಂತ್ರ ವಾಕ್ಯವನ್ನು ಹೇಳುತ್ತ ಸಮುದ್ರದಲ್ಲಿ ಸ್ನಾನ ಮಾಡಬೇಕು.

ಮೃದಮಾಲಭ್ಯ ಸಜಲಾಂ ವಿಪ್ರಾ ದೇವಕರಚ್ಯುತಾಂ ।
ಧಾರಯಿತ್ವಾ ತು ಶಿರಸಾ ಸ್ನಾನಂ ಕುರ್ಯಾದ್ಯಥಾವಿಧಿ ॥ ೧೨ ॥
ತರ್ಪಯೇಚ್ಚ ಪಿತೄನ್ದೇವಾನ್ಮನುಷ್ಯಾಂಶ್ಚ ಯಥಾಕ್ರಮಂ ।
ತರ್ಪಯಿತ್ವಾ ಹವಿರ್ದ್ರವ್ಯಂ ಪ್ರೋಕ್ಷಯಿತ್ವಾ ಚ ಭಕ್ತಿತಃ ॥ ೧೩ ॥
ಅಶ್ವಮೇಧಸಹಸ್ರೇಣ ಸಮ್ಯಗ್ಯಷ್ಟೇನ ಯತ್ಫಲಂ ।
ಸ್ನಾನಮಾತ್ರೇಣ ತತ್ಪ್ರೋಕ್ತಂ ಚಕ್ರತೀರ್ಥೇ ದ್ವಿಜೋತ್ತಮಾಃ ॥ ೧೪ ॥
ಪ್ರಯಾಗೇ ಯತ್ಫಲಂ ಪ್ರೋಕ್ತಂ ಮಾಘ್ಯಾಂ ಮಾಧವಪೂಜನೇ ।
ಸ್ನಾನಮಾತ್ರೇಣ ತತ್ಪ್ರೋಕ್ತಂ ಚಕ್ರತೀರ್ಥೇ ದ್ವಿಜೋತ್ತಮಾಃ ॥ ೧೫ ॥
ಕಾರಯೇಚ್ಚ ತತಃ ಶ್ರಾದ್ಧಂ ಪಿತೄಣಾಂ ಶ್ರದ್ಧಯಾನ್ವಿತಃ ।
ವಿಶ್ವೇದೇವಾನ್ಸುವರ್ಣೇನ ರಾಜತೇನ ತಥಾ ಪಿತೄನ್ ॥ ೧೬ ॥
ಸಂತರ್ಪ್ಯ ಭೋಜನೈಶ್ಚೈವ ವಸ್ತ್ರಾಲಂಕಾರಭೂಷಣೈಃ ।
ದೀನಾಂಧಕೃಪಣೇಭ್ಯಶ್ಚ ದಾನಂ ದೇಯಂ ಸ್ವಶಕ್ತಿತಃ ॥ ೧೭ ॥
ಚಕ್ರತೀರ್ಥೇ ತೀರ್ಥವರೇ ವಿಶೇಷಾದ್ದ್ವಿಜಸತ್ತಮಾಃ ।
ರತ್ನದಾನಂ ಪ್ರಕುರ್ವೀತ ಪ್ರೀಣನಾರ್ಥಂ ಜಗತ್ಪತೇಃ ॥ ೧೮ ॥

---

೧೨. ದ್ವಿಜರೆ! ವಿಷ್ಣುವಿನ ಕೈಯಿಂದ ಬಿದ್ದ ಜಲಸಹಿತ ಮೃತ್ತಿಕೆಯನ್ನು ತಲೆಯಲ್ಲಿ ಧರಿಸಿ ವಿಧಿಯಂತೆ ಸ್ನಾನಮಾಡಬೇಕು.

೧೩. ಭಕ್ತಿಯಿಂದ ಹವಿಸ್ಸನ್ನು ಪ್ರೋಕ್ಷಿಸಿ ಪಿತೃ, ದೇವ, ಮನುಷ್ಯರಿಗೆ ಕ್ರಮವಂತೆ ತರ್ಪಣಮಾಡಬೇಕು.

೧೪–೧೫. ದ್ವಿಜವರ್ಯರೆ! ಚಕ್ರತೀರ್ಥದಲ್ಲಿ ಸ್ನಾನಮಾಡುವುದರಿಂದ ಚೆನ್ನಾಗಿ ಅಶ್ವಮೇಧಯಾಗಮಾಡಿದ ಪುಣ್ಯವು ಲಭಿಸುವುದು. ಮತ್ತು ಮಾಘಮಾಸದಲ್ಲಿ ಪ್ರಯಾಗದಲ್ಲಿ ಮಾಧವನನ್ನು ಪೂಜಿಸಿದ ಫಲವು ದೊರೆಯುವುದು.

೧೬–೧೭. ಬಳಿಕ ಶ್ರದ್ಧೆಯಿಂದ ವಿಶ್ವೇದೇವರಿಗೆ ಸುವರ್ಣದಿಂದಲೂ, ಪಿತೃಗಳಿಗೆ ರಜತದಿಂದಲೂ ಶ್ರಾದ್ಧಮಾಡಿ ದೀನರು, ಕುರುಡ, ಕುಂಟರು ಇವರನ್ನು ಭೋಜನದಿಂದಲೂ, ವಸ್ತ್ರ, ಅಲಂಕಾರ, ಒಡವೆಗಳಿಂದಲೂ ಸಂತೋಷಗೊಳಿಸಿ ಶಕ್ತ್ಯನುಸಾರ ದಾನಮಾಡಬೇಕು.

೧೮. ದ್ವಿಜವರ್ಯರೆ! ಜಗನೊಡೆಯನಾದ ಶ್ರೀ ಹರಿಯ ಪ್ರೀತಿಗಾಗಿ ಚಕ್ರತೀರ್ಥದಲ್ಲಿ ವಿಶೇಷವಾಗಿ ರತ್ನದಾನ ಮಾಡಬೇಕು.

ಗಂತ್ರೀಮುಸಡುಹಾ ಯುಕ್ತಾಂ ಸರ್ವಾಸ್ತರಣಸಂಯುತಾಂ ।
ಸೋಪಸ್ಕರಾಂ ಚ ರಥ್ಯಾದ್ಯೈ ರ್ವಿಷ್ಣುರ್ಮೇ ಪ್ರೀಯತಾಮಿತಿ ॥ ೧೯ ॥
ಸುವಿನೀತಂ ಶೀಲಯುತಂ ತಥಾ ಸೋಪಸ್ಕರಂ ಹಯಂ ।
ಭೂಷಯಿತ್ವಾ ಚ ವಿಪ್ರಾಯ ದದ್ಯಾದ್ದಕ್ಷಿಣಯಾ ಸಹ ॥ ೨೦ ॥
ಏವಂ ಕೃತೇ ದ್ವಿಜಶ್ರೇಷ್ಠಾ ಕೃತಕೃತ್ಯೋ ಭವೇನ್ನರಃ ।
ಮುಕ್ತಿಂ ಪ್ರಯಾಂತಿ ತಸ್ಯೈವ ಪಿತರಸ್ತ್ರಿಕುಲೋದ್ಭವಾಃ ॥ ೨೧ ॥
ಪ್ರೇತಯೋನಿಂ ಗತಾ ಯೇ ಚ ಯೇ ಚ ಕೀಟತ್ವಮಾಗತಾಃ ।
ಪಚ್ಯಂತೇ ನರಕೇ ಯೇ ಚ ಮಹಾರೌರವಸಂಜ್ಞಕೇ ॥ ೨೨ ॥
ತೇ ಸರ್ವೇ ತೃಪ್ತಿಮಾಯಾಂತಿ ಚಕ್ರತೀರ್ಥಪ್ರಭಾವತಃ ।
ಶ್ರಾದ್ಧೇ ಕೃತೇ ದ್ವಿಜಶ್ರೇಷ್ಠಾ ಗಯಾಶ್ರಾದ್ಧಫಲಂ ಲಭೇತ್ ॥ ೨೩ ॥
ಯಾ ಗತಿರ್ಮಾತೃಭಕ್ತಾನಾಂ ಯಜ್ವನಾಂ ಯಾ ಗತಿಃ ಸ್ಮೃತಾ ।
ಚಕ್ರತೀರ್ಥೇ ದ್ವಿಜಶ್ರೇಷ್ಠಾಃ ಸ್ನಾತ್ವಾ ತಾಂ ಲಭತೇ ನರಃ ॥ ೨೪ ॥
ಶ್ರಾದ್ಧಂ ಪ್ರಶಸ್ತಂ ವಿಪ್ರೇಂದ್ರಾಃ ಸಂಪ್ರಾಪ್ತೇ ಚಂದ್ರಸಂಕ್ಷಯೇ ।
ಸೂರ್ಯಗ್ರಹೇ ವಿಶೇಷೇಣ ಕುರುಕ್ಷೇತ್ರಫಲಂ ಸ್ಮೃತಂ ।
ಶ್ರಾದ್ಧೇ ಸ್ನಾನೇ ತಥಾ ದಾನೇ ಪಿತೄಣಾಂ ತರ್ಪಣೇ ತಥಾ ॥ ೨೫ ॥

---

೧೯. ಹಾಸಿಗೆ ಮೊದಲಾದ ಸಮಸ್ತ ಸಾಮಗ್ರಿಗಳಿಂದ ಕೂಡಿದ ಎತ್ತಿನಗಾಡಿಯನ್ನು ವಿಷ್ಣುವು ಸುಪ್ರೀತನಾಗಲೆಂದು ದಾನಮಾಡಬೇಕು.

೨೦. ಚೆನ್ನಾಗಿ ಪಳಗಿರುವುದೂ, ಒಳ್ಳೆಯ ಸ್ವಭಾವವುಳ್ಳದೂ ಆದ ಕುದುರೆಯನ್ನು ಅದರ ಸಾಮಗ್ರಿಗಳೊಡನೆ ಅಲಂಕರಿಸಿ ಬ್ರಾಹ್ಮಣರಿಗೆ ದಕ್ಷಿಣೆಯೊಡನೆ ದಾನ ಮಾಡಬೇಕು.

೨೧. ದ್ವಿಜೋತ್ತಮರೆ! ಹೀಗೆ ಮಾಡಿದರೆ ಮಾನವನು ಧನ್ಯನಾಗುವನು. ಅವನ ಮೂರು ಕುಲದ ಪಿತೃಗಳು ಮುಕ್ತರಾಗುವರು.

೨೨–೨೩. ಚಕ್ರತೀರ್ಥದಲ್ಲಿ ಶ್ರಾದ್ಧಮಾಡುವುದರಿಂದ ಗಯಾಶ್ರಾದ್ಧಫಲವು ಲಭಿಸುವುದು. ಮತ್ತು ಪ್ರೇತಜನ್ಮವನ್ನೂ, ಕೀಟತ್ವವನ್ನೂ ಹೊಂದಿದವರೂ, ಮಹಾರೌರವ ನರಕದಲ್ಲಿ ದುಃಖಗೊಳ್ಳುವವರೂ ಆ ತೀರ್ಥದ ಪ್ರಭಾವದಿಂದ ತೃಪ್ತರಾಗುವರು.

೨೪. ಬ್ರಾಹ್ಮಣವರ್ಯರೆ! ಚಕ್ರತೀರ್ಥದಲ್ಲಿ ಸ್ನಾನಮಾಡುವುದರಿಂದ ಮಾತೃಭಕ್ತರಿಗೂ, ಯಾಗಮಾಡುವವರಿಗೂ ಲಭಿಸುವ ಸದ್ಗತಿಯು ದೊರೆಯುವುದು.

೨೫–೨೬. ವಿಪ್ರೋತ್ತಮರೆ? ಅಮಾವಾಸ್ಯೆಯ ದಿನ ಸೂರ್ಯಗ್ರಹಣ ಕಾಲದಲ್ಲಿ ಅಲ್ಲಿ ಮಾಡಿದ ಶ್ರಾದ್ಧವು ಪ್ರಶಸ್ತವಾಗಿ ಕುರುಕ್ಷೇತ್ರಶ್ರಾದ್ಧಫಲವನ್ನೀಯುವುದು. ಶ್ರಾದ್ಧ,

ಪ್ರಶಸ್ತಂ ಚಕ್ರತೀರ್ಥಂ ಚ ನಾತ್ರ ಕಾರ್ಯಾ ವಿಚಾರಣಾ ॥ ೨೬ ॥
ಸರ್ವದಾ ಪಾವನಂ ವಿಪ್ರಾಶ್ಚಕ್ರತೀರ್ಥಂ ನ ಸಂಶಯಃ ।
ಯಸ್ತು ಶ್ರಾದ್ಧಂ ಪ್ರಕುರ್ವೀತ ಯಾತ್ರಾಯಾಮಾಗತೋ ನರಃ ॥ ೨೭ ॥
ಚಕ್ರತೀರ್ಥೇ ದ್ವಿಜಶ್ರೇಷ್ಠಾಃ ಸಂಪೂಜ್ಯ ಮಧುಸೂದನಂ ।
ಪೂಜಿತೇಷು ದ್ವಿಜೇಂದ್ರೇಷು ವಿಷ್ಣುಸಾನ್ನಿಧ್ಯಮಾಪ್ನುಯಾತ್ ॥ ೨೮ ॥
ವಾಚಾ ಕೃತಂ ಕರ್ಮಕೃತಂ ಮನಸಾ ಸಮುಪಾರ್ಜಿತಂ ।
ಸ್ನಾನಮಾತ್ರೇಣ ತತ್ಪಾಪಂ ನಶ್ಯತೇ ನಾತ್ರ ಶಂಶಯಃ ॥ ೨೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ ಗೋಮತ್ಯುದಧಿಸಂಗಮತೀರಸ್ಥ ಚಕ್ರತೀರ್ಥಮಾಹಾತ್ಮ್ಯವರ್ಣನಂನಾಮ ಸಪ್ತಮೋಽಧ್ಯಾಯಃ

---

ಸ್ನಾನ, ದಾನ, ಹಾಗೂ ಪಿತೃತರ್ಪಣ ಇವುಗಳ ವಿಷಯದಲ್ಲಿ ಚಕ್ರತೀರ್ಥವು ಉತ್ತಮವಾದುದು. ಈ ವಿಷಯದಲ್ಲಿ ಸಂದೇಹವಿಲ್ಲ.

೨೭. ವಿಪ್ರರೆ! ಚಕ್ರತೀರ್ಥವು ಯಾವಾಗಲೂ ಪವಿತ್ರವಾದುದು. ಇದರ ಯಾತ್ರೆಗೆ ಬಂದ ಮಾನವನು ಶ್ರಾದ್ಧಮಾಡಬೇಕು.

೨೮. ದ್ವಿಜೋತ್ತಮರೆ! ಮನುಷ್ಯನು ಚಕ್ರತೀರ್ಥದಲ್ಲಿ ವಿಷ್ಣುವನ್ನು ಪೂಜಿಸಿ ಬ್ರಾಹ್ಮಣರನ್ನು ಆರಾಧಿಸಿದರೆ ವಿಷ್ಣುವಿನ ಸಾನ್ನಿಧ್ಯವನ್ನು ಹೊಂದುವನು.

೨೯. ಇಲ್ಲಿ ಸ್ನಾನಮಾಡುವುದರಿಂದ ವಾಕ್ಕು, ಮನಸ್ಸು, ಕರ್ಮಗಳಿಂದ ಮಾಡಿದ ಪಾಪವು ಪರಿಹಾರವಾಗುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಹಾತ್ಮ್ಯದಲ್ಲಿ ಗೋಮತ್ಯುದಧಿಸಂಗಮತೀರಸ್ಥ ಚಕ್ರತೀರ್ಥಮಾಹಾತ್ಮ್ಯವರ್ಣನವೆಂಬ ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಷ್ಟಮೋಽಧ್ಯಾಯಃ

### ಚಕ್ರತೀರ್ಥಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ಮಾ ಗಚ್ಛಧ್ವಂ ಸುರಸದೀಂ ಕಾಲಿಂದೀಂ ಮಾ ಸರಸ್ವತೀಂ ।
ಗಚ್ಛಧ್ವಂ ಚ ದ್ವಿಜಶ್ರೇಷ್ಠಾ ಗೋಮತ್ಯುದಧಿಸಂಗಮಂ ॥ ೧ ॥
ಪ್ರಾಪ್ಯಂತೇ ಹೇಲಯಾ ಯತ್ರ ಸರ್ವೇ ಕಾಮಾ ನ ಸಂಶಯಃ ।
ಗೋಮತೀಜಲಕಲ್ಲೋಲೈಃ ಕ್ರೀಡತೇ ಯತ್ರ ಸಾಗರಃ ॥ ೨ ॥
ಪಾಪಘ್ನಂ ಗೋಮತೀತೀರಂ ಪ್ರಾಪ್ಯತೇ ಪುಣ್ಯವನ್ನರೈಃ ।
ಸಾಗರೇಣ ಚ ಸಂಮಿಶ್ರಂ ಮಹಾಪಾತಕನಾಶನಂ ॥ ೩ ॥
ಗೋಮತೀ ಸಂಗತಾ ಯತ್ರ ಸಾಗರೇಣ ದ್ವಿಜೋತ್ತಮಾಃ ।
ಮುಕ್ತಿದ್ವಾರಂ ತು ಯತ್ಪ್ರೋಕ್ತಂ ಕಲಿಕಾಲೇ ನ ಸಂಶಯಃ ॥ ೪ ॥

---

ಕನ್ನಡ ಅನುವಾದ

ಚಕ್ರತೀರ್ಥಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ದ್ವಿಜೋತ್ತಮರೆ ! ಗಂಗಾ, ಯಮುನಾ, ಸರಸ್ವತೀ ನದಿಗಳಿಗೆ ಹೋಗಬೇಡಿರಿ. ಗೋಮತೀ ಮತ್ತು ಸಮುದ್ರ ಸಂಗಮಕ್ಕೆ ಹೋಗಿರಿ.

೨. ಸಮುದ್ರವು ಗೋಮತೀ ನೀರಿನ ಅಲೆಗಳಿಂದ ವಿನೋದಗೊಳ್ಳುತ್ತಿರುವ ಸ್ಥಳದಲ್ಲಿ ಸಕಲೇಷ್ಟಾರ್ಥಗಳೂ ಅನಾಯಾಸವಾಗಿ ಲಭಿಸುವುವು.

೩. ಸಮುದ್ರದಿಂದ ಸೇರಿ ಪಾತಕಗಳನ್ನು ನಿವಾರಿಸುವ ಗೋಮತೀ ತೀರವು ಪುಣ್ಯವಂತರಿಗೆ ಲಭಿಸುವುದು.

೪. ಕಲಿಕಾಲದಲ್ಲಿ ಗೋಮತಿಯು ಸಮುದ್ರದಿಂದ ಸೇರಿರುವ ಸ್ಥಳವು ಮುಕ್ತಿ ದ್ವಾರವೆನ್ನಿಸಿಕೊಳ್ಳುವುದು,

ಯತ್ಪುಣ್ಯಂ ಲಭತೇ ತೂರ್ಣಂ ಗಂಗಾಸಾಗರಸಂಗಮೇ ।
ತತ್ಪುಣ್ಯಂ ಸಮವಾಪ್ನೋತಿ ಗೋಮತ್ಯುದಧಿಸಂಗಮೇ ॥ ೫ ॥
ನಮಸ್ಕೃತ್ಯ ಚ ತೋಯೇಶಂ ಗೋಮತೀಂ ಚ ಸರಿದ್ವರಾಂ ।
ಅರ್ಘ್ಯಂ ದದ್ಯಾದ್ವಿಧಾನೇನ ಕೃತ್ವಾ ಚ ಕರಯೋಃ ಕುಶಾನ್ ॥ ೬ ॥
ಮಂತ್ರೇಣಾನೇನ ವಿಪ್ರೇಂದ್ರಾ ದದ್ಯಾದರ್ಘ್ಯಂ ವಿಧಾನತಃ ।
ಬ್ರಾಹ್ಮಣೈಸ್ಸಹ ಸಂಗತ್ಯ ಸದಾ ತತ್ತೀರ್ಥವಾಸಿಭಿಃ ॥ ೭ ॥
ಭಕ್ತ್ಯಾ ಚಾರ್ಘ್ಯಂ ಪ್ರದಾಸ್ಯಾಮಿ ದೇವಾಯ ಪರಮಾತ್ಮನೇ ।
ತ್ರಾಹಿ ಮಾಂ ಪಾಪಿನಂ ಘೋರಂ ನಮಸ್ತೇ ಸುರರೂಪಿಣೇ ॥ ೮ ॥
ತೀರ್ಥರಾಜ ನಮಸ್ತುಭ್ಯಂ ರತ್ನಾಕರ ಮಹಾರ್ಣವ ।
ಗೋಮತ್ಯಾ ಸಹ ಗೋವಿಂದ ಗೃಹಾಣಾರ್ಘ್ಯಂ ನಮೋಸ್ತು ತೇ ॥ ೯ ॥
ದತ್ವಾ ಚಾರ್ಘ್ಯಂ ಶಿಖಾಂ ಬಧ್ವಾ ಸಂಸ್ಮೃತ್ಯ ಜಲಶಾಯಿನಂ ।
ಕುರ್ಯಾಚ್ಚ ಪ್ರಾಙ್ಮುಖಃ ಸ್ನಾನಂ ತತಃ ಪ್ರತ್ಯಙ್ಮುಖಸ್ತಥಾ ॥ ೧೦ ॥
ಸ್ನಾತ್ವಾ ಚ ಪರಯಾ ಭಕ್ತ್ಯಾ ಪಿತೄನ್ಸಂತರ್ಪಯೇತ್ತತಃ ।
ವಿಶ್ವೇದೇವಾದಿ ಸಂಪೂಜ್ಯ ಪಿತೄಣಾಂ ಶ್ರಾದ್ಧಮಾಚರೇತ್ ॥ ೧೧ ॥

---

೫. ಗಂಗಾಸಾಗರಸಂಗಮದಲ್ಲಿ ದೊರೆಯುವ ಪುಣ್ಯವು ಗೋಮತೀ ಸಾಗರ ಸಂಗಮದಲ್ಲಿ ಲಭಿಸುವುದು.

೬. ಸಮುದ್ರವನ್ನೂ, ಗೋಮತೀನದಿಯನ್ನೂ ವಂದಿಸಿ ಕೈಯಲ್ಲಿ ದರ್ಭೆಯನ್ನು ಹಿಡಿದುಕೊಂಡು ವಿಧಿಯಂತೆ ಅರ್ಘ್ಯವನ್ನೀಯಬೇಕು.

೭. ಬ್ರಾಹ್ಮಣರೆ! ಆ ತೀರ್ಥದಲ್ಲಿ ವಾಸಿಸುತ್ತಿರುವ ಬ್ರಾಹ್ಮಣರೊಡನೆ ಈ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

೮. "ದೇವಸ್ವರೂಪಿಯಾದ ಪರಮಾತ್ಮನಿಗೆ ಭಕ್ತಿಯಿಂದ ಅರ್ಘ್ಯವನ್ನು ಕೊಡುವೆನು. ನಿನಗೆ ನಮಸ್ಕಾರವು. ಘೋರ ಪಾಪಿಯಾದ ನನ್ನನ್ನು ಕಾಪಾಡು.

೯. ತೀರ್ಥರಾಜನಾದ ಸಮುದ್ರನೆ! ನಿನಗೆ ನಮಸ್ಕಾರವು. ಗೋವಿಂದ! ನೀನು ಗೋಮತಿಯೊಡನೆ ಅರ್ಘ್ಯವನ್ನು ಸ್ವೀಕರಿಸು. ನಿನಗೆ ವಂದನೆಯು."

೧೦–೧೧. ಹೀಗೆ ಅರ್ಘ್ಯವನ್ನಿತ್ತು ತಲೆಕೂದಲನ್ನು ಕಟ್ಟಿಕೊಂಡು ಜಲಶಾಯಿಯಾದ ವಿಷ್ಣುವನ್ನು ಸ್ಮರಿಸಿ ಮೊದಲು ಪೂರ್ವಮುಖನಾಗಿಯೂ ಅನಂತರ ಪಶ್ಚಿಮಾಭಿಮುಖನಾಗಿಯೂ ಮಿಂದು ಪಿತೃತರ್ಪಣ ಮಾಡಿ ವಿಶ್ವೇದೇವರನ್ನು ಪೂಜಿಸಿ ಅನಂತರ ಪಿತೃಗಳಿಗೆ ಶ್ರಾದ್ಧಗೈಯ್ಯಬೇಕು.

ಯಥೋಕ್ತಾಂ ದಕ್ಷಿಣಾಂ ದದ್ಯಾದ್ವಿಷ್ಣುರ್ಮೇ ಪ್ರೀಯತಾಮಿತಿ ।
ವಿಶೇಷತಃ ಪ್ರದಾತವ್ಯಂ ಸುವರ್ಣಂ ವಿಪ್ರಸತ್ತಮಾಃ ॥ ೧೨ ॥
ದಂಪತ್ಯೋರ್ವಾಸಸೀ ಚೈವ ಕಂಚುಕೋಷ್ಣೀಷಮೇವ ಚ ।
ಲಕ್ಷ್ಮ್ಯಾ ಸಹ ಜಗನ್ನಾಥೋ ವಿಷ್ಣುರ್ಮೇ ಪ್ರೀಯತಾಮಿತಿ ॥ ೧೩ ॥
ಮಹಾದಾನಾನಿ ಸರ್ವಾಣಿ ಗೋಮತ್ಯುದಧಿಸಂಗಮೇ ।
ಸಪ್ತದ್ವೀಪಪತಿರ್ಭೂತ್ವಾ ವಿಷ್ಣುಲೋಕೇ ಮಹೀಯತೇ ॥ ೧೪ ॥
ಯಸ್ತು ತುಲಾಪುರುಷಂ ದದ್ಯಾದ್ಗೋಮತ್ಯುದಧಿಸಂಗಮೇ ।
ಸಪ್ತದ್ವೀಪಪತಿರ್ಭೂತ್ವಾ ವಿಷ್ಣುಲೋಕೇ ಮಹೀಯತೇ ॥ ೧೫ ॥
ಆತ್ಮಾನಂ ತೋಲಯೇದ್ಯಸ್ತು ಸ್ವರ್ಣೇನ ರಜತೇನ ವಾ ।
ವಸ್ತ್ರೈರ್ವಾ ಕುಂಕುಮೈರ್ವಾಪಿ ಫಲೈರ್ವಾಪಿ ತಥಾ ರಸೈಃ ॥ ೧೬ ॥
ಭುಕ್ತ್ವಾ ಭೋಗಾನ್ಸುವಿಪುಲಾಂಸ್ತಥಾ ಕಾಮಾನ್ಮನೋಹರಾನ್ ।
ಸಂಪೂಜ್ಯಮಾನಸ್ತ್ರಿದಶೈರ್ಯಾತಿ ವಿಷ್ಣ್ವಾಲಯಂ ನರಃ ॥ ೧೭ ॥
ಹಿರಣ್ಯರೂಪ್ಯದಾನಂ ಚ ಹ್ಯಶ್ವಂ ಧೇನುಂ ತಥೈವ ಚ ।
ಗೋಮತೀಸಂಗಮೇ ದತ್ವಾ ಸರ್ವಾನ್ಕಾಮಾನವಾಪ್ನುಯಾತ್ ॥ ೧೮ ॥

---

೧೨. ವಿಪ್ರೋತ್ತಮರೆ! ಶಾಸ್ತ್ರೋಕ್ತರೀತಿಯಿಂದ ವಿಶೇಷವಾಗಿ ವಿಷ್ಣುವು ನನ್ನ ವಿಷಯದಲ್ಲಿ ಸುಪ್ರೀತನಾಗಲೆಂದು ಸುವರ್ಣದ ದಕ್ಷಿಣೆಯನ್ನೀಯಬೇಕು.

೧೩. ದಂಪತಿಗಳಿಗೆ ವಸ್ತ್ರ, ಅಂಗಿ, ತಲೆಪಾಗುಗಳನ್ನು ವಿಷ್ಣುವು ಲಕ್ಷ್ಮಿಯೊಡನೆ ಪ್ರೀತನಾಗಲೆಂದು ದಾನಮಾಡಬೇಕು.

೧೪. ಗೋಮತ್ಯುದಧಿ ಸಂಗಮದಲ್ಲಿ ಸಕಲ ಮಹಾ ದಾನಗಳನ್ನೆಸಗಿದ ಮಾನವನು ಸಪ್ತ ದ್ವೀಪಗಳುಳ್ಳ ಭೂಮಿಗೆ ಚಕ್ರವರ್ತಿಯಾಗಿ ವಿಷ್ಣುಲೋಕದಲ್ಲಿ ಪೂಜ್ಯನಾಗುವನು.

೧೫. ಇಲ್ಲಿ ತುಲಾಪುರುಷ ದಾನಮಾಡಿದವನು ಏಳು ದ್ವೀಪಗಳಿಗೆ ಒಡೆಯನಾಗಿ ವಿಷ್ಣುಲೋಕದಲ್ಲಿ ಮಾನ್ಯನಾಗುವನು.

೧೬-೧೭. ಇಲ್ಲಿ ತನ್ನನ್ನು ಸ್ವರ್ಣ, ರಜತ, ವಸ್ತ್ರ, ಕುಂಕುಮ, ಫಲ ಅಥವಾ ರಸ ವಸ್ತುಗಳಿಂದ ತೂಗಿಸಿಕೊಂಡವನು ವಿಪುಲವಾದ ಇಷ್ಟಭೋಗಗಳನ್ನು ಅನುಭವಿಸಿ ದೇವತೆಗಳಿಂದ ಪೂಜ್ಯನಾಗಿ ವಿಷ್ಣ್ವಾಲಯವನ್ನು ಸೇರುವನು.

೧೮. ಗೋಮತೀ ಸಂಗಮದಲ್ಲಿ ಚಿನ್ನ, ಬೆಳ್ಳಿ, ಅಶ್ವ, ಧೇನು ಇವುಗಳನ್ನು ದಾನಮಾಡಿದವನು ಸಮಸ್ತೇಷ್ಟಾರ್ಥಗಳನ್ನೂ ಹೊಂದುವನು.

ಭೂಮಿದಾನಂ ಚ ಯೋ ದದ್ಯಾದ್ಗೋಮತ್ಯುದಧಿಸಂಗಮೇ ।
ಸ್ನಾತ್ವಾ ಶುಚಿರ್ಹರಿಂ ಸ್ಮೃತ್ವಾ ತಸ್ಮಾದ್ಧನ್ಯತರೋ ನ ಹಿ ॥ ೧೯ ॥
ಕನ್ಯಾದಾನಂ ಚ ಯಃ ಕುರ್ಯಾದ್ವಿದ್ಯಾದಾನಮಥಾಪಿ ವಾ ।
ಗೋಮತ್ಯಾಃ ಸಂಗಮೇ ಸ್ನಾತ್ವಾ ಯಾತಿ ಬ್ರಹ್ಮಪದಂ ನರಃ ॥ ೨೦ ॥
ಯೋ ದದ್ಯಾತ್ಸ್ವರ್ಣಧೇನುಂ ಚ ಘೃತಧೇನುಂ ಸಮಾಹಿತಃ ।
ಬ್ರಹ್ಮಾಂಡದಾನವಽಪಿ ವಾ ತಸ್ಯ ಪುಣ್ಯಮನಂತಕಂ ॥ ೨೧ ॥
ತಥಾ ಲವಣಧೇನುಂ ಚ ಜಲಧೇನುಮಥಾಪಿ ವಾ ।
ದತ್ವಾ ಯಾತಿ ಪರಂ ಸ್ಥಾನಂ ಗೋಮತ್ಯುದಧಿಸಂಗಮೇ ॥ ೨೨ ॥
ಯುಗಾದಿಷು ಚ ಸರ್ವೇಷು ಗೋಮತ್ಯುದಧಿಸಂಗಮೇ ।
ಸ್ನಾತ್ವಾ ಸಂತರ್ಪ್ಯ ಚ ಪಿತೄನಕ್ಷಯಂ ಲೋಕಮಾಪ್ನುಯಾತ್ ॥ ೨೩ ॥
ಆಷಾಢ್ಯಾಂ ಚ ತಥಾ ಮಾಘ್ಯಾಂ ಕಾರ್ತಿಕ್ಯಾಂ ಸಂಗಮೇ ನರಃ ।
ಪಿತೄಣಾಂ ತರ್ಪಣಂ ಸ್ನಾನಂ ಶ್ರಾದ್ಧಂ ಪಾವಕಪೂಜನಂ ।
ಕುರ್ಯಾಚ್ಚೈವ ತಥಾ ದಾನಂ ಯದೀಚ್ಛೇದಕ್ಷಯಂ ಪದಂ ॥ ೨೪ ॥
ಪಿತೄಣಾಂ ಚಾಕ್ಷಯಾ ತೃಪ್ತಿರ್ಗಯಾಶ್ರಾದ್ಧೇನ ವೈ ಯಥಾ ।
ತದ್ವಚ್ಛ್ರಾದ್ಧಾನ್ಮಹಾಭಾಗ ಗೋಮತ್ಯುದದಿಸಂಗಮೇ ॥ ೨೫ ॥

---

೧೯. ಇಲ್ಲಿ ಮಿಂದು ಹರಿಯನ್ನು ಸ್ಮರಿಸಿ ಭೂಮಿಯನ್ನು ದಾನಮಾಡಿದವನಿಗಿಂತ ಧನ್ಯನಿಲ್ಲ.

೨೦. ಇಲ್ಲಿ ಮಿಂದು ಕನ್ಯೆ ಅಥವಾ ವಿದ್ಯೆಯನ್ನು ದಾನಮಾಡಿದವನು ಬ್ರಹ್ಮಪದವಿಯನ್ನು ಪಡೆಯುವನು.

೨೧. ಇಲ್ಲಿ ಸ್ವರ್ಣಘೃತ ಧೇನುಗಳನ್ನು ಸಾವಧಾನ ಮನಸ್ಸಿನಿಂದ ದಾನಮಾಡಿದರೆ ಅವು ಬ್ರಹ್ಮಾಂಡ ದಾನಕ್ಕಿಂತ ಹೆಚ್ಚು ಪುಣ್ಯಪ್ರದವಾಗುವುವು.

೨೨. ಹಾಗೆಯೇ ಲವಣ ಅಥವಾ ಜಲ ಧೇನುಗಳನ್ನು ದಾನಮಾಡಿದವನು ಉತ್ತಮ ಸ್ಥಾನವನ್ನು ಹೊಂದುವನು.

೨೩. ಇಲ್ಲಿ ಸಮಸ್ತ ಯುಗಾದಿಗಳಲ್ಲಿ ಮಿಂದು ಪಿತೃ ತರ್ಪಣ ಮಾಡಿದವನು ಅಕ್ಷಯ ಲೋಕವನ್ನು ಸೇರುವನು.

೨೪. ಶಾಶ್ವತ ಲೋಕವನ್ನು ಬಯಸುವವನು ಇಲ್ಲಿ ಆಷಾಢ, ಮಾಘ, ಕಾರ್ತಿಕ ಹುಣ್ಣಿಮೆ ದಿನಗಳಲ್ಲಿ ಸ್ನಾನ, ಶ್ರಾದ್ಧ, ಪಿತೃತರ್ಪಣ, ಯಜ್ಞ ಇವುಗಳನ್ನು ಮಾಡಬೇಕು.

೨೫. ಈ ಗೋಮತ್ಯುದಧಿ ಸಂಗಮದಲ್ಲಿ ಶ್ರಾದ್ಧ ಮಾಡಿದರೆ ಗಯಾಶ್ರಾದ್ಧ ಮಾಡಿದಂತೆ ಪಿತೃಗಳು ತೃಪ್ತರಾಗುವರು.

ಕುರ್ಯಾತ್ಸ್ನಾನಂ ತಥಾ ದಾನಂ ಪಿತೄಣಾಂ ತರ್ಪಣಂ ತಥಾ ।
ಪಂಚಕಾಸು ದ್ವಿಜಶ್ರೇಷ್ಠಾಸ್ತಥಾ ಚೈವಾಷ್ಟಕಾಸು ಚ ॥ ೨೬ ॥
ವೈಧೃತೌ ಚ ವ್ಯತೀಪಾತೇ ಛಾಯಾಯಾಂ ಕುಂಜರಸ್ಯ ಚ ।
ಷಷ್ಠ್ಯಾಂ ಚ ಕಪಿಲಾಖ್ಯಾಯಾಂ ತಥಾ ಹಿ ದ್ವಾದಶೀಷು ಚ ॥ ೨೭ ॥
ಗೋಮತ್ಯಾಂ ಸಂಗಮೇ ಸ್ನಾತ್ವಾ ದದ್ಯಾದ್ದಾನಂ ವಿಶೇಷತಃ ।
ನಿರ್ಮಲಂ ಸ್ಥಾನಮಾಪ್ನೋತಿ ಯತ್ರ ಗತ್ವಾ ನ ಶೋಚತಿ ॥ ೨೮ ॥
ಶ್ರಾದ್ಧಪಕ್ಷೇ ತ್ವಮಾವಾಸ್ಯಾಂ ಗೋಮತ್ಯುದಧಿಸಂಗಮೇ ।
ಹೇಲಯಾ ಪ್ರಾಪ್ಯತೇ ಪುಣ್ಯಂ ದತ್ವಾ ಪಿಂಡಂ ಗಯಾಸಮಂ ॥ ೨೯ ॥
ತಸ್ಮಾತ್ಸರ್ವಪ್ರಯತ್ನೇನ ತ್ವಮಾವಾಸ್ಯಾಂ ದ್ವಿಜೋತ್ತಮಾಃ ।
ಶ್ರಾದ್ಧಂ ಹಿ ಪಿತೃಪಕ್ಷಾಂತೇ ಕಾರ್ಯಂ ಗೋಮತಿಸಂಗಮೇ ॥ ೩೦ ॥
ಯದ್ಯಪ್ಯಶ್ರೋತ್ರಿಯಂ ಶ್ರಾದ್ಧಂ ಯದ್ಯಪ್ಯುಪಹತಂ ಭವೇತ್ ।
ಪಕ್ಷಶ್ರಾದ್ಧಂ ಮಂತ್ರಹೀನಂ ಪಾತ್ರಹೀನಮಥಾಪಿ ವಾ ।
ದ್ರವ್ಯಹೀನಂ ಕಾಲಹೀನಂ ಮನಸಃ ಸ್ವಾಸ್ಥ್ಯವರ್ಜಿತಂ ॥ ೩೧ ॥
ಶ್ರಾದ್ಧಪಕ್ಷೇ ಹ್ಯಮಾಯಾಂ ತು ಗೋಮತ್ಯುದಧಿಸಂಗಮೇ ।
ಪರಿಪೂರ್ಣಂ ಭವೇತ್ಸರ್ವಂ ಪಿತೄಣಾಂ ತೃಪ್ತಿರಕ್ಷಯಾ ॥ ೩೨ ॥

---

೨೬. ದ್ವಿಜೋತ್ತಮರೆ! ಪಂಚಕ ಅಷ್ಟಕಗಳಲ್ಲಿ ಅಲ್ಲಿ ಸ್ನಾನ, ದಾನ, ಪಿತೃತರ್ಪಣಗಳನ್ನು ಮಾಡಬೇಕು.

೨೭–೨೮. ಈ ಗೋಮತೀ ಸಂಗಮದಲ್ಲಿ ವೈಧೃತಿ, ವ್ಯತೀಪಾತ, ಗಜಚ್ಛಾಯಾ, ಕಪಿಲಾಷಷ್ಠೀ, ದ್ವಾದಶೀ ಇವುಗಳಲ್ಲಿ ಮಿಂದು ವಿಶೇಷವಾಗಿ ದಾನಮಾಡಿದವನು ದುಃಖರಹಿತವಾದ ಪವಿತ್ರ ಸ್ಥಾನವನ್ನು ಪಡೆಯುವನು.

೨೯. ಇಲ್ಲಿ ಪಿತೃಪಕ್ಷ, ಅಮಾವಾಸ್ಯೆಗಳಲ್ಲಿ ಪಿಂಡಪ್ರದಾನ ಮಾಡಿದರೆ ಅನಾಯಾಸವಾಗಿ ಗಯಾ ಪಿಂಡಪ್ರದಾನದ ಪುಣ್ಯವನ್ನು ಹೊಂದುವನು.

೩೦. ದ್ವಿಜವರ್ಯರೆ! ಆದ್ದರಿಂದ ಈ ಗೋಮತೀ ಸಂಗಮದಲ್ಲಿ ಪಿತೃಪಕ್ಷದ ಅಮಾವಾಸ್ಯೆ ದಿನ ಸಕಲ ಪ್ರಯತ್ನದಿಂದ ಶ್ರಾದ್ಧಗೈಯ್ಯಬೇಕು.

೩೧. ಇಲ್ಲಿ ಪಿತೃಪಕ್ಷದಲ್ಲಿ ಒಂದು ದಿನ ಮಾಡಿದ ಶ್ರಾದ್ಧವು ಶ್ರೋತ್ರಿಯ ಬ್ರಾಹ್ಮಣರಿಲ್ಲದುದೂ,ದುಷ್ಟವೂ ಆಗಿದ್ದರೂ ಒಂದ ಪಕ್ಷ ಕಾಲದಲ್ಲಿ ಮಾಡಿದ ಶ್ರಾದ್ಧವು ಪುಣ್ಯವನ್ನು ಕೊಡುವುದು.

೩೨–೩೩. ಪಿತೃಪಕ್ಷದ ಅಮಾವಾಸ್ಯೆ ದಿನ ಮಾಡಿದ ಶ್ರಾದ್ಧವು ಶ್ರದ್ಧೆ, ಮಂತ್ರ, ಒಳ್ಳೆ ಪಾತ್ರ, ದ್ರವ್ಯ, ಕಾಲ, ಮನಸ್ವಾಸ್ಥ್ಯ ಇವುಗಳಿಲ್ಲದಿದ್ದರೂ ಪರಿಪೂರ್ಣವಾಗಿ ಪಿತೃಗಳಿಗೆ ಅಕ್ಷಯ ತೃಪ್ತಿಯನ್ನುಂಟುಮಾಡುವುದು.

ಗೋಮತೀ ಕಮಲಾ ಚೈವ ಚಂದ್ರಭಾಗಾ ತಥೈವ ಚ ।
ತಿಸ್ರಸ್ತು ಸಂಗತಾ ಸದ್ಯಃ ಪ್ರವಿಷ್ಟಾ ವರುಣಾಲಯಂ ॥ ೩೪ ॥
ಗಯಾಯಾಂ ಪಿಂಡದಾನೇನ ಪ್ರಯಾಗೇ ಹ್ಯಸ್ಥಿಪಾತನೇ ।
ತತ್ಫಲಂ ಸಮವಾಪ್ನೋತಿ ಪಕ್ಷಾಂತೇ ಶ್ರಾದ್ಧಕೃನ್ನರಃ ॥ ೩೫ ॥
ಯದೀಚ್ಛೇತ್ಸರ್ವತೀರ್ಥೇಷು ಹೇಲಯಾ ತ್ವಭಿಷೇಚನಂ ।
ಸ್ನಾನಂ ಕುರ್ವೀತ ಭಕ್ತ್ಯಾ ವೈ ಗೋಮತ್ಯುದಧಿಸಂಗಮೇ ॥ ೩೬ ॥
ಶ್ರಾದ್ಧೇ ಕೃತೇ ತ್ವಮಾವಸ್ಯಾಂ ಪಿತೃಪಕ್ಷೇ ಚ ವೈ ದ್ವಿಜಾಃ ।
ಅಪುತ್ರಾ ಚೈವ ಯಾ ನಾರೀ ಕಾಕವಂಧ್ಯಾ ಚ ಯಾ ಭವೇತ್ ॥ ೩೭ ॥
ಮೃತಪುತ್ರಾ ತಥಾ ವಿಪ್ರಾಃ ಸಂಗಮೇ ಸ್ನಾನಮಾಚರೇತ್ ।
ದೋಷೈಃ ಪ್ರಮುಚ್ಯತೇ ಸರ್ವೈರ್ಗೋಮತ್ಯುಧಿಸಂಗಮೇ ।
ಸ್ನಾತ್ವಾ ಸುಖಮವಾಪ್ನೋತಿ ಪ್ರಜಾಂ ಚ ಚಿರಜೀವಿನೀಂ ॥ ೩೯ ॥
ಯಾನಿ ಕಾನಿ ಚ ದಾನಾನಿ ಪೃಥಿವ್ಯಾಂ ಸಂಭವಂತಿ ಹಿ ।
ತಾನಿ ಸರ್ವಾಣಿ ದೇಯಾನಿ ಗೋಮತ್ಯುದಧಿಸಂಗಮೇ ॥ ೪೦ ॥
ಸರ್ವದೈವ ಚ ವಿಪ್ರೇಂದ್ರಾ ವಿಶೇಷಾತ್ಸರ್ವಪರ್ವಸು ।
ಸ್ನಾನಂ ಕುರ್ವೀತ ನಿಯತೋ ಗೋಮತ್ಯುದಧಿಸಂಗಮೇ ॥ ೪೧ ॥

---

೩೪. ಗೋಮತೀ, ಕಮಲಾ, ಚಂದ್ರಭಾಗಾ ಈ ಮೂರು ನದಿಗಳು ಸೇರಿ ಸಮುದ್ರಕ್ಕೆ ಸಂಗಮವಾಗಿರುವುವು.

೩೫. ಇಲ್ಲಿ ಅಮಾವಾಸ್ಯೆ ದಿನ ಶ್ರಾದ್ಧಮಾಡಿದ ಮನುಷ್ಯನು ಗಯೆಯಲ್ಲಿ ಪಿಂಡ ಪ್ರದಾನ, ಪ್ರಯಾಗದಲ್ಲಿ ಅಸ್ಥಿಪಾತನ ಇವುಗಳ ಪುಣ್ಯವನ್ನು ಹೊಂದುವನು.

೩೬. ಅನಾಯಾಸದಿಂದ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡಲು ಬಯಸು ವವನು ಗೋಮತ್ಯುದಧಿಸಂಗಮದಲ್ಲಿ ಸ್ನಾನಮಾಡಬೇಕು.

೩೭–೩೯. ಪ್ರತಿ ಪಕ್ಷದಲ್ಲಿಯೂ, ಮಾಡಿದ ಪಿತೃಪೂಜೆಯೂ ಗೋಮತೀ ಸಂಗಮದಲ್ಲಿ ಪಿತೃಪಕ್ಷದಲ್ಲಿಯೂ, ಅಮಾವಾಸ್ಯೆ ದಿನವೂ ಶ್ರಾದ್ಧ ಮಾಡಿದರೆ ಸಂಪೂರ್ಣವಾಗುವುದು. ಮಕ್ಕಳಿಲ್ಲದವಳೂ, ಬಂಜೆಯೂ, ಮೃತ ಪುತ್ರಳೂ ಆದ ನಾರಿಯು ಇಲ್ಲಿ ಮಿಂದರೆ ಸಕಲ ದೋಷಮುಕ್ತಳಾಗಿ ಸುಖವನ್ನೂ. ದೀರ್ಘಾಯುಷ್ಯವುಳ್ಳ ಪುತ್ರರನ್ನೂ ಪಡೆಯುವಳು.

೪೦. ಈ ಗೋಮತೀ ಸಾಗರ ಸಂಗಮದಲ್ಲಿ ಭೂಮಿಯಲ್ಲಿರುವ ಸಕಲ ದಾನ ಗಳನ್ನೂ ಕೊಡಬೇಕು.

೪೧. ವಿಪ್ರರೆ ! ಇಲ್ಲಿ ಯಾವಾಗಲೂ ವಿಶೇಷವಾಗಿ ಸಮಸ್ತ ಪರ್ವಗಳಲ್ಲಿಯೂ ನಿಯಮದಿಂದ ಸ್ನಾನಮಾಡಬೇಕು.

ದರ್ಶನಾದೇವ ಪಾಪಸ್ಯ ಕ್ಷಯೋ ಭವತಿ ಭೋ ದ್ವಿಜಾಃ ।
ಪ್ರಣಾಮೇ ಮನಸಸ್ತುಷ್ಟಿರ್ಮುಕ್ತಿಶ್ಚೈವಾವಗಾಹನೇ ॥ ೪೨ ॥
ಶ್ರಾದ್ಧೇ ಕೃತೇ ಪಿತೄಣಾಂ ತು ತೃಪ್ತಿರ್ಭವತಿ ಶಾಶ್ವತೀ ।
ದಾನೇ ಮನೋರಥಾವಾಪ್ತಿರ್ಜಾಯತೇ ನಾತ್ರ ಸಂಶಯಃ ॥ ೪೩ ॥
ಕೃತಕೃತ್ಯಾಸ್ತು ತೇ ಧನ್ಯಾ ಯೈಃ ಕೃತಂ ಪಿತೃತರ್ಪಣಂ ।
ಶ್ರಾದ್ಧಂ ಚ ಋಷಿಶಾರ್ದೂಲಾ ಗೋಮತ್ಯುದಧಿಸಂಗಮೇ ॥ ೪೪ ॥
ಪಿತೃಪಕ್ಷೇ ಚ ಯೇ ಕೇಚಿನ್ಮಾತೃಪಕ್ಷೇ ತಥೈವ ಚ ।
ತಥಾ ಶ್ವಶುರಪಕ್ಷೇ ಚ ಯೇ ಚಾನ್ಯೇ ಮಿತ್ರಬಾಂಧವಾಃ ॥ ೪೫ ॥
ಸ್ಥಾವರತ್ವಂ ಗತಾ ಯೇ ಚ ಪುದ್ಗಲತ್ವಂ ಚ ಯೇ ಗತಾಃ ।
ಪಿಶಾಚತ್ವಂ ಗತಾ ಯೇ ಚ ಯೇ ಚ ಪ್ರೇತತ್ವಮಾಗತಾಃ ॥ ೪೬ ॥
ತಿರ್ಯಗ್ಯೋನಿಗತಾ ಯೇ ಚ ಯೇ ಚ ಕೀಟತ್ವಮಾಗತಾಃ ।
ಸ್ನಾತಮಾತ್ರೇಣ ತೇ ಸರ್ವೇ ಮುಕ್ತಿಂ ಯಾಂತಿ ನ ಸಂಶಯಃ ॥ ೪೭ ॥
ಕಿಂ ಪುನಃ ಶ್ರಾದ್ಧದಾನಾದಿ ಗೋಮತೀಸಂಗಮೇ ತಥಾ ।
ಕೃತ್ವಾ ಮುಕ್ತಿಮವಾಪ್ನೋತಿ ಮಾನವೋ ನಾತ್ರ ಸಂಶಯಃ ॥ ೪೮ ॥

---

೪೨. ದ್ವಿಜರೆ! ಈ ಗೋಮತೀ ಸಂಗಮದಲ್ಲಿ ದರ್ಶನದಿಂದ ಪಾಪನಾಶವೂ, ನಮಸ್ಕಾರದಿಂದ ಮನಸ್ತೃಪ್ತಿಯೂ ಸ್ನಾನದಿಂದ ಮುಕ್ತಿಯೂ ಉಂಟಾಗುವುದು.

೪೩. ಶ್ರಾದ್ಧ ಮಾಡಿದರೆ ಪಿತೃಗಳಿಗೆ ಶಾಶ್ವತ ತೃಪ್ತಿಯೂ, ದಾನ ಮಾಡಿದರೆ ಇಷ್ಟಾರ್ಥಲಾಭವೂ ನಿಶ್ಚಯವಾಗಿ ಆಗುವುದು.

೪೪. ಮುನಿರ್ಯರೆ ! ಈ ಗೋಮತೀ ಸಂಗಮದಲ್ಲಿ ಪಿತೃಗಳಿಗೆ ಶ್ರಾದ್ಧ ಮತ್ತು ತರ್ಪಣಗೈಯುವವರು ಧನ್ಯರು.

೪೫-೪೭. ಪಿತೃ, ಮಾತೃ, ಮಾವ ಇವರ ಕಡೆಯ ಪಿತೃಗಳಲ್ಲಿಯೋ ಮಿತ್ರ ಬಾಂಧವರಲ್ಲಿಯೂ ಯಾರು ಯಾರು ಸ್ಥಾವರ, ಪುದ್ಗಲ, ಪಿಶಾಚ, ಪ್ರೇತ, ಪಶು ಪಕ್ಷಿ ಕೀಟಗಳಾಗಿರುವರೊ ಅವರೆಲ್ಲ ಸ್ನಾನ ಮಾತ್ರದಿಂದ ಮುಕ್ತರಾಗುವರು.

೪೮. ಮಾನವನು ಈ ಗೋಮತೀ ಸಂಗಮದಲ್ಲಿ ಶ್ರಾದ್ಧ ದಾನ ಮೊದಲಾದುವು ಗಳನ್ನು ಮಾಡಿದರೆ ಮುಕ್ತನಾಗುವನೆಂದು ಹೇಳಬೇಕಾಗಿಲ್ಲ.

ಶ್ರವಣದ್ವಾದಶೀಯೋಗೇ ಗೋಮತ್ಯುದಧಿಸಂಗಮೇ ।
ಸ್ನಾತ್ವಾ ಮುಕ್ತಿಮವಾಪ್ನೋತಿ ಯತ್ರ ಗತ್ವಾ ನ ಶೋಚತಿ ॥ ೪೯ ॥
ಸಂತ್ಯಜ್ಯ ಸರ್ವತೀರ್ಥಾನಿ ಗೋಮತ್ಯುದಧಿಸಂಗಮೇ ।
ಸ್ನಾನಂ ಕೃತ್ವಾ ತಥಾ ಶ್ರಾದ್ಧಂ ಕೃತಕೃತ್ಯೋ ಭವೇನ್ನರಃ ।
ಪರಂ ಲೋಕಮವಾಪ್ನೋತಿ ಹ್ಯರ್ಚಯಿತ್ವಾ ತು ವಾಮನಂ ॥ ೫೦ ॥
ಸಮ್ಯಕ್ಸ್ನಾತ್ವಾ ನರೋ ಯಸ್ತು ಪೂಜಯೇದ್ಗರುಡಧ್ವಜಂ ।
ಪೀತಾಂಬರಧರೋ ಭೂತ್ವಾ ದಿವ್ಯಾಭರಣಭೂಷಿತಃ ॥ ೫೧ ॥
ವೀಕ್ಷ್ಯಮಾಣಃ ಸುರಸ್ತ್ರೀಭಿರ್ನಾಗಾರಿಕೃತಕೇತನಃ ।
ಚತುರ್ಭುಜಧರೋ ಭೂತ್ವಾ ವನಮಾಲಾವಿಭೂಷಿತಃ ।
ಸಂಸ್ತೂಯಮಾನೋ ಮುನಿಭಿರ್ಯಾತಿ ವಿಷ್ಣೋರ್ವಲಯಂ ಸರಃ ॥ ೫೨ ॥
ಗೋಮತೀಸಂಗಮೇ ಸ್ನಾತ್ವಾ ಕೃತಕೃತ್ಯೋ ಭವೇನ್ನರಃ ।
ಯತ್ರ ದೈತ್ಯವಧಂ ಕೃತ್ವಾ ವಿಷ್ಣುನಾ ಪ್ರಭವಿಷ್ಣುನಾ ॥ ೫೩ ॥
ಚಕ್ರಂ ಪ್ರಕ್ಷಾಲಿತಂ ಪೂರ್ವಂ ಕೃಷ್ಣೇನ ಸ್ವಯಮೇವ ಹಿ ।
ತೇನೈವ ಚಕ್ರತೀರ್ಥಂ ಹಿ ಖ್ಯಾತಂ ಲೋಕತ್ರಯೇ ದ್ವಿಜಾಃ ॥ ೫೪ ॥

---

೪೯. ಗೋಮತ್ಯುದಧಿ ಸಂಗಮದಲ್ಲಿ ಶ್ರವಣದ್ವಾದಶೀ ದಿನ ಮಿಂದವನು ದುಃಖವಿಲ್ಲದಿರುವ ಮೋಕ್ಷವನ್ನು ಹೊಂದುವನು.

೫೦. ಮನುಷ್ಯನು ಸಕಲ ತೀರ್ಥಗಳನ್ನೂ ಬಿಟ್ಟು ಗೋಮತ್ಯುದಧಿಸಂಗಮದಲ್ಲಿ ಮಿಂದು ಶ್ರಾದ್ಧ ಮಾಡಿದರೆ ಕೃತಕೃತ್ಯನಾಗುವನು. ವಾಮನನನ್ನು ಅರ್ಚಿಸಿದರೆ ಉತ್ತಮ ಲೋಕವನ್ನು ಹೊಂದುವನು.

೫೧–೫೨. ಈ ಗೋಮತೀ ಸಂಗಮದಲ್ಲಿ ಮಿಂದು ವಿಷ್ಣುವನ್ನು ಪೂಜಿಸಿದವನು ಪೀತ ವಸ್ತ್ರವನ್ನು ಧರಿಸಿದವನೂ, ದಿವ್ಯಾಭರಣಗಳಿಂದ ಅಲಂಕಾರಗೊಂಡವನೂ, ಸುರಾಂಗನೆಯರಿಂದ ಈಕ್ಷಿಸಲ್ಪಡುವವನೂ, ಗರುಡಧ್ವಜನೂ, ನಾಲ್ಕು ಭುಜಗಳುಳ್ಳವನೂ, ವನಮಾಲಾಲಂಕೃತನೂ, ಮುನಿಗಳಿಂದ ಸ್ತುತಿಸಲ್ಪಡುವವನೂ ಆಗಿ ವೈಕುಂಠ ಲೋಕಕ್ಕೆ ತೆರಳುವನು.

೫೩–೫೪. ಮನುಷ್ಯನು ಗೋಮತೀ ಸಂಗಮದಲ್ಲಿ ಮಿಂದರೆ ಧನ್ಯನಾಗುವನು. ಅಲ್ಲಿ ಹಿಂದೆ ಸಮರ್ಥನಾದ ವಿಷ್ಣುವು ದೈತ್ಯರನ್ನು ಕೊಂದು ಚಕ್ರವನ್ನು ತಾನೇ ತೊಳೆದಿರುವನು. ಆದರಿಂದಲೇ ಅದು ಮೂರು ಲೋಕಗಳಲ್ಲಿಯೂ ಚಕ್ರತೀರ್ಥವೆಂದು ವಿಖ್ಯಾತವಾಗಿರುವುದು.

ಭವಂತಿ ಯತ್ರ ಪಾಷಾಣಾಶ್ಚಕ್ರಾಂಕಾ ಮುಕ್ತಿದಾಯಕಾಃ ।
ಯೈಃ ಪೂಜಿತೈರ್ಜಗನ್ನಾಥಃ ಕೃಷ್ಣಃ ಸಾನಿಧ್ಯಮಾವ್ರಜೇತ್ ॥ ೫೫ ॥
ತತ್ರೈವ ಯದಿ ಲಭ್ಯೇತ್ ಚಕ್ರೈರ್ದ್ವಾದಶಿಭಿಃ ಸಹ ॥ ೫೬ ॥
ದ್ವಾದಶಾತ್ಮಾ ಸ ವಿಜ್ಞೇಯೋ ಮೋಕ್ಷದಃ ಸರ್ವದೇಹಿನಾಂ ।
ಏಕಚಕ್ರಾಂಕಿತೋ ಯಸ್ತು ದ್ವಾರವತ್ಯಾಂ ಸುಶೋಭನಃ ॥ ೫೭ ॥
ಸುದರ್ಶನಾಭಿಧಾನೋಽಸೌ ಮೋಕ್ಷೈಕಫಲದೋ ಹಿಸಃ ।
ಲಕ್ಷ್ಮೀನಾರಾಯಣೋ ದ್ವಾಭ್ಯಾಂ ಭುಕ್ತಿಮುಕ್ತಿಫಲಪ್ರದಃ ॥ ೫೮ ॥
ತ್ರಿಭಿಸ್ತ್ರಿವಿಕ್ರಮುಶ್ಚೈವ ತ್ರಿವರ್ಗಫಲದಾಯಕಃ ।
ಶ್ರೀಪ್ರದೋ ರಿಪುಹಂತಾ ಚ ಚತುರ್ಭಿಃ ಸಂಯುತಃ ಸ ಹಿ ॥ ೫೯ ॥
ಪಂಚಭಿರ್ವಾಸುದೇವಸ್ತು ಜನ್ಮಮೃತ್ಯುಭಯಾಪಹಃ ।
ಪ್ರದ್ಯುಮ್ನಃ ಷಡ್ಭಿರೇವಾಸೌ ಲಕ್ಷ್ಮೀಂ ಕಾಂತಿಂ ದದಾತಿ ಯಃ ॥ ೬೦ ॥
ಸಪ್ತಭಿರ್ಬಲಭದ್ರಶ್ಚ ಚಕ್ರಗೋಽತ್ರ ಪ್ರಕೀರ್ತಿತಃ ।
ಲಾಂಛಿತಶ್ಚಾಷ್ಟಭಿರ್ಭಕ್ತಿಂ ದದಾತಿ ಪುರುಷೋತ್ತಮಃ ॥ ೬೧ ॥

---

೫೫. ಅಲ್ಲಿ ಚಕ್ರಾಂಕಿತಗಳಾದ ಮುಕ್ತಿಯನ್ನೀಯುವ ಕಲ್ಲುಗಳಿವೆ. ಅವುಗಳನ್ನು ಪೂಜಿಸಿದರೆ ಜಗನ್ನಾಥನಾದ ಕೃಷ್ಣನು ಸನ್ನಿಹಿತನಾಗುವನು.

೫೬–೫೮. ಅಲ್ಲಿ ದ್ವಾದಶ ಚಕ್ರಗಳುಳ್ಳ ಶಿಲೆಯು ಸಿಕ್ಕಿದರೆ ಅದು ಸಕಲ ಪ್ರಾಣಿಗಳಿಗೆ ಮೋಕ್ಷವನ್ನೀಯುವ ದ್ವಾದಶಾತ್ಮ ಎಂದು ತಿಳಿಯಬೇಕು. ಆ ದ್ವಾರವತಿಯಲ್ಲಿ ಏಕಚಕ್ರವುಳ್ಳ ಸುದರ್ಶನವೆಂಬ ಶಿಲೆಯು ಮೋಕ್ಷವನ್ನು ಕೊಡುವುದು. ಎರಡು ಚಕ್ರಗಳುಳ್ಳುದು ಲಕ್ಷ್ಮೀನಾರಾಯಣ ಶಿಲೆಯು. ಅದು ಭುಕ್ತಿ ಮುಕ್ತಿಗಳನ್ನು ನೀಡುವುದು.

೫೯. ಮೂರು ಚಕ್ರವುಳ್ಳುದು ತ್ರಿವಿಕ್ರಮ ಶಿಲೆಯು. ಅದು ಧರ್ಮ, ಅರ್ಥ, ಕಾಮಗಳನ್ನು ಕೊಡುವುದು. ನಾಲ್ಕು ಚಕ್ರಗಳಿಂದ ಕೂಡಿರುವುದು ಸಂಪತ್ತನ್ನು ಕೊಡುವುದೂ, ಶತ್ರುಗಳನ್ನು ನಾಶಗೊಳಿಸುವುದೂ ಆಗಿರುವುದು.

೬೦. ಐದು ಚಕ್ರವುಳ್ಳುದು ಜನ್ಮ ಮೃತ್ಯು ಭಯವನ್ನು ನಿವಾರಿಸುವ ವಾಸುದೇವ ಶಿಲೆಯು. ಆರು ಚಕ್ರವುಳ್ಳುದು ಪ್ರದ್ಯುಮ್ನ ಶಿಲೆಯು. ಅದು ಸಂಪತ್ತನ್ನೂ, ಕಾಂತಿಯನ್ನೂ ಕೊಡುವುದು.

೬೧. ಏಳು ಚಕ್ರವುಳ್ಳುದು ಬಲಭದ್ರ ಶಿಲೆಯು. ಎಂಟು ಚಕ್ರಗಳುಳ್ಳ ಪುರುಷೋತ್ತಮ ಶಿಲೆಯು ಭಕ್ತಿಯನ್ನು ನೀಡುವುದು.

ಸರ್ವಂ ದದ್ಯಾನ್ನವವ್ಯೂಹೋ ದುರ್ಲಭೋ ಯಃ ಸುರೈರಪಿ ।
ದಶಾವರೋ ದಶಭಿಃ ರಾಜ್ಯದೋ ನಾತ್ರ ಸಂಶಯಃ ॥ ೬೨ ॥
ಏಕಾದಶಭಿರೈಶ್ವರ್ಯಂ ಚಕ್ರಗಃ ಸಂಪ್ರಯಚ್ಛತಿ ।
ನಿರ್ವಾಣಂ ದ್ವಾದಶಾತ್ಮಾ ಚ ದ್ವಾದಶಭಿರ್ದದಾತಿ ಚ ॥ ೬೩ ॥
ಅತ ಊರ್ಧ್ವಂ ಮಹಾಭಾಗಾಃ ಸೌಖ್ಯಮೋಕ್ಷಪ್ರದಾಯಕಾಃ ।
ಯತೋಽತ್ರ ತೇ ಚ ಪಾಷಾಣಾಃ ಕೃಷ್ಣಚಕ್ರೇಣ ಚಿತ್ರಿತಾಃ ॥ ೬೪ ॥
ತೇಷಾಂ ಸ್ಪರ್ಶನಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ ।
ಚಕ್ರತೀರ್ಥೇ ನರಃ ಸ್ನಾತ್ವಾ ಕೃಷ್ಣಚಕ್ರೇಣ ಚಿಹ್ನಿತಃ ॥ ೬೫ ॥
ಪೂಜಯಿತ್ವಾ ಚಕ್ರಧರಂ ಹರಿಂ ಧ್ಯಾಯೇತ್ಸನಾತನಂ ।
ನಾಪುತ್ರೋ ನಾಧನೋ ರೋಗೀ ನ ಸ ಸಂಜಾಯತೇ ನರಃ ॥ ೬೬ ॥
ಬ್ರಹ್ಮಹತ್ಯಾದಿಕಂ ಪಾಪಂ ಮನೋವಾಕ್ಕಾಯಕರ್ಮಜಂ ।
ತತ್ಸರ್ವಂ ವಿಲಯಂ ಯಾತಿ ಸಕೃಚ್ಚಕ್ರಾಂಕದರ್ಶನಾತ್ ॥ ೬೭ ॥

---

೬೨. ಒಂಬತ್ತು ಚಕ್ರವುಳ್ಳ ಶಿಲೆಯು ದೇವತೆಗಳಿಗೂ ದುರ್ಲಭವಾದುದ್ದು ಹತ್ತು ಚಕ್ರವುಳ್ಳುದು ದಶಾವತಾರ ಶಿಲೆಯು. ಇದು ನಿಶ್ಚಯವಾಗಿಯೂ ರಾಜ್ಯವನ್ನು ಕೊಡುವುದು.

೬೩. ಹನ್ನೊಂದು ಚಕ್ರವುಳ್ಳುದು ಐಶ್ವರ್ಯವನ್ನು ಕೊಡುವುದು. ಹನ್ನೆರಡು ಚಕ್ರಗಳುಳ್ಳುದು ಮೋಕ್ಷವನ್ನು ನೀಡುವುದು.

೬೪–೬೬. ಹನ್ನೆರಡಕ್ಕಿಂತ ಹೆಚ್ಚು ಚಕ್ರಗಳಿಂದ ಕೂಡಿರುವ ಶಿಲೆಗಳು ಸೌಖ್ಯ ಮೋಕ್ಷಗಳನ್ನು ಕೊಡುವುವು. ಇಲ್ಲಿರುವ ಕಲ್ಲುಗಳು ಕೃಷ್ಣ ಚಕ್ರಗಳಿಂದ ಚಿಹ್ನೆ ಗೊಂಡಿರುವುದರಿಂದ ಅವುಗಳ ಸ್ಪರ್ಶದಿಂದಲೇ ಮನುಷ್ಯನು ಸಕಲ ಪಾಪಮುಕ್ತನಾಗು ವನು. ಮಾನವನು ಚಕ್ರತೀರ್ಥದಲ್ಲಿ ಮಿಂದು ಕೃಷ್ಣ ಚಕ್ರದಿಂದ ಚಿಹ್ನಿತನಾಗಿ ಶ್ರೀಕೃಷ್ಣನನ್ನರ್ಚಿಸಿ ಧ್ಯಾನಿಸಿದರೆ ಅಪುತ್ರನೂ, ನಿರ್ಧನನೂ, ರೋಗಿಯೂ ಆಗುವುದಿಲ್ಲ.

೬೭. ಒಂದುಸಾರಿ ಚಕ್ರದಿಂದ ಚಿಹ್ನೆಗೊಂಡ ಶಿಲೆಯನ್ನು ದರ್ಶನಮಾಡುವುದ ರಿಂದ ಮನಸ್ಸು ವಾಕ್, ಶರೀರ, ಕರ್ಮ ಇವುಗಳಿಂದ ಮಾಡಿದ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗುವುವು.

ಮ್ಲೇಚ್ಛದೇಶೇ ಶುಭೇ ವಾಪಿ ಚಕ್ರಾಂಕೋ ಯದಿ ದೃಶ್ಯತೇ ।
ತತ್ರ ಚೈವ ಹರಿಕ್ಷೇತ್ರಂ ಮುಕ್ತಿದಂ ನಾತ್ರ ಸಂಶಯಃ ॥ ೧೮ ॥
ಮೃತ್ಯುಕಾಲೇಽಪಿ ಸಂಪ್ರಾಪ್ತೇ ಯದಿ ಧ್ಯಾಯೇದ್ಧರಿಂ ನರಃ ।
ಚಕ್ರಾಂಕಂ ಧಾರಯೇದಂಗೇ ಸ ಯಾತಿ ಪರಮಂ ಪದಂ ॥ ೧೯ ॥
ಹೃದಯಸ್ಥೇ ಚ ಚಕ್ರಾಂಕೇ ಪೂತೋ ಭವತಿ ತತ್ಕ್ಷಣಾತ್ ।
ನೋಪಸರ್ಪಂತಿ ತಂ ಭೀತಾ ದೂತಾಃ ಕೃಷ್ಣಾಯುಧಂ ತದಾ ।
ವೈಷ್ಣವಂ ಲೋಕಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೨೦ ॥
ಅಪಿ ಪಾಪಸಮಾಚಾರಃ ಕಿಂ ಪುನರ್ಧಾರ್ಮಿಕಃ ಶುಚಿಃ ।
ಗೋಮತೀಸಂಗಮೇ ಸ್ನಾತ್ವಾ ಚಕ್ರತೀರ್ಥೇ ತಥೈವ ಚ ।
ಮುಚ್ಯತೇ ಪಾತಕೈರ್ಘೋರೈರ್ಮಾನವೋ ನಾತ್ರ ಸಂಶಯಃ ॥ ೨೧ ॥
ರಾಜಸಾಃ ಸತ್ವಮಾಯಾಂತಿ ವಿಷ್ಣುಧರ್ಮಂ ಸನಾತನಂ ।
ಕ್ಷೇತ್ರಸ್ಯ ತಸ್ಯ ಮಾಹಾತ್ಮ್ಯಾತ್ಸತ್ಯಮೇತತ್ಪ್ರಕೀರ್ತಿತಂ ॥ ೨೨ ॥
ತಾಮಸಂ ರಾಜಸಂ ಚಾಪಿ ಯತ್ಕಿಂಚಿದ್ವಿಷ್ಣುಪೂಜನೇ ।
ತಚ್ಚ ಸತ್ವತ್ವಮಾಯಾತಿ ನಿಮ್ನಗಾ ಚ ಯಥಾರ್ಣವೇ ॥ ೨೩ ॥

---

೧೮. ಮಂಗಳಕರವಾದ ಮ್ಲೇಚ್ಛ ದೇಶದಲ್ಲಿಯಾದರೂ ಚಕ್ರಾಂಕವು ಕಂಡರೆ ಹರಿಕ್ಷೇತ್ರವೆನ್ನಿಸಿಕೊಳ್ಳುವ ಅದು ನಿಶ್ಚಯವಾಗಿಯೂ ಮೋಕ್ಷವನ್ನೀಯುವುದು.

೧೯. ಮರಣ ಕಾಲದಲ್ಲಾದರೂ ಮಾನವನು ಹರಿಯನ್ನು ಧ್ಯಾನಿಸುತ್ತ ಅವಯವಗಳಲ್ಲಿ ಚಕ್ರಾಂಕವನ್ನು ಧರಿಸಿದರೆ ಉತ್ತಮ ಸ್ಥಾನವನ್ನು ಪಡೆಯುವನು.

೨೦. ಹೃದಯವು ಚಕ್ರಾಂಕಿತವಾದರೆ ಮನುಷ್ಯನು ಕೂಡಲೆ ಪವಿತ್ರನಾಗುವನು. ಯಮದೂತರು ಭಯದಿಂದ ಚಕ್ರಾಂಕಿತನ ಹತ್ತಿರ ಬರುವುದಿಲ್ಲ. ಅವನು ವಿಷ್ಣುಲೋಕವನ್ನು ಹೊಂದುವನು. ಇದರಲ್ಲಿ ಸಂದೇಹವಿಲ್ಲ.

೨೧. ಪಾಪಿಯೂ ಸಹ ಗೋಮತೀ ಸಂಗಮದಲ್ಲಿಯೂ, ಚಕ್ರತೀರ್ಥದಲ್ಲಿಯೂ ಮಿಂದರೆ ಘೋರ ಪಾಪಗಳಿಂದ ಮುಕ್ತನಾಗುವನು. ಶುದ್ಧನಾದ ಧಾರ್ಮಿಕನ ವಿಷಯದಲ್ಲಿ ಹೇಳತಕ್ಕದ್ದೇನಿದೆ.

೨೨. ರಜೋಗುಣವಿಶಿಷ್ಟರೂ ಆ ಕ್ಷೇತ್ರದ ಮಾಹಾತ್ಮ್ಯದಿಂದ ಸಾತ್ವಿಕವಾದ ಸನಾತನ ವಿಷ್ಣುಧರ್ಮವನ್ನು ಹೊಂದುವರು. ಇದು ನಿಶ್ಚಯ.

೨೩. ರಜಸ್ತಮೋಗುಣಗಳು ವಿಷ್ಣುಪೂಜೆಯಿಂದ ಸಮುದ್ರದಲ್ಲಿ ನದಿಗಳಂತೆ ಸತ್ವಗುಣಗಳಾಗುವುವು.

**ದುರ್ಲಭಾ ದ್ವಾರಕಾ ವಿಪ್ರ ದುರ್ಲಭಂ ಗೋಮತೀಜಲಂ ।**
**ದುರ್ಲಭಂ ಜಾಗರೋ ರಾತ್ರೌ ದುರ್ಲಭಂ ಕೃಷ್ಣದರ್ಶನಂ ॥ ೬೪ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಚಕ್ರತೀರ್ಥಮಾಹಾತ್ಮ್ಯವರ್ಣನಂ ನಾಮ
ಅಷ್ಟಮೋಽಧ್ಯಾಯಃ

---

೬೪. ವಿಪ್ರರೆ! ದಾರಕೆಯೂ, ಗೋಮತೀಜಲವೂ, ರಾತ್ರಿಯಲ್ಲಿ ಜಾಗರಣೆಯೂ, ಕೃಷ್ಣದರ್ಶನವೂ ದುರ್ಲಭವಾದುವು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಚಕ್ರತೀರ್ಥಮಾಹಾತ್ಮ್ಯವರ್ಣನವೆಂಬ
ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ನವಮೋಽಧ್ಯಾಯಃ

## ರುಕ್ಮಿಣೀಹ್ರದಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ತತೋ ಗಚ್ಛೇದ್ದ್ವಿಜಶ್ರೇಷ್ಠಾಃ ಸಪ್ತಕುಂಡಾನ್ಸುವಿಶ್ರುತಾನ್ ।
ಸರ್ವಪಾಪಪ್ರಶಮನಾನ್ಶುದ್ಧಿಬುದ್ಧಿವಿವರ್ಧನಾನ್ ॥ ೧ ॥
ಆರಾಧಿತಃ ಸ ಚ ಯದಾ ಹರಿರಾವಿರ್ಬಭೂವ ಹ ।
ಸಂಸ್ತೂಯಮಾನೋ ಮುನಿಭಿರ್ಲಕ್ಷ್ಮ್ಯಾ ಸಹ ಜಗತ್ಪತಿಃ ॥ ೨ ॥
ಅರ್ಹಣಂ ಚ ತದಾ ಚಕ್ರುರ್ಹರಯೇ ಸುರಗಂಗಯಾ ।
ವಾಮಪಾರ್ಶ್ವೇ ಸ್ಥಿತಾಂ ಪದ್ಮಾಮಭಿಷೇಕ್ತುಂ ಸಮುದ್ಯತಾಂ ॥ ೩ ॥
ಸನಕಾದ್ಯಾ ಬ್ರಹ್ಮಸುತಾ ಸಪ್ತೈತೇ ಮನಸಾ ದ್ವಿಜಾಃ ।
ಪೃಥಕ್ಪೃಥಗ್ಘ್ರದಾನ್ಕೃತ್ವಾ ಸಿಷಿಚುಃ ಸಾಗರೋದ್ಭವಾಂ ॥ ೪ ॥

---

## ಕನ್ನಡದ ಅನುವಾದ

## ರುಕ್ಮಿಣೀಹ್ರದಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ.—ದ್ವಿಜವರ್ಯರೆ! ಬಳಿಕ ಸಕಲ ಪಾಪಗಳನ್ನೂ ನಿವಾರಿಸಿ ಶುದ್ಧಿ ಬುದ್ಧಿಗಳನ್ನು ಹೆಚ್ಚಿಸುವ ಪ್ರಸಿದ್ಧವಾದ ಸಪ್ತಕುಂಡಗಳೆಡೆಗೆ ಹೋಗಬೇಕು.

೨. ಮುನಿಗಳು ಸ್ತುತಿಸಿ ಪೂಜಿಸಲು ಜಗದೊಡೆಯನಾದ ಹರಿಯು ಆವಿರ್ಭವಿಸಿದನು.

೩–೪. ಆಗ ಸನಕಾದಿ ಸಪ್ತರ್ಷಿಗಳು ಸುರಗಂಗೆಯಿಂದ ಹರಿಯನ್ನು ಪೂಜಿಸಿ ಅಭಿಷೇಕಮಾಡಲುದ್ಯುಕ್ತಳಾದ ಎಡಭಾಗದಲ್ಲಿರುವ ಲಕ್ಷ್ಮಿಯನ್ನು ಬೇರೆ ಬೇರೆ ಹ್ರದಗಳನ್ನು ನಿರ್ಮಿಸಿ ಅಭಿಷೇಕಮಾಡಿದರು.

ತತೋ ಲಕ್ಷ್ಮೀಹ್ರದಾಃ ಪ್ರೋಕ್ತಾ ದೇವ್ಯಾ ನಾಮ್ನೈವ ಸಂಜ್ಞಿತಾಃ ।
ಪ್ರಾಪ್ತೇ ತು ದ್ವಾಪರಸ್ಯಾಂತೇ ರುಕ್ಮಿಣೀಸಂಶ್ರಯೇಣ ತು ॥ ೫ ॥
ರುಕ್ಮಿಣೀಹ್ರದಮಿತ್ಯೇವಂ ಕಲೌ ಖ್ಯಾತಿಂ ಗತಾಃ ಪುನಃ ।
ಭೃಗುಣಾ ಸೇವಿತಂ ಯಸ್ಮಾದ್ಭೃಗುತೀರ್ಥಮಿತಿ ಸ್ಮೃತಂ ॥ ೬ ॥
ತಸ್ಮಿನ್ಗತ್ವಾ ಮಹಾಭಾಗಾಃ ಪ್ರಕ್ಷಾಲ್ಯ ಚರಣೌ ಮೃದಾ ।
ಆಚಮ್ಯ ಚ ಕುಶಾನ್ಗೃಹ್ಯ ಪ್ರಾಙ್ಮುಖೋ ನಿಯತಃ ಶುಚಿಃ ॥ ೭ ॥
ಸಂಪೂರ್ಣಂ ಚಾರ್ಘ್ಯಮಾದಾಯ ಫಲಪುಷ್ಪಾಕ್ಷತಾದಿಭಿಃ ।
ರಜತಂ ಚ ಶಿರೇ ಕೃತ್ವಾ ಮಂತ್ರಮೇತದುದೀರಯೇತ್ ॥ ೮ ॥
ಭಕ್ತ್ಯಾ ಚಾರ್ಘ್ಯಂ ಪ್ರದಾಸ್ಯಾಮಿ ಹ್ರದೇ ರುಕ್ಮಿಣಿಸಜ್ಞಿತೇ ।
ಸರ್ವಪಾಪವಿನಾಶಾಯ ರುಕ್ಮಿಣ್ಯಾಃ ಪ್ರೀಣನಾಯ ಚ ॥ ೯ ॥
ಸ್ನಾನಂ ಕುರ್ಯಾತ್ತತೋ ವಿಪ್ರಾಃ ಕೃತ್ವಾ ಶಿರಸಿ ತಾರಕಂ ।
ದೇವಾನ್ಮನುಷ್ಯಾನ್ಸಂತರ್ಪ್ಯ ಪಿತೄನಥ ವಿಶೇಷತಃ ॥ ೧೦ ॥
ಶ್ರಾದ್ಧಂ ತತಃ ಪ್ರಕುರ್ವೀತ ವಿಪ್ರಾನಾಹೂಯ ಭಕ್ತಿತಃ ।
ದಕ್ಷಿಣಾಂ ಚ ತತೋ ದದ್ಯಾದ್ರಜತಂ ರುಕ್ಮಮೇವ ಚ ॥ ೧೧ ॥

---

೫–೬. ಅದರಿಂದ ಆ ಹ್ರದಗಳು ದೇವಿಯ ಹೆಸರಿನಿಂದಲೆ ಲಕ್ಷ್ಮೀಹ್ರದಗಳೆಂದು ವಿಖ್ಯಾತವಾದುವು. ದ್ವಾಪರ ಯುಗದ ಕೊನೆಯಲ್ಲಿ ರುಕ್ಮಿಣಿಯು ಆಶ್ರಯಿಸಿರುವುದರಿಂದ ಕಲಿಯುಗದಲ್ಲಿ ರುಕ್ಮಿಣೀ ಹ್ರದವೆಂದು ಪ್ರಸಿದ್ಧಿಗೊಂಡುವು. ಅನಂತರ ಭೃಗುವು ಸೇವಿಸಿದ್ದರಿಂದ ಭೃಗತೀರ್ಥಗಳೆಂದು ಪ್ರಸಿದ್ಧವಾದುವು.

೭–೮. ಮಹಾತ್ಮರಾದ ಮುನಿಗಳೆ! ಅಲ್ಲಿಗೆ ಹೋಗಿ ಕಾಲುಗಳನ್ನು ಮೃತ್ತಿಕೆಯಿಂದ ತೊಳೆದುಕೊಂಡು ಆಚಮನಗೈದು ದರ್ಭೆಗಳನ್ನು ಹಿಡಿದುಕೊಂಡು ಶುದ್ಧನಾಗಿ ಪೂರ್ವಮುಖನಾಗಿ ನಿಂತು ಫಲ, ಪುಷ್ಪ, ಅಕ್ಷತ ಮೊದಲಾದುವುಗಳಿಂದ ತುಂಬಿರುವ ಅರ್ಘ್ಯವನ್ನು ತೆಗೆದುಕೊಂಡು ಬೆಳ್ಳಿಯನ್ನು ತಲೆಯಲ್ಲಿರಿಸಿಕೊಂಡು ಈ ಮಂತ್ರವನ್ನುಚ್ಚರಿಸಬೇಕು.

೯. "ಈ ರುಕ್ಮಿಣೀಹ್ರದದಲ್ಲಿ ಸಕಲ ಪಾಪ ಪರಿಹಾರಕ್ಕಾಗಿಯೂ, ರುಕ್ಮಿಣಿಯ ಪ್ರೀತಿಗಾಗಿಯೂ ಭಕ್ತಿಯಿಂದ ಅರ್ಘ್ಯವನ್ನೀಯುವೆನು".

೧೦–೧೧. ವಿಪ್ರರೆ! ಬಳಿಕ ರಜತವನ್ನು ತಲೆಯಲ್ಲಿರಿಸಿಕೊಂಡು ಮಿಂದು ದೇವ ಮನುಷ್ಯ, ಪಿತೃಗಳಿಗೆ ವಿಶೇಷವಾಗಿ ತರ್ಪಣಗೈದು ಬ್ರಾಹ್ಮಣರನ್ನು ನಿಮಂತ್ರಿಸಿ ಭಕ್ತಿಯಿಂದ ಶ್ರಾದ್ಧಮಾಡಿ ಬೆಳ್ಳಿ, ಚಿನ್ನಗಳನ್ನು ದಕ್ಷಿಣೆಯಾಗಿ ಕೊಡಬೇಕು.

ವಿಶೇಷತಃ ಪ್ರದೇಯಾನಿ ಫಲಾನಿ ರಸವಂತಿ ಚ ।
ದಂಪತ್ಯೋರ್ಭೋಜನಂ ದದ್ಯಾನ್ಮಿಷ್ಟಾನ್ನೇನ ದ್ವಿಜೋತ್ತಮಃ ॥ ೧೨ ॥
ವಿಪ್ರಪತ್ನ್ಯಸ್ತು ಸಂಪೂಜ್ಯಾಃ ಸ್ತ್ರಿಯಶ್ಚಾನ್ಯಾಃ ಸ್ವಶಕ್ತಿತಃ ।
ಕಂಚುಕೈ ರಕ್ತವಸ್ತ್ರೈಶ್ಚ ರುಕ್ಮಿಣೀ ಪ್ರೀಯತಾಮಿತಿ ॥ ೧೩ ॥
ಏವಂ ಕೃತೇ ದ್ವಿಜಶ್ರೇಷ್ಠಾಃ ಕೃತಕೃತ್ಯೋ ಭವೇನ್ನರಃ ।
ಸರ್ವಾನ್ಕಾಮಾನವಾಪ್ನೋತಿ ವಿಷ್ಣುಲೋಕಂ ಸ ಗಚ್ಛತಿ ॥ ೧೪ ॥
ವಸತೇ ಚ ಸದಾ ಗೇಹೇ ಲಕ್ಷ್ಮೀಸ್ತಸ್ಯ ನ ಸಂಶಯಃ ।
ಆರೋಗ್ಯಂ ಮನಸಸ್ತುಷ್ಟಿರ್ನಚೋದ್ವೇಗಃ ಕದಾಚನ ॥ ೧೫ ॥
ಪಿತ್ರ್ಯಾಣಾಮಕ್ಷಯಾ ತೃಪ್ತಿಃ ಪ್ರಜಾ ಭವತಿ ನಿಶ್ಚಲಾ ।
ಹೀನಸತ್ವೋ ನೈವ ಭವೇದ್ದೀರ್ಘಾಯುಶ್ಚ ಭವೇನ್ನರಃ ॥ ೧೬ ॥
ಆಢ್ಯೋ ಭವತಿ ಸರ್ವತ್ರ ಯಃ ಸ್ನಾತೋ ರುಕ್ಮಿಣೀಹ್ರದೇ ।
ನ ಲಕ್ಷ್ಮ್ಯಾ ಮುಚ್ಯತೇ ವಿಪ್ರಾ ನಾಲಕ್ಷ್ಮ್ಯಾ ಪ್ರಿಯತೇ ನರಃ ॥ ೧೭ ॥
ನ ವೈದಂ ಕಲಹಸ್ತಸ್ಯ ಯಃ ಸ್ನಾತೋ ರುಕ್ಮಿಣೀಹ್ರದೇ ।
ಗಮನಾಗಮನಂ ನ ಸ್ಯಾತ್ಸಂಸಾರಭ್ರಮಣಂ ತಥಾ ॥ ೧೮ ॥

---

೧೨. ವಿಶೇಷವಾಗಿ ಬ್ರಾಹ್ಮಣರಿಗೆ ಫಲಗಳನ್ನಿತ್ತು ದಂಪತಿಗಳಿಗೆ ಮೃಷ್ಟಾನ್ನ ಭೋಜನವನ್ನು ಮಾಡಿಸಬೇಕು..

೧೩. ಬ್ರಾಹ್ಮಣ ಪತ್ನಿಯರನ್ನೂ, ಇತರ ಸ್ತ್ರೀಯರನ್ನೂ ಶಕ್ತ್ಯನುಸಾರ ಕುಪ್ಪಸ' ಕೆಂಪು ಬಟ್ಟೆಗಳಿಂದ ರುಕ್ಮಿಣಿಯು ಪ್ರೀತಳಾಗಲೆಂದು ಪೂಜಿಸಬೇಕು.

೧೪. ವಿಪ್ರೋತ್ತಮರೆ ! ಮಾನವನು ಹೀಗೆ ಮಾಡಿದರೆ ಸಕಲೇಷ್ಟಾರ್ಥಗಳನ್ನೂ ಪಡೆದು ವಿಷ್ಣುಲೋಕಕ್ಕೆ ತೆರಳುವನು.

೧೫. ಅವನ ಮನೆಯಲ್ಲಿ ಯಾವಾಗಲೂ ಲಕ್ಷ್ಮಿಯು ವಾಸಿಸುವಳು. ಆರೋಗ್ಯ, ಸಂತೋಷಗಳುಂಟಾಗುವುವು. ಒಂದು ವೇಳೆಯೂ ವ್ಯಥೆಯಾಗುವುದಿಲ್ಲ.

೧೬. ಪಿತೃಗಳು ಶಾಶ್ವತ ತೃಪ್ತಿಯನ್ನು ಹೊಂದುವರು. ಸ್ಥಿರ ಸಂತತಿಯಾಗುವುದು. ಹೀನ ಬಲನಾಗುವುದಿಲ್ಲ. ದೀರ್ಘಾಯುಷ್ಮಂತನಾಗುವನು.

೧೭. ರುಕ್ಮಿಣಿಹ್ರದದಲ್ಲಿ ಮಿಂದ ಮಾನವನು ಹಣಗಾರನಾಗುವನು. ಸಂಪತ್ತು ಅವನನ್ನು ಬಿಡುವುದಿಲ್ಲ. ಅವನಿಗೆ ಬಡತನವುಂಟಾಗುವುದಿಲ್ಲ.

೧೮. ಅಲ್ಲಿ ಮಿಂದ ಮಾನವನಿಗೆ ದ್ವೇಷ ಜಗಳಗಳುಂಟಾಗುವುದಿಲ್ಲ. ಸಂಸಾರದಲ್ಲಿ ಗಮನಾಗಮನ ರೂಪವಾದ ಭ್ರಮೆಯೂ ಆಗುವುದಿಲ್ಲ.

ದುಃಖಶೋಕೌ ಕುತಸ್ತಸ್ಯ ಯಃ ಸ್ನಾತೋ ರುಕ್ಮಿಣೀಹ್ರದೇ ।
ಸರ್ವಪಾಪವಿನಿರ್ಮುಕ್ತೋ ಮಹಾಭಯವಿವರ್ಜಿತಃ ॥ ೧೯ ॥
ಸರ್ವಾನ್ಕಾಮಾನಿಹ ಪ್ರಾಪ್ಯ ಯಾತಿ ವಿಷ್ಣುಪದಂ ನರಃ ॥ ೨೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ರುಕ್ಮಿಣೀಹ್ರದಮಾಹಾತ್ಮ್ಯವರ್ಣನಂ ನಾಮ
ನವಮೋಽಧ್ಯಾಯಃ

---

೧೯–೨೦. ಅಲ್ಲಿ ಮಿಂದ ಮಾನವನಿಗೆ ದುಃಖವು ಹೇಗುಂಟಾದೀತು ? ಅವನು ಸಮಸ್ತ ಪಾಪಮುಕ್ತನೂ, ಅತ್ಯಂತ ಭೀತಿರಹಿತನ ಆಗಿ ಈ ಲೋಕದಲ್ಲಿ ಸಕಲೇಷ್ಟಾರ್ಥಗಳನ್ನು ಪಡೆದು ಅವಸಾನದಲ್ಲಿ ವೈಕುಂಠಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ರುಕ್ಮಿಣೀಹ್ರದಮಾಹಾತ್ಮ್ಯವರ್ಣನವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದಶಮೋಽಧ್ಯಾಯಃ

### ನೃಗತೀರ್ಥಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ತತೋ ಗಚ್ಛೇದ್ದ್ವಿಜಶ್ರೇಷ್ಠಾಸ್ತೀರ್ಥಂ ಪಾಪಪ್ರಣಾಶನಂ ।
ಕೃಕಲಾಸಮಿತಿ ಖ್ಯಾತಂ ನೃಗತೀರ್ಥಮನುತ್ತಮಂ ॥ ೧ ॥
ನೃಗೋ ಯತ್ರ ಮಹೀಪಾಲಃ ಕೃಕಲಾಸವಪುರ್ಧರಃ ।
ಕೃಷ್ಣೇನ ಸಹ ಸಂಗತ್ಯ ಸಂಪ್ರಾಪ ಪರಮಾಂ ಗತಿಂ ॥ ೨ ॥

ಋಷಯ ಊಚುಃ :—

ನೃಗೋ ನಾಮ ನೃಪಃ ಕೋಽಯಂ ಕಥಂ ಕೃಷ್ಣೇನ ಸಂಗತಃ ।
ಕರ್ಮಣಾ ಕೃಕಲಾಸತ್ವಂ ಕೇನ ತದ್ವದ ವಿಸ್ತರಾತ್ ॥ ೩ ॥

ಪ್ರಹ್ಲಾದ ಉವಾಚ :—

ನೃಗೋ ನಾಮ ನೃಪೋ ವಿಪ್ರಾಃ ಸಾರ್ವಭೌಮೋ ಬಲಾನ್ವಿತಃ ।
ಬುದ್ಧಿಮಾನ್ಧೃತಿಮಾನ್ದಕ್ಷಃ ಶ್ರೀಮಾನ್ಸರ್ವಗುಣಾನ್ವಿತಃ ॥ ೪ ॥

---

### ಕನ್ನಡದ ಅನುವಾದ

### ನೃಗತೀರ್ಥಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ದ್ವಿಜೋತ್ತಮರೆ ! ಬಳಿಕ ಪಾಪವನ್ನು ಪರಿಹರಿಸುವ ಕೃಕಲಾಸವೆಂಬ ನೃಗತೀರ್ಥಕ್ಕೆ ಹೋಗಬೇಕು.

೨. ಅಲ್ಲಿ ನೃಗನೆಂಬ ದೊರೆಯು ತೊಂಡೆಕೇತನ ಶರೀರವನ್ನು ಧರಿಸಿ ಕೃಷ್ಣನೊಡನೆ ಸೇರಿ ಉತ್ತಮ ಗತಿಯನ್ನು ಹೊಂದನು.

೩. ಋಷಿಗಳು ಹೇಳುತ್ತಾರೆ :—ನೃಗನೆಂಬ ದೊರೆ ಯಾರು ? ಇವನು ಕೃಷ್ಣನೊಡನೆ ಹೇಗೆ ಸೇರಿದನು ? ಯಾವ ಕೆಲಸಕ್ಕಾಗಿ ತೊಂಡೆಕೇತನಾದನು ? ಅದನ್ನು ವಿಸ್ತಾರವಾಗಿ ಹೇಳು.

೪–೫ ಪ್ರಹ್ಲಾದನು ಹೇಳುತ್ತಾನೆ:—ವಿಪ್ರರೆ ! ಬಲಿಷ್ಠನೂ, ಬುದ್ಧಿವಂತನೂ, ಧೈರ್ಯವುಳ್ಳವನೂ, ಕುಶಲನೂ, ಸಂಪತ್ತುಳ್ಳವನೂ, ಸಕಲ ಗುಣಗಳಿಂದ ಕೂಡಿರುವವನೂ, ಆನೆ ಕುದುರೆ, ರಥಗಳಿಂದಲೂ, ಬಹುಸುಂದರ ಸ್ತ್ರೀಯರುಗಳಿಂದಲೂ ಸಹಿತನೂ

ಅನೇಕಶತಸಾಹಸ್ರಾ ಭೂಮಿಪಾ ಅಪಿ ತದ್ವಶಾಃ ।
ಹಸ್ತ್ಯಶ್ವರಥಸಂಘೈಶ್ಚ ಪತ್ತಿಭಿರ್ಬಹುಭಿರ್ವೃತಃ ॥ ೫ ॥

ಸೈನ್ಯಂ ಚ ತಸ್ಯ ನೃಪತೇಃ ಕೋಶಂ ಚೈವಾಕ್ಷಯಂ ತಥಾ ।
ಸ ನಿತ್ಯಂ ಗುರುಭಕ್ತಶ್ಚ ದೇವತಾರಾಧನೇ ರತಃ ॥ ೬ ॥

ಮಹಾದಾನಾನಿ ವಿಪ್ರೇಂದ್ರಾ ದದಾತ್ಯನುದಿನಂ ನೃಪಃ ।
ಶಶ್ವತ್ಸ ಗೋಸಹಸ್ರಂ ತು ದದಾತಿ ನೃಪಸತ್ತಮಃ ॥ ೭ ॥

ಪ್ರಕ್ಷಾಲ್ಯ ಚರಣೌ ಭಕ್ತ್ಯಾ ಹ್ಯುಪವಿಶ್ಯಾಸನೇ ಶುಭೇ ।
ಪರಿಧಾಪ್ಯ ಶುಭೇ ಕ್ಷೌಮೇ ಸುಗಂಧೇನೋಪಲಿಪ್ಯ ಚ ॥ ೮ ॥

ಸಂಪೂಜ್ಯ ಪುಷ್ಪಮಾಲಾಭಿರ್ಧೂಪೇನ ಚ ಸುಗಂಧಿನಾ ।
ದದೌ ದಕ್ಷಿಣಯಾ ಸಾರ್ಧಂ ಪ್ರತಿವಿಪ್ರಾಯ ಗಾಂ ತದಾ ।
ತಾಂಬೂಲಸಹಿತಾಂ ಭಕ್ತ್ಯಾ ವಿಷ್ಣುರ್ಮೇ ಪ್ರೀಯತಾಮಿತಿ ॥ ೯ ॥

ಏವಂ ಪ್ರದದತಸ್ತಸ್ಯ ಯಜತಶ್ಚ ತಥಾ ಮಖೈಃ ।
ಯಯೌ ಕಾಲೋ ದ್ವಿಜಶ್ರೇಷ್ಠಾ ಭೋಗಾಂಶ್ಚೈವಾನುಭುಂಜತಃ ॥ ೧೦ ॥

---

ಆಗಿರುವ ನೃಗನೆಂಬ ಓರ್ವ ಚಕ್ರವರ್ತಿಯಿದ್ದನು. ಅವನ ಅಧೀನದಲ್ಲಿ ಅನೇಕ ಲಕ್ಷ ಮಂದಿ ದೊರೆಗಳಿದ್ದರು.

೬. ಅವನ ಸೈನ್ಯವೂ, ಬೊಕ್ಕಸವೂ ಅಕ್ಷಯವಾಗಿದ್ದಿತು. ಅವನು ಯಾವಾಗಲೂ ಗುರುವಿನಲ್ಲಿ ಭಕ್ತಿಯುಳ್ಳವನೂ, ದೇವಪೂಜೆಯಲ್ಲಿ ನಿರತನೂ ಆಗಿದ್ದನು.

೭. ಅವನು ಪ್ರತಿದಿನವೂ ಮಹಾದಾನಗಳನ್ನೇ, ಅಲ್ಲದೆ ಸಾವಿರ ಗೋವುಗಳನ್ನೂ ದಾನಮಾಡುತ್ತಿದ್ದನು.

೮–೯. ಅವನು ಪ್ರತಿಯೊಬ್ಬ ಬ್ರಾಹ್ಮಣನಿಗೂ ಕಾಲನ್ನು ತೊಳೆದು, ಶುಭಾಸನದಲ್ಲಿ ಕುಳ್ಳಿರಿಸಿ, ಒಳ್ಳೆ ಬಟ್ಟೆಗಳನ್ನು ಹೊದ್ದಿಸಿ, ಸುಗಂಧವನ್ನು ಹಚ್ಚಿ, ಹೂವಿನಮಾಲೆ, ಸುವಾಸನೆಯ ಧೂಪ ಇವುಗಳಿಂದ ಪೂಜೆಸಿ ತಾಂಬೂಲ ದಕ್ಷಿಣೆಗಳೊಡನೆ ವಿಷ್ಣುವು ನನ್ನಲ್ಲಿ ಪ್ರೀತನಾಗಲೆಂದು ಗೋವನ್ನು ದಾನಮಾಡಿದನು.

೧೦. ದ್ವಿಜೋತ್ತಮರೆ! ಅವನು ಹೀಗೆ ದಾನಮಾಡುತ್ತಲೂ, ಯಜ್ಞಮಾಡುತ್ತಲೂ, ಭೋಗಗಳನ್ನು ಅನುಭವಿಸುತ್ತಲೂ ಕಾಲವನ್ನು ಕಳೆಯುತ್ತಿದ್ದನು.

ಏಕದಾತು ದ್ವಿಜಶ್ರೇಷ್ಠಂ ಜೈಮಿನಿಂ ಸಂಶಿತವ್ರತಂ ।
ಶ್ರದ್ಧಯಾ ತಂ ಚ ನೃಪತಿಃ ಪ್ರತಿಗ್ರಹಪರಾಙ್ಮುಖಂ ।
ಉವಾಚ ವಾಕ್ಯಂ ನೃಪತಿಃ ಕೃತಾಂಜಲಿಪುಟಃ ಸ್ಥಿತಃ ॥ ೧೧ ॥
ಮಾಮುದ್ಧರ ಮಹಾಭಾಗ ಕೃಪಾಂ ಕುರು ತಪೋನಿಧೇ ।
ಗೃಹಾಣ ಗಾಂ ಮಯಾ ದತ್ತಾಂ ದಯಾಂ ಕೃತ್ವಾ ಮಮೋಪರಿ ॥ ೧೨ ॥
ತಚ್ಛ್ರುತ್ವಾ ವಚನಂ ತಸ್ಯ ಅನಿಚ್ಛನ್ನಪಿ ಗೌರವಾತ್ ।
ನೃಪಸ್ಯ ಚಾಬ್ರವೀದ್ವಿಪ್ರ ಏವಮಸ್ತ್ವಿತಿ ಲಜ್ಜಿತಃ ॥ ೧೩ ॥
ಅವನಿಜ್ಯ ತತಃ ಪಾದೌ ಶಿರಸಾಧಾರಯಜ್ಜಲಂ ।
ಸುವರ್ಣಶೃಂಗಸಹಿತಾಂ ರೌಪ್ಯಖುರವಿಭೂಷಿತಾಂ । ೧೪ ॥
ರತ್ನಪುಚ್ಛಾಂ ಕಾಂಸ್ಯದೇಹಾಂ ಸಿತವಸ್ತ್ರಾವಗುಂಠಿತಾಂ ।
ಸಮಭ್ಯರ್ಚ್ಯ ಚ ವಿಪ್ರೇಂದ್ರಂ ದದೌ ದಕ್ಷಿಣಯಾನ್ವಿತಾಂ ॥ ೧೫ ॥
ಆಸೀಮಾಂತಮನುಮನುವ್ರಜ್ಯ ಹೃಷ್ಟೋ ರಾಜಾ ಬಭೂವ ಹ ।
ತರುಣೀಂ ಹಂಸವರ್ಣಾಂ ಚ ಹಂಸೀನಾಮೇತಿ ವಿಶ್ರುತಾಂ ॥ ೧೬ ॥
ಗಾಂ ಗೃಹ್ಯ ಸ್ವಗೃಹಂ ಪ್ರಾಪ್ತೋ ದಾಮ್ನಾ ಬದ್ಧ್ವಾಂ ಸವತ್ಸಕಾಂ ।
ಸ ತಸ್ಯೈ ಯವಸಂ ಚಾರ್ದ್ರಂ ದದೌ ಬ್ರಾಹ್ಮಣಸತ್ತಮಃ ॥ ೧೭ ॥

---

೧೧. ಒಂದಾನೊಂದು ದಿನ ಆ ದೊರೆಯು ಕಠಿನ ನಿಯಮವುಳ್ಳವನೂ, ದಾನವನ್ನು ತೆಗೆದುಕೊಳ್ಳದವನೂ ಆದ ಜೈಮಿನಿ ಮುನಿಯನ್ನು ಕುರಿತು ಶ್ರದ್ಧೆಯಿಂದ ಕೈಮುಗಿದುಕೊಂಡು ಇಂತೆಂದನು.

೧೨. "ಮಹಾತ್ಮನಾದ ತಪಸ್ವಿಯೆ! ನನ್ನಲ್ಲಿ ದಯೆಯಿಟ್ಟು ನಾನು ಕೊಟ್ಟ ಗೋವನ್ನು ತೆಗೆದುಕೊಂಡು ನನ್ನನ್ನು ಉದ್ಧಾರಮಾಡು".

೧೩. ಆ ಮುನಿಯು ನೃಗನ ಮಾತನ್ನು ಕೇಳಿ ಇಷ್ಟವಿಲ್ಲದಿದ್ದರೂ ಅವನಲ್ಲಿ ಗೌರವದಿಂದ ನಾಚಿ ಆಗಲೆಂದನು.

೧೪–೧೫. ದೊರೆಯು ಅವನ ಕಾಲನ್ನು ತೊಳೆದು ನೀರನ್ನು ತಲೆಯಲ್ಲಿ ಧರಿಸಿ ಚಿನ್ನದ ಕೊಂಬುಳ್ಳುದೂ, ಬೆಳ್ಳಿಯ ಗೊರಸುಗಳಿಂದ ಅಲಂಕಾರಗೊಂಡುದೂ, ರತ್ನದ ಬಾಲವುಳ್ಳುದೂ, ಕಂಚಿನ ಕೆಚ್ಚಲುಳ್ಳದೂ, ಬಿಳಿ ವಸ್ತ್ರವನ್ನು ಹೊಂದಿರುವುದೂ ಆದ ಗೋವನ್ನು ಬ್ರಾಹ್ಮಣನನ್ನು ಪೂಜಿಸಿ ದಕ್ಷಿಣೆಯೊಡನೆ ದಾನಮಾಡಿದನು.

೧೬–೧೭. ಅನಂತರ ದೊರೆಯು ಎಲ್ಲೆಯವರೆಗೆ ಆ ಬ್ರಾಹ್ಮಣನನ್ನು ಹಿಂಬಾಲಿಸಿ ಸಂತೋಷಗೊಂಡನು. ಆ ಜೈಮಿನಿಯು ಯೌವನವುಳ್ಳುದೂ, ಹಂಸದಂತೆ ಬಣ್ಣವುಳ್ಳುದೂ, ಹಂಸಿಯೆಂದು ಪ್ರಸಿದ್ಧಿಗೊಂಡುದೂ, ಹಗ್ಗದಿಂದ ಕಟ್ಟಿರುವುದೂ ಆದ ಆ ಹಸುವನ್ನು ಕರುವಿನೊಡನೆ ಮನೆಗೆ ತೆಗೆದುಕೊಂಡು ಹೋಗಿ ಅದಕ್ಕೆ ಹಸಿ ಹುಲ್ಲನ್ನು ಹಾಕಿದನು.

ಸುತೃಪ್ತಾಂ ಯವಸೇನೈವ ಮಧ್ಯಾಹ್ನೇ ತೃಷಿತಾಂ ತದಾ ।
ಗೃಹೀತ್ವಾ ನಿರ್ಯಯೌ ವಿಪ್ರೋ ದಾಮಬದ್ಧಾಂ ಜಲಾಶಯಂ ॥ ೧೮ ॥
ಮಾರ್ಗೇ ಗಜಾಶ್ವಸಂಬಾಧೇ ತ್ರಸ್ತಾ ಸಾ ಉಷ್ಟ್ರದರ್ಶನಾತ್ ।
ಹಸ್ತಾದಾಚ್ಛಿದ್ಯ ಸಾ ಧೇನುರ್ಬ್ರಾಹ್ಮಣಸ್ಯ ಯಯೌ ತದಾ ॥ ೧೯ ॥
ವಿಚಿನ್ವನ್ಸಕಲಾಮುರ್ವೀಂ ನಾಪಶ್ಯತ್ತಾಂ ದ್ವಿಜರ್ಷಭಃ ।
ಸಾ ಯಯೌ ವಿಪ್ರುತಾ ಧೇನುಸ್ತನ್ಮಹಾರಾಜಗೋಧನಂ ॥ ೨೦ ॥
ದ್ವಿತೀಯೇಽಹ್ನಿ ಪುನರ್ವಿಪ್ರಮಾಹೂಯ ನೃಪಸತ್ತಮಃ ।
ಸಂಪೂಜ್ಯ ವಿಧಿವದ್ಭಕ್ತ್ಯಾ ವಸ್ತ್ರಾಲಂಕಾರಭೂಷಣೈಃ ॥ ೨೧ ॥
ವಿಧಿವದ್ಗಾಂ ದದೌ ತಾಂ ಚ ಸ ನೃಪಃ ಸೋಮಶರ್ಮಣೇ ।
ಗೃಹೀತ್ವಾ ರಾಜಭವನಾನ್ನಿರ್ಯಯೌ ಗಾಂ ದ್ವಿಜರ್ಷಭಃ ॥ ೨೨ ॥
ಆಶಂಸಮಾನೋ ರಾಜಾನಂ ಧರ್ಮಜ್ಞಮಿತಿ ಕೋವಿದಂ ।
ಸ ಚ ವಿಪ್ರೋ ವಿಚಿನ್ವಾನಃ ಸರ್ವತೋ ಗಾಂ ಸುದುಃಖಿತಃ ॥ ೨೩ ॥
ದದರ್ಶ ಪಥಿ ಗಚ್ಛಂತೀಂ ಪೃಷ್ಠತಃ ಸೋಮಶರ್ಮಣಃ ।
ದೃಷ್ಟ್ವಾ ತಾಂ ಗಾಂ ಚ ಸ ಮುನಿರ್ಜೈಮಿನಿಸ್ತಮಭಾಷತ ॥ ೨೪ ॥

---

೧೮. ಆದರಿಂದಲೇ ತೃಪ್ತಿಗೊಂಡು ಮಧ್ಯಾಹ್ನದಲ್ಲಿ ಬಾಯಾರಿಕೆಗೊಂಡ ಆ ಹಸುವಿಗೆ ಆ ಜೈಮಿನಿಯು ಹಗ್ಗವನ್ನು ಕಟ್ಟಿಕೊಂಡು ಕೆರೆಗೆ ತೆಗೆದುಕೊಂಡು ಹೋಗಲು ಹೊರಟನು.

೧೯. ಆ ಹಸುವು ಆನೆ ಕುದುರೆ ಮೊದಲಾದುವುಗಳಿಂದ ಇಕ್ಕಟ್ಟಾದ ದಾರಿಯಲ್ಲಿ ಒಂಟೆಯನ್ನು ನೋಡಿ ಭಯಗೊಂಡು ಬ್ರಾಹ್ಮಣನ ಕೈಯಿಂದ ತಪ್ಪಿಸಿಕೊಂಡು ಹೊರಟು ಹೋಯಿತು.

೨೦. ಆ ಬ್ರಾಹ್ಮಣನು ಭೂಮಿಯಲ್ಲೆಲ್ಲ ಹುಡುಕಿ ಅದನ್ನು ನೋಡಲಿಲ್ಲ. ಆ ಆಕಳು ಓಡಿಹೋಗಿ ಆ ನೃಗಮಹಾರಾಜನ ಹಸುಗಳ ಹಿಂಡನ್ನು ಸೇರಿತು.

೨೧–೨೪. ಆ ನೃಗರಾಜನು ಎರಡನೆಯದಿನ ಮರಳಿ ಮತ್ತೊಬ್ಬ ಬ್ರಾಹ್ಮಣನನ್ನು ಕರೆದು ಅವನನ್ನು ವಸ್ತ್ರ, ಅಲಂಕಾರಗಳಿಂದ ವಿಧಿಯಂತೆ ಪೂಜಿಸಿ ಸೋಮಶರ್ಮನೆಂಬ ಅವನಿಗೆ ಆ ಗೋವನ್ನು ದಾನಮಾಡಲು ಅವನು ಅದನ್ನು ತೆಗೆದುಕೊಂಡು ಧರ್ಮಜ್ಞನಾದ ದೊರೆಯನ್ನು ಹೊಗಳುತ್ತ ಅರಮನೆಯಿಂದ ಹೊರಟನು. ಆ ಜೈಮಿನಿಯು ಎಲ್ಲೆಡೆಯಲ್ಲಿಯೂ ಆಕಳನ್ನು ಹುಡುಕುತ್ತ ಅತ್ಯಂತ ದುಃಖಗೊಂಡು ದಾರಿಯಲ್ಲಿ ಸೋಮಶರ್ಮನ ಹಿಂದೆ ಹೋಗುತ್ತಿರುವ ಆ ತನ್ನ ಆಕಳನ್ನು ನೋಡಿ ಅವನನ್ನು ಹೀಗೆ ಕೇಳಿದನು.

ಮಮ ಗಾಂ ಚಾಪಿ ಹೃತ್ವಾ ತ್ವಂ ನಯಸೇ ದಸ್ಯುವತ್ಕಥಂ ।
ಸ ತಸ್ಯ ವಚನಂ ಶ್ರುತ್ವಾ ವಿಸ್ಮಯಂ ದಸ್ಯುಕೀರ್ತನಾತ್ ॥ ೨೫ ॥
ರಾಜತೋ ಹಿ ಮಯಾ ಲಬ್ಧಾಂ ಗಾಂ ನಯಾಮಿ ಸ್ವಮಂದಿರಂ ।
ಗೋಹರ್ತೇತಿ ಚ ಮಾಂ ಕಸ್ಮಾದ್ಬ್ರವೀಷಿ ದ್ವಿಜಸತ್ತಮ ॥ ೨೬ ॥

ಬ್ರಾಹ್ಮಣ ಉವಾಚ :—

ಮಯಾಪಿ ರಾಜತೋ ಲಬ್ಧಾ ಮಮೇಯಂ ಗೌರ್ನ ಸಂಶಯಃ ।
ಕಥಂ ನಯಸಿ ವಿಪ್ರ ತ್ವಂ ಮಯಿ ಜೀವತಿ ಮಂದಿರಂ ॥ ೨೭ ॥
ಸೋಽಬ್ರವೀದದ್ಯ ಮೇ ಲಬ್ಧಾ ಕಥಂ ಮಾಂ ವದಸೇ ಮೃಷಾ ।
ಸೋಽಬ್ರವೀದ್ಯೋ ಮಯಾ ಲಬ್ಧಾ ಬಲಾನ್ನೇತುಂ ತ್ವಮಿಚ್ಛಸಿ ॥ ೨೮ ॥
ಮಮೇಯಮಿತಿ ಸಂಕ್ರುದ್ಧಃ ಸೋಮಶರ್ಮಾಽಬ್ರವೀದ್ವಚಃ ।
ಪ್ರಜ್ವಲತ್ಕ್ರೋಧರಕ್ತಾಕ್ಷೋ ಮಮೇಯಮಿತಿ ಸೋಽಪರಃ ॥ ೨೯ ॥
ವಿವದಂತೌ ತಥಾ ವಿಪ್ರಾ ರಾಜದ್ವಾರಮುಪಾಗತಾ ।
ಕುರ್ವಾಣೌ ಕಲಹಂ ಘೋರಂ ತ್ಯಕ್ತಕಾಮೌ ಸ್ವಜೀವಿತಂ ॥ ೩೦ ॥

---

೨೫—೨೬. "ನನ್ನ ಗೋವನ್ನು ಕಳ್ಳನಂತೆ ಏಕೆ ಅಪಹರಿಸಿ ತೆಗೆದುಕೊಂಡು ಹೋಗುತ್ತಿರುವೆ?" ಸೋಮಶರ್ಮನು ಕಳ್ಳನೆಂಬ ಅವನ ಮಾತನ್ನು ಕೇಳಿ ವಿಸ್ಮಿತನಾಗಿ "ದ್ವಿಜವರ್ಯನೆ! ನಾನು ಈ ಗೋವನ್ನು ರಾಜನಿಂದ ಪಡೆದು ನನ್ನ ಮನೆಗೆ ಒಯ್ಯುತ್ತಿದ್ದೇನೆ. ನೀನು ಹೇಗೆ ನನ್ನನ್ನು ಗೋವಿನ ಕಳ್ಳನೆಂದು ಹೇಳುತ್ತೀಯೆ."

೨೭. "ಬ್ರಾಹ್ಮಣ! ನಿಶ್ಚಯವಾಗಿಯೂ ನಾನು ಈ ಆಕಳನ್ನು ರಾಜನಿಂದ ಪಡೆದಿದ್ದೇನೆ. ನಾನು ಬದುಕಿರುವಾಗ ನೀನು ಇದನ್ನು ಹೇಗೆ ನಿನ್ನ ಮನೆಗೆ ತೆಗೆದುಕೊಂಡು ಹೋಗುವೆ?"

೨೮. ಸೋಮಶರ್ಮನು, "ಈ ದಿನ ನಾನು ಇದನ್ನು ಪಡೆದನು. ನೀನು ಹೇಗೆ ಸುಳ್ಳಾಡುವೆ ? ಎಂದು. ಜೈಮಿನಿಯು, ನಾನು ನಿನ್ನೆ ಇದನ್ನು ಹೊಂದಿದನು. ನೀನು ಹೇಗೆ ಬಲಾತ್ಕಾರದಿಂದ ಒಯ್ಯುತ್ತಿರುವೆ ?" ಎಂದು ಕೇಳಿದನು.

೨೯. ಸೋಮಶರ್ಮನು ಕೋಪದಿಂದ ಇದು ನನ್ನದೆಂದನು. ಜೈಮಿನಿಯೂ ಸಿಟ್ಟಿನಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ನನ್ನದೆಂದನು.

೩೦. ಆ ಇಬ್ಬರು ಬ್ರಾಹ್ಮಣರೂ ಹಾಗೆ ಭಯಂಕರವಾಗಿ ಜಗಳವಾಡುತ್ತ ತಮ್ಮ ಜೀವವನ್ನು ಬಿಡಲಿಚ್ಛೆಯುಳ್ಳವರಾಗಿ ರಾಜದ್ವಾರಕ್ಕೆ ಹೋದರು.

ಸಂಕ್ರುದ್ಧೌ ಬ್ರಾಹ್ಮಣೌ ದೃಷ್ಟ್ವಾ ಕಲಹಂತೌ ತೌ ಪರಸ್ಪರಂ ।
ರಾಜ್ಞೇ ನಿವೇದಯಾಮಾಸ ದ್ವಾಃಸ್ಥಂ ಪ್ರಣಯಪೂರ್ವಕಂ ॥ ೩೧ ॥
ಅವಜ್ಞಾಯ ತದಾ ವಿಪ್ರೌ ವಿವದಂತೌ ರುಷಾನ್ವಿತೌ ।
ಕಾಮವ್ಯಾಕುಲಚೇತಸ್ಕೋ ನ ಬಹಿರ್ನಿಸ್ಸೃತೋ ನೃಪಃ ॥ ೩೨ ॥
ಏವಂ ವಿವದಮಾನೌ ತೌ ತ್ರಿರಾತ್ರಂ ಸಮುಪಸ್ಥಿತೌ ।
ಅವಜ್ಞಾತೌ ನೃಪೇಣಾಥ ರಾಜಾನಂ ಪ್ರತಿ ಜು ಕ್ರುಧಾ ॥ ೩೩ ॥
ಊಚತುಃ ಕುಪಿತೌ ವಾಕ್ಯಂ ಸಾಮರ್ಷೌ ನೃಪತಿಂ ಪ್ರತಿ ।
ಅವಮನ್ಯಸೇ ಯಸ್ಮಾತ್ತ್ವಂ ನ ನಿರ್ಗಚ್ಛಸಿ ಮಂದಿರಾತ್ ॥ ೩೪ ॥
ಶಾಸ್ತಾ ಭವಾನ್ಪ್ರಜಾನಾಂ ಹಿ ಸ ನ್ಯಾಯೇನ ನಿಯೋಕ್ಷ್ಯತಿ ।
ಭವಿಷ್ಯತಿ ಭವಾಸ್ತಸ್ಮಾತ್ಕೃಕಲಾಸೋ ನ ಸಂಶಯಃ ॥ ೩೫ ॥
ಏವಂ ಶಪ್ತ್ವಾ ತದಾ ವಿಪ್ರಾವನ್ಯಸ್ಮೈ ಗಾಂ ಪ್ರದಾಯ ತೌ ।
ಕ್ಷುಧಿತೌ ಖೇದಸಂಯುಕ್ತೌ ಸ್ವಗೃಹಂ ಗಂತುಮುದ್ಯತೌ ॥ ೩೬ ॥
ಪ್ರಸ್ಥಿತೌ ತೌ ನೃಗೋ ದ್ವಾರ ಆಗತ್ಯ ಸಮುಪಸ್ಥಿತಃ ।
ದಂಡವತ್ಪ್ರಣಿಪತ್ಯಾಶು ಕೃತಾಂಜಲಿರಭಾಷತ ॥ ೩೭ ॥

---

೩೧. ಬಾಗಿಲು ಕಾಯುವವನು ಹೀಗೆ ಕೋಪದಿಂದ ಪರಸ್ಪರ ಬೈಯ್ದುಕೊಳ್ಳುತ್ತಿರುವ ಆ ಬ್ರಾಹ್ಮಣರ ವಿಷಯವನ್ನು ದೊರೆಗೆ ಪ್ರೀತಿಪೂರ್ವಕವಾಗಿ ತಿಳಿಸಿದನು.

೩೨. ಆಗ ಕಾಮದಿಂದ ವ್ಯಾಕುಲಗೊಂಡ ದೊರೆಯು ಆ ಬ್ರಾಹ್ಮಣರು ಕೋಪದಿಂದ ಜಗಳವಾಡುವುದನ್ನರಿತೂ ಹೊರಗೆ ಬರಲಿಲ್ಲ.

೩೩–೩೫. ಹೀಗೆ ಮೂರುದಿನ ಜಗಳವಾಡುತ್ತಿರುವ ಆ ಇಬ್ಬರು ಬ್ರಾಹ್ಮಣರು ರಾಜನಿಂದ ಅಪಮಾನಿತರಾಗಿ ಅವನ್ನು ಕುರಿತು ಕೋಪದಿಂದ, "ದೊರೆಯಾದ ನೀನು ಹೊರಗೆ ಬಾರದೆ ನಮ್ಮನ್ನು ಅಪಮಾನ ಮಾಡಿದ್ದರಿಂದ ಪ್ರಜೆಗಳನ್ನು ನ್ಯಾಯರೀತಿಯಿಂದ ಕಾಪಾಡುವುದಿಲ್ಲ. ಆದ ಕಾರಣ ನೀನು ತೊಂಡೆಕೇತನಾಗುವೆ" ಎಂದರು.

೩೬–೩೭. ಹೀಗೆ ದೊರೆಯನ್ನು ಶಪಿಸಿ ಆ ಆಕಳನ್ನು ಮತ್ತೊಬ್ಬನಿಗೆ ಕೊಟ್ಟು ಹಸಿವಿನಿಂದಲೂ ವ್ಯಥೆಯಿಂದಲೂ ಸಹಿತರಾಗಿ ತಮ್ಮ ಮನೆಗೆ ಹೊರಡಲುದ್ಯುಕ್ತರಾದ ಆ ದ್ವಿಜರನ್ನು ನೋಡಿ ನೃಗನು ಶೀಘ್ರವಾಗಿ ಬಾಗಿಲಿಗೆ ಬಂದು ಸಾಷ್ಟಾಂಗ ಪ್ರಣಾಮಗೈದು ಕೈಮುಗಿದುಕೊಂಡು ಇಂತೆಂದನು.

ಅಮೋಘವಚನಾ ಯೂಯಂ ತತ್ತಥಾ ನ ತದನ್ಯಥಾ ।
ಮಮೋಪರಿ ಕೃಪಾಂ ಕೃತ್ವಾ ಶಾಪಾಂತ ಉಪದಿಶ್ಯತಾಂ ॥ ೩೮ ॥
ತಸ್ಯ ತದ್ವಚನಂ ಶ್ರುತ್ವಾ ಊಚತುರ್ವಚನಂ ನೃಪಂ ।
ದ್ವಾಪರಸ್ಯ ಯುಗಸ್ಯಾಂತೇ ಭಗವಾನ್ದೇವಕೀಸುತಃ ॥ ೩೯ ॥
ವಸುದೇವಗೃಹೇ ರಾಜನ್ಹರಿರಾವಿರ್ಭವಿಷ್ಯತಿ ।
ತಸ್ಯ ಸಂಸ್ಪರ್ಶನಾದೇವ ಶಾಪಮುಕ್ತಿರ್ಭವಿಷ್ಯತಿ ॥ ೪೦ ॥
ಇತ್ಯುಕ್ತ್ವಾ ತೌ ತದಾ ವಿಪ್ರೌ ಪ್ರಯಾತೌ ಸ್ವನಿವೇಶನಂ ।
ರಾಜಾ ಬಹುವಿಧಾನ್ಭೋಗಾನ್ಭುಕ್ತ್ವಾ ದತ್ವಾ ಚ ಭೂರಿಶಃ ॥ ೪೧ ॥
ಇಷ್ಟ್ವಾ ಚ ವಿವಿಧೈರ್ಯಜ್ಞೈಃ ಕಾಲಧರ್ಮಮುಪೇಯಿವಾನ್ ।
ತತಃ ಸ ಗತವಾನ್ ವಿಪ್ರಾ ಧರ್ಮರಾಜನಿವೇಶನಂ ॥ ೪೨ ॥
ಸತ್ಕೃತ್ಯೋಕ್ತೋ ಯಮೇನಾಥ ಸ್ವಾಗತೇನ ನೃಪೋತ್ತಮಃ ।
ಪ್ರಥಮಂ ಸುಕೃತಂ ರಾಜನ್ನಥವಾ ದುಷ್ಕೃತಂ ತ್ವಯಾ ।
ಭೋಕ್ತವ್ಯಮಿತಿ ಮೇ ಬ್ರೂಹಿ ತತ್ತೇ ಸಂಪಾದ್ಯತೇ ಮಯಾ ॥ ೪೩ ॥

---

೩೮. ದ್ವಿಜರೆ ! ನಿಮ್ಮ ಮಾತು ಸಫಲವಾಗುವುದು. ವ್ಯತ್ಯಾಸವಾಗುವುದಿಲ್ಲ. ನನ್ನಲ್ಲಿ ದಯೆಮಾಡಿ ಶಾಪಾವಸಾನವನ್ನು ತಿಳಿಸಿರಿ.

೩೯–೪೦. ಅವರು ದೊರೆಯ ಮಾತನ್ನು ಕೇಳಿ ಹೀಗೆಂದರು. ದ್ವಾಪರಯುಗದ ಕೊನೆಯಲ್ಲಿ ಹರಿಯು ವಸುದೇವನ ಮನೆಯಲ್ಲಿ ಕೃಷ್ಣನಾಗಿ ಅವತರಿಸುವನು. ಅವನ ಸ್ಪರ್ಶದಿಂದ ನಿನ್ನ ಶಾಪವು ಪರಿಹಾರವಾಗುವುದು.

೪೧–೪೨. ಆ ಬ್ರಾಹ್ಮಣರು ಹೀಗೆಂದು ನುಡಿದು ತಮ್ಮ ಮನೆಗೆ ಹೊರಟು ಹೋದರು. ನೃಗರಾಜನು ಬಹು ಬಗೆಯ ಭೋಗಗಳನ್ನು ಅನುಭವಿಸಿ ಬಹುವಾಗಿ ದಾನಮಾಡಿ ವಿವಿಧ ಯಜ್ಞಗಳನ್ನು ಗೈದು ಮೃತನಾಗಿ ಯಮನ ಮನೆಗೆ ತೆರಳಿದನು.

೪೩. ಆಗ ಯಮನು ಅವನನ್ನು ಸ್ವಾಗತಿಸಿ ಸನ್ಮಾನ ಮಾಡಿ ಇಂತೆಂದನು. "ದೊರೆಯೆ ! ನೀನು ಮೊದಲು ಪುಣ್ಯ ಫಲವನ್ನನುಭವಿಸುವಿಯೊ ? ಅಥವಾ ಪಾಪ ಫಲವನ್ನನುಭವಿಸುವಿಯೊ ? ನನಗೆ ತಿಳಿಸು. ಅದನ್ನು ನಿನಗುಂಟುಮಾಡುವೆನು".

ನೃಗ ಉವಾಚ :—

ಯದ್ಯಸ್ತಿ ದುಷ್ಕೃತಂ ಕಿಂಚಿತ್ರ್ಫಲಂ ಪ್ರತಿಪಾದಯ ।
ಅನುಜ್ಞಾತೋ ಯಮೇನೈವಂ ಕೃಕಲಾಸೋ ಭವೇತಿ ವೈ ।
ತತೋ ವರ್ಷಸಹಸ್ರಾಣಿ ಕೃಕಲಾಸತ್ವಮಾಪ್ತವಾನ್ || ೪೪ ||
ಏಕಸ್ಮಿನ್ದಿವಸೇ ವಿಪ್ರಾಃ ಸರ್ವೇ ಯದುಕುಮಾರಕಾಃ ।
ವನಂ ಜಗ್ಮುರ್ಮೃಗಾನ್ಹಂತುಂ ಸರ್ವೇ ಕೃಷ್ಣಸಮನ್ವಿತಾಃ || ೪೫ ||
ತೃಷಾರ್ದಿತಾಶ್ಚ ಮಧ್ಯಾಹ್ನೇ ವಿಚಿನ್ವಂತೋ ಜಲಂ ಹ್ರದೇ ।
ಸತ್ವಂ ಚ ಸುಮಹತ್ತತ್ರ ಕೃಕಲಾಸಂ ಚ ಸಂಸ್ಥಿತಂ || ೪೬ ||
ಚಕ್ರುರ್ಶ್ಚೋದ್ಧರಣೇ ತಸ್ಯ ಯತ್ನಂ ಯದುಕುಮಾರಕಾಃ ।
ಆಕೃಷ್ಯಮಾಣಃ ಸ ತದಾ ಗುರುತ್ವಾನ್ನ ಚಚಾಲ ಹ || ೪೭ ||
ಯದಾ ಸ ಶೇಕುಸ್ತೇ ಸರ್ವ ಆಚಖ್ಯುಃ ಕೃಷ್ಣರಾಮಯೋಃ ।
ದದರ್ಶ ತಂ ತದಾ ಕೃಷ್ಣೋ ನೃಗಂ ಮತ್ವಾ ಹಸನ್ನಿವ || ೪೮ ||
ಚಿಕ್ಷೇಪ ವಾಮಹಸ್ತೇನ ಲೀಲಯೈವ ಜಗತ್ಪತಿಃ ।
ಸ ಸಂಸ್ಪೃಷ್ಟೋ ಭಗವತಾ ವಿಮುಕ್ತಃ ಶಾಪಬಂಧನಾತ್ || ೪೯ ||
ತ್ಯಕ್ತ್ವಾ ಕಲೇವರಂ ರಾಜಾ ದಿವ್ಯಮಾಲ್ಯಾನುಲೇಪನಃ ।
ಕೃತಾಂಜಲಿರುವಾಚೇದಂ ಭಕ್ತ್ಯಾ ಪರಮಯಾ ಯುತಃ || ೫೦ ||

---

೪೪. ನೃಗನು ಹೇಳುತ್ತಾನೆ :—ಧರ್ಮರಾಜ ! ನಾನು ಮಾಡಿದ ಯಾವುದಾದರೂ ಪಾಪವು ಇದ್ದರೆ ಅದರ ಫಲವನ್ನು ಮೊದಲುಂಟುಮಾಡು. ಹೀಗೆ ಅವನು ಹೇಳಲು ಯಮನು ಕೃಕಲಾಸನಾಗೆಂದನು. ಆಮೇಲೆ ಆ ರಾಜನು ಒಂದು ಸಾವಿರ ವರ್ಷಕಾಲ ಕೃಕಲಾಸನಾದನು.

೪೫. ಬ್ರಾಹ್ಮಣರೆ ! ಒಂದಾನೊಂದು ದಿನ ಯಾದವರು ಕೃಷ್ಣನೊಡನೆ ಬೇಟೆಗಾಗಿ ಕಾಡಿಗೆ ತೆರಳಿದನು.

೪೬–೪೭. ಅವರು ಮಧ್ಯಾಹ್ನದಲ್ಲಿ ಬಾಯಾರಿಕೆಯಿಂದ ನೀರನ್ನು ಹುಡುಕುತ್ತ ಒಂದು ಮಡುವಿನಲ್ಲಿರುವ ದೊಡ್ಡ ತೊಂಡೆಕೇತನನ್ನು ಕಂಡು ಅದನ್ನು ಮೇಲಕ್ಕೆತ್ತುವುದಕ್ಕೆ ಪ್ರಯತ್ನಿಸಿದನು. ಆಗ ಅದು ದೊಡ್ಡದಾದುದರಿಂದ ಎಳೆದರೂ ಚಲಿಸಲಿಲ್ಲ.

೪೮–೫೦. ಆಗ ಅವರೆಲ್ಲ ಅದನ್ನು ಎತ್ತದವರಾಗಲು ಕೃಷ್ಣ ಬಲರಾಮರಿಗೆ ತಿಳಿಸಿದರು. ಕೃಷ್ಣನು ಅದನ್ನು ಕಂಡು ನೃಗನೆಂದರಿತು ನಗುತ್ತ ಎಡಗೈಯಿಂದ ಅನಾಯಾಸವಾಗಿ ಎಸೆದನು. ಆ ತೊಂಡೆಕೇತನು ಕೃಷ್ಣನ ಸ್ಪರ್ಶದಿಂದ ಶಾಪಮುಕ್ತನಾಗಿ ದಿವ್ಯಶರೀರವನ್ನು ತ್ಯಜಿಸಿ ದಿವ್ಯಮಾಲ್ಯಾನುಲೇಪನವುಳ್ಳ ದೊರೆಯಾಗಿ ಅತಿ ಭಕ್ತಿಯಿಂದ ಕೈಮುಗಿದುಕೊಂಡು ಹೀಗೆಂದಿತು.

ನಮಸ್ತೇ ಜಗದಾಧಾರ ಸರ್ವಸ್ಥಿತ್ಯಂತಕಾರಿಣೇ ।
ಸಹಸ್ರಶಿರಸೇ ತುಭ್ಯಂ ಬ್ರಹ್ಮಣೇಽನಂತಶಕ್ತಯೇ ॥ ೫೧ ॥
ಏವಂ ಸಂಸ್ತುವತಃ ಪ್ರಾಹ ಭಗವಾನ್ದೇವಕೀಸುತಃ ।
ದದಾಮಿ ತೇ ವರಂ ತುಷ್ಟೋ ಯತ್ತೇ ಮನಸಿ ವರ್ತತೇ ॥ ೫೨ ॥
ಯಾಹಿ ಪುಣ್ಯಕೃತಾನ್ಲೋಕಾನ್ದರ್ಶನಾತ್ಸ್ಪರ್ಶನಾಚ್ಚ ಮೇ ।
ಏವಮುಕ್ತಃ ಸ ದೇವೇನ ಸಂಪ್ರಹೃಷ್ಟತನೂರುಹಃ ॥ ೫೩ ॥
ಉವಾಚ ಯದಿ ತುಷ್ಟೋಽಸಿ ಯದಿ ದೇಯೋ ವರೋ ಮಮ ।
ಗರ್ತೋಽಯಂ ಮಮ ನಾಮ್ನಾ ತು ಖ್ಯಾತಿಂ ಗಚ್ಛತು ಕೇಶವ ॥ ೫೪ ॥
ಯಃ ಸ್ನಾತ್ವಾ ಪರಯಾ ಭಕ್ತ್ಯಾ ಪಿತ್ನ್ಸಂತರ್ಪಯಿಷ್ಯತಿ ।
ತ್ವತ್ಪ್ರಸಾದೇನ ಗೋವಿಂದ ವಿಷ್ಣುಲೋಕಂ ಸ ಗಚ್ಛತು ॥ ೫೫ ॥
ಏವಮುಕ್ತ್ವಾ ಸ ಭಗವಾನ್ ಪುನರ್ದ್ವಾರವತೀಮಗಾತ್ ॥ ೫೬ ॥
ಸ ಚ ರಾಜಾ ವಿಮಾನೇನ ದಿವ್ಯಮಾಲಾನುಲೇಪನಃ ।
ಜಗಾಮ ಭವನಂ ವಿಷ್ಣೋರ್ವಿಬುಧೈರನುಸಂಸ್ತುತಃ ॥ ೫೭ ॥

ಪ್ರಹ್ಲಾದ ಉವಾಚ :—

ತದಾಪ್ರಭೃತಿ ವಿಪ್ರೇಂದ್ರಾಃ ಸ ಕೂಪೋ ನೃಗಸಂಜ್ಞಯಾ ।
ವರದಾನಾಚ್ಚ ಕೃಷ್ಣಸ್ಯ ಪಾವನಃ ಸರ್ವದೇಹಿನಾಂ ॥ ೫೮ ॥

---

೫೧. "ಜಗತ್ತುಗಳಿಗೆ ಆಧಾರನೂ, ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೂ ಸಹಸ್ರ ಶೀರ್ಷನೂ, ಅನಂತ ಶಕ್ತಿಯುಳ್ಳವನೂ ಆದ ಕೃಷ್ಣ ! ನಿನಗೆ ನಮಸ್ಕಾರವು".

೫೨. ಕೃಷ್ಣನು ಹೀಗೆ ಸ್ತುತಿಸುತ್ತಿರುವ ಅವನನ್ನು ಕುರಿತು ಹೀಗೆಂದನು. "ನಿನ್ನ ಮನಸ್ಸಿಗಿಷ್ಟವಾದ ವರವನ್ನೀಯುವೆನು.

೫೩–೫೪. ನನ್ನ ದರ್ಶನ ಸ್ಪರ್ಶಗಳಿಂದ ನೀನು ಪುಣ್ಯಲೋಕಗಳಿಗೆ ಹೋಗು." ಕೃಷ್ಣನು ಹೀಗೆ ಹೇಳಲು ಆ ನೃಗನು ರೋಮಾಂಡಗೊಂಡವನಾಗಿ ಇಂತೆಂದನು. "ಕೃಷ್ಣ ! ನೀನು ನನಗೆ ಮೆಚ್ಚಿ ವರವನ್ನೀಯುವುದಾದರೆ ಈ ಹ್ರದವು ನನ್ನ ನಾಮದಿಂದ ವಿಖ್ಯಾತವಾಗಲಿ.

೫೫. ಕೃಷ್ಣ ! ಇಲ್ಲಿ ಅತಿ ಭಕ್ತಿಯಿಂದ ಪಿತೃಗಳಿಗೆ ತರ್ಪಣಗೈದವನು ನಿನ್ನ ಅನುಗ್ರಹದಿಂದ ವಿಷ್ಣುಲೋಕಕ್ಕೆ ಹೋಗಲಿ."

೫೬. ಕೃಷ್ಣನು ಹೀಗೆಯೇ ಆಗಲೆಂದು ಹೇಳಿ ದ್ವಾರವತಿಗೆ ಹಿಂದಿರುಗಿದನು.

೫೭. ಆ ನೃಗರಾಜನು ದಿವ್ಯಮಾಲ್ಯಾನು ಲೇಪನಗಳುಳ್ಳವನಾಗಿ ದೇವತೆಗಳಿಂದ ಸ್ತುತಿಸಿಕೊಳ್ಳುತ್ತ ವೈಕುಂಠಲೋಕಕ್ಕೆ ತೆರಳಿದನು.

೫೮. ಬ್ರಾಹ್ಮಣೋತ್ತಮರೆ ! ಅದು ಮೊದಲ್ಗೊಂಡು ಆ ಕೂಪವು ನೃಗನೆಂಬ ಹೆಸರನ್ನು ಪಡೆದು ಕೃಷ್ಣನವರದಿಂದ ಸಕಲಪ್ರಾಣಿಗಳನ್ನೂ ಪವಿತ್ರಗೊಳಿಸುವುದಾಯಿತು.

ತತ್ರ ಗತ್ವಾ ದ್ವಿಜಶ್ರೇಷ್ಠಾ ಹ್ಯರ್ಘ್ಯಂ ದದ್ಯಾದ್ಯಥಾವಿಧಿ ।
ಫಲಪುಷ್ಪಾಕ್ಷತೈರ್ಯುಕ್ತಂ ಚಂದನೇನ ಚ ಭೂಸುರಾಃ ॥ ೫೯ ॥
ನಮಸ್ತೇ ವಿಶ್ವರೂಪಾಯ ವಿಷ್ಣವೇ ಪರಮಾತ್ಮನೇ ।
ಅರ್ಘ್ಯಂ ಗೃಹಾಣ ದೇವೇಶ ಕೂಪೇಸ್ಮಿನ್ನೃಗಸಂಜ್ಞಿತೇ ॥ ೬೦ ॥
ತತಃ ಸ್ನಾಯಾದ್ದ್ವಿಜಶ್ರೇಷ್ಠಾ ಮೃದಮಾಲಿಪ್ಯ ಪಾಣಿನಾ ।
ಸಂತರ್ಪಯೇತ್ಪಿತೄನ್ದೇವಾನ್ಮನುಷ್ಯಾಂಶ್ಚ ಯಥಾಕ್ರಮಾತ್ ॥ ೬೧ ॥
ತತಃ ಶ್ರಾದ್ಧಂ ಪ್ರಕುರ್ವೀತ ಪಿತೄಣಾಂ ಶ್ರದ್ಧಯಾನ್ವಿತಃ ।
ವಿಪ್ರೇಭ್ಯೋ ಭೋಜನಂ ದದ್ಯಾದ್ದಕ್ಷಿಣಾಂ ಚ ಸ್ವಶಕ್ತಿತಃ ॥ ೬೨ ॥
ವಿಶೇಷತಃ ಪ್ರದಾತವ್ಯಾ ಸವತ್ಸಾ ಗೌಃ ಸ್ವಲಂಕೃತಾ ।
ಶಯ್ಯಾಂ ಸೋಪಸ್ಕರಾಂ ದದ್ಯಾದ್ವಿಷ್ಣುರ್ಮೇ ಪ್ರೀಯತಾಮಿತಿ ॥ ೬೩ ॥
ದೀನಾಂಧಕೃಪಣಾನಾಂ ಚ ಸದಾ ತತ್ತೀರವಾಸಿನಾಂ ।
ದದ್ಯಾದ್ದಾನಂ ಸ್ವಶಕ್ತ್ಯಾ ಚ ವಿತ್ತಶಾಠ್ಯವಿವರ್ಜಿತಃ ॥ ೬೪ ॥
ಸ್ನಾನಮಾತ್ರೇಣ ವಿಪ್ರೇಂದ್ರಾ ಲಭೇದ್ಗೋದಾನಜಂ ಫಲಂ ।
ಪಿತೄಣಾಂ ಶ್ರಾದ್ಧದಾನೇನ ತಿರ್ಯಗ್ಯೋನಿಂ ನ ಚ ಗಚ್ಛತಿ ॥ ೬೫ ॥

---

೫೯. ದ್ವಿಜರೆ! ಅಲ್ಲಿಗೆ ಹೋಗಿ ಫಲ, ಪುಷ್ಪ, ಅಕ್ಷತೆ, ಗಂಧದಿಂದ ಕೂಡಿದ ಅರ್ಘ್ಯವನ್ನು ವಿಧಿಯಂತೆ ಈ ಮಂತ್ರದಿಂದ ಕೊಡಬೇಕು.

೬೦. ಪ್ರಪಂಚರೂಪನಾದ ವಿಷ್ಣುವೆ ನಿನಗೆ ನಮಸ್ಕಾರವು. ಸ್ವಾಮಿ! ನೀನು ನೃಗವೆಂಬ ಈ ಕೂಪದಲ್ಲಿ ಅರ್ಘ್ಯವನ್ನು ಸ್ವೀಕರಿಸು.

೬೧. ದ್ವಿಜೋತ್ತಮರೆ! ಬಳಿಕ ಕೈಗೆ ಮೃತ್ತಿಗೆಯನ್ನು ಲೇಪಿಸಿಕೊಂಡು (ಮೃತ್ತಿಕಾಶೌಚಮಾಡಿ) ಮಿಂದು ಕ್ರಮವಾಗಿ ದೇವ, ಪಿತೃ, ಮನುಷ್ಯರಿಗೆ ತರ್ಪಣ ಮಾಡಬೇಕು.

೬೨. ತರುವಾಯ ಶ್ರದ್ಧೆಯಿಂದ ಪಿತೃಗಳಿಗೆ ಶ್ರಾದ್ಧಗೈದು ಬ್ರಾಹ್ಮಣರಿಗೆ ಭೋಜನಮಾಡಿಸಿ ಶಕ್ತ್ಯನುಸಾರ ದಕ್ಷಿಣೆ ಕೊಡಬೇಕು.

೬೩. ವಿಶೇಷವಾಗಿ ಕರುವಿನಿಂದ ಸಹಿತವಾದ ಹಸುವನ್ನು ಅಲಂಕರಿಸಿ ದಾನ ಮಾಡಬೇಕು. ಮತ್ತು ವಿಷ್ಣುವು ನನ್ನ ವಿಷಯದಲ್ಲಿ ಪ್ರೀತನಾಗಲೆಂದು ಸಾಮಗ್ರಿಗಳಿಂದ ಸಹಿತವಾದ ಹಾಸಿಗೆಯನ್ನು ದಾನಮಾಡಬೇಕು.

೬೪. ಯಾವಾಗಲೂ ಆ ತೀರ್ಥದ ದಡದಲ್ಲಿ ವಾಸಿಸುತ್ತಿರುವ ದೀನ, ಕುರುಡ, ಕೃಪಣರಿಗೆ ದ್ರವ್ಯ ಲೋಭವಿಲ್ಲದೆ ತನ್ನ ಶಕ್ತ್ಯನುಸಾರ ದಾನಮಾಡಬೇಕು.

೬೫. ವಿಪ್ರವರ್ಯರೆ! ಮನುಷ್ಯನು ಅಲ್ಲಿ ಸ್ನಾನಮಾತ್ರ ಮಾಡುವುದರಿಂದ ಗೋದಾನದ ಫಲವು ಲಭಿಸುವುದು. ಪಿತೃಗಳಿಗೆ ಶ್ರಾದ್ಧ ಗೈಯುವುದರಿಂದ ತಿರ್ಯಗ್ಜಂತುವಾಗುವುದಿಲ್ಲ.

ಕೃಕಲಾಸೇ ಕೃತಂ ಶ್ರಾದ್ಧಂ ಯೇನೈವ ತರ್ಪಣಂ ತಥಾ ।
ಸ ಗಚ್ಛೇದ್ವಿಷ್ಣುಲೋಕಂ ತು ಪಿತೃಭಿಸ್ಸಹಿತೋ ನರಃ ॥ ೬೬ ॥
ತಥಾ ಮನೋರಥಾವಾಪ್ತಿರ್ಯಾತ್ರಾ ಚ ಸಫಲಾ ಭವೇತ್ ।
ಸರ್ವತೀರ್ಥಫಲಾವಾಪ್ತಿಂ ಲಭತೇ ನಾತ್ರ ಸಂಶಯಃ ॥ ೬೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ಚತುರ್ಥೇಽದ್ವಾರಕಾಮಾಹಾತ್ಮ್ಯೇ ಕೃಕಲಾಸಾಪರನಾಮಕನೃಗತೀರ್ಥಮಾಹಾತ್ಮ್ಯವರ್ಣನಂ ನಾಮ ದಶಮೋಽಧ್ಯಾಯಃ

---

೬೬. ಮನುಷ್ಯನು ಕೃಕಲಾಸ ನೃಗತೀರ್ಥದಲ್ಲಿ ಶ್ರಾದ್ಧಮಾಡಿ ಆದರ ಜಲದಿಂದ ತರ್ಪಣ ಗೈಯುವುದರಿಂದ ಪಿತೃಗಳೊಡನೆ ವಿಷ್ಣುಲೋಕಕ್ಕೆ ತೆರಳುವನು.

೬೭. ಹಾಗೆಯೇ ಇಷ್ಟಾರ್ಥವು ಲಭಿಸುವುದು. ಯಾತ್ರೆಯು ಸಫಲವಾಗುವುದು. ನಿಶ್ಚಯವಾಗಿ ಸಕಲ ತೀರ್ಥಗಳ ಫಲವನ್ನೂ ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ ಕೃಕಲಾಸಾಪರನಾಮಕನೃಗತೀರ್ಥಮಾಹಾತ್ಮ್ಯವರ್ಣನವೆಂಬ ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಏಕಾದಶೋಽಧ್ಯಾಯಃ

## ವಿಷ್ಣುಪದತೀರ್ಥಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ತತೋ ಗಚ್ಛೇದ್ದ್ವಿಜಶ್ರೇಷ್ಠಾಸ್ತೀರ್ಥಂ ವಿಷ್ಣುಪದೋದ್ಭವಂ ।
ಯಸ್ಯ ದರ್ಶನಮಾತ್ರೇಣ ಗಂಗಾಸ್ನಾನಫಲಂ ಲಭೇತ್ ॥ ೧ ॥
ಯಸ್ಯೋತ್ಪತ್ತಿರ್ಮಯಾ ಪೂರ್ವಂ ಕಥಿತಾ ದ್ವಿಜಸತ್ತಮಾಃ ।
ಯಸ್ಯ ಸಂಸ್ಮರಣಾದೇವ ಕೀರ್ತನಾತ್ಪಾಪನಾಶನಂ ॥ ೨ ॥
ಹರಿಣಾ ಯಾ ಸಮಾನೀತಾ ರುಕ್ಮಿಣ್ಯರ್ಥೇ ಮಹಾತ್ಮನಾ ।
ಯಸ್ಯಾ ಗಂಡೂಷಮಾತ್ರೇಣ ಹಯಮೇಧಫಲಂ ಲಭೇತ್ ॥ ೩ ॥
ವಿಷ್ಣೋಃ ಪಾದಪ್ರಸೂತಾ ಯಾ ವೈಷ್ಣವೀತಿ ಚ ವಿಶ್ರುತಾ ।
ತತ್ರ ಗತ್ವಾ ಮಹಾಭಾಗ ಗೃಹೀತ್ವಾಽರ್ಘ್ಯಂ ವಿಧಾನತಃ ॥ ೪ ॥

---

ಕನ್ನಡದ ಅನುವಾದ

## ವಿಷ್ಣುಪದತೀರ್ಥಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :— ಬ್ರಾಹ್ಮಣೋತ್ತಮರೆ! ಬಳಿಕ ವಿಷ್ಣುಪದೋದ್ಭವ ತೀರ್ಥಕ್ಕೆ ಹೋಗಬೇಕು. ಇದನ್ನು ನೋಡುವುದರಿಂದಲೆ ಗಂಗೆಯಲ್ಲಿ ಮಿಂದ ಫಲವು ಲಭಿಸುವುದು.

೨. ದ್ವಿಜವರ್ಯರೆ! ಇದು ಹುಟ್ಟಿದ ಬಗೆಯನ್ನು ನಿಮಗೆ ನಾನು ಹೇಳಿದ್ದೇನೆ. ಇದರ ಸ್ಮರಣೆಯಿಂದಲೂ, ಕೀರ್ತನದಿಂದಲೂ ಪಾಪವು ಪರಿಹಾರವಾಗುವುದು.

೩. ಮಹಾತ್ಮನಾದ ಹರಿಯು ರುಕ್ಮಿಣಿಗಾಗಿ ಈ ತೀರ್ಥವನ್ನು ತಂದಿರುವನು. ಇದರ ಜಲದಿಂದ ಗಂಡೂಷಮಾಡುವುದರಿಂದಲೇ ಅಶ್ವಮೇಧಯಾಗದ ಫಲವು ದೊರೆಯುವುದು.

೪–೬. ಈ ಗಂಗೆಯು ವಿಷ್ಣುವಿನ ಪಾದದಿಂದ ಹುಟ್ಟಿರುವುದರಿಂದ ವೈಷ್ಣವೀ ಎಂದು ವಿಖ್ಯಾತಳಾಗಿರುವಳು. ಪುಣ್ಯಶಾಲಿಯೆ ! ಅಲ್ಲಿಗೆ ಹೋಗಿ ವಿಧಿಯಂತೆ ಅರ್ಘ್ಯವನ್ನು ಹಿಡಿದುಕೊಂಡು, " ವಿಷ್ಣುಪಾದದಿಂದ ಹುಟ್ಟಿದ ಗಂಗೆಯೆ ! ನಿನ್ನನ್ನು ವಂದಿಸುವೆನು. ದೇವಿ ! ಹರಿಘೋಷಣೆ ಈ ಅರ್ಘ್ಯವನ್ನು ಸ್ವೀಕರಿಸು. " ಎಂದುಚ್ಚರಿಸಿ ಅರ್ಘ್ಯ

ನಮಸ್ಯೇ ತ್ವಾಂ ಭಗವತಿ ವಿಷ್ಣುಪಾದತಲೋದ್ಭವೇ ।
ಗೃಹಾಣಾರ್ಘ್ಯಮಿದಂ ದೇವಿ ಗಂಗೇ ತ್ವಂ ಹರಿಣಾ ಸಹ ॥ ೫ ॥
ಇತ್ಯುಚ್ಚಾರ್ಯ ದ್ವಿಜಶ್ರೇಷ್ಠಾ ಮೃದಮಾಲಭ್ಯ ಪಾಣಿನಾ ।
ಪ್ರಾಙ್ಮುಖಃ ಸಂಯತೋ ಭೂತ್ವಾ ಸ್ನಾನಂ ಕುರ್ಯಾದತಂದ್ರಿತಃ ॥ ೬ ॥
ದೇವಾನ್ಪಿತೄನ್ಮನುಷ್ಯಾಂಶ್ಚ ತರ್ಪಯೇತ್ತಿಲಾಕ್ಷತೈಃ ।
ಉಪಹೃತ್ಯೋಪಹಾರಾಂಶ್ಚ ಹ್ಯಾಹೂಯ ಬ್ರಾಹ್ಮಣಾಂಸ್ತತಃ ॥ ೭ ॥
ಶ್ರದ್ಧಯಾ ಪರಯಾ ಯುಕ್ತಃ ಶ್ರಾದ್ಧಂ ಕುರ್ಯಾದ್ದ್ವಿಜಕ್ಷಣಃ ।
ಯಥೋಕ್ತಾಂ ದಕ್ಷಿಣಾಂ ದದ್ಯಾತ್ಸುವರ್ಣಂ ರಜತಂ ತಥಾ ॥ ೮ ॥
ದೀನಾಂಧಕೃಪಣಾನಾಂ ಚ ದಾನಂ ದೇಯಂ ಸ್ವಶಕ್ತಿತಃ ।
ವಿಶೇಷತಃ ಪ್ರದಾತವ್ಯಂ ಸುವರ್ಣಂ ದ್ವಿಜಸತ್ತಮಾಃ ॥ ೯ ॥
ಉಪಾನಹೌ ತತೋ ದೇಯೌ ಜಲಕುಂಭಂ ದ್ವಿಜಾತಯೇ ।
ದಧ್ಯೋದನಂ ಸಲವಣಂ ಶಾಕಜೀರಕಸಂಯುತಂ ॥ ೧೦ ॥
ರಕ್ತವಸ್ತ್ರೈಃ ಕಂಚುಕೀಭೀ ರುಕ್ಮಿಣೀಂ ಪರಿಧಾಪಯೇತ್ ।
ವಿಪ್ರಪತ್ನೀಂಶ್ಚ ವಿಪ್ರಾಂಶ್ಚ ವಿಷ್ಣುರ್ಮೇ ಪ್ರೀಯತಾಮಿತಿ ॥ ೧೧ ॥
ಏವಂ ಕೃತೇ ದ್ವಿಜಶ್ರೇಷ್ಠಾಃ ಕೃತಕೃತ್ಯೋ ಭವೇನ್ನರಃ ।
ಪಿತೄಣಾಮಕ್ಷಯಾ ತೃಪ್ತಿರ್ಗಯಾಶ್ರಾದ್ಧೇನ ವೈ ಯಥಾ ॥ ೧೨ ॥

---

ವನ್ನಿತ್ತು ಮೃತ್ತಿಕೆಯನ್ನು ತೆಗೆದುಕೊಂಡು ಪೂರ್ವಾಭಿಮುಖನಾಗಿ ಆಲಸ್ಯವಿಲ್ಲದೆ ಸ್ನಾನವನ್ನು ಮಾಡಬೇಕು.

೭-೮. ದೇವ, ಪಿತೃ, ಮನುಷ್ಯರಿಗೆ ಎಳ್ಳು, ಅಕ್ಷತೆಗಳಿಂದ ತರ್ಪಣ ಗೈದು ಬಲಿಯನ್ನಿತ್ತು ಬ್ರಾಹ್ಮಣರನ್ನು ನಿಮಂತ್ರಿಸಿ ಅತಿ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡಿ ವಿಧಿಯಂತೆ ಚಿನ್ನ, ಹಾಗೂ ಬೆಳ್ಳಿಯನ್ನು ದಕ್ಷಿಣೆಯಾಗಿ ಕೊಡಬೇಕು.

೯. ದ್ವಿಜವರ್ಯರೆ! ಶಕ್ತ್ಯನುಸಾರ ದೀನ, ಕುರುಡ, ಕೃಪಣರಿಗೆ ದಾನವನ್ನು ಕೊಟ್ಟು ವಿಶೇಷವಾಗಿ ಸುವರ್ಣ ದಾನ ಗೈಯಬೇಕು.

೧೦-೧೧. ಬಳಿಕ ಪಾದರಕ್ಷೆ, ಜಲದಿಂದ ತುಂಬಿದ ಕಲಶಗಳನ್ನೂ, ಉಪ್ಪು, ತರಕಾರಿ, ಜೀರಿಗೆಗಳಿಂದ ಸೇರಿದ್ದ ದಧ್ಯನ್ನವನ್ನೂ ಬ್ರಾಹ್ಮಣರಿಗೆ ದಾನಮಾಡಿ ಕೆಂಪು ವಸ್ತ್ರಗಳನ್ನೂ, ಕುಪ್ಪಸಗಳನ್ನೂ ರುಕ್ಮಿಣಿಗೆ ಹೊದ್ದಿಸಿ ಅವುಗಳನ್ನು ಬ್ರಾಹ್ಮಣರಿಗೂ, ಅವರ ಪತ್ನಿಯರಿಗೂ ವಿಷ್ಣುವು ಪ್ರೀತನಾಗಲೆಂದು ದಾನಮಾಡಬೇಕು.

೧೨. ದ್ವಿಜೋತ್ತಮರೆ! ಮನುಷ್ಯನು ಹೀಗೆ ಮಾಡಿದರೆ ಧನ್ಯನಾಗುವನು. ಪಿತೃಗಳಿಗೆ ಗಯಾಶ್ರಾದ್ಧದಂತೆ ಅಕ್ಷಯ ತೃಪ್ತಿಯುಂಟಾಗುವುದು.

ವೈಷ್ಣವಂ ಲೋಕಮಾಯಾಂತಿ ಪಿತರಸ್ತ್ರಿಕುಲೋದ್ಭವಾಃ ।
ಜೀವತೇ ಸ ಶ್ರಿಯಾ ಯುಕ್ತಃ ಪುತ್ರಪೌತ್ರಸಮನ್ವಿತಃ ॥ ೧೩ ॥
ಪ್ರೀತಃ ಸದಾ ಭವೇತ್ತಸ್ಯ ರುಕ್ಮಿಣ್ಯಾ ಸಹ ಕೇಶವಃ ।
ಯಚ್ಛತೇ ವಾಂಛಿತಾನ್ಸರ್ವಾನೈಹಿಕಾಮುಷ್ಮಿಕಾನ್ಪ್ರಭುಃ ॥ ೧೪ ॥
ಏತನ್ಮಾಹಾತ್ಮ್ಯಮತುಲಂ ವಿಷ್ಣುಪಾದೋದ್ಭವಂ ತಥಾ ।
ಯಃ ಶೃಣೋತಿ ನರೋ ಭಕ್ತ್ಯಾ ಸರ್ವಪಾಪೈಃ ಸ ಮುಚ್ಯತೇ ॥ ೧೫ ॥
ಶ್ರುತ್ವಾಽಧ್ಯಾಯಮಿಮಂ ಪುಣ್ಯಂ ಸರ್ವಪಾಪೈಃ ಪ್ರಮುಚ್ಯತೇ ॥ ೧೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ವಿಷ್ಣುಪದತೀರ್ಥಮಾಹಾತ್ಮ್ಯವರ್ಣನಂ ನಾಮ
ಏಕಾದಶೋಽಧ್ಯಾಯಃ

---

೧೩. ಅವನ ಮೂರು ಕುಲಗಳ ಪಿತೃಗಳು ವಿಷ್ಣುಲೋಕಕ್ಕೆ ತೆರಳುವರು. ಅವನು ಸಂಪತ್ತಿನಿಂದಲೂ, ಪುತ್ರ, ಪೌತ್ರರಿಂದಲೂ ಕೂಡಿ ಬಾಳುವನು.

೧೪. ಕೃಷ್ಣನು ರುಕ್ಮಿಣಿಯೊಡನೆ ತೃಪ್ತನಾಗಿ ಅವನಿಗೆ ಸಮಸ್ತವಾದ ಐಹಿಕಾಮುಷ್ಮಿಕೇಷ್ಟಾರ್ಥಗಳನ್ನು ಕೊಡುವನು.

೧೫. ಹರಿಯಲ್ಲಿ ಭಕ್ತಿಯನ್ನಿಟ್ಟು ಈ ವಿಷ್ಣುಪಾದೋದ್ಭವ ತೀರ್ಥದ ಮಾಹಾತ್ಮ್ಯವನ್ನು ಕೇಳುವವನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

೧೬. ಹಾಗೆಯೇ ಪುಣ್ಯಕರವಾದ ಈ ಅಧ್ಯಾಯವನ್ನು ಕೇಳುವವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ವಿಷ್ಣುಪದತೀರ್ಥಮಾಹಾತ್ಮ್ಯವರ್ಣನವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಾದಶೋಽಧ್ಯಾಯಃ

### ಮಯನಿರ್ಮಿತಸರೋಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ತತೋ ಗಚ್ಛೇದ್ದ್ವಿಜಶ್ರೇಷ್ಠಾ ಗೋಪ್ರಚಾರಮತಃ ಪರಂ ।
ಯತ್ರ ಸ್ನಾತ್ವಾ ನರೋ ಭಕ್ತ್ಯಾ ಲಭೇದ್ಗೋದಾನಜಂ ಫಲಂ ॥ ೧ ॥
ಯತ್ರ ಸ್ನಾತೋ ಜಗನ್ನಾಥೋ ನಭಸ್ಯೇ ದೈವತೈರ್ವೃತಃ ।
ಕಟದಾನಂ ಚ ತತ್ಪ್ರೋಕ್ತಂ ದ್ವಾದಶ್ಯಾಂ ದ್ವಿಜಸತ್ತಮಾಃ ॥ ೨ ॥

ಋಷಯ ಊಚುಃ :—

ಕಥಂ ತು ತತ್ರ ದೈತ್ಯೇಂದ್ರಾಽಭವದ್ವೈ ಗೋಪ್ರಚಾರಕಂ ।
ತೀರ್ಥಂ ಕಥಯ ತತ್ತ್ವೇನ ಯತ್ರ ಸ್ನಾತೋ ಜನಾರ್ದನಃ ॥ ೩ ॥

ಪ್ರಹ್ಲಾದ ಉವಾಚ :—

ಹತೇ ಕಂಸೇ ಭೋಜರಾಜೇ ಕೃಷ್ಣೇನಾಮಿತತೇಜಸಾ ।
ಉಗ್ರಸೇನೇ ಚಾಭಿಷಿಕ್ತೇ ಮಧುಪುರ್ಯಾಂ ಮಹಾತ್ಮನಾ ॥ ೪ ॥

---

ಕನ್ನಡದ ಅನುವಾದ

### ಮಯನಿರ್ಮಿತಸರೋಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ದ್ವಿಜೋತ್ತಮರೆ ! ಬಳಿಕ ಗೋಪ್ರಚಾರ ತೀರ್ಥಕ್ಕೆ ಹೋಗಬೇಕು. ಅಲ್ಲಿ ಭಕ್ತಿಯಿಂದ ಮಿಂದ ಮಾನವನು ಗೋದಾನದ ಫಲವನ್ನು ಪಡೆಯುವನು.

೨. ಅಲ್ಲಿ ಜಗದೊಡೆಯನಾದ ಶ್ರೀ ಕೃಷ್ಣನು ಭಾದ್ರಪದ ಮಾಸದಲ್ಲಿ ದೇವತೆಗಳೊಡನೆ ಮಿಂದಿರುವನು. ಅಲ್ಲಿ ದ್ವಾದಶೀ ದಿನ ಚಾಪೆಯನ್ನು ದಾನಮಾಡಬೇಕು.

೩. ಋಷಿಗಳು ಹೇಳುತ್ತಾರೆ :—ದೈತ್ಯರಾಜ! ಕೃಷ್ಣನು ಮಿಂದಿರುವ ಆ ಗೋಪ್ರಚಾರ ತೀರ್ಥವು ಹೇಗಾಯಿತು ? ನಿಜವಾಗಿ ಹೇಳು.

೪-೫. ಪ್ರಹ್ಲಾದನು ಹೇಳುತ್ತಾನೆ :—ಅಪರಿಮಿತ ತೇಜಸ್ಸುಳ್ಳ ಕೃಷ್ಣನು ಭೋಜರಾಜನಾದ ಕಂಸನನ್ನು ಕೊಂದು ಮಧುಪುರಿಯಲ್ಲಿ ಉಗ್ರಸೇನನನ್ನು ಪಟ್ಟಾಭಿ

ಉದ್ಧವಂ ಪ್ರೇಷಯಾಮಾಸ ಗೋಕುಲೇ ಗೋಕುಲಪ್ರಿಯಃ ।
ಸುಹೃದಾಂ ಪ್ರಿಯಕಾಮಾರ್ಥಂ ಗೋಪಗೋಪೀಜನಸ್ಯ ಚ ॥ ೫ ॥
ನಮಸ್ಕೃತ್ಯ ಚ ಗೋವಿಂದಂ ಪ್ರಯಯೌ ನಂದಗೋಕುಲಂ ।
ಸ ತತ್ಸದೃಶವೇಷೇಣ ವಸ್ತ್ರಾಲಂಕಾರಭೂಷಣೈಃ ॥ ೬ ॥
ತಂ ದೃಷ್ಟ್ವಾ ದಿವಸಸ್ಯಾಂತೇ ಗೋವಿಂದಾನುಚರಂ ಪ್ರಿಯಂ ।
ಉದ್ಧವಂ ಪೂಜಯಾಮಾಸ ವಸ್ತ್ರಾಲಂಕಾರಭೂಷಣೈಃ ॥ ೭ ॥
ತಂ ಭುಕ್ತವಂತಂ ವಿಶ್ರಾಂತಂ ಯಶೋದಾ ಪುತ್ರವತ್ಸಲಾ ।
ಆನಂದಬಾಷ್ಪಪೂರ್ಣಾಕ್ಷೀ ಪಪ್ರಚ್ಛಾನಾಮಯಂ ಹರೇಃ ॥ ೮ ॥
ಕಚ್ಚಿದ್ಧಿ ನಃ ಸುಖಂ ಪುತ್ರೌ ರಾಮಕೃಷ್ಣೌ ಯದೂತ್ತಮೌ ।
ಕಚ್ಚಿತ್ಸ್ಮರತಿ ಗೋವಿಂದೋ ವಯಸ್ಯಾನ್ಗೋಪಬಾಲಕಾನ್ ॥ ೯ ॥
ಕಚ್ಚಿದೇಷ್ಯತಿ ಗೋವಿಂದೋ ಗೋಕುಲಂ ಮಥುರೇಶ್ವರಃ ।
ತಾರಯಿಷ್ಯತಿ ಪುತ್ರೋಽಸೌ ಗೋಕುಲಂ ವೃಜಿನಾರ್ಣವಾತ್ ॥ ೧೦ ॥
ಇತ್ಯುಕ್ತ್ವಾ ಬಾಷ್ಪಪೂರ್ಣಾಕ್ಷೌ ಯಶೋದಾ ನಂದ ಏವ ಚ ।
ದೀರ್ಘಂ ರುರುದತುರ್ದೀನೌ ಪುತ್ರಸ್ನೇಹವಶಂ ಗತೌ ॥ ೧೧ ॥

---

ಷೇಕ ಮಾಡಿ ಗೋಕುಲಕ್ಕೆ ಮಿತ್ರರಿಗೂ, ಗೋಪ ಗೋಪಿಯರಿಗೂ ಹಿತವನ್ನುಂಟು ಮಾಡಲು ಉದ್ಧವನನ್ನು ಕಳುಹಿಸಿದನು.

೬. ಆ ಉದ್ಧವನು ಕೃಷ್ಣನನ್ನು ವಂದಿಸಿ ಕೃಷ್ಣನಂತೆ ವಸ್ತ್ರಾಲಂಕಾರಗಳಿಂದ ಅಲಂಕೃತನಾಗಿ ನಂದಗೋಕುಲಕ್ಕೆ ತೆರಳಿದನು.

೭-೮. ಪುತ್ರ ಪ್ರಿಯಳಾದ ಯಶೋದೆಯು ಸಾಯಂಕಾಲ ಕೃಷ್ಣನ ಸೇವಕನಾದ ಉದ್ಧವನನ್ನು ವಸ್ತ್ರಾಲಂಕಾರಗಳಿಂದ ಪೂಜಿಸಿ ಭೋಜನ ಮಾಡಿ ವಿಶ್ರಾಂತನಾದ ಅವನನ್ನು ಆನಂದಬಾಷ್ಪವನ್ನು ಸುರಿಸುತ್ತ ಕೃಷ್ಣನ ಕ್ಷೇಮ ಸಮಾಚಾರವನ್ನು ಕೇಳಿದಳು.

೯. ನಮ್ಮ ಮಕ್ಕಳಾದ ರಾಮಕೃಷ್ಣರು ಸೌಖ್ಯವಾಗಿದ್ದಾರೆಯೆ? ಕೃಷ್ಣನು ತನ್ನ ಮಿತ್ರರಾದ ಗೋಪಬಾಲಕರನ್ನು ಸ್ಮರಿಸುತ್ತಿರುವನೊ?

೧೦. ಮಥುರೆಯ ದೊರೆಯಾದ ಕೃಷ್ಣನು ಗೋಕುಲಕ್ಕೆ ಬಂದು ನಮ್ಮ ಗೋಕುಲವನ್ನು ಪಾಪ ಸಾಗರದಿಂದ ದಾಟಿಸವನೇ ?

೧೧. ಮಗನಲ್ಲಿರುವ ಪ್ರೀತಿಗೆ ಅಧೀನರಾದ ಯಶೋದಾನಂದ ಗೋಪರು ಹೀಗೆನ್ನುಡಿದು ಕಂಬನಿ ಸುರಿಸುತ್ತ ದೈನ್ಯದಿಂದ ದೀರ್ಘವಾಗಿ ರೋದಿಸಿದರು.

ಉದ್ಧವಸ್ತೌ ತತೋ ದೃಷ್ಟ್ವಾ ಪ್ರಾಣಸಂಶಯಮಾಗತೌ ।
ಮಧುರೈಃ ಕೃಷ್ಣಸಂದೇಶೈಃ ಸ್ನೇಹಯುಕ್ತೈರಜೀವಯತ್ ॥ ೧೨ ॥
ನಮಸ್ಕರೋತಿ ಭವತೀಂ ಭವಂತಂ ಚ ಸಹಾಗ್ರಜಃ ।
ಅನಾಮಯಂ ಪೃಷ್ಟವಾಂಶ್ಚ ತೌ ಚ ಕ್ಷೇಮೇಣ ತಿಷ್ಠತಃ ॥ ೧೩ ॥
ಕ್ಷಿಪ್ರಮೇಷ್ಯತಿ ದಾಶಾರ್ಹೋ ರಾಮೇಣ ಸಹಿತೋ ವಿಭುಃ ।
ಅತ್ರಾಗತ್ಯ ಜಗನ್ನಾಥೋ ವಿಧಾಸ್ಯತಿ ಚ ವೋ ಹಿತಂ ॥ ೧೪ ॥
ಇತ್ಯೇವಂ ಕೃಷ್ಣಸಂದೇಶೈಃ ಸಮಾಶ್ವಾಸ್ಯೋದ್ಧವಸ್ತದಾ ।
ಸುಖಂ ಸುಷ್ವಾಪ ಶಯನೇ ನಂದಾದ್ಯೈರಭಿನಂದಿತಃ ॥ ೧೫ ॥
ಗೋಪ್ಯಸ್ತದಾ ರಥಂ ದೃಷ್ಟ್ವಾ ದ್ವಾರೇ ನಂದಸ್ಯ ವಿಸ್ಮಿತಾಃ ।
ಕೋಽಯಂ ಕೋಽಯಮಿತಿ ಪ್ರಾಹುಃ ಕೃಷ್ಣಾಗಮನಶಂಕಯಾ ॥ ೧೬ ॥
ಗೋಪಾಲರಾಜಸ್ಯ ಗೃಹೇ ರಥೇನಾದಿತ್ಯವರ್ಚಸಾ ।
ಸಮಾಗತೋ ಮಹಾಬಾಹುಃ ಕೃಷ್ಣವೇಷಾನುಗಸ್ತಥಾ ॥ ೧೭ ॥

---

೧೨. ಉದ್ಧವನು ಪ್ರಾಣಸಂಶಯವನ್ನು ಹೊಂದಿರುವ ಆ ಯಶೋದಾನಂದ ಗೋಪರನ್ನು ಸ್ನೇಹದಿಂದ ಕೂಡಿರುವ ಸವಿಯಾದ ಕೃಷ್ಣನ ಸಂದೇಶಗಳಿಂದ ಬದುಕಿಸಿದನು.

೧೩. ಆ ಕೃಷ್ಣನು ಅಣ್ಣನೊಡನೆ ನಿಮ್ಮಿಬ್ಬರನ್ನು ವಂದಿಸಿ ಕ್ಷೇಮಸಮಾಚಾರವನ್ನು ಕೇಳಿರುವನು. ಅವರಿಬ್ಬರೂ ಕ್ಷೇಮವಾಗಿದ್ದಾರೆ.

೧೪. ಆ ಕೃಷ್ಣನು ಬಲರಾಮನೊಡನೆ ಶೀಘ್ರವಾಗಿ ಇಲ್ಲಿಗೆ ಬಂದು ನಿಮಗೆ ಹಿತವನ್ನುಂಟುಮಾಡುವನು.

೧೫. ಉದ್ಧವನು ಇದೇ ಮೊದಲಾದ ಕೃಷ್ಣನ ಸಂದೇಶಗಳಿಂದ ಸಮಾಧಾನಗೊಳಿಸಿ ಆ ನಂದಾದಿಗಳಿಂದ ಅಭಿನಂದಿತನಾಗಿ ಹಾಸಿಗೆಯಲ್ಲಿ ಸುಖವಾಗಿ ಮಲಗಿದನು.

೧೬-೧೭. ಆಗ ಗೋಪಿಯರು ನಂದನ ಮನೆಯ ಬಾಗಿಲಿನಲ್ಲಿ ರಥವನ್ನು ಕಂಡು ಆಶ್ಚರ್ಯದಿಂದ ಕೃಷ್ಣನು ಬಂದಿರುವನೋ ಎಂಬ ಸಂದೇಹದಿಂದ, "ಗೋಪಾಲ ರಾಜನ ಮನೆಗೆ ಸೂರ್ಯನಂತೆ ಪ್ರಕಾಶಿಸುವ ರಥದಿಂದ ಬಂದಿರುವವನೂ ಆಜಾನುಬಾಹುವೂ, ಕೃಷ್ಣನಂತೆ ವೇಷವುಳ್ಳವನೂ ಆದ ಇವನಾರು ? ಇವನಾರು" ? ಎಂದು ಪ್ರಶ್ನಿಸಿದರು

ಪರಸ್ಪರಂ ಸಮಾಗಮ್ಯ ಸರ್ವಾಸ್ತಾ ವ್ರಜಯೋಷಿತಃ ।
ವಿವಿಕ್ತೇ ಕೃಷ್ಣದೂತಂ ತಂ ಪಪ್ರಚ್ಛುಃ ಶೋಕಕರ್ಶಿತಾಃ ॥ ೧೮ ॥
ಗೋಪ್ಯ ಊಚುಃ :—
ಕಸ್ಮಾತ್ತ್ವಮಿಹ ಸಂಪ್ರಾಪ್ತಃ ಕಿಂ ತೇ ಕಾರ್ಯಮಿಹಾದ್ಯ ವೈ ।
ದಸ್ಯುರೂಪಪ್ರತಿಚ್ಛನ್ನೋ ಹ್ಯಸ್ಮಾನ್ಸಂಹರ್ತುಮಿಚ್ಛಸಿ ॥ ೧೯ ॥
ಪೂರ್ವಮೇವ ಹತಂ ತೇನ ಕೃಷ್ಣೇನ ಹೃದಯಾದಿಕಂ ।
ಪಾಯಯಿತ್ವಾಽಧರವಿಷಂ ಯೋಷಿದ್ವ್ರಾತಂ ಪಲಾಯಿತಃ ॥ ೨೦ ॥
ಇತ್ಯೇವಮುಕ್ತ್ವಾ ತಾ ಗೋಪ್ಯೋ ಮುಮುಹುಃ ಶೋಕವಿಹ್ವಲಾಃ ।
ಈಕ್ಷಂತ್ಯಃ ಕೃಷ್ಣದಾಸಂ ತಂ ನಿಪೇತುರ್ಧರಣೀತಲೇ ॥ ೨೧ ॥
ಉದ್ಧವಸ್ತಂ ಜನಂ ದೃಷ್ಟ್ವಾ ಕೃಷ್ಣಸ್ನೇಹಹೃತಾಶಯಂ ।
ಆಶ್ವಾಸಯಾಮಾಸ ತದಾ ವಾಕ್ಯೈಃ ಶ್ರೋತ್ರಸುಖಾವಹೈಃ ॥ ೨೨ ॥
ಉದ್ಧವ ಉವಾಚ :—
ಭಗವಾನಪಿ ದಾಶಾರ್ಹಃ ಕಂದರ್ಪಶರಪೀಡಿತಃ ।
ನ ಭುಂಕ್ತೇ ನ ಸ್ವಪಿತಿ ಚ ಚಿಂತಯನ್ವಸ್ತ್ವಹರ್ನಿಶಂ ॥ ೨೩ ॥

---

೧೮. ಆ ಗೊಲ್ಲತಿಯರೆಲ್ಲ ಬಂದು ರಹಸ್ಯದಲ್ಲಿ ಕೃಷ್ಣದೂತನಾದ ಆ ಉದ್ಧವನನ್ನು ದುಃಖದಿಂದ ಪ್ರಶ್ನಿಸಿದರು.

೧೯. ಗೋಪಿಯರು ಹೇಳುತ್ತಾರೆ :—ನೀನು ಇಲ್ಲಿಗೆ ಏಕೆ ಬಂದಿರುವೆ ? ಇಲ್ಲಿ ನಿನಗೇನು ಕಾರ್ಯವಿದೆ? ಕಳ್ಳನ ರೂಪವನ್ನು ಅಡಗಿಸಿಕೊಂಡು ನಮ್ಮನ್ನು ಕೊಲ್ಲ ಬಯಸುವಿಯಾ ?

೨೦. ಹಿಂದೆಯೇ ಆ ಕೃಷ್ಣನು ತನ್ನ ತುಟಿಯ ವಿಷಯವನ್ನು ನಮಗೆ ಕುಡಿಸಿ ನಮ್ಮ ಮನಸ್ಸನ್ನು ಕೆಡಿಸಿ ನಮ್ಮನ್ನು ಕೊಂದು ಓಡಿಹೋಗಿರುವನು.

೨೧. ಆ ಗೋಪಿಯರು ಹೀಗೆ ಹೇಳಿ ಶೋಕವಿಹ್ವಲರಾಗಿ ಆ ಕೃಷ್ಣಸೇವಕನಾದ ಉದ್ಧವನನ್ನು ನೋಡುತ್ತ ಮೂರ್ಛೆಗೊಂಡು ನೆಲದಮೇಲೆ ಬಿದ್ದರು.

೨೨. ಆಗ ಉದ್ಧವನು ಕೃಷ್ಣನ ಸ್ನೇಹದಿಂದ ಎಳೆಯಲ್ಪಟ್ಟ ಮನಸುಳ್ಳ ಆ ಗೊಲ್ಲತಿಯರನ್ನು ನೋಡಿ ಕಿವಿಗೆ ಸುಖವನ್ನುಂಟುಮಾಡುವ ಮಾತಿನಿಂದ ಸಮಾಧಾನಗೊಳಿಸಿದನು.

೨೩. ಉದ್ಧವನು ಹೇಳುತ್ತಾನೆ :—ಪೂಜ್ಯನಾದ ಶ್ರೀಕೃಷ್ಣನೂ ಮದನಶರಪೀಡಿತನಾಗಿ ಹಗಲು ರಾತ್ರಿ ಏನನ್ನೊ ಚಿಂತಿಸುತ್ತ ಊಟಮಾಡುವುದಿಲ್ಲ. ನಿದ್ರಿಸುವುದಿಲ್ಲ.

ತಚ್ಛ್ರುತ್ವಾ ವಚನಂ ತಸ್ಯ ಲಲಿತಾ ಕ್ರೋಧಮೂರ್ಛಿತಾ ।
ಉದ್ಧವಂ ತಾಮ್ರನಯನಾ ಪ್ರೋವಾಚ ರುದತೀ ತದಾ ॥ ೨೪ ॥

ಲಲಿತೋವಾಚ :—

ಅಸತ್ಯೋ ಭಿನ್ನಮರ್ಯಾದಃ ಕ್ರೂರಃ ಕ್ರೂರಜನಪ್ರಿಯಃ ।
ತ್ವಂ ಮಾ ಕೃಥಾ ನಃ ಪುರತಃ ಕಥಾಂ ತಸ್ಯಾಽಕೃತಾತ್ಮನಃ ॥ ೨೫ ॥
ಧಿಗ್ಧಿಕ್ಪಾಪಸಮಾಚಾರೋ ಧಿಗ್ಧಿಗ್ಜೈತ್ರ ನಿಷ್ಠುರಾಶಯಃ ।
ಹಿತ್ವಾ ಯಃ ಸ್ತ್ರೀಜನಂ ಮೂಢೋ ಗತೋ ದ್ವಾರವತೀಂ ಹರಿಃ ॥ ೨೬ ॥

ಶ್ಯಾಮಲೋವಾಚ :

ಕಿಂ ತಸ್ಯ ಮಂದಭಾಗ್ಯಸ್ಯ ಅಲ್ಪಪುಣ್ಯಸ್ಯ ದುರ್ಮತೇಃ ।
ಮಾ ಕುರುಧ್ವಂ ಕಥಾಃ ಸಾಧ್ವ್ಯಃ ಕಥಾಂ ಕಥಯತಾಽಪರಾಂ ॥ ೨೭ ॥

ಧನ್ಯೋವಾಚ :—

ಕೇನಾಯಂ ಹಿ ಸಮಾನೀತೋ ದೂತೋ ದುಷ್ಟಜನಸ್ಯ ಚ ।
ಯಾತು ತೇನ ಪಥಾ ಪಾಪಃ ಪುನರ್ನಾಯಾತಿ ಯೇನ ಚ ॥ ೨೮ ॥

ವಿಶಾಖೋವಾಚ :

ನ ಶೀಲಂ ನ ಕುಲಂ ಯಸ್ಯ ನಾಸ್ತಿ ಪಾಪಕೃತಂ ಭಯಂ ।
ತಸ್ಯ ಸ್ತ್ರೀಹನನೇ ಸಾಧ್ವ್ಯಃ ಜ್ಞಾಯತೇ ಜನ್ಮ ಕರ್ಮ ಚ ।
ಹೀನಸ್ಯ ಪುರುಷಾರ್ಥೇನ ತೇನ ಸಂಗೋ ನಿರರ್ಥಕಃ ॥ ೨೯ ॥

---

೨೪. ಉದ್ಧವನ ಆ ಮಾತನ್ನು ಕೇಳಿ ಲಲಿತೆಯೆಂಬ ಗೋಪಿಯು ಕುಪಿತಳಾಗಿ ಕಣ್ಣುಗಳನ್ನು ಕೆಂಪನೆ ಮಾಡಿಕೊಂಡು ಅಳುತ್ತ ಇಂತೆಂದಳು.

೨೫. ಲಲಿತೆಯು ಹೇಳುತ್ತಾಳೆ :—ಸುಳ್ಳಾಡುವವನೂ, ಮರ್ಯಾದೆಯಿಲ್ಲದವನೂ, ಕಠಿನನೂ, ಕ್ರೂರಜನರಿಗೆ ಪ್ರಿಯನೂ ಆದ ನೀನು ನಮ್ಮ ಮುಂದೆ ಆ ದುಷ್ಟನ ಸಮಾಚಾರವನ್ನು ಹೇಳಬೇಡ.

೨೬. ಸ್ತ್ರೀಯರನ್ನು ಬಿಟ್ಟು ದ್ವಾರವತಿಗೆ ತೆರಳಿದ ಪಾಪ ನಡತೆಯುಳ್ಳವನೂ, ಕಠಿನ ಮನಸ್ಸುಳ್ಳವನೂ ಆದ ಆ ಮೂಢ ಹರಿಗೆ ನಿಂದೆಯಾಗಲಿ.

೨೭. ಶ್ಯಾಮಲೆಯು ಹೇಳುತ್ತಾಳೆ:—ಪತಿವ್ರತೆಯರೆ! ಅಲ್ಪಾದೃಷ್ಟವುಳ್ಳವನೂ, ಸ್ವಲ್ಪ ಪುಣ್ಯವಂತನೂ, ದುಷ್ಟನೂ ಆದ ಆ ಕೃಷ್ಣನ ಕಥೆಯನ್ನು ಹೇಳಬೇಡಿರಿ. ಬೇರೆ ಮಾತನ್ನಾಡಿರಿ.

೨೮. ಧನ್ಯೆಯು ಹೇಳುತ್ತಾಳೆ :—ಆ ದುಷ್ಟನ ದೂತನಾದ ಇವನನ್ನು ಯಾರು ಕರೆಯಿಸಿದರು ? ಈ ಪಾಪಿಷ್ಠನು ಮರಳಿ ಹಿಂದಿರುಗದ ದಾರಿಯಲ್ಲಿ ತೆರಳಲಿ.

೨೯. ವಿಶಾಖೆಯು ಹೇಳುತ್ತಾಳೆ :—ಪತಿವ್ರತೆಯರೆ ! ಕುಲ, ಶೀಲ, ಮತ್ತು ಪಾಪದ ಭಯ ಯಾವುದನ್ನೂ ಎಣಿಸದೆ ಸ್ತ್ರೀಯರನ್ನು ಕೊಲ್ಲುವ ಆವನ ಜನ್ಮ ಕರ್ಮಗಳು ತಿಳಿದುವು. ಪುರುಷಾರ್ಥಗಳಿಲ್ಲದ ಆವನ ಸಹವಾಸವು ವ್ಯರ್ಥವು.

ರಾಧೋವಾಚ :—
ಭೂತಾನಾಂ ಘಾತನೇ ಯಸ್ಯ ನಾಸ್ತಿ ಪಾಪಕೃತಂ ಭಯಂ ।
ತಸ್ಯ ಸ್ತ್ರೀಹನನೇ ಕಾಪಿ ಸಾಧ್ವ್ಯಃ ಶಂಕಾ ನ ವಿದ್ಯತೇ ॥ ೩೦ ॥
ಶೈಬ್ಯೋವಾಚ :—
ಸತ್ಯಂ ಬ್ರೂಹಿ ಮಹಾಭಾಗ ಕಿಂ ಕರೋತಿ ಯದೂತ್ತಮಃ ।
ಸಂಗತೋ ನಾಗರಸ್ತ್ರೀಭಿರಸ್ಮಾಕಂ ಕಿಂ ಕಥಾಂ ಸ್ಮರೇತ್ ॥ ೩೧ ॥
ಪದ್ಮೋವಾಚ :—
ಕದೋದ್ಧವ ಮಹಾಭಾಗ ನಾಗರೀಜನವಲ್ಲಭಃ ।
ಸಮೇಷ್ಯತೀಹ ದಾಶಾರ್ಹಃ ಪದ್ಮಪತ್ರಾಯತೇಕ್ಷಣಃ ॥ ೩೨ ॥
ಭದ್ರೋವಾಚ :—
ಹಾ ಕೃಷ್ಣ ಹಾ ಗೋಪವರ ಹಾ ಗೋಪೀಜನವಲ್ಲಭ ।
ಸಮುದ್ಧರ ಮಹಾಬಾಹೋ ಗೋಪೀಃ ಸಂಸಾರಸಾಗರಾತ್ ॥ ೩೩ ॥
ಪ್ರಹ್ಲಾದ ಉವಾಚ :—
ಇತಿ ತಾ ವಿವಿಧೈರ್ವಾಕ್ಯೈರ್ವಿಲಪಂತೋ ವ್ರಜಸ್ತ್ರಿಯಃ ।
ರುರುದುಃ ಸುಸ್ವರಂ ದೇವ್ಯಃ ಸ್ಮರಂತ್ಯಃ ಸಂಸಾರಸಾಗರಾತ್ ॥ ೩೪ ॥
ತಾಸಾಂ ತದ್ರುದಿತಂ ಶ್ರುತ್ವಾ ಭಕ್ತಿಸ್ನೇಹಸಮನ್ವಿತಃ ।
ವಿಸ್ಮಯಂ ಪರಮಂ ಗತ್ವಾ ಸಾಧುಸಾಧ್ವಿತಿ ಚಾಬ್ರವೀತ್ ॥ ೩೫ ॥

---

೩೦. ರಾಧೆಯು ಹೇಳುತ್ತಾಳೆ :—ಪ್ರಾಣಿಗಳನ್ನು ಕೊಲ್ಲುವುದರಲ್ಲಿ ಪಾಪ ಭೀತಿಯಿಲ್ಲದ ಆ ಕೃಷ್ಣನಿಗೆ ಸ್ತ್ರೀಹತ್ಯೆಯಲ್ಲಿ ಸ್ವಲ್ಪವೂ ಕಳವಳವಿಲ್ಲ.

೩೧. ಶೈಬ್ಯೆಯು ಹೇಳುತ್ತಾಳೆ :—ಮಹಾತ್ಮನೆ ! ನಿಜವಾಗಿ ಹೇಳು. ಯಾದವ ಶ್ರೇಷ್ಠನಾದ ಶ್ರೀಕೃಷ್ಣನು ಏನನ್ನು ಮಾಡುತ್ತಿರುವನು ? ಪಟ್ಟಣದ ಸ್ತ್ರೀಯರೊಡನೆ ಸೇರಿಕೊಂಡನೊ ? ನಮ್ಮನ್ನೇನಾದರೂ ಸ್ಮರಿಸುವನೇ ?

೩೨. ಪದ್ಮೆಯು ಹೇಳುತ್ತಾಳೆ :—ಉದ್ಧವ ! ಪಟ್ಟಣದ ನಾರಿಯರಿಗೆ ಪ್ರಿಯನಾದ ಆ ಪುಂಡರೀಕಾಕ್ಷನು ಯಾವಾಗ ಇಲ್ಲಿಗೆ ಬರುವನು.

೩೩. ಭದ್ರೆಯು ಹೇಳುತ್ತಾಳೆ:—ಅಯ್ಯೊ ! ಕೃಷ್ಣ ! ಅಯ್ಯೊ! ಗೋಪಶ್ರೇಷ್ಠ ! ಅಯ್ಯೊ ! ಗೋಪಿಯರ ಪ್ರಿಯ ! ನೀನು ಈ ಗೋಪಿಯರಾದ ನಮ್ಮನ್ನು ಸಂಸಾರ ಸಾಗರದಿಂದ ದಾಟಿಸು.

೩೪. ಪ್ರಹ್ಲಾದನು ಹೇಳುತ್ತಾನೆ: — ಹೀಗೆ ಆ ಗೊಲ್ಲತಿಯರು ಬಗೆ ಬಗೆಯ ನುಡಿಗಳಿಂದ ಗೋಳಾಡುತ್ತ ಕೃಷ್ಣನ ಕಾರ್ಯವನ್ನು ಸ್ಮರಿಸುತ್ತ ಮಧುರವಾಗಿ ಅತ್ತರು.

೩೫. ಉದ್ಧವನು ಆ ಗೋಪಿಯರ ರೋದನವನ್ನು ಕೇಳಿ ಭಕ್ತಿ ಸ್ನೇಹಗಳಿಂದ "ಸಹಿತನಾಗಿ ಅತ್ಯಾಶ್ಚರ್ಯಗೊಂಡು ಒಳ್ಳೆಯದು, ಒಳ್ಳೆಯದು" ಎಂದನು.

ಉದ್ಧವ ಉವಾಚ :—

ಯಂ ನ ಬ್ರಹ್ಮಾ ನ ಚ ಹರೋ ನ ದೇವಾ ನ ಮಹರ್ಷಯಃ ।
ಸ್ವಭಾವಮನುಗಚ್ಛಂತಿ ಸರ್ವಾ ಧನ್ಯಾ ವ್ರಜಸ್ತ್ರಿಯಃ ॥ ೩೬ ॥
ಸರ್ವಾಸಾಂ ಸಫಲಂ ಜನ್ಮ ಜೀವಿತಂ ಯೌವನಂ ಧನಂ ।
ಯಾಸಾಂ ಭವೇದ್ಭಗವತಿ ಭಕ್ತಿರವ್ಯಭಿಚಾರಿಣೀ ॥ ೩೭ ॥

ಗೋಪ್ಯ ಊಚುಃ :—

ಸಾಧು ದರ್ಶಯ ಗೋವಿಂದಂ ಸಾಧು ದರ್ಶಯ ವಲ್ಲಭಂ ।
ನಯಾಸ್ಮಾನ್ಸಾಧು ತತ್ರೈವ ಯತ್ರ ತಿಷ್ಠತಿ ಸೋಽಚ್ಯುತಃ ॥ ೩೮ ॥

ಪ್ರಹ್ಲಾದ ಉವಾಚ :—

ತಾಸಾಂ ತದ್ಭಾಷಿತಂ ಶ್ರುತ್ವಾ ತಥಾ ವಿಲಪಿತಂ ಬಹು ।
ಬಾಢಮಿತ್ಯೇವ ತಾ ಊಚ ಉದ್ಧವಃ ಸ್ನೇಹವಿಹ್ವಲಾಃ ॥ ೩೯ ॥
ಉದ್ಧವೇನ ಸಮಂ ಸರ್ವಾಸ್ತತಸ್ತಾ ವ್ರಜಯೋಷಿತಃ ।
ಅನುಜಗ್ಮುರ್ಮುದಾ ಯುಕ್ತಾಃ ಕೃಷ್ಣದರ್ಶನಲಾಲಸಾಃ ॥ ೪೦ ॥
ಗಾಯಂತ್ಯಃ ಪ್ರಿಯಗೀತಾನಿ ತದ್ಬಾಲಚರಿತಾನಿ ಚ ।
ಜಗ್ಮುಸ್ಸಹೈವ ಶನಕೈರುದ್ಧವೇನ ವ್ರಜಾಂಗನಾಃ ॥ ೪೧ ॥

---

೩೬. ಉದ್ಧವನು ಹೇಳುತ್ತಾನೆ :—ಬ್ರಹ್ಮ, ಮಹೇಶ್ವರ, ಮಹರ್ಷಿಗಳೂ ಅರಿಯದ ಶ್ರೀಕೃಷ್ಣನ ಸ್ವಭಾವವನ್ನು ತಿಳಿದ ಗೋಕುಲಾಂಗನೆಯರೆಲ್ಲ ಪುಣ್ಯವಂತರು.

೩೭. ಶ್ರೀಕೃಷ್ಣನಲ್ಲಿ ದೃಢಭಕ್ತಿಯುಳ್ಳ ಗೊಲ್ಲತಿಯರ ಜನ್ಮ, ಬದುಕು, ಯೌವನ, ಹಣ ಇವುಗಳೆಲ್ಲ ಸಫಲವಾದುವು.

೩೮. ಗೋಪಿಯರು ಹೇಳುತ್ತಾರೆ :—ಉದ್ಧವ ! ಒಳ್ಳೆಯದು ! ನೀನು ನಮಗೆ ಪ್ರಿಯನಾದ ಕೃಷ್ಣನನ್ನು ತೋರಿಸು. ಆ ಅಚ್ಯುತನಿರುವ ಸ್ಥಳಕ್ಕೆ ನಮ್ಮನ್ನು ಕರೆದುಕೊಂಡು ಹೋಗು.

೩೯. ಪ್ರಹ್ಲಾದನು ಹೇಳುತ್ತಾನೆ :—ಉದ್ಧವನು ಗೋಪಿಯರ ಆ ಮಾತನ್ನೂ, ಗೋಳಾಟವನ್ನೂ ಕೇಳಿ ಸ್ನೇಹದಿಂದ ವ್ಯಥೆಗೊಂಡ ಅವರನ್ನು ಕುರಿತು ಹಾಗೆಯೇ ಆಗಲೆಂದನು.

೪೦. ಆ ಗೋಪಿಯರೆಲ್ಲರೂ ಕೃಷ್ಣನನ್ನು ನೋಡಲು ಕುತೂಹಲವುಳ್ಳವರಾಗಿ ಸಂತೋಷದಿಂದ ಉದ್ಧವನನ್ನು ಅನುಸರಿಸಿದರು.

೪೧. ಗೋಪಿಯರು ಆ ಕೃಷ್ಣನ ಬಾಲಚರಿತೆಗಳನ್ನು ಹಾಡುತ್ತ ಮೆಲ್ಲನೆ ಉದ್ಧವನೊಡನೆ ಹೋದರು.

ಯದುಪುರ್ಯಾಂ ತತೋ ದೃಷ್ಟ್ವಾ ಉದ್ಯಾನವಿಪಿನಾವಲೀಃ ।
ಅದ್ಯ ದೇವಂ ಪ್ರಪಶ್ಯಾಮಃ ಕೃಷ್ಣಾಖ್ಯಂ ನಂದನಂ ವನಂ ॥ ೪೨ ॥
ದ್ವಾರವತ್ಯಾಂ ತು ಗಮನಾದ್ಧ್ಯಾನಾಲ್ಲಕ್ಷ್ಮೀಪತೇಸ್ತದಾ ।
ಅಶೇಷಕಲ್ಮಷಾನ್ಮುಕ್ತಾ ವಿಧ್ವಸ್ತಾಖಿಲಬಂಧನಾಃ ॥ ೪೩ ॥
ಸಂಪ್ರಾಪ್ತಾಸ್ತಾಸ್ತತಃ ಸರ್ವಾಸ್ತೀರೇ ಮಯಸರಸ್ಯ ಚ ।
ಪ್ರಣಿಪತ್ಯೋದ್ಧವಃ ಪ್ರಾಹ ಗೋಪಿಕಾಃ ಕೃಷ್ಣದೇವತಾಃ ॥ ೪೪ ॥
ಸ್ಥೀಯತಾಂ ಮಾತರಶ್ಚಾತ್ರಾತ್ರೈವೇಷ್ಯತಿ ಮಹಾಭುಜಃ ।
ಕೃಷ್ಣಃ ಕಮಲಪತ್ರಾಕ್ಷೋ ವಿಧಾಸ್ಯತಿ ಚ ವೋ ಹಿತಂ ॥ ೪೫ ॥

ಗೋಪ್ಯ ಊಚುಃ :—

ಕಸ್ಯೋದ್ಧವ ಇದಂ ಚಾತ್ರ ಸರಃ ಸಾರಸಶೋಭಿತಂ ।
ಸಂಪೂರ್ಣಂ ಪಂಕಜೈಶ್ಚಿತ್ರೈಃ ಕಲ್ಹಾರಕುಮುದೋತ್ಪಲೈಃ ॥ ೪೬ ॥

ಉದ್ಧವ ಉವಾಚ :—

ಮಯೋ ನಾಮ ಮಹಾದೈತ್ಯೋ ಮಾಯಾವೀ ಲೋಕವಿಶ್ರುತಃ ।
ಕೃತಂ ತೇನ ಸರಃ ಶುಭ್ರಂ ತಸ್ಯ ನಾಮ್ನಾ ಚ ವಿಶ್ರುತಂ ॥ ೪೭ ॥

---

೪೨. ಅವರು ಯಾದವ ಪುರದಲ್ಲಿರುವ ತೋಟ, ಕಾಡುಗಳ ಸಾಲನ್ನು ನೋಡಿ ಈ ದಿನ ನಾವು ಕೃಷ್ಣನೆಂಬ ನಂದಕುಮಾರನನ್ನು ನೋಡುವೆವು ಎಂದುಕೊಂಡರು.

೪೩–೪೪. ಅವರು ದ್ವಾರವತಿಯನ್ನು ಸೇರಿ ಕೃಷ್ಣನನ್ನು ಧ್ಯಾನಿಸಿದ್ದರಿಂದ ಪಾಪರಹಿತರೂ, ಮುಕ್ತಬಂಧನರೂ ಆಗಿ ಮಯ ಸರೋವರದ ದಡವನ್ನು ಸೇರಲು ಉದ್ಧವನು ಕೃಷ್ಣನೇ ದೇವತೆಯೆಂದು ಭಾವಿಸಿರುವ ಆ ಗೋಪಿಯರನ್ನು ವಂದಿಸಿ ಇಂತೆಂದನು.

೪೫. "ತಾಯಂದಿರೆ! ನೀವು ಇಲ್ಲಿಯೇ ಇರಿ. ಪುಂಡರೀಕಾಕ್ಷನಾದ ಕೃಷ್ಣನು ಇಲ್ಲಿಗೆ ಬಂದು ನಿಮಗೆ ಹಿತವನ್ನುಂಟುಮಾಡುವನು.

೪೬. ಗೋಪಿಯರು ಹೇಳುತ್ತಾರೆ:—ಉದ್ಧವ! ಸಾರಸ ಪಕ್ಷಿಗಳಿಂದ ಅಲಂಕಾರಗೊಂಡುದೂ, ಆಶ್ಚರ್ಯಕರವಾದ ಕಮಲ, ಕಲ್ಹಾರ, ಕುಮುದಗಳಿಂದ ತುಂಬಿರುವುದೂ ಆದ ಈ ಸರೋವರವು ಯಾರದು?

೪೭. ಉದ್ಧವನು ಹೇಳುತ್ತಾನೆ:—ಮಾಯಾವಿಯೂ, ಲೋಕದಲ್ಲಿ ಪ್ರಸಿದ್ಧನೂ ಆದ ಮಯನೆಂಬ ಮಹಾದೈತ್ಯನು ಈ ಸರೋವರವನ್ನು ನಿರ್ಮಿಸಿದನು. ಆದರಿಂದ ಈ ಸರೋವರವು ಅವನ ಹೆಸರಿನಿಂದ ಪ್ರಸಿದ್ಧವಾಗಿರುವುದು.

ಶ್ರೀ ಗೋಪ್ಯ ಊಚುಃ :—
ಶೀಘ್ರಮಾನಯ ಗೋವಿಂದಂ ಸಾಧು ದರ್ಶಯ ಚಾಚ್ಯುತಂ ।
ನಯನಾಂದಜನನಂ ತಾಪತ್ರಯವಿನಾಶನಂ ॥ ೪೮ ॥
ತಚ್ಛ್ರುತ್ವಾ ವಚನಂ ತಾಸಾಂ ಗೋಪಿಕಾನಾಂ ತದೋದ್ಧವಃ ।
ದೂತೈಃ ಸಮಾನಯಾಮಾಸ ಶ್ರೀಕೃಷ್ಣಂ ಶೀಘ್ರಯಾಯಿಭಿಃ ॥ ೪೯ ॥
ಆಯಾಂತಂ ಶೀಘ್ರಯಾನೇನ ದೃಷ್ಟ್ವಾ ದೇವಕಿನಂದನಂ ।
ಭ್ರಾಜಮಾನಂ ಸುವಪುಷಾ ವನಮಾಲಾವಿಭೂಷಿತಂ ॥ ೫೦ ॥
ಜ್ವಲತ್ಕಿರೀಟಮುಕುಟಂ ಸ್ಫುರನ್ಮಕರಕುಂಡಲಂ ।
ಶ್ರೀವತ್ಸಾಂಕಂ ಮಹಾಬಾಹುಂ ಪೀತಕೌಶೇಯವಾಸಸಂ ॥ ೫೧ ॥
ಆತಪತ್ರೈರ್ವೃತಂ ಮೂರ್ಧ್ನಿ ಸಂವೃತಂ ವೃಷ್ಣಿಪುಂಗವೈಃ ।
ಸಂಸ್ತುತಂ ಬಂದಿಮುಖ್ಯೈಶ್ಚ ಗೀತವಾದಿತ್ರನಿಸ್ವನೈಃ ॥ ೫೨ ॥
ಪೌರಜಾನಪದೈರ್ಲೋಕೈರ್ವೈಷ್ಣವೈಃ ಸರ್ವತೋ ವೃತಂ ।
ಪಶ್ಯಂತಂ ಹಂಸಮಿಥುನೈಃ ಸರಃ ಸಾರಸಶೋಭಿತಂ ॥ ೫೩ ॥
ತಂ ದೃಷ್ಟ್ವಾಽಚ್ಯುತಮಾಯಾಂತಂ ಲೋಕಕಾಂತಂ ಮನೋಹರಂ ।
ಪ್ರಿಯಂ ಪ್ರಿಯಾಕ್ಷಿರಾವೃಷ್ಟ್ವಾ ಮುಮುಹುಸ್ತಾ ವಜ್ರಾಂಗನಾಃ ॥ ೫೪ ॥

---

೪೮. ಶ್ರೀ ಗೋಪಿಯರು ಹೇಳುತ್ತಾರೆ:—ಉದ್ಧವ! ನೀನು ಶೀಘ್ರವಾಗಿ ಕಣ್ಣಿಗೆ ಆನಂದವನ್ನುಂಟುಮಾಡುವವನೂ, ತಾಪತ್ರಯಗಳನ್ನು ನಿವಾರಿಸುವವನೂ ಆದ ಆ ಕೃಷ್ಣನನ್ನು ಕರೆತಂದು ತೋರಿಸು.

೪೯. ಆಗ ಉದ್ಧವನು ಆ ಗೋಪಿಯರ ಮಾತನ್ನು ಕೇಳಿ ಶೀಘ್ರವಾಗಿ ಹೋಗುವ ದೂತರಿಂದ ಕೃಷ್ಣನನ್ನು ಕರೆಯಿಸಿದನು.

೫೦–೫೪. ಆ ಗೋಕುಲದ ಗೋಪಿಯರು ವೇಗವಾದ ವಾಹನದಿಂದ ಬರುತ್ತಿರುವವನೂ, ಶರೀರದಿಂದ ಪ್ರಕಾಶಿಸುವವನೂ, ವನಮಾಲೆಯಿಂದ ಅಲಂಕಾರಗೊಂಡವನೂ, ಜಾಜ್ವಲ್ಯಮಾನವಾದ ಕಿರೀಟವುಳ್ಳವನೂ, ಹೊಳೆಯುತ್ತಿರುವಮಕರಾಕೃತಿಯ ಕುಂಡಲಗಳುಳ್ಳವನೂ ಶ್ರೀವತ್ಸವೆಂಬ ಮಚ್ಚೆಯುಳ್ಳವನೂ, ಪೀತಾಂಬರವನ್ನುಟ್ಟವನೂ, ಶ್ವೇತಛತ್ರದಿಂದ ಸಹಿತನೂ, ಯಾದವೋತ್ತಮರಿಂದ ಸಹಿತನೂ, ವಂದಿಮಾಗಧರಿಂದ ಸ್ತುತಿಸಲ್ಪಟ್ಟವನೂ,ಸಂಗೀತ, ವಾದ್ಯಗಳ ಧ್ವನಿಯಿಂದ ಕೂಡಿದವನೂ, ವಿಷ್ಣುಭಕ್ತರಾದ ಹಳ್ಳಿ ಮತ್ತು ಪಟ್ಟಣದ ಜನರಿಂದ ಎಲ್ಲೆಡೆಯಲ್ಲಿಯೂ ಸುತ್ತುವರಿಯಲ್ಪಟ್ಟವನೂ, ಹಂಸ ದಂಪತಿಗಳಿಂದಲೂ ಸಾರಸಗಳಿಂದಲೂ ಕೂಡಿದ ಸರೋವರವನ್ನು ನೋಡುತ್ತಿರುವವನೂ, ಜಗನ್ಮೋಹನನೂ, ಆದ ಪ್ರಿಯಕೃಷ್ಣನನ್ನು ನೋಡಿ ಮೂರ್ಛೆಗೊಂಡರು.

ಚಿರಾಯ ಸಂಜ್ಞಾಂ ಸಂಪ್ರಾಪ್ಯ ವಿಲೇಪುಸ್ತ್ವ ಸುದುಃಖಿತಾಃ ।
ಹಾ ನಾಥ ಕಾಂತ ಹಾ ಕೃಷ್ಣ ಪ್ರಜೇಶಸು ಮನೋಹರ ॥ ೫೫ ॥
ಸಂವರ್ಧಿತೋಽಸಿ ಯೈರ್ಬಾಲ್ಯೇ ಕ್ರೀಡಿತೋ ವತ್ಸಪಾಲಕೈಃ ।
ತೇಽಪಿ ತ್ವಯಾ ಪರಿತ್ಯಕ್ತಾಃ ಕಥಂ ದುಷ್ಟೋಽಸಿ ನಿರ್ಘೃಣಃ ॥ ೫೬ ॥
ನ ತೇ ಧರ್ಮೋ ನ ಸೌಹಾರ್ದಂ ನ ಸಖ್ಯಂ ಸತ್ಯಮೇವ ಚ ।
ಪಿತೃಮಾತೃಪರಿತ್ಯಾಗೀ ಕಥಂ ಯಾಸ್ಯಸಿ ಸದ್ಗತಿಂ ॥ ೫೭ ॥
ಸ್ವಾಮಿಸ್ಭಕ್ತಪರಿತ್ಯಾಗಃ ಸರ್ವಶಾಸ್ತ್ರೇಷು ಗರ್ಹಿತಃ ।
ತ್ಯಜತಾಽಸ್ಮಾನ್ವನೇ ವೀರ ಧರ್ಮೋ ನಾವೇಕ್ಷಿತಸ್ತ್ವಯಾ ॥ ೫೮ ॥

ಪ್ರಹ್ಲಾದ ಉವಾಚ :—

ಶ್ರುತ್ವಾ ತಾಸಾಂ ವಿಲಪಿತಂ ಗೋಪೀನಾಂ ನಂದನಂದನಃ ।
ಅನನ್ಯಶರಣಾಃ ಸರ್ವಾ ಭಾವಜ್ಞೋ ಭಗವಾನ್ವಿಭುಃ ।
ಸಾಂತ್ವಯಾಮಾಸ ವಚಸೈರ್ವ್ರಜೇಶಸ್ತಾ ವ್ರಜಾಂಗನಾಃ ॥ ೫೯ ॥
ಅಧ್ಯಾತ್ಮಶಿಕ್ಷಯಾ ಗೋಪೀಃ ಪ್ರಭುಸ್ತಾ ಅನ್ವಶಿಕ್ಷಯತ್ ॥ ೬೦ ॥

---

೫೫–೫೬. ಆ ಗೊಲ್ಲತಿಯರು ಬಹುಹೊತ್ತಿನ ಮೇಲೆ ಜ್ಞಾನವನ್ನು ಹೊಂದಿ ದುಃಖದಿಂದ ಹೀಗೆ ಗೋಳಾಡಿದರು. "ಸ್ವಾಮಿಯೂ, ಪ್ರಿಯನೂ, ಸುಂದರನೂ, ಗೋಕುಲದ ಒಡೆಯನೂ ಆದ ಓಕೃಷ್ಣ! ನೀನು ನಿನ್ನನ್ನು ಬಾಲ್ಯದಲ್ಲಿ ಆಡಿಸಿ ಬೆಳೆಸಿದ ಗೊಲ್ಲರನ್ನೂ ಬಿಟ್ಟು ಎಷ್ಟು ದುಷ್ಟನೂ, ನಿಷ್ಕರುಣಿಯೂ, ಆಗಿರುವೆ.

೫೭. ನಿನ್ನಲ್ಲಿ ಧರ್ಮ, ಸ್ನೇಹ, ಸತ್ಯ, ಸುಖ್ಯಗಳಿಲ್ಲ. ತಾಯಿತಂದೆಗಳನ್ನು ತ್ಯಜಿಸಿದ ನೀನು ಹೇಗೆ ಸದ್ಗತಿಯನ್ನು ಪಡೆಯುವೆ?

೫೮. ನಾಥ! ಭಕ್ತಪರಿತ್ಯಾಗವು ಸಕಲ ಶಾಸ್ತ್ರಗಳಲ್ಲಿಯೂ ನಿಂದಿತವಾಗಿರುವುದು. ವೀರ! ಕಾಡಿನಲ್ಲಿ ನಮ್ಮನ್ನು ಬಿಡುತ್ತಿರುವ ನೀನು ಧರ್ಮವನ್ನವಲೋಕಿಸಲಿಲ್ಲ".

೫೯–೬೦. ಪ್ರಹ್ಲಾದನು ಹೇಳುತ್ತಾನೆ:—ನಂದಕುಮಾರನಾದ ಪೂಜ್ಯ ಕೃಷ್ಣನು ಆ ಗೋಪಿಯರ ವಿಲಾಪವನ್ನು ಕೇಳಿ ಅವರ ಅಭಿಪ್ರಾಯವನ್ನರಿತು ಈ ರೀತಿ ವೇದಾಂತಬೋಧೆಯಿಂದ ಸಮಾಧಾನ ಗೊಳಿಸಿದನು.

ಶ್ರೀ ಭಗವಾನುವಾಚ :—

ಭವತೀನಾಂ ವಿಯೋಗೋ ಮೇ ನ ಹಿ ಸರ್ವಾತ್ಮನಾ ಕ್ವಚಿತ್ ।
ವಸಾಮಿ ಹೃದಯೇ ಶಶ್ವದ್ಭೂತಾನಾಮವಿಶೇಷತಃ ॥ ೬೧ ॥
ಅಹಂ ಸರ್ವಸ್ಯ ಪ್ರಭವೋ ಮತ್ತೋ ದೇವಾಃ ಸವಾಸವಾಃ ।
ಆದಿತ್ಯಾ ವಸವೋ ರುದ್ರಾಃ ಸಾಧ್ಯಾ ವಿಶ್ವೇ ಮರುದ್ಗಣಾಃ ॥ ೬೨ ॥
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸನಕಾದ್ಯಾ ಮಹರ್ಷಯಃ ।
ಇಂದ್ರಿಯಾಣಿ ಮನೋ ಬುದ್ಧಿಸ್ತಥಾ ಸತ್ವಂ ರಜಸ್ತಮಃ ॥ ೬೩ ॥
ಕಾಮಃ ಕ್ರೋಧಶ್ಚ ಲೋಭಶ್ಚ ಮೋಹೋಽಹಂಕಾರ ಏವ ಚ ।
ಏತತ್ಸರ್ವಮಶೇಷೇಣ ಮತ್ತೋ ಗೋಪ್ಯಃ ಪ್ರವರ್ತತೇ ॥ ೬೪ ॥
ಏತಜ್ಜ್ಞಾತ್ವಾ ಮಹಾಭಾಗ ಮಾ ಸ್ಮ ಕೃಧ್ವಂ ಮನಃ ಶುಚಿ ।
ಸರ್ವಭೂತೇಷು ಮಾಂ ನಿತ್ಯಂ ಭಾವಯಧ್ವಮಕಲ್ಮಷಾಃ ॥ ೬೫ ॥

ಪ್ರಹ್ಲಾದ ಉವಾಚ :—

ತಾಃ ಕೃಷ್ಣವಚನಂ ಶ್ರುತ್ವಾ ಗೋಪ್ಯೋ ವಿಧ್ವಸ್ತಬಂಧನಾಃ ।
ವಿಮುಕ್ತಸಂಶಯಕ್ಲೇಶಾಃ ದರ್ಶನಾನಂದಸಂಪ್ಲುತಾಃ ।
ಊಚುಶ್ಚ ಗೋಪವಧ್ವಸ್ತಾಃ ಕೃಷ್ಣಂ ನಿರ್ಮಲಮಾನಸಾಃ ॥ ೬೬ ॥

---

೬೧. ಶ್ರೀಕೃಷ್ಣನು ಹೇಳುತ್ತಾನೆ :—ಗೋಪಿಯರೆ ! ನಿಮ್ಮಿಂದ ನನಗೆ ಒಂದೆಡೆಯಲ್ಲಿಯೂ ವಿಯೋಗವಿಲ್ಲ. ನಾನು ಯಾವಾಗಲೂ ಪ್ರಾಣಿಗಳ ಹೃದಯದಲ್ಲಿ ಸಾಧಾರಣವಾಗಿ ವಾಸಮಾಡುತ್ತೇನೆ.

೬೨–೬೪. ನಾನು ಸಕಲಕ್ಕೂ ಕಾರಣನು. ಇಂದ್ರನಿಂದ ಸಹಿತರಾದ ದೇವತೆಗಳೂ, ಆದಿತ್ಯರೂ, ವಸುಗಳೂ, ರುದ್ರರೂ, ಸಾಧ್ಯರೂ, ವಿಶ್ವೇದೇವರೂ, ಮರುದ್ಗಣಗಳೂ, ಬ್ರಹ್ಮ, ರುದ್ರ, ವಿಷ್ಣು ಸನಕಾದಿಗಳೂ ಇಂದ್ರಿಯ, ಮನಸ್ಸು, ಬುದ್ಧಿ, ಸತ್ವರಜಸ್ತಮೋಗುಣಗಳೂ, ಕಾಮ, ಕ್ರೋಧ, ಲೋಭ, ಮೋಹ, ಅಹಂಕಾರ ಇವುಗಳೂ ನನ್ನಿಂದಲೇ ಉಂಟಾಗುವುವು.

೬೫. ಮಹಾ ಭಾಗ್ಯಶಾಲಿಯರಾದ ಗೋಪಿಯರೆ! ನೀವು ಇದನ್ನರಿತು ಮನಸ್ಸಿನಲ್ಲಿ ದುಃಖಿಸಬೇಡಿರಿ. ಪಾಪ ರಹಿತರಾದ ನೀವು ಯಾವಾಗಲೂ ನಾನು ಸಕಲ ಪ್ರಾಣಿಗಳಲ್ಲಿಯೂ ಇರುವೆನೆಂದು ತಿಳಿಯಿರಿ.

೬೬. ಪ್ರಹ್ಲಾದನು ಹೇಳುತ್ತಾನೆ :—ಕೃಷ್ಣನ ವಚನವನ್ನು ಕೇಳಿ ಬಂಧರಹಿತರೂ, ಸಂದೇಹವಿಲ್ಲದವರೂ, ಆನಂದಮಗ್ನರೂ, ಶುದ್ಧ ಮನಸ್ಕರೂ ಆದ ಆ ಗೋಪಾಂಗನೆಯರು ಕೃಷ್ಣನನ್ನು ಕುರಿತು ಹೇಳಿದರು.

ಗೋಪ್ಯ ಊಚುಃ :—

ಅದ್ಯ ನಃ ಸಫಲಂ ಜನ್ಮ ಅದ್ಯ ನಃ ಸಫಲಾ ದೃಶಃ ।
ಯತ್ತ್ವಾಂ ಪಶ್ಯಾಮ ಗೋವಿಂದ ನಾಗರೀಜನವಲ್ಲಭಂ ॥ ೬೭ ॥
ಪುಣ್ಯಹೀನಾ ನ ಪಶ್ಯಂತಿ ಕೃಷ್ಣಾಖ್ಯಂ ಪುರುಷಂ ಪರಂ ।
ವಾಕ್ಯೈರ್ಹೇತ್ವರ್ಥಸಂಯುಕ್ತೈರ್ಯದಿ ಸಂಬೋಧಿತಾ ವಯಂ ।
ತಥಾಪಿ ಮಾಯಯಾ ಹೃದಯಾನ್ನಾಪೈತಿ ಮಧುಸೂದನ ॥ ೬೮ ॥

ಶ್ರೀಕೃಷ್ಣ ಉವಾಚ :—

ದರ್ಶನಾತ್ಸ್ಪರ್ಶನಾಚ್ಚಾಸ್ಯ ವಿಮುಕ್ತಾಶೇಷಬಂಧನಾಃ ।
ಸ್ನಾತ್ವಾ ಚ ಸಕಲಾನ್ಕಾಮಾನವಾಪ್ಸ್ಯಥ ವ್ರಜಾಂಗನಾಃ ॥ ೬೯ ॥

ಗೋಪ್ಯ ಊಚುಃ :—

ಅದ್ಭುತೋ ಹಿ ಪ್ರಭಾವಸ್ತೇ ಸರಸೋಽಸ್ಯ ಉದಾಹೃತಃ ।
ವಿಧಿಂ ಬ್ರೂಹಿ ಜಗನ್ನಾಥ ವಿಸ್ತರಾದ್ವೃಷ್ಣಿನಂದನ ॥ ೭೦ ॥

ಶ್ರೀಕೃಷ್ಣ ಉವಾಚ :—

ಭವತೀನಾಂ ಮಯಾ ಸಾರ್ಧಂ ಸಂಜಾತಮತ್ರ ದರ್ಶನಂ ।
ತಸ್ಮಾನ್ಮಯಾ ಸದಾ ಹ್ಯತ್ರ ಸ್ನಾತವ್ಯಂ ನಿಯಮೇನ ಹಿ ॥ ೭೧ ॥

---

೬೭. ಗೋಪಿಯರು ಹೇಳುತ್ತಾರೆ :—ಗೋವಿಂದ! ಪಟ್ಟಣದ ಸ್ತ್ರೀಯರಿಗೆ ಪ್ರಿಯನಾದ ನಿನ್ನನ್ನು ನಾವು ಈಗ ನೋಡಿದ್ದರಿಂದ ನಮ್ಮ ಜನ್ಮವೂ, ಕಣ್ಣೂ ಸಫಲವಾಗುವುವು.

೬೮. ಪುಣ್ಯರಹಿತರಾದ ಜನರು ಕೃಷ್ಣನೆಂಬ ಪುರುಷೋತ್ತಮನನ್ನು ನೋಡ್ರುವುದಿಲ್ಲ. ನೀನು ಯುಕ್ತಿ ಯುಕ್ತವಾದ ಮಾತುಗಳಿಂದ ನಮ್ಮನ್ನು ಭೇದಿಸಿದರೂ ನಮ್ಮ ಹೃದಯದಿಂದ ಮಾಯೆಯು ತೊಲಗಲಿಲ್ಲ.

೬೯. ಶ್ರೀಕೃಷ್ಣನು ಹೇಳುತ್ತಾನೆ :—ಗೋಪಿಯರೆ! ನೀವು ಈ ಸರೋವರದ ದರ್ಶನ ಮತ್ತು ಸ್ಪರ್ಶದಿಂದಲೂ, ಸ್ನಾನದಿಂದಲೂ ಸಮಸ್ತ ಬಂಧ ಮುಕ್ತರಾಗಿ ಸಕಲೇಷ್ಟಾರ್ಥಗಳನ್ನು ಪಡೆಯುವಿರಿ.

೭೦. ಗೋಪಿಯರು ಹೇಳುತ್ತಾರೆ :—ಯಾದವ ನಂದನ! ನೀನು ಈ ಸರೋವರದ ಅದ್ಭುತವಾದ ಮಾಹಾತ್ಮ್ಯವನ್ನು ಹೇಳಿದೆ. ಜಗನ್ನಾಥ! ಇದರಲ್ಲಿ ಸ್ನಾನ ಮಾಡುವ ವಿಧಿಯನ್ನು ವಿಸ್ತಾರವಾಗಿ ಹೇಳು.

೭೧. ಶ್ರೀಕೃಷ್ಣನು ಹೇಳುತ್ತಾನೆ :— ನೀವು ನನ್ನೊಡನೆ ಈ ಸರೋವರವನ್ನು ನೋಡಿರುವುದರಿಂದ ಸ್ನಾನಮಾಡಬೇಕು.

ಯಃ ಸ್ನಾತ್ವಾ ಪರಯಾ ಭಕ್ತ್ಯಾ ಪಿತೄನ್ಸಂತರ್ಪಯಿಷ್ಯತಿ ।
ಶ್ರಾವಣಸ್ಯ ಸಿತೇ ಪಕ್ಷೇ ದ್ವಾದಶ್ಯಾಂ ನಿಯತಃ ಶುಚಿಃ ॥ ೭೨ ॥
ದತ್ವಾ ದಾನಂ ಸ್ವಶಕ್ತ್ಯಾ ಚ ಮಾಮುದ್ದಿಶ್ಯ ಪಿತೄಂಸ್ತಥಾ ।
ಲಭತೇ ವೈಷ್ಣವಂ ಲೋಕಂ ಪಿತೃಭಿಃ ಪರಿವಾರಿತಃ ॥ ೭೩ ॥
ಮಯತೀರ್ಥಂ ಸಮಾಸಾದ್ಯ ಕೃತ್ವಾ ಚ ಕರಯೋಃ ಕುಶಾನ್ ।
ಫಲಮೇಕಂ ಗೃಹೀತ್ವಾ ತು ಮಂತ್ರೇಣಾರ್ಘ್ಯಂ ಪ್ರದಾಪಯೇತ್ ॥ ೭೪ ॥
ಗೃಹಾಂಧಕೂಪೇ ಪತಿತಂ ಮಾಯಾಪಾಶಶತೈರ್ವೃತಂ ।
ಮಾಮುದ್ಧರ ಮಹೀನಾಥ ಗೃಹಾಣಾರ್ಘ್ಯಂ ನಮೋಽಸ್ತು ತೇ ॥ ೭೫ ॥
ಅರ್ಘ್ಯಮಂತ್ರಃ
ಸ್ನಾತ್ವಾ ಯಃ ಪರಯಾ ಭಕ್ತ್ಯಾ ಪಿತೄನ್ಸಂತರ್ಪ್ಯ ಭಾವತಃ ।
ಕುರ್ಯಾಚ್ಛ್ರಾದ್ಧಂ ಚ ಪರಯಾ ಪಿತೃಭಕ್ತ್ಯಾ ಸಮನ್ವಿತಃ ॥ ೭೬ ॥
ದಕ್ಷಿಣಾಂ ಚ ತತೋ ದದ್ಯಾದ್ರಜತಂ ರುಕ್ಮಮೇವ ಚ ।
ವಿಶೇಷತಃ ಪ್ರದಾತವ್ಯಂ ಪಾಯಸಂ ಚ ಸಶರ್ಕರಂ ॥ ೭೭ ॥
ನವನೀತಂ ಘೃತಂ ಛತ್ರಂ ಕಂಬಲಾಜಿನಮೇವ ಚ ।
ಭವತೀಭಿಃ ಸಮಂ ಯಸ್ಮಾತ್ಸಂಜಾತಂ ಮಮ ದರ್ಶನಂ ।
ಆಗಂತವ್ಯಂ ಮಯಾ ತಸ್ಮಾತ್ಸದಾ ಹ್ಯಸ್ಮಿನ್ಜಲಾಶಯೇ ॥ ೭೮ ॥

---

೭೨–೭೩. ಶ್ರಾವಣ ಶುದ್ಧ ದ್ವಾದಶೀ ದಿನ ಇಲ್ಲಿ ಶುದ್ಧನಾಗಿ ಭಕ್ತಿಯಿಂದ ಮಿಂದು ಪಿತೃತರ್ಪಣ ಮಾಡಿ ನನ್ನನ್ನೂ ಪಿತೃಗಳನ್ನೂ ಉದ್ದೇಶಿಸಿ ತಮ್ಮ ಶಕ್ತ್ಯನುಸಾರ ದಾನವನ್ನಿತ್ತವನು ಪಿತೃಗಳೊಡನೆ ವೈಷ್ಣವ ಲೋಕವನ್ನು ಪಡೆಯುವನು.

೭೪. ಮನುಷ್ಯನು ಮಯತೀರ್ಥಕ್ಕೆ ಹೋಗಿ ಕೈಯಲ್ಲಿ ದರ್ಭೆಗಳನ್ನೂ ಒಂದು ಫಲವನ್ನೂ ಹಿಡಿದುಕೊಂಡು ಈ ಮಂತ್ರದಿಂದ ಅರ್ಘ್ಯವನ್ನೀಯಬೇಕು.

೭೫. ಮಹೀನಾಥ! ಮನೆಯೆಂಬ ಕತ್ತಲೆಯ ಬಾವಿಯಲ್ಲಿ ಬಿದ್ದವನೂ, ಅನೇಕ ಮಾಯಾಪಾಶಗಳಿಂದ ಬದ್ಧನೂ ಆದ ನನನ್ನು ಉದ್ಧರಿಸು. ಈ ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು.

೭೬–೭೮. ಇಲ್ಲಿ ಅತಿಶಯವಾದ ಭಕ್ತಿಯಿಂದ ಪಿತೃಗಳಿಗೆ ತರ್ಪಣ ಶ್ರಾದ್ಧಗಳನ್ನು ಮಾಡಿ ಬೆಳ್ಳಿ ಮತ್ತು ಚಿನ್ನವನ್ನು ದಕ್ಷಿಣೆಯಾಗಿ ಕೊಡಬೇಕು. ವಿಶೇಷವಾಗಿ ಸಕ್ಕರೆ ಪಾಯಸ, ಬೆಣ್ಣೆ, ತುಪ್ಪ, ಕೊಡೆ, ಕಂಬಳಿ, ಕೃಷ್ಣಾಜಿನ ಇವುಗಳನ್ನೀಯಬೇಕು. ಈ ತೀರ್ಥವನ್ನು ನಾನು ನಿಮ್ಮೊಡನೆ ನೋಡಿದ್ದರಿಂದ ಯಾವಾಗಲೂ ನಾನು ಇಲ್ಲಿಗೆ ಬರಬೇಕು.

ಯೋಽತ್ರ ಸ್ನಾನಂ ಪ್ರಕುರುತೇ ಮಯಸ್ಯ ಸರಸಿ ಪ್ರಿಯಾಃ ।
ಗಂಗಾಸ್ನಾನಫಲಂ ತಸ್ಯ ವಿಷ್ಣುಲೋಕಸ್ತಥಾಽಕ್ಷಯಃ ॥ ೭೯ ॥
ಮುಕ್ತಿಂ ಪ್ರಯಾಂತಿ ತಸ್ಯೈವ ಪಿತರಸ್ತ್ರೀಕುಲೋದ್ಭವಾಃ ।
ಯಾವಜ್ಜೀವಂ ಸುಖಂ ಭುಕ್ತ್ವಾ ಚಾಂತೇ ಹರಿಪುರಂ ವ್ರಜೇತ್ ॥ ೮೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಮಯನಿರ್ಮಿತಸರೋವರವರ್ಣನಂ ನಾಮ
ದ್ವಾದಶೋಽಧ್ಯಾಯಃ

---

೭೯–೮೦. ಪ್ರಿಯರಾದ ಗೋಪಿಯರೆ ! ಈ ಮಯನ ಸರೋವರದಲ್ಲಿ ಮಿಂದ ವನಿಗೆ ಗಂಗಾಸ್ನಾನ ಫಲವೂ, ಶಾಶ್ವತವಾದ ವಿಷ್ಣುಲೋಕವೂ ದೊರೆಯುವುದು. ಅವನ ಮೂರು ಕುಲದ ಪಿತೃಗಳು ಮುಕ್ತರಾಗುವರು. ಅವನು ಪುತ್ರ ಪೌತ್ರರು, ಧನಧಾನ್ಯಗಳು ಇವುಗಳಿಂದ ಕೂಡಿ ಬದುಕಿರುವವರೆಗೆ ಸುಖವನ್ನನುಭವಿಸಿ ಅವಸಾನ ದಲ್ಲಿ ವಿಷ್ಣುಲೋಕಕ್ಕೆ ತೆರಳುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಮಯನಿರ್ಮಿತಸರೋವರವರ್ಣನವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತ್ರಯೋದಶೋಽಧ್ಯಾಯಃ

## ಗೋಪೀಸರಸ್ತೀರಮಾಹಾತ್ಮ್ಯವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ಇತಿ ಕೃಷ್ಣವಚಃ ಶ್ರುತ್ವಾ ಗೋಪ್ಯಃ ಸಂಹೃಷ್ಟಮಾನಸಾಃ ।
ತಸ್ಮಿನ್ಮಯಸರೇ ಸ್ನಾತ್ವಾ ವಿಮುಕ್ತಾಶೇಷಬಂಧನಾಃ ॥ ೧ ॥
ಕೃಷ್ಣಸಂದರ್ಶನಸಂಜಾತ ಪರಮಾನಂದ ಸಂಪ್ಲುತಾಃ ।
ಊಚುಶ್ಚ ವಚನಂ ಗೋಪ್ಯೋ ಮಧುರಂ ಮಾಧವಂ ಪ್ರತಿ ॥ ೨ ॥

ಗೋಪ್ಯ ಊಚುಃ :—

ಧನ್ಯಃ ಸ ದೈತ್ಯಪ್ರವರೋ ಮಯೋ ಯೇನ ಕೃತಂ ಸರಃ ।
ಯಸ್ಮಿಂಸ್ತ್ವಂ ದೈವತೈಸ್ಸಾರ್ಧಂ ಸಮೇಷ್ಯಸಿ ಜಗತ್ಪತೇ ॥ ೩ ॥
ಯದಿ ತುಷ್ಟೋಽಸಿ ಭಗವನ್ನನುಗ್ರಾಹ್ಯಾ ವಯಂ ಯದಿ ।
ಅಸ್ಮಾಕಮಪಿ ಪಾರ್ಷ್ಣೇಯ ಕಾರಯಸ್ವ ಸರೋತ್ತಮಂ । ॥ ೪ ॥
ಕೀರ್ತನಾನ್ಮೃತ್ಯುಲೋಕೇಽಸ್ಮಿಂಸ್ತವ ಸಂದರ್ಶನೇನ ಹಿ ।
ಅಹರ್ನಿಶಂ ತವ ಧ್ಯಾನಾದ್ಯಾಸ್ಯಾಮಃ ಪರಮಾಂ ಗತಿಂ ॥ ೫ ॥

### ಕನ್ನಡದ ಅನುವಾದ

### ಗೋಪೀಸರಸ್ತೀರಮಾಹಾತ್ಮ್ಯವರ್ಣನ

೧–೨. ಶ್ರೀ ಪ್ರಹ್ಲಾದನು ಹೇಳುತ್ತಾನೆ :— ಗೋಪಿಯರು ಹೀಗೆ ಕೃಷ್ಣನ ಮಾತನ್ನು ಕೇಳಿ ಸಂತುಷ್ಟವಾದ ಮನಸ್ಸುಳ್ಳವರಾಗಿ ಆ ಮಯಸರೋವರದಲ್ಲಿ ಮಿಂದು ಸಕಲ ಬಂಧನ ಮುಕ್ತರೂ, ಆ ಕೃಷ್ಣ ದರ್ಶನದಿಂದ ಉಂಟಾದ ಅತ್ಯಂತ ಸಂತೋಷದಿಂದ ಕೂಡಿದವರೂ ಆಗಿ ಮಾಧವನನ್ನು ಕುರಿತು ಹೀಗೆ ಸವಿನುಡಿ ನುಡಿದರು.

೩. ಗೋಪಿಯರು ಹೇಳುತ್ತಾರೆ:— ಕೃಷ್ಣ ! ಮಯನು ನಿರ್ಮಿಸಿರುವ ಈ ಸರೋವರದಲ್ಲಿ ನೀನು ದೇವತೆಗಳೊಡನೆ ನೆಲೆಸುವುದರಿಂದ ಆ ದೈತ್ಯನು ಧನ್ಯನು.

೪ ಪೂಜ್ಯನಾದ ಕೃಷ್ಣ ! ನೀನು ಸಂತುಷ್ಟನಾಗಿ ನಮಗೆ ಪರವನ್ನೀಯುವುದಾದರೆ ನಮಗೂ ಉತ್ತಮವಾದ ಸರೋವರವನ್ನು ನಿರ್ಮಿಸು.

೫. ಈ ಭೂಲೋಕದಲ್ಲಿ ನಿನ್ನ ಕೀರ್ತನ, ದರ್ಶನ, ಧ್ಯಾನಗಳಿಂದ ಉತ್ತಮ ಗತಿಯನ್ನು ಹೊಂದುವೆವು.

ಶ್ರೀ ಕೃಷ್ಣ ಉವಾಚ :—

ಕರಿಷ್ಯೇ ವಃ ಪ್ರಿಯಂ ಸಾಧ್ವ್ಯೋ ಯೂಯಂ ಮಮ ಪರಿಗ್ರಹಾಃ ।
ಅನುಗ್ರಾಹ್ಯಾ ಮಯಾ ನಿತ್ಯಂ ಭಕ್ತಿಗ್ರಾಹ್ಯೋಽಸ್ಮಿ ಸರ್ವದಾ ॥ ೬ ॥

ಪ್ರಹ್ಲಾದ ಉವಾಚ :—

ಇತ್ಯುಕ್ತ್ವಾ ಭಗವಾನ್ಕೃಷ್ಣೋ ಗೋಪೀನಾಂ ಹಿತಕಾಮ್ಯಯಾ ।
ಸರಸಃ ಸನ್ನಿಧೌ ತಸ್ಯ ಸರಸ್ತ್ವನ್ಯಚ್ಚಕಾರ ಹ ॥ ೭ ॥
ತದಗಾಧಂ ಸ್ವಚ್ಛಜಲಂ ನಲಿನೀದಲಶೋಭಿತಂ ।
ಹಂಸಸಾರಸಯುಗ್ಮೈಶ್ಚ ಚಕ್ರವಾಕೈಶ್ಚ ಶೋಭಿತಂ ॥ ೮ ॥
ಕುಮುದೋತ್ಪಲಕಲ್ಹಾರ ಪದ್ಮಿನೀಖಂಡಮಂಡಿತಂ ।
ಸೇವಿತಂ ದ್ವಿಜಮುಖ್ಯೈಶ್ಚ ಸಿದ್ಧವಿದ್ಯಾಧರೈಸ್ತಥಾ ॥ ೯ ॥
ಸೇವಿತಂ ಯದುನಾರೀಭಿಸ್ತಥಾ ಯದುಕುಮಾರಕೈಃ ।
ದಿವಾರಾತ್ರೌ ಸುಸಂಪೂರ್ಣಂ ಸರ್ವೈರ್ಜಾನಪದೈರ್ಜನೈಃ ॥ ೧೦ ॥
ತಂ ದೃಷ್ಟ್ವಾ ಜಲಕಲ್ಲೋಲೈಃ ಸುಸಂಪೂರ್ಣಂ ಜಲಾಶಯಂ ।
ಹರ್ಷಾದ್ಗೋಪೀಜನಂ ಕೃಷ್ಣಃ ಪ್ರೋವಾಚ ವಚನಂ ತದಾ ॥ ೧೧ ॥

---

೬. ಶ್ರೀ ಕೃಷ್ಣನು ಹೇಳುತ್ತಾನೆ:—ಪತಿವ್ರತೆಯರಿರ! ನನ್ನ ಪತಿಯರಾದ ನಿಮಗೆ ಹಿತವನ್ನಾಚರಿಸುವೆನು. ನೀವು ನನಗೆ ಅನುಗ್ರಾಹ್ಯರಾಗಿರುವಿರಿ. ನಾನು ಯಾವಾಗಲೂ ಭಕ್ತಿಗೆ ವಶನಾಗುವವನು.

೭. ಪ್ರಹ್ಲಾದನು ಹೇಳುತ್ತಾನೆ:—ಪೂಜ್ಯನಾದ ಮಾಧವನು ಹೀಗೆಂದು ಗೋಪಿಯರಿಗೆ ಹಿತವನ್ನುಂಟುಮಾಡಲು ಆ ಮಯಸರೋವರದ ಹತ್ತಿರ ಮತ್ತೊಂದು ಸರಸ್ಸನ್ನು ನಿರ್ಮಿಸಿದನು.

೮—೧೧. ಆಳವೂ, ಶುದ್ಧ ಜಲವುಳ್ಳದೂ, ತಾವರೆ ದಳದಿಂದ ಅಲಂಕಾರಗೊಂಡುದೂ, ಹಂಸ, ಸಾರಸ ದಂಪತಿಗಳಿಂದಲೂ, ಚಕ್ರವಾಕಗಳಿಂದಲೂ ಅಲಂಕಾರಗೊಂಡುದೂ, ನೈದಿಲೆ, ಕನ್ನೈದಿಲೆ, ಕಲ್ಹಾರ, ಕಮಲ ಇವುಗಳ ಸಮೂಹದಿಂದ ಶೋಭಿಸುವುದೂ, ದ್ವಿಜವರೇಣ್ಯರೂ, ಸಿದ್ಧ ವಿದ್ಯಾಧರರೂ, ಯಾದವಾಂಗನೆಯರೂ, ಯಾದವ ಕುಮಾರರೂ ಇವರಿಂದ ಸೇವಿಸಲ್ಪಡುವುದೂ, ಸಮಸ್ತ ಗ್ರಾಮ, ನಗರದ ಜನರಿಂದ ತುಂಬಿರುವುದೂ, ನೀರಿನ ಅಲೆಗಳಿಂದ ವಿರಾಜಿಸುವುದೂ ಆದ ಆ ಸರೋವರ

ಪಶ್ಯಧ್ವಂ ಗೋಪಿಕಾಃ ಶುಭ್ರಂ ಸರಃ ಸರಃಸಮೀಪತಃ ।
ಸ್ವಚ್ಛಮಿಷ್ಟಜಲಾಪೂರ್ಣಂ ಸಜ್ಜನಾನಾಂ ಯಥಾ ಮನಃ ॥ ೧೨ ॥
ಕಾರಣಾದ್ಭವತೀನಾಂ ಚ ಯಸ್ಮಾತ್ಕೃತಮಿದಂ ಸರಃ ।
ಭವತೀನಾಂ ತಥಾ ನಾಮ್ನಾ ಖ್ಯಾತಮೇತದ್ಭವಿಷ್ಯತಿ ॥ ೧೩ ॥
ಗೋರ್ವಾಚಾವಾಚಕಃ ಶಬ್ದೋ ಭವತೀಭಿರ್ಮಯಾ ಸಹ ।
ಗೋಪ್ರಚಾರೇತಿ ವೈ ನಾಮ್ನಾ ಖ್ಯಾತಿಂ ಲೋಕೇ ಗಮಿಷ್ಯತಿ ॥ ೧೪ ॥
ಯುಷ್ಮಾಕಂ ಪ್ರಿಯಕಾಮಾರ್ಥಂ ಯಸ್ಮಾತ್ಕೃತಮಿದಂ ಸರಃ ।
ತಸ್ಮಾದ್ಗೋಪೀಸರ ಇತಿ ಖ್ಯಾತಿಂ ಲೋಕೇ ಗಮಿಷ್ಯತಿ ॥ ೧೫ ॥

ಗೋಪ್ಯ ಊಚುಃ :—

ಅನುಗ್ರಾಹ್ಯಂ ಯದಿ ವಯಮಸ್ಮನ್ನಾಮ್ನಾ ಕೃತಂ ಸರಃ ।
ಅನ್ಯತ್ಕಿಮಪಿ ವಾರ್ಷ್ಣೇಯ ಪ್ರಾರ್ಥಯಾಮೋ ವದಸ್ವ ನಃ ॥ ೧೬ ॥

---

ವನ್ನು ನೋಡಿ ಕೃಷ್ಣನು ಸಂತೋಷದಿಂದ ಗೋಪಾಂಗನೆಯರನ್ನು ಕುರಿತು ಇಂತೆಂದನು.

೧೨. ಗೋಪಿಯರೆ! ಈ ಮಯ ಸರೋವರದ ಹತ್ತಿರವಿರುವ ಸಜ್ಜನರ ಮನಸ್ಸಿನಂತೆ ತಿಳಿಯಾದ ಜಲದಿಂದ ತುಂಬಿರುವ ಈ ಸರೋವರವನ್ನು ನೋಡಿರಿ.

೧೩. ಗೋಪಿಯರೆ! ಈ ಸರೋವರವನ್ನು ನಿಮಗಾಗಿ ನಿರ್ಮಿಸಿರುವುದರಿಂದ ಇದು ನಿಮ್ಮ ಹೆಸರಿನಿಂದ ವಿಖ್ಯಾತವಾಗುವುದು.

೧೪. ಮತ್ತು ಗೋ ಶಬ್ದವು ವಾಗೆಂಬ ಅರ್ಥವನ್ನು ಕೊಡುವುದು. ನಿಮ್ಮೊಡನೆ ನಾನು ಇಲ್ಲಿ ನೆಲಸುವುದರಿಂದ ಇದು ಗೋಪ್ರಚಾರವೆಂದೂ ಪ್ರಸಿದ್ಧಿಗೊಳ್ಳುವುದು.

೧೫. ನಿಮಗೆ ಅಭೀಷ್ಟವನ್ನುಂಟುಮಾಡಲು ರಚಿಸಿರುವುದರಿಂದ ಇದು ಗೋಪೀಸರವೆಂದು ಲೋಕದಲ್ಲಿ ಪ್ರಖ್ಯಾತಿಗೊಳ್ಳುವುದು.

೧೬. ಗೋಪಿಯರು ಹೇಳುತ್ತಾರೆ:—ಕೃಷ್ಣ! ನಾವು ನಿನ್ನ ಅನುಗ್ರಹಕ್ಕೆ ಪಾತ್ರರಾಗಿರುವುದಾದರೆ ಈ ಸರೋವರವು ನಮ್ಮ ಹೆಸರಿನಿಂದ ಪ್ರಸಿದ್ಧಿಗೊಳ್ಳುವುದಾದರೆ ಬೇರೊಂದನ್ನು ಬೇಡುತ್ತೇವೆ. ಅದನ್ನು ಹೇಳು.

ಶ್ರೀ ಕೃಷ್ಣ ಉವಾಚ :—
ಪ್ರಾರ್ಥ್ಯತಾಂ ಯದಭಿಪ್ರೇತಂ ಯದ್ವೋ ಮನಸಿ ವರ್ತತೇ ।
ಭಕ್ತ್ಯಾ ಸಮಾಗತಾಂ ಯೂಯಂ ನಾಸ್ತ್ಯದೇಯಂ ತತೋ ಮಯಾ ॥
ಗೋಪ್ಯ ಊಚುಃ :—
ಯದಿ ತುಷ್ಟೋಽಸಿ ಭಗವನ್ಯದಿ ದೇಯೋ ವರೋ ಹಿ ನಃ ।
ತಸ್ಮಾತ್ತ್ವಯಾ ಸದಾ ಕೃಷ್ಣ ನರಯಾನೇನ ಮಾಧವ ॥ ೧೮ ॥
ಅತ್ರಾಗತ್ಯ ನಭಸ್ಯೇಽಸ್ಮಿನ್ಸ್ನಾತವ್ಯಂ ನಿಯಮೇನ ಹಿ ।
ಯತ್ರ ತ್ವಂ ತತ್ರ ದೇವಾಶ್ಚ ಯಜ್ಞಾಸ್ತೀರ್ಥಾನಿ ಕೇಶವ ॥ ೧೯ ॥
ಯತ್ರ ತ್ವಂ ತತ್ರ ದಾನಾನಿ ವ್ರತಾನಿ ನಿಯಮಾಶ್ಚ ಯೇ ।
ಓಂಕಾರಶ್ಚ ವಷಟ್ಕಾರಃ ಸ್ವಾಹಾಕಾರಃ ಸ್ವಧಾ ತಥಾ ॥ ೨೦ ॥
ಭೂರ್ಭುವಃ ಸ್ವರ್ಮಹರ್ಲೋಕೋ ಜನಃ ಸತ್ಯಂ ತಪಸ್ತಥಾ ।
ತ್ವನ್ಮಯಂ ಹಿ ಜಗತ್ಸರ್ವಂ ಸದೇವಾಸುರಮಾನುಷಂ ॥ ೨೧ ॥
ತಸ್ಮಾತ್ತ್ವಯಿ ಜಗನ್ನಾಥೇ ಹ್ಯತ್ರ ಸ್ನಾತೇ ಜನಾರ್ದನೇ ।
ಸ್ನಾತಮತ್ರ ತ್ರಿಭುವನಂ ಭವಿಷ್ಯತಿ ನ ಸಂಶಯಃ ॥ ೨೨ ॥
ತ್ರೈಲೋಕ್ಯಪಾವನೀ ಗಂಗಾ ತವ ಪಾದಜಲಂ ಹಿ ತತ್ ।
ಲಕ್ಷ್ಮೀರ್ವಕ್ಷಃಸ್ಥಲಸ್ಥಾನೇ ಮುಖೇ ದೇವೀ ಸರಸ್ವತೀ ॥ ೨೩ ॥

---

೧೭. ಶ್ರೀಕೃಷ್ಣನು ಹೇಳುತ್ತಾನೆ:—ಗೋಪಿಯರೆ! ನಿಮ್ಮ ಮನೋಭೀಷ್ಟವನ್ನು ಬೇಡಿಕೊಳ್ಳಿರಿ, ನೀವು ಭಕ್ತಿಯಿಂದ ಇಲ್ಲಿ ಬಂದಿರುವಿರಿ. ಆದ್ದರಿಂದ ನಾನು ನಿಮಗೆ ಕೊಡದಿರುವುದಾವುದೂ ಇರುವುದಿಲ್ಲ.

೧೮–೨೧. ಗೋಪಿಯರುಹೇಳುತ್ತಾರೆ :—ಪೂಜ್ಯನೆ! ನೀನು ಸಂತುಷ್ಟನಾಗಿದ್ದರೆ ನಮಗೆ ವರವನ್ನೀಯುವುದಾದರೆ ನೀನು ಯಾವಾಗಲೂ ಮನುಷ್ಯಯಾನದಿಂದ ಶ್ರಾವಣಮಾಸದಲ್ಲಿ ಇಲ್ಲಿಗೆ ಬಂದು ನಿಯಮದಿಂದ ಸ್ನಾನಮಾಡಬೇಕು. ನೀನಿರುವ ಸ್ಥಳದಲ್ಲಿ ದೇವತೆ, ಯಜ್ಞ, ತೀರ್ಥ, ದಾನ, ವ್ರತ, ನಿಯಮ, ಓಂಕಾರ, ವಷಟ್ಕಾರ, ಸ್ವಾಹಾ, ಸ್ವಧಾಕಾರಗಳು, ಭೂಃ, ಭುವಃ, ಸ್ವಃ, ಮಹರ್ಲೋಕಗಳು, ಜನ, ಸತ್ಯ, ತಪೋಲೋಕಗಳು ಇರುವುವು, ದೇವ, ದಾನವ, ಮನುಷ್ಯರಿಂದ ಸಹಿತವಾದ ಸಮಸ್ತ ಜಗತ್ತೂ ನಿನ್ನ ರೂಪವೇ ಆಗಿರುವುದು.

೨೨. ಆದ್ದರಿಂದ ಜಗದೊಡೆಯನಾದ ನೀನು ಇಲ್ಲಿ ಮಿಂದರೆ ಮೂರುಲೋಕಗಳೂ ನಿಜವಾಗಿಯೂ ಮಿಂದಂತಾಗುವುವು.

೨೩. ಜಗದೊಡೆಯನಾದ ಓ ಕೃಷ್ಣ! ಮೂರು ಲೋಕಗಳನ್ನು ಪವಿತ್ರಗೊಳಿಸುವ ಗಂಗೆಯು ನಿನ್ನ ಪಾದ ಜಲವಾಗಿರುವುದು. ನಿನ್ನ ಎದೆಯಲ್ಲಿ ಲಕ್ಷ್ಮಿಯಿರುವಳು. ಮುಖದಲ್ಲಿ ಸರಸ್ವತಿಯು ವಾಸವಾಗಿರುವಳು.

ಸರ್ವಭೂತಮಯಶ್ಚಾತ್ರ ತತಸ್ತ್ವಂ ಜಗದೀಶ್ವರ ।
ಯದ್ದದಾಸಿ ಮನುಷ್ಯಾಣಾಂ ಭವಿಷ್ಯಾಣಾಂ ಕಲೌ ಯುಗೇ ।
ತದ್ವದಸ್ವ ಮಹಾಬಾಹೋ ಕೃಪಾಂ ಕೃತ್ವಾ ಜಗತ್ಪತೇ ॥ ೨೪ ॥
ಯಾತ್ರಾಯಾಮಾಗತಾನಾಂ ಚ ಅಥ ಷಣ್ಮಾಸವಾಸಿನಾಂ ।
ಸದೈವಾತ್ರ ಸ್ಥಿತಾನಾಂ ಚ ಯತ್ಫಲಂ ತದ್ವದಸ್ವ ನಃ ॥ ೨೫ ॥
ಶ್ರೀ ಕೃಷ್ಣ ಉವಾಚ :
ಯತ್ಫಲಂ ಹಿ ಮನುಷ್ಯಾಣಾಂ ಸ್ನಾತಾನಾಂ ಗೋಪಿಕಾಸರೇ ।
ತಚ್ಛೃಣುಧ್ವಮಸಂದಿಗ್ಧಂ ಪ್ರಸನ್ನೇ ಮಯಿ ಗೋಪಿಕಾಃ ॥ ೨೬ ॥
ಸೋಪಸ್ಕರಾಂ ಸವತ್ಸಾಂ ಚ ವಸ್ತ್ರಾಲಂಕಾರಭೂಷಿತಾಂ ।
ಯಥೋಕ್ತದಕ್ಷಿಣೋಪೇತಾಂ ಬ್ರಾಹ್ಮಣಾಯ ಕುಟುಂಬಿನೇ ॥ ೨೭ ॥
ಸದಾಚಾರಾಯ ಶುದ್ಧಾಯ ದರಿದ್ರಾಯಾನುಕಾರಿಣೇ ।
ಗಾಂ ದತ್ವಾ ಫಲಮಾಪ್ನೋತಿ ಸ್ನಾನಮಾತ್ರೇಣ ತತ್ಫಲಂ ॥ ೨೮ ॥
ಯಾವತ್ಪದಾನಿ ಮನುಜಃ ಕೃಷ್ಣೇನ ಸಹ ಗಚ್ಛತಿ ।
ಕುಲಾನಿ ದೇವ್ಯಸ್ತಾವಂತಿ ವಸಂತಿ ಹರಿಮಂದಿರೇ ॥ ೨೯ ॥
ಕೃಷ್ಣೇನ ಸಹ ಗಚ್ಛಂತಿ ಗೀತವಾದಿತ್ರನಿಸ್ವನೈಃ ।
ಸ್ತುವಂತೋ ವಿವಿಧೈಃ ಸ್ತೋತ್ರೈರ್ಗೋವಿಂದಂ ಗೋಪಿಕಾಸರೇ ॥ ೩೦ ॥

---

೨೪. ಆದ್ದರಿಂದ ನೀನು ಸಕಲ ಪ್ರಾಣಿ ಸ್ವರೂಪನಾಗಿರುವೆ. ನೀನು ಕಲಿಯುಗದಲ್ಲಿ ಮುಂದಿನ ಜನರಿಗೆ ಏನನ್ನು ಕೊಡುವೆ ಎಂಬುದನ್ನು ದಯೆಯಿಂದ ನಮಗೆ ಹೇಳು.

೨೫. ಇಲ್ಲಿ ಯಾತ್ರೆ ಮಾಡಿದವರಿಗೂ, ಆರುತಿಂಗಳು ಕಾಲ ಇಲ್ಲಿ ವಾಸಿಸಿದವರಿಗೂ, ಯಾವಾಗಲೂ ಇಲ್ಲಿ ವಾಸಮಾಡುತ್ತಿರುವರಿಗೂ ದೊರಕುವ ಫಲವನ್ನು ನಮಗೆ ಹೇಳು.

೨೬. ಶ್ರೀ ಕೃಷ್ಣನು ಹೇಳುತ್ತಾನೆ :—ಗೋಪಿಯರೆ ! ಗೋಪಿಕಾ ಸರೋವರದಲ್ಲಿ ಮಿಂದವರಿಗೆ ನಾನು ಪ್ರಸನ್ನನಾದರೆ ಉಂಟಾಗುವ ಫಲವನ್ನು ಕೇಳಿರಿ.

೨೭–೨೮. ಇಲ್ಲಿ ಸ್ನಾನಮಾಡುವುದರಿಂದ ಸಕಲ ಸಾಮಗ್ರಿ, ಕರು, ವಸ್ತ್ರ ಒಡವೆ. ದಕ್ಷಿಣೆ ಇವುಗಳಿಂದ ಕೂಡಿರುವ ಗೋವನ್ನು ಸದಾಚಾರನೂ, ಶುದ್ಧನೂ, ಬಡವನೂ, ಸದನುಷ್ಠಾನ ಮಾಡುವವನೂ ಆದ ಬ್ರಾಹ್ಮಣನಿಗೆ ದಾನಮಾಡಿದ ಪುಣ್ಯವು ಲಭಿಸುವುದು.

೨೯. ಗೋಪಿಯರೆ! ಮನುಷ್ಯನು ಕೃಷ್ಣನೊಡನೆ ಎಷ್ಟು ಹೆಜ್ಜೆ ಹೋಗುವನೋ ಅವನ ಅಷ್ಟು ಕುಲಗಳು ವೈಕುಂಠದಲ್ಲಿ ವಾಸಿಸುವುದು.

೩೦–೩೧. ಗೀತ, ವಾದ್ಯ ಧ್ವನಿಗಳಿಂದಲೂ, ನಾನಾವಿಧ ಸ್ತೋತ್ರಗಳಿಂದ ಕೃಷ್ಣನನ್ನು ಸ್ತುತಿಸುವುದರೊಂದಿಗೆ ಕೃಷ್ಣನೊಡನೆ ಗೋಪೀಸರೋವರಕ್ಕೆ ಹೋಗುವ

ನ ಮಾತುರ್ಜಠರೇ ತೇಷಾಂ ಯಾತನಾ ಜಾಯತೇ ನೃಣಾಂ ।
ಸರ್ವಾನ್ಕಾಮಾನವಾಪ್ಯಾಂತೇ ವೈಷ್ಣವಂ ಲೋಕಮಾಪ್ನುಯುಃ ॥ ೩೧ ॥
ಅರ್ಘ್ಯಂ ದತ್ವಾ ವಿಧಾನೇನ ಸ್ನಾನಂ ಕುರ್ಯಾದ್ದ್ವಿಚಕ್ಷಣಃ ।
ಮಂತ್ರೇಣಾನೇನ ವೈ ಸಾಧ್ವ್ಯಿ ಶ್ರದ್ಧಯಾ ಪರಯಾ ಯುತಃ ॥ ೩೨ ॥
ನಮಸ್ತೇ ಗೋಪರೂಪಾಯ ವಿಷ್ಣವೇ ಪರಮಾತ್ಮನೇ ।
ಗೋಪ್ರಚಾರೇ ಜಗನ್ನಾಥ ಗೃಹಾಣಾರ್ಘ್ಯಂ ನಮೋಽಸ್ತುತೇ ॥ ೩೩ ॥
ಅರ್ಘ್ಯಂ ದತ್ವಾ ವಿಧಾನೇನ ಮೃದಮಾಲಿಪ್ಯ ಪಾಣಿನಾ ।
ಸ್ನಾಯಾಚ್ಛ್ರದ್ಧಾಸಮಾಯುಕ್ತಸ್ತರ್ಪಯೇತ್ಪಿತೃದೇವತಾಃ ॥ ೩೪ ॥
ಶ್ರಾದ್ಧಂ ಕುರ್ಯಾತ್ತತೋ ಭಕ್ತ್ಯಾ ಏಕಚಿತ್ತಃ ಸಮಾಹಿತಃ ।
ಯಥೋಕ್ತಂ ದಕ್ಷಿಣಾಂ ದದ್ಯಾದ್ರಜತಂ ರುಕ್ಮಮೇವ ಚ ॥ ೩೫ ॥
ವಿಶೇಷತಃ ಪ್ರದಾತವ್ಯಂ ತಾಂಬೂಲಂ ಕಜ್ಜಲಂ ತಥಾ ।
ದುಕೂಲಾನಿ ಚ ದೇಯಾನಿ ತಥಾ ಕೌಸುಂಭಕಾನಿ ಚ ॥ ೩೬ ॥
ದಂಪತ್ಯೋರ್ವಾಸಸೀ ಚೈವ ಭೂಷಣಾನಿ ಸ್ವಶಕ್ತಿತಃ ।
ಗಾವೋ ದೇಯಾ ದ್ವಿಜಾತಿಭ್ಯೋ ವೃಷಭಾಶ್ಚ ದುರಂಧರಾಃ ।
ದೀನಾಂಧಕೃಪಣಾನಾಂ ಚ ದಾನಂ ದೇಯಂ ಸ್ವಶಕ್ತಿತಃ ॥ ೩೭ ॥

---

ಮಾನವರಿಗೆ ತಾಯಿಯ ಗರ್ಭವಾಸದುಃಖವುಂಟಾಗುವುದಿಲ್ಲ. ಅವರು ಸಕಲೇಷ್ಟಾರ್ಥಗಳನ್ನು ಪಡೆದು ವಿಷ್ಣುಲೋಕಕ್ಕೆ ತೆರಳುವರು.

೩೨. ಪ್ರಾಜ್ಞನು ಇಲ್ಲಿ ವಿಧಿಯಂತೆ ಮಿಂದು ಅತಿಶಯ ಶ್ರದ್ಧೆಯಿಂದ ಈ ಮಂತ್ರದಿಂದ ಅರ್ಘ್ಯವನ್ನೀಯಬೇಕು.

೩೩. ಗೋಪಾಲರೂಪನಾದ ಕೃಷ್ಣಪರಮಾತ್ಮನೆ! ನಿನಗೆ ನಮಸ್ಕಾರವು. ಜಗನ್ನಾಥ ! ಈ ಗೋಪ್ರಚಾರ ತೀರ್ಥದಲ್ಲಿ ನಾನಿತ್ತ ಅರ್ಘ್ಯವನ್ನು ಸ್ವೀಕರಿಸು.

೩೪. ವಿಧಿಯಂತೆ ಅರ್ಘ್ಯವನ್ನು ಕೊಟ್ಟು ಕೈಗೆ ಮತ್ತಿಕೆಯನ್ನು ಲೇಪನ ಮಾಡಿಕೊಂಡು ಶ್ರದ್ಧೆಯಿಂದ ಮಿಂದು ಪಿತೃದೇವತೆಗಳಿಗೆ ತರ್ಪಣ ಮಾಡಬೇಕು.

೩೫. ಬಳಿಕ ಒಮ್ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಶ್ರಾದ್ಧಗೈದು ವಿಧಿಯಂತೆ ಸುವರ್ಣ, ರಜತ ದಕ್ಷಿಣೆಯನ್ನು ಕೊಡಬೇಕು.

೩೬–೩೭. ದಂಪತಿಗಳಿಗೆ ತಾಂಬೂಲ, ಕಾಡಿಗೆ, ಹಳದಿಬಣ್ಣದ ದುಕೂಲ, ಒಡವೆ ಇವುಗಳನ್ನು ಶಕ್ತ್ಯನುಸಾರ ಕೊಡಬೇಕು. ಬ್ರಾಹ್ಮಣರಿಗೆ ಗೋವು, ಗಾಡಿಯನ್ನು ಎಳೆಯುವ ಎತ್ತುಗಳು ಇವುಗಳನ್ನೀಯಬೇಕು. ದೀನ, ಕುರುಡ ಕೃಪಣರಿಗೆ ಶಕ್ತ್ಯನುಸಾರ ದಾನಮಾಡಬೇಕು.

ಏವಂ ಕೃತ್ವಾ ನರಃ ಸಮ್ಯಗುತ್ತಮಾಂ ಗತಿಮಾಪ್ನುಯಾತ್ ।
ಪ್ರಯಾಂತಿ ಪರಮಂ ಲೋಕಂ ಪಿತರಸ್ತ್ರಿಕುಲೋದ್ಭವಾಃ ॥ ೩೮ ॥
ಲಭತೇ ಪುತ್ರಕಾಮಸ್ತು ಪುತ್ರಾನಿಷ್ಟಾನ್ಮನೋರಮಾನ್ ॥ ೩೯ ॥
ಯಂ ಯಂ ಕಾಮಯತೇ ಕಾಮಂ ಸ್ವರ್ಗಮೋಕ್ಷಾದಿಕಂ ನರಃ ।
ತತ್ಸರ್ವಂ ಸಮವಾಪ್ನೋತಿ ಯಃ ಸ್ನಾತಿ ಗೋಪಿಕಾಸರೇ ॥ ೪೦ ॥
ಯಾವಲ್ಲೋಕಾ ಭವಿಷ್ಯಂತಿ ತಾವತ್ಸ್ಥಾಸ್ಯತಿ ವೈ ಸರಃ ।
ಯಾವತ್ಸರೋ ಯಶಸಾ ವದ್ಭವತೀನಾಂ ಭವಿಷ್ಯತಿ ॥ ೪೧ ॥
ಯಾವತ್ಕೀರ್ತಿರ್ಮನುಷ್ಯೇಷು ತಾವತ್ಸ್ವರ್ಗೇ ಮಹೀಯತೇ ।
ವಿಮುಕ್ತಾಃ ಸಕಲಾತ್ಪಾಪಾದ್ಯಾಸ್ಯಂತಿ ಪರಮಾಂ ಗತಿಂ ॥ ೪೨ ॥
ತತ್ಪುಣ್ಯಂ ಗೋಪೀಸರ ಇದಂ ಜಲೈಃ ಪೂರ್ಣಂ ಸದೈವ ಹಿ ।
ಅವಗಾಹ್ಯಂ ಮಯಾ ಗೋಪ್ಯೋ ನಭಸ್ಯೇ ನಿಯಮೇನ ಹಿ ॥ ೪೩ ॥
ಭವತ್ಯಃ ಪತಿಭಾವೇನ ಬ್ರಹ್ಮಭಾವೇನ ವಾ ಪುನಃ ।
ಚಿಂತಯಂತಃ ಪರಂ ಮಾಂ ಹಿ ಪರಾಂ ಗತಿಮವಾಪ್ಸ್ಯಥ ॥ ೪೪ ॥

---

೩೮. ಹೀಗೆ ಮಾಡಿದ ಮಾನವನು ಉತ್ತಮ ಗತಿಯನ್ನು ಪಡೆಯುವನು. ಅವನ ಮೂರು ಕುಲದ ಪಿತೃಗಳು ಉತ್ತಮ ಲೋಕವನ್ನು ಹೊಂದುವರು.

೩೯. ಪುತ್ರರನ್ನು ಬಯಸುವವನು ಚೆನ್ನಾಗಿರುವ ಪ್ರಿಯ ಪುತ್ರರನ್ನು ಪಡೆಯುವನು.

೪೦. ಈ ಗೋಪಿಕಾ ಸರೋವರದಲ್ಲಿ ಮಿಂದ ಮಾನವನು ತಾನು ಬಯಸಿದ ಸ್ವರ್ಗ ಮೋಕ್ಷಾದಿ ಸಮಸ್ತೇಷ್ಟಾರ್ಥಗಳನ್ನೂ ಹೊಂದುವನು.

೪೧. ಈ ಲೋಕಗಳಿರುವವರೆಗೆ ಈ ಸರೋವರವು ಇರುವುದು. ಈ ಸರೋವರವಿರುವವರೆಗೆ ನಿಮ್ಮ ಕೀರ್ತಿಯು ಬೆಳಗುವುದು.

೪೨. ಕೀರ್ತಿಯು ಭೂಲೋಕದಲ್ಲಿರುವವರೆಗಿದ್ದು ಆ ಮೇಲೆ ಸಕಲ ಪಾಪ ಮುಕ್ತರಾಗಿ ನೀವು ಸ್ವರ್ಗದಲ್ಲಿ ಪೂಜ್ಯರಾಗಿ ಉತ್ತಮ ಗತಿಯನ್ನು ಹೊಂದುವಿರಿ.

೪೩. ಗೋಪಿಯರೆ ! ಆದ್ದರಿಂದ ಯಾವಾಗಲೂ ನೀರು ತುಂಬಿರುವ ಪುಣ್ಯಕರವಾದ ಈ ಗೋಪೀ ಸರೋವರದಲ್ಲಿ ಶ್ರಾವಣ ಮಾಸದಲ್ಲಿ ನಾನು ನಿಮ್ಮೊಡನೆ ನಿಯಮದಿಂದ ಸ್ನಾನಮಾಡಬೇಕು.

೪೪. ನೀವು ನನ್ನನ್ನು ಪತಿಭಾವನೆಯಿಂದಲೂ, ಬ್ರಹ್ಮ ಭಾವನೆಯಿಂದಲೂ ಧ್ಯಾನಿಸುತ್ತ ಉತ್ತಮ ಗತಿಯನ್ನು ಹೊಂದುವಿರಿ.

ಪ್ರಹ್ಲಾದ ಉವಾಚ :—

ಅನುಜ್ಞಾತಾ ಭಗವತಾ ತತಸ್ತಾ ಗೋಪಕನ್ಯಕಾಃ ।
ನಮಸ್ಕೃತ್ಯ ಚ ಗೋವಿಂದಂ ಯಯುಃ ಸರ್ವಾ ಯಥಾಗತಾಃ ॥ ೪೫ ॥
ಭಗವಾನಪಿ ಗೋವಿಂದ ಉದ್ಧವೇನ ಸಮನ್ವಿತಃ ।
ವಿಸೃಜ್ಯ ಗೋಪಿಕಾಃ ಕೃಷ್ಣಃ ಸ್ವಕಂ ಮಂದಿರಮಾವಿಶತ್ ॥ ೪೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಗೋಪೀಸರಸ್ತೀರ್ಥವರ್ಣನಂನಾಮ
ತ್ರಯೋದಶೋಽಧ್ಯಾಯಃ

---

೪೫. ಪ್ರಹ್ಲಾದನು ಹೇಳುತ್ತಾನೆ:—ಬಳಿಕ ಆ ಗೋಪಾಂಗನೆಯರು ಶ್ರೀಕೃಷ್ಣನ ಅನುಮತಿಯನ್ನು ಪಡೆದು ಅವನನ್ನು ವಂದಿಸಿ ಎಲ್ಲರೂ ತಮ್ಮ ಮನೆಗೆ ತೆರಳಿದರು.

೪೬. ಪೂಜ್ಯನಾದಕೃಷ್ಣನೂ ಆ ಗೋಪಿಯರನ್ನು ಕೊಟ್ಟುತಾನು ಕಳುಹಿಸಿ ಉದ್ಧವನೊಡನೆ ತನ್ನ ಮನೆಯನ್ನು ಹೊಕ್ಕನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಗೋಪೀಸರಸ್ತೀರ್ಥವರ್ಣನವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಚತುರ್ದಶೋಽಧ್ಯಾಯಃ

## ಪಂಚನದತೀರ್ಥಮಾಹಾತ್ಮ್ಯವರ್ಣನಂ

ಶ್ರೀ ಪ್ರಹ್ಲಾದ **ಉವಾಚ** :—

ಸಂತ್ಯನೇಕಾನಿ ತೀರ್ಥಾನಿ ಬಹ್ವಾಶ್ಚರ್ಯಕರಾಣಿ ಚ ।
ಪ್ರಾಪ್ತೇ ಕಲಿಯುಗೇ ಘೋರೇ ತಾನಿ ಪುಪ್ಲುರಿರೇಽರ್ಣವೇ ॥ ೧ ॥
ಉದ್ದೇಶತೋ ಮಯಾ ವಿಪ್ರಾಃ ಕೀರ್ತ್ಯಮಾನಾ ನಿಬೋಧತ ।
ಸಂಕ್ಷೇಪತೋ ವಿಪ್ರವರಾ ಯಥಾ ತೇಷಾಂ ಚ ಯಾಃ ಕ್ರಿಯಾಃ ॥ ೨ ॥
ಸಂಹೃತ್ಯ ಚ ಭುವೋ ಭಾರಂ ಸಾಧೂನ್ಸಂಸ್ಥಾಪ್ಯ ಸತ್ಪಥೇ ।
ದ್ವಾರವತ್ಯಾಮಗಾತ್ಕೃಷ್ಣೋ ವೃಷ್ಣಿಸಂಘೈಃ ಸಮಾವೃತಃ ॥ ೩ ॥
ದರ್ಶನಾರ್ಥಂ ತದಾ ಬ್ರಹ್ಮಾ ದೈವತೈಃ ಪರಿವಾರಿತಃ ।
ವರುಣೋ ಯಮವಿತ್ತೇಶೌ ಸೂರ್ಯಾಚಂದ್ರಮಸೌ ತಥಾ ॥ ೪ ॥
ಆಗತ್ಯ ಸಹ ಕೃಷ್ಣೇನ ಕಾರ್ಯಂ ಸಂಸಾಧ್ಯ ಚಾತ್ಮನಃ ।
ವೇಧಾಶ್ಚಕ್ರೇ ತದಾ ತೀರ್ಥಂ ಸ್ವನಾಮ್ನಾ ಕೀರ್ತಿತಂ ಭುವಿ ॥ ೫ ॥

---

### ಕನ್ನಡದ ಅನುವಾದ

### ಪಂಚನದತೀರ್ಥಮಾಹಾತ್ಮ್ಯವರ್ಣನ

೧. ಶ್ರೀ ಪ್ರಹ್ಲಾದನು ಹೇಳುತ್ತಾನೆ:—ಘೋರ ಕಲಿಯುಗದಲ್ಲಿ ಆಶ್ಚರ್ಯಕರವಾದ ಅನೇಕ ತೀರ್ಥಗಳು ಸಮುದ್ರದಲ್ಲಿ ಮುಳುಗಿ ಹೋದುವು.

೨. ವಿಪ್ರೋತ್ತಮರೆ! ನಾನು ಸಂಕ್ಷೇಪವಾಗಿ ಹೇಳುವ ಆ ತೀರ್ಥಗಳನ್ನೂ, ಅವುಗಳಲ್ಲಿ ಮಾಡಲರ್ಹವಾದ ಕಾರ್ಯಗಳನ್ನೂ ತಿಳಿಯಿರಿ.

೩. ಕೃಷ್ಣನು ಭೂಭಾರವನ್ನು ಇಳಿಸಿ ಸಜ್ಜನರನ್ನು ಸನ್ಮಾರ್ಗದಲ್ಲಿರಿಸಿ ಯಾದವರೊಡನೆ ದ್ವಾರವತಿಗೆ ಹೋದನು.

೪. ಆಗ ಅವನನ್ನು ನೋಡಲು ದೇವತೆಗಳೊಡನೆ ಬ್ರಹ್ಮನೂ ವರುಣ, ಯಮ, ಕುಬೇರ, ಸೂರ್ಯ, ಚಂದ್ರರೂ ಅಲ್ಲಿಗೆ ಬಂದರು.

೫–೬. ಬ್ರಹ್ಮನು ಕೃಷ್ಣನಿಂದ ತನ್ನ ಕಾರ್ಯವನ್ನು ನೆರವೇರಿಸಿಕೊಂಡು ತನ್ನ ಹೆಸರಿನಿಂದ ಪ್ರಸಿದ್ಧವಾದ ಒಂದು ತೀರ್ಥವನ್ನು ನಿರ್ಮಿಸಿ ಸಕಲ ಪಾಪಗಳನ್ನೂ ನಿವಾರಿಸುವ ಆ ಬ್ರಹ್ಮಕುಂಡದ ದಡದಲ್ಲಿ ಸೂರ್ಯನನ್ನು ಪ್ರತಿಷ್ಠೆಮಾಡಿದನು.

ಬ್ರಹ್ಮಕುಂಡಮಿತಿ ಖ್ಯಾತಂ ಸರ್ವಪಾಪಹರಂ ಶುಭಂ ।
ತತ್ತೀರೇ ಸ್ಥಾಪಯಾಮಾಸ ಸಹಸ್ರಕಿರಣಂ ಪ್ರಭುಂ ॥ ೬ ॥
ಮೂಲಂ ಸುರಾಣಾಂ ಹಿ ಕಿಲ ಬ್ರಹ್ಮಾ ಲೋಕಪಿತಾಮಹಃ ।
ತೇನ ಸಂಸ್ಥಾಪಿತಂ ಯಸ್ಮಾನ್ಮೂಲಸ್ಥಾನಮಿತಿ ಸ್ಮೃತಂ ॥ ೭ ॥
ಬ್ರಹ್ಮತೀರ್ಥಂ ತು ತದ್ದೃಷ್ಟ್ವಾ ಚಂದ್ರಶ್ಚಕ್ರೇ ತತಃ ಸರಃ ।
ತಡಾಗಂ ಚಂದ್ರನಾಮ್ನಾ ವೈ ಸರ್ವಪಾಪಪ್ರಣಾಶನಂ ॥ ೮ ॥
ತಂ ದೃಷ್ಟ್ವಾ ತೇಜಸಾ ಯುಕ್ತಂ ಸಂಹೃಷ್ಟಾಃ ಸುರಸತ್ತಮಾಃ ।
ಊಚುಸ್ತೇ ಲೋಕಸ್ರಷ್ಟಾರಂ ಶೃಣುಷ್ವ ವಚನಂ ಹಿ ನಃ ॥ ೯ ॥
ಯೋಽತ್ರ ಸ್ನಾನಂ ಪ್ರಕುರುತೇ ಪಿತೄನ್ಸಂತರ್ಪಯಿಷ್ಯತಿ ।
ಪೂಜಯಿಷ್ಯತಿ ದೇವೇಶಂ ಮೂಲಸ್ಥಾನಂ ಸುರರ್ಷಭ ॥ ೧೦ ॥
ಸರ್ವಪಾಪವಿನಿರ್ಮುಕ್ತೋ ಧನಧಾನ್ಯಸಮನ್ವಿತಃ ।
ಸಪ್ತಮ್ಯಾಂ ಮಾಘಮಾಸಸ್ಯ ಶುಕ್ಲಪಕ್ಷೇ ದ್ವಿಜರ್ಷಭಾಃ ।
ಯೋಽತ್ರ ಸ್ನಾನಂ ಪ್ರಕುರುತೇ ಮಾನವೋ ಭಕ್ತಿಸಂಯುತಃ ॥ ೧೧ ॥
ಮೂಲಸ್ಥಾನಂ ಚ ದೇವೇಶಂ ಸಂಸ್ನಾಪ್ಯ ಪ್ರವಿಲೇಪಯೇತ್ ।
ಪೂಜಯಿಷ್ಯತಿ ವಸ್ತ್ರಾದ್ಯೈಃ ಸ್ವಶಕ್ತ್ಯಾ ಭೂಷಣೈಸ್ತಥಾ ॥ ೧೨ ॥
ಪುಷ್ಪಧೂಪಾದಿಭಿಶ್ಚೈವ ನೈವೇದ್ಯೇನ ಚ ಮಾನವಃ ।
ಸರ್ವಾನ್ಕಾಮಾನವಾಪ್ನೋತಿ ಬ್ರಹ್ಮಲೋಕಂ ಸ ಗಚ್ಛತಿ ॥ ೧೩ ॥

---

೭. ಲೋಕ ಪಿತಾಮಹನಾದ ಬ್ರಹ್ಮನು ಸಕಲ ದೇವತೆಗಳಿಗೆ ಕಾರಣನಷ್ಟೆ. ಅವನು ಆ ಕುಂಡವನ್ನು ಸ್ಥಾಪಿಸಿರುವುದರಿಂದ ಅದು ಮೂಲಸ್ಥಾನವೆಂದು ವಿಖ್ಯಾತವಾಗಿರುವುದು.

೮. ತರುವಾಯ ಚಂದ್ರನು ಆ ಬ್ರಹ್ಮತೀರ್ಥವನ್ನು ಕಂಡು ತನ್ನ ಹೆಸರಿನಿಂದ ಸಕಲ ಪಾಪವನ್ನು ನೀಗಿಸುವ ಒಂದು ಸರೋವರವನ್ನು ನಿರ್ಮಿಸಿದನು.

೯. ಸುರವರ್ಯರು ತೇಜಸ್ಸಿನಿಂದ ಕೂಡಿರುವ ಅದನ್ನು ಕಂಡು ಸಂತೋಷದಿಂದ ಬ್ರಹ್ಮನನ್ನು ಕುರಿತು ನೀನು ನಮ್ಮ ಮಾತನ್ನು ಕೇಳೆಂದರು.

೧೦–೧೩. "ಪಿತಾಮಹ! ಇಲ್ಲಿ ಮಿಂದು ಪಿತೃಗಳಿಗೆ ತರ್ಪಣಗೈದು ಮೂಲಸ್ಥಾನದಲ್ಲಿರುವ ಸೂರ್ಯನನ್ನು ಪೂಜಿಸಿದವನು ಸಮಸ್ತ ಪಾಪಮುಕ್ತನೂ, ಧನ, ಧಾನ್ಯಗಳಿಂದ ಕೂಡಿದವನೂ ಆಗುವನು. ದ್ವಿಜೋತ್ತಮರೆ! ಮಾಘಶುಕ್ಲ ಸಪ್ತಮಿಯಾದಿನ ಇಲ್ಲಿ ಭಕ್ತಿಯಿಂದ ಮಿಂದು ಮೂಲ ಸ್ಥಾನದಲ್ಲಿರುವ ಸೂರ್ಯನಿಗೆ ಅಭಿಷೇಕಮಾಡಿ ಗಂಧವನ್ನು ಹಚ್ಚಿ ತನ್ನ ಶಕ್ತ್ಯನುಸಾರ ವಸ್ತ್ರ, ಒಡವೆ, ಪುಷ್ಪ, ಧೂಪ, ನೈವೇದ್ಯಗಳಿಂದ ಪೂಜಿಸುವ ಮನುಷ್ಯನು ಸಕಲೇಷ್ಟಾರ್ಥಗಳನ್ನು ಪಡೆದು ಬ್ರಹ್ಮಲೋಕಕ್ಕೆ ಹೋಗುವನು.

ಸಾವಿತ್ರೀಂ ಚ ತತೋ ದೃಷ್ಟ್ವಾ ಬ್ರಹ್ಮಣಾ ಸ್ಥಾಪಿತಾಂ ಚ ವೈ ।
ಕೃತ್ವಾ ಚಾಯತನಂ ದಿವ್ಯಂ ಸ್ವಾಂ ಮೂರ್ತಿಂ ಸನ್ನಿವೇಶ್ಯ ಚ ।
ನಾಮ ಚಕ್ರೇ ತದಾ ದೇವ್ಯಾಃ ಸ್ವಯಂ ತಸ್ಯಾಃ ಪಿತಾಮಹಃ ॥ ೧೪ ॥
ಯಃ ಪಶ್ಯತಿ ಸ್ವಯಂ ಭಕ್ತ್ಯಾ ಕೃಷ್ಣಂ ದೃಷ್ಟ್ವಾ ಜಗತ್ಪತಿಂ ।
ಸಾವಿತ್ರೀಂ ಸಸುಖೀ ಭೂತ್ವಾ ಸರ್ವಾನ್ಕಾಮಾನವಾಪ್ನುಯಾತ್ ॥ ೧೫ ॥
ಆಯುರಾರೋಗ್ಯಮೈಶ್ವರ್ಯಂ ಪುತ್ರಸಂತಾನಮೇವ ಚ ।
ನ ದೌರ್ಭಾಗ್ಯಂ ಭವೇತ್ತಸ್ಯ ನ ದಾರಿದ್ರ್ಯಂ ನ ಮೂರ್ಖತಾ ।
ನ ಚ ವ್ಯಾಧಿಭಯಂ ತಸ್ಯ ಯಃ ಪಶ್ಯತಿ ವಿಧಿಂ ನರಃ ॥ ೧೬ ॥
ಗತ್ವಾ ಸಂಸ್ನಾಪಯೇದ್ದೇವೀಂ ಕುಂಕುಮೇನ ಕುಸುಂಭಕೈಃ ।
ಸಂಛಾದ್ಯ ವಿಸ್ತ್ರೈಃ ಸಂಪೂಜ್ಯ ಪುಷ್ಪೈರ್ನಾನಾವಿಧೈಸ್ತಥಾ ॥ ೧೭ ॥
ನೈವೇದ್ಯಫಲತಾಂಬೂಲಗ್ರೀವಾಸೂತ್ರಕದೀಪಕೈಃ ।
ಸಂಪೂಜ್ಯ ಪರಯಾ ಭಕ್ತ್ಯಾ ಯಾತ್ರಾಂ ಚ ಸಫಲಾಂ ಲಭೇತ್ ॥ ೧೮ ॥
ನ ವೈಧವ್ಯಂ ನ ದೌರ್ಭಾಗ್ಯಂ ನ ವಂಧ್ಯಾ ನ ಮೃತಪ್ರಜಾ ।
ವಿಧಿರ್ದೃಷ್ಟೋ ನರೈರ್ಯೈಸ್ತು ಕುಲೇ ತೇಷಾಂ ಪ್ರಜಾಯತೇ ॥ ೧೯ ॥

---

೧೪. ಬ್ರಹ್ಮನು ತಾನು ಸ್ಥಾಪಿಸಿರುವ ಸಾವಿತ್ರಿಯನ್ನು ನೋಡಿ ಆವಳಿಗೆ ದಿವ್ಯಾಲಯವನ್ನು ನಿರ್ಮಿಸಿ ಅಲ್ಲಿ ತನ್ನ ಮೂರ್ತಿಯನ್ನು ಇಟ್ಟು ಆವಳಿಗೆ ತಾನೇ ಹೆಸರನ್ನಿಟ್ಟನು.

೧೫. ಭಕ್ತಿಯಿಂದ ಜಗದೊಡೆಯನಾದ ಕೃಷ್ಣನನ್ನು ಮೊದಲು ನೋಡಿ ಅನಂತರ ಸಾವಿತ್ರಿಯನ್ನು ದರ್ಶನಮಾಡಿದವನು ಸಕಲೇಷ್ಟಾರ್ಥಗಳನು ಪಡೆಯುವನು.

೧೬. ಬ್ರಹ್ಮನನ್ನು ದರ್ಶನಮಾಡಿದ ಮಾನವನಿಗೆ ಆಯುಸ್ಸು, ಆರೋಗ್ಯ, ಐಶ್ವರ್ಯ, ಪುತ್ರಸಂತತಿಗಳಾಗುವುವು. ಅವನಿಗೆ ದೌರ್ಭಾಗ್ಯ, ಬಡತನ, ಮೂರ್ಖತ್ವ, ರೋಗ ಇವುಗಳ ಭಯಗಳುಂಟಾಗುವುದಿಲ್ಲ.

೧೭-೧೮. ಸಾವಿತ್ರಿಯೆಡೆಗೆ ಹೋಗಿ ಆವಳಿಗೆ ಕುಂಕುಮ, ಅರಸಿನಗಳಿಂದ ಸ್ನಾನಮಾಡಿಸಿ ವಸ್ತ್ರವನ್ನು ಹೊದ್ದಿಸಿ ನಾನಾ ಬಗೆಯ ಪುಷ್ಪಗಳಿಂದಲೂ, ನೈವೇದ್ಯ, ಫಲ, ತಾಂಬೂಲ, ಮಾಂಗಲ್ಯ, ದೀಪಗಳಿಂದಲೂ ಭಕ್ತಿಯಿಂದ ಪೂಜಿಸಿದರೆ ಯಾತ್ರೆಯು ಸಫಲವಾಗುವುದು.

೧೯. ಬ್ರಹ್ಮನನ್ನು ನೋಡಿದ ಮಾನವನ ವಂಶದಲ್ಲಿ ಹೆಂಗಸು ವಿಧವೆ, ದುರ್ಭಗೆ, ಬಂಜೆ, ಮೃತರಾದ ಮಕ್ಕಳುಳ್ಳವಳು ಆಗುವುದಿಲ್ಲ.

ತಸ್ಮಾತ್ಸರ್ವಪ್ರಯತ್ನೇನ ವಿಧಿಂ ಪಶ್ಯೇತ್ಸುಭಾವತಃ ।
ಪರಿತುಷ್ಟೋ ಭವೇತ್ಕೃಷ್ಣೋ ಯಾತ್ರಾ ಚ ಸಫಲಾ ಭವೇತ್ ॥ ೨೦ ॥
ಪ್ರಹ್ಲಾದ ಉವಾಚ :—
ಬ್ರಹ್ಮಣಾ ಸ್ಥಾಪಿತಂ ದೃಷ್ಟ್ವಾ ಸರಃ ಪರಮಶೋಭನಂ ।
ಇಂದ್ರಶ್ಚಕ್ರೇ ಮಹಾಭಾಗಃ ಸರಃ ಪರಮಶೋಭನಂ ॥ ೨೧ ॥
ಸ್ಥಾಪಯಾಮಾಸ ದೇವೇಶೋ ಲಿಂಗಮಪ್ರತಿಮೌಜಸಂ ।
ತಸ್ಮಿನ್ಸ್ನಾತ್ವಾ ಚ ಲಭತೇ ಯಸ್ಮಾದಿಂದ್ರಪದಂ ನಃ ॥ ೨೨ ॥
ತಸ್ಮಾದಿಂದ್ರಪದಂ ನಾಮ ಸುಪ್ರಸಿದ್ಧಂ ಧರಾತಲೇ ।
ಇಂದ್ರೇಣ ಸ್ಥಾಪಿತಂ ಲಿಂಗಂ ಯಸ್ಮಾದ್ಭಾವನಯಾ ಸಹ ।
ಪ್ರಸಿದ್ಧಮಿಂದ್ರನಾಮ್ನಾ ವಾ ಇಂದ್ರೇಶ್ವರಮಿತಿ ಸ್ಮೃತಂ ॥ ೨೩ ॥
ಯಸ್ಯ ಪ್ರಸಿದ್ಧಿರತುಲಾ ವೃದ್ಧಿಲಿಂಗಮಿತಿ ದ್ವಿಜಾಃ ।
ಯಸ್ಯ ದರ್ಶನಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೨೪ ॥
ಪಿತ್ರೃಣಾಮಕ್ಷಯಾ ತೃಪ್ತಿರ್ಜಾಯತೇ ದ್ವಿಜಸತ್ತಮಾಃ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಸ್ನಾತ್ವಾ ಚೇಂದ್ರಪದೇ ನರಃ ॥ ೨೫ ॥

---

೨೦. ಆದ್ದರಿಂದ ಪ್ರಯತ್ನಿಸಿ ಭಕ್ತಿಯಿಂದ ಬ್ರಹ್ಮನನ್ನು ನೋಡಬೇಕು. ಅದರಿಂದ ಕೃಷ್ಣನು ಸಂತುಷ್ಟನಾಗುವನು. ಯಾತ್ರೆಯು ಸಫಲವಾಗುವುದು.

೨೧. ಪ್ರಹ್ಲಾದನು ಹೇಳುತ್ತಾನೆ :—ಇಂದ್ರನು, ಬ್ರಹ್ಮನು ಸ್ಥಾಪಿಸಿರುವ ಅತ್ಯಂತ ಮನೋಹರವಾದ ಸರೋವರವನ್ನು ನೋಡಿ ತಾನೂ ಮನೋಹರವಾದ ಸರೋವರವನ್ನು ಸ್ಥಾಪಿಸಿದನು.

೨೨—೨೩. ಅವನು ಅಲ್ಲಿ ಒಂದು ಲಿಂಗವನ್ನು ಪ್ರತಿಷ್ಠೆ ಮಾಡಿರುವನು. ಅಲ್ಲಿ ಮಿಂದ ಮನುಷ್ಯನು ಇಂದ್ರ ಪದವಿಯನ್ನು ಹೊಂದುವನು. ಆದ್ದರಿಂದ ಆ ಕ್ಷೇತ್ರವು ಭೂಮಿಯಲ್ಲಿ ಇಂದ್ರಪದವೆಂದು ವಿಖ್ಯಾತವಾಯಿತು. ಅಲ್ಲಿ ಇಂದ್ರನು ಭಕ್ತಿಯಿಂದ ಲಿಂಗವನ್ನು ಪ್ರತಿಷ್ಠೆ ಮಾಡಿದ ಕಾರಣ ಆ ಲಿಂಗವು ಇಂದ್ರನ ಹೆಸರಿನಿಂದ ಇಂದ್ರೇಶ್ವರನೆಂದು ಪ್ರಸಿದ್ಧಿಗೊಂಡಿತು.

೨೪. ಬಳಿಕ ಅದು ವೃದ್ಧಿಲಿಂಗವೆಂದು ಹೆಚ್ಚಾಗಿ ವಿಖ್ಯಾತವಾಯಿತು. ಅದರ ದರ್ಶನದಿಂದ ಮಾನವನು ಸಕಲ ಪಾಪ ಮುಕ್ತನಾಗುವನು.

೨೫. ದ್ವಿಜವರ್ಯರೇ ! ಅಷ್ಟಮಿ, ಚತುರ್ದಶೀ ದಿನ ಇಂದ್ರಪದದಲ್ಲಿ ಮಿಂದರೆ ಪಿತೃಗಳಿಗೆ ಶಾಶ್ವತ ತೃಪ್ತಿಯುಂಟಾಗುವುದು.

ಇಂದ್ರೇಶ್ವರಂ ಚ ಸಂಪೂಜ್ಯ ಯಾತಿ ಮುಕ್ತಿಪದಂ ನರಃ ।
ವಿಶೇಷತಸ್ತು ಸಂಪೂಜ್ಯೋ ಮಕರಸ್ಥೇ ದಿವಾಕರೇ ॥ ೨೬ ॥
ಉತ್ತರಾಯಣಸಂಕ್ರಾಂತೌ ಲಿಂಗಪೂರಣಕೇನ ಹಿ ।
ಶಿವರಾತ್ರೌ ವಿಶೇಷೇಣ ಸಂಪೂಜ್ಯ ಉಮಯಾ ಸಹ ।
ರಾತ್ರೌ ಜಾಗರಣಂ ಕೃತ್ವಾ ಪರಮಂ ಲೋಕಮಾಪ್ನುಯಾತ್ ॥ ೨೭ ॥
ಪ್ರಹ್ಲಾದ ಉವಾಚ :—
ಬ್ರಹ್ಮತೀರ್ಥಂ ಚ ತದ್ದೃಷ್ಟ್ವಾ ತಥಾ ಶಕ್ರಸರೋಭವಂ ।
ದರ್ಶಯನ್ವಿಷ್ಣುನಾ ಸಾರ್ಧಮೇಕರೂಪತ್ವಮಾಪ್ನುಯಾತ್ ॥ ೨೮ ॥
ಸರಶ್ಚಕಾರ ದೇವೇಶೋ ಭಗವಾನ್ಪಾರ್ವತೀಪತಿಃ ।
ಸುಮೃಷ್ಟನಿರ್ಮಲಜಲಂ ನಲಿನೀದಲಶೋಭಿತಂ ॥ ೨೯ ॥
ಉತ್ಪಲೈಃ ಸರ್ವತಶ್ಛನ್ನಂ ಸರಃ ಸಾರಸಶೋಭಿತಂ ।
ತದಗಾಧಜಲಂ ದೃಷ್ಟ್ವಾ ಸ್ವಯಮೇವ ಪಿನಾಕಧೃಕ್ ।
ಸಬ್ರಹ್ಮವಿಷ್ಣುನಾ ಸಾರ್ಧಂ ಸ್ನಾತಸ್ತತ್ರ ವೃಷಧ್ವಜಃ ॥ ೩೦ ॥
ತೇ ದೇವಾಸ್ತತ್ಸರೋ ದೃಷ್ಟ್ವಾ ಬ್ರಹ್ಮವಿಷ್ಣುಸುರಾಸುರಾಃ ।
ಊಚುಃ ಸರ್ವೇ ಸುಸಂಹೃಷ್ಟಾ ವೀಕ್ಷಂತಃ ಪಾರ್ವತೀಪತಿಂ ॥ ೩೧ ॥

---

೨೬. ಇಂದ್ರೇಶ್ವರನನ್ನು ಪೂಜಿಸಿದರೆ ಮಾನವನು ಮುಕ್ತಿಸ್ಥಾನಕ್ಕೆ ಹೋಗುವನು. ಅದನ್ನು ವಿಶೇಷವಾಗಿ ಸೂರ್ಯನು ಮಕರ ರಾಶಿಯಲ್ಲಿರುವಾಗ ಪೂಜಿಸಬೇಕು.

೨೭. ಉತ್ತರಾಯಣಪುಣ್ಯಕಾಲದಲ್ಲಿಯೂ, ಶಿವರಾತ್ರಿ ದಿನವೂ ಪಾರ್ವತಿಯೊಡನೆ ಇಂದ್ರೇಶ್ವನನ್ನು ಪೂಜಿಸಿ ರಾತ್ರಿ ಜಾಗರಣೆ ಗೈದರೆ ಉತ್ತಮ ಲೋಕವು ಲಭಿಸುವುದು.

೨೮. ಪ್ರಹ್ಲಾದನು ಹೇಳುತ್ತಾನೆ :—ಬ್ರಹ್ಮತೀರ್ಥವನ್ನೂ, ಶಕ್ರಸರೋವರವನ್ನೂ ನೋಡಿದವನು ವಿಷ್ಣುವಿನೊಡನೆ ಐಕ್ಯನಾಗುವನು.

೨೯. ಪೂಜ್ಯನಾದ ಮಹೇಶ್ವರನು ಶುದ್ಧವಾದ ನೀರುಳ್ಳುದೂ, ತಾವರೆ ದಳಗಳಿಂದ ಅಲಂಕಾರಗೊಂಡುದೂ ಆದ ಸರೋವರವನ್ನು ನಿರ್ಮಿಸಿದನು.

೩೦. ಅವನು ಎಲ್ಲೆಡೆಯಲ್ಲಿಯೂ ನೀಲೋತ್ಪಲಗಳಿಂದ ಮುಚ್ಚಿರುವುದೂ, ಸಾರಸಗಳಿಂದ ಪ್ರಕಾಶಗೊಂಡುದೂ, ಆಳವೂ ಆದ ಆ ಸರೋವರವನ್ನು ಕಂಡುತಾನೇ ಬ್ರಹ್ಮ, ವಿಷ್ಣುಗಳೊಡನೆ ಮಿಂದನು.

೩೧. ಬ್ರಹ್ಮ, ವಿಷ್ಣು, ದೇವತೆಗಳು, ಅಸುರರು ಎಲ್ಲರೂ ಆ ಸರೋವರವನ್ನು ಕಂಡು ಮಹೇಶ್ವರನನ್ನು ನೋಡುತ್ತ ಸಂತೋಷದಿಂದ ಇಂತೆಂದರು.

ಯಸ್ಮಾತ್ಕೃತಮಿದಂ ದೇವಾ ಈಶ್ವರೇಣ ಮಹತ್ಸರಃ ।
ಮಹಾದೇವಸರೋನಾಮ ಸುಪ್ರಸಿದ್ಧಂ ಭವಿಷ್ಯತಿ ॥ ೩೨ ॥
ಯೋಽತ್ರ ಸ್ನಾನಂ ಪ್ರಕುರುತೇ ಪಿತೄಣಾಂ ತರ್ಪಣಂ ತಥಾ ।
ಶ್ರಾದ್ಧಂ ಪಿತೄಣಾಂ ಭಕ್ತ್ಯಾ ಚ ಸ ಗಚ್ಛೇತ್ಪರಮಾಂ ಗತಿಂ ॥ ೩೩ ॥
ಸುಪ್ರಸನ್ನಾ ಭವಿಷ್ಯಂತಿ ಸರ್ವೇ ದೇವಾ ನ ಸಂಶಯಃ ।
ದರ್ಶನಾತ್ಪಾಪನಿರ್ಮುಕ್ತೋ ಮಹಾದೇವಸರಸ್ಯ ಚ ॥ ೩೪ ॥
ಮಹೇಶಸ್ಯ ಚ ತದ್ದೃಷ್ಟ್ವಾ ಸರಃ ಪರಮಶೋಭನಂ ।
ಚಕಾರ ಪಾರ್ವತೀ ತತ್ರ ಸರಶ್ಚಾಪ್ರತಿಮಂ ತಥಾ ॥ ೩೫ ॥
ಗೌರೀಸರ ಇತಿ ಖ್ಯಾತಂ ಸರ್ವಪಾಪಪ್ರಣಾಶನಂ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ನ ದುರ್ಗತಿಮವಾಪ್ನುಯಾತ್ ॥ ೩೬ ॥
ನ ದೌರ್ಭಾಗ್ಯಂ ಸ್ತ್ರಿಯಶ್ಚೈವ ನ ವೈಧವ್ಯಂ ಕದಾಚನ ।
ಸ್ನಾತ್ವಾ ಗೌರೀತೀರ್ಥವರೇ ಸರ್ವಾನ್ಕಾಮಾನವಾಪ್ನುಯಾತ್ ॥ ೩೭ ॥
ವರುಣಶ್ಚ ತತೋ ದೃಷ್ಟ್ವಾ ಪುಣ್ಯಾನ್ಯಾಯತನಾನಿ ಚ ।
ಚಕಾರ ಚ ಸರೋ ದಿವ್ಯಂ ವಿಷ್ಣುಭಕ್ತಿಸಮನ್ವಿತಃ ॥ ೩೮ ॥

---

೩೨. ದೇವತೆಗಳೆ ! ಈ ಸರೋವರವನ್ನು ಮಹಾದೇವನು ನಿರ್ಮಿಸಿರುವುದರಿಂದ ಇದು ಮಹಾದೇವ ಸರೋವರವೆಂದು ವಿಖ್ಯಾತವಾಗುವುದು.

೩೩-೩೪. ಇಲ್ಲಿ ಮಿಂದು ಪಿತೃಗಳಿಗೆ ಶ್ರಾದ್ಧ, ತರ್ಪಣಗಳನ್ನು ಮಾಡಿದವನು ಉತ್ತಮ ಗತಿಯನ್ನು ಪಡೆಯುವನು. ಸಮಸ್ತ ದೇವತೆಗಳೂ ನಿಜವಾಗಿಯೂ ಪ್ರಸನ್ನರಾಗುವರು. ಮಹಾದೇವ ಸರೋವರವನ್ನು ನೋಡುವುದರಿಂದ ಮನುಷ್ಯನು ಪಾಪಮುಕ್ತನಾಗುವನು.

೩೫. ಪಾರ್ವತಿಯು ಮಹೇಶ್ವರನು ನಿರ್ಮಿಸಿರುವ ಸುಂದರವಾದ ಆ ಸರೋವರವನ್ನು ನೋಡಿ ತಾನೂ ಎಣೆಯಿಲ್ಲದ ಒಂದು ಸರಸ್ಸನ್ನು ನಿರ್ಮಿಸಿದಳು.

೩೬. ಸಕಲ ಪಾಪಗಳನ್ನು ನಿವಾರಿಸುವ ಆ ಗೌರೀಸರೋವರದಲ್ಲಿ ಭಕ್ತಿಯಿಂದ ಮಿಂದ ಮಾನವನು ಬಡವನಾಗುವುದಿಲ್ಲ.

೩೭. ಗೌರೀ ತೀರ್ಥದಲ್ಲಿ ಮಿಂದ ಹೆಂಗಸು ದೌರ್ಭಾಗ್ಯ, ವೈಧವ್ಯಗಳನ್ನು ಹೊಂದದೆ ಸಕಲೇಷ್ಟಾರ್ಥಗಳನ್ನು ಪಡೆಯುವಳು.

೩೮. ತರುವಾಯ ವರುಣನೂ ಪುಣ್ಯಕರಗಳಾದ ದೇವಾಲಯಗಳನ್ನು ಕಂಡು ವಿಷ್ಣು ಭಕ್ತಿಯಿಂದ ಸಹಿತನಾಗಿ ದಿವ್ಯಸರೋವರವನ್ನು ನಿರ್ಮಿಸಿದನು.

ನಾಮ್ನಾ ವರುಣಪದಂ ತಚ್ಚ ಪಾಪಕ್ಷಯಕರಂ ಭುವಿ ।
ನಭಸ್ಯೇ ಪೌರ್ಣಮಾಸ್ಯಾಂ ಚ ಸಂತರ್ಪ್ಯ ಪಿತೃದೇವತಾಃ ॥ ೩೯ ॥
ಶ್ರಾದ್ಧಂ ಕೃತ್ವಾ ವಿಧಾನೇನ ಪಿತೄಣಾಂ ಶ್ರದ್ಧಯಾನ್ವಿತಃ ।
ಉತ್ತಮಂ ಲೋಕಮಾಪ್ನೋತಿ ಯತ್ರ ಗತ್ವಾ ನ ಶೋಚತಿ ॥ ೪೦ ॥
ಪ್ರದದ್ಯಾದುದಕುಂಭಾಂಶ್ಚ ದಧ್ಯೋದನಸಮನ್ವಿತಾನ್ ।
ಗಾಶ್ಚ ವಾಸಾಂಸಿ ರತ್ನಾನಿ ವಿಷ್ಣುರ್ಮೇ ಪ್ರೀಯತಾಮಿತಿ ॥ ೪೧ ॥
ಸರೋ ದೃಷ್ಟ್ವಾ ಜಲೇಶಸ್ಯ ಸರಶ್ಚಕ್ರೇ ಧನೇಶ್ವರಃ ।
ಯಕ್ಷಾಧಿಪಸರೋ ನಾಮ ಸುಪ್ರಸಿದ್ಧಂ ಧರಾತಲೇ ॥ ೪೨ ॥
ತಥಾ ತತ್ರ ನರೋ ಭಕ್ತ್ಯಾ ಸಂಪೂಜ್ಯ ಪಿತೃದೇವತಾಃ ।
ಸರ್ವಾನ್ಕಾಮಾನವಾಪ್ನೋತಿ ದದ್ಯಾದ್ವಸ್ತ್ರಂ ದ್ವಿಜಾತಯೇ ॥ ೪೩ ॥

ಪ್ರಹ್ಲಾದ ಉವಾಚ :—

ವಿಷ್ಣುಂ ವರಪ್ರದಂ ಶ್ರುತ್ವಾ ಭ್ರಾತೄಣಾಂ ಬ್ರಹ್ಮನಂದನಾಃ ।
ಮಂದಾಕಿನೀ ವಸಿಷ್ಠೇನ ಸಮಾನೀತಾ ಧರಾತಲೇ ॥ ೪೪ ॥
ಅಂಬರೀಷಾದಯಃ ಸರ್ವ ಆಜಗ್ಮುಃ ಕೃಷ್ಣಪಾಲಿತಾಂ ।
ದ್ವಾರವತ್ಯಾಂ ಚ ತೇ ದೃಷ್ಟ್ವಾ ಗೋಮತೀಂ ಸಾಗರಂಗಮಾಂ ॥ ೪೫ ॥

---

೩೯-೪೦. ಭೂಮಿಯಲ್ಲಿ ವರುಣ ಸರೋವರವು ಪಾಪಗಳನ್ನು ನಿವಾರಿಸುವುದು. ಅಲ್ಲಿ ಭಾದ್ರಪದ ಶುದ್ಧ ಹುಣ್ಣಿಮೆದಿನ ಪಿತೃಗಳಿಗೆ ಶ್ರಾದ್ಧಮಾಡಿ ಶ್ರದ್ಧೆಯಿಂದ ತರ್ಪಣಗೈದವನು ದುಃಖರಹಿತವಾದ ಉತ್ತಮ ಲೋಕವನ್ನು ಹೊಂದುವನು.

೪೧. ಇಲ್ಲಿ ದಧ್ಯೋದನದೊಡನೆ ಜಲಕುಂಭ, ಗೋವು, ವಸ್ತ್ರ, ರತ್ನಗಳನ್ನು ವಿಷ್ಣುವು ನನಗೆ ಪ್ರೀತನಾಗಲೆಂದು ದಾನಮಾಡಬೇಕು.

೪೨. ಕುಬೇರನು ವರುಣನ ಸರೋವರವನ್ನು ನೋಡಿ ಲೋಕದಲ್ಲಿ ಯಕ್ಷಾಧಿಪಸರಸ್ಸೆಂಬ ಪ್ರಸಿದ್ಧ ಸರೋವರವನ್ನು ನಿರ್ಮಿಸಿದನು.

೪೩. ಹಾಗೆಯೇ ಅಲ್ಲಿ ಭಕ್ತಿಯಿಂದ ಪಿತೃದೇವತೆಗಳನ್ನು ಪೂಜಿಸಿ ಬ್ರಾಹ್ಮಣರಿಗೆ ವಸ್ತ್ರವನ್ನು ದಾನಮಾಡಿದವನು ಸಕಲೇಷ್ಟಾರ್ಥಗಳನ್ನು ಪಡೆಯುವನು.

೪೪. ಪ್ರಹ್ಲಾದನು ಹೇಳುತ್ತಾನೆ :— ಸನಕಾದಿಗಳೇ ! ವಿಷ್ಣುವು ಸಹೋದರರಿಗೆ ವರವನ್ನು ಕೊಡುತ್ತಿರುವುದನ್ನು ಕೇಳಿ ವಸಿಷ್ಠನು ಗಂಗೆಯನ್ನು ಧರೆಗೆ ತಂದನು.

೪೫-೪೬. ಅಂಬರೀಷ ಮೊದಲಾದವರು ಅಲ್ಲಿಗೆ ಬಂದರು ಕೃಷ್ಣನು ಕಾಪಾಡುತ್ತಿರುವ ದ್ವಾರವತಿಯಲ್ಲಿರುವ ಗೋಮತೀ, ಸಾಗರ ಸಂಗಮ, ತೀರ್ಥಗಳು,

ತೀರ್ಥಾನಿ ದೇವತಾನಾಂ ಚ ಪುಣ್ಯಾನ್ಯಾಯತನಾನಿ ಚ ।
ತೀರ್ಥಂ ಪಂಚನದಂ ಚಕ್ರುಃ ಪ್ರಜಾನಾಂ ಪತಯಸ್ತಥಾ ॥ ೪೬ ॥
ಪಂಚ ನದ್ಯಃ ಸಮಾಹೂತಾಸ್ಸಮಾಽಽಜಗ್ಮುಃ ಸುರಾನ್ವಿತಾಃ ।
ಮರೀಚಯೋ ಗೋಮತೀ ಚ ಲಕ್ಷ್ಮಣಾ ಚಾತ್ರಯೋ ತಥಾ ॥ ೪೭ ॥
ಚಂದ್ರಭಾಗಾ ಚಾಂಗಿರಸೇ ಪುಲಹಾಯ ಕುಶಾವತೀ :
ಪಾವನಾರ್ಥಂ ಜಾಂಬವತೀ ಜಗಾಮ ಕ್ರತವೇ ತಥಾ ॥ ೪೮ ॥
ತಾಸು ಸ್ನಾತ್ವಾ ಮಹಾಭಾಗಾ ಬ್ರಹ್ಮಪುತ್ರಾ ಯಶಸ್ವಿನಃ ।
ನಾಮ ತಸ್ಯ ತದಾ ಚಕ್ರುಃ ಪಂಚನದ್ಯಶ್ಚ ತಾಪಸಾಃ ॥ ೪೯ ॥
ತಸ್ಮಾತ್ಪಂಚನದಂ ತೀರ್ಥಂ ಸರ್ವಪಾಪಪ್ರಣಾಶನಂ ।
ಸ್ನಾತವ್ಯಂ ತತ್ರ ಮನುಜೈಃ ಸ್ವರ್ಗಮೋಕ್ಷಾರ್ಥಿಭಿಸ್ತದಾ ॥ ೫೦ ॥
ತತ್ರ ಗತ್ವಾ ಸುನಿಯತೋ ಗೃಹೀತ್ವಾರ್ಘ್ಯಂ ಫಲೇನ ಹಿ ।
ಮಂತ್ರೇಣಾನೇನ ವೈ ವಿಪ್ರಾ ದದ್ಯಾದರ್ಘ್ಯಂ ವಿಧಾನತಃ ॥ ೫೧ ॥
ಬ್ರಹ್ಮಪುತ್ರೈಃ ಸಮಾನೀತಾಃ ಪಂಚೈತಾಃ ಸರಿತಾಂ ವರಾಃ ।
ಗೃಹ್ಣಂತ್ವರ್ಘ್ಯಮಿಮಂ ದೇವ್ಯಃ ಸರ್ವಪಾಪಪ್ರಶಾಂತಯೇ ॥ ೫೨ ॥

ಇತ್ಯರ್ಘ್ಯಮಂತ್ರಃ :—

ಸ್ನಾನಂ ಕೃತ್ವಾ ವಿಧಾನೇನ ಪಿತ್ರ್ಯಾನ್ಸಂತರ್ಪಯೇನ್ನರಃ ।
ಶ್ರಾದ್ಧಂ ಕುರ್ಯಾದ್ವಿಧಾನೇನ ಶ್ರದ್ಧಯಾ ಪರಯಾ ಯುತಃ ॥ ೫೩ ॥

---

ಪುಣ್ಯಕರವಾದ ದೇವಾಲಯಗಳು ಇವುಗಳನ್ನು ಕಂಡು ಮರೀಚ್ಯಾದಿಗಳು ಪಂಚನದ ತೀರ್ಥವನ್ನು ನಿರ್ಮಿಸಿದರು.

೪೭–೪೯. ಹೀಗೆ ಪಂಚನದಿಗಳು ದೇವತೆಗಳೊಡನೆ ಅಲ್ಲಿಗೆ ಬರಲು ಮರೀಚಿಯು ಗೋಮತಿಯಲ್ಲಿಯೂ, ಅತ್ರಿಯು ಲಕ್ಷ್ಮಣಾ ನದಿಯಲ್ಲಿಯೂ, ಆಂಗಿರಸ್ಸು ಚಂದ್ರಭಾಗಾ ನದಿಯಲ್ಲಿಯೂ, ಪುಲಹನು ಕುಶಾವತಿಯಲ್ಲಿಯೂ, ಕ್ರತುವು ಜಾಂಬವತೀ ನದಿಯಲ್ಲಿಯೂ ಪಾವಿತ್ರ್ಯಕ್ಕಾಗಿ ಮಿಂದು ಬ್ರಹ್ಮಪುತ್ರರಾದ ಅವರು ಆ ನದಿಗಳಿಗೆ ಪಂಚನದವೆಂದು ಹೆಸರನ್ನಿಟ್ಟರು.

೫೦. ಆದ್ದರಿಂದ ಪಂಚನದ ತೀರ್ಥವು ಸಕಲ ಪಾಪಗಳನ್ನು ನಾಶಗೊಳಿಸುವುದು. ಸ್ವರ್ಗ ಮೋಕ್ಷಗಳನ್ನು ಬಯಸುವ ಮಾನವನು ಅಲ್ಲಿ ಸ್ನಾನಮಾಡಬೇಕು.

೫೧. ವಿಪ್ರರೆ! ಅಲ್ಲಿಗೆ ಹೋಗಿ ಫಲದೊಡನೆ ಅರ್ಘ್ಯವನ್ನು ಹಿಡಿದುಕೊಂಡು ಈ ಮಂತ್ರದಿಂದ ವಿಧಿಯಂತೆ ಅರ್ಘ್ಯವನ್ನೀಯಬೇಕು.

೫೨. "ಬ್ರಹ್ಮಪುತ್ರರು ತಂದಿರುವ ಐದು ಉತ್ತಮನದಿಗಳೆ! ನೀವು ಸಕಲ ಪಾಪಶಾಂತಿಗಾಗಿ ಈ ಅರ್ಘ್ಯವನ್ನು ತೆಗೆದುಕೊಳ್ಳಿರಿ".

೫೩. ತರುವಾಯ ಮಿಂದು ವಿಧಿಯಂತೆ ಪಿತೃಗಳಿಗೆ ತರ್ಪಣಮಾಡಿ ಅತಿ ಶ್ರದ್ಧೆಯಿಂದ ಶ್ರಾದ್ಧಗೈಯ್ಯಬೇಕು.

ಪಂಚರತ್ನಂ ತತೋ ದೇಯಂ ಸಪ್ತಧಾನ್ಯಂ ದ್ವಿಜಾತಯೇ ।
ದೀನಾಂಧಕೃಪಣಾನಾಂ ಚ ದಾನಂ ದದ್ಯಾತ್ಸ್ವಶಕ್ತಿತಃ ॥ ೫೪ ॥
ಸರ್ವಾನ್ಕಾಮಾನವಾಪ್ನೋತಿ ವಿಷ್ಣುಲೋಕಂ ಸ ಗಚ್ಛತಿ ।
ಪುತ್ರಪೌತ್ರಸಮಾಯುಕ್ತಃ ಪರಂ ಸುಖಮವಾಪ್ನುಯಾತ್ ॥ ೫೫ ॥
ಪ್ರೇತಯೋನಿಂ ಗತಾ ಯೇ ಚ ಯೇ ಚ ಕೀಟತ್ವಮಾಗತಾಃ ।
ಸರ್ವೇತೇ ಮುಕ್ತಿಮಾಯಾಂತಿ ಪಿತರಸ್ತ್ರಿಕುಲೋದ್ಭವಾಃ ॥ ೫೬ ॥
ಶ್ರುತ್ವಾಽಧ್ಯಾಯಮಿಮಂ ಪುಣ್ಯಂ ಶಿವಲೋಕೇ ಚ ಮೋದತೇ ।
ಸರ್ವಪಾಪವಿನಿರ್ಮುಕ್ತಃ ಸ ಯಾತಿ ಪರಮಂ ಪದಂ ॥ ೫೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಪಂಚನದತೀರ್ಥಮಾಹಾತ್ಮ್ಯವರ್ಣನಂ ನಾಮ
ಚತುರ್ದಶೋಽಧ್ಯಾಯಃ

---

೫೪ ಬಳಿಕ ಬ್ರಾಹ್ಮಣರಿಗೆ ಪಂಚರತ್ನಗಳನ್ನೂ ಸಪ್ತಧಾನ್ಯಗಳನ್ನೂ ದಾನಮಾಡಿ ತನ್ನ ಶಕ್ತ್ಯನುಸಾರ ದೀನ, ಅಂಧ, ಕೃಪಣರಿಗೆ ದಾನಮಾಡಬೇಕು.

೫೫. ಹೀಗೆ ಮಾಡಿದ ಮಾನವನು ಸಕಲೇಷ್ಟಾರ್ಥಗಳನ್ನು ಪಡೆದು ವಿಷ್ಣು ಲೋಕಕ್ಕೆ ತೆರಳುವನು. ಪುತ್ರಪೌತ್ರರೊಡನೆ ಅತಿಶಯ ಸುಖವನ್ನು ಹೊಂದುವನು.

೫೬. ಪ್ರೇತಜನ್ಮ, ಕೀಟತ್ವಗಳನ್ನು ಹೊಂದಿದ ಅವನ ಮೂರುವಂಶದ ಪಿತೃಗಳೆಲ್ಲ ಮುಕ್ತರಾಗುವರು.

೫೭. ಪುಣ್ಯಕರವಾದ ಈ ಅಧ್ಯಾಯವನ್ನು ಕೇಳಿದವನು ಸಕಲ ಪಾಪಮುಕ್ತನಾಗಿ ಉತ್ತಮವಾದ ಶಿವಲೋಕವನ್ನು ಸೇರಿ ಆನಂದಿಸುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಪಂಚನದತೀರ್ಥಮಾಹಾತ್ಮ್ಯವರ್ಣನವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚದಶೋಽಧ್ಯಾಯಃ

### ಋಷಿತೀರ್ಥಸಿದ್ಧೇಶ್ವರಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ಶ್ರುತ್ವಾ ತನಾಗತಂ ದೇವಂ ಬ್ರಹ್ಮಾಣಂ ಪಿತರಂ ಸ್ವಕಂ ।
ಸನಕಾದ್ಯಾ ನಮಸ್ಕರ್ತುಂ ಜಗ್ಮುಃ ಸ್ವರ್ವೇ ಪಿತಾಮಹಂ ॥ ೧ ॥
ತಂ ದೃಷ್ಟ್ವಾ ಲೋಕಕರ್ತಾರಂ ದಂಡವತ್ಪ್ರಣತಾಃ ಕ್ಷಿತೌ ।
ತತೋ ದೃಷ್ಟ್ವಾ ಸ ತನಯಾನ್ಸಂಗೃಹ್ಯ ಪರಿಷಸ್ವಜೇ ॥ ೨ ॥
ಪೃಷ್ಟಶ್ಚಾನಾಮಯಂ ತೈಸ್ತು ಪೃಷ್ಟ್ವಾ ತಾನ್ಸಮುವಾಚ ಹ ।
ಆರಾಧಿತೋ ಯೈರ್ಭಗವಾನ್ಧನ್ಯಾ ಯೂಯಂ ವಯಂ ತಥಾ ॥ ೩ ॥
ಸಂಸಿದ್ಧಿಂ ಪರಮಾಂ ಯಾತಾ ಭಗವದ್ದರ್ಶನೇನ ಹಿ ।
ನ ಜ್ಞಾತಂ ಪುತ್ರಕಾ ಸಮ್ಯಜ್ಞಾನಾದ್ಬಾಲಬುದ್ಧಿಭಿಃ ॥ ೪ ॥

---

### ಕನ್ನಡದ ಅನುವಾದ

### ಋಷಿತೀರ್ಥಸಿದ್ಧೇಶ್ವರಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ಸನಕಾದಿ ಮುನಿಗಳು ತಮ್ಮ ತಂದೆಯಾದ ಬ್ರಹ್ಮನು ಬಂದಿರುವುದನ್ನು ಕೇಳಿ ಅವನನ್ನು ನಮಸ್ಕರಿಸಿ ಅಲ್ಲಿಗೆ ತೆರಳಿದರು.

೨. ಅವರು ಲೋಕವನ್ನು ಸೃಷ್ಟಿಸುವ ಆ ಬ್ರಹ್ಮನನ್ನು ನೋಡಿ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿದರು. ಬ್ರಹ್ಮನು ತನ್ನ ಆ ಮಕ್ಕಳನ್ನು ಕಂಡು ಮೇಲ ಕ್ಕೆತ್ತಿ ಆಲಿಂಗಿಸಿದನು.

೩. ಅವರು ತಂದೆಯ ಕುಶಲವಾರ್ತೆಯನ್ನು ಕೇಳಲು ಬ್ರಹ್ಮನು ಅವರ ಕ್ಷೇಮ ವಾರ್ತೆಯನ್ನು ಪ್ರಶ್ನಿಸಿ ನೀವು ಕೃಷ್ಣನನ್ನು ಆರಾಧಿಸಿದ್ದರಿಂದ ನಾನೂ ನೀವೂ ಧನ್ಯ ರಾಗಿದ್ದೇವೆ.

೪. ಭಗವದ್ದರ್ಶನದಿಂದಲೇ ನೀವು ಧನ್ಯರಾದಿರಿ. ಆದರೆ ಪುತ್ರರೆ! ಬಾಲ ಬುದ್ಧಿಯುಳ್ಳ ನೀವು ಅಜ್ಞಾನದಿಂದ ಇವನ್ನರಿಯಲಿಲ್ಲ.

ಯೇನಾರ್ಚಿತೋ ಮಹಾದೇವಸ್ತಸ್ಯ ತುಷ್ಯತಿ ಕೇಶವಃ ।
ಅನರ್ಚಿತೇ ನೀಲಕಂಠೇ ನ ಗೃಹ್ಣಾತ್ಯರ್ಚನಂ ಹರಿಃ ।
ತಸ್ಮಾತ್ಸರ್ವಪ್ರಯತ್ನೇನಪೂಜ್ಯತಾಂ ನೀಲಲೋಹಿತಃ ॥ ೫ ॥
ಯೇನ ಸಂಪೂರ್ಣತಾಂ ಯಾತಿ ಕೃಷ್ಣ ಪೂಜಾ ಕೃತಾ ಸದಾ ।
ತಚ್ಛ್ರುತ್ವಾ ವಚನಂ ತಸ್ಯ ಬ್ರಹ್ಮಪುತ್ರಾ ಯಯುಸ್ತದಾ ॥ ೬ ॥
ದೇವಾಗಾರಾಗ್ರತೋ ಗತ್ವಾ ಯೋಗಸಿದ್ಧಾ ಮಹರ್ಷಯಃ ।
ಲಿಂಗಂ ಸಂಸ್ಥಾಪಯಾಮಾಸುಃ ಶಿವಭಕ್ತಿಪುರಸ್ಕೃತಾಃ ॥ ೭ ॥
ಸಂಸ್ಥಾಪ್ಯ ಶಿವಲಿಂಗಂ ತೇ ಸ್ನಾನಾರ್ಥಂ ಮುನಿಸತ್ತಮಾಃ ।
ಕೂಪಂ ಚಕ್ರುಸ್ತತಸ್ಸರ್ವ ಋಷಯಃ ಸಂಶಿತವ್ರತಾಃ ॥ ೮ ॥
ದೃಷ್ಟ್ವಾ ತಮಮೃತಪ್ರಖ್ಯಂ ಜಲಪೂರ್ಣಂ ಸುನಿರ್ಮಲಂ ।
ಸಂಹೃಷ್ಟಾ ಋಷಯಸ್ಸರ್ವೇ ಸಾಧುಸಾಧ್ವಿತಿ ಚಾಬ್ರುವನ್ ॥ ೯ ॥
ಸ್ಥಾಪಿತಂ ಶಿವಲಿಂಗಂ ಚ ದೃಷ್ಟ್ವಾ ಲೋಕಪಿತಾಮಹಃ ।
ಉವಾಚ ವಚನಂ ಬ್ರಹ್ಮಾ ಪ್ರೀತಃ ಪುತ್ರಾಂಸ್ತದಾ ದ್ವಿಜಾಃ ॥ ೧೦ ॥

ಬ್ರಹ್ಮೋವಾಚ :—

ಭವದ್ಭಿರ್ಯೋಗಸಂಸಿದ್ಧೈರ್ಯಸ್ಮಾತ್ಸಂಸ್ಥಾಪಿತಃ ಶಿವಃ ।
ತಸ್ಮಾತ್ಸಿದ್ಧೇಶ್ವರ ಇತಿ ಖ್ಯಾತಿಂ ಲೋಕೇ ಗಮಿಷ್ಯತಿ ॥ ೧೧ ॥

---

೫. ಮಹಾದೇವನನ್ನು ಪೂಜಿಸಿದವನ ವಿಷಯದಲ್ಲಿ ಕೃಷ್ಣನು ತುಷ್ಟನಾಗುವನು. ಆ ಶಂಕರನನ್ನು ಪೂಜಿಸದಿದ್ದರೆ ವಿಷ್ಣುವು ಪೂಜೆಯನ್ನು ಸ್ವೀಕರಿಸುವುದಿಲ್ಲ. ಆದ್ದರಿಂದ ಪ್ರಯತ್ನದಿಂದ ಶಿವನನ್ನು ಪೂಜಿಸಿರಿ.

೬. ಆದರಿಂದ ಕೃಷ್ಣ ಪೂಜೆಯು ಸಂಪೂರ್ತಿಗೊಳ್ಳುವುದು" ಎಂದನು. ಅದನ್ನು ಕೇಳಿ ಸನಕಾದಿಗಳು ಹೊರಟರು.

೭. ಯೋಗಸಿದ್ಧರಾದ ಆ ಮಹರ್ಷಿಗಳು ದೇವಾಲಯದ ಮುಂದೆ ಹೋಗಿ ಶಿವಭಕ್ತಿಯಿಂದ ಲಿಂಗವನ್ನು ಪ್ರತಿಷ್ಠೆಮಾಡಿದರು.

೮. ಆ ಮುನಿವರ್ಯರು ಲಿಂಗವನ್ನು ಸ್ಥಾಪಿಸಿ ಸ್ನಾನಕ್ಕಾಗಿ ಬಾವಿಯನ್ನು ನಿರ್ಮಿಸಿದರು.

೯. ಸಕಲ ಮುನಿಗಳು ಶುದ್ಧವಾದ ಅಮೃತದಂತಿರುವ ನೀರಿನಿಂದ ತುಂಬಿರುವ ಆ ಬಾವಿಯನ್ನು ನೋಡಿ ಸಂತೋಷಗೊಂಡು ಒಳ್ಳೆಯದು ಒಳ್ಳೆಯದು ಎಂದರು.

೧೦. ಪಿತಾಮಹನು ಪುತ್ರರು ಸ್ಥಾಪಿಸಿರುವ ಶಿವಲಿಂಗವನ್ನು ಕಂಡು ಅವರನ್ನು ಕುರಿತು ಇಂತೆಂದನು.

೧೧. ಬ್ರಹ್ಮನು ಹೇಳುತ್ತಾನೆ :—ಯೋಗಸಿದ್ಧರಾದ ನೀವು ಸ್ಥಾಪಿಸಿರುವುದರಿಂದ ಈ ಲಿಂಗವು ಲೋಕದಲ್ಲಿ ಸಿದ್ಧೇಶ್ವರನೆಂದು ವಿಖ್ಯಾತವಾಗುವುದು.

ಸಮೀಪೇ ಶಿತಿಕಂಠಸ್ಯ ಕೂಪೋಽಯಮೃಷಿಭಿಃ ಕೃತಃ ।
ಋಷಿತೀರ್ಥಮಿತಿ ಖ್ಯಾತಂ ತಸ್ಮಾಲ್ಲೋಕೇ ಭವಿಷ್ಯತಿ ॥ ೧೨ ॥
ವಿನಾ ಶ್ರಾದ್ಧೇನ ವಿಪ್ರೇಂದ್ರಾ ದಾನೇನ ಪಿತೃತರ್ಪಣಾತ್ ।
ಭಕ್ತಿತಃ ಸ್ನಾನಮಾತ್ರೇಣ ಪಿತೃಭಿಸ್ಸಹ ಮುಚ್ಯತೇ ॥ ೧೩ ॥
ಅಸತ್ಯವಾದಿನೋ ಯೇ ಚ ಪರನಿಂದಾಪರಾಯಣಾಃ ।
ಸ್ನಾನಮಾತ್ರೇಣ ಶುಧ್ಯಂತಿ ಋಷಿತೀರ್ಥೇ ನ ಸಂಶಯಃ ॥ ೧೪ ॥
ಸ್ನಾನಂ ಪ್ರಶಸ್ತಂ ವಿಷುವೇ ಮನ್ವಾದಿಷು ತಿಥ್ಯೈವಚ ।
ತಥಾ ಕೃತಯುಗಾದ್ಯಾಯಾಂ ಮಾಘಸ್ಯ ದ್ವಿಜ ಸಪ್ತಮೀ ॥ ೧೫ ॥
ಶಿವರಾತ್ರಾ ವಸೇದ್ಯಸ್ತು ಲಿಂಗೇ ಸಿದ್ಧೇಶಸಂಜ್ಞಿತೇ ।
ಸ್ನಾತ್ವಾ ಋಷಿಕೃತೇ ತೀರ್ಥೇ ಕಿಂ ತಸ್ಯಾನ್ಯೇನ ವೈ ದ್ವಿಜಾಃ ।
ಗತ್ವಾ ತತ್ರ ಮಹಾಭಾಗಾ ಗೃಹೀತ್ವಾ ಫಲಮುತ್ತಮಂ ॥ ೧೬ ॥
ಅರ್ಘ್ಯಂ ದತ್ವಾ ವಿಧಾನೇನ ಕೃತ್ವಾ ಚ ಕರಯೋಃ ಕುಶಾ ।
ಗೃಹ್ಣಂತ್ವರ್ಘ್ಯಮಿಮಂ ದೇವಾ ಯೋಗಸಿದ್ಧಾ ಮಹರ್ಷಯಃ ॥ ೧೭ ॥
ಋಷಿತೀರ್ಥೇ ಚ ಪಾಪಘ್ನೇ ಸಿದ್ಧೇಶ್ವರಸಮನ್ವಿತೇ ।
ದತ್ವಾರ್ಘ್ಯಂ ಮೃದಮಾಲಭ್ಯ ಸ್ನಾನಂ ಕುರ್ಯಾತ್ಸಮಾಹಿತಃ ॥ ೧೮ ॥

---

೧೨. ಸಿದ್ಧೇಶ್ವರನ ಸನ್ನಿಧಿಯಲ್ಲಿ ನೀವು ನಿರ್ಮಿಸಿರುವ ಈ ಬಾವಿಯು ಋಷಿ ತೀರ್ಥವೆಂದು ಲೋಕದಲ್ಲಿ ಪ್ರಸಿದ್ಧವಾಗುವುದು.

೧೩. ವಿಪ್ರವರ್ಯರೆ ! ಮಾನವರು ಇಲ್ಲಿ ಶ್ರಾದ್ಧ, ದಾನ, ಪಿತೃತರ್ಪಣಗಳನ್ನು ಮಾಡದೆ ಭಕ್ತಿಯಿಂದ ಸ್ನಾನ ಮಾತ್ರ ಮಾಡಿದರೂ ಪಿತೃಗಳೊಡನೆ ಮುಕ್ತರಾಗುವರು.

೧೪. ಸುಳ್ಳಾಡುವವರೂ, ಪರರ ನಿಂದೆಯಲ್ಲಿ ನಿರತರೂ ಆದ ಜನರು ಈ ಋಷಿ ತೀರ್ಥದಲ್ಲಿ ಸ್ನಾನಮಾಡುವುದರಿಂದಲೇ ಶುದ್ಧರಾಗುವರು.

೧೫–೧೮. ದ್ವಿಜವರ್ಯರೆ ! ವಿಷು ಸಂಕ್ರಾಂತಿ, ಮನ್ವಾದಿ, ಕೃತಯುಗಾದಿ, ಮಾಘಮಾಸದ. ಶಿವರಾತ್ರಿ ಈದಿನಗಳಲ್ಲಿ ಸಿದ್ದೇಶ ಲಿಂಗದೆಡೆಯಲ್ಲಿ ವಾಸಿಸುತ್ತ ಋಷಿ ತೀರ್ಥದಲ್ಲಿ ಮಿಂದವನಿಗೆ ಬೇರೆ ಯಾವುದರಿಂದಲೂ ಆಗಬೇಕಾದ ಪ್ರಯೋಜನ ವಿರುವುದಿಲ್ಲ. ಮಹಾತ್ಮರೆ! ಅಲ್ಲಿಗೆ ಹೋಗಿ ಉತ್ತಮ ಫಲವನ್ನೂ, ಅರ್ಘ್ಯವನ್ನೂ ದರ್ಭೆಯನ್ನೂ ಹಿಡಿದುಕೊಂಡು ಪಾಪವನ್ನು ನೀಗಿಸುವ ಸಿದ್ಧೇಶ್ವರನಿಂದ ಕೂಡಿರುವ ಋಷಿತೀರ್ಥದಲ್ಲಿ ದೇವತೆಗಳೂ, ಯೋಗಸಿದ್ಧರಾದ ಮಹರ್ಷಿಗಳೂ ಈ ಅರ್ಘ್ಯವನ್ನು ಸ್ವೀಕರಿಸಲಿ ಎಂದು ಅರ್ಘ್ಯವನ್ನು ಕೊಡಬೇಕು. ಬಳಿಕ ಮೃತ್ತಿಕೆಯನ್ನು ಹಚ್ಚಿ ಕೊಂಡು ಸಾವಧಾನ ಮನಸ್ಸಿನಿಂದ ಸ್ನಾನಮಾಡಬೇಕು.

ತರ್ಪಯೇಚ್ಚ ಪಿತೃನ್ದೇವಾನ್ಮನುಷ್ಯಾಂಶ್ಚ ಯಥಾಕ್ರಮಂ ।
ತತಃ ಶ್ರಾದ್ಧಂ ಪ್ರಕುರ್ವೀತ ಪಿತೃಣಾಂ ಶ್ರದ್ಧಯಾನ್ವಿತಃ ॥ ೧೯ ॥
ತಥಾ ಚ ದಕ್ಷಿಣಾಂ ದದ್ಯಾದ್ವಿತ್ತಶಾಠ್ಯವಿವರ್ಜಿತಃ ।
ದದ್ಯಾಚ್ಛ್ಯಾಮಾಕನೀವಾರಾನ್ವಿದ್ರುಮಂ ಚಾಜಿನಾನಿ ಚ ।
ಸಪ್ತಧಾನ್ಯಾನಿ ಶಾಲೀಂಶ್ಚ ಸಕ್ತೂಂಶ್ಚ ಗುಡಸಂಯುತಾನ್ ॥ ೨೦ ॥
ಗಂಧಮಾಲ್ಯಾನಿ ತಾಂಬೂಲಂ ವಸ್ತ್ರಾಣಿ ಚ ತಥಾ ಪಯಃ ।
ಏವಂ ಕೃತ್ವಾ ಸಮಗ್ರಂ ಚ ಕೃತಿಕೃತ್ಯೋ ಭವೇನ್ನರಃ ॥ ೨೧ ॥
ಪೂಜಯಿತ್ವಾ ಮಹಾದೇವಂ ಸಿದ್ಧೇಶ್ವರಮುಮಾಪತಿಂ ।
ಸಫಲಂ ಜನ್ಮ ಮರ್ತ್ಯಸ್ಯ ಜೀವಿತಂ ಚ ಸುಜೀವಿತಂ ॥ ೨೨ ॥
ಯಃ ಸ್ನಾತ್ವಾ ಋಷಿತೀರ್ಥೇತು ಪಶ್ಯೇತ್ಸಿದ್ಧೇಶ್ವರಂ ಶಿವಂ ।
ಪಿತರಸ್ತಸ್ಯ ತುಷ್ಯಂತಿ ತುಷ್ಯಂತಿ ಚ ಪಿತಾಮಹಾಃ ॥ ೨೩ ॥
ಅಪುತ್ರಾಃ ಪುತ್ರಿಣಃ ಸ್ಯುಸ್ತೇ ಪುತ್ರಿಣಶ್ಚಾಪಿ ಪೌತ್ರಿಣಃ ।
ನಿರ್ಧನಾ ಧನವಂತಶ್ಚ ಸಿದ್ಧೇಶ್ವರರತಾ ನರಾಃ ॥ ೨೪ ॥
ದುಷ್ಕೃತಂ ಯಾತಿ ವಿಲಯಂ ಸುಕೃತಂ ಚ ವಿವರ್ಧತೇ ।
ಭವೇನ್ಮನೋರಥಾವಾಪ್ತಿಃ ಪ್ರಣತೇ ಸಿದ್ಧನಾಯಕೇ ॥ ೨೫ ॥

---

೧೯. ಅನಂತರ ದೇವ, ಪಿತೃ, ಮನುಷ್ಯರಿಗೆ ಕ್ರಮವಾಗಿ ತರ್ಪಣಮಾಡಿ ಪಿತೃಗಳಿಗೆ ಶ್ರದ್ಧೆಯಿಂದ ಶ್ರಾದ್ಧಗೈಯಬೇಕು.

೨೦–೨೧. ಹಾಗೆಯೇ ವಿತ್ತಶಾಠ್ಯವಿಲ್ಲದೆ ದಕ್ಷಿಣೆಯನ್ನಿತ್ತು ವಿಶೇಷವಾಗಿ ರಸವುಳ್ಳ ಫಲಗಳು, ಸವಣೆ, ಹಾರಕ, ಹವಳ, ಕೃಷ್ಣಾಜಿನ, ಸಪ್ತಧಾನ್ಯಗಳು, ಬತ್ತ, ಬೆಲ್ಲದಿಂದ ಕೂಡಿದ ಹಿಟ್ಟು, ಗಂಧ, ಮಾಲೆ, ತಾಂಬೂಲ, ವಸ್ತ್ರ, ಹಾಲು ಇವುಗಳನ್ನು ದಾನಮಾಡಿದರೆ ಮಾನವನು ಧನ್ಯನಾಗುವನು.

೨೨. ಸಿದ್ಧೇಶ್ವರನನ್ನು ಪೂಜಿಸಿದ ಮಾನವನ ಜನ್ಮವು ಸಫಲವಾಗುವುದು. ಜೀವನವು ಉತ್ತಮ ಜೀವನವಾಗುವುದು.

೨೩. ಋಷಿತೀರ್ಥದಲ್ಲಿ ಮಿಂದು ಸಿದ್ಧೇಶ್ವರನನ್ನು ದರ್ಶನಮಾಡಿದವನ ಪಿತೃ ಪಿತಾಮಹರು ಸಂತುಷ್ಟರಾಗುವರು.

೨೪. ಸಿದ್ಧೇಶ್ವರನಲ್ಲಿ ಭಕ್ತಿಯುಳ್ಳ ಪುತ್ರರಾಗಿದ್ದರೆ ಪುತ್ರರನ್ನು ಪಡೆಯುವರು. ಪುತ್ರರುಳ್ಳವರು ಪೌತ್ರರನ್ನು ಹೊಂದುವರು. ಬಡವರು ಹಣಗಾರರಾಗುವರು.

೨೫. ಸಿದ್ಧೇಶ್ವರನನ್ನು ವಂದಿಸಿದರೆ ಪಾಪವು ಲಯವಾಗುವುದು. ಪುಣ್ಯವು ಹೆಚ್ಚುವುದು. ಅಭೀಷ್ಟವು ಕೈಗೂಡುವುದು.

ಋಷಿತೀರ್ಥೇ ಸರಃ ಸ್ನಾತ್ವಾ ದೃಷ್ಟ್ವಾ ಸಿದ್ಧೇಶ್ವರಂ ಹರಂ ।
ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೨೭ ॥
ಶಿವರಾತ್ರ್ಯಾಂ ವಿಶೇಷೇಣ ಸಿದ್ಧೇಶಃ ಸಂಪ್ರಪೂಜಿತಃ ।
ಯಂ ಯಂ ಕಾಮಯತೇ ಕಾಮಂ ತಂ ತಂ ದದಾತ್ಯ ಸಂಶಯಃ ॥ ೨೮ ॥
ಶ್ರುತ್ವಾಧ್ಯಾಯಮಿಮಂ ಪುಣ್ಯಂ ಸರ್ವಾಘಹರಣಂ ಪರಂ ।
ಪ್ರಯಾತಿಪರಮಂ ಸ್ಥಾನಂ ಮಾನವಃ ಶ್ರದ್ಧಯಾನ್ವಿತಃ ॥ ೨೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಋಷೀತೀರ್ಥಸಿದ್ಧೇಶ್ವರಮಾಹಾತ್ಮ್ಯವರ್ಣನಂ ನಾಮ
ಪಂಚದಶೋಽಧ್ಯಾಯಃ

---

೨೭. ಮಾನವನು ಋಷಿತೀರ್ಥದಲ್ಲಿ ಮಿಂದು ಸಿದ್ಧೇಶ್ವರನನ್ನು ಕಂಡರೆ ಸಕಲೇಷ್ಟಾರ್ಥಗಳನ್ನು ಪಡೆಯುವನು. ಸಂದೇಹವಿಲ್ಲ.

೨೮. ಶಿವರಾತ್ರಿದಿನ ಸಿದ್ಧೇಶ್ವರನನ್ನು ಪೂಜಿಸಿದರೆ ಅವನು ಅಭೀಷ್ಟಾರ್ಥಗಳನ್ನೆಲ್ಲ ಕೊಡುವನು. ಅವನು ಚಿಂತಾಮಣಿಗೆ ಸಮನು. ಅಥವಾ ಅಕ್ಷಯನಿಧಿಯು.

೨೯. ಪುಣ್ಯಕರವೂ ಪಾಪವನ್ನು ನಿವಾರಿಸುವುದೂ ಆದ ಈ ಅಧ್ಯಾಯವನ್ನು ಶ್ರದ್ಧೆಯಿಂದ ಕೇಳಿದವನು ಉತ್ತಮ ಸ್ಥಾನವನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಋಷಿತೀರ್ಥಸಿದ್ಧೇಶ್ವರ ಮಾಹಾತ್ಮ್ಯವರ್ಣನವೆಂಬ
ಐದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷೋಡಶೋಽಧ್ಯಾಯಃ

### ತೀರ್ಥವೃಂದಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—
ತತೋ ಗಚ್ಛೇದ್ದ್ವಿಜಶ್ರೇಷ್ಠಾಃ ಗದಾತೀರ್ಥಮನುತ್ತಮಮಂ ।
ಯತ್ರ ಸ್ನಾತ್ವಾ ನರೋ ಭಕ್ತ್ಯಾ ಲಭೇದ್ಗೋದಾನಜಂ ಫಲಂ ॥ ೧ ॥
ತರ್ಪಯೇತ್ಪಿತೃದೇವಾಂಶ್ಚ ಋಷೀಂಶ್ಚೈವ ಯಥಾಕ್ರಮಂ ।
ಶ್ರಾದ್ಧಂ ಚ ಕಾರಯೇತ್ತತ್ರ ಪಿತೄಣಾಂ ತೃಪ್ತಿಹೇತವೇ ॥ ೨ ॥
ಗದಾತೀರ್ಥೇತು ದೇವೇಶಂ ವಿಷ್ಣುಂ ವಾರಾಹರೂಪಿಣಂ ।
ಸಮಭ್ಯರ್ಚ್ಯ ನರೋ ಭಕ್ತ್ಯಾ ವಿಷ್ಣುಲೋಕೇ ಮಹೀಯತೇ ॥ ೩ ॥
ನಾಗತೀರ್ಥಂ ತತೋ ಗಚ್ಛೇತ್ಸರಃ ಪರಮಶೋಭನಂ ।
ಯತ್ರ ಸ್ನಾತ್ವಾ ನರಃ ಸಮ್ಯಙ್ನಾಕಲೋಕಮವಾಪ್ನುಯಾತ್ ॥ ೪ ॥

---

### ಕನ್ನಡದ ಅನುವಾದ

### ತೀರ್ಥವೃಂದಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ:—ದ್ವಿಜವರ್ಯರೆ! ಅನಂತರ ಉತ್ತಮವಾದ ಗದಾತೀರ್ಥದೆಡೆಗೆ ಹೋಗಬೇಕು. ಅಲ್ಲಿ ಭಕ್ತಿಯಿಂದ ಮಿಂದ ಮಾನವನು ಗೋದಾನದ ಫಲವನ್ನು ಪಡೆಯುವನು.

೨. ಅಲ್ಲಿ ಕ್ರಮವಾಗಿ ದೇವ, ಪಿತೃ, ಋಷಿಗಳಿಗೆ ತರ್ಪಣಮಾಡಬೇಕು. ಪಿತೃತೃಪ್ತಿಗಾಗಿ ಶ್ರಾದ್ಧಮಾಡಬೇಕು.

೩. ಈ ಗದಾ ತೀರ್ಥದಲ್ಲಿ ವರಾಹರೂಪಿಯಾದ ವಿಷ್ಣುವನ್ನು ಭಕ್ತಿಯಿಂದ ಪೂಜಿಸಿದವನು ವಿಷ್ಣುಲೋಕದಲ್ಲಿ ಪೂಜ್ಯನಾಗುವನು.

೪. ತರುವಾಯ ನಾಗತೀರ್ಥಕ್ಕೆ ಹೋಗಿ ಅಲ್ಲಿ ಮಿಂದ ಮನುಷ್ಯನು ನಾಗ ಲೋಕಕ್ಕೆ ತೆರಳುವನು.

ಭದ್ರತೀರ್ಥಂ ತತೋ ಗಚ್ಛೇತ್ಸರಸ್ತ್ರಿಭುವನಾರ್ಚಿತಂ ।
ಸ್ನಾನಮಾತ್ರೇಣ ಲಭತೇ ತಿಲಧೇನುಫಲಂ ನರಃ ॥ ೫ ॥
ಚಿತ್ರಾತೀರ್ಥಂ ತತೋ ಗಚ್ಛೇತ್ಸರಃ ಪರಮಶೋಭನಂ ।
ಸ್ನಾನಮಾತ್ರೇಣ ಲಭತೇ ಘೃತಧೇನುಫಲಂ ನರಃ ॥ ೬ ॥
ಯದ್ವಾ ದ್ವಾರಾವತೀ ವಿಪ್ರಾ ಪ್ಲಾವಿತಾ ಸಾಗರೇಣ ಹಿ ।
ಪುಣ್ಯಾನಿ ಬಹುತೀರ್ಥಾನಿ ಛನ್ನಾನಿ ಜಲಪಾಂಸುಭಿಃ ॥ ೭ ॥
ದೃಶ್ಯಾನಿ ಕತಿಚಿತ್ಸಂತಿ ಹ್ಯದೃಶ್ಯಾನ್ಯಪರಾಣಿ ಚ ।
ತಾನಿ ಸರ್ವಾಣಿ ವಿಪ್ರೇಂದ್ರಾಃ ಕಥಯಿಷ್ಯಾಮಿ ಸರ್ವತಃ ॥ ೮ ॥
ಚಂದ್ರಭಾಗಾಂ ತತೋ ಗಚ್ಛೇತ್ಸರ್ವಪಾಪಪ್ರಣಾಶಿನೀಂ ।
ಯತ್ರ ಸ್ನಾತ್ವಾ ನರೋ ಭಕ್ತ್ಯಾ ವಾಜಪೇಯಫಲಂ ಲಭೇತ್ ॥ ೯ ॥
ದೇವೀ ಚಂದ್ರಾರ್ಚಿತಾ ಯತ್ರ ಯಶೋದಾನಂದನಂದಿನೀ ।
ಕೌಮಾರಿಕಾ ಶಕ್ತಿಹಸ್ತಾ ಖಡ್ಗಖೇಟಕಧಾರಿಣೀ ॥ ೧೦ ॥
ಕೇಶ್ಯಾದಿದೈತ್ಯದಲಿನೀ ಸ್ವಸಾ ವೈ ರಾಮಕೃಷ್ಣಯೋಃ ।
ಯಸ್ಯಾ ದರ್ಶನಮಾತ್ರೇಣ ಸರ್ವಾನ್ಕಾಮಾನಾಪ್ನುಯಾತ್ ॥ ೧೧ ॥

---

೫. ಅನಂತರ ತ್ರೈಲೋಕ್ಯಪೂಜ್ಯವಾದ ಭದ್ರತೀರ್ಥಕ್ಕೆ ಹೋಗಬೇಕು. ಮನುಷ್ಯನು ಅಲ್ಲಿ ಸ್ನಾನಮಾತ್ರದಿಂದ ತಿಲಧೇನು ಫಲವನ್ನು ಪಡೆಯುವನು.

೬. ಬಳಿಕ ರಮ್ಯವಾದ ಚಿತ್ರಾ ತೀರ್ಥಕ್ಕೆ ತೆರಳಬೇಕು. ಅಲ್ಲಿ ಸ್ನಾನ ಮಾಡುವುದರಿಂದ ಮಾನವನು ಘೃತಧೇನು ದಾನದ ಫಲವನ್ನು ಪಡೆಯುವನು.

೭. ಬ್ರಾಹ್ಮಣರೆ! ಸಮುದ್ರವು ದ್ವಾರಾವತಿಯನ್ನು ಮುಳುಗಿಸಲು ಅನೇಕ ಪುಣ್ಯತೀರ್ಥಗಳು ನೀರು ಮತ್ತು ಧೂಳುಗಳಿಂದ ಮುಚ್ಚಿಹೋದುವು.

೮. ವಿಪ್ರವರ್ಯರೆ! ಅಲ್ಲಿ ಕೆಲವು ತೀರ್ಥಗಳು ದೃಶ್ಯವಾಗಿಯೂ, ಕೆಲವು ಅದೃಶ್ಯವಾಗಿಯೂ ಇರುವುವು. ಅವುಗಳನ್ನೆಲ್ಲ ಸಂಪೂರ್ಣವಾಗಿ ಹೇಳುವೆನು.

೯. ಅನಂತರ ಸಮಸ್ತ ಪಾಪಗಳನ್ನು ಪರಿಹರಿಸುವ ಚಂದ್ರಭಾಗಾನದಿಗೆ ಹೋಗಬೇಕು. ಅಲ್ಲಿ ಮಿಂದ ಮನುಷ್ಯನು ವಾಜಪೇಯ ಫಲವನ್ನು ಹೊಂದುವನು.

೧೦-೧೧. ಅಲ್ಲಿ ಯಶೋದಾನಂದರ ಮಗಳೂ, ಶಕ್ತ್ಯಾಯುಧವನ್ನು ಹಿಡಿದವಳೂ, ಕತ್ತಿ, ಗುರಾಣಿಗಳುಳ್ಳವಳೂ. ಕೇಶಿ ಮೊದಲಾದ ದೈತ್ಯರನ್ನು ಕೊಂದವಳೂ, ರಾಮಕೃಷ್ಣರ ಸಹೋದರಿಯೂ ಆದ ದುರ್ಗಾ ದೇವಿಯನ್ನು ಚಂದ್ರನು ಅರ್ಚಿಸಿರುವನು. ಮನುಷ್ಯನು ಅವಳನ್ನು ದರ್ಶನ ಮಾಡುವುದರಿಂದಲೇ ಸಕಲೇಷ್ಟಾರ್ಥಗಳನ್ನು ಪಡೆಯುವನು.

ತತೋ ಗಚ್ಛೇತ ವಿಪ್ರೇಂದ್ರಾಸ್ತೀರ್ಥಂ ಮಹಿಷಸಂಜ್ಞಕಂ ।
ಯಸ್ಯ ದರ್ಶನಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೧೨ ॥
ಮುಕ್ತಿದ್ವಾರಂ ತತೋ ಗಚ್ಛೇತ್ತೀರ್ಥಂ ಪಾಪಪ್ರಣಾಶನಂ ॥ ೧೩ ॥
ವಸಿಷ್ಠೇನ ಸಮಾನೀತಾ ಮುನಿನಾ ಯತ್ರ ಗೋಮತೀ ।
ಸ್ನಾತೋ ಭವತಿ ಗಂಗಾಯಾಂ ಯತ್ರಸ್ನಾತ್ವಾಕಲೌಯುಗೇ ॥ ೧೪ ॥
ಗೋಮತೀ ನಿಃ ಸೃತಾ ಯಸ್ಮಾತ್ಪ್ರವಿಷ್ಟಾ ವರುಣಾಲಯಂ ।
ತತ್ರ ಸ್ನಾತಾ ನರೋ ಭಕ್ತ್ಯಾ ಅಶ್ವಮೇಧಫಲಂ ಲಭೇತ್ ॥ ೧೫ ॥
ಭೃಗುಣಾ ಹಿ ತಪಸ್ತಪ್ತಂ ಸ್ಥಾಪಿತಾ ಯತ್ರ ಚಾಂಬಿಕಾ ।
ಭೃಗ್ವರ್ಚಿತಾ ತತೋದೇವೀ ಪ್ರಸಿದ್ಧಾ ಶ್ರೂಯತೇ ಕ್ಷಿತೌ ॥ ೧೬ ॥
ಸಂಸಿದ್ಧಿಂ ಪರಮಾಂ ಯಾತಿ ಯಸ್ಯಾಃ ಸಂಸ್ಮರಣಾನ್ನರಃ ।
ಶಿವಲಿಂಗಾನ್ಯನೇಕಾನಿ ಯತ್ರ ಸಂತಿ ಮಹೀತಲೇ ॥ ೧೭ ॥
ತತೋ ಗಚ್ಛೇತ ವಿಪ್ರೇಂದ್ರಾಃ ಕಾಲಿಂದೀಸರ ಉತ್ತಮಂ ।
ಕಾಲಿಂದೀ ಸೂರ್ಯತನಯಾ ಸರಶ್ಚಕ್ರೇತ್ವನುತ್ತಮಮಂ ॥ ೧೮ ॥

---

೧೨. ವಿಪ್ರವರ್ಯರೆ! ಬಳಿಕ ಮಹಿಷ ತೀರ್ಥಕ್ಕೆ ಹೋಗಬೇಕು. ಅದನು ನೋಡಿದೊಡನೆ ಮನುಷ್ಯನು ಸಕಲ ಪಾಪರಹಿತನಾಗುವನು.

೧೩-೧೪. ಅನಂತರ ಪಾಪವನ್ನು ನೀಗಿಸುವ ಮುಕ್ತಿದ್ವಾರ ತೀರ್ಥಕ್ಕೆ ಹೋಗಬೇಕು. ವಸಿಷ್ಠನು ಇಲ್ಲಿಗೆ ಗೋಮತೀ ನದಿಯನ್ನು ತಂದಿರುವನು. ಕಲಿಯುಗದಲ್ಲಿ ಇಲ್ಲಿ ಮಿಂದರೆ ಗಂಗೆಯಲ್ಲಿ ಮಿಂದಂತಾಗುವುದು.

೧೫. ಗೋಮತೀ ನದಿಯು ಇಲ್ಲಿಂದ ಹೊರಟು ಸಮುದ್ರವನ್ನು ಪ್ರವೇಶಿಸಿತು. ಇಲ್ಲಿ ಭಕ್ತಿಯಿಂದ ಮಿಂದ ಮಾನವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೧೬. ಅಲ್ಲಿ ಭೃಗುಮುನಿಯು ತಪಸ್ಸನ್ನಾಚರಿಸಿ ಪಾರ್ವತಿಯನ್ನು ಪ್ರತಿಷ್ಠೆ ಮಾಡಿರುವನು. ಅದರಿಂದ ಆಕೆಯು ಭೃಗ್ವರ್ಚಿತೆಯೆಂದು ಭೂಮಿಯಲ್ಲಿ ವಿಖ್ಯಾತಳಾದಳು.

೧೭. ಇಲ್ಲಿ ಮಾನವನು ಈ ದೇವಿಯ ಸ್ಮರಣೆಯ ಮಾತ್ರದಿಂದ ಉತ್ತಮ ಸಿದ್ಧಿಯನ್ನು ಹೊಂದುವನು. ಇಲ್ಲಿ ಅನೇಕ ಶಿವಲಿಂಗಗಳಿರುವುವು.

೧೮. ದ್ವಿಜೋತ್ತಮರೆ! ಅನಂತರ ಕಾಲಂದೀ ಸರೋವರಕ್ಕೆ ಹೋಗಬೇಕು. ಸೂರ್ಯಪುತ್ರಿಯಾದ ಯಮುನೆಯು ಉತ್ತಮವಾದ ಆಸರಸ್ಸನ್ನು ನಿರ್ಮಿಸಿರುವಳು.

ತತ್ರ ಸ್ನಾತ್ವಾ ನರೋ ಭಕ್ತ್ಯಾ ಸ ದುರ್ಗತಿಮವಾಪ್ನುಯಾತ್ ।
ಸಾಂಬತೀರ್ಥಂ ತತೋ ಗಚ್ಛೇತ್ಸರ್ವ ಪಾಪಪ್ರಣಾಶನಂ ॥ ೧೯ ॥
ಕೃತ್ವಾ ಶ್ರಾದ್ಧಂ ಚ ವಿಧಿವಲ್ಲಭೇದ್ಗೋದಾನಜಂ ಫಲಂ ॥ ೨೦ ॥
ಗಚ್ಛೇಚ್ಚ ಶಾಂಕರಂ ತೀರ್ಥಂ ತತಸ್ತ್ರೈಲೋಕ್ಯಪಾವನಂ ।
ಯತ್ರ ಸ್ನಾತ್ವಾ ನರೋಃ ಭಕ್ತ್ಯಾ ಲಭೇದ್ಬಹುಸುವರ್ಣಕಂ ॥ ೨೧ ॥
ತತೋ ನಾಗಸರೋ ಗಚ್ಛೇತ್ತೀರ್ಥಂ ಪಾಪಪ್ರಣಾಶನಂ ।
ಪಿತ್ನಾನ್ಸಂತರ್ಪ್ಯ ವಿಧಿವನ್ನಾಗಲೋಕಮವಾಪ್ನುಯಾತ್ ॥ ೨೨ ॥
ಲಕ್ಷ್ಮೀಂ ನದೀಂ ತತೋ ಗಚ್ಛೇದ್ಗಚ್ಛಂತೀಂ ಸಾಗರಂ ಪ್ರತಿ ।
ಯಸ್ಯಾ ದರ್ಶನಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೨೩ ॥
ಶ್ರಾದ್ಧೇ ಕೃತೇ ತು ವಿಪ್ರೇಂದ್ರಾಃ ಪಿತರೋ ಮುಕ್ತಿಮಾಪ್ನುಯುಃ ।
ದಾನೇ ಮನೋರಥಾವಾಪ್ತಿರ್ಜಾಯತೇ ನಾತ್ರ ಸಂಶಯಃ ॥ ೨೪ ॥
ಕಂಬುಸರಸ್ತತೋ ಗಚ್ಛೇತ್ತೀರ್ಥಂ ಪಾಪಪ್ರಣಾಶನಂ ।
ತರ್ಪಣೇ ಚ ಕೃತೇ ಶ್ರಾದ್ಧೇ ಹ್ಯಗ್ನಿಷ್ಟೋಮಫಲಂ ಲಭೇತ್ ॥ ೨೫ ॥

---

೧೯-೨೦. ಅಲ್ಲಿ ಭಕ್ತಿಯಿಂದ ಮಿಂದ ಮಾನವನು ಬಡವನಾಗುವುದಿಲ್ಲ. ಅನಂತರ ಸಕಲ ಪಾಪಗಳನ್ನು ಪರಿಹರಿಸುವ ಸಾಂಬ ತೀರ್ಥಕ್ಕೆ ತೆರಳಬೇಕು. ಅಲ್ಲಿ ವಿಧಿಯಂತೆ ಶ್ರಾದ್ಧಗೈದರೆ ಗೋದಾನದ ಫಲವು ಲಭಿಸುವುದು.

೨೧. ತರುವಾಯ ಮೂರು ಲೋಕಗಳಲ್ಲಿಯೂ ಪವಿತ್ರವಾದುದೆಂದೂ ಹೆಸರಾದ ಶಂಕರತೀರ್ಥಕ್ಕೆ ಹೋಗಬೇಕು. ಅಲ್ಲಿ ಭಕ್ತಿಯಿಂದ ಮಿಂದ ಮಾನವನು ಬಹಳ ಸುವರ್ಣವನ್ನು ಹೊಂದುವನು.

೨೨. ಅನಂತರ ಪಾಪವನ್ನು ನಿವಾರಿಸುವ ನಾಗಸರ ತೀರ್ಥಕ್ಕೆ ಹೋಗಬೇಕು. ಅಲ್ಲಿ ಪಿತೃಗಳಿಗೆ ವಿಧಿಯಂತೆ ತರ್ಪಣ ಮಾಡಿದವನು ನಾಗಲೋಕಕ್ಕೆ ಹೋಗುವನು

೨೩. ಬಳಿಕ ಸಮುದ್ರಕ್ಕೆ ಹೋಗುತ್ತಿರುವ ಲಕ್ಷ್ಮೀನದಿಗೆ ಹೋಗಬೇಕು. ಅದನ್ನು ನೋಡುವುದರಿಂದಲೇ ಮನುಷ್ಯನು ಸಕಲ ಪಾಪಗಳಿಂದ ಮುಕ್ತನಾಗುವನು.

೨೪. ಬ್ರಾಹ್ಮಣೋತ್ತಮರೆ ! ಅಲ್ಲಿ ಶ್ರಾದ್ಧಮಾಡಿದವನು ಮುಕ್ತಿಯನ್ನು ಹೊಂದುವನು. ದಾನದಿಂದ ಇಷ್ಟಾರ್ಥವು ನಿಜವಾಗಿಯೂ ಲಭಿಸುವುದು.

೨೫. ಅನಂತರ ಪಾಪವನ್ನು ನೀಗಿಸುವ ಕಂಬುಸರಕ್ಕೆ ಹೋಗಬೇಕು. ಅಲ್ಲಿ ತರ್ಪಣ ಶ್ರಾದ್ಧಗಳನ್ನು ಮಾಡಿದವನಿಗೆ ಅಗ್ನಿಷ್ಟೋಮ ಫಲವು ಲಭಿಸುವುದು.

ಕುಶತೀರ್ಥಂ ತತೋ ಗಚ್ಛೇತ್ಸ್ನಾತ್ವಾ ಸಂತರ್ಪಯೇತ್ಪಿತ್ರ್ಯಾ॒ |
ಧಾನಂ ದತ್ವಾ ಯಥಾಶಕ್ತ್ಯಾ ನಿರ್ಮಲಂ ಲೋಕಮಾಪ್ನುಯಾತ್ || ೨೬ ||
ದ್ಯುಮ್ನತೀರ್ಥಂ ಚ ತತ್ರೈವ ಸರ್ವಪಾಪಪ್ರಣಾಶನಂ |
ಕೃತ್ವಾ ಶ್ರಾದ್ಧಂ ಚ ತತ್ರೈವ ವಾಜಿಮೇಧಫಲಂ ಲಭೇತ್ || ೨೭ ||
ಕುಶತೀರ್ಥಂ ತತೋ ಗಚ್ಛೇತ್ ಪಿತ್ರೂಣಾಂ ತೃಪ್ತಿರಕ್ಷಯಾ |
ಯತ್ರ ಶ್ರಾದ್ಧಾತ್ತರ್ಪಣಾಚ್ಚ ಜಾಯತೇ ನಾತ್ರ ಸಂಶಯಃ || ೨೮ ||
ಜಾಲತೀರ್ಥಂ ತತೋ ಗಚ್ಛೇತ್ಸರ್ವಪಾಪಹರಂ ಶುಭಂ |
ದುರ್ವಾಸಸಾ ಯತ್ರ ಶಪ್ತಾಃ ಕೋಪಾದ್ಯದುಕುಮಾರಕಾಃ || ೨೯ ||
ದೇವೋ ಜಾಲೇಶ್ವರಸ್ತತ್ರ ಸಂಬಭೂವ ಉಮಾಪತಿಃ |
ಜಾಲೇಶ್ವರಂ ನರೋ ದೃಷ್ಟ್ವಾ ಸದ್ಯಃ ಪಾಪಾತ್ಪ್ರಮುಚ್ಯತೇ || ೩೦ ||
ಸಂಪೂಜ್ಯ ದೇವಂ ಭಕ್ತ್ಯಾ ಚ ಶಿವಲೋಕಮವಾಪ್ನುಯಾತ್ || ೩೧ ||
ಚಕ್ರಸ್ವಾಮಿಸುತೀರ್ಥಂ ಚ ತತೋ ಗಚ್ಛೇದ್ಧಿ ಮಾನವಃ |
ಕೃತ್ವಾ ಸ್ನಾನಂ ಪಿತ್ರ್ಯಾಂಸ್ತರ್ಪ್ಯ ವಿಷ್ಣುಲೋಕಮವಾಪ್ನುಯಾತ್ || ೩೨ ||

---

೨೬. ತರುವಾಯ ಕುಶತೀರ್ಥಕ್ಕೆ ಹೋಗಿ ಮಿಂದು ಪಿತೃಗಳಿಗೆ ತರ್ಪಣ ಮಾಡಿ ಶಕ್ತ್ಯನುಸಾರ ದಾನವನ್ನಿತ್ತವನು ನಿರ್ಮಲವಾದ ಲೋಕವನ್ನು ಹೊಂದುವನು.

೨೭. ಅಲ್ಲಿಯೇ ಸಕಲ ಪಾಪಗಳನ್ನು ನಿವಾರಿಸುವ ದ್ಯುಮ್ನತೀರ್ಥ ವಿರುವುದು, ಅಲ್ಲಿ ಶ್ರಾದ್ಧ ಮಾಡಿದವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೨೮. ಅನಂತರ ಕುಶತೀರ್ಥಕ್ಕೆ ಹೋಗಬೇಕು. ಅಲ್ಲಿ ಶ್ರಾದ್ಧ, ತರ್ಪಣಗಳನ್ನು ಮಾಡುವುದರಿಂದ ಪಿತೃಗಳಿಗೆ ಶಾಶ್ವತ ತೃಪ್ತಿಯಾಗುವುದು.

೨೯. ತರುವಾಯ ಸಕಲ ಪಾಪಗಳನ್ನು ನಿವಾರಿಸುವ ರಮ್ಯವಾದ ಜಾಲ ತೀರ್ಥಕ್ಕೆ ಹೋಗಬೇಕು. ಅಲ್ಲಿ ದುರ್ವಾಸನು ಯದುಕುಮಾರನನ್ನು ಶಪಿಸಿರುವನು.

೩೦. ಉಮಾಪತಿಯಾದ ಶಂಕರನು ಅಲ್ಲಿ ಜಾಲೇಶ್ವರನೆನಿಸಿದನು. ಜಾಲೇಶ್ವರನನ್ನು ನೋಡಿದ ಮಾನವನು ಕೂಡಲೆ ಪಾಪಮುಕ್ತನಾಗುವನು.

೩೧. ಅವನನ್ನು ಭಕ್ತಿಯಿಂದ ಪೂಜಿಸಿದವನು ಶಿವಲೋಕವನ್ನು ಹೊಂದುವನು.

೩೨. ಬಳಿಕ ಚಕ್ರಸ್ವಾಮಿ ತೀರ್ಥಕ್ಕೆ ಹೋಗಬೇಕು. ಅಲ್ಲಿ ಮಿಂದು ಪಿತೃತರ್ಪಣವಮಾಡಿದವನು ವಿಷ್ಣುಲೋಕವನ್ನು ಹೊಂದುವನು.

ಜರತ್ಕಾರುಕೃತಂ ತೀರ್ಥಂ ಸರ್ವಪಾಪಪ್ರಣಾಶನಂ ।
ಸ್ನಾತ್ವಾ ತತ್ರ ದ್ವಿಜಶ್ರೇಷ್ಠಾ ನ ದುರ್ಗತಿಮವಾಪ್ನುಯಾತ್ ॥ ೩೩ ॥
ತತೋ ಗಚ್ಛೇದ್ದ್ವಿಜಶ್ರೇಷ್ಠಾಸ್ತೀರ್ಥಂ ಖಂಜನಕಾಭಿಧಂ ।
ಆಸೀತ್ಖಂಜನಕೋ ನಾಮ ದೈತ್ಯಶ್ಚಾತಿಬಲಾನ್ವಿತಃ ॥ ೩೪ ॥
ತತಃ ಖಂಜನಕಂ ತೀರ್ಥಂ ತಸ್ಯ ನಾಮ್ನೇತಿ ವಿಶ್ರುತಂ ।
ತತ್ರ ಸ್ನಾತ್ವಾ ನರೋ ಯಾತಿ ಸೋಮಲೋಕಂ ನ ಸಂಶಯಃ ॥ ೩೫ ॥
ಸಂತಿ ತೀರ್ಥಾನ್ಯನೇಕಾನಿ ಸುಗುಪ್ತಾನಿ ದ್ವಿಜೋತ್ತಮಾಃ ।
ತಾನಿ ಗಚ್ಛೇತ್ತು ವಿಪ್ರೇಂದ್ರಾಃ ಸರ್ವಪಾಪಾನುತ್ತಯೇ ॥ ೩೬ ॥
ತತೋ ಗಚ್ಛೇದ್ದ್ವಿಜಶ್ರೇಷ್ಠಾಸ್ತೀರ್ಥಮಾನಕದುಂದುಭೇಃ ।
ಶೂರತೀರ್ಥಂ ಪರಮಕಂ ಗದಾತೀರ್ಥಮತಃ ಪರಂ ॥ ೩೭ ॥
ಗಾವಲ್ಗಣಸ್ಯ ತೀರ್ಥಂ ಚ ಅಕ್ರೂರಸ್ಯ ಮಹಾತ್ಮನಃ ।
ಬಲದೇವಸ್ಯ ತೀರ್ಥಂ ತು ಉಗ್ರಸೇನಸ್ಯಾಚಾಪರಂ ॥ ೩೮ ॥
ಅರ್ಜುನಸ್ಯ ಚ ತೀರ್ಥಂ ತು ಸುಭದ್ರಾತೀರ್ಥಮೇವ ಚ ।
ದೇವಕೀತೀರ್ಥಮಾದ್ಯಂ ತು ರೋಹಿಣೀತೀರ್ಥಮೇವ ಚ ॥ ೩೯ ॥

---

೩೩. ಜರತ್ಕಾರವು ನಿರ್ಮಿಸಿರುವ ತೀರ್ಥವು ಸಕಲ ಪಾಪಗಳನ್ನು ನಿವಾರಿಸುವುದು. ದ್ವಿಜೋತ್ತಮರೆ! ಅಲ್ಲಿ ಮಿಂದವರು ಬಡವರಾಗುವುದಿಲ್ಲ.

೩೪. ಬ್ರಾಹ್ಮಣವರ್ಯರೆ! ಬಳಿಕ ಖಂಜನಕವೆಂಬ ತೀರ್ಥಕ್ಕೆ ಹೋಗಬೇಕು. ಹಿಂದೆ ಖಂಜನಕನೆಂಬ ಅತಿಬಲಿಷ್ಠನಾದ ದೈತ್ಯನೇರ್ವನಿದ್ದನು.

೩೫. ಅವನ ಹೆಸರಿನಿಂದ ಆ ತೀರ್ಥವು ಖಂಜನಕ ಎಂದು ಹೆಸರುಗೊಂಡಿತು. ಅಲ್ಲಿ ಮಿಂದ ಮಾನವನು ಚಂದ್ರಲೋಕಕ್ಕೆ ನಿಜವಾಗಿಯೂ ತೆರಳುವನು.

೩೬. ಬ್ರಾಹ್ಮಣೋತ್ತಮರೆ! ಇವೇಅಲ್ಲದೆ ಆ ಪ್ರದೇಶದಲ್ಲಿ ಗುಪ್ತವಾದ ಅನೇಕ ತೀರ್ಥಗಳಿರುವುವು. ಸಕಲಪಾಪ ಪರಿಹಾರಕ್ಕಾಗಿ ಅಲ್ಲಿಗೆಲ್ಲ ಹೋಗಬೇಕು.

೩೭–೪೩. ಅನಂತರ ಆನಕದುಂದುಭಿ, ಶೂರ, ಗದ, ಗಾವಲ್ಗಣ, ಅಕ್ರೂರ, ಬಲರಾಮ, ಉಗ್ರಸೇನ, ಅರ್ಜುನ, ಸುಭದ್ರಾ, ದೇವಕೀ, ರೋಹಿಣೀ, ಉದ್ಧವ,

ಉದ್ಧವಸ್ಯ ಚ ತೀರ್ಥಂ ತು ಸಾರಂಗಾಖ್ಯಂ ತಥೈವ ಚ ।
ಸತ್ಯಭಾಮಾಕೃತಂ ತೀರ್ಥಂ ಭದ್ರತೀರ್ಥಮತಃ ಪರಂ ॥ ೪೦ ॥

ಜಾಮದಗ್ನ್ಯಸ್ಯ ತೀರ್ಥಂ ತು ರಾಮಸ್ಯ ಚ ಮಹಾತ್ಮನಃ ।
ಭಾಸತೀರ್ಥಂ ಚ ತತ್ರೈವ ಶುಕತೀರ್ಥಮತಃ ಪರಂ ॥ ೪೧ ॥

ಕರ್ದಮಸ್ಯ ಚ ತೀರ್ಥಂ ತು ಕಪಿಲಸ್ಯ ಮಹಾತ್ಮನಃ ।
ಸೋಮತೀರ್ಥಂ ಚ ತತ್ರೈವ ರೋಹಿಣೀತೀರ್ಥಮೇವ ಚ ॥ ೪೨ ॥

ಏತಾನ್ಯನ್ಯಾನಿ ಸಂಕ್ಷೇಪಾನ್ಮಯಾ ವಃ ಕಥಿತಾನಿ ಚ ।
ಸರ್ವಪಾಪಹರಾಣೀಹ ಮೋಕ್ಷದಾನಿ ನ ಸಂಶಯಃ ॥ ೪೩ ॥

ಪ್ರಚ್ಛನ್ನಾನಿ ದ್ವಿಜವರಾಸ್ತೀರ್ಥಾನಿ ಕಲಿಸಂಕ್ರಮೇ ।
ಪಾವಿತಾನಿ ಸಮುದ್ರೇಣ ಪಾಂಸುನಾಪ್ಯುದಕೇನ ಚ ॥ ೪೪ ॥

ಏತನ್ಮಯಾ ವಃ ಕಥಿತಂ ಸಂಕ್ಷೇಪಾತ್ತೀರ್ಥವಿಸ್ತರಂ ।
ಆತ್ಮಪ್ರಜ್ಞಾನುಮಾನೇನ ಕಿಮನ್ಯಚ್ಛ್ರೋತುಮಿಚ್ಛಥ ॥ ೪೫ ॥

---

ಸಾರಂಗ, ಸತ್ಯಭಾಮಾ, ಭದ್ರಾ, ಜಾಮದಗ್ನ್ಯ, ರಾಮ, ಭಾಸ, ಶುಕ, ಕರ್ದಮ, ಕಪಿಲ, ಸೋಮ, ಇವರ ಹೆಸರುಗಳಿಂದ ಪ್ರಸಿದ್ಧರಾಗಿರುವ ತೀರ್ಥಗಳಿಗೆ ಹೋಗಬೇಕು.

೪೩. ನಾನು ನಿಮಗೆ ಈ ತೀರ್ಥಗಳನ್ನೂ, ಇತರ ತೀರ್ಥಗಳನ್ನೂ ಸಂಕ್ಷೇಪವಾಗಿ ಹೇಳಿರುವೆನು. ಇವು ಈ ಲೋಕದಲ್ಲಿ ನಿಶ್ಚಯವಾಗಿಯೂ ಸಕಲ ಪಾಪಗಳನ್ನು ಪರಿಹರಿಸುವುವೂ, ಮೋಕ್ಷವನ್ನೀಯುವುವೂ ಆಗಿರುವುವು.

೪೪. ದ್ವಿಜೋತ್ತಮರೆ! ಕಲಿದೋಷದಿಂದ ಈ ತೀರ್ಥಗಳು ಸಮುದ್ರದ ನೀರಿನಿಂದಲೂ, ಧೂಳಿನಿಂದಲೂ ಮುಚ್ಚಿರುವುವು.

೪೫. ಈ ತೀರ್ಥ ವಿಸ್ತಾರವನ್ನು ನಿಮಗೆ ನನ್ನ ಬುದ್ಧಿಯ ಊಹೆಯಿಂದ ಹೇಳಿದ್ದೇನೆ. ಬೇರೆ ಏನನ್ನು ಕೇಳಬಯಸುವಿರಿ?

ಶೃಣುಯಾತ್ಪರಯಾ ಭಕ್ತ್ಯಾ ತೀರ್ಥಯಾತ್ರಾಮಿಮಾಂ ದ್ವಿಜಾಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೪೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇಽದ್ವಾರಕಾಮಾಹಾತ್ಮ್ಯೇ
ತೀರ್ಥವೃಂದಮಾಹಾತ್ಮ್ಯವರ್ಣನಂ ನಾಮ
ಷೋಡಶೋಽಧ್ಯಾಯಃ

---

೪೬. ಬ್ರಾಹ್ಮಣರೆ! ಈ ತೀರ್ಥಯಾತ್ರೆಯ ಕ್ರಮವನ್ನು ಅತಿ ಭಕ್ತಿಯಿಂದ ಕೇಳಿದವನು ಸಕಲ ಪಾಪಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ತೀರ್ಥವೃಂದಮಾಹಾತ್ಮ್ಯವರ್ಣನವೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತಾದಶೋಽಧ್ಯಾಯಃ

### ರುಕ್ಮಿಗರ್ವಪರಿಹಾರವೃತ್ತಾಂತವರ್ಣನಂ

ಪ್ರಹ್ಲಾದ ಉವಾ :—

ಕೃತ್ವಾಭಿಷೇಕಂ ತೀರ್ಥೇಷು ಯಥಾವದ್ದತ್ತದಕ್ಷಿಣಃ ।
ಪೂಜಯೇಚ್ಚ ತತೋ ದೇವಂ ಕೃಷ್ಣಾಖ್ಯಂ ಪುರುಷಂ ಪರಂ ॥ ೧ ॥

ಋಷಯ ಊಚುಃ :—

ಪೂಜಾವಿಧಿಂತು ಕೃಷ್ಣಸ್ಯ ಶ್ರೋತುಕಾಮಾಃ ಸಮಾಸತಃ ।
ಕಥಯಾಽಽಚರಣೋಪೇತಂ ಯಥಾವದ್ದೈತ್ಯಸತ್ತಮ ॥ ೨ ॥
ದ್ವಾರಪಾಲಾಶ್ಚ ಕೇ ತತ್ರ ಕಃ ಪೂರ್ವಂ ಕಶ್ಚ ಪೃಷ್ಠತಃ ।
ಪುರೀಯಂ ಸರ್ವತೋ ದೈತ್ಯ ತಿಷ್ಠತೇ ಕೇನ ಪಾಲಿತಾ ॥ ೩ ॥
ಆನುಪೂರ್ವ್ಯಾತ್ಸಮಾಸೇನ ಪೂಜನೀಯಾ ಯಥಾವಿಧಿ ।
ಕಥಯಸ್ವವಿಧಿಜ್ಞೋಽಸಿ ಕೃಷ್ಣೈಕಚರಣಪ್ರಿಯಃ ॥ ೪ ॥

---

### ಕನ್ನಡದ ಅನುವಾದ

### ರುಕ್ಮಿಗರ್ವಪರಿಹಾರವೃತ್ತಾಂತವರ್ಣನ

೧. ಪ್ರಹ್ಲಾದನು ಹೇಳುತ್ತಾನೆ:— ಈ ಎಲ್ಲ ತೀರ್ಥಗಳಲ್ಲಿ ವಿಧಿಯಂತೆ ಮಿಂದು ದಕ್ಷಿಣೆಯನ್ನಿತ್ತು ಬಳಿಕ ಕೃಷ್ಣನನ್ನು ಪೂಜಿಸಬೇಕು.

೨. ಋಷಿಗಳು ಹೇಳುತ್ತಾರೆ :— ದೈತ್ಯರಾಜ! ನಾವು ಕೃಷ್ಣನ ಪೂಜಾಕ್ರಮವನ್ನು ಸಂಕ್ಷೇಪವಾಗಿ ಕೇಳಲಿಚ್ಛಿಸುತ್ತೇವೆ. ಅದನ್ನು ಆಚರಣೆಗಳೊಡನೆ ನಮಗೆ ಹೇಳು.

೩. ಅಲ್ಲಿಯ ದ್ವಾರಪಾಲಕರಾರು ? ಅವರಲ್ಲಿ ಮೊದಲನೆಯವನೂ, ಅನಂತರದವನೂ ಯಾರು? ಈ ಪಟ್ಟಣವನ್ನು ಎಲ್ಲೆಡೆಯಲ್ಲಿಯೂ ಯಾರು ಕಾಪಾಡುತ್ತಿರುವರು ?

೪. ನಾವು ವಿಧಿಯಂತೆ ಪೂಜಿಸಬೇಕು. ಕೃಷ್ಣಭಕ್ತನಾದ ನೀನು ಈ ವಿಧಿಯನ್ನರಿತಿರುವೆ. ಅದನ್ನು ನಮಗೆ ಹೇಳು.

ಶ್ರೀ ಪ್ರಹ್ಲಾದನು ಹೇಳುತ್ತಾನೆ :— ವಿಪ್ರೇಂದ್ರರೆ! ನಾನು ಹಿಂದೆ ಕೇಳಿರುವ ಕಲಿಯುಗದಲ್ಲಿ ಕೃಷ್ಣ ಪೂಜಾವಿಧಿಯನ್ನು ಕ್ರಮವಾಗಿ ಹೇಳುತ್ತೇನೆ. ಕೇಳಿರಿ.

ಶ್ರೀ ಪ್ರಹ್ಲಾದ ಉವಾಚ :—
ಶ್ರೂಯತಾಂ ಪೂಜನಂ ವಿಪ್ರಾಃ ಶ್ರುತಪೂರ್ವಂ ವಿಧಾನತಃ ।
ಕಲೌ ಕೃಷ್ಣಸ್ಯ ವಿಪ್ರೇಂದ್ರಾಃ ಯಥಾವದನುಪೂರ್ವಶಃ ॥ ೫ ॥
ಪೂರ್ವದ್ವಾರಸ್ಥಿತಾನ್ದೇವಾನ್ಶೃಣುಧ್ವಂ ಸುಸಮಾಹಿತಾಃ ।
ಜಯಂತಃ ಪ್ರಥಮಂ ಪೂಜ್ಯಃ ಸರ್ವಪಾಪಹರಃ ಶುಭಃ ॥ ೬ ॥
ಸ್ಥಾಪಿತೋ ದೇವರಾಜೇನ ಪೂಜಾರ್ಥಂ ಕೇಶವಸ್ಯ ಹಿ ।
ತಸ್ಯೈವಾನುಚರಾನ್ವಕ್ಷ್ಯೇ ತಾನ್ನಿಬೋಧತ ಸತ್ತಮಾಃ ॥ ೭ ॥
ವಜ್ರನಾಭಃ ಸುನಾಭಶ್ಚ ವಜ್ರಬಾಹುರ್ಮಹಾಹನುಃ ।
ವಜ್ರದಂಷ್ಟ್ರೋ ವಜ್ರಧಾರೀ ವಜ್ರಹಾ ವಜ್ರಲೋಚನಃ ॥ ೮ ॥
ಶ್ವೇತಮೂರ್ಧಾ ಶ್ವೇತಮಾಲೀ ಜಯಂತಾನುಚರಾಶ್ಚತೇ ।
ಏತೇ ಶಸ್ತ್ರೋದ್ಯತಕರಾ ರಕ್ಷ್ಯಂತೇ ತಮಹರ್ನಿಶಂ ॥ ೯ ॥
ಪೂರ್ವದ್ವಾರೇ ಸುಸಂನದ್ಧಾ ಜಯಂತೋದ್ದೇಶಕಾರಿಣಃ ।
ಪೂರ್ವದ್ವಾರೇ ಚ ರಕ್ಷಾರ್ಥಂ ನರನಾಥೋ ವಿನಾಯಕಃ ॥ ೧೦ ॥
ತರುಣಾರ್ಕಶ್ಚ ವೈ ಸೂರ್ಯೋ ದೇವ್ಯೋ ವೈ ಸಹಮಾತರಃ ।
ಈಶ್ವರಶ್ಚಾಪಿ ದುರ್ವಾಸಾ ನಾಗರಾಜಸ್ತು ತಕ್ಷಕಃ ॥ ೧೧ ॥
ಸೇನಾನೀಃ ಕಾರ್ತಿಕೇಯಶ್ಚ ರಾಕ್ಷಸಶ್ಚ ಮಹಾಹನುಃ ।
ತತ್ರ ದೀರ್ಘನಖೋ ನಾಮ ದಾನವಃ ಸುಪ್ರತಿಷ್ಠಿತಃ ॥ ೧೨ ॥
ವಿಶ್ವಾವಸುಶ್ಚ ಗಂಧರ್ವೋ ಮೇನಕಾ ಚ ವರಾಪ್ಸರಾಃ ।

---

೬. ನೀವು ಸಾವಧಾನಮನಸ್ಸಿನಿಂದ ಪೂರ್ವದ್ವಾರದಲ್ಲಿರುವ ದೇವತೆಗಳನ್ನು ಕೇಳಿರಿ. ಮೊದಲು ಸಕಲಪಾಪಗಳನ್ನು ನಿವಾರಿಸುವ ಜಯಂತನನ್ನು ಪೂಜಿಸಬೇಕು.

೭. ಇವನನ್ನು ಇಂದ್ರನು ಕೃಷ್ಣನ ಪೂಜೆಗಾಗಿ ಸ್ಥಾಪಸಿರುವನು. ಸಾಧುವರ್ಯರಿ ! ಅವನ ಸೇವಕರನ್ನು ಹೇಳುವೆನು. ಅವರನ್ನು ಕೇಳಿ ತಿಳಿಯಿರಿ.

೮–೧೪. ವಜ್ರನಾಭ, ಸುನಾಭ, ವಜ್ರಬಾಹು, ಮಹಾಹನು, ವಜ್ರದಂಷ್ಟ್ರ, ವಜ್ರಧಾರೀ, ವಜ್ರಹಾ, ವಜ್ರಲೋಚನ, ಶ್ವೇತಮೂರ್ಧಾ, ಶ್ವೇತಮಾಲೀ ಎಂಬ ಜಯಂತನ ಸೇವಕರು ಶಸ್ತ್ರಗಳನ್ನು ಹಿಡಿದುಕೊಂಡು ಸಿದ್ಧರಾಗಿ ಜಯಂತನ ಅಪ್ಪಣೆಯನ್ನು ನಡೆಸುತ್ತ ಪೂರ್ವದ್ವಾರದಲ್ಲಿ ಅವನನ್ನು ಕಾಪಾಡುವರು. ಮತ್ತು ನರನಾಥನಾದ ವಿನಾಯಕ, ತರುಣಾರ್ಕ, ಸೂರ್ಯ, ಸಪ್ತಮಾತೃಗಳು, ಈಶ್ವರಾಂಶನಾದ ದುರ್ವಾಸ, ನಾಗಗಳೊಡೆಯನಾದ ತಕ್ಷಕ, ಸೇನಾಪತಿಯಾದ ಷಣ್ಮುಖ, ಮಹಾಹನುವೆಂಬ ರಾಕ್ಷಸ, ದೀರ್ಘನಖನೆಂಬ ದಾನವ, ವಿಶ್ವಾವಸುವೆಂಬ ಗಂಧರ್ವ, ಮೇನಕೆ

ಸನತ್ಕುಮಾರಸಹಿತೋ ವಸಿಷ್ಠೋ ಭಗವಾನೃಷಿಃ ॥ ೧೩ ॥
ಏತೇ ಪೂಜ್ಯಾಃ ಪೂರ್ವತಸ್ತು ನ್ಯಗ್ರೋಧಶ್ಚ ಮಹಾದ್ರುಮಃ ।
ಪೂರ್ವದ್ವಾರಸ್ಥಿತಾಹ್ಯೇತ ಆಗ್ನೇಯ್ಯಾಂ ಶೃಣುತಾಥ ಮೇ ॥ ೧೪ ॥
ಜ್ವಾಲಾಮುಖೋಥೋ ರಕ್ತಾಕ್ಷಃ ಸ್ಮಶಾನನಿಲಯಃ ಕ್ರಥಃ ।
ಮಾಂಸಾದೋ ರುಧಿರಾಹ್ಲಾದಃ ಕೃಷ್ಣಃ ಕೃಷ್ಣಜಟಾಧರಃ ॥ ೧೫ ॥
ತ್ರಾಸನೀ ಭಂಜನಶ್ಚೈವ ಹ್ಯಾಗ್ನೇಯ್ಯಾಂ ದಿಶಿ ಸಂಸ್ಥಿತಾಃ ।
ದಿಶಂ ರಕ್ಷಂತಿ ಸನ್ನದ್ಧಾ ದಕ್ಷಿಣಾಂ ಶೃಣುತಾಥ ಮೇ ॥ ೧೬ ॥
ದಂಡಪಾಣಿರ್ಮಹಾನಾದಃ ಪಾಶಹಸ್ತಃ ಸುಲೋಚನಃ ।
ಅನಿವರ್ತ್ಯಕ್ರಮಶ್ಚೈವ ತಥಾ ದುಂದುಭಿನಿಸ್ವನಃ ॥ ೧೭ ॥
ಖರಸ್ವನೋ ಘುರ್ಘುರವಾಕ್ ತಥಾ ಮಾನಪ್ರಿಯಃ ಸದಾ ।
ಮಲ್ಲಿಕಾಕ್ಷಶ್ಚ ಏತೇಷಾಂ ಪ್ರಣತೋ ದ್ವಾರಪಾಲಕಃ ।
ಮಹಿಷಾರ್ಕಶ್ಚ ವೈ ಸೂರ್ಯೋ ಭೂಷಣಸ್ತ ತಥೇಶ್ವರಃ ॥ ೧೮ ॥
ಚಂಡಿಕಾ ಚ ತಥಾ ದೇವೀ ಹೂರ್ಧ್ವಬಾಹುಶ್ಚ ರಾಕ್ಷಸಃ ।
ಪದ್ಮಾಕ್ಷಃ ಕ್ಷೇತ್ರಪಾಲಶ್ಚ ನಾಗಶ್ಚಾಶ್ವತರಸ್ತಥಾ ॥ ೨೦ ॥

---

ಯೆಂಬ ಅಪ್ಸರಸ್ತ್ರೀ, ಸನತ್ಕುಮಾರರಿಂದ ಸಹಿತನಾದ ವಸಿಷ್ಠಮುನಿಯೂ, ಇರುವರು ಆಲದಮರವೂ ಅಲ್ಲಿಯೇ ನೆಲಸಿರುವುದು ಇವರೆಲ್ಲ ಪೂರ್ವದ್ವಾರದಲ್ಲಿರುವವರು. ಆಗ್ನೇಯದಿಕ್ಕಿನಲ್ಲಿರುವವರನ್ನು ಕೇಳು.

೧೫–೧೬. ಜ್ವಾಲಾಮುಖನಾದ ರಕ್ತಾಕ್ಷ, ಸ್ಮಶಾನವಾಸಿ ಕ್ರಥ, ರಕ್ತಾಹಾರಿಯಾದಮಾಂಸಾದ, ಕೃಷ್ಣಜಟೆಯನ್ನು ಧರಿಸಿಸುವ ಕೃಷ್ಣ, ತ್ರಾಸನ, ಭಂಜನ, ಇವರು ಆಗ್ನೇಯದಿಕ್ಕನ್ನು ರಕ್ಷಿಸುತ್ತಿರುವರು. ತರುವಾಯ ದಕ್ಷಿಣ ದಿಕ್ಕಿನಲ್ಲಿರುವವರನ್ನು ಕೇಳು.

೧೭–೨೨. ದಂಡವನ್ನು ಧರಿಸಿರುವ ಮಹಾನಾದ, ಪಾಶವನ್ನು ಹಿಡಿದಿರುವ ಸುಲೋಚನ, ಅನಿವರ್ತ್ಯಕ್ರಮ, ದುಂದುಭಿ ನಿಸ್ವನ, ಖರಸ್ವನ, ಘುರ್ಘುರವಾಕ್, ಮನಃಪ್ರಿಯ, ಮಲ್ಲಿಕಾಕ್ಷ ಇವರು ಪ್ರಣತನೆಂಬ ದ್ವಾರಪಾಲಕನನ್ನು ರಕ್ಷಿಸುವರು. ಮತ್ತು ದುಂದುಭಿ ವಿನಾಯಕು ಮಹಿಷಾರ್ಕ ಸೂರ್ಯ, ಭೂಷಣ, ಈಶ್ವರ, ಚಂಡಿಕಾದೇವಿ, ಊರ್ಧ್ವಬಾಹು, ಪದ್ಮಾಕ್ಷ ಕ್ಷೇತ್ರಪಾಲ, ನಾಗ ಅಶ್ವತರ, ಚಿತ್ರಾಂಗದ ಗಂಧರ್ವ, ಉರ್ವಶಿಯೆಂಬ ಅಪ್ಸರಸ್ತ್ರೀ, ಶಾಲವೆಂಬ ವೃಕ್ಷರಾಜ.

ಚಿತ್ರಾಂಗದಶ್ಚ ಗಂಧರ್ವ ಉರ್ವಶೀ ಚ ವರಾಪ್ಸರಾಃ ।
ಯೋ ರಾಜಾ ಸರ್ವವೃಕ್ಷಾಣಾಂ ಶಾಲಶ್ಚಾಪಿ ಮಹಾದ್ರುಮಃ ॥ ೨೧ ॥
ಸನಾತನಋಷಿಶ್ರೇಷ್ಠೋ ಹ್ಯಗಸ್ತ್ಯಶ್ಚ ಮಹಾತಪಾಃ ।
ಏತೇ ಯಾಮ್ಯದಿಶಿ ದ್ವಾರಂ ರಕ್ಷಂತಿ ಸುಸಮಾಹಿತಾಃ ॥ ೨೨ ॥
ಗೀತಕೃನ್ನರ್ತಕೋ ನಗ್ನಃ ಕಂಬಲೀ ದಹನಪ್ರಿಯಃ ।
ಹಸನೋ ನೇತ್ರಭಂಗಶ್ಚ ಭ್ರೂವಿಕಾಲೋ ವಿಜೃಂಭಕಃ ॥ ೨೩ ॥
ಮುಶಲೀ ಪ್ರಭುರೇತೇಷಾಂ ಸನ್ನದ್ಧೋ ವರ್ತತೇ ದ್ವಿಜಾಃ ।
ರಕ್ಷಂತಿ ನೈರ್ಋತೀಮಾಶಾಂ ಪಶ್ಚಿಮಾಂ ಶೃಣುತಾಪರಾನ್ ॥ ೨೪ ॥
ಸ್ವಸ್ತಿಕಃ ಶಂಖಮೂರ್ಧಾ ಚ ನೀಲವಾಸಾಃ ಶುಭಾನನಃ ।
ಪಾಶಹಸ್ತಃ ಶೂಲಹಸ್ತ ಏಕಪಾದೇಕಲೋಚನಃ ॥ ೨೫ ॥
ಪಶ್ಚಿಮಾಯಾಂ ದಿಶಿ ತಥಾ ಪುಷ್ಪದಂತೋ ವಿನಾಯಕಃ ।
ಉದ್ಧವಾರ್ಕಶ್ಚ ವೈ ಸೂರ್ಯಃ ಶಿವಃ ಸತ್ರಾಜಿತೇಶ್ವರಃ ॥ ೨೬ ॥
ತುಂಬರುರ್ನಾಮ ಗಂಧರ್ವೋ ಘೃತಾಚೀ ಚ ವರಾಪ್ಸರಾಃ ।
ಮಹೋದರಶ್ಚ ನಾಗೇಂದ್ರೋ ರಾಕ್ಷಸಶ್ಚ ಘಟೋತ್ಕಚಃ ॥ ೨೭ ॥
ದೈತ್ಯಃ ಪಂಚಜನೋ ನಾಮ ಋಷಿಃ ಕಶ್ಯಪ ಏವ ಚ ।
ದೇವೀ ಕಪಾಲಿನೀ ನಾಮ ಅಶ್ವತ್ಥಸ್ತು ಮಹಾದ್ರುಮಃ ॥ ೨೮ ॥
ಕಪಿಲಃ ಕ್ಷೇತ್ರಪಾಲಶ್ಚ ಪ್ರತೀಚೀಂ ಪಾಂತಿ ವೈ ದಿಶಂ ।
ನಮಸ್ಕಾರ್ಯಾಸ್ತಥಾ ಪೂಜ್ಯಾ ವಾಯವ್ಯಾಂ ಶೃಣುತಾಪರಾನ್ ॥ ೨೯ ॥

---

ಮಹಾತಪಸ್ವಿಯೂ, ಸನಾತನನೂ ಆದ ಅಗಸ್ತ್ಯಮುನಿ ಇವರು ದಕ್ಷಿಣದಿಕ್ಕನ್ನು ರಕ್ಷಿಸುವರು.

೨೩–೨೪. ನೈಋತದಿಕ್ಕನ್ನು ಗೀತಕೃತ್, ನರ್ತಕ, ನಗ್ನ, ಕಂಬಲೀ, ದಹನಪ್ರಿಯ, ಹಸನ, ನೇತ್ರಭಂಗ, ಭ್ರೂವಿಕಾರ, ವಿಜೃಂಭಕ ಇವರು ರಕ್ಷಿಸುವರು. ಇವರಿಗೆ ಒಡೆಯನಾದ ಮುಸಲಿಯು ಸಿದ್ಧನಾಗಿರುವನು. ಪಶ್ಚಿಮದಿಕ್ಕಿನಲ್ಲಿರುವವರನ್ನು ಕೇಳಿರಿ.

೨೫–೨೯. ಸ್ವಸ್ತಿಕ, ಶಂಖಮೂರ್ಧಾ, ನೀಲವಾಸ, ಶುಭಾನನ, ಪಾಶಹಸ್ತ, ಸೂಲಹಸ್ತ, ಏಕಪಾತ್, ಏಕಲೋಚನ, ಪುಷ್ಪದಂತವಿನಾಯಕ, ಉದ್ಧವಾರ್ಕಸೂರ್ಯ, ಸತ್ರಾಜಿತೇಶ್ವರ, ಶಿವ, ತುಂಬುರು ಗಂಧರ್ವ, ಘೃತಾಚಿಯೆಂಬ ಅಪ್ಸರಸ್ತ್ರೀ, ಮಹೋದರನೆಂಬ ನಾಗೇಂದ್ರ, ಘಟೋತ್ಕಚರಾಕ್ಷಸ, ಪಂಚಜನದೈತ್ಯ, ಕಶ್ಯಪಋಷಿ, ಕಪಾಲಿನೀದೇವೀ, ಅಶ್ವತ್ಥವೃಕ್ಷ, ಕಪಿಲ, ಕ್ಷೇತ್ರಪಾಲ ಇವರು ಪಶ್ಚಿಮದಿಕ್ಕನ್ನು ರಕ್ಷಿಸುವರು. ಇವರನ್ನು ನಮಸ್ಕರಿಸಿ ಪೂಜಿಸಬೇಕು. ವಾಯುವ್ಯದಿಕ್ಕಿನಲ್ಲಿರುವವರನ್ನು ಕೇಳಿರಿ.

ಭಂಜನೋ ಭೈರವಶ್ಚೈವ ಕಾಲಿಕೋಽಥ ಘಟೋದರಃ ।
ಝುಂಝುಕಾಮರ್ದನಃ ಪಿಂಗೋ ರುರುಃ ಸರ್ವಭುಜೋ ವ್ರಣೀ ॥ ೩೦ ॥
ಸುಪಾರ್ಶ್ವಃ ಪ್ರಭುರೇತೇಷಾಂ ಸನ್ನದ್ಧಃ ಪಾಲಯನ್ನಿಶಂ ।
ಉದೀಚ್ಯಾಂ ದಿಶಿ ವಿಪ್ರೇಂದ್ರಾಃ ಶ್ಯಾಮಲಶ್ಚ ಗಣಾಧಿಪಃ ॥ ೩೧ ॥
ಮನ್ವಂತಕೋ ವಿರೂಪಾಕ್ಷೋ ಗೋಲಕಃ ಶ್ವೇತಸಂಪ್ಲುತಃ ।
ಉನ್ಮತ್ತಃ ಪ್ರಭುರೇತೇಷಾಮುದೀಚ್ಯಾಂ ಪಾಲಯನ್ನಿಶಂ ॥ ೩೨ ॥
ಮೂಲಸ್ಥಾನಶ್ಚ ವೈ ಸೂರ್ಯ ಇಂದ್ರೇಶಶ್ಚ ಮಹೇಶ್ವರಃ ।
ದೇವೀ ಕಂಠೇಶ್ವರೀ ನಾಮ ಕ್ಷೇತ್ರಪಾಲಶ್ಚ ಖಂಜನಃ ॥ ೩೩ ॥
ವಾಸುಕಿರ್ನಾಗರಾಜಶ್ಚ ಕೂರ್ಮಪೃಷ್ಠಶ್ಚ ದಾನವಃ ।
ಸನಕಶ್ಚ ಋಷಿಶ್ರೇಷ್ಠೋ ಗೋಲಕೋ ರಾಕ್ಷಸಸ್ತಥಾ ॥ ೩೪ ॥
ನಾರದೋ ನಾಮ ಗಂಧರ್ವೋ ರಂಭಾ ಚೈವ ವರಾಪ್ಸರಾಃ ।
ಏತೇ ಪೂಜ್ಯಾಃ ಪ್ರಯತ್ನೇನ ಪ್ಲಕ್ಷೋ ನಾಮ ಮಹಾದ್ರುಮಃ ॥ ೩೫ ॥
ಯಕ್ಷೇಶಃ ಸವಿತಾ ನಾಮ ಶ್ಯಾಮಃ ಪೂಜ್ಯಃ ಪ್ರಯತ್ನತಃ ।
ಐಶಾನ್ಯಾಂ ದಿಶಿ ವಿಪ್ರೇಂದ್ರಾಃ ಸ್ಥಿತಾ ಯೇ ತಾನ್ವದಾಮ್ಯಹಂ ॥ ೩೬ ॥
ದುರ್ಧರೋ ಭೈರವಾರಾವಃ ಕಿಂಕಿಣೀಕೋ ಮಹಾಬಲಃ ।
ಕರಾಲೋ ವಿಕಟೋ ಮೂಲೋ ಬಲಿಭುಕ್ತೋ ಬಲಿಪ್ರಿಯಃ ॥ ೩೭ ॥

---

೩೦-೩೬. ಭಂಜನ, ಭೈರವ, ಕಾಲಿಕ, ಘಟೋದರ, ಝುಂಝುಕಾಮರ್ದನ, ಪಿಂಗ, ರುರು, ಸರ್ವಭುಜ, ಅವ್ರಣೀ ಇವರು ವ್ಯಾಯುವ್ಯ ದಿಕ್ಕಿನಲ್ಲಿರುವರು. ಇವರ ಸ್ವಾಮಿಯಾದ ಸುಪಾರ್ಶ್ವನು ಇವರೊಡನೆ ಪಶ್ಚಿಮ ದಿಕ್ಕನ್ನು ಕಾಪಾಡುತ್ತಿರುವದು. ಉತ್ತರ ದಿಕ್ಕಿನಲ್ಲಿ ಶ್ಯಾಮಲ, ಗಣಾಧಿಪ, ಮನ್ವಂತಕ, ವಿರೂಪಾಕ್ಷ, ಗೋಲಕ, ಶ್ವೇತ ಸಂಪ್ಲುತ ಇವರು ಇರುವರು. ಇವರಿಗೆ ಉನ್ಮತ್ತನೆಂಬುವವನು ಒಡೆಯನು. ಮೂಲಸ್ಥಾನ ಸೂರ್ಯ, ಇಂದ್ರೇಶ ಶಿವ, ಕಂಠೇಶ್ವರೀ ದೇವೀ, ಖಂಜನ ಕ್ಷೇತ್ರಪಾಲ, ವಾಸುಕಿನಾಗರಾಜ, ಕೂರ್ಮಪೃಷ್ಠದಾನವ, ಸನಕರ್ಷಿ, ಗೋಲಕರಾಕ್ಷಸ, ನಾರದ ಗಂಧರ್ವ, ರಂಭೆಯೆಂಬ ಅಪ್ಸರಸ್ತ್ರೀ, ಪ್ಲಕ್ಷವೃಕ್ಷ, ಶ್ಯಾಮವರ್ಣನೂ ಯಕ್ಷರಾಜನೂ ಆದ ಸವಿತ ಇವರೂ ಇರುವರು. ಇವರನ್ನು ಪೂಜಿಸಬೇಕು. ಇನ್ನು ಐಶಾನ್ಯ ದಿಕ್ಕಿನಲ್ಲಿರುವವರನ್ನು ಹೇಳುವೆನು.

೩೭. ದುರ್ಧರ, ಭೈರವಾರಾವ, ಕಿಂಕಿಣೀಕ, ಮಹಾಬಲ, ಕರಾಲ, ವಿಕಟ, ಮೂಲ, ಬಲಿಭುಕ್ತ, ಬಲಿಪ್ರಿಯ ಇವರು ಐಶಾನ್ಯ ದಿಕ್ಕಿನಲ್ಲಿರುವರು.

ಏತೇಷಾಂ ಕ್ಷೇತ್ರಪಾಲಾನಾಂ ಸಸ್ತ್ರೀಣಾಂ ಚ ದ್ವಿಜೋತ್ತಮಾಃ ।
ನೇತಾ ಪ್ರಭುಶ್ಚ ಸ್ವಾಮೀ ಚ ಜಯಂತಃ ಪಾಲಕಸ್ತಥಾ ॥ ೩೮ ॥
ನಿಗೃಹ್ಣಾತ್ಯನುಗೃಹ್ಣಾತಿ ರಕ್ಷಿತಾ ಪುರವಾಸಿನಾಂ ।
ಜಯಂತಾದೇಶಮಾದಾಯ ತೇ ದುಷ್ಟಾನ್ಘಾತಯಂತಿ ಚ ॥ ೩೯ ॥
ನಾಗಸ್ಥಲಸ್ಥಿತಃ ಸ್ವಾಮೀ ಜಯಂತಃ ಪಾಲಕಃ ಸದಾ ।
ನಾಗರಾಜೈಃ ಪರಿವೃತಃ ಪೂಜನೀಯಃ ಪ್ರಯತ್ನತಃ ॥ ೪೦ ॥
ಮಾಂಸಪ್ರಿಯಮುಖಾಶ್ಚೈತ ಐಶಾನೀಂ ಪಾಂತಿ ವೈ ದಿಶಂ ।
ಸಹಸ್ರಶೀರ್ಷಕೋ ದೇವಃ ಶೇಷೋ ನಾಗಸ್ಥಲಸ್ಥಿತಃ ।
ಅನಂತೋ ವಾಸುಕಿಶ್ಚೈವ ತಕ್ಷಕಃ ಪದ್ಮ ಏವ ಚ ॥ ೪೧ ॥
ಶಂಖಃ ಕಂಬಲಕಶ್ಚೈವ ನಾಗಶ್ಚಾಶ್ವತರಸ್ತಥಾ ।
ಮುಕ್ತಕಃ ಕಾಲಿಯಶ್ಚೈವ ಜನಕೋಽಥಾಪರಾಜಿತಃ ॥ ೪೨ ॥
ಕರ್ಕೋಟಕಮುಖಾ ನಾಗಾಸ್ತೇ ಚ ಸಂತಿ ಸಹಸ್ರಶಃ ।
ತೇ ಪೂಜ್ಯಾ ಗಂಧಪುಷ್ಪೈಶ್ಚ ಬಲಿಭಿರ್ದೀಪಧೂಪಕೈಃ ॥ ೪೩ ॥
ಪಾಯಸೇನ ಚ ಮಾಂಸೇನ ಹ್ಯನ್ನಾದ್ಯೈಃ ಸುರಯಾ ತಥಾ ।
ತತಃ ಸಂಪೂಜ್ಯ ದೇವೇಶಂ ಜಯಂತಂ ರಕ್ಷಿಣಾಂ ವರಂ ॥ ೪೪ ॥

---

೩೮. ದ್ವಿಜವರ್ಯರೆ! ಸ್ತ್ರೀಯರಿಂದ ಕೂಡಿರುವ ಈ ಕ್ಷೇತ್ರಪಾಲರಿಗೆ ಜಯಂತನು ನಾಯಕನೂ, ಪ್ರಭುವೂ, ಸ್ವಾಮಿಯೂ, ರಕ್ಷಕನೂ ಆಗಿರುವನು.

೩೯. ಪಟ್ಟಣಿಗರನ್ನು ಕಾಪಾಡುವ ಅವನು ನಿಗ್ರಹಾನುಗ್ರಹಗಳನ್ನು ಮಾಡುವನು. ಆ ದುರ್ಧರಾದಿಗಳು ಜಯಂತನ ಅಪ್ಪಣೆಯಂತೆ ದುಷ್ಟರನ್ನು ಕೊಲ್ಲುವರು.

೪೦. ನಾಗಸ್ಥಳದಲ್ಲಿರುವ ಸ್ವಾಮಿಯಾದ ಜಯನ್ತನನ್ನು ನಾಗರಾಜರೊಡನೆ ಪೂಜಿಸಬೇಕು.

೪೧–೪೫ ಸಾವಿರಹೆಡೆಗಳುಳ್ಳ ಶೇಷ, ಅನಂತ, ವಾಸುಕಿ, ತಕ್ಷಕ, ಪದ್ಮ, ಶಂಖ, ಕಂಬಲಕ, ಅಶ್ವತರ, ಮುಕ್ತಕ, ಕಾಲಿಯ, ಜನಕ, ಅಪರಾಜಿತ, ಕರ್ಕೋಟಕ ಮೊದಲಾದ ಮಾಂಸದಲ್ಲಿ ಆಶೆಯುಳ್ಳ ಸಾವಿರಾರು ನಾಗಗಳು ಐಶಾನ್ಯ ದಿಕ್ಕನ್ನು ಕಾಪಾಡುವುವು. ಅವುಗಳನ್ನು ಗಂಧ, ಪುಷ್ಪ, ಬಲಿ, ಧೂಪ, ದೀಪ, ಪಾಯಸ, ಮಾಂಸ, ಅನ್ನ, ಮದ್ಯ ಮೊದಲಾದುವುಗಳಿಂದ ಪೂಜಿಸಬೇಕು. ಬಳಿಕ ಪಾಲಕನಾದ ಜಯಂತನನ್ನು ಗಂಧ, ಪುಷ್ಪ, ಬಲಿ, ಧೂಪ, ವಸ್ತ್ರ, ಒಡವೆಗಳಿಂದ ಪೂಜಿಸಿ ದೇವಕೀತನಯ

ಗಂಧಪುಷ್ಪೋಪಹಾರೈಶ್ಚ ಧೂಪವಸ್ತ್ರಾದಿಭೂಷಣೈಃ ।
ತತೋ ಗಚ್ಛೇದ್ದ್ವಿಜಶ್ರೇಷ್ಠಾಃ ಕೃಷ್ಣಂ ದೇವಕಿನಂದನಂ ।
ಸಂಪೂಜ್ಯಃ ಪ್ರಥಮಂ ತತ್ರ ಗಣೇಶೋ ರುಕ್ಮಿಸಂಜ್ಞಕಃ ॥ ೪೫ ॥

ಋಷಯ ಊಚುಃ :—

ಕಥಂ ಸ ರುಕ್ಮಿದೈತ್ಯೇಂದ್ರೋ ಯೋ ದುಷ್ಟೋ ಗಣತಾಂ ಗತಃ ।
ಸಾಕ್ಷಾದ್ಭಗವತೋ ದ್ವಾರಿ ಪ್ರತ್ಯಹಂ ಪೂಜ್ಯತೇ ನರೈಃ ॥ ೪೬ ॥

ಶ್ರೀ ಪ್ರಹ್ಲಾದ ಉವಾಚ :—

ಕೃಷ್ಣಾಯ ರುಕ್ಮಿಣೀಂ ದಾತುಂ ಯದಾ ಭೀಷ್ಮಕ ಉದ್ಯತಃ ।
ತದ್ದ್ವೇಷಾತ್ಕ್ರೋಧಸಂಯುಕ್ತೋ ರುಕ್ಮೀ ಚೈದ್ಯಮಮನ್ಯತ ॥ ೪೭ ॥
ಯದಾಜಹಾರ ಭಗವಾನ್ರುಕ್ಮಿಣೀಮಂಬಿಕಾಲಯಾತ್ ।
ಸರ್ವಾನ್ವಿದ್ರಾವ್ಯ ವೈ ಭೂಪಾಂಜರಾಸಂಧಮುಖಾನ್ರಣೇ ॥ ೪೮ ॥
ತದಾ ರುಕ್ಮೀ ಮಹಾಬಾಹುರ್ಭೀಷ್ಮಕಸ್ಯ ಸುತೋ ಬಲೀ ।
ನಾಹತ್ವಾ ವಿನಿವರ್ತಿಷ್ಯೇ ತಮಹಂ ಯಾದವಂ ರಣೇ ॥ ೪೯ ॥

---

ನಾದ ಕೃಷ್ಣನೆಡೆಗೆ ಹೋಗಬೇಕು. ಅಲ್ಲಿ ಮೊದಲು ರುಕ್ಮಿಯೆಂಬ ಗಣೇಶನನ್ನು ಪೂಜಿಸಬೇಕು.

೪೬. ಋಷಿಗಳು ಹೇಳುತ್ತಾರೆ :—ದೈತ್ಯರಾಜ ! ದುಷ್ಟನಾದ ಆ ರುಕ್ಮಿಯು ಹೇಗೆ ಗಣತ್ವವನ್ನು ಹೊಂದಿ ಪ್ರತಿದಿನವೂ ಜನರಿಂದ ಪೂಜ್ಯನಾಗಿರುವನು.

೪೭. ಶ್ರೀ ಪ್ರಹ್ಲಾದನು ಹೇಳುತ್ತಾನೆ :—ಭೀಷ್ಮಕರಾಜನು ಕೃಷ್ಣನಿಗೆ ರುಕ್ಮಿಣಿಯನ್ನು ಕೊಡಲುದ್ಯುಕ್ತನಾಗಲು ಕೃಷ್ಣನಲ್ಲಿರುವ ದ್ವೇಷದಿಂದ ರುಕ್ಮಿಯು ಕುಪಿತನಾಗಿ ಚೈದ್ಯನಿಗೆ ರುಕ್ಮಿಣಿಯನ್ನು ಕೊಡಲು ನಿಶ್ಚಯಿಸಿದನು.

೪೮—೫೦. ಪೂಜ್ಯನಾದ ಕೃಷ್ಣನು ಯುದ್ಧದಲ್ಲಿ ಜರಾಸಂಧನೇ ಮೊದಲಾದ ದೊರೆಗಳನ್ನೆಲ್ಲ ಓಡಿಸಿ ಅಂಬಿಕಾದೇವಾಲಯದಿಂದ ರುಕ್ಮಿಣಿಯನ್ನಪಹರಿಸಲು ವೀರನೂ ಭೀಷ್ಮಕನ ಮಗನೂ ಆದ ರುಕ್ಮಿಯು ರಣದಲ್ಲಿ ಆ ಯಾದವನಾದ ಕೃಷ್ಣನನ್ನು ಸವೆ

ಪ್ರತಿಜ್ಞಾಂ ಸರ್ವಭೂಪಾನಾಂ ಶೃಣ್ವತಾಂ ಕೃತವಾನ್ದ್ವಿಜಾಃ ।
ಏವಮುಕ್ತ್ವಾ ಸ ಸನ್ನದ್ಧೋ ಯುದ್ಧಾಯ ಪರಿಧಾವಿತಃ ॥ ೫೦ ॥

ಅಕ್ಷೌಹಿಣ್ಯಾ ದಲೇನೈವಾಯುಧ್ಯತ್ಕೃಷ್ಣೇನ ಭೋ ದ್ವಿಜಾಃ ।
ಸ ಯುಧ್ಯಮಾನಃ ಕೃಷ್ಣೇನ ವಧ್ಯಮಾನೋ ಹತೌಜಸಃ ॥ ೫೧ ॥

ಬದ್ಧೋ ಭಗವತಾ ತತ್ರ ಕೃತ್ವಾ ವೈರೂಪ್ಯಮೇವ ಚ ।
ರಾಮೇಣ ಬಂಧನಾನ್ಮುಕ್ತೋ ಮರಣಾಯ ಮತಿಂ ದಧೌ ॥ ೫೨ ॥

ರುಕ್ಮಿಣೀ ಭ್ರಾತರಂ ದೃಷ್ಟ್ವಾ ಮರಣೇ ಕೃತನಿಶ್ಚಯಂ ।
ಉವಾಚ ಕೃಷ್ಣಂ ವೈದರ್ಭೀ ಭ್ರಾತರಂ ಹ್ಯಾನಯಸ್ವ ಮೇ ॥ ೫೩ ॥

ತತಸ್ತತ್ಪ್ರಿಯಕಾಮಾರ್ಥಮನುಮಾನ್ಯ ಜನಾರ್ದನಃ ।
ಚಕಾರ ಪಾರ್ಷದಾಂ ಮಧ್ಯೇ ಪ್ರವರಂ ವಿಘ್ನನಾಶನಂ ॥ ೫೪ ॥

ಏತಸ್ಮಾತ್ಕಾರಣಾದ್ವಿಪ್ರಾಃ ಪ್ರಥಮಂ ಪೂಜ್ಯತೇ ಸದಾ ।
ಗಂಧಧೂಪಾಕ್ಷತೈರ್ವಸ್ತ್ರೈರ್ಮೋದಕೈಸ್ತಂ ಪ್ರತರ್ಪಯೇತ್ ॥ ೫೫ ॥

---

ಬಡಿಯದೆ ಹಿಂದಿರುಗುವುದಿಲ್ಲ ಎಂದು ಸಕಲ ರಾಜರು ಕೇಳುತ್ತಿರುವಾಗ ಪ್ರತಿಜ್ಞೆ ಮಾಡಿ ಯುದ್ಧಸನ್ನದ್ಧನಾಗಿ ಹೊರಟನು.

೫೧–೫೨. ಕೃಷ್ಣನು ಸೈನ್ಯದೊಡನೆ ಯುದ್ಧಮಾಡುತ್ತಿರುವ ರುಕ್ಮಿಯನ್ನು ಹೊಡೆದು ನಿರ್ವೀರ್ಯನನ್ನಾಗಿ ಮಾಡಿ ಕಟ್ಟಿ ವಿಕಾರ ರೂಪಗೊಳಿಸಲು ಬಲರಾಮನು ಬಿಡಿಸಿದನು. ಆಗ ರುಕ್ಮಿಯು ಮಡಿಯಲು ನಿಶ್ಚಯಿಸಿದನು.

೫೩. ರುಕ್ಮಿಣಿಯು ಸಾಯಲು ನಿರ್ಧರಿಸಿರುವ ಅಣ್ಣನನ್ನು ಕಂಡು ಕೃಷ್ಣನನ್ನು ಕುರಿತು ನನ್ನ ಅಣ್ಣನನ್ನು ಕರೆದುಕೊಂಡು ಬಾ ಎಂದಳು.

೫೪. ಕೃಷ್ಣನು ರುಕ್ಮಿಣಿಯ ಸಂತೋಷಕ್ಕಾಗಿ ಆ ರುಕ್ಮಿಯನ್ನು ಸನ್ಮಾನಿಸಿ ತನ್ನ ಪರಿವಾರದ ಮಧ್ಯದಲ್ಲಿ ಶ್ರೇಷ್ಠ ಗಣಾಧಿಪನನ್ನಾಗಿಸಿದನು.

೫೫. ವಿಪ್ರರೇ, ಆದಕಾರಣ ಅವನನ್ನು ಮೊದಲು ಪೂಜಿಸಬೇಕು. ಅವನನ್ನು ಗಂಧ, ಧೂಪ, ಅಕ್ಷತೆ, ವಸ್ತ್ರ, ಮೋದಕ ಇವುಗಳಿಂದ ಸಂತೋಷಪಡಿಸಬೇಕು.

**ತಸ್ಮಿಂಸ್ತುಷ್ಟೇ ಜಗನ್ನಾಥಸ್ತುಷ್ಟೋ ಭವತಿ ನಾನ್ಯಥಾ ॥ ೫೬ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ ಭಗವತ್ಪರಿಚಾರಕವರ್ಗಕಥನಪೂರ್ವಕರುಕ್ಮಿಗರ್ವಪರಿಹಾರವೃತ್ತಾಂತವರ್ಣನಂ ನಾಮ ಸಪ್ತದಶೋಽಧ್ಯಾಯಃ

---

೫೬. ಆ ರುಕ್ಮಿಯು ಸಂತೋಷಗೊಂಡರೆ ಕೃಷ್ಣನು ಸಂತುಷ್ಟನಾಗುವನು. ಅವನು ತುಷ್ಟನಾಗದಿದ್ದರೆ ಕೃಷ್ಣನು ಸಂತೋಷಗೊಳ್ಳುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ ಭಗವತ್ಪರಿಚಾರಕವರ್ಗಕಥನಪೂರ್ವಕರುಕ್ಮಿಗರ್ವಪರಿಹಾರವೃತ್ತಾಂತವರ್ಣನವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಷ್ಟಾದಶೋಽಧ್ಯಾಯಃ

### ರಾಕ್ಷಸಕೃತದುರ್ವಾಸಃಪರಾಭವವೃತ್ತಾಂತವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ಪೂಜಯೇದ್ಗಣನಾಥಂ ತಂ ರುಕ್ಮಿಣಿ ರುಕ್ಮಭೂಷಿತಂ ।
ದುರ್ವಾಸಸಂ ಚ ಕೃಷ್ಣಂ ಚ ಬಲಭದ್ರಂ ಚ ಭಕ್ತಿತಃ ॥ ೧ ॥
ಯಜತ್ಯೇಕೋ ಮಹಾಯಜ್ಞೈಃ ಸಂಪೂರ್ಣವರದಕ್ಷಿಣೈಃ ।
ಏಕಃ ಪಶ್ಯತಿ ದೇವೇಶಂ ಕೃಷ್ಣಂ ತುಲ್ಯಫಲೌ ಹಿ ತೌ ॥ ೨ ॥
ವಾಪೀಕೂಪತಡಾಗಾನಿ ಕರೋತ್ಯೇಕಃ ಸಮಾಹಿತಃ ।
ಏಕಃ ಪಶ್ಯತಿ ದೇವೇಶಂ ಕೃಷ್ಣಂ ತುಲ್ಯಫಲೌ ಹಿ ತೌ ॥ ೩ ॥
ಗೋಭೂತಿಲಹಿರಣ್ಯಾದಿ ದದಾತ್ಯೇಕೋ ದಿನೇದಿನೇ ।
ಏಕಃ ಪಶ್ಯತಿ ದೇವೇಶಂ ಕೃಷ್ಣಂ ತುಲ್ಯಫಲೌ ಹಿ ತೌ ॥ ೪ ॥
ಪ್ರಾಣಾಯಾಮಾದಿಸಂಯುಕ್ತೋ ಜಪಧ್ಯಾನಪರಾಯಣಃ ।
ಏಕಃ ಪಶ್ಯತಿ ದೇವೇಶಂ ಕೃಷ್ಣಂ ತುಲ್ಯಫಲೌ ಹಿ ತೌ ॥ ೫ ॥
ಜಾಹ್ನವ್ಯಾದಿಷು ತೀರ್ಥೇಷು ಸುಸ್ನಾತ್ವೈಕಃ ಸಮಾಹಿತಃ ।
ಏಕಃ ಪಶ್ಯತಿ ದೇವೇಶಂ ಕೃಷ್ಣಂ ತುಲ್ಯಫಲೌ ಹಿ ತೌ ॥ ೬ ॥

---

## ಕನ್ನಡದ ಅನುವಾದ

### ರಾಕ್ಷಸಕೃತದುರ್ವಾಸಃಪರಾಭವವೃತ್ತಾಂತವರ್ಣನ

೧. ಶ್ರೀ ಪ್ರಹ್ಲಾದನು ಹೇಳುತ್ತಾನೆ :—ಸುವರ್ಣದಿಂದ ಅಲಂಕಾರಗೊಂಡ ಗಣೇಶ್ವರನಾದ ರುಕ್ಮಿಣಿಯನ್ನೂ, ದುರ್ವಾಸ, ಕೃಷ್ಣ, ಬಲರಾಮರನ್ನೂ ಭಕ್ತಿಯಿಂದ ಪೂಜಿಸಬೇಕು.

೨. ಒಬ್ಬನು ಸಂಪೂರ್ಣ ದಕ್ಷಿಣೆಯುಳ್ಳಮಹಾಯಜ್ಞಗಳನ್ನು ಮಾಡುತ್ತಾನೆ. ಇನ್ನೊಬ್ಬನು ಕೃಷ್ಣನನ್ನು ನೋಡುತ್ತಾನೆ. ಇವರಿಬ್ಬರೂ ಸಮಾನ ಫಲವುಳ್ಳವರು.

೩–೬. ಬಾವಿ, ಕೊಳ, ಕೆರೆಗಳನ್ನು ನಿರ್ಮಿಸಿದವನೂ, ಪ್ರತಿದಿನವೂ ಗೋವು, ಭೂಮಿ, ಸುವರ್ಣವೊದಲಾದುವುಗಳನ್ನು ದಾನಮಾಡಿದವನೂ, ಪ್ರಾಣಾಯಾಮ ಸಹಿತವಾಗಿ ಜಪಧ್ಯಾನನಿರತನೂ, ಗಂಗಾದಿ ತೀರ್ಥಗಳಲ್ಲಿ ಮಿಂದವನೂ, ಕೃಷ್ಣನನ್ನು ನೋಡಿದವನೂ ಸಮಾನ ಫಲವುಳ್ಳವರು.

ತ್ರಿಭಿರ್ವಿಕ್ರಮಣೈರ್ಯೇನ ವಿಕ್ರಾಂತ ಭುವನತ್ರಯಂ ।
ತ್ರಿವಿಕ್ರಮಂ ಚ ತಂ ದೃಷ್ಟ್ವಾ ಮುಚ್ಯತೇ ಪಾತಕತ್ರಯಾತ್ ॥ ೭ ॥

ಋಷಯ ಊಚು :—

ಕಥಂ ತ್ರೈವಿಕ್ರಮೀ ಮೂರ್ತಿರಾಗತೇಯಂ ಧರಾತಲೇ ।
ಕಲಾನ್ಯಾಸಾಚ್ಚ ಕೃಷ್ಣತ್ವಂ ಕದೇಯಂ ಪ್ರಾಪ್ತವತ್ಯಥ ॥ ೮ ॥
ದೈತ್ಯ ಸಂಶಯಮಸ್ಮಾಕಂ ಛೇತ್ತುಮರ್ಹಸ್ಯಶೇಷತಃ ।
ದುರ್ವಾಸಸಶ್ಚ ಕೃಷ್ಣಸ್ಯ ಸಂಭವಃ ಕಥ್ಯತಾಮಿತಿ ॥ ೯ ॥

ಪ್ರಹ್ಲಾದ ಉವಾಚ :—

ತಚ್ಛ್ರೂಯತಾಂ ದ್ವಿಜಶ್ರೇಷ್ಠಾ ಯಥಾಮೂರ್ತಿಸ್ತ್ರಿವಿಕ್ರಮೀ ।
ದುರ್ವಾಸಸಾ ಸಮಾಯುಕ್ತಾ ಸಂಭೂತಾ ಧರಣೀತಲೇ ॥ ೧೦ ॥
ಪೂರ್ವಂ ಕೃತಯುಗಸ್ಯಾಂತೇ ಬಲಿನಾ ಚ ಪುರಂದರಃ ।
ನಿರ್ಜಿತ್ಯ ಭ್ರಂಶಿತಃ ಸ್ಥಾನಾತ್ತದರ್ಥಂ ಮಧುಸೂದನಃ ॥ ೧೧ ॥
ಕಶ್ಯಪಾದ್ವಾಮನೋ ಜಜ್ಞೇ ತತೋಽಭೂಚ್ಚ ತ್ರಿವಿಕ್ರಮಃ ।
ತ್ರಿಭಿಃಕ್ರಮೈರ್ನಿರ್ಜಿತಾನ್ಲೋಕಾನಾಕ್ರಮ್ಯ ಮಧುಹಾ ಹರಿಃ ॥ ೧೨ ॥
ಬಲಿಂ ಚಕಾರ ಭಗವಾನ್ಪಾತಾಲತಲವಾಸಿನಂ ।
ಭಕ್ತ್ಯಾ ತ್ವನನ್ಯಯಾ ಕೃಷ್ಣೋ ದೈತ್ಯೇನ ಪರಿಪೋಷಿತಃ ॥ ೧೩ ॥

---

೭. ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಆಕ್ರಮಿಸಿದ ತ್ರಿವಿಕ್ರಮನನ್ನು ನೋಡಿದವನು ಮೂರು ಪಾತಕಗಳಿಂದ ಮುಕ್ತನಾಗುವನು.

೮. ಋಷಿಗಳು ಹೇಳುತ್ತಾರೆ :—ಈ ತ್ರಿವಿಕ್ರಮನು ಯಾವಾಗ ಧರಣಿಗೆ ಬಂದನು? ಯಾವಾಗ ತನ್ನ ಕಲೆಗಳ ನ್ಯಾಸದಿಂದ ಕೃಷ್ಣನಾದನು.

೯. ದೈತ್ಯರಾಜ! ನೀನು ನಮ್ಮ ಸಂಶಯವನ್ನು ನಿವಾರಿಸು. ದುರ್ವಾಸ ಮತ್ತು ಕೃಷ್ಣರ ಉತ್ಪತ್ತಿಯನ್ನು ಹೇಳು.

೧೦. ಪ್ರಹ್ಲಾದನು ಹೇಳುತ್ತಾನೆ :—ದ್ವಿಜೋತ್ತಮರೆ! ತ್ರಿವಿಕ್ರಮ ಮೂರ್ತಿಯು ದುರ್ವಾಸನೊಡನೆ ಭೂಮಿಯಲ್ಲಿ ಹೇಗೆ ಸಂಭವಿಸಿತು? ಎಂಬುದನ್ನು ಕೇಳಿರಿ.

೧೧–೧೪. ಹಿಂದೆ ಕೃತಯುಗದ ಕೊನೆಯಲ್ಲಿ ಬಲಿಯು ಇಂದ್ರನನ್ನು ಸೋಲಿಸಿ ಅವನನ್ನು ಸ್ಥಾನಭ್ರಷ್ಟನನ್ನಾಗಿ ಮಾಡಲು ಆ ಇಂದ್ರನಿಗಾಗಿ ವಿಷ್ಣುವು ಕಶ್ಯಪನಿಂದ ವಾಮನನಾಗಿ ಬಳಿಕ ತ್ರಿವಿಕ್ರಮನಾದನು. ತ್ರಿವಿಕ್ರಮನಾದ ಮಧುಸೂದನನು ಮೂರು ಅಡಿಗಳಿಂದ ಲೋಕಗಳನ್ನಾಕ್ರಮಿಸಿ ಬಲಿಯನ್ನು ಪಾತಾಳದಲ್ಲಿ ವಾಸಿಸುವಂತೆ ಮಾಡಿದನು. ಬಲಿಯು ಅನನ್ಯಭಕ್ತಿಯಿಂದ ವಿಷ್ಣುವನ್ನು ಸಂತೋಷಗೊಳಿಸಲು

ಸ್ವಯಂ ಚೈವಾವಸಸತ್ತತ್ರ ಭಕ್ತ್ಯಾ ಕ್ರೀತೋ ಹರಿಸ್ತದಾ ।
ಅನುಗ್ರಹಾಯ ಭಗವಾನ್ದ್ವಾರಪಾಲೋ ಬಭೂವ ಹ ॥ ೧೪ ॥
ದುರ್ವಾಸಾಶ್ಚಾಪಿ ಭಗವಾನಾತ್ರೇಯೋ ಮುನಿಸತ್ತಮಃ ।
ಅಟಂಸ್ತೀರ್ಥಾನಿ ಮೋಕ್ಷಾರ್ಥಂ ಮುಕ್ತಿಕ್ಷೇತ್ರಮಚಿಂತಯತ್ ॥ ೧೫॥
ಏವಂ ಚಿಂತಯಮಾನಃ ಸ ಜ್ಞಾನದೃಷ್ಟ್ಯಾ ಮಹಾಮುನಿಃ ।
ಗೋಮತ್ಯಾ ಸಂಗಮೋ ಯತ್ರ ಚಕ್ರತೀರ್ಥೇನ ಭೋ ದ್ವಿಜಾಃ ॥ ೧೬ ॥
ತನ್ಮುಕ್ತಿಕ್ಷೇತ್ರಮಾಜ್ಞಾಯ ಗಮನಾಯ ಮತಿಂ ದಧೇ ।
ಸೋಽತೀತ್ಯ ನಗರಗ್ರಾಮಾನುದ್ಯಾನಾನಿ ವನಾನಿ ಚ ॥ ೧೭ ॥
ಆನರ್ತವಿಷಯಂ ಪ್ರಾಪ್ಯ ದೈತ್ಯಭೂಮಿಂ ವಿವೇಶ ಹ ।
ನಿಃಸ್ವಾಧ್ಯಾಯವಷಟ್ಕಾರಾಂ ವೇದಧ್ವನಿವಿವರ್ಜಿತಾಂ ॥ ೧೮ ॥
ಕುಶೇನ ದೈತ್ಯರಾಜೇನ ಸೇವಿತಾಂ ಪಾಲಿತಾಂ ತಥಾ ।
ಬಹುಮ್ಲೇಚ್ಛಸಮಾಕೀರ್ಣಾಮಧರ್ಮೋಪಾರ್ಜಕೈರ್ನರೈಃ ॥ ೧೯ ॥
ಪ್ರತ್ಯಾಸನ್ನಾಮಿತಿ ಜ್ಞಾತ್ವಾ ಚಕ್ರತೀರ್ಥಮಗಾದ್ದ್ವಿಜಃ ।
ಸ್ನಾತ್ವಾ ಚ ಸಂಗಮೇ ಪುಣ್ಯೇ ಮೋಕ್ಷ್ಯೇಽಹಂ ಚ ಕೃತಾಹ್ನಿಕಃ ॥ ೨೦ ॥

---

ಅವನು ಬಲಿಯ ಭಕ್ತಿಗೆ ಮೆಚ್ಚಿದನು. ವಿಷ್ಣುವು ಅವನನ್ನು ಅನುಗ್ರಹಿಸಲು ಬಲಿಯ ಮನೆಯ ದ್ವಾರಪಾಲಕನಾದನು.

೧೫. ಅತ್ರಿಯ ಸುತನಾದ ದುರ್ವಾಸನನೂ ಮೋಕ್ಷಕ್ಕಾಗಿ ತೀರ್ಥಗಳಲ್ಲಿ ಸಂಚರಿಸುತ್ತ ಮುಕ್ತಿಕ್ಷೇತ್ರವಾವುದೆಂದು ಆಲೋಚಿಸಿದನು.

೧೬-೨೦. ಹೀಗೆ ಚಿಂತಿಸುತ್ತಿರುವ ಆ ಮುನಿಯು ಜ್ಞಾನದೃಷ್ಟಿಯಿಂದ ಚಕ್ರತೀರ್ಥದಿಂದ ಸೇರಿದ ಗೋಮತೀ ಸಂಗಮವು ಮುಕ್ತಿ ಕ್ಷೇತ್ರವೆಂದರಿತು ಹೊರಡಲುದ್ಯುಕ್ತನಾದನು. ಅವನು ಪಟ್ಟಣ, ಹಳ್ಳಿ, ಉದ್ಯಾನ, ವನ ಇವುಗಳನ್ನು ದಾಟಿ ಆನರ್ತದೇಶಕ್ಕೆ ಹೋಗಿ ವೇದಾಧ್ಯಯನವೂ ವಷಟ್ಕಾರಗಳೂ ಇಲ್ಲದುದೂ, ಕುಶನೆಂಬ ದೈತ್ಯರಾಜನು ಸೇವಿಸಿ ಪಾಲಿಸಿರುವುದೂ, ಅನೇಕ ಮಂದಿ ಮ್ಲೇಚ್ಛರಿಂದ ವ್ಯಾಪ್ತವೂ ಆದ ದೈತ್ಯಭೂಮಿಯನ್ನು ಹೊಕ್ಕು ಇದು ಅಧರ್ಮವನ್ನಾಚರಿಸುವ ಜನರುಳ್ಳುದೆಂದರಿತು ಚಕ್ರತೀರ್ಥಕ್ಕೆ ಹೋದನು ಅಲ್ಲಿ ಪುಣ್ಯಕರವಾದ ಗೋಮತೀ ಸಂಗಮದಲ್ಲಿ ಮಿಂದು ಆಹ್ನಿಕವನ್ನು ಮುಗಿಸಿ ಮುಕ್ತನಾಗುವೆನೆಂದಾಲೋಚಿಸುತ ಶೀಘ್ರವಾಗಿ ಅಲ್ಲಿಗೆ ಹೋದನು. ಅವನು ಪುಣ್ಯಕರವಾದ ಆ ಗೋಮತೀ ಸಾಗರ ಸಂಗಮವನ್ನು ನೋಡಿ ಅಲ್ಲಿ ವಸ್ತ್ರಗಳನ್ನಿಟ್ಟು ಗೋಮಯ ಮೃತ್ತಿಕಾಶೌಚ

ಇತಿ ಕೃತ್ವಾ ಸನಿಯಮಂ ಯಯೌ ಶೀಘ್ರಂ ಮುನಿಸ್ತದಾ ।
ಸ್ನಾತ್ವಾ ಶೀಘ್ರಂ ಪ್ರಯಾಸ್ಯಾಮಿ ದೈತ್ಯಭೂಮಿಂ ವಿಹಾಯ ಚ ॥ ೨೧ ॥
ಇತ್ಯೇವಂ ಚಿಂತಯನ್ಮಾರ್ಗೇ ಶೀಘ್ರಮೇವ ಜಗಾಮ ಸಃ ।
ದೃಷ್ಟ್ವಾ ಚ ಸಂಗಮಂ ಪುಣ್ಯಂ ಗೋಮತ್ಯಾ ಸಾಗರಸ್ಯ ಚ ॥ ೨೨ ॥
ನಿಧಾಯ ವಾಸಸೀ ತತ್ರ ಮೃದಮಾಲಭ್ಯ ಗೋಮಯಂ ।
ಶಿಖಾಂ ಚ ಬಧ್ವಾ ಕರಯೋಃ ಕೃತ್ವಾ ಚ ನಿಯತಃ ಕುಶಾನ್ ॥ ೨೩ ॥
ಯಾವತ್ಸ್ನಾತಿ ಚ ವಿಪ್ರೋಽಸೌ ದೃಷ್ಟೋ ದೈತ್ಯೈರ್ದುರಾತ್ಮಭಿಃ ।
ಬ್ರುವಂತಃ ಕೋಽಯಮಿತ್ಯೇವಂ ಹನ್ಯತಾಂ ಹನ್ಯತಾಮಿತಿ ॥ ೨೪ ॥
ಅಸ್ಮಾಭಿಃ ಪಾಲಿತೇ ದೇಶೇ ಕಃ ಸ್ನಾತಿ ಮನುಜಾಧಮಃ ।
ಬ್ರುವಂತ ಇತಿ ಜಘ್ನುಸ್ತೇ ಜಾನುಭಿರ್ಮುಷ್ಟಿಭಿಸ್ತಥಾ ॥ ೨೫ ॥
ಬ್ರಾಹ್ಮಣೋಽಹಂ ನ ಹಂತವ್ಯಃ ಶ್ರುತ್ವಾ ಚಾತೀವ ಪೀಡಿತಃ ।
ತಂ ದೃಷ್ಟ್ವಾ ಹನ್ಯಮಾನಂ ತು ಬ್ರಾಹ್ಮಣಂ ತೈರ್ದುರಾತ್ಮಭಿಃ ॥ ೨೬ ॥
ನಿವಾರಯಾಮಾಸ ಚ ತಾನ್ರುರುರ್ನಾಮ ಮಹಾಸುರಃ ।
ಜಗೃಹುಸ್ತಸ್ಯ ವಸ್ತ್ರಾಣಿ ಕುಶಾಂಸ್ತೇ ಚಿಕ್ಷಿಪುರ್ಜಲೇ ॥ ೨೭ ॥
ಚಕರ್ಷುಶ್ಚರಣೌ ಗೃಹ್ಯ ಶಪಂತೋ ದುಷ್ಟಚೇತಸಃ ।
ಪದೇ ಗೃಹೀತ್ವಾ ತಮೃಷಿಂ ನೀತ್ವಾ ಸೀಮ್ನಿ ವ್ಯಸರ್ಜಯನ್ ॥ ೨೮ ॥

---

ಗಳನ್ನುಮಾಡಿ ಶಿಖೆಯನ್ನು ಕಟ್ಟಿಕೊಂಡು ಕೈಯಲ್ಲಿ ದರ್ಭೆಗಳನ್ನು ಹಿಡಿದುಕೊಂಡು ಸ್ನಾನಮಾಡುತ್ತಿರಲು ದುರಾತ್ಮರಾದ ದೈತ್ಯರು ಅವನನ್ನು ನೋಡಿದರು. ಅವರು ನಮ್ಮ ದೇಶಕ್ಕೆ ಬಂದು ಸ್ನಾನಮಾಡುತ್ತಿರುವ "ಈ ನೀಚ ಮಾನವನಾರು ? ಇವನನ್ನು ಕೊಲ್ಲಿರಿ". ಎಂದು ಹೇಳುತ್ತ "ನಾನು ಬ್ರಾಹ್ಮಣ. ಕೊಲ್ಲಬೇಡಿ, ಕೊಲ್ಲಬೇಡಿ" ಎಂದು ಹೇಳುತ್ತಿದ್ದರೂ ಅವನನ್ನುಮೊಣಕಾಲುಗಳಿಂದಲೂ, ಮುಷ್ಟಿಗಳಿಂದಲೂ ಹೊಡೆದರು.

೨೬—೨೭. ಆಗ ರುರುವೆಂಬ ಮಹಾಸುರನು ಆ ದುಷ್ಟ ಅಸುರರು ಹೊಡೆಯುತ್ತಿರುವ ಬ್ರಾಹ್ಮಣನನ್ನು ನೋಡಿ ಅತ್ಯಂತ ವ್ಯಥೆಗೊಂಡು ಬ್ರಾಹ್ಮಣನನ್ನು ಕೊಲ್ಲಬಾರದೆಂದು ಅವರನ್ನು ತಡೆಯಲು ಆ ದೈತ್ಯರು ಬ್ರಾಹ್ಮಣನ ಬಟ್ಟೆಗಳನ್ನು ಕಿತ್ತುಕೊಂಡು ದರ್ಭೆಗಳನ್ನು ನೀರಿನಲ್ಲಿ ಎಸೆದರು.

೨೭. ಅವನನ್ನು ಬೈಯ್ಯುತ್ತ ಕಾಲನ್ನು ಹಿಡಿದು ಎಳೆದುಕೊಂಡುಹೋಗಿ ಪಟ್ಟಣದ ಎಲ್ಲೆಯಲ್ಲಿ ಬಿಟ್ಟರು.

೨೯—೩೧. ಕುಪಿತರಾದ ಆ ಅಸುರರು ಮೂರ್ಛೆಗೊಂಡ ಆ ಬ್ರಾಹ್ಮಣನನ್ನು ಕಂಡು "ಮರಳಿ ಇಲ್ಲಿಗೆ ಬಂದರೆ ನಿನ್ನನ್ನು ನಿಶ್ಚಯವಾಗಿಯೂ ಕೊಲ್ಲುವೆವು" ಎಂದರು. ದುರ್ವಾ

ತಂ ತದಾ ಮೂರ್ಛಿತಪ್ರಾಯಂ ದೃಷ್ಟ್ವೋಚುಃ ಕುಪಿತಾಶ್ಚ ತೇ ।
ಅತ್ರಾಗತೋ ಯದಿ ಪುನರ್ಹನಿಷ್ಯಾಮೋ ನ ಸಂಶಯಃ ।
ಆನರ್ತವಿಷಯಾಂಸ್ತಾನ್ಸ್ವೈ ದೃಷ್ಟ್ವಾ ತತ್ರ ಜಲಾಶಯಂ ॥ ೨೯ ॥
ಪ್ರಾಣಸಂಶಯಮಾಪನ್ನಸ್ತತಶ್ಚಿಂತಾಪರೋಽಭವತ್ ।
ಶಪ್ಸ್ಯೇಽಹಂ ಯದಿ ದೈತೇಯಾಂಸ್ತಪಸಃ ಕಿಂ ವ್ಯಯೇನ ಮೇ ॥ ೩೦ ॥
ಅಥವಾ ನಿಯಮಭ್ರಷ್ಟಸ್ತ್ಯಕ್ಷ್ಯೇ ಚೇದಂ ಕಲೇಬರಂ ।
ಮಮ ಪಕ್ಷಂ ಚ ಕಃ ಕುರ್ಯಾತ್ಕೋ ಮೇ ದಾಸ್ಯತಿ ಜೀವಿತಂ ॥ ೩೧ ॥
ಚಕ್ರತೀರ್ಥೇ ಚ ಕಃ ಸ್ನಾನಂ ಕಾರಯಿಷ್ಯತಿ ಮಾಮಿಹ ।
ಕೋ ವಾ ದೈತ್ಯಗಣಾನೇತಾನ್ಶಕ್ತೋ ಜೇತುಂ ಮಹಾಮೃಧೇ ।
ತಂ ವಿನಾ ಪುಂಡರೀಕಾಕ್ಷಂ ಭಕ್ತಾನಾಮಭಯಪ್ರದಂ ॥ ೩೨ ॥
ಬ್ರಹ್ಮಾದೀನಾಂ ಚ ನೇತಾರಂ ಶರಣಾಗತವತ್ಸಲಂ ।
ಚಕ್ರಹಸ್ತಂ ವಿನಾ ಮೇಽದ್ಯ ಕೋಽನ್ಯಃ ಶರ್ಮಪ್ರದೋ ಭವೇತ್ ॥ ೩೩ ॥
ಇತಿ ಧ್ಯಾತ್ವಾ ಚ ಸುಚಿರಂ ಧ್ಯಾತ್ವಾ ಪಾತಾಲವಾಸಿನಂ ।
ಆತ್ರೇಯೋ ವಿಷ್ಣುಶರಣಂ ಜಗಾಮ ಧರಣೀತಲಂ ॥ ೩೪ ॥

---

ಸನು ಆನರ್ತದೇಶದ ಆ ಅಸುರರನ್ನೂ ಅಲ್ಲಿರುವ ಕೆರೆಯನ್ನೂ ಕಂಡು ಬದುಕುವುದರಲ್ಲಿ ಸಂಶಯಗೊಂಡು ಹೀಗೆ ಚಿಂತಾಕ್ರಾಂತನಾದನು. "ನಾನು ಈ ದೈತ್ಯರನ್ನು ಶಪಿಸಿದರೆ ತಪಸ್ಸು ವ್ಯಯವಾಗುವುದು. ಅದರಿಂದೇನು ಪ್ರಯೋಜನ? ಅಥವಾ ವ್ರತಭ್ರಷ್ಟನಾಗಿ ಈ ದೇಹವನ್ನು ತ್ಯಜಿಸಿದರೆ ನನ್ನ ಅವಸಾನ ಕಾಲದಲ್ಲಿ ಯಾರು ಸಹಾಯ ಮಾಡುವರು? ನನಗೆ ಯಾರು ಪ್ರಾಣವನ್ನೀಯುವರು?

೩೨. ಚಕ್ರತೀರ್ಥದಲ್ಲಿ ನನ್ನನ್ನು ಯಾರು ಸ್ನಾನಮಾಡಿಸುವರು? ಭಕ್ತರಿಗೆ ಅಭಯದಾತನಾದ ಆ ಪುಂಡರೀಕಾಕ್ಷನನ್ನು ಬಿಟ್ಟು ಯುದ್ಧದಲ್ಲಿ ಈ ದೈತ್ಯರನ್ನು ಗೆಲ್ಲಲು ಯಾರು ಸಮರ್ಥರು?

೩೩. ಬ್ರಹ್ಮಾದಿಗಳಿಗೆ ನಾಯಕನೂ, ಶರಣಾಗತವತ್ಸಲನೂ, ಚಕ್ರಧಾರಿಯೂ, ಆದ ಕೃಷ್ಣನನ್ನು ಬಿಟ್ಟು ನನಗೆ ಸುಖವನ್ನುಂಟುಮಾಡುವವನಾರು"?

೩೪–೩೭. ಉಪವಾಸಕೃಶನಾದ ದುರ್ವಾಸನು ಹೀಗೆ ಬಹು ಹೊತ್ತು ಚಿಂತಿಸಿ ವಿಷ್ಣುವು ಪಾತಾಳದಲ್ಲಿರುವನೆಂದರಿತು ಭೂಮಿಯಲ್ಲಿರುವ ವಿಷ್ಣುವಿನ ಮನೆಯನ್ನು ಪ್ರವೇಶಿಸಿ ಅನಂತರ ಗಂಧರ್ವರು, ಅಪ್ಸರರು [illegible] ಕೂಡಿರುವುದೂ, ಸುರೋ

ಉಪವಾಸೈಃ ಕೃಶೋ ದೀನೋ ಭೂತಲಂ ಪ್ರವಿವೇಶ ಹ ।
ಸ ದೈತ್ಯರಾಜಭವನಂ ಗಂಧರ್ವಾಪ್ಸರಸಾವೃತಂ ॥ ೩೫ ॥
ಶೋಭಿತಂ ಸುರಮುಖ್ಯೇನ ವಿಷ್ಣುನಾ ಪ್ರಭವಿಷ್ಣುನಾ ।
ದುರ್ವಾಸಾಃ ಪ್ರವಿವೇಶಾಥ ಪ್ರಹೃಷ್ಟೇನಾಂತರಾತ್ಮನಾ ॥ ೩೬ ॥
ದುರ್ವಾಸಸಮುಥಾಯಾಂತಂ ದೃಷ್ಟ್ವಾ ದೈತ್ಯಪತಿಸ್ತದಾ ।
ಪ್ರತ್ಯುತ್ಥಾಯಾರ್ಹಯಾಂಚಕ್ರೇ ಸ್ವಾಸನೇ ಸಂನ್ಯವೇಶಯತ್ ॥ ೩೭ ॥
ಮಧುಪರ್ಕಂ ಚ ಗಾಂ ಚೈವ ದತ್ವಾರ್ಘ್ಯಂ ಪಾರ್ಶ್ವತಃ ಸ್ಥಿತಃ ।
ಪ್ರೋವಾಚ ಪ್ರಣತೋ ಬ್ರಹ್ಮನ್ ಕಥಮತ್ರಾಗತೋ ಭವಾನ್ ॥ ೩೮ ॥
ಸುಖೋಪವಿಷ್ಟಃ ಸ ಋಷಿಸ್ತತ್ರಾಪಶ್ಯತ್ತ್ರಿವಿಕ್ರಮಂ ।
ದೈತ್ಯೇಂದ್ರದ್ವಾರದೇಶೇ ತು ತಿಷ್ಠಂತಮಕುತೋಭಯಂ ॥ ೩೯ ॥
ತಂ ದೃಷ್ಟ್ವಾ ದೇವದೇವೇಶಂ ಶ್ರೀವತ್ಸಾಂಕಂ ಚತುರ್ಭುಜಂ ।
ರುರೋದ ಸ ಋಷಿಶ್ರೇಷ್ಠಸ್ತ್ರಾಹಿ ತ್ರಾಹೀತ್ಯುವಾಚ ಚ ॥ ೪೦ ॥
ಸಂಸಾರಭಯಭೀತಾನಾಂ ದುಃಖಿತಾನಾಂ ಜನಾರ್ದನ ।
ಶತ್ರುಭಿಃ ಪರಿಭೂತಾನಾಂ ಶರಣಂ ಭವ ಕೇಶವ ॥ ೪೧ ॥
ಮಮ ದುಃಖಾಭಿತಪ್ತಸ್ಯ ಶತ್ರುಭಿಃ ಕರ್ಶಿತಸ್ಯ ಚ ।

---

ತ್ತಮನಾದ ವಿಷ್ಣುವಿನಿಂದ ವಿರಾಜಿಸುವುದೂ ಆದ ಬಲಿಯ ಮನೆಯನ್ನು ಸಂತೋಷದಿಂದ ಹೊಕ್ಕನು.

೩೭–೩೮. ದೈತ್ಯರಾಜನು ಬರುತ್ತಿರುವ ದುರ್ವಾಸನನ್ನು ನೋಡಿ ಮೇಲಕ್ಕೆದ್ದು ತನ್ನ ಆಸನದಲ್ಲಿ ಕುಳ್ಳಿರಿಸಿ ಮಧುಪರ್ಕ, ಗೋವು, ಅರ್ಘ್ಯಗಳನ್ನಿತ್ತು ಪೂಜಿಸಿ ಅವನ ಪಕ್ಕದಲ್ಲಿ ನಿಂತುಕೊಂಡು ನಮಸ್ಕರಿಸಿ "ಬ್ರಾಹ್ಮಣನೆ! ಇಲ್ಲಿಗೆ ಹೇಗೆ ಬಂದೆ"? ಎಂದು ಕೇಳಿದನು.

೩೯–೪೦. ಸುಖವಾಗಿ ಕುಳಿತಿರುವ ಆ ಮುನಿಯು ದೈತ್ಯರಾಜನ ಬಾಗಿಲಿನಲ್ಲಿ ಭಯವಿಲ್ಲದೆ ಕುಳಿತಿರುವವನೂ, ಶ್ರೀವತ್ಸವೆಂಬ ಮಚ್ಚೆಯುಳ್ಳವನೂ, ಚತುರ್ಭುಜನೂ ಆದ ತ್ರಿವಿಕ್ರಮನನ್ನು ಕಂಡು ಕಾಪಾಡು ಕಾಪಾಡು ಎಂದು ಅತ್ತನು.

೪೧. "ಜನಾರ್ದನ! ನೀನು ಸಂಸಾರದಿಂದ ಭಯಗೊಂಡವರೂ, ದುಃಖಿತರೂ, ಶತ್ರುಪೀಡಿತರೂ ಆದ ಜನರಿಗೆ ರಕ್ಷಕನಾಗು.

೪೨–೪೩. ಶತ್ರುಗಳು ಎಳೆದುದರಿಂದ ದುಃಖಗೊಂಡವನೂ, ಅವಮಾನಗೊಂಡವನೂ, ದೀನನೂ, ಹಸಿವಿನಿಂದ ವ್ಯಥೆಗೊಂಡವನೂ, ಪೂರ್ಣವಾಗದ ನಿಯಮವುಳ್ಳ

ಪರಾಭೂತಸ್ಯ ದೀನಸ್ಯ ಕ್ಷುಧಯಾ ಪೀಡಿತಸ್ಯ ಚ ॥ ೪೨ ॥
ಅಪೂರ್ಣನಿಯಮಸ್ಯಾಥ ಕ್ಲೇಶಿತಸ್ಯ ಚ ದಾನವೈಃ ।
ಬ್ರಹ್ಮಣ್ಯದೇವವಿಪ್ರಸ್ಯ ಶರಣಂ ಭವ ಕೇಶವ ॥ ೪೩ ॥
ಇತ್ಯುಕ್ತ್ವಾ ದರ್ಶಯಾಮಾಸ ಶರೀರಂ ದೈತ್ಯತಾಡಿತಂ ।
ತದ್ವಿಪ್ರಬ್ರಹ್ಮಣಾವಮಾನಂ ಚ ದೃಷ್ಟ್ವಾ ಚುಕ್ರೋಧ ವಾಮನಃ ॥ ೪೪ ॥
ಕೇನಾಪಮಾನಿತೋ ಬ್ರಹ್ಮನ್ನಿಯಮಃ ಕೇನ ಖಂಡಿತಃ ।
ಕಥಯಸ್ವ ಮಹಾಭಾಗ ಧರ್ಮಪಾಲೇ ಮಯಿ ಸ್ಥಿತೇ ॥ ೪೫ ॥

ದುರ್ವಾಸ ಉವಾಚ :—

ಮುಕ್ತಿತೀರ್ಥಮಹಂ ಜ್ಞಾತ್ವಾ ಜ್ಞಾನೇನ ಮಧುಸೂದನ ।
ಚಕ್ರತೀರ್ಥಂ ಗತಃ ಸ್ನಾತುಂ ಯಾತ್ರಾಯಾಂ ಹರ್ಷಸಂಯುತಃ ॥ ೪೬ ॥
ಅಕೃತಸ್ನಾನ ಏವಾಹಂ ದೃಷ್ಟೋ ದೈತ್ಯೈರ್ದುರಾಸದೈಃ ।
ಗಲೇ ಗೃಹೀತಃ ಕೃಷ್ಣಾಹಂ ಮುಷ್ಟಿಭಿಸ್ತಾಡಿತಸ್ತಥಾ ॥ ೪೭ ॥
ಬಲಾದ್ಗೃಹೀತ್ವಾ ವಾಸಾಂಸಿ ಕುಶಾಂಶ್ಚೈವಾಕ್ಷತೈಸ್ಸಹ ।
ಜಲೇ ಕ್ಷಿಪ್ತ್ವಾ ಚರಣಯೋರ್ಗೃಹೀತ್ವಾ ಮಾಂ ಸಮಾಕೃಷನ್ ॥ ೪೮ ॥

---

ವನೂ, ದಾನವರಿಂದ ಕ್ಲೇಶಗೊಂಡವನೂ ಆದ ನನಗೆ ಬ್ರಹ್ಮಣ್ಯದೇವನಾದ ವಿಷ್ಣುವೆ ! ನೀನು ರಕ್ಷಕನಾಗು".

೪೪. ದುರ್ವಾಸನು ಹೀಗೆ ನುಡಿದು ದೈತ್ಯರು ಹೊಡೆದಿರುವ ದೇಹವನ್ನು ತೋರಿಸಿದನು. ವಾಮನನು ಆ ಬ್ರಾಹ್ಮಣಾವಮಾನವನ್ನು ಕಂಡು ಸಿಟ್ಟಾದನು.

೪೫. "ಬ್ರಾಹ್ಮಣನೆ ! ಧರ್ಮಪಾಲಕನಾದ ನಾನಿರಲು ನಿನ್ನನ್ನು ಯಾರು ಅವಮಾನಗೊಳಿಸಿದರು. ನಿಯಮವನ್ನು ಯಾರು ಖಂಡಿಸಿದರು ಹೇಳು"ಎಂದನು.

೪೬. ದುರ್ವಾಸನು ಹೇಳುತ್ತಾನೆ :—ಮಧುಸೂದನ ! ನಾನು ಚಕ್ರತೀರ್ಥವು ಮೋಕ್ಷತೀರ್ಥವೆಂದರಿತು ಸ್ನಾನಮಾಡಲು ಅಲ್ಲಿಗೆ ಹೋದೆನು.

೪೭. ನಾನು ಸ್ನಾನ ಮಾಡದಿರುವಾಗಲೆ ದೈತ್ಯರು ನನ್ನನ್ನು ನೋಡಿ ಕುತ್ತಿಗೆಯನ್ನು ಹಿಡಿದು ಮುಷ್ಟಿಯಿಂದ ಗುದ್ದಿದರು.

೪೮. ಬಲಾತ್ಕಾರದಿಂದ ಹಿಡಿದುಕೊಂಡು ಬಟ್ಟೆ, ದರ್ಭೆ, ಅಕ್ಷತೆಗಳನ್ನು ಕಿತ್ತುಕೊಂಡು ಅವುಗಳನ್ನು ನೀರಿನಲ್ಲಿ ಹಾಕಿ ಕಾಲನ್ನು ಹಿಡಿದು ಎಳೆದರು.

ಸೀಮಾಂತೇ ಮಾಂ ತು ಪ್ರಕ್ಷಿಪ್ಯ ಪ್ರೋಚುಸ್ತೇ ದಾನವಾಧಮಾಃ ।
ಹನಿಷ್ಯಾಮೋ ಯದಿ ಪುನರಾಗಂತಾಸಿ ನ ಸಂಶಯಃ ॥ ೪೯ ॥
ಸ್ನಾತೋಹಂ ಚಕ್ರತೀರ್ಥೇ ತು ಕರಿಷ್ಯೇ ಭೋಜನಂ ವಿಭೋ ।
ತಸ್ಮಾತ್ಸ್ನಾಪಯ ಗೋವಿಂದ ನಿಯಮಂ ಸಫಲಂ ಕುರು ॥ ೫೦ ॥
ತವ ಪ್ರಸಾದಾತ್ಸ್ನಾತ್ವಾಹಂ ಭುಕ್ತ್ವಾ ಚ ಪ್ರೀತಮಾನಸಃ ।
ಪ್ರತಿಜ್ಞಾಂ ಸಫಲಾಂ ಕೃತ್ವಾ ವಿಚರಿಷ್ಯೇ ಮಹೀಮಿಮಾಂ ॥ ೫೧ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ರಾಕ್ಷಸಕೃತದುರ್ವಾಸಃಪರಾಭವವೃತ್ತಾಂತವರ್ಣನಂ ನಾಮ
ಅಷ್ಟಾದಶೋಽಧ್ಯಾಯಃ

---

೪೯. ಆ ದಾನವಾಧಮರು ನನ್ನನ್ನು ಎಲ್ಲೆಯ ಕೊನೆಯಲ್ಲಿ ಎಸೆದು, "ತಿರುಗಿ ನೀನು ಇಲ್ಲಿಗೆ ಬಂದರೆ ನಿನ್ನನ್ನು ವಧಿಸುವೆವು" ಎಂದರು.

೫೦. ಗೋವಿಂದ! ನಾನು ಗೋಮತೀ ಸಂಗಮದಲ್ಲಿ ಮಿಂದು ಭೋಜನ ಮಾಡುವೆನು. ಆದ್ದರಿಂದ ನನ್ನನ್ನು ಸ್ನಾನಮಾಡಿಸಿ ನಿಯಮವನ್ನು ಸಫಲಗೊಳಿಸು.

೫೧. ನಿನ್ನ ಅನುಗ್ರಹದಿಂದ ಮಿಂದು ಭೋಜನಗೈದು ಸಂತೋಷಗೊಂಡು ನನ್ನ ಪ್ರತಿಜ್ಞೆಯನ್ನು ಸಫಲಗೊಳಿಸಿ ಈ ಭೂಮಿಯಲ್ಲಿ ಸಂಚರಿಸುವೆನು. ಎಂದು ಬೇಡಿಕೊಂಡನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ರಾಕ್ಷಸಕೃತದುರ್ವಾಸಪರಾಭವವೃತ್ತಾಂತವರ್ಣನ ವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕೋನವಿಂಶತಿತಮೋಽಧ್ಯಾಯಃ

### ದುರ್ವಾಸಸಃ ಸ್ನಾನಾದ್ಯಾಹ್ನಿಕವಿಧಿವಿಧಾನವರ್ಣನಂ

ಪ್ರಹ್ಲಾದ ಉವಾಚ :—

ತಚ್ಛ್ರುತ್ವಾ ದೇವದೇವೇಶಶ್ಚಿಂತಯಿತ್ವಾ ಪುನಃಪುನಃ ।
ಉವಾಚ ವಚನಂ ತತ್ರ ದುರ್ವಾಸಸಮಕಲ್ಮಷಂ ॥ ೧ ॥

ಶ್ರೀ ಭಗವಾನುವಾಚ :—

ಪರಾಧೀನೋಽಸ್ಮಿ ವಿಪ್ರೇಂದ್ರ ಭಕ್ತ್ಯಾ ಕ್ರೀತೋಽಸ್ಮಿ ನಾನ್ಯಥಾ ।
ಬಲೇರಾದೇಶಕಾರೀ ಚ ದೈತ್ಯೇಂದ್ರವಶಗೋಽಹ್ಯಹಂ ॥ ೨ ॥
ತಸ್ಮಾತ್ಪ್ರಾರ್ಥಯ ವಿಪ್ರೇಂದ್ರ ದೈತ್ಯಂ ವೈರೋಚನಿಂ ಬಲಿಂ ।
ಅಸ್ಯಾದೇಶಾತ್ಕರಿಷ್ಯಾಮಿ ಯದಭೀಷ್ಟಂ ತವಾಧುನಾ ॥ ೩ ॥
ತಚ್ಛ್ರುತ್ವಾ ವಚನಂ ವಿಪ್ರೋ ಬಲಿಂ ಪ್ರೋವಾಚ ಸತ್ವರಂ ।
ಯಜ್ವನಾಂ ತ್ವಂ ವರಿಷ್ಠಶ್ಚ ದಾತೄಣಾಂ ತ್ವಂ ಮತೋಧಿಕಃ ॥ ೪ ॥

---

ಕನ್ನಡದ ಅನುವಾದ

### ದುರ್ವಾಸಸ್ನಾನಾದ್ಯಾಹ್ನಿಕವಿಧಿವಿಧಾನವರ್ಣನ

೧. ಪ್ರಹ್ಲಾದನು ಹೇಳುತ್ತಾನೆ:—ವಿಷ್ಣುವು ದುರ್ವಾಸನ ಮಾತನ್ನು ಕೇಳಿ ಪುನಃ ಪುನಃ ಚಿಂತಿಸಿ ನಿರ್ದುಷ್ಟನಾದ ಅವನನ್ನು ಕುರಿತು ಇಂತೆಂದನು.

೨. ಶ್ರೀ ಭಗವಂತನು ಹೇಳುತ್ತಾನೆ:—ವಿಪ್ರವರ್ಯನೆ! ನಾನು ಪರಾಧೀನನಾಗಿರುವೆನು. ಭಕ್ತಿಯಿಂದ ಕ್ರೀತನಾಗಿದ್ದೇನೆ. ಬಲಿಯವಶದಲ್ಲಿದ್ದು ಅವನ ಆದೇಶವನ್ನು ನೆರವೇರಿಸುವೆನು.

೩. ಬ್ರಾಹ್ಮಣೋತ್ತಮ! ಆದ್ದರಿಂದ ವಿರೋಚನನ ತನಯನಾದ ಬಲಿಯನ್ನು ಪ್ರಾರ್ಥಿಸು. ಈಗ ನಾನು ಇವನ ಅಪ್ಪಣೆಯಿಂದ ನಿನ್ನಿಷ್ಟವನ್ನು ನೆರವೇರಿಸುವೆನು.

೪–೫. ದುರ್ವಾಸನು ಆ ಮಾತನ್ನು ಕೇಳಿ ಶೀಘ್ರವಾಗಿ ಬಲಿಯನ್ನು ಕುರಿತು ಇಂತೆಂದನು. "ಎಲೈ ಬಲಿಚಕ್ರವರ್ತಿಯೆ! ನೀನು ಯಾಗ ಮಾಡುವವರಲ್ಲಿ

ಪಾರಾವಾರಃ ಕೃಪಾಯಾಶ್ಚ ದಯಾಂ ಕುರು ಮಮೋಪರಿ ।
ಪ್ರೇಷಯಸ್ವ ಮಹಾಭಾಗ ದೇವಂ ದೈತ್ಯವಿನಿಗ್ರಹೇ ॥ ೫ ॥
ಸಂಪೂರ್ಣನಿಯಮಃ ಸ್ನಾತಸ್ತ್ವತ್ಪ್ರಸಾದಾದ್ಭವಾಮ್ಯಹಂ ।
ತಚ್ಛ್ರುತ್ವಾ ವಚನಂ ದೈತ್ಯೋ ನಾತಿಹೃಷ್ಟಮನಾಸ್ತದಾ ।
ದುರ್ವಾಸಸಮುವಾಚೇದಂ ನೈತದೇವ ಭವಿಷ್ಯತಿ ॥ ೬ ॥
ಅನ್ಯತ್ಪ್ರಾರ್ಥಯ ವಿಪ್ರೇಂದ್ರ ಯತ್ತೇ ಮನಸಿ ವರ್ತತೇ ।
ತದ್ದಾಸ್ಯಾಮಿ ನ ಸಂದೇಹೋ ಯದ್ಯಪಿ ಸ್ಯಾತ್ಸುದುರ್ಲಭಂ ॥ ೭ ॥
ಆತ್ಮಾನಮಪಿ ದಾಸ್ಯಾಮಿ ನಾಹಂ ತ್ಯಕ್ಷ್ಯೇ ಹರಿಂ ದ್ವಿಜ ।
ಬಹುಭಿಃ ಸುಕೃತೈಃ ಪ್ರಾಪ್ತಂ ಕಥಂ ತ್ಯಕ್ಷ್ಯಾಮಿ ಕೇಶವಂ ॥ ೮ ॥

ದುರ್ವಾಸಾ ಉವಾಚ :—

ನಾತಿಲುಬ್ಧಂ ಹಿ ಮಾಂ ವಿದ್ಧಿ ಕಿಮನ್ಯತ್ಪ್ರಾರ್ಥಯಾಮ್ಯಹಂ ।
ರಕ್ಷ ಮೇ ಜೀವಿತಂ ದೈತ್ಯ ಪ್ರೇಷಯಸ್ವ ಜನಾರ್ದನಂ ॥ ೯ ॥

ಬಲಿರುವಾಚ :—

ಜಾನಾಸಿ ತ್ವಂ ಯಥಾ ವಿಪ್ರ ಹಿರಣ್ಯಾಕ್ಷಂ ನಿಪಾತಿತಂ ।
ಭೂತ್ವಾ ಯಜ್ಞವರಾಹಸ್ತು ದಧಾರೋರ್ವೀಂ ಬಲಾದ್ದಿವಿ ॥ ೧೦ ॥

---

ಉತ್ತಮನೂ, ದಾನಿಗಳಲ್ಲಿ ಅಧಿಕನೂ, ದಯಾಸಾಗರನೂ ಆಗಿರುವೆ. ನನ್ನಲ್ಲಿ ಕೃಪೆ ಮಾಡು. ಮಹಾತ್ಮನೆ! ದೈತ್ಯನಿಗ್ರಹಕ್ಕಾಗಿ ವಿಷ್ಣುವನ್ನು ಕಳುಹಿಸು.

೬. ನಾನು ನಿನ್ನ ಅನುಗ್ರಹದಿಂದ ಗೋಮತೀ ಸಾಗರ ಸಂಗಮದಲ್ಲಿ ಮಿಂದು ನಿಯಮವನ್ನು ಪೂರ್ತಿಗೊಳಿಸುವೆನು. ಬಲಿಯು ಅವನ ಮಾತನ್ನು ಕೇಳಿ ಏನೂ ಸಂತೋಷಗೊಳ್ಳದೆ ಹೀಗೆಂದನು. "ನೀನು ಹೇಳಿದಂತೆ ಮಾಡಲು ಸಾಧ್ಯವಿಲ್ಲ.

೭. ಬ್ರಾಹ್ಮಣೋತ್ತಮ! ನಿನ್ನ ಮನಸ್ಸಿನಲ್ಲಿರುವುದನ್ನು ಪ್ರಾರ್ಥಿಸು. ಅದು ದುರ್ಲಭವಾಗಿದ್ದರೂ ಸಂದೇಹವಿಲ್ಲದೆ ಕೊಡುವೆನು.

೮. ನನ್ನನ್ನೂ ಕೊಡುವೆನು. ನಾನು ಹರಿಯನ್ನು ಬಿಡೆನು. ಬಹು ಪುಣ್ಯದಿಂದ ಪಡೆದ ವಿಷ್ಣುವನ್ನು ಹೇಗೆ ಬಿಡಲಿ".

೯. ದುರ್ವಾಸನು ಹೇಳುತ್ತಾನೆ:—ದೈತ್ಯರಾಜ! ನಾನು ಅತ್ಯಂತ ಲೋಭಿ ಯಲ್ಲವೆಂದರಿ. ಬೇರೆ ಏನನ್ನು ಬೇಡಲಿ? ಜನಾರ್ದನನ್ನು ಕಳುಹಿಸು. ನನ್ನ ಪ್ರಾಣವನ್ನು ಕಾಪಾಡು.

೧೦-೧೨. ಬಲಿಯು ಹೇಳುತ್ತಾನೆ: ಬ್ರಾಹ್ಮಣ! ವಿಷ್ಣುವು ಹಿರಣ್ಯಾಕ್ಷನನ್ನು ಕೊಂದುದನ್ನೂ, ಯಜ್ಞ ವರಾಹನಾಗಿ ಬಲಾತ್ಕಾರದಿಂದ

ಯಥಾ ಚ ದೈತ್ಯಪ್ರವರಮವಧ್ಯಂ ದೈತ್ಯದಾನವೈಃ ।
ಹತವಾನ್ಹಿರಣ್ಯಕಶಿಪುಂ ನೃಸಿಂಹಃ ಸರ್ವಗಃ ಪ್ರಭುಃ ॥ ೧೧ ॥
ತಥೈವ ವೃತ್ರಂ ನಮುಚಿಂ ರಕ್ಷೋ ಲಂಕೇಶಸಂಜ್ಞಕಂ ।
ಜಘಾನ ಮಾಯಯಾ ವಿಷ್ಣುಃ ಸುರಾರ್ಥಂ ಸುರಸತ್ತಮಃ ॥ ೧೨ ॥
ಪ್ರಥಮೋ ವಾಮನೋ ಭೂತ್ವಾ ಹ್ಯಯಾಚತ ಪದತ್ರಯಂ ।
ಪುನಸ್ತ್ರಿವಿಕ್ರಮೋ ಭೂತ್ವಾ ಭುವನಾನಿ ಜಹಾರ ಮೇ ॥ ೧೩ ॥
ಮಯಾ ಪುಣ್ಯವಶಾದ್ವಿಷ್ಣುರ್ಯದಿ ಪ್ರಾಪ್ತಃ ಕಥಂಚನ ।
ನಾಹಂ ತ್ಯಕ್ಷ್ಯೇ ಜಗನ್ನಾಥಂ ಮಾಯಾವಾಮನಕಂ ಪ್ರಭುಂ ॥ ೧೪ ॥

ದುರ್ವಾಸಾ ಉವಾಚ :—

ನಾಹಂ ಭೋಕ್ಷ್ಯೇ ವಿನಾ ಸ್ನಾನಂ ಗೋಮತ್ಯುದಧಿ ಸಂಗಮೇ ।
ಯದಿ ನ ಪ್ರೇಷ್ಯಸಿ ಹರಿಂ ತತಸ್ತ್ಯಕ್ಷ್ಯೇ ಕಲೇಬರಂ ॥ ೧೫ ॥

ಬಲಿರುವಾಚ :—

ಯದ್ಭಾವ್ಯಂ ತದ್ಭವತು ತೇ ಯಜ್ಜಾನಾಸಿ ತಥಾ ಕುರು ।
ಬ್ರಹ್ಮರುದ್ರೇಂದ್ರನಮಿತಂ ನಾಹಂ ತ್ಯಕ್ಷ್ಯೇ ಪದದ್ವಯಂ ॥ ೧೬ ॥

---

ಭೂಮಿಯನ್ನು ಉದ್ಧರಿಸಿದ್ದನ್ನೂ, ನೃಸಿಂಹನಾಗಿ ದೈತ್ಯದಾನವರಿಂದ ಅವಧ್ಯನಾದ ಹಿರಣ್ಯ ಕಶಿಪುವನ್ನು ಕೊಂದುದನ್ನೂ, ಹಾಗೆಯೇ ಸುರರಿಗಾಗಿ ನಮುಚಿ, ರಾವಣ ರನ್ನು ವಧಿಸಿರುವುದನ್ನೂ ನೀನು ತಿಳಿದಿರುವೆ

೧೩. ಈ ವಿಷ್ಣುವು ಮೊದಲು ವಾಮನನಾಗಿ ಮೂರು ಹೆಜ್ಜೆ ಭೂಮಿಯನ್ನು ಬೇಡಿ ತರುವಾಯ ತ್ರಿವಿಕ್ರಮನಾಗಿ ಲೋಕಗಳನ್ನೇ ಅಪಹರಿಸಿದನು.

೧೪. ನಾನು ಪುಣ್ಯವಶದಿಂದ ಪಡೆದ ಜಗನ್ನಾಥನಾದ ಈ ಮಾಯಾ ವಾಮನನನ್ನು ಬಿಡೆನು.

೧೫. ದುರ್ವಾಸನು ಹೇಳುತ್ತಾನೆ :—ನಾನು ಗೋಮತೀ ಸಾಗರ ಸಂಗಮದಲ್ಲಿ ಸ್ನಾನಮಾಡದೆ ಭೋಜನ ಮಾಡೆನು. ನೀನು ಹರಿಯನ್ನು ಕಳುಹಿಸದಿದ್ದರೆ ದೇಹ ವನ್ನು ತ್ಯಜಿಸುವೆನು.

೧೬. ಬಲಿಯು ಹೇಳುತ್ತಾನೆ :—ಆಗತಕ್ಕದ್ದಾಗಲಿ. ನಿನ್ನಿಷ್ಟದಂತೆ ಮಾಡು. ನಾನು ಬ್ರಹ್ಮರುದ್ರೇಂದ್ರರಿಂದ ವಂದಿತರಾದ ಹರಿಯ ಪಾದದ್ವಯವನ್ನು ತೊರೆಯೆನು.

ತದಾ ವಿವದಮಾನೌ ತೌ ದೃಷ್ಟ್ವಾ ಸ ಜಗದೀಶ್ವರಃ ।
ಬ್ರಹ್ಮಣ್ಯದೇವಃ ಕೃಪಯಾ ಬ್ರಾಹ್ಮಣಂ ತಮುವಾಚ ಹ ॥ ೧೭ ॥
ಸ್ವಸ್ಥೋ ಭವ ದ್ವಿಜಶ್ರೇಷ್ಠ ಸ್ನಾಪಯಿಷ್ಯೇ ನ ಸಂಶಯಃ ।
ಹತ್ವಾ ದೈತ್ಯಗಣಾನ್ಸರ್ವಾನ್ಗೋಮತ್ಯುದಧಿ ಸಂಗಮೇ ॥ ೧೮ ॥

ಪ್ರಹ್ಲಾದ ಉವಾಚ :

ಶ್ರುತ್ವಾ ಭಗವತೋ ವಾಕ್ಯಂ ಬ್ರಾಹ್ಮಣಂ ಪ್ರತಿ ದೈತ್ಯರಾಟ್ ।
ದೃಢಂ ಜಗ್ರಾಹ ಚರಣೌ ಪತಿತ್ವಾ ಪದಯೋಸ್ತದಾ ॥ ೧೯ ॥
ತತಃ ಸಮೃದ್ಧಿಮಗಮತ್ಪಾದೌ ದತ್ವಾ ಬಲೇಃ ಪ್ರಭುಃ ।
ಶಂಖಚಕ್ರಗದಾಪಾಣಿರ್ವಿಷ್ಣುರ್ದುರ್ವಾಸಸಾನ್ವಿತಃ ॥ ೨೦ ॥
ಪ್ರಸ್ಥಿತೌ ತೌ ತದಾ ದೃಷ್ಟ್ವಾ ದುರ್ವಾಸಸಜನಾರ್ದನೌ ।
ಅನಂತಃ ಪುರುಷೋಽಗಚ್ಛನ್ಮುಶಲೀ ಚ ಹಲಾಯುಧಃ ॥ ೨೧ ॥
ಮುಶಲೀ ಚಾಗ್ರತೋಽಗಚ್ಛತ್ತತೋ ವಿಷ್ಣುಸ್ತ್ರಿವಿಕ್ರಮಃ ।
ತಯೋರನ್ವಗಮದ್ವಿಪ್ರೋ ದುರ್ವಾಸಾಭೂತಲಾದ್ಬಹಿಃ ॥ ೨೨ ॥

---

೧೭. ಆಗ ಬ್ರಾಹ್ಮಣರನ್ನು ದೇವತೆಯೆಂದು ಭಾವಿಸಿರುವ ಜಗದೊಡೆಯನಾದ ಹರಿಯು ವಿವಾದಮಾಡುತ್ತಿರುವ ಅವರಿಬ್ಬರನ್ನು ಕಂಡು ದಯೆಯಿಂದ ದುರ್ವಾಸನನ್ನು ಕುರಿತು ಇಂತೆಂದನು.

೧೮. "ದ್ವಿಜೋತ್ತಮ ! ಸ್ವಸ್ಥನಾಗು. ನಾನು ಸಕಲ ದೈತ್ಯರನ್ನೂ ವಧಿಸಿ ಗೋಮತೀ ಸಾಗರ ಸಂಗಮದಲ್ಲಿ ನಿನ್ನನ್ನು ಸ್ನಾನಮಾಡಿಸುವೆನು".

೧೯. ಪ್ರಹ್ಲಾದನು ಹೇಳುತ್ತಾನೆ :— ಬಲಿಯು ಭಗವಂತನು ಬ್ರಾಹ್ಮಣನನ್ನು ಕುರಿತು ನುಡಿದ ನುಡಿಯನ್ನು ಕೇಳಿ ಅವನ ಪಾದಗಳಲ್ಲಿ ಬಿದ್ದು ಅವುಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು.

೨೦. ಬಳಿಕ ವಾಮನನು ವೃದ್ಧಿಗೊಂಡು ಪಾದಗಳನ್ನು ಬಲಿಗಿತ್ತು ಶಂಖ ಚಕ್ರ ಗದೆಗಳನ್ನು ಹಿಡಿದು ದುರ್ವಾಸನೊಡನೆ ಹೊರಟನು.

೨೧. ದುರ್ವಾಸ ಜನಾರ್ದನರು ಹೊರಟಿರುವುದನ್ನು ನೋಡಿ ಬಲರಾಮನೂ ಹೊರಟನು.

೨೨–೨೩. ಬಲರಾಮನು ಮುಂದೆಯೂ ಅನಂತರ ತ್ರಿವಿಕ್ರಮನೂ ಹೊರಟರು. ದುರ್ವಾಸನು ಅವರನ್ನು ಹಿಂಬಾಲಿಸಿದನು ಅವರೆಲ್ಲ ಪಾತಾಳವನ್ನು

ಭಿತ್ವಾ ರಸಾತಲಂ ಸರ್ವೇ ಸಮುತ್ತಸ್ಥುಸ್ತ್ವರಾನ್ವಿತಾಃ ।
ಆವಿರ್ಬಭೂವುಸ್ತತ್ರೈವ ಗೋಮತ್ಯುದಧಿಸಂಗಮೇ ॥ ೨೩ ॥
ಸನ್ನದ್ಧೌ ದೃಢಧನ್ವಾನೌ ಸಂಕರ್ಷಣಜನಾರ್ದನೌ ।
ಊಚತುಸ್ತೌ ತದಾ ವಿಪ್ರಂ ಕುರು ಸ್ನಾನಂ ಯದೃಚ್ಛಯಾ ॥ ೨೪ ॥
ತಯೋಸ್ತು ವಚನಂ ಶ್ರುತ್ವಾ ಸ್ನಾನಂ ಚಕ್ರೇ ತ್ವರಾನಿತಃ ।
ಸ್ನಾತ್ವಾ ಚಾವಶ್ಯಕಂ ಕರ್ಮ ಕರ್ತುಮಾರಭತ ದ್ವಿಜಃ ॥ ೨೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಕೃಷ್ಣಬಲರಾಮದುರ್ವಾಸಸಸಮಾಗಮಪೂರ್ವಕಂ ದುರ್ವಾಸಸಃ
ಸ್ನಾನಾದ್ಯಾಹ್ನಿಕವಿಧಿವಿಧಾನವರ್ಣನಂನಾಮ
ಏಕೋನವಿಂಶತಿತಮೋಽಧ್ಯಾಯಃ

---

ಭೇದಿಸಿ ತ್ವರೆಯಿಂದ ಮೇಲಕ್ಕೆದ್ದು ಗೋಮತೀಸಾಗರ ಸಂಗಮದಲ್ಲಿ ಆವಿರ್ಭವಿಸಿದರು.

೨೪. ಅಲ್ಲಿ ಕೃಷ್ಣ ಬಲರಾಮರು ಬಿಲ್ಲನ್ನು ಹಿಡಿದು ದುರ್ವಾಸನನ್ನು ಕುರಿತು ಇಷ್ಟಾನುಸಾರಗಿ ಸ್ನಾನಮಾಡೆಂದರು.

೨೫. ದುರ್ವಾಸನು ಅವರ ಮಾತನ್ನು ಕೇಳಿ ತ್ವರೆಯಿಂದ ಮಿಂದು ಅವಶ್ಯಕ ಕಾರ್ಯವನ್ನು ಮಾಡತೊಡಗಿದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಕೃಷ್ಣಬಲರಾಮದುವಾಸಸಸಮಾಗಮಪೂರ್ವಕ ದುರ್ವಾಸಃ
ಸ್ನಾನಾದ್ಯಾಹ್ನಿಕವಿಧಿವಿಧಾನವರ್ಣನವೆಂಬ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

ತಥಾ ದೀರ್ಘನಖೋ ದೈತ್ಯಃ ಸ್ವೇನಾನೀಕೇನ ಸಂವೃತಃ ।
ಮಂತ್ರಿಪುತ್ರೋ ಮಹಾಮಾಯೋ ದೈತ್ಯರಾಜಕುಶಸ್ಯ ವೈ ।
ನಿರ್ಯಯೌ ವಿಘಸೋ ದೈತ್ಯಃ ಪ್ರಘಸಶ್ಚ ಮಹಾಬಲಃ ॥ ೨೬ ॥
ಊರ್ಧ್ವಬಾಹುರ್ವಕ್ರಶಿರಾಃ ಕಂಚುಕಶ್ಚ ಶಿವೋಲುಕೈಃ ।
ಬ್ರಹ್ಮಘ್ನೋ ಯಜ್ಞಹಾ ದೈತ್ಯೋ ರಾಹುರ್ಬರ್ಬರಕಸ್ತಥಾ ॥ ೨೭ ॥
ಸುನಾಮಾ ವಸುನಾಮಾ ಚ ಮಂತ್ರಿಣೌ ಬುದ್ಧಿಸತ್ತಮೌ ।
ಸೇನಾಪತಿಶ್ಚೋಗ್ರದಂಷ್ಟ್ರಸ್ತಸ್ಯ ಭ್ರಾತಾ ಮಹಾಹನುಃ ॥ ೨೮ ॥
ಏತೇಚಾನ್ಯೇ ಚ ಬಹವೋ ದೈತ್ಯಾಃ ಕ್ರೋಧಸಮನ್ವಿತಾಃ ।
ಮಹತಾ ರಥಘೋಷೇಣ ನಿರ್ಯಯುರ್ಯುದ್ಧಕಾಂಕ್ಷಿಣಃ ॥ ೨೯ ॥
ಸ್ನಾತ್ವಾ ಶುಕ್ಲಾಂಬರಧರಃ ಶುಕ್ಲಮಾಲಾವಿಭೂಷಿತಃ ।
ಕುಶಃ ಶಂಭುಂ ಮಹಾದೇವಂ ಭವಾನೀಪತಿಮವ್ಯಯಂ ।
ಅರ್ಚಯಾಮಾಸ ಭೂತೇಶಂ ಪರಮೇಣ ಸಮಾಧಿನಾ ॥ ೩೦ ॥
ಪಂಚಾಮೃತೇನ ಸಂಸ್ನಾಪ್ಯ ತಥಾ ಗಂಧೈರ್ವಿಲಿಪ್ಯ ಚ
ಅರ್ಚಯಾಮಾಸ ದೈತ್ಯೇಂದ್ರೋ ಹ್ಯನೇಕಕುಸುಮೋತ್ಕರೈಃ ॥ ೩೧ ॥
ಗೀತವಾದಿತ್ರಶಬ್ದೈಶ್ಚ ತಥಾ ಮಂಗಲವಾಚಕೈಃ ।
ಪೂಜಯಿತ್ವಾ ಮಹಾದೇವಂ ಬ್ರಾಹ್ಮಣಾನ್ಸ್ವಸ್ತಿವಾಚ್ಯ ಚ ॥ ೩೨ ॥
ಭೂಷಯಿತ್ವಾ ಭೂಷಣೈಶ್ಚ ಮಣಿವಜ್ರವಿಭೂಷಣೈಃ ।
ಮುಕುಟೇನಾರ್ಕವರ್ಣೇನ ಜ್ವಲದ್ಭಾಸ್ಕರರೋಚಿಷಾ ॥ ೩೩ ॥

---

ಹೊರಟರು. ಹಾಗೆಯೆ ವಿಘಸ, ಪ್ರಘಸ, ಊರ್ಧ್ವಬಾಹು, ವಕ್ರಶಿರಸ್ಸು, ಕಂಚುಕ, ಶಿವ, ಉಲೂಕ, ಬ್ರಹ್ಮಘ್ನ, ಯಜ್ಞಹಾ, ರಾಹು, ಬರ್ಬರಕ, ಸುನಾಮಾ, ವಸುನಾಮಾ. ಬುದ್ಧಿಸತ್ತಮರೆಂಬ ಮಂತ್ರಿಗಳು, ಸೇನಾಪತಿಯಾದ ಉಗ್ರದಂಷ್ಟ್ರ, ಅವನ ಸಹೋದರನಾದ ಮಹಾಹನು ಇವರೂ ಇನ್ನೂ ಇತರ ದೈತ್ಯರೂ ಕೋಪ ಗೊಂಡು ಯುದ್ಧಕ್ಕಾಗಿ ದೊಡ್ಡ ರಥಗಳ ಶಬ್ದದಿಂದ ಹೊರಟರು.

೩೦. ಕುಶನು ಮಿಂದು ಶ್ವೇತವಸ್ತ್ರವನ್ನುಟ್ಟವನೂ, ಶುಕ್ಲಮಾಲಾಲಂಕೃತನೂ ಆಗಿ ಭವಾನೀಪತಿಯಾದ ಶಂಕರನನ್ನು ಉತ್ತಮ ಸಮಾಧಿಯಿಂದ ಪೂಜಿಸಿದನು.

೩೧. ಅವನು ಶಂಕರನನ್ನು ಪಂಚಾಮೃತದಿಂದ ಸ್ನಾನಮಾಡಿಸಿ ಗಂಧವನ್ನು ಹಚ್ಚಿ ಅನೇಕ ಕುಸುಮಗಳಿಂದ ಪೂಜಿಸಿದನು.

೩೨–೩೪. ಮತ್ತು ಗೀತವಾದ್ಯ ಶಬ್ದಗಳಿಂದಲೂ, ಮಂಗಳ ಶಬ್ದಗಳಿಂದಲೂ ಮಹಾದೇವನನ್ನು ಪೂಜಿಸಿ ಬ್ರಾಹ್ಮಣರಿಂದ ಸ್ವಸ್ತಿವಾಚನಮಾಡಿಸಿ ಮಣಿ, ವಜ್ರದ

ಭ್ರಾಜಮಾನೋ ದೈತ್ಯರಾಜೋ ಹಾರೇಣಾತೀವ ಶೋಭಿತಃ ।
ಸನ್ನಹ್ಯ ಚ ಮಹಾಬಾಹುಃ ಸಾರಥಿಂ ಸಮುದೈಕ್ಷತ ॥ ೩೪ ॥
ಸುನಾಮಾನಂ ವಸುಂ ಚೈವ ಮಂತ್ರಿಣೌ ವಾಕ್ಯಮಬ್ರವೀತ್ ।
ಕಶ್ಚಾಯಮಸುರಾನ್ಹಂತಿ ಕಿಮರ್ಥಂ ಜ್ಞಾಯತಾಮಿತಿ ॥ ೩೫ ॥
ತಸ್ಯ ತದ್ವಚನಂ ಶ್ರುತ್ವಾ ರುರುರ್ವಚನಮಬ್ರವೀತ್ ।
ಗತೇಽಹ್ನಿ ಬ್ರಾಹ್ಮಣಃ ಸ್ನಾತುಂ ಗೋಮತ್ಯಾಃ ಸಂಗಮೇ ಕಿಲ ॥ ೩೬ ॥
ಆಗತಃ ಪ್ರತಿಷಿದ್ಧಃ ಸನ್ದೈತ್ಯೈಸ್ತತ್ರ ಮಹೀಪತೇ ।
ತೇನ ವಿಷ್ಣುಃ ಸಮಾನೀತಃ ಸಂಕರ್ಷಣಸಮನ್ವಿತಃ ॥ ೩೭ ॥
ಸೋಽಸ್ಮಾನ್ಹಂತಿ ಮಹಾರಾಜ ಬ್ರಹ್ಮಣ್ಯೋ ಜಗದೀಶ್ವರಃ ।
ತೇನ ತೇ ಬಹವೋ ದೈತ್ಯಾ ಹತಾಃ ಕೇಚಿತ್ಪಲಾಯಿತಾಃ ॥ ೩೮ ॥

ಸುನಾಮೋವಾಚ :—

ಸ್ನಾತ್ವಾ ಗಚ್ಛತು ವಿಪ್ರೋಽಸೌ ವಾಸುದೇವಸಮನ್ವಿತಃ ।
ರಾಜನ್ವೃಥಾ ವಿಗ್ರಹೇಣ ಕಿಂ ಕಾರ್ಯಂ ಕಥಯಸ್ವ ನಃ ॥ ೩೯ ॥
ತಸ್ಯ ತದ್ವಚನಂ ಶ್ರುತ್ವಾ ಕುಶಃ ಕ್ರೋಧಸಮನ್ವಿತಃ ।
ಕಥಂ ಗೋಲಕಹಂತಾರಂ ನ ಹನಿಷ್ಯಾಮಿ ಕೇಶವಂ ॥ ೪೦ ॥

---

ಒಡವೆಗಳಿಂದಲೂ, ಸೂರ್ಯನಂತೆ ಹೊಳೆಯುವ ಕಿರೀಟದಿಂದಲೂ ಹಾರದಿಂದಲೂ ತಾನು ಅಲಂಕಾರಗೊಂಡು ವಿರಾಜಿಸುತ್ತ ಸಿದ್ಧನಾಗಿ ಸಾರಥಿಯನ್ನು ನೋಡಿದನು.

೩೫. ಸುನಾಮ ವಸುಗಳೆಂಬ ಮಂತ್ರಿಗಳನ್ನು ಕುರಿತು. "ಅಸುರರನ್ನು ಕೊಲ್ಲುವವನಾರು ? ಏತಕ್ಕೆ ಕೊಲ್ಲುತ್ತಾನೆ "? ತಿಳಿಯಿರಿ. ಎಂದು ಹೇಳಿದನು.

೩೬-೩೭. ರುರುವು ಅವನ ಮಾತನ್ನು ಕೇಳಿ ಇಂತೆಂದದು. "ನಿನ್ನೆ ಒಬ್ಬ ಬ್ರಾಹ್ಮಣನು ಗೋಮತೀ ಸಂಗಮದಲ್ಲಿ ಸ್ನಾನಮಾಡಲು ಬಂದನು. ಅವನನ್ನು ದೈತ್ಯರು ತಡೆಯಲು ಆ ಬ್ರಾಹ್ಮಣನು ಬಲರಾಮನೊಡನೆ ಕೃಷ್ಣನನ್ನು ಕರೆತಂದನು.

೩೮. ಮಹಾರಾಜ ! ಜಗಮೊಡೆಯನಾದ ಆ ವಿಷ್ಣುವು ನಮ್ಮನ್ನು ಕೊಲ್ಲುತ್ತಿದ್ದಾನೆ. ಅವನು ಅನೇಕ ದೈತ್ಯರನ್ನು ವಧಿಸಲು ಕೆಲವರು ಓಡಿಹೋದರು".

೩೯. ಸುನಾಮನು ಹೇಳುತ್ತಾನೆ :— ದೊರೆಯೆ ! ಈ ಬ್ರಾಹ್ಮಣನು ವಾಸುದೇವನೊಡನೆ ಮಿಂದು ಹೊರಟುಹೋಗಲಿ. ನಮಗೆ ವೃಥಾ ಜಗಳದಿಂದೇನು ಪ್ರಯೋಜನ ? ಹೇಳು.

೪೦. ಕುಶನು ಸುನಾಮನ ಆ ವಚನವನ್ನು ಕೇಳಿ ಕೋಪಗೊಂಡು ನಾನು ಗೋಲಕನನ್ನು ಕೊಂದ ವಿಷ್ಣುವನ್ನು ಹೇಗೆ ಕೊಲ್ಲದಿರುವೆನು.

ದಾನವಾನ್ನಿದ್ರುತಾನ್ದೃಷ್ಟ್ವಾ ವಿಷ್ಣುನಾ ನಿಹತಾನ್ಪುರಾ ।
ಗೋಲಕಃ ಕೂರ್ಮಪೃಷ್ಠಶ್ಚ ಮಾನಸಂ ಕೃತ್ವಾ ನ್ಯವರ್ತತಾಂ ॥ ೧೪ ॥
ಸಂಕರ್ಷಣಂ ಗೋಲಕಶ್ಚ ಹ್ಯಾಜಘಾನ ತ್ರಿಭಿಃ ಶರೈಃ ।
ಅನಂತಂ ವ್ಯಥಿತಂ ದೃಷ್ಟ್ವಾ ಗೋಲಕಃ ಕ್ರೋಧಮೂರ್ಛಿತಃ ॥ ೧೫ ॥
ಉತ್ಪತ್ಯ ತರಸಾ ಮೂರ್ಧ್ನಿ ದುರ್ವಾಸಸಮತಾಡಯತ್ ।
ಸಮುಷ್ಟಿಘಾತಾಭಿಹತಶ್ಚುಕ್ರೋಶ ಪತಿತಃ ಕ್ಷಿತೌ ॥ ೧೬ ॥
ಸಂಕರ್ಷಣಸ್ತು ಪತಿತಂ ದೃಷ್ಟ್ವಾ ಮೂರ್ಧ್ನಿ ಪ್ರತಾಡಿತಂ ।
ದೃಷ್ಟ್ವಾ ಚುಕೋಪ ಭಗವಾಂಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ।
ಸಂಗೃಹ್ಯ ಮುಶಲಂ ವೀರೋ ಜಘಾನ ಸಮರೇ ರಿಪುಂ ॥ ೧೭ ॥
ಮುಶಲೇನಾಹತೋ ಮೂರ್ಧ್ನಿ ಗೋಲಕೋ ವಿಕಲೇಂದ್ರಿಯಃ ।
ಸಂಭಿನ್ನಮಸ್ತಕಶ್ಚೈಷ ಪಪಾತ ಚ ಮಮಾರ ಚ ॥ ೧೮ ॥
ಗೋಲಕಂ ಪತಿತಂ ದೃಷ್ಟ್ವಾ ಕ್ರಂದಂತಂ ಬ್ರಾಹ್ಮಣಂ ತಥಾ ।
ಕೂರ್ಮಪೃಷ್ಠಂ ಚ ಭಗವಾನ್ವಿಷ್ಣುರ್ಹಂತುಂ ಮನೋ ದಧೇ ।
ನಾರಾಚೇನ ಸುತೀಕ್ಷ್ಣೇನ ಜಘಾನ ಹೃದಯೇ ರಿಪುಂ ॥ ೧೯ ॥

---

೧೪. ಕೃಷ್ಣನಿಂದ ಹೊಡೆಯಲ್ಪಟ್ಟ ದಾನವರು ಓಡಿದುದನ್ನು ನೋಡಿ ಗೋಲಕ, ಕೂರ್ಮಪೃಷ್ಠರು ಕೋಪದಿಂದ ಹಿಂದಿರುಗಿದರು.

೧೫-೧೬. ಗೋಲಕನು ಮೂರು ಬಾಣಗಳಿಂದ ಬಲರಾಮನನ್ನು ಹೊಡೆದನು. ಅದರಿಂದ ವ್ಯಥೆಗೊಂಡ ಬಲರಾಮನನ್ನು ಕಂಡು ಕುಪಿತನಾಗಿ ದುರ್ವಾಸನನ್ನು ತಲೆಯ ಮೇಲೆ ಮುಷ್ಟಿಯಿಂದ ಹೊಡೆಯಲು ಅವನು ನೆಲದ ಮೇಲೆ ಬಿದ್ದು ಕಿರುಚಿಕೊಂಡನು.

೧೭. ಸಂಕರ್ಷಣನು ತಲೆಯ ಏಟಿನಿಂದ ಕೆಳಗೆ ಬಿದ್ದ ದುರ್ವಾಸನನ್ನು ಕಂಡು ಕುಪಿತನಾಗಿ ನಿಲ್ಲು ನಿಲ್ಲು ಎನ್ನುತ್ತ ಒನಕೆಯಿಂದ ಆ ಗೋಲಕನನ್ನು ಅಪ್ಪಳಿಸಿದನು.

೧೮. ಅದರಿಂದ ತಲೆಯು ಒಡೆದು ಹೋಗಲು ಗೋಲಕನು ಕೆಳಗೆ ಬಿದ್ದು ಸತ್ತನು.

೧೯. ಗೋಲಕನು ಬಿದ್ದುದನ್ನೂ, ಬ್ರಾಹ್ಮಣನು ಕೂಗಿಕೊಳ್ಳುತ್ತಿರುವುದನ್ನೂ ನೋಡಿ ಕೃಷ್ಣನು ಕೂರ್ಮಪೃಷ್ಠನನ್ನು ಕೊಲ್ಲಲುದ್ದೇಶಿಸಿ ಅವನ ಹೃದಯಕ್ಕೆ ಹರಿತವಾದ ಬಾಣದಿಂದ ಹೊಡೆದನು.

ಸ ವಿಷ್ಣುಬಾಣಾಭಿಹತಸ್ತ್ಯಕ್ತಶಸ್ತ್ರಃ ಪಲಾಯಿತಃ ।
ತಸ್ಮಿನ್ಪ್ರಭಿನ್ನೇತಿಬಲೇ ಗತೇ ವೈ ಕೂರ್ಮಪೃಷ್ಠಕೇ ।
ಅಭಜ್ಯತ ಬಲಂ ಸರ್ವಂ ವಿದ್ರುತಂ ಚ ದಿಶೋ ದಶ ॥ ೨೦ ॥
ತತ್ರ ಭಗ್ನಂ ಬಲಂ ಸರ್ವಂ ನಿಹತಂ ಗೋಲಕಂ ತಥಾ ।
ದ್ವಾರಸ್ಥಃ ಕಥಯಾಮಾಸ ದೈತ್ಯರಾಜ್ಞೇ ಕುಶಾಯ ಸಃ ॥ ೨೧ ॥
ಗೋಲಕಂ ನಿಹತಂ ಶ್ರುತ್ವಾ ದೈತ್ಯಾನನ್ಯಾಂಶ್ಚ ದೈತ್ಯರಾಟ್ ।
ಯೋಧಾನಾಜ್ಞಾಪಯಾಮಾಸ ಸನ್ನದ್ಧಾನ್ಸ್ವಬಲಸ್ಯ ಚ ॥ ೨೨ ॥
ಆಜ್ಞಾಂ ಕುಶಸ್ಯ ತೇ ಲಬ್ಧ್ವಾ ದೈತ್ಯಾಃ ಪಂಚಜನಾದಯಃ ।
ಯುದ್ಧಾಯಾಭಿಮುಖಾಃ ಸರ್ವೇ ರಥೈರ್ನಾಗೈಶ್ಚ ನಿರ್ಯಯುಃ ॥ ೨೩ ॥
ಅನೀಕಂ ದಶಸಾಹಸ್ರಂ ಕೂರ್ಮಪೃಷ್ಠಸ್ಯ ನಿರ್ಯಯೌ ।
ಅಯುತೇ ದ್ವೇ ರಥಾನಾಂ ತು ನಾಗಾನಾಮಯುತಂ ತಥಾ ॥ ೨೪ ॥
ದಶಾಯುತಾನಿ ಚಾಶ್ವಾನಾಮುಷ್ಟ್ರಾಣಾಂ ಚ ತಥೈವ ಚ ।
ಬಕಶ್ಚ ನಿರ್ಯಯೌ ದೈತ್ಯೋ ಬಹುಸೈನ್ಯಸಮನ್ವಿತಃ ॥ ೨೫ ॥

---

೨೦. ಹಾಗೆ ವಿಷ್ಣು ಬಾಣದಿಂದ ತಾಡಿತನಾದ ಕೂರ್ಮಪೃಷ್ಠನು ಶಸ್ತ್ರವನು ತ್ಯಜಿಸಿ ಓಡಿದನು. ಅತ್ಯಂತ ಬಲಶಾಲಿಯಾದ ಆ ಕೂರ್ಮಪೃಷ್ಠನು ಓಡಿಹೋಗಲು ಸಮಸ್ತ ದೈತ್ಯ ಸೈನ್ಯಗಳು ದಶದಿಕ್ಕುಗಳಿಗೆ ಓಡಿದುವು.

೨೧. ದ್ವಾರಪಾಲಕನು ಸಕಲ ಸೈನ್ಯಗಳೂ ಹಾಳಾದುದನ್ನೂ, ಗೋಲಕನ್ನು ಹೊಡೆಯಲ್ಪಟ್ಟದನ್ನೂ ನೋಡಿ ಅದನ್ನು ದೈತ್ಯರಾಜನಾದ ಕುಶನಿಗೆ ಹೇಳಿದನು.

೨೨. ದೈತ್ಯರಾಜನಾದ ಕುಶನು ಗೋಲಕ, ಮತ್ತು ಇತರ ದೈತ್ಯರು ಮೃತರಾದುದನ್ನು ಕೇಳಿ ತನ್ನ ಸೈನ್ಯದಲ್ಲಿ ಯುದ್ಧಸನ್ನದ್ಧರಾದ ಭಟರನ್ನು ಆಜ್ಞೆಮಾಡಿದನು.

೨೩. ಪಂಚಜನ ಮೊದಲಾದ ಆ ದೈತ್ಯರು ಕುಶನ ಆದೇಶವನ್ನು ಪಡೆದು ರಥ ಮತ್ತು ಆನೆಗಳೊಡನೆ ಯುದ್ಧಾಭಿಮುಖರಾದರು.

೨೪-೨೫. ಕೂರ್ಮಪೃಷ್ಠನ ಹತ್ತು ಸಾವಿರ ಸೈನ್ಯವೂ, ರಥ, ಆನೆಗಳ ಹತ್ತು ಸಾವಿರವೂ, ಕುದುರೆ ಒಂಟೆಗಳ ಲಕ್ಷಗಳೂ ಯುದ್ಧಕ್ಕೆ ಹೊರಟುವು. ಬಕ, ದೀರ್ಘನಖರೂ, ಕುಶನ ಮಂತ್ರಿಸುತನಾದ ಮಹಾಮಾಯನೂ ತಮ್ಮ ಸೈನ್ಯಗಳಿಂದ

॥ ಶ್ರೀಃ ॥

## ವಿಂಶತಿತಮೋಽಧ್ಯಾಯಃ

### ಕುಶರಾಕ್ಷಸಸ್ಯೋಪರಿ ವಿಷ್ಣುನಾ ಶಿವಲಿಂಗಸ್ಥಾಪನವರ್ಣನಂ

ಪ್ರಹ್ಲಾದ ಉವಾಚ :—

ಬ್ರಹ್ಮಘೋಷಧ್ವನಿಂ ಶ್ರುತ್ವಾ ದಾನವೋ ದುರ್ಮುಖಸ್ತದಾ ।
ಕ್ರೋಧಸಂರಕ್ತನಯನೋ ದುರ್ವಾಸಸಮಥಾಽಬ್ರವೀತ್ ॥ ೧ ॥
ಹನ್ಯಮಾನಸ್ತ್ವಮಸ್ಮಾಭಿರ್ಯದಿ ಮುಕ್ತೋಽಸಿ ವೈ ದ್ವಿಜ ।
ಕಸ್ಮಾತ್ತ್ವಂ ಪುನಃ ಸಮಾಯಾತೋ ಮರಣಾಯ ಚ ದುಷ್ಟಧೀಃ ॥ ೨ ॥
ಇತ್ಯುಕ್ತ್ವಾ ಮುಷ್ಟಿನಾಹಂತುಂ ಪ್ರಾದ್ರವದ್ದಾನವಾಧಮಃ ।
ಪ್ರಾಹ ಪ್ರಧಾವಮಾನಂ ತಂ ದುರ್ವಾಸಾ ಮುನಿಸತ್ತಮಃ ॥ ೩ ॥
ಸ್ಪರ್ಶಂ ಮಾ ಕುರು ಪಾಪಿಷ್ಠ ಬ್ರಾಹ್ಮಣಂ ಮಾಂ ಕೃತಾಹ್ನಿಕಂ ।
ತಂ ದೃಷ್ಟ್ವಾ ದಾನವಂ ವಿಷ್ಣುರ್ಬ್ರಾಹ್ಮಣಂ ಹಂತುಮುದ್ಯತಂ ॥ ೪ ॥
ತಸ್ಯ ಕ್ರುದ್ಧೋ ಜಗನ್ನಾಥೋ ದುರ್ವಾಸಸಃ ಕೃತೇ ತದಾ ।
ಚಕ್ರೇಣ ಕ್ಷುರಧಾರೇಣ ಶಿರಶ್ಚಿಚ್ಛೇದ ಲೀಲಯಾ ॥ ೫ ॥

---

### ಕನ್ನಡದ ಅನುವಾದ

#### ಕುಶರಾಕ್ಷಸಪರಿಶಿರ್ಷೋ (?) ಶಿವಲಿಂಗಸ್ಥಾಪನವರ್ಣನ

೧. ಪ್ರಹ್ಲಾದನು ಹೇಳುತ್ತಾನೆ: - ಆಗ ದುರ್ಮುಖ ದಾನವನು ವೇದಧ್ವನಿಯನ್ನು ಕೇಳಿ ಕೆಂಪೇರಿದ ಕಣ್ಣುಗಳುಳ್ಳವನಾಗಿ ದುರ್ವಾಸನನ್ನು ಕುರಿತು ಇಂತೆಂದನು.

೨. "ನಾವು ಹೊಡೆಯುತ್ತಿರುವುದರಿಂದ ಬಿಡಿಸಲ್ಪಟ್ಟ ದುಷ್ಟಬುದ್ಧಿಯಾದ ನೀನು ಮರಳಿ ಸಾಯುವುದಕ್ಕಾಗಿ ಇಲ್ಲಿಗೇಕೆ ಬಂದಿರುವೆ"?

೩. ಆ ದಾನವಾಧಮನು ಹೀಗೆಂದು ಮುಷ್ಟಿಯಿಂದ ಆ ಮುನಿಯನ್ನು ಗುದ್ದುವುದಕ್ಕೆ ಓಡಿಬರುತ್ತಿರಲು ಆವನನ್ನು ಕುರಿತು ಆತನು ಇಂತೆಂದನು.

೪-೫. "ಪಾಪಿಯೆ! ಆಹ್ನಿಕವನ್ನು ಮಾಡಿರುವ ಬ್ರಾಹ್ಮಣನಾದ ನನ್ನನ್ನು ಮುಟ್ಟಬೇಡ" ಆಗ ಹರಿಯು ಬ್ರಾಹ್ಮಣನನ್ನು ಕೊಲ್ಲಲುದ್ಯುಕ್ತನಾದ ದಾನವನನ್ನು ಕಂಡು ಕ್ರುದ್ಧನಾಗಿ ದುರ್ವಾಸನಿಗಾಗಿ ಆ ದುರ್ಮುಖನ ತಲೆಯನ್ನು ಹರಿತವಾದ ಚಕ್ರದ ಅಲಗಿನಿಂದ ಅನಾಯಾಸವಾಗಿ ಕತ್ತರಿಸಿದನು.

ಪ್ರಹ್ಲಾದ ಉವಾಚ :—
ದುರ್ಮುಖಂ ನಿಹತಂ ದೃಷ್ಟ್ವಾ ದಾನವೋ ದುಃಸಹಸ್ತದಾ ।
ಆಕ್ರೋಶದುಚ್ಚೈರ್ದಿತಿಜಾಂಛೀಘ್ರಮಾಗನ್ಯತಾಮಿತಿ ॥ ೬ ॥
ಶ್ರುತ್ವಾ ದೈತ್ಯಗಣಾಸ್ಸರ್ವೇ ದುರ್ಮುಖಂ ನಿಹತಂ ತದಾ ।
ದುರ್ವಾಸಸಂ ಪುನಸ್ತತ್ರ ಪರಿತ್ರಾತಂ ಚ ವಿಷ್ಣುನಾ ॥ ೭ ॥
ಕೂರ್ಮಪೃಷ್ಠೋ ಗೋಲಕಶ್ಚ ಕ್ರೋಧನೋ ವೇದದೂಷಕಃ ।
ಯಜ್ಞಘ್ನೋ ಯಜ್ಞಹಂತಾ ಚ ಧರ್ಮಾಂತಕಸ್ತಪಸ್ವಿಹಾ ॥ ೮ ॥
ಏತೇ ಚಾನ್ಯೇ ಚ ಬಹವೋ ವಿವಿಧಾಯುಧಪಾಣಯಃ ।
ಕೋಪಸಂರಕ್ತನಯನಾಃ ಶಪಂತೋ ಬ್ರಾಹ್ಮಣಂ ತಥಾ ॥ ೯ ॥
ಪರಿಕ್ಷಿಪ್ಯ ತದಾತ್ರೇಯಂ ವಿಷ್ಣುಂ ಸಂಕರ್ಷಣಂ ತಥಾ ।
ತೋಮರೈರ್ಭಿಂದಿಪಾಲೈಶ್ಚ ಮುಶಲೈಶ ಭುಶುಂಡಿಭಿಃ ॥ ೧೦ ॥
ಅಸ್ತ್ರೈರ್ನಾನಾವಿಧೈಶ್ಚಾಪಿ ಯುಯುಧುಃ ಕ್ರೋಧಮೂರ್ಛಿತಾಃ ।
ದಾನವೈಃ ಸಂವೃತೋ ವಿಷ್ಣುಃ ಸಮಂತಾದ್ಘೋರದರ್ಶನೈಃ ॥ ೧೧ ॥
ಸಂಕರ್ಷಣಶ್ಚ ಶುಶುಭೇ ಚಂದ್ರಾದಿತ್ಯೌ ಘನೈರಿವ ।
ಗೃಹೀತ್ವಾ ಧನುಷೀ ದಿವ್ಯೇ ಶೀಘ್ರಂ ಸಂಯೋಜ್ಯ ಚಾಶುಗಾನ್ ॥ ೧೨ ॥
ತಾನ್ಮಾರ್ಗಣಗಣೈರ್ದೈತ್ಯಾನ್ಜಘ್ನತುಸ್ತೌ ಮಹಾಮೃಧೇ ।
ತೇ ಹನ್ಯಮಾನಾಃ ಸಮರೇ ವಿಷ್ಣುನಾ ವಿದ್ರುತಾ ದಿಶಃ ॥ ೧೩ ॥

---

೬. ಪ್ರಹ್ಲಾದನು ಹೇಳುತ್ತಾನೆ:—ಆಗ ದುಸ್ಸಹನು ದುರ್ಮುಖನು ಹತನಾದುದನ್ನು ಕಂಡು ದಾನವರನ್ನು ಶೀಘ್ರವಾಗಿ ಬನ್ನಿರಿ ಎಂದು ಗಟ್ಟಿಯಾಗಿ ಕಿರಿಚಿಕೊಂಡನು.

೭-೧೩. ವಿಷ್ಣುವಿನಿಂದ ದುರ್ಮುಖನು ಹತನಾದುದನ್ನೂ, ದುರ್ವಾಸನು ರಕ್ಷಿತನಾದುದನ್ನೂ ಕೇಳಿ ಕೂರ್ಮಪೃಷ್ಠ, ಗೋಲಕ, ಕ್ರೋಧನ, ವೇದದೂಷಕ, ಯಜ್ಞಘ್ನ, ಯತಿಹಂತಾ, ಧರ್ಮಾಂತಕ, ತಪಸ್ವಿಹಾ ಮೊದಲಾದ ಬಹುಮಂದಿ ದೈತ್ಯರು ವಿವಿಧಾಯುಧಗಳನ್ನು ಹಿಡಿದು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವರಾಗಿ ಬ್ರಾಹ್ಮಣರನ್ನು ಬೈಯುತ್ತ ಆ ದುರ್ವಾಸನನ್ನೂ, ಕೃಷ್ಣ ಬಲರಾಮರನ್ನೂ ತೋಮರ, ಭಿಂದಿಪಾಲ, ಒನಕೆ ಭುಶುಂಡಿ ಮೊದಲಾದ ಬಗೆ ಬಗೆಯ ಆಯುಧಗಳಿಂದ ಹೊಡೆಯುತ್ತ ಯುದ್ಧಮಾಡಿದರು. ಹಾಗೆ ಭಯಂಕರ ದಾನವರಿಂದ ಪರಿವೃತರಾದ ಕೃಷ್ಣ ಬಲರಾಮರು ಮೋಡಗಳಿಂದ ಚಂದ್ರ ಸೂರ್ಯರಂತೆ ಪ್ರಕಾಶಿಸಿದರು. ಅವರು ಶೀಘ್ರವಾಗಿ ದಿವ್ಯವಾದ ಬಿಲ್ಲುಗಳನ್ನು ತೆಗೆದುಕೊಂಡು ಬಾಣಗಳನ್ನು ಜೋಡಿಸಿ ಅವುಗಳಿಂದ ಆ ದೈತ್ಯರನ್ನು ಹೊಡೆಯಲು ಆ ದೈತ್ಯರು ದಿಕ್ಕು ದಿಕ್ಕುಗಳಿಗೆ ಓಡಿದರು.

ಏತಾವದುಕ್ತ್ವಾ ಸಂಕ್ರುದ್ಧೋ ಯಯೌ ದೈತ್ಯಪತಿಸ್ತದಾ ।
ತತೋ ನಾದಿತ್ರಶಬ್ದೈಶ್ಚ ಭೇರೀಶಬ್ದೈಃ ಸಮನ್ವಿತಃ || ೪೧ ||
ದದರ್ಶ ತತ್ರ ದೇವೇಶಂ ಸಹಸ್ರಶಿರಸಂ ಪ್ರಭುಂ ।
ತಥಾ ವಿಷ್ಣುಂ ಚಕ್ರಪಾಣಿಂ ದುರ್ವಾಸಸಮಕಲ್ಮಷಂ || ೪೨ ||
ಈಶ್ವರಾಂಶಂ ಚ ತಂ ದೃಷ್ಟ್ವಾ ನ ಹಂತವ್ಯೋಽಯಮೀಶ್ವರಃ ।
ವಿಷ್ಣುಮುದ್ದಿಶ್ಯ ತಾನ್ಸರ್ವಾನ್ಪ್ರೇರಯಾಮಾಸ ದಾನವಾನ್ || ೪೩ ||
ನಾಗೈಃ ಪರ್ವತಸಂಕಾಶೈ ರಥೈರ್ಜಲದಸನ್ನಿಭೈಃ ।
ಅಶ್ವೈರ್ಮಹಾಜವೈಶ್ಚೈವ ಪರಿವವ್ರುಃ ಸಮಂತತಃ || ೪೪ ||
ತತೋ ಯುದ್ಧಂ ಸಮಭವದ್ದೇವಯೋರ್ದಾನವೈಃ ಸಹ ।
ಆಚ್ಛಾದಿತೌ ತೌ ದದೃಶುರ್ದೈತ್ಯೈರ್ದೇವಗಣಾಸ್ತದಾ || ೪೫ ||
ತತೋ ಗೃಹೀತ್ವಾ ಮುಶಲಂ ಹಲಂ ಚ ಬಲವಾನ್ಬಲೀ ।
ಜಘಾನ ದೈತ್ಯಪ್ರವರಾನ್ಕಾಲಾನಲಯಮೋಪಮಾನ್ || ೪೬ ||
ತೇ ಹನ್ಯಮಾನಾ ದೈತೇಯಾ ಬಲೇನ ಬಲಶಿನಾನಾ ।
ಸರ್ವತೋ ವಿದ್ರುತಾ ಭಗ್ನಾಃ ಕುಶಮೇವ ಯಯುಸ್ತದಾ || ೪೭ ||

---

೪೧–೪೩. ಅವನು ಹೀಗೆಂದು ಕೋಪದಿಂದ ವಾದ್ಯ, ಬೇರಿ ಶಬ್ದಗಳೊಡನೆ ಹೊರಟು ಸಹಸ್ರ ಶೀರ್ಷನಾದ ಕೃಷ್ಣನನ್ನೂ ನಿರ್ದುಷ್ಟನಾದ ದುರ್ವಾಸನನ್ನೂ ನೋಡಿ ಆ ದುರ್ವಾಸನು ಈಶ್ವರಾಂಶನೆಂದರಿತು ಅವನನ್ನು ಕೊಲ್ಲಕೂಡದೆಂದು ಹೇಳಿ ವಿಷ್ಣು ವನ್ನುದ್ದೇಶಿಸಿ ಆ ಸಮಸ್ತ ದಾನವರನ್ನು ಪ್ರೇರಿಸಿದನು.

೪೪. ಆ ದಾನವರು ಪರ್ವತದಂತಿರುವ ಆನೆಗಳಿಂದಲೂ, ಮೇಘದಂತಿರುವ ರಥಗಳಿಂದಲೂ, ಅತ್ಯಂತ ವೇಗವುಳ್ಳ ಅಶ್ವಗಳಿಂದಲೂ ವಿಷ್ಣುವನ್ನು ಎಲ್ಲೆಡೆಯ ಲ್ಲಿಯೂ ಸುತ್ತಿಕೊಂಡರು.

೪೫. ಬಳಿಕ ವಿಷ್ಣು ಸಂಕರ್ಷಣರಿಗೆ ದಾನವರೊಡನೆ ಕಾಳಗವಾಯಿತು. ದೇವತೆ ಗಳು ಅವರಿಬ್ಬರನ್ನು ದೈತ್ಯರು ಮುತ್ತಿಕೊಂಡಿರುವುದನು ಕಂಡರು.

೪೬. ತರುವಾಯ ಬಲಿಷ್ಠನಾದ ಬಲರಾಮನು ಒನಕೆ, ನೇಗಿಲುಗಳನ್ನು ಹಿಡಿದು ಕೊಂಡು ಪ್ರಳಯಾಗ್ನಿ, ಯಮರಿಗೆ ಸಮರಾದ ದೈತ್ಯ ಯೋಧರನ್ನು ಹೊಡೆದನು.

೪೭. ಹೀಗೆ ಬಲಶಾಲಿಯಾದ ಬಲರಾಮನು ಹೊಡೆಯಲು ದೈತ್ಯರು ದಿಕ್ಕು ದಿಕ್ಕಿಗೆ ಓಡಿ ಕುಶನೆಡೆಗೆ ತೆರಳಿದರು.

ಬಕಶ್ಚ ಯಜ್ಞಕೋಪಶ್ಚ ಬ್ರಹ್ಮಘ್ನೋ ವೇದದೂಷಕಃ ।
ಮಹಾಮುಖಘ್ನೋ ಜಂಭಶ್ಚ ರಾಹುರ್ವಕ್ರಶಿರಾಸ್ತಥಾ ॥ ೪೮ ॥
ಏತೇ ಚಾನ್ಯೇ ಚ ಬಹವಃ ಪ್ರವರಾ ದಾನವೋತ್ತಮಾಃ ।
ಕ್ರೋಧಸಂರಕ್ತನಾಯನಾ ಬಿಭಿದುಸ್ತೇ ಜನಾರ್ದನಂ ॥ ೪೯ ॥
ತತಃ ಕ್ರೋಧಸಮಾಯುಕ್ತೌ ಸಂಕರ್ಷಣಜನಾರ್ದನೌ ।
ಚಕ್ರಲಾಂಗಲಘಾತೇನ ಜಘ್ನತುರ್ದಾನವೋತ್ತಮಾನ್ ॥ ೫೦ ॥
ಚಕ್ರೇಣ ಚ ಶಿರಃ ಕಾಯಾಚ್ಚಿಚ್ಛೇದಾಶು ಬಕಸ್ಯ ವೈ ।
ಚೂರ್ಣಯಾಮಾಸ ಮುಶಲೀ ಯಜ್ಞಹಂತಾರಮೇವ ಚ ॥ ೫೧ ॥
ರಾಹುಂ ಜಘಾನ ಚಕ್ರೇಣ ತಥಾನ್ಯಾನ್ಮುಶಲೇನ ಚ ।
ತೇ ಹತಾ ಹನ್ಯಮಾನಾಶ್ಚ ಭಗ್ನಾ ಜಗ್ಮುರ್ದಿಶೋದಶ ॥ ೫೨ ॥
ಕುಶಃ ಸ್ವಾಂ ವಾಹಿನೀಂ ದೃಷ್ಟ್ವಾ ವಿದ್ರುತಾಂ ನಿಹತಾಂ ತಥಾ ।
ಕೋಧಸಂರಕ್ತನಯನಃ ಪ್ರಾಹ ಯಾಹೀತಿ ಸಾರಥಿಂ ॥ ೫೩ ॥
ಸತಯೋರಂತಿಕಂ ಗತ್ವಾ ನಾಮವಿಶ್ರಾವ್ಯ ಚಾತ್ಮನಃ ।
ಉವಾಚ ಕಸ್ತ್ವಂ ದೈತೇಯಾನ್ಮಮ ಹಂಸಿ ಗದಾಧರ ॥ ೫೪ ॥

---

೪೮–೪೯. ಬಕ, ಯಜ್ಞಕೋಪ, ಬ್ರಹ್ಮಘ್ನ, ವೇದದೂಷಕ, ಮಹಾಮುಖಘ್ನ, ಜಂಭ, ರಾಹು, ವಕ್ರಶಿರಾ ಇವರೂ, ಇನ್ನೂ ಇತರ ಬಹುಮಂದಿ ದಾನವೋತ್ತಮರೂ ಕೋಪದಿಂದ ರಕ್ತನೇತ್ರರಾಗಿ ಜನಾರ್ದನನ್ನು ಹೊಡೆದರು.

೫೦. ತರುವಾಯ ಬಲರಾಮ ಜನಾರ್ದನರು ಕುಪಿತರಾಗಿ ಚಕ್ರ ನೇಗಿಲುಗಳಿಂದ ದಾನವೋತ್ತಮರನ್ನು ಹೊಡೆದರು.

೫೧. ಕೃಷ್ಣನು ಚಕ್ರದಿಂದ ಬಕನ ಶರೀರದಿಂದ ತಲೆಯನ್ನು ಬೇರ್ಪಡಿಸಿದನು. ಬಲರಾಮನು ಯಜ್ಞಹಂತೃವನ್ನು ಪುಡಿಮಾಡಿದನು.

೫೨. ಮತ್ತು ಚಕ್ರದಿಂದ ರಾಹುವನ್ನೂ, ಮುಸಲಾಯುಧದಿಂದ ಇತರ ದಾನವರನ್ನೂ ಹೊಡೆದನು. ಹೀಗೆ ಹತರಾದವರೂ, ಹೊಡೆಯಲ್ಪಡುತ್ತಿರುವವರೂ ಭಗ್ನರಾಗಿ ಹತ್ತು ದಿಕ್ಕುಗಳಿಗೆ ಓಡಿದರು.

೫೩. ಕುಶನು ಓಡಿದ ಮತ್ತು ಹತವಾದ ತನ್ನ ಸೈನ್ಯವನ್ನು ನೋಡಿ ಸಿಟ್ಟಾಗಿ ಸಾರಥಿಯನ್ನು ಮುನ್ನುಗ್ಗಬೇಕೆಂದು ಆಜ್ಞಾಪಿಸಿದನು.

೫೪. ಆ ಕುಶನು ವಿಷ್ಣು ಸಂಕರ್ಷಣರ ಹತ್ತಿರ ಹೋಗಿ ತನ್ನ ಹೆಸರನ್ನು ತಿಳಿಸಿ, "ನೀನು ಯಾರು? ನಮ್ಮ ದೈತ್ಯರನ್ನು ಏಕೆ ವಧಿಸುವೆ?" ಎಂದು ಪ್ರಶ್ನಿಸಿದನು.

ಏತೇಚಾನ್ಯೇ ಚ ಬಹವೋ ಘಾತಿತಾಃ ಕೇಶವೇನ ಹಿ ।
ದಾನವಾನ್ಪತಿತಾನ್ದೃಷ್ಟ್ವಾ ಕುಶಃ ಪರಮಕೋಪಿತಃ ॥ ೮೨ ॥
ಜಘಾನ ಯುದ್ಧಸಂರಬ್ಧಃ ಪರಮಾಸ್ತ್ರೇಣ ಕೇಶವಂ ।
ಭಗವಾನ್ಕ್ರೋಧಸಂಯುಕ್ತಶ್ಚಕ್ರೇಣ ಚಾಹರಚ್ಛಿರಃ ॥ ೮೩ ॥
ತಂ ಛಿನ್ನಶಿರಸಂ ಭೂಮೌ ಪಾತಿತಂ ವೀಕ್ಷ್ಯ ಕೇಶವಃ ।
ಚಿಚ್ಛೇದ ಬಾಹೂ ಪಾದೌ ಚ ಖಡ್ಗೇನ ತಿಲಶಸ್ತಥಾ ॥ ೮೪ ॥
ಖಂಡಶೋ ಘಾತಿತಂ ದೃಷ್ಟ್ವಾ ಕೇಶವೇನ ಕುಶಂ ತಥಾ ।
ಸಂಗೃಹ್ಯ ತೇ ಪುನರ್ದೈತ್ಯಾ ನಿನ್ಯುಃ ಸರ್ವೇ ಶಿವಾಲಯಂ ॥ ೮೫ ॥
ಪ್ರಸಾದಾಚ್ಛೂಲಿನಃ ಸದ್ಯೋ ಜೀವಿತಂ ಪ್ರಾಪ್ಯ ದಾನವಃ ।
ಉತ್ಥಿತಃ ಸಹಸಾ ಕ್ರುದ್ಧಃ ಕ್ವ ವಿಷ್ಣುರಿತಿ ಚಾಬ್ರವೀತ್ ॥ ೮೬ ॥
ಗದಾಮುದ್ಯಮ್ಯ ಸಂಕ್ರುದ್ಧೋ ಯೋದ್ಧುಮಾಗಾಜ್ಜನಾರ್ದನಂ ।
ತಮುದ್ಯತಗದಂ ದೃಷ್ಟ್ವಾ ನಿಹತಂ ಜೀವಿತಂ ಪುನಃ ॥ ೮೭ ॥
ದುರ್ವಾಸಸಮುಭೋವಾಚ ಕಿಮಿದಂ ನ ಮ್ರಿಯತೇ ಯತ್ ।
ಮಯಾಽಸಕೃಚ್ಛಿರಶ್ಛಿನ್ನಂ ಖಂಡಶಃ ತಿಲಶಃ ಕೃತಂ ॥ ೮೮ ॥

---

೮೨. ಕೇಶವನು ಇವರನ್ನೂ, ಇತರ ಅನೇಕ ಮಂದಿ ರಕ್ಕಸರನ್ನೂ ಕೊಲ್ಲಲು ಅವರು ನೆಲಕ್ಕುರುಳಿದುದನ್ನು ಕಂಡು ಕುಶನು ಬಹುವಾಗಿ ಕೋಪಗೊಂಡನು.

೮೩. ಅವನು ಕೃಷ್ಣನನ್ನು ಯುದ್ಧದಲ್ಲಿ ಮಹಾಸ್ತ್ರದಿಂದ ಹೊಡೆಯಲು ಕೃಷ್ಣನೂ ಕೋಪಗೊಂಡು ಚಕ್ರದಿಂದ ಅವನ ತಲೆಯನ್ನು ಕತ್ತರಿಸಿದನು.

೮೪. ಕತ್ತರಿಸಿದ ತಲೆಯುಳ್ಳವನಾಗಿ ಭೂಮಿಯಲ್ಲಿ ಬಿದ್ದ ಆ ಕುಶನನ್ನು ಕಂಡು ಕೃಷ್ಣನು ಅವನ ತೋಳು ಮತ್ತು ಕಾಲುಗಳನ್ನು ಎಳ್ಳಿನಷ್ಟು ಸಣ್ಣಗೆ ಕತ್ತರಿಸಿದನು.

೮೫. ಆ ದೈತ್ಯರು ಕೃಷ್ಣನು ಕುಶನನ್ನು ಕತ್ತರಿಸಿರುವುದನ್ನು ನೋಡಿ ಅವನನ್ನು ಮರಳಿ ಶಿವಾಲಯಕ್ಕೆ ಒಯ್ದರು.

೮೬. ಶಿವನ ಪ್ರಸಾದದಿಂದ ಆ ಕುಶನು ಕೂಡಲೆ ಪ್ರಾಣವನ್ನು ಹೊಂದಿ ಮೇಲಕ್ಕೆದ್ದು ವಿಷ್ಣುವೆಲ್ಲಿ ? ಎಂದನು.

೮೭–೮೮. ಅವನು ಕುಪಿತನಾಗಿ ಗದೆಯನ್ನು ಎತ್ತಿಕೊಂಡು ವಿಷ್ಣುವಿನೊಡನೆ ಯುದ್ಧಮಾಡಲು ಬಂದನು. ವಿಷ್ಣುವು ಕೊಂದರೂ ಬದುಕಿ ಗದೆಯನ್ನು ಎತ್ತಿಕೊಂಡು ಬಂದ ಆ ದಾನವನನ್ನು ನೋಡಿ ದುರ್ವಾಸನನ್ನು ಕುರಿತು, "ಇವನು ಏಕೆ ಸಾಯುವುದಿಲ್ಲ. ನಾನು ಅನೇಕ ಬಾರಿ ತಲೆಯನ್ನು ಎಳ್ಳಿನಷ್ಟು ತುಂಡು ತುಂಡಾಗಿ ಕತ್ತರಿಸಿದರೂ

ಜೀವತ್ಯಯಂ ಪುನಃ ಕಸ್ಮಾತ್ತತ್ಕಾರಣಂ ಕಥಯಸ್ವ ನಃ ।
ಇತ್ಯುಕ್ತಶ್ಚಿಂತಯಾಮಾಸ ಧ್ಯಾನೇನ ಋಷಿಸತ್ತಮಃ ॥ ೮೯ ॥
ಜ್ಞಾತ್ವಾ ತತ್ಕಾರಣಂ ಸರ್ವಮುವಾಚ ಮಧುಸೂದನಂ ।
ಮಹಾದೇವೇನ ತುಷ್ಟೇನ ಕುಶೋಽಯಮಮರಃ ಕೃತಃ ॥ ೯೦ ॥
ಖಂಡಶಶ್ಚ ಕೃತಶ್ಚಾಪಿ ನ ಚ ಪ್ರಾಣೈರ್ವಿಯುಜ್ಯತೇ ।
ತತಃ ಸ ವಿಸ್ಮಯಾವಿಷ್ಟೋ ಹಂತವ್ಯೋಽಯಂ ಮಯಾ ಕಥಂ ॥ ೯೧ ॥
ಉಪಾಯಂ ಚ ಕರಿಷ್ಯಾಮಿ ಯೇನಾಯಂ ನ ಭವೇದಿತಿ ।
ತತಃ ಸ ಜೀವಿತಂ ಪ್ರಾಪ್ಯ ಪ್ರಸಾದಾಚ್ಛಂಕರಸ್ಯ ಚ ।
ಚರ್ಮಖಡ್ಗಮಥಾದಾಯ ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೯೨ ॥
ತಮಾಯಾಂತಂ ತತೋ ದೃಷ್ಟ್ವಾ ಕುಶಂ ಶಿವಪರಿಗ್ರಹಂ ।
ಜಘಾನ ಗದಯಾ ಗುರ್ವ್ಯಾ ಗದಾಹಸ್ತಂ ತದಾ ಕುಶಂ ॥ ೯೩ ॥
ಸಭಿನ್ನಮೂರ್ಧಾ ನ್ಯಪತತ್ಕೇಶವೇನಾಭಿಪೀಡಿತಃ ।
ಭೂಮೌ ನಿಪತಿತಂ ವೇಗಾತ್ಪರಿಗೃಹ್ಯ ಕುಶಂ ಹರಿಃ ॥ ೯೪ ॥
ಗರ್ತೇ ನಿಕ್ಷಿಪ್ಯ ತದ್ದೇಹಂ ಪೂರಯಾಮಾಸ ವೈ ಪುನಃ ।
ಲಿಂಗಂ ಸಂಸ್ಥಾಪಯಾಮಾಸ ತಸ್ಯೋಪರಿ ಜನಾರ್ದನಃ ॥ ೯೫ ॥

---

ಇವನು ಹೇಗೆ ಬದುಕುತ್ತಿದ್ದಾನೆ? ಇದಕ್ಕೆ ಕಾರಣವನ್ನು ಹೇಳು. ಎನ್ನಲು ಆ ಮುನಿಯು ಆಲೋಚಿಸಿದನು.

೯೦. ಆ ಋಷಿಯು ಕಾರಣವನ್ನರಿತು ವಿಷ್ಣುವನ್ನು ಕುರಿತು ಎಲ್ಲವನ್ನೂ ಹೇಳಿದನು. "ಮಹಾದೇವನು ಸಂತುಷ್ಟನಾಗಿ ಇವನನ್ನು ಅಮರನನ್ನಾಗಿ ಮಾಡಿರುವನು.

೯೧. ತುಂಡು ತುಂಡಾಗಿ ಮಾಡಿದರೂ ಇವನು ಸಾಯುವುದಿಲ್ಲ". ಬಳಿಕ ಆ ವಿಷ್ಣುವು ಆಶ್ಚರ್ಯಗೊಂಡು ಇವನನ್ನು ನಾನು ಹೇಗೆ ಕೊಲ್ಲಬೇಕು.

೯೨. ಇವನು ಬದುಕದಂತೆ ಉಪಾಯ ಮಾಡುವೆನು. ಎಂದು ಆಲೋಚಿಸುತ್ತಿರಲು ಆ ಕುಶದೈತ್ಯನು ಶಂಕರನ ಅನುಗ್ರಹದಿಂದ ಜೀವವನ್ನು ಹೊಂದಿ ಕತ್ತಿ ಗುರಾಣಿಗಳನ್ನು ತೆಗೆದುಕೊಂಡು ನಿಲ್ಲು ನಿಲ್ಲು ಎಂದನು.

೯೩. ಬಳಿಕ ವಿಷ್ಣುವು ಗದೆಯನ್ನು ಹಿಡಿದು ಬರುತ್ತಿರುವ ಶಿವಭಕ್ತನಾದ ಕುಶನನ್ನು ನೋಡಿ ಅವನನ್ನು ದೊಡ್ಡ ಗದೆಯಿಂದ ಹೊಡೆದನು.

೯೪-೯೫. ಕೇಶವನು ಹೀಗೆ ಹೊಡೆಯಲು ಕುಶನು ತಲೆಯೊಡೆದು ನೆಲದ ಮೇಲೆ ಬಿದ್ದನು. ಹರಿಯು ಭೂಮಿಯಲ್ಲಿ ಬಿದ್ದ ಆ ಕುಶನನ್ನು ಶೀಘ್ರವಾಗಿ ಹಿಡಿದುಕೊಂಡು ಅವನ ದೇಹವನ್ನು ಕುಣಿಯಲ್ಲಿಟ್ಟು ಮಣ್ಣನ್ನು ಅವನ ಮೇಲೆ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು.

ಸ್ನಾಪಯಿತ್ವಾ ಯದಿ ಪುನರ್ಬ್ರಾಹ್ಮಣಂ ವಿನಿವರ್ತತೇ ।
ಯಥೇಷ್ಟಂ ಗಚ್ಛತು ತದಾ ಕಿಂ ವೃಥಾ ವಿಗ್ರಹೇಣ ತೇ ॥ ೬೮ ॥
ತಸ್ಯ ತದ್ವಚನಂ ಶ್ರುತ್ವಾ ಕುಶೋ ವಚನಮುಬ್ರವೀತ್ ।
ಗಚ್ಛ ಪ್ರೇಷಯ ತೌ ಶೀಘ್ರಂ ವಿಪ್ರತ್ರಾಣಕರಾವುಭೌ ॥ ೬೯ ॥
ಸ ಚ ರಾಜ್ಞಾ ಸಮಾದಿಷ್ಟಃ ಸುಮನಾ ಮುನಿಸತ್ತಮಾಃ ।
ಉವಾಚ ವಿಷ್ಣುಮಾನಮ್ಯ ನಮಸ್ಕೃತ್ಯ ಹಲಾಯುಧಂ ॥ ೭೦ ॥
ಕುಶೇನ ಪ್ರೇಷಿತಶ್ಚಾಸ್ಮಿ ಸಮೀಪೇ ತೇ ಜನಾರ್ದನ ।
ಕಿಂ ತವಾಪಕೃತಂ ನಾಥ ಯೇನ ದೈತ್ಯಾನ್ಜಿಘಾಂಸಸಿ ॥ ೭೧ ॥
ದುರ್ವಾಸಸಂ ಸ್ನಾಪಯಿತ್ವಾ ಗಚ್ಛ ಮುಕ್ತೋಽಸಿ ಮಾಸದ ।
ಅಮರತ್ವಂ ಮಹಾದೇವಾತ್ಪ್ರಾಪ್ತಂ ವಿದ್ಧಿ ಕುಶೇನ ಹಿ ॥ ೭೨ ॥

ಶ್ರೀ ವಿಷ್ಣುರುವಾಚ :—

ಮುಕ್ತಿತೀರ್ಥಮಿದಂ ರುದ್ಧಂ ಭವದ್ಭಿಃ ಪಾಪಕರ್ಮಭಿಃ ।
ತಸ್ಮಾದ್ಧನಿಷ್ಯೇ ಸರ್ವಾಂಶ್ಚ ದಾನವಾನ್ನಾತ್ರ ಸಂಶಯಃ ॥ ೭೩ ॥
ದುರ್ವಾಸಸಶ್ಚ ಯೇ ದರ್ಭಾಸ್ತಿಲಾಶ್ಚೈವಾಕ್ಷತೈಃ ಸಹ ।
ಪುನರಾನಯಧ್ವಂ ಹಿ ಕ್ಷಿಪ್ತಾ ಯೇ ವರುಣಾಲಯೇ ॥ ೭೪ ॥

---

೬೮. ಆ ಕೃಷ್ಣನು ಬ್ರಾಹ್ಮಣನನ್ನು ಸ್ನಾನಮಾಡಿಸಿ ಹಿಂದಿರುಗುವುದಾದರೆ ಸ್ವೇಚ್ಛೆಯಾಗಿ ಹೋಗಲಿ. ವ್ಯರ್ಥವಾಗಿ ಜಗಳವಾಡಿ ಪ್ರಯೋಜನವೇನು?"

೬೯. ಅವನ ಆ ಮಾತನ್ನು ಕೇಳಿ ಕುಶನು ಇಂತೆಂದನು. "ಹೋಗು. ಬ್ರಾಹ್ಮಣನನ್ನು ಕಾಪಾಡುವ ಅವರಿಬ್ಬರನ್ನು ಶೀಘ್ರವಾಗಿ ಕಳುಹಿಸು."

೭೦. ಹೀಗೆ ದೊರೆಯಾದ ಕುಶನು ಆಜ್ಞೆಮಾಡಲು ಸುಮನನು ಕೃಷ್ಣಬಲರಾಮರನ್ನು ವಂದಿಸಿ ಇಂತೆಂದನು.

೭೧. "ಜನಾರ್ದನ! ನನ್ನನ್ನು ಕುಶನು ನಿನ್ನ ಹತ್ತಿರಕ್ಕೆ ಕಳುಹಿಸಿರುವನು. ಸ್ವಾಮಿ! ದೈತ್ಯರು ನಿನಗೆ ಏನನ್ನು ಮಾಡಿದರು? ಏಕೆ ಅವರನ್ನು ಕೊಲ್ಲುವೆ?

೭೨. ಜನಾರ್ದನ! ಕುಶನು ಬಿಟ್ಟಿರುವ ದುರ್ವಾಸನನ್ನು ಸ್ನಾನಮಾಡಿಸಿ ಹೊರಡು. ಕುಶನು ಮಹಾದೇವನಿಂದ ಅಮರನಾಗಿರುವನು."

೭೩. ಶ್ರೀ ವಿಷ್ಣುವು ಹೇಳುತ್ತಾನೆ:—ಪಾಪಿಷ್ಠರಾದ ನೀವು ಈ ಮುಕ್ತಿತೀರ್ಥವನ್ನು ತಡೆದಿರುವಿರಿ ಆದ್ದರಿಂದ ನಿಮ್ಮೆಲ್ಲರನ್ನೂ ನಿಶ್ಚಯವಾಗಿಯೂ ಕೊಲ್ಲುವೆನು.

೭೪. ನೀವು ಕಿತ್ತು ಸಮುದ್ರದಲ್ಲಿ ಬಿಸಾಡಿರುವ ದುರ್ವಾಸನ ದರ್ಭೆ, ಎಳ್ಳು, ಅಕ್ಷತೆಗಳನ್ನು ತೆಗೆದುಕೊಂಡು ಬನ್ನಿರಿ.

ಸ ವಾಹನಪರೀವಾರಾಃ ಸಜ್ಞಾತಿ ಕುಲಬಾಂಧವಾಃ ।
ಪುಣ್ಯತೀರ್ಥಮಿದಂ ಹಿತ್ವಾ ಪ್ರವಿಶಧ್ವಂ ಧರಾತಲೇ ॥ ೭೫ ॥
ಸುಮನಾಸ್ತದ್ವಚಃ ಶ್ರುತ್ವಾ ಕ್ರೋಧಸಂರಕ್ತಲೋಚನಃ ।
ಯುಧ್ಯಧ್ವಮಿತಿ ತಂ ಚೋಕ್ತ್ವಾ ನೈತದೇವಂ ಭವಿಷ್ಯತಿ ॥ ೭೬ ॥
ಕುಶಾಯ ಕಥಯಾಮಾಸ ಯದುಕ್ತಂ ಶಾರ್ಙ್ಗಧನ್ವನಾ ।
ಕ್ರುದ್ಧಸ್ತದ್ವಚನಂ ಶ್ರುತ್ವಾ ಮಂತ್ರಿಣಾ ಸಮುದೀರಿತಂ ॥ ೭೭ ॥
ರಥಮಾರುಹ್ಯ ವೇಗೇನ ಯಯೌ ಯೋದ್ಧುಮರಿಂದಮಃ
ಸಂಸ್ಮೃತ್ಯ ಮನಸಾ ದೇವಂ ಪಿನಾಕಿಂ ವೃಷಭಧ್ವಜಂ ॥ ೭೮ ॥
ತತಃ ಪ್ರವವೃತೇ ಯುದ್ಧಂ ಸುಮಹಲ್ಲೋಮಹರ್ಷಣಂ ।
ಅನ್ಯೇಷಾಂ ದಾನವಾನಾಂ ಚ ಕೇಶವಸ್ಯ ಕುಶಸ್ಯ ಚ ॥ ೭೯ ॥
ಯಜ್ಞಘ್ನೋ ಗದಯಾ ಗುರ್ವ್ಯಾ ಸಂಕರ್ಷಣಮತಾಡ್ರಯತ್ ।
ಸಂಕರ್ಷಣಹತಃ ಶೀರ್ಷೇ ಮುಸಲೇನ ಪಪಾತ ಹ ॥ ೮೦ ॥
ಕಂಚುಕಂ ಚ ಜಘಾನಾಶು ಚಕ್ರೇ ಭಗವಾನ್ಹರಿಃ ।
ಉಲ್ಮುಕಶ್ಚಾಥ ನಿಹತೋ ಬ್ರಹ್ಮಘ್ನಶ್ಚ ನಿಪಾತಿತಃ ॥ ೮೧ ॥

---

೭೫. ನೀವು ವಾಹನಗಳು, ಪರಿವಾರ, ಬಂಧುಗಳು, ಬಾಂಧವರು ಇವರೊಡನೆ ಈ ಪುಣ್ಯಕರವಾದ ತೀರ್ಥವನ್ನು ತೊರೆದು ಪಾತಾಳಕ್ಕೆ ಹೋಗಿರಿ.

೭೬. ಸುಮನನು ಆ ಮಾತನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಹೀಗೆ ಮಾಡಲು ಸಾಧ್ಯವಿಲ್ಲ, ನೀವು ಯುದ್ಧಮಾಡಿರಿ ಎಂದನು.

೭೭–೭೮. ಅವನು ಕೃಷ್ಣನು ಹೇಳಿದ ಮಾತನ್ನು ಕುಶನಿಗೆ ತಿಳಿಸಲು ಆ ಕುಶನು ಅದರಿಂದ ಕೋಪಗೊಂಡು ಮನಸ್ಸಿನಲ್ಲಿ ಮಹಾದೇವನನ್ನು ಸ್ಮರಿಸುತ್ತ ರಥವನ್ನೇರಿ ಶೀಘ್ರವಾಗಿ ಯುದ್ಧಗೈಯಲು ಹೊರಟನು.

೭೯. ತರುವಾಯ ಇತರ ದಾನವರಿಗೂ, ಕುಶ ಕೇಶವರಿಗೂ ರೋಮಾಂಚವನ್ನುಂಟುಮಾಡುವ ಘೋರ ಯುದ್ಧವು ನಡೆಯಿತು.

೮೦. ಯಜ್ಞನು ಮಹಾ ಗದೆಯಿಂದ ಸಂಕರ್ಷಣನನ್ನು ಹೊಡೆದನು. ಅನಂತರ ಆ ಸಂಕರ್ಷಣನ ಮುಸಲಾಯುಧದಿಂದ ತಲೆಯಲ್ಲಿ ತಾಡಿತನಾಗಿ ಕೆಳಗೆ ಬಿದ್ದನು.

೮೧. ಪೂಜ್ಯನಾದ ಕೃಷ್ಣನು ಕಂಚುಕನನ್ನು ಚಕ್ರದಿಂದ ಕೊಂದನು. ಹಾಗೆಯೇ ಉಲ್ಮುಕ ಬ್ರಹ್ಮಘ್ನರನ್ನೂ ಕೆಡವಿದನು.

ಶ್ರೀ ವಾಸುದೇವ ಉವಾಚ :—
ಯಸ್ಮಾದ್ವಿಮುಕ್ತಿದಂ ಪುಣ್ಯಂ ಗೋಮತ್ಯುದಧಿಸಂಗಮಂ ।
ರುದ್ಧಂ ದುರಾತ್ಮಭಿಃ ಪಾಪೈಃ ತಸ್ಮಾತ್ತೇ ನಿಹತಾ ಮಯಾ ॥ ೫೫ ॥
ಕುಶ ಉವಾಚ :—
ಮಾಂ ನ ಜಾನಾಸಿ ಚಾತ್ರಸ್ಥಂ ಕಥಂ ಜೀವನ್ಪ್ರಯಾಸ್ಯಸಿ ।
ಯುಧ್ಯಸ್ವ ತ್ವಂ ಸ್ಥಿರೋ ಭೂತ್ವಾ ತತಸ್ತ್ಯಕ್ಷ್ಯಸಿ ಜೀವಿತಂ ॥ ೫೬ ॥
ಇತ್ಯುಕ್ತ್ವಾ ಪಂಚವಿಂಶತ್ಯಾ ತಾಡಯಾಮಾಸ ಕೇಶವಂ ।
ಅನಂತಂಚಾಷ್ಟಭಿರ್ಬಾಣೈರ್ಹತ್ವಾತ್ರೇಯಂ ನಿರೀಕ್ಷ್ಯ ತಂ ।
ಈಶ್ವರಾಂಶಂ ಚ ತಂ ದೃಷ್ಟ್ವಾ ಪ್ರಾಹ ಯಾಹೀತಿ ಮಾ ಚಿರಂ ॥ ೫೭ ॥
ಸ ಬಾಣೈರ್ಭಿನ್ನಸರ್ವಾಂಗಃ ಶಾರ್ಙ್ಗಂ ಹಿ ಧನುಷಾಂ ವರಂ ।
ವಿಕೃಷ್ಯ ಘಾತಯಾಮಾಸ ಚತುರ್ಭಿಶ್ಚತುರೋ ಹಯಾನ್ ॥ ೫೮ ॥
ಸಾರಥೇಸ್ತು ಶಿರಃ ಕಾಯಾದರ್ಧಚಂದ್ರೇಣ ಪತ್ರಿಣಾ ।
ಚಿಚ್ಛೇದ ಧನುರೇಕೇನ ಧ್ವಜಮೇಕೇನ ಚಿಚ್ಛಿದೇ ॥ ೫೯ ॥
ಸ ಛಿನ್ನಧನ್ವಾ ವಿರಥೋ ಹತಾಶೋ ಹತಸಾರಥಿಃ ।
ಪ್ರಗೃಹ್ಯ ಚ ಮಹಾಖಡ್ಗಮುವಾಚ ವಚನಂ ತದಾ ॥ ೬೦ ॥

---

೫೫. ಶ್ರೀ ವಾಸುದೇವನು ಹೇಳುತ್ತಾನೆ :—ಪುಣ್ಯಕರವೂ, ಮೋಕ್ಷದಾಯಕವೂ ಆದ ಗೋಮತೀ ಸಾಗರ ಸಂಗಮವನ್ನು ದುರಾತ್ಮರೂ, ಪಾಪಿಷ್ಠರೂ ಆದ ದಾನವರು ತಡೆದಿರುವುದರಿಂದ ಅವರನ್ನು ನಾನು ಕೊಂದೆನು.

೫೬. ಕುಶನು ಹೇಳುತ್ತಾನೆ :— ನಾನಿಲ್ಲಿರುವುದನ್ನು ನೀನು ಮರೆತಿರುವೆಯಾ? ಹೇಗೆ ಜೀವಸಹಿತನಾಗಿ ಹೋಗುವೆ? ನೀನು ಸ್ಥಿರನಾಗಿ ಯುದ್ಧಮಾಡಿ ಬಳಿಕ ಪ್ರಾಣಬಿಡುವೆ.

೫೭. ಕುಶನು ಹೀಗೆ ನುಡಿದು ಕೇಶವನನ್ನು ಇಪ್ಪತ್ತೈದು ಬಾಣಗಳಿಂದಲೂ, ಸಂಕರ್ಷಣನನ್ನು ಎಂಟು ಬಾಣಗಳಿಂದಲೂ ಹೊಡೆದು ಈಶ್ವರಾಂಶನಾದ ದುರ್ವಾಸನನ್ನು ತ್ವರೆಯಾಗಿ ಹೊರಡೆಂದನು.

೫೮. ಕುಶನ ಬಾಣದಿಂದ ಭಿನ್ನದೇಹನಾದ ಕೇಶವನು ಶಾರ್ಙ್ಗಚಾಪವನ್ನು ಎಳೆದು ನಾಲ್ಕು ಬಾಣಗಳಿಂದ ಆ ರಾಕ್ಷಸನ ರಥದ ನಾಲ್ಕು ಕುದುರೆಗಳನ್ನು ಹೊಡೆದನು.

೫೯. ಅರ್ಧ ಚಂದ್ರಬಾಣದಿಂದ ಸಾರಥಿಯ ಶಿರಸ್ಸನ್ನು ಕತ್ತರಿಸಿದನು. ಮತ್ತೊಂದು ಬಾಣದಿಂದ ಬಿಲ್ಲನ್ನೂ, ಇನ್ನೊಂದರಿಂದ ಧ್ವಜವನ್ನೂ ತಡೆದನು.

೬೦. ಆಗ ಕತ್ತರಿಸಿದ ಬಿಲ್ಲುಳ್ಳವನೂ, ರಥಹೀನನೂ, ಮೃತಾಶ್ವನೂ, ಹತಸಾರಥಿಯೂ ಆದ ಕುಶನು ಮಹಾಖಡ್ಗವನ್ನು ಹಿಡಿದುಕೊಂಡು ಇಂತೆಂದನು.

ಯದಿ ತ್ವಾಂ ಪಾತಯಿಷ್ಯಾಮಿ ಕೀರ್ತಿರ್ಮೇ ಹ್ಯತುಲಾ ಭವೇತ್ ।
ಪಾತಿತೋಽಹಂ ತ್ವಯಾ ವೀರ ಯಾಸ್ಯಾಮಿ ಪರಮಾಂಗತಿಂ ॥ ೬೧ ॥
ತಿಷ್ಠ ತಿಷ್ಠ ಹರೇ ಸ್ಥಾನೇ ಶರಣಂ ಮೇ ಸದಾಶಿವಃ ।
ಧಾವಂತಮತಿಸಂಕ್ರುದ್ಧಂ ಖಡ್ಗಹಸ್ತಂ ನಿರೀಕ್ಷ್ಯತಂ ।
ಚಕ್ರೇಣ ಶತಧಾರೇಣ ಶಿರಶ್ಛಿಚ್ಛೇದ ಲೀಲಯಾ ॥ ೬೨ ॥
ತಂ ಛಿನ್ನಶಿರಸಂ ಭೂಮೌ ಪತಿತಂ ವೀಕ್ಷ್ಯ ದಾನವಂ ।
ಅಥೋವಾಹ ರಥೇನಾಜೌ ದೈತ್ಯಃ ಖಂಜನಕಸ್ತಥಾ ॥ ೬೩ ॥
ಅಪಯಾತೇ ಕುಶೇ ದೈತ್ಯೇ ವಿಷ್ಣುಃ ಸಂಕರ್ಷಣಸ್ತದಾ ।
ದುರ್ವಾಸಸಾ ಚ ಸಹಿತಃ ಸನ್ಯವರ್ತತ ಹರ್ಷಿತಃ ॥ ೬೪ ॥
ಶಿವಾಲಯೇ ತು ಪತಿತಂ ಕುಶಂ ನಿಕ್ಷಿಪ್ಯ ದಾನವಃ ।
ಸ್ನಾನಗಂಧಾರ್ಚನೈರ್ಧೂಪೈರ್ಗೀತವಾದ್ಯೈರತೋಷಯತ್ ॥ ೬೫ ॥
ಅವಾಪ ಜೀವಿತಂ ಸದ್ಯಃ ಪ್ರಸಾದಾಚ್ಛಂಕರಸ್ಯ ಚ ।
ಉತ್ಥಿತಃ ಸ ತದಾ ದೈತ್ಯೋ ಬ್ರುವನ್ನಿವಶಿವೇತಿ ಚ ॥ ೬೬ ॥
ತಂ ಪುನರ್ಜೀವಿತಂ ದೃಷ್ಟ್ವಾ ದೈತ್ಯಗಣಾಸ್ತದಾ ।
ಉವಾಚ ಸುಮನಾ ವಾಕ್ಯಂ ವರ್ಧಸ್ವ ಸುಚಿರಂ ವಿಭೋ ॥ ೬೭ ॥

---

೬೧. ನಾನು ನಿನ್ನನ್ನು ಕೊಂದರೆ ನನ್ನ ಕೀರ್ತಿಯು ಎಣೆಯಿಲ್ಲದ್ದಾಗುವುದು. ನೀನು ನನ್ನನ್ನು ಕೊಂದರೆ ನಾನು ಉತ್ತಮ ಗತಿಯನ್ನು ಹೊಂದುವೆನು.

೬೨. ಹರಿಯೆ! ನಿಲ್ಲು ನಿಲ್ಲು, ನನಗೆ ಶಂಕರನು ರಕ್ಷಕನಾಗಿರುವನು." ಆಗ ಕೇಶವನು ಖಡ್ಗವನ್ನು ಹಿಡಿದು ಓಡಿಬರುತ್ತಿರುವ ಅತಿ ಕುಪಿತನಾದ ಕುಶನನ್ನು ನೋಡಿ ಹರಿತವಾದ ಅಲಗುಳ್ಳ ಚಕ್ರದಿಂದ ಅವನ ತಲೆಯನ್ನು ಕತ್ತರಿಸಿದನು.

೬೩. ಆಗ ಖಂಜನಕನೆಂಬ ದೈತ್ಯನು ಕತ್ತರಿಸಿದ ತಲೆಯುಳ್ಳ ಕುಶದಾನವನನ್ನು ಕಂಡು ಅವನನ್ನು ರಥದಲ್ಲಿರಿಸಿ ತೆಗೆದುಕೊಂಡು ಹೋದನು.

೬೪. ಕುಶನು ಹೊರಟು ಹೋಗಲು ವಿಷ್ಣು ಸಂಕರ್ಷಣರು ದುರ್ವಾಸನೊಡನೆ ಸಂತೋಷದಿಂದ ಹಿಂದಿರುಗಿದರು.

೬೫. ಖಂಜನಕನು ಕೆಳಗೆ ಬಿದ್ದ ಕುಶನನ್ನು ಶಿವಾಲಯದಲ್ಲಿರಿಸಿ ಸ್ನಾನ, ಗಂಧ, ಅರ್ಚನೆ, ಧೂಪ, ಗೀತ, ವಾದ್ಯಗಳಿಂದ ಶಿವನನ್ನು ಸಂತೋಷಗೊಳಿಸಿದನು.

೬೬. ಶಂಕರನ ಅನುಗ್ರಹದಿಂದ ಕೂಡಲೆ ಕುಶನು ಬದುಕಿ ಶಿವಶಿವ ಎಂದು ಹೇಳುತ್ತ ಮೇಲಕ್ಕೆದ್ದನು.

೬೭. ಆಗ ಮರಳಿ ಬದುಕಿದ ಆ ಕುಶನನ್ನು ಸುಮನ ಮೊದಲಾದ ದೈತ್ಯರು ಕಂಡು "ಸ್ವಾಮಿ! ಬಹುಕಾಲ ವೃದ್ಧಿಯನ್ನು ಹೊಂದು ಎಂದರು."

**ಸಲಬ್ಧಸಂಜ್ಞೋ ದನುಜಃ ಶಿವಲಿಂಗಮಪಶ್ಯತ ।**
**ಆತ್ಮೋಪರಿ ಸ್ಥಿತಂ ತಚ್ಚ ತದಾ ಚಿಂತಾಪರೋಽಭವತ್ ॥ ೯೬ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ರಾಕ್ಷಸಕುಶವಿಷ್ಣುಯುದ್ಧೇ ಕುಶರಾಕ್ಷಸೋಪರಿವಿಷ್ಣುನಾಶಿವಲಿಂಗಸ್ಥಾಪನವರ್ಣನಂನಾಮ
ವಿಂಶತಿತಮೋಽಧ್ಯಾಯಃ

---

೯೬. ಚೇತನಗೊಂಡ ಆ ದೈತ್ಯನು ತನ್ನ ಮೇಲಿರುವ ಶಿವಲಿಂಗವನ್ನು ನೋಡಿ ಚಿಂತಾಕ್ರಾಂತನಾದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಕುಶರಾಕ್ಷಸಶೀರ್ಷೇಶಿವಲಿಂಗಸ್ಥಾಪನವರ್ಣನವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕವಿಂಶತಿತಮೋಽಧ್ಯಾಯಃ

### ಗೋಮತೀತೀರಕ್ಷೇತ್ರಸ್ಥಭಗವತ್ಪೂಜಾಮಾಹಾತ್ಮ್ಯವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ಶಿವಲಿಂಗಮುಲಂಘ್ಯಂ ಹಿ ಬುದ್ಧಿಪೂರ್ವಂ ಹತೋ ಹ್ಯಹಂ ।
ಉವಾಚ ಕೃಷ್ಣಂ ದನುಜಶ್ಚಲಿತೋಽಹಂ ತ್ವಯಾನಘ ॥ ೧ ॥

ಶ್ರೀ ವಿಷ್ಣುರುವಾಚ :—

ಪರಿತುಷ್ಟೋಽಸ್ಮಿ ತೇ ದೈತ್ಯ ಶೌರ್ಯೇಣ ಶಿವಸಂಶ್ರಯಾತ್ ।
ವರಂ ವರಯ ಭದ್ರಂ ದೇ ಯದಿಚ್ಛಸಿ ಮಹಾಮತೇ ॥ ೨ ॥

ಕುಶ ಉವಾಚ :—

ಯಥಾ ಪೂಜ್ಯೋ ಮಹಾದೇವೋ ಮಮ ತ್ವಂ ಚ ತಥಾ ಹರೇ ।
ಏಕ ಏವ ದ್ವಿಧಾ ಮೂರ್ತಿಸ್ತಸ್ಮಾತ್ತ್ವಾಂ ವರಯಾಮ್ಯಹಂ ॥ ೩ ॥
ಶಿವಲಿಂಗಂ ತ್ವಯಾ ನಾಥ ಸ್ಥಾಪಿತಂ ಯನ್ಮಮೋಪರಿ ।

---

ಕನ್ನಡದ ಅನುವಾದ

### ಗೋಮತೀತೀರಕ್ಷೇತ್ರಸ್ಥಭಗವತ್ಪೂಜಾಮಾಹಾತ್ಮ್ಯವರ್ಣನ

೧. ಶ್ರೀ ಪ್ರಹ್ಲಾದನು ಹೇಳುತ್ತಾನೆ:—ಆ ಕುಶದಾನವನು ಕೃಷ್ಣನನ್ನು ಕುರಿತು, "ಶಿವಲಿಂಗವು ಮೀರಲಾಗದು. ನೀನು ಬುದ್ಧಿ ಪೂರ್ವಕವಾಗಿ ನನ್ನನ್ನು ಕೊಂದು ಮೋಸ ಮಾಡಿರುವೆ".

೨. ಶ್ರೀ ವಿಷ್ಣುವು ಹೇಳುತ್ತಾನೆ:—ಎಲೈ ಕುಶದೈತ್ಯನೇ! ಶಿವನ ಆಶ್ರಯದಿಂದುಂಟಾದ ನಿನ್ನ ಪರಾಕ್ರಮದಿಂದ ಸಂತುಷ್ಟನಾಗಿದ್ದೇನೆ. ಪ್ರಾಜ್ಞನೇ! ನೀನು ನಿನಗಿಷ್ಟವಾದ ಒಳ್ಳೆಯ ವರವನ್ನು ಕೇಳಿಕೊ.

೩. ಕುಶನು ಹೇಳುತ್ತಾನೆ: – "ಹರಿಯೆ ! ನನಗೆ ಮಹಾದೇವನು ಪೂಜ್ಯನಾಗಿರುವಂತೆಯೇ ನೀನೂ ಪೂಜ್ಯನು. ಒಬ್ಬ ಶಂಕರನೇ ಎರಡು ಶರೀರವುಳ್ಳವನಾಗಿರುವನು. ಆದ್ದರಿಂದ ನಾನು ನಿನ್ನಿಂದ ವರವನ್ನು ಬೇಡುವೆನು.

೪. ಸ್ವಾಮಿ! ನೀನು ನನ್ನ ಮೇಲೆ ಸ್ಥಾಪಿಸಿರುವ ಶಿವಲಿಂಗವು ನನ್ನ ಹೆಸರಿನಿಂದ ಕುಶೇಶ್ವರನೆಂದು ಹೆಸರುಗೊಳ್ಳಲಿ.

ಮಮ ನಾಮ್ನಾ ಭವತು ಚ ಕುಶೇಶ್ವರ ಇತಿ ಸ್ಮೃತಂ ॥ ೪ ॥
ಅನುಗ್ರಾಹ್ಯೋ ಯದ್ಯಹಂ ತೇ ಮಮ ಕೀರ್ತಿರ್ಭವತ್ವಿಯಂ ।
ಏವಂ ಭವಿಷ್ಯತೀತ್ಯುಕ್ತಸ್ತತ್ರೈವಾವಸ್ಥಿತೋಽಸುರಃ ॥ ೫ ॥
ತತೋಽನ್ಯದಾನವಾನ್ಸರ್ವಾನ್ಪ್ರೇಷಯಾಮಾಸ ಮಾಧವಃ ।
ರಸಾತಲಂ ಗತಾಃ ಕೇಚಿತ್ಕೇಚಿದ್ವಿಷ್ಣುಂ ಸಮಾಗತಾಃ ॥ ೬ ॥
ಅನಂತಃ ಸಂಸ್ಥಿತಸ್ತತ್ರ ವಿಷ್ಣುಶ್ಚ ತದನಂತರಂ ।
ಜ್ಞಾತ್ವಾ ವಿಮುಕ್ತಿದಂ ತೀರ್ಥಂ ದುರ್ವಾಸಾ ಮುನಿಪುಂಗವಃ ॥ ೭ ॥
ಗೋಮತ್ಯಾಂ ಚಕ್ರತೀರ್ಥೇ ತು ಭಗವಾಂಶ್ಚ ತ್ರಿವಿಕ್ರಮಃ ।
ತೇನ ತನ್ಮುಕ್ತಿದಂ ಮತ್ವಾ ದುರ್ವಾಸಾಸ್ತತ್ರ ಸಂಸ್ಥಿತಃ ॥ ೮ ॥
ಏವಂ ತ್ರಿವಿಕ್ರಮಃ ಸ್ವಾಮೀ ತದಾಪ್ರಭೃತಿ ಸಂಸ್ಥಿತಃ ।
ಕಲೌ ಪುನಃ ಕಲಾನ್ಯಾಸಾತ್ಕೃಷ್ಣತ್ವಮಗಮತ್ಪ್ರಭುಃ ॥ ೯ ॥

ಪ್ರಹ್ಲಾದ ಉವಾಚ :—

ಪೂಜಾವಿಧಿಂ ಹರೇರ್ವಿಪ್ರಾಃ ಶೃಣುಧ್ವಂ ಸುಸಮಾಹಿತಾಃ ।
ವಿಶೇಷಾತ್ಫಲದಃ ಪ್ರೋಕ್ತಃ ಪೂಜಿತೋ ಮಧುಮಾಧವೇ ॥ ೧೦ ॥

---

೫. ನಾನು ನಿನಗೆ ಅನುಗ್ರಾಹ್ಯನಾಗಿದ್ದರೆ ನನಗೀ ಕೀರ್ತಿಯುಂಟಾಗಲಿ". ವಿಷ್ಣುವು ಹಾಗೆಯೇ ಆಗಲೆನ್ನಲು ಆ ದೈತ್ಯನು ಅಲ್ಲಿಯೇ ನೆಲೆಸಿದನು.

೬. ಬಳಿಕ ಮಾಧವನು ಇತರ ದಾನವರನ್ನೆಲ್ಲ ಹಿಂದಕ್ಕೆ ಕಳುಹಿಸಲು ಅವರಲ್ಲಿ ಕೆಲವರು ಪಾತಾಳಕ್ಕೆ ಹೋದರು. ಇನ್ನು ಕೆಲವರು ವಿಷ್ಣುವನ್ನೇ ಆಶ್ರಯಿಸಿದರು.

೭-೮. ಅಲ್ಲಿ ಸಂಕರ್ಷಣನೂ, ವಿಷ್ಣುವೂ ನೆಲೆಸಿದರು. ದುರ್ವಾಸ ಮುನಿಯು ಗೋಮತೀಚಕ್ರತೀರ್ಥಗಳಲ್ಲಿ ತ್ರಿವಿಕ್ರಮನಿರುವುದರಿಂದ ಅದು ಮೋಕ್ಷಪ್ರದವಾದ ತೀರ್ಥವೆಂದರಿತು ಅಲ್ಲಿಯೇ ವಾಸಮಾಡಿದನು.

೯. ಅಂದು ಮೊದಲ್ಗೊಂಡು ತ್ರಿವಿಕ್ರಮಸ್ವಾಮಿಯು ಅಲ್ಲಿನೆಲಸಿದನು. ಕಲಿಯುಗದಲ್ಲಿ ಈ ಯುಗಸಂಬಂಧವಾದ ಕಲಾನ್ಯಾಸವುಂಟಾದ್ದರಿಂದ ತ್ರಿವಿಕ್ರಮನು ಕೃಷ್ಣನಾದನು.

೧೦. ಪ್ರಹ್ಲಾದನು ಹೇಳುತ್ತಾನೆ :—ವಿಪ್ರರೆ! ಹರಿಯ ಪೂಜಾಕ್ರಮವನ್ನು ಸಾವಧಾನ ಮನಸ್ಸಿನಿಂದ ಕೇಳಿರಿ. ವಸಂತರ್ತುವಿನಲ್ಲಿ ಪೂಜಿಸಿದ ವಿಷ್ಣುವು ವಿಶೇಷವಾಗಿ ಫಲವನ್ನು ಕೊಡುವನು

ಮಧುಸೂದನೀಂ ನರೋ ಯಸ್ತು ದ್ವಾರವತ್ಯಾಂ ಕರೋತಿ ಚ ।
ಪೂಜಯೇತ್ಕೃಷ್ಣದೇವಂ ಚ ಸ್ನಾಪಯಿತ್ವಾ ವಿಲಿಪ್ಯ ಚ ॥ ೧೧ ॥
ಗಂಧೈಶ್ಚ ವಾಸಸಾಚ್ಛಾದ್ಯ ಧೂಪೈರ್ದೀಪೈರನೇಕಧಾ ।
ನೈವೇದ್ಯೈರ್ಭೂಷಣೈಶ್ಚೈವ ತಾಂಬೂಲೇನ ಫಲೇನ ಚ ॥ ೧೨ ॥
ಆರಾರ್ತಿಕೇನ ಸಂಪೂಜ್ಯ ದಂಡವತ್ಪ್ರಣಿಪತ್ಯ ಚ ।
ಘೃತೇನ ದೀಪಕಂ ದತ್ವಾ ರಾತ್ರೌ ಜಾಗರಣಂ ತಥಾ ।
ಕುರ್ಯಾಚ್ಚ ಗೀತವಾದಿತ್ರೈಸ್ತಥಾ ಪುಸ್ತಕವಾಚಕೈಃ ॥ ೧೩ ॥
ಕೃತ್ವಾ ಚೈವಂ ವಿಧಿಂ ಭಕ್ತ್ಯಾ ಸರ್ವಾನ್ಕಾಮಾನಾಪ್ನುಯಾತ್ ॥ ೧೪ ॥
ತಥಾ ನಭಸಿ ಸಂಪೂಜ್ಯ ಪವಿತ್ರಾರೋಪಣೇನ ಚ ।
ಪಿತ್ರೂಣಾಂ ಚಾಕ್ಷಯಾ ತೃಪ್ತಿಃ ಸಫಲಾಃ ಸ್ಯುರ್ಮನೋರಥಾಃ ॥ ೧೫ ॥
ಪ್ರಬೋಧವಾಸರೇ ಪ್ರಾಪ್ತೇ ಕಾರ್ತಿಕೇ ದ್ವಿಜಸತ್ತಮಾಃ ।
ಸಂಪೂಜ್ಯ ಕೃಷ್ಣಂ ದೇವೇಶಂ ಪರಾಂ ಗತಿಮವಾಪ್ನುಯಾತ್ ॥ ೧೬ ॥
ತಥಾ ನಭಸ್ಯೇ ಸಂಪೂಜ್ಯ ಪವಿತ್ರಾರೋಪಣೇನ ಚ ।
ಸರ್ವಾನ್ಕಾಮಾನವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥ ೧೭ ॥

---

೧೧-೧೩. ದ್ವಾರಾವತಿಯಲ್ಲಿ ಮಧುಸೂದನ ಯಾತ್ರೆಯನ್ನು ಮಾಡುವ ಮಾನವನು ಕೃಷ್ಣನಿಗೆ ಅಭಿಷೇಕ ಮಾಡಿ ಗಂಧವನ್ನು ಲೇಪಿಸಿ ಬಟ್ಟೆಯನ್ನು ಹೊದ್ದಿಸಿ ಧೂಪ, ದೀಪ, ನೈವೇದ್ಯ, ಭೂಷಣ, ತಾಂಬೂಲ, ಫಲ, ಆರತಿಗಳಿಂದ ಪೂಜಿಸಿ ಸಾಷ್ಟಾಂಗ ಪ್ರಣಾಮಮಾಡಿ ಘೃತ ದೀಪವನ್ನು ಹೊತ್ತಿಸಿ ರಾತ್ರಿ ಗೀತವಾದ್ಯಗಳಿಂದಲೂ ಪುಸ್ತಕ ಪಠನಗಳಿಂದಲೂ ಜಾಗರಣೆ ಮಾಡಬೇಕು.

೧೪. ಭಕ್ತಿಯಿಂದ ಹೀಗೆ ಮಾಡಿದವನು ಸಕಲೇಷ್ಟಾರ್ಥಗಳನ್ನೂ ಪಡೆಯುವನು.

೧೫. ಹಾಗೆಯೇ ಭಾದ್ರಪದಮಾಸದಲ್ಲಿ ಪವಿತ್ರಾರೋಪಣೆಯಿಂದ ಪೂಜಿಸಿದರೆ ಪಿತೃಗಳಿಗೆ ಅಕ್ಷಯ ತೃಪ್ತಿಯುಂಟಾಗುವುದು. ಮನೋರಥಗಳು ಸಫಲವಾಗುವುದು.

೧೬. ದ್ವಿಜವರ್ಯರೆ! ಕಾರ್ತಿಕಮಾಸದಲ್ಲಿ ವಿಷ್ಣುವಿನ ಉತ್ಥಾನ ದಿನವು ಬರಲು ಕೃಷ್ಣನನ್ನು ಪೂಜಿಸಿದರೆ ಉತ್ತಮ ಗತಿಯು ಲಭಿಸುವುದು.

೧೭. ಹಾಗೆಯೇ ಮಾನವನು ಭಾದ್ರಪದಮಾಸದಲ್ಲಿ ಪವಿತ್ರಾರೋಪಣದಿಂದ ಕೃಷ್ಣನನ್ನು ಪೂಜಿಸಿದರೆ ಸಕಲೇಷ್ಟಾರ್ಥಗಳನ್ನು ಪಡೆದು ವಿಷ್ಣುಲೋಕವನ್ನು ಹೊಂದುವನು.

ಯುಗಾದಿಷು ಚ ಸಂಪೂಜ್ಯ ಹ್ಯಯನೇ ದಕ್ಷಿಣೋತ್ತರೇ ।
ಆಷಾಢಜ್ಯೇಷ್ಠಮಾಘೇಷು ಪೌಷಾದಿದ್ವಾದಶೀಷು ಚ ॥ ೧೮ ॥
ಕಲೌ ಕೃಷ್ಣಂ ಪೂಜಯಿತ್ವಾ ಗೋಮತ್ಯುದಧಿಸಂಗಮೇ ।
ವಿಮಲಂ ಲೋಕಮಾಪ್ನೋತಿ ಯತ್ರ ಗತ್ವಾ ನಶೋಚತಿ ॥ ೧೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಗೋಮತೀತೀರಸ್ಥಕ್ಷೇತ್ರಸ್ಥಭಗವತ್ಪೂಜಾಮಾಹಾತ್ಮ್ಯವರ್ಣನಂ ನಾಮ
ಏಕವಿಂಶತಿತಮೋಽಧ್ಯಾಯಃ

---

೧೮–೧೯. ಕಲಿಯುಗದಲ್ಲಿ ಯುಗಾದಿ, ದಕ್ಷಿಣೋತ್ತರಾಯಣ, ಆಷಾಢ, ಜ್ಯೇಷ್ಠ, ಮಾಘ, ಪುಷ್ಯಮಾಸಗಳ ದ್ವಾದಶಿಗಳಲ್ಲಿ ಗೋಮತೀಸಾಗರ ಸಂಗಮದಲ್ಲಿ ಕೃಷ್ಣನನ್ನು ಪೂಜಿಸಿದವನು ದುಃಖರಹಿತವಾದ ಪವಿತ್ರ ಲೋಕವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಗೋಮತೀತೀರಸ್ಥಕ್ಷೇತ್ರಸ್ಥಭಗವತ್ಪೂಜಾಮಾಹಾತ್ಮ್ಯವರ್ಣನ ವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ದ್ವಾವಿಂಶತಿತಮೋಽಧ್ಯಾಯಃ

## ರುಕ್ಮಿಣೀಪೂಜನಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ಶೃಣುಧ್ವಂ ದ್ವಿಜಶಾರ್ದೂಲಾ ಯಥಾವತ್ಕಥಯಾಮಿ ವಃ ।
ಸ್ನಾಪಯಿತ್ವಾ ಜಗನ್ನಾಥಂ ತಥಾ ಗಂಧೈರ್ವಿಲಿಪ್ಯ ಚ ।
ಪೂಜಯಿತ್ವಾ ತುಲಸ್ಯಾ ತು ಭೂಷಯಿತ್ವಾ ಚ ಭೂಷಣೈಃ ॥ ೧ ॥
ನೈವೇದ್ಯೇನ ಚ ಸಂತರ್ಪ್ಯ ತಥಾ ನೀರಾಜನಾದಿಭಿಃ ।
ದುರ್ವಾಸಸಂ ತಥಾ ಪೂಜ್ಯ ಪುಂಡರೀಕಾಕ್ಷಮೇವ ಚ ॥ ೨ ॥
ಅನಂತಂ ವೈನತೇಯಾದೀನ್ಸ್ವಶಕ್ತ್ಯಾ ಸಂಪೂಜ್ಯ ಮಾನವಃ ।
ದದ್ಯಾದ್ದಾನಂ ಸ್ವಶಕ್ತ್ಯಾ ಚ ವಿತ್ತಶಾಠ್ಯವಿವರ್ಜಿತಃ ॥ ೩ ॥
ದೀನಾಂಧಕೃಪಣಾಂಸ್ತತ್ರ ತರ್ಪಯೇಚ್ಚ ಸಮಾಶ್ರಿತಾನ್ ॥ ೪ ॥
ರುಕ್ಮಿಣೀಂ ಚ ತತೋ ಗಚ್ಛೇದ್ವಿದರ್ಭತನಯಾಂ ನರಃ ।
ಉಪಹೃತ್ಯೋಪಹಾರಾಂಶ್ಚ ಬಲಿಭಿರ್ಗಂಧದೀಪಕೈಃ ॥ ೫ ॥

---

### ಕನ್ನಡದ ಅನುವಾದ

#### ರುಕ್ಮಿಣೀಪೂಜನಮಾಹಾತ್ಮ್ಯವರ್ಣನ

೧-೩. ಶ್ರೀ ಪ್ರಹ್ಲಾದನು ಹೇಳುತ್ತಾನೆ :—ದ್ವಿಜೋತ್ತಮರೆ! ಪೂಜಾವಿಧಿಯನ್ನು ಹೇಳುವೆನು. ಕೇಳಿರಿ. ಶ್ರೀ ಕೃಷ್ಣನಿಗೆ ಅಭಿಷೇಕ ಮಾಡಿ ಗಂಧವನ್ನು ಲೇಪಿಸಿ, ತುಲಸಿಯಿಂದ ಪೂಜಿಸಿ, ಒಡವೆಗಳಿಂದ ಅಲಂಕಾರಗೊಳಿಸಿ, ನೈವೇದ್ಯ ನೀರಾಜನಾದಿಗಳಿಂದ ತೃಪ್ತಿಗೊಳಿಸಿ ಹಾಗೆಯೇ ದುರ್ವಾಸ, ಸಂಕರ್ಷಣ, ಗರುಡ ಮೊದಲಾದವರನ್ನೂ ಆರಾಧಿಸಿ ವಿತ್ತಶಾಠ್ಯವಿಲ್ಲದೆ ತನ್ನ ಶಕ್ತ್ಯನುಸಾರ ದಾನವನ್ನು ಕೊಡಬೇಕು.

೪. ಅಲ್ಲಿರುವ ದೀನ, ಅಂಧ, ಕೃಪಣರನ್ನೂ ಸಂತೋಷಗೊಳಿಸಬೇಕು.

೫. ತರುವಾಯ ವಿದರ್ಭರಾಜನ ಮಗಳಾದ ರುಕ್ಮಿಣಿಯೆಡೆಗೆ ಹೋಗಿ ಕಾಣಿಕೆ, ಬಲಿ, ಗಂಧ, ದೀಪಗಳಿಂದ ಪೂಜಿಸಬೇಕು.

ಪೀಡಯಂತಿ ಗ್ರಹಾಸ್ತಾವದ್ವ್ಯಾಧಯೋಽಭಿಭವಂತಿ ಚ ।
ಭಕ್ತ್ಯಾ ನ ಪಶ್ಯತಿ ನರೋ ಯಾವತ್ಕೃಷ್ಣಪ್ರಿಯಾಂ ಕಲೌ ॥ ೬ ॥
ಉಪಸರ್ಗಭಯಂ ತಾವದ್ದುಃಖಂ ಚ ಭೂತಸಂಭವಂ ।
ಭಕ್ತ್ಯಾ ನ ಪಶ್ಯತಿ ನರೋ ಯಾವತ್ಕೃಷ್ಣಪ್ರಿಯಾಂ ಕಲೌ ॥ ೭ ॥
ಭವೇದ್ದರಿದ್ರೀ ದುಃಖೀ ಚ ತಾವದ್ವೇ ಪರಯಾಚಕಃ ।
ಭಕ್ತ್ಯಾ ನ ಪಶ್ಯತಿ ನರೋ ಯಾವತ್ಕೃಷ್ಣಪ್ರಿಯಾಂ ಕಲೌ ॥ ೮ ॥
ತಾವನ್ಮೃತಪ್ರಜಾ ನಾರೀ ದುರ್ಭಾಗ್ಯಾ ದುಃಖಸಂಯುತಾ ।
ಭಕ್ತ್ಯಾ ನ ಪಶ್ಯತಿ ಯದಾ ನಾರೀ ಕೃಷ್ಣಪ್ರಿಯಾಂ ತಥಾ ॥ ೯ ॥
ತಾವಚ್ಛತ್ರುಭಯಂ ಪುಸಾಂ ಗೃಹಭಂಗಂ ಚ ಮೂರ್ಖತಾ ।
ಭಕ್ತ್ಯಾ ನ ಪಶ್ಯತಿ ನರೋ ಯಾವತ್ಕೃಷ್ಣಪ್ರಿಯಾಂ ಕಲೌ ॥ ೧೦ ॥
ಸಂಪೂಜ್ಯ ಕೃಷ್ಣಂ ವಿಧಿವದ್ರುಕ್ಮಿಣೀಂ ಪೂಜಯೇತ್ತತಃ ।
ಸ್ನಾಪಯೇದ್ದಧಿದುಗ್ಧಾಭ್ಯಾಂ ಮಧುಶರ್ಕರಯಾ ತಥಾ ॥ ೧೧ ॥
ಘೃತೇನ ವಿವಿಧೈರ್ಗಂಧೈಸ್ತಥೈವೇಕ್ಷುರಸೇನ ಚ ।
ತೀರ್ಥೋದಕೇನ ಸಂಸ್ನಾಪ್ಯ ಸರ್ವಾನ್ಕಾಮಾನವಾಪ್ನುಯಾತ್ ॥ ೧೨ ॥
ಏವಂ ಯಃ ಸ್ನಾಪಯೇದ್ದೇವೀಂ ರುಕ್ಮಿಣೀಂ ಕೃಷ್ಣವಲ್ಲಭಾಂ ।
ನ ತಸ್ಯ ದುರ್ಲಭಂ ಕಿಂಚಿದಿಹ ಲೋಕೇ ಪರತ್ರ ಚ ॥ ೧೩ ॥

---

೬. ಕಲಿಯುಗದಲ್ಲಿ ಮಾನವನು ಶ್ರೀ ಕೃಷ್ಣಪತ್ನಿಯಾದ ರುಕ್ಮಿಣಿಯನ್ನು ಭಕ್ತಿಯಿಂದ ನೋಡದಿರುವವರೆಗೆ ಮಾತ್ರ ಗ್ರಹಗಳೂ ರೋಗಗಳೂ ಪೀಡಿಸುತ್ತವೆ.

೭–೧೦. ಕಲಿಯುಗದಲ್ಲಿ ಮಾನವನು ಶ್ರೀ ಕೃಷ್ಣಪತ್ನಿಯಾದ ರುಕ್ಮಿಣಿಯನ್ನು ಭಕ್ತಿಯಿಂದನೋಡದಿರುವವರೆಗೆ ಮಾತ್ರಶಾಕಿನ್ಯಾದಿ ಭೂತಗಳ ಭಯವುಂಟಾಗುವುದು. ಪುರುಷನು ದರಿದ್ರನೂ, ದುಃಖವುಳ್ಳವನೂ, ಪರರನ್ನು ಬೇಡುವವನೂ ಆಗುವನು. ನಾರಿಯು ಸಾಯುವ ಮಕ್ಕಳುಳ್ಳವಳೂ, ದುರ್ಭಗಳೂ, ದುಃಖಿನಿಯೂ ಆಗುವಳು. ಪುರುಷರಿಗೆ ಶತ್ರುಭಯವೂ, ಗೃಹನಾಶವೂ, ಮೂರ್ಖತ್ವವೂ, ಉಂಟಾಗುವುದು.

೧೧–೧೨. ಕೃಷ್ಣನನ್ನು ವಿಧಿಯಂತೆ ಪೂಜಿಸಿ ಅನಂತರ ರುಕ್ಮಿಣಿಯನ್ನು ಹಾಲು, ಮೊಸರು, ಜೇನು, ಸಕ್ಕರೆ, ತುಪ್ಪ, ವಿವಿಧಗಂಧ, ಕಬ್ಬಿನರಸ ತೀರ್ಥೋದಕ ಇವುಗಳಿಂದ ಅಭಿಷೇಕ ಮಾಡಿದವನು ಸಕಲೇಷ್ಟಾರ್ಥಗಳನ್ನು ಪಡೆಯುವನು.

೧೩. ಹೀಗೆ ಕೃಷ್ಣನ ಪತ್ನಿಯಾದ ರುಕ್ಮಿಣಿಯನ್ನು ಸ್ನಾನಮಾಡಿಸಿದವರಿಗೆ ಇಹ ಪರಲೋಕಗಳಲ್ಲಿ ದುರ್ಲಭವಾದುದು ಯಾವುದೂ ಇಲ್ಲ.

ಶ್ರೀಖಂಡಕುಂಕುಮೇನೈವ ತಥಾ ಮೃಗಮದೇ ನ ಚ ।
ವಿಲೇಪಯೇದಪುತ್ರಸ್ತು ಸ ಪುತ್ರಂ ಲಭತೇ ಧ್ರುವಂ ॥ ೧೪ ॥

ಸದಾ ಸ ಭೋಗೀ ಭವತಿ ರೂಪವಾನ್ಜನಪೂಜಿತಃ ।
ಪೂಜಯೇನ್ಮಾಲತೀಪುಷ್ಪೈಃ ಶತಪತ್ರೈಃ ಸುಗಂಧಿಭಿಃ ॥ ೧೫ ॥
ಕರವೀರೈರ್ಮಲ್ಲಿಕಾಭಿಶ್ಚಂಪಕೈಸ್ತು ವಿಶೇಷತಃ ।
ಕಮಲೈರ್ವಾರಿಸಂಭೂತೈಃ ಕೇತಕೀಭಿಶ್ಚ ಪಾಟಲೈಃ ॥ ೧೬ ॥

ಧೂಪೇನಾಗುರುಣಾ ಚೈವ ಪೂಜಯೇದ್ಗುಗ್ಗುಲೇನ ಚ ।
ವಸ್ತ್ರೈಃ ಸುಕೋಮಲೈಃ ಶುಭ್ರೈರ್ನಾನಾದೇಶಸಮುದ್ಭವೈಃ ॥ ೧೭ ॥
ಭಕ್ತ್ಯಾ ಸಂಪಾದ್ಯ ವೈದರ್ಭೀಂ ರುಕ್ಮಿಣೀಂ ಕೃಷ್ಣವಲ್ಲಭಾಂ ।
ಭೂಷಣೈರ್ಭೂಷಯೇದ್ದೇವೀಂ ಮಣಿರತ್ನಸಮನ್ವಿತೈಃ ॥ ೧೮ ॥
ತಸ್ಮಿನ್ಕುಲೇ ನಾಸುಖಃ ಸ್ಯಾನ್ನಾಧರ್ಮೋ ನಾಧನಸ್ತಥಾ ।
ನಾಽಪುತ್ರೋ ನ ವಿಕರ್ಮಸ್ಥಃ ಕಿತವೋ ನೀಚಸೇವಕಃ ॥ ೧೯ ॥
ಯೈಃ ಪೂಜಿತಾ ಜಗನ್ಮಾತಾ ರುಕ್ಮಿಣೀ ಮಾನವೈಃ ಕಲೌ ।
ನೈವೇದ್ಯೈರ್ಭಕ್ಷ್ಯ ಭೋಜ್ಯಾದ್ಯೈರ್ದೇವೀ ಮೇ ಪ್ರೀಯತಾಮಿತಿ ।
ತಾಂಬೂಲಂ ಚ ಸಕರ್ಪೂರಂ ಭಾವೇನ ವಿನಿವೇದಯೇತ್ ॥ ೨೦ ॥

---

೧೪–೧೮. ಪುತ್ರನಿಲ್ಲದವನು ಗಂಧ, ಕುಂಕುಮ, ಕಸ್ತೂರಿಗಳಿಂದ ಲೇಪನ ಮಾಡಿದರೆ ಪುತ್ರನನ್ನು ಪಡೆಯುವನು. ಅವನು ಯಾವಾಗಲೂ ಭೋಗಿಯೂ ಸುಂದರನೂ, ಜನ ಪೂಜ್ಯನೂ ಆಗುವನು. ಆ ರುಕ್ಮಿಣಿಯನ್ನು ಜಾಜಿ, ಸುಗಂಧವಾದ ಬೆಟ್ಟತಾವರೆ, ಕಣಗಲೆ, ಮಲ್ಲಿಗೆ, ಸಂಪಿಗೆ, ನೀರಿನಲ್ಲಿ ಹುಟ್ಟಿದ ಕಮಲ, ಕೇತಕೆ, ಪಾದರಿ ಹೂವುಗಳಿಂದಲೂ, ಧೂಪ, ಅಗುರು, ಗುಗ್ಗುಳಿಂದಲೂ ಪೂಜಿಸಿ ಮೃದುವೂ, ಬೆಳ್ಳಗೂ, ನಾನಾ ದೇಶದಲ್ಲಿ ಹುಟ್ಟಿರುವುದೂ ಆದ ವಸ್ತ್ರಗಳಿಂದ ಹೊದ್ದಿಸಿ ಮಣಿ ರತ್ನಗಳಿಂದ ಸೇರಿದ ಒಡವೆಗಳಿಂದ ಅಲಂಕರಿಸಬೇಕು.

೧೯–೨೦. ಕಲಿಯುಗದಲ್ಲಿ ಜಗನ್ಮಾತೆಯಾದ ರುಕ್ಮಿಣಿಯನ್ನು ನೈವೇದ್ಯ, ಭಕ್ಷ್ಯ, ಭೋಜ್ಯ, ಕರ್ಪೂರ ಸಹಿತವಾದ ತಾಂಬೂಲ ಇವುಗಳನ್ನು ಭಕ್ತಿಯಿಂದ ನಿವೇದನ ಮಾಡಿ ಪೂಜಿಸಿದವನ ವಂಶದಲ್ಲಿ ಸುಖವಿಲ್ಲದವನೂ, ಅಧರ್ಮಿಯೂ, ಬಡವನೂ, ಮಕ್ಕಳಿಲ್ಲದವನೂ, ವಿರುದ್ಧ ಕರ್ಮಗಳನ್ನಾಚರಿಸುವವನೂ, ಜೂಜುಗಾರನೂ, ನೀಚರನ್ನು ಸೇವಿಸುವವನೂ ಹುಟ್ಟುವುದಿಲ್ಲ.

ಗೃಹೀತ್ವಾ ಚ ಫಲಂ ಶುಭ್ರಂ ಹ್ಯಕ್ಷತೈಶ್ಚ ಸಮನ್ವಿತಂ ।
ಮಂತ್ರೇಣಾನೇನ ವೈ ವಿಪ್ರಾ ಹ್ಯರ್ಘ್ಯಂ ದದ್ಯಾದ್ವಿಧಾನತಃ ॥ ೨೧ ॥
ಕೃಷ್ಣಪ್ರಿಯೇ ನಮಸ್ತುಭ್ಯಂ ವಿದರ್ಭಾಧಿಪನಂದಿನಿ ।
ಸರ್ವಕಾಮಪ್ರದೇ ದೇವಿ ಗೃಹಾಣಾರ್ಘ್ಯಂ ನಮೋಽಸ್ತುತೇ ॥ ೨೨ ॥
ಆರಾರ್ತಿಕಂ ತತಃ ಕುರ್ಯಾಜ್ಜ್ವಲಂತಂ ಭಾವನಾನ್ವಿತಃ ।
ನೀರಾಜನಂ ಪ್ರಕರ್ತವ್ಯಂ ಕರ್ಪೂರೇಣ ವಿಶೇಷತಃ ॥ ೨೩ ॥
ಶಂಖೈಃ ಕೃತ್ವಾ ತು ಪಾನೀಯಂ ಭ್ರಾಮಯೇದ್ಭಾವಸಂಯುತಃ ।
ಭ್ರಾಮಯಿತ್ವಾ ಚ ಶಿರಸಾ ಧಾರಣೀಯಂ ವಿಶುದ್ಧಯೇ ॥ ೨೪ ॥
ದಂಡವತ್ಪ್ರಣಮೇದ್ಭೂಮೌ ನಮಃ ಕೃಷ್ಣಪ್ರಿಯೇತಿ ಚ ।
ವಿಪ್ರಪತ್ನೀಂಶ್ಚ ವಿಪ್ರಾಂಶ್ಚ ಪೂಜಯೇದ್ಭಕ್ತಿತೋ ದ್ವಿಜಾಃ ॥ ೨೫ ॥
ಗ್ರೀವಾಸೂತ್ರಕಸಿಂದೂರೈರ್ವಾಸೋಭಿಃ ಕಂಚುಕೈಸ್ತಥಾ ।
ಸುಗಂಧಕುಸುಮೈರರ್ಚ್ಯ ಕುಂಕುಮೇನ ವಿಲಿಪ್ಯ ಚ ॥ ೨೬ ॥
ಕೌಸುಂಭಕೈಃ ಕಜ್ಜಲೇನ ತಾಂಬೂಲೇನ ಚ ತೋಷಯೇತ್ ।
ಭಕ್ಷ್ಯೈರ್ಭೋಜ್ಯೈರ್ಮೋದಕೈಶ್ಚೈಕ್ಷುಭಿರ್ಮಧುಸರ್ಪಿಭಿಃ ॥ ೨೭ ॥

---

೨೧. ವಿಪ್ರರೆ! ಅಕ್ಷತೆಗಳಿಂದ ಸಹಿತವಾದ ಫಲವನ್ನು ಹಿಡಿದುಕೊಂಡು ಈ ಮಂತ್ರದಿಂದ ವಿಧಿಯಂತೆ ಅರ್ಘ್ಯವನ್ನು ಕೊಡಬೇಕು.

೨೨. ಕೃಷ್ಣನ ಪತ್ನಿಯೂ, ವಿದರ್ಭರಾಜನ ಪುತ್ರಿಯೂ, ಸಕಲೇಷ್ಟಾರ್ಥಗಳನ್ನು ಕೊಡುವವಳೂ ಆದ ರುಕ್ಮಿಣೀದೇವಿಯೆ! ನಿನಗೆ ನಮಸ್ಕಾರ, ಅರ್ಘ್ಯವನ್ನು ಸ್ವೀಕರಿಸು.

೨೩. ತರುವಾಯ ಕರ್ಪೂರದಿಂದ ಭಕ್ತಿ ಪುರಸ್ಸರವಾಗಿ ನೀರಾಜನವನ್ನು ಮಾಡಬೇಕು.

೨೪. ನೀರನ್ನು ಶಂಖಕ್ಕೆ ತುಂಬಿ ಭಕ್ತಿಯಿಂದ ಅದನ್ನು ತಿರುಗಿಸಿ ಆ ನೀರನ್ನು ಶುದ್ಧಿಗಾಗಿ ತಲೆಯಲ್ಲಿ ಧರಿಸಬೇಕು.

೨೫–೨೭. ವಿಪ್ರರೆ! ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರಮಾಡಿ ಕೃಷ್ಣಪ್ರಿಯಳೆ! ನಮಸ್ಕಾರವೆಂದು ಬ್ರಾಹ್ಮಣ ಪತ್ನಿಯರನ್ನೂ, ಬ್ರಾಹ್ಮಣರನ್ನೂ ಕಂಠಸೂತ್ರ, ಸಿಂದೂರ, ವಸ್ತ್ರ, ಕುಪ್ಪಸ, ಸುವಾಸನೆಯಾದ ಹೂವು ಇವುಗಳಿಂದ ಪೂಜಿಸಿ ಕುಂಕುಮವನ್ನು ಹಚ್ಚಿ ಕೌಸುಂಭಕ, ಕಾಡಿಗೆ, ತಾಂಬೂಲ, ಭಕ್ಷ್ಯ, ಭೋಜ್ಯ, ಮೋದಕ, ಕಬ್ಬು, ತುಪ್ಪ ಇವುಗಳನ್ನು ಕೊಟ್ಟು ಸಂತೋಷಗೊಳಿಸಬೇಕು.

ಪ್ರೀತೋ ಭವತಿ ದೇವೇಶೋ ರುಕ್ಮಿಣ್ಯಾ ಸಹ ಕೇಶವಃ ।
ವಿಶೇಷತಃ ಫಲಾನೀಹ ದಾತವ್ಯಾನಿ ದ್ವಿಜೋತ್ತಮಾಃ ॥ ೨೮ ॥
ಉನ್ಮತ್ತಕಂ ತತೋ ದೇವಂ ದ್ವಾರಪಾಲಂ ಪ್ರಪೂಜಯೇತ್ ।
ಸ್ನಾಪಯಿತ್ವಾ ಸುಗಂಧೇನ ಕುಂಕುಮೇನ ವಿಲಿಪ್ಯ ಚ ॥ ೨೯ ॥
ಧೂಪೇನ ಧೂಪಯಿತ್ವಾ ತು ಪುಷ್ಪಾದ್ಯೈಃ ಸಂಪ್ರಪೂಜಯೇತ್ ।
ನೈವೇದ್ಯೈರ್ಭಕ್ಷ್ಯಭೋಜ್ಯೈಶ್ಚ ಮಾಂಸೇನ ಸುರಯಾ ತಥಾ ॥ ೩೦ ॥
ಪ್ರಭೂತಬಲಿಭಿಶ್ಚೈವ ಪಿಷ್ಟೇನ ವಿವಿಧೇನ ಚ ।
ಯೋಗಿನೀನಾಂ ಚತುಃಷಷ್ಟಿಂ ತಸ್ಮಿನ್ಪೀಠೇ ಪ್ರಪೂಜಯೇತ್ ॥ ೩೧ ॥
ಅರ್ಚಯೇದ್ಧರಸಿದ್ಧಿಂ ಚ ಕ್ಷೇತ್ರಪಾಲಂ ಚ ಸರ್ವಶಃ ।
ವಿರೂಪಸ್ವಾಮಿನೀಂ ತತ್ರ ತಥಾ ವೈ ಸಪ್ತಮಾತರಃ ॥ ೩೨ ॥
ಅಷ್ಟಮೂರ್ತೀಃ ಕೃಷ್ಣಪತ್ನೀಃ ಪೀಠೇ ತಸ್ಮಿನ್ಪ್ರಪೂಜಯೇತ್ ।
ರುಕ್ಮಿಣೀಂ ಸತ್ಯಭಾಮಾಂ ಚ ಶುಭಾಂ ಜಾಂಬವತೀಂ ತಥಾ ॥ ೩೩ ॥
ಮಿತ್ರವಿಂದಾಂಚ ಕಾಲಿಂದೀಂ ಭದ್ರಾಂ ನಾಗ್ನಜಿತೀಂ ತಥಾ ।
ಅಷ್ಟಮೀಂ ಲಕ್ಷ್ಮಣಾಂ ತತ್ರ ಪೂಜಯೇತ್ಕೃಷ್ಣವಲ್ಲಭಾಃ ॥ ೩೪ ॥

---

೨೮. ದ್ವಿಜೋತ್ತಮರೆ! ಇದರಿಂದ ರುಕ್ಮಿಣಿಯೊಡನೆ ಕೃಷ್ಣನು ಸಂತೋಷಗೊಳ್ಳುವನು. ವಿಶೇಷವಾಗಿ ಇಲ್ಲಿ ಫಲಗಳನ್ನು ದಾನಮಾಡಬೇಕು.

೨೯–೩೧. ಅನಂತರ ಉನ್ಮತ್ತಕನೆಂಬ ದ್ವಾರಪಾಲಕನನ್ನು ಅಭಿಷೇಕಮಾಡಿ ಗಂಧ ಕುಂಕುಮಗಳನ್ನು ಹಚ್ಚಿ ಧೂಪವನ್ನಿತ್ತು ಪುಷ್ಪಾದಿಗಳಿಂದ ಪೂಜಿಸಬೇಕು. ಹಾಗೆಯೇ ಅದೇ ಪೀಠದಲ್ಲಿ ಅರುವತ್ತನಾಲ್ಕು ಮಂದಿ ಯೋಗಿನಿಯರನ್ನು ನೈವೇದ್ಯ, ಭಕ್ಷ್ಯ, ಭೋಜ್ಯ, ಮಾಂಸ, ಹೆಂಡ, ಬಲಿ, ಬಗೆಬಗೆಯ ಹಿಟ್ಟು ಇವುಗಳಿಂದ ಅರ್ಚಿಸಬೇಕು.

೩೨–೩೪. ಅಲ್ಲಿಯೇ ಹರಸಿದ್ಧಿ, ಕ್ಷೇತ್ರಪಾಲ, ವಿರೂಪಸ್ವಾಮಿನೀ, ಸಪ್ತಮಾತೃಗಳು, ಕೃಷ್ಣನ ಎಂಟುಮಂದಿ ರಾಣಿಯರಾದ ರುಕ್ಮಿಣೀ, ಸತ್ಯಭಾಮಾ, ಜಾಂಬವತೀ, ಮಿತ್ರವಿಂದಾ, ಕಾಲಿಂದೀ, ಭದ್ರಾ, ನಾಗ್ನಜಿತೀ ಲಕ್ಷ್ಮಣಾ ಇವರನ್ನು ಆರಾಧಿಸಬೇಕು.

೩೫–೩೭. ಇವರನ್ನು ವಿಧಿಯಂತೆ ಪೂಜಿಸಿ ಮೊಸರು, ಪಾಯಸ, ಸಂಗೀತ, ವಾದ್ಯ ಧ್ವನಿ, ದೀಪ, ಜಾಗರಣೆಗಳಿಂದ ಸಂತೋಷಗೊಳಿಸಿದವನು ಪುತ್ರ, ಪೌತ್ರ,

ಏತಾಃ ಸಂಪೂಜ್ಯ ವಿಧಿವತ್ಸಂತರ್ಪ್ಯ ದಧಿಪಾಯಸೈಃ ।
ಗೀತವಾದಿತ್ರಘೋಷೇಣ ದೀಪ್ಯೈರ್ಜಾಗರಣೇನ ಚ ॥ ೩೫ ॥
ಪುತ್ರಪೌತ್ರಸಮಾಯುಕ್ತೋ ಧನಧಾನ್ಯಸಮನ್ವಿತಃ ।
ಸರ್ವಾನ್ಕಾಮಾನವಾಪ್ನೋತಿ ತಸ್ಯ ವಿಷ್ಣುಃ ಪ್ರಸೀದತಿ ॥ ೩೬ ॥
ಕಿಂ ತಸ್ಯ ಬಹುದಾನೈಸ್ತು ಕಿಂ ವ್ರತೈರ್ನಿಯಮೈಸ್ತಥಾ ।
ಯೇನ ದೃಷ್ಟಾ ಜಗನ್ಮಾತಾ ರುಕ್ಮಿಣೀ, ಕೃಷ್ಣವಲ್ಲಭಾ ॥ ೩೭ ॥
ಕಿಂ ಯಜ್ಞೈರ್ಬಹುಭಿಸ್ತಸ್ಯ ಸಂಪೂರ್ಣವರದಕ್ಷಿಣೈಃ ।
ಯೇನ ದೃಷ್ಟಾ ಜಗನ್ಮಾತಾ ರುಕ್ಮಿಣೀ ಕೃಷ್ಣವಲ್ಲಭಾ ॥ ೩೮ ॥
ತೇನ ದತ್ತಂ ಹುತಂ ತೇನ ಜಪ್ತಂ ತೇನ ಸನಾತನಂ ।
ಯೇನ ದೃಷ್ಟಾ ಜಗನ್ಮಾತಾ ರುಕ್ಮಿಣೀ ಕೃಷ್ಣವಲ್ಲಭಾ ॥ ೩೯ ॥
ಹೇಲಯಾ ತೇನ ಸಂಪ್ರಾಪ್ತಾಃ ಸಿದ್ಧಯೋಽಷ್ಟೌ ನ ಸಂಶಯಃ ।
ಗತ್ವಾ ದ್ವಾರವತೀಂ ಯೇನ ದೃಷ್ಟಾ ಕೇಶವವಲ್ಲಭಾ ॥ ೪೦ ॥
ಸಫಲಂ ಜೀವಿತಂ ತಸ್ಯ ಸಫಲಾಶ್ಚ ಮನೋರಥಾಃ ।
ಕಲೌ ಕೃಷ್ಣಪುರೀಂ ಗತ್ವಾ ದೃಷ್ಟ್ವಾ ಮಾಧವವಲ್ಲಭಾಂ ॥ ೪೧ ॥
ದೇವರಾಜ್ಯೇನ ಕಿಂ ತಸ್ಯ ತಥಾ ಮುಕ್ತಿಪದೇನ ಚ ।
ನ ದೃಷ್ಟಾ ಚೇಜ್ಜಗನ್ಮಾತಾ ರುಕ್ಮಿಣೀ ಕೃಷ್ಣವಲ್ಲಭಾ । ॥ ೪೨ ॥

---

ಧನ, ಧಾನ್ಯಗಳಿಂದ ಸಹಿತನಾಗಿ ಸಕಲೇಷ್ಟಾರ್ಥಗಳನ್ನು ಹೊಂದುವನು. ಮತ್ತು ಅವನಿಗೆ ವಿಷ್ಣುವು ಪ್ರಸನ್ನನಾಗುವನು.

೩೭–೩೯. ಕೃಷ್ಣನ ಪತ್ನಿಯೂ, ಜಗನ್ಮಾತೆಯೂ ಆದ ರುಕ್ಮಿಣಿಯನ್ನು ನೋಡಿದವನಿಗೆ ಬಹುದಾನಗಳಿಂದಲೂ, ವ್ರತನಿಯಮಗಳಿಂದಲೂ ಸಂಪೂರ್ಣ ದಕ್ಷಿಣೆಯುಳ್ಳ ಬಹು ಯಜ್ಞಗಳಿಂದಲೂ ಏನು ಪ್ರಯೋಜನ? ಅವನು ದಾನ, ಹೋಮ, ಜಪಗಳನ್ನು ಮಾಡಿದವನಾಗುವನು.

೪೦–೪೧. ದ್ವಾರವತಿಗೆ ಹೋಗಿ ಕೃಷ್ಣಪತ್ನಿಯಾದ ರುಕ್ಮಿಣಿಯನ್ನು ನೋಡಿದವನು ಅನಾಯಾಸದಿಂದ ಅಷ್ಟಸಿದ್ಧಿಯನ್ನು ಹೊಂದಿದವನಂತಾಗುವನು. ಅವನ ಬದುಕೂ, ಅಭಿಲಾಷೆಗಳೂ ಸಫಲವಾಗುವುವು.

೪೨ ಆ ರುಕ್ಮಿಣಿಯನ್ನು ನೋಡದವನಿಗೆ ದೇವರಾಜ್ಯದಿಂದಲೂ, ಮುಕ್ತಿಸ್ಥಾನದಿಂದಲೂ ಏನು ಪ್ರಯೋಜನ?

ತಸ್ಮಾತ್ಸರ್ವಪ್ರಯತ್ನೇನ ರುಕ್ಮಿಣೀ ಕೃಷ್ಣವಲ್ಲಭಾ ।
ಸದಾರ್ಚನೀಯಾ ಮನುಜೈರ್ದ್ರಷ್ಟವ್ಯಾ ಸರ್ವಕಾಮದಾ ॥ ೪೩ ॥
ವಿಶೇಷತಃ ಪೂಜನೀಯಾ ನವರಾತ್ರೇ ಸದಾಶ್ವಿನೇ ।
ನವಮ್ಯಾಂ ತು ನರೈರ್ಯಸ್ತು ಪೂಜಿತಾ ಹರಿವಲ್ಲಭಾ ॥ ೪೪ ॥
ಸ್ನಾನಗಂಧಾದಿವಸ್ತ್ರೈಸ್ತು ಪ್ರಭೂತಬಲಿಭಿಸ್ತಥಾ ।
ದೀಪವಾದಿತ್ರಘೋಷೇಣ ದೀಪಜಾಗರಣೇ ನ ಚ ।
ತೋಷಿತಾ ಭೀಷ್ಮಕಸುತಾ ಸರ್ವಾನ್ಕಾಮಾನ್ಪ್ರಯಚ್ಛತಿ ॥ ೪೫ ॥
ತಥಾ ದೀಪೋತ್ಸವದಿನೇ ಚತುರ್ದಶ್ಯಾಂ ಸಮಾಹಿತಃ ।
ಪೂಜಯಿತ್ವಾ ಯಥಾ ಶಾಸ್ತ್ರಮೀಪ್ಸಿತಂ ಲಭತೇ ಫಲಂ ॥ ೪೬ ॥
ಮಾಘಮಾಸೇ ಸಿತಾಷ್ಟಮ್ಯಾಂ ಕಂದರ್ಪಜನನೀ ತು ಯೈಃ ।
ಪೂಜಿತಾ ಗಂಧಪುಷ್ಪಾದ್ಯೈರುಪಹಾರೈರನೇಕಶಃ ।
ಸಫಲಂ ಜೀವಿತಂ ತೇಷಾಂ ಸಫಲಾಶ್ಚ ಮನೋರಥಾಃ ॥ ೪೭ ॥
ದ್ವಾದಶ್ಯಾಂ ಚೈತ್ರಮಾಸೇತು ಕೃಷ್ಣೇನ ಸಹರುಕ್ಮಿಣೀಂ ।
ಯೇ ಪಶ್ಯಂತಿ ನರಾ ದೇವೀಂ ರುಕ್ಮಿಣೀಂ ಮಧುಮಾಧವೇ ।
ಕೃಷ್ಣೇನ ಸಹ ಗಚ್ಛಂತೀಂ ಧನ್ಯಾಸ್ತೇ ಮಾನವಾ ಭುವಿ ॥ ೪೮ ॥

---

೪೩. ಆದ್ದರಿಂದ ಮಾನವರು ಯಾವಾಗಲೂ ಸಕಲೇಷ್ಟಾರ್ಥಗಳನ್ನು ಕೊಡುವ ಕೃಷ್ಣಪ್ರಿಯೆಯಾದ ರುಕ್ಮಿಣಿಯನ್ನು ನೋಡಬೇಕು.

೪೪–೪೫. ಆಶ್ವಿನ ಮಾಸದ ನವರಾತ್ರಿಯಲ್ಲಿ ಆಕೆಯನ್ನು ವಿಶೇಷವಾಗಿ ಪೂಜಿಸಬೇಕು. ನವಮಿಯದಿನ ಸ್ನಾನ, ಗಂಧ, ವಸ್ತ್ರ, ಬಲಿ, ಸಂಗೀತ, ವಾದ್ಯ ಘೋಷ, ದೀಪ, ಜಾಗರಣೆಗಳಿಂದ ಸಂತೋಷಗೊಳಿಸಿದವನಿಗೆ ಆಕೆಯನ್ನು ಸಕಲೇಷ್ಟಾರ್ಥಗಳನ್ನು ಕೊಡುವಳು.

೪೬. ಹಾಗೆಯೇ ಚತುರ್ದಶೀ ದೀಪೋತ್ಸವದದಿನ ಅವಳನ್ನು ವಿಧಿಯಂತೆ ಪೂಜಿಸಿದವನು ಇಷ್ಟಾರ್ಥಗಳನ್ನು ಪಡೆಯುವನು.

೪೭. ಮಾಘಮಾಸದ ಶುಕ್ಲಪಕ್ಷಾಷ್ಟಮಿಯದಿನ ಕಾಮಮಾತೆಯಾದ ಆ ರುಕ್ಮಿಣಿಯನ್ನು ಗಂಧ, ಪುಷ್ಪ, ಅನೇಕೋಪಹಾರಗಳಿಂದ ಪೂಜಿಸಿದವನ ಜೀವಿತ ಮತ್ತು ಮನೋರಥಗಳು ಸಫಲವಾಗುವುವು.

೪೮. ಚೈತ್ರಮಾಸದಲ್ಲಿ ಕೃಷ್ಣನೊಡನೆ ರುಕ್ಮಿಣಿಯನ್ನು ದರ್ಶನಮಾಡಿದವರು ಪುಣ್ಯವಂತರು.

ಪುತ್ರಪೌತ್ರಸಮಾಯುಕ್ತಾ ಧನಧಾನ್ಯಸಮನ್ವಿತಾಃ ।
ಜೀವಿತೇ ವ್ಯಾಧಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ ॥ ೪೯ ॥
ಜ್ಯೈಷ್ಠಾಷ್ಟಮ್ಯಾಂ ಸರ್ವೈರ್ಯೈಸ್ತು ಪೂಜಿತಾ ಕೃಷ್ಣವಲ್ಲಭಾ ।
ತೇಷಾಂ ಮನೋರಥಾವಾಪ್ತಿರ್ಜಾಯತೇ ನಾತ್ರ ಸಂಶಯಃ ॥ ೫೦ ॥
ತಥಾ ಭಾದ್ರಪದೇ ಮಾಸಿ ಮಾತುಃ ಪೂಜಾ ಕೃತಾ ತು ಯೈಃ ।
ಸರ್ವಪಾಪವಿನಿರ್ಮುಕ್ತಾ ಯಾಂತಿ ವಿಷ್ಣುಪದೇ ನರಾಃ ॥ ೫೧ ॥
ಕಾರ್ತಿಕೇ ಮಾಸಿ ದ್ವಾದಶ್ಯಾಂ ರುಕ್ಮಿಣೀಂ ಕೃಷ್ಣಸಂಯುತಾಂ ।
ಯೇ ಪಶ್ಯಂತಿ ನರಾಸ್ತೇಷಾಂ ನ ಭಯಂ ವಿದ್ಯತೇ ಕ್ವಚಿತ್ ॥ ೫೨ ॥
ಯಸ್ತ್ವೇಕತ್ರ ಸ್ಥಿತಾಂ ಪಶ್ಯೇದ್ರುಕ್ಮಿಣೀಂ ಕೃಷ್ಣಸಂಯುತಾಂ ।
ಸಫಲಂ ಜೀವಿತಂ ತಸ್ಯ ಹ್ಯಕ್ಷಯಾ ಪುತ್ರಸಂತತಿಃ ।
ಅಕ್ಷಯಂ ಧನಧಾನ್ಯಂ ಚ ಕದಾ ನೈವ ದರಿದ್ರತಾ ॥ ೫೩ ॥
ಯ ಏವಂ ರುಕ್ಮಿಣೀಂ ಪಶ್ಯೇತ್ಪೂಜಯೇತ್ಕೃಷ್ಣವಲ್ಲಭಾಂ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸಗಚ್ಛತಿ ॥ ೫೪ ॥
ಯಃ ಸ್ನಾಯಾತ್ಸರ್ವತೀರ್ಥೇಷು ದಾನಂ ಶಕ್ತ್ಯಾ ದದಾತಿ ಯಃ ।
ತಸ್ಯ ಪುಣ್ಯಫಲಂ ಚೈವ ಲೋಕೇ ಯಜ್ಜಾಯತೇ ದ್ವಿಜಾಃ ।
ಕಥಿತಂ ತದಶೇಷೇಣ ಕಲೌ ಕೃಷ್ಣಸ್ಯ ಸಂಸ್ಥಿತೌ ॥ ೫೫ ॥

---

೪೯. ಅವರು ಪುತ್ರ, ಪೌತ್ರ, ಧನ ಧಾನ್ಯ ಇವುಗಳಿಂದ ಸಹಿತರಾಗುವರು. ಅವರು ತಮ್ಮ ಜೀವಮಾನದಲ್ಲಿ ವ್ಯಾಧಿಮುಕ್ತರಾಗಿ ದುಃಖರಹಿತವಾದ ಸ್ಥಾನಕ್ಕೆ ತೆರಳುವರು.

೫೦. ಜ್ಯೈಷ್ಠಮಾಸದ ಅಷ್ಟಮೀದಿನ ಕೃಷ್ಣಪ್ರಿಯೆಯಾದ ರುಕ್ಮಿಣಿಯನ್ನು ಪೂಜಿಸಿದವರ ಮನೋರಥಗಳು ನಿಶ್ಚಯವಾಗಿಯೂ ಸಿದ್ಧಿಸುವುವು.

೫೧. ಹಾಗೆಯೇ ಭಾದ್ರಪದ ಮಾಸದಲ್ಲಿ ರುಕ್ಮಿಣಿಯನ್ನು ಪೂಜಿಸಿದವರು ಸಮಸ್ತ ಪಾಪಮುಕ್ತರಾಗಿ ವೈಕುಂಠಲೋಕವನ್ನು ಹೊಂದುವರು.

೫೨. ಕಾರ್ತಿಕಮಾಸದ ದ್ವಾದಶೀ ದಿನ ಕೃಷ್ಣನೊಡನೆ ರುಕ್ಮಿಣಿಯನ್ನು ದರ್ಶನ ಮಾಡಿದವರಿಗೆ ಭಯವುಂಟಾಗುವುದಿಲ್ಲ.

೫೩. ಒಂದೆಡೆಯಲ್ಲಿರುವ ಕೃಷ್ಣ ರುಕ್ಮಿಣಿಯರನ್ನು ದರ್ಶನಮಾಡಿದವನಿಗೆ ಸಫಲ ಜೀವನವೂ, ಸ್ಥಿರವಾದ ಪುತ್ರ ಸಂತತಿಯೂ, ಅಕ್ಷಯವಾದ ಧನ ಧಾನ್ಯಗಳೂ ಉಂಟಾಗುವುವು. ಯಾವಾಗಲೂ ಬಡತನವುಂಟಾಗುವುದಿಲ್ಲ.

೫೪. ಹೀಗೆ ರುಕ್ಮಿಣಿಯನ್ನು ದರ್ಶನಗೈದು ಪೂಜಿಸಿದವನು ಸಮಸ್ತ ಪಾಪ ಮುಕ್ತನಾಗಿ ವಿಷ್ಣುಲೋಕವನ್ನು ಸೇರುವನು.

೫೫. ದ್ವಿಜರೆ! ಲೋಕದಲ್ಲಿ ಸಕಲ ತೀರ್ಥಗಳಲ್ಲಿ ಮಿಂದು ಶಕ್ತ್ಯನುಸಾರ ದಾನಮಾಡಿದವನಿಗೆ ಲಭಿಸುವ ಪುಣ್ಯಫಲವು ಕಲಿಯುಗದಲ್ಲಿ ದ್ವಾರವತಿಯಲ್ಲುಂಟಾ ಗುವುದೆಂದು ಹೇಳಿದೆನು.

ದ್ವಾರಾವತೀಂ ವಿನಾ ವಿಪ್ರಾ ಮುಕ್ತಿರ್ನಪ್ರಾಪ್ಯತೇ ಕಲೌ ।
ಪುರಾಣಸಂಹಿತಾಮೇತಾಂ ಕೃತವಾನ್ಬಲಿಬಂಧನಃ ।
ದದೌ ಸ ತು ಪ್ರಸಾದೇನ ಪೂರ್ವಂ ಮಹ್ಯಂ ದ್ವಿಜೋತ್ತಮಾಃ ॥ ೫೬ ॥
ಇಹಾರ್ಥೇ ಚ ಪುರಾ ಪ್ರೋಕ್ತ ಇತಿಹಾಸೋ ದ್ವಿಜೋತ್ತಮಾಃ ।
ಪ್ರದ್ಯುಮ್ನೇನ ಸುಸಂವಾದೇ ಮಾರ್ಕಂಡೇನ ಮಹಾತ್ಮನಾ ॥ ೫೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇಽದ್ವಾರಕಾಮಾಹಾತ್ಮ್ಯೇ
ರುಕ್ಮಿಣೀಪೂಜನಮಾಹಾತ್ಮ್ಯವರ್ಣನಂ ನಾಮ
ದ್ವಾವಿಂಶತಿತಮೋಽಧ್ಯಾಯಃ

---

೫೬. ದ್ವಿಜೋತ್ತಮರೆ! ಕಲಿಯುಗದಲ್ಲಿ ದ್ವಾರಾವತಿಯನ್ನು ಬಿಟ್ಟರೆ ಮೋಕ್ಷವು ದೊರೆಯುವುದಿಲ್ಲ. ಬಲಿಯನ್ನು ನಿಗ್ರಹಿಸಿದ ವಾಮನನು ಈ ಪುರಾಣವನ್ನು ರಚಿಸಿ ಅನುಗ್ರಹಿಸಿ ನನಗೆ ಕೊಟ್ಟನು.

೫೭. ಈ ವಿಷಯದಲ್ಲಿ ಹಿಂದೆ ಮಹಾತ್ಮನಾದ ಮಾರ್ಕಂಡೇಯನು ಪ್ರದ್ಯುಮ್ನನೊಡನೆ ಮಾತಾಡುವಾಗ ಒಂದು ಇತಿಹಾಸವನ್ನು ಹೇಳಿರುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ರುಕ್ಮಿಣೀಪೂಜನಮಾಹಾತ್ಮ್ಯವರ್ಣನವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ತ್ರಯೋವಿಂಶತಿತಮೋಽಧ್ಯಾಯಃ

### ದ್ವಾರಕಾಗಮನತುಲಸೀಧಾರಣಮಾಹಾತ್ಮ್ಯವರ್ಣನಂ

ಮಾರ್ಕಂಡೇಯ ಉವಾಚ :—

ದ್ವಾರಕಾಯಾಶ್ಚ ಮಾಹಾತ್ಮ್ಯಮಿಂದ್ರದ್ಯುಮ್ನ ನಿಬೋಧ ಮೇ ।
ಕಲೌ ನಿವಸತೇ ಯತ್ರ ಕ್ಲೇಶಹಾ ರುಕ್ಮಿಣೀಪತಿಃ ॥ ೧ ॥
ಕಲೌ ಕೃಷ್ಣಸ್ಯ ಮಾಹಾತ್ಮ್ಯಂ ಯೇ ಶೃಣ್ವಂತಿ ಪಠಂತಿ ಚ ।
ನ ತೇಷಾಂ ಜಾಯತೇ ವಾಸೋ ಯಮಲೋಕೇ ಯುಗಾಷ್ಟಕಂ ॥ ೨ ॥
ನಿತ್ಯಂ ಕೃಷ್ಣಕಥಾ ಯಸ್ಯ ಪ್ರಾಣಾದಪಿ ಗರೀಯಸೀ ।
ನ ತಸ್ಯ ದುರ್ಲಭಂ ಕಿಂಚಿದಿಹ ಲೋಕೇ ಪರಂ ನೃಪ ॥ ೩ ॥
ಮನ್ವಂತರಸಹಸ್ರೈಃ ಕಾಶೀವಾಸೇನ ಯತ್ಫಲಂ ।
ತತ್ಫಲಂ ದ್ವಾರಕಾವಾಸೇ ವಸತಾಂ ಪಂಚಭಿರ್ದಿನೈಃ ॥ ೪ ॥

---

### ಕನ್ನಡದ ಅನುವಾದ

### ದ್ವಾರಕಾಗಮನತುಲಸೀಧಾರಣಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಇಂದ್ರದ್ಯುಮ್ನ ! ನೀನು ನನ್ನಿಂದ ದ್ವಾರಕೆಯ ಮಾಹಾತ್ಮ್ಯವನ್ನು ತಿಳಿದುಕೊ. ಅಲ್ಲಿ ಕಲಿಯುಗದಲ್ಲಿ ಯಾವಾಗಲೂ ಕ್ಲೇಶನಿವಾರಕನಾದ ರುಕ್ಮಿಣೀರಮಣನು ವಾಸವಾಗಿರುತ್ತಾನೆ.

೨. ಕಲಿಯುಗದಲ್ಲಿ ಕೃಷ್ಣನ ಮಾಹಾತ್ಮ್ಯವನ್ನು ಕೇಳುವವರಿಗೂ ಹೇಳುವವರಿಗೂ ಎಂಟು ಯುಗಗಳವರೆಗೆ ಯಮಲೋಕವಾಸವುಂಟಾಗುವುದಿಲ್ಲ.

೩. ದೊರೆಯೆ ! ಕೃಷ್ಣನ ಕಥೆಯು ಯಾವನಿಗೆ ಪ್ರಾಣಕ್ಕಿಂತಲೂ ಉತ್ತಮವಾದದೊ ಅವನಿಗೆ ಇಹಪರಲೋಕಗಳಲ್ಲಿ ದುರ್ಲಭವಾದುದು ಯಾವುದೂ ಇಲ್ಲ.

೪. ಕಾಶಿಯಲ್ಲಿ ಸಾವಿರ ಮನ್ವಂತರ ಕಾಲ ವಾಸಮಾಡುವುದರಿಂದುಂಟಾಗುವ ಫಲವು ದ್ವಾರಕೆಯಲ್ಲಿ ಐದು ದಿನಗಳು ವಾಸಮಾಡುವುದರಿಂದುಂಟಾಗುವುದು.

ಕಲೌ ನಿವಸತೇ ಯಸ್ತು ಶ್ವಪಚೋ ದ್ವಾರಕಾಂ ಯದಿ ।
ಯತೀನಾಂ ಗತಿಮಾಪ್ನೋತಿ ಪ್ರಾಹ ಹ್ಯೇವಂ ಪ್ರಜಾಪತಿಃ ॥ ೫ ॥
ದ್ವಾರಕಾಂ ಗಂತುಕಾಮಂ ಯಃ ಪ್ರತ್ಯಹಂ ಕುರುತೇ ನರಃ ।
ಫಲಮಾಪ್ನೋತಿ ಮನುಜಃ ಕುರುಕ್ಷೇತ್ರಸಮುದ್ಭವಂ ॥ ೬ ॥
ಸೋಮಗ್ರಹೇ ಚ ಯತ್ಪ್ರೋಕ್ತಂ ಯತ್ಫಲಂ ಸೋಮನಾಯಕೇ ।
ದೃಷ್ಟ್ವಾ ತತ್ಫಲಮಾಪ್ನೋತಿ ದ್ವಾರವತ್ಯಾಂ ಜನಾರ್ದನಂ ॥ ೭ ॥
ಪುಷ್ಕರೇ ಕಾರ್ತಿಕೀಂ ಕೃತ್ವಾ ಯತ್ಫಲಂ ವರ್ಷಕೋಟಿಭಿಃ ।
ತತ್ಫಲಂ ದ್ವಾರಕಾವಾಸೇ ದಿನೇನೈಕೇನ ಜಾಯತೇ ॥ ೮ ॥
ದ್ವಾರಕಾಯಾಂ ದಿನೈಕೇನ ದೃಷ್ಟೇ ದೇವಕಿನಂದನೇ ।
ಫಲಂ ಕೋಟಿಗುಣಂ ಜ್ಞೇಯಮತ್ರ ಲಕ್ಷಶತೋದ್ಭವಂ ॥ ೯ ॥
ಕಲೌ ನಿವಸತಾಂ ಭೂಪ ಧನ್ಯಾಸ್ತೇಷಾಂ ಮನೋರಥಾಃ ।
ಕೃಷ್ಣಸ್ಯ ದರ್ಶನೇ ನಿತ್ಯಂ ದ್ವಾರಕಾಗಮನೇ ಮತಿಃ ॥ ೧೦ ॥
ಏಕಾಮಪಿ ದ್ವಾದಶೀಂ ತು ಯಃ ಕರೋತಿ ನೃಪೋತ್ತಮ ।
ಕೃಷ್ಣಸ್ಯ ಸನ್ನಿಧೌ ಭೂಪ ದ್ವಾರಕಾಯಾಃ ಫಲಂ ಶೃಣು ॥ ೧೧ ॥

---

೫. ಕಲಿಯುಗದಲ್ಲಿ ಚಂಡಾಲನು ದ್ವಾರಕೆಯಲ್ಲಿ ವಾಸಮಾಡಿದರೆ ಅವನು ಯತಿಗಳಿಗೆ ದೊರಕುವ ಉತ್ತಮಗತಿಯನ್ನು ಪಡೆಯುವನೆಂದು ಬ್ರಹ್ಮನು ಹೇಳಿರುವನು.

೬. ಮಾನವನು ಪ್ರತಿದಿನವೂ ದ್ವಾರಕೆಗೆ ಹೋಗಲು ಮನಸ್ಸು ಮಾಡಿದರೆ ಕುರುಕ್ಷೇತ್ರಯಾತ್ರೆಯ ಫಲವನ್ನು ಹೊಂದುವನು.

೭. ಚಂದ್ರಗ್ರಹಣ ಕಾಲದಲ್ಲಿ ಸೋಮೇಶ್ವರನನ್ನು ದರ್ಶನಮಾಡಿದ ಫಲವು ದ್ವಾರವತಿಯಲ್ಲಿ ಜನಾರ್ದನನ ದರ್ಶನದಿಂದ ಲಭಿಸುವುದು.

೮. ಪುಷ್ಪ ಕೋಟಿ ಕ್ಷೇತ್ರದಲ್ಲಿ ಒಂದು ಕೋಟಿ ವರ್ಷಕಾಲ ಕೃತ್ತಿಕೋತ್ಸವ ಮಾಡಿದ ಫಲವು ಒಂದು ದಿನ ದ್ವಾರಕೆಯಲ್ಲಿ ವಾಸಮಾಡುವುದರಿಂದುಂಟಾಗುವುದು.

೯. ದ್ವಾರಕೆಯಲ್ಲಿ ಒಂದು ದಿನ ಕೃಷ್ಣನನ್ನು ದರ್ಶನಮಾಡಿದರೆ ಕೋಟಿಯಷ್ಟು ಫಲವು ಹೆಚ್ಚಾಗುವುದು.

೧೦. ಕಲಿಯುಗದಲ್ಲಿ ಯಾವಾಗಲೂ ದ್ವಾರಕೆಗೆ ಹೋಗಿ ಕೃಷ್ಣನನ್ನು ದರ್ಶನ ಮಾಡಬೇಕೆಂದು ಆಲೋಚಿಸುತ್ತ ವಾಸಿಸುವರ ಅಭಿಲಾಷೆಗಳು ಧನ್ಯವಾದುವು.

೧೧. ದ್ವಾರಕೆಯಲ್ಲಿ ಕೃಷ್ಣನ ಹತ್ತಿರ ಒಂದು ದ್ವಾದಶಿಯನ್ನಾಚರಿಸುವವನ ಫಲವನ್ನು ಕೇಳು.

ಧನ್ಯಾಸ್ತೇ ಕೃತಕೃತ್ಯಾಸ್ತೇ ತೇಜಸಾ ಲೋಕಪಾವನಾಃ ।
ದೃಷ್ಟಂ ಕೃಷ್ಣಮುಖಂ ಯೈಸ್ತು ಪಾಪಕೋಟ್ಯಯುತಾಪಹಂ ॥ ೧೨ ॥
ಯತ್ಫಲಂ ವ್ರತಸಂಯುಕ್ತೈರ್ವಾಸರೈಃ ಕೃಷ್ಣಸಂಯುತೈಃ ।
ಯಜ್ಞೈರ್ದಾನೈರ್ಬೃಹದ್ಭಿಶ್ಚ ದ್ವಾರಕಾಯಾಂ ತಥೈಕಯಾ ॥ ೧೩ ॥
ಕ್ಷೀರಸ್ನಾನಂ ಪ್ರಕುರ್ವಂತಿ ಯೇ ನರಾಃ ಕೃಷ್ಣಮೂರ್ಧನಿ ।
ಶತಾಶ್ವಮೇಧಜಂ ಪುಣ್ಯಂ ಬಿಂದುನಾ ಬಿಂದುನಾ ಸ್ಮೃತಂ ॥ ೧೪ ॥
ದಧಿಕ್ಷೀರಾದ್ದಶಗುಣಂ ಘೃತಂ ದಧ್ನೋ ದಶೋತ್ತರಂ ।
ಘೃತಾದ್ದಶಗುಣಂ ಕ್ಷೌದ್ರಂ ಕ್ಷೌದ್ರಾದ್ದಶಗುಣೋತ್ತರಂ ॥ ೧೫ ॥
ಪುಷ್ಪೋದಕಂ ಚ ರತ್ನೋದಂ ವರ್ಧನಂ ಚ ದಶೋತ್ತರಂ ।
ಮಂತ್ರೋದಕಂ ಚ ಗಂಧೋದಂ ತಥೈವ ನೃಪಸತ್ತಮ ॥ ೧೬ ॥
ಇಕ್ಷೋ ರಸೇನ ಸ್ನಪನಂ ಶತವಾಜಿಮುಖೈಸ್ಸಮಂ ।
ತಥೈವ ತೀರ್ಥನೀರಂ ಸ ಫಲಂ ಯಚ್ಛತಿ ಭೂಮಿಪ ॥ ೧೭ ॥
ಕೃಷ್ಣಂ ಸ್ನಾನಾರ್ದ್ರಗಾತ್ರಂ ಚ ವಸ್ತ್ರೇಣ ಪರಿಮಾರ್ಜತಿ ।
ತಸ್ಯ ಲಕ್ಷಾರ್ಜಿತಸ್ಯಾಪಿ ಭವೇತ್ಪಾಪಸ್ಯ ಮಾರ್ಜನಂ ॥ ೧೮ ॥

---

೧೨. ಅನೇಕ ಕೋಟಿ ಪಾಪಗಳನ್ನು ನಿವಾರಿಸುವ ಕೃಷ್ಣನ ಮುಖವನ್ನು ನೋಡಿದ ಮಾನವರು ಧನ್ಯರೂ, ಕೃತಕೃತ್ಯರೂ ಲೋಕವನ್ನು ಪವಿತ್ರಗೊಳಿಸುವವರೂ ಆಗುವರು.

೧೩. ಅನೇಕ ದಿನ ವ್ರತಮಾಡುವುದರಿಂದಲೂ, ಯಜ್ಞಗಳಿಂದಲೂ, ಮಹಾ ದಾನಗಳಿಂದಲೂ ಆಗುವ ಫಲವು ದ್ವಾರಕೆಯಲ್ಲಿ ಒಂದನ್ನು ಅನುಷ್ಠಾನ ಮಾಡುವುದ ರಿಂದಲೆ ಸಂಭವಿಸುವುದು.

೧೪. ಕೃಷ್ಣನ ಮಸ್ತಕದಲ್ಲಿ ಕ್ಷೀರಾಭಿಷೇಕ ಮಾಡುವ ಮಾನವರಿಗೆ ಒಂದೊಂದು ನೂರು ಅಶ್ವಮೇಧಯಾಗ ಮಾಡಿದ ಫಲವು ದೊರೆಯುವುದು.

೧೫. ದಧಿಸ್ನಾನದಿಂದ ಹಾಲಿನ ಸ್ನಾನಕ್ಕಿಂತ ಹತ್ತರಷ್ಟು, ಘೃತಸ್ನಾನದಿಂದ ದಧಿಸ್ನಾನದ ಹತ್ತರಷ್ಟು, ಜೇನುತುಪ್ಪದ ಸ್ನಾನದಿಂದ ಘೃತಸ್ನಾನದ ಹತ್ತರಷ್ಟು ಫಲವು ಲಭಿಸುವುದು.

೧೬. ಹಾಗೆಯೇ ಪುಷ್ಪೋದಕ, ರತ್ನೋದಕ, ಮಂತ್ರೋದಕ, ಗಂಧೋದಕ ಇವುಗಳ ಸ್ನಾನದಿಂದ ಒಂದೊಂದಕ್ಕಿಂತ ಹತ್ತರಷ್ಟು ಹೆಚ್ಚು ಫಲವು ದೊರೆಯುವುದು.

೧೭. ಕಬ್ಬಿನ ರಸ, ತೀರ್ಥಜಲ ಇವುಗಳ ಸ್ನಾನದಿಂದ ನೂರು ಅಶ್ವಮೇಧ ಯಾಗಗಳ ಫಲವುಂಟಾಗುವುದು.

೧೮. ಅಭಿಷೇಕದಿಂದ ಒದ್ದೆಯಾದ ಕೃಷ್ಣನನ್ನು ವಸ್ತ್ರದಿಂದ ಒರಿಸುವವನ ಲಕ್ಷ ಸಂಖ್ಯೆಯ ಪಾಪವೂ ಪರಿಹಾರವಾಗುವುದು.

ಸ್ನಾಪಯಿತ್ವಾ ಜಗನ್ನಾಥಂ ಪುಷ್ಪಮಾಲಾವರೋಹಣಂ ।
ಕುರುತೇ ಪ್ರತಿಪುಷ್ಪಂತು ಸ್ವರ್ಣನಿಷ್ಕಾಯುತಂ ಫಲಂ ॥ ೧೯ ॥
ಸ್ನಾನಕಾಲೇ ತು ದೇವಸ್ಯ ಶಂಖಾದೀನಾಂ ತು ವಾದನಂ ।
ಕುರುತೇ ಬ್ರಹ್ಮಲೋಕೇ ತು ವಸತೇ ಬ್ರಹ್ಮವಾಸರಂ ॥ ೨೦ ॥
ಸ್ನಾನಕಾಲೇ ಸ ಕೃಷ್ಣಸ್ಯ ಪಠೇನ್ನಾಮಸಹಸ್ರಕಂ ।
ಪ್ರತ್ಯಕ್ಷರಂ ಲಭೇತ್ಪ್ರೇಷ್ಟಂ ಕಪಿಲಾಗೋಶತೋದ್ಭವಂ ॥ ೨೧ ॥
ಫಲಮೇತನ್ಮಹೀಪಾಲ ಗೀತಾಯಾಃ ಪರಿಕೀರ್ತಿತಂ ।
ಗಜೇಂದ್ರಮೋಕ್ಷಣೇನೈವಂ ಸ್ತವರಾಜೇನ ಕೀರ್ತಿತಂ ॥ ೨೨ ॥
ಸ್ತವೈರ್ಋಷಿಕೃತೈರನ್ಯೈಃ ಪಠಿತೈಶ್ಚ ನರಾಧಿಪ ।
ತೋಷಮಾಪ್ನೋತಿ ದೇವೇಶಃ ಸರ್ವಾರ್ಥ ಕಾಮಾನ್ಪ್ರಯಚ್ಛತಿ ॥ ೨೩ ॥
ಕಿಂಪುನರ್ವೇದಪಾಠಂ ತು ಸ್ನಾನಕಾಲೇ ಕರೋತಿ ಯಃ ।
ತಸ್ಯ ಯಲ್ಲಭತೇ ಪುಣ್ಯಂ ನ ಜ್ಞಾತಂ ನರನಾಯಕ ॥ ೨೪ ॥
ಸ್ನಾನಕಾಲೇ ಚ ಸಂಪ್ರಾಪ್ತೇ ಕೃಷ್ಣಸ್ಯಾಗ್ರೇ ತು ನರ್ತನಂ ।
ಗೀತಂ ಚೈವ ಪುನಸ್ತತ್ರ ಸ್ತವನಂ ವದನೇನ ಹಿ ॥ ೨೫ ॥
ಸ್ನಾನಕಾಲೇ ತು ಕೃಷ್ಣಸ್ಯ ಜಯಶಬ್ದಂ ಕರೋತಿ ಯಃ ।
ಕರತಾಲಸಮಾಯುಕ್ತಂ ಗೀತನೃತ್ಯಂ ಕರೋತಿ ಚ ॥ ೨೬ ॥

---

೧೯. ಕೃಷ್ಣನನ್ನು ಅಭಿಷೇಕ ಮಾಡಿ ಹೂವಿನಿಂದ ಅಲಂಕಾರ ಮಾಡಿದರೆ ಪ್ರತಿ ಪುಷ್ಪದಿಂದಲೂ ಹತ್ತುಸಾವಿರ ನಾಣ್ಯಗಳನ್ನು ಸಮರ್ಪಿಸಿದ ಫಲವು ದೊರೆಯುವುದು.

೨೦. ಕೃಷ್ಣನ ಅಭಿಷೇಕ ಕಾಲದಲ್ಲಿ ಶಂಖ ಮೊದಲಾದುವುಗಳನ್ನು ಊದುವವನು ಬ್ರಹ್ಮನ ದಿನದವರೆಗೆ ಬ್ರಹ್ಮಲೋಕದಲ್ಲಿ ವಾಸಿಸುವನು.

೨೧. ಅಭಿಷೇಕ ಸಮಯದಲ್ಲಿ ಸಹಸ್ರನಾಮಗಳನ್ನು ಪಠಿಸುವವನು ಪ್ರತ್ಯಕ್ಷರದಲ್ಲಿಯೂ ನೂರು ಕಪಿಲಗೋವನ್ನು ದಾನಮಾಡಿದ ಫಲವನ್ನು ಹೊಂದುವನು.

೨೨. ಗೀತೆ, ಗಜೇಂದ್ರಮೋಕ್ಷ, ಸ್ತವರಾಜ ಇವುಗಳನ್ನು ಪಠಿಸುವುದರಿಂದ ಇದೇ ಫಲವು ದೊರೆಯುವುದು.

೨೩. ಋಷಿಪ್ರೋಕ್ತಗಳಾದ ಇತರ ಸ್ತೋತ್ರಗಳನ್ನು ಪಠಿಸುವುದರಿಂದಲೂ ಕೃಷ್ಣನು ಸಂತುಷ್ಟನಾಗಿ ಇಷ್ಟಾರ್ಥಗಳನ್ನು ಕೊಡುವನು.

೨೪. ದೊರೆಯೆ! ಕೃಷ್ಣನ ಅಭಿಷೇಕ ಕಾಲದಲ್ಲಿ ವೇದವನ್ನು ಪಠಿಸಿದವನಿಗೆ ಲಭಿಸುವ ಫಲವು ಎಷ್ಟೆಂದು ಎಣಿಸಲು ಶಕ್ಯವಿಲ್ಲ.

೨೫—೨೬. ಆ ಕೃಷ್ಣನ ಅಭಿಷೇಕ ಕಾಲದಲ್ಲಿ ಅವನ ಮುಂದೆ ನರ್ತನ, ಗಾನ, ಸ್ತೋತ್ರ, ಜಯಶಬ್ದ, ಕರತಾಲಸಹಿತ ಗೀತನೃತ್ಯಗಳೂ, ವಿವಿಧ ಚೇಷ್ಟೆ, ನಗು, ಜಲ್ಪನ ಇವುಗಳನ್ನು ಮಾಡುವವನು ತಿರುಗಿ ಜನಿಸುವುದಿಲ್ಲ.

ತತ್ರ ಚೇಷ್ಟಾಂ ಪ್ರಕುರ್ವಾಣೋ ಹಸತೇ ಜಲ್ಪತೇ ಪಿ ವಾ ।
ಮುಕ್ತಂ ತೇನ ಪರಂ ಮಾತುರ್ಯೋನಿಯಂತ್ರಸ್ಯ ನಿರ್ಗಮಮ್ ॥ ೨೭ ॥
ನೋತ್ತಾನಶಾಯೀ ಭವತಿ ಮಾತುರಂಕೇ ನರೇಶ್ವರ ।
ಗುಣಾನ್ವತತಿ ಕೃಷ್ಣಸ್ಯ ಯಃ ಕಾಲೇ ಸ್ನಾನಕರ್ಮಣಃ ॥ ೨೮ ॥
ಚಂದನಾಗರುಮಿಶ್ರೇಣ ಕುಂಕುಮೇನ ಸುಗಂಧಿನಾ ।
ವಿಲೇಪಯತಿ ಯಃ ಕೃಷ್ಣಂ ಕರ್ಪೂರಮೃಗನಾಭಿನಾ ।
ಕಲ್ಪಂತು ಭವನೇ ವಿಷ್ಣೋರ್ವಸತೇ ಪಿತೃಭಿಃ ಸಹ ॥ ೨೯ ॥
ಪ್ರತ್ಯೇಕಂ ಚಂದನಾದೀನಾಮಿಂದ್ರದ್ಯುಮ್ನೇನ ಚಾನ್ಯಥಾ ।
ನಾನಾದೇಶಸಮುದ್ಭೂತೈಃ ಸುವಸ್ತ್ರೈಶ್ಚ ಸುಕೋಮಲೈಃ ॥ ೩೦ ॥
ಧೂಪಯಿತ್ವಾ ಸುಗಂಧೈಶ್ಚ ಯೋ ಧೂಪಯತಿ ಮಾನವಃ ।
ಮನ್ವಂತರಾಣಿ ವಸತೇ ತತ್ಸಂಖ್ಯಾನಿ ಹರೇರ್ಗೃಹೇ ॥ ೩೧ ॥
ಸ್ವಶಕ್ತ್ಯಾದೇವದೇವೇಶಂ ಭೂಷಣೈರ್ಭೂಷಯಂತಿ ಚ ।
ಹೇಮಜೈರತುಲೈಃ ಶುಭ್ರೈರ್ಮಣಿಜೈಶ್ಚ ಸುಶೋಭನೈಃ ॥ ೩೨ ॥

---

೨೭-೨೮. ಆ ಕೃಷ್ಣನ ಸ್ನಾನ ಸಮಯದಲ್ಲಿ ಆತನ ಗುಣಗಳನ್ನು ಹೇಳುವವನು ತಾಯಿಯ ತೊಡೆಯ ಮೇಲೆ ಮೇಲ್ಮುಖನಾಗಿ ಮಲಗುವುದಿಲ್ಲ.

೨೯. ಗಂಧ, ಅಗರು, ಕುಂಕುಮ ಇವುಗಳಿಂದ ಸಹಿತವಾದ ಕಸ್ತೂರಿಯನ್ನು ಕೃಷ್ಣನಿಗೆ ಲೇಪನ ಮಾಡುವವನು ಕಲ್ಪಕಾಲದವರೆಗೆ ಪಿತೃಗಳೊಡನೆ ವಿಷ್ಣುಲೋಕದಲ್ಲಿ ವಾಸಿಸುವನು.

೩೦-೩೧. ಇಂದ್ರದ್ಯುಮ್ನನ ಚಂದನಾದಿಗಳನ್ನು ಪ್ರತ್ಯೇಕವಾಗಿ ಅರ್ಪಿಸುವವನಿಗೂ ಹೀಗೆಯೇ ಫಲವುಂಟಾಗುವುದು. ನಾನಾ ದೇಶಗಳಲ್ಲಾದ ಮೃದುವಾದ ವಸ್ತ್ರಗಳನ್ನು ಅರ್ಪಿಸಿ ಸುಗಂಧ ಧೂಪವನ್ನಿತ್ತ ಮಾನವನು ಆ ಬಟ್ಟೆಗಳ ಸಂಖ್ಯೆಯಷ್ಟು ಮನ್ವಂತರಕಾಲ ವಿಷ್ಣುಲೋಕದಲ್ಲಿ ವಾಸಿಸುವನು.

೩೨-೩೫. ತಮ್ಮ ಶಕ್ತ್ಯನುಸಾರ ಕೃಷ್ಣನನ್ನು ಸುವರ್ಣ ಮತ್ತು ರತ್ನಗಳ ಮನೋಹರವಾದ ಒಡವೆಗಳಿಂದ ಅಲಂಕರಿಸುವವನಿಗುಂಟಾಗುವ ಫಲವನ್ನು ಕೃಷ್ಣನ ಹೊರತು ರುದ್ರ, ಇಂದ್ರ ಮುನಿಗಳರಿಯುವುದಿಲ್ಲ ಕಲಿದೋಷವನ್ನು ಪರಿಹರಿಸುವ ಶ್ರೀ ಕೃಷ್ಣನನ್ನು ಕೇತಕೀ, ತುಲಸಿ, ಜಾಜಿ ಹೂವುಗಳಿಂದಲೂ, ಆ ದೇಶದಲ್ಲಿ ಹುಟ್ಟಿದ

ತೇಷಾಂ ಫಲಂ ಮಹಾರಾಜ ರುದ್ರಾಕ್ಷ ವಾಸವಾದಯಃ ॥ ೩೩ ॥
ಜಾನಂತಿ ಮುನಯೋ ನೈವ ವರ್ಜಯಿತ್ವಾ ತು ಮಾಧವಂ ।
ಯೇಽರ್ಚಯಂತಿ ಜಗನ್ನಾಥಂ ಕೃಷ್ಣಂ ಕಲಿಮಲಾಪಹಂ ।
ಕೇತಕೀತುಲಸೀಪತ್ರೈಃ ಪುಷ್ಪೈರ್ಮಾಲತಿಸಂಭವೈಃ ॥ ೩೪ ॥
ತದ್ದೇಶಸಂಭವೈಶ್ಚಾನ್ಯೈರ್ಭೂರಿಭಿಃ ಕುಸುಮೈರ್ನೃಪ ।
ಏಕೈಕಂ ನೃಪಶಾರ್ದೂಲ ರಾಜಸೂಯಸಮಂ ಸ್ಮೃತಂ ॥ ೩೫ ॥
ಯೇ ಕುರ್ವಂತಿ ನರಾಃ ಪೂಜಾಂ ಸ್ವಶಕ್ತ್ಯಾ ರುಕ್ಮಿಣೀಪತೇಃ ।
ಕ್ರೀಡಂತಿ ವಿಷ್ಣುಲೋಕೇ ತೇ ಮನ್ವಂತರಶತಂ ನರಾಃ ॥ ೩೬ ॥
ಯಃ ಪುನಸ್ತುಲಸೀಪತ್ರೈಃ ಕೋಮಲೈರ್ಮಂಜರೀಯುತೈಃ ।
ಪೂಜಯಚ್ಛ್ರದ್ಧಯಾ ಯತ್ತು ಕೃಷ್ಣಂ ದೇವಕಿನಂದನಂ ॥ ೩೭ ॥
ಯಾ ಗತಿರ್ಯೋಗಯುಕ್ತಾನಾಂ ಯಾ ಗತಿರ್ಯೋಗಶಾಲಿನಾಂ ।
ಯಾ ಗತಿರ್ದಾನಶೀಲಾನಾಂ ಯಾ ಗತಿಸ್ತೀರ್ಥಸೇವಿನಾಂ ॥ ೩೮ ॥
ಯಾ ಗತಿರ್ಮಾತೃಭಕ್ತಾನಾಂ ದ್ವಾದಶೀಂ ವೇಧವರ್ಜಿತಾಂ ।
ಕುರ್ವತಾಂ ಜಾಗರಂ ವಿಷ್ಣೋರ್ನೃತ್ಯತಾಂ ಗಾಯತಾಂ ಫಲಂ ॥ ೩೯ ॥
ವೈಷ್ಣವಾನಾಂ ತು ಭಕ್ತಾನಾಂ ಯತ್ಫಲಂ ವೇದವಾದಿನಾಂ ।
ಪಠತಾಂ ವೈಷ್ಣವಂ ಶಾಸ್ತ್ರಂ ವೈಷ್ಣವಾನಾಂ ತು ಯಚ್ಛತಾಂ ॥ ೪೦ ॥
ತುಲಸೀಮೂಲಯಾ ಕೃಷ್ಣಃ ಪೂಜಿತೋ ರುಕ್ಮಿಣೀಪತಿಃ ।
ಫಲಮೇತನ್ಮಹೀಪಾಲ ಯಚ್ಛತೇ ನಾತ್ರ ಸಂಶಯಃ ॥ ೪೧ ॥

---

ಇತರ ಕುಸುಮಗಳಿಂದಲೂ ಪೂಜಿಸಿದರೆ ಒಂದೊಂದು ಪುಷ್ಪವೂ ರಾಜಸೂಯ ಯಾಗಕ್ಕೆ ಸಮವಾದ ಪುಣ್ಯವನ್ನೀಯುವುದು.

೩೬. ತನ್ನ ಶಕ್ತ್ಯನುಸಾರ ಕೃಷ್ಣನ ಪೂಜೆಯನ್ನು ಮಾಡುವವರು ನೂರು ಮನ್ವಂತರಗಳ ವರೆಗೆ ವಿಷ್ಣುಲೋಕದಲ್ಲಿ ವಿನೋದಪಡುತ್ತಾರೆ.

೩೭–೪೧. ಮೃದು ತೆನೆಗಳಿಂದ ಕೂಡಿದ ತುಲಸೀದಳಗಳಿಂದ ದೇವಕೀ ಪುತ್ರನಾದ ಕೃಷ್ಣನನ್ನು ಶ್ರದ್ಧೆಯಿಂದ ಪೂಜಿಸುವವನಿಗೆ ಯೋಗಿಗಳಿಗೂ, ಯೋಗಶಾಲಿಗಳಿಗೂ, ದಾನಿಗಳಿಗೂ, ತೀರ್ಥವನ್ನು ಸೇವಿಸುವವರಿಗೂ, ಮಾತೃ ಭಕ್ತರಿಗೂ, ವೇಧರಹಿತವಾದ ದ್ವಾದಶೀ ದಿನ ಜಾಗರಣೆಗೈಯ್ಯುವವರಿಗೂ, ವಿಷ್ಣುವಿನ ಮುಂದೆ ನೃತ್ಯಗಾನ ಮಾಡುವ ವಿಷ್ಣು ಭಕ್ತರಿಗೂ, ವೇದಪಾಠಕರಿಗೂ, ವೈಷ್ಣವ ಶಾಸ್ತ್ರವನ್ನು ಪಠಿಸುವವರಿಗೂ, ವೈಷ್ಣವರಿಗೆ ದಾನಮಾಡುವವರಿಗೂ ಕೊಡುವ ಫಲವನ್ನು ಶ್ರೀ ಕೃಷ್ಣನು ಕೊಡುವನು.

ಯಥಾ ಲಕ್ಷ್ಮೀಃ ಪ್ರಿಯಾ ವಿಷ್ಣೋಸ್ತುಲಸೀ ಚ ತತೋಽಧಿಕಾ ।
ದ್ವಾರಕಾಯಾಂ ಸಮುತ್ಪನ್ನಾ ವಿಶೇಷೇಣ ಫಲಾಧಿಕಾ ॥ ೪೨ ॥
ಯತ್ರ ತತ್ರ ಸ್ಥಿತೋ ವಿಷ್ಣುಸ್ತುಲಸೀದಲಮಾಲಯಾ ।
ಪೂಜಿತೋ ದ್ವಾರಕಾತುಲ್ಯಂ ಪುಣ್ಯಂ ಸ ಯಚ್ಛತೇ ಕಲೌ ॥ ೪೩ ॥
ಯೋಽರ್ಚಯೇತ್ಕೇತಕೀಪತ್ರೈಃ ಕೃಷ್ಣಂ ಕಲಿಮಲಾಪಹಂ ।
ಪತ್ರೇ ಪತ್ರೇಽಶ್ವಮೇಧಸ್ಯ ಫಲಂ ಯಚ್ಛತಿ ಭೂಭುಜ ॥ ೪೪ ॥
ಯೋಽರ್ಚಯೇನ್ಮಾಲತೀಪುಷ್ಪೈಃ ಕೃಷ್ಣಂ ತ್ರಿಭುವನೇಶ್ವರಂ ।
ತೇನಾಪ್ತಂ ನಾಸ್ತಿ ಸಂದೇಹೋ ಯತ್ಫಲಂ ದುರ್ಲಭಂ ಹರೇಃ ॥ ೪೫ ॥
ಋತುಕಾಲೋದ್ಭವೈಃ ಪುಷ್ಪೈರ್ಯೋಽರ್ಚಯೇದ್ರುಕ್ಮಿಣೀಪತಿಂ ।
ಸರ್ವಾನ್ಕಾಮಾನವಾಪ್ನೋತಿ ದುರ್ಲಭಾನ್ದೇವಮಾನುಷೈಃ ॥ ೪೬ ॥
ಕೃಷ್ಣೇನಾಗುರುಣಾ ಕೃಷ್ಣಂ ಧೂಪಯಂತಿ ಕಲೌ ಯುಗೇ ।
ಸಕರ್ಪೂರೇಣ ರಾಜೇಂದ್ರ ಕೃಷ್ಣತುಲ್ಯಾ ಭವಂತಿ ತೇ ॥ ೪೭ ॥

---

೪೨. ವಿಷ್ಣುವಿಗೆ ಲಕ್ಷ್ಮಿಯು ಹೇಗೆ ಪ್ರಿಯಳೊ, ತುಳಸಿಯು ಅದಕ್ಕಿಂತ ಹೆಚ್ಚು ಪ್ರೀತಿಪಾತ್ರಳು. ದ್ವಾರಕೆಯಲ್ಲಿ ಹುಟ್ಟಿದ ತುಳಸಿಯು ಹೆಚ್ಚು ಫಲವನ್ನು ಕೊಡುವುದು.

೪೩. ಕಲಿಯುಗದಲ್ಲಿ ಎಲ್ಲಿಯಾದರೂ ವಿಷ್ಣುವನ್ನು ತುಲಸೀದಳಗಳ ಮಾಲೆಯಿಂದ ಪೂಜಿಸಿದರೆ ಆ ವಿಷ್ಣುವು ದ್ವಾರಕೆಯಲ್ಲಿ ಪೂಜಿಸಿದಂತೆ ಪುಣ್ಯವನ್ನು ಕೊಡುವನು.

೪೪. ದೊರೆಯೇ ! ಕೇತಕೀ ದಳಗಳಿಂದ ಕಲಿಮಲವನ್ನು ಪರಿಹರಿಸುವ ಕೃಷ್ಣನನ್ನು ಪೂಜಿಸುವವನಿಗೆ ಕೃಷ್ಣನು ಪ್ರತಿ ದಳಗಳಲ್ಲಿಯೂ ಅಶ್ವಮೇಧಯಾಗದ ಫಲವನ್ನು ಕೊಡುವನು.

೪೫. ತ್ರೈಲೋಕ್ಯನಾಥನಾದ ಕೃಷ್ಣನನ್ನು ಜಾಜಿ ಹೂವುಗಳಿಂದ ಪೂಜಿಸಿದವನಿಂದ ಹೊಂದದ ದುರ್ಲಭ ಫಲವು ಇರುವುದಿಲ್ಲ.

೪೬. ಆಯಾ ಋತುಕಾಲದಲ್ಲಿ ಉಂಟಾದ ಹೂವುಗಳಿಂದ ರುಕ್ಮಿಣೀರಮಣನಾದ ಕೃಷ್ಣನನ್ನು ಪೂಜಿಸುವ ಮಾನವನು ದೇವಮಾನವರಿಗೆ ದುರ್ಲಭವಾದ ಇಷ್ಟಾರ್ಥಗಳನ್ನು ಪಡೆಯುವನು.

೪೭. ದೊರೆಯೆ ! ಕಲಿಯುಗದಲ್ಲಿ ಕೃಷ್ಣನಿಗೆ ಕರ್ಪೂರ ಸಹಿತವಾದ ಕೃಷ್ಣಾಗುರು ಧೂಪವನ್ನರ್ಪಿಸುವ ಮಾನವರು ಕೃಷ್ಣನಂತೆಯೇ ಆಗುವರು.

ಸಾಜ್ಯೇನ ಗುಗ್ಗುಲೇನಾಪಿ ಸುಗಂಧೇನ ಜನಾರ್ದನಂ ।
ಧೂಪಯಿತ್ವಾ ನರೋ ಯಾತಿ ಪದಂ ಭೂಯಃಸದಾಶಿವಂ ॥ ೪೮ ॥
ಯೋ ದದಾತಿ ಮಹೀಪಾಲ ಕೃಷ್ಣಸ್ಯಾಗ್ರೇ ತು ದೀಪಕಂ ।
ಪಾತಕಂ ತು ಸಮುತ್ಸೃಜ್ಯ ಜ್ಯೋತೀರೂಪಂ ಲಭೇತ್ಪದಂ ॥ ೪೯ ॥
ದ್ವಾರೇ ಕೃಷ್ಣಸ್ಯ ಯೋ ನಿತ್ಯಂ ದೀಪಮಾಲಾಂ ಕರೋತಿ ಹಿ ।
ಸಪ್ತದ್ವೀಪವತೀ ರಾಜ್ಯಂ ದ್ವೀಪೇ ದ್ವೀಪೇ ಫಲಂ ಲಭೇತ್ ॥ ೫೦ ॥
ನೈವೇದ್ಯಾನಿ ಮನೋಜ್ಞಾನಿ ಕೃಷ್ಣಾಯ ವಿನಿವೇದಯೇತ್ ।
ಕಲ್ಪಾಂತಂ ತತ್ಪಿತ್ರೂಣಾಂ ಹಿ ತೃಪ್ತಿರ್ಭವತಿ ಶಾಶ್ವತೀ ॥ ೫೧ ॥
ಫಲಾನಿ ಯಚ್ಛತೇ ಯೋವೈ ಸುಹೃದ್ಯಾನಿ ನರೇಶ್ವರ ।
ಜಾಯಂತೇ ತಸ್ಯ ಕಲ್ಪಾಂತಂ ಸಫಲಾಸ್ತು ಮನೋರಥಾಃ ॥ ೫೨ ॥
ತಾಂಬೂಲಂ ತು ಸಕರ್ಪೂರಂ ಸಪೂಗಂ ನರನಾಯಕ ।
ಕೃಷ್ಣಾಯ ಯಚ್ಛತೇ ಯೋ ವೈ ಪದಂ ತಸ್ಯಾಗ್ನಿದೈವತಂ ॥ ೫೩ ॥
ಸನೀರಂ ಕರ್ಪೂರೋಪೇತಂ ಕುಂಭಂ ಕೃಷ್ಣಾಗ್ರತೋ ನ್ಯಸೇತ್ ।
ಕಲ್ಪಾಂತೇ ನ ಜಲಾಪೇಕ್ಷಾಂ ಕುರ್ವಂತಿ ಚ ಪಿತಾಮಹಾಃ ॥ ೫೪ ॥

---

೪೮. ತುಪ್ಪದಿಂದ ಸಹಿತವಾದ ಸುಗಂಧ ಗುಗ್ಗುಲದಿಂದ ಕೃಷ್ಣನಿಗೆ ಧೂಪವನ್ನರ್ಪಿಸುವ ನರನು ಸದಾಶಿವ ಸ್ಥಾನಕ್ಕೆ ತೆರಳುವನು.

೪೯. ನೃಪನೇ! ಕೃಷ್ಣನ ಮುಂದೆ ದೀಪವನ್ನು ಹೊತ್ತಿಸುವವನು ಪಾಪವನ್ನು ತೊರೆದು ತೇಜೋರೂಪವಾದ ಸ್ಥಾನವನ್ನು ಹೊಂದುವನು.

೫೦. ನಿತ್ಯವೂ ಕೃಷ್ಣನ ದ್ವಾರದಲ್ಲಿ ದೀಪಮಾಲೆಯನ್ನು ಹೊತ್ತಿಸುವವನು ಪ್ರತಿ ದ್ವೀಪದಲ್ಲಿಯೂ ಚಕ್ರವರ್ತಿಯಾಗುವನು.

೫೧. ಕೃಷ್ಣನಿಗೆ ಮನೋಹರವಾದ ನೈವೇದ್ಯಗಳನ್ನು ಸಮರ್ಪಿಸುವವನ ಪಿತೃಗಳಿಗೆ ಕಲ್ಪಾವಸಾನದವರೆಗೆ ಶಾಶ್ವತ ತೃಪ್ತಿಯುಂಟಾಗುವುದು.

೫೨. ನರನಾಥ! ಮನೋಹರವಾದ ಫಲಗಳನ್ನು ದಾನಮಾಡುವವನ ಮನೋರಥಗಳು ಕಲ್ಪಾವಸಾನದವರೆಗೆ ಸಫಲವಾಗುವುದು.

೫೩. ನರೇಶ್ವರ! ಕೃಷ್ಣನಿಗೆ ಕರ್ಪೂರ, ಅಡಿಕೆಗಳಿಂದ ಸಹಿತವಾದ ತಾಂಬೂಲವನ್ನರ್ಪಿಸುವವನಿಗೆ ಅವನು ಅಗ್ನಿದೇವತಾ ಸ್ಥಾನವನ್ನು ಕೊಡುವನು.

೫೪. ಕೃಷ್ಣನ ಮುಂದೆ ಕರ್ಪೂರ ಜಲದಿಂದ ತುಂಬಿದ ಕಲಶವನ್ನು ಇಡುವವನ ಪಿತಾಮಹರು ಕಲ್ಪಾವಸಾನದವರೆಗೆ ತರ್ಪಣೋದಕವನ್ನಪೇಕ್ಷಿಸುವುದಿಲ್ಲ.

ವ್ಯಜನೇನಾಥ ವಸ್ತ್ರೇಣ ಸುಭಕ್ತ್ಯಾ ಮಾತರಿಶ್ವನಾ ।
ದೇವದೇವಸ್ಯ ರಾಜೇಂದ್ರ ಕುರುತೇ ಘರ್ಮವಾರಣಂ ॥ ೫೫ ॥
ತತ್ಕುಲೇ ನಾಸ್ತಿ ಪಾಪಿಷ್ಠೋ ನ ಚ ಲೋಕೇ ಯಮಸ್ಯ ಚ ।
ವಾಯುಲೋಕಾನ್ಮಹೀಪಾಲ ಸ ಪುನರ್ವಿದ್ಯತೇ ಗತಿಃ ॥ ೫೬ ॥
ಕೃಷ್ಣವೇಶ್ಮನಿ ಯಃ ಕುರ್ಯಾತ್ಸಧೂಪಂ ಪುಷ್ಪಮಂಡಪಂ ।
ಸಪುಷ್ಪಕವಿಮಾನೈಸ್ತು ಕೋಟಿಭಿಃ ಕ್ರೀಡತೇ ದಿವಿ ॥ ೫೭ ॥
ಚಲಚ್ಚಾಮರವಾತೇನ ಕೃಷ್ಣಂ ಯಸ್ತೋಷಯೇನ್ನರಃ ।
ತಸ್ಯೋತ್ತಮಾಂಗಂ ದೇವೇಶಶ್ಚುಂಬತೇ ಸ್ವಮುಖೇನ ಹಿ ॥ ೫೮ ॥
ಯಃ ಕುರ್ಯಾತ್ಕೃಷ್ಣಭವನಂ ಕದಲೀಸ್ತಂಭಶೋಭಿತಂ ।
ಸವಸತ್ಯರ್ಕಲೋಕೇ ತು ಯಾವದ್ವಸತಿ ಮೇದಿನೀ ॥ ೫೯ ॥
ಧೂಪಂ ಚಂದನಮಾಲಾಂ ತು ಕುರುತೇ ಕೃಷ್ಣಸದ್ಮನಿ ।
ದೇವಕನ್ಯಾಯುತೈರ್ಲಕ್ಷೈಃ ಸೇವ್ಯತೇ ಸುರನಾಯಕೈಃ ॥ ೬೦ ॥
ಧ್ವಜಮಾರೋಪಯೇದ್ಯಸ್ತು ಪ್ರಾಸಾದೋಪರಿ ಭಕ್ತಿತಃ ।
ತಸ್ಯ ಬ್ರಹ್ಮಪದೇ ವಾಸಃ ಕ್ರೀಡತೇ ಬ್ರಹ್ಮಣಾ ಸಹ ॥ ೬೧ ॥

---

೫೫–೫೬. ರಾಜೇಂದ್ರ ! ಬೀಸಣಿಗೆ ಅಥವಾ ಗಾಳಿಯಿಂದ ಕೃಷ್ಣನ ಸೆಕೆಯನ್ನು ವಾರಿಸುವವನ ವಂಶದಲ್ಲಿ ಪಾಪಿಷ್ಠನು ಜನಿಸುವುದಿಲ್ಲ. ಯಾವನೂ ಯಮಲೋಕದಲ್ಲಿ ನಿವಾಸಿಸುವುದಿಲ್ಲ. ಎಲ್ಲರೂ ವಾಯುಲೋಕವನ್ನು ಸೇರಿ ಹಿಂದಿರುಗುವುದಿಲ್ಲ.

೫೭. ಕೃಷ್ಣನ ದೇವಾಲಯದಲ್ಲಿ ಧೂಪಸಹಿತವಾದ ಪುಷ್ಪ ಮಂಟಪವನ್ನು ರಚಿಸುವವನು ದೇವಲೋಕದಲ್ಲಿ ಕೋಟಿ ಪುಷ್ಪಕವಿಮಾನಗಳಿಂದ ವಿನೋದಪಡುವನು.

೫೮. ಚಾಮರದ ಗಾಳಿಯಿಂದ ಕೃಷ್ಣನನ್ನು ಸಂತೋಷಗೊಳಿಸುವವನ ಶಿರಸ್ಸನ್ನು ಅವನು ತನ್ನ ಬಾಯಿಯಿಂದ ಚುಂಬಿಸುವನು.

೫೯. ಕೃಷ್ಣನ ಆಲಯವನ್ನು ಬಾಳೆಯ ಕಂಬಗಳಿಂದ ಅಲಂಕಾರಗೊಳಿಸಿದವನು ಭೂಮಿಯಿರುವವರೆಗೆ ಸೂರ್ಯಲೋಕದಲ್ಲಿ ವಾಸಿಸುತ್ತಾನೆ.

೬೦. ಕೃಷ್ಣನ ದೇವಾಲಯವನ್ನು ಧೂಪ, ಗಂಧಮಾಲೆ ಇವುಗಳನ್ನು ಸಮರ್ಪಿಸುವವನು ದೇವಕನ್ಯೆಯರಿಂದ ಸಹಿತರಾದ ಲಕ್ಷ ಮಂದಿ ದೇವನಾಯಕರಿಂದ ಸೇವಿತನಾಗುವನು.

೬೧. ಕೃಷ್ಣನ ದೇವಾಲಯದ ಮೇಲೆ ಭಕ್ತಿಯಿಂದ ಧ್ವಜವನ್ನೇರಿಸುವವನು ಬ್ರಹ್ಮಲೋಕದಲ್ಲಿ ಬ್ರಹ್ಮನೊಡನೆ ವಿನೋದಪಡುವನು.

ಪ್ರಾಂಗಣಂ ವರ್ಣಕೋಪೇತಂ ಸ್ವಸ್ತಿಕೈಶ್ಚ ಸಮನ್ವಿತೈಃ ।
ದೇವದೇವಸ್ಯ ಕುರುತೇ ಕ್ರೀಡತೇ ಭುವನತ್ರಯೇ ॥ ೬೨ ॥
ಯೋ ದದ್ಯಾನ್ಮಂಡಪೇ ಪುಷ್ಪಪ್ರಕರಂ ರುಕ್ಮಿಣೀಪತೇಃ ।
ದೇವೋದ್ಯಾನೇಷು ಸರ್ವೇಷು ಕ್ರೀಡತೇ ನರನಾಯಕೈಃ ॥ ೬೩ ॥
ಪ್ರಾಸಾದೇ ದೇವದೇವಸ್ಯ ಚಿತ್ರಕರ್ಮ ಕರೋತಿ ಯಃ ।
ವಸತೇ ರುದ್ರಲೋಕೇ ತು ಯಾವತ್ತಿಷ್ಠಂತಿ ಸಾಗರಾಃ ॥ ೬೪ ॥
ದದ್ಯಾಚ್ಚಂದ್ರಮಯಂ ಯಸ್ತು ಕೃಷ್ಣೋಪರಿ ನರೇಶ್ವರ ।
ವಸತೇ ದ್ವಾರಕಾಂ ಯಾವತ್ಸೋಮಲೋಕೇ ಸ ತಿಷ್ಠತಿ ॥ ೬೫ ॥
ಛತ್ರಂ ಬಹುಶಲಾಕಂ ತು ಕಿಂಕಿಣೀವಸ್ತ್ರಗುಂಠಿತಂ ।
ದಿವ್ಯರತ್ನೈಶ್ಚ ಸಂಯುಕ್ತಂ ಹೇಮದಂಡಸಮನ್ವಿತಂ ॥ ೬೬ ॥
ಸಮರ್ಪಯತಿ ಕೃಷ್ಣಾಯ ಛತ್ರಂ ಲಕ್ಷಾರ್ಬುದೈರ್ವೃತಂ ।
ಅಮರೈಃ ಸಹಿತಃ ಸರ್ವೈಃ ಕ್ರೀಡತೇ ಪಿತೃಭಿಃ ಸಹ ॥ ೬೭ ॥
ದದ್ಯಾನ್ನರವಿಮಾನಂ ತು ಕೃಷ್ಣಾಯ ನರನಾಯಕ ।
ಸತ್ಕೃತೋ ಧನದೇನೈವ ವಸತೇ ಬ್ರಹ್ಮವಾಸರಂ ॥ ೬೮ ॥

---

೬೨. ಕೃಷ್ಣದೇವಾಲಯದ ಅಂಗಣವನ್ನು ಬಣ್ಣ ಬಣ್ಣದ ರಂಗವಲ್ಲಿಗಳಿಂದ ಸ್ವಸ್ತಿಕ ಮೊದಲಾದುವುಗಳನ್ನು ರಚಿಸಿ ಅಲಂಕಾರಗೊಳಿಸುವವನು ತ್ರಿಭುವನದಲ್ಲಿ ವಿನೋದಪಡುವನು.

೬೩. ಕೃಷ್ಣನ ಮಂಟಪವನ್ನು ಹೂವುಗಳಿಂದ ಅಲಂಕರಿಸುವವನು ದೇವತೆಗಳ ಉದ್ಯಾನಗಳಲ್ಲಿ ರಾಜರೊಡನೆ ವಿನೋದಗೊಳ್ಳುತ್ತಾನೆ.

೬೪. ಕೃಷ್ಣನ ದೇವಾಲಯದಲ್ಲಿ ಚಿತ್ರವನ್ನು ರಚಿಸುವವನು ಸಮುದ್ರಗಳಿರುವವರೆಗೆ ರುದ್ರಲೋಕದಲ್ಲಿ ವಾಸಿಸುವನು.

೬೫. ದೊರೆಯೆ! ಕೃಷ್ಣನ ಮೇಲ್ಗಡೆ ಮೇಲ್ಕಟ್ಟನ್ನು ಕಟ್ಟುವವನು ದ್ವಾರಕೆಯಲ್ಲಿ ವಾಸಿಸುವಷ್ಟುಕಾಲ ಚಂದ್ರಲೋಕದಲ್ಲಿರುವನು.

೬೬–೬೭. ಅನೇಕ ಶಲಾಕೆಗಳುಳ್ಳುದೂ, ಕಿರುಗಜ್ಜೆ, ವಸ್ತ್ರಗಳಿಂದ ಸಹಿತವೂ, ಅನೇಕ ದಿವ್ಯ ರತ್ನಗಳಿಂದ ಕೂಡಿರುವುದೂ, ಸುವರ್ಣ ದಂಡವುಳ್ಳುದೂ ಆದ ಕೊಡೆಯನ್ನು ಕೃಷ್ಣನಿಗೆ ಸಮರ್ಪಿಸಿದವನು ಸಮಸ್ತ ದೇವತೆಗಳಿಂದಲೂ, ಪಿತೃಗಳೊಡಗೂಡಿ ವಿನೋದಗೊಳ್ಳುವನು.

೬೮. ನರವಿಮಾನವನ್ನು ಕೃಷ್ಣನಿಗಿತ್ತವನು ಕುಬೇರನಿಂದ ಸನ್ಮಾನಗೊಂಡು ಅವನೊಡನೆ ಬ್ರಹ್ಮದಿನದವರೆಗೆ ವಾಸಿಸುವನು.

ಕೃತ್ವಾ ಪೂಜಾದಿಕಂ ಭೂಪ ಜ್ವಲಂತಂ ಕೃಷ್ಣಮೂರ್ಧನಿ ।
ಆರಾರ್ತಿಕಂ ಪ್ರಕುರ್ವಾಣೋ ಮೋದತೇ ಕೃಷ್ಣಸನ್ನಿಧೌ ॥ ೧೯ ॥
ದೀಪ್ತಿಮಂತಂ ಸಕರ್ಪೂರಂ ಕರೋತ್ಯಾರಾರ್ತಿಕಂ ನೃಪ ।
ಕೃಷ್ಣಸ್ಯ ವಸತೇ ಲೋಕೇ ಸಪ್ತಕಲ್ಪಾನಿ ಮಾನವಃ ॥ ೨೦ ॥
ಧೃತ್ವಾ ಶಂಖೋದಕಂ ಯಸ್ತು ಭ್ರಾಮಯೇತ್ಕೇಶವೋಪರಿ ।
ಸನ್ನಿಧೌ ವಸತೇ ವಿಷ್ಣೋಃ ಕಲ್ಪಾಂತಂ ಕ್ಷೀರಸಾಗರೇ ॥ ೨೧ ॥
ಏವಂ ಕೃತ್ವಾ ತು ಕೃಷ್ಣಸ್ಯ ಯಃ ಕರೋತಿ ಪ್ರದಕ್ಷಿಣಾಂ ।
ಪಠನ್ನಾಮಸಹಸ್ರಂ ತು ಸ್ತವಮನ್ಯಂ ಪಠನ್ನೃಪ ।
ಸಪ್ತದ್ವೀಪವತೀ ಪುಣ್ಯಂ ಲಭತೇ ತು ಪದೇಪದೇ ॥ ೨೨ ॥
ಕುರ್ಯಾದ್ದಂಡನಮಸ್ಕಾರಮಶ್ವಮೇಧಾಯುತೈಃ ಸಮಂ ।
ಕೃಷ್ಣಂ ಸಂತೋಷಯೇದ್ಯಸ್ತು ಸುಗೀತೈರ್ಮಧುರೈಃ ಸ್ವರೈಃ ॥ ೨೩ ॥
ಸಾಮವೇದಫಲಂ ತಸ್ಯ ಜಾಯತೇ ನಾತ್ರ ಸಂಶಯಃ ।
ಯೋ ನೃತ್ಯತಿ ಪ್ರಹೃಷ್ಟಾತ್ಮಾ ಭಾವೈರ್ಬಹು ಸುಭಕ್ತಿತಃ ।
ಸ ನಿರ್ದಹತಿ ಪಾಪಾನಿ ಮನ್ವಂತರಕೃತಾನ್ಯಪಿ ॥ ೨೪ ॥

---

೧೯. ಕೃಷ್ಣನಿಗೆ ಪೂಜೆ ಮೊದಲಾದುವುಗಳನ್ನು ಮಾಡಿ ಜ್ವಲಿಸುವ ನೀರಾಜನವನ್ನು ಮಾಡುವವನು ಅವನ ಹತ್ತಿರ ಆನಂದಿಸುವನು.

೨೦. ದೊರೆಯೆ! ಕೃಷ್ಣನಿಗೆ ಪ್ರಕಾಶವುಳ್ಳದೂ, ಕರ್ಪೂರದಿಂದ ಕೂಡಿರುವುದೂ ಆದ ಆರತಿಯನ್ನು ಮಾಡುವವನು ಏಳು ಕಲ್ಪಗಳಕಾಲ ಕೃಷ್ಣನೊಡನೆ ವಾಸಿಸುವನು.

೨೧. ಶಂಖದಲ್ಲಿ ನೀರನ್ನು ತುಂಬಿಕೊಂಡು ಕೃಷ್ಣನ ಮೇಲೆ ತಿರುಗಿಸುವವನು ವಿಷ್ಣುವಿನೊಡನೆ ಕಲ್ಪಾವಸಾನದವರೆಗೆ ಕ್ಷೀರಸಾಗರದಲ್ಲಿ ವಾಸಮಾಡುವನು.

೨೨. ಹೀಗೆ ಮಾಡಿ ಕೃಷ್ಣನಿಗೆ ಪ್ರದಕ್ಷಿಣೆಗೈದು ಸಹಸ್ರನಾಮವನ್ನೂ, ಇತರ ಸ್ತೋತ್ರಗಳನ್ನೂ ಪಠಿಸುವವನು ಭೂಮಿಯನ್ನು ದಾನಮಾಡಿದ ಪುಣ್ಯವನ್ನು ಪಡೆಯುವನು.

೨೩. ಕೃಷ್ಣನಿಗೆ ಸಾಷ್ಟಾಂಗನಮಸ್ಕಾರಗೈದರೆ ಅದು ಹತ್ತುಸಾವಿರ ಅಶ್ವಮೇಧ ಯಾಗಗಳಿಗೆ ಸಮಾನವಾಗುವುದು. ಅವನನ್ನು ಇಂಪಾದ ಗಾನದಿಂದ ಸಂತೋಷಗೊಳಿಸಿದವನಿಗೆ ನಿಶ್ಚಯವಾಗಿಯೂ ಸಾಮವೇದವನ್ನು ಪಠಿಸಿದ ಫಲವು ಲಭಿಸುವುದು.

೨೪. ಕೃಷ್ಣನ ಮುಂದೆ ಬಹುಭಕ್ತಿಯಿಂದ ನೃತ್ಯಮಾಡುವವನ ಮನ್ವಂತರಗಳಲ್ಲಿ ಮಾಡಿದ ಪಾಪಗಳೂ ಪರಿಹಾರವಾಗುವುವು.

ಯಃ ಕೃಷ್ಣಾಗ್ರೇ ಮಹಾಭಕ್ತ್ಯಾ ಕುರ್ಯಾತ್ಪುಸ್ತಕವಾಚನಂ ।
ಪ್ರತ್ಯಕ್ಷರಂ ಲಭೇತ್ಪುಣ್ಯಂ ಕಪಿಲಾಶತದಾನಜಂ ॥ ೭೫ ॥
ಋಗ್ಯಜುಃಸಾಮಭಿರ್ವಾಗ್ಭಿಃ ಕೃಷ್ಣಂ ಸಂತೋಷಯಂತಿ ಯೇ ।
ಕಲ್ಪಾಂತಂ ಬ್ರಹ್ಮಲೋಕೇ ತು ತೇ ವಸಂತಿ ದ್ವಿಜೋತ್ತಮಾಃ ॥ ೭೬ ॥
ಯೋಗಶಾಸ್ತ್ರಾಣಿ ವೇದಾಂತಾನ್ಪುರಾಣಾನ್ ಕೃಷ್ಣಸನ್ನಿಧೌ ।
ಪಠಂತಿ ರವಿಬಿಂಬ ತೇ ಭಿತ್ವಾ ಯಾಂತಿ ಹರೇರ್ಲಯಂ ॥ ೭೭ ॥
ಗೀತಾ ನಾಮಸಹಸ್ರಂ ತು ಸ್ತವರಾಜೋ ಹ್ಯನುಸ್ಮೃತಿಃ ।
ಗಜೇಂದ್ರಮೋಕ್ಷಣಂ ಚೈವ ಕೃಷ್ಣಸ್ಯಾತೀವ ವಲ್ಲಭಂ ॥ ೭೮ ॥
ಶ್ರೀಮದ್ಭಾಗವತಂ ಯಸ್ತು ಪಠತೇ ಕೃಷ್ಣಸನ್ನಿಧೌ ।
ಕುಲಕೋಟಿಶತೈರ್ಯುಕ್ತಃ ಕ್ರೀಡತೇ ಯೋಗಿಭಿಃ ಸದಾ ॥ ೭೯ ॥
ಯಃ ಪಠೇದ್ರಾಮಚರಿತಂ ಭಾರತಂ ವ್ಯಾಸಭಾಷಿತಂ ।
ಪುರಾಣಾನಿ ಮಹೀಪಾಲ ಪ್ರಾಪ್ನೋತಿ ಮುಕ್ತಿಂ ನ ಸಂಶಯಃ ॥ ೮೦ ॥
ದ್ವಾದಶೀವಾಸರೇ ಪ್ರಾಪ್ತೇ ಏವಂ ಕುರ್ವಂತಿ ಯೇ ನರಾಃ ।
ಗೀತಾದ್ಯೈಃ ಶತಸಾಹಸ್ರಂ ಪುಣ್ಯಂ ಯಚ್ಛತಿ ಕೇಶವಃ ॥ ೮೧ ॥

---

೭೫. ಆ ಕೃಷ್ಣನ ಮುಂದೆ ಭಕ್ತಿಯಿಂದ ಓದುವವನಿಗೆ ಪ್ರತ್ಯಕ್ಷರವೂ ನೂರು ಕಪಿಲಗೋವುಗಳನ್ನು ದಾನಮಾಡಿದ ಫಲವು ಲಭಿಸವುದು.

೭೬. ದ್ವಿಜವರ್ಯರೆ ! ಋಗ್ಯಜುಸ್ಸಾಮವೇದವಾಕ್ಯಗಳಿಂದ ಕೃಷ್ಣನನ್ನು ಸಂತೋಷಗೊಳಿಸುವವರು ಕಲ್ಪಾವಸಾನದವರೆಗೆ ಬ್ರಹ್ಮಲೋಕದಲ್ಲಿ ವಾಸಿಸುವರು.

೭೭. ಕೃಷ್ಣನ ಹತ್ತಿರ ಯೋಗಶಾಸ್ತ್ರಗಳನ್ನೂ, ವೇದಾಂತ ಪುರಾಣಗಳನ್ನೂ ಪಠಿಸುವವರು ಸೂರ್ಯ ಬಿಂಬವನ್ನು ಭೇದಿಸಿ ವೈಕುಂಠಕ್ಕೆ ಹೋಗುವರು.

೭೮. ಭಗವದ್ಗೀತೆ, ಸಹಸ್ರನಾಮ, ಸ್ತವರಾಜ, ಅನುಸ್ಮೃತಿ, ಗಜೇಂದ್ರ ಮೋಕ್ಷ ಇವುಗಳು ಕೃಷ್ಣನಿಗೆ ಅತ್ಯಂತ ಪ್ರಿಯವಾದುವು.

೭೯. ಕೃಷ್ಣನ ಹತ್ತಿರ ಶ್ರೀಮದ್ಭಾಗವತವನ್ನು ಪಠಿಸುವವನು ತನ್ನ ನೂರು ಕೋಟಿ ಕುಲದವರಿಂದಲೂ, ಯೋಗಿಗಳಿಂದಲೂ ಸೇರಿ ವಿನೋದ ಪಡುವನು.

೮೦. ದೊರೆಯೆ ! ರಾಮಾಯಣ, ವ್ಯಾಸೋಕ್ತ ಮಹಾಭಾರತ, ಅಷ್ಟಾದಶ ಪುರಾಣಗಳು ಇವುಗಳನ್ನು ಪಠಿಸುವವನು ಮೋಕ್ಷವನ್ನು ಹೊಂದುವನು.

೮೧. ದ್ವಾದಶೀದಿನ ಗೀತಾದಿಗಳನ್ನು ಪಠಿಸುವ ಮಾನವರಿಗೆ ಶ್ರೀ ಕೃಷ್ಣನು ಲಕ್ಷ ಪುಣ್ಯವನ್ನು ಕೊಡುವನು.

ಜಾಗ್ರತೇ ಕೋಟಿಗುಣಿತಂ ಪುಣ್ಯಂ ಭವತಿ ಭೂಮಿಪ ।
ವಸತಾಂ ದ್ವಾರಕಾವಾಸಾತ್ ಪ್ರತ್ಯಹಂ ಲಭತೇ ಫಲಂ ॥ ೮೧ ॥
ಗೋಮತೀನೀರಪೂತಾನಾಂ ಕೃಷ್ಣವಕ್ತ್ರಾವಲೋಕಿನಾಂ ।
ದರ್ಶನಾತ್ಪಾತಕಂ ತೇಷಾಂ ಯಾತಿ ವರ್ಷಶತಾರ್ಜಿತಂ ॥ ೮೩ ॥
ಧನ್ಯಾಸ್ತೇ ಮಾನುಷೇ ಲೋಕೇ ಗೋಮತ್ಯುದಧಿವಾರಿಣಾ ।
ತರ್ಪಯಂತಿ ಪಿತೄನ್ದೇವಾನ್ಗತ್ವಾ ದ್ವಾರವತೀಂ ಕಲೌ ॥ ೮೪ ॥
ಗಂಗಾದ್ವಾರೇ ಪ್ರಯಾಗೇ ಚ ಗಂಗಾಯಾಂ ಕುರುಜಾಂಗಲೇ ।
ಪ್ರಭಾಸೇ ಶುಕ್ಲತೀರ್ಥೇ ಚ ಶ್ರೀಸ್ಥಲೇ ಪುಷ್ಕರೇಽಪಿ ಚ ॥ ೮೫ ॥
ಸ್ನಾನೇನ ಪಿಂಡದಾನೇನ ಪಿತೄಣಾಂ ತರ್ಪಣೇ ಕೃತೇ ।
ತೃಪ್ತಿರ್ಭವತಿ ಭೂಪಾಲ ತಥಾ ಗೋಮತಿದರ್ಶನಾತ್ ॥ ೮೬ ॥
ಯೋಜನೈರ್ಬಹುಭಿಸ್ತಿಷ್ಠನ್ಗೋಮತೀತಿ ಚ ಯೋ ವದೇತ್ ।
ಚಾಂದ್ರಾಯಣಸಹಸ್ರಸ್ಯ ಫಲಮಾಪ್ನೋತಿ ಯತ್ನತಃ ॥ ೮೭ ॥
ಧನ್ಯಾ ದ್ವಾರವತೀ ಲೋಕೇ ವಹತೇ ಯತ್ರ ಗೋಮತೀ ।
ಸ್ವಯಂ ತು ತಿಷ್ಠತೇ ಯತ್ರ ನಿತ್ಯಂ ರುಕ್ಮಿಣಿವಲ್ಲಭಃ ॥ ೮೮ ॥

---

೮೨. ಅಲ್ಲಿ ಜಾಗರಣೆಮಾಡಿದರೆ ಕೋಟಿಯಷ್ಟು ಪುಣ್ಯವುಂಟಾಗುವುದು. ದ್ವಾರಕೆಯಲ್ಲಿ ವಾಸಮಾಡುವುದರಿಂದ ಪ್ರತಿದಿನವೂ ಪುಣ್ಯವನ್ನು ಹೊಂದುವನು.

೮೩. ಗೋಮತೀ ನೀರಿನಿಂದ ಪವಿತ್ರರೂ, ಕೃಷ್ಣನ ಮುಖವನ್ನು ನೋಡಿದವರೂ ಆದ ಪುಣ್ಯಶಾಲಿಗಳ ದರ್ಶನದಿಂದ ನೂರು ವರ್ಷಗಳಿಂದ ಮಾಡಿದ ಪಾಪವು ಪರಿಹಾರವಾಗುವುದು.

೮೪. ಕಲಿಯುಗದಲ್ಲಿ ದ್ವಾರವತಿಗೆ ಹೋಗಿ ಗೋಮತೀ ಜಲದಿಂದ ಪಿತೃತರ್ಪಣ ಗೈಯುವವರು ಭೂಲೋಕದಲ್ಲಿ ಧನ್ಯರು.

೮೫–೮೬. ಗಂಗಾದ್ವಾರ, ಪ್ರಯಾಗ, ಗಂಗೆ, ಕುರುಜಾಂಗಲ, ಪ್ರಭಾಸ, ಶುಕ್ಲತೀರ್ಥ, ಶ್ರೀಸ್ಥಳ, ಪುಷ್ಕರ ಇವುಗಳಲ್ಲಿ ಮಿಂದು ಪಿತೃತರ್ಪಣ ಮಾಡುವುದರಿಂದುಂಟಾಗುವ ತೃಪ್ತಿಯು ಗೋಮತೀದರ್ಶನದಿಂದಾಗುವುದು.

೮೭. ಅನೇಕ ಯೋಜನಗಳ ದೂರದಲ್ಲಿದ್ದು ಗೋಮತಿಯೆಂದು ಹೇಳುವವನು ಸಾವಿರ ಚಾಂದ್ರಾಯಣ ವ್ರತಗಳ ಫಲವನ್ನು ಪಡೆಯುವನು.

೮೮. ಗೋಮತೀ ಮತ್ತು ಕೃಷ್ಣನಿರುವ ದ್ವಾರವತಿಯು ಪ್ರಪಂಚದಲ್ಲಿ ಪುಣ್ಯಕರವಾದುದು.

ನಸ್ನಾತಾ ಗೋಮತೀತೀರೇ ಕಲೌ ಪಾಪೇನ ಮೋಹಿತಾಃ ।
ಭವಿಷ್ಯತಿ ಕಥಂ ತೇಷಾಂ ಪಾಪಬಂಧಸ್ಯ ಸಂಕ್ಷಯಃ ॥ ೮೯ ॥
ನಿರ್ಮಿತಾ ಸ್ವರ್ಗನಿಃಶ್ರೇಣಿಃ ಕಲೌ ಕೃಷ್ಣೇನ ಗೋಮತೀ ।
ಮನಸಃ ಪ್ರೀತಿಜನನೀ ಜಂತೂನಾಂ ನರಸತ್ತಮ ॥ ೯೦ ॥
ನದೃಶ್ಯಂ ಸ್ವರ್ಗಸೋಪಾನಾಂ ದೃಶ್ಯತೇ ಗೋಮತೀಸಮಂ ।
ಸುಖದಂ ಪಾಪಿನಾಂ ಪುಂಸಾಂ ಸ್ನಾನಮಾತ್ರೇಣ ಮೋಕ್ಷದಂ ॥ ೯೧ ॥
ಗೋಮತೀ ನೀರಸಂಯುಕ್ತೋ ಯತ್ರ ಗರ್ಜತಿ ಸಾಗರಃ ।
ತತ್ರ ಗಚ್ಛೇನ್ನರವ್ಯಾಘ್ರ ಕೃಷ್ಣಸ್ತಿಷ್ಠತಿ ಯತ್ರ ವೈ ॥ ೯೨ ॥
ಯತ್ರ ಚಕ್ರಾಂಕಿತಶಿಲಾ ಗೋಮತ್ಯುದಧಿನಿಃಸೃತಾಃ ।
ಯಚ್ಛಂತಿ ಪೂಜಿತಾ ಮೋಕ್ಷಂ ತಾಂ ಪುರೀಂ ಕೋ ನ ಸೇವತೇ ॥ ೯೩ ॥
ಯತ್ರ ಚಕ್ರಾಂಕಿತಾ ಮೃತ್ಸ್ನಾ ತಿಷ್ಠತೇ ನಿರ್ಮಲಾ ನೃಪ ।
ಕಲೌ ಪಾಪವಿನಾಶಾರ್ಥಂ ತಾಂ ಪುರೀಂ ಕೋ ನ ಸೇವತೇ ॥ ೯೪ ॥

---

೮೯. ಕಲಿಯುಗದಲ್ಲಿ ಪಾಪ ಮೋಹಿತರಾಗಿ ಗೋಮತೀತೀರದಲ್ಲಿ ಸ್ನಾನ ಮಾಡದವರ ಪಾಪವು ಹೇಗೆ ಪರಿಹಾರವಾಗುವುದು.

೯೦. ದೊರೆಯೆ! ಕಲಿಯುಗದಲ್ಲಿ ಕೃಷ್ಣನು ಪ್ರಾಣಿಗಳ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಸ್ವರ್ಗಕ್ಕೆ ಏಣಿಯಂತಿರುವ ಗೋಮತಿಯನ್ನು ನಿರ್ಮಿಸಿರುವನು.

೯೧. ಪಾಪಿಗಳಾದ ಮಾನವರಿಗೆ ಸುಖವನ್ನು ಕೊಡುವುದೂ, ಸ್ನಾನಮಾತ್ರದಿಂದ ಮೋಕ್ಷದಾಯಕವೂ ಆದ ಗೋಮತಿಗೆ ಸಮಾನವಾದ ಸ್ವರ್ಗದ ಏಣಿಯು ನೋಡಲಶಕ್ಯವಾದುದು.

೯೨. ಸಮುದ್ರವು ಗೋಮತೀ ನೀರಿನಿಂದ ಸೇರಿ ಗರ್ಜಿಸುವ ಕೃಷ್ಣನು ನೆಲಸಿಸುವ ಸ್ಥಳಕ್ಕೆ ಹೋಗಬೇಕು.

೯೩. ಈ ದ್ವಾರವತಿಯಲ್ಲಿ ಗೋಮತೀಸಾಗರಗಳಿಂದ ಹೊರಟ ಚಕ್ರಾಂಕಿತ ಶಿಲೆಗಳು ಪೂಜೆಮಾಡುವುದರಿಂದ ಮೋಕ್ಷವನ್ನು ಕೊಡುವುವು. ಇದನ್ನು ಯಾವನು ಸೇವಿಸಲಾರನು ತಾನೆ ?

೯೪. ಕಲಿಯುಗದಲ್ಲಿ ಯಾವ ದ್ವಾರವತಿಯಲ್ಲಿ ಚಕ್ರಾಂಕಿತವಾದ ನಿರ್ಮಲ ಮೃತ್ತಿಕೆಗಳಿರುವುವೊ; ಆ ದ್ವಾರವತಿಯನ್ನು ಪಾಪಪರಿಹಾರಕ್ಕಾಗಿ ಯಾವನು ಸೇವಿಸಲಾರನು ತಾನೆ ?

ಅಪ್ರಧೃಶ್ಯಾ ಪುರಾ ಲೋಕೇ ದೈತ್ಯದಾನವರಕ್ಷಸಾಂ ।
ಶರಣ್ಯಾ ದೇವತಾದೀನಾಂ ಪುರೀಂ ತಾಂ ಕೋ ನ ಸೇವತೇ ॥ ೯೫ ॥
ತ್ಯಜತೇ ಯಾಂ ಕಲೌ ನೈವ ಕೃಷ್ಣೋ ದೇವಕಿನಂದನಃ ।
ಕರ್ಮಣಾ ಮನಸಾ ವಾಚಾ ತಾಂ ಪುರೀಂ ಕೋ ನ ಸೇವತೇ ॥ ೯೬ ॥

ಮಾರ್ಕಂಡೇಯ ಉವಾಚ :—

ಶೃಣು ರಾಜನ್ಪ್ರವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಯಾಂ ಶ್ರುತ್ವಾ ಮುಚ್ಯತೇ ನೂನಂ ದುಃಖಸಂಸಾರಬಂಧನಾತ್ ॥ ೯೭ ॥
ಅವಂತಿವಿಷಯೇ ಪೂರ್ವಂ ಬ್ರಾಹ್ಮಣೋ ವೇದಪಾರಗಃ ।
ಚಂದ್ರಶರ್ಮೇತಿ ವಿಖ್ಯಾತಃ ಶಿವಭಕ್ತಃ ಸದಾ ನೃಪ ॥ ೯೮ ॥
ಮನಸಾ ಕರ್ಮಣಾ ವಾಚಾ ನಾನ್ಯಂ ಧ್ಯಾತಿ ಸದಾಶಿವಾತ್ ।
ಶೈವಾದ್ವ್ರತಾದ್ವ್ರತಂ ನಾನ್ಯತ್ಕರೋತಿ ಚ ನರಾಧಿಪ ॥ ೯೯ ॥
ನೋಪವಾಸಂ ಹರಿದಿನೇ ಕುರುತೇ ನ ವ್ರತಂ ಹರೇಃ ।
ವಿನಾ ಚತುರ್ದಶೀಂ ರಾಜನ್ನಾನ್ಯದೇವಸಮುದ್ಭವಂ ॥ ೧೦೦ ॥

---

೯೫. ಲೋಕದಲ್ಲಿ, ದೈತ್ಯ, ದಾನವ, ರಾಕ್ಷಸರಿಗೆ ನೋಡಲನರ್ಹವೂ, ದೇವತಾದಿಗಳಿಗೆ ರಕ್ಷಕವೂ ಆದ ಆ ದ್ವಾರವತಿಯನ್ನು ಯಾವನು ತಾನೆ ಸೇವಿಸಲಾರನು ?

೯೬. ಕಲಿಯುಗದಲ್ಲಿ ದೇವಕೀಪುತ್ರನಾದ ಕೃಷ್ಣನು ತ್ಯಜಿಸದಿರುವ ಆ ದ್ವಾರಕೆಯನ್ನು ವಾಕ್, ಮನಸ್ಸು, ಕರ್ಮಗಳಿಂದ ಯಾವನು ತಾನೆ ಸೇವಿಸಲಾರನು ?

೯೭. ಮಾರ್ಕಂಡೇಯನು ಹೇಳುತ್ತಾನೆ :—ದೊರೆಯೆ ! ಪಾಪವನ್ನು ಪರಿಹರಿಸುವ ಕಥೆಯನ್ನು ಹೇಳುವೆನು. ಕೇಳು. ಇದನ್ನು ಕೇಳಿದ ಮಾನವನು ಪಾಪಮುಕ್ತನಾಗುವನು.

೯೮. ಅವಂತಿ ದೇಶದಲ್ಲಿ ಹಿಂದೆ ವೇದಪಾರಂಗತನೂ, ಶಿವಭಕ್ತನೂ ಆದ ಚಂದ್ರಶರ್ಮನೆಂಬ ಬ್ರಾಹ್ಮಣನಿದ್ದನು.

೯೯. ಅವನು ಮನೋವಾಕ್ಕರ್ಮಗಳಿಂದ ಶಿವನಿಗಿಂತ ಬೇರೊಬ್ಬ ದೇವತೆಯನ್ನು ಪೂಜಿಸುತ್ತಿರಲಿಲ್ಲ. ಮತ್ತು ಶೈವವ್ರತಕ್ಕಿಂತ ಇತರ ವ್ರತವನ್ನಾಚರಿಸುತ್ತಿರಲಿಲ್ಲ.

೧೦೦. ಅವನು ಏಕಾದಶೀ ದಿನ ಉಪವಾಸವನ್ನೂ, ಹರಿವ್ರತವನ್ನೂ ಚತುರ್ದಶಿಯು ಹೊರತು ಇತರ ದೇವತಾವ್ರತವನ್ನೂ ಮಾಡುತ್ತಿರಲಿಲ್ಲ.

ಯತ್ರ ಯತ್ರ ಶಿವಕ್ಷೇತ್ರಂ ಯತ್ರ ತೀರ್ಥಂ ತು ಶಾಂಕರಂ ।
ತತ್ರ ಗಚ್ಛತಿ ರಾಜೇಂದ್ರ ವೈಷ್ಣವಂ ನೈವ ಗಚ್ಛತಿ ॥ ೧೦೧ ॥
ಪ್ರತಿವರ್ಷಂ ತು ಕುರುತೇ ಸೋಮನಾಥಸ್ಯ ದರ್ಶನಂ ।
ನ ಜಹಾತಿ ವಿಶೇಷೇಣ ಸೋಮಪರ್ವ ನರೇಶ್ವರ ॥ ೧೦೨ ॥
ಏವಂ ಪ್ರಕುರ್ವತಸ್ತಸ್ಯ ವರ್ಷಾಣಿ ನವಸಪ್ತತಿಃ ।
ಗತಾನಿ ಕಿಲರಾಜೇಂದ್ರ ಶಿವಭಕ್ತಿಂ ಪ್ರಕುರ್ವತಃ ॥ ೧೦೩ ॥
ಕದಾಚಿತ್ಸೋಮಪರ್ವಣ್ಯಾಗತೇ ಸೋಮೋಪನಾಯಕಂ ।
ನಾನಾದೇಶಾನ್ಮಹೀಪಾಲಾ ಹ್ಯಸಂಖ್ಯಾತಾಶ್ಚ ಮಾನವಾಃ ॥ ೧೦೪ ॥
ಗತಾಃ ಕೃಷ್ಣಪುರೀಂ ಸರ್ವೇ ದೃಷ್ಟ್ವಾ ಸೋಮೇಶ್ವರಂ ಪ್ರಭುಂ ।
ಆಹೂತಸ್ತೈಶ್ಚಂದ್ರಶರ್ಮಾ ನ ಗತೋ ದ್ವಾರಕಾಂ ಪುರೀಂ ॥ ೧೦೫ ॥
ಶಿವಕ್ಷೇತ್ರಾತ್ಪರಂ ತೀರ್ಥಂ ನಾಹಂ ಮನ್ಯೇ ಜಗತ್ತ್ರಯೇ ।
ನಾನ್ಯದೇವೋ ಮಯಾ ಜ್ಞಾತ ಈಶ್ವರಾದ್ದೇವನಾಯಕಾತ್ ॥ ೧೦೬ ॥
ವಿನಾನ್ಯೇ ಚಂದ್ರಶರ್ಮಾಣಂ ಗತಾಸ್ತೇ ದ್ವಾರಕಾಂ ಪುರೀಂ ॥ ೧೦೭ ॥

---

೧೦೧. ಅವನು ಎಲ್ಲೆಲ್ಲಿ ಶಿವಕ್ಷೇತ್ರವೂ, ಶಿವತೀರ್ಥವೂ ಇರುವುವೊ ಅಲ್ಲಿಗೆ ಮಾತ್ರ ಹೋಗುವನು. ವೈಷ್ಣವಕ್ಷೇತ್ರಕ್ಕೆ ಹೋಗುತ್ತಿರಲಿಲ್ಲ.

೧೦೨. ದೊರೆಯೆ! ಅವನು ಪ್ರತಿ ವರ್ಷವೂ ಸೋಮನಾಥನ ದರ್ಶನವನ್ನು ಮಾಡುತ್ತಿದ್ದನು. ವಿಶೇಷವಾಗಿ ಸೋಮಪರ್ವವನ್ನು ಬಿಡುತ್ತಿರಲಿಲ್ಲ.

೧೦೩. ಅವನು ಹೀಗೆ ಶಿವನಲ್ಲಿ ಭಕ್ತಿಯನ್ನಾಚರಿಸುತ್ತಿರಲು ಎಪ್ಪತ್ತೊಂಬತ್ತು ವರ್ಷಗಳು ಕಳೆದುವು.

೧೦೪-೧೦೫. ಒಂದಾನೊಂದು ದಿನ ಸೋಮಪರ್ವವು ಬರಲು ಅನೇಕ ದೇಶಗಳಿಂದ ಲೆಕ್ಕವಿಲ್ಲದಷ್ಟು ಜನರು ಸೋಮೇಶ್ವರನೆಡೆಗೆ ಬಂದು ಅವನನ್ನು ದರ್ಶನ ಮಾಡಿ ಕೃಷ್ಣನ ಪಟ್ಟಣಕ್ಕೆ ತೆರಳಿದರು. ಅವರು ಬಾರೆಂದು ಕರೆದರೂ ಚಂದ್ರಶರ್ಮನು ದ್ವಾರಕೆಗೆ ಹೋಗಲಿಲ್ಲ.

೧೦೬. ಆ ಚಂದ್ರಶರ್ಮನು, 'ಮೂರುಲೋಕಗಳಲ್ಲಿ ಶಿವಕ್ಷೇತ್ರಕ್ಕಿಂತ ಉತ್ತಮ ತೀರ್ಥವೂ ದೇವತೆಗಳೊಡೆಯನಾದ ಆ ಶಿವನಿಗಿಂತ ಇತರ ದೇವತೆಯೂ ನನಗೆ ತಿಳಿಯದು' ಎಂದನು.

೧೦೭. ಚಂದ್ರಶರ್ಮನ ಹೊರತು ಇತರ ಜನರೆಲ್ಲ ದ್ವಾರಕೆಗೆ ತೆರಳಿದರು.

ಅನ್ಯಸ್ಮಿನ್ದಿವಸೇ ರಾಜನ್ಗಚ್ಛತಃ ಸ್ವ ಗೃಹಂ ಪ್ರತಿ ।
ಚಕ್ರುಸ್ತೇ ದರ್ಶನಂ ಸ್ವಪ್ನೇ ಚಂದ್ರಶರ್ಮಪಿತಾಮಹಾಃ ॥ ೧೦೮ ॥
ಪ್ರೇತಭೂತಾ ಮಹಾಕಾಯಾ ಕ್ಷುತ್ಕ್ಷಾಮಾಶ್ಚೈವ ಭೀಷಣಾಃ ।
ದೃಷ್ಟ್ವಾ ಸ್ವಪ್ನಂ ಮಹಾರೌದ್ರಂ ಭೀತೋಽಸೌ ಚ ಪ್ರಕಂಪಿತಃ ॥ ೧೦೯ ॥

ಚಂದ್ರಶರ್ಮೋವಾಚ :—

ಕೇ ಯೂಯಂ ವಿಕೃತಾಕಾರಾ ಜಂತೂನಾಂ ಚ ಭಯಾನಕಾಃ ।
ಪೃಥ್ವೀ ಸಮುದ್ಭವಾ ಜೀವಾ ನ ದೃಷ್ಟಾ ನ ಶ್ರುತಾ ಮಯಾ ॥ ೧೧೦ ॥

ಪ್ರೇತಾ ಊಚುಃ :—

ಮಾ ಭಯಂ ಕುರು ವಿಪ್ರೇಂದ್ರ ತವ ಪೂರ್ವಪಿತಾಮಹಾಃ ।
ಆಗತಾಸ್ತ್ವತ್ಸಮೀಪೇ ತು ಮಹಾದುಃಖೇನ ಪೀಡಿತಾಃ ॥ ೧೧೧ ॥

ಚಂದ್ರಶರ್ಮೋವಾಚ :—

ಇಷ್ಟಂ ದತ್ತಂ ತಪಸ್ತಪ್ತಂ ಭವದ್ಭಿರ್ಮತ್ಪಿತಾಮಹೈಃ ।
ಪ್ರೇತತ್ವೇ ಕಾರಣಂ ಯತ್ಸ್ಯಾದ್ಭವತಾಂ ವಿಸ್ಮಯೋ ಮಮ ॥ ೧೧೨ ॥

---

೧೦೮-೧೦೯. ದೊರೆಯೆ ! ಇನ್ನೊಂದು ದಿನ ಅವನು ಮನೆಗೆ ಹೋಗುತ್ತಿರಲು ಪ್ರೇತತ್ವವನ್ನು ಹೊಂದಿದವರೂ, ದೊಡ್ಡ ಶರೀರವುಳ್ಳವರೂ, ಹಸಿವಿನಿಂದ ಕೃಶರೂ, ಭಯಂಕರರೂ ಆದ ಅವನ ಪಿತಾಮಹರು ಸ್ವಪ್ನದಲ್ಲಿ ದರ್ಶನವನ್ನಿತ್ತರು. ಅವನು ಆ ಭಯಂಕರ ಸ್ವಪ್ನವನ್ನು ಕಂಡು ನಡುಗಿದನು.

೧೧೦. ಚಂದ್ರಶರ್ಮನು ಹೇಳುತ್ತಾನೆ :—ವಿಕಾರಾಕೃತಿಯುಳ್ಳವರಾಗಿ ಜಂತುಗಳಿಗೆ ಭಯಂಕರವಾದ ನೀವಾರು ? ಭೂಮಿಯಲ್ಲಿ ಹುಟ್ಟಿದ ಇಂತಹ ಪ್ರಾಣಿಗಳನ್ನು ನೋಡಲಿಲ್ಲ ಮತ್ತು ಕೇಳಲಿಲ್ಲ.

೧೧೧. ಪ್ರೇತಗಳು ಹೇಳುತ್ತವೆ :—ಬ್ರಾಹ್ಮಣ ! ಹೆದರಬೇಡ. ನಿನ್ನ ಹಿಂದಿನ ಪಿತಾಮಹರು ಅತ್ಯಂತ ದುಃಖದಿಂದ ಪೀಡಿತರಾಗಿ ನಿನ್ನ ಹತ್ತಿರಕ್ಕೆ ಬಂದಿದ್ದಾರೆ.

೧೧೨. ಚಂದ್ರಶರ್ಮನು ಹೇಳುತ್ತಾನೆ :—ನನ್ನ ಪಿತಾಮಹರಾದ ನೀವು ಯಾಗ, ದಾನ, ತಪಸ್ಸುಗಳನ್ನು ಮಾಡಿರುವಿರಿ. ನೀವು ಪ್ರೇತರಾಗಲು ಕಾರಣವೇನು? ನನಗೆ ಆಶ್ಚರ್ಯವಾಗಿದೆ.

ಪ್ರೇತಾ ಊಚುಃ :—

ಶೃಣು ಪುತ್ರ ಪ್ರವಕ್ಷ್ಯಾಮಃ ಪ್ರೇತಯೋನೇಸ್ತು ಕಾರಣಂ ।
ವಾಸರಂ ವಾಸುದೇವಸ್ಯ ಸದಾ ವಿದ್ಧಂ ಕೃತಂ ಪುರಾ ॥ ೧೧೩ ॥
ಪ್ರೇತತ್ವಂ ತೇನ ಸಂಪ್ರಾಪ್ತಮಸ್ಮಾಭಿಃ ಶೃಣು ಪುತ್ರಕ ।
ವಿಶೇಷೇಣ ಕೃತಂ ರಾತ್ರೌ ವಿದ್ಧಂ ಜಾಗರಣಂ ಹರೇಃ ॥ ೧೧೪ ॥
ಪತನಂ ನರಕೇ ಘೋರೇ ಭವಿಷ್ಯತಿ ನ ಸಂಶಯಃ ।
ತ್ವಯಾ ಸಹ ನ ಸಂದೇಹೋ ಯಾವದಾಭೂತಸಂಪ್ಲವಂ ॥ ೧೧೫ ॥

ಚಂದ್ರ ಶರ್ಮೋವಾಚ :—

ಹರಿಭಕ್ತಿವಿಹೀನಾನಾಂ ದ್ವಾದಶೀವ್ರತವರ್ಜಿನಾಂ ।
ನಾಶಂ ನ ಯಾತಿ ಪ್ರೇತತ್ವಂ ಪೂಜಿತೈಃ ಶಂಕರಾದಿಭಿಃ ॥ ೧೧೬ ॥
ನವಾ ಸಂತೋಷಿತೋ ದೇವೋ ಭಕ್ತ್ಯಾ ತ್ರಿಪುರನಾಶನಃ ।
ಪ್ರದಾಸ್ಯತಿ ಗತಿಂ ನೂನಂ ಪ್ರೇತತ್ವಂ ನ ಗಮಿಷ್ಯತಿ ॥ ೧೧೭ ॥

ಪ್ರೇತಾ ಊಚುಃ :—

ಪ್ರಾಯಶ್ಚಿತ್ತಂ ವಿನಾ ಪುತ್ರ ದ್ವಾದಶೀವೇಧಸಂಭವಂ ।
ಆಪನ್ನಗಚ್ಛತೇ ನೂನಂ ಪ್ರೇತತ್ವಂ ನೈವ ಗಚ್ಛತಿ ॥ ೧೧೮ ॥

---

೧೧೩. ಪ್ರೇತಗಳು ಹೇಳುತ್ತವೆ :—ಪುತ್ರ ! ಪ್ರೇತಯೋನಿಗೆ ಕಾರಣವನ್ನು ಹೇಳುವೆವು. ಕೇಳು. ನೀನು ಹಿಂದೆ ಯಾವಾಗಲೂ ಹರಿಯ ದಿನದಲ್ಲಿ ಉಪವಾಸ ಮಾಡದೆ ವಿರೋಧಿಸಿರುವೆ.

೧೧೪. ಮಗು ! ಆದರಿಂದ ನಾವು ಪ್ರೇತರಾದೆವು. ನೀನು ವಿಶೇಷವಾಗಿ ಹರಿ ದಿನದ ರಾತ್ರಿ ಜಾಗರಣೆ ಗೈಯಲಿಲ್ಲ.

೧೧೫. ಆದರಿಂದ ನಾವು ನಿನ್ನೊಡನೆ ಪ್ರಳಯಕಾಲದವರೆಗೆ ನಿಶ್ಚಯವಾಗಿಯೂ ಘೋರ ನರಕದಲ್ಲಿ ಬೀಳುವೆವು.

೧೧೬. ಚಂದ್ರಶರ್ಮನು ಹೇಳುತ್ತಾನೆ :—ಹರಿಭಕ್ತಿಯಿಲ್ಲದ ದ್ವಾದಶೀವ್ರತ ವನ್ನಾಚರಿಸಿದ ಜನರ ಪ್ರೇತತ್ವವು ಶಂಕರಾದಿಗಳನ್ನು ಪೂಜಿಸುವುದರಿಂದ ಹೋಗುವು ದಿಲ್ಲವೇ ?

೧೧೭. ತ್ರಿಪುರಾಂತಕನಾದ ಮಹೇಶ್ವರನು ಭಕ್ತಿಯಿಂದ ಸಂತುಷ್ಟನಾದರೆ ಉತ್ತಮ ಗತಿಯನ್ನು ಕೊಡುವುದಿಲ್ಲವೇ ? ಪ್ರೇತತ್ವವು ನೀಗುವುದಿಲ್ಲವೇ ?

೧೧೮. ಪ್ರೇತಗಳು ಹೇಳುತ್ತವೆ :—ದ್ವಾದಶೀ ವೇಧೆಯಿಂದುಂಟಾದ ಆಪತ್ತು ಪ್ರಾಯಶ್ಚಿತ್ತವಿಲ್ಲದೆ ಪರಿಹಾರವಾಗುವುದಿಲ್ಲ. ಪ್ರೇತತ್ವವೂ ಹೋಗುವುದಿಲ್ಲ.

ಪ್ರಾಯಶ್ಚಿತ್ತೀ ಸದಾಪುತ್ರ ಪೂಜಯಾನೋಽಪಿ ಶಂಕರಂ ।
ವಿನಾ ಕೇಶವಪೂಜಾಭಿಃ ಪಾಪಂ ಭಜತಿ ಗೋವಧಂ ॥ ೧೧೯ ॥
ಪ್ರಥಮಂ ಕೇಶವಃ ಪೂಜ್ಯಃ ಪಶ್ಚಾದ್ದೇವೋ ಮಹೇಶ್ವರಃ ।
ಪೂಜನೀಯಾಶ್ಚ ಭಕ್ತ್ಯಾ ವೈ ಯಾಶ್ಚಾನ್ಯಾಃ ಸಂತಿ ದೇವತಾಃ ॥ ೧೨೦ ॥
ಮೂಲಾಚ್ಛಾಖಾಃ ಪ್ರಶಾಖಾಶ್ಚ ಭವಂತಿ ಬಹುಶಸ್ತತಃ ।
ವಾಸುದೇವಾತ್ಸಮುದ್ಭೂತಂ ಜಗದೇತಚ್ಚರಾಚರಂ ॥ ೧೨೧ ॥
ತಸ್ಮಾನ್ಮೂಲಂ ಪರಿತ್ಯಜ್ಯ ಶಾಖಾಂ ನೈವಾರ್ಚಯೇದ್ಬುಧಃ ।
ವಿಶೇಷೇಣ ಜಗನ್ನಾಥಂ ತ್ರೈಲೋಕ್ಯಾಧಿಪತಿಂ ಹರಿಂ ॥ ೧೨೨ ॥
ತದ್ದಿನೇ ಯೇ ಪ್ರಕುರ್ವಂತಿ ಸಮ್ಯಗ್ವೇಧೇನ ಶೋಭಿತಂ ।
ಸಶಲ್ಯಂ ತನ್ನ ಸಂದೇಹಃ ಪ್ರೇತತ್ವಂ ಯಾತಿ ತೇನ ಚ ॥ ೧೨೩ ॥
ಹವ್ಯಂ ದೇವಾ ನ ಗೃಹ್ಣಂತಿ ಕವ್ಯಂ ಚ ಪಿತರಸ್ತಥಾ ।
ಪೂಜಾಂ ಗೃಹ್ಣಾತಿ ನೋ ಸೂರ್ಯಸ್ತಥಾ ಚೈವ ಪಿತಾಮಹಾಃ ॥ ೧೨೪ ॥
ಪ್ರೇತಾಸ್ತೇ ಯೇ ಪ್ರಕುರ್ವಂತಿ ಸಶಲ್ಯಂ ವಾಸರಂ ಹರೇಃ ।
ಪೌರ್ಣಮಾಸೀದ್ವಯೇ ಪ್ರಾಪ್ತೇ ರಾಕಾ ಸಾಗ್ನಿವಿನಿವರ್ಜಿತಾ ॥ ೧೨೫ ॥

---

೧೧೯. ಮಗು ! ಪ್ರಾಯಶ್ಚಿತ್ತಕ್ಕರ್ಹನಾದವನು ಶಂಕರನನ್ನು ಯಾವಾಗಲೂ ಪೂಜಿಸಿದರೂ ವಿಷ್ಣುವನ್ನು ಪೂಜಿಸದಿದ್ದರೆ ಗೋವಧೆಯಿಂದುಂಟಾದ ಪಾಪವನ್ನು ಹೊಂದುವನು.

೧೨೦. ಮೊದಲು ವಿಷ್ಣುವನ್ನೂ ಅನಂತರ ಶಂಕರನನ್ನೂ ತರುವಾಯ ಇತರ ದೇವತೆಗಳನ್ನೂ ಭಕ್ತಿಯಿಂದ ಪೂಜಿಸಬೇಕು.

೧೨೧. ಬುಡದಿಂದ ಬಹಳವಾಗಿ ಶಾಖೋಪಶಾಖೆಗಳುಂಟಾಗುವುವು. ಈ ಚರಾಚರಾತ್ಮಕವಾದ ಜಗತ್ತು ವಿಷ್ಣುವಿನಿಂದ ಹುಟ್ಟಿರುವುದು.

೧೨೨. ಆದ್ದರಿಂದ ಪಂಡಿತನು ಮೂಲರೂಪನೂ ಜಗದೊಡೆಯನೂ ಆದ ಹರಿಯನ್ನು ತ್ಯಜಿಸಿ ಶಾಖೆಯಂತಿರುವ ಇತರ ದೇವತೆಗಳನ್ನು ಪೂಜಿಸಬಾರದು.

೧೨೩. ಆದ್ದರಿಂದ ಹರಿದಿನನನ್ನು ವೇಧೆಗೊಳಿಸಿ ಶಲ್ಯ ಸಹಿತವನ್ನಾಗಿಸಿದವರು ಪ್ರೇತರಾಗುವರು.

೧೨೪. ಅಂತಹವರ ಹವಿಸ್ಸನ್ನು ದೇವತೆಗಳೂ, ಕವ್ಯವನ್ನು ಪಿತೃಗಳೂ, ಪೂಜೆಯನ್ನು ಸೂರ್ಯನೂ ಸ್ವೀಕರಿಸುವುದಿಲ್ಲ.

೧೨೫. ಪೂರ್ವ ವೇಧೆಯುಳ್ಳ ಹರಿದಿನವನ್ನು ಅನುಷ್ಠಾನಮಾಡಿದವರು ಪ್ರೇತರಾಗುವರು. ಎರಡು ಹುಣ್ಣಿಮೆಗಳು ಬಂದರೆ ಮೊದಲನೆ ಹುಣ್ಣಿಮೆಯು ಅಗ್ನಿಹೋತ್ರಕ್ಕೆ ಅರ್ಹವಲ್ಲ.

ವಿಶೇಷೇಣ ತು ವೈಶಾಖೀ ಶ್ರಾದ್ಧಾದೀನಾಂ ಪ್ರಶಸ್ಯತೇ ।
ವೈಶಾಖೇ ತು ತೃತೀಯಾಂ ವೈ ಪೂರ್ವವಿದ್ಧಾಂ ಕರೋತಿ ಯಃ ॥ ೧೨೬ ॥
ಹವ್ಯಂ ದೇವಾ ನ ಗೃಹ್ಣಂತಿ ಕವ್ಯಂ ಚೈವ ಪಿತಾಮಹಾಃ ।
ಯತ್ರ ದೇವಾ ನ ಗೃಹ್ಣಂತಿ ಕಥಂ ತತ್ರ ಪಿತಾಮಹಾಃ ।
ತಸ್ಮಾತ್ತ್ಕಾರ್ಯಾ ತೃತೀಯಾ ಚ ಪೂರ್ವವಿದ್ಧಾ ಬುಧೈರ್ನರೈಃ ॥ ೧೨೭ ॥
ಕುರ್ವತೇ ಯದಿ ಮೋಹಾದ್ವಾ ಪ್ರೇತತ್ವಂ ಶಾಶ್ವತಂ ತತಃ ।
ನಾಪಯಾತಿ ಕೃತೈಃ ಪುಣ್ಯೈರ್ಬಹುಶಸ್ತೀರ್ಥಸೇವನೈಃ ॥ ೧೨೮ ॥
ದಶಮೀಂ ಪೌರ್ಣಮಾಸೀಂ ಚ ಪಿತ್ರೋಃ ಸಾಂವತ್ಸರಂ ದಿನಂ ।
ಪೂರ್ವವಿದ್ಧಂ ಪ್ರಕುರ್ವಾಣೋ ನರಕಂ ಪ್ರತಿಪದ್ಯತೇ ॥ ೧೨೯ ॥
ದರ್ಶಶ್ಚ ಪೌರ್ಣಮಾಸೀ ಚ ಸಾಗ್ನಿಕೈಃ ಪೂರ್ವಸಂಯುತಾ ।
ನಾಗ್ನಿಹೀನೈಸ್ತು ಕರ್ತವ್ಯಾ ಪುನರಾಹ ಪ್ರಜಾಪತಿಃ ॥ ೧೩೦ ॥
ಕ್ಷಯಾಹೇ ತು ಪುನಃ ಪ್ರೋಕ್ತಾ ಸ್ವಕಲಾವ್ಯಾಪಿನೀ ತಿಥಿಃ ।
ಶ್ರಾದ್ಧಂ ತತ್ರ ಪ್ರಕರ್ತವ್ಯಂ ಹ್ರಾಸವೃದ್ಧೀ ನ ಕಾರಣಂ ॥ ೧೩೧ ॥

---

೧೨೬–೧೨೭. ವಿಶಾಖಾನಕ್ಷತ್ರದಿಂದ ಕೂಡಿದ ವೈಶಾಖಮಾಸದ ಹುಣ್ಣಿಮೆಯೂ ಶ್ರಾದ್ಧಮಾಡಲರ್ಹವಾದುದು. ಪೂರ್ವವಿದ್ಧವಾದರೆ ವೈಶಾಖಮಾಸದ ತದಿಗೆಯನ್ನು ಅನುಷ್ಠಾನಮಾಡುವವನ, ಹವಿಸ್ಸನ್ನು ದೇವತೆಗಳೂ, ಕವ್ಯವನ್ನು ಪಿತಾಮಹರೂ, ಸ್ವೀಕರಿಸುವುದಿಲ್ಲ. ದೇವತೆಗಳು ಹವಿಸ್ಸನ್ನು ಸ್ವೀಕರಿಸದಿದ್ದರೆ ಪಿತಾಮಹರು ಕವ್ಯವನ್ನು ಹೇಗೆ ಸ್ವೀಕರಿಸುವರು? ಆದ್ದರಿಂದ ಪ್ರಾಜ್ಞರಾದ ಮಾನವರು ಪೂರ್ವವಿದ್ಧವಾದ ತದಿಗೆಯನ್ನು ಅನುಷ್ಠಾನಮಾಡಕೂಡದು.

೧೨೮. ಅಜ್ಞಾನದಿಂದ ಅನುಷ್ಠಾನಮಾಡಿದರೆ ಶಾಶ್ವತವಾಗಿ ಪ್ರೇತರಾಗುವರು. ಆ ಪ್ರೇತತ್ವವು ಪುಣ್ಯವನ್ನಾಚರಿಸಿದ್ದರಿಂದಲೂ, ತೀರ್ಥಸೇವನೆಯಿಂದಲೂ ಪರಿಹಾರವಾಗುವುದಿಲ್ಲ.

೧೨೯. ಪೂರ್ವವಿದ್ಧವಾದ ದಶಮಿ, ಹುಣ್ಣಿಮೆ, ತಂದೆಯ ಶ್ರಾದ್ಧದಿನ ಇವುಗಳನ್ನು ಅನುಷ್ಠಾನಮಾಡಿದವನು ನರಕವನ್ನು ಹೊಂದುವನು.

೧೩೦. ಪ್ರಜಾಪತಿಯು ಪೂರ್ವವಿದ್ಧವಾದ ಅಮಾವಾಸ್ಯೆ, ಹುಣ್ಣಿಮೆಗಳನ್ನು ಅಗ್ನಿಹೋತ್ರಿಗಳೂ, ಅಗ್ನಿಹೋತ್ರಿಗಳಲ್ಲದವರೂ ಅನುಷ್ಠಾನಮಾಡಕೂಡದೆಂದು ಹೇಳಿರುತ್ತಾನೆ.

೧೩೧. ಕ್ಷಯದಿನದಲ್ಲಿ ಶ್ರಾದ್ಧಕಾಲವನ್ನು ವ್ಯಾಪಿಸಿರುವ ತಿಥಿಯಲ್ಲಿ ಶ್ರಾದ್ಧವನ್ನು ಮಾಡಬೇಕು. ತಿಥಿಯ ಕ್ಷಯವೃದ್ಧಿಗಳು ಕಾರಣಗಳಲ್ಲ.

ತತ್ಪ್ರೋಕ್ತಂ ಮುನುನಾ ಪುತ್ರ ವೇದಾಂತೈರ್ಭಾಷ್ಯಕಾರಿಭಿಃ ।
ತತ್ಪ್ರಮಾಣಂ ಪ್ರಕರ್ತವ್ಯಂ ಪ್ರೇತತ್ವಂ ಭವತೋಽನ್ಯಥಾ ॥ ೧೩೨ ॥
ವಿತ್ತೈಃ ಪ್ರಕಾರ್ಯೈಃ ಪ್ರೇತತ್ವಂ ಪ್ರಾಣಿನಾಂ ಜಾಯತೇ ಭುವಿ ।
ನಿರೀಕ್ಷ್ಯ ಧರ್ಮಶಾಸ್ತ್ರಾಣಿ ಕಾರ್ಯಂ ವಿಹಿತಮಾತ್ಮನಃ ॥ ೧೩೩ ॥
ಪ್ರಣಮ್ಯ ಸೋಮನಾಥಂ ತು ಯಾತ್ರಾಂ ಕೃತ್ವಾ ನ ಗಚ್ಛತಿ ।
ಕೃಷ್ಣಸ್ಯ ದರ್ಶನಾರ್ಥಾಯ ತಸ್ಯ ಕಿಂ ಜಾಯತೇ ಫಲಂ ॥ ೧೩೪ ॥
ಕಥ್ಯತೇ ಪರಮಾ ಮೂರ್ತಿರ್ಹರಿರೀಶ್ವರಸಂಸ್ಥಿತಾ ।
ವಿಭೇದೋ ನಾತ್ರ ಕರ್ತವ್ಯೋ ಯಥಾ ಶಂಭುಸ್ತಥಾ ಹರಿಃ ॥ ೧೩೫ ॥
ಕೃಷ್ಣಸ್ಯ ಸೋಮನಾಥಸ್ಯ ನಾಂತರಂ ದೃಶ್ಯತೇ ಕ್ವಚಿತ್ ।
ಯಾತ್ರಾ ಶ್ರೀಸೋಮನಾಥಸ್ಯ ಸಂಪೂರ್ಣಾ ಕೃಷ್ಣದರ್ಶನಾತ್ ॥ ೧೩೬ ॥
ತಸ್ಮಾದುಭಯತಃ ಪುತ್ರ ಗಂತವ್ಯಂ ನಾತ್ರ ಸಂಶಯಃ ।
ದೃಷ್ಟ್ವಾ ಸೋಮೇಶ್ವರಂ ದೇವಂ ಗಂತವ್ಯಂ ದ್ವಾರಕಾಂ ಪ್ರತಿ ॥ ೧೩೭ ॥

---

೧೩೨. ಈ ವಿಷಯದಲ್ಲಿ ಮನುವೂ, ವೇದಾಂತಗಳೂ, ಭಾಷ್ಯಕಾರರೂ ಹೇಳಿದಂತೆ ಮಾಡಬೇಕು. ಅವರು ಹೇಳಿದ ಮಾತೇ ಪ್ರಮಾಣವು. ಅದನ್ನು ಬೇರೆರೀತಿ ಮಾಡಿದರೆ ಪ್ರೇತತ್ವವುಂಟಾಗುವುದು

೧೩೩. ಭೂಮಿಯಲ್ಲಿ ಪ್ರಾಣಿಗಳಿಗೆ ಹೀಗೆ ಪ್ರೇತತ್ವವುಂಟಾಗುವುದು. ಆದ್ದರಿಂದ ಧರ್ಮಶಾಸ್ತ್ರಗಳನ್ನು ನೋಡಿ ತನಗೆ ವಿಹಿತವಾದುದನ್ನು ಮಾಡಬೇಕು.

೧೩೪. ಸೋಮನಾಥನನ್ನು ನಮಸ್ಕರಿಸಿ ಯಾತ್ರೆಗೈದರೆ ಪ್ರೇತತ್ವವು ಹೋಗುವುದಿಲ್ಲ. ಕೃಷ್ಣನ ದರ್ಶನವನ್ನಪೇಕ್ಷಿಸುವವನಿಗೆ ಅದರಿಂದೇನು ಪ್ರಯೋಜನವಾದೀತು.

೧೩೫. ಈಶ್ವರನಲ್ಲಿರುವ ಹರಿಮೂರ್ತಿಯನ್ನು ಉತ್ತಮವಾದುದೆಂದು ಹೇಳುವರು. ಶಿವನು ಹೇಗೊ ಹರಿಯೂ ಹಾಗೆಯೇ ಎಂದು ತಿಳಿಯಬೇಕು. ಈ ವಿಷಯದಲ್ಲಿ ಭೇದವನ್ನು ಭಾವಿಸಬಾರದು.

೧೩೬. ಕೃಷ್ಣನಿಗೂ, ಸೋಮನಾಥನಿಗೂ ಒಂದೆಡೆಯಲ್ಲಿಯೂ ಭೇದವು ಕಾಣಿಸುವುದಿಲ್ಲ. ಸೋಮನಾಥನ ಯಾತ್ರೆಯು ಕೃಷ್ಣದರ್ಶನದಿಂದ ಪೂರ್ತಿಯಾಗುವುದು.

೧೩೭. ಪುತ್ರ! ಆದ್ದರಿಂದ ಎರಡು ಕಡೆಗೂ ಹೋಗಬೇಕು. ಸಂದೇಹವಿಲ್ಲ. ಸೋಮೇಶ್ವರನನ್ನು ನೋಡಿ ದ್ವಾರಕೆಗೆ ಹೋಗಬೇಕು.

ಪ್ರಭಾಸೇ ಸೋಮನಾಥಸ್ಯ ಲಿಂಗಮಧ್ಯೇ ವ್ಯವಸ್ಥಿತಃ ।
ಸ್ವಯಂ ತಿಷ್ಠತಿ ಪುಣ್ಯಾತ್ಮಾ ಭೋಗಂ ಗೃಹ್ಣಾತಿ ಕೇಶವಃ ॥ ೧೩೮ ॥
ದೃಷ್ಟ್ವಾ ಸೋಮೇಶ್ವರಂ ದೇವಂ ದ್ವಾರಕಾಂ ನ ನರೋ ಗತಃ ।
ಪತನಂ ನರಕೇ ಘೋರೇ ಪಿತೄಣಾಂ ಚ ಭವಿಷ್ಯತಿ ॥ ೧೩೯ ॥
ವಿಶೇಷೇಣ ತ್ವಯಾ ವತ್ಸ ನ ಕೃತಂ ದ್ವಾದಶೀವ್ರತಂ ।
ವ್ರತಂ ಕೃತಂ ಯದಸ್ಮಾಭಿಸ್ತತ್ಕೃತಂ ವೇಧಸಂಯುತಂ ।
ನಿರ್ಗಮಂ ಯಮಲೋಕಾದ್ಧಿ ತದಸ್ಮಾಕಂ ನ ದೃಶ್ಯತೇ ॥ ೧೪೦ ॥

ಚಂದ್ರಶರ್ಮೋವಾಚ :—

ಯದಿ ತಾತ ಮಯಾಽಜ್ಞಾನಾನ್ನ ಕೃತಂ ದ್ವಾದಶೀವ್ರತಂ ।
ಕಸ್ಮಾತ್ಕೃತಂ ಸಶಲ್ಯಂ ತು ಭವದ್ಭಿರ್ದ್ವಾದಶೀವ್ರತಂ ॥ ೧೪೧ ॥

ಪ್ರೇತಾ ಊಚುಃ :—

ಕುವಿಪ್ರೈಸ್ತು ಕುದೈವಜ್ಞೈಃ ಶುಕ್ರಮಾಯಾವಿಮೋಹಿತೈಃ ।
ಪಾರುಷ್ಯತಾಹೇತುಕೈಶ್ಚ ಪ್ರೇತಯೋನಿಮಿಮಾಂ ಗತಾಃ ॥ ೧೪೨ ॥
ದತ್ತಂ ತಪ್ತಂ ಹುತಂ ಜಪ್ತಮಸ್ಮಾಕಂ ವಿಫಲಂ ಗತಂ ।
ಸಂಪ್ರಾಪ್ತಾ ಪ್ರೇತಯೋನಿಸ್ತು ಸಶಲ್ಯಾದ್ದ್ವಾದಶೀವ್ರತಾತ್ ॥ ೧೪೩ ॥

---

೧೩೮. ಕೃಷ್ಣನು ಪ್ರಭಾಸದಲ್ಲಿ ಸೋಮನಾಥ ಲಿಂಗದಲ್ಲಿದ್ದು ತಾನೇ ಭೋಗಗಳನ್ನನುಭವಿಸುವನು.

೧೩೯. ಸೋಮೇಶ್ವರನನ್ನು ನೋಡಿ ದ್ವಾರಕೆಗೆ ಹೋಗದ ಮನುಷ್ಯನೂ, ಅವನ ಪಿತೃಗಳೂ ಘೋರ ನರಕದಲ್ಲಿ ಬೀಳುವರು.

೧೪೦. ಮಗು! ನೀನು ದ್ವಾದಶೀ ವ್ರತವನ್ನಾಚರಿಸಲಿಲ್ಲ. ನಾವು ವೇಧೆಯುಳ್ಳ ದ್ವಾದಶಿಯನ್ನು ಅನುಷ್ಠಾನಮಾಡಿದ್ದೇವೆ. ಆದ್ದರಿಂದ ನಮಗೆ ಯಮಲೋಕದಿಂದ ಬಿಡುಗಡೆಯಾಗಲಿಲ್ಲ.

೧೪೧. ಚಂದ್ರಶರ್ಮನು ಹೇಳುತ್ತಾನೆ :—ತಾತ! ನಾನು ಅರಿವಿಲ್ಲದೆ ದ್ವಾದಶೀವ್ರತವನ್ನಾಚರಿಸದಿದ್ದರೆ ನೀವು ಏತಕ್ಕೆ ವಿದ್ಧ ದ್ವಾದಶೀವ್ರತವನ್ನು ಆಚರಿಸಿದಿರಿ ?

೧೪೨. ಪ್ರೇತಗಳು ಹೇಳುತ್ತವೆ :—ಶುಕ್ರಾಚಾರ್ಯನ ಮಾಯೆಯಿಂದ ಮೋಹಗೊಂಡ ಕಠಿನರಾದ ದುಷ್ಟಬ್ರಾಹ್ಮಣರಿಂದಲೂ, ದುಷ್ಟಜ್ಯೋತಿಷ್ಕರಿಂದಲೂ ನಾವು ಈ ಪ್ರೇತಜನ್ಮವನ್ನು ಹೊಂದಿದ್ದೇವೆ.

೧೪೩. ನಾವುಮಾಡಿದ ದಾನ, ತಪಸ್ಸು, ಹೋಮ, ಜಪ ಇವುಗಳೆಲ್ಲ ನಿಷ್ಫಲವಾದುವು. ವಿದ್ಧದ್ವಾದಶೀ ವ್ರತದಿಂದ ಪ್ರೇತಜನ್ಮವನ್ನು ಹೊಂದಿದ್ದೇವೆ.

ಸಶಲ್ಯಂ ಯೇ ಪ್ರಕುರ್ವಂತಿ ವಾಸರಂ ಕೇಶವಪ್ರಿಯಂ ।
ತೇಷಾಂ ಪಿತಾಮಹಾಃ ಸ್ವರ್ಗಾತ್ಪ್ರೇತತ್ವಂ ಯಾಂತಿ ಪುತ್ರಕ ॥ ೧೪೪ ॥

ಚಂದ್ರಶರ್ಮೋವಾಚ :—

ಪ್ರೇತತ್ವಂ ನಾಶಮಾಯಾತಿ ಕಥಮೇತತ್ಪಿತಾಮಹಾಃ ।
ಕರ್ಮಣಾ ಕೇನ ತತ್ಸರ್ವಂ ಯಚ್ಚಾಹಂ ಪ್ರಕರೋಮಿ ತತ್ ॥ ೧೪೫ ॥

ಪ್ರೇತಾ ಊಚುಃ :—

ಮಾ ಗಯಾಂ ಮಾ ಪ್ರಯಾಗಂ ಚ ಪುಷ್ಕರೇ ಕುರುಜಾಂಗಲೇ ।
ಅಯೋಧ್ಯಾಯಾಮವಂತ್ಯಾಂ ವಾ ಮಥುರಾಯಾಂ ನಚಾರ್ಬುದೇ ॥ ೧೪೬ ॥
ನ ಚಾನ್ಯತ್ತೀರ್ಥಲಕ್ಷಂ ತು ವರ್ಜಯಿತ್ವಾ ತು ಗೋಮತೀಂ ।
ಗಂಗಾ ಸರಸ್ವತೀ ಚೈವ ನರ್ಮದಾ ನೈವ ಪುಷ್ಕರಂ ॥ ೧೪೭ ॥
ಯಾವೃಶಂ ಗೋಮತೀತೀರೇ ಕಲೌ ಪ್ರೇತತ್ವನಾಶನಂ ।
ಗೋಮತೀನೀರದಾನೇನ ಕೃಷ್ಣವಕ್ತ್ರವಿಲೋಕನಾತ್ ॥ ೧೪೮ ॥
ವಿಲಯಂ ಯಾಂತಿ ಪಾಪಾನಿ ಜನ್ಮಕೋಟಿಕೃತಾನ್ಯಪಿ ।
ವೃಥಾ ಸನ್ಯಾಸಿನಾಂ ಪುಣ್ಯಂ ವೃಥಾ ಚ ವನವಾಸಿನಾಂ ॥ ೧೪೯ ॥

---

೧೪೪. ಮಗು! ವಿದ್ಧ ಹರಿದಿನವನ್ನು ಅನುಷ್ಠಾನಮಾಡುವವರ ಪಿತಾಮಹರು ಸ್ವರ್ಗದಿಂದ ಪ್ರೇತತ್ವವನ್ನು ಹೊಂದುವರು.

೧೪೫. ಚಂದ್ರಶರ್ಮೋವಾಚ:—ಪಿತಾಮಹರೆ! ಈ ಪ್ರೇತತ್ವವು ಹೇಗೆ ಪರಿಹಾರವಾಗುವುದು? ಯಾವ ಕರ್ಮದಿಂದ ನಿವಾರಣೆಯಾಗುವುದು? ಯಾವುದನ್ನು ನಾನು ಮಾಡಲಿ?

೧೪೬—೧೫೦. ಪ್ರೇತಗಳು ಹೇಳುತ್ತವೆ:—ಗೋಮತಿಯನ್ನುಳಿದು ಗಯಾ, ಪ್ರಯಾಗ, ಪುಷ್ಕರ, ಕುರುಜಾಂಗಲ, ಅಯೋಧ್ಯಾ, ಅವಂತೀ, ಮಥುರಾ, ಅರ್ಬುದ, ಇನ್ನೂ ಇತರ ಅನೇಕ ಲಕ್ಷತೀರ್ಥಗಳು ಇವುಗಳಿಂದ ಪ್ರೇತತ್ವವು ನೀಗುವುದಿಲ್ಲ. ಕಲಿಯುಗದಲ್ಲಿ ಗೋಮತಿಯ ದಡದಲ್ಲಿ ಪ್ರೇತತ್ವವು ಪರಿಹಾರವಾದಂತೆ ಗಂಗಾ, ಸರಸ್ವತೀ, ನರ್ಮದಾ, ಪುಷ್ಕರ ಕ್ಷೇತ್ರಗಳಲ್ಲಾಗುವುದಿಲ್ಲ. ಗೋಮತೀ ಜಲದ ದಾನ, ಕೃಷ್ಣನ ಮುಖಾವಲೋಕನ ಇವುಗಳಿಂದ ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳು ಪರಿಹಾರವಾಗುವುವು. ಮಗು! ವಿದ್ಧವಾದ ಹರಿದಿನವನ್ನು ಅನುಷ್ಠಾನ ಮಾಡಿದರೆ ಯತಿ, ವಾನಪ್ರಸ್ಥರ ಪುಣ್ಯಗಳೂ ನಿಷ್ಫಲವಾಗುವುವು. ಆದ್ದರಿಂದ ದ್ವಾರಕೆಗೆ ಹೋಗಿ ಕೃಷ್ಣನ ಪೂರ್ಣಚಂದ್ರನಂತಿರುವ ಮುಖವನ್ನು ನೋಡು. ಅದರಿಂದ ನಮಗೆ ಉತ್ತಮ ಗತಿಯುಂಟಾದೀತು. ನೀನು ಮಾಡಿದ ಪುಣ್ಯವೆಲ್ಲ

ಸಶಲ್ಯಂ ವಾಸರಂ ವಿಷ್ಣೋಃ ಕುರ್ವಂತಿ ಯದಿ ಪುತ್ರಕ ।
ತಸ್ಮಾದ್ಗಚ್ಛ ಮುಖಂ ಪಶ್ಯ ಪೂರ್ಣಚಂದ್ರಸಮಂ ಮುಖಂ ॥ ೧೫೦ ॥
ಕೃಷ್ಣಸ್ಯ ದ್ವಾರಕಾಂ ಗತ್ವಾ ಯಥಾಸ್ಮಾಕಂ ಗತಿರ್ಭವೇತ್ ।
ವಿಫಲಂ ತವ ಸಂಜಾತಾ ಸ ಕೃತಂ ಯದುಪಾರ್ಜಿತಂ ॥ ೧೫೧ ॥
ತದ್ವ್ಯರ್ಥಂ ಸಕಲಂ ಜಾತಂ ವಿನಾ ಕೇಶವಪೂಜನಾತ್ ।
ವಿನಾ ಕೇಶವಪೂಜಾಯಾಃ ಶಂಕರೋ ಯಸ್ತ್ವಯಾರ್ಚಿತಃ ।
ತತ್ಪುಣ್ಯಂ ವಿಫಲಂ ಜಾತಂ ಪ್ರೇತಯೋನಿಂ ಗಮಿಷ್ಯಸಿ ॥ ೧೫೨ ॥
ಸಂಪೂರ್ಣಂ ತವ ಪುಣ್ಯಂ ಚ ದ್ವಾರಕಾಕೃಷ್ಣದರ್ಶನಾತ್ ।
ಭವಿಷ್ಯತಿ ನ ಸಂದೇಹೋ ಗೋಮತ್ಯುದಧಿಸನ್ನಿಧೌ ॥ ೧೫೩ ॥
ದೃಷ್ಟ್ವಾ ಸೋಮೇಶ್ವರಂ ದೇವಂ ಕೃಷ್ಣಂ ಯದಿ ನ ಪಶ್ಯತಿ ।
ಯಾತ್ರಾಫಲಂ ನಚಾಪ್ನೋತಿ ವದತ್ಯೇವಂ ಸ್ವಯಂ ಶಿವಃ ॥ ೧೫೪ ॥
ದೃಷ್ಟೋಽಹಂ ತೈರ್ನ ಸಂದೇಹೋ ಯೈಃ ಕೃತಂ ಕೃಷ್ಣದರ್ಶನಂ ।
ಏಕಾ ಮೂರ್ತಿರ್ನ ಸಂದೇಹೋ ಮಮ ಕೃಷ್ಣಸ್ಯ ನಾಂತರಂ ॥ ೧೫೫ ॥
ದೃಷ್ಟ್ವಾ ಮಾಂ ದ್ವಾರಕಾಂ ಗತ್ವಾ ಕರ್ತವ್ಯಂ ಕೃಷ್ಣದರ್ಶನಂ ।
ದೃಷ್ಟ್ವಾ ಕೃಷ್ಣಂ ತು ಮಾಂ ಪಶ್ಯೇದ್ಯಾಸ್ಯತ್ಯೇವ ಮಹಾಫಲಂ ॥ ೧೫೬ ॥

---

ಕೃಷ್ಣನನ್ನು ಪೂಜಿಸದಿರುವುದರಿಂದ ವ್ಯರ್ಥವಾಯಿತು. ನೀನು ವಿಷ್ಣುವನ್ನು ಪೂಜಿಸದೆ ಶಂಕರನನ್ನು ಪೂಜಿಸಿದ ಕಾರಣ ಆ ಪುಣ್ಯವೆಲ್ಲ ನಿಷ್ಫಲವಾಯಿತು. ಆದರಿಂದ ನೀನು ಪ್ರೇತಜನ್ಮವನ್ನು ಹೊಂದುವೆ.

೧೫೩. ನೀನು ದ್ವಾರಕೆಯಲ್ಲಿ ಗೋಮತೀ ಸಂಗಮದಲ್ಲಿರುವ ಕೃಷ್ಣನನ್ನು ದರ್ಶನ ಮಾಡುವುದರಿಂದ ನಿನ್ನ ಪುಣ್ಯವು ಪೂರ್ತಿಯಾಗುವುದು.

೧೫೪. ಸೋಮೇಶ್ವರನನ್ನು ದರ್ಶನಮಾಡಿ ಕೃಷ್ಣನನ್ನು ದರ್ಶನಮಾಡದಿದ್ದರೆ ಯಾತ್ರೆಯ ಫಲವು ಕೈಗೂಡುವುದಿಲ್ಲವೆಂದು ಶಿವನೇ ಹೇಳಿರುವನು.

೧೫೫. ಕೃಷ್ಣನನ್ನು ದರ್ಶನ ಮಾಡಿದವರು ನನ್ನನ್ನು ನೋಡಿದಂತೆಯೇ ಆಗುವರು. ಸಂದೇಹವಿಲ್ಲ. ನಾವಿಬ್ಬರೂ ಒಂದೇ. ಭೇದವಿಲ್ಲ.

೧೫೬. ನನ್ನನ್ನು ನೋಡಿ ದ್ವಾರಕೆಗೆ ಹೋಗಿ ಕೃಷ್ಣನನ್ನು ದರ್ಶನ ಮಾಡ ಮಾಡಬೇಕು. ಆ ಕೃಷ್ಣನನ್ನು ನೋಡಿ ನನ್ನ ದರ್ಶನ ಮಾಡಿದರೂ ಮಹಾ ಫಲವುಂಟಾಗುವುದು.

ಕೃಷ್ಣದರ್ಶನಪೂತಾತ್ಮಾ ಯೋ ಮಾಂ ಪಶ್ಯತಿ ಮಾನವಃ ।
ನ ತಸ್ಯ ಪುನರಾವೃತ್ತಿರ್ಮಮ ಲೋಕಾಚ್ಚ ವೈಷ್ಣವಾತ್ ॥ ೧೫೭ ॥
ಇತ್ಯಾಹ ದೇವದೇವೇಶಃ ಸ್ವಯಂ ಸೋಮಪತಿಃ ಪುರಾ ।
ವಿಪ್ರಾಣಾಂ ಶ್ರುತಮಸ್ಮಾಭಿರ್ವದತಾಂ ಪುಷ್ಕರೇ ಸತಾಂ ॥ ೧೫೮ ॥
ತಸ್ಮಾದ್ಗಚ್ಛ ಪ್ರಯಾಣಾರ್ಥಂ ಕುರು ಕೃಷ್ಣಸ್ಯ ದರ್ಶನಂ ।
ಅನ್ಯಥಾ ಯಾಸ್ಯಸೇ ಯೋನಿಂ ಪೈಶಾಚೀಂ ಪಾಪದಾಯಿನೀಂ ॥ ೧೫೯ ॥
ಕೃತಾಪರಾಧೋಽಪಿ ಯದಾ ಕುರುತೇ ಕೃಷ್ಣದರ್ಶನಂ ।
ಮುಚ್ಯತೇ ನಾತ್ರ ಸಂದೇಹಃ ಪಾಪಾಜ್ಜನ್ಮಕೃತಾದಪಿ ॥ ೧೬೦ ॥
ಪೂಜಿತೇ ದೇವದೇವೇಶೇ ಕೃಷ್ಣೇ ದೇವಕಿನಂದನೇ ।
ಪೂಜಿತಾ ದೇವತಾಃ ಸರ್ವಾ ಬ್ರಹ್ಮರುದ್ರಭಗಾದಿಕಾಃ ॥ ೧೬೧ ॥
ವಿನಾ ಕೃಷ್ಣಸ್ಯ ಪೂಜಾಂ ಚ ರುದ್ರಾದ್ಯಾಸ್ತ್ರಿದಿವೌಕಸಃ ।
ಪೂಜಿತಾ ನೈವ ಕುರ್ವಂತಿ ತುಷ್ಟಿಂ ಪುತ್ರ ಪಿತಾಮಹಾಃ ॥ ೧೬೨ ॥
ತಸ್ಮಾದ್ದ್ವಾರವತೀಂ ಗತ್ವಾ ಕೃಷ್ಣಸ್ಯ ದರ್ಶನಂ ಕುರು ।
ಪ್ರೇತಯೋನೇರ್ವಿನಿರ್ಮುಕ್ತಾ ಯಾಸ್ಯಾಮಃ ಪರಮಾಂ ಗತಿಂ ॥ ೧೬೩ ॥

---

೧೫೭. ಕೃಷ್ಣನ ದರ್ಶನದಿಂದ ಪೂತನಾಗಿ ನನ್ನನ್ನು ನೋಡಿದ ಮಾನವನು. ನನ್ನ ಲೋಕದಿಂದಲೂ ವಿಷ್ಣು ಲೋಕದಿಂದಲೂ ಹಿಂದಿರುಗುವುದಿಲ್ಲ.

೧೫೮. ಹೀಗೆಂದು ಸೋಮೇಶ್ವರನು ಹಿಂದೆ ಹೇಳಿದ್ದಾನೆಂದು ಪುಷ್ಕರಕ್ಷೇತ್ರದಲ್ಲಿ ಸಾಧುಗಳಾದ ಬ್ರಾಹ್ಮಣರು ಹೇಳುತ್ತಿರುವುದನ್ನು ನಾವು ಕೇಳಿದ್ದೇವೆ.

೧೫೯. ಆದ್ದರಿಂದ ಯಾತ್ರೆಯ ಪೂರ್ತಿಗಾಗಿ ಕೃಷ್ಣನನ್ನು ದರ್ಶನಮಾಡು. ಹಾಗೆ ಮಾಡದಿದ್ದರೆ ಪಾಪವನ್ನುಂಟುಮಾಡುವ ಪಿಶಾಚ ಜನ್ಮವನ್ನು ಹೊಂದುವೆ.

೧೬೦. ಅಪರಾಧ ಮಾಡಿದವನೂ ಕೃಷ್ಣನನ್ನು ದರ್ಶನ ಮಾಡಿದರೆ ಆ ಜನ್ಮದಲ್ಲಿ ಮಾಡಿದ ಪಾಪದಿಂದ ಮುಕ್ತನಾಗುವನು.

೧೬೧. ದೇವಕೀಪುತ್ರನಾದ ಕೃಷ್ಣನನ್ನು ಪೂಜಿಸಿದರೆ ಬ್ರಹ್ಮ, ರುದ್ರ, ಸೂರ್ಯಾದಿಗಳನ್ನು ಪಜಿಸದಂತಾಗುವುದು.

೧೬೨. ಮಗು ! ಕೃಷ್ಣನನ್ನು ಪೂಜಿಸಿದೆ ರುದ್ರಾದಿ ದಿವಿಜರನ್ನು ಪೂಜಿಸಿದರೆ ಪಿತಾಮಹರು ಸಂತುಷ್ಟರಾಗುವುದಿಲ್ಲ.

೧೬೩. ಆದ್ದರಿಂದ ದ್ವಾರವತಿಗೆ ಹೋಗಿ ಕೃಷ್ಣನನ್ನು ದರ್ಶನ ಮಾಡು. ಅದರಿಂದ ನಾವು ಪ್ರೇತ ಜನ್ಮದಿಂದ ಮುಕ್ತರಾಗಿ ಉತ್ತಮ ಗತಿಯನ್ನು ಹೊಂದುವೆವು.

ಗೋಮತೀನೀರಧೌ ತಾನಿ ಯಸ್ಯಾಂಗಾನಿ ಕಲೌ ಯುಗೇ ।
ಮುನಿಭಿರ್ಯೋನಿಗಮನಂ ತಸ್ಯ ದೃಷ್ಟಂ ನ ಪುತ್ರಕ ॥ ೧೬೪ ॥
ತಾಡಿತಾಃ ಪಾದಯುಗ್ಮೇನ ಗೋಮತೀನೀರವೀಚಯಃ ।
ಅಗತೀನಾಂ ಪ್ರಕುರ್ವಂತಿ ಗತಿಂ ವೈ ಬ್ರಹ್ಮವಾದಿನಾಂ ॥ ೧೬೫ ॥
ಯಃ ಪುನಃ ಕುರುತೇ ಶ್ರಾದ್ಧಂ ಗೋಮತ್ಯುದಧಿಸಂಗಮೇ ।
ಪಿತ್ರೂಣಾಂ ಜಾಯತೇ ತೃಪ್ತಿರ್ಯಾವದಾಭೂತಸಂಪ್ಲವಂ ॥ ೧೬೬ ॥
ಸಸಾಗರಧರಾಯಾಂ ಚ ಸರ್ವತೀರ್ಥೇಷು ಯತ್ಫಲಂ ।
ದಿನೇನೈಕೇನ ತತ್ಪುಣ್ಯಂ ದ್ವಾರಕಾಕೃಷ್ಣಸನ್ನಿಧೌ ॥ ೧೬೭ ॥
ಯತ್ಫಲಂ ತ್ರಿದಶೈರ್ದೃಷ್ಟಂ ಸರ್ವತೀರ್ಥಸಮುದ್ಭವಂ ।
ತತ್ಫಲಂ ಲಭತೇ ಸರ್ವಂ ದ್ವಾರಕಾಯಾಂ ದಿನೇದಿನೇ ॥ ೧೬೮ ॥
ತೀರ್ಥಕೋಟಿಸಹಸ್ರೈಸ್ತು ಕೃತೈಃ ಶ್ರಾದ್ಧೈಶ್ಚ ಯತ್ಫಲಂ ।
ಪಿತ್ರೂಣಾಂ ತತ್ಫಲಂ ಪ್ರೋಕ್ತಂ ಗೋಮತೀತಿಲತರ್ಪಣಾತ್ ॥ ೧೬೯ ॥

---

೧೬೪. ಮಗು ! ಕಲಿಯುಗದಲ್ಲಿ ಗೋಮತೀಜಲದಲ್ಲಿ ಮಿಂದವನು ಮರಳಿ ಜನಿಸುವುದನ್ನು ಮುನಿಗಳು ಕಾಣಲಿಲ್ಲ

೧೬೫. ಗೋಮತೀ ಜಲದ ಅಲೆಗಳು ಎರಡು ಪಾದಗಳಿಂದ ತಾಡಿತವಾದರೆ ಅವು ಗತಿಯಿಲ್ಲದವರಿಗೆ ಬ್ರಹ್ಮಜ್ಞಾನಿಗಳ ಗತಿಯನ್ನು ಕೊಡುವುವು

೧೬೬. ಗೋಮತೀಸಾಗರಸಂಗಮದಲ್ಲಿ ಶ್ರಾದ್ಧ ಮಾಡಿದವನ ಪಿತೃಗಳು ಪ್ರಳಯ ಕಾಲದವರೆಗೆ ತೃಪ್ತರಾಗುವರು.

೧೬೭. ಸಮುದ್ರಗಳಿಂದ ಕೂಡಿದ ಭೂಮಿಯಲ್ಲಿರುವ ಸಕಲ ತೀರ್ಥಗಳಲ್ಲುಂಟಾಗುವ ಪುಣ್ಯವು ದ್ವಾರಕೆಯಲ್ಲಿರುವ ಕೃಷ್ಣನ ಸನ್ನಿಧಿಯಲ್ಲಿ ಒಂದು ದಿನದಲ್ಲಿಯೇ ಲಭಿಸುವುದು.

೧೬೮. ದೇವತೆಗಳು ನೋಡಿರುವ ಸಕಲ ತೀರ್ಥಗಳ ಫಲವೆಲ್ಲ ದ್ವಾರಕೆಯಲ್ಲಿ ಪ್ರತಿ ದಿನವೂ ಉಂಟಾಗುವುದು.

೧೬೯. ಸಾವಿರ ಕೋಟಿ ತೀರ್ಥಗಳಲ್ಲಿ ಪಿತೃಗಳಿಗೆ ಮಾಡಿದ ಶ್ರಾದ್ಧ ಫಲವು ಗೋಮತಿಯಲ್ಲಿ ಮಾಡಿದ ತಿಲತರ್ಪಣದಿಂದುಂಟಾಗುವುದು.

ಯತೀನಾಂ ಭೋಜನಂ ಯಸ್ತು ಯಚ್ಛತೇ ಕೃಷ್ಣಮಂದಿರೇ ।
ಸಿಕ್ಥೇ ಸಿಕ್ಥೇ ಭವೇತ್ತೃಪ್ತಿಃ ಪಿತೄಣಾಂ ಯುಗಸಂಖ್ಯಯಾ ॥ ೧೭೦ ॥
ಕೌಪೀನಾಚ್ಛಾದನಂ ಛತ್ರಂ ಪಾದುಕೇ ಚ ಕಮಂಡಲುಂ ।
ದತ್ವಾ ಸನ್ಯಾಸಿನಾಂ ಯಾತಿ ಸಪ್ತಕಲ್ಪಾನಿ ತತ್ಫಲಂ ॥ ೧೭೧ ॥
ಧನ್ಯಾಸ್ತೇ ಮಾನವಾಃ ಪುತ್ರ ವಸಂತಿ ಶ್ವಪಚಾದಯಃ ।
ದ್ವಾರಕಾಯಾಂ ಗತಿಂ ಯಾಂತಿ ವಸತಾಂ ತತ್ರ ಯೋಗಿನಾಂ ॥ ೧೭೨ ॥
ತ್ರಿಕಾಲಂ ಯೇ ಪ್ರಪಶ್ಯಂತಿ ವದನಂ ಪ್ರತ್ಯಹಂ ಹರೇಃ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೧೭೩ ॥
ಯಾ ನಾರೀ ವಿಧವಾ ಭೂತ್ವಾ ಕುರುತೇ ದ್ವಾರಕಾಶ್ರಯಂ ।
ಕುಲಾಯುತಸಹಸ್ರಂ ತು ನಯತೇ ಪರಮಂ ಪದಂ ॥ ೧೭೪ ॥
ಪುತ್ರೇಣಾಪೀಹ ಕಿಂ ಕಾರ್ಯಂ ಸ ಗತೋ ದ್ವಾರಕಾಂ ಯದಿ ।
ನಾರೀ ಪುತ್ರಶತಾಚ್ಛ್ರೇಷ್ಠಾ ಗತ್ವಾ ಕೃಷ್ಣಪುರೀಂ ವಸೇತ್ ॥ ೧೭೫ ॥

---

೧೭೦. ಕೃಷ್ಣದೇವಾಲಯದಲ್ಲಿ ಯತಿಗಳಿಗೆ ಭೋಜನವನ್ನು ನೀಡಿದರೆ ಪ್ರತಿ ಅಗಳಿನಲ್ಲಿಯೂ ಪಿತೃಗಳಿಗೆ ಒಂದುಯುಗ ಕಾಲದವರೆಗೆ ತೃಪ್ತಿಯಾಗುವುದು

೧೭೧. ಅಲ್ಲಿ ಸನ್ಯಾಸಿಗಳಿಗೆ ಕೌಪೀನ, ಹೊದ್ದಿಕೆ, ಕೊಡೆ, ಪಾದುಕೆ, ಕಮಂಡಲುಗಳನ್ನು ದಾನಮಾಡಿದವನು ಏಳು ಕಲ್ಪಗಳ ಕಾಲ ಅದರ ಫಲವನ್ನು ಪಡೆಯುವನು.

೧೭೨. ದ್ವಾರಕೆಯಲ್ಲಿ ವಾಸಿಸುವ ಚಂಡಾಲಾದಿಗಳೂ ಸಹ ಧನ್ಯರಾಗಿ ಅಲ್ಲಿ ವಾಸಿಸುವ ಯೋಗಿಗಳ ಗತಿಯನ್ನು ಪಡೆಯುವರು.

೧೭೩. ಪ್ರತಿದಿನವೂ ಹರಿಯ ಮುಖವನ್ನು ದರ್ಶನ ಮಾಡುವ ಮಾನವರು ನೂರು ಕೋಟಿ ಕಲ್ಪಗಳ ಕಾಲ ಮೋಕ್ಷಸ್ಥಾನದಿಂದ ಹಿಂದಿರುಗುವುದಿಲ್ಲ.

೧೭೪. ವಿಧವೆಯು ದ್ವಾರಕೆಯನ್ನು ಆಶ್ರಯಿಸಿದರೆ ಅವಳು ತನ್ನ ಸಾವಿರದ ಅಯುತ ಕುಲಗಳನ್ನು ಉತ್ತಮ ಸ್ಥಾನಕ್ಕೆ ಒಯ್ಯುವಳು.

೧೭೫. ದ್ವಾರಕೆಗೆ ಹೋಗದಿದ್ದರೆ ಮಗನಿಂದ ತಾನೆ ಏನು ಪ್ರಯೋಜನ? ಕೃಷ್ಣಪುರಿಯಲ್ಲಿ ವಾಸಮಾಡುವ ಹೆಂಗಸು ನೂರು ಮಕ್ಕಳಿಗಿಂತ ಉತ್ತಮಳು.

ಕೃಷ್ಣಂ ಕೃಷ್ಣಪುರೀಂ ಗತ್ವಾ ಯೋಽರ್ಚಯೇತ್ತುಲಸೀದಲೈಃ ।
ಪ್ರಾಪ್ತಂ ಜನ್ಮಫಲಂ ತೇನ ತಾರಿತಾಃ ಪ್ರಪಿತಾಮಹಾಃ ॥ ೧೭೬ ॥
ತುಲಸೀದಲಮಾಲಾಂ ತು ಕೃಷ್ಣೋತ್ತೀರ್ಣಾಂ ತು ಯೋ ವಹೇತ್ ।
ಪತ್ರೇ ಪ್ರತೇಽಶ್ವಮೇಧಾನಾಂ ದಶಾನಾಂ ಲಭತೇ ಫಲಂ ॥ ೧೭೭ ॥
ತುಲಸೀಕಾಷ್ಠಸಂಭೂತಾಂ ಯೋ ಮಾಲಾಂ ವಹತೇ ನರಃ ।
ಫಲಂ ಯಚ್ಛತಿ ದೈತ್ಯಾರಿಃ ಪ್ರತ್ಯಹಂ ದ್ವಾರಕೋದ್ಭವಂ ॥ ೧೭೮ ॥
ನಿವೇದ್ಯ ವಿಷ್ಣವೇ ಮಾಲಾಂ ತುಲಸೀಕಾಷ್ಠಸಂಭವಾಂ ।
ವಹತೇ ಯೋ ನರೋ ಭಕ್ತ್ಯಾ ತಸ್ಯ ನೈವಾಸ್ತಿಪಾತಕಂ ।
ಸದಾ ಪ್ರೀತಮನಾಸ್ತಸ್ಯ ಕೃಷ್ಣೋ ದೇವಕಿನಂದನಃ ॥ ೧೭೯ ॥
ತುಲಸೀಕಾಷ್ಠಸಂಭೂತಂ ಶಿರೋಬಾಹ್ವಾದಿಭೂಷಣಂ ।
ಜಾಯತೇ ಯಸ್ಯ ಮರ್ತ್ಯಸ್ಯ ತಸ್ಯ ದೇಹೇ ಸದಾ ಹರಿಃ ॥ ೧೮೦ ॥
ತುಲಸೀಮಾಲಯಾ ಯಸ್ತು ಭೂಷಿತಃ ಕರ್ಮ ಚಾಚರೇತ್ ।
ಪಿತೄಣಾಂ ದೇವತಾನಾಂ ಚ ಕೃತಂ ಕೋಟಿಗುಣಂ ಕಲೌ ॥ ೧೮೧ ॥

---

೧೭೬. ದ್ವಾರಕೆಗೆ ಹೋಗಿ ಕೃಷ್ಣನನ್ನು ತುಲಸೀದಳಗಳಿಂದ ಅರ್ಚಿಸುವವನು ಜನ್ಮದ ಫಲವನ್ನು ಪಡೆಯುವನು. ಅವನ ಪ್ರಪಿತಾಮಹರು ಉದ್ಧೃತರಾಗುವರು.

೧೭೭. ಕೃಷ್ಣನಿಗೆ ಅರ್ಪಿಸಿದ ತುಲಸೀದಳಗಳ ಮಾಲೆಯನ್ನು ಧರಿಸುವವನು ಪ್ರತಿ ದಳದಲ್ಲಿಯೂ ಹತ್ತು ಅಶ್ವಮೇಧಯಾಗಗಳ ಫಲವನ್ನು ಪಡೆಯುವನು.

೧೭೮. ತುಲಸೀಕಾಷ್ಠಗಳಿಂದಾದ ಮಣಿಗಳ ಮಾಲೆಯನ್ನು ಧರಿಸುವ ಮಾನವನಿಗೆ ಕೃಷ್ಣನು ಪ್ರತಿ ದಿನವೂ ದ್ವಾರಕಾವಾಸದಿಂದಾಗುವ ಫಲವನ್ನು ಕೊಡುವನು.

೧೭೯. ತುಲಸೀ ಮಣಿಮಾಲೆಯನ್ನು ಧರಿಸುವವನಿಗೆ ಪಾಪವಿರುವುದಿಲ್ಲ. ಅವನಿಗೆ ದೇವಕೀಪುತ್ರನಾದ ಕೃಷ್ಣನು ಯಾವಾಗಲೂ ಸಂತುಷ್ಟನಾಗುವನು.

೧೮೦. ತುಲಸೀಕಾಷ್ಠದ ಒಡವೆಯನ್ನು ಶಿರೋಭುಜಗಳಲ್ಲಿ ಧರಿಸುವವನ ದೇಹದಲ್ಲಿ ಯಾವಾಗಲೂ ಹರಿಯು ವಾಸವಾಗಿರುವನು.

೧೮೧. ಕಲಿಯುಗದಲ್ಲಿ ತುಲಸೀ ಮಾಲೆಯಿಂದ ಅಲಂಕಾರಗೊಂಡು ದೇವಪಿತೃಕರ್ಮವನ್ನಾಚರಿಸಿದರೆ ಅದು ಕೋಟಿಯಷ್ಟು ಹೆಚ್ಚಾಗುವುದು.

ತುಲಸೀಕಾಷ್ಠಮಾಲಾಂ ತು ಪ್ರೇತರಾಜಸ್ಯ ದೂತಕಾಃ ।
ದೃಷ್ಟ್ವಾ ದೂರೇಣ ನಶ್ಯಂತಿ ವಾತೋದ್ಧೂತಾ ಯಥಾಲಯಃ ॥ ೧೮೨ ॥
ಜಾಯತೇ ತದ್ಗೃಹೇ ನೈವ ಪಾಪಸಂಕ್ರಮಣಂ ಕುತಃ ।
ಶ್ರುತಂ ಪುರಾಣಮಸ್ಮಾಭಿಃ ಕಥಿತಂ ಬ್ರಹ್ಮವಾದಿಭಿಃ ॥ ೧೮೩ ॥
ತಸ್ಮಾನ್ಮಾಲಾ ತ್ವಯಾ ಧಾರ್ಯಾ ತುಲಸೀಕಾಷ್ಠಸಂಭವಾ ।
ಹರತೇ ನಾತ್ರ ಸಂದೇಹ ಐಹಿಕಾಮುಷ್ಮಿಕಂ ತ್ವಘಂ ॥ ೧೮೪ ॥
ತುಲಸೀಮಾಲಯಾ ಯಸ್ತು ಭೂಷಿತೋ ಭ್ರಮತೇ ಯದಿ ।
ದುಃಸ್ವಪ್ನಂ ದುರ್ನಿಮಿತ್ತಂ ಚ ನ ಭಯಂ ಶಾತ್ರವಂ ಕ್ವಚಿತ್ ॥ ೧೮೫ ॥
ಕೃತ್ವಾ ವೈ ತೀರ್ಥಸನ್ಯಾಸಂ ಯತಯೋ ವಿಧವಾಃ ಸ್ತ್ರಿಯಃ ।
ಜೀವನ್ಮುಕ್ತಾಃ ಕಲೌ ಜ್ಞೇಯಾಃ ಕುಲಕೋಟಿಸಮನ್ವಿತಾಃ ॥ ೧೮೬ ॥
ಧಾರಯಂತಿ ನ ಯೇ ಮಾಲಾಂ ಹೈತುಕಾಃ ಪಾಪಮೋಹಿತಾಃ ।
ನರಕಾನ್ನ ನಿವರ್ತಂತೇ ದಗ್ಧಾಃ ಕೋಪಾಗ್ನಿನಾ ಹರೇಃ ॥ ೧೮೭ ॥
ಉನ್ಮೀಲಿನೀ ವಂಜುಲಿನೀ ತ್ರಿಸ್ಪೃಶಾ ಪಕ್ಷವರ್ಧಿನೀ ।
ತ್ವಯಾ ಪುತ್ರ ಪ್ರಕರ್ತವ್ಯಾ ಜಯಂತೀ ವಿಜಯಾ ಜಯಾ ॥ ೧೮೮ ॥

---

೧೮೨. ತುಳಸೀಕಾಷ್ಠ ಮಾಲೆಯನ್ನು ನೋಡಿ ಯಮನ ದೂತರು ದೂರದಿಂದಲೇ ಗಾಳಿಯಿಂದ ಹೊಡೆಯಲ್ಪಟ್ಟ ದುಂಬಿಗಳಂತೆ ಅದೃಶ್ಯರಾಗುವರು.

೧೮೩. ತುಲಸೀಮಾಲೆಯನ್ನು ಧರಿಸಿದವನ ಮನೆಯಲ್ಲಿ ಪಾಪವೇ ಉಂಟಾಗುವುದಿಲ್ಲ. ಹೀಗೆಂದು ನಾವು ಪುರಾಣಗಳಿಂದ ಕೇಳಿದ್ದೇವೆ. ಬ್ರಹ್ಮಜ್ಞಾನಿಗಳೂ ಹೇಳಿರುವರು.

೧೮೪. ಆದ್ದರಿಂದ ನೀನು ತುಲಸೀಕಾಷ್ಠ ಮಣಿಗಳನ್ನು ಧರಿಸು, ಐಹಿಕಾಮುಷ್ಮಿಕ ಪಾಪಗಳನ್ನು ಪರಿಹರಿಸುವುದು. ಸಂದೇಹವಿಲ್ಲ.

೧೮೫. ತುಲಸೀಮಾಲೆಯಿಂದ ಅಲಂಕಾರಗೊಂಡು ಸಂಚರಿಸಿದರೆ ದುಃಸ್ವಪ್ನ, ದುಶ್ಶಕುನ, ಶತ್ರುಭಯಮುಂತಾದವುಗಳಿರುವುದಿಲ್ಲ.

೧೮೬. ದ್ವಾರಕೆಯಲ್ಲಿ ತೀರ್ಥಸ್ನಾನವನ್ನು ಮಾಡಿದ ಯತಿಗಳೂ, ವಿಧವೆಯರೂ, ಕೋಟಿ ಕುಲಗಳೊಡನೆ ಜೀವನ್ಮುಕ್ತರಾಗುವರು.

೧೮೭. ಹೇತುವಾದಿಗಳು ಪಾಪಮೋಹಿತರಾಗಿ ತುಲಸೀ ಮಾಲೆಯನ್ನು ಧರಿಸದಿದ್ದರೆ ಹರಿಯ ಕೋಪಾಗ್ನಿಯಿಂದ ದಗ್ಧರಾಗಿ ನರಕದಿಂದ ಹಿಂದಿರುಗುವುದಿಲ್ಲ.

೧೮೮–೧೮೯. ದ್ವಾರಕೆಯಲ್ಲಿ ಕಲಿಯುಗದಲ್ಲಿ ಉನ್ಮೀಲಿನಿ, ವಂಜುಲಿನಿ, ತ್ರಿದಿನಗಳನ್ನು ಸ್ಪರ್ಶಿಸಿದ ತಿಥಿ, ಪಕ್ಷವರ್ಧಿನೀ, ಜಯಂತೀ, ವಿಜಯಾ, ಜಯಾ, ಕೃಷ್ಣನಿಗೆ

ಪಾಪಘ್ನೀ ಚಾಷ್ಟಮೀ ಪ್ರೋಕ್ತಾ ಕೃಷ್ಣಸ್ಯಾತೀವ ವಲ್ಲಭಾ ।
ಕೃತಾ ಕಲೌ ಯುಗೇ ಪುತ್ರ ದ್ವಾರಕಾ ಮೋಕ್ಷದಾಯಿನೀ ॥ ೧೮೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾಗಮನತುಲಸೀಧಾರಣಮಾಹಾತ್ಮ್ಯವರ್ಣನಂ ನಾಮ
ತ್ರಯೋವಿಂಶತಿತಮೋಽಧ್ಯಾಯಃ

---

ಪ್ರಿಯವೂ, ಪಾಪವನ್ನು ಪರಿಹರಿಸುವುದೂ ಆದ ಅಷ್ಟಮೀ ಇವುಗಳನ್ನು ಅನುಷ್ಠಾನ ಮೋಕ್ಷವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾರಕಾಗಮನತುಲಸೀಧಾರಣಮಾಹಾತ್ಮ್ಯವರ್ಣನವೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಚತುರ್ವಿಂಶತಿತಮೋಽಧ್ಯಾಯಃ

## ದ್ವಾರಕಾನಗರೀಶ್ರೈಷ್ಠ್ಯವರ್ಣನಂ

ಶ್ರೀ ಮಾರ್ಕಂಡೇಯ ಉವಾಚ :—

ಪಿತೄಣಾಂ ಪ್ರೇತರೂಪಾಣಾಂ ಶ್ರುತ್ವಾ ವಾಕ್ಯಂ ಮಹೀಪತೇ ।
ಚಂದ್ರಶರ್ಮಾ ದ್ವಿಜಶ್ರೇಷ್ಠೋ ದ್ವಾರಕಾಂ ಸಮುಪಾಗತಃ ॥ ೧ ॥

ರುಕ್ಮಿಣೀಸಹಿತಃ ಕೃಷ್ಣೋ ಯತ್ರ ತಿಷ್ಠತಿ ಚಾನ್ವಹಂ ।
ಯತ್ರ ತಿಷ್ಠಂತಿ ತೀರ್ಥಾನಿ ತತ್ರ ಯಾತೋ ದ್ವಿಜೋತ್ತಮಃ ॥ ೨ ॥

ಯತ್ರ ತಿಷ್ಠಂತಿ ಯಜ್ಞಾಶ್ಚ ಯತ್ರ ತಿಷ್ಠಂತಿ ದೇವತಾಃ ।
ಯತ್ರ ತಿಷ್ಠಂತಿ ಋಷಯೋ ಮುನಯೋ ಯೋಗವಿತ್ತಮಾಃ ॥ ೩ ॥

ಯಾ ಪುರೀ ಸಿದ್ಧಗಂಧರ್ವೈಃ ಸೇವ್ಯತೇ ಕಿಂನರೈರ್ನರೈಃ ।
ಅಪ್ಸರೋಗಣಯಕ್ಷೈಶ್ಚ ದ್ವಾರಕಾ ಸರ್ವಕಾಮದಾ ॥ ೪ ॥

---

### ಕನ್ನಡದ ಅನುವಾದ

#### ದ್ವಾರಕಾನಗರೀಮಾಹಾತ್ಮ್ಯವರ್ಣನ

೧. ಶ್ರೀ ಮಾರ್ಕಂಡೇಯನು ಹೇಳುತ್ತಾನೆ :—ದೊರೆಯೆ ! ಚಂದ್ರಶರ್ಮ ದ್ವಿಜವರ್ಯನು ಪ್ರೇತರಾಗಿರುವ ಪಿತೃಗಳ ವಾಕ್ಯದಂತೆ ದ್ವಾರಕೆಗೆ ಬಂದನು.

೨. ಆ ದ್ವಿಜವರ್ಯನು ರುಕ್ಮಿಣೀಸಹಿತನಾದ ಕೃಷ್ಣನೂ, ತೀರ್ಥಗಳೂ, ಇರುವ ಸ್ಥಳಗಳಿಗೆ ಹೋದನು.

೩. ಅಲ್ಲಿ ಯಜ್ಞಗಳೂ, ದೇವತೆಗಳೂ, ಋಷಿಗಳೂ ಯೋಗವನ್ನು ತಿಳಿದ ಮುನಿಗಳೂ, ಇರುವರು.

೪. ಸಿದ್ಧರೂ, ಗಂಧರ್ವರೂ, ಕಿನ್ನರರೂ, ಅಪ್ಸರರೂ, ಮಾನವರೂ, ಯಕ್ಷರೂ ಸೇವಿಸುವ ಆ ದ್ವಾರಕಾಪಟ್ಟಣವು ಸಕಲೇಷ್ಟಾರ್ಥಗಳನ್ನು ಕೊಡುವುದು.

ಸ್ವರ್ಗಾರೋಹಣನಿಶ್ರೇಣೀ ವಹತೇ ಯತ್ರ ಗೋಮತೀ ।
ಸಾ ಪುರೀ ಮೋಕ್ಷದಾ ಸ್ಯಾಣಾಂ ದೃಷ್ಟ್ವಾ ವಿಪ್ರವರೇಣ ಹಿ ॥ ೫ ॥
ಯಸ್ಯಾಃ ಸೀಮಾಂ ಪ್ರವಿಷ್ಟಸ್ಯ ಬ್ರಹ್ಮಹತ್ಯಾದಿಪಾತಕಂ ।
ನಶ್ಯತೇ ದರ್ಶನಾದೇವ ತಾಂ ಪುರೀಂ ಕೋ ನ ಸೇವತೇ ॥ ೬ ॥
ಗತ್ವಾ ಕೃಷ್ಣಪುರೀಂ ದೃಷ್ಟ್ವಾ ಗೋಮತೀಂ ಚೈವ ಸಾಗರಂ ।
ಮನ್ಯೇ ಕೃತಾರ್ಥಮಾತ್ಮಾನಂ ಜೀವಿತಂ ಯೌವನಂ ಧನಂ ॥ ೭ ॥
ದೃಷ್ಟ್ವಾ ಕೃಷ್ಣಪುರೀಂ ರಮ್ಯಾಂ ಕೃಷ್ಣಸ್ಯ ಮುಖಪಂಕಜಂ ।
ಧನ್ಯೋಽಹಂ ಕೃತಕೃತ್ಯೋಽಹಂ ಸಭಾಗ್ಯೋಽಹಂ ಧರಾತಲೇ ॥ ೮ ॥
ದೃಷ್ಟ್ವಾ ಕೃಷ್ಣಮುಖಂ ರಮ್ಯಂ ರುಕ್ಮಿಣೀಂ ದ್ವಾರಕಾಂ ಪುರೀಂ ।
ತೀರ್ಥಕೋಟಿಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಂ ॥ ೯ ॥
ಪುಣ್ಯೈರ್ಲಕ್ಷಸಹಸ್ರೈಸ್ತು ಪ್ರಾಪ್ತಾ ದ್ವಾರವತೀ ಶುಭಾ ।
ಶುಕ್ಲಾ ವೈಶಾಖಮಾಸೇ ತು ಸಂಪ್ರಾಪ್ತಾ ಮಧುಸೂದನೀ ॥ ೧೦ ॥
ದ್ವಾದಶೀ ತ್ರಿಸ್ಪೃಶಾನಾಮ ಪಾಪಕೋಟಿಶತಾಪಹಾ ।
ಧನ್ಯಾಃ ಸರ್ವೇ ಮನುಷ್ಯಾಸ್ತೇ ವೈಶಾಖೇ ಮಧುಸೂದನೀ ॥ ೧೧ ॥

---

೫. ಸ್ವರ್ಗವನ್ನೇರಲು ಏಣಿಯಂತಿರುವ ಗೋಮತೀ ನದಿಯು ಹರಿಯುತ್ತಿರುವ ದ್ವಾರಕಾಪುರಿಯು ದರ್ಶನ ಮಾಡಿದ ಬ್ರಾಹ್ಮಣನಿಗೆ ಮೋಕ್ಷವನ್ನು ಕೊಡುವುದು.

೬. "ಆ ದ್ವಾರಕಾಪುರಿಯ ಎಲ್ಲೆಯನ್ನು ಪ್ರವೇಶಿಸಿ ದರ್ಶನ ಮಾಡುವುದರಿಂದಲೆ ಬ್ರಹ್ಮಹತ್ಯಾದಿ ಪಾಪಗಳು ಪರಿಹಾರವಾಗುವುವು. ಆ ಪಟ್ಟಣವನ್ನು ಯಾವನು ತಾನೆ ಸೇವಿಸಲಾರನ ?.

೭. ಆ ಕೃಷ್ಣನ ಪಟ್ಟಣಕ್ಕೆ ಹೋಗಿ ಗೋಮತೀ ಸಾಗರಗಳನ್ನು ನೋಡಿದ ನನ್ನ ಆತ್ಮವೂ, ಜೀವನವೂ, ಯೌವನವೂ, ಧನವೂ ಸಾರ್ಥಕಗಳೆಂದರಿಯುವೆನು.

೮. ಮನೋಹರವಾದ ಕೃಷ್ಣನ ನಗರಕ್ಕೆ ಹೋಗಿ ಅವನ ಮುಖ ಕಮಲವನ್ನು ನೋಡಿದ ನಾನು ಭೂಮಿಯಲ್ಲಿ ಧನ್ಯನು, ಕೃತಕೃತ್ಯನು, ಭಾಗ್ಯವಂತನು.

೯. ಸುಂದರವಾದ ಕೃಷ್ಣನ ಮುಖ, ರುಕ್ಮಿಣಿ, ದ್ವಾರಕಾನಗರ ಇವುಗಳನ್ನು ನೋಡಿದಮೇಲೆ ಸಾವಿರಕೋಟಿ ತೀರ್ಥಗಳನ್ನು ಸೇವಿಸುವುದರಿಂದೇನು ಪ್ರಯೋಜನ ?

೧೦-೧೧. ನಾನು ಅನೇಕ ಸಾವಿರ ಲಕ್ಷ ಪುಣ್ಯಗಳಿಂದ ದ್ವಾರವತಿಯನ್ನು ಹೊಂದಿದೆನು. ವೈಶಾಖಮಾಸದ ಮಧುಸೂದನೀ ತ್ರಿಸ್ಪೃಶಾ ಎಂಬ ದ್ವಾದಶೀ ಇದು ನೂರುಕೋಟಿ ಪಾಪಗಳನ್ನು ಪರಿಹರಿಸುವುದು. ಈ ಬುಧವಾರದಿಂದ ಸಹಿತವಾದ ತ್ರಿಸ್ಪೃಶಾ ಮಧುಸೂದನೀ ದ್ವಾದಶಿಯನ್ನು ಹೊಂದಿದವರು (ಅನುಷ್ಠಾನ ಮಾಡಿದ

ಸಂಪ್ರಾಪ್ತಾ ತ್ರಿಸ್ಪೃಶಾ ಯೈಸ್ತು ಬುಧವಾರೇಣ ಸಂಯುತಾ ।
ನ ಯಜ್ಞೈಸ್ತು ನ ವೇದೈಸ್ತು ನ ತೀರ್ಥೈಃ ಕೋಟಿಸೇವಿತೈಃ ।
ಪ್ರಾಪ್ಯತೇ ತತ್ಫಲಂ ನೈವ ದ್ವಾರಕಾಯಾಂ ಯಥಾ ನೃಣಾಂ ॥ ೧೨ ॥
ಏವಮುಕ್ತ್ವಾ ದ್ವಿಜಶ್ರೇಷ್ಠೋ ಗೋಮತೀತೀರಮಾಶ್ರಿತಃ ।
ಉಪಸ್ಪೃಶ್ಯ ಯಥಾನ್ಯಾಯಂ ಶಾಸ್ತ್ರದೃಷ್ಟೇನ ಕರ್ಮಣಾ ॥ ೧೩ ॥
ಕೃತ್ವಾ ಸ್ನಾನಂ ಯಥೋಕ್ತಂ ತು ಸಂತರ್ಪ್ಯ ಪಿತೃದೇವತಾಃ ।
ಚಕ್ರತೀರ್ಥಾತ್ಸಮಾದಾಯ ಶೈಲಾಂಶ್ಚಕ್ರಾಂಕಿತಾನ್ ಶುಭಾನ್ ।
ಪೂಜಿತಾಃ ಪುರುಷಸೂಕ್ತೇನ ಯಥೋಕ್ತವಿಧಿನಾ ನೃಪ ॥ ೧೪ ॥
ಶಿವಪೂಜಾ ಕೃತಾ ಪಶ್ಚಾತ್ಸಂಸ್ಮೃತ್ಯ ಪಿತೃಭಾಷಿತಂ ।
ದತ್ವಾ ಪಿಂಡೋದಕಂ ಸಮ್ಯಕ್ಪಿತೄಣಾಂ ವಿಧಿಪೂರ್ವಕಂ ॥ ೧೫ ॥
ವಿಲೇಪನಂ ಚ ವಸ್ತ್ರಾಣಿ ಪುಷ್ಪಾಣಿ ಧೂಪದೀಪಕಾ ।
ನೈವೇದ್ಯಾನಿ ಮನೋಜ್ಞಾನಿ ಕಂದಮೂಲಫಲಾನಿ ಚ ॥ ೧೬ ॥
ತಾಂಬೂಲಂ ಚ ಸಕರ್ಪೂರಂ ಕೃತ್ವಾ ನೀರಾಜನಾದಿಕಂ ।
ಪ್ರದಕ್ಷಿಣಾಂ ನಮಸ್ಕಾರಂ ಸ್ತುತಿಪೂರ್ವಂ ಪುನಃ ಪುನಃ ॥ ೧೭ ॥
ಕ್ಷಮಾಪಯಿತ್ವಾ ದೇವೇಶಂ ಚಕ್ರೇ ಜಾಗರಣಂ ತತಃ ।
ಯಾಮತ್ರಯೇ ವ್ಯತೀತೇ ತು ಚಂದ್ರಶರ್ಮಾ ಹ್ಯುವಾಚ ಹ ॥ ೧೮ ॥

---

ವರು) ಪುಣ್ಯವಂತರು. ಯಜ್ಞ, ವೇದ, ಕೋಟಿತೀರ್ಥಗಳು ಇವುಗಳನ್ನು ಸೇವಿಸಿದರೂ ದ್ವಾರಕೆಯಲ್ಲಿ ಆ ದ್ವಾದಶಿಯನ್ನು ಅನುಷ್ಠಾನಮಾಡಿದ ಫಲವು ದೊರೆಯುವುದಿಲ್ಲ".

೧೩–೧೪. ಆ ದ್ವಿಜೋತ್ತಮನು ಹೀಗೆ ಹೇಳಿ ಗೋಮತೀ ತೀರಕ್ಕೆ ಹೋಗಿ ವಿಧಿಯಂತೆ ಆಚಮನ ಸ್ನಾನಗಳನ್ನು ಮಾಡಿ ಪಿತೃದೇವತೆಗಳಿಗೆ ತರ್ಪಣಗೈದು ಚಕ್ರತೀರ್ಥದಿಂದ ಚಕ್ರಾಂಕಿತವಾದ ಶುಭ ಶಿಲೆಗಳನ್ನು ತಂದು ಪುರುಷ ಸೂಕ್ತದಿಂದ ವಿಧಿಯಂತೆ ಪೂಜಿಸಿದನು.

೧೫–೧೮. ತರುವಾಯ ಆ ಚಂದ್ರಶರ್ಮನು ತಂದೆಯ ಮಾತನ್ನು ಸ್ಮರಿಸಿ ಪಿತೃಗಳಿಗೆ ವಿಧಿಯಂತೆ ಪಿಂಡೋದಕವನ್ನಿತ್ತು ವಿಲೇಪನ, ವಸ್ತ್ರ, ಪುಷ್ಪ, ಧೂಪ, ದೀಪ ನೈವೇದ್ಯ, ಗಡ್ಡೆ ಗೆಣಸು, ಹಣ್ಣು, ತಾಂಬೂಲ, ಕರ್ಪೂರ ನೀರಾಜನ, ಸ್ತುತಿಸಹಿತವಾದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಕೃಷ್ಣನಲ್ಲಿ ಕ್ಷಮೆ ಬೇಡಿ ಜಾಗರಣೆಮಾಡಿದನು. ಅನಂತರ ಮೂರುಜಾವಗಳು ಕಳೆಯಲು ಅವನು ಇಂತೆಂದನು.

ಆತುರಸ್ಯ ಚ ದೀನಸ್ಯ ಶೃಣು ಕೃಷ್ಣ ವಚೋ ಮಮ ।
ಸಂಸಾರಭಯಸಂತ್ರಸ್ತಂ ಮಾಂ ತ್ವಮುದ್ಧರ ಕೇಶವ ॥ ೧೯ ॥
ತ್ವತ್ಪಾದಾಂಬುಜಭಕ್ತಾನಾಂ ನ ದುಃಖಂ ಪಾಪಿನಾಮಪಿ ।
ಕಿಂ ಪುನಃ ಪಾಪಹೀನಾನಾಂ ದ್ವಾದಶೀ ಸೇವಿನಾಂ ನೃಣಾಂ ॥ ೨೦ ॥
ದ್ವಾದಶೀವೇಧಜಂ ಪಾಪಂ ಕಥಿತಂ ಮಮ ಪೂರ್ವಜೈಃ ।
ದುಷ್ಕೃತಂ ನಾಶಮಾಯಾತು ತ್ವತ್ಪ್ರಸಾದಾಜ್ಜನಾರ್ದನ ॥ ೨೧ ॥
ಸವಿದ್ಧಂ ತ್ವದ್ದಿನಂ ಕೃಷ್ಣ ಯತ್ಕೃತಂ ಜಾಗರಂ ಹರೇ ।
ತತ್ಪಾಪಂ ವಿಲಯಂ ಯಾತು ಯಥಾ ಲವಣಮಂಭಸಿ ॥ ೨೨ ॥
ಸವಿದ್ಧಂ ವಾಸರಂ ಯಸ್ಮಾತ್ಕೃತಂ ಮಮ ಪಿತಾಮಹೈಃ ।
ಪ್ರೇತತ್ವಂ ತೇನ ಸಂಪ್ರಾಪ್ತಂ ಮಹಾದುಃಖಪ್ರಸಾದಕಂ ॥ ೨೩ ॥
ಯಥಾ ಪ್ರೇತತ್ವನಿರ್ಮುಕ್ತಾ ಮಮ ಪೂರ್ವಪಿತಾಮಹಾಃ ।
ಮುಕ್ತಿಂ ಪ್ರಯಾಂತಿ ದೇವೇಶ ತಥಾ ಕುರು ಜಗತ್ಪತೇ ॥ ೨೪ ॥
ಪುನರೇವ ಯದುಶ್ರೇಷ್ಠ ಪ್ರಸಾದಂ ಕರ್ತುಮರ್ಹಸಿ ।
ಅವಿದ್ಯಾಮೋಹಿತೇನಾಪಿ ನ ಕೃತಂ ತವ ಪೂಜನಂ ॥ ೨೫ ॥

---

೧೯. "ಕೃಷ್ಣ! " ರೋಗಪೀಡಿತನೂ, ದೀನನೂ, ಆದ ನನ್ನ ಮಾತನ್ನು ಕೇಳು. ಸಂಸಾರದಿಂದ ಭಯಗೊಂಡ ನನ್ನನ್ನು ಉದ್ಧರಿಸು.

೨೦. ನಿನ್ನ ಪಾದಾರವಿಂದದಲ್ಲಿ ಭಕ್ತಿಯನ್ನಿಟ್ಟಿರುವ ಪಾಪಿಗಳಿಗೂ ದುಃಖ ವುಂಟಾಗುವುದಿಲ್ಲ. ಪಾಪರಹಿತನಾದ ದ್ವಾದಶಿಯನ್ನು ಸೇವಿಸುವ ಮಾನವರ ವಿಷ ಯವನ್ನು ಹೇಳತಕ್ಕದ್ದೇನು.

೨೧. ನನ್ನ ಪಿತೃಗಳು ದಶಮೀ ವೇಧೆಯಿಂದ ಪಾಪವುಂಟಾಗಿದೆಯೆಂದು ಹೇಳಿ ರುವರು. ಕೃಷ್ಣ ! ಆ ಪಾಪವು ನಿನ್ನ ಅನುಗ್ರಹದಿಂದ ನೀಗಲಿ.

೨೨. ಕೃಷ್ಣ ! ವಿದ್ಧವಾದ ನಿನ್ನ ದಿನದಲ್ಲಿ ಜಾಗರಣೆ ಮಾಡಿದ ಪಾಪವು ನೀರಿ ನಲ್ಲಿ ಉಪ್ಪು ಕರಗುವಂತೆ ಪರಿಹಾರವಾಗಲಿ,

೨೩. ನನ್ನ ಪಿತಾಮಹರು ವಿದ್ಧವಾದ ನಿನ್ನ ದಿನದಲ್ಲಿ ವ್ರತಾನುಷ್ಠಾನ ಮಾಡಿ ದ್ದರಿಂದ ಅತಿ ದುಃಖವನ್ನುಂಟುಮಾಡುವ ಪ್ರೇತತ್ವವನ್ನು ಹೊಂದಿದರು.

೨೪. ಜಗದೊಡೆಯನಾದ ಜನಾರ್ದನ ! ನನ್ನ ಹಿಂದಿನ ಪಿತಾಮಹರು ಪ್ರೇತ ಮುಕ್ತರಾಗಿ ಮುಕ್ತಿಯನ್ನೈದುವಂತೆ ಮಾಡು.

೨೫. ಯಾದವೇಂದ್ರ ! ಮರಳಿ ನನಗೆ ಅನುಗ್ರಹಿಸಲರ್ಹನಾಗಿರುವೆ. ನಾನು ಅಜ್ಞಾನಾಧಾರನಾಗಿ ನಿನ್ನ ಪೂಜೆಯನ್ನೆಸಗಲಿಲ್ಲ.

ಮಯಾ ಪಾಪೇನ ದೇವೇಶ ಶಿವಭಕ್ತಿಃ ಸಮಾಶ್ರಿತಾ ।
ತವ ಭಕ್ತಿಃ ಕೃತಾ ನೈವ ನ ಕೃತಂ ತವ ವಾಸರಂ ॥ ೨೬ ॥
ನ ದೃಷ್ಟಾ ದ್ವಾರಕಾ ಕೃಷ್ಣ ನ ಸ್ನಾತೋ ಗೋಮತೀಜಲೇ ।
ನ ದೃಷ್ಟಂ ಪಾದಪದ್ಮಂ ಚ ತ್ವದೀಯಂ ಮೋಕ್ಷದಾಯಕಂ ॥ ೨೭ ॥
ನ ಕೃತಾ ದ್ವಾರಕಾಯಾತ್ರಾ ದೃಷ್ಟ್ವಾ ಸೋಮೇಶ್ವರಂ ಪ್ರಭುಂ
ನಿಷ್ಫಲಂ ಸುಕೃತಂ ಜಾತಂ ಯಸ್ಮಾನ್ಮಯಾ ಸಮುಪಾರ್ಜಿತಂ ॥ ೨೮ ॥
ಮತ್ಪೂರ್ವಜೈಸ್ತು ಕಥಿತಂ ಸರ್ವಮೇವ ಸುರೇಶ್ವರ ।
ತತ್ಪುಣ್ಯಂ ಮಾ ವೃಥಾ ಯಾತು ಪ್ರಸಾದಾತ್ತವ ಕೇಶವ ॥ ೨೯ ॥
ದೃಷ್ಟಂ ತು ತವ ವಕ್ತ್ರಂ ಚ ದುರ್ಲಭಂ ಭುವನತ್ರಯೇ ।
ತನ್ನಾಸ್ತಿ ದೇವಕೀಪುತ್ರ ಪುರಾಣೇಷು ಶ್ರುತಂ ಮಯಾ ॥ ೩೦ ॥
ಸಾಪರಾಧಾಸ್ತು ಯೇ ಕೇಚಿಚ್ಛಿಶುಪಾಲಾದಯಃ ಸ್ಮೃತಾಃ ।
ತ್ವತ್ಕರೇಣ ಹತಾಃ ಕೋಪಾನ್ಮುಕ್ತಿಂ ಪ್ರಾಪ್ತಾ ಮಹೀವರಾಃ ॥ ೩೧ ॥
ಅದ್ಯಪ್ರಭೃತಿ ಕರ್ತವ್ಯಂ ಪೂಜನಂ ಪ್ರತ್ಯಹಂ ಚ ತತ್ ।
ಪಲಾರ್ಧೇನಾಪಿ ವಿದ್ಧಂ ಸ್ಯಾತ್ ಭೋಕ್ತವ್ಯಂ ವಾಸರೇ ತವ ॥ ೩೨ ॥

---

೨೬. ಪಾಪಿಷ್ಠನಾದ ನಾನು ಶಿವನಲ್ಲಿ ಭಕ್ತಿಮಾಡಿ ನಿನ್ನಲ್ಲಿ ಭಕ್ತಿಯನ್ನೂ, ನಿನ್ನ ದಿನದ ಅನುಷ್ಠಾನವನ್ನೂ ಮಾಡಲಿಲ್ಲ.

೨೭. ಕೃಷ್ಣ! ನಾನು ದ್ವಾರಕೆಯನ್ನು ನೋಡಲಿಲ್ಲ. ಗೋಮತಿಯ ಜಲದಲ್ಲಿಯೂ ಸ್ನಾನಮಾಡಲಿಲ್ಲ. ಮೋಕ್ಷವನ್ನೀಯುವ ನಿನ್ನ ಪಾದ ಕಮಲಗಳನ್ನೂ ನೋಡಲಿಲ್ಲ.

೨೮. ನಾನು ಸೋಮೇಶ್ವರನನ್ನು ನೋಡಿ ದ್ವಾರಕಾಯಾತ್ರೆಯನ್ನು ಮಾಡದಿರುವುದರಿಂದ ಗಳಿಸಿದ ಪುಣ್ಯಗಳೆಲ್ಲ ನಿಷ್ಫಲವಾದುವು.

೨೯. ಸುರನಾಥ! ನನ್ನ ಪಿತೃಗಳು ಎಲ್ಲವನ್ನೂ ಹೇಳಿರುವರು. ನಿನ್ನ ಅನುಗ್ರಹದಿಂದ ಆ ನನ್ನ ಪುಣ್ಯವು ವಿಫಲವಾಗದಿರಲಿ.

೩೦. ತ್ರಿಭುವನದಲ್ಲಿ ದುರ್ಲಭವಾದ ನಿನ್ನ ಮುಖವನ್ನು ನೋಡಿದೆನು. ಕೃಷ್ಣ! ನಾನು ಪುರಾಣಗಳಲ್ಲಿಈ ಮುಂದೆ ಹೇಳುವ ಸಂಗತಿಗಳನ್ನು ಕೇಳದಿರುವೆನು.

೩೧. ನಿನ್ನಲ್ಲಿ ಅಪರಾಧವನ್ನೆಸಗಿದ ಶಿಶುಪಾಲಾದಿ ರಾಜರು ಕುಪಿತನಾದ ನಿನ್ನ ಹಸ್ತದಿಂದ ಮೃತರಾಗಿ ಮುಕ್ತರಾದರು.

೩೨. ಈದಿನ ಮೊದಲ್ಗೊಂಡು ನಿನ್ನ ಪೂಜೆಯನ್ನು ಮಾಡಬೇಕು. ನಿನ್ನ ದಿನವು ಹಿಂದಿನ ತಿಥಿಯ ಅರ್ಧ ವಿಘಳಿಗೆಯಿಂದ ವಿದ್ಧವಾದರೂ ಆ ದಿನ ಭೋಜನ ಮಾಡಬೇಕು.

ತ್ವತ್ಪ್ರಿಯಾ ಚ ಮಯಾ ಕಾರ್ಯಾ ದ್ವಾದಶೀವ್ರತಸಂಯುತಾ ।
ಭಕ್ತಿರ್ಭಾಗವತಾನಾಂ ಚ ಕಾರ್ಯಾ ಪ್ರಾಣೈರ್ಧನೈರಪಿ ॥ ೩೩ ॥
ನಿತ್ಯಂ ನಾಮಸಹಸ್ರಂತು ಪಠನೀಯಂ ತವ ಪ್ರಿಯಂ ।
ಪೂಜಾ ತು ತುಲಸೀಪತ್ರೈರ್ಮಯಾ ಕಾರ್ಯಾ ಸದೈವ ಹಿ ॥ ೩೪ ॥
ತುಲಸೀಕಾಷ್ಠಸಂಭೂತಾ ಮಾಲಾ ಧಾರ್ಯಾ ಸದಾ ಮಯಾ ।
ನೃತ್ಯಂ ಗೀತಂ ಚ ಕರ್ತವ್ಯಂ ಸಂಪ್ರಾಪ್ತೇ ಜಾಗರೇ ತವ ॥ ೩೫ ॥
ದ್ವಾರಕಾಯಾಂ ಪ್ರಕರ್ತವ್ಯಂ ಪ್ರತ್ಯಹಂ ಗಮನಂ ಮಯಾ ।
ತ್ವತ್ಕಥಾಶ್ರವಣಾರ್ಥಂ ಚ ನಿತ್ಯಂ ಪುಸ್ತಕವಾಚನಂ ॥ ೩೬ ॥
ನಿತ್ಯಂ ಪಾದೋದಕಂ ಮೂರ್ಧ್ನಾ ಮಯಾ ಧಾರ್ಯಂ ಸುಭಕ್ತಿತಃ ।
ನೈವೇದ್ಯಭಕ್ಷಣಂ ಚೈವ ಕರಿಷ್ಯಾಮಿ ಸುಭಕ್ತಿತಃ ॥ ೩೭ ॥
ನಿರ್ಮಾಲ್ಯಂ ಶಿರಸಾ ಧಾರ್ಯಂ ತ್ವದೀಯಂ ಸಾದರಂ ಮಯಾ ।
ತವ ದತ್ವಾ ಯದಿಷ್ಟಂ ತು ಭಕ್ಷಣೀಯಂ ಸದಾ ಮಯಾ ॥ ೩೮ ॥
ತಥಾ ತಥಾ ಪ್ರಕರ್ತವ್ಯಂ ಯೇನ ತುಷ್ಟಿರ್ಭವೇತ್ತವ ।
ತಥ್ಯಮೇತನ್ಮಯಾ ಕೃಷ್ಣ ತವಾಗ್ರೇ ಪರಿಕೀರ್ತಿತಂ ॥ ೩೯ ॥

---

೩೩. ನಿನಗಿಷ್ಟವಾದ ದ್ವಾದಶೀ ವ್ರತವನ್ನಾಚರಿಸಬೇಕು. ಭಾಗವತರಲ್ಲಿ ಪ್ರಾಣ ಮತ್ತು ಧನಗಳಿಂದ ಭಕ್ತಿಯನ್ನುಮಾಡಬೇಕು.

೩೪. ನಿನಗೆ ಪ್ರಿಯವಾದ ಸಹಸ್ರನಾಮವನ್ನು ಪಠಿಸಬೇಕು. ತುಳಸೀ ದಳಗಳಿಂದ ನಿನ್ನ ಪೂಜೆಯನ್ನು ಯಾವಾಗಲೂ ಮಾಡುವೆನು.

೩೫. ಯಾವಾಗಲೂ ತುಳಸೀಕಾಷ್ಠದ ಮಣಿಮಾಲೆಯನ್ನು ಧರಿಸುವೆನು. ನಿನ್ನ ದಿನದ ಜಾಗರಣೆಯಲ್ಲಿ ನೃತ್ಯ ಗೀತಗಳನ್ನು ಮಾಡುವೆನು.

೩೬. ಪ್ರತಿದಿನವೂ ನಾನು ದ್ವಾರಕೆಗೆ ಹೋಗಿ ನಿನ್ನ ಕಥಾಶ್ರವಣವನ್ನೂ, ನಿನ್ನ ಮಹಿಮೆಯನ್ನು ನಿರೂಪಿಸುವ ಪುಸ್ತಕ ಪಠನವನ್ನೂ ಮಾಡುವೆನು.

೩೭. ನಿನ್ನ ಪಾದೋದಕವನ್ನು ಭಕ್ತಿಯಿಂದ ಮಸ್ತಕದಲ್ಲಿ ಧರಸಿ ನೈವೇದ್ಯವನ್ನು ಭಕ್ಷಿಸುವೆನು.

೩೮. ನಾನು ನಿನ್ನ ನಿರ್ಮಾಲ್ಯವನ್ನು ಆದರದಿಂದ ತಲೆಯಲ್ಲಿ ಧರಿಸುವೆನು. ನಿನಗಿಷ್ಟವಾದುದನ್ನು ನಿನಗರ್ಪಿಸಿ ಅದನ್ನು ನಾನು ಭಕ್ಷಿಸುವೆನು.

೩೯. ನಿನಗೆ ಹೇಗೆ ಸಂತೋಷವಾದೀತೊ ಹಾಗೆ ನಾನು ಮಾಡುವೆನು. ಕೃಷ್ಣ ! ನಾನು ನಿನ್ನ ಮುಂದೆ ನಿಜವಾದ ಮಾತನ್ನಾಡಿರುವೆನು.

ಶ್ರೀ ಕೃಷ್ಣ ಉವಾಚ :—

ಸಾಧು ಸಾಧು ಮಹಾಭಾಗ ಚಂದ್ರಶರ್ಮನ್ದ್ವಿಜೋತ್ತಮ ।
ಆಗಮಿಷ್ಯಂತಿ ಮಲ್ಲೋಕೇ ತ್ವಯಾ ಸಹ ಪಿತಾಮಹಾಃ ॥ ೪೦ ॥
ಪಶ್ಯ ಪ್ರೇತತ್ವನಿರ್ಮುಕ್ತಾ ಮತ್ಪ್ರಸಾದಾದ್ದ್ವಿಜೋತ್ತಮ ।
ಆಕಾಶೇ ಗರುಡಾರೂಢಾಸ್ತವ ಪೂರ್ವಪಿತಾಮಹಾಃ ॥ ೪೧ ॥

ಪಿತಾಮಹಾ ಊಚುಃ :—

ತ್ವತ್ಪ್ರಸಾದಾದ್ವಯಂ ಪುತ್ರ ಮುಕ್ತಿಂ ಪ್ರಾಪ್ತಾ ನ ಸಂಶಯಃ ।
ಪ್ರೇತಯೋನೇರ್ವಿನಿರ್ಮುಕ್ತಾಃ ಕೃಷ್ಣವಕ್ತ್ರಾವಲೋಕನಾತ್ ॥ ೪೨ ॥
ಧನ್ಯಾಸ್ತೇ ಮಾನುಷೇ ಲೋಕೇ ಪುತ್ರಪೌತ್ರಪ್ರವರ್ತಕಾಃ ।
ದೃಷ್ಟ್ವಾ ಶ್ರೀಸೋಮನಾಥಂ ತು ಕೃಷ್ಣಂ ಪಶ್ಯಂತಿ ದ್ವಾರಕಾಂ ॥ ೪೩ ॥
ಧನ್ಯಾ ಚ ವಿಧವಾ ನಾರೀ ಕೃಷ್ಣಯಾತ್ರಾಂ ಕರೋತಿ ಯಾ ।
ಉದ್ಧರಿಷ್ಯತಿ ಲೋಕೇಽಸ್ಮಿನ್ಕುಲಾನಾಂ ನಿರಯಾಚ್ಛತಂ ॥ ೪೪ ॥
ಶ್ವಪಚೋಽಪಿ ಕರೋತ್ಯೇವಂ ಯಾತ್ರಾಂ ಚ ಹರಿಶಾಂಕರೀಂ ।
ಸ ಯಾತಿ ಪರಮಾಂ ಮುಕ್ತಿಂ ಪಿತೃಭಿಃ ಪರಿವಾರಿತಃ ॥ ೪೫ ॥

---

೪೦. ಶ್ರೀ ಕೃಷ್ಣನು ಹೇಳುತ್ತಾನೆ :—ಮಹಾತ್ಮನಾದ ಎಲೈ ಚಂದ್ರಶರ್ಮನೇ! ಒಳ್ಳೆಯದು, ಒಳ್ಳೆಯದು. ನಿನ್ನ ಪಿತಾಮಹರು ನಿನ್ನೊಡನೆ ನನ್ನ ಲೋಕಕ್ಕೆ ಬರುವರು.

೪೧. ದ್ವಿಜೇಂದ್ರ ! ನೋಡು. ನಿನ್ನ ಹಿಂದಿನ ಪಿತಾಮಹರು ನನ್ನ ಅನುಗ್ರಹ ದಿಂದ ಪ್ರೇತತ್ವವನ್ನು ತೊರೆದು ಆಕಾಶದಲ್ಲಿ ಗರುಡಾರೂಢರಾಗಿದ್ದಾರೆ.

೪೨. ಪಿತಾಮಹರು ಹೇಳುತ್ತಾರೆ :—ಮಗು ! ನಾವು ನೀನು ಅನುಗ್ರಹಿಸಿ ಕೃಷ್ಣನ ಮುಖವನ್ನು ನೋಡಿದ್ದರಿಂದ ಪ್ರೇತಜನ್ಮದಿಂದ ಮುಕ್ತರಾದೆವು.

೪೩. ಮನುಷ್ಯ ಲೋಕದಲ್ಲಿ ಶ್ರೀ ಸೋಮನಾಥನನ್ನೂ, ದ್ವಾರಕೆಯಲ್ಲಿರುವ ಕೃಷ್ಣನನ್ನೂ ನೋಡಿದ ಪುತ್ರರೂ, ಪೌತ್ರರೂ, ಪ್ರಪೌತ್ರರೂ ಧನ್ಯರು.

೪೪. ಕೃಷ್ಣನ ಯಾತ್ರೆಯನ್ನು ಮಾಡಿದ ವಿಧವಾಂಗನೆಯು ಪುಣ್ಯವಂತಳು. ಅವಳು ಲೋಕದಲ್ಲಿ ತನ್ನ ನೂರು ಕುಲಗಳನ್ನು ಉದ್ಧರಿಸುವಳು.

೪೫. ಚಂಡಾಲನೂ ಕೃಷ್ಣನ ಮತ್ತು ಸೋಮೇಶ್ವರನ ಯಾತ್ರೆಯನ್ನು ಮಾಡಿದರೆ ಪಿತೃಗಳೊಡನೆ ಮೋಕ್ಷಕ್ಕೆ ಹೋಗುವನು.

ಯಃ ಪುನಸ್ತೀರ್ಥಸನ್ಯಾಸಂ ಕೃತ್ವಾ ತಿಷ್ಠತಿ ತತ್ರ ವೈ ।
ವಿಷ್ಣುಲೋಕಾನ್ನಿವೃತ್ತಿರ್ನ ಕಲ್ಪಕೋಟಿಶತೈರಪಿ ॥ ೪೬ ॥
ವಂಚಿತಾಸ್ತೇ ನ ಸಂದೇಹೋ ದೃಷ್ಟ್ವಾ ಸೋಮೇಶ್ವರಂ ಪ್ರಭುಂ ।
ದೃಷ್ಟಂ ಕೃಷ್ಣಮುಖಂ ನೈವ ನ ಸ್ನಾತಾ ಗೋಮತೀ ಜಲೇ ॥ ೪೭ ॥
ಕಿಂ ಜಲೈರ್ಬಹುಭಿಃ ಪುಣ್ಯೈಃ ತೀರ್ಥಕೋಟಿಸಮುದ್ಭವೈಃ ।
ದೃಷ್ಟ್ವಾ ಸೋಮೇಶ್ವರಂ ಯಸ್ತು ದ್ವಾರಕಾಂ ನೈವ ಗಚ್ಛತಿ ।
ಧಿಕ್ಕುರ್ವಂತಿ ಚ ತಂ ಪಾಪಂ ಪಿತರೋ ದಿವಿ ಸಂಸ್ಥಿತಾಃ ॥ ೪೮ ॥
ದೃಷ್ಟ್ವಾ ಸೋಮೇಶ್ವರಂ ದೇವಂ ಕೃಷ್ಣಂ ದೃಷ್ಟ್ವಾ ಪುನಃ ಶಿವಂ ।
ಸೌಪರ್ಣೇ ಕಥಿತಂ ಪುಣ್ಯಂ ಯಾತ್ರಾಶತಸಮುದ್ಭವಂ ॥ ೪೯ ॥
ದೃಷ್ಟ್ವಾ ಸೋಮೇಶ್ವರಂ ದೇವಂ ಕೃಷ್ಣಂ ನೈವ ಪ್ರಪಶ್ಯತಿ ।
ಮೋಹಾದ್ವ್ಯರ್ಥಂ ಗತಂ ತಸ್ಯ ಸರ್ವಂ ಸಂಸಾರಕರ್ಮವೈ ॥ ೫೦ ॥
ಆಗತ್ಯ ಯಃ ಪ್ರಭಾಸೇ ಚ ಕೃಷ್ಣಂ ಪಶ್ಯತಿ ವೈ ನರಃ ।
ಪ್ರಭಾಸಾಯುತಸಂಖ್ಯಂ ತು ಫಲಮಾಪ್ನೋತಿ ಯತ್ನತಃ ॥ ೫೧ ॥

---

೪೬. ಅಲ್ಲಿ ತೀರ್ಥಸನ್ಯಾಸವನ್ನು ಮಾಡಿ ವಾಸಿಸುವವನು ನೂರುಕೋಟಿ ಕಲ್ಪಗಳ ಕಾಲ ವಿಷ್ಣುಲೋಕದಿಂದ ಹಿಂದಿರುಗುವುದಿಲ್ಲ.

೪೭. ಸೋಮೇಶ್ವರನನ್ನು ನೋಡಿ ಕೃಷ್ಣನ ಮುಖವನ್ನು ನೋಡದವರೂ, ಗೋಮತೀ ಜಲದಲ್ಲಿ ಸ್ನಾನಮಾಡದವರೂ ವಂಚಿತರಾಗುವರು.

೪೮. ಸೋಮೇಶ್ವರನನ್ನು ನೋಡಿ ದ್ವಾರಕೆಗೆ ಹೋಗದವನಿಗೆ ಅನೇಕ ತೀರ್ಥಗಳ ಪುಣ್ಯಜಲದಿಂದೇನು ಪ್ರಯೋಜನ ? ಪಾಪಿಷ್ಠನಾದ ಅವನನ್ನು ಸ್ವರ್ಗಸ್ಥರಾದ ಪಿತೃಗಳು ಧಿಕ್ಕರಿಸುವರು.

೪೯. ಮೊದಲು ಸೋಮೇಶ್ವರನನ್ನು ನೋಡಿ ಅನಂತರ ಕೃಷ್ಣನ ದರ್ಶನಮಾಡಿ ಮರಳಿ ಶಿವನನ್ನು ಕಂಡರೆ ನೂರುಯಾತ್ರೆಗಳನ್ನು ಮಾಡಿದ ಪುಣ್ಯವು ಲಭಿಸುವುದೆಂದು ಗರುಡಪುರಾಣದಲ್ಲಿ ಹೇಳಲ್ಪಟ್ಟಿರುವುದು.

೫೦. ಸೋಮೇಶ್ವರನನ್ನು ನೋಡಿ ಅಜ್ಞಾನದಿಂದ ಕೃಷ್ಣನನ್ನು ನೋಡದಿದ್ದರೆ ಅವನ ಎಲ್ಲ ಸಾಂಸಾರಿಕ ಕಾರ್ಯಗಳೂ ವ್ಯರ್ಥವಾಗುವುವು.

೫೧. ಪ್ರಭಾಸಕ್ಷೇತ್ರಕ್ಕೆ ಬಂದು ಅಲ್ಲಿರುವ ಕೃಷ್ಣನನ್ನು ನೋಡಿದ ಮಾನವನಿಗೆ ಹತ್ತು ಸಾವಿರ ಪ್ರಭಾಸ ಯಾತ್ರಾಫಲವು ದೊರೆಯುವುದು.

ಯಸ್ಮಾತ್ಸರ್ವಾಣಿ ತೀರ್ಥಾನಿ ಸರ್ವೇ ದೇವಾಸ್ತಥಾ ಮಖಾಃ ।
ದ್ವಾರಕಾಯಾಂ ಸಮಾಯಾಂತಿ ತ್ರಿಕಾಲಂ ಕೃಷ್ಣಸನ್ನಿಧೌ ॥ ೫೨ ॥
ತೀರ್ಥೈರ್ನಾನಾವಿಧೈಃ ಪುತ್ರ ತತ್ಸ್ಥಾನೈಃ ಕಿಂ ಪ್ರಯೋಜನಂ ।
ಫಲಂ ಸಮಸ್ತತೀರ್ಥಾನಾಂ ದೃಷ್ಟ್ವಾ ದ್ವಾರವತೀಂ ಲಭೇತ್ ॥ ೫೩ ॥
ಹತೇ ಕಂಸೇ ಜರಾಸಂಧೇ ನರಕೇ ಚ ನಿಪಾತಿತೇ ।
ಉತ್ತಾರಿತೇ ಭುವೋ ಭಾರೇ ಕೃಷ್ಣೋ ದೇವಕಿನಂದನಃ ।
ಚಕ್ರೇ ದ್ವಾರವತೀಂ ರಮ್ಯಾಂ ಸನ್ನಿಧೌ ಸಾಗರಸ್ಯ ಚ ॥ ೫೪ ॥
ಸ್ಥಿತಃ ಪ್ರೀತಮನಾಃ ಕೃಷ್ಣೋ ಲಪ್ಸ್ಯತೇ ಕಾಮಿನೀಸುಖಂ ॥ ೫೫ ॥
ಬ್ರಹ್ಮಾಗ್ನಿವಾಯುಸೂರ್ಯಾಶ್ಚ ವಾಸವಾದ್ಯಾ ದಿವೌಕಸಃ ।
ಮರ್ತ್ಯಾ ವಿಪ್ರಾಶ್ಚ ರಾಜಾನಃ ಪಾತಾಲಾತ್ಪನ್ನಗೇಶ್ವರಾಃ ॥ ೫೬ ॥
ನದ್ಯೋ ನದಾಶ್ಚ ಶೈಲಾಶ್ಚ ವನಾನ್ಯುಪವನಾನಿ ಚ ।
ಪುರಗ್ರಾಮಾಣ್ಯರಣ್ಯಾನಿ ಸಾಗರಾಶ್ಚ ಸರಾಂಸಿ ಚ ॥ ೫೭ ॥
ಯಕ್ಷಾಶ್ಚಾಸುರಗಂಧರ್ವಾಃ ಸಿದ್ಧಾ ವಿದ್ಯಾಧರಾಸ್ತಥಾ ।
ರಂಭಾದ್ಯಪ್ಸರಸಶ್ಚೈವ ಪ್ರಹ್ಲಾದಾದ್ಯಾ ದಿತೇಃ ಸುತಾಃ ।
ರಕ್ಷಾ ವಿಭೀಷಣಾದ್ಯಾಶ್ಚ ಧನದೋ ಯಕ್ಷನಾಯಕಃ ॥ ೫೮ ॥

---

೫೨. ತ್ರಿಕಾಲದಲ್ಲಿಯೂ ಸಕಲತೀರ್ಥಗಳೂ, ಸಮಸ್ತದೇವತೆಗಳೂ, ಯಜ್ಞಗಳೂ ದ್ವಾರಕೆಯಲ್ಲಿರುವ ಕೃಷ್ಣನ ಸನ್ನಿಧಿಗೆ ಬರುವವು.

೫೩. ಬಗೆ ಬಗೆಯ ತೀರ್ಥಗಳಿಂದಲೂ, ಅವುಗಳ ಸ್ಥಾನಗಳಿಂದಲೂ ಏನು ಪ್ರಯೋಜನ? ದ್ವಾರವತಿಯನ್ನು ನೋಡಿದವನು ಸಕಲತೀರ್ಥಗಳ ಫಲವನ್ನು ಪಡೆಯುವನು.

೫೪–೫೫. ಶ್ರೀಕೃಷ್ಣನು ಕಂಸ, ಜರಾಸಂಧ, ನರಕಾಸುರರನ್ನು ಕೊಂದು ಭೂಮಿಯ ಭಾರವನ್ನು ನೀಗಿಸಿ ಸಮುದ್ರದ ಬಳಿ ರಮ್ಯವಾದ ದ್ವಾರವತಿಯನ್ನು ನಿರ್ಮಿಸಿ ಸಂತೋಷದಿಂದ ಅಲ್ಲಿ ಸ್ತ್ರೀ ಸುಖವನ್ನು ಪಡೆದನು.

೫೬–೬೦. ಆ ಕೃಷ್ಣನ ಹತ್ತಿರ ಬ್ರಹ್ಮ, ಅಗ್ನಿ, ವಾಯು, ಸೂರ್ಯ, ಇಂದ್ರಾದಿ ದಿವಿಜರು, ಮನುಷ್ಯರು, ಬ್ರಾಹ್ಮಣರು, ದೊರೆಗಳು, ಪಾತಾಳದ ನಾಗಾಧಿಪತಿಗಳು, ನದಿಗಳು, ನದಗಳು, ಪರ್ವತಗಳು, ವನಗಳು, ಉದ್ಯಾನಗಳು, ಪಟ್ಟಣಗಳು ಗ್ರಾಮಗಳು, ಕಾಡುಗಳು, ಸಮುದ್ರಗಳು, ಸರೋವರಗಳು, ಯಕ್ಷರು, ಅಸುರರು, ಗಂಧರ್ವರು, ಸಿದ್ಧರು, ವಿದ್ಯಾಧರರು, ರಂಭಾದ್ಯಪ್ಸರಸ್ತ್ರೀಯರು, ಪ್ರಹ್ಲಾದಿ ದೈತ್ಯರು, ವಿಭೀಷಣಾದಿ ರಾಕ್ಷಸರು, ಯಕ್ಷರಾಜನಾದ ಕುಬೇರನು, ಋಷಿಗಳು, ಮುನಿಗಳು,

ಋಷಯೋ ಮುನಯಃ ಸಿದ್ಧಾಃ ಸನಕಾದ್ಯಾಶ್ಚ ಯೋಗಿನಃ ।
ಗ್ರಹಾ ಋಕ್ಷಾಣಿ ಯೋಗಾಶ್ಚ ಧ್ರುವಃ ಪರಮವೈಷ್ಣವಃ ॥ ೫೯ ॥
ಯತ್ಕಿಂಚಿತ್ತ್ರಿಷು ಲೋಕೇಷು ತಿಷ್ಠತೇ ಸ್ಥಾಣುಜಂಗಮಂ ।
ಶ್ರೀಕೃಷ್ಣಸನ್ನಿಧೌ ನಿತ್ಯಂ ಪ್ರತ್ಯಹಂ ತಿಷ್ಠತೇ ಸದಾ ॥ ೬೦ ॥
ನ ತ್ಯಜಂತಿ ಪುರೀಂ ಪುಣ್ಯಾಂ ದ್ವಾರಕಾಂ ಕೃಷ್ಣಸೇವಿತಾಂ ।
ಸಾ ತ್ವಯಾ ಸೇವಿತಾ ಪುತ್ರ ಸಾಂಪ್ರತಂ ಕೃಷ್ಣದರ್ಶನಾತ್ ।
ಪಿಶಾಚಯೋನಿನಿರ್ಮುಕ್ತಾ ಯಾಸ್ಯಾಮಃ ಪರಮಾಂ ಗತಿಂ ॥ ೬೧ ॥
ದ್ವಾದಶೀವೇಧಜಂ ಪಾಪಂ ದ್ವಾರಕಾಯಾಃ ಪ್ರಭಾವತಃ ।
ನಷ್ಟಂ ಪುತ್ರ ನ ಸಂದೇಹಃ ಸಂಪ್ರಾಪ್ತಾಃ ಪರಮಂ ಪದಂ ॥ ೬೨ ॥
ದ್ವಾದಶೀವೇಧಸಂಭೂತಂ ಯತ್ತ್ವಯಾ ಪಾಪಮಾರ್ಜಿತಂ ।
ಕೃಷ್ಣಸ್ಯ ದರ್ಶನಾತ್ಕ್ಷೀಣಂ ನ ಜಹ್ಯಂ ದ್ವಾದಶೀವ್ರತಂ ॥ ೬೩ ॥
ರಕ್ಷಣೀಯಂ ಪ್ರಯತ್ನೇನ ವೇಧೋ ದಶಮಿಸಂಭವಃ ।
ನೋಚೇತ್ಪುತ್ರ ನ ಸಂದೇಹಃ ಪ್ರೇತಯೋನಿಮವಾಪ್ಸ್ಯಸಿ ॥ ೬೪ ॥

---

ಸಿದ್ಧರು, ಸನಕಾದಿಯೋಗಿಗಳು, ಗ್ರಹನಕ್ಷತ್ರಗಳು, ಯೋಗಗಳು, ಅತ್ಯಂತ ವಿಷ್ಣು ಭಕ್ತನಾದ ಧ್ರುವನು ಪ್ರಪಂಚದಲ್ಲಿರುವ ಸ್ಥಾವರ ಜಂಗಮಗಳು ಇವರು ನಿತ್ಯವೂ ವಾಸವಾಗಿರುವರು.

೬೧. ಅವರೆಲ್ಲರೂ ಕೃಷ್ಣನು ವಾಸವಾಗಿರುವ ದ್ವಾರಕೆಯನ್ನು ಬಿಡುವುದಿಲ್ಲ. ಮಗು! ನೀನೀಗ ದ್ವಾರಕೆಯಲ್ಲಿರುವ ಕೃಷ್ಣನನ್ನು ದರ್ಶನಮಾಡಿದ್ದರಿಂದ ನಾವು ಪಿಶಾಚ ಜನ್ಮದಿಂದ ಮುಕ್ತರಾಗಿ ಉತ್ತಮ ಗತಿಯನ್ನು ಹೊಂದಿದೆವು.

೬೨. ಪುತ್ರ! ದ್ವಾದಶೀ ವೇಧೆಯಿಂದುಂಟಾದ ಪಾಪವು ದ್ವಾರಕೆಯ ಪ್ರಭಾವದಿಂದ ನಷ್ಟವಾಯಿತು. ಸಂದೇಹವಿಲ್ಲ. ನಾವು ಉತ್ತಮ ಸ್ಥಾನವನ್ನು ಪಡೆದೆವು.

೬೩. ನಿನ್ನ ದ್ವಾದಶೀವೇಧೆಯಿಂದುಂಟಾದ ಪಾಪವು ಕೃಷ್ಣನ ದರ್ಶನದಿಂದ ನಷ್ಟವಾಯಿತು. ಆದ್ದರಿಂದ ದ್ವಾದಶೀ ವ್ರತವನ್ನು ಬಿಡಕೂಡದು.

೬೪. ಪುತ್ರ! ಪ್ರಯತ್ನದಿಂದ ದಶಮೀ ವೇಧೆಯುಳ್ಳ ಹರಿದಿನದಲ್ಲಿ ಉಪವಾಸ ಮಾಡಬಾರದು. ಹಾಗೆ ಮಾಡಿದರೆ ನಿಶ್ಚಯವಾಗಿಯೂ ಪ್ರೇತಯೋನಿಯನ್ನು ಹೊಂದುವೆ.

ತ್ರೈಲೋಕ್ಯಸಂಭವಂ ಪಾಪಂ ತೇಷಾಂ ಭವತಿ ಭೂತಲೇ ।
ಸಶಲ್ಯಂ ಯೇ ಪ್ರಕುರ್ವಂತಿ ವಾಸರಂ ಕೃಷ್ಣಸಂಜ್ಞಕಂ ॥ ೬೫ ॥
ಪ್ರಾಯಶ್ಚಿತ್ತಂ ನ ತಸ್ಯಾಸ್ತಿ ಸಶಲ್ಯಂ ವಾಸರಂ ಹರೇಃ ।
ಯೇ ಕುರ್ವಂತಿ ನ ತೇ ಯಾಂತಿ ಮನ್ವಂತರಶತೈರ್ದಿವಂ ॥ ೬೬ ॥
ಪ್ರೇತತ್ವಂ ದುಃಸಹಂ ಪುತ್ರ ದುಃಸಹಾ ಯಮಯಾತನಾ ।
ತಸ್ಮಾತ್ಪುತ್ರ ನ ಕರ್ತವ್ಯಂ ಸಶಲ್ಯಂ ದ್ವಾದಶೀವ್ರತಂ ॥ ೬೭ ॥
ಕಾರಯಂತಿ ಹಿ ಯೇ ತ್ವಜ್ಞಾಃ ಕೂಟಯುಕ್ತ್ಯಾತಿ ಹೇತುಕಾಃ ।
ಪ್ರೇತಯೋನಿಂ ಪ್ರಯಾಸ್ಯಂತಿ ಪಿತೃಭಿಃ ಸಹ ಸರ್ವತಃ ॥ ೬೮ ॥
ದ್ವಾದಶೀ ದಶಮೀವಿದ್ಧಾ ಸಂತಾನಪ್ರವಿನಾಶಿನೀ ।
ಧ್ವಂಸಿನೀ ಪೂರ್ವಪುಣ್ಯಾನಾಂ ಕೃಷ್ಣಭಕ್ತಿವಿನಾಶಿನೀ ॥ ೬೯ ॥
ಸ್ವಸ್ತಿ ತೇಽಸ್ತು ಗಮಿಷ್ಯಾಮಃ ಪ್ರಸಾದಾದ್ರುಕ್ಮಿಣೀಪತೇಃ ।
ಪ್ರಾಪ್ತಂ ವಿಷ್ಣುಪದಂ ಪುತ್ರ ಅಪುನರ್ಭವಸಂಜ್ಞಕಂ ॥ ೭೦ ॥

---

೬೫. ವಿದ್ಧಹರಿದಿನವನ್ನು ಅನುಷ್ಠಾನ ಮಾಡಿದವರಿಗೆ ಭೂಮಿಯಲ್ಲಿ ಮೂರು ಲೋಕದ ಪಾಪವುಂಟಾಗುವುದು.

೬೬. ವಿದ್ಧಹರಿದಿನವನ್ನು ಅನುಷ್ಠಾನ ಮಾಡುವವರಿಗೆ ಪ್ರಾಯಶ್ಚಿತ್ತವಿಲ್ಲ. ಅವರು ನೂರು ಮನ್ವಂತರಗಳವರೆಗೆ ಸ್ವರ್ಗಕ್ಕೆ ಹೋಗುವುದಿಲ್ಲ.

೬೭. ಮಗು! ಅವರಿಗುಂಟಾಗುವ ಪ್ರೇತತ್ವವೂ, ಯಮ ಯಾತನೆಯೂ ಸಹಿಸಲಾಗದುವು. ಆದ್ದರಿಂದ ವಿದ್ಧದ್ವಾದಶೀ ವ್ರತವನ್ನಾಚರಿಸಬಾರದು.

೬೮. ಮೋಸಗಾರರೂ ಹೇತುವಾದಿಗಳೂ ಆದ ಮೂಢರು ಈ ದ್ವಾದಶೀ ವ್ರತವನ್ನಾಚರಿಸಿದರೆ ಅವರು ಪಿತೃಗಳೊಡನೆ ಪ್ರೇತರಾಗುವರು.

೬೯. ದಶಮೀ ವಿದ್ಧವಾದ ದ್ವಾದಶಿಯು ಸಂತಾನವನ್ನು ನಾಶಗೊಳಿಸುವುದೂ, ಹಿಂದಿನ ಪುಣ್ಯಗಳನ್ನು ಹಾಳುಮಾಡುವುದೂ, ಕೃಷ್ಣಭಕ್ತಿಯನ್ನು ನಿವಾರಿಸುವುದೂ, ಆಗುವುದು.

೭೦. ಮಗು! ನಿನಗೆ ಮಂಗಳವಾಗಲಿ. ಶ್ರೀ ಕೃಷ್ಣನ ಅನುಗ್ರಹದಿಂದ ನಾವು ಪುನರಾವೃತ್ತಿಯಿಲ್ಲದ ವೈಕುಂಠಲೋಕವನು ಹೊಂದಿದೆವು.

ಶ್ರೀ ಕೃಷ್ಣ ಉವಾಚ :—
ಚಂದ್ರಶರ್ಮನ್ಪ್ರಸನ್ನೋಽಹಂ ತವ ಭಕ್ತ್ಯಾ ದ್ವಿಜೋತ್ತಮ ।
ಶೈವಭಾವಪ್ರಪನ್ನೋಽಪಿ ಯಸ್ತ್ವಂ ಜಾತೋಽಸಿ ವೈಷ್ಣವಃ ॥ ೭೧ ॥
ನವಸಪ್ತತಿವರ್ಷಾಣಿ ನ ಕೃತಂ ವಾಸರಂ ಮಮ ।
ಸಂಪೂರ್ಣಂ ಮತ್ಪ್ರಸಾದೇನ ತವ ಜಾತಂ ನ ಸಂಶಯಃ ॥ ೭೨ ॥
ಏಕೇನೈವೋಪವಾಸೇನ ತ್ರಿಸ್ಪೃಶಾಸಂಭವೇನ ಹಿ ।
ದ್ವಾರಕಾಯಾಃ ಪ್ರಸಾದೇನ ಮದ್ದೃಷ್ಟ್ಯಾವಲೋಕನೇನ ಹಿ ॥ ೭೩ ॥
ಅವಿದ್ಯಾಮೋಹಿತೇನೈವ ಶಿವಭಕ್ತ್ಯಾ ಮಮಾರ್ಚನಂ ।
ನ ಕೃತಂ ಮತ್ಪ್ರಸಾದೇನ ಕೃತಂ ಚೈವ ಭವಿಷ್ಯತಿ ॥ ೭೪ ॥
ವೈಶಾಖೇ ಯೈರಹಂ ದೃಷ್ಟೋ ದ್ವಾರಕಾಯಾಂ ದ್ವಿಜೋತ್ತಮ ।
ತ್ರಿಸ್ಪೃಶಾವಾಸರೇ ಚೈವ ವಂಜುಲೀವಾಸರೇ ತಥಾ ॥ ೭೫ ॥
ಉನ್ಮೀಲಿನೀ ದಿನೇ ಪ್ರಾಪ್ತೇ ಪ್ರಾಪ್ತೇ ವಾ ಪಕ್ಷವರ್ಧನೀ ।
ನೈತೇಷಾಂ ಚಾಪರಾಧೋಽಸ್ತಿ ಯದ್ಯಪಿ ಬ್ರಹ್ಮಘಾತಕಾಃ ॥ ೭೬ ॥

---

೭೧. ಶ್ರೀ ಕೃಷ್ಣನು ಹೇಳುತ್ತಾನೆ :—ದ್ವಿಜಶ್ರೇಷ್ಠನಾದ ಚಂದ್ರಶರ್ಮನೆ ! ನಿನ್ನ ಭಕ್ತಿಯಿಂದ ನಾನು ಪ್ರಸನ್ನನಾಗಿದ್ದೇನೆ. ನೀನು ಶಿವಭಕ್ತನಾಗಿದ್ದರೂ ವೈಷ್ಣವನಾಗಿರುವೆ.

೭೨. ನೀನು ಎಪ್ಪತ್ತೊಂಬತ್ತು ವರ್ಷಗಳ ಕಾಲ ನನ್ನ ದಿನವನ್ನು ಅನುಷ್ಠಾನ ಮಾಡದಿದ್ದರೂ ಈಗ ನನ್ನ ಅನುಗ್ರಹದಿಂದ ಅದು ಸಂಪೂರ್ಣವಾಯಿತು.

೭೩–೭೪. ಒಂದು ತ್ರಿಸ್ಪೃಶಾ ದ್ವಾದಶಿಯ ಉಪವಾಸದಿಂದಲೂ, ದ್ವಾರಕೆಯ ಅನುಗ್ರಹದಿಂದಲೂ, ನನ್ನ ದೃಷ್ಟಿಯಿಂದಲೂ ನೀನು ಅವಿದ್ಯೆಯಿಂದ ಮೋಹಗೊಂಡು ಶಿವಭಕ್ತನಾಗಿ ನನ್ನನ್ನು ಅರ್ಚಿಸದಿದ್ದರೂ ನನ್ನ ಅನುಗ್ರಹದಿಂದ ಪೂಜೆ ಮಾಡಿದಂತೆಯೇ ಆಗುವುದು.

೭೫–೭೬. ದ್ವಿಜವರ್ಯನೆ ! ದ್ವಾರಕೆಯಲ್ಲಿ ನನ್ನನ್ನು ವೈಶಾಖಮಾಸದಲ್ಲಿಯೂ, ತ್ರಿಸ್ಪೃಶಾದ್ವಾದಶೀ ದಿನವೂ, ವಂಜುಲೀವಾಸರದಲ್ಲಿಯೂ, ಉನ್ಮೀಲಿನೀ ಪಕ್ಷವರ್ಧನಿಗಳಲ್ಲಿಯೂ ನೋಡಿದ ಬ್ರಹ್ಮಘಾತುಕನೂ ಪಾಪರಹಿತನಾಗುವನು.

ಜನ್ಮಪ್ರಭೃತಿಪುಣ್ಯಸ್ಯ ಪ್ರಕೃತಸ್ಯಾಪಿ ಭೂಸುರ ।
ಮತ್ಪುರೀದರ್ಶನೇನಾಪಿ ಫಲಭಾಗೀ ಭವೇನ್ನರಃ ॥ ೭೭ ॥
ದೃಷ್ಟ್ವಾ ಸಮಸ್ತತೀರ್ಥಾನಿ ಪ್ರಭಾಸಾದೀನಿ ಭೂತಲೇ ।
ಮತ್ಪುರೀದರ್ಶನೇನೈವ ಪೃಷ್ಟ್ವಾಪೀಹ ಭವೇತ್ಫಲಂ ॥ ೭೮ ॥
ಮಾಹಾತ್ಮ್ಯಂ ದ್ವಾರಕಾಯಾಸ್ತು ಮದ್ದಿನೇ ಯತ್ರ ತತ್ರ ವಾ ।
ಪಠೇನ್ಮಮ ಪುರೀಂ ಪುಣ್ಯಾಂ ಲಭತೇ ಮತ್ಪ್ರಸಾದತಃ ॥ ೭೯ ॥
ಮತ್ಪುರೀಂ ವಸತಾಂ ಪುಣ್ಯಂ ತ್ರಿಕಾಲಂ ಮಮ ದರ್ಶನಾತ್ ।
ತತ್ಫಲಂ ಸಮವಾಪ್ನೋತಿ ಯಸ್ತ್ವಿದಂ ಪಠತೇ ಕಲೌ ॥ ೮೦ ॥
ಕಲೌ ಕಾಶೀ ಚ ಮಥುರಾ ಹ್ಯವಂತೀ ಚ ದ್ವಿಜೋತ್ತಮ ।
ಅಯೋಧ್ಯಾ ಚ ತಥಾ ಮಾಯಾ ಕಾಂಚೀ ಚೈವ ಚ ಮತ್ಪುರೀ ॥ ೮೧ ॥
ಶಾಲಿಗ್ರಾಮಭವಂ ಚೈವ ಬದರೀಚ ತಥೋತ್ತಮಾ ।
ಕುರುಕ್ಷೇತ್ರಂ ಭೃಗುಕ್ಷೇತ್ರಂ ತ್ರಿಪುಷ್ಕರಂ ಶುಭಸಂಜ್ಞಕಂ ॥ ೮೨ ॥

---

೭೭. ಮಾನವನು ನನ್ನ ಪಟ್ಟಣವನ್ನು ದರ್ಶನ ಮಾಡುವುದರಿಂದ ಹುಟ್ಟಿದ ಮೊದಲ್ಗೊಂಡು ಮಾಡಿದ ಮತ್ತು ಈಗಿನ ಫಲವನ್ನು ಪಡೆಯುವನು.

೭೮. ಭೂಮಿಯಲ್ಲಿರುವ ಪ್ರಭಾಸಾದಿ ಸಮಸ್ತ ತೀರ್ಥಗಳನ್ನು ದರ್ಶನ ಮಾಡುವುದರಿಂದಾಗುವ ಫಲವು ನನ್ನ ಪಟ್ಟಣದ ದರ್ಶನದಿಂದಲೂ, ಆ ಪಟ್ಟಣದ ವಿಷಯವಾದ ಪ್ರಶ್ನೆಯಿಂದಲೂ ದೊರೆಯುವುದು.

೭೯. ನನ್ನ ದಿನದಲ್ಲಿಯೂ, ಯಾವುದಾದರೂ ದಿನದಲ್ಲಿಯೂ, ದ್ವಾರಕಾ ಮಾಹಾತ್ಮ್ಯವನ್ನು ಪಠಿಸುವವನು ನನ್ನ ಅನುಗ್ರಹದಿಂದ ಪುಣ್ಯಕರವಾದ ನನ್ನ ಪಟ್ಟಣವನ್ನು ಸೇರುವನು.

೮೦. ಕಲಿಯುಗದಲ್ಲಿ ಇದನ್ನು ಪಠಿಸುವವನು ನನ್ನ ಪಟ್ಟಣದಲ್ಲಿ ವಾಸಮಾಡುವವರಿಗೆ ಮತ್ತು ತ್ರಿಕಾಲದಲ್ಲಿ ನನ್ನನ್ನು ದರ್ಶನ ಮಾಡುವವರಿಗೆ ಲಭಿಸುವ ಪುಣ್ಯವನ್ನು ಹೊಂದುವನು.

೮೧–೮೬. ದ್ವಿಜೇಂದ್ರ ! ಈ ದ್ವಾರಕಾ ಪಟ್ಟಣವು ಕಲಿಯುಗದಲ್ಲಿ ಕಾಶೀ ಮಥುರಾ, ಅವಂತೀ ಅಯೋಧ್ಯಾ, ಮಾಯಾ, ಕಾಂಚೀ ಶಾಲಿಗ್ರಾಮದಉತ್ಪತ್ತಿ

ಪ್ರಯಾಗಂ ಚ ಪ್ರಭಾಸಂ ಚ ಕ್ಷೇತ್ರಂ ವೈ ಹಾಟಕೇಶ್ವರಂ ।
ಗಂಗಾದ್ವಾರಂ ಶೌಕರಂ ಚ ಗಂಗಾಸಾಗರಸಂಗಮಂ ॥ ೮೩ ॥

ನೈಮಿಷಂ ದಂಡಕಾರಣ್ಯಂ ತಥಾ ವೃಂದಾವನಂ ದ್ವಿಜ ।
ಸೈಂಧವಂ ಚಾರ್ಬುದಾಖ್ಯಂ ಚ ಸರ್ವಾಣ್ಯಾಯತನಾನಿ ಚ ॥ ೮೪ ॥

ವನಾನಿ ಮಾಗಧಾದೀನಿ ಪುಷ್ಕರಾಣಿ ದ್ವಿಜೋತ್ತಮ ।
ಶೈಲರಾಜಾದಯಃ ಶೈಲಾ ಹಿಮಾದ್ರಿಪ್ರಮುಖಾ ಹಿ ಯೇ ॥ ೮೫ ॥

ಗಂಗಾದಯಶ್ಚ ಸರಿತೋ ಭೂತಲೇ ಸಂತಿ ಯಾನಿ ವೈ ।
ತೀರ್ಥಾನಿ ತ್ರಿಷು ಕಾಲೇಷು ಸಮಾನಿ ದ್ವಾರಕಾಪುರಃ ॥ ೮೬ ॥

ಕಲಿನಾ ಕಲಿತಂ ಸರ್ವಂ ವರ್ಜಯಿತ್ವಾ ತು ಮತ್ಪುರೀಂ ।
ವಿಪ್ರ ವರ್ಷಶತೇ ಪ್ರಾಪ್ತೇ ಮತ್ಪುರ್ಯಾಂ ಮಮ ದರ್ಶನೇ ॥ ೮೭ ॥

ತವ ಮೃತ್ಯುರ್ಮಹೀದೇವ ಮತ್ಪ್ರಸಾದಾದ್ಭವಿಷ್ಯತಿ ।
ತ್ರಿಸ್ಪೃಶಾವಾಸರೇ ಪ್ರಾಪ್ತೇ ವೈಶಾಖೇ ಶುಕ್ಲಪಕ್ಷಕೇ ॥ ೮೮ ॥

ಸಂಗಮೇ ಬುಧವಾರಸ್ಯ ದಿವಾ ಭೂಮೌ ಮಮಾಗ್ರತಃ ।
ದಶಮಂ ದ್ವಾರಮಾಸಾದ್ಯ ತವ ಪ್ರಾಣಸ್ಯ ನಿರ್ಗಮಂ ।
ಭವಿಷ್ಯತಿ ನ ಸಂದೇಹೋ ಮತ್ಪ್ರಸಾದೇನ ಭೂಸುರ ॥ ೮೯ ॥

---

ಸ್ಥಾನ, ಬದರೀ, ಕುರುಕ್ಷೇತ್ರ, ಭೃಗುಕ್ಷೇತ್ರ, ಪುಷ್ಕರ, ಪ್ರಯಾಗ, ಪ್ರಭಾಸ, ಹಾಟಕೇಶ್ವರ, ಗಂಗಾದ್ವಾರ, ಶೌಕರ, ಗಂಗಾಸಾಗರಸಂಗಮ, ನೈಮಿಷ, ದಂಡಕಾರಣ್ಯ, ವೃಂದಾವನ, ಸೈಂಧವ, ಅರ್ಬುದ, ಸಮಸ್ತದೇವಾಲಯಗಳು, ಮಾಗಧ ಮೊದಲಾದ ವನಗಳು, ಹಿಮಾಲಯ ಮೊದಲಾದ ಶೈಲಗಳು, ಗಂಗಾದಿ ನದಿಗಳು, ಇನ್ನೂ ಭೂಮಿಯಲ್ಲಿರುವ ಇತರ ತೀರ್ಥಗಳು, ಇವುಗಳಿಗೆ ಸಮಾನವಾದುದು.

೮೭–೮೯. ನನ್ನ ಪಟ್ಟಣವನ್ನು ಬಿಟ್ಟು ಇತರ ಎಲ್ಲ ತೀರ್ಥಕ್ಷೇತ್ರಗಳು ಕಲಿಯಿಂದ ವ್ಯಾಪ್ತವಾಗಿರುವುವು. ಬ್ರಾಹ್ಮಣ! ನಿನಗೆ ನೂರುವರ್ಷಗಳಾಗಲು ನನ್ನ ಅನುಗ್ರಹದಿಂದ ನನ್ನದರ್ಶನ ಮಾಡಿದಕೂಡಲೇ ನಿನಗೆ ಮರಣ ಸಂಭವಿಸುವುದು. ವೈಶಾಖ ಶುಕ್ಲಪಕ್ಷದ ತ್ರಿಸ್ಪೃಶಾವಾಸರವು ಬುಧವಾರವಾಗಲು ಹಗಲು ನನ್ನಮುಂದೆ ನಿನ್ನ ಪ್ರಾಣವು ಹತ್ತನೆ ಬಾಗಿಲಿನಿಂದ ಹೊರಟುಹೋಗುವುದು.

ಸ್ವಸ್ಥಾನಂ ಗಚ್ಛ ವಿಪ್ರೇಂದ್ರ ಸರ್ವಾನ್ಕಾಮಾನ್ಸಮಾಪ್ಸ್ಯಸಿ ।
ಮದ್ಭಕ್ತಾನಾಂ ಯುಗಾಂತೇಽಪಿ ವಿನಾಶೋ ನೋಪಪದ್ಯತೇ ॥ ೯೦ ॥

ಮದ್ಭಕ್ತಿಂ ವಹತಾಂ ಪುಂಸಾಮಿಹ ಲೋಕೇ ಪರೇಪಿ ವಾ ।
ನಾಶುಭಂ ವಿದ್ಯತೇ ಕಿಂಚಿತ್ಕುಲಕೋಟಿಂ ನಯೇದ್ದಿವಂ ॥ ೯೧ ॥

ಮಾರ್ಕಂಡೇಯ ಉವಾಚ :—

ತತೋ ವರ್ಷಶತೇ ಪ್ರಾಪ್ತೇ ಗತ್ವಾ ದ್ವಾರವತೀಂ ಪುರೀಂ ।
ಪ್ರಾಣಾನ್ಕೃಷ್ಣೋಪದೇಶೇನ ತ್ಯಕ್ತ್ವಾ ಮೋಕ್ಷಂ ಜಗಾಮ ಹ ॥ ೯೨ ॥

ಇಂದ್ರದ್ಯುಮ್ನ ತದಾಖ್ಯಾತಂ ಮಾಹಾತ್ಮ್ಯಂ ದ್ವಾರಕಾಭವಂ ।
ಪುನರೇವ ಪ್ರವಕ್ಷ್ಯಾಮಿ ಯತ್ತೇ ಮನಸಿ ವರ್ತತೇ ॥ ೯೩ ॥

ಶೃಣ್ವತಾಂ ಪಠತಾಂ ಚೈವ ಮಾಹಾತ್ಮ್ಯಂ ದ್ವಾರಕಾಭವಂ ।
ಸರ್ವಂ ಫಲಮವಾಪ್ನೋತಿ ಕೃಷ್ಣೇನ ಕಥಿತಂ ಚ ಯತ್ ॥ ೯೪ ॥

---

೯೦. ವಿಪ್ರೇಂದ್ರ ! ನೀನು ನಿನ್ನ ಸ್ಥಳಕ್ಕೆ ಹೋಗು. ನಿನ್ನ ಸಕಲೇಷ್ಟಾರ್ಥಗಳನ್ನೂ ಪಡೆಯುವೆ. ಯುಗಾವಸಾನ ಕಾಲದಲ್ಲಿಯೂ ನನ್ನ ಭಕ್ತರಿಗೆ ವಿನಾಶವಿಲ್ಲ.

೯೧. ನನ್ನಲ್ಲಿ ಭಕ್ತಿಯುಳ್ಳ ಮಾನವರಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಅಶುಭವುಂಟಾಗುವುದಿಲ್ಲ. ಅವರು ತಮ್ಮ ಕೋಟಿ ಕುಲದವರನ್ನು ಸ್ವರ್ಗವನ್ನು ಹೊಂದಿಸುವರು.

೯೨. ಮಾರ್ಕಂಡೇಯನು ಹೇಳುತ್ತಾನೆ :— ತರುವಾಯ ಚಂದ್ರಶರ್ಮನು ನೂರು ವರ್ಷಗಳಾಗಲು ದ್ವಾರವತಿಗೆ ಹೋಗಿ ಕೃಷ್ಣೋಪದೇಶದಿಂದ ಪ್ರಾಣಗಳನ್ನು ತೊರೆದು ಮೋಕ್ಷಕ್ಕೆ ಹೋದನು.

೯೩. ಇಂದ್ರದ್ಯುಮ್ನ ! ನಿನಗೆ ದ್ವಾರಕಾಮಾಹಾತ್ಮ್ಯವನ್ನು ಹೇಳಿದೆನು. ಮರಳಿ ನಿನ್ನ ಮನಸ್ಸಿನಲ್ಲಿರುವುದನ್ನು ಕೇಳು. ಹೇಳುವೆನು.

೯೪. ದ್ವಾರಕಾಮಾಹಾತ್ಮ್ಯವನ್ನು ಕೇಳುವವರೂ ಹೇಳುವವರೂ ಕೃಷ್ಣನು ಹೇಳಿದ ಫಲವನ್ನು ಪಡೆಯುವರು.

ವಿಸ್ತಾರಯಂತಿ ಲೋಕೇಽಸ್ಮಿಂಲ್ಲಿಖಿತಂ ಯಸ್ಯ ವೇಶ್ಮನಿ ।
ಪ್ರತ್ಯಕ್ಷಂ ದ್ವಾರಕಾಪುಣ್ಯಂ ಪ್ರಾಪ್ಯತೇ ಕೃಷ್ಣಸಂಭವಂ ॥ ೯೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಚಂದ್ರಶರ್ಮೋಪಾಖ್ಯಾನೇದ್ವಾರಕಾನಗರೀ ಶ್ರೀಕೃಷ್ಣಮಾಹಾತ್ಮ್ಯವರ್ಣನಂನಾಮ
ಚತುರ್ವಿಂಶತಿತಮೋಽಧ್ಯಾಯಃ

೯೫. ಈ ಭೂಲೋಕದಲ್ಲಿ ಯಾವನು ಮನೆಯಲ್ಲಿ ಇದನ್ನು ಬರೆದು ವಿಸ್ತಾರಗೊಳಿಸುವನೊ, ಅವನು ದ್ವಾರಕೆಯಲ್ಲಿರುವ ಕೃಷ್ಣನನ್ನು ಪ್ರತ್ಯಕ್ಷವಾಗಿ ನೋಡಿದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಚಂದ್ರಶರ್ಮೋಪಾಖ್ಯಾನದಲ್ಲಿದ್ವಾರಕಾನಗರೀಶ್ರೀಕೃಷ್ಣಮಾಹಾತ್ಮ್ಯವರ್ಣನವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚವಿಂಶತಿತಮೋಽಧ್ಯಾಯಃ

### ಗೋಪೀಚಂದನಾದಿಮಾಹಾತ್ಮ್ಯವರ್ಣನಂ

ಇಂದ್ರದ್ಯುಮ್ನ ಉವಾಚ :—

ಕಥಯಸ್ವ ಮುನಿಶ್ರೇಷ್ಠ ಕಿಂಚಿತ್ಕೌತೂಹಲಂ ಮಮ ।
ಪುಣ್ಯಂ ಪವಿತ್ರಂ ಪಾಪಘ್ನಂ ತೀರ್ಥಂ ತು ವದ ವಿಸ್ತರಾತ್ ॥ ೧ ॥

ಮಾರ್ಕಂಡೇಯ ಉವಾಚ :—

ಮಥುರಾ ದ್ವಾರಕಾಽಯೋಧ್ಯಾ ಕಲಿಕಾಲೇ ಪುರೀ ತ್ರಯಂ ।
ಧರ್ಮಾರ್ಥಕಾಮದಂ ಭೂಪ ಮೋಕ್ಷದಂ ಹರಿವಲ್ಲಭಂ ॥ ೨ ॥
ಮಥುರಾಯಾಂ ತು ಕಾಲಿಂದೀ ಗೋಮತೀ ಕೃಷ್ಣಸನ್ನಿಧೌ ।
ಅಯೋಧ್ಯಾಯಾಂ ತು ಸರಯೂರ್ಮುಕ್ತಿದಾ ಸೇವಿತಾ ಸದಾ ॥ ೩ ॥
ದ್ವಾರವತ್ಯಾಮಯೋಧ್ಯಾಯಾಂ ಕೃಷ್ಣಂ ರಾಮಂ ಶುಭಪ್ರದಂ ।
ಮಥುರಾಯಾಂ ಹರಿಂ ವಿಷ್ಣುಂ ಸ್ಮೃತ್ವಾ ಮುಕ್ತಿಮವಾಪ್ನುಯಾತ್ ॥ ೪ ॥

---

### ಕನ್ನಡದ ಅನುವಾದ

### ಗೋಪೀಚಂದನಾದಿಮಾಹಾತ್ಮ್ಯವರ್ಣನ

೧. ಇಂದ್ರದ್ಯುಮ್ನನು ಹೇಳುತ್ತಾನೆ :—ಮುನಿವರೇಣ್ಯನೆ ! ನನಗೊಂದು ಕುತೂಹಲವುಂಟಾಗಿದೆ. ಪುಣ್ಯಕರವೂ, ಪವಿತ್ರವೂ, ಪಾಪವನ್ನು ನಿವಾರಿಸುವುದೂ ಆದ ತೀರ್ಥವನ್ನು ವಿಸ್ತಾರವಾಗಿ ಹೇಳು.

೨. ಮಾರ್ಕಂಡೇಯನು ಹೇಳುತ್ತಾನೆ :—ದೊರೆಯೆ! ಕಲಿಯುಗದಲ್ಲಿ ಮಥುರಾ, ದ್ವಾರಕಾ, ಅಯೋಧ್ಯಾ ಎಂಬ ಮೂರು ಪಟ್ಟಣಗಳು ಧರ್ಮ, ಕಾಮ, ಮೋಕ್ಷಗಳನ್ನೀಯುವ ವಿಷ್ಣುಪ್ರಿಯವಾದ ಕ್ಷೇತ್ರಗಳು.

೩. ಮಥುರೆಯಲ್ಲಿರುವ ಯಮುನಾ ನದಿಯನ್ನೂ, ದ್ವಾರಕೆಯಲ್ಲಿರುವ ಗೋಮತಿಯನ್ನೂ, ಅಯೋಧ್ಯೆಯಲ್ಲಿರುವ ಸರಯೂ ನದಿಯನ್ನೂ ಸೇವಿಸಿದರೆ ಮೋಕ್ಷವುಂಟಾಗುವುದು.

೪. ದ್ವಾರವತಿಯಲ್ಲಿ ಕೃಷ್ಣನನ್ನೂ, ಅಯೋಧ್ಯೆಯಲ್ಲಿ ಶುಭಪ್ರದನಾದ ರಾಮನನ್ನೂ ಮಥುರೆಯಲ್ಲಿ ವಿಷ್ಣುವನ್ನೂ ಸ್ಮರಿಸಿದವನು ಮೋಕ್ಷವನ್ನು ಹೊಂದುವನು.

ಧನ್ಯಾ ಸಾ ಮಥುರಾ ಲೋಕೇ ಯತ್ರ ಜಾತೋ ಹರಿಃ ಸ್ವಯಂ ।
ದ್ವಾರಕಾ ಸಫಲಾ ಲೋಕೇ ಕ್ರೀಡಿತಂ ಯತ್ರ ವಿಷ್ಣುನಾ ॥ ೫ ॥

ಧನ್ಯಾನಾಮಪಿ ಸಾ ಪೂಜ್ಯಾ ಅಯೋಧ್ಯಾ ಸರ್ವಕಾಮದಾ ।
ಯಾ ಸ್ವಯಂ ರಾಮದೇವೇನ ಪಾಲಿತಾ ಧರ್ಮಬುದ್ಧಿನಾ ॥ ೬ ॥

ಯದ್ದದಾತಿ ಫಲಂ ಕಾಶೀ ಸೇವಿತಾ ಕಲ್ಪಸಂಖ್ಯಯಾ ।
ಕಲೌ ದದಾತಿ ಮಥುರಾ ವಾಸರೇಣಾಪಿ ತತ್ಫಲಂ ॥ ೭ ॥

ಮನ್ವಂತರಸಹಸ್ರೇ ತು ಪ್ರಯಾಗೇ ಯತ್ಫಲಂ ಭವೇತ್ ।
ನಿಮಿಷಾರ್ಧೇನ ವಸತಾಂ ದ್ವಾರಕಾಯಾಂ ತು ತತ್ಫಲಂ ॥ ೮ ॥

ಪ್ರಭಾಸೇ ಚ ಕುರುಕ್ಷೇತ್ರೇ ಯತ್ಫಲಂ ವತ್ಸರೈಃ ಶತೈಃ ।
ವಸತಾಂ ನಿಮಿಷಾರ್ಧೇನ ಹ್ಯಯೋಧ್ಯಾಯಾಂ ಚ ತದ್ಭವೇತ್ ॥ ೯ ॥

ಅಯೋಧ್ಯಾಧಿಪತಿಂ ರಾಮಂ ಮಥುರಾಯಾಂ ತು ಕೇಶವಂ ।
ದ್ವಾರಕಾವಾಸಿನಂ ಕೃಷ್ಣಂ ಕೀರ್ತನಂ ಚಾಪಿ ದುರ್ಲಭಂ ॥ ೧೦ ॥

---

೫. ಮಥುರೆಯು ಶ್ರೀ ಕೃಷ್ಣನು ಜನಿಸಿದ್ದರಿಂದಲೂ, ದ್ವಾರಕೆಯು ಕೃಷ್ಣನು ಕ್ರೀಡಿಸಿದ್ದರಿಂದಲೂ ಧನ್ಯವಾದುವು.

೬. ಸಕಲೇಷ್ಟಾರ್ಥಗಳನ್ನೀಯುವ ಅಯೋಧ್ಯೆಯು ಧರ್ಮಬುದ್ಧಿಯುಳ್ಳ ರಾಮನು ಕಾಪಾಡಿದ್ದರಿಂದ ಪೂಜ್ಯವಾದುದು.

೭. ಕಾಶಿಯು ಒಂದು ಕಲ್ಪಕಾಲ ಸೇವಿಸಿದ್ದರಿಂದ ಕೊಡುವ ಫಲವನ್ನು ಮಥುರೆಯು ಒಂದು ದಿನದಲ್ಲಿಯೇ ಕೊಡುವುದು.

೮ ಪ್ರಯಾಗವು ಸಾವಿರ ಮನ್ವಂತರಗಳ ಕಾಲ ಸೇವಿಸಿದ್ದರಿಂದ ಕೊಡುವ ಫಲವನ್ನು ದ್ವಾರಕೆಯು ತನ್ನಲ್ಲಿ ವಾಸಮಾಡುವ ಜನರಿಗೆ ಅರ್ಧ ನಿಮಿಷದಲ್ಲಿ ಕೊಡುವುದು.

೯. ಪ್ರಭಾಸ, ಕುರುಕ್ಷೇತ್ರದಲ್ಲಿ ನೂರುವರ್ಷ ಕಾಲ ವಾಸಮಾಡುವುದರಿಂದುಂಟಾಗುವ ಫಲವು ಅಯೋಧ್ಯೆಯಲ್ಲಿ ಅರ್ಧ ನಿಮಿಷದಲ್ಲಿ ಲಭಿಸುವುದು.

೧೦. ಅಯೋಧ್ಯಾಧಿಪತಿಯಾದ ಶ್ರೀರಾಮ, ಮಥುರೆಯ ಕೇಶವ, ದ್ವಾರಕಾವಾಸಿಯಾದ ಶ್ರೀಕೃಷ್ಣ ಇವರನಾಮಸ್ಮರಣೆಯು ದುರ್ಲಭವಾದುದು.

ಮಥುರಾಕೀರ್ತಿರ್ತನೇನಾಪಿ ಶ್ರವಣಾದ್ದ್ವಾರಕಾಪುರಃ ।
ಅಯೋಧ್ಯಾದರ್ಶನೇನಾಪಿ ತ್ರಿಶುದ್ಧಂ ಚ ಪದಂ ವ್ರಜೇತ್ ॥ ೧೧ ॥
ಕೃಷ್ಣಂ ಸ್ವಾಯುಂಭುವಂ ದೇವಂ ದ್ವಾರಕಾ ತ್ರಿದಿವೋಪಮಾ ।
ಶ್ರುತಾ ಚಾಪ್ಯಥವಾ ದೃಷ್ಟ್ವಾ ಕುರುತೇ ಜನ್ಮಸಂಕ್ಷಯಂ ॥ ೧೨ ॥
ಶ್ರುತಾಭಿಲಿಖಿತಾ ದೃಷ್ಟ್ವಾ ಹ್ಯಯೋಧ್ಯಾಮಥುರಾ ಪುರೀ ।
ಪಾಪಂ ಹರತಿ ಕಲ್ಪೋತ್ಥಂ ದ್ವಾರಕಾ ಚ ತೃತೀಯಕಾ ॥ ೧೩ ॥
ಕೃಷ್ಣಂ ವಿಷ್ಣುಂ ಹರಿಂ ದೇವಂ ವಿಶ್ರಾಂತಂ ಚ ಕಲೌ ಸ್ಮೃತಂ ।
ದ್ವಾದಶ್ಯಾಂ ಜಾಗರೇ ರಾತ್ರಾವಶ್ವಮೇಧಾಯುತಂ ಫಲಂ ॥ ೧೪ ॥
ಬಾಲಕ್ರೀಡನಕಂ ಸ್ಥಾನಂ ಯೇ ಸ್ಮರಂತಿ ದಿನೇ ದಿನೇ ।
ಸ್ವರ್ಣಶೈಲಪದಂ ನೃಣಾಂ ಜಾಯತೇ ರಾಜಸತ್ತಮ ॥ ೧೫ ॥
ಧನ್ಯಾಸ್ತೇ ಮಾನವಾ ಲೋಕೇ ಕಲಿಕಾಲೇ ನರೋತ್ತಮ ।
ಪ್ಲವನಂ ಸಿಂಧುತೋಯೇನ ಗೋಮತ್ಯಾಂಯೈರ್ನರೈಃ ಕೃತಂ ॥ ೧೬ ॥
ಪಶ್ಚಿಮಾಶಾಂ ನರಃ ಸ್ನಾತ್ವಾ ಕೃತ್ವಾ ವೈ ಕರಸಂಪುಟಂ ।
ದ್ವಾರಕಾಂ ಯೇ ಸ್ಮರಿಷ್ಯಂತಿ ತೇಷಾಂ ಕೋಟಿಗುಣಂ ಫಲಂ ॥ ೧೭ ॥

---

೧೧. ಮನುಷ್ಯನು ಮಥುರಾಕೀರ್ತನೆಯಿಂದಲೂ, ದ್ವಾರಕೆಯ ನಾಮಶ್ರವಣದಿಂದಲೂ, ಅಯೋಧ್ಯಾ ದರ್ಶನದಿಂದಲೂ ತ್ರಿಶುದ್ಧವಾದ ಸ್ಥಾನಕ್ಕೆ ತೆರಳುವನು.

೧೨. ಸ್ವಯಂಜಾತನಾದ ಕೃಷ್ಣನನ್ನೂ, ದೇವಲೋಕದಂತಿರುವ ದ್ವಾರಕೆಯನ್ನೂ, ಶ್ರವಣ ಅಥವಾ ದರ್ಶನಮಾಡುವುದರಿಂದ ಮುಕ್ತಿಯಾಗುವುದು.

೧೩. ಅಯೋಧ್ಯೆ, ಮಥುರೆ, ದ್ವಾರಕೆ ಇವುಗಳು ಶ್ರವಣದಿಂದಲೂ ಲೇಖನದಿಂದಲೂ, ದರ್ಶನದಿಂದಲೂ, ಒಂದು ಕಲ್ಪದ ಪಾಪನನ್ನು ಪರಿಹರಿಸುವುವು.

೧೪. ಕಲಿಯುಗದಲ್ಲಿ ವಿಶ್ರಾಂತಿಗೊಂಡ ಕೃಷ್ಣನನ್ನು ಸ್ಮರಿಸುವುದರಿಂದಲೂ, ದ್ವಾದಶೀರಾತ್ರಿ ಜಾಗರಣೆಮಾಡುವುದರಿಂದಲೂ, ಹತ್ತುಸಾವಿರ ಅಶ್ವಮೇಧಯಾಗಗಳ ಫಲವು ದೊರೆಯುವುದು.

೧೫. ಪ್ರತಿ ದಿನವೂ ಶ್ರೀಕೃಷ್ಣನು ಬಾಲಕ್ರೀಡೆ ಮಾಡಿದ ಸ್ಥಳವನ್ನು ಸ್ಮರಿಸುವವರಿಗೆ ಮೇರುಶೈಲವಾಸವು, ಲಭಿಸುವುದು.

೧೬. ರಾಜೇಂದ್ರ, ! ಕಲಿಯುಗದಲ್ಲಿ ಗೋಮತೀಸಾಗರಸಂಗಮದಲ್ಲಿ ಸ್ನಾನ ಮಾಡಿದಮಾನವರು ಧನ್ಯರು.

೧೭. ಮಾನವನು ಪಶ್ಚಿಮ ದಿಕ್ಕಿನಲ್ಲಿ ಮಿಂದು ಕೈಜೋಡಿಸಿಕೊಂಡು ದ್ವಾರಕೆಯನ್ನು ಸ್ಮರಿಸಿದರೆ, ಕೋಟಿಯಷ್ಟುಫಲವು ಲಭಿಸುವುದು.

ಮನಸಾ ಚಿಂತಯೇದ್ಯೋ ವೈ ಕಲೌ ದ್ವಾರವತೀಂ ಪುರೀಂ ।
ಕಪಿಲ್ಯಾಯುತಪುಣ್ಯಂ ಚ ಲಭತೇ ಹೇಲಯಾ ನರಃ ॥ ೧೮ ॥
ಗಂಗಾಸಾಗರಜಂ ಪುಣ್ಯಂ ಗಂಗಾದ್ವಾರಭವಂ ತಥಾ ।
ಕಲೌ ದ್ವಾರವತೀಂ ಗತ್ವಾ ಪ್ರಾಪ್ನೋತಿ ಮನುಜಾಧಿಪ ॥ ೧೯ ॥
ಸಪ್ತಕಲ್ಪಸ್ಮರೋ ಭೂಪ ಮಾರ್ಕಂಡೇಯಃ ಸ್ಮರಾಮ್ಯಹಂ ।
ಸಮಾನಾವಾಧಿಕಾ ವಾಪಿ ದ್ವಾರವತ್ಯಾ ನ ಕಾಪಿ ಪೂಃ ॥ ೨೦ ॥
ದುರ್ವಾಸಸಾ ಸಮೋ ಧನ್ಯೋ ನಾಸ್ತಿ ನಾಪ್ಯಧಿಕೋ ನೃಪ ।
ಭಾಷಾಬಂಧಂ ಯೇನ ಕೃತ್ವಾ ದ್ವಾರಕಾಯಾಂ ಧೃತೋ ಹರಿಃ ॥ ೨೧ ॥
ಮಾ ಕಾಶೀಂ ಮಾ ಕುರುಕ್ಷೇತ್ರಂ ಪ್ರಭಾಸಂ ಮಾ ಚ ಪುಷ್ಕರಂ ।
ದ್ವಾರಕಾಂ ಗಚ್ಛ ರಾಜರ್ಷೇ ಪಶ್ಯ ಕೃಷ್ಣಮುಖಂ ಶುಭಂ ॥ ೨೨ ॥
ಅಶ್ವಮೇಧಸಹಸ್ರಂ ತು ರಾಜಸೂಯಶತಂ ಕಲೌ ।
ಪದೇಪದೇ ಚ ಲಭತೇ ದ್ವಾರಕಾಂ ಯಾತಿ ಯೋ ನರಃ ॥ ೨೩ ॥
ಸಫಲಂ ಜೀವಿತಂ ತೇಷಾಂ ಕಲೌ ನೃಪವರೋತ್ತಮ ।
ಯೇಷಾಂ ನ ಸ್ಖಲಿತಂ ಚಿತ್ತಂ ದ್ವಾರಕಾಂ ಪ್ರತಿ ಗಚ್ಛತಾಂ ॥ ೨೪ ॥

---

೧೮. ಕಲಿಯುಗದಲ್ಲಿ ದ್ವಾರತಿಯನ್ನು ಮನಸ್ಸಿನಿಂದ ಚಿಂತಿಸಿದ ಮಾನವನು ಅನಾಯಾಸದಿಂದ ಹತ್ತುಸಾವಿರ ಕಪಿಲಗೋವುಗಳನ್ನು ದಾನಮಾಡಿದ ಪುಣ್ಯವನ್ನು ಪಡೆಯುವನು.

೧೯. ದೊರೆಯೆ ! ಕಲಿಯುಗದಲ್ಲಿ ದ್ವಾರವತಿಗೆ ಹೋದ ಮಾನವನು ಗಂಗಾದ್ವಾರ, ಗಂಗಾಸಾಗರಗಳಲ್ಲುಂಟಾಗುವ ಫಲವನ್ನು ಹೊಂದುವನು.

೨೦. ರಾಜನೆ ! ಏಳು ಕಲ್ಪಗಳನ್ನು ಸ್ಮರಿಸುವ ಮಾರ್ಕಂಡೇಯನಾದ ನಾನು ದ್ವಾರವತಿಗೆ ಸಮಾನವೂ, ಅಧಿಕವೂ, ಆದ ಯಾವುದೊಂದು ಪಟ್ಟಣವನ್ನೂ ಸ್ಮರಿಸುವುದಿಲ್ಲ.

೨೧. ದೊರೆಯೆ! ತನ್ನ ಮಾತಿನಿಂದ ಕೃಷ್ಣನನ್ನು ದ್ವಾರಕೆಯಲ್ಲಿ ನೆಲಸುವಂತೆ ಮಾಡಿದ ದುರ್ವಾಸಮುನಿಗೆ ಸಮಾನನೂ, ಅಧಿಕನೂ ಆದ ಧನ್ಯನು ಲೋಕದಲ್ಲಿಲ್ಲ.

೨೨. ರಾಜರ್ಷಿಯೆ ! ಕಾಶೀ, ಕುರುಕ್ಷೇತ್ರ, ಪ್ರಭಾಸ, ಪುಷ್ಕರಗಳಿಗೆ ಹೋಗಬೇಡ. ದ್ವಾರಕೆಗೆ ಹೋಗಿ ಕೃಷ್ಣನಮುಖವನ್ನು ನೋಡು.

೨೩. ಕಲಿಯುಗದಲ್ಲಿ ದ್ವಾರಕೆಗೆ ಹೋಗುತ್ತಿರುವ ಮಾನವನಿಗೆ ಪ್ರತಿಹೆಜ್ಜೆಯಲ್ಲಿಯೂ ಸಾವಿರ ಅಶ್ವಮೇಧಯಾಗಗಳ ಮತ್ತು ನೂರು ರಾಜಸೂಯಯಾಗಗಳ ಫಲವು ದೊರೆಯುವುದು.

೨೪ ನೃಪೇಂದ್ರ ! ಕಲಿಯುಗದಲ್ಲಿ ಯಾರಮನಸ್ಸು ದ್ವಾರಕೆಗೆ ಹೋಗುತ್ತಿರುವಾಗ ಚಂಚಲವಾಗುವುದಿಲ್ಲವೊ ಅವರ ಜೀವನವು ಸಫಲವಾದುದು.

ಮಾತಾ ಚ ಪುತ್ರಿಣೀ ತೇನ ಪಿತಾಚೈವ ಪಿತಾಮಹಾಃ ।
ಪಿಂಡದಾನಂ ಕೃತಂ ಯೇನ ಗೋಮಾತ್ಯಾಂ ಕೃಷ್ಣಸನ್ನಿಧೌ ॥ ೨೫ ॥
ಗೋಪೀಚಂದನಮುದ್ರಾಂ ತು ಕೃತ್ವಾ ಭ್ರಮತಿ ಭೂತಲೇ ।
ಸೋಽಪಿ ದೇಶೋ ಭವೇತ್ಪೂತಃ ಕಿಂ ಪುನರ್ಯತ್ರ ಸಂಸ್ಥಿತಂ ॥ ೨೬ ॥
ದ್ವಾರಕಾಯಾಂ ಸಮುದ್ಭೂತಾಂ ತುಲಸೀಂ ಕೃಷ್ಣಸೇವಿತಾಂ ।
ನಿತ್ಯಂ ಬಿಭರ್ತಿ ಶಿರಸಾ ಸ ಭವೇತ್ತ್ರಿದಶಾಧಿಪಃ ॥ ೨೭ ॥
ದೈತ್ಯಾರೇರ್ಭಗವತ್ತಿಥಿಶ್ಚ ವಿಜಯಾ ನೀರಂ ಚ ಗಂಗೋದ್ಭವಂ ।
ನಿತ್ಯಂ ಕಾಶಿಪುರೀ ತಥೈವ ತುಲಸೀ ಧಾತ್ರೀಫಲಂ ವಲ್ಲಭಂ ।
ಶಾಸ್ತ್ರಂ ಭಾಗವತಂ ತಥಾ ಚ ದಯಿತಂ ರಾಮಾಯಣಂ ದ್ವಾರಕಾ ।
ಪುಣ್ಯಂ ಮಾಲತಿ ಸಂಭವಂ ಸುದಯಿತಂ ಗೀತಂ ಕೃತಂ ಜಾಗರಂ ॥ ೨೮ ॥
ಗೃಹೇ ಯಸ್ಯ ಸದಾ ತಿಷ್ಠೇದ್ಗೋಪೀಚಂದನಮೃತ್ತಿಕಾ ।
ದ್ವಾರಕಾ ತಿಷ್ಠತೇ ತತ್ರ ಕೃಷ್ಣೇನ ಸಹಿತಾ ಕಲೌ ॥ ೨೯ ॥
ಕೃತಘ್ನೋ ವಾಥ ಗೋಘ್ನೋಽಪಿ ಹೈತುಕಃ ಕೃತ್ಸ್ನಪಾಪಕೃತ್ ।
ಗೋಪೀಚಂದನಸಂಪರ್ಕಾತ್ಪೂತೋ ಭವತಿ ತತ್ಕ್ಷಣಾತ್ ॥ ೩೦ ॥

---

೨೫. ಗೋಮತಿಯಲ್ಲಿ ಕೃಷ್ಣನ ಸನ್ನಿಧಿಯಲ್ಲಿ ಪಿಂಡದಾನಮಾಡಿದವನತಾಯಿ, ತಂದೆ, ಪಿತಾಮಹರು ಸತ್ಪುತ್ರನುಳ್ಳವರು.

೨೬. ಭೂಮಿಯಲ್ಲಿ ಗೋಪೀಚಂದನ ಮುದ್ರೆಯನ್ನು ಧರಿಸಿದ ನರನು ಸಂಚರಿಸುವ ಸ್ಥಳವೆಲ್ಲ ಪವಿತ್ರವಾಗುವುದು. ಇನ್ನೂ ಅವನು ವಾಸಿಸುವ ಸ್ಥಳವನ್ನು ಏನು ಹೇಳತಕ್ಕದು.

೨೭. ದ್ವಾರಕೆಯಲ್ಲಿಹುಟ್ಟಿ ಕೃಷ್ಣನಿಗೆ ಸಮರ್ಪಿಸಿದ ತುಳಸಿಯನ್ನು ನಿತ್ಯವೂ ತಲೆಯಲ್ಲಿ ಧರಿಸುವವನು ಇಂದ್ರನಾಗುವನು.

೨೮-೨೯. ಹರಿದಿನ, ಗಂಗಾಜಲ, ಕಾಶೀ, ತುಳಸೀ, ನೆಲ್ಲಿ, ಭಾಗವತಪುರಾಣ ರಾಮಾಯಣ, ದ್ವಾರಕಾಪುಣ್ಯ, ಮಾಲತೀಪುಷ್ಪ, ಭಗವದ್ಗೀತೆ, ಜಾಗರಣೆ, ಇವುಗಳ ಶ್ರೀಕೃಷ್ಣನಿಗೆ ಪ್ರಿಯವಾದುವು.

೩೦. ಕಲಿಯುಗದಲ್ಲಿ ಯಾವನ ಮನೆಯಲ್ಲಿ ಯಾವಾಗಲೂ ಗೋಪೀಚಂದ್ರನವು ಇರುವುದೋ ಅಲ್ಲಿ ಕೃಷ್ಣನೊಡನೆ ದ್ವಾರಕೆಯೂ ಇರುವುದು.

೩೧. ಕೃತಘ್ನ , ಗೋಘ್ನ, ಹೇತುವಾದೀ, ಸಕಲಪಾಪಗಳನ್ನು ಮಾಡಿದವನು ಗೋಪೀಚಂದನದ ಸಂಬಂಧದಿಂದ ಕೂಡಲೆ ಪವಿತ್ರರಾಗುವರು.

ಗೋಪೀಚಂದನಖಂಡಂ ತು ಯೋ ದದಾತೀಹ ವೈಷ್ಣವೇ ।
ಕುಲಮೇಕೋತ್ತರಂ ತೇನ ಶತಂ ತಾರಿತಮೇವ ವಾ ॥ ೩೨ ॥
ದ್ವಾರಕಾಸಂಭವಾ ಭೂಪ ತುಲಸೀ ಯಸ್ಯ ಮಂದಿರೇ ।
ತಸ್ಯ ವೈವಸ್ವತೋ ನಿತ್ಯಂ ಬಿಭೇತಿ ಸಹ ಕಿಂಕರೈಃ ॥ ೩೩ ॥
ದ್ವಾರಕಾಸಂಭವಾ ಮೃತ್ಸ್ನಾ ತುಲಸೀ ಕೃಷ್ಣಕೀರ್ತನಂ ।
ಕ್ರತುಕೋಟಿಶತಂ ಪುಣ್ಯಂ ಕಥಿತಂ ವ್ಯಾಸಸೂನುನಾ ॥ ೩೪ ॥
ಆಲೋಡ್ಯ ಸರ್ವಶಾಸ್ತ್ರಾಣಿ ಪುರಾಣಾನಿ ಪುನಃ ಪುನಃ ।
ಮಯಾ ದೃಷ್ಟ್ವಾ ಮಹೀಪಾಲ ನ ದ್ವಾರಕಾಸಮಾ ಪುರೀ, ॥ ೩೫ ॥
ದ್ವಾರಕಾಗಮನಂ ಯೇನ ಕೃತಂ ಕೃಷ್ಣಸ್ಯ ಕೀರ್ತನಂ ।
ಸ್ನಾತಂ ತೀರ್ಥಸಹಸ್ರೈಸ್ತು ತೇನೇಷ್ಟಂ ಕ್ರತುಕೋಟಿಭಿಃ ॥ ೩೬ ॥
ಇಂದ್ರಿಯಾಣಾಂ ತು ದಮನಂ ಕಿಂ ಕರಿಷ್ಯತಿ ದೇಹಿನಾಂ ।
ಸಾಂಖ್ಯಮಧ್ಯಯನಂ ಚಾಪಿ ದ್ವಾರಕಾಂ ಗಚ್ಛತೇ ನ ಚೇತ್ ॥ ೩೭ ॥
ಪಶವಸ್ತೇ ನ ಸಂದೇಹೋ ಗರ್ದಭೇನ ಸಮಾ ಜನಾಃ ।
ದೃಷ್ಟಂ ಕೃಷ್ಣಮುಖಂ ಯೈರ್ನ ಗತ್ವಾ ದ್ವಾರವತೀಂ ಪುರೀಂ ॥ ೩೮ ॥

೩೨. ಇಲ್ಲಿ ವೈಷ್ಣವನಿಗೆ ಗೋಪಿಚಂದನವನ್ನು ದಾನಮಾಡಿದವನ ನೂರೊಂದು ಕುಲಗಳು ಉದ್ಧಾರವಾಗುವುವು.

೩೩. ಯಾವನ ಮನೆಯಲ್ಲಿ ದ್ವಾರಕೆಯಲ್ಲಿ ಹುಟ್ಟಿದ ತುಳಸಿಯು ಇರುವುದೊ, ಅವನಿಂದ ಯಮನು ಕಿಂಕರರೊಡನೆ ಹೆದರುವನು.

೩೪. ಶುಕಮುನಿಯು ದ್ವಾರಕೆಯ ಮೃತ್ತಿಕೆ, ತುಳಸಿ, ಕೃಷ್ಣನ ನಾಮಕೀರ್ತನೆ ಇವುಗಳು ಅನೇಕ ಕೋಟಿ ಯಜ್ಞಗಳ ಪುಣ್ಯವನ್ನುಂಟುಮಾಡುವುವು ಎಂದು ಹೇಳಿರುವನು.

೩೫. ದೊರೆಯೆ ! ನಾನು ಸಕಲ ಶಾಸ್ತ್ರಗಳನ್ನೂ, ಪುರಾಣಗಳನ್ನೂ ಆಲೋಚನೆ ಮಾಡಿ ನೋಡಿದೆನು. ಆದರೆ ದ್ವಾರಕೆಗೆ ಸಮಾನವಾದ ಪಟ್ಟಣವನ್ನು ನೋಡಲಿಲ್ಲ.

೩೬. ದ್ವಾರಕಾಯಾತ್ರೆ, ಕೃಷ್ಣನ ನಾಮಕೀರ್ತನೆ ಇವುಗಳನ್ನು ಮಾಡಿದವನು ಅನೇಕ ತೀರ್ಥಗಳಲ್ಲಿ ମಿಂದವನೂ, ಕೋಟಿ ಯಜ್ಞಗಳನ್ನು ಮಾಡಿದವನೂ ಆಗುವನು.

೩೭. ದ್ವಾರಕಾಯಾತ್ರೆ ಮಾಡಿದ ಮಾನವನಿಗೆ ಇಂದ್ರಿಯ ನಿಗ್ರಹ, ಸಾಂಖ್ಯ ಶಾಸ್ತ್ರ ಜ್ಞಾನ, ವೇದಾಧ್ಯಯನ ಇವುಗಳಿಂದೇನು ಪ್ರಯೋಜನ ?

೩೮. ದ್ವಾರವತಿಗೆ ಹೋಗಿ ಕೃಷ್ಣನ ಮುಖವನ್ನು ನೋಡದವರು ನಿಶ್ಚಯವಾಗಿಯೂ ಪಶುಗಳು. ಕತ್ತೆಗೆ ಸಮಾನರು.

ಕೃತಕೃತ್ಯಾಸ್ತು ತೇ ಧನ್ಯಾ ದ್ವಾದಶ್ಯಾಂ ಜಾಗರೇ ಹರೇಃ ।
ಕೃತ್ವಾ ಜಾಗರಣಂ ಭಕ್ತ್ಯಾ ನೃತ್ಯಮಾನಾ ಮುಹುರ್ಮುಹುಃ ॥ ೩೯ ॥
ಕೃಷ್ಣಾಲಯಂ ತು ಯೋ ಗತ್ವಾ ಗೋಮತ್ಯಾಂ ಪಿಂಡಪಾತನಂ ॥
ಕರೋತಿ ಶಕ್ತ್ಯಾ ದಾನಂ ಚ ಮುಕ್ತಾಸ್ತಸ್ಯ ಪಿತಾಮಹಾಃ ॥ ೪೦ ॥
ಪ್ರೇತತ್ವಂ ಚ ಪಿಶಾಚತ್ವಂ ನ ಭವೇತ್ತಸ್ಯ ದೇಹಿನಃ ।
ಜನ್ಮಜನ್ಮನಿ ರಾಜೇಂದ್ರ ಯೋ ಗತೋ ದ್ವಾರಕಾಂ ಪುರೀಂ ॥ ೪೧ ॥
ಅನಶನೇನ ಯತ್ಪುಣ್ಯಂ ಪ್ರಯಾಗೇ ತ್ಯಜತಸ್ತನುಂ ॥
ದ್ವಾದಶ್ಯಾಂ ನಿಮಿಷಾರ್ಧೇನ ತತ್ಫಲಂ ಕೃಷ್ಣಸನ್ನಿಧೌ ॥ ೪೨ ॥
ಸೂರ್ಯಗ್ರಹೇ ಗವಾಂ ಕೋಟಿಂ ದತ್ವಾ ಯತ್ಫಲಮಾಪ್ನುಯಾತ್ ।
ತತ್ಫಲಂ ಕಲಿಕಾಲೇ ತು ದ್ವಾರವತ್ಯಾಂ ದಿನೇ ದಿನೇ ॥ ೪೩ ॥
ಕೋಟಿಭಾರಂ ಸುವರ್ಣಸ್ಯ ಗ್ರಹಣೇ ಚಂದ್ರಸೂರ್ಯಯೋಃ ।
ದತ್ವಾ ಯತ್ಫಲಮಾಪ್ನೋತಿ ತತ್ಫಲಂ ಕೃಷ್ಣದರ್ಶನೇ ॥ ೪೪ ॥

---

೩೯. ದ್ವಾದಶೀ ದಿನ ಭಕ್ತಿಯಿಂದ ಜಾಗರಣೆ ಮಾಡಿ ಬಾರಿಬಾರಿಗೂ ಕುಣಿಯುತ್ತಿರುವವರು ಪುಣ್ಯವಂತರು.

೪೦. ಕೃಷ್ಣದೇವಾಲಯಕ್ಕೆ ಹೋಗಿ ಗೋಮತಿಯಲ್ಲಿ ಪಿಂಡಪ್ರದಾನ ಮಾಡಿ ಶಕ್ತ್ಯನುಸಾರ ದಾನಕೊಟ್ಟವನ ಪಿತಾಮಹರು ಮುಕ್ತರಾಗುವರು.

೪೧. ದೊರೆಯೆ ! ದ್ವಾರಕೆಗೆ ಹೋದವನು ಪ್ರತಿ ಜನ್ಮದಲ್ಲಿಯೂ ಪ್ರೇತವೂ ಪಿಶಾಚವೂ ಆಗುವುದಿಲ್ಲ.

೪೨. ಪ್ರಯಾಗದಲ್ಲಿ ಉಪವಾಸಮಾಡಿ ದೇಹವನ್ನು ತ್ಯಜಿಸುವವನಿಗುಂಟಾಗುವ ಪುಣ್ಯವು ಕೃಷ್ಣನ ಹತ್ತಿರ ಅರ್ಧನಿಮಿಷ ಕಾಲ ದ್ವಾದಶೀ ದಿನ ಜಾಗರಣೆ ಮಾಡುವುದರಿಂದುಂಟಾಗುವುದು.

೪೩. ಸೂರ್ಯಗ್ರಹಣ ಕಾಲದಲ್ಲಿ ಕೋಟಿ ಗೋವುಗಳನ್ನು ದಾನಮಾಡಿದ ಫಲವು ಕಲಿಯುಗದಲ್ಲಿ ಪ್ರತಿ ದಿನವೂ ದ್ವಾರಕೆಯಲ್ಲಿ ವಾಸಿಸುವುದರಿಂದುಂಟಾಗುವುದು.

೪೪. ಕೃಷ್ಣನ ದರ್ಶನದಿಂದ ಚಂದ್ರ ಸೂರ್ಯಗ್ರಹಣ ಕಾಲದಲ್ಲಿ ಕೋಟಿ ಭಾರ ಸುವರ್ಣವನ್ನು ದಾನಮಾಡಿದ ಫಲವು ಲಭಿಸುವುದು.

ದೋಲಾಸಂಸ್ಥಂ ಚ ಯೇ ಕೃಷ್ಣಂ ಪಶ್ಯಂತಿ ಮಧುಮಾಧವೇ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಮಾತಾಮಹಪಿತಾಮಹಾಃ ॥ ೪೫ ॥
ಶ್ವಶುರಾದ್ಯಾಃ ಸಭೃತ್ಯಾಶ್ಚ ಪಶವಶ್ಚ ನರೋತ್ತಮ ।
ಕ್ರೀಡಂತಿ ವಿಷ್ಣುನಾ ಸಾರ್ಧಂ ಯಾವದಾಭೂತಸಂಪ್ಲವಂ ॥ ೪೬ ॥
ಯಾ ಕಾಚಿಜ್ಜಾಯತೇ ಭೂಪ ದ್ವಾದಶೀ ಕೃಷ್ಣಸನ್ನಿಧೌ ।
ಪಶ್ಯಾಮಿ ನಾಂತರಂ ಕಿಂಚಿತ್ಕಲಿಕಾಲೇ ವಿಶೇಷತಃ ॥ ೪೭ ॥
ಕೃಷ್ಣಸ್ಯ ಸನ್ನಿಧೌ ನಿತ್ಯಂ ವಾಸರಾ ದ್ವಾದಶೀಸಮಾಃ ।
ಯುಗಾದಿಭಿಸ್ಸಮಾಃ ಸರ್ವೇ ನಿತ್ಯಂ ಕೃಷ್ಣಸ್ಯ ಸನ್ನಿಧೌ ॥ ೪೮ ॥
ಕಲೌ ದ್ವಾರವತೀ ಸೇವ್ಯಾ ಜ್ಞಾತ್ವಾ ಪುಣ್ಯಂ ವಿಶೇಷತಃ ।
ಷಟ್ಪುರ್ಯಶ್ಚೈವ ಸುಲಭಾ ದುರ್ಲಭಾ ದ್ವಾರಕಾ ಕಲೌ ॥ ೪೯ ॥
ಸ್ಮರಣಾತ್ಕೀರ್ತನಾದ್ಯಸ್ಮಾದ್ಭುಕ್ತಿಮುಕ್ತೀ ಸದಾ ನೃಣಾಂ ।
ದುರ್ವಾಸಸಾ ತು ಋಷಿಣಾ ರಕ್ಷಿತಾ ತಿಷ್ಠತೇ ಪುರಾ ॥ ೫೦ ॥
ಕಲೌ ನ ಶಕ್ಯತೇ ಗಂತುಂ ವಿನಾ ಕೃಷ್ಣಪ್ರಸಾದತಃ ।
ಕೃಷ್ಣಸ್ಯ ದರ್ಶನಂ ಕರ್ತುಂ ಯಾಂತಿ ರುದ್ರಾದಯಃ ಸುರಾಃ ॥ ೫೧ ॥

---

೪೫–೪೬. ವೈಶಾಖಮಾಸದಲ್ಲಿ ತೊಟ್ಟಿಲಲ್ಲಿರುವ ಕೃಷ್ಣನನ್ನು ದರ್ಶನ ಮಾಡುವವರ ಪುತ್ರ, ಪೌತ್ರ, ಮಾತಾಮಹ, ಪಿತಾಮಹ, ಶ್ವಶುರ, ಭೃತ್ಯ, ಪಶು ಮೊದಲಾದವರು ಪ್ರಳಯಕಾಲದ ವರೆಗೆ ವಿಷ್ಣುವಿನೊಡನೆ ವಿಹರಿಸುವರು.

೪೭. ದೊರೆಯೆ ! ಕಲಿಕಾಲದಲ್ಲಿ ಕೃಷ್ಣನ ಹತ್ತಿರ ಸಂಭವಿಸುವ ದ್ವಾದಶಿಗಳೆಲ್ಲ ಒಂದೇ ವಿಧವಾಗಿರುವುವು.

೪೮. ಕೃಷ್ಣನ ಹತ್ತಿರ ನಡೆಯುವ ದಿನಗಳೆಲ್ಲ ದ್ವಾದಶಿ ಯುಗಾದಿಗಳಿಗೆ ಸಮಾನವಾದುವು.

೪೯. ಕಲಿಯುಗದಲ್ಲಿ ವಿಶೇಷವಾಗಿ ಪುಣ್ಯವನ್ನರಿತು ದ್ವಾರವತಿಯನ್ನು ಸೇವಿಸಬೇಕು. ಹಿಂದೆ ಹೇಳಿದ ಆರು ಪಟ್ಟಣಗಳು ಸುಲಭವಾದುವು. ದ್ವಾರಕೆಯು ದುರ್ಲಭವಾದುದು.

೫೦. ಮಾನವರಿಗೆ ಸ್ಮರಣ ಕೀರ್ತನೆಗಳಿಂದ ಯಾವಾಗಲೂ ಭುಕ್ತಿ ಮುಕ್ತಿಗಳನ್ನೀಯುವ ದ್ವಾರಕೆಯನ್ನು ದುರ್ವಾಸ ಮುನಿಯು ಕಾಪಾಡಿಕೊಂಡಿರುವನು.

೫೧. ಕಲಿಯುಗದಲ್ಲಿ ಕೃಷ್ಣನ ಅನುಗ್ರಹವಿಲ್ಲದೆ ಆ ದ್ವಾರಕೆಗೆ ಹೋಗಲು ಸಾಧ್ಯವಿಲ್ಲ. ಆ ಕೃಷ್ಣನನ್ನು ನೋಡಲು ರುದ್ರಾದಿ ದೇವತೆಗಳೂ ಹೋಗುವರು.

ತ್ರಿಕಾಲಂ ಜಗತೀನಾಥ ರುಕ್ಮಿಣೀದರ್ಶನಾಯ ಚ ।
ಸಫಲಾ ಭಾರತೀ ತಸ್ಯ ಕೃಷ್ಣಕೃಷ್ಣೇತಿ ಯಾ ವದೇತ್ ॥ ೫೨ ॥
ದ್ವಾರಕಾಯಾಯಿನಂ ದೃಷ್ಟ್ವಾ ಗಾಯಂತಿ ದಿವಿ ಸಂಸ್ಥಿತಾಃ ।
ನರಕಾತ್ಪಿತರೋ ಮುಕ್ತಾಃ ಪ್ರಚಲಂತಿ ಹಸಂತಿ ಚ ॥ ೫೩ ॥
ಗೋಪ್ಯಂ ಯತ್ಪಾತಕಂ ಪುಂಸಾಂ ಗೋಮತೀ ತದ್ವ್ಯಪೋಹತಿ ।
ಸ್ಮರಣಾತ್ಕೀರ್ತನಾದ್ವಾಪಿ ಕಿಂ ಪುನಃ ಪ್ಲವನೇ ಕೃತೇ ॥ ೫೪ ॥
ರುಕ್ಮಿಣೀಸಹಿತಂ ದೇವಂ ಶಂಖೋದ್ಧಾರೇ ಚ ಶಂಖಿನಂ ।
ಪಿಂಡಾರಕೇ ಚತುರ್ಬಾಹುಂ ದೃಷ್ಟ್ವಾನ್ಯೈಃ ಕಿಂ ಕರಿಷ್ಯತಿ ॥ ೫೫ ॥
ರುಕ್ಮಿಣೀದೇವಕೀಪುತ್ರಶ್ಚಕ್ರತೀರ್ಥಂ ಚ ಗೋಮತೀ ।
ಗೋಪೀನಾಂ ಚಂದನಂ ಲೋಕೇ ತುಲಸೀ ದುರ್ಲಭಾ ಕಲೌ ॥ ೫೬ ॥
ದುರ್ಲಭಾಸ್ತೇ ಸುರಾಜ್ಞೀ ಯಾ ಧರಣೀಪಾಪನಾಶಕಾಃ ।
ಗಯಾಂ ಗತ್ವಾ ತು ಯೇ ಪಿಂಡಂ ದ್ವಾರಕಾಂ ಕೃಷ್ಣದರ್ಶನಂ ।
ಕರಿಷ್ಯಂತಿ ಕಲೌ ಪ್ರಾಪ್ತೇ ವಂಜಲೀ ಸಮುಪೋಷಣಂ ॥ ೫೭ ॥
ಸಮಂ ಪುಣ್ಯಫಲಂ ತೇಷಾಂ ವಂಜಲೀ ದ್ವಾರಕಾ ಸಮಾ ।
ಯೇನ ನ್ಯೂನಾ ನಾಧಿಕಾಪಿ ಕಥಿತಂ ವಿಷ್ಣುನಾ ಸ್ವಯಂ ॥ ೫೮ ॥

---

೫೨. ದೊರೆಯೆ ! ತ್ರಿಕಾಲದಲ್ಲಿಯೂ ರುಕ್ಮಿಣಿಯ ದರ್ಶನಕ್ಕಾಗಿ ಹೋಗುತ್ತ ಕೃಷ್ಣ ಕೃಷ್ಣ ಎಂದು ನುಡಿಯುವವನ ಮಾತು ಸಫಲವಾದುದು.

೫೩. ದೇವತೆಗಳು ದ್ವಾರಕೆಗೆ ಹೋಗುವವನನ್ನು ಕಂಡು ಗಾನಮಾಡುವರು. ಪಿತೃಗಳು ನರಕದಿಂದ ಮುಕ್ತರಾಗಿ ಹೊರಡುವರು ಮತ್ತು ಸಂತುಷ್ಟರಾಗಿ ನಗುವರು.

೫೪. ಗೋಮತೀನದಿಯು ಸ್ಮರಣೆಯಿಂದಲೂ, ಕೀರ್ತನೆಯಿಂದಲೂ ಮಾನವರ ಗುಪ್ತಪಾಪಗಳನ್ನು ಪರಿಹರಿಸುವುದು. ಸ್ನಾನ ಮಾಡುವುದರಿಂದೇನು ಹೇಳತಕ್ಕದ್ದು.

೫೫. ದ್ವಾರಕೆಯಲ್ಲಿ ರುಕ್ಮಿಣೀ ಸಹಿತನಾಗಿಯೂ ಶಂಖೋದ್ಧಾರದಲ್ಲಿ ಶಂಖಧಾರಿಯಾಗಿಯೂ, ಪಿಂಡಾರಕ ಸ್ಥಳದಲ್ಲಿ ಚತುರ್ಭುಜನಾಗಿಯೂ ಇರುವ ಕೃಷ್ಣನನ್ನು ನೋಡಿದರೆ ಇತರ ದೇವತೆಗಳನ್ನು ನೋಡುವುದರಿಂದೇನು ಪ್ರಯೋಜನ?

೫೬. ಕಲಿಯುಗದಲ್ಲಿ ರುಕ್ಮಿಣಿ, ಕೃಷ್ಣ ಚಕ್ರತೀರ್ಥ, ಗೋಮತೀ, ಗೋಪೀ ಚಂದನ, ತುಳಸೀ ಇವುಗಳು ದುರ್ಲಭವಾದುವು.

೫೭. ಕಲಿಯುಗದಲ್ಲಿ ಗಯೆಗೆ ಹೋಗಿ ಪಿಂಡಪ್ರದಾನಮಾಡುವವರೂ, ದ್ವಾರಕೆಯಲ್ಲಿ ಕೃಷ್ಣನನ್ನು ದರ್ಶನ ಗೈಯ್ಯುವವರೂ, ವಂಜಲಿಯಲ್ಲಿ ಉಪವಾಸಮಾಡುವವರೂ ಆದ ಭೂಮಿಯ ಪಾಪವನ್ನು ನೀಗಿಸುವ ಸುತರು ದುರ್ಲಭರು.

೫೮. ವಂಜುಲಿಯು ದ್ವಾರಕೆಗೆ ಸಮಾನವಾದ್ದರಿಂದ ಅದರ ಪುಣ್ಯಫಲವು ಸಮಾನವಾದುದು. ಇವರಲ್ಲಿ ಹೆಚ್ಚು ಕಡಿಮೆಯಿಲ್ಲವೆಂದು ವಿಷ್ಣುವು ತಾನೇ ಹೇಳಿರುವನು.

ಮಂಜಲೀ ಚಾಧಿಕಾಂ ರಾಜನ್ ಶೃಣು ವಕ್ಷ್ಯಾಮಿ ಕಾರಣಂ ।
ದ್ವಾದಶ್ಯಾಮುಪವಾಸೇನ ದ್ವಾದಶ್ಯಾಂ ಪಾರಣೇನ ತು ।
ಪ್ರಾಪ್ಯತೇ ಹೇಲಯಾ ಚೈವ ತದ್ವಿಷ್ಣೋಃ ಪರಮಂ ಪದಂ ॥ ೫೯ ॥
ಗೃಹೇಷು ವಸತಾಂ ತೀರ್ಥಂ ಗೃಹೇಷು ವಸತಾಂ ತಪಃ ।
ಗೃಹೇಷು ವಸತಾಂ ಮೋಕ್ಷೋ ಮಂಜಲೀಸಮುಪೋಷಣಾತ್ ॥ ೬೦ ॥
ಮಂಜಲೀ ದ್ವಾರಕಾ ಗಂಗಾ ಗಯಾ ಗೋವಿಂದಕೀರ್ತನಂ ।
ಗೋಮತೀ ಗೋಕುಲಂ ಗೀತಾ ದುರ್ಲಭಂ ಗೋಪಿಚಂದನಂ ॥ ೬೧ ॥
ಏತಚ್ಛೃಣೋತಿ ಯೋ ಭಕ್ತ್ಯಾ ಕೃತ್ವಾ ಮನಸಿ ಕೇಶವಂ ।
ಅಶ್ವಮೇಧಸಹಸ್ರಸ್ಯ ಫಲಮಾಪ್ನೋತಿ ಮಾನವಃ ॥ ೬೨ ॥
ಶ್ರೋಷ್ಯಂತಿ ಜಾಗರೇ ಯೇ ವೈ ಮಾಹಾತ್ಮ್ಯಂ ಕೇಶವಸ್ಯ ಚ ।
ಸರ್ವಪಾಪವಿನಿರ್ಮುಕ್ತಾಃ ಪದಂ ಯಾಸ್ಯಂತಿ ವೈಷ್ಣವಂ ॥ ೬೩ ॥
ಪಠಿಷ್ಯಂತಿ ನರಾ ನಿತ್ಯಂ ಯೇ ವೈ ಶ್ರೋಷ್ಯಂತಿ ಭಕ್ತಿತಃ ।
ತುಲಾಪುರುಷದಾನಸ್ಯ ಫಲಂ ತೇ ಪ್ರಾಪ್ನುವಂತಿ ಹಿ ॥ ೬೪ ॥
ಕೃಷ್ಣಜಾಗರಣೇ ದಾನಂ ಯಚ್ಚಾಲ್ಪಮಪಿ ಭಾಸತೇ ।
ಸರ್ವಂ ಕೋಟಿಗುಣಂ ಜ್ಞೇಯಮಿತ್ಯಾಹುಃ ಕವಯೋ ನೃಪ ॥ ೬೫ ॥

---

೫೯. ದೊರೆಯೆ ! ಮಂಜುಲಿಯೇ ಅಧಿಕವೆಂದು ನಾನು ಹೇಳುವೆನು. ಕಾರಣವನ್ನು ಕೇಳು. ದ್ವಾದಶೀದಿನ ಉಪವಾಸಮಾಡುವುದರಿಂದಲೂ, ಪಾರಣೆಮಾಡುವುದರಿಂದ ಅನಾಯಾಸವಾಗಿ ವೈಕುಂಠಲೋಕವು ದೊರೆಯುವುದು.

೬೦. ಮಂಜುಲಿಯಲ್ಲಿ ಉಪವಾಸಮಾಡುವುದರಿಂದ ಮನೆಯಲ್ಲಿಯೇ ವಾಸಿಸುತ್ತಿದ್ದರೂ ತೀರ್ಥ, ತಪಸ್ಸು, ಮೋಕ್ಷಗಳು, ಲಭಿಸುವುವು

೬೧. ಮಂಜಲೀ, ದ್ವಾರಕೆ, ಗಂಗೆ, ಗಯೆ, ಗೋವಿಂದನಾಮಕೀರ್ತನ, ಗೋಮತೀ, ಗೋಕುಲ, ಗೀತಾ, ಗೋಪೀಚಂದನ ಇವು ದುರ್ಲಭವಾದುವು.

೬೨. ಕೃಷ್ಣನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಇದನ್ನು ಭಕ್ತಿಯಿಂದ ಕೇಳುವವನು ಸಾವಿರ ಅಶ್ವಮೇಧಯಾಗಗಳ ಫಲವನ್ನು ಪಡೆಯುವನು.

೬೩. ದ್ವಾದಶೀಜಾಗರಣೆಯಲ್ಲಿ ಶ್ರೀ ಕೃಷ್ಣನ ಮಹಾತ್ಮೆಯನ್ನು ಕೇಳುವವರು ಸಮಸ್ತಪಾಪಮುಕ್ತರಾಗಿ ವಿಷ್ಣುವಿನ ಸ್ಥಾನಕ್ಕೆ ತೆರಳುವರು.

೬೪. ಇದನ್ನು ಭಕ್ತಿಯಿಂದ ಹೇಳುವವರೂ, ಕೇಳುವವರೂ ತುಲಾಪುರುಷದಾನದ ಫಲವನ್ನು ಹೊಂದುವರು.

೬೫. ಕೃಷ್ಣನ ಜಾಗರಣೆಯಲ್ಲಿ ಸಣ್ಣದಾನವನ್ನಿತ್ತರೂ ಅದು ಕೋಟಿಯಷ್ಟು ಹೆಚ್ಚಾಗುವುದೆಂದು ಜ್ಞಾನಿಗಳು ಹೇಳುತ್ತಾರೆ.

ಮಾನಕೂಟಂ ತುಲಾಕೂಟಂ ಕನ್ಯಾಹಯಗವಾಂ ಕ್ರಯಾತ್ ।
ತತ್ಸರ್ವಂ ವಿಲಯಂ ಯಾಂತಿ ದ್ವಾದಶ್ಯಾಂ ಜಾಗರೇ ಕೃತೇ ॥ ೬೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಗೋಪೀಚಂದನಮಾಹಾತ್ಮ್ಯವರ್ಣನಂ ನಾಮ
ಪಂಚವಿಂಶತಿತಮೋಽಧ್ಯಾಯಃ

---

೬೬. ಮೋಸದಿಂದ ಅಳತೆ, ತೂಕಮಾಡುವುದು, ಕನ್ಯೆ, ಕುದುರೆ, ಗೋವುಗಳನ್ನು ಮಾರುವುದು ಇವುಗಳಿಂದುಂಟಾಗುವ ಪಾಪವು ದ್ವಾದಶೀದಿನ ಜಾಗರಣೆ ಮಾಡುವುದರಿಂದ ನಾಶವಾಗುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಗೋಪೀಚಂದನಮಾಹಾತ್ಮ್ಯವರ್ಣನವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಷಡ್ವಿಂಶತಿತಮೋಽಧ್ಯಾಯಃ

### ದ್ವಾದಶೀಜಾಗರಣಮಾಹಾತ್ಮ್ಯವರ್ಣನಂ

ಶ್ರೀಮಾರ್ಕಂಡೇಯ ಉವಾಚ :—
ವೈಷ್ಣವಾಗಮತತ್ವಜ್ಞಂ ಭಗವದ್ಭಕ್ತಿತತ್ಪರಂ । ॥ ೧ ॥
ಸುಖಾಸೀನಂ ಮಹಾಪ್ರಾಜ್ಞಮೃಷಯೋ ದ್ರಷ್ಟುಮಾಗತಾಃ ।
ಸರ್ವಶಾಸ್ತ್ರಾರ್ಥತತ್ವಜ್ಞಾಃ ಸ್ವಧರ್ಮಪ್ರತಿಪಾಲಕಾಃ ॥ ೨ ॥
ಋಷಯ ಊಚುಃ :—
ವಿನಾ ಜ್ಞಾನಾದ್ವಿನಾ ಧ್ಯಾನಾದ್ವಿನಾ ಚೇಂದ್ರಿಯನಿಗ್ರಹಾತ್ ।
ಅನಾಯಾಸೇನ ಯೇನೈತತ್ಪ್ರಾಪ್ಯತೇ ಪರಮಂ ಪದಂ ॥ ೩ ॥
ಸಂಕ್ಷೇಪಾತ್ಕಥಯ ಸ್ನೇಹಾದ್ದೃಷ್ಟಾದೃಷ್ಟಫಲೋದಯಂ ।
ಧರ್ಮಾನ್ಮನುಜಶಾರ್ದೂಲ ಬ್ರೂಹಿ ಸರ್ವಾನಶೇಷತಃ ॥ ೪ ॥

---

### ಕನ್ನಡದ ಅನುವಾದ

### ದ್ವಾದಶೀಜಾಗರಣಮಾಹಾತ್ಮ್ಯವರ್ಣನ

೧–೨. ಶ್ರೀಮಾರ್ಕಂಡೇಯನು ಹೇಳುತ್ತಾನೆ:—ಸಕಲಶಾಸ್ತ್ರಾರ್ಥತತ್ವವನ್ನರಿತವರೂ, ತಮ್ಮ ಧರ್ಮವನ್ನು ಪಾಲಿಸುವವರೂ ಆದ ಮುನಿಗಳು ಸಕಲಧರ್ಮವನ್ನು ತಿಳಿದವನೂ, ವೇದಶಾಸ್ತ್ರಾರ್ಥಪಾರಂಗತನೂ, ವೈಷ್ಣವಶಾಸ್ತ್ರವನ್ನರಿತವನೂ, ಭಗವದ್ಭಕ್ತನೂ, ಸುಖವಾಗಿ ಕುಳಿತಿರುವವನೂ, ಆದ ಪ್ರಹ್ಲಾದನನ್ನು ನೋಡಲು ಬಂದರು.

೩. ಋಷಿಗಳು ಹೇಳುತ್ತಾರೆ:–ಜ್ಞಾನ, ಧ್ಯಾನ, ಇಂದ್ರಿಯಗಳಿಲ್ಲದೆ ಬೇರೆಯಾವುದರಿಂದ ಅನಾಯಾಸವಾಗಿ ಈ ಉತ್ತಮಸ್ಥಾನವು ಲಭಿಸುವುದು. ?

೪. ಮಾನವೋತ್ತಮನೆ ! ನೀನು ನಮ್ಮಲ್ಲಿರುವ ಪ್ರೀತಿಯಿಂದ ದೃಷ್ಟಾದೃಷ್ಟಫಲವನ್ನು ಕೊಡುವ ಸಕಲಧರ್ಮವನ್ನು ಸಂಪೂರ್ಣವಾಗಿ ಹೇಳು.

ಇತ್ಯುಕ್ತೋಽಸೌ ಮಹಾಭಾಗೋ ನಾರಾಯಣಪರಾಯಣಃ ।
ಕಥಯಾಮಾಸ ಸಂಕ್ಷೇಪಾತ್ಸರ್ವಲೋಕಹಿತೇ ರತಃ ॥ ೫ ॥
ಶ್ರೀ ಪ್ರಹ್ಲಾದ ಉವಾಚ :—
ಶ್ರೂಯತಾಮಭಿಧಾಸ್ಯಾಮಿ ಗುಹ್ಯಾದ್ಗುಹ್ಯತರಂ ಮಹತ್ ।
ಯಸ್ಯ ಸಂಸ್ಮರಣಾದೇವ ಸರ್ವಪಾಪಕ್ಷಯೋ ಭವೇತ್ ॥ ೬ ॥
ಅಷ್ಟಾದಶಪುರಾಣಾನಾಂ ಸಾರಾತ್ಸಾರತರಂ ಚ ಯತ್ ।
ತದಹಂ ಕಥಯಿಷ್ಯಾಮಿ ಭುಕ್ತಿಮುಕ್ತಿಫಲಪ್ರದಂ ॥ ೭ ॥
ಸುಖಾಸೀನಂ ಮಹಾದೇವಂ ಜಗತಃ ಕಾರಣಂ ಪರಂ ।
ಪಪ್ರಚ್ಛ ಷಣ್ಮುಖೋ ಭಕ್ತ್ಯಾ ಸರ್ವಲೋಕಹಿತೋದ್ಯತಃ ॥ ೮ ॥
ಸ್ಕಂದ ಉವಾಚ :—
ಭಗವನ್ಸರ್ವಲೋಕಾನಾಂ ದುಃಖಸಂಸಾರಭೇಷಜಂ ।
ಕಥಯಸ್ವ ಪ್ರಸಾದೇನ ಸುಖೋಪಾಯಂ ವಿಮುಕ್ತಯೇ ॥ ೯ ॥
ಈಶ್ವರ ಉವಾಚ :—
ಚತುರ್ವಿಧಂ ತು ಯತ್ಪಾಪಂ ಕೋಟಿಜನ್ಮಾರ್ಜಿತಂ ಕಲೌ ।
ಜಾಗರೇ ವೈಷ್ಣವಂ ಶಾಸ್ತ್ರಂ ವಾಚಯಿತ್ವಾ ವ್ಯಪೋಹತಿ ॥ ೧೦ ॥

---

೫. ಋಷಿಗಳು ಹೀಗೆನ್ನಲು ಮಹಾತ್ಮನೂ, ನಾರಾಯಣಸೇವಾರತನೂ ಆದ ಪ್ರಹ್ಲಾದನು ಸಮಸ್ತ ಜನಗಳ ಹಿತಕ್ಕಾಗಿ ಸಂಕ್ಷೇಪವಾಗಿ ಹೀಗೆಹೇಳಿದನು.

೬. ಶ್ರೀಪ್ರಹ್ಲಾದನು ಹೇಳುತ್ತಾನೆ:—ಅತಿಗೂಢವಾದ ಮಹಾರಹಸ್ಯವನ್ನು ನಿಮಗೆ ಹೇಳುವೆನು, ಕೇಳಿರಿ ಇದನ್ನು ಕೇಳುವುದರಿಂದರಿಂದಲೇ ಸಕಲಪಾಪಗಳು ಪರಿಹಾರವಾಗುವುವು.

೭. ಭುಕ್ತಿ, ಮುಕ್ತಿ ಫಲಗಳನ್ನು ಕೊಡುವ ಅಷ್ಟಾದಶಪುರಾಣಗಳ ಸಾರ ಪತ್ತಾದ ವಿಷಯವನ್ನು ಹೇಳುವೆನು.

೮. ಸಕಲ ಲೋಕಗಳ ಹಿತದಲ್ಲಿ ಉದ್ಯುಕ್ತನಾದ ಷಣ್ಮುಖನು ಸುಖವಾಗಿ ಕುಳಿತಿರುವ ಜಗತ್ಕಾರಣನಾದ ಮಹಾದೇವನನ್ನು ಕುರಿತು ಭಕ್ತಿಯಿಂದ ಹೀಗೆ ಪ್ರಶ್ನಿಸಿದನು.

೯. ಸ್ಕಂದನು ಹೇಳುತ್ತಾನೆ :—ಪೂಜ್ಯನೆ ! ಸಮಸ್ತ ಜನಗಳ ದುಃಖ, ಸಂಸಾರಗಳಿಗೆ ಔಷಧವಾದಮೋಕ್ಷವನ್ನು ಹೊಂದುವ ಸುಖಕರವಾದ ಉಪಾಯ ವನ್ನು ಅನುಗ್ರಹದಿಂದ ಹೇಳು

೧೦. ಈಶ್ವರನು ಹೇಳುತ್ತಾನೆ;—ಕಲಿಯುಗದಲ್ಲಿ ಕೋಟಿಜನ್ಮಗಳಲ್ಲಿ ಸಗಿದ ನಾಲ್ಕು ವಿಧವಾದ ಪಾಪಗಳು ಜಾಗರಣೆಯಲ್ಲಿ ವೈಷ್ಣವಶಾಸ್ತ್ರವನ್ನು ಓದುವುದರಿಂದ ನಿವಾರಣೆಯಾಗುವುವು.

ವೈಷ್ಣವಸ್ಯ ತು ಶಾಸ್ತ್ರಸ್ಯ ಯೋ ವಕ್ತಾ ಜಾಗರೇ ಹರೇಃ ।
ಮದ್ಭಕ್ತಂ ತಂ ವಿಜಾನೀಯಾದ್ವಿಪನ್ನಸ್ತ್ವನ್ಯಥಾ ಭವೇತ್ ॥ ೧೧ ॥
ಹರಿಜಾಗರಣಂ ಕಾರ್ಯಂ ಮದ್ಭಕ್ತೇನ ವಿಜಾನತಾ ।
ಅನ್ಯಥಾ ಪಾಪಿನೋ ಜ್ಞೇಯಾ ಯೇ ದ್ವಿಷಂತಿ ಜನಾರ್ದನಂ ॥ ೧೨ ॥
ಜಾಗರಂ ಯೇ ಚ ಕುರ್ವಂತಿ ಗಾಯಂತಿ ಹರಿವಾಸರೇ ।
ಅಗ್ನಿಷ್ಟೋಮಫಲಂ ತೇಷಾಂ ನಿಮಿಷಾರ್ಧೇನ ಷಣ್ಮುಖ ॥ ೧೩ ॥
ಜಾಗರೇ ಪಶ್ಯತಾಂ ವಿಷ್ಣೋರ್ಮುಖಂ ರಾತ್ರೌ ಮುಹುರ್ಮುಹುಃ ।
ಯೇಷಾಂ ಹೃಷ್ಯಂತಿ ರೋಮಾಣಿ ರಾತ್ರೌ ಜಾಗರಣೇ ಹರೇಃ ।
ಕುಲಾನಿ ದಿವಿ ತಾವಂತಿ ವಸಂತಿ ಹರಿಸನ್ನಿಧೌ ॥ ೧೪ ॥
ಯಮಸ್ಯ ಪಥಿ ನಿರ್ಮುಕ್ತಾ ಜನಾಃ ಪಾಪಶತೈರ್ವೃತಾಃ ।
ಗೀತಶಾಸ್ತ್ರವಿನೋದೇನ ದ್ವಾದಶೀಜಾಗರಾನ್ವಿತಾಃ ॥ ೧೫ ॥
ಸುಪ್ರಭಾತಾ ನಿಶಾ ತೇಷಾಂ ಧನ್ಯಾಃ ಸುಕೃತಿನೋ ನರಾಃ ।
ಪ್ರಾಣಾತ್ಯಯೇನ ಮುಹ್ಯಂತಿ ಯೈಃ ಕೃತಂ ಜಾಗರಂ ಹರೇಃ ॥ ೧೬ ॥

---

೧೧. ಹರಿಯದಿನದ ಜಾಗರಣೆಯಲ್ಲಿ ವೈಷ್ಣವಶಾಸ್ತ್ರವನ್ನು ಹೇಳುವವನು ನನ್ನ ಭಕ್ತನೆಂದು ತಿಳಿಯಬೇಕು. ಇದಕ್ಕೆ ವಿರುದ್ಧವಾಗಿ ತಿಳಿದವನು ಆಪತ್ತನ್ನು ಹೊಂದುವನು.

೧೨. ಪ್ರಾಜ್ಞನಾದ ನನ್ನ ಭಕ್ತನು ಹರಿದಿನದಲ್ಲಿ ಜಾಗರಣೆ ಮಾಡಬೇಕು. ಹಾಗೆ ಮಾಡದೆ ಹರಿಯನ್ನು ದ್ವೇಷಿಸುವವರು ಪಾಪಿಗಳು.

೧೩. ಸ್ಕಂದ ! ಹರಿವಾಸರದ ಜಾಗರಣೆಯಲ್ಲಿ ಗಾನಮಾಡುವವರಿಗೆ ಅರ್ಧ ನಿಮಿಷದಲ್ಲಿ ಅಗ್ನಿಷ್ಟೋಮ ಫಲವು ಸಂಭವಿಸುವುದು.

೧೪. ಹರಿದಿನದ ರಾತ್ರಿ ಜಾಗರಣೆಯಲ್ಲಿ ವಿಷ್ಣುವಿನ ಮುಖವನ್ನು ಬಾರಿ ಬಾರಿಗೂ ನೋಡುತ್ತಿರುವ ಯಾರ ಶರೀರದಲ್ಲಿ ರೋಮಾಂಚವುಂಟಾಗುವುದೊ ; ಅವರ ರೋಮಾಂಚಗಳ ಸಂಖ್ಯೆಯಷ್ಟುಕಾಲ ಅವನ ವಂಶದವರು ಹರಿಯ ಸಮೀಪ ದಲ್ಲಿ ವಾಸಿಸುವರು.

೧೫. ಪಾಪಿಗಳು ದ್ವಾದಶೀ ದಿನ ಗೀತಶಾಸ್ತ್ರವಿನೋದದಿಂದ ಜಾಗರಣೆಗೈದರೆ ಯಮಮಾರ್ಗದಿಂದ ಮುಕ್ತರಾಗುವರು.

೧೬. ಮರಣಕಾಲದಲ್ಲಿ ಮೋಹದಿಂದಲಾದರೂ ಹರಿದಿನದಲ್ಲಿ ಜಾಗರಣೆ ಗೈದ ವರ ರಾತ್ರಿಯು ಸುಪ್ರಭಾತವಾಗುವುದು. ಅವರು ಪುಣ್ಯವಂತರಾಗುವರು.

ಪುತ್ರಿಣಸ್ತೇ ನರಾ ಲೋಕೇ ಧನಿನಃ ಖ್ಯಾತಪೌರುಷಾಃ ।
ಯೇಷಾಂ ವಂಶೋದ್ಭವಾಃ ಪುತ್ರಾಃ ಕುರ್ವಂತಿ ಹರಿಜಾಗರಂ ॥ ೧೭ ॥
ಇಷ್ಟಂ ಮುಖ್ಯೈಃ ಕೃತಂ ದಾನಂ ದತ್ತಂ ಪಿಂಡಂ ಗಯಾಶಿರೇ ।
ಸ್ನಾತಂ ನಿತ್ಯಂ ಪ್ರಯಾಗೇ ತು ಯೈಃ ಕೃತಂ ಜಾಗರಂ ಹರೇಃ ॥ ೧೮ ॥
ದಯಿತಾ ವಿಷ್ಣುಭಕ್ತಾಶ್ಚ ನಿತ್ಯಂ ಮಮ ಷಡಾನನ ।
ಕುರ್ವಂತಿ ವಾಸರಂ ವಿಷ್ಣೋರ್ಯಸ್ಮಾಜ್ಜಾಗರಣಂ ಹಿತಂ ॥ ೧೯ ॥
ಶ್ರುತ್ವಾ ಹರ್ಷಂ ನ ಚಾಪ್ನೋತಿ ಜಾಗರಂ ನ ಕರೋತಿ ಯಃ ।
ಪ್ರಕಟೀಕರೋತಿ ತನ್ನೂನಂ ಜನನ್ಯಾ ದುರ್ವಿಚೇಷ್ಟಿತಂ ॥ ೨೦ ॥
ಸಂಪ್ರಾಪ್ಯ ವಾಸರಂ ವಿಷ್ಣೋರ್ನ ಯೇಷಾಂ ಜಾಗರೋ ಹರೇಃ ।
ವ್ಯರ್ಥಂ ಗತಂ ಚ ತತ್ಪುಣ್ಯಂ ತೇಷಾಂ ವರ್ಷಶತೋದ್ಭವಂ ॥ ೨೧ ॥
ಪುತ್ರೋ ವಾ ಪುತ್ರಪುತ್ರೋ ವಾ ದೌಹಿತ್ರೋ ದುಹಿತಾಽಪಿ ವಾ ।
ಕರಿಷ್ಯತಿ ಕುಲೇಽಸ್ಮಾಕಂ ಕಲೌ ಜಾಗರಣಂ ಹರೇಃ ॥ ೨೨ ॥
ಪಾತ್ಯಮಾನಾಃ ಪ್ರಜಲ್ಪಂತಿ ಪಿತರೋ ಯಮಕಿಂಕರೈಃ ।
ಮುಕ್ತಿರ್ಭವಿಷ್ಯತ್ಯಸ್ಮಾಕಂ ನರಕಾಜ್ಜಾಗರೇ ಕೃತೇ ॥ ೨೩ ॥

---

೧೭. ಯಾರವಂಶದಲ್ಲಿ ಸುತರು ಹರಿದಿನದಲ್ಲಿ ಜಾಗರಣೆ ಮಾಡುವರೊ, ಅವರೇ ಲೋಕದಲ್ಲಿ ಸತ್ಪುತ್ರರುಳ್ಳವರೂ, ಹಣವಂತರೂ, ಪ್ರಸಿದ್ಧ ಪೌರುಷವುಳ್ಳವರೂ ಆಗುವರು.

೧೮. ಹರಿದಿನ ಜಾಗರಣೆ ಮಾಡಿದವರು ಯಾಗ, ದಾನ, ಗಯಾಶಿರಸ್ಸನಲ್ಲಿ ಪಿಂಡಪ್ರದಾನ, ಪ್ರಯಾಗ ಸ್ನಾನ ಇವುಗಳನ್ನು ಮಾಡಿದಂತವರಾಗುವರು.

೧೯. ಸ್ಕಂದ ! ಹರಿವಾಸರದಲ್ಲಿ ಜಾಗರಣೆ ಮಾಡುವ ವಿಷ್ಣುಭಕ್ತರು ನನಗೆ ಪ್ರಿಯರಾಗುವರು.

೨೦. ಜಾಗರಣೆ ಮಾಡಿ ಆದರಿಂದ ಸಂತೋಷಗೊಳ್ಳದವನು ನಿಜವಾಗಿಯೂ ತನ್ನ ತಾಯಿಯ ಜಾರಿಣೀತ್ವವನ್ನು ಪ್ರಕಟಿಸುವನು.

೨೧. ಹರಿದಿನದಲ್ಲಿ ಜಾಗರಣೆ ಮಾಡದವರ ನೂರುವರ್ಷಗಳ ಪುಣ್ಯಗಳು ವ್ಯರ್ಥವಾಗುವುದು.

೨೨-೨೪. ಯಮಕಿಂಕರರಿಂದ ಪೀಡಿಸಲ್ಪಡುತ್ತಿರುವ ಪಿತೃಗಳು ಕಲಿಯುಗದಲ್ಲಿ ನಮ್ಮ ಮಗನಾಗಲಿ, ಮೊಮ್ಮಗನಾಗಲಿ, ದೌಹಿತ್ರನಾಗಲಿ, ಮಗಳಾಗಲಿ ಹರಿದಿನದಲ್ಲಿ ಜಾಗರಣೆ ಮಾಡುವರು. ಆದರಿಂದ ನಾವು ನರಕ ಮುಕ್ತರಾಗುವೆವು. ಇಲ್ಲದಿದ್ದರೆ

ನಾನ್ಯಥಾ ಜಾಯತೇಽಸ್ಮಾಕಂ ಮುಕ್ತಿರ್ಯಜ್ಞಶತೈರಪಿ ।
ವಿನಾ ಜಾಗರಣೇನೈವ ಪರಲೋಕಾತ್ಕಥಂಚನ ।
ತಸ್ಮಾಜ್ಜಾಗರಣಂ ಕಾರ್ಯಂ ಪಿತೄಣಾಂ ಹಿತಮಿಚ್ಛತಾ ॥ ೨೪ ॥
ಭಕ್ತಿರ್ಭಾಗವತಾನಾಂ ಚ ಗೋವಿಂದಸ್ಯಾಪಿ ಕೀರ್ತನಂ ।
ನ ದೇಹಗ್ರಹಣಂ ತಸ್ಮಾತ್ಪುನರ್ಲೋಕೇ ಭವಿಷ್ಯತಿ ॥ ೨೫ ॥
ಜಾಗರಂ ಕುರುತೇ ಯಶ್ಚ ಸಂಗಮೇ ವಿಜಯಾದಿನೇ ।
ಪುನರ್ದೇಹ ಪ್ರಜನನಂ ದಗ್ಧಂ ತೇನಾಽಽತ್ಮನಾ ಸ್ವಯಂ ॥ ೨೬ ॥
ತ್ರಿಸ್ಪೃಶಾ ವಾಸರಂ ಯೇನ ಕೃತಂ ಜಾಗರಣಾನ್ವಿತಂ ।
ಕೇಶವಸ್ಯ ಶರೀರೇ ತು ಸ ಲೀನೋ ನಾತ್ರ ಸಂಶಯಃ ॥ ೨೭ ॥
ಉನ್ಮೀಲಿನೀ ಕೃತಾ ಯೇನ ರಾತ್ರೌ ಜಾಗರಣಾನ್ವಿತಾ ।
ಪ್ರಭವಂತಿ ನ ಪಾಪಾನಿ ಸ್ಥೂಲಸೂಕ್ಷ್ಮಾಣಿ ತಸ್ಯ ತು ॥ ೨೮ ॥
ಸತಾಲವಾದ್ಯಸಂಯುಕ್ತಂ ಸಂಗೀತಂ ಜಾಗರಂ ಚರೇತ್ ।
ಯಃ ಕಾರಯತಿ ದೇವಸ್ಯ ದ್ವಾದಶ್ಯಾಂ ದಾನಸಂಯುತಂ ॥ ೨೯ ॥

---

ಅನೇಕ ಯಜ್ಞಗಳಿಂದಲೂ ನಮಗೆ ಮೋಕ್ಷವಾಗುವುದಿಲ್ಲ ಎಂದು ಹೇಳುತ್ತಿರುವರು. ಆದರಿಂದ ಪಿತೃಗಳಿಗೆ ಹಿತವನ್ನು ಬಯಸುವವರು ಜಾಗರಣೆ ಮಾಡಬೇಕು.

೨೫. ಭಗವದ್ಭಕ್ತಿ, ಗೋವಿಂದ ನಾಮಕೀರ್ತನ ಇವುಗಳನ್ನು ಮಾಡುವ ಭಾಗವತರು ಮರಳಿ ಜನಿಸುವುದಿಲ್ಲ.

೨೬. ವಿಜಯಾದಿನ ಸಂಗಮದಲ್ಲಿ ಜಾಗರಣೆ ಮಾಡುವವನು ತಾನೇ ತನ್ನ ಪುನರ್ಜನ್ಮವನ್ನು ಭಸ್ಮಮಾಡಿಕೊಳ್ಳುವನು.

೨೭–೨೮. ತ್ರಿಸ್ಪರ್ಶಾ ದಿನ ಜಾಗರಣೆಗೈದವನು ವಿಷ್ಣುವಿನ ದೇಹದಲ್ಲಿ ನಿಜವಾಗಿಯೂ ಅಡಗಿ ಹೋಗುವನು. ಉನ್ಮೀಲಿನೀರಾತ್ರಿ ಜಾಗರಣೆ ಮಾಡಿದವನಿಗೆ ಸ್ಥೂಲಸೂಕ್ಷ್ಮಪಾಪಗಳು ಉಂಟಾಗುವುದಿಲ್ಲ.

೨೯–೩೧. ದ್ವಾದಶೀ ದಿನ ರಾತ್ರಿ ತಾಳ, ವಾದ್ಯ, ಗಾನಗಳಿಂದ ಜಾಗರಣೆಗೈದು ದಾನಮಾಡಿದ ಭಗವದ್ಭಕ್ತನಿಗಾಗುವ ಪುಣ್ಯವನ್ನು ಹೇಳುವೆನು. ಅಯನ ಸಂಕ್ರಾಂತಿಯಲ್ಲಿ ಬ್ರಾಹ್ಮಣನಿಗೆ ಸುವರ್ಣದೊಡನೆ ಸಾವಿರ ಸೇರು ಎಳ್ಳನ್ನು ದಾನ ಮಾಡಿದ ಫಲವೂ, ಕಲಿಯುಗದಲ್ಲಿ ನೂರು ಭಾರ ಸುವರ್ಣದೊಡನೆ ಕರುವಿನಿಂದ

ತಸ್ಯ ಪುಣ್ಯಂ ಪ್ರವಕ್ಷ್ಯಾಮಿ ಮಹಾಭಾಗವತಸ್ಯ ಹಿ ।
ತಿಲಪ್ರಸ್ಥಸಹಸ್ರಂ ತು ಸಹಿರಣ್ಯಂ ದ್ವಿಜಾತಯೇ ।
ದತ್ವಾ ಯತ್ಫಲಮಾಪ್ನೋತಿ ಹ್ಯಯನೇ ರವಿಸಂಕ್ರಮೇ ॥ ೩೦ ॥
ಹೇಮಭಾರಶತಂ ನಿತ್ಯಂ ಸವತ್ಸಂ ಕಪಿಲಾಯುತಂ ।
ಪ್ರೇಕ್ಷಣೀಯಪ್ರದಾನೇನ ತತ್ಫಲಂ ಪ್ರಾಪ್ನುಯಾತ್ಕಲೌ ॥ ೩೧ ॥
ಯಃ ಪುನರ್ವಾಸರೇ ಪುತ್ರ ದಿವ್ಯೈರ್ಋಷಿಕೃತೈಃ ಸ್ತವೈಃ ।
ತೋಷಯೇತ್ಪದ್ಮನಾಭಂ ವೈ ವೈದಿಕೈರ್ವಿಷ್ಣುನಾಮಭಿಃ ॥ ೩೨ ॥
ಋಗ್ಯಜುಃ ಸಾಮಸಂಭೂತೈರ್ವೈಷ್ಣವೈಶ್ಚೈವ ಪುತ್ರಕ ।
ಸಂಸ್ಕೃತೈಃ ಪ್ರಾಕೃತೈಃ ಸ್ತೋತ್ರೈರನ್ಯೈಶ್ಚ ವಿವಿಧೈಸ್ತಥಾ ॥ ೩೩ ॥
ಪ್ರೀತಿಂ ಕರೋತಿ ದೇವೇಶೋ ದ್ವಾದಶ್ಯಾಂ ಜಾಗರೇ ಸ್ಥಿತಃ ।
ಶೃಣು ಪುಣ್ಯಂ ಸಮಾಸೇನ ಯದ್ಗೀತಂ ಬ್ರಹ್ಮಣಾ ಮಮ ॥ ೩೪ ॥
ತ್ರಿಃ ಸಪ್ತಕೃತ್ವೋ ಧರಣೀಂ ತ್ರಿಗುಣೀಕೃತ್ಯ ಷಣ್ಮುಖ ।
ದತ್ವಾ ಯತ್ಫಲಮಾಪ್ನೋತಿ ತತ್ಫಲಂ ಪ್ರಾಪ್ನುಯಾನ್ನರಃ ॥ ೩೫ ॥
ಗವಾಂ ಶತಸಹಸ್ರೇಣ ಸವತ್ಸೇನಾಪಿ ಯತ್ಫಲಂ ।
ತತ್ಫಲಂ ಪ್ರಾಪ್ನುಯಾನ್ಮರ್ತ್ಯಃ ಸ್ತೋತ್ರೈರ್ಯಸ್ತೋಷಯೇದ್ಧರಿಂ ॥ ೩೬ ॥

---

ಸಹಿತವಾದ ಹತ್ತುಸಾವಿರ ಗೋವುಗಳನ್ನೂ, ದೃಶ್ಯ ವಸ್ತುವನ್ನೂ ದಾನಮಾಡಿದ ಫಲವೂ ದೊರೆಯುವುದು.

೩೨–೩೪. ಹರಿದಿನದಲ್ಲಿ ಜಾಗರಣೆ ಮಾಡಿ ಮುನಿಗಳು ಮಾಡಿದ ದಿವ್ಯ ಸ್ತೋತ್ರಗಳಿಂದಲೂ, ವೇದೋಕ್ತವಾದ ವಿಷ್ಣು ನಾಮಗಳಿಂದಲೂ ಋಕ್, ಯಜುಃ, ಸಾಮವೇದಗಳ ವಿಷ್ಣು ವಿಷಯಕವಾದ ಮಂತ್ರಗಳಿಂದಲೂ, ಸಂಸ್ಕೃತ, ಪ್ರಾಕೃತ, ಮತ್ತು ಇತರ ಸ್ತೋತ್ರಗಳಿಂದಲೂ ವಿಷ್ಣುವನ್ನು ಸಂತೋಷಗೊಳಿಸುವವನಲ್ಲಿ ಆ ಹರಿಯು ಪ್ರೀತನಾಗುವನು. ಹಿಂದೆ ಬ್ರಹ್ಮನು ನನಗೆ ಸಂಕ್ಷೇಪವಾಗಿ ಹೇಳಿದ ಪುಣ್ಯ ವನ್ನು ಕೇಳು.

೩೫. ಮಾನವನು ಭೂಮಿಯನ್ನು ಇಪ್ಪತ್ತೊಂದು ಸಾರಿ ಮುಮ್ಮಡಿ ಮಾಡಿ ದಾನಮಾಡಿದ ಫಲವನ್ನು ಪಡೆಯುವನು.

೩೬. ಹರಿಯನ್ನು ಸ್ತೋತ್ರಗಳಿಂದ ಸಂತೋಷಗೊಳಿಸಿದವನು ಕರುಗಳಿಂದ ಸಹಿತವಾದ ಒಂದುಲಕ್ಷಗೋವುಗಳನ್ನು ದಾನಮಾಡಿದ ಫಲವನ್ನು ಪಡೆಯುವನು.

ವೈದಿಕೀ ದಶಗುಣಾ ಪ್ರೀತಿರ್ಯಾಮೋನ್ಯೈಕೇನ ಜಾಗರೇ ।
ಏವಂ ಫಲಾನುಸಾರೇಣ ಕಾರ್ಯಂ ಜಾಗರಣಂ ಹರೇಃ ॥ ೩೭ ॥

ಯಃ ಪುನಃ ಪಠತೇ ರಾತ್ರೌ ಗೀತಾಂ ನಾಮಸಹಸ್ರಕಂ ।
ದ್ವಾದಶ್ಯಾಂ ಪುರತೋ ವಿಷ್ಣೋರ್ವೈಷ್ಣವಾನಾಂ ಸಮಾಪತಃ ॥ ೩೮ ॥

ಪುಣ್ಯಂ ಭಾಗವತಂ ಸ್ಕಾಂದಪುರಾಣಂ ದಯಿತಂ ಹರೇಃ ।
ಮಾಥುರಂ ಬಾಲಚರಿತಂ ಗೋಪೀನಾಂ ಚರಿತಂ ತಥಾ ॥ ೩೯ ॥

ಏತಾನ್ಪಠತಿ ರಾತ್ರೌ ಯಃ ಪೂಜಯಿತ್ವಾ ತು ಕೇಶವಂ ।
ನ ವೇದ್ಮ್ಯಹಂ ಫಲಂ ವತ್ಸ ಯದಿ ಜ್ಞಾಸ್ಯತಿ ಕೇಶವಃ ॥ ೪೦ ॥

ದೀಪಂ ಪ್ರಜ್ವಾಲಯೇದ್ರಾತ್ರೌ ಯಃ ಸ್ತವೈರ್ಹರಿಜಾಗರೇ ।
ನ ಚಾಸ್ತಂಗಚ್ಛತೇ ತಸ್ಯ ಪುಣ್ಯಂ ಕಲ್ಪಶತೈರಪಿ ॥ ೪೧ ॥

ಮಂಜರೀಸಹಿತೈಃ ಪತ್ರೈಸ್ತುಲಸೀಸಂಭವೈರ್ಹರಿಂ ।
ಜಾಗರೇ ಪೂಜಯೇದ್ಭಕ್ತ್ಯಾ ನಾಸ್ತಿ ತಸ್ಯ ಪುನರ್ಭವಃ ॥ ೪೨ ॥

---

೩೭. ಒಂದುಯಾಮ ಜಾಗರಣೆಗೈದುವೈದಿಕಸ್ತೋತ್ರಗಳಿಂದ ವಿಷ್ಣುವನ್ನು ಸಂತೋಷಗೊಳಿಸಿದರೆ ಹತ್ತರಷ್ಟು ಪುಣ್ಯವು ದೊರೆಯುವುದು. ಹೇಗೆ ಫಲವನ್ನನು ಸರಿಸಿ ಜಾಗರಣೆಮಾಡಬೇಕು.

೩೮–೪೦. ಹರಿದಿನ ಜಾಗರಣೆಯಲ್ಲಿ ವಿಷ್ಣುವೈಷ್ಣವರಮುಂದೆ ಭಗವದ್ಗೀತೆ, ವಿಷ್ಣುಸಹಸ್ರನಾಮ, ಭಾಗವತ, ಸ್ಕಾಂದಪುರಾಣ, ಮಥುರೆಯಲ್ಲಿ ಶ್ರೀಕೃಷ್ಣನ ಬಾಲಚರಿತ್ರೆ, ಗೋಪೀಚರಿತೆ, ಇವುಗಳನ್ನು ಆ ವಿಷ್ಣುವನ್ನು ಪೂಜಿಸಿ ಪಠಿಸಿದವನಿಗಾಗುವ ಫಲವನ್ನು ನಾನರಿಯೆನು, ಕೇಶವನು ತಿಳಿದಿರಬಹುದು.

೪೧. ಹರಿದಿನದ ರಾತ್ರಿ ಜಾಗರಣೆಯಲ್ಲಿ ಸ್ತೋತ್ರಗಳಿಂದ ದೀಪವನ್ನು ಹೊತ್ತಿಸಿದವನ ಪುಣ್ಯವು ನೂರುಕಲ್ಪಗಳಲ್ಲಿಯೂ ನಾಶವಾಗುವುದಿಲ್ಲ.

೪೨. ಮಂಜರಿಯಿಂದ ಸಹಿತವಾದ ತುಳಸೀದಳಗಳಿಂದ ಹರಿಯನ್ನು ಜಾಗರಣೆಯಲ್ಲಿ ಭಕ್ತಿಯಿಂದ ಪೂಜಿಸಿದವನು ಮರಳಿ ಜನಿಸುವುದಿಲ್ಲ.

ಸ್ನಾನಂ ವಿಲೇಪನಂ ಪೂಜಾ ಧೂಪಂ ದೀಪಂ ಚ ಸಂಸ್ತವಂ ।
ನೈವೇದ್ಯಂ ಚ ಸತಾಂಬೂಲಂ ಜಾಗರೇ ದತ್ತಮಕ್ಷಯಂ ॥ ೪೩ ॥
ಧ್ಯಾತುಮಿಚ್ಛಾಮಿ ಷಡ್ವಕ್ತ್ರ ಯೋ ಮಾಂ ಭಕ್ತಿಪರಾಯಣಃ ।
ಸ ಕರೋತು ಮಹಾಭಕ್ತ್ಯಾ ದ್ವಾದಶ್ಯಾಂ ಜಾಗರಂ ಹರೇಃ ॥ ೪೪ ॥
ವಾಸರೇ ವಾಸುದೇವಸ್ಯ ಸರ್ವೇ ದೇವಾಃ ಸವಾಸವಾಃ ।
ದೇಹಮಾಶ್ರಿತ್ಯ ತಿಷ್ಠಂತಿ ಯೇ ಪ್ರಕುರ್ವಂತಿ ಜಾಗರಂ ॥ ೪೫ ॥
ಜಾಗರೇ ವಾಸುದೇವಸ್ಯ ಮಹಾಭಾರತಕೀರ್ತನಂ ।
ಯೇ ಕುರ್ವಂತಿ ಗತಿಂ ಯಾಂತಿ ಯೋಗಿನಾಂ ತೇ ನ ಸಂಶಯಃ ॥ ೪೬ ॥
ಚರಿತಂ ರಾಮದೇವಸ್ಯ ಯೇ ವಧಂ ರಾವಣಸ್ಯ ಚ ।
ಪಠಂತಿ ಜಾಗರೇ ವಿಷ್ಣೋಸ್ತೇ ಯಾಂತಿ ಪರಮಾಂ ಗತಿಂ ॥ ೪೭ ॥
ಅಧೀತ್ಯಂ ಚತುರೋ ವೇದಾನ್ಕೃತ್ವಾ ಚೈವಾರ್ಚನಂ ಹರೇಃ ।
ಸ್ನಾತ್ವಾ ಚ ಸರ್ವತೀರ್ಥೇಷು ಜಾಗರೇ ತತ್ಫಲಂ ಹರೇಃ ॥ ೪೮ ॥
ರಥಾನಾಮಯುತೈರ್ದತ್ತೈಃ ಸಹಸ್ರೈರ್ವರವಾರಣೈಃ ।
ಲಕ್ಷೇಣಾಶ್ವವರಾಣಾಂ ತು ತತ್ಫಲಂ ಜಾಗರೇ ಹರೇಃ ॥ ೪೯ ॥

---

೪೩. ಜಾಗರಣೆಯಲ್ಲಿ ಮಾಡಿದ ಸ್ನಾನ, ವಿಲೇಪನ, ಪೂಜೆ, ಧೂಪ, ದೀಪ, ಸ್ತೋತ್ರ, ನೈವೇದ್ಯ, ತಾಂಬೂಲ, ದಾನ, ಇವುಗಳು ಅಕ್ಷಯವಾಗುವುವು.

೪೪. ಸ್ಕಂದ! ನನ್ನನ್ನು ಭಕ್ತಿಯಿಂದ ಧ್ಯಾನಮಾಡಲು ಬಯಸುವವನು ಅತಿ ಭಕ್ತಿಯಿಂದ ದ್ವಾದಶೀದಿನ ಜಾಗರಣೆಗೈಯಲಿ.

೪೫. ಇಂದ್ರಾದಿ ಸಕಲ ದೇವತೆಗಳು ಹರಿವಾಸರದಲ್ಲಿ ಜಾಗರಣೆ ಮಾಡುವವನ ಶರೀರವನ್ನು ಆಶ್ರಯಿಸಿರುವರು.

೪೬. ವಾಸುದೇವನದಿನದ ಜಾಗರಣೆಯಲ್ಲಿ ಮಹಾಭಾರತವನ್ನು ಪಠಿಸುವವರು ಯೋಗಿಗಳ ಗತಿಯನ್ನು ಪಡೆಯುವರು.

೪೭. ಈ ಜಾಗರಣೆಯಲ್ಲಿ ರಾಮಾಯಣವನ್ನು ಪಠಿಸುವವರು ಉತ್ತಮಗತಿಯನ್ನು ಹೊಂದುವರು.

೪೮. ಹರಿದಿನದ ಜಾಗರಣೆಯಿಂದ ನಾಲ್ಕುವೇದಗಳನ್ನು ಅಧ್ಯಯನಮಾಡಿ ವಿಷ್ಣುವನ್ನು ಪೂಜಿಸಿ, ಸಕಲ ತೀರ್ಥಗಳಲ್ಲಿ ಮಿಂದ ಫಲವು ಲಭಿಸುವುದು.

೪೯–೫೪. ಹರಿದಿನದ ಜಾಗರಣೆಯಿಂದ ಹತ್ತು ಸಾವಿರ ರಥಗಳು, ಸಾವಿರ ಉತ್ತಮವಾದ ಆನೆಗಳು, ಒಂದು ಲಕ್ಷ ಉತ್ತಮ ಕುದುರೆಗಳು, ಇವುಗಳನ್ನು ದಾನ

ಧಾನ್ಯಶೈಲಸಹಸ್ರೈಸ್ತು ತುಲಾ ಪುರುಷಕೋಟಿಭಿಃ ।
ಯತ್ಫಲಂ ಮುನಿಭಿಃ ಪ್ರೋಕ್ತಂ ತತ್ಫಲಂ ಜಾಗರೇ ಹರೇಃ ॥ ೫೦ ॥
ಕನ್ಯಾಕೋಟಿಪ್ರದಾನಂ ಚ ಸ್ವರ್ಣಭಾರಶತಂ ತಥಾ ।
ದತ್ತಂ ರತ್ನಾಽಯುತಶತಂ ಯೈಃ ಕೃತೋ ಜಗರೋ ಹರೇಃ ॥ ೫೧ ॥
ಅಷ್ಟಾದಶಪುರಾಣೈಸ್ತು ಪಠಿತೈರ್ಯತ್ಫಲಂ ಭವೇತ್ ।
ತತ್ಫಲಂ ಶತಸಾಹಸ್ರಂ ಕೃತೇ ಜಾಗರಣೇ ಹರೇಃ ॥ ೫೨ ॥
ಮನ್ವಾದಿ ಪಠತಾಂ ಶಾಸ್ತ್ರಂ ಯತ್ಫಲಂ ಹಿ ದ್ವಿಜನ್ಮನಾಂ ।
ಅಧಿಕಂ ಫಲಮಾಪ್ನೋತಿ ಕುರ್ವಾಣೋ ಜಾಗರಂ ಹರೇಃ ॥ ೫೩ ॥
ದುರ್ಭಿಕ್ಷೇ ಚಾನ್ನದಾತೄಣಾಂ ಪುಂಸಾಂ ಭವತಿ ಯತ್ಫಲಂ ।
ಸಂನ್ಯಾಸಿನಾಂ ಸಹಸ್ರೈಸ್ತು ಯತ್ಫಲಂ ಭೋಜಿತೈಃ ಕಲೌ ।
ಫಲಂ ತತ್ಸಮವಾಪ್ನೋತಿ ಕುರ್ವತಾಂ ಜಾಗರಂ ಹರೇಃ ॥ ೫೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾದಶೀಜಾಗರಣಮಾಹಾತ್ಮ್ಯವರ್ಣನಂ ನಾಮ
ಷಡ್ತ್ರಿಂಶತಿತಮೋಽಧ್ಯಾಯಃ

---

ಮಾಡಿದ ಪುಣ್ಯವೂ, ಸಾವಿರಧಾನ್ಯ ರಾಶಿಗಳು, ಕೋಟಿ ತುಲಾಭಾರ ಇವುಗಳನ್ನು ಕೊಟ್ಟ ಪುಣ್ಯವೂ, ಕೋಟಿ ಕನ್ಯೆಯರು ನೂರು ಸ್ವರ್ಣಭಾರ, ಹತ್ತುಲಕ್ಷ ರತ್ನಗಳು ಇವುಗಳನ್ನು ದಾನಮಾಡಿದ ಫಲವೂ, ಹದಿನೆಂಟು ಪುರಾಣಗಳನ್ನು ಪಠಿಸಿದ ಪುಣ್ಯಕ್ಕಿಂತ ಒಂದುಲಕ್ಷದಷ್ಟು ಪುಣ್ಯವೂ, ಮನ್ವಾದಿ ಧರ್ಮಶಾಸ್ತ್ರ ಗ್ರಂಥಗಳನ್ನು ಪಠಿಸಿದ ಬ್ರಾಹ್ಮಣನಿಗೆ ದೊರಯುವ ಪುಣ್ಯವೂ, ದುರ್ಭಿಕ್ಷೆಯಲ್ಲಿ ಅನ್ನವನ್ನು ನೀಡಿದವರಿಗೆ ಸಂಭವಿಸುವ ಪುಣ್ಯವೂ, ಸಾವಿರ ಸನ್ಯಾಸಿಗಳನ್ನು ಭೋಜನ ಮಾಡಿಸಿದ ಫಲವೂ ಲಭಿಸುವುವು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾದಶೀಜಾಗರಣಮಾಹಾತ್ಮ್ಯವರ್ಣನವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತವಿಂಶತಿತಮೋಽಧ್ಯಾಯಃ

### ದ್ವಾದಶೀಜಾಗರಣಸ್ಯ ಸರ್ವತೋವರೇಣ್ಯತ್ವವರ್ಣನಂ

ಈಶ್ವರ ಉವಾಚ :—

ಸ್ಥಿತ್ವಾ ದ್ವಾದಶಿ ಜಾಗರೇ ಕ್ರತುಸಮೇ ದುಃಖಾಪಹೇ ಪುಣ್ಯದೇ
ರಮ್ಯಂ ಭಾಗವತಂ ಶೃಣೋತಿ ಜನುಷಃ ಕೃತ್ವಾ ಹರೇಃ ಪೂಜನಂ ।
ಜಣ್ಯಂ ವಾಜಿಮುಖಸ್ಯ ಕೋಟಿಗುಣಿತಂ ಸಂಪ್ರಾಪ್ಯ ಭಕ್ತ್ಯೋತ್ತಮ
ಶ್ಛಿತ್ವಾ ಪಾಶಸಮೂಹಪಕ್ಷನಿಚಯಂ ಪ್ರಾಪ್ನೋತಿ ಕೃಷ್ಣಾಲಯಂ ॥ ೧ ॥
ಹತ್ಯಾಪಾಪ ಸಮೂಹಕೋಟಿನಿಚಯೈರ್ಗುರ್ವಂಗನಾಕೋಟಿಭಿಃ
ಸ್ತೇಯೈರ್ಲಕ್ಷಗುಣೈರ್ಗುರೋರ್ವಧಕರೈಃ ಸಂವೇಷ್ಟಿತೋ ಯದ್ಯಪಿ ।
ಶ್ರುತ್ವಾ ಭಾಗವತಂ ಭಿನತ್ತಿ ಸಕಲಂ ಕೃತ್ವಾ ಹರೇರ್ಜಾಗರಂ
ಮುಕ್ತಿಂ ಯಾತಿ ಸರೇಂದ್ರ ನಿರ್ಮಲವಜರ್ಭಿತ್ತ್ವಾ ರವೇರ್ಮಂಡಲಂ ॥೨॥

---

ಕನ್ನಡದ ಅನುವಾದ

ದ್ವಾದಶೀಜಾಗರಣಸ—ಸರ್ವತೋವರೇಣ್ಯತ್ವವರ್ಣನ

೧. ಈಶ್ವರನು ಹೇಳುತ್ತಾನೆ :—ಯಜ್ಞಕ್ಕೆ ಸಮಾನವೂ, ದುಃಖವನ್ನು ನಿವಾರಿಸುವುದೂ, ಪುಣ್ಯವನ್ನೀಯುವುದೂ ಆದ ದ್ವಾದಶೀದಿನ ಜಾಗರಣೆ ಗೈದು ಹರಿಯನ್ನು ಪೂಜಿಸಿ ಭಾಗವತವನ್ನು ಶ್ರವಣಮಾಡುವವನು ಅಶ್ವಮೇಧಯಾಗದ ಫಲಕ್ಕಿಂತ ಕೋಟಿಯಷ್ಟು ಹೆಚ್ಚಾದ ಪುಣ್ಯವನ್ನು ಹೊಂದಿ ಸಂಸಾರ ಬಂಧಮುಕ್ತನಾಗಿ ಕೃಷ್ಣಾಲಯವನ್ನು ಸೇರುವನು.

೨. ಹರಿದಿನ ಜಾಗರಣೆಯಲ್ಲಿ ಭಾಗವತ ಶ್ರವಣ ಮಾಡಿದವನು ಕೋಟಿ ಬ್ರಹ್ಮಹತ್ಯೆ, ಕೋಟಿ ಗುರುತಲ್ಪಗಮನ, ಕಳ್ಳತನ, ಲಕ್ಷ ಗುರುಹತ್ಯೆ ಇವುಗಳನ್ನು ಮಾಡಿದ ಪಾಪದಿಂದ ಸಹಿತನಾಗಿದ್ದರೂ ಅವುಗಳಿಂದ ಮುಕ್ತನಾಗಿ ಸೂರ್ಯಮಂಡಲವನ್ನು ಭೇದಿಸಿ ಶುದ್ಧನಾಗಿ ಮೋಕ್ಷವನ್ನು ಹೊಂದುವನು.

ಏಕಾದಶೀ ದ್ವಾದಶಿಸಂಪ್ರವಿಷ್ಟಾ
ಕೃತಾ ನಭಸ್ಯೇ ಶ್ರವಣೇನ ಯುಕ್ತಾ ।
ವಿಶೇಷತಃ ಸೋಮಸುತೇನ ಸಂಗಮೋ
ಕರೋತಿ ಮುಕ್ತಿಂ ಪ್ರಪಿತಾಮಹಾನಾಂ ॥ ೩ ॥
ಯದ್ದೀಯತೇ ದ್ವಾದಶಿವಾಸರೇ ಶುಭೇ
ವಿಷ್ಣುಂ ಸಮುದ್ದಿಶ್ಯ ಯಥಾ ಪಿತೄಣಾಂ ।
ಪರ್ಯಾಪ್ತಮಿಷ್ಟೈಃ ಕ್ರತುತೀರ್ಥದಾನೈ-
ರ್ಭಕ್ತ್ಯಾ ಪ್ರದತ್ತಂ ಖಲು ಮೇರುತುಲ್ಯಂ ॥ ೪ ॥
ಮಹಾನದೀಂ ಪ್ರಾಪ್ಯ ದಿನಂ ಚ ವಿಷ್ಣೋ-
ಸ್ತೋಯಾಂಜಲಿಂ ಯಸ್ತು ಪಿತೄನ್ದದಾತಿ ।
ಶ್ರಾದ್ಧಂ ಕೃತಂ ತೇನ ಸಮಾಃ ಸಹಸ್ರಂ
ಯಚ್ಛಂತಿ ಕಾಮಾನ್ಪಿತರಃ ಸುತೃಪ್ತಾಃ ॥ ೫ ॥
ಶರಣಾಗತಾನಾಂ ಪರಿಪಾಲನೇನ
ಹ್ಯನ್ನಪ್ರದಾನೇನ ಶೃಣುಷ್ವ ಪುತ್ರ ।
ಋಣಪ್ರದಾನೇ ದ್ವಿಜದೇವತಾನಾಂ
ತದ್ವೈ ಫಲಂ ಜಾಗರಣೇನ ವಿಷ್ಣೋಃ ॥ ೬ ॥

---

೩. ಭಾದ್ರಪದಮಾಸದ ಏಕಾದಶಿಯು ದ್ವಾದಶಿ, ಶ್ರವಣನಕ್ಷತ್ರ, ಬುಧವಾರ ಗಳಿಂದ ಕೂಡಿದರೆ ಆ ದಿನಜಾಗರಣೆಮಾಡಿದವನ ಪ್ರಪಿತಾಮಹರು ಮುಕ್ತರಾಗುವರು.

೪. ದ್ವಾದಶೀದಿನ ವಿಷ್ಣು ಮತ್ತು ಪಿತೃಗಳನ್ನುದ್ದೇಶಿಸಿ ಮಾಡಿದ ಯಜ್ಞ ತೀರ್ಥಸೇವೆ ದಾನಗಳು ಎಲ್ಲವೂ ಮೇರುಪರ್ವತಕ್ಕೆ ಸಮಾನವಾಗುವುವು.

೫. ದ್ವಾರಕೆಯಲ್ಲಿರುವ ಗೋಮತೀನದಿಯನ್ನು ಹೊಂದಿ ಪಿತೃಗಳಿಗೆ ತರ್ಪಣ ಮಾಡಿದರೆ ಸಾವಿರವರ್ಷಕಾಲ ಶ್ರಾದ್ಧಮಾಡಿದಂತಾಗುವುದು. ಆದರಿಂದ ಪಿತೃಗಳು ತೃಪ್ತರಾಗಿ ಇಷ್ಟಾರ್ಥಗಳನ್ನೀಯುವರು.

೬-೯. ವಿಷ್ಣುವಿನದಿನಜಾಗರಣೆಮಾಡುವುದರಿಂದ ಶರಣಾಗತರ ಪಾಲನೆ ಅನ್ನದಾನ, ಬ್ರಾಹ್ಮಣರಹಾಗೂ ದೇವತೆಗಳ ಋಣನಿವಾರಣೆ ಇವುಗಳಿಂದಾಗುವ ಫಲವೂ, ಸುವರ್ಣಧೇನು, ಜೇನಿನ ಧೇನು, ನೀರಿನ ಧೇನು, ಕೃಷ್ಣಾಜಿನ, ಬೆಳ್ಳಿ ಚಿನ್ನ ಮೇರುಪರ್ವತ, ಬ್ರಹ್ಮಾಂಡ, ಇವುಗಳನ್ನು ದಾನಮಾಡಿದ ಪುಣ್ಯವೂ, ಸತ್ಯ, ಶೌಚ,

ಯಃ ಸ್ವರ್ಣಧೇನುಂ ಮಧುನೀರಧೇನುಂ
ಕೃಷ್ಣಾಜಿನಂ ರೌಪ್ಯಸುವರ್ಣಮೇರು ।
ಬ್ರಹ್ಮಾಂಡದಾನಂ ಪ್ರದದಾತಿ ಯಾತಿ
ಸ ವೈ ಫಲಂ ಜಾಗರಣೇನ ವಿಷ್ಣೋಃ ॥ ೭ ॥
ಸತ್ಯೇನ ಶೌಚೇನ ದಮೇನ ಯತ್ಫಲಂ
ಕ್ಷಮಾದಯಾದಾನಬಲೇನ ಷಣ್ಮುಖ ।
ದಶಾಶ್ವಮೇಧೈರ್ಬಹುದಕ್ಷಿಣೈಶ್ಚ
ತೇಷಾಂ ಫಲಂ ಜಾಗರಣೇನ ವಿಷ್ಣೋಃ ॥ ೮ ॥
ಸ್ನಾನೇನ ಯತ್ಪ್ರಾಪ್ಯ ನದೀಂ ವರಿಷ್ಠಾಂ
ಯತ್ಪಿಂಡದಾನೇನ ಪಿತುರ್ಗಯಾಯಾಂ ।
ಯದ್ಧೇಮದಾನಾತ್ಕುರುಜಾಂಗಲೇ ಚ
ತತ್ಸ್ಯಾತ್ಫಲಂ ಜಾಗರಣೇನ ವಿಷ್ಣೋಃ ॥ ೯ ॥
ಹತ್ಯಾಯುತಾನಾಂ ಯದಿ ಸಂಚಿತಾನಿ
ಸ್ತೇಯಾನಿ ರುಕ್ಮಸ್ಯ ತಥಾಮಿತಾನಿ ।
ನಿಹಂತ್ಯನೇಕಾನಿ ಪುರಾಕೃತಾನಿ
ಶ್ರೀಜಾಗರೇ ಯೇ ತು ಪಠಂತಿ ಗೀತಂ ॥ ೧೦ ॥
ಮಾರ್ಗಂ ನ ತೇ ಸೌರಪುರಸ್ಯ ದೂತಾ
ನ್ಸನಾಂತರಂ ಷಣ್ಮುಖ ಕಿಂಚಿದನ್ಯತ್ ।
ಸ್ವಪ್ನೇ ನ ಪಶ್ಯಂತಿ ಚ ತೇ ಮನುಷ್ಯಾ
ಯೇಷಾಂ ಗತಾ ಜಾಗರಣೇನ ನಿದ್ರಾ ॥ ೧೧ ॥

---

ಇಂದ್ರಿಯನಿಗ್ರಹ, ಸಹನೆ, ದಯೆ, ದಾನ, ಬಲ, ಬಹುದಕ್ಷಿಣೆಯುಳ್ಳ ಹತ್ತು ಅಶ್ವಮೇಧಯಾಗ, ಇವುಗಳನ್ನು ಮಾಡುವುದರಿಂದಾಗುವ ಪುಣ್ಯವೂ, ಉತ್ತಮನದಿಯ ಸ್ನಾನ, ಗಯಾಪಿಂಡಪ್ರದಾನ, ಕುರುಜಾಂಗಲದಲ್ಲಿ ಸುವರ್ಣದಾನ ಇವುಗಳಿಂದುಂಟಾಗುವ ಫಲವೂ ದೊರೆಯುವುದು.

೧೦. ಜಾಗರಣೆಯಲ್ಲಿ ಗೀತೆಯನ್ನು ಪಠಿಸಿದರೆ ಹಿಂದೆ ಮಾಡಿದ ಹತ್ತುಸಾವಿರ ಬ್ರಹ್ಮಹತ್ಯೆಗಳೂ ಲೆಕ್ಕವಿಲ್ಲದ ಸ್ವರ್ಣಸ್ತೇಯಗಳೂ ಪರಿಹಾರವಾಗುವುವು.

೧೧. ಜಾಗರಣೆಮಾಡಿದ ಮಾನವರು ಯಮನಪಟ್ಟಣದ ದಾರಿಯನ್ನೂ, ಆ ಯಮನ ದೂತರನ್ನೂ, ಅಸಿಪತ್ರವನವೆಂಬ ನರಕವನ್ನೂ ಸ್ವಪ್ನದಲ್ಲಿಯೂ ನೋಡುವುದಿಲ್ಲ.

ಕಾಷಾಯವಸ್ತ್ರೈಶ್ಚ ಜಟಾಭರೈಶ್ಚ
ಪೂರ್ತಾಗ್ನಿಹೋತ್ರೈಃ ಕಿಮು ಚಾನ್ಯಮಂತ್ರೈಃ ।
ಧರ್ಮಾರ್ಥಕಾಮವರಮೋಕ್ಷಕರೀಂ ಚ ಭದ್ರಾ
ಮೇಕಾಂ ಭಜಸ್ವ ಕಲಿಕಾಲವಿನಾಶಿನೀಂ ಚ ॥ ೧೨ ॥
ಇತ್ಯುಕ್ತಪೂರ್ವಂ ಕಿಲ ನಾರದೇನ
ಶ್ರೇಯೋರ್ಥಬುದ್ಧ್ಯಾ ವಿನತಾಸುತಾಯ ।
ಕೃಷ್ಣಾತ್ಪರಂ ನಾನ್ಯದಿಹಾಸ್ತಿ ದೈವಂ
ವ್ರತಂ ತದಹ್ನಃ ಪರಮಂ ನ ಕಿಂಚಿತ್ ॥ ೧೩ ॥
ಭೋಭೋ ಸುರಾಃ ಶೃಣುತ ನಾರದ ಇತ್ಯವೋಚ
ದ್ಭೋಭೋಃ ಖಗೇಂದ್ರಋಷಿಸಿದ್ಧಮುನೀದ್ರಸಂಘಾಃ ।
ಉತ್ಕ್ಷಿಪ್ಯ ಬಾಹುಮಥ ಭಕ್ತಜನೇನ ಚೋಕ್ತಂ
ನೈಕಾದಶೀವ್ರತಸಮಂ ವ್ರತಮಸ್ತಿ ಕಿಂಚಿತ್ ॥ ೧೪ ॥
ಪಕ್ಷೀಂದ್ರ ಪಾಪಪುರುಷಾ ನ ಹರಿಂ ಭಜಂತಿ
ತದ್ಭಕ್ತಿಶಾಸ್ತ್ರನಿರತಾ ನ ಕಲೌ ಭವಂತಿ ।
ಕುರ್ವಂತಿ ಮೂಢಮನಸೋ ದಶಮೀವಿಮಿಶ್ರಾ
ಮೇಕಾದಶೀಂ ಶುಭದಿನಂ ಚ ಪರಿತ್ಯಜಂತಿ ॥ ೧೫ ॥

---

೧೨. ಕಾವಿಯಬಟ್ಟೆಯನ್ನು ಧರಿಸಿ ಸನ್ಯಾಸಿಯಾಗುವುದರಿಂದಲೂ, ಜಟೆಯಭಾರದಿಂದಲೂ, ಕೆರೆಕಟ್ಟೆಗಳನ್ನು ಕಟ್ಟುವುದರಿಂದಲೂ, ಅಗ್ನಿಹೋತ್ರಗಳಿಂದಲೂ, ಇತರ ಮಂತ್ರಗಳಿಂದಲೂ ಏನುಪ್ರಯೋಜನ? ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕೊಡುವುದೂ, ಕಲಿಕಾಲವನ್ನು ಪರಿಹರಿಸುವುದೂ ಮಂಗಳಕರವಾದ ಏಕಾದಶಿಯೊಂದನ್ನೇ ಸೇವಿಸು.

೧೩. ಹಿಂದೆ ನಾರದನು ಶ್ರೇಯಸ್ಸನ್ನುಂಟುಮಾಡಲಿಚ್ಛೆಯಿಂದ ಗರುಡನನ್ನು ಕುರಿತು ಕೃಷ್ಣನಿಗಿಂತ ಉತ್ತಮ ದೇವತೆಯೂ, ಅವನ ದಿನಕ್ಕಿಂತ ಉತ್ತಮ ದಿನವೂ ಇಲ್ಲವೆಂದು ಹೇಳಿದ್ದಾನೆ.

೧೪. ಸುರರೇ! ಗರುಡ, ಋಷಿ, ಸಿದ್ಧ, ಮುನೀಂದ್ರರೆ! ನಾರದನು ಹೀಗೆ ಹೇಳಿದ್ದಾನೆ. ಭಕ್ತನಾದ ನಾನೂ ತೋಳನ್ನು ಮೇಲಕ್ಕೆತ್ತಿ ಏಕಾದಶೀ ವ್ರತಕ್ಕೆ ಸಮಾನವಾದ ವ್ರತವು ಯಾವುದೂ ಇಲ್ಲವೆಂದು ಹೇಳಿದನು.

೧೫. ಗರುಡ! ಪಾಪಿಷ್ಠರು ಕಲಿಯುಗದಲ್ಲಿ ಹರಿಯನ್ನು ಸೇವಿಸುವುದಿಲ್ಲ. ಅವನಲ್ಲಿ ಭಕ್ತಿ ಮಾಡುವುದಿಲ್ಲ. ಅವನ ಶಾಸ್ತ್ರದಲ್ಲಿ ನಿರತರಾಗುವುದಿಲ್ಲ. ಮೂಢರು ದಶಮೀ ವೇಧೆಯುಳ್ಳ ಏಕಾದಶಿಯನ್ನು ಅನುಷ್ಠಾನ ಮಾಡಿ ಶುದ್ಧೈಕಾದಶಿಯನ್ನು ತ್ಯಜಿಸುವರು.

ಆರ್ತಃ ಸದಾ ಚೈವ ಸದಾ ಚ ರೋಗೀ
ಪಾಪೀ ಸದಾ ಚೈವ ಸದಾ ಚ ದುಃಖೀ ।
ಸದಾ ಕುಲಘ್ನೋಽಥ ಸದಾ ಚ ನಾರಕೀ
ವಿದ್ಧಂ ಮುರಾರೇರ್ದಿನಮಾಶ್ರಯೇತ್ತು ಯಃ ॥ ೧೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾದಶೀಜಾಗರಣಸ್ಯ ಸರ್ವತೋವರೇಣ್ಯತ್ವವರ್ಣನಂ ನಾಮ
ಸಪ್ತವಿಂಶತಿತಮೋಽಧ್ಯಾಯಃ

---

೧೬. ವಿದ್ಧವಾದ ಹರಿದಿನವನ್ನಾಶ್ರಯಿಸಿದವನು ಯಾವಾಗಲೂ ಆರ್ತನೂ ದುಃಖವುಳ್ಳವನೂ, ರೋಗಿಯೂ, ಪಾಪಿಯೂ, ಕುಲನಾಶಕನೂ, ನರಕಭಾಗಿಯೂ, ಆಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾದಶೀಜಾಗರಣದ ಸರ್ವತೋವರೇಣ್ಯತ್ವವರ್ಣನ ವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಷ್ಟಾವಿಂಶತಿತಮೋಽಧ್ಯಾಯಃ

### ದ್ವಾದಶೀಜಾಗರಣಮಾಹಾತ್ಮ್ಯವರ್ಣನಂ

ಮಾರ್ಕಂಡೇಯ ಉವಾಚ :—

ಕೃತ್ವಾ ಜಾಗರಣಂ ವಿಷ್ಣೋರ್ಯಥಾನ್ಯಾಯಂ ನರೇಶ್ವರ ।
ಪಿತೄನ್ಯಚ್ಛತಿ ಪುಣ್ಯಂ ಚ ತತಃ ಕಿಂ ಕುರುತೇ ಯಮಃ ॥ ೧ ॥
ಭುಕ್ತೋ ವಾ ಯದಿ ವಾಽಭುಕ್ತಃ ಸ್ವಚ್ಛೋ ವಾಽಸ್ವಚ್ಛ ಏವ ವಾ ।
ವಿಮುಕ್ತಿಃ ಕಥಿತಾ ತತ್ರ ಹರಿಜಾಗರಣಾನ್ನೃಣಾಂ ॥ ೨ ॥
ಅಸ್ನಾತೋ ವಾ ನರಃ ಸ್ನಾತೋ ಜಾಗರೇ ಸಮುಪಸ್ಥಿತೇ ।
ಸರ್ವತೀರ್ಥಪ್ಲುತೋ ಜ್ಞೇಯಸ್ತಂ ದೃಷ್ಟ್ವಾ ದಿವಮಾವ್ರಜೇತ್ ॥ ೩ ॥
ಶ್ವಪಚಾ ಜಾಗರಂ ಕೃತ್ವಾ ಪದಂ ನಿರ್ವಾಣಮಾಗತಾಃ ।
ಕಿಂ ಪುನರ್ವರ್ಣಸಂಭೂತಾಃ ಸದಾಚಾರಪರಾಸ್ತಥಾ ॥ ೪ ॥

---

### ಕನ್ನಡದ ಅನುವಾದ

#### ದ್ವಾದಶೀಜಾಗರಣಮಾಹಾತ್ಮ್ಯವರ್ಣನ

೧. ಮಾರ್ಕಂಡೇಯನು ಹೇಳುತ್ತಾನೆ :—ಹೇರಾಯ ! ಮಾನವನು ಹರಿದಿನದಲ್ಲಿ ಶಾಸ್ತ್ರೋಕ್ತವಾಗಿ ಜಾಗರಣೆ ಮಾಡಿ ಪಿತೃಗಳಿಗೆ ಪುಣ್ಯವನ್ನುಂಟುಮಾಡುವನು. ಅನಂತರ ಯಮನು ಏನನ್ನು ತಾನೆ ಮಾಡುವನು ?

೨. ಹರಿದಿನ ಜಾಗರಣೆ ಮಾಡಿದವನು ಊಟ ಮಾಡಿರಲಿ ಊಟ ಮಾಡದಿರಲಿ, ಶುದ್ಧನಾಗಿರಲಿ, ಅಶುದ್ಧನಾಗಿರಲಿ ಅವನಿಗೆ ಮೋಕ್ಷವು ದೊರೆಯುವುದು.

೩. ಜಾಗರವನ್ನು ಮಾಡುವವನು ಸ್ನಾನಮಾಡಿದವನಾಗಲಿ, ಸ್ನಾನಮಾಡದವನಾಗಲಿ ಸಕಲ ತೀರ್ಥಗಳಲ್ಲಿ ಮಿಂದವನಂತಾಗುವನು. ಅವನನ್ನು ನೋಡಿದವನು ಸ್ವರ್ಗವನ್ನು ಪಡೆಯುತ್ತಾನೆ.

೪. ಚಾಂಡಾಲರೂ ಜಾಗರಣೆ ಮಾಡಿ ಮೋಕ್ಷವನ್ನು ಹೊಂದಿರುವರು. ಚಾತುರ್ವರ್ಣ್ಯದಲ್ಲಿ ಹುಟ್ಟಿದವರೂ, ಸದಾಚಾರ ಸಂಪನ್ನರೂ ಆದವರ ವಿಷಯವನ್ನು ಏನು ಹೇಳತಕ್ಕದ್ದು.

ಯುವತೀನಾದಮಾಕರ್ಣ್ಯ ಯಥಾ ನಿದ್ರಾ ನ ಜಾಯತೇ ।
ಜಾಗರೇ ಚೈವಮೇವ ಸ್ಯಾತ್ತತ್ಕಥಾನಾಂ ಚ ಕೀರ್ತನೇ ॥ ೫ ॥
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಉತ್ಕಲ್ಲನಂ ಮನಃಪಾಪಂ ಶೋಧಯೇದ್ವಿಷ್ಣು ಜಾಗರಃ ॥ ೬ ॥
ವಿಮುಕ್ತಿಃ ಕಾಮುಕಸ್ಯೋಕ್ತಾ ಕಿಂ ಪುನರ್ವೀಕ್ಷತಾಂ ಹರಿಂ ॥ ೭ ॥
ವಾಚಿಕಂ ಮಾನಸಂ ಪಾಪಂ ಕರಣೈರ್ಯದುಪಾರ್ಜಿತಂ ।
ಅನ್ಯೈರ್ನಿಮಿಷಮಾತ್ರೇಣ ವ್ಯಪೋಹತಿ ನ ಸಂಶಯಃ ॥ ೮ ॥
ಗೋಷ್ಠ್ಯಾಂ ಸಮಾಗತಾ ಯೇ ತು ತೇಷಾಂ ಪಾಪಂ ಕುತಃ ಸ್ಮೃತಂ ।
ಮಾತೃಪೂಜಾ ಗಯಾಶ್ರಾದ್ಧಂ ಸುತೀರ್ಥಗಮನಂ ತಥಾ ।
ಜಾಗರಸ್ಯ ನೃಣಾಂ ರಾಜನ್ಸಮಾನಿ ಕವಯೋ ವಿದುಃ ॥ ೯ ॥
ಜನನೀಪೂಜನಂ ಭೂಪ ಹ್ಯಶ್ವಮೇಧಾಯುತೈಃ ಸಮಂ ।
ಪೂರ್ಣಂ ವರ್ಷಶತಂ ಭೂಪ ಕುಶಾಗ್ರೇಣೋದ್ಧೃತಂ ಜಲಂ ॥ ೧೦ ॥

---

೫. ಸ್ತ್ರೀಯರ ಧ್ವನಿಯನ್ನು ಕೇಳಿದರೆ ಹೇಗೆ ನಿದ್ರೆಯು ಬರುವುದಿಲ್ಲವೋ ಹಾಗೆಯೇ ಜಾಗರಣೆಯಲ್ಲಿ ಶ್ರೀ ಕೃಷ್ಣನ ಕಥೆಯನ್ನು ಕೇಳುವುದರಿಂದ ನಿದ್ರೆಯು ಬರುವುದಿಲ್ಲ.

೬. ಜಾಗರಣೆಯು ಬ್ರಹ್ಮಹತ್ಯೆ, ಮದ್ಯಪಾನ, ಸ್ವರ್ಣಸ್ತೇಯ, ಗುರುಭಾರ್ಯಾಗಮನ ಮೊದಲಾದುವುಗಳ ಪಾಪವನ್ನು ನಿವಾರಿಸುವುದು.

೭. ದ್ವಾದಶೀ ದಿನ ಜಾಗರಣಮಾಡಿದ ಕಾಮುಕನಿಗೂ ಮೋಕ್ಷವಾಗುವುದು. ಇನ್ನೂ ಆ ದಿನ ಆ ಹರಿಯನ್ನು ದರ್ಶನ ಮಾಡುವ ಇತರ ಜನರ ವಿಷಯವನ್ನು ಏನು ಹೇಳತಕ್ಕದ್ದು.

೮. ವಾಕ್, ಮನಸ್ಸುಗಳಿಂದ ಮಾಡಿದ ಪಾಪವೂ, ಇತರ ಇಂದ್ರಿಯಗಳಿಂದ ಮಾಡಿದ ಪಾಪವೂ ಒಂದು ನಿಮಿಷದಲ್ಲಿ ಪರಿಹಾರವಾಗುವುದು.

೯. ಜಾಗರಣೆ ಮಾಡುವವರ ಸಭೆಯಲ್ಲಿ ಬಂದು ಸೇರಿದವರ ಪಾಪವೂ ನಿವಾರಣೆಯಾಗುವುದು. ಮಾತೃಪೂಜೆ, ಗಯಾಶ್ರಾದ್ಧ, ತೀರ್ಥಯಾತ್ರೆ ಇವುಗಳಿಂದಾಗುವ ಪುಣ್ಯವೂ, ಜಾಗರಣೆಯ ಪುಣ್ಯವೂ ಸಮಾನವಾದುವು.

೧೦–೧೧. ಹತ್ತು ಸಾವಿರ ಅಶ್ವಮೇಧಯಾಗಗಳಿಗೆ ಸಮಾನವಾದ ಮಾತೃಪೂಜೆಯ ಪುಣ್ಯವೂ, ಒಂದು ನೂರ ವರ್ಷಕಾಲ ಪುಷ್ಕರ ತೀರ್ಥದ ನೀರನ್ನು ದರ್ಭೆಯ

ಪಿಬನ್ಪಾತ್ರೇ ದ್ವಿಜಃ ಸಮ್ಯಕ್ತೀರ್ಥೇ ಪುಷ್ಕರಸಂಜ್ಞಿತೇ ।
ಜಾಗರಸ್ಯೈವ ಚೈತಾನಿ ಕಲಾಂ ನಾರ್ಹಂತಿ ಷೋಡಶೀಂ ॥ ೧೧ ॥
ಕೃತ್ವಾ ಕಾಂಚನಸಂಪೂರ್ಣಾಂ ವಸುಧಾಂ ವಸುಧಾಧಿಪ ।
ದತ್ವಾತ್ವ ಯತ್ಫಲಮಾಪ್ನೋತಿ ತತ್ಫಲಂ ಹರಿಜಾಗರೇ ॥ ೧೨ ॥
ನಿಕೃಂತನಂ ಕರ್ಮಣಶ್ಚ ಹ್ಯಾತ್ಮನಾ ದುಷ್ಕೃತಂ ಕೃತಂ ।
ವ್ಯಪೋಹತಿ ನ ಸಂದೇಹೋ ಯೇನ ಜಾಗರಣಂ ಕೃತಂ ॥ ೧೩ ॥
ಸಂಕ್ಷೇಪತಃ ಪ್ರವಕ್ಷ್ಯಾಮಿ ಪುನರೇವ ಮಹೀಪತೇ ।
ಜಾಗರೇ ಪದ್ಮನಾಭಸ್ಯ ಯತ್ಫಲಂ ಕವಯೋ ವಿದುಃ ॥ ೧೪ ॥
ರವೇರ್ಬಿಂಬಮಿದಂ ಭಿತ್ವಾ ಸ ಯೋಗೀ ಹರಿಜಾಗರೇ ।
ಪ್ರಯಾತಿ ಪರಮಂ ಸ್ಥಾನಂ ಯೋಗಿಗಮ್ಯಂ ನಿರಂಜನಂ ।
ಸಾಂಖ್ಯಯೋಗೈಃ ಸುದುಃಖೇನ ಪ್ರಾಪ್ಯತೇ ಯತ್ಪದಂ ಹರೇಃ ॥ ೧೫ ॥
ನದ್ಯೋ ನದಾ ಯಥಾ ಯಾಂತಿ ಸಾಗರೇ ಸಂಸ್ಥಿತಂ ಕ್ರಮಾತ್ ।
ಏವಂ ಜಾಗರಣಾತ್ಸರ್ವೇ ತತ್ಪದೇ ಯಾಂತಿ ಸಂಸ್ಥಿತಿಂ ॥ ೧೬ ॥

---

ತದಿಯಿಂದ ಎತ್ತಿ ಪಾತ್ರೆಯಲ್ಲಿ ಕುಡಿದ ಪುಣ್ಯವೂ ಜಾಗರಣೆಯ ಪುಣ್ಯದ ಹದಿನಾರನೆಯ ಒಂದು ಕಲೆಗೆ ಸಾಟಿಯಲ್ಲ.

೧೨. ದೊರೆಯೆ ! ಹರಿದಿನ ಜಾಗರಣೆಯಿಂದ ಭೂಮಿಯನ್ನು ಸುವರ್ಣದಿಂದ ತುಂಬಿ ದಾನಮಾಡಿದ ಪುಣ್ಯವು ದೊರೆಯುವುದು.

೧೩. ಜಾಗರಣೆ ಮಾಡಿದವನಿಗೆ ಕರ್ಮಚ್ಛೇದವೂ, ಪಾಪ ಪರಿಹಾರವೂ ಆಗುವುದು.

೧೪. ದೊರೆಯೆ ! ಹರಿದಿನದ ಜಾಗರಣೆಯಿಂದಾಗುವ ಫಲವನ್ನು ಜ್ಞಾನಿಗಳು ತಿಳಿದಂತೆ ನಿನಗೆ ಮರಳಿ ಸಂಕ್ಷೇಪವಾಗಿ ಹೇಳುವೆನು.

೧೫ ಮನುಷ್ಯನು ಹರಿದಿನ ಜಾಗರಣೆಯಿಂದ ಯೋಗಿಯು ಸೂರ್ಯಬಿಂಬವನ್ನು ಭೇದಿಸಿ ಪಡೆಯುವ ನಿರ್ದುಷ್ಟವಾದ ಉತ್ತಮಸ್ಥಾನವನ್ನೂ, ಸಾಂಖ್ಯಯೋಗ ತತ್ತ್ವಜ್ಞರು ಕಷ್ಟದಿಂದ ಹೊಂದುವ ಸ್ಥಾನವನ್ನೂ ಪಡೆಯುವನು.

೧೬. ನದಿ ನದಗಳು ಕ್ರಮವಾಗಿ ಸಾಗರದಲ್ಲಿ ಸೇರುವಂತೆ ಜಾಗರಣೆಯಿಂದ ಎಲ್ಲರೂ ವಿಷ್ಣುವಿನ ಸ್ಥಾನವನ್ನು ಹೊಂದುವರು.

ಮೇರುಮಂದರಮಾನಾನಿ ಕೃತ್ವಾ ಪಾಪಾನಿ ಮಾ ನರಃ ।
ಹರಿಜಾಗರಣೇ ತಾನಿ ವ್ಯಪೋಹತಿ ನ ಸಂಶಯಃ ॥ ೧೭ ॥
ರಾಜ್ಯಂ ಸ್ವರ್ಗಂ ತಥಾ ಮೋಕ್ಷಂ ಯಚ್ಚಾನ್ಯದೀಪ್ಸಿತಂ ನೃಣಾಂ ।
ದದಾತಿ ಭಗವಾನ್ಕೃಷ್ಣಃ ಸ್ವಗೀತೈರ್ಜಾಗರೇ ಸ್ಥಿತಃ ॥ ೧೮ ॥
ಜಾಗರಣ್ಯೈವ ಪಾಪಾನಾಂ ಶ್ವಪಚಾನಾಂ ಮಹೀಪತೇ ।
ತತ್ಪದಂ ಕವಿಭಿಃ ಪ್ರೋಕ್ತಂ ಕಿಂ ಪುನಸ್ತು ದ್ವಿಜನ್ಮನಾಂ ॥ ೧೯ ॥
ಜಪಧ್ಯಾನವಿಹೀನಸ್ಯ ಗಾಯಕಸ್ಯಾಪಿ ಭೂಪತೇ ।
ಕರ್ಮಭ್ರಷ್ಟಸ್ಯ ಚ ಪ್ರೋಕ್ತೋ ಮೋಕ್ಷಸ್ತು ಹರಿಜಾಗರೇ ॥ ೨೦ ॥
ತನ್ನಾಸ್ತಿ ತ್ರಿಷು ಲೋಕೇಷು ಪುಣ್ಯಂ ಪುಣ್ಯವತಾಂ ನೃಣಾಂ ।
ಯತ್ತು ಸಾಧಯತೇ ಭೂಪ ಜಾಗರೇ ಸಂವ್ಯವಸ್ಥಿತಃ ॥ ೨೧ ॥
ತ್ವಯಾ ಪುನರಿದಂ ಕಾರ್ಯಂ ಸ್ಮರ್ತವ್ಯೋ ಗರುಡಧ್ವಜಃ ।
ಏಕಾದಶ್ಯಾಂ ನ ಭೋಕ್ತವ್ಯಂ ಕರ್ತವ್ಯಂ ಜಾಗರಂ ಸದಾ ॥ ೨೨ ॥
ಜಾಗರೇ ವರ್ತಮಾನಸ್ಯ ಶ್ವಪಚಸ್ಯ ಗತಿರ್ಭವೇತ್ ।
ಕಿಂ ಪುನರ್ವರ್ಣಜಾತೀನಾಂ ವೈಷ್ಣವಾನಾಂ ಮಹೀಪತೇ ॥ ೨೩ ॥

---

೧೭. ಮಾನವನು ಮೇರು, ಮಂದರಪರ್ವತಗಳಷ್ಟು ಪಾಪಗಳನ್ನೆಸಗಿದ್ದರೂ ಅವುಗಳೆಲ್ಲ ಹರಿದಿನ ಜಾಗರಣೆಯಿಂದ ನಿವಾರಣೆಯಾಗುವುವು.

೧೮. ಜಾಗರಣೆಯಲ್ಲಿ ಹಾಡನ್ನು ಹಾಡುವವನಿಗೆ ಪೂಜ್ಯನಾದ ಕೃಷ್ಣನು ರಾಜ್ಯ, ಸ್ವರ್ಗ, ಮೋಕ್ಷ ಇನ್ನೂ ಇತರ ಇಷ್ಟಾರ್ಥಗಳನ್ನು ಕೊಡುವನು.

೧೯. ದೊರೆಯೆ ! ಪಾಪಿಷ್ಠರಾದ ಚಂಡಾಲರಿಗೂ ಜಾಗರಣೆಯಿಂದ ವಿಷ್ಣು ಸ್ಥಾನವು ದೊರೆಯುವುದೆಂದು ಜ್ಞಾನಿಗಳು ಹೇಳಿರುವುದರಿಂದ ಬ್ರಾಹ್ಮಣರಿಗೆ ಏನು ಹೇಳತಕ್ಕುದು.

೨೦. ಜಾಗರಣೆಯಿಂದ ಜಪಧ್ಯಾನರಹಿತನಿಗೂ, ಗಾಯಕನಿಗೂ, ಕರ್ಮಭ್ರಷ್ಟನಿಗೂ, ಮೋಕ್ಷವು ದೊರೆಯುವುದು.

೨೧. ದೊರೆಯೆ ! ಜಾಗರಣೆಮಾಡುವವನು ಸಾಧಿಸುವ ಪುಣ್ಯವನ್ನು ಮೂರು ಲೋಕಗಳಲ್ಲಿರುವ ಪುಣ್ಯಶಾಲಿಗಳೂ ಸಾಧಿಸುವುದಿಲ್ಲ.

೨೨. ನೀನಿದನ್ನು ಮಾಡಬೇಕು, ವಿಷ್ಣುವನ್ನು ಸ್ಮರಿಸು. ಯಾವಾಗಲೂ ಏಕಾದಶೀದಿನ ಉಪವಾಸಮಾಡಿ ಜಾಗರಣೆಮಾಡು.

೨೩. ಜಾಗರಣೆಮಾಡುವ ಚಂಡಾಲನಿಗೂ ಉತ್ತಮಗತಿಯಾಗುವುದೆಂದು ಹೇಳಬೇಕಾಗಿಲ್ಲ.

ಯೇ ತು ಜಾಗರಣೇ ನಿದ್ರಾಂ ನ ಯಾಂತಿ ನೃಪಪುಂಗವ ।
ನ ತೇಷಾಂ ಜನನೀ ಯಾತಿ ಖೇದಂ ಗರ್ಭಾವಧಾರಣಾತ್ ॥ ೨೪ ॥
ತಸ್ಮಾಜ್ಜಾಗರಣಂ ಕಾರ್ಯಂ ಮಾತುರ್ಜಠರವರ್ಜಿಭಿಃ ।
ಭೀತೈರ್ಮೋಕ್ಷಪರೈರ್ಮರ್ತ್ಯೈಃ ಸುಖಚೇಷ್ಟಾಬಹಿಷ್ಕೃತೈಃ ॥ ೨೫ ॥
ಯಸ್ತು ಜಾಗರಣಂ ರಾತ್ರೌ ಕುರ್ಯಾದ್ಭಕ್ತಿಸಮನ್ವಿತಃ ।
ನಿಮಿಷೇ ನಿಮಿಷೇ ರಾಜನ್ನಶ್ವಮೇಧಫಲಂ ಲಭೇತ್ ॥ ೨೬ ॥
ಶಯನೋತ್ಥಾಪನಾಭ್ಯಾಂ ಚ ಸಮಂ ಪುಣ್ಯಮುದಾಹೃತಂ ।
ವಿಶೇಷೋ ನಾಸ್ತಿ ಭೂಪಾಲ ವಿಷ್ಣುನಾ ಕಥಿತಂ ಪುರಾ ॥ ೨೭ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸ್ಥಿತಾಃ ಶೂದ್ರಾಶ್ಚ ಜಾಗರೇ ।
ಪಕ್ಷಿಣಃ ಕೃಮಿಕೀಟಾಶ್ಚ ಹ್ಯನೇಕೇ ಚೈವ ಜಂತವಃ ।
ತೇ ಗತಾಃ ಪರಮಂ ಸ್ಥಾನಂ ಯೋಗಿಗಮ್ಯಂ ನಿರಂಜನಂ ॥ ೨೮ ॥
ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾಸಮಾನಿ ಚ ।
ಕೃಷ್ಣ ಜಾಗರಣೇ ತಾನಿ ಕ್ಷಯಂ ಯಾಂತಿ ನ ಸಂಶಯಃ ॥ ೨೯ ॥

---

೨೪. ನೃಪೇಂದ್ರ ! ಜಾಗರಣೆಯಲ್ಲಿ ನಿದ್ರೆಮಾಡದವನು ಮರಳಿ ಗರ್ಭವಾಸವನ್ನನುಭವಿಸುವುದಿಲ್ಲ.

೨೫. ಆದ್ದರಿಂದ ತಾಯಿಯ ಜಠರವಾಸವನ್ನು ತ್ಯಜಿಸುವವರೂ ಭಯಗ್ರಸ್ತರೂ ಮೋಕ್ಷನಿರತರೂ ಆದ ಮಾನವರು ಜಾಗರಣೆ ಗೈಯಬೇಕು.

೨೬. ರಾತ್ರಿಯಲ್ಲಿ ಭಕ್ತಿಯಿಂದ ಜಾಗರಣೆಮಾಡುವವನು ಪ್ರತಿನಿಮಿಷದಲ್ಲಿಯೂ ಅಶ್ವಮೇಧಯಾಗದ ಫಲವನ್ನು ಪಡೆಯುವನು.

೨೭. ಶಯನೋತ್ಥಾನ ದ್ವಾದಶಿಗಳಲ್ಲುಂಟಾಗುವ ಪುಣ್ಯವು ಇದಕ್ಕೆ ಸಮವಾದುದು. ವಿಶೇಷವಿಲ್ಲವೆಂದು ಹಿಂದೆ ವಿಷ್ಣುವು ಹೇಳಿರುವನು.

೨೮. ಜಾಗರಣೆಮಾಡಿದ ಬ್ರಾಹ್ಮಣರು ಕ್ಷತ್ರಿಯರು, ವೈಶ್ಯರು, ಶೂದ್ರರು, ಪಕ್ಷಿಗಳು, ಕ್ರಿಮಿ–ಕೀಟಗಳೂ, ಯೋಗಿಗಮ್ಯವಾದ ನಿರ್ದುಷ್ಟಸ್ಥಾನವನ್ನು ಹೊಂದಿರುವರು.

೨೯. ಬ್ರಹ್ಮಹತ್ಯೆಗೆ ಸಮಾನವಾದ ಸಕಲಪಾಪಗಳೂ ಹರಿದಿನದ ಜಾಗರಣೆಯಿಂದ ನಾಶವಾಗುವುವು.

ಏಕತಃ ಕ್ರತವಃ ಸರ್ವೇ ಜಾಗರಃ ಕೃಷ್ಣವಲ್ಲಭಃ ।
ನ ಸಮಂ ಹ್ಯಧಿಕಃ ಪ್ರೋಕ್ತಃ ಕವಿಭಿಃ ಕೃಷ್ಣಜಾಗರಃ ॥ ೩೦ ॥
ಸೂರ್ಯಶಕ್ರಾದಯೋ ದೇವಾ ಬ್ರಹ್ಮರುದ್ರಾಯೋ ಗಣಾಃ ।
ನಿತ್ಯಮೇವ ಸಮಾಯಾಂತಿ ಜಾಗರೇ ಕೃಷ್ಣವಲ್ಲಭೇ ॥ ೩೧ ॥
ಗಂಗಾ ಸರಸ್ವತೀ ರೇವಾ ಯಮುನಾ ಚ ಶತಹ್ರದಾ ।
ಚಂದ್ರಭಾಗಾ ವಿತಸ್ತಾ ಚ ನದ್ಯಃ ಸರ್ವಾಶ್ಚ ತತ್ರ ವೈ ॥ ೩೨ ॥
ಸರಾಂಸಿ ಚ ಹ್ರದಾಶ್ಚೈವ ಸಮುದ್ರಾಃ ಕೃತ್ಸ್ನಶೋ ನೃಪ ।
ಏಕಾದಶ್ಯಾಂ ನೃಪಶ್ರೇಷ್ಠ ಗಚ್ಛಂತಿ ಹರಿಜಾಗರೇ ॥ ೩೩ ॥
ಸ್ಪೃಹಣೀಯಾಸ್ತು ದೇವೇಭ್ಯೋ ಯೇ ನರಾಃ ಕೃಷ್ಣಜಾಗರೇ ।
ನೃತ್ಯಂ ಗೀತಂ ಪ್ರಕುರ್ವಂತಿ ವೀಣಾವಾದ್ಯಂ ತಥೈವ ಚ ॥ ೩೪ ॥
ಭಕ್ತ್ಯಾ ವಾಪ್ಯಥವಾಽಭಕ್ತ್ಯಾ ಶುಚಿರ್ವಾಪ್ಯಥವಾಽಶುಚಿಃ ।
ಕೃತ್ವಾ ಜಾಗರಣಂ ವಿಷ್ಣೋರ್ಮುಚ್ಯತೇ ಪಾಪಕೋಟಿಭಿಃ ॥ ೩೫ ॥
ಪಾದಯೋಃ ಪಾಂಸುಕಣಿಕಾ ಯಾವತ್ತಿಷ್ಠಂತಿ ಭೂತಲೇ ।
ತಾವದ್ವರ್ಷಸಹಸ್ರಾಣಿ ಜಾಗರೀ ವಸತೇ ದಿವಿ ॥ ೩೬ ॥

---

೩೦. ಒಂದೆಡೆ ಸಮಸ್ತತೀರ್ಥಗಳಿಂದ ಕೂಡಿದ ಸಕಲ ಯಜ್ಞಗಳನ್ನೂ, ಇನ್ನೊಂದೆಡೆ ಕೃಷ್ಣಪ್ರಿಯವಾದ ಜಾಗರಣೆಯನ್ನೂ ಇಟ್ಟರೆ ಇವು ಸಮವಾಗುವುದಿಲ್ಲ. ಜಾಗರಣೆಯೇ ಹೆಚ್ಚೆಂದು ಜ್ಞಾನಿಗಳು ಹೇಳಿರುವರು.

೩೧. ಈ ಜಾಗರಣೆಗೆ ಯಾವಾಗಲೂ ಸೂರ್ಯ, ಶುಕ್ರ, ಬ್ರಹ್ಮ, ರುದ್ರ, ಮೊದಲಾದದೇವತೆಗಳೂ, ಗಣಗಳೂ, ಬರುವರು.

೩೨. ಅಲ್ಲಿಗೆ ಗಂಗೆ, ಸರಸ್ವತೀ, ನರ್ಮದಾ, ಯಮುನಾ, ಶತಹ್ರದಾ, ಚಂದ್ರ ಭಾಗಾ, ವಿತಸ್ತಾ ಮೊದಲಾದ ಸಕಲ ನದಿಗಳೂ ಬರುವವು.

೩೩. ನೃಪೇಂದ್ರ ! ಏಕಾದಶಿ ಜಾಗರಣೆಗೆ ಸರೋವರ, ಮಡು, ಸಮುದ್ರಗಳೂ ಸಂಪೂರ್ಣವಾಗಿ ಬರುವವು.

೩೪. ಕೃಷ್ಣಜಾಗರಣೆಯಲ್ಲಿ ನೃತ್ಯ, ಗೀತ, ವೀಣಾವಾದ್ಯಗಳನ್ನು ಮಾಡುವವರು ದೇವತೆಗಳಿಗೆ ಪ್ರಿಯರಾಗುವರು.

೩೫. ಹರಿದಿನದಲ್ಲಿ ಭಕ್ತಿಯಿಂದಾಗಲೀ, ಭಕ್ತಿಯಿಲ್ಲದೆ. ಆಗಲಿ, ಶುದ್ಧನಾಗಲಿ, ಅಶುದ್ಧನಾಗಲಿ ಜಾಗರಣೆಮಾಡಿದರೆ ಅನೇಕ ಪಾಪಗಳಿಂದ ಮುಕ್ತರಾಗುವರು.

೩೬. ಹರಿದಿನ ಜಾಗರಣೆ ಗೈದವನು ಪಾದಗಳಲ್ಲಿ ಧೂಳಿಯ ಕಣಗಳು ಇರುವ ವರೆಗೆ ಅನೇಕ ವರ್ಷಗಳ ಕಾಲ ದೇವಲೋಕದಲ್ಲಿ ವಾಸಿಸುವನು.

ತಸ್ಮಾದ್ಗೃಹಂ ಪ್ರಗಂತವ್ಯಂ ಜಾಗರೇ ಮಾಧವಸ್ಯ ಚ ।
ಕಲೌ ಮಲವಿನಾಶಾಯ ದ್ವಾದಶದ್ವಾದಶೀಷು ಚ ॥ ३೭ ॥
ಸುಬಹೂನ್ಯಪಿ ಪಾಪಾನಿ ಕೃತ್ವಾ ಜಾಗರಣಂ ಹರೇಃ ।
ನಿರ್ದಹೇನ್ಮೇರುತುಲ್ಯಾನಿ ಯುಗಕೋಟಿಶತಾನ್ಯಪಿ ॥ ३೮ ॥
ಉನ್ಮೀಲಿನೀ ಮಹೀಪಾಲ ಯ್ಯೈಃ ಕೃತಾ ಪ್ರೀತಿಸಂಯುತೈಃ ।
ಕಲೌ ಜಾಗರಣೋಪೇತಾ ಫಲಂ ವಕ್ಷ್ಯಾಮಿ ತಚ್ಛೃಣು ॥ ३೯ ॥
ಸ್ಥಿತೌ ಯುಗಸಹಸ್ರಂ ತು ಪಾದೇನೈಕೇನ ಭೂತಲೇ ।
ಕಾಶ್ಯಾಂ ಚ ಜಾಹ್ನವೀತೀರೇ ತತ್ಫಲಂ ಲಭತೇ ನರಃ ॥ ೪೦ ॥
ಭವೇದ್ಯುಗಸಹಸ್ರಂ ಚ ನಿರಾಹಾರೇಣ ಯತ್ಫಲಂ ।
ಉನ್ಮೀಲಿನೀಂ ಸಮಾಸಾದ್ಯ ಫಲಂ ಜಾಗರಣೇ ಹರೇಃ ॥ ೪೧ ॥
ದುಷ್ಪ್ರಾಪ್ಯಂ ವೈಷ್ಣವಂ ಸ್ಥಾನಂ ಮಖಕೋಟಿಶತೈಃ ಕೃತೈಃ ।
ಹೇಲಯಾ ಪ್ರಾಪ್ಯತೇ ನೂನಂ ದ್ವಾದಶ್ಯಾಂ ಜಾಗರೇ ಕೃತೇ ॥ ೪೨ ॥
ನ ಕುರ್ವಂತಿ ವ್ರತಂ ವಿಷ್ಣೋರ್ಜಾಗರೇಣ ಸಮನ್ವಿತಂ ।
ಪರಸ್ವಂ ಪರದಾರ್ಯಂ ಚ ಪಾಪಂ ತಾನ್ಪ್ರತಿ ಗಚ್ಛತಿ ॥ ೪३ ॥

---

३೭. ಆದ್ದರಿಂದ ಕಲಿಯುಗದಲ್ಲಿ ಪಾಪ ಪರಿಹಾರಕ್ಕಾಗಿ ಜಾಗರಣೆಗೋಸ್ಕರ ಹನ್ನೆರಡು ದ್ವಾದಶಿಗಳಲ್ಲಿ ಕೃಷ್ಣ ದೇವಾಲಯಕ್ಕೆ ಹೋಗಬೇಕು.

३೮. ಅನೇಕ ಕೋಟಿ ಯುಗಗಳಲ್ಲಿ ಸಗಿದ ಪರ್ವತದಂತಿರುವ ಬಹು ಪಾಪಗಳೂ ಜಾಗರಣೆ ಮಾಡುವುದರಿಂದ ಪರಿಹಾರವಾಗುವುದು.

३೯. ದೊರೆಯೆ ! ಕಲಿಯುಗದಲ್ಲಿ ಪ್ರೀತಿಯಿಂದ ಉನ್ಮೀಲಿನೀ ದ್ವಾದಶಿಯದಿನ ಜಾಗರಣೆ ಮಾಡಿದವರಿಗುಂಟಾಗುವ ಫಲವನ್ನು ಹೇಳುವೆನು. ಕೇಳು.

೪೦. ಈ ಜಾಗರಣೆಯಿಂದ ಕಾಶಿಯಲ್ಲಿ ಗಂಗೆಯ ದಡದಲ್ಲಿ ಒಂದು ಸಾವಿರ ಯುಗಗಳ ವರೆಗೆ ಭೂಮಿಯಲ್ಲಿ ಒಂದು ಕಾಲಿನಿಂದ ನಿಲ್ಲುವುದರಿಂದುಂಟಾಗುವ ಫಲವು ದೊರೆಯುವುದು.

೪೧. ಸಾವಿರ ಯುಗಗಳ ಕಾಲ ಉಪವಾಸದ ಫಲವೂ ಲಭಿಸುವುದು.

೪೨. ದ್ವಾದಶೀ ಜಾಗರಣೆಯಿಂದ ಅನೇಕ ಕೋಟಿ ಯಜ್ಞಗಳಿಂದ ಹೊಂದಲಶಕ್ಯವಾದ ವೈಷ್ಣವ ಸ್ಥಾನವು ಅನಾಯಾಸವಾಗಿ ದೊರೆಯುವುದು.

೪३. ಜಾಗರಣೆಯಿಂದ ವಿಷ್ಣುವ್ರತವನ್ನು ಆಚರಿಸಿದವರು ಪರಸ್ವಾಪಹಾರ, ಪರದಾರಗಮನಗಳ ಪಾಪವನ್ನು ಹೊಂದುವರು.

ಏಕೇನೈವೋಪವಾಸೇನ ಭಾವಹೀನಾಸ್ತು ಮಾನವಾಃ ।
ನಿರ್ದಗ್ಧಾಽಖಿಲಪಾಪಾಸ್ತೇ ಪ್ರಯಾಂತಿ ಸ್ವರ್ಗಕಾನನಂ ॥ ೪೪ ॥
ಯತ್ರ ಭಾಗವತಂ ಶಾಸ್ತ್ರಂ ಯತ್ರ ಜಾಗರಣಂ ಹರೇಃ ।
ಶಾಲಿಗ್ರಾಮಶಿಲಾ ಯತ್ರ ತತ್ರ ಗಚ್ಛೇದ್ಧರಿಃ ಸ್ವಯಂ ॥ ೪೫ ॥
ನ ಪುರ್ಯ್ಯಃ ಪಾವನಾಃ ಸಪ್ತ ಕಲೌ ವೇದವಚೇ ನಹಿ ।
ಯಾದೃಶಂ ವಾಸರಂ ವಿಷ್ಣೋಃ ಪಾವನಂ ಜಾಗರಾನ್ವಿತಂ ॥ ೪೬ ॥
ಸಂಪ್ರಾಪ್ತೇ ವಾಸರೇ ವಿಷ್ಣೋರ್ಯೇ ನ ಕುರ್ವಂತಿ ಜಾಗರಂ ।
ಮಜ್ಜಂತಿ ನರಕೇ ಘೋರೇ ನರಾ ನಾರ್ಯೋ ನ ಸಂಶಯಃ ॥ ೪೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾದಶೀಜಾಗರಣಮಾಹಾತ್ಮ್ಯವರ್ಣನಂ ನಾಮ
ಅಷ್ಟಾವಿಂಶತಿತಮೋಽಧ್ಯಾಯಃ

---

೪೪. ಭಕ್ತಿಯಿಲ್ಲದ ಮಾನವರೂ ಒಂದೇ ಉಪವಾಸದಿಂದ ಭಸ್ಮವಾದ ಸಮಸ್ತ ಪಾಪಗಳುಳ್ಳವರಾಗಿ ಸ್ವರ್ಗೋದ್ಯಾನಕ್ಕೆ ಹೋಗುವರು.

೪೫. ಭಾಗವತಶಾಸ್ತ್ರ, ಹರಿದಿನ ಜಾಗರಣೆ, ಶಾಲಿಗ್ರಾಮ ಶಿಲೆಗಳಿರುವ ಸ್ಥಳಕ್ಕೆ ವಿಷ್ಣುವು ತಾನೇ ಹೋಗುವನು.

೪೬. ಕಲಿಯುಗದಲ್ಲಿ ಜಾಗರಣೆಯಿಂದ ಸಹಿತವಾದ ಹರಿದಿನದಷ್ಟು ಸಪ್ತ ಪಟ್ಟಣಗಳೂ ಪವಿತ್ರವಾಗಿರುವುದಿಲ್ಲ.

೪೭. ಹರಿದಿನದಲ್ಲಿ ಜಾಗರಣೆಗೈಯದ ನರನಾರಿಯರು ಘೋರ ನರಕದಲ್ಲಿ ಮುಳುಗುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾದಶೀಜಾಗರಣಮಾಹಾತ್ಮ್ಯವರ್ಣನವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ।

# ಏಕೋನತ್ರಿಂಶತಿತಮೋಽಧ್ಯಾಯಃ

## ಗೋಮತೀವರ್ಣನಂ

ಪ್ರಹ್ಲಾದ ಉವಾಚ :—

ಅಥಾನ್ಯಚ್ಚ ಪ್ರವಕ್ಷ್ಯಾಮಿ ಗುಹ್ಯಾದ್ಗುಹ್ಯತರಂ ಮಹತ್ ।
ದ್ವಾರಕಾಯಾಃ ಪರಂ ಪೂಜ್ಯಂ ಮಾಹಾತ್ಮ್ಯಂ ಹ್ಯುತ್ತಮೋತ್ತಮಂ ॥ ೧ ॥
ಇತಿಹಾಸಂ ಪುರಾವೃತ್ತಂ ವರ್ಣಯಿಷ್ಯೇ ಮನೋಹರಂ ।
ತೀರ್ಥಕ್ಷೇತ್ರಾದಿದೇವಾನಾಮೃಷೀಣಾಂ ಸಂಶಯಾಪಹಂ ॥ ೨ ॥
ಸೌಭಾಗ್ಯಮತುಲಂ ದೃಷ್ಟ್ವಾ ಸಿಂಹರಾಶಿಗತೇ ಗುರೌ ।
ಗೋದಾವರ್ಯಾಂ ದ್ವಿಜಶ್ರೇಷ್ಠಾ ನಾರದೋ ಭಗವತ್ಪ್ರಿಯಃ ॥ ೩ ॥
ಗೌತಮಸ್ಯಾಽಭಿತೋ ದೃಷ್ಟ್ವಾ ತ್ರೈಲೋಕ್ಯಸಂಭವಾನಿ ವೈ ।
ತೀರ್ಥಾನಿ ಸರಿತಃ ಸರ್ವಾ ವಿಸ್ಮಯಂ ಪರಮಂ ಗತಃ ॥ ೪ ॥

---

## ಕನ್ನಡದ ಅನುವಾದ

## ಗೋಮತೀವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ತರುವಾಯ ಅತಿ ರಹಸ್ಯವೂ ಅತ್ಯುತ್ತಮವೂ ಆದ ದ್ವಾರಕಾಮಾಹಾತ್ಮ್ಯವನ್ನು ಹೇಳುವೆನು.

೨. ತೀರ್ಥ, ಕ್ಷೇತ್ರ, ದೇವತೆ, ಋಷಿ ಇವರ ಸಂಶಯವನ್ನು ನಿವಾರಿಸುವ ಹಿಂದೆ ನಡೆದ ಮನೋಹರವಾದ ಕಥೆಯನ್ನು ವರ್ಣಿಸುವೆನು.

೩-೪ ದ್ವಿಜವರ್ಯರೆ ! ಬೃಹಸ್ಪತಿಯು ಸಿಂಹರಾಶಿಯನ್ನು ಹೊಂದಲು ಭಗವದ್ಭಕ್ತನಾದ ನಾರದನು ಗೋದಾವರೀ ನದಿಯ ಅತಿಶಯಸೌಂದರ್ಯವನ್ನೂ, ಗೌತಮನ ಸುತ್ತಲೂ ಮೂರು ಲೋಕದ ತೀರ್ಥಗಳನ್ನೂ, ಸಕಲನದಿಗಳನ್ನು ಕಂಡು ಬಹಳ ಆಶ್ಚರ್ಯಗೊಂಡನು.

ತತ್ರ ಕಾಶೀ ಕುರುಕ್ಷೇತ್ರಮಯೋಧ್ಯಾ ಮಥುರಾಪುರೀ ।
ಮಾಯಾ ಕಾಂಚೀ ಹ್ಯವಂತೀ ಚ ಅರಣ್ಯಾನ್ಯಾಶ್ರಮೈಃ ಸಹ ॥ ೫ ॥

ಹರಿಕ್ಷೇತ್ರಂ ಗಯಾ ಮಿಶ್ರಕ್ಷೇತ್ರಂ ಚ ಪುರುಷೋತ್ತಮಂ ।
ಪ್ರಭಾಸಾದೀನಿ ಪುಣ್ಯಾನಿ ಮುಕ್ತಿಕ್ಷೇತ್ರಾಣ್ಯಶೇಷತಃ ॥ ೬ ॥

ಜಾಹ್ನವೀ ಯಮುನಾ ರೇವಾ ತತ್ರ ಪುಣ್ಯಾಂ ಸರಸ್ವತೀ ।
ಸರಯೂರ್ಗಂಡಕೀ ತಾಪೀ ಪಯೋಷ್ಣೀ ಸರಿತಾಂ ವರಾ ॥ ೭ ॥

ಕೃಷ್ಣಾ ಭೀಮರಥೀ ಪುಣ್ಯಾ ಕಾವೇರ್ಯಾದ್ಯಾಃ ಸರಿದ್ವರಾಃ ।
ಸ್ವರ್ಗೇ ಮರ್ತ್ಯೇ ಚ ಪಾತಾಲೇ ವರ್ತಮಾನಾಃ ಸತೀರ್ಥಕಾಃ ॥ ೮ ॥

ಸ್ಥಿತಾ ಗೋದಾವರೀತೀರೇ ಸಿಂಹರಾಶಿಂ ಗತೇ ಗುರೌ ।
ತಥಾ ಚ ಪುಷ್ಕರಾದೀನಿ ಸಪ್ತಸಿಂಧುಸರಾಂಸಿ ಚ ॥ ೯ ॥

ಮೇರ್ವಾದಿಪರ್ವತಾಃ ಪುಣ್ಯಾ ದರ್ಶನಾತ್ಪಾಪನಾಶನಾಃ ।
ತೀರ್ಥರಾಜಃ ಪ್ರಯಾಗಶ್ಚ ಸರ್ವತೀರ್ಥಸಮನ್ವಿತಃ ॥ ೧೦ ॥

ವೇದೋಪವೇದಾಃ ಶಾಸ್ತ್ರಾಣಿ ಪುರಾಣಾನಿ ಚ ಸರ್ವಶಃ ।
ಸಿದ್ಧಾ ಮುನಿಗಣಾಃ ಸರ್ವೇ ದೇವರ್ಷಿಪಿತೃದೇವತಾಃ ॥ ೧೧ ॥

ಚಂದ್ರಾದಿತ್ಯಾ ಸುರಗಣಾಃ ಸಿಂಹಸ್ಥೇ ಚ ಬೃಹಸ್ಪತೌ ।
ಸ್ಥಿತಾ ಗೋದಾವರೀತೀರೇ ವರ್ಷಮೇಕಂ ಪ್ರಹರ್ಷಿತಾಃ ॥ ೧೨ ॥

---

೫–೧೨ ಬೃಹಸ್ಪತಿಯು ಸಿಂಹರಾಶಿಯನ್ನು ಹೊಂದಲು ಅಲ್ಲಿಗೆ ಕಾಶೀ ಕುರುಕ್ಷೇತ್ರ, ಅಯೋಧ್ಯಾ, ಮಥುರಾಪುರೀ, ಮಾಯಾ, ಕಾಂಚೀ, ಅವಂತೀ, ಇವುಗಳು ಅರಣ್ಯ, ಆಶ್ರಮಗಳೊಡನೆಯೂ ಸ್ವರ್ಗಭೂಲೋಕಗಳಲ್ಲಿರುವ ಹರಿಕ್ಷೇತ್ರ, ಗಯಾ, ಮಿಶ್ರಕ್ಷೇತ್ರ, ಪುರುಷೋತ್ತಮ, ಪ್ರಭಾಸಾದಿ ಪುಣ್ಯಕರವಾದ ಮುಕ್ತಿಕ್ಷೇತ್ರಗಳೂ, ಗಂಗೆ, ಯಮುನೆ, ರೇವಾ, ಸರಸ್ವತಿ, ಸರಯೂ, ಗಂಡಕೀ, ತಾಪೀ, ಪಯೋಷ್ಣೀ ಕೃಷ್ಣಾ, ಭೀಮರಥೀ, ಕಾವೇರೀ ಮೊದಲಾದ ಉತ್ತಮನದಿಗಳು ನಾನಾತೀರ್ಥಗಳೊಡನೆಯೂ, ಪುಷ್ಕರ, ಮೊದಲಾದ ಏಳು ಸಿಂಧು ಸರೋವರಗಳೂ, ದರ್ಶನದಿಂದಲೇ ಪಾಪವನ್ನಪರಿಹರಿಸುವ ಮೇರ್ವಾದಿ ಪರ್ವತಗಳೂ, ಸಕಲ ತೀರ್ಥಗಳಿಂದ ಕೂಡಿದ ಪ್ರಯಾಗವೂ, ವೇದ, ಉಪವೇದ, ಶಾಸ್ತ್ರ, ಪುರಾಣಗಳೂ, ಸಿದ್ಧರೂ, ಸಕಲ ಮುನಿಗಳೂ, ದೇವರ್ಷಿ ಪಿತೃದೇವತೆಗಳೂ, ಚಂದ್ರಾದಿತ್ಯರೂ, ಸುರರೂ ಬಂದು ಒಂದು ವರ್ಷ ಸಂತೋಷದಿಂದಿದ್ದರು.

ಯಾನಿ ಕಾನಿ ಚ ಪುಣ್ಯಾನಿ ತೀರ್ಥಕ್ಷೇತ್ರಾಣಿ ಸಂತಿ ವೈ ।
ತ್ರೈಲೋಕ್ಯೇ ತಾನಿ ಸರ್ವಾಣಿ ಗೌತಮ್ಯಾಂ ವೀಕ್ಷ್ಯ ವಿಸ್ಮಿತಾಃ ॥ ೧೩ ॥
ದೇವರ್ಷಿರ್ನಾರದಸ್ತತ್ರ ಮುನಿಭಿರ್ಮುದಿತೋಽವಸತ್ ।
ಸಿಂಹಸ್ಥಾಂತೇ ಚ ಸರ್ವಾಣಿ ಸ್ವಸ್ಥಾನಗಮನಾಯ ವೈ ॥ ೧೪ ॥
ಆಮಂತ್ರ್ಯ ಗೌತಮೀಂ ದೇವೀಂ ಸ್ಥಿತಾನಿ ಪುರತಸ್ತತಃ ।
ಸರ್ವೇಷಾಂ ಶೃಣ್ವತಾಂ ವಿಪ್ರಾ ಗೌತಮೀ ಖಿನ್ನಮಾನಸಾ ।
ತಸ್ಮಾ ದುರ್ಜನಸಂಸರ್ಗಾನ್ನಾರದಂ ದುಃಖಿತಾಽಬ್ರವೀತ್ ॥ ೧೫ ॥

ಗೌತಮ್ಯುವಾಚ :—

ಪಶ್ಯೈತಾನಿ ಸುತೀರ್ಥಾನಿ ಗಂಗಾದ್ಯಾಃ ಸರಿತೋಽಮಲಾಃ ।
ಸಾಗರಾ ಗಿರಯಃ ಪುಣ್ಯಾ ಗಯಾತ್ರಿತಯಮೇವ ಚ ॥ ೧೬ ॥
ಕ್ಷೇತ್ರಾಣಿ ಮೋಕ್ಷದಾನ್ಯಂಗ ತ್ರೈಲೋಕ್ಯಜಾನಿ ನಾರದ ।
ದೇವಾಶ್ಚ ಪಿತರಃ ಸಿದ್ಧಾ ಋಷಯೋ ಮಾನವಾದಯಃ ॥ ೧೭ ॥
ತೀರ್ಥರಾಜಃ ಪ್ರಯಾಗಶ್ಚ ಸರ್ವತೀರ್ಥಸಮನ್ವಿತಃ ।
ಏತೇಷಾಮೇವ ಸರ್ವೇಷಾಂ ಮತ್ಸಂಸರ್ಗಾನ್ಮಹಾಮುನೇ ।
ವಿಶುದ್ಧಾನಾಂ ಪ್ರಕಾಶೇನ ರಾಜತೇ ಭುವನತ್ರಯಂ ॥ ೧೮ ॥

---

೧೩—೧೫. ದೇವರ್ಷಿಯಾದ ನಾರದನು ಆ ಗೌತಮೀನದಿಯಲ್ಲಿ ತ್ರಿಭುವನದ ಪುಣ್ಯಕ್ಷೇತ್ರಗಳು ನೆಲೆಸಿರುವುದನ್ನು ಕಂಡು ಹರ್ಷಗೊಂಡ ಮುನಿಗಳೊಡನೆ ವಾಸ ಮಾಡಿದನು. ದುರ್ಜನ ಸಹವಾಸದಿಂದ ವ್ಯಥೆಗೊಂಡ ಗೌತಮಿಯು, ಸಿಂಹಮಾಸದ ಅವಸಾನದಲ್ಲಿ ತಮ್ಮ ತಮ್ಮ ಸ್ಥಾನಗಳಿಗೆ ಹೋಗುವೆವು ಎಂದು ಹೇಳಿ ವಾಸಿಸುತ್ತಿರುವ ಆ ಎಲ್ಲ ತೀರ್ಥಕ್ಷೇತ್ರಗಳು ಕೇಳುತ್ತಿರುವಾಗಲೆ ಖಿನ್ನಮನಸ್ಕಳಾಗಿ ನಾರದನನ್ನು ಕುರಿತು ಇಂತೆಂದಳು.

೧೬—೧೮ ಗೌತಮಿಯು ಹೇಳುತ್ತಾಳೆ:—ನಾರದ ! ಗಂಗಾದಿನದಿಗಳು. ಸಮುದ್ರಗಳು, ಗಿರಿಗಳು, ಮೂರುಗಯೆಗಳು, ಮೂರುಲೋಕದ ಮೋಕ್ಷವನ್ನೀಯುವ ಕ್ಷೇತ್ರಗಳು, ದೇವತೆಗಳು, ಪಿತೃಗಳು, ಸಿದ್ಧರು, ಋಷಿಗಳು, ಮನುಷ್ಯರೇ ಮೊದಲಾದವರು, ಸಕಲತೀರ್ಥಗಳೊಡಗೂಡಿದ ಪ್ರಯಾಗ, ಇವುಗಳನ್ನು ನೋಡು. ನನ್ನ ಸಂಬಂಧದಿಂದ ಪರಿಶುದ್ಧಿಗೊಂಡ ಇವುಗಳ ಪ್ರಕಾಶದಿಂದ ಮೂರುಲೋಕಗಳು ಬೆಳಗುವುವು.

ಪ್ರಯಾಂತಿ ತಾನಿ ಸರ್ವಾಣಿ ಸ್ವಂ ಸ್ವಂ ಸ್ಥಾನಂ ಪ್ರತಿ ಪ್ರಭೋ ।
ಅಧುನಾಽಹಂ ಪರಿಶ್ರಾಂತಾ ದಹ್ಯಮಾನಾ ತ್ವಹರ್ನಿಶಂ ॥ ೧೯ ॥
ದುರ್ಜನಾನಾಂ ಸುಸಂಪರ್ಕಾದ್ಭೃಶಂ ಪಾಪಾತ್ಮನಾಂ ಪ್ರಭೋ ।
ಸೌಭಾಗ್ಯಮಧುನಾ ಪ್ರಾಪ್ತಂ ಸತ್ಸಂಸರ್ಗೇಣ ನಾರದ ॥ ೨೦ ॥
ಪ್ರಯಾಂತ್ಯೇತಾನಿ ಸರ್ವಾಣಿ ಸ್ವಸ್ಥಾನಂ ಮುದಿತಾನಿ ಚ ॥ ೨೧ ॥
ಏತಾನಿ ಮತ್ಪ್ರಸಾದೇನ ಪುಣ್ಯಾನಿ ಕಥಿತಾನಿ ಚ ।
ಕಥಯ ಶ್ರಮಶಾಂತ್ಯರ್ಥಂ ದುಃಖಿತಾ ಕಿಂ ಕರೋಮ್ಯಹಂ ॥ ೨೨ ॥

ಪ್ರಹ್ಲಾದ ಉವಾಚ :—

ಗೋದಾವರ್ಯಾ ವಚಃ ಶ್ರುತ್ವಾ ಭಗವನ್ನಾರದೋ ದ್ವಿಜಾಃ ।
ಕ್ಷಣಂ ಧ್ಯಾತ್ವಾ ತು ದುಃಖಾರ್ತಃ ಪ್ರಾಹ ಸಂಶಯಮಾನಸಃ ॥ ೨೩ ॥

ನಾರದ ಉವಾಚ :—

ಅಹೋ ಅತ್ಯದ್ಭುತಂ ಹ್ಯೇತದ್ಗೌತಮ್ಯಾ ವ್ಯಸನಂ ಮಹತ್ ।
ಪಶ್ಯಂತ್ವಸಂಶಯಂ ದೇವಾಸ್ತೀರ್ಥಕ್ಷೇತ್ರಸರಿದ್ವರಾಃ ॥ ೨೪ ॥

---

೧೯–೨೦ ಅವು ಈಗ ತಮ್ಮ ತಮ್ಮ ಸ್ಥಾನಗಳಿಗೆ ತೆರಳುವುವು. ದುರ್ಜನಸಹವಾಸದಿಂದ ಬಳಲಿ ವ್ಯಥೆಪಡುತ್ತಿರುವ ನಾನು ಸತ್ಸಹವಾಸದಿಂದ ಈಗ ಸೌಭಾಗ್ಯವನ್ನು ಪಡೆದಿರುವೆನು.

೨೧– ಇವೆಲ್ಲ ಸಂತೋಷದಿಂದ ತಮ್ಮ ಸ್ಥಳಕ್ಕೆ ಹೋಗುವುವು.

೨೨. ಇವು ನನ್ನ ಅನುಗ್ರಹದಿಂದ ಪುಣ್ಯಕರಗಳೆನ್ನಿಸಿಕೊಂಡಿವೆ. ದುಃಖಿತಳಾದ ನಾನು ಆಯಾಸದ ನಿವಾರಣೆಗಾಗಿ ಏನನ್ನು ಮಾಡಲಿ ಹೇಳು.

೨೩. ಪ್ರಹ್ಲಾದನು ಹೇಳುತ್ತಾನೆ:—ದ್ವಿಜರೆ! ಪೂಜ್ಯನಾದ ನಾರದನು ಗೋದಾವರಿಯ ಮಾತನ್ನು ಕೇಳಿ ಕ್ಷಣಕಾಲ ಚಿಂತಿಸಿ ದುಃಖಿತನಾಗಿ ಸಂಶಯದಿಂದ ಇಂತೆಂದನು.

೨೪. ನಾರದನು ಹೇಳುತ್ತಾನೆ:— ಈ ಗೌತಮಿಯ ವ್ಯಸನವು ಆಶ್ಚರ್ಯಕರವಾಗಿದೆ. ದೇವತೆಗಳೆ! ತೀರ್ಥಕ್ಷೇತ್ರ, ನದಿಗಳೆ! ನೀವು ನೋಡಿರಿ.

ಸತ್ಪುಣ್ಯಾನಿ ಜಯೋ ಯುಷ್ಮಾಕಂ ಯುಷ್ಮಾಕಂ ಸಮಭೂದ್ಧ್ರುವಂ ।
ತಸ್ಯಾಃ ಪಾಪಾಗ್ನಿಶಮನಂ ಕಥಂ ಸ್ಯಾದಿತಿ ಚಿಂತ್ಯತಾಂ ॥ ೨೫ ॥

ಶ್ರೀ ಪ್ರಹ್ಲಾದ ಉವಾಚ :—

ತದಾ ಚಿಂತಯತಾಂ ತೇಷಾಂ ಸರ್ವೇಷಾಂ ಭಾವಿತಾತ್ಮನಾಂ ।
ಗೌತಮೋ ಭಗವಾಂಸ್ತತ್ರ ಸಮಾಯಾತೋ ಮುನೀಶ್ವರಾಃ ॥ ೨೬ ॥
ದೃಷ್ಟ್ವಾ ತಮೃಷಯೋ ದೇವಾ ಯಥೋಚಿತಮಪೂಜಯನ್ ।
ಜಾಹ್ನವೀ ಯಮುನಾ ಪುಣ್ಯಾ ನರ್ಮದಾ ಚ ಸರಸ್ವತೀ ॥ ೨೭ ॥
ಅನ್ಯಾಶ್ಚ ಸರ್ವಾಃ ಸರಿತಸ್ತ್ರೈಲೋಕ್ಯಮನುವರ್ತಿತಾಃ ।
ವಾರಾಣಸೀಕುರುಕ್ಷೇತ್ರಪ್ರಮುಖಾನ್ಯಾಶ್ರಮೈಃ ಸಹ ।
ಯುಗಪತ್ತಾನಿ ಸರ್ವಾಣಿ ಸಂಪೂಜ್ಯ ಮುನಿಮಬ್ರುವನ್ ॥ ೨೮ ॥
ತ್ವತ್ಪ್ರಸಾದೇನ ವೈ ತ್ರಾತಾಃ ಸಮ್ಯಕ್ಶುದ್ಧಾ ಮಹಾಮುನೇ ।
ಯದಾನೀತಾ ತ್ವಯಾ ಗಂಗಾ ಗೌತಮೀ ಭೂತಲಂ ಪ್ರತಿ ॥ ೨೯ ॥
ಕೃತಾರ್ಥಾ ಮಾನವಾಃ ಸರ್ವೇ ಸರ್ವಪಾಪವಿವರ್ಜಿತಾಃ ।
ಕಿಂ ತು ದುರ್ಜನಸಂಪರ್ಕಾತ್ಸಂತಪ್ತಾ ಗೌತಮೀ ಭೃಶಂ ॥ ೩೦ ॥
ಕಥಂ ಪಾಪೈರ್ವಿನಿರ್ಮುಕ್ತಾ ಪರಮಾನಂದಸಂಪ್ಲುತಾ ।
ಸುಪ್ರಭಾ ಜಾಯತೇ ದೇವೀ ತದ್ಗೌತಮ ವಿಚಿಂತ್ಯತಾಂ ॥ ೩೧ ॥

---

೨೫. ಆ ಗೌತಮಿಯ ಪುಣ್ಯಗಳೆಲ್ಲ ನಿಮಗುಂಟಾದುವು. ಆವಳ ಪಾಪವು ಹೇಗೆ ಶಾಂತವಾಗುವುದು ? ಆಲೋಚಿಸಿರಿ.

೨೬. ಶ್ರೀಪ್ರಹ್ಲಾದನು ಹೇಳುತ್ತಾನೆ:—ಅವರೆಲ್ಲ ಹೀಗೆ ಚಿಂತಿಸುತ್ತಿರಲು ಅಲ್ಲಿಗೆ ಪೂಜ್ಯನಾದ ಗೌತಮ ಮುನಿಯು ಬಂದನು.

೨೭–೨೮. ಆಗ ದೇವತೆಗಳು, ಗಂಗೆ, ಯಮುನೆ, ನರ್ಮದೆ, ಸರಸ್ವತೀ ಇತರ ಮೂರುಲೋಕದ ನದಿಗಳು, ಕಾಶೀ, ಕುರುಕ್ಷೇತ್ರಗಳು ಇವು ಆಶ್ರಮಗಳೊಡನೆ ಒಂದೇ ಸಾರಿ ಗೌತಮನನ್ನು ಪೂಜಿಸಿ ಹೀಗೆಂದುವು.

೨೯–೩೦ಮಹರ್ಷಿಯೆ ! ನಾವು ನಿನ್ನ ಅನುಗ್ರಹದಿಂದ ರಕ್ಷಿಸಲ್ಪಟ್ಟು ಶುದ್ಧ ರಾಗಿದ್ದೇವೆ. ನೀನು ಗೌತಮಿಯನ್ನು ಭೂಮಿಗೆ ತಂದಕಾರಣ ಮಾನವರು ಪಾಪ ಮುಕ್ತರಾಗಿ ಧನ್ಯರಾದರು. ಆದರೆ ಗೌತಮಿಯು ದುರ್ಜನ ಸಹವಾಸದಿಂದ ಅತ್ಯಂತ ವ್ಯಥೆಗೊಂಡಿದ್ದಾಳೆ.

೩೧. ಗೌತಮ ! ಈ ಗೌತಮಿಯು ಹೇಗೆ ಪಾಪಮುಕ್ತಳೂ, ಆನಂದಗೊಂಡ ವಳೂ, ಆಗಿ ಪ್ರಕಾಶಗೊಂಡಾಳು ? ಅದನ್ನು ಆಲೋಚಿಸು.

ಪ್ರಹ್ಲಾದ ಉವಾಚ :—
ಏವಮುಕ್ತೋ ಮುನಿಸ್ತ್ರೈಸ್ತು ಚಿಂತಾಕುಲಿತಮಾನಸಃ ।
ನಾರದಸ್ಯ ಮುಖಂ ವೀಕ್ಷ್ಯ ಪ್ರಹಸನ್ಗೌತಮೋಽಬ್ರವೀತ್ ॥ ೩೨ ॥
ಗೌತಮ ಉವಾಚ :—
ಸರ್ವೇಷಾಂ ಕ್ಷೇತ್ರತೀರ್ಥಾನಾಂ ಮಹಾಶುಭವಿನಾಶಿನೀ ।
ಗೌತಮೀಯಂ ಮಹಾಭಾಗಾ ಅಸ್ಯಾಸ್ತಾಪಃ ಕ್ವ ಶಾಮ್ಯತಿ ॥ ೩೩ ॥
ನಾಸ್ತಿ ಲೋಕತ್ರಯೇ ತೀರ್ಥಂ ಸ್ನಾತುಂ ಸಿಂಹಗತೇ ಗುರೌ ।
ಯದ್ವೈ ನಾಯಾತಿ ಗೌತಮ್ಯಾಂ ಕ್ಷೇತ್ರಂ ಚಾಪಿ ವಿಶುದ್ಧಯೇ ।
ಕಾಶೀ ಪ್ರಯಾಗಮುಖ್ಯಾನಿ ರಾಜಂತೇ ಯತ್ಪ್ರಸಾದತಃ ॥ ೩೪ ॥
ವದಂತು ಮುನಯಃ ಸರ್ವೇ ಕ್ಷೇತ್ರತೀರ್ಥಸಮಾಶ್ರಿತಾಃ ।
ಶುದ್ಧಂ ವಿಚಾರ್ಯ ಯತ್ಕಾರ್ಯಂ ಮಯಾಽಸ್ಮಿನ್ಪ್ರಾಪ್ತಸಂಕಟೇ ॥ ೩೫ ॥
ಪ್ರಹ್ಲಾದ ಉವಾಚ :—
ಇತ್ಯುಕ್ತ್ವಾ ಮುನಯಃ ಸರ್ವೇ ನೋಚುಃ ಕಿಂಚಿದ್ವಿಮೋಹಿತಾಃ ।
ತತೋಽಪಾಯಮವಿಜ್ಞಾಯ ಗೌತಮೀಂ ಗೌತಮೋಽಬ್ರವೀತ್ ॥ ೩೬ ॥

---

೩೨. ಪ್ರಹ್ಲಾದನು ಹೇಳುತ್ತಾನೆ:—ಇವರು ಹೀಗೆನ್ನಲು ಗೌತಮನು ಚಿಂತಾಕ್ರಾಂತನಾಗಿ ನಾರದನ ಮುಖವನ್ನು ನೋಡಿ ನಗುತ್ತ ಇಂತೆಂದನು.

೩೩. ಗೌತಮನು ಹೇಳುತ್ತಾನೆ:—ಸಮಸ್ತ ತೀರ್ಥಕ್ಷೇತ್ರಗಳ ಮಹಾಪಾಪಗಳನ್ನು ಪರಿಹರಿಸಿದ ಮಹಾತ್ಮಳಾದ ಈ ಗೌತಮಿಯ ಸಂತಾಪವು ಎಲ್ಲಿ ಶಾಂತವಾಗುವುದು ?

೩೪. ಬೃಹಸ್ಪತಿಯು ಸಿಂಹರಾಶಿಗತನಾಗಲು ಸಕಲ ತೀರ್ಥಗಳೂ ತಮ್ಮ ವಿಶುದ್ಧಿಗಾಗಿ ಗೌತಮಿಯನ್ನು ಸೇರದಿದ್ದರೆ ಮೂರುಲೋಕಗಳಲ್ಲಿ ಸ್ನಾನಮಾಡಲು ತೀರ್ಥಗಳಿರುವುದಿಲ್ಲ. ಗೌತಮಿಯ ಅನುಗ್ರಹದಿಂದಲೇ ಕಾಶೀ ಪ್ರಯಾಗ ಮೊದಲಾದುವು ವಿರಾಜಿಸುವುವು.

೩೫. ತೀರ್ಥಕ್ಷೇತ್ರಗಳನ್ನು ಆಶ್ರಯಿಸಿರುವ ಸಕಲ ಮುನಿಗಳೆ ! ನೀವು ಇದನ್ನು ಹೇಳಿರಿ ಇಂತಹ ಸಂಕಟದ ಸಂದರ್ಭದಲ್ಲಿ ನಾನು ಶುದ್ಧಿಗಾಗಿ ಏನನ್ನು ಮಾಡಬೇಕು?.

೩೬. ಪ್ರಹ್ಲಾದನು ಹೇಳುತ್ತಾನೆ:—ಗೌತಮನು ಹೀಗೆನ್ನಲು ಮುನಿಗಳೆಲ್ಲ ಮೋಹಗೊಂಡು ಏನನ್ನೂ ಹೇಳಲಿಲ್ಲ. ಗೌತಮನು ಆ ವಿಷಯದಲ್ಲಿ ಉಪಾಯವನ್ನರಿಯದೆ ಗೌತಮಿಯನ್ನು ಕುರಿತು ಇಂತೆಂದನು.

ಗೌತಮ ಉವಾಚ :—

ಆನೀತಾಸಿ ಮಯಾ ದೇವಿ ತಪಸಾಽಽರಾಧ್ಯ ಶಂಕರಂ ।
ವದಿಷ್ಯತಿ ಸ ಚೋಪಾಯಮಿತ್ಯುಕ್ತ್ವಾಽಚಿಂತಯತ್ತದಾ ॥ ೩೭ ॥
ಗೌತಮಃ ಶ್ರದ್ಧಯಾ ಭಕ್ತ್ಯಾ ಗಂಗಾಮೌಲಿಮಖಂಡಧೀಃ ।
ತದಾಽಭೂನ್ಮಹದಾಶ್ಚರ್ಯಂ ಶೃಣ್ವಂತು ಋಷಯೋಽಮಲಾಃ ॥ ೩೮ ॥
ಧ್ಯಾಯಮಾನೇ ಮಹಾದೇವೇ ಗೌತಮೇನ ಮಹಾತ್ಮನಾ ।
ಅಕಸ್ಮಾದಭವದ್ವಾಣೀ ಹರ್ಷಯಂತೀ ಜಗತ್ತ್ರಯಂ ॥ ೩೯ ॥
ನಾದಯಂತೀ ದಿಶಃ ಸರ್ವಾ ಆಬ್ರಹ್ಮಭುವನಂ ದ್ವಿಜಾಃ ।
ಅರೂಪಲಕ್ಷಣಾಕಾರಾ ವಿಷಾದಶಮನೀ ಶುಭಾ ॥ ೪೦ ॥

ದಿವ್ಯವಾಣ್ಯುವಾಚ :—

ಅಹೋ ಬತ ಮಹಾಶ್ಚರ್ಯಂ ಸರ್ವೇಷಾಂ ಸುಖದೇ ಶುಭೇ ।
ಪ್ರಸಂಗೇಽತ್ರ ಮಹಾಕ್ಷೇತ್ರೇ ಮಗ್ನಾ ದುಃಖಾರ್ಣವೇ ಬುಧಾಃ ॥ ೪೧ ॥
ಅಹೋ ಹೇ ಗೌತಮಾಚಾರ್ಯ ಋಷಯೋ ನಾರದಾದಯಃ ।
ಶೃಣ್ವಂತು ತೀರ್ಥಕ್ಷೇತ್ರಾಣಿ ಕೃಪಯಾ ಸಂವದಾಮ್ಯಹಂ ॥ ೪೨ ॥

---

೩೭–೩೮ ಗೌತಮನು ಹೇಳುತ್ತಾನೆ:—ದೇವಿ ! ನಾನು ತಪಸ್ಸಿನಿಂದ ಶಂಕರನನ್ನು ಪೂಜಿಸಿ ನಿನ್ನನ್ನು ಇಲ್ಲಿಗೆ ಕರೆತಂದಿರುವೆನು. ಅವನೇ ಈ ವಿಷಯದಲ್ಲಿ ಉಪಾಯವನ್ನು ಹೇಳುವನು ಎಂದು ಗೌತಮನು ಶ್ರದ್ಧಾಭಕ್ತಿಗಳಿಂದ ಸ್ಥಿರಮನಸ್ಸುಳ್ಳವನಾಗಿ ಗಂಗಾಧರನನ್ನು ಧ್ಯಾನಿಸಿದನು. ಪವಿತ್ರರಾದ ಮುನಿಗಳೆ ! ಆಗ ಉಂಟಾದ ಮಹಾಶ್ಚರ್ಯವನ್ನು ಕೇಳಿರಿ.

೩೯–೪೦ ಮಹಾತ್ಮನಾದ ಗೌತಮನು ಧ್ಯಾನಿಸುತ್ತಿರಲು ಬ್ರಹ್ಮಲೋಕದವರಿಗೆ ಸಕಲ ದಿಕ್ಕುಗಳನ್ನೂ ಧ್ವನಿಗೊಳಿಸುತ್ತಿರುವುದೂ, ರೂಪ, ಲಕ್ಷಣ, ಆಕೃತಿಗಳಿಲ್ಲದಿರುವುದೂ, ವ್ಯಸನವನ್ನು ಪರಿಹರಿಸುವುದೂ, ಮಂಗಳಕರವೂ ಆದ ದಿವ್ಯ ವಾಣಿಯು ಆಕಸ್ಮಾತ್ತಾಗಿ ಮೂರುಲೋಕಗಳನ್ನು ಸಂತೋಷಗೊಳಿಸುತ್ತ ಉಂಟಾಯಿತು.

೪೧. ದಿವ್ಯವಾಣಿಯು ಹೇಳುತ್ತದೆ:—ಪ್ರಾಜ್ಞರೆ ! ಸಕಲ ಜನರಿಗೂ ಸುಖವನ್ನೀಯುವ ಈ ಶುಭ ಮಹಾಕ್ಷೇತ್ರದಲ್ಲಿ ನೀವು ದುಃಖಸಮುದ್ರದಲ್ಲಿ ಮಗ್ನರಾಗಿದ್ದೀರಿ. ಇದೇನಾಶ್ಚರ್ಯ !

೪೨. ಗೌತಮ ! ನಾರದಮಹರ್ಷಿಗಳೆ ! ತೀರ್ಥಕ್ಷೇತ್ರಗಳೆ ! ಕೇಳಿ ನಾನು ದಯೆಯಿಂದ ಹೇಳುತ್ತಿರುವೆನು.

ಪಶ್ಚಿಮಸ್ಯ ಸಮುದ್ರಸ್ಯ ತೀರಮಾಶ್ರಿತ್ಯ ವರ್ತತೇ ।
ಅಸ್ಮಾಚ್ಚ ದಿಶಿ ವಾಯುವ್ಯಾಂ ದ್ವಾರಕಾಕ್ಷೇತ್ರಮುತ್ತಮಮ್ ॥ ೪೩ ॥
ಯತ್ರಾಽಽಸ್ತೇ ಗೋಮತೀ ಪುಣ್ಯಾ ಸಾಗರೇಣ ಸಮನ್ವಿತಾ ।
ಪಶ್ಚಿಮಾಭಿಮುಖೋ ಯತ್ರ ಮಹಾವಿಷ್ಣುಃ ಸದಾ ಸ್ಥಿತಃ ॥ ೪೪ ॥
ಅನೇಕಪಾಪರಾಶೀನಾಮುಗ್ರಾಣಾಮಪಿ ಸರ್ವದಾ ।
ದಾಹಸ್ಥಾನಂ ಸಮಾಖ್ಯಾತಮಿಂಧನಾನಾಂ ಯಥಾಽನಲಃ ॥ ೪೫ ॥
ದೇವವಿಪ್ರದ್ರುಹೋ ಯತ್ರ ದಗ್ಧ್ವಾ ಪಾತಕಮದ್ಭುತಂ ।
ಲೋಕತ್ರಯವಧಾಜ್ಜಾತಂ ವಿರಾಜಂತೇಽರ್ಕವತ್ಸದಾ ॥ ೪೬ ॥
ತದ್ಗಮ್ಯತಾಂ ಮಹಾಭಾಗಾ ಗೋಮತೀಮಘದಾಹಕಾಂ ।
ಗೋದಾವರೀಂ ಪುರಸ್ಕೃತ್ಯ ಕ್ಷೇತ್ರತೀರ್ಥಸಮನ್ವಿತಾಂ ॥ ೪೭ ॥
ಪ್ರಾಪ್ಯ ದ್ವಾರವತೀಂ ಪುಣ್ಯಾಂ ಮತ್ಪ್ರಸಾದಾದ್ದ್ವಿಜೋತ್ತಮಾಃ ।
ಪ್ರಭಾವಾದ್ದ್ವಾರಕಾಯಾಶ್ಚ ಸತ್ಯಮಾವಿರ್ಭವಿಷ್ಯತಿ ॥ ೪೮ ॥
ಪ್ರಹ್ಲಾದ ಉವಾಚ :—
ಇತ್ಯುಕ್ತೇ ಸತಿ ತೇ ಸರ್ವೇ ಹರ್ಷನಿರ್ಭರಮಾನಸಾಃ ।
ಶ್ರುತ್ವಾ ಸರ್ವೋತ್ತಮಂ ಕ್ಷೇತ್ರಂ ಜಗರ್ಜುರ್ಹರಿನಾಮಭಿಃ ॥ ೪೯ ॥

---

೪೩. ಇಲ್ಲಿಂದ ವಾಯುವ್ಯದಿಕ್ಕಿನಲ್ಲಿ ಪಶ್ಚಿಮ ಸಮುದ್ರದಡದಲ್ಲಿ ಉತ್ತಮವಾದ ದ್ವಾರಕಾಕ್ಷೇತ್ರವಿರುವುದು.

೪೪. ಅಲ್ಲಿ ಪುಣ್ಯಕರವಾದ ಗೋಮತೀ ನದಿಯು ಸಮುದ್ರದೊಡನೆ ಸೇರಿರುವುದು. ಮಹಾವಿಷ್ಣುವು ಪಶ್ಚಿಮಾಭಿಮುಖವಾಗಿ ಯಾವಾಗಲೂ ಇರುವನು.

೪೫. ಆಕ್ಷೇತ್ರವು ಕಠಿನವಾದ ಅನೇಕಪಾಪರಾಶಿಗಳಿಗೂ ಕಟ್ಟಿಗೆಗೆ ಬೆಂಕಿಯಂತೆ ಸುಡುವ ಸ್ಥಳವೆಂದು ಪ್ರಸಿದ್ಧವಾಗಿದೆ.

೪೬. ಅಲ್ಲಿ ವಿಷ್ಣುವು ಮೂರುಲೋಕಗಳ ವಧೆಯಿಂದುಂಟಾದ ಅದ್ಭುತಪಾಪವನ್ನಪಹರಿಸಿಕೊಂಡು ಸೂರ್ಯನಂತೆ ವಿರಾಜಿಸುತ್ತಾನೆ.

೪೭. ಮಹಾಭಾಗ್ಯಶಾಲಿಗಳೆ! ಆದ್ದರಿಂದ ಪಾಪವನ್ನ ಪರಿಹರಿಸುವ ಗೋಮತಿಗೆ ಸಮಸ್ತತೀರ್ಥಗಳಿಂದ ಕೂಡಿರುವ ಗೋದಾವರೀ ನದಿಯುನ್ನು ಮುಂದಿರಿಸಿಕೊಂಡು ಹೋಗಿರಿ.

೪೮. ದ್ವಿಜೋತ್ತಮರೆ! ನೀವು ನನ್ನ ಅನುಗ್ರಹದಿಂದ ಪುಣ್ಯಕರವಾದ ದ್ವಾರಕೆಯನ್ನು ಹೊಂದಲು ದ್ವಾರಕೆಯ ಪ್ರಭಾವದಿಂದ ನಿಜವಾಗಿಯೂ ಗೋಮತಿಯು ಉದ್ಭವಿಸುವುದು.

೪೯. ಪ್ರಹ್ಲಾದನು ಹೇಳುತ್ತಾನೆ:—ಆ ದಿವ್ಯವಾಣಿಯು ಹೀಗೆ ಹೇಳಲು ಅವರೆಲ್ಲ ಆ ಸರ್ವೋತ್ತಮ ಕ್ಷೇತ್ರವನ್ನು ಕೇಳಿ ಹರ್ಷಗೊಂಡು ಹರಿನಾಮಗಳನ್ನು ಉಚ್ಚರಿಸುತ್ತಾ ಗರ್ಜಿಸಿದರು.

ಜಿತಂ ಭೋ ಜಿತಮಸ್ಮಾಭಿರ್ಧನ್ಯಾ ಧನ್ಯತಮಾ ವಯಂ ।
ದೈವಾದಪಗತೋ ಮೋಹೋ ಜ್ಞಾತಂ ತೀರ್ಥೋತ್ತಮೋತ್ತಮಂ । ೫೦ ॥
ತದಾ ಸರ್ವಾಣಿ ತೀರ್ಥಾನಿ ಕ್ಷೇತ್ರಾರಣ್ಯಾಶ್ರಮೈಃ ಸಹ ।
ವಾರಾಣಸೀಪ್ರಯಾಗಾದಿಸರಾಂಸಿ ಸಿಂಧವೋ ನಗಾಃ ॥ ೫೧ ॥
ಗಯಾ ಚ ದೇವಖಾತಾನಿ ಪಿತರೋ ದೇವಮಾನವಾಃ ।
ಶ್ರುತ್ವಾ ಪ್ರಮುದಿತಾ ವಾಚಂ ಪ್ರೋಚುರ್ಜಯಜಯೇತಿ ಚ ॥ ೫೨ ॥
ಅಹೋ ಸರ್ವೋತ್ತಮಂ ಕ್ಷೇತ್ರಂ ಸರ್ವೇಷಾಂ ನೋಽಘನಾಶನಂ ।
ರಾಜಾನಂ ತೀರ್ಥರಾಜಾನಾಂ ದ್ವಾರಕಾಂ ಶಿರಸಾ ನುಮಃ ॥ ೫೩ ॥

ಶ್ರೀಪ್ರಹ್ಲಾದ ಉವಾಚ :—

ಶ್ರುತ್ವಾ ಸರ್ವೋತ್ತಮಂ ಕ್ಷೇತ್ರಂ ತೀರ್ಥಂ ಸರ್ವೋತ್ತಮೋತ್ತಮಂ ।
ದೇವೋತ್ತಮೋತ್ತಮಂ ದೇವಂ ಶ್ರೀಕೃಷ್ಣಂ ಕ್ಲೇಶನಾಶನಂ ॥ ೫೪ ॥
ಉತ್ಕಂಠಾ ಹ್ಯಭವತ್ತೇಷಾಂ ತೀರ್ಥಾದೀನಾಂ ಹ್ಯನುತ್ತಮಾ ।
ಪ್ರೋಚುರನ್ಯೋನ್ಯತೋ ವಾಚಂ ಸರ್ವಾಣಿ ಯುಗಪತ್ತದಾ ॥ ೫೫ ॥

ಋಷಿತೀರ್ಥದೇವಾ ಊಚುಃ :—

ಕದಾ ದ್ರಕ್ಷ್ಯಾಮಹೇ ಪುಣ್ಯಾಂ ದ್ವಾರಕಾಂ ಕೃಷ್ಣಪಾಲಿತಾಂ ।
ಶ್ರೀಕೃಷ್ಣದೇವಮೂರ್ತಿಂ ಚ ಕೃಷ್ಣವಕ್ತ್ರಂ ಸುಶೋಭಿತಂ ॥ ೫೬ ॥

---

೫೦. ನಾವು ಜಯಶೀಲರಾದೆವು. ನಾವು ಧನ್ಯರಾದೆವು, ಅದೃಷ್ಟವಶದಿಂದ ನಮ್ಮ ಅಜ್ಞಾನವು ತೊಲಗಿತು. ಉತ್ತಮೋತ್ತಮವಾದ ತೀರ್ಥವನ್ನು ಅರಿತೆವು.

೫೧–೫೨ ಆಗ ಕ್ಷೇತ್ರ, ಅರಣ್ಯ, ಆಶ್ರಮಗಳಿಂದಕೂಡಿದ ಸಕಲ ತೀರ್ಥಗಳೂ ಕಾಶೀ, ಪ್ರಯಾಗ ಮೊದಲಾದ ಸರಸ್ಸುಗಳೂ, ನದಿಗಳೂ, ಪರ್ವತಗಳೂ, ಗಯೆ, ದೇವನಿರ್ಮಿತ ತಡಾಗಗಳೂ, ಪಿತೃದೇವ ಮಾನವರೂ ಈ ಮಾತನ್ನು ಕೇಳಿ ಸಂತೋಷದಿಂದ ಜಯ ಜಯ ಎಂದು ಕೂಗಿದರು.

೫೩. ನಮ್ಮ ಸಕಲ ಪಾಪಗಳನ್ನು ಪರಿಹರಿಸಿದ ಉತ್ತಮಕ್ಷೇತ್ರವಾದ ದ್ವಾರಕೆಯನ್ನು ತಲೆಬಾಗಿ ನಮಿಸುವೆವು.

೫೪–೫೫ ಆ ತೀರ್ಥ ಮೊದಲಾದುವುಗಳಿಗೆ ಸರ್ವೋತ್ತಮವಾದ ಆ ದ್ವಾರಕಾ ಕ್ಷೇತ್ರವನ್ನೂ, ದುಃಖವನ್ನು ನಿವಾರಿಸುವ ದೇವೋತ್ತಮನಾದ ಶ್ರೀಕೃಷ್ಣದೇವನನ್ನೂ ಕೇಳಿ ಅತಿಶಯವಾದ ಔತ್ಸುಕ್ಯವುಂಟಾಯಿತು. ಅವುಗಳೆಲ್ಲ ಪರಸ್ಪರವಾಗಿ ಒಂದೇ ಸಲ ಹೀಗೆ ಹೇಳಿದುವು.

೫೬. ಋಷಿತೀರ್ಥದೇವತೆಗಳು ಹೇಳುತ್ತಾರೆ:—ಪುಣ್ಯಕರವಾದ ಕೃಷ್ಣನು ಪಾಲಿಸಿದ ದ್ವಾರಕೆಯನ್ನೂ, ಶ್ರೀಕೃಷ್ಣನನ್ನೂ, ಅವನ ಸುಂದರವದನವನ್ನೂ ಯಾವಾಗ ನೋಡುವೆವು.

ಕದಾ ನು ಗೋಮತೀಸ್ನಾನಮಸ್ಮಾಕಂ ತು ಭವಿಷ್ಯತಿ ।
ಚಕ್ರತೀರ್ಥೇ ಕದಾ ಸ್ನಾತ್ವಾ ಕೃಷ್ಣದೇವಸ್ಯ ಮಂದಿರಂ ।
ದ್ರಕ್ಷ್ಯಾಮಃ ಸುಮಹಾಪುಣ್ಯಂ ಮುಕ್ತಿದ್ವಾರಮಪಾವೃತಂ ॥ ೫೭ ॥
ದುರ್ಲಭೋ ದ್ವಾರಕಾವಾಸೋ ದುರ್ಲಭಂ ಕೃಷ್ಣದರ್ಶನಂ ।
ದುರ್ಲಭಂ ಗೋಮತೀಸ್ನಾನಂ ರುಕ್ಮಿಣೀದರ್ಶನಂ ದ್ವಿಜಾಃ ॥ ೫೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾಗಮನೋತ್ಸುಕತಾಪೂರ್ವಕಗೋಮತೀವರ್ಣನಂನಾಮ
ಏಕೋನತ್ರಿಂಶತಿತಮೋಽಧ್ಯಾಯಃ

೫೭. ಯಾವಾಗ ನಮಗೆ ಗೋಮತೀ ಸ್ನಾನವು ಲಭಿಸುವುದು ? ಯಾವಾಗ ಚಕ್ರತೀರ್ಥದಲ್ಲಿ ಮಿಂದು ಪುಣ್ಯಕರವೂ ತೆರೆದ ಮುಕ್ತಿದ್ವಾರವೂ ಆದ ಕೃಷ್ಣಮಂದಿರವನ್ನು ನೋಡುವೆವು ?

೫೮. ದ್ವಿಜರೆ ! ದ್ವಾರಕಾವಾಸವೂ, ಕೃಷ್ಣದರ್ಶನವೂ, ಗೋಮತೀಸ್ನಾನವೂ, ರುಕ್ಮಿಣೀ ದರ್ಶನವೂ ದುರ್ಲಭವಾದುವು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾರಕಾಗಮನೋತ್ಸುಕತಾಪೂರ್ವಕಗೋಮತೀವರ್ಣನವೆಂಬ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ತ್ರಿಂಶತ್ತಮೋಽಧ್ಯಾಯಃ

ದ್ವಾರಕಾಂ ಪ್ರತಿಗೋದಾವರ್ಯಾದಿತೀರ್ಥಗಮನೋತ್ಸವಯಾತ್ರಾದಿವರ್ಣನಂ

ಶ್ರೀಪ್ರಹ್ಲಾದ ಉವಾಚ :—

ತದಾ ತೇಷಾಂ ಸುತೀರ್ಥಾನಾಂ ಕ್ಷೇತ್ರಾಣಾಮಭವನ್ಮುದಃ ।
ಗಂತುಂ ದ್ವಾರವತೀಂ ಪುಣ್ಯಾಂ ಸರ್ವೇಷಾಮಪಿ ಸರ್ವಶಃ ॥ ೧ ॥
ದ್ವಾರಕಾಗಮನೇ ದೃಷ್ಟ್ವಾ ತಥಾ ನಾರದಗೌತಮೌ ।
ಮಹೋತ್ಸವೋ ಮಹಾಂಸ್ತತ್ರ ಭವಿಷ್ಯತಿ ಮನೋಹರಃ ॥ ೨ ॥
ತೀರ್ಥಾನಾಂ ಕೃಷ್ಣಯಾತ್ರಾಯಾಂ ಗಂತವ್ಯಮಿತ್ಯವೋಚತುಃ ।
ಅಥ ತೇ ಹ್ಯೃಷಯೋ ದೇವಾಃ ಸರ್ವತೀರ್ಥಸಮನ್ವಿತಾಃ ॥ ೩ ॥
ಗೌತಮೀಂ ತು ಪುರಸ್ಕೃತ್ಯ ಯಯುರ್ದ್ವಾರವತೀಂ ಮುದಾ ।
ತದಾ ಸರ್ವಾಣಿ ತೀರ್ಥಾನಿ ಕ್ಷೇತ್ರಾರಣ್ಯಾನಿ ಕೃತ್ಸ್ನಶಃ ।
ದ್ವಾರಕಾಗಮನಂ ಚಕ್ರುಃ ಸಾನಂದಾ ಋಷಯಃ ಸುರಾಃ ॥ ೪ ॥
ಶ್ರದ್ಧಯಾ ಪರಯಾ ಭಕ್ತ್ಯಾ ಕೃಷ್ಣದರ್ಶನಲಾಲಸಾಃ ।
ವೀಣಾನಿನಾದತತ್ತ್ವಜ್ಞಂ ನಾರದಂ ಪಥಿ ತೇಽಬ್ರುವನ್ ॥ ೫ ॥

---

### ಕನ್ನಡದ ಅನುವಾದ

ದ್ವಾರಕಾಂ ಪ್ರತಿಗೋದಾವರ್ಯಾದಿತೀರ್ಥಗಮನೋತ್ಸವಯಾತ್ರಾದಿವರ್ಣನ

೧. ಶ್ರೀಪ್ರಹ್ಲಾದನು ಹೇಳುತ್ತಾನೆ :—ಆಗ ಆ ಸಕಲ ತೀರ್ಥಕ್ಷೇತ್ರಗಳಿಗೆ ಪುಣ್ಯಕರವಾದ ದ್ವಾರವತಿಗೆ ಹೋಗಲೋಸುಗ ಸಂತೋಷವುಂಟಾಯಿತು.

೨–೪. ನಾರದ ಗೌತಮರು ಅದನ್ನು ಕಂಡು ತೀರ್ಥಗಳ ಕೃಷ್ಣಯಾತ್ರೆಯಲ್ಲಿ ಮನೋಹರವಾದ ಮಹೋತ್ಸವವುಂಟಾಗುವುದು. ಆದಕಾರಣ ನಾವೂ ಹೋಗಬೇಕೆಂದರು. ಬಳಿಕ ಆ ಋಷಿ, ದೇವತೆಗಳು ಸಕಲ ತೀರ್ಥಗಳೊಡನೆ ಗೌತಮಿಯನ್ನು ಮುಂದಿರಿಸಿಕೊಂಡು ದ್ವಾರವತಿಗೆ ಸಂತೋಷದಿಂದ ಹೋದರು.

೫. ಅತಿಶಯ ಶ್ರದ್ಧಾಭಕ್ತಿಯಿಂದ ಶ್ರೀಕೃಷ್ಣನನ್ನು ನೋಡಲುತ್ಸುಕರಾದ ಅವರು ದಾರಿಯಲ್ಲಿ ವೀಣಾಧ್ವನಿ ತತ್ತ್ವವನ್ನರಿತ ನಾರದನನ್ನು ಕುರಿತು ಹೀಗೆಂದರು.

ಋಷಯ ಊಚು :—

ರಾಶಯಃ ಪುಣ್ಯಪುಂಜಾನಾಂ ಕೃತಾ ವೈ ತಪಸಾಂ ತಥಾ ।
ಯಜ್ಞದಾನವ್ರತಾನಾಂ ಚ ತೀರ್ಥಾನಾಂ ಮಹತಾಂ ಭುವಿ ॥ ೬ ॥
ಸಂಪ್ರಾಪ್ತಸ್ತತ್ಪ್ರಸಾದೋಽಯಂ ಯದ್ದ್ರಕ್ಷ್ಯಾಮಃ ಕುಶಸ್ಥಲೀಂ ।
ಪೃಚ್ಛಾಮಹೇಽಧುನಾ ತ್ವಾಂ ವೈ ಯೋಗಿನಾಂ ಪರಮಂ ಗುರುಂ ॥ ೭ ॥
ದ್ವಾರಕಾಯಾಸ್ತು ಯಾತ್ರಾಯಾಂ ಕೋ ವಿಧಿಃ ಸಂಪ್ರಕೀರ್ತಿತಃ ।
ನಿಯಮಃ ಕೋಽತ್ರ ಕರ್ತವ್ಯೋ ವರ್ಜನೀಯಂ ಚ ಕಿಂ ಮುನೇ ॥ ೮ ॥
ಶ್ರೋತವ್ಯಂ ಕೀರ್ತಿತವ್ಯಂ ಚ ಸ್ಮರ್ತವ್ಯಂ ಕಿಂ ಚ ವೈ ಪಥಿ ।
ಉತ್ಸವಾಶ್ಚಾತ್ರ ಕೇ ಪ್ರೋಕ್ತಾ ದ್ವಾರಕಾಯಾಶ್ಚ ತತ್ಪಥಿ ॥ ೯ ॥
ಏಕೈಕಶ್ಚ ಮಹಾಭಾಗ ಭಕ್ತಾನಂದವಿವರ್ಧನಂ ।
ಏತತ್ಸರ್ವಂ ಮಹಾಭಾಗ ಕೃಪಯಾ ಸಂಪ್ರಕೀರ್ತ್ಯತಾಂ ॥ ೧೦ ॥

ಶ್ರೀನಾರದ ಉವಾಚ :—

ಕೃತಾಭ್ಯಂಗಸ್ತು ಪೂರ್ವೇದ್ಯುಃ ಸಂಪೂಜ್ಯ ಶ್ರದ್ಧಯಾ ಹರಿಂ ।
ಭೋಜಯೇದ್ವೈಷ್ಣವಾನ್ವಿಪ್ರಾನ್ಸ್ವಶಕ್ತ್ಯಾ ಸಂಪ್ರಹರ್ಷಿತಃ ॥ ೧೧ ॥

---

೬. ಋಷಿಗಳು ಹೇಳುತ್ತಾರೆ :—ಪುಣ್ಯಸಮೂಹ, ತಪಸ್ಸು, ಯಜ್ಞ, ದಾನ, ವ್ರತ, ಮಹಾತೀರ್ಥಗಳು ಭೂಮಿಯಲ್ಲಿ ನಿರ್ಮಿಸಲ್ಪಟ್ಟಿವೆ.

೭. ಅವುಗಳ ಅನುಗ್ರಹವನ್ನು ನಾವು ಪಡೆದಿದ್ದೇವೆ. ಆದರಿಂದಲೇ ಕುಶಸ್ಥಲಿಯನ್ನು ನೋಡುವೆವು. ಈಗ ಯೋಗಿಗಳಿಗೆ ಪರಮ ಗುರುವಾದ ನಿನ್ನನ್ನು ಕೇಳುತ್ತೇವೆ.

೮. ಮುನಿಯೆ ! ದ್ವಾರಕಾಯಾತ್ರೆಯ ವಿಧಿ ಯಾವುದು ? ಯಾವ ನಿಯಮವನ್ನು ಮಾಡಬೇಕು ? ಏನನ್ನು ಬಿಡಬೇಕು ?

೯. ದಾರಿಯಲ್ಲಿ ಕೇಳತಕ್ಕುದೂ, ಹೇಳತಕ್ಕುದೂ, ಸ್ಮರಿಸತಕ್ಕುದೂ ಯಾವುವು? ಯಾವ ಉತ್ಸವವನ್ನು ಆಚರಿಸಬೇಕು?

೧೦. ಭಾಗ್ಯಶಾಲಿಯೆ ! ಭಕ್ತರಿಗೆ ಆನಂದವನ್ನು ಹೆಚ್ಚಿಸುವ ಇವುಗಳನ್ನೆಲ್ಲ ಒಂದೊಂದಾಗಿ ದಯೆಯಿಂದ ಹೇಳು.

೧೧. ಶ್ರೀ ನಾರದನು ಹೇಳುತ್ತಾನೆ :—ಹಿಂದಿನ ದಿನ ಅಭ್ಯಂಜನ ಮಾಡಿಕೊಂಡು ಶ್ರದ್ಧೆಯಿಂದ ಹರಿಯನ್ನು ಪೂಜಿಸಿ ವೈಷ್ಣವ ಬ್ರಾಹ್ಮಣರನ್ನು ಶಕ್ತ್ಯನುಸಾರ ಸಂತೋಷದಿಂದ ಭೋಜನ ಮಾಡಿಸಬೇಕು

ಅನುಜ್ಞಾತೋ ಮಹಾವಿಷ್ಣೋಃ ಪ್ರಸಾದಮುಪಯುಜ್ಯ ವೈ ।
ಶಯೀತ ಭುವಿ ಸುಪ್ರೀತೋ ದ್ವಾರಕಾಂ ಕೃಷ್ಣಮಾನಸಃ ॥ ೧೨ ॥
ಶ್ವೋಭೂತೇ ತು ಶುಚಿಃ ಸ್ನಾತಃ ಸಂಪೂಜ್ಯ ಜಗದೀಶ್ವರಂ ।
ಪ್ರದಕ್ಷಿಣಂ ನಮಸ್ಕೃತ್ಯ ಮಹಾವಿಷ್ಣೋರನುಜ್ಞಯಾ ।
ಸ ಪೃಷ್ಟ್ವಾ ಕುಲವೃದ್ಧಾಂಶ್ಚ ಬ್ರಾಹ್ಮಣಾನ್ವೈಷ್ಣವಾನ್ಪ್ರಿಯಾನ್ ॥ ೧೩ ॥
ತತಸ್ತು ತದನುಜ್ಞಾತೋ ಗೀತವಾದಿತ್ರಸಂಸ್ತವೈಃ ।
ಯಾತ್ರಾರಂಭಂ ಪ್ರಕುರ್ವೀತ ದ್ವಾರಕಾಯಾಂ ಪ್ರಹರ್ಷಿತಃ ॥ ೧೪ ॥
ದ್ವಾರಕಾಂ ಗಚ್ಛಮಾನಸ್ತು ಶಾಂತೋ ದಾಂತಃ ಶುಚಿಃ ಸದಾ ।
ಬ್ರಹ್ಮಚರ್ಯಮಧಃಶಯ್ಯಾಂ ಕುರ್ವೀತ ನಿಯತೇಂದ್ರಿಯಃ ॥ ೧೫ ॥
ಸಹಸ್ರನಾಮಪಠನಂ ಪುರಾಣಪಠನಂ ತಥಾ ।
ಕರ್ತವ್ಯಂ ಸಕೃಪಂ ಚಿತ್ತಂ ಸತಾಂ ಶುಶ್ರೂಷಣಂ ತಥಾ ॥ ೧೬ ॥
ಅನ್ನದಾನಾದಿಕಂ ಸರ್ವಂ ವಿಭವೇ ಸತಿ ಮಾನವಃ ।
ಅಪಿ ಸ್ವಲ್ಪಂ ಸ್ವಶಕ್ತ್ಯಾ ವೈ ಕೃತಂ ಕೋಟಿಗುಣಂ ಭವೇತ್ ॥ ೧೭ ॥

---

೧೨. ಆ ಬ್ರಾಹ್ಮಣರ ಅನುಜ್ಞೆಯಿಂದ ವಿಷ್ಣುವಿನ ಪ್ರಸಾದವನ್ನು ಉಪಯೋಗಿಸಿ ಸಂತೋಷದಿಂದ ದ್ವಾರಕೆ, ಕೃಷ್ಣ ಇವರುಗಳಲ್ಲಿ ಮನಸ್ಸನ್ನಿಟ್ಟು ನೆಲದಮೇಲೆ ಮಲಗಬೇಕು.

೧೩–೧೪. ಬೆಳಗಾಗಲು ಮಿಂದು ಶುದ್ಧನಾಗಿ ಕೃಷ್ಣನನ್ನು ಪೂಜಿಸಿ ಪ್ರದಕ್ಷಿಣ ನಮಸ್ಕಾರ ಮಾಡಿ ವಿಷ್ಣುವಿನ ಅನುಜ್ಞೆಯಿಂದ ಕುಲವೃದ್ಧರಾದ ವೈಷ್ಣವ ಬ್ರಾಹ್ಮಣರ ಅಪ್ಪಣೆಯನ್ನು ತೆಗೆದುಕೊಂಡು ಸಂತೋಷದಿಂದ ಸಂಗೀತ ವಾದ್ಯ, ಸ್ತೋತ್ರಗಳೊಡನೆ ದ್ವಾರಕಾಯಾತ್ರೆಯನ್ನು ಆರಂಭಿಸಬೇಕು.

೧೫. ದ್ವಾರಕೆಗೆ ಹೋಗುತ್ತ ಶಾಂತನೂ, ದಾಂತನೂ, ಶುದ್ಧನೂ, ಜಿತೇಂದ್ರಿಯನೂ ಆಗಿ ಬ್ರಹ್ಮಚರ್ಯೆಯಿಂದ ನೆಲದಮೇಲೆ ಮಲಗಬೇಕು.

೧೬. ದಯಾರ್ದ್ರಮಾನಸನಾಗಿ ಸಹಸ್ರನಾಮ, ಪುರಾಣಗಳ ಪಠನ, ಸಜ್ಜನರ ಸೇವೆ ಇವುಗಳನ್ನು ಮಾಡಬೇಕು.

೧೭. ಮನುಷ್ಯನು ಐಶ್ವರ್ಯವಿದ್ದರೆ ಶಕ್ತ್ಯನುಸಾರ ಅನ್ನದಾನಾದಿಗಳನ್ನು ಮಾಡಿದರೆ ಅವೆಲ್ಲ ಸ್ವಲ್ಪವಾದರೂ ಕೋಟಿಯಷ್ಟು ಹೆಚ್ಚಾಗುವುದು.

ಪಥಿ ಕೃಷ್ಣಸ್ಯ ಯೋ ಭಕ್ತ್ಯಾ ಗ್ರಾಸಮೇಕಂ ಪ್ರಯಚ್ಛತಿ ।
ದ್ವೀಪಾಂತಾ ತೇನ ದತ್ತಾ ಭೂಃ ಪುಣ್ಯಸ್ಯಾಂತೋ ನ ವಿದ್ಯತೇ ॥ ೧೮ ॥
ಕಿಂ ಪುನರ್ದ್ವಾರಕಾಕ್ಷೇತ್ರೇ ಕೃಷ್ಣಸ್ಯ ಚ ಸಮೀಪತಃ ।
ಕಲಾವೇಕೈಕಸಿಕ್ಥೇ ಚ ರಾಜಸೂಯಾಯುತಂ ಫಲಂ ॥ ೧೯ ॥
ಗಯಾಶ್ರಾದ್ಧಸಹಸ್ರಾಣಿ ಕೃತಾನಿ ಶತಸಂಖ್ಯಯಾ ।
ಅನ್ನದಾನಂ ಕೃತಂ ಯೈಸ್ತು ದ್ವಾರಕಾಪಥಿ ಮಾನವೈಃ ॥ ೨೦ ॥
ಔಷಧಂ ಚಾನ್ನಪಾನೀಯಂ ಪಾದುಕೇ ಕಂಬಲಂ ತಥಾ ।
ವಾಸಾಂಸ್ಯುಪಾನಹೌ ಚೈವ ವಿತ್ತಂ ಚ ವಿಭವೇ ಸತಿ ।
ವರ್ಜಯೇತ್ಸಂಕರಂ ವಿದ್ವಾನ್ವೃಥಾಲಾಪಾಂಸ್ತಥೈವ ಚ ॥ ೨೧ ॥
ಪರನಿಂದಾಂ ಚ ಪೈಶುನ್ಯಂ ಪರಸ್ಯ ಪರಿವಂಚನಂ ।
ಪರಾನ್ನಂ ಪರಪಾಕಂ ಚ ಸತಿ ವಿತ್ತೇ ತ್ಯಜೇದ್ಬುಧಃ ॥ ೨೨ ॥

---

೧೮. ಕೃಷ್ಣನ ಯಾತ್ರೆಯಲ್ಲಿ ದಾರಿಯಲ್ಲಿ ಹೋಗುತ್ತಿರುವಾಗ ಒಂದು ಗ್ರಾಸವನ್ನು ದಾನಮಾಡಿದರೂ ಅದರಿಂದ ದ್ವೀಪಾಂತವಾದ ಭೂಮಿಯು ದಾನಮಾಡಿದಂತಾಗುವುದು. ನಿರವಧಿಯಾದ ಪುಣ್ಯವೂ ದೊರೆಯುವುದು.

೧೯. ಕಲಿಯುಗದಲ್ಲಿ ದ್ವಾರಕಾಕ್ಷೇತ್ರದಲ್ಲಿ ಕೃಷ್ಣನ ಹತ್ತಿರ ದಾನಮಾಡಿದ ಒಂದೊಂದು ಅಗುಳಿನಿಂದಲೂ ಹತ್ತುಸಾವಿರ ರಾಜಸೂಯಯಾಗದ ಫಲವು ದೊರೆಯುವುದು.

೨೦. ಮಾನವರು ದ್ವಾರಕೆಯಲ್ಲಿ ಅನ್ನದಾನವನ್ನು ಮಾಡಿದರೆ ಸಾವಿರಾರು ಗಯಾಶ್ರಾದ್ಧದ ಫಲವು ದೊರೆಯುವುದು.

೨೧–೨೨. ದಾರಿಯಲ್ಲಿ ಔಷಧ, ಅನ್ನ, ನೀರು, ಪಾದುಕೆ, ಕಂಬಳಿ, ಬಟ್ಟೆ, ಪಾದರಕ್ಷೆ, ದ್ರವ್ಯವಿದ್ದರೆ ದ್ರವ್ಯಗಳನ್ನು ದಾನಮಾಡಬೇಕು. ಚಿಂತೆ, ಅಶುದ್ಧರ ಸಹವಾಸ, ನಿಷ್ಫಲಭಾಷಣ, ಪರನಿಂದೆ, ಚಾಡಿಹೇಳುವುದು, ಪರರ ವಂಚನೆ, ಪರಾನ್ನ, ಪರರ ಅಡಿಗೆ ಇವುಗಳನ್ನು ತ್ಯಜಿಸಬೇಕು.

ನ ದೋಷೋ ಹೀನವಿತ್ತಸ್ಯ ತಾವನ್ಮಾತ್ರಪರಿಗ್ರಹೇ ।
ಶ್ರೋತವ್ಯಾ ಸತ್ಕಥಾ ವಿಷ್ಣೋರ್ನಾಮಸಂಕೀರ್ತನಾವೃತಂ ॥ ೨೩ ॥
ದ್ವಾರಕಾಪಥಿ ಗಚ್ಛದ್ಭಿರನ್ಯೋನ್ಯಂ ಭಕ್ತಿವರ್ಧನಂ ।
ಜಪ್ತವ್ಯಂ ವೈದಿಕಂ ಜಾಪ್ಯಂ ಸ್ತೋತ್ರಮಾಗಮಿಕಂ ತಥಾ ॥ ೨೪ ॥
ಯಾತ್ರಾಯಾಂ ಯತ್ಫಲಂ ಪ್ರೋಕ್ತಂ ಶ್ರೀಕೃಷ್ಣಸ್ಯ ಚ ವೈ ಕಲೌ ।
ನ ಶಕ್ಯತೇ ಮಯಾ ವಕ್ತುಂ ವದನೈರ್ಯುಗಸಂಖ್ಯಯಾ ॥ ೨೫ ॥
ಇತ್ಯೇತತ್ಕಥಿತಂ ಸರ್ವಂ ಯತ್ಪೃಷ್ಟಂ ತು ದ್ವಿಜೋತ್ತಮಾಃ ।
ಯತಧ್ವಂ ತತ್ಪ್ರಯತ್ನೇನ ವಿಷ್ಣುಪ್ರಾಪ್ತೌ ಚ ಸತ್ವರಂ ॥ ೨೬ ॥

ಶ್ರೀ ಪ್ರಹ್ಲಾದ ಉವಾಚ :—
ಏವಂ ತೇ ನಾರದೇನೋಕ್ತಾ ಮುನಯೋ ಹೃಷ್ಟಮಾನಸಾಃ ।
ಚಕ್ರುಸ್ತೇ ಸಹಿತಾಃ ಸರ್ವೇ ಕೃಷ್ಣದೇವಸ್ಯ ತತ್ಪಥಿ ॥ ೨೭ ॥
ಕೇಚಿಚ್ಛೃಣ್ವಂತಿ ತಾ ವಿಷ್ಣೋಃ ಸತ್ಕಥಾ ಲೋಕವಿಶ್ರುತಾಃ ।
ಯಾಸಾಂ ಸಂಶ್ರವಣಾದೇವ ಭಗವಾನ್ವಿಶತೇ ಹೃದಿ ॥ ೨೮ ॥

---

೨೩—೨೪. ದ್ರವ್ಯವಿಲ್ಲದೆ ಬಡವನಾಗಿದ್ದರೆ ಆವಶ್ಯಕವಾದಷ್ಟು ಹಣವನ್ನು ಪರರಿಂದ ತೆಗೆದುಕೊಂಡರೆ ದೋಷವಿಲ್ಲ. ದಾರಿಯಲ್ಲಿ ವಿಷ್ಣುವಿನ ಸತ್ಕಥೆ, ನಾಮಸಂಕೀರ್ತನೆಗಳನ್ನು ಮಾಡಬೇಕು. ಭಕ್ತಿಯನ್ನು ಹೆಚ್ಚಿಸುವ ವೇದೋಕ್ತ ಸ್ತೋತ್ರ, ಮಂತ್ರಗಳನ್ನು ಹೇಳಬೇಕು.

೨೫. ಕಲಿಯುಗದಲ್ಲಿ ಶ್ರೀಕೃಷ್ಣನ ಯಾತ್ರೆಯಿಂದಾಗುವ ಫಲವನ್ನು ನಾನು ನಾಲ್ಕು ಬಾಯಿಗಳಿಂದಲೂ ಹೇಳಲು ಶಕ್ತನಲ್ಲ.

೨೬. ದ್ವಿಜವರ್ಯರೆ! ನೀವು ಕೇಳಿದ್ದನ್ನೆಲ್ಲ ಹೇಳಿದ್ದೇನೆ. ನೀವು ಶೀಘ್ರವಾಗಿ ವಿಷ್ಣುವನ್ನು ಹೊಂದಲು ಪ್ರಯತ್ನಿಸಿರಿ.

೨೭. ಶ್ರೀ ಪ್ರಹ್ಲಾದನು ಹೇಳುತ್ತಾನೆ :—ನಾರದನು ಹೀಗೆ ನುಡಿಯಲು ಮುನಿಗಳು ಹರ್ಷಗೊಂಡ ಮನಸ್ಸುಳ್ಳವರಾಗಿ ಎಲ್ಲರೂ ಒಟ್ಟಿಗೆ ಸೇರಿ ದಾರಿಯಲ್ಲಿ ಅದನ್ನು ಮಾಡಿದರು.

೨೮. ಅವರಲ್ಲಿ ಕೆಲವರು ಶ್ರವಣ ಮಾತ್ರದಿಂದಲೇ ಕೃಷ್ಣನಲ್ಲಿ ಭಕ್ತಿಯನ್ನುಂಟು ಮಾಡುವ ಪ್ರಸಿದ್ಧವಾದ ವಿಷ್ಣುವಿನ ಕಥೆಯನ್ನು ಕೇಳಿದರು.

ಕೀರ್ತ್ಯಮಾನಾನಿ ನಾಮಾನಿ ಮಹಾಪುಣ್ಯಪ್ರದಾನಿ ವೈ ।
ಪಾವನಾನಿ ಸದಾ ಲೋಕೇ ಕಲೌ ವಿಪ್ರಾ ವಿಶೇಷತಃ ॥ ೨೯ ॥
ಪುರಾಣಸಂಹಿತಾ ದಿವ್ಯಾ ಮುನಿಭಿಃ ಪರಿಕೀರ್ತಿತಾಃ ।
ಪ್ರಕಾಶಯಂತಿ ಯಾ ವಿಷ್ಣೋರ್ಮಹಿಮಾನಂ ಸುಮಂಗಲಂ ॥ ೩೦ ॥
ಸದ್ಗುಣಾಃ ಕರ್ಮವೀರ್ಯಾಣಿ ಕೃತಾನಿ ವಿಷ್ಣುನಾ ಪುರಾ ।
ಲೀಲಾವತಾರರೂಪೈಸ್ತು ಶೃಣ್ವಂತಿ ಪರಯಾ ಮುದಾ ॥ ೩೧ ॥
ಅಪರೇ ವಾಸುದೇವಸ್ಯ ಚರಿತಾನಿ ಸುಮಂಗಲಾಃ ।
ವದಂತಿ ಪರಯಾ ಭಕ್ತ್ಯಾ ಸಾನಂದಾಃ ಸಾಶ್ರುಲೋಚನಾಃ ॥ ೩೨ ॥
ಅನ್ಯೇ ಸ್ಮರಂತಿ ದೇವೇಶಮನಾದಿನಿಧನಂ ವಿಭುಂ ।
ಕೇಚಿಜ್ಜಪಂತಿ ಮುನಯಃ ಸ್ತೋತ್ರಾಣಿ ಪರಯಾ ಮುದಾ ॥ ೩೩ ॥

---

೨೯. ವಿಪ್ರರೆ! ಕಲಿಯುಗದಲ್ಲಿ ವಿಶೇಷವಾಗಿ ಪವಿತ್ರವೂ, ಪುಣ್ಯಕರವೂ ಆಗಿರುವ ವಿಷ್ಣುವಿನ ನಾಮಗಳನ್ನು ಕೇಳಿದರು.

೩೦. ಪ್ರಹ್ಲಾದನು ಹೇಳುತ್ತಾನೆ—ಕೆಲವರು ಸುಮಂಗಳಕರವಾದ ವಿಷ್ಣುವಿನ ಮಹಿಮೆಯನ್ನು ಪ್ರಕಾಶಗೊಳಿಸುವ ಮುನಿಗಳು ಹೇಳಿರುವ ದಿವ್ಯ ಪುರಾಣಗಳನ್ನೂ ಹಿಂದೆ ವಿಷ್ಣುವು ಲೀಲಾವತಾರಗಳಿಂದೆಸಗಿದ ಕಾರ್ಯಗಳನ್ನೂ ಆ ವಿಷ್ಣುವಿನ ಗುಣಗಳನ್ನೂ ಅತಿ ಸಂತೋಷದಿಂದ ಕೇಳುತ್ತಿದ್ದರು.

೩೨. ಇತರರು ಅತಿಭಕ್ತಿಯಿಂದ ವಿಷ್ಣುವಿನ ಮಂಗಳಚರಿತ್ರೆಯನ್ನು ಆನಂದ ಬಾಷ್ಪವನ್ನು ಸುರಿಸುತ್ತ ಹೇಳುತ್ತಿದ್ದರು.

೩೩. ಮತ್ತೆ ಕೆಲವರು ಆದ್ಯಂತರಹಿತನಾದ ಕೃಷ್ಣನನ್ನು ಸ್ಮರಿಸುತ್ತಿದ್ದರು. ಇನ್ನು ಕೆಲವು ಮಂದಿ ಮುನಿಗಳು ಅತಿ ಸಂತೋಷದಿಂದ ಸ್ತೋತ್ರಗಳನ್ನು ಜಪಿಸುತ್ತಿದ್ದರು.

ಕೇಚಿತ್ತು ಶತನಾಮಾನಿ ಜಪಂತಿ ಮುನಯಃ ಪಥಿ ।
ಅನ್ಯೇ ಸಹಸ್ರನಾಮಾನಿ ಲಕ್ಷನಾಮ ತಥಾಽಪರೇ ॥ ೩೪ ॥
ಕೇಚಿಲ್ಲೌಕಿಕಗೀತಾನಿ ಹರಿನಾಮಾನಿ ಹರ್ಷಿತಾಃ ।
ಉತ್ಸವೈಶ್ಚ ವ್ರಜಂತ್ಯನ್ಯೇ ಪತಾಕಾದಿವಿಭೂಷಿತಾಃ ॥ ೩೫ ॥
ಗೀತವಾದಿತ್ರಘೋಷೇಣ ಕರತಾಲಸ್ವನೇನ ಚ ।
ನಾಸ್ತಿ ಧನ್ಯತಮಸ್ತಸ್ಮಾತ್ರಿಷು ಲೋಕೇಷು ಕಶ್ಚನ ॥ ೩೬ ॥
ದರ್ಶನಂ ಯಸ್ಯ ಸಂಜಾತಂ ವೈಷ್ಣವಾನಾಮನುತ್ತಮಂ ।
ತಥೈವ ಜಾಹ್ನವೀ ಪುಣ್ಯಾ ಯಮುನಾ ಚ ಸರಸ್ವತೀ ॥ ೩೭ ॥
ರೇವಾದ್ಯಾಃ ಸರಿತಃ ಸರ್ವಾಃ ಪ್ರಚಕ್ರುರ್ಗೀತನರ್ತನಂ ।
ಪ್ರಯಾಗಾದೀನಿ ತೀರ್ಥಾನಿ ಸಾಗರಾಃ ಪರ್ವತೋತ್ತಮಾಃ ॥ ೩೮ ॥
ವಾರಾಣಸೀ ಕುರುಕ್ಷೇತ್ರಂ ಪುಣ್ಯಾನ್ಯನ್ಯಾನಿ ಕೃತ್ಸ್ನಶಃ ।
ತ್ರೈಲೋಕ್ಯೇ ಯಾನಿ ತೀರ್ಥಾನಿ ಕ್ಷೇತ್ರಾಣಿ ದೇವನಾಯಕಾಃ ।
ಚಕ್ರುರ್ಗೀತಂ ಚ ನೃತ್ಯಂ ಚ ದ್ವಾರಕಾಯಾಶ್ಚ ಸತ್ಪಥಿ ॥ ೩೯ ॥
ಏಕೈಕಸ್ಮಿನ್ಪದೇ ದತ್ತೇ ದ್ವಾರಕಾಪಥಿ ಗಚ್ಛತಾಂ ।
ಪುಣ್ಯಂ ಕ್ರತುಸಹಸ್ರಾಣಾಂ ತತ್ಪಾದರಜಸಂಖ್ಯಯಾ ॥ ೪೦ ॥

---

೩೪. ಕೆಲವುಮಂದಿ ಮುನಿಗಳು ವಿಷ್ಣುವಿನ ಶತನಾಮಗಳನ್ನೂ, ಕೆಲವರು ಸಹಸ್ರ ನಾಮಗಳನ್ನೂ, ಕೆಲವರು ಲಕ್ಷನಾಮಗಳನ್ನೂ ಪಠಿಸುತ್ತಿದ್ದರು.

೩೫-೩೬ ಕೆಲವರು ಸಂತೋಷದಿಂದ ಲೌಕಿಕವಾದ ಹರಿನಾಮಗಳನ್ನು ಹಾಡುತ್ತಿದ್ದರು. ಇತರರು, ಪತಾಕಾದಿಗಳಿಂದ ಅಲಂಕಾರಗೊಂಡು ಗೀತವಾದ್ಯ, ಕರತಾಳಗಳನ್ನು ಮಾಡುತ್ತಾ ಉತ್ಸವಗಳಿಂದ ಹೋಗುತ್ತಿದ್ದರು. ಆಗ ವೈಷ್ಣವರ ಉತ್ತಮ ದರ್ಶನವನ್ನು ಪಡೆದವನಿಗಿಂತ ಪುಣ್ಯವಂತನು ಮೂರುಲೋಕಗಳಲ್ಲಿರಲಿಲ್ಲ.

೩೭-೩೯ ದ್ವಾರಕೆಯ ದಾರಿಯಲ್ಲಿ ಗಂಗೆ, ಯಮುನೆ, ಸರಸ್ವತಿ, ರೇವಾ, ಮೊದಲಾದ ಸಮಸ್ತ ನದಿಗಳೂ, ಪ್ರಯಾಗಾದಿ ತೀರ್ಥಗಳೂ, ಸಾಗರಗಳೂ, ಪರ್ವತೋತ್ತಮಗಳೂ, ಕಾಶೀ, ಕುರುಕ್ಷೇತ್ರ, ಇನ್ನೂ ಇತರ ಮೂರುಲೋಕಗಳ ಪುಣ್ಯಕ್ಷೇತ್ರಗಳೂ, ದೇವೋತ್ತಮರೂ, ಗೀತ ನೃತ್ಯಗಳನ್ನು ಮಾಡಿದರು.

೪೦. ದ್ವಾರಕೆಗೆ ಹೋಗುತ್ತಿರುವರು. ದಾರಿಯಲ್ಲಿ ಒಂದೊಂದು ಹೆಜ್ಜೆಯನ್ನಿಟ್ಟರೂ ಆ ಪಾದದ ಧೂಳಿನ ಸಂಖ್ಯೆಯಿಂದ ಸಾವಿರ ಯಜ್ಞಗಳನ್ನುಮಾಡಿದ ಪುಣ್ಯವು ದೊರೆಯುವುದು.

**ಅಥ ತೇ ಮುನಯಃ ಸರ್ವೇ ತೀರ್ಥಕ್ಷೇತ್ರಾದಿಸಂಯುತಾಃ ।**
**ಶ್ರೀಮತ್ಕೃಷ್ಣಾಲಯಂ ದೂರಾದ್ದದೃಶುರ್ನಾರದಾದಯಃ ॥ ೪೧ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾಂಪ್ರತಿಗೋದಾವರ್ಯಾದಿತೀರ್ಥಗಮನೋತ್ಸವಯಾತ್ರಾದಿವರ್ಣನಂ ನಾಮ
ತ್ರಿಂಶತ್ತಮೋಽಧ್ಯಾಯಃ

---

೪೧. ಅನಂತರ ತೀರ್ಥಕ್ಷೇತ್ರಾದಿಗಳಿಂದ ಕೂಡಿದ ಆ ನಾರದಾದಿಮುನಿಗಳೆಲ್ಲ ದೂರದಿಂದ ಶ್ರೀಕೃಷ್ಣದೇವಾಲಯವನ್ನೀಕ್ಷಿಸಿದರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಹಾತ್ಮ್ಯದಲ್ಲಿ
ದ್ವಾರಕಾಂ ಪ್ರತಿಗೋದಾವರ್ಯಾದಿತೀರ್ಥಗಮನೋತ್ಸವಯಾತ್ರಾದಿವರ್ಣನವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕತ್ರಿಂಶತ್ತಮೋಽಧ್ಯಾಯಃ

### ಮೂರ್ತಿಮತೀದ್ವಾರವತೀದರ್ಶನವರ್ಣನಂ

ಪ್ರಹ್ಲಾದ ಉವಾಚ :—

ದಿವ್ಯಸ್ವಪ್ರಭಯಾ ಧ್ವಾಂತಂ ಭೂತಾನಾಂ ನಾಶಯನ್ಸದಾ ।
ಜನಯನ್ಪರಮಾನಂದಂ ಭಕ್ತಾನಾಂ ಚ ಭಯಾಪಹಃ ॥ ೧ ॥
ಪತಾಕಾಭಿರ್ಧ್ವಜಸ್ಥಾಭಿರ್ದ್ವಾರಕಾಜಯವರ್ಧನಃ ।
ದಿವ್ಯಪುಣ್ಯಪ್ರಕಾಶೇನ ರಾಜತೇ ಗಿರಿರಾಡಿವ ॥ ೨ ॥
ದೃಷ್ಟ್ವಾಽಽಲಯಂ ತದಾ ವಿಷ್ಣೋಸ್ತದಾಯುಧವಿಭೂಷಿತಂ ।
ವಿಹಾಯ ಪಾದುಕೇ ಛತ್ರಂ ದಂಡವತ್ಪತಿತಾ ಭುವಿ ॥ ೩ ॥
ಭೂಮಿಸಲುಂಠನಂ ತೇಷಾಂ ತೀರ್ಥಾನಾಮದ್ಭುತಂ ಮಹತ್ ।
ಅಭವದ್ವಿಪ್ರಶಾರ್ದೂಲಾಃ ಕ್ಷೇತ್ರಾದೀನಾಂ ಚ ಸರ್ವಶಃ ॥ ೪ ॥

---

ಕನ್ನಡದ ಅನುವಾದ

### ಮೂರ್ತಿಮತೀದ್ವಾರವತೀದರ್ಶನವರ್ಣನ

೧–೩. ಪ್ರಹ್ಲಾದನು ಹೇಳುತ್ತಾನೆ:—ಆ ನಾರದಾದಿಗಳು ತನ್ನ ದಿವ್ಯಕಾಂತಿಯಿಂದ ಪ್ರಾಣಿಗಳ ಅಜ್ಞಾನವನ್ನು ಕಳೆಯುವುದೂ, ಭಕ್ತರಿಗೆ ಪರಮಾನಂದವನ್ನುಂಟುಮಾಡುತ್ತಾ ಭಯವನ್ನು ನಿವಾರಿಸುವುದೂ, ಧ್ವಜದಲ್ಲಿರುವ ಪತಾಕೆಗಳಿಂದ ದ್ವಾರಕೆಗೆ ಜಯವನ್ನು ಹೆಚ್ಚಿಸುವುದೂ, ದಿವ್ಯಪುಣ್ಯಪ್ರಕಾಶದಿಂದ ಗಿರಿಶ್ರೇಷ್ಠದಂತೆ ವಿರಾಜಿಸುವುದೂ ಆದ ಶ್ರೀಕೃಷ್ಣನ ಆಯುಧಗಳಿಂದ ಕಂಗೊಳಿಸುತ್ತಿರುವ ದೇವಾಲಯವನ್ನು ನೋಡಿ ಪಾದುಕೆ, ಕೊಡೆಗಳನ್ನು ತೆಗೆದಿಟ್ಟು, ಭೂಮಿಯಲ್ಲಿ ಸಾಷ್ಟಾಂಗಪ್ರಮಾಣವನ್ನು ಮಾಡಿದರು.

೪. ವಿಪ್ರವರ್ಯರೇ! ಆ ತೀರ್ಥ ಕ್ಷೇತ್ರಗಳು ಎಲ್ಲೆಡೆಯಲ್ಲಿಯೂ ಅದ್ಭುತವಾಗುವಂತೆ ನೆಲದಮೇಲೆ ಉರುಳಿದವು.

ವಾರಣಾಸೀ ಕುರುಕ್ಷೇತ್ರಂ ಪ್ರಯಾಗೋ ಜಾಹ್ನವೀ ತಥಾ ।
ಯಮುನಾ ನರ್ಮದಾ ಪುಣ್ಯಾ ಪುಣ್ಯಾ ಪ್ರಾಚೀ ಸರಸ್ವತೀ ॥ ೫ ॥
ಗೋದಾವರೀ ಮಹಾಪುಣ್ಯಾ ಗಯಾ ತಿಸ್ರಸ್ತು ಮಂಗಲಾಃ ।
ಶಾಲಿಗ್ರಾಮಂ ಮಹಾಕ್ಷೇತ್ರ ಪುಣ್ಯಾ ಚಕ್ರನದೀ ಶುಭಾ ॥ ೬ ॥
ಪಯೋಷ್ಣೀ ತಪತೀ ಕೃಷ್ಣಾ ಕಾವೇರ್ಯಾದ್ಯಾಃ ಸುಪುಣ್ಯದಾಃ ।
ಪುಷ್ಕರಾದೀನಿ ತೀರ್ಥಾನಿ ಸಾಗರಾ ಪರ್ವತೋತ್ತಮಾಃ ॥ ೭ ॥
ಅಯೋಧ್ಯಾ ಮಥುರಾ ಮಾಯಾ ಹ್ಯವಂತ್ಯಾದ್ಯಾಶ್ಚ ಮುಕ್ತಿದಾಃ ।
ಶ್ರೀರಂಗಾಖ್ಯಮನಂತಂ ಚ ಪ್ರಭಾಸಂ ಚ ವಿಶೇಷತಃ ॥ ೮ ॥
ಪುರುಷೋತ್ತಮಂ ಮಹಾಕ್ಷೇತ್ರಮರಣ್ಯಾನ್ಯಾದಯಃ ಶುಭಾಃ ।
ತ್ರೈಲೋಕ್ಯೇ ವರ್ತಮಾನಾನಿ ಸರ್ವತೀರ್ಥಾನಿ ಸರ್ವಶಃ ॥ ೯ ॥
ದೃಷ್ಟ್ವಾ ಕೃಷ್ಣಾಲಯಂ ಪುಣ್ಯಂ ಮುಹುರ್ಮುಹುಃ ಪ್ರಹರ್ಷಿತಾಃ ।
ಜಯಶಬ್ದೈರ್ನಮಶ್ಶಬ್ದೈರ್ಗರ್ಜಂತೋ ಹರಿನಾಮಭಿಃ ॥ ೧೦ ॥
ಆನಂದಾಶ್ರೂಣಿ ಮುಂಚಂತಃ ಪ್ರೇಮ್ಣಾ ಗದ್ಗದಯಾ ಗಿರಾ ।
ಸ್ತುವಂತಿ ಮುನಯಸ್ಸರ್ವೇ ತೀರ್ಥಾದೀನಿ ಚ ಸರ್ವಶಃ ॥ ೧೧ ॥
ಅಥ ಸಂಸ್ತುವತಾಂ ತೇಷಾಮನ್ಯೋನ್ಯಂ ಮುದಿತಾತ್ಮನಾಂ ।
ವೀಕ್ಷ್ಯ ವಕ್ತ್ರಾಣಿ ಸರ್ವೇಷಾಂ ಮಹರ್ಷಿರ್ನಾರದೋಽಬ್ರವೀತ್ ॥ ೧೨ ॥

---

೫–೧೧ ಕಾಶೀ, ಕುರುಕ್ಷೇತ್ರ, ಪ್ರಯಾಗ, ಗಂಗೆ, ಯಮುನ, ನರ್ಮದ, ಪುಣ್ಯಕರವಾದ ಪ್ರಾಚೀ ಸರಸ್ವತಿ, ಗೋದಾವರೀ, ಮೂರುಗಯೆಗಳು. ಶಾಲಿಗ್ರಾಮ ಮಹಾಕ್ಷೇತ್ರ, ಪುಣ್ಯಕರವಾದ ಚಕ್ರನದೀ, ಪಯೋಷ್ಣೀ, ತಪತೀ, ಕೃಷ್ಣಾ, ಕಾವೇರಿ ಇವೇ ಮೊದಲಾದ ಪುಣ್ಯನದಿಗಳೂ, ಪುಷ್ಕರಾದಿ ತೀರ್ಥಗಳೂ, ಸಮುದ್ರಗಳೂ, ಪರ್ವತೋತ್ತಮಗಳೂ, ಅಯೋಧ್ಯಾ, ಮಥುರಾ, ಮಾಯಾ, ಅವಂತೀ ಮೊದಲಾದ ಮುಕ್ತಿಕ್ಷೇತ್ರಗಳೂ, ಶ್ರೀರಂಗ, ಅನಂತ, ಪ್ರಭಾಸ, ಪುರುಷೋತ್ತಮ, ಮೊದಲಾದ ಮಹಾಕ್ಷೇತ್ರಗಳೂ, ಶುಭಾರಣ್ಯಗಳೂ, ಮೂರುಲೋಕಗಳಲ್ಲಿರುವ ಇತರ ಸಮಸ್ತ ತೀರ್ಥಗಳೂ, ಮುನಿಗಳೂ, ಕೃಷ್ಣಾಲಯವನ್ನು ಕಂಡು ಸಂತೋಷಗೊಂಡು ಜಯ, ನಮಶ್ಶಬ್ದಗಳಿಂದಲೂ, ಹರಿನಾಮಗಳಿಂದಲೂ ಗರ್ಜಿಸುತ್ತಾ ಆನಂದ ಬಾಷ್ಪಗಳನ್ನು ಸುರಿಸುತ್ತ ಗದ್ಗದ ಧ್ವನಿಯಿಂದ ಸ್ತುತಿಸಿದರು.

೧೨. ಬಳಿಕ ನಾರದ ಮುನಿಯು ಪರಸ್ಪರಸಂತೋಷದಿಂದ ಸ್ತುತಿಸುತ್ತಿರುವ ಅವರೆಲ್ಲರ ಮುಖಗಳನ್ನು ನೋಡಿ ಇಂತೆಂದನು.

ಶ್ರೀನಾರದ ಉವಾಚ :—

ರಾಶಯಃ ಪುಣ್ಯಪುಂಜಾನಾಂ ಕೃತಾ ಯುಷ್ಮಾಭಿರುತ್ತಮಾಃ ।
ತಜ್ಜನ್ಮನಾಂ ಸಹಸ್ರೈಸ್ತು ಯದ್ದೃಷ್ಟಂ ಕೃಷ್ಣಮಂದಿರಂ ॥ ೧೩ ॥
ದರ್ಶನಂ ಕೃಷ್ಣದೇವಸ್ಯ ದ್ವಾರಕಾಗಮನೇ ಮತಿಃ ।
ದೃಢಭಕ್ತಿರ್ನಹಿ ವಿಷ್ಣೋರ್ನಾಲ್ಪಸ್ಯ ತಪಸಃ ಫಲಂ ॥ ೧೪ ॥
ಧನ್ಯಾ ವೈ ಪೂರ್ವಜಾಸ್ತೇಷಾಂ ವಂಶಜಾಃ ಕೃಷ್ಣದರ್ಶನಂ ।
ಸೋತ್ಸವಾ ದ್ವಾರಕಾಂ ಯಾಂತಿ ಪಶ್ಯಂತಿ ಚ ಹರಿಪ್ರಿಯಾಂ ॥ ೧೫ ॥
ಧನ್ಯೇಯಂ ಗೌತಮೀ ಗಂಗಾ ಗೌತಮೋಽಯಂ ಮಹಾತಪಾಃ ।
ಯತ್ಪ್ರಸಾದೇನ ಸರ್ವೇಷಾಂ ಕಲ್ಯಾಣಂ ಸಮುಪಸ್ಥಿತಂ ॥ ೧೬ ॥
ಯಜ್ಞಾಧ್ಯಯನದಾನಾನಾಂ ತಪೋವ್ರತಸಮಾಧಿನಾಂ ।
ಸಂಪ್ರಾಪ್ತಂ ಫಲಮಸ್ಮಾಭಿರ್ಯುಷ್ಮಾಭಿಃ ಸರ್ವತೀರ್ಥಕಾಃ ॥ ೧೭ ॥
ಯೂಯಂ ಸರ್ವಾಣಿ ತೀರ್ಥಾನಿ ಕ್ಷೇತ್ರಾಣಿ ಚೈವ ಕೃತ್ಸ್ನಶಃ ।
ಕೃಷ್ಣಾಜ್ಞಯಾ ಸರ್ವಕಾಲಂ ತಿಷ್ಠಧ್ವಂ ಸರ್ವದೈವತೈಃ ॥ ೧೮ ॥

---

೧೩. ಶ್ರೀನಾರದನು ಹೇಳುತ್ತಾನೆ.—ನೀವು ಉತ್ತಮ ಪುಣ್ಯರಾಶಿಯನ್ನು ನಿರ್ಮಿಸಿದ್ದೀರಿ. ಆ ಪುಣ್ಯ ರಾಶಿಯಾದ ಕೃಷ್ಣಮಂದಿರವನ್ನು ನಾವು ಸಹಸ್ರಜನ ಗಳಾದಮೇಲೆ ನೋಡಿದ್ದೇವೆ.

೧೪. ಕೃಷ್ಣನ ದರ್ಶನ, ದ್ವಾರಕಾಗಮನಬುದ್ಧಿ, ವಿಷ್ಣುವಿನಲ್ಲಿ ದೃಢವಾದ ಭಕ್ತಿ ಇವುಗಳು ಸ್ವಲ್ಪ ತಪಸ್ಸಿನ ಫಲವಲ್ಲ.

೧೫. ಉತ್ಸವದಿಂದ ದ್ವಾರಕೆಗೆ ಹೋಗಿ ಕೃಷ್ಣನನ್ನೂ ಅವನ ಪತ್ನಿಯಾದ ರುಕ್ಮಿಣಿಯನ್ನೂ, ದರ್ಶನಮಾಡುವ ಮಾನವರ ವಂಶದವರು ಧನ್ಯರು.

೧೬. ಗೌತಮೀ, ಗಂಗೆ, ಅತಿತಪಸ್ವಿಯಾದ ಗೌತಮ ಇವರು ಧನ್ಯರು. ಇವರ ಅನುಗ್ರಹದಿಂದ ಎಲ್ಲರಿಗೂ ಮಂಗಳವುಂಟಾಯಿತು.

೧೭ ಸಕಲ ತೀರ್ಥಗಳೆ ! ನಾವೂ, ನೀವೂ ಯಜ್ಞ, ಅಧ್ಯಯನ, ದಾನ, ತಪಸ್ಸು, ವ್ರತ, ಧ್ಯಾನ ಇವುಗಳ ಫಲವನ್ನು ಹೊಂದಿದೆವು.

೧೮. ಸಮಸ್ತತೀರ್ಥಕ್ಷೇತ್ರಗಳೆ ! ನೀವೆಲ್ಲರೂ ಸಕಲದೇವತೆಗಳೊಡನೆ ಕೃಷ್ಣನ ಆಜ್ಞೆಯಿಂದ ಯಾವಾಗಲೂ ಇಲ್ಲಿ ವಾಸಮಾಡಿರಿ.

ವಸಂತಿ ಯೇಽತ್ರ ತೇ ಧನ್ಯಾ ಏಕಾಹಮಪಿ ಪಾವನಾಃ ।
ಪಶ್ಯಂತು ಸುಮಹಾಭಾಗಾ ಗೋದಾವರ್ಯತ್ರ ಜಾಹ್ನವೀ ॥ ೧೯ ॥
ಇಯಂ ಚ ಶೋಭತೇ ಪುಣ್ಯಾ ದ್ವಾರಕಾ ಕೃಷ್ಣವಲ್ಲಭಾ ।
ಪ್ರಪಶ್ಯಂತು ಮಹಾಭಾಗಾಸ್ತಥಾ ವಾರಾಣಸೀಂ ಶುಭಾಂ ॥ ೨೦ ॥
ಕ್ಷೇತ್ರಾಣಿ ಕುರು ಮುಖ್ಯಾನಿ ಪಶ್ಯಂತು ದ್ವಾರಕಾಂ ಪ್ರಭೋಃ ।
ತಾದೃಶೀ ಮಥುರಾ ಕಾಶೀ ಮಾಯಾಽಯೋಧ್ಯಾ ಚ ರಾಜತೇ ॥ ೨೧ ॥
ಅವಂತೀ ನ ಚ ಕಾಂಚೀ ಚ ಕ್ಷೇತ್ರಂ ಚ ಪುರುಷೋತ್ತಮಮಂ ।
ಸೂರ್ಯೋಪರಾಗಕಾಲೇಽಪಿ ಕುರುಕ್ಷೇತ್ರಂ ನ ರಾಜತೇ ॥ ೨೨ ॥
ಈದೃಶಂ ನ ಗಯಾತೀರ್ಥಂ ಯಾದೃಗೇತತ್ಪ್ರಕಾಶತೇ ॥ ೨೩ ॥
ಗ್ರಹನಕ್ಷತ್ರತಾರಾಣಾಂ ಯಥಾಸೂರ್ಯೋ ವಿರಾಜತೇ ।
ಸಕ್ಷೇತ್ರತೀರ್ಥರಾಜಾನಾಂ ದ್ವಾರಕಾರ್ಕೋ ವಿರಾಜತೇ ॥ ೨೪ ॥

---

೧೯. ಇಲ್ಲಿ ಒಂದು ದಿನವಾದರೂ ವಾಸಮಾಡುವವರು. ಧನ್ಯರು. ಮತ್ತು ಪವಿತ್ರರು. ಗೋದಾವರೀಯೂ ಮತ್ತು ಗಂಗೆಯೂ ನೋಡಲಿ.

೨೦. ಕೃಷ್ಣಪ್ರಿಯವಾದ ಈ ದ್ವಾರಕೆಯು ಪ್ರಕಾಶಿಸುತ್ತಿದೆ. ಹಾಗೆಯೇ ಮಂಗಳಕರವಾದ ಕಾಶಿಯನ್ನು ನೋಡಿರಿ.

೨೧–೨೨. ಕುರುಕ್ಷೇತ್ರ ಮೊದಲಾದ ಕ್ಷೇತ್ರಗಳೂ ದ್ವಾರಕೆಯನ್ನು ನೋಡಲಿ, ಈ ದ್ವಾರಕೆಯಂತೆ ಮಥುರೆ, ಕಾಶೀ, ಮಾಯಾ ಅಯೋಧ್ಯಾ ಅವಂತೀ, ಕಾಂಚೀ, ಪುರುಷೋತ್ತಮಕ್ಷೇತ್ರ, ಕುರುಕ್ಷೇತ್ರ ಇವುಗಳು ಸೂರ್ಯಗ್ರಹಣ ಕಾಲದಲ್ಲಿಯೂ ಪ್ರಕಾಶಿಸುವುದಿಲ್ಲ.

೨೩. ಇದರಂತೆ ಗಯೆಯೂ ವಿರಾಜಿಸುವುದಿಲ್ಲ.

೨೪. ಗ್ರಹನಿತ್ಯ ನಕ್ಷತ್ರ, ಇತರನಕ್ಷತ್ರಗಳಲ್ಲಿ ಸೂರ್ಯನು ಹೇಗೆ ಪ್ರಕಾಶಿಸುವನೋ ಹಾಗೆಯೇ ದ್ವಾರಕೆಯೆಂಬ ಸೂರ್ಯನು ಪ್ರಕಾಶಿಸುತ್ತಾನೆ

ಪ್ರಹ್ಲಾದ ಉವಾಚ :—

ನಿಶಮ್ಯ ನಾರದೇನೋಕ್ತಂ ಪ್ರಹೃಷ್ಟಾಶ್ಚ ತಥಾ ದ್ವಿಜಾಃ ।
ಕ್ಷೇತ್ರಾಣಿ ಸರ್ವತೀರ್ಥಾನಿ ಪುರಸ್ಕೃತ್ಯ ಚ ಗೌತಮೀಮ್ ॥ ೨೫ ॥
ವಿಹಾಯ ಗೌತಮೀಂ ತತ್ರ ಪ್ರಯಯುರ್ಹ್ಯಗ್ರತೋಗ್ರತಃ ।
ಪ್ರಹೃಷ್ಟಾ ಗೌತಮೀ ತತ್ರ ಪ್ರಣಮ್ಯ ತ್ವರಿತಾ ಯಯೌ ॥ ೨೬ ॥
ಗೀತವಾದ್ಯೈಶ್ಚ ನೃತ್ಯೈಶ್ಚ ಪತಾಕಾಭಿಃ ಸಮಂತತಃ ।
ಪ್ರಯಯುಃ ಸ್ತೋತ್ರಪಾಠೈಶ್ಚ ಸರ್ವೇ ತೇ ದ್ವಾರಕಾಶ್ರಯೇ ॥ ೨೭ ॥
ಸ ತೀರ್ಥಾನ್ಯಗ್ರತಃ ಕೃತ್ವಾ ಮಧ್ಯೇ ಕೃತ್ವಾ ತು ಶೋಭನಮ್ ।
ಪ್ರಯಾಗಂ ತೀರ್ಥರಾಜಂ ಚ ಪ್ರಹೃಷ್ಟಂ ಕ್ಷೇತ್ರದರ್ಶನಾತ್ ॥ ೨೮ ॥
ತತಃ ಪಶ್ಚಾನ್ನದೀ ಸ್ನಾನಂ ಚಕಾರ ಋಷಿಸತ್ತಮಃ ।
ಜಾಹ್ನವೀ ಗೌತಮೀ ದೇವಾ ಯಮುನಾ ಪ್ರಾಕ್ಸರಸ್ವತೀ ॥ ೨೯ ॥
ಸರಯೂರ್ಗಂಡಕೀ ತಾಪೀ ಪಯೋಷ್ಣೀ ಯಮುನಾತಥಾ ।
ಕೃಷ್ಣಾ ಭೀಮರಥೀ ಗಂಗಾ ಕಾವೇರೀ ಚಾಘನಾಶಿನೀ ॥ ೩೦ ॥

---

೨೫–೨೬. ಪ್ರಹ್ಲಾದನು ಹೇಳುತ್ತಾನೆ :—ದ್ವಿಜರೆ! ಸಮಸ್ತ ತೀರ್ಥಕ್ಷೇತ್ರಗಳು ನಾರದನು ಹೇಳಿದ್ದನ್ನು ಕೇಳಿ ಸಂತೋಷಗೊಂಡು ಗೌತಮಿಯನ್ನು ಬಿಟ್ಟು ಮುಂದೆ ಮುಂದೆ ಪ್ರಯಾಣ ಮಾಡಿದುವು. ಸಂತೋಷಗೊಂಡ ಗೌತಮಿಯೂ ವಂದಿಸಿ ಶೀಘ್ರವಾಗಿ ಹೊರಟಳು.

೨೭. ಅವುಗಳು ಆ ದ್ವಾರಕೆಯಲ್ಲಿ ಗೀತ, ವಾದ್ಯ, ನೃತ್ಯ, ಪತಾಕೆ ಸ್ತೋತ್ರಪಾಠಗಳೊಡನೆ ಮುಂದಕ್ಕೆ ಸಾಗಿದುವು.

೨೮–೩೭. ಆ ನಾರದನು ಸಕಲ ತೀರ್ಥಗಳನ್ನು ಮುಂದೆಯೂ ಆ ದ್ವಾರಕೆಯ ದರ್ಶನದಿಂದ ಆನಂದಗೊಂಡ ತೀರ್ಥಶ್ರೇಷ್ಠವಾದ ಪ್ರಯಾಗವನ್ನು ನಡುವೆಯೂ ಇರಿಸಿಕೊಂಡು ಗೋಮತೀ ನದಿಯಲ್ಲಿ ಮಿಂದನು. ಹಾಗೆಯೇ ಗಂಗೆ, ಗೌತಮೀ, ನರ್ಮದಾ, ಯಮುನಾ, ಪ್ರಾಚೀಸರಸ್ವತೀ, ಸರಯೂ, ಗಂಡಕೀ, ತಾಪೀ, ಪಯೋಷ್ಣೀ,

ಮಂದಾಕಿನೀ ಮಹಾಪುಣ್ಯಾ ಪುಣ್ಯಾ ಭೋಗವತೀ ನದೀ ।
ವ್ರಜಂತಿ ಯುಗಪತ್ಸರ್ವಾಃ ಪಶ್ಯಂತ್ಯೋ ದ್ವಾರಕಾಂ ಪುರೀಂ ॥ ೩೧ ॥
ತತಸ್ತೇ ಸಾಗರಾಃ ಸಪ್ತ ಸ್ವೈಸ್ವೈಸ್ತೀರ್ಥೈಸ್ಸಮನ್ವಿತಾಃ ।
ತತಃ ಪಶ್ಚಾದರಣ್ಯಾನ್ಯಾಶ್ರಮೈಃ ಪುಣ್ಯೈರ್ಯುತಾನಿ ಚ ॥ ೩೨ ॥
ತತಸ್ತು ಪರ್ವತಾ ರಮ್ಯಾ ಮೇರ್ವಾದ್ಯಾಸ್ತು ಸುಶೋಭನಾಃ ।
ನೃತ್ಯಂತೋ ಗಾಯಮಾನಾಶ್ಚ ಸ್ತುವಾದ್ಯೈಸ್ಸ ಮಹರ್ಷಿಭಿಃ ॥ ೩೩ ॥
ತತಶ್ಚ ಋಷಯೋ ದೇವಾಃ ಸಮಂತಾದ್ಧೃಷ್ಟಮಾನಸಾಃ ।
ಗಾಯಂತೋ ನೃತ್ಯಮಾನಾಶ್ಚ ಗರ್ಜಂತೋ ಹರಿನಾಮಭಿಃ ॥ ೩೪ ॥
ವಾದಿತ್ರನಿನದೈರುಚ್ಚೈರ್ಜಯಶಬ್ದೈಃ ಪ್ರಹರ್ಷಿತಾಃ ।
ಪ್ರಾಪ್ತಾಸ್ತೇ ಗೋಮತೀತೀರಂ ಸರ್ವಯಜ್ಞಸಮನ್ವಿತಾಃ ॥ ೩೫ ॥

ಶ್ರೀ ನಾರದ ಉವಾಚ :—

ಹೇ ಭಾಗೀರಥಿ ಹೇ ರೇವೇ ಯಮುನೇ ಶೃಣು ಗೌತಮಿ ।
ಶ್ರೇಷ್ಠಾ ಶ್ರೀಗೋಮತೀ ದೇವೀ ವಿಖ್ಯಾತಾ ಭುವನತ್ರಯೇ ॥ ೩೬ ॥

---

ಯಮುನಾ, ಕೃಷ್ಣಾ, ಭೀಮರಥೀ, ಗಂಗಾ, ಕಾವೇರಿ, ಭೋಗವತೀ ಇವುಗಳೆಲ್ಲ ದ್ವಾರಕೆಯನ್ನು ನೋಡಲು ಒಂದೇ ಸಲ ಹೊರಟುವು.

೩೨–೩೫. ಅನಂತರ ತಮ್ಮ ತಮ್ಮ ತೀರ್ಥಗಳಿಂದ ಕೂಡಿ ಸಪ್ತ ಸಮುದ್ರಗಳೂ, ಪವಿತ್ರಾಶ್ರಮಗಳೊಡನೆ ಮಹಾರಣ್ಯಗಳೂ, ಮಹರ್ಷಿಗಳೊಡನೆ ಮೇರು ಮೊದಲಾದ ರಮ್ಯ ಪರ್ವತಗಳೂ, ಸಕಲ ಯಜ್ಞಗಳೊಡನೆ ಹರ್ಷಚಿತ್ತರಾದ ಋಷಿಗಳೂ, ನೃತ್ಯ, ಗೀತ, ಸ್ತೋತ್ರ, ಹರಿನಾಮಸ್ಮರಣೆ, ವಾದ್ಯಧ್ವನಿ, ಜಯಕಾರಗಳನು ಮಾಡುತ್ತ ಗೋಮತೀ ತೀರಕ್ಕೆ ಹೋಗಿ ನಮಸ್ಕರಿಸಿದರು.

೩೬. ಶ್ರೀ ನಾರದನು ಹೇಳುತ್ತಾನೆ:—ಭಾಗೀರಥಿ, ರೇವೇ, ಯಮುನೆ, ಗೌತಮೀ ನದಿಗಳೆ! ಕೇಳಿರಿ. ಶ್ರೇಷ್ಠಳಾದ ಈ ಗೋಮತೀ ದೇವಿಯು ಮೂರು ಲೋಕಗಳಲ್ಲಿಯೂ ಪ್ರಖ್ಯಾತಳಾಗಿರುವಳು.

ಯಸ್ಯಾಃ ಸಕೃಜ್ಜಲಸ್ನಾನಂ ಸ್ಪರ್ಧತೇ ಬ್ರಹ್ಮವಿದ್ಯಯಾ ।
ತೇನ ವೈ ಗೋಮತೀ ಸೇಯಂ ಸರ್ವತೀರ್ಥೋತ್ತಮೋತ್ತಮಾ ।
ಬ್ರಹ್ಮಜ್ಞಾನೇನ ಮುಚ್ಯಂತೇ ಪ್ರಯಾಗಮರಣೇನ ವಾ ।
ಸ್ನಾನಮಾತ್ರೇಣ ಗೋಮತ್ಯಾಂ ಮುಚ್ಯತೇ ಪೂರ್ವಜೈಃ ಸಹ ॥ ೩೭ ॥

ಪ್ರಹ್ಲಾದ ಉವಾಚ :—

ನಿಶಮ್ಯ ತಾನಿ ತೀರ್ಥಾನಿ ಮಾಹಾತ್ಮ್ಯಂ ಮಹದದ್ಭುತಂ ।
ಗೋಮತ್ಯಾಃ ಶ್ರದ್ಧಯಾ ಸ್ನಾತ್ವಾ ಉತ್ಸವೈರಗ್ರತೋ ಯಯುಃ ॥ ೩೮ ॥
ತತಃ ಕ್ಷೇತ್ರಾಣಿ ತೀರ್ಥಾನಿ ಸರಿತಃ ಸಾಗರಾದಯಃ ।
ದದೃಶುರ್ದ್ವಾರಕಾಂ ರಮ್ಯಾಮಾಗತಾ ದ್ವಾರಮಂಡಪೇ ॥ ೩೯ ॥
ಸ್ಥಿತಾಂ ಸಿಂಹಾಸನೇ ದಿವ್ಯೇ ಮಣಿಕಾಂಚನಭೂಷಿತೇ ।
ಸುಂದರಾಂ ಶುಕ್ಲವರ್ಣಾಂ ಚ ರುದ್ರಾದಿತ್ಯಸಮಪ್ರಭಾಂ ॥ ೪೦ ॥
ದಿವ್ಯವಸ್ತ್ರಾಂ ಸುಗಂಧಾಢ್ಯಾಂ ರತ್ನಾಭರಣಭೂಷಿತಾಂ ।
ಕಿರೀಟಕುಂಡಲೈರ್ದಿವ್ಯೈಃ ಶೋಭಿತಾಂ ಕಂಕಣಾದಿಭಿಃ ॥ ೪೧ ॥
ವರದಾಭಯಹಸ್ತಾಂ ಚ ಶಂಖಚಕ್ರಗದಾಯುಧಾಂ ।
ಶ್ವೇತಾತಪತ್ರ ಶೋಭಾಢ್ಯಾಂ ಚಾಮರವ್ಯಜನಾದಿಭಿಃ ॥ ೪೨ ॥

---

೩೭. ಈ ನದಿಯಲ್ಲಿ ಒಂದು ಸಾರಿ ಸ್ನಾನಮಾಡುವುದು ಬ್ರಹ್ಮವಿದ್ಯೆಗೆ ಸಮಾನವಾಗುವುದು. ಆದ್ದರಿಂದಲೇ ಈ ಗೋಮತಿಯು ಸಕಲ ತೀರ್ಥಗಳಲ್ಲಿ ಉತ್ತಮವಾಗುವುದು. ಜನರು ಬ್ರಹ್ಮಜ್ಞಾನದಿಂದಾಗಲಿ, ಪ್ರಯಾಗ ಮರಣದಿಂದಾಗಲಿ, ಗೋಮತಿಯಲ್ಲಿ ಸ್ನಾನಮಾಡುವುದರಿಂದಾಗಲಿ ತಮ್ಮ ಹಿಂದಿನವರೊಡನೆ ಮುಕ್ತರಾಗುವರು.

೩೮. ಪ್ರಹ್ಲಾದನು ಹೇಳುತ್ತಾನೆ :—ಆ ತೀರ್ಥಗಳು ಗೋಮತಿಯ ಅದ್ಭುತ ಮಾಹಾತ್ಮ್ಯವನ್ನು ಕೇಳಿ ಶ್ರದ್ಧೆಯಿಂದ ಅಲ್ಲಿ ಮಿಂದು ಉತ್ಸವದಿಂದ ಮುಂದಕ್ಕೆ ಹೋದುವು.

೩೯–೪೩. ಬಳಿಕ ಕ್ಷೇತ್ರ, ತೀರ್ಥ, ನದಿ, ಸಮುದ್ರಾದಿಗಳು ದ್ವಾರಮಂಡಪದಲ್ಲಿ ರತ್ನ ಸುವರ್ಣಗಳಿಂದಲಂಕಾರಗೊಂಡ ದಿವ್ಯ ಸಿಂಹಾಸನದಲ್ಲಿ ಕೂತಿರುವವಳೂ, ಸುಂದರಿಯೂ, ಶುಕ್ಲವರ್ಣಳೂ, ರುದ್ರ, ಆದಿತ್ಯರಿಗೆ ಸಮಾನವಾದ ಕಾಂತಿಯುಳ್ಳವಳೂ, ದಿವ್ಯ ವಸ್ತ್ರವನ್ನುಟ್ಟವಳೂ, ಸುಗಂಧ ಲಿಪ್ತಳೂ, ರತ್ನದ ಒಡವೆ, ಕಿರೀಟ, ಕುಂಡಲ, ಕಂಕಣ ಮೊದಲಾದವುಗಳಿಂದ ಅಲಂಕಾರಗೊಂಡವಳೂ, ವರದ ಅಭಯ ಹಸ್ತವುಳ್ಳವಳೂ, ಶಂಖ, ಚಕ್ರ, ಗದೆಗಳನ್ನು ಹಿಡಿದವಳೂ, ಶ್ವೇತಛತ್ರ, ಚಾಮರ, ಬೀಸಣಿಗೆ ಇವುಗಳಿಂದ ಸಹಿತಳೂ, ಸ್ತೋತ್ರಗಳಿಂದ ಸ್ತುತಿಸಲ್ಪಡುವವಳೂ, ಗೀತ

ಸಂಸ್ತವೈಃ ಸ್ತೂಯಮಾನಾಂ ಚ ಗೀತವಾದ್ಯಾದಿಹರ್ಷಿತಾಂ ।
ಮಹಾಸಿಂಹಾಸನಸ್ಥಾಂ ತು ದೃಷ್ಟ್ವಾ ಸರ್ವಾಣಿಭಕ್ತಿತಃ ॥ ೪೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ. ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಮೂರ್ತಿಮತೀದ್ವಾರವತೀದರ್ಶನವರ್ಣನಂನಾಮ
ಏಕತ್ರಿಂಶತ್ತಮೋಽಧ್ಯಾಯಃ

---

ವಾದ್ಯಾದಿಗಳಿಂದ ಸಂತೋಷಗೊಂಡವಳೂ ಆದ ದ್ವಾರವತಿಯನ್ನು ಕಂಡು ಒಂದೇ ಸಲ ಎಲ್ಲರೂ ಭಕ್ತಿಯಿಂದ ವಂದಿಸಿದರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಮೂರ್ತಿಮತೀದ್ವಾರವತೀದರ್ಶನವರ್ಣನವೆಂಬ
ಮುವ್ವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಾತ್ರಿಂಶತ್ತಮೋಽಧ್ಯಾಯಃ

### ವಿಷ್ಣುಪಾರ್ಷದವರ್ಣಿತದ್ವಾರಕಾಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ನಾರದಸ್ತ್ವಗ್ರತೋ ಗತ್ವಾ ಪ್ರಣಮ್ಯಾಥ ಹರಿಪ್ರಿಯಾಂ ।
ಉವಾಚ ಲಲಿತಾಂ ವಾಚಂ ಹರ್ಷಯನ್ದ್ವಾರಕಾಂ ಪುರೀಂ ॥ ೧ ॥

ಶ್ರೀನಾರದ ಉವಾಚ :—

ಪಶ್ಯ ಪಶ್ಯ ಮಹಾಭಾಗೇ ಸರ್ವೇ ಪ್ರಾಪ್ತಾಃ ಸುಶೋಭನೇ ।
ತೀರ್ಥಕ್ಷೇತ್ರಾಣಿ ದೇವಾಶ್ಚ ಋಷಯಶ್ಚೈವ ಕೃತ್ಸ್ನಶಃ ॥ ೨ ॥
ಪಶ್ಯೇಮಂ ಪುರತಃ ಪ್ರಾಪ್ತಂ ಪ್ರಯಾಗಂ ತೀರ್ಥಕೈಸ್ಸಹ ।
ದ್ವಾರಕೇ ತವ ಪಾದಾಬ್ಜೇ ಲುಠತೇ ಶ್ರದ್ಧಯಾದ್ಭುತಂ ॥ ೩ ॥
ಇದಂ ತು ಪುಷ್ಕರಂ ತೀರ್ಥಂ ನಮತಿ ಶ್ರದ್ಧಯಾ ಶುಭೇ ।
ಇಯಂ ತು ಗೌತಮೀ ಪುಣ್ಯಾ ಸರ್ವತೀರ್ಥಸಮಾಶ್ರಯಾ ॥ ೪ ॥

---

### ಕನ್ನಡದ ಅನುವಾದ

#### ವಿಷ್ಣುಪಾರ್ಷದವರ್ಣಿತದ್ವಾರಕಾಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ನಾರದನು ಮುಂದೆ ಹೋಗಿ ಹರಿಪ್ರಿಯಳಾದ ದ್ವಾರಕೆಯನ್ನು ನಮಸ್ಕರಿಸಿ ಅವಳನ್ನು ಸಂತೋಷಗೊಳಿಸುತ್ತ ಸವಿಯಾಗಿ ನುಡಿದನು.

೨. ನಾರದನು ಹೇಳುತ್ತಾನೆ :—ಮಹಾ ಭಾಗ್ಯವಂತಳೆ ! ನೋಡು. ಸಕಲ ತೀರ್ಥ, ಕ್ಷೇತ್ರ, ದೇವ, ಋಷಿಗಳು ನಿನ್ನಲ್ಲಿಗೆ ಬಂದಿದ್ದಾರೆ.

೩. ತೀರ್ಥಗಳೊಡನೆ ಬಂದು ಮುಂದಿರುವ ಈ ಪ್ರಯಾಗವನ್ನು ನೋಡು. ಇದು ನಿನ್ನ ಅಡಿದಾವರೆಯಲ್ಲಿ ಶ್ರದ್ಧೆಯಿಂದ ಹೊರಳಾಡುತ್ತಿರುವುದು.

೪.೫ ಮಂಗಳಕರಳೆ ! ಈ ಪುಷ್ಕರ ತೀರ್ಥವು ಶ್ರದ್ಧೆಯಿಂದ ನಿನ್ನನ್ನು ವಂದಿಸುತ್ತಿರುವುದು. ಸಮಸ್ತ ತೀರ್ಥಗಳಿಗೆ ಆಶ್ರಯಳಾದ ಈ ಗೌತಮಿಯು ಬೃಹಸ್ಪತಿಯು ಸಿಂಹರಾಶಿಯನ್ನು ಹೊಂದಲು ಮಹಾಸೌಭಾಗ್ಯವನ್ನು ಹೊಂದಿದ್ದರೂ ದುರ್ಜನರ ಸಹವಾಸದಿಂದ ಪಾಪವೆಂಬ ಅಗ್ನಿಯಿಂದ ಅತ್ಯಂತವಾಗಿ ದಗ್ಧಳಾಗಿರುವಳು.

ಸಿಂಹಸ್ಥೇ ಚ ಗುರೌ ಭದ್ರೇ ಸಂಪ್ರಾಪ್ತಾ ಸೌಭಗಂ ಮಹತ್ ।
ಕಿಂತು ದುರ್ಜನಸಂಸರ್ಗಾದ್ದಗ್ಧಾ ಪಾಪಾಗ್ನಿನಾ ಭೃಶಂ ॥ ೫ ॥
ತತೋಽಪಾಯಮಭಿಜ್ಞಾಯ ಋಷೀಣಾಂ ಶೃಣ್ವತಾಂ ತದಾ ।
ಶ್ರುತ್ವಾ ಕರ್ಣೇ ಮಹಚ್ಛಬ್ದಂ ಸಂಪ್ರಾಪ್ತೇಯಂ ತವಾಂತಿಕಂ ॥ ೬ ॥
ನಮಸ್ಕರೋತಿ ದೇವಿ ತ್ವಾಂ ದ್ವಾರಕೇ ಗೌತಮೀ ಶುಭಾ ।
ಪಶ್ಯ ಪಶ್ಯ ಮಹಾಪುಣ್ಯಾ ಇಯಂ ಭಾಗೀರಥೀ ಶುಭಾ ॥ ೭ ॥
ನಮಸ್ಕರೋತಿ ತೇ ಪಾದೌ ಸಂಹೃಷ್ಟಾ ಚ ಪುನಃ ಪುನಃ ।
ಪಶ್ಯೇಮಾಂ ನರ್ಮದಾಂ ರಮ್ಯಾಂ ಪ್ರಣತಾಂ ತವ ಪಾದಯೋಃ ।
ಯಮುನಾ ಚಂದ್ರಭಾಗೇಯಮಿಯಂ ಪ್ರಾಚೀ ಸರಸ್ವತೀ ।
ಸರಯೂರ್ಗಂಡಕೀ ಪ್ರಾಪ್ತಾ ಗೋಮತೀ ಪೂರ್ವವಾಹಿನೀ ॥ ೯ ॥
ಶೋಣಃ ಸಿಂಧುನದೀ ಚೈತಾ ಅನ್ಯಾಶ್ಚ ಸರಿತಾಂವರಾಃ ।
ಕೃಷ್ಣಾ ಭೀಮರಥೀ ಪುಣ್ಯಾ ಕಾವೇರ್ಯಾದ್ಯಾಃ ಸರಿದ್ವರಾಃ ॥ ೧೦ ॥
ಸೀತಾ ಚಕ್ಷುರ್ನದೀ ಭದ್ರಾ ನಮಂತ್ಯೇತಾಃ ಪದಾಂಬುಜಂ ।
ದ್ವಾರಕೇ ತಾ ಮಹಾಪುಣ್ಯಾ ಸಪ್ತದ್ವೀಪೋದ್ಭವಾಃ ಪರಾಃ ॥ ೧೧ ॥

---

೬. ಅದಕ್ಕೆ ಋಷಿಗಳು ಕೇಳುತ್ತಿರುವಾಗಲೇ ದಿವ್ಯವಾಣಿಯಿಂದ ಉಪಾಯವನ್ನರಿತು ಈ ಗೌತಮಿಯು ನಿನ್ನ ಸಮೀಪಕ್ಕೆ ಬಂದಿದ್ದಾಳೆ.

೭-೮ ದ್ವಾರಕಾದೇವಿ ! ಈ ಮಂಗಳಕರಳಾದ ಗೌತಮಿಯು ನಿನ್ನನ್ನು ನಮಸ್ಕರಿಸುತ್ತಾಳೆ. ನೋಡು. ಮಹಾ ಪುಣ್ಯಕರಳಾದ ಈ ಭಾಗೀರಥಿಯು ಸಂತೋಷದಿಂದ ನಿನ್ನ ಪಾದಗಳಿಗೆ ಎರಗುತ್ತಾಳೆ. ನಿನ್ನ ಪಾದಗಳಿಗೆ ಎರಗಿದ ಈ ರಮ್ಯ ನರ್ಮದೆಯನ್ನು ನೋಡು.

೯-೧೧ ಯಮುನೆ, ಚಂದ್ರಭಾಗಾ, ಪ್ರಾಚೀಸರಸ್ವತೀ, ಸರಯೂ, ಗಂಡಕೀ ಪೂರ್ವವಾಹಿನಿಯಾದ ಗೋಮತೀ, ಶೋಣ, ಸಿಂಧುನದೀ, ಕೃಷ್ಣಾ, ಭೀಮರಥೀ, ಕಾವೇರೀ, ಸೀತಾ, ಚಕ್ಷುರ್ನದೀ ಮೊದಲಾದ ಉತ್ತಮನದಿಗಳು ನಿನ್ನ ಅಡಿದಾವರೆಯನ್ನು ವಂದಿಸುವುವು. ದ್ವಾರಕೆಯೆ ! ಇವು ಸಪ್ತದ್ವೀಪಗಳಲ್ಲಿ ಉದ್ಭವಿಸಿದ ಪುಣ್ಯಕರವಾದ ನದಿಗಳು.

ಮಂದಾಕಿನೀ ಮಹಾಪುಣ್ಯಾ ಭೋಗವತ್ಯಾದಿಸಂಯುತಾ ।
ಪಶ್ಯಾಶ್ಚರ್ಯಮಿದಂ ಭದ್ರೇ ವಾರಣಾಸೀ ವಿಮುಕ್ತಿದಾ ॥ ೧೨ ॥

ಭಕ್ತ್ಯಾ ತೇ ಚ ಪದಾಂಭೋಜಂ ಶಿರಸ್ಯಾಧಾಯ ವರ್ತತೇ ।
ಕುರುಕ್ಷೇತ್ರಂ ಮಹಾಪುಣ್ಯಂ ನಮತಿ ತ್ವಾಮಹರ್ನಿಶಂ ॥ ೧೩ ॥

ದ್ವಾರಕೇ ಮಥುರಾಂ ಪಶ್ಯ ಪ್ರಣತಾಂ ತವ ಪಾದಯೋಃ ।
ಅಯೋಧ್ಯಾವಂತಿಕಾಮಾಯಾಸ್ತಾ ನಮಂತಿ ಪದಾಂಬುಜಂ ॥ ೧೪ ॥

ಕಾಂಚೀ ಗಯಾ ವಿಶಾಲಾ ಚ ವಿರಜಾ ಲುಠತಿ ಕ್ಷಿತೌ ।
ಶಾಲಿಗ್ರಾಮಂ ಮಹಾಕ್ಷೇತ್ರಂ ಪತಿತಂ ತವ ಪಾದಯೋಃ ॥ ೧೫ ॥

ವಿರಾಜತೇ ಪ್ರಭಾಸಂ ಚ ಕ್ಷೇತ್ರಂ ಪುರುಷೋತ್ತಮಂ ।
ಭಾರ್ಗವಾದೀನಿ ಚಾನ್ಯಾನಿ ಸರ್ವಕ್ಷೇತ್ರಾಣಿ ಸುಂದರಿ ।
ದ್ವಾರಕೇ ಪ್ರಣಮಂತಿ ತ್ವಾಂ ಭಕ್ತ್ಯೋತ್ಥಾಯ ಪುನಃ ಪುನಃ ॥ ೧೬ ॥

ಪಶ್ಯೈವಮಾನ್ಸಾಗರಾನ್ಸಪ್ತ ಪತಿತಾಂಸ್ತವ ಪಾದಯೋಃ ।
ಪಶ್ಯಾರಣ್ಯಾನಿ ಸರ್ವಾಣಿ ನೈಮಿಷಂ ಪ್ರಣತಂ ಪುರಃ ॥ ೧೭ ॥

ಧನುಷ್ಕಂ ಚ ದಶಾರಣ್ಯಂ ದಂಡಕಾರಣ್ಯಮರ್ಬುದಂ ।
ನಾರಾಯಣಾಶ್ರಮಂ ಪಶ್ಯ ದ್ವಾರಕೇ ಪ್ರಣತಂ ತಥಾ ॥ ೧೮ ॥

---

೧೨-೧೩. ಇದೋ ನೋಡು ಇವಳು ಭೋಗವತ್ಯಾದಿಗಳಿಂದ ಸಹಿತಳಾದ ಪುಣ್ಯ ಮಂದಾಕಿನಿಯು. ಇದು ಮುಕ್ತಿಯನ್ನೀಯುವ ಕಾಶಿಯು. ಇವರು ಭಕ್ತಿಯಿಂದ ನಿನ್ನ ಪಾದಕಮಲಗಳನ್ನು ತಲೆಯಲ್ಲಿರಿಸಿಕೊಂಡಿದ್ದಾರೆ. ಮಹಾಪುಣ್ಯಕರವಾದ ಕುರುಕ್ಷೇತ್ರವು ನಿನ್ನನ್ನು ಹಗಲು ರಾತ್ರಿ ನಮಸ್ಕರಿಸುತ್ತದೆ.

೧೪-೧೬. ದ್ವಾರಕೆಯೆ! ನಿನ್ನ ಕಾಲುಗಳಿಗೆರಗಿದ ಮಥುರೆಯನ್ನು ನೋಡು. ಸುಂದರಿ! ವಿರಾಜಿಸುತ್ತಿರುವ ಪ್ರಭಾಸ ಪುರುಷೋತ್ತಮ ಕ್ಷೇತ್ರಗಳೂ ಭಾರ್ಗವಾದಿ ಇತರ ಸಮಸ್ತಕ್ಷೇತ್ರಗಳೂ ಭಕ್ತಿಯಿಂದ ಎದ್ದು ನಿನ್ನನ್ನು ವಂದಿಸುವುವು.

೧೭-೧೮ ನಿನ್ನ ಪಾದಗಳಿಗೆ ನಮಸ್ಕಾರಮಾಡಿದ ಸಪ್ತಸಾಗರಗಳನ್ನೂ, ನೈಮಿಷಾದಿ ಸಕಲಾರಣ್ಯಗಳನ್ನೂ, ಧನುಷ್ಕ, ದಶಾರಣ್ಯ, ದಂಡಕಾರಣ್ಯ ಅರ್ಬುದ, ನಾರಾಯಣಾಶ್ರಮ ಇವುಗಳನ್ನೂ ನೋಡು.

ಅಯಂ ಮೇರುಶ್ಚ ಕೈಲಾಸೋ ಮಂದರಾದ್ಯಾಃ ಸಹಸ್ರಶಃ ।
ಹಿಮಾದ್ರಿರ್ವಿಂಧ್ಯಶೈಲಶ್ಚ ಶ್ರೀ ಶೈಲಾದ್ಯಾಃ ಪ್ರಹರ್ಷಿತಾಃ ।
ಏತೇ ಹ್ಯೃಷಿಗಣಾಃ ಸರ್ವೇ ನಮಂತಿ ಸ್ಮ ಪುನಃ ಪುನಃ || ೧೯ ||
ಗಂಗಾದ್ಯಾಃ ಸಾಗರಾಃ ಶೈಲಾ ನೃತ್ಯಂತಿ ಪುರತಸ್ತವ ।
ಋಷಿದೇವಗಣಾಃ ಸರ್ವೇ ಸರ್ವೇ ಗರ್ಜಂತಿ ನಾಮಭಿಃ || ೨೦ ||

ಶ್ರೀ ಪ್ರಹ್ಲಾದ ಉವಾಚ :—

ಇತ್ಯೇವಂ ವದತಸ್ತತ್ರ ದ್ವಾರಕಾ ಹೃಷ್ಟಮಾನಸಾ ।
ನೃತ್ಯತೋ ಮುದಿತಾನ್ವೀಕ್ಷ್ಯ ಸರ್ವಾನ್ಸ್ವೇಪ್ಸಾಭಿನಂದ್ಯ ಚ ।
ಉವಾಚ ಲಲಿತಾಂ ವಾಚಂ ಗೌತಮೀಂ ಸ್ಪೃಶ್ಯ ಪಾಣಿನಾ || ೨೧ ||
ಭಾಗೀರಥೀಪ್ರಯಾಗಾದೀನ್ಕ್ಷೇತ್ರಾದೀನಥ ಸರ್ವಶಃ ।
ದ್ವಾರಕಾ ಮಧುರಾಲಾಪೈಃ ಸರ್ವಾನಾನಂದಯತ್ತದಾ || ೨೨ ||
ಅಥಾಶ್ಚರ್ಯಮಭೂತ್ತತ್ರ ಸರ್ವಾನಂದವಿವರ್ಧನಂ ।
ಅಥ ತಾವತ್ತದಾಕಾಶೇ ಗೀತವಾದ್ಯಜಯಸ್ವನಾಃ || ೨೩ ||
ಗರ್ಜನಾನಿ ಸುಪುಣ್ಯಾನಿ ಹರಿಶಬ್ದೈಃ ಪೃಥಕ್ಪೃಥಕ್ ।
ಅಪಶ್ಯನ್ಸ್ತೈ ತದಾ ಸರ್ವೇ ಬ್ರಹ್ಮಾದ್ಯಾ ದೇವನಾಯಕಾಃ || ೨೪ ||
ಮಹೇಶಃ ಸ್ವಗಣೈಃ ಸಾರ್ಧಂ ಭವಾನ್ಯಾ ಸಮದೃಶ್ಯತ ।
ಇಂದ್ರಸ್ತು ತ್ರಿದಶೈಃ ಸಾರ್ಧಂ ಯಕ್ಷಗಂಧರ್ವಕಿನ್ನರೈಃ || ೨೫ ||

---

೧೯. ಮೇರು, ಕೈಲಾಸ ಮಂದರ, ಹಿಮಾದ್ರಿ, ವಿಂಧ್ಯ, ಶ್ರೀಶೈಲ ಮೊದಲಾದ ಈ ಪರ್ವತಗಳೂ, ಋಷಿಗಳೂ ಬಾರಿ ಬಾರಿಗೂ ನಿನ್ನನ್ನು ವಂದಿಸುತ್ತಿದ್ದಾರೆ.

೨೦. ನಿನ್ನಮುಂದೆ ಗಂಗಾದಿನದಿಗಳೂ, ಸಮುದ್ರಗಳೂ, ಪರ್ವತಗಳೂ ಕುಣಿಯುತ್ತಿವೆ. ಸಮಸ್ತ ದೇವತೆಗಳೂ ಋಷಿಗಳೂ, ಹರಿನಾಮವನ್ನುಚ್ಚರಿಸುತ್ತಿರುವರು.

೨೧. ಶ್ರೀಪ್ರಹ್ಲಾದನು ಹೇಳುತ್ತಾನೆ :—ಮುನಿಯು ಹೀಗೆ ಹೇಳುತ್ತಿರಲು ದ್ವಾರಕೆಯು ಸಂತೋಷಗೊಂಡು ಹರ್ಷದಿಂದ ಕುಣಿಯುತ್ತಿರುವ ಅವರನ್ನೆಲ್ಲ ನೋಡಿ ಪ್ರೀತಿಯಿಂದ ಅಭಿನಂದಿಸಿ ಗೌತಮಿಯನ್ನು ಕೈಯಿಂದಮುಟ್ಟಿ ಸವಿಮಾತನ್ನಾಡಿದಳು.

೨೨. ಬಳಿಕ ದ್ವಾರಕೆಯು ಭಾಗೀರಥೀ ಪ್ರಯಾಗ ಮೊದಲಾದ ಸಕಲಕ್ಷೇತ್ರಗಳನ್ನು ಇಂಪಾದ ಮಾತುಗಳಿಂದ ಆನಂದಗೊಳಿಸಿದಳು.

೨೩—೨೪ ಬಳಿಕ ಅಲ್ಲಿ ಎಲ್ಲರಿಗೂ ಆನಂದವನ್ನುಂಟುಮಾಡುವ ಆಶ್ಚರ್ಯವಾದೊಂದು ವಿಷಯವು ನಡೆಯಿತು. ಆಗ ಬ್ರಹ್ಮಾದಿ ದೇವನಾಯಕರು ಆಕಾಶದಲ್ಲಿ ಗೀತ, ವಾದ್ಯ, ಜಯಕಾರಧ್ವನಿಗಳನ್ನೂ, ಹರಿನಾಮಗರ್ಜನೆಗಳನ್ನೂ ಕೇಳಿದರು.

೨೫—೨೭ ಮಹೇಶ್ವರನು ಗಣಗಳಿಂದಲೂ, ಭವಾನಿಯಿಂದಲೂ, ಸಹಿತನಾಗಿ ದರ್ಶನವಿತ್ತನು. ಇಂದ್ರನು ದೇವತೆಗಳು, ಯಕ್ಷ, ಗಂಧರ್ವ, ಕಿನ್ನರು, ಮರುತ್ತ

ಮರುದ್ಭಿರ್ಲೋಕಪಾಲೈಶ್ಚ ನೃತ್ಯಮಾನಾಃ ಪ್ರಹರ್ಷಿತಾಃ ।
ಸಿದ್ಧವಿದ್ಯಾಧರಾಃ ಸರ್ವೇ ವಸ್ವಾದಿತ್ಯಾಶ್ಚ ಸಗ್ರಹಾಃ ॥ ೨೬ ॥
ಭೃಗ್ವಾದ್ಯಾಃ ಸನಕಾದ್ಯಾಶ್ಚ ನೃತ್ಯಮಾನಾಃ ಪ್ರಹರ್ಷಿತಾಃ ।
ಬ್ರಹ್ಮಾಣಂ ಚ ನಮಸ್ಕೃತ್ಯ ಸಪ್ತಸ್ವರ್ಗಸ್ಥಿತಾಃ ಸುರಾಃ ॥ ೨೭ ॥
ಊಚುಸ್ತೇ ದ್ವಾರಕಾಂ ದೃಷ್ಟ್ವಾ ಬ್ರಹ್ಮೇಶಾನಾದಯಸ್ತದಾ ।
ಹರ್ಷನಿಹ್ವಲಿತಾತ್ಮಾನೋ ವೀಕ್ಷ್ಯಾನ್ಯೋನ್ಯಂಚ ವಿಸ್ಮಿತಾಃ ॥ ೨೮ ॥

ದೇವಾ ಊಚುಃ :—

ಸೇಯಂ ವೈ ದ್ವಾರಕಾ ದೇವೀ ವಹತೇ ಯತ್ರ ಗೋಮತೀ ।
ಯತ್ರಾಸ್ತೇ ಭಗವಾನ್ಕೃಷ್ಣಃ ಸೇಯಂ ಪುಣ್ಯಾ ವಿರಾಜತೇ ॥ ೨೯ ॥
ಸರ್ವಕ್ಷೇತ್ರೋತ್ತಮಾ ಯಾ ಚ ಸರ್ವತೀರ್ಥೋತ್ತಮೋತ್ತಮಾ ।
ಸ್ವರ್ಗಾದಪ್ಯಧಿಕಾ ಭೂಮೌ ದ್ವಾರಕೇಯಂ ಪ್ರಕಾಶತೇ ॥ ೩೦ ॥
ವಿಶತ್ಯೈ ಚಕ್ರತೀರ್ಥಂ ಚ ಯಚ್ಛಿಲಾ ಚಕ್ರಚಿಹ್ನಿತಾ ।
ಮುಕ್ತಿದಾ ಪಾಪಿನಾಂ ಲೋಕೇ ಮ್ಲೇಚ್ಛದೇಶೇಽಪಿ ಪೂಜಿತಾ ॥ ೩೧ ॥

---

ಗಳು, ಲೋಕಪಾಲಕರು, ಇವರೊಡನೆ ಕಾಣಿಸಿಕೊಂಡನು. ಸಿದ್ಧ, ವಿದ್ಯಾಧರ, ವಸು, ಗ್ರಹಗಳೂ, ಭೃಗು, ಸನಕಾದಿಗಳೂ ಸಪ್ತಸ್ವರ್ಗಗಳಲ್ಲಿರುವ ದೇವತೆಗಳೂ ಸಂತೋಷದಿಂದ ಕುಣಿಯುತ್ತ ಬ್ರಹ್ಮನನ್ನು ವಂದಿಸಿದರು.

೨೮ ಆಗ ಬ್ರಹ್ಮರುದ್ರಾದಿ ದೇವತೆಗಳು ದ್ವಾರಕೆಯನ್ನು ಕಂಡು ಸಂತೋಷದಿಂದ ಪರಸ್ಪರ ನೋಡುತ್ತಾ ಆಶ್ಚರ್ಯಗೊಂಡರು.

೨೯. ಇವಳು ದ್ವಾರಕೆಯು. ಇಲ್ಲಿ ಗೋಮತೀನದಿಯೂ, ಭಗವಾನ್ ಕೃಷ್ಣನೂ ಇರುವುದರಿಂದ ಇವಳು ಪುಣ್ಯಕರಳಾಗಿ ವಿರಾಜಿಸುತ್ತಾಳೆ.

೩೦. ಸಕಲ ಕ್ಷೇತ್ರೋತ್ತಮವೂ, ಸರ್ವ ತೀರ್ಥಶ್ರೇಷ್ಠವೂ, ಸ್ವರ್ಗಕ್ಕಿಂತ ಅಧಿಕವೂ ಆದ ಈ ದ್ವಾರಕೆಯು ಹೀಗೆ ವಿರಾಜಿಸುವುದು.

೩೧. ಇದು ಚಕ್ರತೀರ್ಥವು, ಇಲ್ಲಿರುವ ಚಕ್ರಾಂಕಿತ ಶಿಲೆಯು ಮ್ಲೇಚ್ಛ ದೇಶದಲ್ಲಿಯೂ ಪೂಜ್ಯವಾಗಿ ಪಾಪಿಗಳಿಗೂ ಮೋಕ್ಷವನ್ನೀಯುವುದು.

ಪ್ರಹ್ಲಾದ ಉವಾಚ :—

ಬ್ರಹ್ಮಾದೀನಾಗತಾನ್ದೃಷ್ಟ್ವಾ ವಿಸ್ಮಿತಾ ನಾರದಾದಯಃ ।
ಕ್ಷೇತ್ರಾಣಿ ತೀರ್ಥಮುಖ್ಯಾನಿ ವಿಸ್ಮಿತಾನಿ ಸರಿದ್ವರಾಃ ॥ ೩೨ ॥
ಪ್ರಣೇಮುರ್ಯುಗತ್ಸರ್ವೇ ಸರ್ವಾಃ ಸರ್ವಾಣಿ ಸರ್ವಶಃ ।
ಬ್ರಹ್ಮಾದೀನಾಂ ಚ ತೀರ್ಥಾನಾಂ ದೃಷ್ಟ್ವಾತ್ವಿಯಾತ್ರಾಂ ಮನೋಹರಾಂ ।
ದ್ವಾರಕಾಂ ಪ್ರತಿ ವಿಪ್ರೇಂದ್ರಾಃ ವಿಸ್ಮಿತಾ ದ್ವಾರಕೌಕಸಃ ॥ ೩೩ ॥
ದೃಷ್ಟ್ವಾ ದೇವಗಣಾಃ ಸರ್ವೇ ದ್ವಾರಕಾಂ ಪ್ರತಿ ಮುಂದಿರೇ ।
ಗೀತವಾದ್ಯಾದಿನಿರ್ಘೋಷೈರ್ನೃತ್ಯಮಾನಾಃ ಪ್ರಹರ್ಷಿತಾಃ ॥ ೩೪ ॥
ವದಂತೋ ಜಯಶಬ್ದಾಂಶ್ಚ ಸೇಯಂ ಕೃಷ್ಣಪ್ರಿಯೇತಿ ಚ ।
ದೃಷ್ಟ್ವಾ ಬ್ರಹ್ಮಮಹೇಶಾನೌ ದ್ವಾರಕಾಂ ಪ್ರೀತಮಾನಸೌ ॥ ೩೫ ॥
ತ್ಯಕ್ತ್ವಾ ಚ ವಾಹನೇ ಶ್ರೇಷ್ಠೇ ದಂಡವತ್ಪತಿತೌ ಭುವಿ ।
ಊಚತುಶ್ಚ ತದಾ ದೇವೌ ದ್ವಾರಕಾಂ ಪ್ರತಿ ಹರ್ಷಿತೌ ॥ ೩೬ ॥
ಶ್ರೇಷ್ಠಾ ತ್ವಮಂಬ ಸರ್ವೇಭ್ಯೋಽಸ್ಮಾದಿಭ್ಯೋಽಪಿ ಸರ್ವತಃ ।
ಯತಸ್ತ್ವಾ ನ ತ್ಯಜೇತ್ಸಾಕ್ಷಾದ್ಭಗವಾನ್ವಿಷ್ಣುರವ್ಯಯಃ ॥ ೩೭ ॥
ಅತೋ ದರ್ಶಯ ದೇವೇಶಂ ಕೃಷ್ಣಂ ಕಂಸವಿನಾಶನಂ ।
ಯದ್ದರ್ಶನಾನ್ಮಹಾಸಿದ್ಧಿಃ ಸರ್ವೇಷಾಂಚ ಭವಿಷ್ಯತಿ ॥ ೩೮ ॥

---

೩೨. ಪ್ರಹ್ಲಾದನು ಹೇಳುತ್ತಾನೆ :—ನಾರದಾದಿ ಮುನಿಗಳೂ, ತೀರ್ಥಕ್ಷೇತ್ರಗಳೂ, ಉತ್ತಮ ನದಿಗಳೂ ಬಂದಿರುವ ಬ್ರಹಾದಿಗಳನ್ನು ಕಂಡು ಎಲ್ಲರೂ ಆಶ್ಚರ್ಯದಿಂದ ಒಂದೇ ಸಾರಿ ನಮಸ್ಕರಿಸಿದರು.

೩೩. ದ್ವಾರಕಾವಾಸಿಗಳಾದ ಜನರು ಬ್ರಹ್ಮಾದಿ ದೇವತೆಗಳ ಮತ್ತು ತೀರ್ಥಗಳ ಮನೋಹರವಾದ ದ್ವಾರಕಾಯಾತ್ರೆಯನ್ನು ಕಂಡು ಆಶ್ಚರ್ಯಗೊಂಡರು.

೩೪–೩೬. ಸಮಸ್ತ ದೇವತೆಗಳೂ ದ್ವಾರಕೆಯನ್ನುಕಂಡು ಗೀತ, ವಾದ್ಯಗಳಿಂದ ಸಂತೋಷದಿಂದ ಕುಣಿಯುತ್ತ ಇವಳು ಕೃಷ್ಣನಿಗೆ ಪ್ರಿಯಳು ಎಂದು ಜಯಕಾರ ಮಾಡುತ್ತಿದ್ದರು. ಬ್ರಹ್ಮರುದ್ರರು ದ್ವಾರಕೆಯನ್ನೀಕ್ಷಿಸಿ ತಮ್ಮ ಉತ್ತಮ ವಾಹನಗಳನ್ನು ತ್ಯಜಿಸಿ ನೆಲದ ಮೇಲೆ ನಿಂತು ಸಾಷ್ಟಾಂಗ ಪ್ರಣಾಮ ಮಾಡಿ ಆ ದ್ವಾರಕೆಯನ್ನು ಕುರಿತು ಸಂತೋಷದಿಂದ ಇಂತೆಂದರು.

೩೭. "ಅಮ್ಮ ! ಪೂಜ್ಯನಾದ ಶ್ರೀ ಕೃಷ್ಣನು ಪ್ರತ್ಯಕ್ಷವಾಗಿ ನಿನ್ನನನ್ನು ಬಿಡದಿರುವುದರಿಂದ ನೀನು ನಮ್ಮೆಲ್ಲರಿಗಿಂತಲೂ ಅಧಿಕಳಾಗಿರುವೆ.

೩೮. ಆ ಕೃಷ್ಣನ ದರ್ಶನದಿಂದ ಎಲ್ಲರಿಗೂ ಮಹಾ ಸಿದ್ಧಿಯುಂಟಾಗುವುದರಿಂದ ಕಂಸ ನಾಶಕನಾದ ಆ ಕೃಷ್ಣನನ್ನು ತೋರಿಸು.

ಪ್ರಹ್ಲಾದ ಉವಾಚ :—

ಇತ್ಯುಕ್ತ್ವಾ ಪ್ರಯಯೌ ದೇವೀ ತೀರ್ಥಕ್ಷೇತ್ರಾದಿಸಂಯುತಾ ।
ಬ್ರಹ್ಮೇಶಾನೌ ಪುರಸ್ಕೃತ್ಯ । ಹೃಷ್ಟಾ ದೃಷ್ಟ್ವಾ ಮಹೋತ್ಸವಾನ್ ॥ ೩೯ ॥
ಗೀತವಾದ್ಯಪತಾಕೈಶ್ಚ ದಿವ್ಯೋಪಾಯನ ಪಾಣಿಭಿಃ ।
ಪ್ರಾಪ್ಯೋವಾಚ ತತೋ ದೇವಾನ್ದ್ವಾರಕಾ ಹರ್ಷವಿಹ್ವಲಾ ॥ ೪೦ ॥
ಪಶ್ಯತಾಂ ಪಶ್ಯತಾಂ ದೇವಾಃ ಸೋಽಯಂ ವೈ ದ್ವಾರಕೇಶ್ವರಃ ।
ಪ್ರಾಪ್ಯ ಸಂದರ್ಶನಂ ಯಸ್ಯ ಮುಕ್ತಾನಾಂ ಯತ್ಫಲಂ ಭವೇತ್ ।
ನ ವಿದ್ಯತೇ ಸಹಸ್ರೇಷು ಬ್ರಹ್ಮಾಂಡೇಷು ಚ ಯತ್ಫಲಂ ॥ ೪೧ ॥
ತತೋ ದೇವಗಣಾಃ ಸರ್ವೇ ತೀರ್ಥಕ್ಷೇತ್ರಾದಿಸಂಯುತಾಃ ।
ಪಶ್ಚಿಮಾಭಿಮುಖಂ ದೃಷ್ಟ್ವಾ ಕೃಷ್ಣಂ ಕ್ಲೇಶವಿನಾಶನಂ । ॥ ೪೨ ॥
ಪ್ರಣೇಮುರ್ಯುಗಪತ್ಸರ್ವೇ ನೃತ್ಯಮಾನಾಃ ಸಮಂತತಃ ।
ಜಯಶಬ್ದಂ ನಮಃಶಬ್ದಂ ಗರ್ಜಂತೋ ಹರಿನಾಮಭಿಃ ॥ ೪೩ ॥
ಬ್ರಹ್ಮಾ ಭವೋ ಭವಾನೀ ಚ ಸೇಂದ್ರಾ ದೇವಗಣಾ ಭುವಿ !
ದೃಷ್ಟ್ವಾ ಕೃಷ್ಣಂ ಪ್ರಣೇಮುಸ್ತೇ ಭಕ್ತ್ಯೋತ್ಥಾಯ ಪುನಃ ಪುನಃ ॥ ೪೪ ॥

---

೩೯–೪೦. ಪ್ರಹ್ಲಾದನು ಹೇಳುತ್ತಾನೆ :—ಬ್ರಹ್ಮರುದ್ರರು ಹೀಗೆನ್ನಲು ದ್ವಾರಕಾದೇವಿಯು ತೀರ್ಥಕ್ಷೇತ್ರಾದಿಗಳಿಂದ ಸಹಿತಳಾಗಿ ಮಹೋತ್ಸವವನ್ನು ನೋಡಿ ಹರ್ಷಗೊಂಡ ಬ್ರಹ್ಮರುದ್ರರನ್ನು ಮುಂದಿರಿಸಿಕೊಂಡು ಗೀತ ವಾದ್ಯ ಪತಾಕೆಗಳೊಡನೆಯೂ, ಕಾಣಿಕೆಯೊಡನೆಯೂ ದೇವತೆಗಳೆಡೆಗೆ ಹೋಗಿ ಆನಂದದಿಂದ ಇಂತೆಂದಳು.

೪೧. ದೇವತೆಗಳೆ ! ಇಗೋ ಇವನು ದ್ವಾರಕಾಧಿಪನು ಇವನನ್ನು ನೋಡಿರಿ. ಇವನನ್ನು ನೋಡಿದರೆ ಮುಕ್ತರಿಗುಂಟಾಗುವ ಫಲವು ದೊರೆಯುವುದು. ಇಂತಹ ಫಲವು ಸಾವಿರಬ್ರಹ್ಮಾಂಡಗಳಲ್ಲಿಯೂ ಲಭಿಸುವುದಿಲ್ಲ.

೪೨. ಬಳಿಕ ಸಕಲದೇವತೆಗಳೂ ತೀರ್ಥಕ್ಷೇತ್ರಾದಿಗಳೊಡನೆ ಪಶ್ಚಿಮಾಭಿಮುಖರಾಗಿ ಕ್ಲೇಶನಾಶಕನಾದ ಕೃಷ್ಣನನ್ನು ಕಂಡು ಹತ್ತಿರಹೋಗಿ ಸಂತೋಷದಿಂದ ಒಂದೇ ಸಾರಿ ವಂದಿಸಿದರು.

೪೩–೪೪ ಬ್ರಹ್ಮ, ಮಹೇಶ್ವರ, ಪಾರ್ವತೀ, ಇಂದ್ರಾದಿ ದೇವತೆಗಳು ಗೀತ ವಾದ್ಯ ಧ್ವನಿಗಳಿಂದ ಕುಣಿಯುತ್ತಿಲೂ, ಜಯಶಬ್ದವನ್ನೂ, ನಮಶ್ಶಬ್ದವನ್ನೂ ಉಚ್ಚರಿಸುತ್ತಲೂ ಹರಿನಾಮಗಳಿಂದ ಗರ್ಜಿಸುತ್ತ ಕೃಷ್ಣನನ್ನು ನೋಡಿ ಬಾರಿ ಬಾರಿಗೂ ನಮಸ್ಕರಿಸಿದರು.

ಪ್ರಯಾಗಾದೀನಿ ತೀರ್ಥಾನಿ ಗಂಗಾದ್ಯಾಃ ಸರಿತೋಽಮಲಾಃ ।
ಋಷಯೋ ದೇವಗಂಧರ್ವಾಃ ಶುಕ್ರಾದ್ಯಾಃ ಸನಕಾದಯಃ ।
ವೀಕ್ಷ್ಯ ವಕ್ತ್ರಂ ಮಹಾವಿಷ್ಣೋಃ ಪ್ರಣೇಮುಶ್ಚ ಮುಹುರ್ಮುಹುಃ ॥ ೪೫ ॥
ಕೃಷ್ಣಕೃಷ್ಣೇತಿ ಕೃಷ್ಣೇತಿ ಜಯಕೃಷ್ಣೇತಿ ವಾದಿನಃ ।
ಸ್ನಾತ್ವಾ ತು ಗೋಮತೀ ನೀರೇ ತೀರೇ ಚೈವ ಮಹೋದಧೇಃ ।
ಕಮಲಾಸನಃ ಸಂಹೃಷ್ಟಃ ಶ್ರೀಮತ್ಕೃಷ್ಣಮಪೂಜಯತ್ ॥ ೪೬ ॥
ಸ್ವರ್ಧೇನು ಪಯಸಾ ಸ್ನಾಪ್ಯ ದಿವ್ಯೈಶ್ಚಾಮೃತಪಂಚಕೈಃ ।
ಭವಶ್ಚಾಥ ಭವಾನೀ ಚ ಪೂಜಯಾಮಾಸ ಭಕ್ತಿತಃ ॥ ೪೭ ॥
ಇಂದ್ರೋ ದೇವಗಣಾಃ ಸರ್ವೇ ಯೋಗಿನಃ ಸನಕಾದಯಃ ।
ಋಷಯೋ ನಾರದಾದ್ಯಾಶ್ಚ ಗಂಗಾದ್ಯಾಶ್ಚ ಸರಿದ್ವರಾಃ ॥ ೪೮ ॥
ಅಮೂಲ್ಯಾಭರಣೈರ್ಭಕ್ತ್ಯಾ ಮಹಾರತ್ನವಿನಿರ್ಮಿತೈಃ ।
ದಿವ್ಯೈರ್ಮಾಲ್ಯೈರನೇಕೈಶ್ಚ ನಂದನಾದಿಸಮುದ್ಭವೈಃ ॥ ೪೯ ॥
ಪ್ರಿಯಯಾ ಶ್ರೀತುಲಸ್ಯಾ ವೈ ಶ್ರೀಮತ್ಕೃಷ್ಣಮಪೂಜಯನ್ ।
ಧೂಪೈರ್ನೀರಾಜನೈರ್ದಿವ್ಯೈಃ ಕರ್ಪೂರೈಶ್ಚ ಪೃಥಕ್ ಪೃಥಕ್ ॥ ೫೦ ॥

---

೪೫. ಪ್ರಯಾಗಾದಿ ತೀರ್ಥಗಳೂ, ಗಂಗಾದಿ ನಿರ್ಮಲ ನದಿಗಳೂ, ಋಷಿಗಳೂ ದೇವಗಂಧರ್ವರೂ, ಶುಕಾದಿಗಳೂ, ಸನಕಾದಿಗಳೂ, ವಿಷ್ಣುವಿನ ಮುಖವನ್ನು ಕಂಡು ನಮಸ್ಕರಿಸಿದರು.

೪೬. ಬ್ರಹ್ಮನು ಕೃಷ್ಣ ಕೃಷ್ಣ ಜಯಕೃಷ್ಣ ಎಂದುಹೇಳುತ್ತಾ ಮಹೋದಧಿಯ ತೀರದಲ್ಲಿರುವ ಗೋಮತೀ ನೀರಿನಲ್ಲಿ ಮಿಂದು ಆನಂದದಿಂದ ಶ್ರೀಕೃಷ್ಣನನ್ನು ಪೂಜಿಸಿದನು.

೪೭. ಉಮಾಮಹೇಶ್ವರರು ಕಾಮಧೇನುವಿನ ಕ್ಷೀರದಿಂದಲೂ, ಪಂಚಾಮೃತಗಳಿಂದಲೂ, ಭಕ್ತಿಯಿಂದ ಪೂಜಿಸಿದರು.

೪೮–೫೦ ಇಂದ್ರಾದಿ ದೇವತೆಗಳೂ ಸನಕಾದಿಯೋಗಿಗಳೂ ನಾರದಾದಿ ಮುನಿಗಳೂ ಗಂಗಾದಿನದಿಗಳೂ ಮಹಾರತ್ನಗಳಿಂದ ನಿರ್ಮಿತವಾದ ಅಮೂಲ್ಯಾಭರಣಗಳಿಂದಲೂ, ನಂದನಾದ್ಯುದ್ಯಾನಗಳಲ್ಲಿ ಹುಟ್ಟಿದ ಅನೇಕ ದಿವ್ಯ ಮಾಲ್ಯಗಳಿಂದಲೂ, ಪ್ರಿಯವಾದ ತುಲಸಿಯಿಂದಲೂ ಶ್ರೀಕೃಷ್ಣನನ್ನು ಪೂಜಿಸಿದರು. ಬ್ರಹ್ಮನೂ, ಬ್ರಹ್ಮತನಯರೂ, ಇಂದ್ರನಿಂದ ಸಹಿತರಾದ ದೇವತೆಗಳೂ, ಕ್ಲೇಶನಾಶಕನಾದ ಶ್ರೀಮಹಾ

ನೈವೇದ್ಯೈರ್ವಿವಿಧೈಃ ಪುಷ್ಪೈರ್ದಿವ್ಯೈಃ ಕರ್ಪೂರವಾಸಿತೈಃ ।
ಸಕರ್ಪೂರೈಶ್ಚ ತಾಂಬೂಲೈಃ ಪ್ರಿಯೈಶ್ಚೋಪಾಯನೈಸ್ತಥಾ ॥ ೩೧ ॥
ಮಹಾಮಾಂಗಲಿಕೈಃ ಸರ್ವೈಃ ಸಮಂಗಲಾರ್ತಿಕೈಃ ।
ಸಂಪೂಜ್ಯೈವಂ ಮಹಾವಿಷ್ಣುಂ ಕೃಷ್ಣಂ ಕ್ಲೇಶವಿನಾಶನಂ ।
ಪ್ರಹೃಷ್ಟಾ ನನೃತುಃ ಸರ್ವೇ ಗೀತವಾದ್ಯಪ್ರಹರ್ಷಿತಾಃ ॥ ೩೨ ॥
ಪುರತಃ ಕೃಷ್ಣದೇವಸ್ಯ ಹ್ಯಪ್ಸರೋಭಿಸ್ಸಮನ್ವಿತಾಃ ।
ಬ್ರಹ್ಮಾ ಚ ಬ್ರಹ್ಮಪುತ್ರಾಶ್ಚ ತತಃ ಸೇಂದ್ರಾಮರುದ್ಗಣಾಃ ॥ ೩೩ ॥
ಬ್ರಹ್ಮಾದೀನ್ನೃತ್ಯತಃ ಪ್ರೇಕ್ಷ್ಯ ಭಗವಾನ್ಕಮಲೇಕ್ಷಣಃ ।
ವಾರಯಾಮಾಸ ಹಸ್ತೇನ ಪ್ರೀತಃ ಪ್ರಾಹ ಸುರಾನ್ಪ್ರಭುಃ ॥ ೩೪ ॥

ಶ್ರೀ ಭಗವಾನುವಾಚ :—

ಭೋ ಭೋ ಬ್ರಹ್ಮನ್ ಮಹೇಶಾನ ಹೇ ಭವಾನಿ ಮಹೇಶ್ವರಿ ।
ಕ್ಷೇತ್ರಾಣಿ ಸರ್ವತೀರ್ಥಾನಿ ನಾರದಃ ಸನಕಾದಯಃ ।
ಪ್ರೀತೋಽಹಂ ಭಕ್ಷೇತಾಂ ಸರ್ವ್ಯೈಕ್ಸರ್ವಾನ್ಕಾಮಾನವಾಪ್ಸ್ಯಥ ॥ ೩೫ ॥

ಪ್ರಹ್ಲಾದ ಉವಾಚ :—

ತದಾಭಿಲಷಿತಾನ್ಲಬ್ಧ್ವಾ ಸರ್ವಾನ್ಕಾಮವರಾನಥ।
ಭಕ್ತ್ಯಾ ಪರಮಯಾ ಶ್ರೀಮತ್ಕೃಷ್ಣಂ ಪ್ರೋಚುಃ ಪ್ರಹರ್ಷಿತಾಃ ॥ ೩೬ ॥

---

ವಿಷ್ಣುವನ್ನು ಧೂಪ, ದಿವ್ಯಕರ್ಪೂರ ನೀರಾಜನ, ವಿವಿಧನೈವೇದ್ಯ, ದಿವ್ಯಪುಷ್ಪ, ಕರ್ಪೂರಸಹಿತ ತಾಂಬೂಲ, ಪ್ರಿಯೋಪಾಯನ, ಮಂಗಳವಸ್ತು, ಮಂಗಳಾರ್ತಿಕ ಇವುಗಳಿಂದ ಪೂಜಿಸಿ ಆವನ ಮುಂದೆ ಗೀತವಾದ್ಯಾದಿಗಳಿಂದ ಸಂತೋಷದಿಂದ ಕುಣಿದರು.

೩೪. ಪೂಜ್ಯನಾದ ಕೃಷ್ಣನು ಕುಣಿಯುತ್ತಿರುವ ಬ್ರಹ್ಮಾದಿಗಳನ್ನು ನೋಡಿ ಕೈಯಿಂದ ತಡೆದು ಸಂತೋಷದಿಂದ ಅವರನ್ನು ಕುರಿತು ಇಂತೆಂದನು.

೩೫.—ಶ್ರೀಭಗವಂತನು ಹೇಳುತ್ತಾನೆ :—ಎಲೈ ಬ್ರಹ್ಮನೆ! ಮಹೇಶ್ವರ! ಭವಾನಿ! ಕ್ಷೇತ್ರಗಳೆ! ತೀರ್ಥಗಳೆ! ನಾರದಸನಕಾದಿಗಳೆ! ನಾನು ನಿಮ್ಮ ವಿಷಯದಲ್ಲಿ ಸಂತುಷ್ಟನಾಗಿರುವೆನು. ಸಕಲೇಷ್ಟಾರ್ಥಗಳನ್ನು ಪಡೆಯುವಿರಿ.

೩೬. ಪ್ರಹ್ಲಾದನು ಹೇಳುತ್ತಾನೆ. :—ಹೀಗೆ ಆ ಬ್ರಹ್ಮಾದಿಗಳು ಇಷ್ಟಾರ್ಥಗಳನ್ನು ಪಡೆದು ಅತಿ ಭಕ್ತಿಯಿಂದ ಸಂತೋಷದಿಂದ ಶ್ರೀಕೃಷ್ಣನನ್ನು ಕುರಿತು ಇಂತೆಂದರು.

ದೇವಾ ಊಚುಃ :—
ಪ್ರಾಪ್ತಃ ಕಾಮವರೋಽಸ್ಮಾಭಿಃ ಸರ್ವತಃ ಕೃಪಯಾ ವಿಭೋ ।
ಸಪ್ರೇಮಾ ತ್ವತ್ಪದಾಂಭೋಜೇ ಭಕ್ತಿರ್ಭವ್ಯಾನಪಾಯಿನೀ ॥ ೫೭ ॥
ಪ್ರಹ್ಲಾದ ಉವಾಚ :—
ತಥೈವ ಪೂಜಯಾಮಾಸೂ ರುಕ್ಮಿಣೀಂ ಕೃಷ್ಣವಲ್ಲಭಾಂ ।
ಅಥ ಬ್ರಹ್ಮಮಹೇಶಾನಾ ಸರ್ವೇಷಾಂ ಶೃಣ್ವತಾಮಿದಂ ॥ ೫೮ ॥
ಶ್ರದ್ಧಯಾ ಪರಯಾ ಯುಕ್ತಾ ದ್ವಾರಕಾಂ ಪ್ರತ್ಯವೋಚತುಃ ।
ತ್ವಂ ದೇವಿ ಸರ್ವತೀರ್ಥಾನಾಂ ಕ್ಷೇತ್ರಾಣಾಮುತ್ತಮೋತ್ತಮಾ ॥ ೫೯ ॥
ಪರ್ವತಾನಾಂ ಯಥಾ ಮೇರುಃ ಸಿಂಧೂನಾಂ ಸಾಗರೋ ಯಥಾ ।
ಪ್ರಾಣೋ ಯಥಾ ಶರೀರಾಣಾಮಿಂದ್ರಿಯಾಣಾಂ ತು ವೈ ಮನಃ ।
ತೇಜಸ್ವಿನಾಂ ಯಥಾ ವಹ್ನಿಃ ತತ್ವಾನಾಂ ಚೈತ್ಯ ಉಚ್ಯತೇ ।
ಯಥಾ ಗ್ರಹರ್ಕ್ಷತಾರಾಣಾಂ ಸೋಮೋ ವೈ ಜ್ಯೋತಿಷಾಂ ಧ್ರುವಂ ॥ ೬೦ ॥
ವಿಷಾಂ ಪ್ರಕಾಶಪುಂಜಾನಾಂ ಯಥಾ ಸೂರ್ಯಃ ಪ್ರಕಾಶತೇ ।
ಯಥಾ ನಃ ಸರ್ವದೇವಾನಾಂ ಮಹಾವಿಷ್ಣುರಯಂ ಮಹಾನ್ ।
ತಥೈವ ಸರ್ವತೀರ್ಥಾನಾಂ ಪೂಜ್ಯೇಯಂ ದ್ವಾರಕಾ ಶುಭಾ ॥ ೬೧ ॥
ಪ್ರಹ್ಲಾದ ಉವಾಚ :—
ಇತ್ಯುಕ್ತಾ ಸರ್ವದೇವಾನಾಂ ಕ್ಷೇತ್ರಾದೀನಾಂ ಚ ಸತ್ತಮಾಃ ।
ಅಧಿಪತ್ಯೇ ಸುರೇಶಾನಾ ದ್ವಾರಕಾಮಭಿಷೇಚತುಃ ॥ ೬೩ ॥

---

೫೭. ದೇವತೆಗಳು ಹೇಳುತ್ತಾರೆ :—ಸ್ವಾಮಿ ! ನಿನ್ನ ದಯೆಯಿಂದ ನಾವು ಇಷ್ಟವಾದ ವರವನ್ನು ಪಡೆದೆವು. ನಮಗೆ ನಿನ್ನ ಅಡಿದಾವರೆಗಳಲ್ಲಿ ಶಾಶ್ವತಭಕ್ತಿ ಯುಂಟಾಗಲಿ.

೫೮-೬೨ ಪ್ರಹ್ಲಾದನು ಹೇಳುತ್ತಾನೆ :—ಬ್ರಹ್ಮಾದಿಗಳು ಹಾಗೆಯೇ ಕೃಷ್ಣ ಪ್ರಿಯೆಯಾದ ರುಕ್ಮಿಣಿಯನ್ನು ಪೂಜಿಸಿ ಎಲ್ಲರೂ ಕೇಳುತ್ತಿರುವಾಗಲೆ ಅತಿಶ್ರದ್ಧೆಯಿಂದ ದ್ವಾರಕೆಯನ್ನು ಕುರಿತು ಇಂತೆಂದರು. "ದೇವಿ ! ನೀನು ಪರ್ವತಗಳಿಗೆ ಮೇರುವಿನಂತೆಯೂ, ನದಿಗಳಿಗೆ ಸಾಗರದಂತೆಯೂ, ದೇಹಗಳಿಗೆ ಪ್ರಾಣದಂತೆಯೂ, ಇಂದ್ರಿಯಗಳಿಗೆ ಮನಸ್ಸಿನಂತೆಯೂ, ತೇಜಸ್ಸುಗಳಿಗೆ ಆತ್ಮನಂತೆಯೂ, ಗ್ರಹನಕ್ಷತ್ರಗಳಿಗೆ ಚಂದ್ರನಂತೆಯೂ, ಪ್ರಕಾಶಗಳಿಗೆ ಸೂರ್ಯನಂತೆಯೂ, ಈ ನಮ್ಮ ಸಕಲದೇವತೆಗಳಿಗೆ ಮಹಾವಿಷ್ಣುವಿನಂತೆಯೂ, ಸಕಲತೀರ್ಥಗಳಿಗೆ ಪೂಜ್ಯಳೂ, ಉತ್ತಮಳೂ ಆಗಿರುವೆ

೬೩-೬೬ ಪ್ರಹ್ಲಾದನು ಹೇಳುತ್ತಾನೆ :—ಬ್ರಹ್ಮ ರುದ್ರರೂ, ದೇವತೆಗಳು, ಮುನಿಗಳೂ, ತೀರ್ಥಕ್ಷೇತ್ರಗಳೂ ಹೀಗೆಂದು ದ್ವಾರಕೆಯನ್ನು ನಾನಾವಿಧವಾದ್ಯಗಳನ್ನು ಬಾರಿಸುತ್ತ ದಿವ್ಯ ಪಂಚಾಮೃತಗಳಿಂದಲೂ, ದಿಗ್ಗಜಗಳು ಸೊಂಡಲಿನಿಂದ

ಬ್ರಹ್ಮೇಶಾನೌ ತಥಾ ದೇವಾಃ ಪ್ರಜೇಶಾ ಋಷಯೋಽಮಲಾಃ ।
ತೀರ್ಥಾನಾಂ ಕ್ಷೇತ್ರರಾಜಾನಾಂ ಮಹಾರಾಜತ್ವಕಾರಣಂ ॥ ೬೪ ॥
ಚಕ್ರುರ್ಮಹಾಭಿಷೇಕಂ ತು ದ್ವಾರಕಾಯಾಃ ಪ್ರಹರ್ಷಿತಾಃ ।
ವಾದಯಂತೋ ವಿಚಿತ್ರಾಣಿ ವಾದಿತ್ರಾಣಿ ಮಹೋತ್ಸವೇ ॥ ೬೫ ॥
ದಿವ್ಯೈಃ ಪಂಚಾಮೃತೈಸ್ತೋಯೈಃ ಸರ್ವತೀರ್ಥಸಮುದ್ಭವೈಃ ।
ಪುಣ್ಯೈಶ್ಚಾಕಾಶಗಂಗಾಯಾಃ ದಿಗ್ಗಜಾನಾಂ ಕರೋದ್ಧೃತೈಃ ॥ ೬೬ ॥
ಅಥ ವಾಸಾಂಸಿ ದಿವ್ಯಾನಿ ದತ್ವಾ ಚಾಚಮನಂ ತಥಾ ।
ಚರ್ಚಿತಾಂ ಚಂದನೈರ್ದಿವ್ಯೈರ್ದಿವ್ಯಾಭರಣಭೂಷಿತಾಂ ॥ ೬೭ ॥
ಪೂಜಾಂ ಚ ಚಕ್ರಿರೇ ಪುಷ್ಪೈಶ್ಚಂದನಾದಿಸಮುದ್ಭವೈಃ ।
ತದಾ ಜಾತಾ ಮಹಾದಿವ್ಯಾಃ ಪುರುಷಾಃ ಪಾರ್ಷದಾ ಹರೇಃ ॥ ೬೮ ॥
ವಿಷ್ವಕ್ಸೇನ ಸುನಂದಾದ್ಯಾ ದ್ಯೋತಯಂತೋ ದಿಶೋ ದಶ ।
ಜಯಶಬ್ದಂ ನಮಃ ಶಬ್ದಂ ವದಂತಃ ಪುಷ್ಪವರ್ಷಿಣಃ ॥ ೬೯ ॥
ಗೀತವಾದಿತ್ರಘೋಷೇಣ ನೃತ್ಯಮಾನಾಃ ಪ್ರಹರ್ಷಿತಾಃ ।
ಕಿರೀಟಕುಂಡಲೈರ್ಹಾರೈರ್ವೈಜಯಂತ್ಯಾ ವಿಭೂಷಿತಾಃ ॥ ೭೦ ॥
ಶ್ಯಾಮಾಶ್ಚತುರ್ಭುಜಾಃ ಪೀತವಸ್ತ್ರಮಾಲ್ಯೈರ್ವಿಭೂಷಿತಾಃ ।
ಸ್ವಪ್ರಭಾದೀಪ್ಯಮಾನೌ ತೇ ದೃಷ್ಟ್ವಾ ಬ್ರಹ್ಮಮಹೇಶ್ವರೌ ॥ ೭೧ ॥

---

ತಂದ ಆಕಾಶಗಂಗಾಜಲದಿಂದಲೂ, ಸಕಲತೀರ್ಥಗಳನೀರಿನಿಂದಲೂ, ಸಕಲತೀರ್ಥ ಕ್ಷೇತ್ರಗಳಿಗೆ ರಾಣಿಯಾಗುವಂತೆ ಸಂತೋಷದಿಂದ ಅಭಿಷೇಕ ಮಾಡಿದರು.

೬೭–೭೦ ಬಳಿಕ ಅವರು ದಿವ್ಯವಸ್ತ್ರಗಳನ್ನೂ ಆಚಮನವನ್ನೂ ಗಂಧವನ್ನೂ ದಿವ್ಯಾಭರಣಗಳನ್ನೂ ಕೊಟ್ಟು ಚಂದನಾದಿ ಕುಸುಮಗಳಿಂದ ಪೂಜಿಸಿದರು. ಆಗ ವಿಷ್ವಕ್ಸೇನ ಸುನಂದ ಮೊದಲಾದ ವಿಷ್ಣು ಪಾರ್ಷದರು ಹತ್ತು ದಿಕ್ಕುಗಳನ್ನೂ ಬೆಳಗುತ್ತಲೂ, ಜಯಶಬ್ದ, ನಮಶ್ಶಬ್ದಗಳನ್ನು ಹೇಳುತ್ತ, ಪುಷ್ಪಗಳನ್ನು ಸುರಿಸುತ್ತ ಗೀತವಾದ್ಯಧ್ವನಿಗಳಿಂದ ಸಂತೋಷದಿಂದ ಕುಣಿಯುತ್ತ, ಕಿರೀಟ, ಕುಂಡಲ ವೈಜಯಂತೀಹಾರಗಳಿಂದ ಅಲಂಕಾರಗೊಂಡು ಉದ್ಭವಿಸಿದರು.

೭೧–೭೩. ಶ್ಯಾಮವರ್ಣರೂ, ಚತುರ್ಭುಜರೂ, ಪೀತವಸ್ತ್ರಮಾಲ್ಯಗಳಿಂದ ಅಲಂಕಾರಗೊಂಡವರೂ, ಆದ ಅವರು ಕಾಂತಿಯಿಂದ ಪ್ರಕಾಶಿಸುತ್ತಿರುವ ಬ್ರಹ್ಮ

ನಾರದಂ ಸನಕಾದೀಂಶ್ಚ ಮಹಾಭಾಗವತಾನ್ಯಷೀನ್ ।
ತೇಽಪಿ ತಾನಪಿ ಸಂಹೃಷ್ಟಾಃ ಪ್ರಹರ್ಷಾಗತಸಂಭ್ರಮಾಃ ॥ ೭೨ ॥
ವವಂದಿರೇ ತತೋಽನ್ಯೋನ್ಯಂ ಹೃಷ್ಟಾ ಆಲಿಂಗನಾದಿಭಿಃ ।
ಋಷಯೋಽನ್ಯೇ ಚ ದೇವಾಶ್ಚ ಪ್ರಣೇಮುರ್ವಿಷ್ಣುಪಾರ್ಷದಾನ್ ॥ ೭೩ ॥
ಅಥ ತೇ ಸಮುಪಾಗಮ್ಯ ದ್ವಾರಕಾಂ ವಿಷ್ಣುಪಾರ್ಷದಾಃ ।
ನತ್ವಾಽಥ ದ್ವಾರಕಾನಾಥಂ ದ್ವಾರಕಾಂ ವೈ ತಥೈವ ಚ ॥ ೭೪ ॥
ಸಂಪೂಜ್ಯ ಶ್ರದ್ಧಯಾ ಭಕ್ತ್ಯಾ ನಿಃಶ್ರೇಯಸವನೋದ್ಭವೈಃ ।
ಕುಸುಮೈರ್ವಿವಿಧೈರ್ದಿವ್ಯೈಸ್ತುಲಸ್ಯಾ ತದ್ವನೋತ್ಥಯಾ ॥ ೭೫ ॥
ತದುತ್ಪನ್ನೈಃ ಫಲೈರ್ದಿವ್ಯೈರ್ಧೂಪೈರ್ನೀರಾಜನೈಃ ಪ್ರಭುಂ ।
ವಿವಿಧೈಶ್ಚಾನ್ನತಾಂಬೂಲೈರ್ದತ್ವಾ ಕೃಷ್ಣಮತೋಷಯನ್ ॥ ೭೬ ॥
ಕ್ಷೇತ್ರತೀರ್ಥಾಧಿರಾಜಾನಾಂ ಮಹಾರಾಜಸ್ತ್ವಮೀಶ್ವರಿ ।
ಇತಿ ಸರ್ವೇ ವದಂತಸ್ತು ದ್ವಾರಕಾಂ ಚ ವವಂದಿರೇ ॥ ೭೭ ॥
ಏತಸ್ಮಿನ್ನಂತರೇ ವಿಪ್ರಾ ದೇವದುಂದುಭಿನಿಸ್ಸ್ವನಾಃ ।
ಅಶ್ರೂಯಂತ ಮಹಾ ಶಬ್ದಾ ಅಭೂವನ್ಪುಷ್ಪವೃಷ್ಟಯಃ ॥ ೭೮ ॥

---

ರುದ್ರರನ್ನೂ, ನಾರದಸನಕಾದಿಮುನಿಗಳನ್ನೂ ವಂದಿಸಿದರು. ಆ ಮುನಿಗಳೂ, ದೇವತೆಗಳೂ, ಆ ವಿಷ್ವಕ್ಸೇನ ಮೊದಲಾದವರನ್ನು ಸಂತೋಷದಿಂದ ನಮಸ್ಕರಿಸಿದರು.

೭೪-೭೬ ತರುವಾಯ ಆ ವಿಷ್ಣುಪಾರ್ಷದರು ದ್ವಾರಕೆಯಹತ್ತಿರ ಬಂದು ದ್ವಾರಕೇಶ್ವರನನ್ನೂ, ಆ ದ್ವಾರಕೆಯನ್ನೂ ವಂದಿಸಿ ವೈಕುಂಠವನದಲ್ಲಿ ಹುಟ್ಟಿದ ನಾನಾವಿಧ ದಿವ್ಯಪುಷ್ಪಗಳಿಂದಲೂ, ಆ ವನದ ತುಳಸಿಯಿಂದಲೂ, ದಿವ್ಯಫಲಗಳಿಂದಲೂ ನೀರಾಜನಗಳಿಂದಲೂ, ವಿವಿಧ ತಾಂಬೂಲಗಳಿಂದಲೂ, ಶ್ರೀ ಕೃಷ್ಣನನ್ನು ಸಂತೋಷಗೊಳಿಸಿದರು.

೭೭. ಅವರು, "ಮಹೇಶ್ವರೀ, ! ನೀನು ಉತ್ತಮತೀರ್ಥಕ್ಷೇತ್ರಗಳಿಗೆ ಅರಸಿಯಾಗಿರುವೆ" ಎಂದು ಹೇಳುತ್ತ ಆ ದ್ವಾರಕೆಯನ್ನು ವಂದಿಸಿದರು.

೭೮. ವಿಪ್ರರೆ ! ಇಷ್ಟರಲ್ಲಿ ದೇವದುಂದುಭಿ ಧ್ವನಿಗಳು ಕೇಳಿದುವು. ಪುಷ್ಪವೃಷ್ಟಿಯಾಯಿತು.

ಅಥಾಸೀನ್ಮಹದಾಶ್ಚರ್ಯಂ ಶೃಣ್ವಂತು ಋಷಿಸತ್ತಮಾಃ ।
ಕುರುಕ್ಷೇತ್ರಂ ಪ್ರಯಾಗಂ ಚ ಸವ್ಯದಕ್ಷಿಣ ಪಾರ್ಶ್ವಯೋಃ ॥ ೭೯ ॥
ಸ್ಥಿತ್ವಾ ಜಗೃಹತುರ್ದಿವ್ಯೇ ಶ್ವೇತಚ್ಛತ್ರೇ ಮನೋಹರೇ ।
ದ್ವಾರಕಾಯಾಸ್ತಥಾ ಶುಭ್ರೇ ಚಾಮರವ್ಯಜನೇ ಶುಭೇ ॥ ೮೦ ॥
ಅಯೋಧ್ಯಾ ಮಥುರಾ ಮಾಯಾ ವಾರಾಣಸೀ ಜಯಸ್ವನೈಃ ।
ಸ್ತುವಂತ್ಯಸ್ಯಾಸ್ತಥಾನ್ಯಾನಿ ಸರ್ವಕ್ಷೇತ್ರಾಣಿ ಸರ್ವಶಃ ॥ ೮೧ ॥
ತೀರ್ಥಾನಿ ಸರಿತಃ ಸರ್ವಾ ದ್ವಾರಕಾಯಾ ಮುಖಾಂಬುಜಂ ।
ಪಶ್ಯಂತಃ ಪರಮಾನಂದಂ ಲೇಭಿರೇ ದೇವಮಾನವಾಃ ॥ ೮೨ ॥
ಆಹುಶ್ಚ ಪಾರ್ಷದಾ ವಿಷ್ಣೋರ್ಧನ್ಯಾನ್ಯೇತಾನಿ ಸರ್ವಶಃ ।
ದೃಷ್ಟ್ವಾತು ದ್ವಾರಕಾಂ ಪುಣ್ಯಾಂ ಸರ್ವಲೋಕೈಕಮಂಡನಾಂ ॥ ೮೩ ॥

---

೭೯-೮೦. ಋಷಿವರ್ಯರೆ! ಅನಂತರ ಮಹಾಶ್ಚರ್ಯವುಂಟಾಯಿತು. ಅದನ್ನು ಕೇಳಿರಿ. ಕುರುಕ್ಷೇತ್ರದಲ್ಲಿ ಪ್ರಯಾಗಗಳು ಆ ದ್ವಾರಕೆಯು ಎಡ ಬಲಗಡೆಗಳಲ್ಲಿ ನಿಂತು ಮನೋಹರವಾದ ದಿವ್ಯ ಶ್ವೇತಚ್ಛತ್ರಗಳನ್ನು ಹಿಡಿದರು. ಚಾಮರ ವ್ಯಜನಗಳಿಂದ ಬೀಸಿದರು.

೮೧. ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಮತ್ತು ಇತರ ಸಮಸ್ತ ಕ್ಷೇತ್ರಗಳು ಎಲ್ಲೆಡೆಯಲ್ಲಿಯೂ ಸ್ತುತಿಸಿದುವು.

೮೨. ಸಮಸ್ತ ದೇವತೆಗಳೂ, ಮನುಷ್ಯರೂ, ತೀರ್ಥಗಳೂ, ನದಿಗಳೂ ದ್ವಾರಕೆಯ ಮುಖಕಮಲವನ್ನು ಕಂಡು ಆತ್ಯಾನಂದಭರಿತರಾದರು.

೮೩. ವಿಷ್ಣು ಪಾರ್ಷದರು ಈ ತೀರ್ಥಕ್ಷೇತ್ರಗಳು ಸಮಸ್ತ ಲೋಕಗಳಿಗೆ ಮುಖ್ಯಾಲಂಕಾರಭೂತವಾದ ಈ ದ್ವಾರಕೆಯನ್ನು ನೋಡಿದ್ದರಿಂದ ಧನ್ಯವಾದುವು.

**ವೇದಯಜ್ಞತಪೋಜಾಪ್ಯೈಃ ಸಮ್ಯಗಾರಾಧಿತೋ ಹರಿಃ ॥**
**ಪ್ರಸೀದೇದ್ಯಸ್ಯ ತಸ್ಯ ಸ್ಯಾದ್ದ್ವಾರಕಾಗಮನೇ ಮತಿಃ ॥ ೮೪ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ವಿಷ್ಣುಪಾರ್ಷದ ವರ್ಣಿತದ್ವಾರಕಾಮಾಹಾತ್ಮ್ಯವರ್ಣನಂ ನಾಮ
ದ್ವಾತ್ರಿಂಶತಮೋಽಧ್ಯಾಯಃ

---

೮೪. ವೇದ, ಯಜ್ಞ, ತಪಸ್ಸು, ಮಂತ್ರಗಳಿಂದ ವಿಷ್ಣುವನ್ನು ಆರಾಧಿಸಿ ಸಂತೋಷಗೊಳಿಸಿದವರಿಗೆ ದ್ವಾರಕೆಗೆ ಹೋಗಲು ಬುದ್ಧಿಯುಂಟಾಗುವುದು ಎಂದರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ವಿಷ್ಣುಪಾರ್ಷದವರ್ಣಿತದ್ವಾರಕಾಮಾಹಾತ್ಮ್ಯವರ್ಣನವೆಂಬ
ಮುವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ತ್ರಯಸ್ತ್ರಿಂಶತ್ತಮೋಽಧ್ಯಾಯಃ

## ಸರ್ವತೀರ್ಥಕ್ಷೇತ್ರಾದಿಕೃತನಿವಾಸವರ್ಣನಂ

ಶ್ರೀ ಪ್ರಹ್ಲಾದ ಉವಾಚ :—
ಶ್ರುತ್ವಾ ಬ್ರಹ್ಮಮಹೇಶಾನೌ ಯದುಕ್ತಂ ವಿಷ್ಣುಪಾರ್ಷದೈಃ ।
ದ್ವಾರಕಾಯಾಸ್ತು ಮಾಹಾತ್ಮ್ಯಂ ತದ್ವರ್ಣಯಿತುಮೂಚತುಃ ॥ ೧ ॥
ಶ್ರೀ ಬ್ರಹ್ಮೇಶಾನಾವೂಚತುಃ :—
ಭೋಭೋಃ ಕ್ಷೇತ್ರಾಣಿ ತೀರ್ಥಾನಿ ಸರಾಂಸಿ ಸಾಗರಾದಯಃ ।
ಪ್ರಯಾಗಾದೀನಿ ತೀರ್ಥಾನಿ ಕಾಶ್ಯಾದ್ಯಾ ಮುಕ್ತಿದಾಯಕಾಃ ॥ ೨ ॥
ಭವತಾಂ ತೀರ್ಥರಾಜಾನಾಂ ಮಹಾರಾಜಸ್ತ್ವಿಯಂ ಶುಭಾ ।
ದ್ವಾರಕಾ ಸೇವನೀಯಾ ವೈ ಸ್ಥೀಯತಾಂ ಸ್ವೇಚ್ಛಯಾ ಬಹಿಃ ॥ ೩ ॥
ಶ್ರೀ ಪ್ರಹ್ಲಾದ ಉವಾಚ :—
ಮಹೇಶವಚನಂ ಶ್ರುತ್ವಾ ಸರ್ವೇಷಾಮುತ್ಸವೋಽಭವತ್ ।
ಪ್ರದಕ್ಷಿಣಾಂ ತತಃ ಕೃತ್ವಾ ದ್ವಾರಕಾಂ ಪ್ರಣಿಪತ್ಯ ಚ ॥ ೪ ॥

---

ಕನ್ನಡದ ಅನುವಾದ

ಸರ್ವತೀರ್ಥಕ್ಷೇತ್ರಾದಿಕೃತನಿವಾಸವರ್ಣನ

೧. ಶ್ರೀ ಪ್ರಹ್ಲಾದನು ಹೇಳುತ್ತಾನೆ :—ಬ್ರಹ್ಮ ಮಹೇಶ್ವರರು ವಿಷ್ಣುಪಾರ್ಷದರು ದ್ವಾರಕಾಮಾಹಾತ್ಮ್ಯವನ್ನು ಕೇಳಿ ಅದನ್ನು ವರ್ಣಿಸಲಾರಂಭಿಸಿದರು.

೨-೩. ಶ್ರೀ ಬ್ರಹ್ಮರುದ್ರರು ಹೇಳುತ್ತಾರೆ :—ಮುಕ್ತಿಯನ್ನೀಯುವ ಪ್ರಯಾಗಾದಿ ತೀರ್ಥಗಳೇ! ಕಾಶ್ಯಾದಿ ಕ್ಷೇತ್ರಗಳೇ! ಸರೋವರ ಸಾಗರಾದಿಗಳೇ! ಉತ್ತಮ ತೀರ್ಥಗಳಾಗಿರುವ ನಿಮಗೆ ಈ ದ್ವಾರಕೆಯು ಅರಸಿಯಾಗಿರುವಳು. ಇವಳನ್ನು ನೀವು ಹೊರಗಿದ್ದು ನಿಮ್ಮಿಷ್ಟಾನುಸಾರ ಸೇವಿಸಿರಿ.

೪. ಶ್ರೀ ಪ್ರಹ್ಲಾದನು ಹೇಳುತ್ತಾನೆ :—ಆ ಮಹೇಶ್ವರನ ಮಾತನ್ನು ಕೇಳಿ ಸಕಲ ತೀರ್ಥಗಳಿಗೆ ಸಂತೋಷವಾಯಿತು. ಅವು ದ್ವಾರಕೆಗೆ ಪ್ರದಕ್ಷಿಣನಮಸ್ಕಾರಗೈದು ಅಲ್ಲಿ ವಾಸಿಸಿದುವು.

ಆವಾಸಂ ಚಕ್ರಿರೇ ತತ್ರ ಕ್ಷೇತ್ರತೀರ್ಥಾನಿ ಹರ್ಷತಃ ।
ಭಾಗೀರಥೀ ಪ್ರಯಾಗಂ ಚ ಯಮುನಾ ಚ ಸರಸ್ವತೀ ।
ಸರಯೂರ್ಗಂಡಕೀ ಪುಣ್ಯಾ ಗೋಮತೀ ಪೂರ್ವವಾಹಿನೀ ॥ ೫ ॥
ಅನ್ಯಾಶ್ಚ ಸರಿತಃ ಸರ್ವಾಃ ಸಿಂಧುಶೋಣೌ ನದೌ ತಥಾ ।
ಪಂಚಾಶತ್ಕೋಟಿಭಿಸ್ತೀರ್ಥೈರ್ದಿಗ್ಭಾಗೇ ಹ್ಯುತ್ತರೇ ಸ್ಥಿತಾಃ ।
ಲಂಪಟಾಃ ಕೃಷ್ಣಸೇವಾಯಾಂ ಪಶ್ಯಂತೋ ದ್ವಾರಕಾಂ ಮುಹುಃ ॥ ೬ ॥
ಮಂದಾಕಿನೀ ತಥಾ ಪುಣ್ಯಾ ನದೀ ಭಾಗೀರಥೀ ಚ ಯಾ ।
ಮಹಾನದೀ ನರ್ಮದಾ ಚ ಶಿಪ್ರಾ ಪ್ರಾಚೀ ಸರಸ್ವತೀ ॥ ೭ ॥
ಚಕ್ಷುರ್ಭದ್ರಾ ತಥಾ ಸೀತಾ ನದ್ಯೋಽನ್ಯಾಃ ಪಾಪನಾಶಿನೀಃ ।
ವರ್ತಂತೇ ಪೂರ್ವದಿಗ್ಭಾಗೇ ತೀರ್ಥೈಶ್ಚ ಷಷ್ಟಿಕೋಟಿಭಿಃ ॥ ೮ ॥
ಪಯೋಷ್ಣೀ ತಪತೀ ಪುಣ್ಯಾ ವಿದರ್ಭಾ ಚ ಪಯಸ್ವಿನೀ ।
ಗೋದಾವರೀ ಮಹಾಪುಣ್ಯಾ ಭೀಮಾ ಕೃಷ್ಣಾ ನದೀ ತಥಾ ॥ ೯ ॥
ಕಾವೇರೀ ಪ್ರಮುಖಾಃ ಪುಣ್ಯಾ ಅನ್ಯಾಶ್ಚೈವಾಘನಾಶಿನೀಃ ।
ಸ್ವತೀರ್ಥಸಹಿತಾ ಭಕ್ತ್ಯಾ ನವನವತಿಕೋಟಿಭಿಃ ॥ ೧೦ ॥

---

೫–೬. ಭಾಗೀರಥೀ, ಪ್ರಯಾಗ, ಯಮುನಾ, ಸರಸ್ವತೀ, ಸರಯೂ, ಗಂಡಕೀ, ಪುಣ್ಯಕರವಾದ ಪೂರ್ವವಾಹಿನಿ ಗೋಮತೀ ಇವುಗಳೂ, ಸಿಂಧು ಶೋಣನದಗಳೂ ಇತರ ಪುಣ್ಯ ನದಿಗಳೂ ಐವತ್ತು ಕೋಟಿ ತೀರ್ಥಗಳೊಡನೆ ದ್ವಾರಕೆಯನ್ನು ನೋಡುತ್ತ ಕೃಷ್ಣಸೇವಾ ನಿರತವಾಗಿ ಅಲ್ಲಿ ವಾಸಿಸುದುವು.

೭–೮. ಮಂದಾಕಿನೀ, ಭಾಗೀರಥೀ, ನರ್ಮದಾ, ಶಿಪ್ರಾ, ಪ್ರಾಚೀಸರಸ್ವತೀ, ಚಕ್ಷುರ್ಭದ್ರಾ, ಸೀತಾನದಿಗಳೂ, ಇತರ ಪಾಪನಾಶಕ ನದಿಗಳೂ ಅರುವತ್ತು ಕೋಟಿ ತೀರ್ಥಗಳೊಡನೆ ಪೂರ್ವದಿಕ್ಕಿನಲ್ಲಿ ನೆಲೆಸಿದುವು.

೯–೧೦. ಪ್ರಯೋಷ್ಣೀ, ತಪತೀ, ಪುಣ್ಯಾ, ವಿದರ್ಭಾ, ಗೋದಾವರೀ ಭೀಮಾ, ಕೃಷ್ಣಾ, ಕಾವೇರೀ ಇವೇ ಮೊದಲಾದ ಪಾಪಗಳನ್ನು ಪರಿಹರಿಸುವ ಪುಣ್ಯಕರಗಳಾದ ನದಿಗಳು ತೊಂಬತ್ತೊಂಬತ್ತು ಕೋಟಿ ತೀರ್ಥಗಳೊಡನೆ ದ್ವಾರಕೆಯನ್ನು ಸೇವಿಸಲು ಔತ್ಸುಕ್ಯವುಳ್ಳವಗಳಾಗಿ ದಕ್ಷಿಣದಿಕ್ಕಿನಲ್ಲಿ ಇರುವುವು. ಇವು ಕೃಷ್ಣನ ಸನ್ನಿಧಿಯಲ್ಲಿ ಗೋಮತೀ ತೀರದಲ್ಲಿ ವಿನೋದಪಡುತ್ತಿವೆ.

ಸ್ಥಿತಾ ದಕ್ಷಿಣ ದಿಗ್ಭಾಗೇ ದ್ವಾರಕಾಸೇವನೋತ್ಸುಕಾಃ ।
ಕ್ರೀಡಂತಿ ಗೋಮತೀನೀರೇ ತೀರೇ ಚ ಕೃಷ್ಣಸನ್ನಿಧೌ ॥ ೧೧ ॥
ಸಪ್ತದ್ವೀಪೇಷು ಯಾಃ ಸಂತಿ ತಥಾನ್ಯಾ ವೈ ಸರಿದ್ವರಾಃ ।
ಸಾಗರಾಶ್ಚ ತಥಾ ಸಪ್ತ ಪಶ್ಚಿಮಾಯಾಂ ದಿಶಿ ಸ್ಥಿತಾಃ ॥ ೧೨ ॥
ಕ್ರೀಡಂತಿ ಚಕ್ರತೀರ್ಥೇ ವೈ ತೀರ್ಥೈಶ್ಚ ಶತಕೋಟಿಭಿಃ ।
ಪಶ್ಯಂತಿ ಚ ಮುಹುಃ ಕೃಷ್ಣಂ ಪಶ್ಚಿಮಾಭಿಮುಖಂ ಸದಾ ॥ ೧೩ ॥
ವಿದಿಶಾಸು ಚ ಸರ್ವಾಸು ತೀರ್ಥಸಂಖ್ಯಾ ನ ವಿದ್ಯತೇ ।
ಪುಷ್ಕರಾದೀನಿ ತೀರ್ಥಾನಿ ವಿಶಾಲಾ ವಿರಜಾ ಗಯಾ ॥ ೧೪ ॥
ಶತೈಕಕೋಟಿಸ್ತೀರ್ಥೈರ್ಗೋಮತ್ಯುದಧಿಸಂಗಮೇ ।
ವರ್ತಂತೇ ಕೃಷ್ಣಸೇವಾಯಾಂ ಸೋತ್ಸವಾನಿ ದ್ವಿಜೋತ್ತಮಾಃ ॥ ೧೫ ॥
ವಾರಾಣಸೀ ಪೂರ್ವೈಶಾನ್ಯಾಮವಂತೀ ಪೂರ್ವದಿಕ್ಸ್ಥಿತಾ ।
ಆಗ್ನೇಯ್ಯಾಂ ದಿಶಿ ಕಾಂತೀ ಚ ದಕ್ಷಿಣೇ ಮಥುರಾ ಸ್ಥಿತಾ ॥ ೧೬ ॥
ನೈರ್ಋತ್ಯಾಂ ಚ ತಥಾ ಮಾಯಾ ಅಯೋಧ್ಯಾ ಪಶ್ಚಿಮೇ ಸ್ಥಿತಾಃ ।
ವಾಯವ್ಯಾಂ ತು ಕುರುಕ್ಷೇತ್ರಂ ಹರಿಕ್ಷೇತ್ರಂ ತಥೋತ್ತರೇ ॥ ೧೭ ॥

---

೧೨. ಸಪ್ತದ್ವೀಪಗಳಲ್ಲಿರುವ ಇತರ ಉತ್ತಮ ನದಿಗಳೂ, ಸಪ್ತಸಾಗರಗಳೂ ಪಶ್ಚಿಮದಿಕ್ಕಿನಲ್ಲಿರುವುವು.

೧೩. ಅವು ನೂರುಕೋಟಿ ತೀರ್ಥಗಳೊಡನೆ ಚಕ್ರತೀರ್ಥದಲ್ಲಿ ವಿನೋದಗೊಳ್ಳುತ್ತಿವೆಯಲ್ಲದೆ ಪಶ್ಚಿಮಾಭಿಮುಖನಾದ ಕೃಷ್ಣನನ್ನು ಯಾವಾಗಲೂ ನೋಡುತ್ತಿವೆ.

೧೪-೧೫ ದ್ವಿಜವರ್ಯರೆ ! ಸಕಲದಿಕ್ಕುಗಳಲ್ಲಿರುವ ತೀರ್ಥಗಳ ಸಂಖ್ಯೆಯೇ ತಿಳಿಯಲಿಲ್ಲ. ಪುಷ್ಕರಾದಿ ತೀರ್ಥಗಳೂ, ವಿಶಾಲಾ, ವಿರಜಾ, ಗಯಾ, ಇವುಗಳೂ ನೂರುಕೋಟಿ ತೀರ್ಥಗಳೊಡನೆ ಕೃಷ್ಣನ ಸೇವೆಯಲ್ಲಿ ಸಂತೋಷವುಳ್ಳವುಗಳಾಗಿ ಗೋಮತೀಸಾಗರ ಸಂಗಮದಲ್ಲಿ ಇರುವುವು.

೧೬-೧೯ ಈ ದ್ವಾರಕೆಯು ಈಶಾನ್ಯದಿಕ್ಕಿನಲ್ಲಿ ಕಾಶಿಯೂ, ಪೂರ್ವದಿಕ್ಕಿನಲ್ಲಿ ಅವಂತಿಯೂ, ಆಗ್ನೇಯದಿಕ್ಕಿನಲ್ಲಿ ಕಾಂತಿಯೂ, ದಕ್ಷಿಣದಿಕ್ಕಿನಲ್ಲಿ ಮಥುರೆಯೂ, ನೈಋತ್ಯದಿಕ್ಕಿನಲ್ಲಿ ಮಾಯೆಯೂ, ಪಶ್ಚಿಮದಲ್ಲಿ ಅಯೋಧ್ಯೆಯೂ, ವಾಯುವ್ಯದಲ್ಲಿ ಕುರುಕ್ಷೇತ್ರವೂ, ಉತ್ತರದಲ್ಲಿ ಹರಿಕ್ಷೇತ್ರವೂ, ಈಶಾನ್ಯದಲ್ಲಿ ಶಿವಕ್ಷೇತ್ರವೂ, ಪೂರ್ವದಲ್ಲಿ

ಶಿವಕ್ಷೇತ್ರಂ ಚ ಐಶಾನ್ಯಾಮೈಂದ್ರ್ಯಾಂ ಚ ಪುರುಷೋತ್ತಮಃ ।
ಆಗ್ನೇಯ್ಯಾಂ ಚ ಭೃಗುಕ್ಷೇತ್ರಂ ಪ್ರಭಾಸಂ ದಕ್ಷಿಣಾಶ್ರಿತಂ ॥ ೧೮ ॥
ಶ್ರೀರಂಗಂ ನೈರ್ಋತೇ ಭಾಗೇ ಲೋಹದಂಡಂ ತು ಪಶ್ಚಿಮೇ ।
ನಾರಸಿಂಹಾನಿ ವಾಯವ್ಯೇ ಕೋಕಾಮುಖ್ಯಂ ತಥೋತ್ತರೇ ॥ ೧೯ ॥
ಕಾಮಾಖ್ಯಾ ರೇಣುಕಾದೀನಿ ಶಾಕ್ತೇಯಾನಿ ಚ ಸರ್ವಶಃ ।
ಕ್ಷೇತ್ರರಾಜಾನಿ ಸರ್ವಾಣಿ ಯಥಾಸ್ಥಾನೇ ವಸಂತಿ ಹಿ ॥ ೨೦ ॥
ಉತ್ತರೇ ಚೈವ ಸೌರಾಣಿ ಗಾಣಪತ್ಯಾನಿ ಕೃತ್ಸ್ನಶಃ ।
ಕ್ಷೇತ್ರಾಣ್ಯುತ್ತರತಃ ಸಂತಿ ರುಕ್ಮಿಣ್ಯಾಃ ಸನ್ನಿಧೌ ದ್ವಿಜಾಃ ॥ ೨೧ ॥
ಧೇನುಕಂ ನೈಮಿಷಾರಣ್ಯಂ ದಂಡಕಂ ಸೈಂಧವಂ ತಥಾ ।
ದಶಾರಣ್ಯಮರ್ಬುದಂ ಚ ನರನಾರಾಯಣಾಶ್ರಮಕಂ ॥ ೨೨ ॥
ಯಥಾದಿಶಂ ವಸಂತಿ ಸ್ಮ ದ್ವಾರಕಾಯಾಃ ಸಮಂತತಃ ।
ಮೇರ್ವಾದ್ಯಾಃ ಪರ್ವತಾಃ ಸೌಮ್ಯೇ ದ್ವಾರಕಾಸೇವನೋತ್ಸುಕಾಃ ॥ ೨೩ ॥
ಕೈಲಾಸಾದ್ಯಾಶ್ಚ ಐಶಾನ್ಯಾಮೈಂದ್ರ್ಯಾಂ ಹಿಮವದಾದಯಃ ।
ಶ್ರೀಶೈಲಾದ್ಯಾಶ್ಚ ಆಗ್ನೇಯಾಂ ಸಿಂಹಾದ್ರ್ಯಾದ್ಯಾ ಯಮೇ ತಥಾ ॥ ೨೪ ॥

---

ಪುರುಷೋತ್ತಮಕ್ಷೇತ್ರವೂ, ಆಗ್ನೇಯದಲ್ಲಿ ಭೃಗುಕ್ಷೇತ್ರವೂ, ದಕ್ಷಿಣದಲ್ಲಿ ಪ್ರಭಾಸವೂ, ನೈಋತ್ಯದಲ್ಲಿ ಶ್ರೀರಂಗವೂ, ಪಶ್ಚಿಮದಲ್ಲಿ ಲೋಹದಂಡವೂ, ವಾಯುವ್ಯದಲ್ಲಿ ನಾರಸಿಂಹಕ್ಷೇತ್ರವೂ, ಉತ್ತರದಲ್ಲಿ ಕೋಕಾಮುಖ್ಯಕ್ಷೇತ್ರವೂ, ಇರುವುವು.

೨೦, ಕಾಮ, ರೇಣುಕ, ಶಾಕ್ತೇಯಗಳೆಂಬ ಉತ್ತಮಕ್ಷೇತ್ರಗಳೆಲ್ಲ ಆಯಾಸ್ಥಳ ಕ್ಷೇತ್ರಗಳಲ್ಲಿರುವುವು.

೨೧. ದ್ವಿಜರೆ! ರುಕ್ಮಿಣಿಯ ಸನ್ನಿಧಿಯಲ್ಲಿ ಉತ್ತರದಿಕ್ಕಿನಲ್ಲಿ ಸೌರಗಾಣಪತ್ಯಗಳಿರುವುವು.

೨೨–೨೩ ಧೇನುಕ, ನೈಮಿಷಾರಣ್ಯ, ದಂಡಕ, ಸೈಂಧವ, ದಶಾರಣ್ಯ, ಅರ್ಬುದ, ನರನಾರಾಯಣಾಶ್ರಮ ಇವುಗಳು ದ್ವಾರಕೆಯಸುತ್ತಲೂ, ಆಯಾಸ್ಥಳಗಳಲ್ಲಿ ವಾಸಿಸುವುವು. ಮೇರು ಮೊದಲಾದ ಪರ್ವತಗಳೂ, ಉತ್ತರದಿಕ್ಕಿನಲ್ಲಿ ದ್ವಾರಕೆಯನ್ನು ಸೇವಿಸಲು ವಾಸಿಸುವುವು.

೨೪–೨೫. ಕೈಲಾಸಾದಿಗಳು ಈಶಾನ್ಯದಿಕ್ಕಿನಲ್ಲಿಯೂ, ಪೂರ್ವದಲ್ಲಿ ಹಿಮಾಲಯಾದಿಗಳೂ, ಶ್ರೀಶೈಲಾದಿಗಳು ಆಗ್ನೇಯದಲ್ಲಿಯೂ, ಸಿಂಹಾದ್ರಿಮೊದಲಾದುವುಗಳು

ನೈರ್ಋತ್ಯಾಂ ವಾಮಮಾರ್ಗಾದ್ಯಾ ಮಹೇಂದ್ರ ಋಷಭಾದಯಃ ।
ಅನ್ಯೇ ಚ ಪುಣ್ಯಶೈಲಾಶ್ಚ ಸುಲೋಕಾಲೋಕಮಾನಸಾಃ ।
ದ್ವಾರಕಾಂ ಪರಿತಃ ಸಂತಿ ಪರ್ಯುಪಾಸಂತಿ ಪ್ರತ್ಯಹಂ ॥ ೨೫ ॥
ಏವಂ ಬ್ರಹ್ಮಾದಯೋ ದೇವಾ ಋಷಯಃ ಸನಕಾದಯಃ ।
ಕ್ಷೇತ್ರತೀರ್ಥಾದಿಭಿರ್ಯುಕ್ತಾ ಅನ್ಯೈಃ ಪುಣ್ಯತಮೈಸ್ತಥಾ ॥ ೨೬ ॥
ಶ್ರದ್ಧಯಾ ಪರಯಾ ಭಕ್ತ್ಯಾ ಕನ್ಯಾರಾಶಿಸ್ಥಿತೇ ಗುರೌ ।
ಆಯಾಂತಿ ದ್ವಾರಕಾಂ ದ್ರಷ್ಟುಂ ಬ್ರಹ್ಮಾದ್ಯಾಶ್ಚ ಪ್ರಹರ್ಷಿತಾಃ । ॥ ೨೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಸರ್ವಕ್ಷೇತ್ರಾದಿಕೃತನಿವಾಸವರ್ಣನಂ ನಾಮ
ತ್ರಯಸ್ತ್ರಿಂಶತ್ತಮೋಽಧ್ಯಾಯಃ

---

ದಕ್ಷಿಣದಲ್ಲಿಯೂ, ವಾಮಮಾರ್ಗಮಹೇಂದ್ರ ಋಷಭಾದಿಗಳು ನೈಋತ್ಯದಲ್ಲಿಯೂ, ಇರುವುವು. ಇತರ ಪುಣ್ಯ ಪರ್ವತಗಳೂ, ಲೋಕಾಲೋಕಮಾನಸಗಳೂ ದ್ವಾರಕೆಯ ಸುತ್ತಲೂ ಅದನ್ನು ಸೇವಿಸುತ್ತಿರುವುವು.

೨೬. ಬೃಹಸ್ಪತಿಯು ಕನ್ಯಾರಾಶಿಯನ್ನು ಹೊಂದಲು ಬ್ರಹ್ಮಾದಿದೇವತೆಗಳೂ, ಬ್ರಾಹ್ಮ್ಯಾದಿಮಾತೆಯರೂ, ಸನಕಾದಿಮುನಿಗಳೂ, ಇತರಪುಣ್ಯಕರವಾದ ತೀರ್ಥ ಕ್ಷೇತ್ರಾದಿಗಳೊಡನೆ ಅತಿಶಯಶ್ರದ್ಧಾಭಕ್ತಿಯಿಂದ ಸಂತುಷ್ಟಚಿತ್ತರಾಗಿ ದ್ವಾರಕೆಯನ್ನು ನೋಡಲು ಬರುತ್ತಾರೆ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಸರ್ವಕ್ಷೇತ್ರಾದಿಕೃತನಿವಾಸವರ್ಣನವೆಂಬ
ಮುವ್ವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಚತುಸ್ತ್ರಿಂಶತ್ತಮೋಽಧ್ಯಾಯಃ

## ದಿಲೀಪಕೃತದ್ವಾರಕಾಯಾತ್ರಾವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ಏವಮುದ್ಭುತಮಾಹಾತ್ಮ್ಯಂ ದ್ವಾರಕಾಯಾಂ ಮುನೀಶ್ವರಾಃ ।
ಸರ್ವೇಷಾಂ ಕ್ಷೇತ್ರತೀರ್ಥಾನಾಂ ಮಹಾಪಾಪನಿವಾರಕಂ ॥ ೧ ॥

ವರ್ಣಾನಾಮಾಶ್ರಮಾಣಾಂ ಚ ಪತಿತಾನಾಂ ವಿಶೇಷತಃ ।
ಮಹಾಪಾಪಹರಂ ಪ್ರೋಕ್ತಂ ಮಹಾಪುಣ್ಯವಿವರ್ಧನಂ ॥ ೨ ॥

ಅತ್ಯುಗ್ರಪಾಪರಾಶೀನಾಂ ದಾಹಸ್ಥಾನಂ ಯಥಾ ಸ್ಮೃತಂ ।
ದ್ವಾರಕಾಗಮನಂ ವಿಪ್ರಾಃ ಕಿಂ ಪುನರ್ದ್ವಾರಕಾ ಸ್ಥಿತಿಃ ॥ ೩ ॥

ವಿಶೇಷೇಣ ತು ವಿಪ್ರೇಂದ್ರಾಃ ಕನ್ಯಾರಾಶಿಸ್ಥಿತೇ ಗುರೌ ।
ಬ್ರಹ್ಮಾದಯೋಽಪಿ ದೃಶ್ಯಂತೇ ಯತ್ರ ತೀರ್ಥೈಶ್ಚ ಸಂಯುತಾ ॥ ೪ ॥

---

## ಕನ್ನಡದ ಅನುವಾದ

### ದಿಲೀಪಕೃತದ್ವಾರಕಾಯಾತ್ರಾವರ್ಣನ

೧-೨ ಶ್ರೀಪ್ರಹ್ಲಾದನು ಹೇಳುತ್ತಾನೆ:—ಮುನಿವರ್ಯರೆ ! ಸಕಲ ತೀರ್ಥಕ್ಷೇತ್ರಗಳ ಪಾಪಗಳನ್ನು ಪರಿಹರಿಸುವುದೂ, ವರ್ಣಾಶ್ರಮಗಳಿಂದ ಪತಿತರ ಘೋರಪಾಪಗಳನ್ನು ನಿವಾರಿಸುವುದೂ, ಪುಣ್ಯವನ್ನು ಹೆಚ್ಚಿಸುವುದೂ ಆದ ದ್ವಾರಕೆಯ ಅದ್ಭುತ ಮಾಹಾತ್ಮ್ಯೆಯನ್ನು ಹೇಳಿರುವೆನು.

೩. ಬ್ರಾಹ್ಮಣರೆ ! ದ್ವಾರಕಾಯಾತ್ರೆಯು ಅತಿಕಠಿನಪಾಪಗಳನ್ನು ದಹಿಸುವುದೆಂದಮೇಲೆ ಅಲ್ಲಿವಾಸಮಾಡುವುದರ ಪ್ರಯೋಜನವನ್ನು ಏನು ಹೇಳತಕ್ಕುದು.

೪. ದ್ವಿಜವರ್ಯರೆ ! ವಿಶೇಷವಾಗಿ ಬೃಹಸ್ಪತಿಯು ಕನ್ಯಾರಾಶಿಯನ್ನು ಸೇರಲು ಬ್ರಹ್ಮಾದಿಗಳೂ ಅಲ್ಲಿಗೆ ತೀರ್ಥಗಳೊಡನೆ ಆಗಮಿಸುವರು.

ಪ್ರತಿವರ್ಷಂ ಪ್ರಕುರ್ವಂತಿ ದ್ವಾರಕಾಗಮನಂ ನರಾಃ ।
ತೇಷಾಂ ಪಾದರಜಃ ಸ್ಪೃಷ್ಟ್ವಾ ದಿವಂ ಯಾಂತಿ ಚ ಪಾಪಿನಃ ॥ ೫ ॥
ಗೋಮತೀ ನೀರಪೂತಾನಾಂ ಕೃಷ್ಣವಕ್ತ್ರಾವಲೋಕಿನಾಂ ।
ದರ್ಶನಾತ್ಪಾತಕಂ ತೇಷಾಂ ಯಾತಿ ಜನ್ಮಶತಾರ್ಜಿತಂ ॥ ೬ ॥
ಇತಿಹಾಸೇನ ಪೂರ್ವೋಕ್ತಂ ಶ್ರೂಯತಾಂ ಮುನಿಪುಂಗವಾಃ ।
ದಿಲೀಪವಸಿಷ್ಠಸಂವಾದೇ ಪರಮಾಶ್ಚರ್ಯವರ್ಧನಂ ॥ ೭ ॥
ಕಾಶ್ಯಾಂ ತು ವಜ್ರಲೇಪೋ ಹಿ ಕ್ಷೇತ್ರೇ ಏಕತ್ರ ನಶ್ಯತಿ ।
ಯಾತುರ್ದರ್ಶನತಃ ಶ್ರುತ್ವಾ ದಿಲೀಪೋ ವಾಕ್ಯಮಬ್ರವೀತ್ ॥ ೮ ॥

ದಿಲೀಪ ಉವಾಚ :—

ವಜ್ರಲೇಪಶ್ಚ ಕಾಶ್ಯಾಂ ತು ಘೋರೋ ಯತ್ರ ವಿನಶ್ಯತಿ ।
ಕೃತ್ಸ್ನಶೋಽಥ ಮಹಾಪುಣ್ಯಂ ಪ್ರಾಪ್ಯಂ ಯತ್ರ ತದಸ್ತಿ ಕಿಂ ॥ ೯ ॥
ನ ಪ್ರರೋಹಂತಿ ಪಾಪಾನಿ ಯಸ್ಮಿನ್ಕ್ಷೇತ್ರೇ ದ್ವಿಜೋತ್ತಮ ।
ತತ್ಕ್ಷೇತ್ರಂ ಕಥ್ಯತಾಂ ಪುಣ್ಯಂ ಯತ್ರ ಪಾಪಂ ಪ್ರಣಶ್ಯತಿ ॥ ೧೦ ॥

---

೫. ದ್ವಾರಕೆಗೆ ಪ್ರತಿವರ್ಷವೂ, ಹೋಗುವವರ ಪಾದಧೂಳಿಯನ್ನು ಸ್ಪರ್ಶಿಸುವ ಪಾಪಿಗಳು ಸ್ವರ್ಗಕ್ಕೆ ತೆರಳುವರು.

೬. ಗೋಮತಿಯ ನೀರಿನಿಂದ ಪವಿತ್ರರಾ, ಕೃಷ್ಣನ ದರ್ಶನಗೈಯುವವರೂ ಆದ ಪುಣ್ಯಶಾಲಿಗಳ ದರ್ಶನದಿಂದ ಅನೇಕಜನ್ಮಗಳಲ್ಲಿ ಸಗಿದ ಪಾಪಗಳು ಪರಿಹಾರ ವಾಗುವುವು.

೭. ಮುನಿವರ್ಯರೆ! ಹಿಂದೆ ದಿಲೀಪ ವಸಿಷ್ಠರು ಮಾತಾಡುತ್ತಿರುವಾಗ ಪ್ರಸಂಗ ವಂಶದಿಂದ ಹೇಳಿದ ಆಶ್ಚರ್ಯಕರವಾದ ಇತಿಹಾಸವೊಂದನ್ನು ಕೇಳಿರಿ.

೮. ದಿಲೀಪನು ರಾಕ್ಷಸನ ದರ್ಶನದಿಂದ ಕಾಶಿಯಲ್ಲಿ ವಜ್ರಲೇಪದಂತಾದ ಪಾಪವು ಯಾವುದೋ ಒಂದು ಕ್ಷೇತ್ರದಲ್ಲಿ ನಾಶವಾಗುವುದೆಂದರಿತು ಇಂತೆಂದನು.

೯. ದಿಲೀಪನು ಹೇಳುತ್ತಾನೆ :—ಎಲೈ ದ್ವಿಜೋತ್ತಮನೆ! ಕಾಶಿಯಲ್ಲಿ ವಜ್ರಲೇಪದಂತಾದಪಾಪವನ್ನುಸಂಪೂರ್ಣವಾಗಿ ನಿವಾರಿಸುವ ಪುಣ್ಯಕರವಾದ ಕ್ಷೇತ್ರವಿದೆಯೆ?

೧೦. ಯಾವ ಕ್ಷೇತ್ರದಲ್ಲಿ ಪಾಪವು ವೃದ್ಧಿಗೊಳ್ಳುವುದಿಲ್ಲವೊ ? ಆ ಪುಣ್ಯಕರವಾದ ಕ್ಷೇತ್ರವನ್ನು ಹೇಳು.

ವಸಿಷ್ಠ ಉವಾಚ :—

ಆಸೀತ್ಕಾಶ್ಯಾಂ ಪುರಾ ಕಶ್ಚಿತ್ತ್ರಿದಂಡೀ ಮೋಕ್ಷಧರ್ಮವಿತ್ ।
ಜಪನ್ದಶಾಶ್ವಮೇಧೇ ತು ಗಾಯತ್ರೀಂ ಚ ಸಮಾಹಿತಃ ॥ ೧೧ ॥
ತತ್ರ ಕಾಚಿತ್ಸಮಾಯಾತಾ ಯುವತೀ ಗಜಗಾಮಿನೀ ।
ತೀರೇ ಸಂಸ್ಥಾಪ್ಯ ವಾಸಾಂಸಿ ಗಂಗಾಯಾಃ ಶ್ರಮಶಾಂತಯೇ ।
ಪ್ರವಿಷ್ಟಾ ಚ ಜಲೇ ಲಗ್ನಾ ಜಲಕ್ರೀಡಾಂ ಚಕಾರ ಹ ॥ ೧೨ ॥
ನಗ್ನಾಂ ತಾಂ ಕ್ರೀಡತೀಂ ವೀಕ್ಷ್ಯ ಯತಿರ್ಮದಸಪೂರಿತಃ ।
ದೈವಾದ್ವಿಭ್ರಂಶಿತೋ ಮಾರ್ಗಾತ್ಸಹಸಾ ಚ ವಿಮೋಹಿತಃ ॥ ೧೩ ॥
ಮನಸಾ ಕಾಮಯಾಮಾಸ ಸಾಪಿ ತಂ ತರುಣಂ ಯತಿಂ ।
ತಯೋಶ್ಚ ಸಂಗತಿಸ್ತತ್ರ ಸಂಜಾತಾ ಪಾಪಕರ್ಮಣೋಃ ॥ ೧೪ ॥
ತಯಾ ವಿಮೋಹಿತಃ ಸದ್ಯಸ್ತಾಮೇವಾನುಸಸಾರ ಸಃ ।
ತತ್ಪ್ರೀತ್ಯೈ ಚಾರ್ಜಯಾಮಾಸ ಧನಮನ್ಯಾಯತಸ್ತದಾ ॥ ೧೫ ॥
ವಾರಾಣಸ್ಯಾಂ ಹಿ ನ ತ್ಯಕ್ತಶ್ಚಂಡಾಲಸ್ಯ ಪ್ರತಿಗ್ರಹಃ ।
ಸ್ನಾನಹೀನಃ ಸದಾ ಪಾಪೀ ರಾತ್ರೌ ಚೌರ್ಯೇಣ ವರ್ತತೇ ॥ ೧೬ ॥

---

೧೧. ವಸಿಷ್ಠನು ಹೇಳುತ್ತಾನೆ :—ಹಿಂದೆ ಕಾಶಿಯಲ್ಲಿ ಮೋಕ್ಷ ಧರ್ಮವನ್ನರಿತ ದಶಾಶ್ವಮೇಧಯಾಗದಲ್ಲಿ ಗಾಯತ್ರಿಯನ್ನು ಸಾವಧಾನಮನಸ್ಸಿನಿಂದ ಜಪಿಸುತ್ತಿರುವ ಒಬ್ಬ ಯತಿಯಿದ್ದನು.

೧೨. ಅಲ್ಲಿಗೆ ಗಜಗಾಮಿನಿಯಾದ ಓರ್ವ ಯುವತಿಯು ಬಂದು ಗಂಗೆಯ ದಡದಲ್ಲಿ ತನ್ನ ವಸ್ತ್ರಗಳನ್ನಿಟ್ಟು ಬತ್ತಲೆಯಾಗಿ ಆಯಾಸವನ್ನು ಹೋಗಲಾಡಿಸಿಕೊಳ್ಳ ಲೋಸುಗ ಗಂಗೆಯಲ್ಲಿಳಿದು ಜಲಕ್ರೀಡೆ ಯಾಡಿದಳು.

೧೩. ಆ ಯತಿಯು ಬತ್ತಲೆಯಾಗಿ ಆಡುತ್ತಿರುವ ಆ ಯುವತಿಯನ್ನು ಈಕ್ಷಿಸಿ ದೈವವಶದಿಂದ ಕಾಮಪೀಡಿತನಾಗಿ ಕೂಡಲೆ ದಾರಿತಪ್ಪಿದನು.

೧೪. ಅವಳೂ ಮನಸ್ಸಿನಿಂದ ಆ ಯತಿಯನ್ನು ಕಾಮಿಸಲು ಪಾಪಿಷ್ಠರಾದ ಅವ ರೀರ್ವರಿಗೆ ಅಲ್ಲಿ ಸಂಗಮವಾಯಿತು.

೧೫. ಅವಳಿಂದ ಮೋಹಗೊಂಡ ಆ ಯತಿಯು ಕೂಡಲೆ ಅವಳನ್ನು ಹಿಂಬಾಲಿ ಸುತ್ತ ಅವಳ ಪ್ರೀತಿಗಾಗಿ ಅನ್ಯಾಯದಿಂದ ಹಣವನ್ನು ಗಳಿಸಿದನು.

೧೬. ಅವನು ಕಾಶಿಯಲ್ಲಿ ಚಂಡಾಲನಿಂದ ದಾನತೆಗೆದುಕೊಳ್ಳುವುದನ್ನೂ ಬಿಡ ಲಿಲ್ಲ. ಅವನು ಸ್ನಾನ ಮಾಡದೆ ಪಾಪಿಷ್ಠನಾಗಿ ರಾತ್ರಿಯಲ್ಲಿ ಕಳ್ಳತನ ಮಾಡುತ್ತಿದ್ದನು.

ಕಸ್ಮಿಂಶ್ಚಿತ್ಸಮಯೇ ಪಾಪೀ ಮಾಂಸಾರ್ಥೀ ತು ವನಂ ಗತಃ ।
ದದರ್ಶ ಪ್ರಮದಾಂ ತತ್ರ ಮಾತಂಗೀಂ ಮದಿರೇಕ್ಷಣಾಂ ॥ ೧೭ ॥
ತಸ್ಯಾಃ ಪ್ರಥಮತಾರುಣ್ಯಂ ದೃಷ್ಟ್ವಾ ಗರ್ವೇಣ ಪಾಪ್ಮನಾ ।
ವನೇಽಥ ನಿರ್ಜನೇ ತತ್ರ ಮಾತಂಗೀ ಸಂಗಮೋಯಿವಾನ್ ॥ ೧೮ ॥
ತಯಾ ಸಹಾನ್ನಪಾನಾದಿ ಕೃತವಾನ್ಮಾಪಮೋಹಿತಃ ।
ಅಶ್ನಾತಿ ಸುರಯಾ ಪಂಕಂ ಗೋಮಾಂಸಂ ಪಾಪಲಂಪಟಃ ॥ ೧೯ ॥
ತದ್ಗೃಹೇ ನಿಧನಂ ಪ್ರಾಪ್ತಃ ಪಾಪಾತ್ಮಾ ಸರ್ವಭಕ್ಷಕಃ ।
ವಾರಾಣಸೀಪ್ರಭಾವೇನ ನ ಪ್ರಾಪ್ತೋ ನರಕಂ ತದಾ ॥ ೨೦ ॥
ಕಿಂತು ತತ್ರ ಕೃತಂ ಪಾಪಂ ವಜ್ರಲೇಪಂ ಸುದಾರುಣಂ ।
ಶೂದ್ರೀಸಂಪರ್ಕಪಾಪೇನ ಜಾತೋಽಸೌ ಕ್ರೂರಯೋನಿಷು ॥ ೨೧ ॥
ವೃಕೋ ವ್ಯಾಘ್ರೋರಗಃ ಶ್ವಾನಃ ಶೃಗಾಲಃ ಸೂಕರೋಽಭವತ್ ।
ದುರಂತಾಂ ಯಾತನಾಂ ಪ್ರಾಪ್ತಃ ಶಮಲೇಶಂ ನ ವಿಂದತಿ ॥ ೨೨ ॥
ಏವಂ ಜನ್ಮಸಹಸ್ರೈಸ್ತು ನ ತಸ್ಯ ಪಾಪಕರ್ಮಣಃ ।
ಮಾತಂಗ್ಯಾ ಸಂಗಜಂ ಪಾಪಂ ವ್ಯನಶ್ಯತ ಯುಗಾಯುತೈಃ ॥ ೨೩ ॥

---

೧೭. ಆ ಪಾಪಿಯು ಒಂದಾನೊಂದು ದಿನ ಮಾಂಸಕ್ಕಾಗಿ ಕಾಡಿಗೆ ಹೋಗಿ ಸುಂದರಿಯಾದ ಒಬ್ಬ ಚಂಡಾಲ ಸ್ತ್ರೀಯನ್ನು ಕಂಡನು.

೧೮. ಪಾಪಿಯಾದ ಅವನು ಅವಳ ಪ್ರಥಮ ಯೌವನವನ್ನು ನೋಡಿ ಆ ನಿರ್ಜನ ವನದಲ್ಲಿ ಅವಳೊಡನೆ ಸೇರಿದನು.

೧೯. ಪಾಪದಿಂದ ಮೋಹಗೊಂಡ ಅವನು ಅವಳೊಡನೆ ಭೋಜನಾದಿಗಳನ್ನು ಮಾಡುತ್ತ ಮದ್ಯ, ಮೊಟ್ಟೆಯೊಳಗಿನ ರಸ, ಗೋಮಾಂಸ ಇವುಗಳನ್ನೂ ತಿನ್ನುತ್ತಿದ್ದನು.

೨೦. ಸರ್ವಭಕ್ಷಕನಾದ ಆ ಪಾಪಿಯು ಆ ಚಂಡಾಲಾಂಗನೆಯ ಮನೆಯಲ್ಲಿ ಮೃತನಾಗಿ ಕಾಶಿಯ ಪ್ರಭಾವದಿಂದ ನರಕವನ್ನು ಹೊಂದಲಿಲ್ಲ.

೨೧. ಆದರೆ ಅಲ್ಲಿ ಮಾಡಿದ ವಜ್ರಲೇಪದಂತಿರುವ ದಾರುಣಪಾಪದಿಂದ ಮೃತನಾಗಿ ಕ್ರೂರಜಾತಿಯಲ್ಲಿ ಜನಿಸಿದನು.

೨೨ ಅವನು ತೋಳ, ಹುಲಿ, ಹಾವು, ನಾಯಿ, ನರಿ, ಹಂದಿಯಾಗಿ ಜನಿಸಿ ಅತ್ಯಂತ ವೇದನೆಯನ್ನನುಭವಿಸುತ್ತ ಶಾಂತಿಲೇಶವನ್ನೂ ಹೊಂದಲಿಲ್ಲ.

೨೩. ಹೀಗೆ ಅವನು ಹತ್ತು ಸಾವಿರಯುಗಗಳಲ್ಲಿ ಸಾವಿರಾರು ಜನ್ಮವನ್ನೆತ್ತಿದರೂ ಅವನ ಚಂಡಾಲಸ್ತ್ರೀಸಂಗದಿಂದುಂಟಾದ ಪಾಪವು ಪರಿಹಾರವಾಗಲಿಲ್ಲ.

ತತೋಽಸೌ ಸಪ್ತಮೇ ಜಾತಃ ಶಶಕಚ್ಛೈವ ಜನ್ಮನಿ ।
ತತೋಽಸೌ ರಾಕ್ಷಸೋ ಜಾತಃ ಪಾಪಾತ್ಮಾ ಸರ್ವಭಕ್ಷಕಃ ॥ ೨೪ ॥
ಪ್ರಾಣಿನೋ ಭಕ್ಷಯನ್ಸರ್ವಾನ್ಸಂಪ್ರಾಪ್ತೋ ವಿಂಧ್ಯಪರ್ವತೇ ।
ಅಸ್ಮಾದನಂತರಂ ಭಾವ್ಯಂ ಕೃಕಲಾಸತ್ವಮುದ್ಭುತಂ ॥ ೨೫ ॥
ಶೂದ್ರೀಸಂಗಜಪಾಪೇನ ಭಾವ್ಯಂ ಚ ಕೃಮಿಯೋನಿನಾ ।
ಮಾತಂಗೀಸಂಗಮೇ ಪ್ರೋಕ್ತಂ ಫಲಂ ಹ್ಯತಿಜುಗುಪ್ಸಿತಂ ॥ ೨೬ ॥
ಯುಗಾಯುತಂ ಸಹಸ್ರೈಸ್ತು ಭೋಕ್ಷ್ಯಮಾಣಂ ಸುದಾರುಣಂ ।
ಅತ್ರಾಶ್ಚರ್ಯಮಭೂತ್ತತ್ರ ದಿಲೀಪ ಶ್ರೂಯತಾಂ ಮಹತ್ ॥ ೨೭ ॥
ಆಲೋಕಿತಂ ಚ ವಿಂಧ್ಯಾದ್ರೌ ಸರ್ವೇಷಾಂ ವಿಸ್ಮಯಾಸ್ಪದಂ ।
ದೃಷ್ಟ್ವಾ ದ್ವಾರಾವತೀಂ ಕಶ್ಚಿತ್ಕೃಷ್ಣವರ್ಣಂ ಸುಶೋಭನಂ ॥ ೨೮ ॥
ಗೋಮತೀನೀರಪೂತಸ್ತು ವಿಂಧ್ಯಂ ಪ್ರಾಪ್ತಃ ಸ ಪಾಂಥಿಕಃ ।
ಯಾತ್ರಾಂ ಕೃಷ್ಣಪ್ರಸಾದಸ್ಯ ಸ್ಕಂಧೇ ಕೃತ್ವಾ ಪ್ರಹರ್ಷಿತಃ ॥ ೨೯ ॥
ಪ್ರಯಾಸ್ಯನ್ಸ್ವಗೃಹಂ ತತ್ರ ದದರ್ಶ ಪಥಿ ರಾಕ್ಷಸಂ ।
ದ್ರುತಂ ಚ ಕ್ರೂರಕರ್ಮಾಣಂ ದೃಷ್ಟ್ವಾ ಭಕ್ಷಿತುಮಾಗತಂ ॥ ೩೦ ॥

---

೨೪–೩೦ ಅನಂತರ ಅವನು ಏಳನೆ ಜನ್ಮದಲ್ಲಿ ಮೊಲವಾದನು. ತರುವಾಯ ಸರ್ವಭಕ್ಷಕನಾದ ರಾಕ್ಷಸನಾಗಿ ಜನಿಸಿ ಸಕಲಪ್ರಾಣಿಗಳನ್ನೂ ಭಕ್ಷಿಸುತ್ತ ವಿಂಧ್ಯಪರ್ವತಕ್ಕೆ ಬಂದನು. ಅನಂತರ ಅವನು ಶೂದ್ರಸ್ತ್ರೀಸಂಗದಿಂದುಂಟಾದ ಪಾಪದಿಂದ ಓಂಡೇಕೇತನೂ, ಕೃಮಿಯೂ ಆಗಬೇಕಾಯಿತು ಅವನು ಮಾತಂಗೀಸಂಗದ ಪಾಪದಿಂದ ಹತ್ತು ಸಾವಿರ ವರ್ಷಕಾಲ ಅತಿ ನಿಂದ್ಯವಾದ ದಾರುಣ ಪಾಪ ಫಲವನ್ನನು ಭವಿಸುತ್ತಿರಲು ಒಂದು ಆಶ್ಚರ್ಯಕರವಾದ ವಿಷಯವು ನಡೆಯಿತು ದಿಲೀಪ ! ವಿಂಧ್ಯ ಪರ್ವತದಲ್ಲಿ ನೋಡಿದ ಆಶ್ಚರ್ಯಕರವಾದ ಆ ಸಮಾಚಾರವನ್ನು ಕೇಳು- ಒಬ್ಬ ಮಾರ್ಗಸ್ಥನು ದ್ವಾರವತಿಯಲ್ಲಿ ಗೋಮತೀಜಲದಲ್ಲಿ ಮಿಂದು ಪವಿತ್ರನಾಗಿ ಕೃಷ್ಣನ ಸುಂದರವಾದ ಮುಖವನ್ನು ದರ್ಶನಮಾಡಿ ವಿಂಧ್ಯಪರ್ವತಕ್ಕೆ ಬಂದನು. ಅಲ್ಲಿಂದವನು ಶ್ರೀಕೃಷ್ಣನ ಪ್ರಸಾದವಸ್ತುವನ್ನು ಹೆಗಲಲ್ಲಿಟ್ಟುಕೊಂಡು ಸಂತೋಷದಿಂದ ತನ್ನ ಮನೆಗೆ ತೆರಳುತ್ತ ದಾರಿಯಲ್ಲಿ ತನ್ನನ್ನು ತಿನ್ನಲು ಬಂದ ಕ್ರೂರರಾಕ್ಷಸನನು ಕಂಡನು.

ತಸ್ಯ ದರ್ಶನಮಾತ್ರೇಣ ವಜ್ರಲೇಪಃ ಸುದಾರುಣಃ ।
ವಾರಾಣಸೀಸಮುದ್ಭೂತೋ ಭಸ್ಮಸಾದಭವತ್ಕ್ಷಣಾತ್ ॥ ೩೧ ॥
ಜನ್ಮಕೋಟಿಶತೇನಾಪಿ ಯೋ ನ ಶಕ್ಯೋ ವ್ಯಪೋಹಿತುಂ ।
ತತ್ಪಾಪಪರ್ವತಾನ್ಮುಕ್ತಃ ಕೃಷ್ಣಪಾಂಥಿಕದರ್ಶನಾತ್ ॥ ೩೨ ॥
ಧಗ್ಧೇಽಥ ಕ್ರೂರಭಾವೇ ತು ಘನಮುಕ್ತೋ ಯಥಾ ಶಶೀ ।
ರೇಜೇ ಪುಣ್ಯಪ್ರಕಾಶೇನ ಕೃಷ್ಣಪಾಂಥಿಕದರ್ಶನಾತ್ ॥ ೩೩ ॥
ತತೋಽಭಿಮುಖಮಭ್ಯೇತ್ಯ ದ್ವಾರಕಾಪಥಿಕಂ ಮುದಾ ।
ನನಾಮ ಶ್ರದ್ಧಯಾ ಭೂಮೌ ತದ್ದರ್ಶನಮಹೋತ್ಸವಃ ॥ ೩೪ ॥
ನತ್ವಾಥ ವಿಸ್ಮಿತಃ ಪ್ರಾಹ ಅಹೋಽದ್ಯ ತವ ದರ್ಶನಾತ್ ।
ಗತೋ ಘೋರತಮೋ ಭಾವಃ ಪ್ರಾಪ್ತಾ ಸಂಸಿದ್ಧಿರುತ್ತಮಾ ॥ ೩೫ ॥
ಕಸ್ಮಾತ್ತ್ವಮಾಗತೋ ಭದ್ರ ಪ್ರಭಾವಃ ಕೀದೃಶಸ್ತವ ।
ವಜ್ರಲೇಪಸ್ತು ಕಾಶ್ಯಾಂ ವೈ ದಗ್ಧಸ್ತೇ ದರ್ಶನಾದನು ॥ ೩೬ ॥

ವಸಿಷ್ಠ ಉವಾಚ :—

ಇತ್ಯೇವಂ ರಾಕ್ಷಸೇನೋಕ್ತಂ ಶ್ರುತ್ವಾ ಕೃಷ್ಣಸ್ಯ ಪಾಂಥಿಕಃ ।
ವಿಸ್ಮಯಂ ಪರಮಾಪನ್ನಃ ಪ್ರಾಹ ತಂ ಹರ್ಷಮಾನಸಃ ॥ ೩೭ ॥

---

೩೧. ಆ ದಾರಿಹೋಕನನ್ನು ಕಂಡಕೂಡಲೇ ಆ ರಾಕ್ಷಸನ ಕಾಶಿಯಲ್ಲಿ ಸಗಿದ ದಾರುಣವಜ್ರಲೇಪದಂತಿರುವ ದುರಿತವು ಕೂಡಲೇ ಸುಟ್ಟು ಬೂದಿಯಾಯಿತು.

೩೨–೩೩. ಆ ರಾಕ್ಷಸನ ಅನೇಕಕೋಟಿ ಜನ್ಮಗಳಲ್ಲಿ ಪರಿಹಾರವಾಗದ ಪಾಪ ಪರ್ವತವು ಕೃಷ್ಣಯಾತ್ರಿಕನ ದರ್ಶನದಿಂದ ನಿವಾರಣೆಯಾಗಿ ಕ್ರೌರ್ಯವು ನಶಿಸಲು ಅವನು ಮೋಡದಿಂದ ಬಿಡಲ್ಪಟ್ಟ ಚಂದ್ರನಂತೆ ಪುಣ್ಯಪ್ರಕಾಶದಿಂದ ವಿರಾಜಿಸಿದನು.

೩೪. ಬಳಿಕ ಕೃಷ್ಣಯಾತ್ರಿಕನ ದರ್ಶನದಿಂದ ಹರ್ಷಗೊಂಡ ಆ ರಾಕ್ಷಸನು ಅವ ನೆದುರಿಗೆ ಬಂದು ಭೂಮಿಯಲ್ಲಿ ಶ್ರದ್ಧೆಯಿಂದ ವಂದಿಸಿದನು.

೩೫–೩೬. ಅನಂತರ ಆ ರಾಕ್ಷಸನು ಆ ದಾರಿಹೋಕನನ್ನು, "ಕುರಿತು ನಿನ್ನದರ್ಶನ ದಿಂದ ನನ್ನ ಕ್ರೌರ್ಯವು ನೀಗಿ ಉತ್ತಮ ಸಿದ್ಧಿಯುಂಟಾಗಿದೆ. ನೀನು ಏತಕ್ಕೆ ಇಲ್ಲಿಗೆ ಬಂದಿರುವೆ? ನಿನ್ನ ಮಾಹಾತ್ಮ್ಯವು ಹೇಗಿರುವುದು.? ನಿನ್ನದರ್ಶನದಿಂದಲೇ ನನ್ನ ಕಾಶಿಯಲ್ಲಿ ಸಗಿದ ವಜ್ರಲೇಪವು ಭಸ್ಮವಾಗಿದೆ" ಎಂದನು.

೩೭. ವಸಿಷ್ಠನು ಹೇಳುತ್ತಾನೆ:—ಕೃಷ್ಣಯಾತ್ರಿಕನು ರಾಕ್ಷಸನು ಹೇಳಿದ ಮಾತನ್ನು ಕೇಳಿ ಆಶ್ಚರ್ಯಗೊಂಡವನಾಗಿ ಸಂತೋಷದಿಂದ ಅವನನ್ನು ಕುರಿತು ಇಂತೆಂದನು.

ಪಾಂಥಿಕ ಉವಾಚ :—

ಶ್ರೀಮದ್ದ್ವಾರವತೀಂ ದೃಷ್ಟ್ವಾ ಹ್ಯಾಗತೋಽಸ್ಮ್ಯತ್ರ ರಾಕ್ಷಸ ।
ವಜ್ರಲೇಪಹರೋಽಸ್ಮಾಕಂ ಪ್ರಭಾವಃ ಕೃಷ್ಣದರ್ಶನಾತ್ ॥ ೩೮ ॥
ಗೋಮತ್ಯಾಂ ಯಃ ಸಕೃತ್ಸ್ನಾತ್ವಾ ಪಶ್ಯೇತ್ಕೃಷ್ಣಮುಖಾಂಬುಜಂ ।
ಸರ್ವಾನುದ್ಧರತೇ ಪಾಪಾದಪಿ ತ್ರೈಲೋಕ್ಯದಾಹಕಾತ್ ॥ ೩೯ ॥

ವಸಿಷ್ಠ ಉವಾಚ :

ಇತ್ಯುಕ್ತೋ ರಾಕ್ಷಸೋ ಹೃಷ್ಟಃ ಶುದ್ಧಾತ್ಮಾ ಭಕ್ತಿಸಂಯುತಃ ।
ನತ್ವಾ ಪ್ರದಕ್ಷಿಣಂ ಕೃತ್ವಾ ಸಂಪ್ರಾಪ್ತೋ ದ್ವಾರಕಾಂ ತದಾ ॥ ೪೦ ॥
ಗೋಮತ್ಯಾಂ ಸ ತನುಂ ತ್ಯಕ್ತ್ವಾ ಪ್ರಾಪ್ತೋಽಸೌ ವೈಷ್ಣವಂ ಪದಂ ।
ಸ್ತೂಯಮಾನಃ ಸುರೇಶಾದ್ಯೈಃ ಗಂಧರ್ವೈಃ ಪುಷ್ಪವೃಷ್ಟಿಭಿಃ ॥ ೪೧ ॥
ಇತ್ಥಂ ಮಹಾಪ್ರಭಾವೋ ಹಿ ದ್ವಾರಕಾಯಾಃ ಪ್ರಕೀರ್ತಿತಃ ।
ನ ಪ್ರರೋಹಂತಿ ಪಾಪಾನಿ ಯಸ್ಯಾಃ ಪಾಂಥಿಕದರ್ಶನಾತ್ ।
ದ್ವಾರಕಾಯಾಂ ತು ಕಿಂ ವಾಚ್ಯಂ ನ ಪ್ರರೋಹತಿ ಪಾತಕಂ ॥ ೪೨ ॥
ಇತ್ಯೇತತ್ಕಥಿತಂ ರಾಜನ್ಯತ್ಪೃಷ್ಟೋಽಹಂ ತ್ವಯಾನಘ ।
ಸರ್ವಕ್ಷೇತ್ರೋತ್ತಮಂ ಕ್ಷೇತ್ರಂ ವಜ್ರಲೇಪವಿನಾಶನಂ ॥ ೪೩ ॥

---

೩೮. ಮಾರ್ಗಸ್ಥನು ಹೇಳುತ್ತಾನೆ :—ರಾಕ್ಷಸ ! ನಾನು ಶ್ರೀಮದ್ದ್ವಾರವತಿಯನ್ನು ನೋಡಿ ಬಂದಿರುವೆನು. ನನಗೆ ಕೃಷ್ಣದರ್ಶನದಿಂದ ವಜ್ರಲೇಪವನ್ನು ಪರಿಹರಿಸುವ ಪ್ರಭಾವವುಂಟಾಗಿರುವುದು.

೩೯. ಗೋಮತಿಯಲ್ಲಿ ಮಿಂದು ಕೃಷ್ಣನ ಮುಖಕಮಲವನ್ನು ನೋಡಿದವನು ಮೂರುಲೋಕಗಳನ್ನು ಸುಡುವ ಪಾಪದಿಂದ ಎಲ್ಲರನ್ನೂ ಉದ್ಧರಿಸುವನು.

೪೦. ವಸಿಷ್ಠನು ಹೇಳುತ್ತಾನೆ :—ಪಥಿಕನು ಹೀಗೆ ಹೇಳಲು ರಾಕ್ಷಸನು ಸಂತೋಷಗೊಂಡು ಶುದ್ಧಮನಸ್ಕನಾಗಿ ಭಕ್ತಿಯಿಂದ ಅವನಿಗೆ ಪ್ರದಕ್ಷಿಣೆ ನಮಸ್ಕಾರ ಮಾಡಿ ದ್ವಾರಕೆಗೆ ಹೋದನು.

೪೧. ಅವನು ಗೋಮತಿಯಲ್ಲಿ ಶರೀರವನ್ನು ತ್ಯಜಿಸಿ ಸುರೇಶ್ವರರಿಂದಲೂ, ಗಂಧರ್ವರಿಂದಲೂ ಹೂಮಳೆಯನ್ನು ಸುರಿಸಿ ಸ್ತುತಿಸಲ್ಪಡುವವನಾಗಿ ವಿಷ್ಣುವಿನಸ್ಥಾನವನ್ನು ಪಡೆದನು.

೪೨. ಹೀಗೆ ದ್ವಾರಕೆಯ ಯಾತ್ರಿಕರ ದರ್ಶನದಿಂದಲೆ ಪಾಪಗಳು ಉಳಿಯುವುದಿಲ್ಲ ಎಂದಮೇಲೆ ದ್ವಾರಕೆಯದರ್ಶನದಿಂದ ಪಾಪವು ಪರಿಹಾರವಾಗುವುದೆಂದು ಏನು ಹೇಳತಕ್ಕುದು?

೪೩. ನಿರ್ದುಷ್ಟನಾದ ದೊರೆಯೆ ! ನೀನು ಕೇಳಿದ ವಜ್ರಲೇಪವನ್ನು ಪರಿಹರಿಸುವ ಉತ್ತಮ ಕ್ಷೇತ್ರವನ್ನು ಹೇಳಿರುವೆನು.

ಶ್ರೀ ಪ್ರಹ್ಲಾದ ಉವಾಚ :—
ವಸಿಷ್ಠೇನೋದಿತಂ ಶ್ರುತ್ವಾ ದಿಲೀಪೋ ಹೃಷ್ಟಮಾನಸಃ ।
ದ್ವಾರಕಾಂ ಕ್ಷೇತ್ರರಾಜಂ ತಂ ಜ್ಞಾತ್ವಾ ಚ ವಿಸ್ಮಯಂ ಯಯೌ ॥ ೪೪ ॥
ಯಯೌ ದ್ವಾರವತೀಂ ಹೃಷ್ಟೋ ದೇವದೇವಸ್ಯ ಸಾದರಂ ।
ಕೃಷ್ಣಂ ದೃಷ್ಟ್ವಾ ಪರಾಂ ಸಿದ್ಧಿಂ ಸಂಪ್ರಾಪ್ತೋ ದೇವಮಂದಿರೇ ॥ ೪೫ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದಿಲೀಪಕೃತದ್ವಾರಕಾಯಾತ್ರಾವರ್ಣನಂನಾಮ
ಚತುಸ್ತ್ರಿಂಶತ್ತಮೋಽಧ್ಯಾಯಃ

---

೪೪. ಶ್ರೀಪ್ರಹ್ಲಾದನು ಹೇಳುತ್ತಾನೆ ;—ದಿಲೀಪನು ವಸಿಷ್ಠನು ಹೇಳಿದ ಮಾತನ್ನು ಕೇಳಿ ಸಂತೋಷಗೊಂಡವನಾಗಿ ದ್ವಾರಕೆಯನ್ನು ಉತ್ತಮಕ್ಷೇತ್ರವೆಂದರಿತು ಆಶ್ಚರ್ಯಗೊಂಡನು.

೪೫. ಅವನು ದ್ವಾರವತಿಗೆ ಹೋಗಿ ಅಲ್ಲಿರುವ ದೇವಾಲಯದಲ್ಲಿ ಕೃಷ್ಣನನ್ನು ಕಂಡು ಉತ್ತಮ ಸಿದ್ಧಿಯನ್ನು ಹೊಂದಿದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದಿಲೀಪಕೃತದ್ವಾರಕಾಯಾತ್ರಾವರ್ಣನವೆಂಬ
ಮುವ್ವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಪಂಚತ್ರಿಂಶತ್ತಮೋಽಧ್ಯಾಯಃ

### ದ್ವಾರಕಾನಾಮಮಾಹಾತ್ಮ್ಯವರ್ಣನಂ

ಪ್ರಹ್ಲಾದ ಉವಾಚ :—

ಅಹೋ ಕ್ಷೇತ್ರಸ್ಯ ಮಾಹಾತ್ಮ್ಯಂ ಸಮಂತಾದ್ದಶಯೋಜನಂ ।
ನಿವಿಷ್ಟಾ ಯತ್ರ ಪಶ್ಯಂತಿ ಸರ್ವಾನೇವ ಚತುರ್ಭುಜಾನ್ ॥ ೧ ॥
ಅಹೋ ಕ್ಷೇತ್ರಸ್ಯ ಮಾಹಾತ್ಮ್ಯಂ ದೃಷ್ಟ್ವಾ ನಿತ್ಯಂ ಚತುರ್ಭುಜಾನ್ ।
ದ್ವಾರಕಾವಾಸಿನಃ ಸರ್ವಾನ್ನಮಸ್ಯಂತಿ ದಿವೌಕಸಃ ॥ ೨ ॥
ಅಹೋ ಕ್ಷೇತ್ರಸ್ಯ ಮಾಹಾತ್ಮ್ಯಂ ಸರ್ವಶಾಸ್ತ್ರೇಷು ವಿಶ್ರುತಂ ।
ಅಹೋ ಕ್ಷೇತ್ರಸ್ಯ ಮಾಹಾತ್ಮ್ಯಂ ಶೃಣ್ವಂತು ಋಷಯೋಽಮಲಾಃ ॥ ೩ ॥
ಮುಕ್ತಿಂ ನೇಚ್ಛಂತಿ ಯತ್ರಸ್ಥಾಃ ಕೃಷ್ಣಸೇವೋತ್ಸುಕಾಃ ಸದಾ ।
ಯತ್ರತ್ಯಾಶ್ಚೈವ ಪಾಷಾಣಾ ಯತ್ರ ಕ್ವಾಪಿ ವಿಮುಕ್ತಿದಾಃ ॥ ೪ ॥

---

### ಕನ್ನಡದ ಅನುವಾದ

#### ದ್ವಾರಕಾನಾಮಮಾಹಾತ್ಮ್ಯವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ಹತ್ತು ಯೋಜನ ವಿಸ್ತೀರ್ಣವಾಗಿರುವ ಆ ದ್ವಾರಕಾಕ್ಷೇತ್ರದ ಮಾಹಾತ್ಮ್ಯವು ಆಶ್ಚರ್ಯಕರವಾದುದು. ಅಲ್ಲಿ ದೇವಲೋಕದಲ್ಲಿರುವ ದೇವತೆಗಳು ನಾಲ್ಕು ತೋಳುಗಳುಳ್ಳ ಜನರನ್ನು ನೋಡುವರು.

೨. ಆ ದ್ವಾರಕಾಕ್ಷೇತ್ರದ ಮಾಹಾತ್ಮ್ಯವು ಅದ್ಭುತವಾದುದು. ದೇವತೆಗಳು ಚತುರ್ಭುಜರಾದ ದ್ವಾರಕಾವಾಸಿಗಳನ್ನು ಕಂಡು ವಂದಿಸುತ್ತಾರೆ.

೩. ಪರಿಶುದ್ಧರಾದ ಮುನಿಗಳೆ! ನೀವು ಸಕಲ ಶಾಸ್ತ್ರಗಳಲ್ಲಿ ಪ್ರಸಿದ್ಧವಾದ ದ್ವಾರಕೆಯ ಅದ್ಭುತ ಮಾಹಾತ್ಮ್ಯವನ್ನು ಕೇಳಿರಿ.

೪. ಇಲ್ಲಿ ವಾಸಿಸುವ ಜನರು ಕೃಷ್ಣನ ಸೇವೆಯಲ್ಲಿ ಉತ್ಸುಕರಾಗಿ ಮುಕ್ತಿಯನ್ನು ಸಹ ಬಯಸುವುದಿಲ್ಲ. ಇಲ್ಲಿರುವ ಕಲ್ಲುಗಳೆಲ್ಲ ಮೋಕ್ಷವನ್ನೀಯುವುದು.

ಅಪಿ ಕೀಟಪತಂಗಾದ್ಯಾಃ ಪಶವೋಽಥ ಸರೀಸೃಪಾಃ ।
ವಿಮುಕ್ತಾಃ ಪಾಪಿನಃ ಸರ್ವೇ ದ್ವಾರಕಾಯಾಃ ಪ್ರಸಾದತಃ ।
ಕಿಂ ಪುನರ್ಮಾನವಾ ನಿತ್ಯಂ ದ್ವಾರಕಾಯಾಂ ವಸಂತಿ ಯೇ ॥ ೫ ॥
ಯಾ ಗತಿಃ ಸರ್ವಜಂತೂನಾಂ ದ್ವಾರಕಾಪುರವಾಸಿನಾಂ ।
ಸಾ ಗತಿರ್ದುರ್ಲಭಾ ನೂನಂ ಮುನೀನಾಮೂರ್ಧ್ವರೇತಸಾಂ ॥ ೬ ॥
ಸರ್ವೇಷು ಕ್ಷೇತ್ರತೀರ್ಥೇಷು ವಸತಾಂ ವರ್ಷಕೋಟಿಭಿಃ ।
ತತ್ಫಲಂ ನಿಮಿಷಾರ್ಧೇನ ದ್ವಾರಕಾಯಾಂ ದಿನೇ ದಿನೇ ॥ ೭ ॥
ದ್ವಾರಕಾಯಾಂ ಸ್ಥಿತಾಃ ಸರ್ವೇ ನರಾ ನಾರ್ಯಶ್ಚತುರ್ಭುಜಾಃ ।
ದ್ವಾರಕಾವಾಸಿನಃ ಸರ್ವಾನ್ಯಃ ಪಶ್ಯೇತ್ಕಲುಷಾಪಹಾನ್ ॥ ೮ ॥
ಸತ್ಯಂ ಸತ್ಯಂ ದ್ವಿಜಶ್ರೇಷ್ಠಾಃ ಕೃಷ್ಣಸ್ಯಾತಿಪ್ರಿಯೋ ಭವೇತ್ ।
ದ್ವಾರಕಾವಾಸಿನೋ ಯೇ ವೈ ನಿಂದಂತಿ ಪುರುಷಾಧಮಾಃ ।
ಕೃಷ್ಣಸ್ನೇಹವಿಹೀನಾಸ್ತೇ ಪತಂತಿ ದುಃಖಸಾಗರೇ ॥ ೯ ॥
ಜಯಂತೇನ ಭೃಶಂ ತ್ರಸ್ತಾಃ ಶೂಲಾಗ್ರಾರೋಪಿತಾಶ್ಚಿರಂ ।
ಕರ್ಷಿತಾಸ್ತಾಡಿತಾಸ್ತೇ ವೈ ಮೂರ್ಛಿತಾಃ ಪುನರುತ್ಥಿತಾಃ ॥ ೧೦ ॥

---

೫. ದ್ವಾರಕೆಯ ಅನುಗ್ರಹದಿಂದ ಕೀಟಪತಂಗಗಳೂ, ಪಶುಗಳೂ, ಹಾವುಗಳೂ ಪಾಪಿಗಳಾಗಿದ್ದರೂ ಮುಕ್ತರಾಗುವರು. ದ್ವಾರಕೆಯಲ್ಲಿ ವಾಸಿಸುವ ಮಾನವರ ವಿಷಯವನ್ನು ಏನು ಹೇಳತಕ್ಕದ್ದು.

೬. ದ್ವಾರಕೆಯಲ್ಲಿ ವಾಸಿಸುವ ಸಕಲ ಪ್ರಾಣಿಗಳಿಗಾಗುವ ಸದ್ಗತಿಯು ಜಿತೇಂದಿಯರಾದ ಮುನಿಗಳಿಗೂ ದುರ್ಲಭವಾದುದು.

೭. ಕೋಟಿವರ್ಷಗಳಿಂದ ಸಕಲ ಕ್ಷೇತ್ರಗಳಲ್ಲಿ ವಾಸಿಸುವವರಿಗಾಗುವ ಫಲವು ದ್ವಾರಕೆಯಲ್ಲಿ ಅರ್ಧನಿಮಿಷದಲ್ಲುಂಟಾಗುವುದು.

೮. ದ್ವಾರಕೆಯಲ್ಲಿರುವ ಗಂಡಸರೂ, ಹೆಂಗಸರೂ ಚತುರ್ಭುಜರಾಗುವರು. ದ್ವಿಜವರ್ಯರೆ! ಪಾಪವನ್ನು ಪರಿಹರಿಸುವ ದ್ವಾರಕಾವಾಸಿಗಳನ್ನು ನೋಡಿದವನು ಕೃಷ್ಣನಿಗೆ ಅತಿ ಪ್ರಿಯನಾಗುವನು.

೯. ದ್ವಾರಕೆಯಲ್ಲಿ ವಾಸಿಸುವವರನ್ನು ನಿಂದಿಸುವ ಪುರುಷಾಧಮರು ಕೃಷ್ಣನಲ್ಲಿ ಪ್ರೀತಿಯಿಲ್ಲದವರಾಗಿ ದುಃಖಸಮುದ್ರದಲ್ಲಿ ಬೀಳುವರು.

೧೦–೧೧ ಅವರು ಜಯಂತನಿಂದ ಹೆದರಿದವರೂ, ಬಹುಕಾಲದವರೆಗೆ ಶೂಲಕ್ಕೆ ಏರಿಸಲ್ಪಟ್ಟವರೂ, ಎಳೆಯಲ್ಪಟ್ಟವರೂ, ತಾಡಿತರೂ, ಮೂರ್ಛೆಗೊಂಡು ಮರಳಿ

ತ್ರಾಹಿ ತ್ರಾಹಿ ಜಯಂತ ತ್ವಂ ವದಂತೋ ಹಿ ಭಯಾತುರಾಃ ।
ಸ್ಮರಂತಃ ಪೂರ್ವಪಾಪಂ ತೇ ಜಯಂತೇನ ಪ್ರತಾಡಿತಾಃ ॥ ೧೧ ॥

ಜಯಂತ ಉವಾಚ :—

ಕಿಂ ಕೃತಂ ಮಂದಭಾಗ್ಯೈರ್ವೋ ಯತ್ಪಾಪಂ ಚ ಸುದಾರಣಂ ।
ಸರ್ವಂ ಪುಣ್ಯಫಲಂ ಲಬ್ಧ್ವಾ ದ್ವಾರಕಾವಾಸಮುತ್ತಮಂ ॥ ೧೨ ॥
ದ್ವಾರಕಾವಾಸಿನಾಂ ನಿಂದಾ ಮಹಾಪಾಪಾಧಿಕಾ ಧ್ರುವಂ ।
ನ ನಿವರ್ತೇತ ತತ್ಪಾಪಂ ಸಾ ಜ್ಞೇಯಾ ಪರಮೇಶ್ವರೀ ॥ ೧೩ ॥
ಅತಃ ಕೃಷ್ಣಾಜ್ಞಯಾ ಸರ್ವಾನ್ಪಾಪಿನೋ ದಂಡಯಾಮ್ಯಹಂ ।
ವೈಷ್ಣವಾನಾಂ ಚ ನಿಂದಾಯಾ ಫಲಂ ಭುಕ್ತ್ವಾ ಸುದಾರುಣಂ ॥ ೧೪ ॥
ತತಸ್ತು ದ್ವಾರಕಾಯಾಂ ಚ ಪುಣ್ಯಂ ಜನ್ಮ ಭವಿಷ್ಯತಿ ।
ಕೃಷ್ಣಂ ಪ್ರತೋಷ್ಯ ಸಂಸಿದ್ಧಿರ್ಭವಿಷ್ಯತಿ ಸುದುರ್ಲಭಾ ॥ ೧೫ ॥
ತಸ್ಮಾತ್ತದ್ಭುಜ್ಯತಾಂ ಪಾಪಂ ಜಾತಂ ವೈಷ್ಣವನಿಂದನಾತ್ ।
ತತ್ರತ್ಯಾನಾಂ ಪ್ರಭುರ್ನೈವ ಯಮ ಈಷ್ಟೇ ಮಹೇಶ್ವರಃ ॥ ೧೬ ॥

ಶ್ರೀ ಪ್ರಹ್ಲಾದ ಉವಾಚ :—

ತಸ್ಮಾದ್ದ್ವಾರವತೀಂ ಗತ್ವಾ ಸಂಸೇವ್ಯೋ ದೇವನಾಯಕಃ ॥ ೧೭ ॥

---

ಮೇಲಕ್ಕೇಳುವವರೂ, ಜಯಂತ! ಕಾಪಾಡು ಕಾಪಾಡು ಎಂದು ಹೇಳುವವರೂ, ಹಿಂದಿನ ಪಾಪವನ್ನು ಸ್ಮರಿಸುವವರೂ, ಆಗುವರು.

೧೨–೧೩. ಜಯಂತನು ಹೇಳುತ್ತಾನೆ :—ಅಲ್ಪಾದೃಷ್ಟವುಳ್ಳ ಪಾಪಿಗಳೇ! ನೀವು ಎಂತಹ ದಾರುಣಪಾಪವನ್ನೆಸಗಿರುವಿರಿ? ಪುಣ್ಯಫಲವನ್ನು ದಯಪಾಲಿಸುವ ದ್ವಾರಕೆಯನ್ನು ಸೇರಿ ವಾಸಿಸುತ್ತಿರುವ ಪುಣ್ಯಶಾಲಿಗಳನ್ನು ನೀವು ನಿಂದಿಸಿ ಮಹಾಪಾಪವನ್ನು ಮಾಡಿರುವಿರಿ. ಆ ಪಾಪವು ಪರಿಹಾರವಾಗಲಾರದು. ದ್ವಾರಕೆಯನ್ನು ಉತ್ತಮ ಕ್ಷೇತ್ರವೆಂದು ತಿಳಿಯಿರಿ.

೧೪–೧೫ ಆದ್ದರಿಂದ ಪಾಪಿಗಳಾದ ನಿಮ್ಮನ್ನು ಕೃಷ್ಣಾಜ್ಞೆಯಿಂದ ನಾನು ಶಿಕ್ಷಿಸುವೆನು. ನೀವು ವೈಷ್ಣವರನಿಂದೆಯ ದಾರುಣ ಫಲವನ್ನು ಅನುಭವಿಸಿ ದ್ವಾರಕೆಯಲ್ಲಿಯೇ ಪುಣ್ಯಕರವಾದ ಜನ್ಮವನ್ನು ಪಡೆಯುವಿರಿ. ಕೃಷ್ಣನನ್ನು ಸಂತೋಷಗೊಳಿಸಿ ದುರ್ಲಭಸಿದ್ಧಿಯನ್ನು ಹೊಂದುವಿರಿ.

೧೬. ಆದ್ದರಿಂದ ವೈಷ್ಣವನಿಂದೆಯಿಂದುಂಟಾದ ಪಾಪವನ್ನು ಅನುಭವಿಸಿರಿ ಆ ದ್ವಾರಕೆಯಲ್ಲಿರುವವರನ್ನು ಶಿಕ್ಷಿಸಲು ಯಮನೂ, ಮಹೇಶ್ವರನೂ ಸಮರ್ಥರಲ್ಲ.

೧೭–೧೮ ಶ್ರೀಪ್ರಹ್ಲಾದನು ಹೇಳುತ್ತಾನೆ :—ಆದ್ದರಿಂದ ದ್ವಾರವತಿಗೆ ಹೋಗಿ ಕೃಷ್ಣನನ್ನು ಸೇವಿಸಬೇಕು. ವಿಪ್ರರೆ! ದ್ವಾರಕೆಯಲ್ಲಿರುವ ಗೋಮತೀತೀರವನ್ನು

ಗೋಮತೀತೀರಮಾಶ್ರಿತ್ಯ ದ್ವಾರಕಾಯಾಂ ಪ್ರಯಚ್ಛತಿ ।
ಯತ್ತು ಕಿಂಚಿದ್ಧನಂ ವಿಪ್ರಾಃ ಶ್ರೂಯತಾಂ ತತ್ಫಲೋದಯಂ ॥ ೧೮ ॥
ಹೇಮಭಾರಸಹಸ್ರೈಸ್ತು ರವಿವಾರೇ ರವಿಗ್ರಹೇ ।
ಕುರುಕ್ಷೇತ್ರೇ ಯದಾಪ್ನೋತಿ ಗಜಾಶ್ವರಥದಾನತಃ ॥ ೧೯ ॥
ಸಹಸ್ರಗುಣಿತಂ ತಸ್ಮಾತ್ಸತ್ಯಂ ಸತ್ಯಂ ಮಯೋದಿತಂ ।
ಹೇಮಮಾಷಾರ್ಧಮಾನೇನ ದ್ವಾರಕಾದಾನಯೋಗತಃ ॥ ೨೦ ॥
ಪತ್ರಾಣಾಂ ಚೈವ ಪುಷ್ಪಾಣಾಂ ನೈವೇದ್ಯಸಿಕ್ಥಸಂಖ್ಯಯಾ ।
ಕೃಷ್ಣದೇವಸ್ಯ ಪೂಜಾಯಾಮನಂತಂ ಭವತಿ ದ್ವಿಜಾಃ ॥ ೨೧ ॥
ಅನ್ನದಾನಂ ತು ಯಃ ಕುರ್ಯಾದ್ದ್ವಾರಕಾಯಾಂ ತು ತತ್ಫಲಂ ।
ನೈವ ಶಕ್ನೋಮ್ಯಹಂ ವಕ್ತುಂ ಬ್ರಹ್ಮಾ ಶೇಷಮಹೇಶ್ವರಾ ॥ ೨೨ ॥
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಪ್ಯಥ ವಾಂತ್ಯಜಃ ।
ನಾರೀ ವಾ ದ್ವಾರಕಾಯಾಂ ವೈ ಭಕ್ತ್ಯಾ ವಾಸಂ ಕರೋತಿ ವೈ ॥ ೨೩ ॥
ಕುಲಕೋಟಿಂ ಸಮುದ್ಧೃತ್ಯ ವಿಷ್ಣುಲೋಕೇ ಮಹೀಯತೇ ।
ಸತ್ಯಂ ಸತ್ಯಂ ದ್ವಿಜಶ್ರೇಷ್ಠಾ ನಾನೃತಂ ಮಮ ಭಾಷಿತಂ ॥ ೨೪ ॥

---

ಆಶ್ರಯಿಸಿ ಸ್ವಲ್ಪದ್ರವ್ಯವನ್ನು ದಾನಮಾಡಿದರೂ ಉಂಟಾಗುವ ಫಲವನ್ನು ಕೇಳಿರಿ.

೧೯–೨೦ ಭಾನುವಾರ ಸೂರ್ಯಗ್ರಹಣ ಕಾಲದಲ್ಲಿ ಸಾವಿರಭಾರ ಸುವರ್ಣವನ್ನು ದಾನಮಾಡಿದಫಲ, ಕುರುಕ್ಷೇತ್ರದಲ್ಲಿ ಆನೆ, ಕುದುರೆ, ರಥಗಳನ್ನು ದಾನಮಾಡಿದ ಪುಣ್ಯ ಇವುಗಳಿಗಿಂತ ಸಾವಿರಮಡಿಯಷ್ಟು ಹೆಚ್ಚು ಪುಣ್ಯವು ದ್ವಾರಕೆಯಲ್ಲಿ ಅರ್ಧಮಾಷಸುವರ್ಣವನ್ನು ದಾನಮಾಡುವುದರಿಂದುಂಟಾಗುವುದು.

೨೧. ದ್ವಿಜರೆ! ಕೃಷ್ಣನ ಪೂಜೆಯನ್ನು ಮಾಡುವುದರಿಂದ ಪೂಜೆಗೆ ಉಪಯೋಗಿಸಿದ ಪತ್ರ, ಪುಷ್ಪ, ನೈವೇದ್ಯಾನ್ನದ ಅಗಳು ಇವುಗಳ ಸಂಖ್ಯೆಯಷ್ಟು ಅನಂತ ಫಲವುಂಟಾಗುವುವು.

೨೨. ದ್ವಾರಕೆಯಲ್ಲಿ ಮಾಡಿದ ಅನ್ನದಾನದ ಫಲವನ್ನು ಬ್ರಹ್ಮ, ಶೇಷ, ಮಹೇಶ್ವರರೂ ಹೇಳಲು ಸಮರ್ಥರಲ್ಲ.

೨೩–೨೪. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಚಂಡಾಲ, ಹೆಂಗಸು, ಇವರಲ್ಲಿ ಯಾರೇ ಆಗಲಿ ದ್ವಾರಕೆಯಲ್ಲಿ ವಾಸಮಾಡಿದರೆ ಅವರು ಕೋಟಿಕುಲವನ್ನು ಉದ್ಧರಿಸಿ ವಿಷ್ಣುಲೋಕದಲ್ಲಿ ಪೂಜ್ಯರಾಗುವರು. ದ್ವಿಜರೆ! ಈನನ್ನಮಾತುನಿಜ. ಸುಳ್ಳಲ್ಲ.

ದ್ವಾರಕಾವಾಸಿನಂ ದೃಷ್ಟ್ವಾ ಸ್ಪೃಷ್ಟ್ವಾ ಚೈವ ವಿಶೇಷತಃ ।
ಮಹಾಪಾಪವಿನಿರ್ಮುಕ್ತಾಃ ಸ್ವರ್ಗಲೋಕೇ ವಸಂತಿ ತೇ ॥ ೨೫ ॥
ಪಾಂಸವೋ ದ್ವಾರಕಾಯಾ ವೈ ವಾಯುನಾ ಸಮುದೀರಿತಾಃ ।
ಪಾಪಿನಾಂ ಮುಕ್ತಿದಾಃ ಪ್ರೋಕ್ತಾಃ ಕಿಂ ಪುನರ್ದ್ವಾರಕಾ ಭುವಿ ॥ ೨೬ ॥

ಶ್ರೀ ಪ್ರಹ್ಲಾದ ಉವಾಚ :—

ಶ್ರೂಯತಾಂ ದ್ವಿಜಶಾರ್ದೂಲಾ ಮಹಾಮೋಹವಿನಾಶನಂ ।
ದ್ವಾರಕಾಯಾಶ್ಚ ಮಾಹಾತ್ಮ್ಯಂ ಗೋಮತೀಕೃಷ್ಣಸನ್ನಿಧೌ ॥ ೨೭ ॥
ಕುಶಾವರ್ತಾತ್ಸಮಾರಭ್ಯ ಯಾವದ್ವೈ ಸಾಗರಾವಧಿ ।
ಯಸ್ಯಾಂ ತಿಥೌ ಸಮಾಯಾತಿ ಸಿಂಹೇ ದೇವಪುರೋಹಿತಃ ॥ ೨೮ ॥
ತಸ್ಯಾಂ ಹಿ ಗೋಮತೀ ಸ್ನಾನಂ ದ್ವಿಷಡ್ಗೋದಾವರೀ ಫಲಂ ।
ಅವಗಾಹಿತಾ ಪ್ರಯತ್ನೇನ ಸಿಂಹಾಂತೇ ಗೌತಮೀ ಸಕೃತ್ ॥ ೨೯ ॥
ಗೋದಾವರ್ಯಾಂ ಭವೇತ್ಪುಣ್ಯಂ ವಸತೋ ವರ್ಷಸಂಖ್ಯಯಾ ।
ತತ್ಫಲಂ ಸಮವಾಪ್ನೋತಿ ಗೋಮತೀಸೇವನಾದ್ದ್ವಿಜಾಃ ॥ ೩೦ ॥
ಗೋಮತ್ಯಾಂ ಶ್ರದ್ಧಯಾ ಸ್ನಾನಂ ಪೂರ್ಣೇ ಸಿಂಹಸ್ಥಿತೇ ಗುರೌ ।
ಸಹಸ್ರಗುಣಿತಂ ತತ್ಸ್ಯಾದ್ದ್ವಾರವತ್ಯಾಂ ದಿನೇ ದಿನೇ ॥ ೩೧ ॥

---

೨೫. ದ್ವಾರಕಾವಾಸಿಯನ್ನು ನೋಡಿ, ಸ್ಪರ್ಶಮಾಡಿದವರು ಮಹಾಪಾಪ ಮುಕ್ತರಾಗಿ ಸ್ವರ್ಗಲೋಕದಲ್ಲಿ ವಾಸಿಸುತ್ತಾರೆ.

೨೬. ಗಾಳಿಯು ಎರಚಿದ ದ್ವಾರಕೆಯ ಧೂಳಿಗಳೂ ಪಾಪಿಗಳಿಗೆ ಮುಕ್ತಿಯನ್ನೀಯುವುವು. ದ್ವಾರಕೆಯ ಭೂಮಿಯ ವಿಷಯವನ್ನು ಏನು ಹೇಳತಕ್ಕದ್ದು.

೨೭. ಶ್ರೀಪ್ರಹ್ಲಾದನು ಹೇಳುತ್ತಾನೆ. :—ದ್ವಿಜವರ್ಯರೆ ! ಅಜ್ಞಾನವನ್ನು ನೀಗಿಸುವ ದ್ವಾರಕೆಯಲ್ಲಿರುವ ಶ್ರೀಕೃಷ್ಣನ ಸನ್ನಿಧಿಯ ಮಾಹಾತ್ಮ್ಯವನ್ನು ಕೇಳಿರಿ.

೨೮–೩೦. ಯಾವ ತಿಥಿಯಲ್ಲಿ ಬೃಹಸ್ಪತಿಯು ಸಿಂಹರಾಶಿಸ್ಥನಾಗುವನೋ; ಆದಿನ ಕುಶಾವರ್ತವನ್ನಾರಂಭಿಸಿ ಸಮುದ್ರದವರೆಗೆ ಇರುವ ಗೋಮತಿಯಲ್ಲಿ ಸ್ನಾನ ಮಾಡುವುದರಿಂದ ಹನ್ನೆರಡುಸಾರಿ ಗೋದಾವರಿಯಲ್ಲಿ ಮಿಂದ ಫಲವು ಲಭಿಸುವುದು. ಕನ್ಯಾರಾಶಿಯ ಕೊನೆಯಲ್ಲಿ ಒಂದು ಸಾರಿ ಗೌತಮೀನದಿಯಲ್ಲಿ ಮಿಂದರೆ ಗೋದಾವರಿಯಲ್ಲಿ ಒಂದುವರ್ಷವಾಸಮಾಡಿದ ಪುಣ್ಯವು ದೊರೆಯುವುದು. ಗೋಮತಿಯ ಸೇವನೆಯಿಂದಲೂ ಆಫಲವು ಲಭಿಸುವುದು.

೩೧. ಬೃಹಸ್ಪತಿಯು ಸಿಂಹರಾಶಿಯಲ್ಲಿರಲು ಗೋಮತಿಯಲ್ಲಿ ಸ್ನಾನಮಾಡಿದ ಫಲದ ಸಾವಿರಮಡಿ ಫಲವು ದ್ವಾರವತಿಯಲ್ಲಿ ಪ್ರತಿದಿನವೂ ದೊರೆಯುವುದು.

ಗಚ್ಛ ಗಚ್ಛ ಮಹಾಭಾಗ ದ್ವಾರಕಾಮಿತಿ ಯೋ ವದೇತ್ ।
ತಸ್ಯಾವಲೋಕನಾದೇವ ಮುಚ್ಯತೇ ಸರ್ವಪಾತಕೈಃ ॥ ೩೨ ॥
ದ್ವಾರಕೇತಿ ಚ ಯೋ ಬ್ರೂಯಾದ್ದ್ವಾರಕಾಭಿಮುಖೋ ನರಃ ।
ಕೃಪಯಾ ಕೃಷ್ಣದೇವಸ್ಯ ಮುಕ್ತಿಭಾಗೀ ಭವೇದ್ಧ್ರುವಂ ॥ ೩೩ ॥
ದ್ವಾರಕಾಂ ಗೋಮತೀಂ ಪುಣ್ಯಾಂ ರುಕ್ಮಿಣೀಂ ಕೃಷ್ಣಮೇವ ಚ ।
ಸ್ಮರಂತಿ ಯೇಽನ್ವಹಂ ಭಕ್ತ್ಯಾ ದ್ವಾರಕಾಫಲಭಾಗಿನಃ ॥ ೩೪ ॥
ಸಹಸ್ರಯೋಜನಸ್ಥಾನಾಂ ಯೇಷಾಂ ಸ್ಯಾದಿತಿ ಮಾನಸಂ ।
ದ್ವಾರವತ್ಯಾಂ ಗಮಿಷ್ಯಾಮೋ ದ್ರಕ್ಷ್ಯಾಮೋ ದ್ವಾರಕೇಶ್ವರಂ ॥ ೩೫ ॥
ಸರ್ವಪಾಪೈಃ ಪ್ರಮುಚ್ಯಂತೇ ಧನ್ಯಾಸ್ತೇ ಲೋಕಪಾವನಾಃ ।
ಕಿಂ ಪಾಚ್ಯಂ ದ್ವಾರಕಾಯಾತ್ರಾಂ ಯೇ ಪ್ರಕುರ್ವಂತಿ ಮಾನವಾಃ ।
ಕಿಂ ಪುನರ್ದ್ವಾರಕಾನಾಥಂ ಕೃಷ್ಣಂ ಪಶ್ಯಂತಿ ಯೇ ನರಾಃ ॥ ೩೬ ॥
ಮಿತ್ರಧ್ರುಗ್ಬ್ರಹ್ಮಹಾ ಗೋಘ್ನಃ ಪರದಾರಾಪಹಾರಕಃ ।
ಮಾತೃಹಾ ಪಿತೃಹಾ ಚೈವ ಬ್ರಹ್ಮಸ್ವಾಪಹರಸ್ತಥಾ ॥ ೩೭ ॥

---

೩೨. ಮಹಾಭಾಗ್ಯವಂತನೆ! ದ್ವಾರಕೆಗೆ ಹೋಗು ಎಂದು ಹೇಳುವವನ ದರ್ಶನ ದಿಂದಲೇ ಮಾನವನು ಸಕಲಪಾಪಮುಕ್ತನಾಗುವನು.

೩೩. ದ್ವಾರಕಾಭಿಮುಖವಾಗಿ ನಿಂತು ದ್ವಾರಕೆಯೆಂದು ಹೇಳುವವನು ಕೃಷ್ಣ ದೇವನ ದಯೆಯಿಂದ ಮುಕ್ತಿಯನ್ನು ಪಡೆಯುವನು.

೩೪. ಪ್ರತಿದಿನವೂ ಭಕ್ತಿಯಿಂದ ದ್ವಾರಕೆ, ಗೋಮತೀ, ರುಕ್ಮಿಣಿ, ಕೃಷ್ಣ, ಇವರನ್ನು ಸ್ಮರಿಸುವವರು ದ್ವಾರಕಾವಾಸದ ಫಲವನ್ನು ಪಡೆಯುವರು.

೩೫–೩೬. ದ್ವಾರಕೆಗೆ ಸಹಸ್ರಯೋಜನ ದೂರದಲ್ಲಿರುವ ಯಾರು ದ್ವಾರಕೆಗೆ ಹೋಗುತ್ತೇನೆ, ಕೃಷ್ಣನನ್ನು ನೋಡುತ್ತೇನೆ, ಎಂದು ಆಲೋಚಿಸುವರೋ, ಅವರು ಸಮಸ್ತಪಾಪಮುಕ್ತರಾಗಿ ಲೋಕಪಾವನರಾಗುವರು. ದ್ವಾರಕಾಯಾತ್ರೆಯನ್ನೂ ಕೃಷ್ಣನದರ್ಶನವನ್ನೂ ಮಾಡುವವರ ವಿಷಯದಲ್ಲಿ ಏನು ಹೇಳತಕ್ಕದು.

೩೭–೩೮ ಮಿತ್ರದ್ರೋಹ, ಬ್ರಹ್ಮಹತ್ಯೆಗಳನ್ನು ಗೋಹತ್ಯೆಮಾಡಿದವನು,, ಪರರ ಪತ್ನಿಯರನ್ನು ಅಪಹರಿಸಿದವನು, ಮಾತೃಪಿತೃಹತ್ಯೆಮಾಡಿದವನು ಬ್ರಹ್ಮಸ್ವವನ್ನು

ಏತೇ ಚಾನ್ಯೇ ಚ ಪಾಪಿಷ್ಠಾ ಮಹಾಪಾಪಯುತಾಶ್ಚ ಯೇ ।
ಸರ್ವಪಾಪೈಃ ಪ್ರಮುಚ್ಯಂತೇ ಕೃಷ್ಣದೇವಸ್ಯ ದರ್ಶನಾತ್ ॥ ೩೮ ॥
ಕಿಂ ವೇದೈಃ ಶ್ರದ್ಧಯಾ ಹೀನೈಃ ವ್ಯಾಖ್ಯಾನೈರಪಿ ಕೃತ್ಸ್ನಶಃ ।
ಹೇಮಭಾರಸಹಸ್ರೈಃ ಕಿಂ ಕುರುಕ್ಷೇತ್ರೇ ರವಿಗ್ರಹೇ ॥ ೩೯ ॥
ಗಜಾಶ್ವರಥದಾನೈಃ ಕಿಂ ಕಿಂ ಮಂದಿರಪ್ರತಿಷ್ಠಯಾ ।
ತೇಷಾಂ ಪೂಜಾದಿನಾ ಸಮ್ಯಗಿಷ್ಟಾಪೂರ್ತಾದಿಭಿಶ್ಚ ಕಿಂ ॥ ೪೦ ॥
ರಾಜಸೂಯಾಶ್ವಮೇಧಾದ್ಯೈಃ ಸರ್ವಯಜ್ಞೈಶ್ಚ ಕಿಂ ಭವೇತ್ ।
ಸೇವನೈಃ ಕ್ಷೇತ್ರತೀರ್ಥಾನಾಂ ತಪೋಭಿರ್ವಿವಿಧೈಸ್ತು ಕಿಂ ॥ ೪೧ ॥
ಕಿಂ ಮೋಕ್ಷಸಾಧನೈಃ ಕ್ಲೇಶೈರ್ಧ್ಯಾನಯೋಗಸಮಾಧಿಭಿಃ ।
ದ್ವಾರಕೇಶ್ವರಕೃಷ್ಣಸ್ಯ ದರ್ಶನಂ ಯಸ್ಯ ಜಾಯತೇ ॥ ೪೨ ॥
ಮಾಹಾತ್ಮ್ಯಂ ದ್ವಾರಕಾಯಾಸ್ತು ಅಥವಾ ಯಃ ಶೃಣೋತಿ ಚ ।
ವಿಶೇಷೇಣ ತು ವೈಶಾಖ್ಯಾಂ ಜಯಂತ್ಯಾಶ್ಚೈವ ಜಾಗರೇ ॥ ೪೩ ॥

---

ಅಪಹರಿಸಿದವನು ಇವರೇ,ಅಲ್ಲದೆ ಇತರ ಪಾಪಿಷ್ಠರೂ ಕೃಷ್ಣನದರ್ಶನದಿಂದ ಸಕಲಪಾಪ ಮುಕ್ತರಾಗುವರು.

೩೯–೪೪. ಶ್ರದ್ಧೆಯಿಲ್ಲದ ವೇದಾಧ್ಯಯನದಿಂದಲೂ, ವ್ಯಾಖ್ಯಾನದಿಂದಲೂ, ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಸಾವಿರಭಾರಸುವರ್ಣದಾನಮಾಡುವುದ ರಿಂದಲೂ, ಆನೆ, ಕುದುರೆ ರಥಗಳದಾನದಿಂದಲೂ, ಗೃಹಪ್ರತಿಷ್ಠೆಯಿಂದಲೂ, ಇದನ್ನು ಮಾಡಿದವರ ಪೂಜೆಯಿಂದಲೂ, ಯಜ್ಞದಿಂದಲೂ, ಕೆರೆ, ಕಟ್ಟೆಗಳನ್ನು ಕಟ್ಟುವುದ ರಿಂದಲೂ, ರಾಜಸೂಯ ಅಶ್ವಮೇಧ ಮೊದಲಾದಯಾಗಗಳಿಂದಲೂ, ತೀರ್ಥಕ್ಷೇತ್ರಗಳ ಸೇವನೆಯಿಂದಲೂ, ನಾನಾಬಗೆಯ ತಪಸ್ಸುಗಳಿಂದಲೂ, ಮೋಕ್ಷಸಾಧಕವಾದ ಧ್ಯಾನ ಯೋಗ, ಸಮಾಧಿರೂಪಗಳಾದ ಕ್ಲೇಶಗಳಿಂದಲೂ ಏನು ಪ್ರಯೋಜನ ? ದ್ವಾರಕೇಶ್ವರ ನಾದ ಶ್ರೀಕೃಷ್ಣನದರ್ಶಮಾಡಿದವನಿಗೂ,ವೈಶಾಖಮಾಸದದ್ವಾದಶೀ,ಮಾಘ,ಫಾಲ್ಗುಣ

ಮಾಘ್ಯಾಂ ಚ ಫಾಲ್ಗುನೇ ಚೈತ್ರೇ ಜ್ಯೇಷ್ಠೇ ಚೈವ ವಿಶೇಷತಃ ।
ಅದ್ಯಾಪಿ ದ್ವಾರಕಾ ಪುಣ್ಯಾ ಕಲಾವಪಿ ವಿಶೇಷತಃ ॥ ೪೪ ॥
ಯಸ್ಯಾಂ ಸತ್ರಂ ಪ್ರಪಾಂ ಕೃತ್ವಾ ಪ್ರಾಸಾದಂ ಮಂಚಮೇವ ಚ ।
ಯತೀನಾಂ ಶರಣಂ ಕೃತ್ವಾ ತೀರೇ ಮಂಡಪಮೇವ ಚ ॥ ೪೫ ॥
ವಾಪೀಕೂಪತಡಾಗಾನಾಂ ಜೀರ್ಣೋದ್ಧಾರಮಥಾಪಿ ವಾ ।
ಮೂರ್ತಿಂ ವಿಷ್ಣೋಃ ಪ್ರತಿಷ್ಠಾಪ್ಯ ದತ್ವಾ ವಾ ಭೋಗಸಾಧನಂ ॥ ೪೬ ॥
ಶ್ರೂಯತಾಂ ತತ್ಫಲಂ ವಿಪ್ರಾಃ ಸರ್ವೋತ್ಕೃಷ್ಟಂ ವದಾಮ್ಯಹಂ ।
ಸಂಪ್ರಾಪ್ಯ ವಾಂಛಿತಾನ್ಕಾಮಾನ್ಕೃಷ್ಣಾನುಗ್ರಹಭಾಜನಂ ॥ ೪೭ ॥
ತೇಜೋಮಯೇಷು ಲೋಕೇಷು ಭುಕ್ತ್ವಾ ಭೋಗಾನನುಕ್ರಮಾತ್ ।
ಪ್ರಾಪ್ನೋತಿ ವಿಷ್ಣುಲೋಕಂ ವೈ ನರೋ ದೇವನಮಸ್ಕೃತಂ ॥ ೪೮ ॥
ಸ್ಥಾಪಯೇದ್ದ್ವಾರಕಾಯಾಂ ವೈ ಮೂರ್ತಿಂ ದಾರುಶಿಲಾಮಯೀಂ ।
ತ್ರೈಲೋಕ್ಯಂ ಸ್ಥಾಪಿತಂ ತೇನ ವಿಷ್ಣೋಃ ಸಾಯುಜ್ಯತಾಮಿಯಾತ್ ॥೪೯॥

---

ಚೈತ್ರ, ಜೇಷ್ಠ, ಮಾಸಗಳ ದ್ವಾದಶೀ ಇವುಗಳಲ್ಲಿ ಜಾಗರಣೆಮಾಡಿದವನಿಗೂ, ಈ ಕಲಿಯುಗದಲ್ಲಿಯೂ, ಇಲ್ಲಿ ಛತ್ರ, ಅರವಟ್ಟಿಗೆ, ಮಹಡಿಮನೆ, ಮಂಚ, ಸನ್ಯಾಸಿಗಳ ಮಠ, ಮಂಡಪ, ವಾಪೀ, ಬಾವಿ, ಕೆರೆ, ಇವುಗಳನ್ನು ಕಟ್ಟಿಸುವವನಿಗೂ ಅಥವಾ ಜೀರ್ಣೋದ್ಧಾರಮಾಡುವವನಿಗೂ, ವಿಷ್ಣುವಿನ ಪ್ರತಿಮೆಯನ್ನು ಸ್ಥಾಪಿಸುವವನಿಗೂ, ಅಥವಾ ಭೋಗ್ಯವಸ್ತುಗಳನ್ನು ದಾನಮಾಡುವವನಿಗೂ ಉಂಟಾಗುವ ಉತ್ಕೃಷ್ಟ ಫಲವನ್ನು ಹೇಳುವೆನು ಕೇಳಿರಿ. ಅವರು ಇಷ್ಟಾರ್ಥಗಳನ್ನು ಪಡೆದು ಕೃಷ್ಣನ ಅನುಗ್ರಹಕ್ಕೆ ಪಾತ್ರರಾಗಿ ತೇಜೋಮಯವಾದ ಲೋಕಗಳಲ್ಲಿ ಕ್ರಮವಾಗಿ ಸುಖಗಳನ್ನನುಭವಿಸಿ ದೇವವಂದ್ಯವಾದ ವಿಷ್ಣುಲೋಕವನ್ನು ಸೇರುವರು.

೪೯. ದ್ವಾರಕಾಪಟ್ಟಣದಲ್ಲಿ ಮರದ ಅಥವಾ ಕಲ್ಲಿನ ಪ್ರತಿಮೆಯನ್ನು ಸ್ಥಾಪಿಸಿದವನು ಮೂರು ಲೋಕಗಳನ್ನು ಪ್ರತಿಷ್ಠೆಮಾಡಿದವನಂತಾಗಿ ವಿಷ್ಣುವಿನ ಸಾಯುಜ್ಯವನ್ನು ಹೊಂದುವನು.

**ಪ್ರರೋಹೋ ನಾಸ್ತಿ ಪಾಪಸ್ಯ ಪುಣ್ಯಸ್ಯ ವೃದ್ಧಿರುತ್ತಮಾ ।**
**ದ್ವಾರಕಾಯಾಂ ಕಥಂ ಜಾತಂ ವೈಲಕ್ಷಣ್ಯಮಿದಂ ಪ್ರಭೋ**
**ಕ್ಷೇತ್ರೇಭ್ಯಃ ಸರ್ವತೀರ್ಥೇಭ್ಯಃ ಆಶ್ಚರ್ಯಂ ಕಥಯಂತಿ ತೇ ॥ ೫೦ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾನಾಮಮಾಹಾತ್ಮ್ಯವರ್ಣನಂ ನಾಮ
ಪಂಚತ್ರಿಂಶತ್ತಮೋಽಧ್ಯಾಯಃ

---

೫೦. ಈ ದ್ವಾರಕೆಯಲ್ಲಿ ಪಾಪವು ಮೊಳೆಯುವುದಿಲ್ಲ. ಪುಣ್ಯವು ಅಭಿವೃದ್ಧಿಯಾಗುವುದು. ಈ ವ್ಯತ್ಯಾಸವು ಹೇಗುಂಟಾಯಿತು ? ಇದು ಸಕಲ ತೀರ್ಥಗಳಿಗಿಂತ ಆಶ್ಚರ್ಯಕರವಾದುದೆಂದು ಈ ದ್ವಾರಕಾವಾಸಿಗಳು ಹೇಳುತ್ತಾರೆ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಹಾತ್ಮ್ಯದಲ್ಲಿ
ದ್ವಾರಕಾನಾಮಮಾಹಾತ್ಮ್ಯವರ್ಣನವೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಷಟ್ತ್ರಿಂಶೋಽಧ್ಯಾಯಃ

## ಗೋಮತೀಸರಿತ್ಸ್ನಾನವಿಧಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಪ್ರಹ್ಲಾದಸ್ಯ ವಚಃ ಶ್ರುತ್ವಾ ಸ್ಥಿತಸ್ತತ್ರ ಸಭಾತಲೇ ।
ಪಪ್ರಚ್ಛಾತ್ಯುತ್ಸುಕಮನಾ ಬಲಿಸ್ತತ್ಕ್ಷೇತ್ರವೈಭವಂ ॥ ೧ ॥
ಪ್ರಹ್ಲಾದಸ್ತದ್ವಚಃ ಶ್ರುತ್ವಾ ಭಕ್ತಿಭಾವಪುರಸ್ಕೃತಂ ।
ಅಭಿನಂದ್ಯ ಚ ತಂ ಪ್ರೇಮ್ಣಾ ಪ್ರವಕ್ತುಮುಪಚಕ್ರಮೇ ॥ ೨ ॥

ಪ್ರಹ್ಲಾದ ಉವಾಚ :—

ಏಕೈಕಸ್ಮಿನ್ಪದೇ ದತ್ತೇ ಪುರೀಂ ದ್ವಾರವತೀಂ ಪ್ರತಿ ।
ಪುಣ್ಯಂ ಕ್ರತುಸಹಸ್ರಾಣಾಂ ಫಲಂ ಭವತಿ ದೇಹಿನಾಂ ॥ ೩ ॥
ಯೇಽಪೀಚ್ಛಂತಿ ಮನೋವೃತ್ತ್ಯಾ ಗಮನಂ ದ್ವಾರಕಾಂ ಪ್ರತಿ ।
ತೇಷಾಂ ಪ್ರಲೀಯತೇ ಪಾಪಂ ಪೂರ್ವಜನ್ಮಾಯುತಾರ್ಜಿತಂ ॥ ೪ ॥

---

### ಕನ್ನಡದ ಅನುವಾದ

### ಗೋಮತೀಸರಿತ್ಸ್ನಾನವಿಧಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ಆ ಸಭೆಯಲ್ಲಿರುವ ಬಲಿಯು ಪ್ರಹ್ಲಾದನ ಮಾತನ್ನು ಕೇಳಿ ಅತ್ಯಂತ ಕೌತೂಹಲದಿಂದ ಆ ಕ್ಷೇತ್ರದ ವೈಭವವನ್ನು ಕುರಿತು ಪ್ರಶ್ನಿಸಿದನು.

೨. ಪ್ರಹ್ಲಾದನು ಆ ಬಲಿಯ ಭಕ್ತಿಯಿಂದ ಕೂಡಿರುವ ಮಾತನ್ನು ಕೇಳಿ ಅವನನ್ನು ಪ್ರೀತಿಯಿಂದ ಅಭಿನಂದಿಸಿ ಹೇಳಲಾರಂಭಿಸಿದನು.

೩. ಪ್ರಹ್ಲಾದನು ಹೇಳುತ್ತಾನೆ :—ಮನುಷ್ಯರು ದ್ವಾರವತಿಗೆ ಹೋಗಲು ಒಂದೊಂದು ಹೆಜ್ಜೆಯನ್ನಿಟ್ಟರೂ ಸಾವಿರ ಯಾಗಗಳ ಪುಣ್ಯವು ದೊರೆಯುವುದು.

೪. ದ್ವಾರಕೆಗೆ ಹೋಗಲು ಆಲೋಚಿಸುವವರ ಹಿಂದಿನ ಹತ್ತುಸಾವಿರ ಜನ್ಮಗಳಲ್ಲಿ ಸಗಿದ ಪಾಪಗಳು ಪರಿಹಾರವಾಗುವುವು.

ಅತ್ಯುಗ್ರಾಣ್ಯಪಿ ಪಾಪಾನಿ ತಾವತ್ತಿಷ್ಠಂತಿ ವಿಗ್ರಹೇ ।
ಯಾವನ್ನ ಗಚ್ಛತೇ ಜಂತುಃ ಕಲೌ ದ್ವಾರವತೀಂ ಪ್ರತಿ ॥ ೫ ॥
ಲೋಭೇನಾಪ್ಯುಪರೋಧೇನ ದಂಭೇನ ಕಪಟೇನ ವಾ ।
ಚಕ್ರತೀರ್ಥೇ ತು ಯೋ ಗಚ್ಛೇನ್ನ ಪುನರ್ವಿಶತೇ ಭುವಿ ॥ ೬ ॥
ಹೀನವರ್ಣೋಽಪಿ ಪಾಪಾತ್ಮಾ ಮೃತಃ ಕೃಷ್ಣಪುರೀಂ ಪ್ರತಿ ।
ಕಲಿಕಾಲಕೃತೈರ್ದೋಷೈರತ್ಯುಗ್ರೈರಪಿ ಮಾನವಃ ॥ ೭ ॥
ಭಕ್ತ್ಯಾ ಕೃಷ್ಣಮುಖಂ ದೃಷ್ಟ್ವಾ ನ ಲಿಪ್ಯತಿ ಕದಾಚನ ।
ತಾವದ್ವಿರಾಜತೇ ಕಾಶೀ ಹ್ಯವಂತೀ ಮಥುರಾ ಪುರೀ ।
ಯಾವನ್ನ ಪಶ್ಯತೇ ಜಂತುಃ ಪುರೀಂ ಕೃಷ್ಣೇನ ಪಾಲಿತಾಂ ॥ ೮ ॥
ಯೇಷಾಂ ಕೃಷ್ಣಾಲಯೇ ಪ್ರಾಣಾ ಗತಾ ದಾನವನಾಯಕ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೯ ॥
ದುರ್ಲಭೋ ದ್ವಾರಕಾವಾಸೋ ದುರ್ಲಭಂ ಕೃಷ್ಣದರ್ಶನಂ ।
ದುರ್ಲಭಂ ಗೋಮತೀಸ್ನಾನಂ ರುಕ್ಮಿಣೀದರ್ಶನಂ ಕಲೌ ॥ ೧೦ ॥

---

೫. ಕಲಿಯುಗದಲ್ಲಿ ಪ್ರಾಣಿಯು ದ್ವಾರವತಿಗೆ ಹೋಗುವವರೆಗೆ ದೇಹದಲ್ಲಿ ಅತಿಕಠಿನ ಪಾಪಗಳಿರುವುವು.

೬. ಲೋಭದಿಂದಾಗಲಿ, ಬಲಾತ್ಕಾರದಿಂದಾಗಲಿ, ದಂಭದಿಂದಾಗಲಿ, ಕಪಟದಿಂದಾಗಲಿ ಚಕ್ರತೀರ್ಥಕ್ಕೆ ಹೋಗುವವನು ಮರಳಿ ಭೂಮಿಯಲ್ಲಿ ಜನಿಸುವುದಿಲ್ಲ.

೭. ಹೀನ ಜಾತಿಯವನಾದರೂ ಪಾಪಿಷ್ಠನು ಕೃಷ್ಣಪುರಿಗೆ ಹೋಗಿ ಮೃತನಾದರೂ, ಕೃಷ್ಣನ ಮುಖವನ್ನು ನೋಡಿದರೂ ಕಲಿಕಾಲ ಸಂಬಂಧಿಯಾದ ಅತಿ ಕಠಿನ ಪಾಪಗಳಿಂದ ಲಿಪ್ತನಾಗುವುದಿಲ್ಲ.

೮. ಪ್ರಾಣಿಯು ಕೃಷ್ಣನು ಕಾಪಾಡಿದ ದ್ವಾರವತಿಯನ್ನು ನೋಡುವವರೆಗೆ ಕಾಶೀ, ಅವಂತೀ, ಮಧುರಾಪುರಿಗಳು ವಿರಾಜಿಸುವುವು.

೯. ದಾನವರಾಜ! ಕೃಷ್ಣಾಲಯದಲ್ಲಿ ಮೃತರಾದವರು ಅನೇಕ ಕೋಟಿ ಕಲ್ಪಗಳವರೆಗೆ ಮೋಕ್ಷದಿಂದ ಹಿಂದಿರುಗುವುದಿಲ್ಲ.

೧೦. ದ್ವಾರಕಾವಾಸವೂ, ಕೃಷ್ಣದರ್ಶನವೂ, ಗೋಮತೀ ಸ್ನಾನವೂ, ರುಕ್ಮಿಣೀ ದರ್ಶನವೂ ಕಲಿಯುಗದಲ್ಲಿ ದುರ್ಲಭವಾದುವು.

ನಿತ್ಯಂ ಕೃಷ್ಣಪುರೀಂ ರಮ್ಯಾಂ ಯೇ ಸ್ಮರಂತಿ ಗೃಹೇ ಸ್ಥಿತಾಃ ।
ನ ತೇಷಾಂ ಪಾತಕಂ ಕಿಂಚಿದ್ದೇಹಮಾಶ್ರಿತ್ಯ ತಿಷ್ಠತಿ ॥ ೧೧ ॥
ಕೇಶವಾರ್ಚಾ ಗೃಹೇ ಯಸ್ಯ ನ ತಿಷ್ಠತಿ ಮಹೀಪತೇ ।
ತಸ್ಯಾನ್ನಂ ನ ಚ ಭೋಕ್ತವ್ಯಮಭಕ್ಷ್ಯೇಣ ಸಮಂ ಸ್ಮೃತಂ ॥ ೧೨ ॥
ನೋಷ್ಣತ್ವಂ ದ್ವಿಜರಾಜೇ ವೈ ನ ಶೀತತ್ವಂ ಹುತಾಶನೇ ।
ವೈಷ್ಣವಾನಾಂ ನ ಪಾಪತ್ವಮೇಕಾದಶ್ಯುಪವಾಸಿನಾಂ ॥ ೧೩ ॥
ನಾಸ್ತಿ ನಾಸ್ತಿ ಮಹಾಭಾಗಾಃ ಕಲಿಕಾಲಸಮಂ ಯುಗಂ ।
ಸ್ಮರಣಾತ್ಕೀರ್ತನಾದ್ವಿಷ್ಣೋಃ ಪ್ರಾಪ್ಯತೇ ಪದಮವ್ಯಯಂ ॥ ೧೪ ॥
ಸತ್ಯಭಾಮಾಪತಿರ್ಯತ್ರ ಯತ್ರ ಪುಣ್ಯಾ ಚ ಗೋಮತೀ ।
ನರಾ ಮುಕ್ತಿಂ ಪ್ರಯಾಸ್ಯಂತಿ ತತ್ರ ಸ್ನಾತ್ವಾ ಕಲೌ ಯುಗೇ ॥ ೧೫ ॥
ಮಾಧವೇ ಶುಕ್ಲಪಕ್ಷೇ ತು ತ್ರಿಸ್ಪೃಶಾಂ ದ್ವಾದಶೀಂ ಯದಿ ।
ಲಭತೇ ದ್ವಾರಕಾಯಾಂ ತು ನಾಸ್ತಿ ಧನ್ಯತರಸ್ತತಃ ॥ ೧೬ ॥

---

೧೧. ಮನೆಯಲ್ಲಿಯೇ ಇದ್ದು ಪ್ರತಿದಿನವೂ ರಮ್ಯವಾದ ಕೃಷ್ಣಪುರಿಯನ್ನು ಸ್ಮರಿಸುವವನ ಶರೀರದಲ್ಲಿ ಯಾವ ಪಾಪವೂ ಇರುವುದಿಲ್ಲ.

೧೨. ದೊರೆಯೆ! ಯಾವನ ಮನೆಯಲ್ಲಿ ವಿಷ್ಣು ಪೂಜೆಯು ನಡೆಯುವುದಿಲ್ಲವೊ, ಅವನ ಅನ್ನವನ್ನು ತಿನ್ನಬಾರದು. ಅದು ಅಭಕ್ಷ್ಯಕ್ಕೆ ಸಮವಾಗುವುದು.

೧೩. ಚಂದ್ರನಲ್ಲಿ ಉಷ್ಣವೂ, ಬೆಂಕಿಯಲ್ಲಿ ಶೈತ್ಯವೂ, ಏಕಾದಶೀ ದಿನ ಉಪವಾಸಮಾಡುವ ವೈಷ್ಣವನಲ್ಲಿ ಪಾಪವೂ ಇರುವುದಿಲ್ಲ.

೧೪. ಮಹಾ ಭಾಗ್ಯಶಾಲಿಯೆ! ಕಲಿಯುಗಕ್ಕೆ ಸರಿಯಾದ ಯುಗವೇ ಇಲ್ಲ. ಈ ಯುಗದಲ್ಲಿ ವಿಷ್ಣುವಿನ ಸ್ಮರಣೆ ಕೀರ್ತನಗಳಿಂದಲೇ ಶಾಶ್ವತಸ್ಥಾನವು ಲಭಿಸುವುದು.

೧೫. ಕಲಿಯುಗದಲ್ಲಿ ಸತ್ಯಭಾಮೆಯ ಪತಿಯಾದ ಕೃಷ್ಣನೂ, ಪುಣ್ಯಕರವಾದ ಗೋಮತಿಯೂ ನೆಲೆಸಿರುವ ದ್ವಾರಕೆಯಲ್ಲಿರುವ ನದಿಯಲ್ಲಿ ಮಿಂದವನು ಮುಕ್ತನಾಗುವನು.

೧೬. ಈ ದ್ವಾರಕೆಯಲ್ಲಿ ವೈಶಾಖ ಶುಕ್ಲಪಕ್ಷದ ತ್ರಿಸ್ಪೃಶಾ ದ್ವಾದಶಿಯನ್ನು ಹೊಂದಿದವನಿಗಿಂತ ಪುಣ್ಯವಂತನಿಲ್ಲ.

ತ್ರಿಸ್ಪೃಶಾಂ ದ್ವಾದಶೀಂ ಪ್ರಾಪ್ಯ ಗತ್ವಾ ಕೃಷ್ಣಪುರೀಂ ನರಃ ।
ಯಃ ಕರೋತಿ ಹರೇರ್ಭಕ್ತ್ಯಾ ಸೋಽಶ್ವಮೇಧಫಲಂ ಲಭೇತ್ ॥ ೧೭ ॥
ನಂದಾಯಾಂ ತು ಜಯಾಯಾಂ ವೈ ಭದ್ರಾ ಚೈವ ಭವೇದ್ಯದಿ ।
ಉಪವಾಸಾರ್ಚನೇ ಗೀತೇ ದುರ್ಲಭಾ ಕೃಷ್ಣಸನ್ನಿಧೌ ॥ ೧೮ ॥
ಉದಯೈಕಾದಶೀ ಸ್ವಲ್ಪಾ ಅಂತೇ ಚೈವ ತ್ರಯೋದಶೀ ।
ಸಂಪೂರ್ಣಾ ದ್ವಾದಶೀ ಮಧ್ಯೇ ತ್ರಿಸ್ಪೃಶಾ ಚ ಹರೇಃ ಪ್ರಿಯಾ ॥ ೧೯ ॥
ಏಕೇನ ಚೋಪವಾಸೇನ ಉಪವಾಸಾಽಯುತಂ ಫಲಂ ।
ಜಾಗರೇ ಶತಸಾಹಸ್ರಂ ನೃತ್ಯೇ ಕೋಟಿಗುಣಂ ಕಲೌ ॥ ೨೦ ॥
ತತ್ಫಲಂ ಲಭತೇ ಮರ್ತ್ಯೋ ದ್ವಾರಕಾಯಾಂ ದಿನೇದಿನೇ ।
ಗೃಹೇಷು ವಸತಾಮೇತತ್ಕಿಂ ಪುನಃ ಕೃಷ್ಣಸನ್ನಿಧೌ ॥ ೨೧ ॥
ವಾಙ್ಮನಃಕಾಯಜೈರ್ದೋಷೈಃ ಹತಾ ಯೇ ಪಾಪಬುದ್ಧಯಃ ।
ದ್ವಾರವತ್ಯಾಂ ವಿಮುಚ್ಯಂತೇ ದೃಷ್ಟ್ವಾ ಕೃಷ್ಣಮುಖಂ ಶುಭಂ ॥ ೨೨ ॥

---

೧೭. ಕೃಷ್ಣಪುರಿಯನ್ನು ಸೇರಿ ವಿಷ್ಣುವಿನಲ್ಲಿ ಭಕ್ತಿಯನ್ನಿಟ್ಟು ತ್ರಿಸ್ಪೃಶಾ ದ್ವಾದಶಿಯನ್ನು ಅನುಷ್ಠಾನ ಮಾಡುವವನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

೧೮. ನಂದಾ, ಜಯಾ, ಭದ್ರಾ ಇವುಗಳಲ್ಲಿ ಕೃಷ್ಣನ ಹತ್ತಿರ ಉಪವಾಸ ಅರ್ಚನೆ, ಸಂಗೀತ ಇವುಗಳು ದುರ್ಲಭವಾದುವು.

೧೯. ಸೂರ್ಯೋದಯ ಕಾಲದಲ್ಲಿ ಏಕಾದಶಿಯೂ, ನಡುವೆ ಸಂಪೂರ್ಣ ದ್ವಾದಶಿಯೂ, ಕೊನೆಯಲ್ಲಿ ತ್ರಯೋದಶೀ ತಿಥಿಯೂ ಇರುವ ತ್ರಿಸ್ಪೃಶಾತಿಥಿಯು ಹರಿಗೆ ಪ್ರಿಯವಾದುದು.

೨೦. ಕಲಿಯುಗದಲ್ಲಿ ಆ ದಿನ ಒಂದು ಉಪವಾಸ ಮಾಡುವುದರಿಂದ ಹತ್ತು ಸಾವಿರ ಉಪವಾಸದ ಫಲವೂ, ಜಾಗರಣೆಯಿಂದ ಲಕ್ಷ ಜಾಗರಣೆ ಫಲವೂ, ನೃತ್ಯದಿಂದ ಕೋಟಿ ನೃತ್ಯಗಳ ಪುಣ್ಯವೂ ಲಭಿಸುವುವು.

೨೧. ದ್ವಾರಕೆಯಲ್ಲಿ ಸ್ವಗೃಹದಲ್ಲಿ ವಾಸಮಾಡುವುದರಿಂದಲೆ ಪ್ರತಿದಿನವೂ ಪುಣ್ಯವು ಲಭಿಸುವುದು. ಕೃಷ್ಣನ ಹತ್ತಿರ ವಾಸಿಸುವುದರಿಂದಿನ್ನೇನು.

೨೨. ವಾಕ್, ಮನಸ್ಸು, ಶರೀರಗಳಿಂದ ಆಚರಿಸಿದ ಪಾಪವುಳ್ಳ ಪಾಪಿಗಳು ದ್ವಾರವತಿಯಲ್ಲಿ ಕೃಷ್ಣನ ಶುಭ ಮುಖವನ್ನು ನೋಡುವುದರಿಂದ ಪಾಪಮುಕ್ತರಾಗುವರು.

ದೈತ್ಯೇಶ್ವರ ನರಾಃ ಶ್ಲಾಘ್ಯಾ ದ್ವಾರವತ್ಯಾಂ ಗತಾಶ್ಚ ಯೇ ॥ ೨೩ ॥
ದುರ್ಲಭಾನೀಹ ತೀರ್ಥಾನಿ ದುರ್ಲಭಾಃ ಪರ್ವತೋತ್ತಮಾಃ ।
ದುರ್ಲಭಾ ವೈಷ್ಣವಾ ಲೋಕೇ ದ್ವಾರಕಾವಸತಿಃ ಕಲೌ ॥ ೨೪ ॥
ಗವಾಂ ಕೋಟಿಸಹಸ್ರಾಣಿ ರತ್ನಕೋಟಿಶತಾನಿ ಚ ।
ದತ್ವಾ ಯತ್ಫಲಮಾಪ್ನೋತಿ ತತ್ಫಲಂ ಕೃಷ್ಣಸನ್ನಿಧೌ ॥ ೨೫ ॥
ಯಸ್ಯಾಃ ಸೇವಾಂ ಪ್ರವಿಷ್ಟಸ್ಯ ಬ್ರಹ್ಮಹತ್ಯಾದಿಪಾತಕಂ ।
ನಶ್ಯತೇ ದರ್ಶನಾದೇವ ತಾಂ ಪುರೀಂ ಕೋ ನ ಸೇವತೇ ॥ ೨೬ ॥
ಚಕ್ರಾಂಕಿತಾ ಶಿಲಾ ಯತ್ರ ಗೋಮತ್ಯುದಧಿಸಂಗಮೇ ।
ಯಚ್ಛತಿ ಪೂಜಿತಾ ಮೋಕ್ಷಂ ತಾಂ ಪುರೀಂ ಕೋ ನ ಸೇವತೇ ॥ ೨೭ ॥
ಸಿಂಹಸ್ಥೇ ಚ ಗುರೌ ವಿಪ್ರಾ ಗೋದಾವರ್ಯಾಂತು ಯತ್ಫಲಂ ।
ತತ್ಫಲಂ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥ ೨೮ ॥
ದ್ವಾರಕಾವಸ್ಥಿತಂ ತೋಯಂ ಷಣ್ಮಾಸಂ ಪಿಬತೇ ನರಃ ।
ತಸ್ಯ ಚಕ್ರಾಂಕಿತೋ ದೇಹೋ ಭವತೇ ನಾತ್ರ ಸಂಶಯಃ ॥ ೨೯ ॥

---

೨೩-೨೪. ದೈತ್ಯರಾಜ! ದ್ವಾರವತೀ ಯಾತ್ರೆ ಮಾಡಿದ ಮಾನವರು ಶ್ಲಾಘ್ಯರು. ಈ ಲೋಕದಲ್ಲಿ ಕಲಿಯುಗದಲ್ಲಿ ತೀರ್ಥ, ಉತ್ತಮ ಪರ್ವತ, ವೈಷ್ಣವ, ದ್ವಾರಕಾವಾಸ ಇವುಗಳು ದುರ್ಲಭವಾದುವು.

೨೫. ಕೃಷ್ಣನ ಸನ್ನಿಧಿಯಲ್ಲಿ ವಾಸಿಸುವುದರಿಂದ ಕೋಟಿ ಗೋವು, ರತ್ನ ಇವುಗಳನ್ನು ದಾನಮಾಡಿದ ಫಲವು ದೊರೆಯುವುದು.

೨೬. ಯಾವ ದ್ವಾರವತಿಯು ಎಲ್ಲೆಯನ್ನು ಪ್ರವೇಶಿಸಿದವನನ್ನು ದರ್ಶನ ಮಾಡಿದ ಮಾತ್ರದಿಂದಲೆ ಬ್ರಹ್ಮಹತ್ಯಾದಿ ಪಾಪಗಳು ಪರಿಹಾರವಾಗುವುವೊ, ಆ ಪಟ್ಟಣವನ್ನು ಯಾವನು ತಾನೆ ಸೇವಿಸಲಾರನು

೨೭. ಯಾವ ದ್ವಾರವತಿಯಲ್ಲಿ ಗೋಮತೀ ಸಾಗರ ಸಂಗಮದಲ್ಲಿರುವ ಚಕ್ರಾಂಕಿತ ಶಿಲೆಯು ಪೂಜಿಸಿದವನಿಗೆ ಮೋಕ್ಷವನ್ನು ಕೊಡುವುದೊ ಆ ಪಟ್ಟಣ ವನ್ನು ಯಾವನು ತಾನೆ ಸೇವಿಸಲಾರನು.

೨೮. ವಿಪ್ರರೆ! ಬೃಹಸ್ಪತಿಯು ಸಿಂಹರಾಶಿಯಲ್ಲಿರಲು ಗೋಮತಿಯಲ್ಲಿ ಮಿಂದಫಲವು ಗೋಮತಿಯಲ್ಲಿ ಕೃಷ್ಣನ ಹತ್ತಿರ ಸ್ನಾನಮಾಡುವುದರಿಂದ ಲಭಿಸುವುದು.

೨೯. ದ್ವಾರಕೆಯಲ್ಲಿರುವ ನೀರನ್ನು ಆರು ತಿಂಗಳು ಕುಡಿಯುವವನ ದೇಹವು ನಿಜವಾಗಿಯೂ ಚಕ್ರಾಂಕಿತವಾಗುವುದು.

ಮನ್ವಂತರಸಹಸ್ರಾಣಿ ಕಾಶೀವಾಸೇನ ಯತ್ಫಲಂ ।
ತತ್ಫಲಂ ದ್ವಾರಕಾಯಾಂ ಚ ವಸತಃ ಪಂಚಭಿರ್ದಿನೈಃ ॥ ೩೦ ॥
ತಾವನ್ಮೃತಪ್ರಜಾ ನಾರೀ ದುರ್ಭಗಾ ದೈತ್ಯಪುಂಗವ ।
ಯಾವನ್ನ ಪಶ್ಯತೇ ಭಕ್ತ್ಯಾ ಕಲೌ ಕೃಷ್ಣಪ್ರಿಯಾಂ ಪುರೀಂ ॥ ೩೧ ॥
ರುಕ್ಮಿಣೀಂ ಸತ್ಯಭಾಮಾಂ ಚ ದೇವೀಂ ಜಾಂಬವತೀಂ ತಥಾ ।
ಮಿತ್ರವಿಂದಾಂ ಚ ಕಾಲಿಂದೀಂ ಭದ್ರಾಂ ನಾಗ್ನಜಿತೀಂ ತಥಾ ॥ ೩೨ ॥
ಸಂಪೂಜ್ಯ ಲಕ್ಷಣಾಂ ತತ್ರ ವೈಷ್ಣವೀಃ ಕೃಷ್ಣವಲ್ಲಭಾಃ ।
ಏತಾಃ ಸಂಪೂಜ್ಯ ವಿಧಿವಚ್ಛ್ರೇಷ್ಠ ಪುತ್ರಶ್ಚ ಲಭ್ಯತೇ ॥ ೩೩ ॥
ತಾವದ್ಭವಭಯಂ ಪುಂಸಾಂ ಗೃಹಭಂಗಶ್ಚ ಮೂರ್ಖತಾ ।
ಯಾವನ್ನ ಪಶ್ಯತೇ ಭಕ್ತ್ಯಾ ಕಲೌ ಕೃಷ್ಣಪುರೀಂ ನರಃ ॥ ೩೪ ॥
ನ ಸರ್ವತ್ರ ಮಹಾಪುಣ್ಯಂ ಸಂಗಮೋ ಸರಿತಾಂ ಪತೇಃ ।
ಜಾಹ್ನವೀ ಸಂಗಮಾನ್ಮುಕ್ತಿರ್ಗೋಮತೀ ನೀರಸಂಗಮಾತ್ ।
ಸಂಪರ್ಕೇ ಗೋಮತೀನೀರಪೂತೋಽಹಂ ಕೃಷ್ಣಸನ್ನಿಧೌ ॥ ೩೫ ॥
ಗೋಮತೀನೀರಸಂಪೃಕ್ತಂ ಯೇ ಮಾಂ ಪಶ್ಯಂತಿ ಮಾನವಾಃ ।
ನ ತೇಷಾಂ ಪುನರಾವೃತ್ತಿರಿತ್ಯಾಹ ಸರಿತಾಂ ಪತಿಃ ॥ ೩೬ ॥

---

೩೦. ಸಾವಿರ ಮನ್ವಂತರಗಳಲ್ಲಿ ಕಾಶಿಯಲ್ಲಿ ವಾಸಿಸುವುದರಿಂದುಂಟಾಗುವ ಫಲವು ದ್ವಾರಕೆಯಲ್ಲಿ ಐದು ದಿನ ವಾಸಿಸುವುದರಿಂದುಂಟಾಗುವುದು.

೩೧. ಕಲಿಯುಗದಲ್ಲಿ ಕೃಷ್ಣಪ್ರಿಯವಾದ ದ್ವಾರಕೆಯನ್ನು ನೋಡದಿರುವವರೆಗೆ ಹೆಂಗಸು ಮೃತಪ್ರಜಳೂ, ದುರ್ಭಗಳೂ ಆಗಿರುವಳು.

೩೨–೩೩. ಅಲ್ಲಿ ವೈಷ್ಣವಿಯರೂ, ಕೃಷ್ಣನಪ್ರಿಯೆಯರೂ ಆದ ರುಕ್ಮಿಣೀ, ಸತ್ಯಭಾಮಾ, ಜಾಂಬವತೀ, ಮಿತ್ರವಿಂದಾ, ಕಾಲಿಂದೀ, ಭದ್ರಾ, ನಾಗ್ನಜಿತಿ, ಲಕ್ಷಣಾ ಇವರನ್ನು ಪೂಜಿಸಿದವನಿಗೆ ಉತ್ತಮನಾದ ಪುತ್ರನು ಜನಿಸುವನು.

೩೪. ಮನುಷ್ಯನು ಭಕ್ತಿಯಿಂದ ಕೃಷ್ಣನ ಪಟ್ಟಣವನ್ನು ನೋಡದಿರುವವರೆಗೆ ಸಂಸಾರದ ಭಯವೂ, ಗೃಹನಾಶವೂ, ಮೂರ್ಖತ್ವವೂ, ಇರುವುದು.

೩೫. ಸಮುದ್ರಕ್ಕೆ ನದಿಯು ಸೇರುವ ಸ್ಥಳದಲ್ಲೆಲ್ಲ ಮಹಾಪುಣ್ಯವು ಲಭಿಸುವು ವುದಿಲ್ಲ. ಗಂಗಾ, ಗೋಮತೀ ಸಂಗಮಸ್ಥಳದಲ್ಲಿ ಮುಕ್ತಿಯುಂಟಾಗುವುದು. ನಾನು ಕೃಷ್ಣನ ಹತ್ತಿರ ಬಂದುಸೇರಿದ ಗೋಮತೀಜಲದಿಂದ ಪವಿತ್ರನಾಗಿರುವೆನು.

೩೬. ಗೋಮತೀಜಲದಿಂದ ಸೇರಿದ ನನ್ನನ್ನು ನೋಡಿದ ಮಾನವರು ಮುಕ್ತರಾಗಿ ಹಿಂದಿರುಗುವುದಿಲ್ಲ. ಎಂದು ಸಮುದ್ರನು ಹೇಳಿದ್ದಾನೆ.

ದ್ವಾರಕಾಂ ಗಚ್ಛಮಾನಸ್ಯ ವಿಪತ್ತಿಶ್ಚ ಭವೇದ್ಯದಿ ।
ನ ತಸ್ಯ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥ ೩೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾದರ್ಶನಗೋಮತೀಸರಿತ್ಸ್ನಾನವಿಧಿಮಾಹಾತ್ಮ್ಯವರ್ಣನಂನಾಮ
ಷಟ್ತ್ರಿಂಶೋಽಧ್ಯಾಯಃ

---

೩೭. ದ್ವಾರಕೆಗೆ ಹೋಗುತ್ತಿರುವಾಗ ಆಪತ್ತು ಸಂಭವಿಸಿದರೆ ಅವನು ಮುಕ್ತನಾಗಿ ಕೋಟಿಕಲ್ಪಗಳಾದರೂ ಹಿಂದಿರುಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾರಕಾದರ್ಶನಗೋಮತೀಸರಿತ್ಸ್ನಾನವಿಧಿಮಾಹಾತ್ಮ್ಯವರ್ಣನವೆಂಬ
ಮುವ್ವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಸಪ್ತತ್ರಿಂಶತ್ತಮೋऽಧ್ಯಾಯಃ

### ಚಕ್ರಾಂಕಿತಪಾಷಾಣ ಪೂಜನಫಲಾದಿಕಥನಂ

ಶ್ರೀ ಪ್ರಹ್ಲಾದ ಉವಾಚ :—

ಕೃಷ್ಣಕೃಷ್ಣೇತಿ ಕೃಷ್ಣೇತಿ ಶ್ವಪಚೋ ಜಾಗರನ್ನಿಶಿ ।
ಜಪೇದಪಿ ಕಲೌ ನಿತ್ಯಂ ಕೃಷ್ಣರೂಪೀ ಭವೇದ್ಧಿ ಸಃ ॥ ೧ ॥
ಕೃಷ್ಣೇಕೃಷ್ಣೇತಿ ಕೃಷ್ಣೇತಿ ಕಲೌ ವದತ್ಯಹರ್ನಿಶಂ ।
ನಿತ್ಯಂ ಯಜ್ಞಾಯುತಂ ಪುಣ್ಯಂ ತೀರ್ಥಕೋಟಿಸಮುದ್ಭವಂ ॥ ೨ ॥
ಸಂಪೂರ್ಣೈಕಾದಶೀ ಭೂತ್ವಾ ದ್ವಾದಶ್ಯಾಂ ವರ್ಧತೇ ಯದಿ ।
ಉನ್ಮೀಲಿನೀತಿ ವಿಖ್ಯಾತಾ ತಿಥೀನಾಮುತ್ತಮಾ ತಿಥಿಃ ॥ ೩ ॥
ವಂಜುಲೀವಾಸರೇ ಯೇ ವೈ ರಾತ್ರೌ ಕುರ್ವಂತಿ ಜಾಗರಂ ।
ಯಜ್ಞಾಯುತಾಯುತಂ ಪುಣ್ಯಂ ಮುಹೂರ್ತಾರ್ಧೇನ ಜಾಯತೇ ॥ ೪ ॥

---

### ಕನ್ನಡದ ಅನುವಾದ

### ಚಕ್ರಾಂಕಿತಪಾಷಾಣಪೂಜನಫಲಾದಿಕಥನ

೧. ಶ್ರೀ ಪ್ರಹ್ಲಾದನು ಹೇಳುತ್ತಾನೆ :—ಚಂಡಾಲನೂ ಸಹ ರಾತ್ರಿಯಲ್ಲಿ ಜಾಗರಣೆಮಾಡಿ ಕೃಷ್ಣ, ಕೃಷ್ಣ ಎಂದು ಕಲಿಯುಗದಲ್ಲಿ ನಿತ್ಯವೂ ಜಪಮಾಡಿದ ಪಕ್ಷದಲ್ಲಿ ಅವನು ಕೃಷ್ಣಸ್ವರೂಪನೇ ಆಗುವನು.

೨. ನಿತ್ಯವೂ ಕಲಿಯುಗದಲ್ಲಿ ಕೃಷ್ಣ, ಕೃಷ್ಣ ಎಂದು ಬನಾಮಸ್ಮರಣೆಯನ್ನು ಮಾಡಿದರೆ ಅನೇಕ ಯಾಗಗಳನ್ನು ಮಾಡಿದ ಪುಣ್ಯವೂ, ಅನೇಕ ಕೋಟಿತೀರ್ಥಗಳ ಸ್ನಾನದ ಪುಣ್ಯವೂ ಲಭಿಸುವುದು.

೩. ಪೂರ್ಣ ಏಕಾದಶೀ ಆಗಿ ದ್ವಾದಶಿಯು ವೃದ್ಧಿಹೊಂದಿದ್ದೇ ಆದರೆ ಅದು ಉನ್ಮೀಲಿನೀ ಎಂದು ಪ್ರಸಿದ್ಧಿಗೊಂಡು ತಿಥಿಗಳಲ್ಲಿ ಉತ್ತಮ ತಿಥಿಯೆನ್ನಿಸಿಕೊಳ್ಳುವುದು.

೪. ವಂಜುಲೀದಿನ ರಾತ್ರಿಯಲ್ಲಿ ಜಾಗರಣೆಮಾಡಿದ ಪಕ್ಷದಲ್ಲಿ ಅನೇಕ ಯಾಗಗಳನ್ನು ಮಾಡಿದ ಪುಣ್ಯವು ಅರ್ಧಮುಹೂರ್ತದಲ್ಲೇ ಸಿಗುವುದು.

ಸಂಪೂರ್ಣಾ ದ್ವಾದಶೀ ಭೂತ್ವಾ ವರ್ಧತೇ ಚಾಪರೇ ದಿನೇ ।
ತ್ರಯೋದಶ್ಯಾಂ ಮುನಿಶ್ರೇಷ್ಠಾ ವಂಜುಲೀ ದುರ್ಲಭಾ ಕಲೌ ॥ ೫ ॥
ಉನ್ಮೀಲಿನೀಮನುಪ್ರಾಪ್ಯ ಯೇ ಪ್ರಕುರ್ವಂತಿ ಜಾಗರಂ ।
ನಿಮಿಷಾರ್ಧೇನ ತತ್ಪುಣ್ಯಂ ಗವಾಂ ಕೋಟಿಫಲಪ್ರದಂ ॥ ೬ ॥
ಸಂಪೂರ್ಣೈಕಾದಶೀ ಭೂತ್ವಾ ಪ್ರತ್ಯಹಂ ವರ್ಧತೇ ಯದಿ ।
ದರ್ಶಶ್ಚ ಪೌರ್ಣಮಾಸೀ ಚ ಪಕ್ಷವೃದ್ಧಿಸ್ತಥೋಚ್ಯತೇ ॥ ೭ ॥
ಪಕ್ಷವೃದ್ಧಿಕರೀಂ ಪ್ರಾಪ್ಯ ಯೇ ಪ್ರಕುರ್ವಂತಿ ಜಾಗರಂ ।
ನಿಮಿಷಾರ್ಧಾರ್ಧಮಾತ್ರೇಣ ಗವಾಂ ಕೋಟಿಫಲಪ್ರದಂ ॥ ೮ ॥

ಶ್ರೀ ಪ್ರಹ್ಲಾದ ಉವಾಚ :—

ಚಕ್ರತೀರ್ಥೇ ನರಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ ।
ಸ ಯಾತಿ ಪರಮಂ ಸ್ಥಾನಂ ದಾಹಪ್ರಲಯವರ್ಜಿತಂ ॥ ೯ ॥
ಚಕ್ರಂ ಪ್ರಕ್ಷಾಲಿತಂ ಯತ್ರ ಕೃಷ್ಣೇನ ಸ್ವಯಮೇವ ಹಿ ।
ತೇನ ವೈ ಚಕ್ರತೀರ್ಥಂ ಹಿ ಪುಣ್ಯಂ ಚ ಪರಮಂ ಹರೇಃ ।
ಭವಂತಿ ಯತ್ರ ಪಾಷಾಣಾಶ್ಚಕ್ರಾಂಕಾ ಮುಕ್ತಿದಾಯಕಾಃ ॥ ೧೦ ॥

---

೫. ಮುನಿಶ್ರೇಷ್ಠರೆ! ದ್ವಾದಶಿಯು ಪೂರ್ಣವಾಗಿ ತ್ರಯೋದಶಿಯು ವೃದ್ಧಿ ಹೊಂದಿದ ಪಕ್ಷದಲ್ಲಿ ಅಂಥ ವಂಜುಲಿಯು ಕಲಿಯುಗದಲ್ಲಿ ದುರ್ಲಭವಾದದು.

೬. ಉನ್ಮೀಲಿನೀ ಸಮಯದಲ್ಲಿ ಯಾರು ಜಾಗರಣೆಮಾಡುತ್ತಾರೋ ಅವರಿಗೆ ಕೋಟಿಹಸುಗಳನ್ನು ದಾನಮಾಡಿದ ಪುಣ್ಯವು ಅರ್ಧನಿಮಿಷದಲ್ಲಿ ದೊರೆಯುವುದು.

೭. ಏಕಾದಶಿಯು ಸಂಪೂಣರ್ವಾಗಿ ಮುಂದೆ ಪ್ರತಿನಿತ್ಯವೂ ವೃದ್ಧಿಯಾದಲ್ಲಿ ಅದು ಪಕ್ಷವೃದ್ಧಿ ಎನ್ನಿಸಿಕೊಳ್ಳುತದ್ತೆ.

೮. ಇಂಥಾ ಪಕ್ಷವೃದ್ಧಿಯಲ್ಲಿ ಜಾಗರಣೆಮಾಡಿದವನು ಕೋಟಿಗೋದಾನ ಮಾಡಿದ ಫಲವನ್ನು ಕಾಲು ನಿಮಿಷದಲ್ಲೆ ಹೊಂದುವನು.

೯. ಶ್ರೀ ಪ್ರಹ್ಲಾದನು ಹೇಳುತ್ತಾನೆ :— ಚಕ್ರತೀರ್ಥದಲ್ಲಿ ಮಿಂದವನು ಸರ್ವ ಪಾಪಗಳಿಂದಲೂ ಬಿಡುಗಡೆಹೊಂದಿ ಪ್ರಲಯಾದಿಗಳಿಗೆ ನಿಲುಕದ ಉತ್ತಮಸ್ಥಾನ ವನ್ನು ಹೊಂದುವನು.

೧೦. ಇಲ್ಲಿ ಶ್ರೀ ಕೃಷ್ಣನು ತನ್ನಚಕ್ರವನ್ನು ತೊಳೆದನು. ಆದರಿಂದ ಇದು ಪುಣ್ಯ ಕರವಾದ ಚಕ್ರತೀರ್ಥವೆಂದು ಪ್ರಸಿದ್ಧಿಗೊಂಡಿತು. ಈ ಚಕ್ರತೀರ್ಥದ ಕಲ್ಲುಗಳು ಸಹ ಮೋಕ್ಷವನ್ನೀಯುವ ಚಕ್ರಚಿಹ್ನೆಗಳನ್ನು ಪಡೆದಿವೆ.

ತತ್ರೈವ ಯದಿ ಲಭ್ಯಂತೇ ಚಕ್ರೈರ್ದ್ವಾದಶಭಿಃ ಸಹ ।
ದ್ವಾದಶಾತ್ಮಾ ಸ ವಿಜ್ಞೇಯೋ ಮೋಕ್ಷದಃ ಪರಿಕೀರ್ತಿತಃ ॥ ೧೧ ॥
ಏಕ ಚಕ್ರೇಣ ಪಾಷಾಣೋ ದ್ವಾರವತ್ಯಾಂ ಸುಶೋಭನಃ ।
ಸುದರ್ಶನಾಭಿಧೇಯೋಽಸೌ ಮೋಕ್ಷೈಕಫಲದಾಯಕಃ ॥ ೧೨ ॥
ಲಕ್ಷ್ಮೀನಾರಾಯಣೌ ದ್ವಾಭ್ಯಾಂ ತು ಭುಕ್ತಿಮುಕ್ತಿಫಲಪ್ರದೌ ।
ತ್ರಿಭಿಸ್ತ್ರೈವಾಚ್ಯುತಂ ದೇವಂ ಸದೇಂದ್ರಪದದಾಯಕಂ ॥ ೧೩ ॥
ಭೂತಿದೋ ವಿಘ್ನಹಂತಾ ಚ ಚತುಶ್ಚಕ್ರೋ ಜನಾರ್ದನಃ ।
ಪಂಚಭಿರ್ವಾಸುದೇವಸ್ತು ಜನ್ಮಮೃತ್ಯುಭಯಾಪಹಃ ॥ ೧೪ ॥
ಪ್ರದ್ಯುಮ್ನಃ ಷಡ್ಭಿರೇವಾಸೌ ಲಕ್ಷ್ಮೀಂ ಕಾಂತಿಂ ದದಾತಿ ಚ ।
ಸಪ್ತಭಿರ್ಬಲದೇವಸ್ತು ಗೋತ್ರಕೀರ್ತಿವಿವರ್ಧನಃ ॥ ೧೫ ॥
ವಾಂಛಿತಂ ಚಾಷ್ಟಭಿರ್ಭಕ್ತ್ಯಾ ದದಾತಿ ಪುರುಷೋತ್ತಮಃ ।
ಸರ್ವಂ ದದ್ಯಾನ್ನವವ್ಯೂಹೋ ದುರ್ಲಭೋ ಯಃ ಸುರೋತ್ತಮೈಃ ॥ ೧೬ ॥
ರಾಜ್ಯಪ್ರದೋ ದಶಭಿಸ್ತು ದಶಾವತಾರ ಏವ ಚ ।
ಏಕಾದಶಭಿರೈಶ್ವರ್ಯಮನಿರುದ್ಧಃ ಪ್ರಯಚ್ಛತಿ ॥ ೧೭ ॥

---

೧೧. ಅಲ್ಲಿ ಹನ್ನೆರಡು ಚಕ್ರಗಳ ಚಿಹ್ನೆಯುಳ್ಳ ಕಲ್ಲುಗಳು ಸಿಕ್ಕಿದ ಪಕ್ಷದಲ್ಲಿ, ಮೋಕ್ಷವನ್ನೀಯುವ ದ್ವಾದಶಾತ್ಮಾ ಎನಿಸಿಕೊಳ್ಳುವುದು.

೧೨. ಒಂದು ಚಕ್ರದ ಕಲ್ಲು ದ್ವಾರಕೆಯಲ್ಲಿ ಮೋಕ್ಷವನ್ನೀಯುವ ಶುಭಕರವಾದ ಸುದರ್ಶನ ಎಂಬ ಹೆಸರನ್ನು ಹೊಂದಿದೆ.

೧೩—೧೮. ಎರಡು ಚಿಹ್ನೆಯುಳ್ಳದ್ದು ಭುಕ್ತಿಮುಕ್ತಿಪ್ರದವಾದ ಲಕ್ಷ್ಮೀ ನಾರಾಯಣನೆಂದೂ, ಮೂರು ಗುರುತುಳ್ಳದ್ದು ಇಂದ್ರಪದವಿಯನ್ನು ಕೊಡುವ ಅಚ್ಯುತನೆಂದೂ, ನಾಲ್ಕು ಚಕ್ರಚಿಹ್ನೆಯುಳ್ಳದ್ದೂ ಐಶ್ವರ್ಯಪ್ರದವಾದ, ಜನಾರ್ದನನೆಂದೂ, ಐದು ಚಕ್ರವುಳ್ಳದ್ದು ಜನನಮರಣಗಳನ್ನು ನಿವಾರಿಸುವ ವಾಸುದೇವನೆಂದೂ, ಆರುಚಕ್ರವುಳ್ಳದ್ದು ಲಕ್ಷ್ಮಿಯನ್ನೂ, ಸೊಬಗನ್ನೂ ಕೊಡುವ ಪ್ರದ್ಯುಮ್ನನೆಂದೂ, ಇಷ್ಟಾರ್ಥವನ್ನು ಕೊಡುವ ಎಂಟು ಚಕ್ರವುಳ್ಳದ್ದು ನವವ್ಯೂಹಾತ್ಮಕವಾಗಿಯೂ, ದಶಾವತಾರ ಸ್ವರೂಪವುಳ್ಳ ಹತ್ತು ಚಕ್ರಗಳಗುರುತುಳ್ಳದ್ದು ರಾಜ್ಯಪ್ರದವೂ, ಐಶ್ವರ್ಯಪ್ರದವಾದ ಹನ್ನೊಂದು ಗುರುತುಳ್ಳ ಚಕ್ರವೂ ಅನಿರುದ್ಧನೆಂದೂ, ಹನ್ನೆರಡು ಚಕ್ರವುಳ್ಳದು ದ್ವಾದಶಾತ್ಮಸ್ವರೂಪನೆಂದೂ

ನಿರ್ವಾಣಂ ದ್ವಾದಶಾತ್ಮಾ ತು ಚಕ್ರೈರ್ದ್ವಾದಶಭಿಃ ಸ್ಮೃತಂ ।
ಅತ ಊರ್ಧ್ವಮನಂತೋಽಸೌ ಸೌಖ್ಯಮೋಕ್ಷಪ್ರದಾಯಕಃ ॥ ೧೮ ॥
ಯೇ ಕೇಚಿತ್ತತ್ರ ಪಾಷಾಣಾಃ ಕೃಷ್ಣಚಕ್ರೇಣ ಮುದ್ರಿತಾಃ ।
ತೇಷಾಂ ಸ್ಪರ್ಶನಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೯ ॥
ಬ್ರಹ್ಮಹತ್ಯಾದಿಕಾಂ ಪಾಪಂ ಮನೋವಾಕ್ಕಾಯಕರ್ಮಜಂ ।
ತತ್ಸರ್ವಂ ವಿಲಯಂ ಯಾತಿ ಚಂಕ್ರಾಂಕಿತಪ್ರಪೂಜನಾತ್ ॥ ೨೦ ॥
ಮ್ಲೇಚ್ಛದೇಶೇಽಶುಭೇ ವಾಪಿ ಚಂಕ್ರಾಂಕೋ ಯತ್ರ ತಿಷ್ಠತಿ ।
ಯೋಜನಾನಿ ದಶ ದ್ವೇ ಚ ಮಮ ಕ್ಷೇತ್ರಂ ಚ ಸುಂದರಿ ॥ ೨೧ ॥
ಮೃತ್ಯುಕಾಲೇ ಚ ಸಂಪ್ರಾಪ್ತೇ ಹೃದಯೇ ಯಸ್ತು ಧಾರಯೇತ್ ।
ಚಕ್ರಾಂಕಂ ಪಾಪದಲನಂ ಸ ಯಾತಿ ಪರಮಾಂ ಗತಿಂ ॥ ೨೨ ॥
ಗೋಮತೀಸಂಗಮೇ ಸ್ನಾತ್ವಾ ಭೃಗುತೀರ್ಥೇ ತಥೈವ ಚ ।
ನ ಮಾತುರ್ವಸತೇ ಕುಕ್ಷೌ ಯದ್ಯಪಿ ಸ್ಯಾತ್ಸ ಪಾತಕೀ ॥ ೨೩ ॥

---

ಮೋಕ್ಷದಾಯಕವೆಂದೂ ಹೇಳಲ್ಪಟ್ಟಿದೆ. ಹನ್ನೆರಡು ಚಕ್ರಗಳಿಗಿಂತ ಮೇಲ್ಪಟ್ಟದ್ದು ಮೋಕ್ಷಸುಖಗಳನ್ನ ಕೊಡುವ ಅನಂತವೆಂದೂ ಹೇಳಲ್ಪಡುತ್ತದೆ.

೧೯. ಯಾರು ಈ ಕೃಷ್ಣಚಕ್ರದಿಂದ ಮುದ್ರಿತವಾದದ್ದನ್ನು ಮುಟ್ಟುತ್ತಾರೋ ಅದರಿಂದಲೇ ಅವರು ಸಕಲಪಾಪನಿವಾರಣೆಯನ್ನು ಹೊಂದುತ್ತಾರೆ.

೨೦. ಈ ಚಕ್ರಾಕಾರದ ಕಲ್ಲುಗಳಪೂಜೆಯಿಂದ ಬ್ರಹ್ಮಹತ್ಯಾದಿ ಸಕಲಪಾಪಗಳೂ ಮನಸ್ಸು, ವಾಕ್ಕುಗಳಿಂದ ಮಾಡಿದ ಪಾಪಗಳೂ ಕೂಡಲೇ ನಾಶಹೊಂದುವುವು.

೨೧. ಸುಂದರಿ! ಮ್ಲೇಚ್ಛದೇಶದಲ್ಲಾಗಲಿ, ಅಶುಭ ಪ್ರದೇಶದಲ್ಲಾಗಲಿ ಈ ಚಕ್ರಾಂಕಿತಗಳು ಇದ್ದ ಪಕ್ಷದಲ್ಲಿ ಅವು ಹನ್ನೆರಡು ಯೋಜನವುಳ್ಳ ಪುಣ್ಯಕರವಾದ ಕ್ಷೇತ್ರವೆನಿಸುವುದು.

೨೨. ಮರಣಸಮಯದಲ್ಲಿ ಯಾರು ಚಕ್ರಾಂಕಿತಶಿಲೆಗಳನ್ನು ಹೃದಯಲ್ಲಿ ಧರಿಸಿರುತ್ತಾರೆಯೋ, ಅವರು ಪಾಪಶೂನ್ಯರಾಗಿ ಉತ್ತಮಪದವಿಯನ್ನು ಹೊಂದುವರು.

೨೩. ಗೋಮತೀಸಂಗಮದಲ್ಲಿ ಸ್ನಾನಮಾಡಿದವನೂ, ಭೃಗುತೀರ್ಥದಲ್ಲಿ ಮಿಂದವನೂ ಬಹಳಪಾಪಿಷ್ಠನಾಗಿ ಇದ್ದರೂ ಪುನಃ ತಾಯಿಯ ಹೊಟ್ಟೆಯಲ್ಲಿ ಹುಟ್ಟುವುದಿಲ್ಲ.

ತಾಮಸಂ ರಾಜಸಂ ವಾಪಿ ಯತ್ಕೃತಂ ವಿಷ್ಣುಪೂಜನಂ ।
ತತ್ಸಾತ್ವಿಕತ್ವಮಭ್ಯೇತಿ ನಿಮ್ನಗಾಂಭೋ ಯಥಾರ್ಣವೇ ॥ ೨೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಚಕ್ರಾಂಕಿತಪಾಷಾಣಪೂಜನಫಲಾದಿಕಥನಂ ನಾಮ
ಸಪ್ತತ್ರಿಂಶತ್ತಮೋಽಧ್ಯಾಯಃ

---

೨೪. ತಾಮಸವಾಗಿಯಾಗಲಿ, ರಾಜಸವಾಗಿಯಾಗಲಿ ವಿಷ್ಣುಪೂಜೆಮಾಡಿದ್ದ ಪಕ್ಷದಲ್ಲಿ ಅದು ಸಮುದ್ರದಲ್ಲಿ ನದೀನೀರು ಸೇರವಂತೆ, ಸಾತ್ವಿಕ ಭಾವದಲ್ಲಿ ಅಡಗುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಚಕ್ರಾಂಕಿತಪಾಷಾಣಪೂಜನಫಲಾದಿಕಥನವೆಂಬ
ಮುವ್ವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಷ್ಟತ್ರಿಂಶತ್ತಮೋಽಧ್ಯಾಯಃ

### ದ್ವಾರಕಾಚಕ್ರತೀರ್ಥಯೋಃ ಜಾಗರಾದಿಮಾಹಾತ್ಮ್ಯವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ದ್ವಾರಕಾಯಾಶ್ಚ ಮಾಹಾತ್ಮ್ಯಂ ಶೃಣು ಪೌತ್ರ ಮಯೋದಿತಂ ।
ಶೃಣ್ವತೋ ಗದತಶ್ಚಾಪಿ ಮುಕ್ತಿಃ ಕೃಷ್ಣಾದ್ಭವೇದ್ಧ್ರುವಂ ॥ ೧ ॥
ಪುತ್ರೇಣ ಲೋಕಾನ್ಜಯತಿ ಪೌತ್ರೇಣಾನಂತ್ಯಮಶ್ನುತೇ ।
ಅಥ ಪುತ್ರಸ್ಯ ಪೌತ್ರೇಣ ನಾಕಮೇವಾಧಿರೋಹತಿ ॥ ೨ ॥
ಯಸ್ಯ ಪುತ್ರಃ ಶುಚಿರ್ದಕ್ಷಃ ಪೂರ್ವೇ ವಯಸಿ ಧಾರ್ಮಿಕಃ ।
ವಿಷ್ಣುಭಕ್ತಿಂ ಚ ಕುರುತೇ ತಂ ಪುತ್ರಂ ಕವಯೋ ವಿದುಃ ॥ ೩ ॥
ಹೇಮಶೃಂಗಂ ರೌಪ್ಯಖುರಂ ಸವತ್ಸಂ ಕಾಂಸ್ಯದೋಹನಂ ।
ಸವಸ್ತ್ರಂ ಕಪಿಲಾನಾಂತು ಸಹಸ್ರಂ ಚ ದಿನೇದಿನೇ ॥ ೪ ॥

---

### ಕನ್ನಡದ ಅನುವಾದ

### ದ್ವಾರಕಾಚಕ್ರತೀರ್ಥಯೋಃ ಜಾಗರಾದಿಮಾಹಾತ್ಮ್ಯವರ್ಣನ

೧. ಶ್ರೀಪ್ರಹ್ಲಾದನು ಹೇಳುತ್ತಾನೆ :—ಮೊಮ್ಮಗನಾದ ಬಲಿಯೆ ! ನಾನು ಹೇಳುವ ದ್ವಾರಕಾಮಹಾತ್ಮ್ಯವನ್ನು ಕೇಳು. ಇದನ್ನು ಕೇಳುವವನಿಗೂ, ಹೇಳುವವನಿಗೂ ಕೃಷ್ಣನಿಂದ ನಿಜವಾಗಿಯೂ ಮೋಕ್ಷವುಂಟಾಗುವುದು.

೨. ಪುತ್ರನಿಂದ ಉತ್ತಮಲೋಕಗಳನ್ನೂ ಪೌತ್ರನಿಂದ ಶಾಶ್ವತ ಮೋಕ್ಷವನ್ನೂ ಹೊಂದುವನು.

೩. ಯಾವನ ಮಗನು ಶುದ್ಧನೂ, ಕುಶಲನೂ, ಪೂರ್ವವಯಸ್ಸಿನಲ್ಲಿ ಧಾರ್ಮಿಕನೂ, ವಿಷ್ಣುಭಕ್ತನೂ, ಆಗಿರುವನೊ, ಅವನನ್ನು ಜ್ಞಾನಿಗಳು ಸತ್ಪುತ್ರನನ್ನಾಗಿ ತಿಳಿಯುತ್ತಾರೆ.

೪-೫. ಸುವರ್ಣವಕೊಂಬುಳ್ಳವೂ, ಬೆಳ್ಳಿಯಗೊರಸುಳ್ಳವೂ, ಕರುವಿನಿಂದ ಸಹಿತವೂ, ಕಂಚಿನ ಕೆಚ್ಚಲುಳ್ಳವೂ, ವಸ್ತ್ರದಿಂದ ಕೂಡಿರುವುವೂ ಆದ ಸಾವಿರ ಕಪಿಲ

ದತ್ವಾ ಯತ್ಫಲಮಾಪ್ನೋತಿ ಬ್ರಾಹ್ಮಣೇ ವೇದಪಾರಗೇ ।
ತತ್ಫಲಂ ಸ್ನಾನಮಾತ್ರೇಣ ಗೋಮತ್ಯಾಂ ಮಧುಭಿದ್ದಿನೇ ॥ ೫ ॥
ಯಸ್ತ್ವೇವಂ ಭೋಜಯೇದ್ವಿಪ್ರಂ ದ್ವಾರಕಾಯಾಂ ಚ ಸಂಸ್ಥಿತಂ ।
ಸುಭಿಕ್ಷೇ ಭೋ ದ್ವಿಜಶ್ರೇಷ್ಠಾಃ ಫಲಂ ಲಕ್ಷಗುಣಂ ಭವೇತ್ ॥ ೬ ॥
ಫಲಂ ಲಕ್ಷಗುಣಂ ಪ್ರೋಕ್ತಂ ದುರ್ಭಿಕ್ಷೇ ಕೃಷ್ಣಸನ್ನಿಧೌ ।
ಧರ್ಮಾನುಸಾರೇಣ ದದ್ಯಾದ್ಭಿಕ್ಷಾಂ ತು ಭಿಕ್ಷುಕೇ ॥ ೭ ॥
ಅಪಿ ನಃ ಸ ಕುಲೇ ಕಶ್ಚಿದ್ಭವಿಷ್ಯತಿ ನರೋತ್ತಮಃ ।
ಯೋ ಯತೀನಾಂ ಕಲೌ ಪ್ರಾಪ್ತೇ ಪಿತೄನುದ್ದಿಶ್ಯ ದಾಸ್ಯತಿ ॥ ೮ ॥
ದ್ವಾರಕಾಯಾಂ ವಿಶೇಷೇಣ ಸತ್ಕೃತ್ಯ ಕೃಷ್ಣಸನ್ನಿಧೌ ।
ಅನ್ನದಾನಂ ಯತೀನಾಂ ತು ಕೌಪೀನಾಚ್ಛಾದನಾನಿ ಚ ॥ ೯ ॥
ನಾತ್ಮನಃ ಕ್ರತುಭಿಃ ಸ್ವಿಷ್ಟೈಃ ನಾಸ್ತಿ ತೀರ್ಥೈಃ ಪ್ರಯೋಜನಂ ।
ಯತ್ರವಾ ತತ್ರ ವಾ ಕಾರ್ಯಂ ಯತೀನಾಂ ಪ್ರೀಣನಂ ಸದಾ ॥ ೧೦ ॥

---

ಗೋವುಗಳನ್ನು ವೇದಪಾರಂಗತನಾದ ಬ್ರಾಹ್ಮಣನಿಗೆ ಕೊಟ್ಟದ್ದರಿಂದುಂಟಾಗುವ ಫಲವು ಗೋಮತೀನದಿಯಲ್ಲಿ ಹರಿದಿನದಲ್ಲಿ ಸ್ನಾನಮಾಡುವುದರಿಂದ ಉಂಟಾಗುವುದು.

೬. ದ್ವಿಜವರ್ಯರೆ! ಈ ದ್ವಾರಕೆಯಲ್ಲಿರುವ ಬ್ರಾಹ್ಮಣನನ್ನು ದುರ್ಭಿಕ್ಷ ಕಾಲದಲ್ಲಿ ಭೋಜನಮಾಡಿಸಿದರೆ ಲಕ್ಷದಷ್ಟು ಪುಣ್ಯವು ಹೆಚ್ಚುವುದು.

೭. ಹೀಗೆಯೇ ಕೃಷ್ಣನಹತ್ತಿರವೂ ದುರ್ಭಿಕ್ಷೆಯಲ್ಲಿ ಭೋಜನಮಾಡಿಸಿದರೆ ಲಕ್ಷದಷ್ಟು ಪುಣ್ಯವು ಅಧಿಕವಾಗುವುದು. ಹೀಗೆ ಧರ್ಮವನ್ನನುಸರಿಸಿ ಭಿಕ್ಷುಕನಿಗೆ ಭಿಕ್ಷೆಯನ್ನು ನೀಡಬೇಕು.

೮. ಕಲಿಯುಗದಲ್ಲಿ ಯತಿಗಳಿಗೆ ಪಿತೃಗಳನ್ನುದ್ದೇಶಿಸಿ ದಾನಮಾಡುವ ಉತ್ತಮ ಮಾನವನನ್ನು ನಮ್ಮ ವಂಶದಲ್ಲಿ ಜನಿಸುವನೆ ಎಂದು ಪಿತೃಗಳು ಯೋಚಿಸುವರು.

೯. ದ್ವಾರಕೆಯಲ್ಲಿ ವಿಶೇಷವಾಗಿ ಕೃಷ್ಣನಹತ್ತಿರ ಯತಿಗಳನ್ನು ಸನ್ಮಾನಿಸಿ ಅವರಿಗೆ ಅನ್ನ, ಕೌಪೀನ, ಹೊದ್ದಿಕೆಗಳನ್ನು ಕೊಡಬೇಕು.

೧೦. ನಮಗೆ ಯಜ್ಞಯಾಗಗಳಿಂದಲೂ, ತೀರ್ಥಗಳಿಂದಲೂ ಪ್ರಯೋಜನವಿಲ್ಲ, ಎಲ್ಲಿಯಾದರೂ ಯಾವಾಗಲೂ ಯತಿಗಳನ್ನು ಸಂತೋಷಗೊಳಿಸಬೇಕು.

ಶ್ವಪಚಾದಯೋಽಪಿ ಯೇ ಧನ್ಯಾ ಯೇ ಗತಾ ದ್ವಾರಕಾಂ ಪುರೀಂ ।
ಪ್ರಾಪ್ಯ ಭಾಗವತಾನ್ಯೇ ವೈ ಪಿತ್ರ್ಯಾನುದ್ದಿಶ್ಯ ಪುತ್ರಕಾಃ ॥ ೧೧ ॥
ಭಕ್ತ್ಯಾ ಸಂಪೂಜಯಿಷ್ಯಂತಿ ವಸ್ತ್ರೈರ್ದಾನೈಶ್ಚ ಭೂರಿಭಿಃ ॥ ೧೨ ॥
ಗಯಾಪಿಂಡೇನ ನಾಸ್ಮಾಕಂ ತೃಪ್ತಿರ್ಭವತಿ ತಾದೃಶೀ !
ಯಾದೃಶೀ ವಿಷ್ಣುಭಕ್ತಾನಾಂ ಸತ್ಕಾರೇಣೋಪಜಾಯತೇ ॥ ೧೩ ॥
ವೈಶಾಖೇ ಯೇ ಕರಿಷ್ಯಂತಿ ದ್ವಾದಶೀಂ ಕೃಷ್ಣಸನ್ನಿಧೌ ।
ಕೃಷ್ಣಂ ಸಂಪೂಜಯಂತಶ್ಚ ರಾತ್ರೌ ಕುರ್ವಂತಿ ಜಾಗರಂ ॥ ೧೪ ॥
ಮಾಹಾತ್ಮ್ಯಂ ಪಠನೀಯಂತು ದ್ವಾರಕಾಸಂಭವಂ ಶುಭಂ ।
ಕೃಷ್ಣಸ್ಯ ಬಾಲಚರಿತಂ ಬಾಲಕೃಷ್ಣಾದಿದರ್ಶನಂ ॥ ೧೫ ॥
ಕ್ರೀಡನಂ ಗೋಕುಲಸ್ಯೈವ ಕ್ರೀಡಾ ಗೋಪೀಜನಸ್ಯ ಚ ।
ಕೃಷ್ಣಾವತಾರಕರ್ಮಾಣಿ ಶ್ರೋತವ್ಯಾನಿ ಪುನಃ ಪುನಃ ॥ ೧೬ ॥
ರುಕ್ಮಶೃಂಗೀಂ ರೌಪ್ಯಖುರೀಂ ಮುಕ್ತಾಲಾಂಗೂಲಭೂಷಿತಾಂ ।
ಸವತ್ಸಾಂ ಬ್ರಾಹ್ಮಣೇ ದತ್ವಾ ಹೋಮಾರ್ಥಂ ಚಾಹಿತಾಗ್ನಯೇ ॥ ೧೭ ॥
ನಿಮಿಷಸ್ಪರ್ಶನಾಂಶೇನ ಫಲಂ ಕೃಷ್ಣಸ್ಯ ಜಾಗರೇ ।
ಯತ್ಕಿಂಚಿತ್ಕುರುತೇ ಪಾಪಂ ಕೋಟಿಜನ್ಮಸು ಮಾನವಃ ।
ಕೃಷ್ಣಸ್ಯ ಜಾಗರೇ ರಾತ್ರೌ ದಹತೇ ನಾತ್ರ ಸಂಶಯಃ ॥ ೧೮ ॥

---

೧೧–೧೨. ದ್ವಾರಕಾಯಾತ್ರೆಮಾಡಿದ ಚಂಡಾಲಾದಿಗಳೂ ಧನ್ಯರು. ಅಲ್ಲಿ ನಮ್ಮ ಪುತ್ರರು ಭಕ್ತಿಯಿಂದ ವಿಷ್ಣುಭಕ್ತರನ್ನು ವಸ್ತ್ರದಾನಗಳಿಂದ ಪೂಜಿಸಿ ಸನ್ಮಾನ ಮಾಡಿದರೆ ನಮಗೆ ಗಯಾಪಿಂಡಪ್ರದಾನಕ್ಕಿಂತ ಹೆಚ್ಚು ತೃಪ್ತಿಯುಂಟಾಗುವುದು.

೧೪. ವೈಶಾಖದ್ವಾದಶೀದಿನ ಕೃಷ್ಣನನ್ನು ಪೂಜಿಸುತ್ತ ರಾತ್ರಿಜಾಗರಣೆಮಾಡುವವರು ಧನ್ಯರು.

೧೫. ದ್ವಾರಕೆಯ ಮಾಹಾತ್ಮ್ಯವನ್ನೂ, ಕೃಷ್ಣನ ಬಾಲ ಚರಿತೆಯನ್ನೂ ಪಠಿಸಬೇಕು. ಬಾಲಕೃಷ್ಣನನ್ನು ದರ್ಶನಮಾಡಬೇಕು.

೧೬. ಕೃಷ್ಣನು ಗೋಕುಲದಲ್ಲಿ ಗೋಪಿಯರೊಡನೆ ಮಾಡಿದ ಕ್ರೀಡೆ ಮೊದಲಾದ ಕೃಷ್ಣಾವತಾರದ ಲೀಲಾ ಕಾರ್ಯಗಳನ್ನು ಕೇಳಬೇಕು.

೧೭–೧೮. ಕೃಷ್ಣ ಜಾಗರಣೆಯಲ್ಲಿ ಸುವರ್ಣದ ಕೊಂಬುಳ್ಳುದೂ, ಬೆಳ್ಳಿಯ ಗೊರಸುಳ್ಳುದೂ, ಮುತ್ತಿನ ಬಾಲದಿಂದ ಅಲಂಕಾರಗೊಂಡುದೂ, ಕರುವಿನಿಂದ ಸಹಿತವೂ ಆದ ಧೇನುವನ್ನು ಆಹಿತಾಗ್ನಿಯಾದ ಬ್ರಾಹ್ಮಣನಿಗೆ ಹೋಮಕ್ಕಾಗಿ ದಾನಮಾಡಿ ಒಂದು ನಿಮಿಷಕಾಲ ಕೃಷ್ಣನನ್ನು ಸ್ಪರ್ಶಮಾಡುವುದರಿಂದ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳು ನಿಜವಾಗಿಯೂ ಬೂದಿಯಾಗುವುವು.

ಪಠೇದ್ಭಾಗವತಂ ರಾತ್ರೌ ಪುರಾಣಂ ಪಠಿತಂ ಹರೇಃ ।
ಯಾವತ್ಸೂರ್ಯಕೃತಾಲೋಕೋ ಯಾವಚ್ಚಂದ್ರಕೃತಾ ನಿಶಾ ॥ ೧೯ ॥
ಯಾವತ್ಸಸಾಗರಾ ಪೃಥ್ವೀ ಯಾವಚ್ಚ ಕುಲಪರ್ವತಾಃ ।
ತಾವತ್ಕಾಲಂ ವಸೇತ್ಸ್ವರ್ಗೇ ನಾನ್ಯಥಾ ಮಮ ಭಾಷಿತಂ ॥ ೨೦ ॥
ಆಸ್ಫೋಟಯಂತಿ ಪಿತರಃ ಪ್ರಹರ್ಷಂತಿ ಪಿತಾಮಹಾಃ ।
ಏವಂ ತಂ ಸ್ವಸುತಂ ದೃಷ್ಟ್ವಾ ಕೃಷ್ಣಾನಂ ಕೃಷ್ಣಸಂಭವಂ ॥ ೨೧ ॥
ದ್ವಾರಕಾಯಾಶ್ಚ ಮಾಹಾತ್ಮ್ಯಂ ಯತ್ರ ನೋ ಜಾಗರೇ ಪಠೇತ್ ।
ತನ್ಮ್ಲೇಚ್ಛಸದೃಶಂ ಸ್ಥಾನಮಪವಿತ್ರಂ ಪರಿತ್ಯಜೇತ್ ॥ ೨೨ ॥
ಶಾಲಿಗ್ರಾಮಶಿಲಾ ನೈವ ಯತ್ರ ಭಾಗವತಾ ನಹಿ ।
ತ್ಯಜೇತ್ತೀರ್ಥಂ ಮಹಾಪುಣ್ಯಂ ಪುಣ್ಯಮಾಯತನಂ ತ್ಯಜೇತ್ ॥ ೨೩ ॥
ತ್ಯಜೇದ್ಗುಹ್ಯಂ ತಥಾರಣ್ಯಂ ಯತ್ರ ನ ದ್ವಾದಶೀವ್ರತಂ ॥ ೨೪ ॥
ಸುದೇಶೋಪಿ ಭವೇನ್ನಿಂದ್ಯೋ ಯತ್ರ ನೋ ವೈಷ್ಣವಾ ವ್ರತಂ ।
ಕುದೇಶೋಪಿ ಭವೇತ್ಪುಣ್ಯೋ ಯತ್ರ ಭಾಗವತಾಃ ಕಲೌ ॥ ೨೫ ॥

---

೧೯-೨೦. ಕೃಷ್ಣ ಜಾಗರಣೆಯ ರಾತ್ರಿಯಲ್ಲಿ ಕೃಷ್ಣನಿಗೆ ಪ್ರಿಯವಾದ ಭಾಗವತ ಪುರಾಣವನ್ನು ಪಠಿಸಿದವನು ಸೂರ್ಯಚಂದ್ರರೂ, ಸಮುದ್ರ ಸಹಿತವಾದ ಭೂಮಿಯೂ, ಕುಲಪರ್ವತಗಳೂ ಇರುವವರೆಗೆ ಸ್ವರ್ಗದಲ್ಲಿ ವಾಸಿಸುವನು. ಈ ನನ್ನ ಮಾತು ಸುಳ್ಳಲ್ಲ.

೨೧. ಕೃಷ್ಣನ ಜನ್ಮ ವೃಂತಾಂತವನ್ನು ಕೇಳುವ ಪುತ್ರನನ್ನು ನೋಡಿ ಪಿತೃಗಳು ಚಪ್ಪಾಳೆ ಹೊಡೆಯುವರು. ಪಿತಾಮಹರು ಹರ್ಷಗೊಳ್ಳುವರು.

೨೨. ಹರಿದಿನ ಜಾಗರಣೆಯಲ್ಲಿ ದ್ವಾರಕಾ ಮಾಹಾತ್ಮ್ಯವನ್ನು ಪಠಿಸದಿರುವ ಸ್ಥಳವು ಮ್ಲೇಚ್ಛ ದೇಶದಂತೆ ಅಪವಿತ್ರವಾದ್ದರಿಂದ ಅದನ್ನು ತ್ಯಜಿಸಬೇಕು.

೨೩. ಶಾಲಿಗ್ರಾಮ ಶಿಲೆಯೂ, ಭಾಗವತರೂ ಇಲ್ಲದ ಪುಣ್ಯಕರವಾದ ತೀರ್ಥವೂ, ಪುಣ್ಯ ದೇವಾಲಯವೂ ತ್ಯಾಜ್ಯಗಳು.

೨೪. ದ್ವಾದಶೀ ವ್ರತವನ್ನಾಚರಿಸಿದ ಗುಹ್ಯಾರಣ್ಯವನ್ನೂ ತ್ಯಜಿಸಬೇಕು.

೨೫. ವೈಷ್ಣವ ರುದ್ರವ್ರತವನ್ನಾಚರಿಸದ ದೇಶವು ಒಳ್ಳೆ ದೇಶವಾಗಿದ್ದರೂ ನಿಂದ್ಯವಾಗುವುದು. ಕಲಿಯುಗದಲ್ಲಿ ಭಾಗವತರಿರುವ ದೇಶವು ದುಷ್ಟದೇಶವಾಗಿದ್ದರೂ ಪುಣ್ಯಕರವಾಗುವುದು.

ಸಂಕೀರ್ಣಯೋನಯಃ ಪೂತಾ ಯೇ ಭಕ್ತಾ ಮಧುಸೂದನೇ ।
ಮ್ಲೇಚ್ಛತುಲ್ಯಾಃ ಕುಲೀನಾಸ್ತೇ ಯೇ ನ ಭಕ್ತಾ ಜನಾರ್ದನೇ ॥ ೨೬ ॥
ರಥಾರೂಢಂ ಪ್ರಕುರ್ವಂತಿ ಯೇ ಕೃಷ್ಣಂ ಮಧುಮಾಧವೇ ।
ಮುಕ್ತಿಂ ಪ್ರಯಾಂತಿ ತೇ ಸರ್ವೇ ಕುಲಕೋಟಿಸಮನ್ವಿತಾಃ ॥ ೨೭ ॥
ದೇವಕೀನಂದನಸ್ಯಾರ್ಥೇ ರಥಂ ಕಾರ್ಯಾಪಯಂತಿ ಯೇ ।
ಕಲ್ಪಾಂತಂ ವಿಷ್ಣುಲೋಕೇ ತೇ ವಸಂತಿ ಪಿತೃಭಿಸ್ಸಹ ॥ ೨೮ ॥
ದ್ವಾರಕಾಯಾಸ್ತು ಮಾಹಾತ್ಮ್ಯಂ ಶ್ರಾವಯೇದ್ಯಃ ಕಲೌ ನೃಣಾಂ ।
ಭಾವಮುತ್ಪಾದಯೇದ್ಯೋ ವೈ ಲಭೇತ್ಕ್ರತುಶತಂ ಫಲಂ ॥ ೨೯ ॥
ಯೋ ನಾರ್ಚಯತಿ ಪಾಪಿಷ್ಠೋ ಹ್ಯೇವಮನ್ಯತ್ರ ಗಚ್ಛತಿ ।
ಕೋಟಿಜನ್ಮಾರ್ಜಿತಂ ಪುಣ್ಯಂ ಹರತೇ ರುಕ್ಮಿಣೀಪತಿಃ ॥ ೩೦ ॥
ಶಂಖೋದ್ಧಾರಸಮುದ್ಭೂತಾಂ ನಿತ್ಯಂ ದೇಹೇ ಬಿಭರ್ತಿ ಹಿ ।
ಮೃತ್ತಿಕಾಂ ದೈತ್ಯರಾಜೇಂದ್ರ ಶೃಣು ವಕ್ಷ್ಯಾಮಿ ಯತ್ಫಲಂ ॥ ೩೧ ॥
ಯೋ ದದಾತಿ ಯತೀನಾಂ ಚ ವೈಷ್ಣವಾನಾಂ ಪ್ರಯಚ್ಛತಿ ।
ಸ್ವರ್ಣಭಾರಶತಂ ಪುಂಡ್ರಂ ನಿತ್ಯಂ ಪ್ರಾಪ್ನೋತಿ ಮಾನವಃ ॥ ೩೨ ॥

---

೨೬. ಕೃಷ್ಣಭಕ್ತರು ಸಂಕರ ಜಾತಿಯವರಾಗಿದ್ದರೂ ಪವಿತ್ರರಾಗಿರುವರು. ಅವನ ಭಕ್ತರಲ್ಲದವರು ಕುಲೀನರಾದರೂ ಮ್ಲೇಚ್ಛರಿಗೆ ಸಮಾನರು.

೨೭. ವಸಂತಮಾಸದಲ್ಲಿ ಕೃಷ್ಣನನ್ನು ರಥದಲ್ಲಿ ಕುಳ್ಳಿರಿಸಿ ಉತ್ಸವ ಮಾಡುವವರು ಕೋಟಿ ಕುಲದವರೊಡನೆ ಮೋಕ್ಷವನ್ನು ಪಡೆಯುವರು.

೨೮. ಶ್ರೀ ಕೃಷ್ಣನಿಗಾಗಿ ರಥವನ್ನು ನಿರ್ಮಾಣ ಮಾಡಿಸುವವರು ಪಿತೃಗಳೊಡನೆ ವಿಷ್ಣುವಿನೊಡನೆ ಕಲ್ಪಾಂತದವರೆಗೆ ವಾಸಿಸುವರು.

೨೯. ಕಲಿಯುಗದಲ್ಲಿ ಮಾನವರಿಗೆ ದ್ವಾರಕಾಮಾಹಾತ್ಮ್ಯವನ್ನು ಹೇಳಿ ಭಕ್ತಿಯನ್ನುಂಟುಮಾಡುವವನು ನೂರು ಯಾಗಗಳ ಫಲವನ್ನು ಪಡೆಯುವನು.

೩೦. ಶ್ರೀ ಕೃಷ್ಣನನ್ನು ಪೂಜಿಸದೆ ಬೇರೆ ಕಡೆಗೆ ಹೋಗುವ ಪಾಪಿಷ್ಠನ ಕೋಟಿ ಜನ್ಮಗಳಲ್ಲಿ ಮಾಡಿದ ಪುಣ್ಯವನ್ನು ಕೃಷ್ಣನು ಅಪಹರಿಸುವನು.

೩೧. ದೈತ್ಯರಾಜ! ಶಂಖೋದ್ಧಾರ ತೀರ್ಥದ ಮೃತ್ತಿಕೆಯನ್ನು ನಿತ್ಯವೂ ದೇಹದಲ್ಲಿ ಧರಿಸುವವನಿಗುಂಟಾಗುವ ಫಲವನ್ನು ಹೇಳುವೆನು. ಕೇಳು.

೩೨. ನಿತ್ಯವೂ ಯತಿಗಳಿಗೂ, ವೈಷ್ಣವರಿಗೂ ನೂರು ಭಾರ ಸುವರ್ಣವನ್ನು ದಾನಮಾಡಿದ ಪುಣ್ಯವನ್ನು ಪಡೆಯುವನು.

ಗೃಹೇ ಯಸ್ಯ ಸದಾ ತಿಷ್ಠೇಚ್ಛಂಖೋದ್ಧಾರಸ್ಯ ಮೃತ್ತಿಕಾ ।
ನಿತ್ಯಕ್ರಿಯಾಕೃತಂ ಪುಣ್ಯಂ ಲಭೇತ್ಕೋಟಿಗುಣಂ ಬಲೇ ॥ ೩೩ ॥
ಯಸ್ಯ ಪುಂಡ್ರಂ ಲಲಾಟೇತು ಗೋಪೀಚಂದನ ಸಂಜ್ಞಿತಂ ।
ನ ಜಹಾತಿ ಗೃಹಂ ತಸ್ಯ ಲಕ್ಷ್ಮೀಃ ಕೃಷ್ಣಪ್ರಿಯಾ ದ್ವಿಜಾಃ ॥ ೩೪ ॥
ನ ಗ್ರಹೋ ಬಾಧತೇ ತಸ್ಯ ನೋರಗೋ ನ ಚ ರಾಕ್ಷಸಃ ।
ಪಿಶಾಚಾ ನ ಚ ಕೂಷ್ಮಾಂಡಾ ನ ಚ ಪ್ರೇತಾ ನ ಜಂಭಕಾಃ ॥ ೩೫ ॥
ನಾಗ್ನಿಚೌರಭಯಂ ತಸ್ಯ ಪರೇಷಾಂ ಚೈವ ಬಂಧನಂ ।
ವಿದ್ಯುದುಲ್ಕಾಭಯಂ ಚೈವ ನ ಚೋತ್ಪಾತಸಮುದ್ಭವಂ ॥ ೩೬ ॥
ನಾರಿಷ್ಟಂ ನಾಪಶಕುನಂ ದುರ್ನಿಮಿತ್ತಾದಿಕಂ ಚ ಯತ್ ।
ಸತ್ಕೃತೇ ವಿಷ್ಣುಭಕ್ತೇ ಚ ಶಾಲಿಗ್ರಾಮಶಿಲಾರ್ಚನೇ ॥ ೩೭ ॥
ಪೀತೇ ಪಾದೋದಕೇ ವಿಪ್ರಾ ನೈವೇದ್ಯಸ್ಯಾಪಿ ಭಕ್ಷಣೇ ।
ತುಲಸೀ ಸನ್ನಿಧೌ ವಿಷ್ಣೋರ್ನಿಲಯಾವಶೋ ಕೃತೇ ॥ ೩೮ ॥

---

೩೩. ಬಲಿಯೆ! ಯಾವನ ಮನೆಯಲ್ಲಿ ಯಾವಾಗಲೂ ಶಂಖೋದ್ಧಾರ ತೀರ್ಥದ ಮೃತ್ತಿಕೆಯು ಇರುವುದೊ ಅವನು ನಿತ್ಯ ಕರ್ಮದ ಕೋಟಿಯಷ್ಟು ಪುಣ್ಯವನ್ನು ಹೊಂದುವನು.

೩೪. ದ್ವಿಜರೆ! ಗೋಪೀ ಚಂದ್ರನದ ಪುಂಡ್ರವನ್ನು ಹಣೆಯಲ್ಲಿ ಧರಿಸಿದವನ ಮನೆಯನ್ನು ಕೃಷ್ಣಪ್ರಿಯಳಾದ ಲಕ್ಷ್ಮಿಯು ತ್ಯಜಿಸುವುದಿಲ್ಲ.

೩೫. ಅವನನ್ನು ಗ್ರಹವೂ, ಹಾವೊ, ರಾಕ್ಷಸರೂ, ಪಿಶಾಚಗಳೂ, ಕೂಷ್ಮಾಂಡ, ಗಣಗಳೂ, ಪ್ರೇತಗಳೂ. ಜಂಭಕಗಳೂ, ಪೀಡಿಸುವುದಿಲ್ಲ.

೩೬. ಅವನಿಗೆ ಅಗ್ನಿ, ಕಳ್ಳ, ಮಿಂಚು, ಉಲ್ಕಾಪಾತ, ಉತ್ಪಾತ ಇವುಗಳ ಭಯವೂ, ಗುಹೆಯ ಬಂಧನವೂ ಇರುವುದಿಲ್ಲ.

೩೭–೩೮. ವಿಷ್ಣುಭಕ್ತನನ್ನು ಸನ್ಮಾನಮಾಡಿಸಿದವನು, ಶಾಲಿಗ್ರಾಮಶಿಲೆಯನ್ನು ಅರ್ಚಿಸಿದವನು, ವಿಷ್ಣು ಪಾದೋದಕವನ್ನು ಸೇವಿಸಿದವನು, ವಿಷ್ಣುವಿನ ನೈವೇದ್ಯವನ್ನು ಭಕ್ಷಿಸಿದವನು ತುಳಸಿಯ ಹತ್ತಿರ ವಿಷ್ಣು ದಿನವನ್ನಾಚರಿಸಿದವನು, ಇವರಿಗೆ ಅರಿಷ್ಟ ಅಪಶಕುನ ದುರ್ನಿಮಿತ್ತಗಳು ಉಂಟಾಗುವುದಿಲ್ಲ.

ಪುರಾ ದೇವೇನ ಕಥಿತಂ ಶೃಣು ಪ್ರಾತಂ ವದಾಮ್ಯಹಂ ।
ಪ್ರಿಯಾ ಭಾಗವತಾ ಯೇಷಾಂ ತೇಷಾಂ ದಾಸೋಽಸ್ಮ್ಯಹಂ ಸದಾ ॥ ೩೯ ॥
ವಿಹಾಯ ಮಥುರಾಂ ಕಾಶೀಮವಂತೀಂ ಸರ್ವಪಾಪಹಾಂ ।
ಮಾಯಾಂ ಕಾಂಚೀಮಯೋಧ್ಯಾಂ ಚ ಸಂಪ್ರಾಪ್ತೇ ಚ ಕಲೌ ಯುಗೇ ।
ವಸಾಮ್ಯಹಂ ದ್ವಾರಕಾಯಾಂ ಸರ್ವಸೇನಾ ಸಮಾವೃತಃ ।
ತೀರ್ಥವ್ರತೈರ್ಯಜ್ಞದಾನೈ ರುದ್ರಾದ್ಯೈರ್ಮುನಿಚಾರಣೈಃ ॥ ೪೧ ॥
ಶ್ರದ್ಧಾತ್ಯಾಗೇನ ಭಕ್ತ್ಯಾ ವಾ ಯಸ್ತೋಷಯಿತುಮಿಚ್ಛತಿ ।
ಗತ್ವಾ ದ್ವಾರವತೀಂ ರಮ್ಯಾಂ ದ್ರಷ್ಟವ್ಯೋಽಹಂ ಕಲೌ ಯುಗೇ ॥ ೪೨ ॥
ತ್ರೈಲೋಕ್ಯೇ ಯಾನಿ ತೀರ್ಥಾನಿ ಮಯಾ ಶುದ್ಧಾನಿ ಭೂರಿಶಃ ।
ವಿನ್ಯಸ್ತಾನಿ ಚ ಗೋಮತ್ಯಾಂ ಚಕ್ರತೀರ್ಥೇಽತಿಪಾವನೇ ॥ ೪೩ ॥
ದಿನೇನೈಕೇನ ಗೋಮತ್ಯಾಂ ಚಕ್ರತೀರ್ಥೇ ಕಲೌ ಯುಗೇ ।
ತ್ರೈಲೋಕ್ಯಸಂಭವೈಸ್ತೀರ್ಥೈಃ ಸ್ನಾತೋ ಭವತಿ ಮಾನವಃ ॥ ೪೪ ॥
ಕೋಟಿಪಾಪವಿನಿರ್ಮುಕ್ತೋ ಮತ್ಸಮಂ ವಸತೇ ನರಃ ।
ಮಮ ಲೋಕೇ ನ ಸಂದೇಹಃ ಕುಲಕೋಟಿಸಮನ್ವಿತಃ ॥ ೪೫ ॥

---

೩೯. ಹಿಂದೆ ಶ್ರೀಕೃಷ್ಣನು ಹೇಳಿದ ದಾನಪಾತ್ರನನ್ನು ಹೇಳುವೆನು ಕೇಳು. ನನ್ನಲ್ಲಿ ಭಕ್ತಿಯುಳ್ಳ ಭಕ್ತರಲ್ಲಿ ಪ್ರೀತಿಯುಳ್ಳವರಿಗೆ ನಾನು ಯಾವಾಗಲೂ ಸೇವಕನಾಗಿರುವೆನು.

೪೦-೪೧ ಕಲಿಯುಗವು ಬರಲು ನಾನು ಮಥುರೆ, ಕಾಶೀ, ಸಕಲಪಾಪವನ್ನು ಪರಿಹರಿಸುವ ಅವಂತೀ, ಮಾಯಾ, ಕಾಂಚೀ, ಅಯೋಧ್ಯಾ, ಇವುಗಳನ್ನು ಬಿಟ್ಟು ಸಮಸ್ತಸೈನ್ಯ, ತೀರ್ಥ, ವ್ರತ, ಯಜ್ಞ, ದಾನ, ರುದ್ರಾದಿಗಳು, ಮುನಿಗಳು ಚಾರಣರು ಇವರೊಡನೆ ದ್ವಾರಕೆಯಲ್ಲಿ ವಾಸಿಸುವೆನು.

೪೨. ಕಲಿಯುಗದಲ್ಲಿ ಶ್ರಾದ್ಧಪೂರ್ವಕವಾದ ದಾನದಿಂದಾಗಲಿ, ಭಕ್ತಿಯಿಂದಾಗಲಿ ನನ್ನನ್ನು ಸಂತೋಷಗೊಳಿಸಲು ಬಯಸುವವನು ರಮ್ಯವಾದ ದ್ವಾರವತಿಗೆಹೋಗಿ ನನ್ನನ್ನು ನೋಡಬೇಕು.

೪೩. ಮೂರುಲೋಕಗಳಲ್ಲಿರುವ ಪವಿತ್ರತೀರ್ಥಗಳನ್ನು ನಾನು ಗೋಮತಿಯಲ್ಲಿರುವ ಅತಿಪವಿತ್ರವಾದ ಚಕ್ರತೀರ್ಥದಲ್ಲಿ ಇಟ್ಟಿರುವೆನು.

೪೪. ಕಲಿಯುಗದಲ್ಲಿ ಮಾನವನು ಗೋಮತಿಯಲ್ಲಿರುವ ಚಕ್ರತೀರ್ಥದಲ್ಲಿ ಒಂದುದಿನ ಸ್ನಾನಮಾಡುವುದರಿಂದ ಮೂರುಲೋಕಗಳಲ್ಲಿರುವ ತೀಥಗಳಲ್ಲಿ ಮಿಂದವನಂತಾಗುನು.

೪೫. ಅವನು ಕೋಟಿಪಾಪಮುಕ್ತನಾಗಿ ಕೋಟಿಕುಲದವರೊಡನೆ ನನ್ನ ಲೋಕದಲ್ಲಿ ನನ್ನೊಡನೆ ವಾಸಿಸುವನು.

**ನಾಪರಾಧಕೃತ್ಯೈಃ ಪಾಪೈರ್ಲಿಪ್ತಃ ಸ್ಯಾದುತ್ಕಟೈಃ ಕೃತೈಃ ।**
**ಶತಜನ್ಮಾಯುತಾನೀಹ ಲಕ್ಷ್ಮೀರ್ನ ಚ್ಯವತೇ ಗೃಹಾತ್ ॥ ೪೬ ॥**

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾಚಕ್ರತೀರ್ಥಯೋಃ ಜಾಗರಾದಿಮಾಹಾತ್ಮ್ಯವರ್ಣನಂ ನಾಮ
ಅಷ್ಟತ್ರಿಂಶತ್ತಮೋಽಧ್ಯಾಯಃ

---

೪೬. ಅವನು ಅಪರಾಧಗಳಿಂದಮಾಡಿದ ಉತ್ಕಟಪಾಪಗಳಿಂದ ಲಿಪ್ತನಾಗುವುದಿಲ್ಲ. ಅನೇಕಸಾವಿರವರ್ಷಕಾಲ ಅವನಮನೆಯಲ್ಲಿ ಸಂಪತ್ತು ನಶಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾರಕಾಚಕ್ರತೀರ್ಥ ಜಾಗರಾದಿಮಾಹಾತ್ಮ್ಯವರ್ಣನವೆಂಬ
ಮುವ್ವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕೋನಚತ್ವಾರಿಂಶತ್ತಮೋಽಧ್ಯಾಯಃ

### ದ್ವಾದಶೀಜಾಗರಣಮಾಹಾತ್ಮ್ಯವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ಜಯಾ ಚ ವಿಜಯಾ ಚೈವ ಜಯಂತೀ ಪಾಪನಾಶಿನೀ ।
ಉನ್ಮೀಲಿನೀ ವಂಜುಲೀ ಚ ತ್ರಿಸ್ಪೃಶಾ ಪಕ್ಷವರ್ಧನೀ ॥ ೧ ॥
ಪುಣ್ಯಂ ಸರ್ವಪುರಾಣಾನಾಂ ತೇ ಲಭಂತೇ ದಿನೇದಿನೇ ।
ಪಕ್ವಾನ್ನಂ ಯೇ ಪ್ರಕುರ್ವಂತಿ ಹವಿರ್ಧಾನ್ಯಸಮುದ್ಭವಂ ॥ ೨ ॥
ಜಾಗರೇ ಪದ್ಮನಾಭಸ್ಯ ಘೃತೇ ನೈವ ಸುಪಾಚಿತಂ ।
ವರ್ತಿದ್ವಯಸಮಾಯುಕ್ತಂ ದೀಪಂ ಘೃತಸಮನ್ವಿತಂ ॥ ೩ ॥
ಯಃ ಕುರ್ಯಾಜ್ಜಾಗರೇ ವಿಷ್ಣೋಃ ಶಾಲಿಗ್ರಾಮಶಿಲಾಗ್ರತಃ ।
ಶಾಲಗ್ರಾಮಶಿಲಾಗ್ರೇ ತು ಯೇ ಪ್ರಕುರ್ವಂತಿ ಜಾಗರಂ ॥ ೪ ॥
ಕುರ್ವಂತಿ ನೃತ್ಯವಾದ್ಯೇ ಚ ಲೋಕಾನಾಂ ರಂಜನಾಯ ಚ ।
ಸಂಛಾದಯಂತಿ ಕುಸುಮೈಃ ಶಾಲಿಗ್ರಾಮಶಿಲಾಂ ಚ ಯೇ ॥ ೫ ॥

---

### ಕನ್ನಡದ ಅನುವಾದ

### ದ್ವಾದಶೀಜಾಗರಣಮಾಹಾತ್ಮ್ಯವರ್ಣನ

೧–೨. ಶ್ರೀಪ್ರಹ್ಲಾದನು ಹೇಳುತ್ತಾನೆ :—ಜಯಾ, ವಿಜಯಾ, ಜಯಂತೀ, ಪಾಪನಾಶಿನೀ, ಉನ್ಮೀಲನೀ, ವಂಜುಲೀ, ತ್ರಿಸ್ಪೃಶಾ, ಪಕ್ಷವರ್ಧನೀ ಇವುಗಳಲ್ಲಿ ಹವಿರ್ಧಾನ್ಯಗಳಿಂದಾದ ಪಕ್ವಾನ್ನವನ್ನು ಮಾಡುವರು ಸಕಲಪುರಾಣಗಳ ಪುಣ್ಯವನ್ನು ಪಡೆಯುವರು.

೩. ಹರಿದಿನದ ಜಾಗರಣೆಯಲ್ಲಿ ಎರಡು ಬತ್ತಿಗಳಿಂದ ತುಪ್ಪದ ದೀಪವನ್ನು ಶಾಲಿಗ್ರಾಮಶಿಲೆಯಮುಂದೆ ಹೊತ್ತಿಸಿದವನಿಗೂ, ಆ ಶಾಲಿಗ್ರಾಮದ ಮುಂದೆ ಜಾಗರಣೆ ಗೈದವನಿಗೂ, ಜನರಂಜನೆಗಾಗಿ ನೃತ್ಯವಾದ್ಯಗಳನ್ನು ಮಾಡಿದವನಿಗೂ, ಶಾಲಿಗ್ರಾಮ ಶಿಲೆಯನ್ನು (ಹೂವಿನಿಂದ ಮುಚ್ಚಿದವನಿಗೂ) ಹೂವಿನಿಂದ ಪೂಜಿಸಿದವನಿಗೂ, ಚಕ್ರಾಂಕಿತವಾದ ವಿಷ್ಣುಪ್ರತಿಮೆಗೆ ಗಂಧ; ಕರ್ಪೂರ, ಕೃಷ್ಣಾಗುರು, ಕಸ್ತೂರಿಗಳನ್ನು, ಲೇಪಿಸಿದವನಿಗೂ ಉಂಟಾಗುವ ಪುಣ್ಯವನ್ನು ನಿನ್ನಮುಂದೆ ಸಂಕ್ಷೇಪವಾಗಿ ಹೇಳುವೆನು ಕೋಟಿತೀರ್ಥ, ಉಜ್ಜಯಿನೀ, ಮಹಾಕಾಲಾಲಯ, ಕಾಶೀ, ಕುರುಕ್ಷೇತ್ರ, ಮಧುರೆ, ತ್ರಿಪುಷ್ಕರ, ಅಯೋಧ್ಯಾ, ಪ್ರಯಾಗ, ಸಾಗರಸಂಗಮ, ಸಕಲಪುಣ್ಯಕ್ಷೇತ್ರ, ದೇವಾಲಯ

ಚಕ್ರಾಂಕಿತಾಂ ವಿಶೇಷೇಣ ಪ್ರತಿಮಾಂ ವೈಷ್ಣವೀಂ ದ್ವಿಜಾಃ ।
ಚಂದನಂ ಚ ಸಕರ್ಪೂರಂ ಕೃಷ್ಣಾಗುರುಸಮನ್ವಿತಂ ॥ ೬ ॥
ಯುಕ್ತಂ ಮೃಗಮದೇನಾಪಿ ಯಃ ಕರೋತಿ ವಿಲೇಪನಂ ।
ದ್ವಾದಶ್ಯಾಂ ದೇವದೇವಸ್ಯ ರಾತ್ರೌ ಜಾಗರಣೇ ಸದಾ ॥ ೭ ॥
ತಸ್ಯ ಪುಣ್ಯಂ ಪ್ರವಕ್ಷ್ಯಾಮಿ ಸಂಕ್ಷೇಪೇಣ ಚ ವೋಽಗ್ರತಃ ।
ತತ್ಫಲಂ ಕೋಟಿತೀರ್ಥೇಷು ಉಜ್ಜಯಿನ್ಯಾಂ ಮಹಾಲಯೇ ॥ ೮ ॥
ವಾರಾಣಸ್ಯಾಂ ಕುರುಕ್ಷೇತ್ರೇ ಮಥುರಾಯಾಂ ತ್ರಿಪುಷ್ಕರೇ ।
ಅಯೋಧ್ಯಾಯಾಂ ಪ್ರಯಾಗೇ ಚ ತೀರ್ಥೇ ಸಾಗರಸಂಗಮೇ ॥ ೯ ॥
ಸರ್ವಪುಣ್ಯೇಷು ತೀರ್ಥೇಷು ದೇವತಾಯತನೇಷು ಚ ।
ಕೃತೈರ್ಯಜ್ಞಾಯುತೈಸ್ತತ್ರ ವ್ರತದಾನೈಶ್ಚ ಪುಷ್ಕಲೈಃ ॥ ೧೦ ॥
ವೇದೈರಧೀತೈರ್ಯತ್ಪುಣ್ಯಂ ಪುರಾಣೈಶ್ಚಾವಗಾಹಿತೈಃ ।
ತಪೋಭಿಶ್ಚರಿತೈಃ ಪುಣ್ಯಂ ಸಮ್ಯಗಾಶ್ರಮಪಾಲನೈಃ ॥ ೧೧ ॥
ಯತ್ಫಲಂ ಮುನಿಭಿಃ ಪ್ರೋಕ್ತಂ ವೇದವ್ಯಾಸೇನ ಪುತ್ರಕ ।
ತತ್ಫಲಂ ಜಾಗರೇ ವಿಷ್ಣೋಃ ಪಕ್ಷಯೋಃ ಶುಕ್ಲಕೃಷ್ಣಯೋಃ ॥ ೧೨ ॥
ಹೈಮವತ್ಯೈ ಪುರಾ ಪ್ರೋಕ್ತಂ ಕೈಲಾಸೇ ಶೂಲಪಾಣಿನಾ ।
ನಾರದಾಯ ಪುರಾ ಪ್ರೋಕ್ತಂ ಬ್ರಹ್ಮಣಾ ಮತ್ಸಮೀಪತಃ ॥ ೧೩ ॥
ಅರುಣೇನ ವಜ್ರಹಸ್ತಾಯ ಕಥಿತಂ ಪೃಚ್ಛತೇ ಪುರಾ ।
ದ್ವಾದಶೀ ಜಾಗರಸ್ಯೋಕ್ತಂ ಫಲಂ ವಿಪ್ರಾ ಮಯಾ ಚ ವಃ ।
ತತ್ಕುರುಧ್ವಂ ದ್ವಿಜಾ ಯೂಯಂ ಜಾಗರಂ ವಿಷ್ಣುವಾಸರೇ ॥ ೧೪ ॥

---

ಹತ್ತುಸಾವಿರಯಜ್ಞ, ವ್ರತ, ದಾನ, ವೇದಾಧ್ಯಯನ, ಪುರಾಣಶ್ರವಣ, ತೀರ್ಥಾವಗಾಹನ, ತಪಸ್ಸು, ಬ್ರಹ್ಮಚರ್ಯ ಮೊದಲಾದ ಆಶ್ರಮಪಾಲನ, ಇವುಗಳಿಂದುಂಟಾಗುವ ವೇದವ್ಯಾಸನು ಹೇಳಿದ ಫಲವು ಶುಕ್ಲಪಕ್ಷಗಳಲ್ಲಿ ಹರಿದಿನ ರಾತ್ರಿ ಜಾಗರಣೆ ಮಾಡುವುದರಿಂದ ಲಭಿಸುವುದು.

೧೩–೧೪. ವಿಪ್ರರೆ! ಈ ದ್ವಾದಶೀ ಜಾಗರಣೆ ಫಲವನ್ನು ಹಿಂದೆ ಪಾರ್ವತಿಗೆ ಕೈಲಾಸದಲ್ಲಿ ಮಹೇಶ್ವರನೂ, ನನ್ನ ಸಮೀಪದಲ್ಲಿ ಬ್ರಹ್ಮನು ನಾರದನಿಗೂ, ಅರುಣನು ಕೇಳುತ್ತಿರುವ ವಜ್ರಹಸ್ತನಿಗೂ ಹೇಳಿರುವನು. ನಾನು ನಿಮಗೆ ಹೇಳಿದ್ದೇನೆ. ಆದ್ದರಿಂದ ನೀವು ಈ ಹರಿದಿನ ಜಾಗರಣೆಮಾಡಿರಿ.

ಸೂತ ಉವಾಚ :—

ಇತ್ಯುಕ್ತ್ವಾ ಬ್ರಾಹ್ಮಣಾನ್ಪ್ರಾಹ ಬಲಿಂ ಪೌತ್ರಂ ಸ್ವಕಂ ತತಃ ।
ತ್ವಮಪಿ ಶ್ರದ್ಧಯಾ ಪೌತ್ರ ಕುರು ಜಾಗರಣಂ ಹರೇಃ ॥ ೧೫ ॥
ದ್ವಾರಕಾ ಮನಸಾ ಧ್ಯಾತಾ ಪಾಪಂ ವರ್ಷಶತಾನ್ವಿತಂ ।
ಕೀರ್ತನಾಚ್ಛತಜನ್ಮೋತ್ಥಂ ದಹತೇ ನಾತ್ರ ಸಂಶಯಃ ॥ ೧೬ ॥
ಪಾಪಂ ಜನ್ಮಸಹಸ್ರೋತ್ಥಂ ಪದಮಾತ್ರೇಣ ಗಚ್ಛತಾಂ ।
ದ್ವಾರಕಾ ಹರತೇ ನೂನಂ ಮುಕ್ತಿಃ ಕೃಷ್ಣಸ್ಯ ದರ್ಶನಾತ್ ॥ ೧೭ ॥
ನ ಶಕ್ನೋತಿ ಯದಾ ಗಂತುಂ ದ್ವಾರಕಾಂ ಚೈವ ಮಾನವಃ ।
ಮಾಹಾತ್ಮ್ಯಂ ಪಠನೀಯಂ ತು ದ್ವಾರಕಾಸಂಭವಂ ಗೃಹೇ ॥ ೧೮ ॥
ದಾತವ್ಯಂ ವೈಷ್ಣವಾನಾಂ ತು ಶ್ರೋತವ್ಯಂ ಭಕ್ತಿಭಾವತಃ ।
ದ್ವಾದಶ್ಯಾಂ ಚ ವಿಶೇಷೇಣ ಪಠನೀಯಂ ತು ಜಾಗರೇ ॥ ೧೯ ॥
ದ್ವಾರಕಾಸಂಭವಂ ಪುಣ್ಯಂ ಸ ಸಂಪ್ರಾಪ್ನೋತಿ ಮಾನವಃ ।
ಪ್ರಸಾದಾದ್ವಾಸುದೇವಸ್ಯ ಸತ್ಯಂ ಸತ್ಯಂ ಚ ಭಾಷಿತಂ ॥ ೨೦ ॥

---

೧೫. ಸೂತನು ಹೇಳುತ್ತಾನೆ :—ಪ್ರಹ್ಲಾದನು ಬ್ರಾಹ್ಮಣರನ್ನು ಕುರಿತು ಹೀಗೆ ಹೇಳಿ ತನ್ನ ಮೊಮ್ಮಗನಾದ ಬಲಿಯನ್ನು ಕುರಿತು, "ಪೌತ್ರ! ನೀನೂ ಈ ಜಾಗರಣೆ ವ್ರತವನ್ನು ಮಾಡು" ಎಂದನು.

೧೬. ದ್ವಾರಕೆಯನ್ನು ಮನಸ್ಸಿನಿಂದ ಚಿಂತಿಸಿದರೆ ನೂರು ವರ್ಷಗಳ ಪಾಪವೂ, ಪಠಿಸಿದರೆ ನೂರು ಜನ್ಮಗಳ ಪಾಪವೂ ಪರಿಹಾರವಾಗುವುದು.

೧೭. ದ್ವಾರಕೆಗೆ ಒಂದು ಹೆಜ್ಜೆ ಹೋಗುವುದರಿಂದ ಸಾವಿರ ಜನ್ಮಗಳ ಪಾಪವು ಪರಿಹಾರವಾಗುವುದು.

೧೮. ಮಾನವನು ದ್ವಾರಕೆಗೆ ಹೋಗಲು ಸಮರ್ಥನಾಗದಿದ್ದರೆ ಮನೆಯಲ್ಲಿ ಆ ದ್ವಾರಕೆಯ ಮಾಹಾತ್ಮ್ಯವನ್ನು ಪಠಿಸಬೇಕು.

೧೯. ದ್ವಾದಶೀ ಜಾಗರಣೆಯಲ್ಲಿ ವೈಷ್ಣವರಿಗೆ ದಾನಕೊಡಬೇಕು. ಭಕ್ತಿಯಿಂದ ಮಾಹಾತ್ಮ್ಯವನ್ನು ಕೇಳಬೇಕು. ಪಠಿಸಬೇಕು.

೨೦. ಇದನ್ನು ಮಾಡುವವನು ಕೃಷ್ಣನ ಅನುಗ್ರಹದಿಂದ ದ್ವಾರಕೆಯ ಪುಣ್ಯವನ್ನು ಪಡೆಯುವನು. ಈ ನನ್ನ ಮಾತು ನಿಜ.

ಗೃಹೇ ಸಂತಿಷ್ಠತೇ ನಿತ್ಯಂ ಮಥುರಾ ದ್ವಾರಕಾ ತಥಾ ।
ಅವಂತೀ ಚ ತಥಾ ಮಯಾ ಪ್ರಯಾಗಂ ಕುರುಜಾಂಗಲಂ ॥ ೨೧ ॥

ತ್ರಿಪುಷ್ಕರಂ ನೈಮಿಷಂ ಚ ಗಂಗಾದ್ವಾರಂ ಚ ಸೌಕರಂ ।
ಚಂದ್ರೇಶಂ ಚೈವ ಕೇದಾರಂ ತಥಾ ರುದ್ರಮಹಾಲಯಂ ॥ ೨೨ ॥

ವಸ್ತ್ರಾಪಥಂ ಮಹಾದೇವಂ ಮಹಾಕಾಲಂ ತಥೈವ ಚ ।
ಭೂತೇಶ್ವರಂ ಭಸ್ಮಗಾತ್ರಂ ಸೋಮನಾಥಮುಮಾಪತಿಂ ॥ ೨೩ ॥

ಕೋಟಿಲಿಂಗಂ ತ್ರಿನೇತ್ರಂ ಚ ದೇವಂ ಭೃಗುವನೇಚರಂ ।
ದೀಪೇಶ್ವರಂ ಮಹಾನಾದಂ ದೇವಂ ಚೈವಾಚಲೇಶ್ವರಂ ॥ ೨೪ ॥

ಬ್ರಹ್ಮಾದಯಸ್ಸುರಗಣಾ ಗೃಹೇ ತಿಷ್ಠಂತಿ ಸರ್ವದಾ ।
ಪಿತರೋ ನಾಗಗಂಧರ್ವಾ ಮುನಯಃ ಸಿದ್ಧಚಾರಣಾಃ ॥ ೨೫ ॥

ತೀರ್ಥಾನಿ ಯಾನಿ ಕಾನಿ ಸ್ಯುರಶ್ವಮೇಧಾದಯೋ ಮಖಾಃ ।
ಕೃಷ್ಣಜನ್ಮಾಷ್ಟಮೀಂ ಪೌತ್ರ ಯಃ ಕರೋತಿ ವಿಶೇಷತಃ ॥ ೨೬ ॥

ಯಥಾ ಭಾಗವತಂ ಶಾಸ್ತ್ರಂ ತಥಾ ಭಾಗವತೋ ನರಃ ।
ಉಭಯೋರಂತರಂ ನಾಸ್ತಿ ಹರಹರ್ಯೋಸ್ತಥೈವ ಚ ॥ ೨೭ ॥

---

೨೧—೨೬. ಪೌತ್ರ! ಕೃಷ್ಣಜನ್ಮಾಷ್ಟಮಿಯನ್ನು ಆಚರಿಸುವವನ ಮನೆಯಲ್ಲಿ ಮಥುರಾ, ದ್ವಾರಕಾ, ಅವಂತೀ, ಮಾಯಾ, ಪ್ರಯಾಗ, ಕುರುಜಾಂಗಲ, ತ್ರಿಪುಷ್ಕರ, ನೈಮಿಷ, ಗಂಗಾದ್ವಾರ, ಸೌಕರ, ಚಂದ್ರೇಶ, ಕೇದಾರ, ರುದ್ರಮಹಾಲಯ, ವಸ್ತ್ರಾಪಥ, ಮಹಾಕಾಲ, ಭೂತೇಶ್ವರ, ಭಸ್ಮಗಾತ್ರ, ಸೋಮನಾಥ, ಉಮಾಪತಿ, ಕೋಟಿಲಿಂಗ, ತ್ರಿನೇತ್ರ, ಭೃಗುವನದೇವ, ದೀಪೇಶ್ವರ, ಮಹಾನಾದ, ಅಚಲೇಶ್ವರ, ಬ್ರಹ್ಮಾದಿ ದೇವತೆಗಳು, ಪಿತೃಗಳು, ನಾಗಗಂಧರ್ವರು, ಮುನಿಗಳು, ಸಿದ್ಧಚಾರಣರು, ಸಮಸ್ತ ತೀರ್ಥಗಳು, ಅಶ್ವಮೇಧ ಮೊದಲಾದ ಯಾಗಗಳು ಇವು ಯಾವಾಗಲೂ ನೆಲೆಸುವುವು.

೨೭. ಭಾಗವತ ಶಾಸ್ತ್ರಕ್ಕೂ ಭಾಗವತನಾದ ಮಾನವನಿಗೂ ಹೇಗೆ ಭೇದ ವಿಲ್ಲವೋ, ಹಾಗೆ ಹರಿ ಹರರಲ್ಲಿ ಭೇದವಿಲ್ಲ.

ನೀಲೀಕ್ಷೇತ್ರಂ ತು ಯೋ ಯಾತಿ ಮೂಲಕಂ ಭಕ್ಷಯೇತ್ತು ಯಃ ।
ನೈವಾಸ್ತಿ ನರಕೋದ್ಧಾರಂ ಕಲ್ಪಕೋಟಿಶತೈರಪಿ ॥ ೨೮ ॥
ನೀಲೀಕರ್ಮ ತು ಯಃ ಕುರ್ಯಾದ್ಬ್ರಾಹ್ಮಣೋ ಲೋಭಮೋಹಿತಃ ।
ನಾಪ್ನೋತಿ ಸುಕೃತಂ ಕಿಂಚಿತ್ಕುರ್ಯಾದ್ವಾ ರಸವಿಕ್ರಯಂ ॥ ೨೯ ॥
ಪ್ರಸೀದತಿ ನ ವಿಶ್ವಾತ್ಮಾ ವೈಷ್ಣವೇ ಚಾಪಮಾನಿತೇ ।
ಅಶ್ವತ್ಥಂ ಛೇದಯೇದ್ಯೋ ವೈ ಏಕೈಕಸ್ಮಿಂಶ್ಚ ಪರ್ವಣಿ ॥ ೩೦ ॥
ಮನ್ವಂತರಾಣಿ ತಾವಂತಿ ರೌರವೇ ವಸತಿರ್ಭವೇತ್ ।
ಅರಿಷ್ಟಕಾಷ್ಠೈರ್ದೈತ್ಯೇಂದ್ರ ಕಾರ್ಯಂ ಯಃ ಕುರುತೇ ಕ್ವಚಿತ್ ।
ನಪೂಜಾಮರ್ಘ್ಯದಾನಂ ಚ ತಸ್ಯ ಗೃಹ್ಣಾತಿ ಭಾಸ್ಕರಃ ॥ ೩೦ ॥
ಛೇದಾಪಕಸ್ಯ ಚಾರ್ಕೇ ತು ಛೇದಕಸ್ಯ ಚ ದೈತ್ಯಜ ।
ಶತಂ ಜನ್ಮಾನಿ ದಾರಿದ್ರ್ಯಂ ಜಾಯತೇ ಚ ಸರೋಗತಾ ॥ ೩೨ ॥
ರೋಪಯೇತ್ಪಾಲಯೇದ್ಯೋ ವೈ ಸೂರ್ಯವೃಕ್ಷಂ ನರೋತ್ತಮಃ ।
ಸಪ್ತಕಲ್ಪಂ ವಸೇತ್ಸೋಽತ್ರ ಸಮೀಪೇ ಭಾಸ್ಕರಸ್ಯ ಹಿ ॥ ೩೩ ॥

---

೨೮. ನೀಲೀಕ್ಷೇತ್ರಕ್ಕೆ ಹೋಗುವವನೂ, ಮೂಲಂಗಿಯನ್ನು ತಿನ್ನುವವನೂ ಅನೇಕ ಕೋಟಿ ಕಲ್ಪಗಳಲ್ಲಿ ನರಕದಿಂದ ಉದ್ಧೃತನಾಗುವುದಿಲ್ಲ.

೨೯. ಬ್ರಾಹ್ಮಣನು ಅತ್ಯಾಶೆಯಿಂದ ನೀಲೀ ಬಣ್ಣದ ಕಾರ್ಯವನ್ನು ಮಾಡಿದರೂ, ರಸ ವಸ್ತುವನ್ನು ವಿಕ್ರಯಿಸಿದರೂ ಪುಣ್ಯನ್ನುಪಪಡೆಯದೆ ಪಾಪಿಯಾಗುವನು.

೩೦–೩೧. ವೈಷ್ಣವನನ್ನು ಅವಮಾನಗೊಳಿಸಿದರೆ ಹರಿಯು ಪ್ರಸನ್ನನಾಗುವುದಿಲ್ಲ. ಅಶ್ವತ್ಥ ವೃಕ್ಷವನ್ನು ಒಂದೊಂದು ಪರ್ವಗಳಲ್ಲಿ ಕತ್ತರಿಸಿದವನು ಆ ಪರ್ವಗಳ (ಗಂಟುಗಳ) ಸಂಖ್ಯೆಯಷ್ಟು ಮನ್ವಂತರಗಳಕಾಲ ರೌರವ ನರಕದಲ್ಲಿ ವಾಸಿಸುವನು. ಅರಿಷ್ಟದ (ಬೇವು) ಕಟ್ಟಿಗೆಯಿಂದ ಪೂಜೆಯನ್ನೆಸಗುವ ನರನುಮಾಡಿದಪೂಜೆಯನ್ನೂ, ಅರ್ಘ್ಯವನ್ನೂ, ಸೂರ್ಯನು ಸ್ವೀಕರಿಸುವುದಿಲ್ಲ.

೩೨. ಅರ್ಕವೃಕ್ಷ (ಎಕ್ಕದ ಗಿಡ)ವನ್ನು ಕತ್ತರಿಸುವವನಿಗೂ, ಕತ್ತರಿಸುವಂತೆ ಪ್ರೇರಣೆ ಮಾಡುವವನಿಗೂ ನೂರು ಜನ್ಮಗಳಲ್ಲಿ ಬಡತನವೂ, ರೋಗವೂ, ಉಂಟಾಗುವುದು.

೩೩. ಎಕ್ಕದಗಿಡವನ್ನು ನೆಟ್ಟವನೂ, ಕಾಪಾಡಿದವನೂ, ಏಳುಕಲ್ಪಗಳಕಾಲ ಸೂರ್ಯನ ಹತ್ತಿರ ವಾಸಿಸುವನು.

ರೋಪಿತೈರ್ದೇವವೃಕ್ಷೈಸ್ತು ಯತ್ಫಲಂ ಲಕ್ಷಕೋಟಿಭಿಃ ।
ನ್ಯಗ್ರೋಧವೃಕ್ಷೇಣೈಕೇನ ರೋಪಿತೇನ ಫಲಂ ಹಿ ತತ್ ॥ ೩೪ ॥
ಧಾತ್ರೀದ್ರುಮೇಪ್ಯೇವಮೇವ ಫಲಂ ಭವತಿ ರೋಪಿತೇ ।
ತುಲಸೀರೋಪಣೇ ಚೈವ ಅಧಿಕಂ ಚಾಪಿ ಸುವ್ರತ ॥ ೩೫ ॥
ಅಮರತ್ವಂ ಚ ತೇ ಯಾಂತಿ ನಾತ್ರ ಕಾರ್ಯಾ ವಿಚಾರಣಾ ।
ದ್ವಾರಕಾಂ ಕಲಿಕಾಲೇತು ಪ್ರಾತರುತ್ಥಾಯ ಕೀರ್ತಯೇತ್ ।
ಸ ಸರ್ವಪಾಪವಿನಿರ್ಮುಕ್ತಃ ಸ್ವರ್ಗಂ ಯಾತಿ ನ ಸಂಶಯಃ ॥ ೩೬ ॥
ರೋಹಿಣೀ ಸಹಿತಾ ಯೇನ ದ್ವಾದಶೀಸಮುಪೋಷಿತಾ ।
ಮಹಾಪಾತಕಸಂಯುಕ್ತಾ ಕಲ್ಪಾಂತೇ ನಾಕಮಾಪ್ನುಯಾತ್ ॥ ೩೭ ॥
ವಾಸರಃ ಕೋ ವಿನಾ ಸೂರ್ಯಂ ವಿನಾ ಸೋಮೇನ ಕಾ ನಿಶಾ ।
ವಿನಾ ವೃಕ್ಷೇಣ ಕೋ ಗ್ರಾಮೋ ದ್ವಾದಶೀ ಕಿಂ ವ್ರತಂ ವಿನಾ ॥ ೩೮ ॥
ಗೃಹಂ ಚ ನರಕಂ ತಸ್ಯ ಯಮದಂಡಂ ದ್ವಿತೀಯಕಂ ।
ನ ಯತ್ರ ಪಠತೇ ನಿತ್ಯಂ ವಿಷ್ಣೋರ್ನಾಮಸಹಸ್ರಕಂ ॥ ೩೯ ॥

---

೩೪. ಲಕ್ಷಕೋಟಿ ಮಂದಾರಾದಿ ದೇವವೃಕ್ಷಗಳನ್ನೂ ನೆಟ್ಟಫಲವು ಒಂದು ಆಲದ ಮರವನ್ನು ನೆಡುವುದದರಿಂದುಂಟಾಗುವುದು.

೩೫. ನೆಲ್ಲಿಮರವನ್ನು ನೆಡುವುದರಿಂದಲೂ, ಇದೇಫಲವು ಉಂಟಾಗುವುದು. ತುಲಸೀಗಿಡವನ್ನು ನೆಡುವುದರಿಂದ ಇನ್ನೂ ಹೆಚ್ಚು ಫಲವು ಲಭಿಸುವುದು. ಅವರು ದೇವತ್ವವನ್ನು ಹೊಂದುವರು. ಈ ವಿಷಯದಲ್ಲಿ ಸಂದೇಹವಿಲ್ಲ.

೩೬. ಕಲಿಯುಗದಲ್ಲಿ ಬೆಳಗ್ಗೆ ಎದ್ದು ದ್ವಾರಕೆಯ ನಾಮಸ್ಮರಣಮಾಡುವವನು ಸಕಲ ಪಾಪಮುಕ್ತನಾಗಿ ಸ್ವರ್ಗಕ್ಕೆ ತೆರಳುವನು.

೩೭. ರೋಹಿಣೀಸಹಿತವಾದ ದ್ವಾದಶೀದಿನ ಉಪವಾಸವನ್ನು ಮಾಡಿದವನು ಮಹಾಪಾತಕಯುಕ್ತನಾಗಿ ಕಲ್ಪಾವಸಾನದಲ್ಲಿ ನರಕವನ್ನೈದುವನು.

೩೮. ಸೂರ್ಯನಿಲ್ಲದಿರುವುದು ಹಗಲೂ, ಚಂದ್ರನಿಲ್ಲದಿರುವುದು ರಾತ್ರಿಯೂ ವೃಕ್ಷವಿಲ್ಲದಿರುವುದು ಗ್ರಾಮವೂ, ದ್ವಾದಶಿಯಿಲ್ಲದಿರುವುದು ವ್ರತವೂ, ಅಲ್ಲ.

೩೯. ವಿಷ್ಣುಸಹಸ್ರನಾಮವನ್ನು ಪಠಿಸದಿರುವ ಮನೆಯು ಎರಡನೆಯ ಯಮ ದಂಡರೂಪವಾದ ನರಕವೇ ಆಗುವುದು.

ನರಕಂ ಚ ಭವೇತ್ತಸ್ಯ ದ್ವಿತೀಯಂ ಯಮಶಾಸನಂ ।
ನೈವ ಭಾಗವತಂ ಯತ್ರ ಪುರಾಣಂ ಗೀಯತೇ ಕಲೌ ।
ಅಂಧಕೂಪೇಷು ಕ್ಷಿಪ್ಯಂತೇ ಜ್ವಲಿತೇಷು ಹುತಾಶನೇ ॥ ೪೦ ॥
ದ್ವಿಷಂತಿ ಯೇ ಭಾಗವತಂ ನ ಕುರ್ವಂತಿ ದಿನಂ ಹರೇಃ ।
ಯಮದೂತೈಶ್ಚ ನೀಯಂತೇ ತಥಾ ಭೂಮೌ ಭವಂತಿ ತೇ ॥ ೪೧ ॥
ವಾಚ್ಯಮಾನಂ ನ ಶೃಣ್ವಂತಿ ಹರೇಶ್ಚರಿತಮುತ್ತಮಂ ।
ಕರಪತ್ರೈಶ್ಚ ಪೀಡ್ಯಂತೇ ಸುವ್ರೈರ್ಯಮಶಾಸನಾತ್ ॥ ೪೨ ॥
ನಿಂದಾಂ ಕುರ್ವಂತಿ ಯೇ ಪಾಪಾ ವೈಷ್ಣವಾನಾಂ ಮಹಾತ್ಮನಾಂ ।
ತೇಷಾಂ ನಿರಯಪಾತಸ್ತು ಯಾವದಾಭೂತಸಂಪ್ಲವಂ ॥ ೪೩ ॥
ಗೋಕೋಟಿತೀರ್ಥಾದಧಿಕಂ ಸ್ನಾನಂ ತಾತ್ರಾಧಿಕಂ ಭವೇತ್ ।
ಯೇ ಪಶ್ಯಂತಿ ಮಹಾಪುಣ್ಯಾಂ ಗೋಪೀಚಂದನಮೃತ್ತಿಕಾಂ ॥ ೪೪ ॥
ಗಂಗಾಸ್ನಾನಫಲಂ ತೇಷಾಂ ಜಾಯತೇ ನಾತ್ರ ಸಂಶಯಃ ।
ವೈಷ್ಣವಾನಾಂ ಪ್ರಯಚ್ಛಂತಿ ಗೋಪೀಚಂದನಮೃತ್ತಿಕಾಂ ।
ಯೇಷಾಂ ಲಲಾಟೇ ತಿಲಕಂ ಗೋಪೀಚಂದನಸಂಭವಂ ॥ ೪೫ ॥

---

೪೦. ಕಲಿಯುಗದಲ್ಲಿ ಭಾಗವತಪುರಾಣವನ್ನು ಪಠಿಸದಿರುವ ಮನೆಯು ಎರಡನೆ ಯಮಶಾಸನ ರೂಪವಾದ ನರಕವಾಗುವುದು. ಅಂತಹ ಮನೆಯವನನ್ನು ಯಮದೂತರು ಅಂಧಕೂಪನರಕದಲ್ಲಿಯೂ, ಉರಿಯುವಬೆಂಕಿಯಲ್ಲಿಯೂ, ಎಸೆಯುವರು.

೪೧. ಭಾಗವತವನ್ನು ದೂಷಿಸುವವನನ್ನೂ, ಹರಿದಿನವನ್ನಾಚರಿಸದವನನ್ನೂ ಯಮದೂತರು ನರಕಕ್ಕೆ ಒಯ್ಯುವರು. ಅನಂತರ ಅವರು ಭೂಮಿಯಲ್ಲಿ ಜನಿಸುವರು.

೪೨. ಹೇಳುತ್ತಿರುವ ಕೃಷ್ಣಚರಿತ್ರೆಯನ್ನು ಕೇಳದಿರುವವರು ಯಮನ ಆಜ್ಞೆಯಿಂದ ಕಠಿನವಾದ ಗರಗಸದಿಂದ ಪೀಡಿಸಲ್ಪಡುವರು.

೪೩. ಮಹಾತ್ಮರಾದ ವೈಷ್ಣವರನ್ನು ನಿಂದಿಸುವ ಪಾಪಿಗಳು ಪ್ರಳಯಕಾಲದವರೆಗೆ ನರಕದಲ್ಲಿ ಬೀಳುವರು.

೪೪. ಆ ದ್ವಾರಕೆಯ ಗೋಮತಿಯಲ್ಲಿ ಸ್ನಾನಮಾಡುವುದರಿಂದ ಕೋಟಿಗೋವುಗಳನ್ನು ದಾನಮಾಡುವುದರಿಂದಲೂ, ಕೋಟಿತೀರ್ಥಗಳಲ್ಲಿ ಸ್ನಾನಮಾಡುವುದರಿಂದಲೂ ಉಂಟಾಗುವ ಫಲಕ್ಕಿಂತ ಅಧಿಕಫಲವು ಲಭಿಸುವುದು. ಅತ್ಯಂತ ಪುಣ್ಯಕರವಾದ ಗೋಪೀಚಂದನ ಮೃತ್ತಿಕೆಯನ್ನುನೋಡುವವರಿಗೆ ನಿಶ್ಚಯವಾಗಿಯೂ, ಗಂಗಾಸ್ನಾನದ ಫಲವು ದೊರೆಯುವುದು.

೪೫–೪೭. ಗೋಪೀಚಂದನವನ್ನು ವೈಷ್ಣವರಿಗೆ ದಾನಮಾಡುವವರಿಗೂ, ಗೋಪೀಚಂದನತಿಲಕವನ್ನು ಹಣೆಯಲ್ಲಿ ಧರಿಸುವವರಿಗೂ, ದ್ವಾದಶೀ ರಾತ್ರಿಜಾಗರಣೆ

ಗೋಪೀಚಂದನಪುಂಡ್ರೇಣ ದ್ವಾದಶ್ಯಾಂ ಜಾಗರೇ ಕೃತೇ ।
ವಿಷ್ಣೋರ್ನಾಮಸಹಸ್ರಸ್ಯ ಪಾಠೇನ ಮುಕ್ತಿಮಾಪ್ನುಯಾತ್ || ೪೬ ||
ಯೋ ನಿತ್ಯಂ ಪ್ರಾತರುತ್ಥಾಯ ವೈಷ್ಣವಾನಾಂ ತು ಕೀರ್ತನಂ ।
ಗೋಮತೀಸ್ಮರಣಂ ಕುರ್ಯುಃ ಕೃಷ್ಣತುಲ್ಯಾ ನ ಸಂಶಯಃ || ೪೭ ||
ಯೋ ನಿತ್ಯಂ ಪ್ರಾತರುತ್ಥಾಯ ದ್ವಾರಕೇತಿ ವದಂತಿ ಚ ।
ತೀರ್ಥಕೋಟಿಭವಂ ಪುಣ್ಯಂ ಲಭಂತೇ ಚ ದಿನೇದಿನೇ || ೪೮ ||

ಇತಿ ಶ್ರೀ ಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾದಶೀವ್ರತಾದಿಮಾಹಾತ್ಮ್ಯವರ್ಣನಂ ನಾಮ
ಏಕೋನಚತ್ವಾರಿಂಶತ್ತಮೋಽಧ್ಯಾಯಃ

---

ಮಾಡುವವರಿಗೂ, ವಿಷ್ಣುಸಹಸ್ರನಾಮವನ್ನು ಪಾರಾಯಣ ಮಾಡುವವರಿಗೂ ಮುಕ್ತಿಯು ದೊರೆಯುವುದು.

೪೭. ಬೆಳಿಗ್ಗೆ ಎದ್ದು ವೈಷ್ಣವರ ನಾಮಸಂಕೀರ್ತನೆ, ಗೋಮತೀಸ್ಮರಣೆಗಳನ್ನು ಮಾಡುವವರು ನಿಶ್ಚಯವಾಗಿಯೂ ಕೃಷ್ಣಸದೃಶರಾಗುವರು.

೪೮. ಪ್ರತಿದಿನವೂ ಬೆಳಿಗ್ಗೆ ಎದ್ದು ದ್ವಾರಕೆಯೆಂದು ಹೇಳುವವರು ಕೋಟಿತೀರ್ಥಗಳಿಂದಾಗುವ ಪುಣ್ಯವನ್ನು ಪಡೆಯುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಶ್ರೀ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಾದಶೀವ್ರತಾದಿಮಾಹಾತ್ಮ್ಯವರ್ಣನೆಂಬ
ಮುವ್ವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ।

## ಚತ್ವಾರಿಂಶತ್ತ್ರಯೋಽಧ್ಯಾಯಃ

### ಶ್ರಾದ್ಧಾದಿಮಾಹಾತ್ಮ್ಯವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ಸ್ವನಾಮಾಂಕಿತಪತ್ರೈಸ್ತು ಶ್ರೀಪತಿಂ ಯೋಽರ್ಚಯೇತ ವೈ ।
ಸಪ್ತಲೋಕಾನನುಪ್ರಾಪ್ಯ ಸಪ್ತದ್ವೀಪಾಧಿಪೋ ಭವೇತ್ ॥ ೧ ॥
ಮಾಕಾಂತವೃಕ್ಷಪತ್ರೈಸ್ತು ಯೋಽರ್ಚಯೇತ ಸದಾ ಹರಿಂ ।
ಪುಣ್ಯಂ ಭವತಿ ತಸ್ಯೇಹ ವಾಜಿಮೇಧಾಯುತಂ ಕಲೌ ॥ ೨ ॥
ಲಕ್ಷ್ಮೀಂ ಸರಸ್ವತೀಂ ದೇವೀಂ ಸಾವಿತ್ರೀಂ ಚಂಡಿಕಾಂ ತಥಾ ।
ಪೂಜಯಿತ್ವಾ ದಿವಂ ಯಾತಿ ಪುತ್ರೈಃ ಶ್ರೀವೃಕ್ಷಸಂಭವೈಃ ॥ ೩ ॥
ತುಲಸ್ಯಾ ಅಧಿಕಂ ಪ್ರೋಕ್ತಂ ಫಲಂ ಶ್ರೀವೃಕ್ಷಸಂಭವಂ ।
ತಸ್ಮಾನ್ನಿತ್ಯಂ ಪ್ರಯತ್ನೇನ ಪೂಜನೀಯಃ ಸದಾಚ್ಯುತಃ ॥ ೪ ॥

---

### ಕನ್ನಡದ ಅನುವಾದ

### ಶ್ರಾದ್ಧಾದಿಮಾಹಾತ್ಮ್ಯವರ್ಣನ

೧. ಕೃಷ್ಣತುಲಸೀದಳಗಳಿಂದ ಶ್ರೀಕೃಷ್ಣನನ್ನು ಅರ್ಚಿಸುವವನು ಕ್ರಮವಾಗಿ ಏಳುಲೋಕಗಳನ್ನು ಹೊಂದಿದವನಾಗಿ ಸಪ್ತದ್ವೀಪಗಳಿಗೆ ಒಡೆಯನಾಗುವನು.

೨. ಕಲಿಯುಗದಲ್ಲಿ ಯಾವಾಗಲೂ ಹರಿಯನ್ನು ಬಿಲ್ವಪತ್ರೆಗಳಿಂದ ಪೂಜಿಸುವವನಿಗೆ ಹತ್ತುಸಾವಿರ ಅಶ್ವಮೇಧಯಾಗಳ ಪುಣ್ಯವು ದೊರೆಯುವುದು.

೩. ಶ್ರೀವೃಕ್ಷದ ಪತ್ರಗಳಿಂದ ಲಕ್ಷ್ಮೀ, ಸರಸ್ವತೀ, ಸಾವಿತ್ರೀ, ಚಂಡಿಕಾ, ಇವರನ್ನು ಪೂಜಿಸಿದವನು ದೇವಲೋಕಕ್ಕೆ ತೆರಳುವನು.

೪. ಶ್ರೀವೃಕ್ಷದಲವು ತುಲಸಿಗಿಂತ ಅಧಿಕವಾದ್ದರಿಂದ ಆ ದಳಗಳಿಂದ ಪ್ರಯತ್ನಪೂರ್ವಕವಾಗಿ ವಿಷ್ಣುವನ್ನು ಪೂಜಿಸಬೇಕು.

ದ್ವಾದಶ್ಯಾಂ ರವಿವಾರೇಣ ಶ್ರೀವೃಕ್ಷಮರ್ಚಯಂತಿ ಯೇ ।
ಬ್ರಹ್ಮಹತ್ಯಾದಿಕೈಃ ಪಾಪೈರ್ನ ಲಿಂಪ್ಯಂತೇ ಕೃತೈರಪಿ ॥ ೫ ॥
ಯಥಾ ಕರಿಪದೇ ತಾನಿ ಪ್ರವಿಶಂತಿ ಪದಾನಿ ಚ ।
ತಥಾ ಸರ್ವಾಣಿ ಪುಣ್ಯಾನಿ ಪ್ರವಿಷ್ಟಾನಿ ಹರೇರ್ದಿನೇ ॥ ೬ ॥
ಅಧ್ರುವೇಣೈವ ದೇಹೇನ ಪ್ರತಿಕ್ಷಣವಿನಾಶಿನಾ ।
ಕಥಂ ನೋಪಾಸತೇ ಜಂತುರ್ದ್ವಾದಶೀಂ ಜಾಗರಾನ್ವಿತಾಂ ॥ ೭ ॥
ಅತೀತಾನ್ಪುರುಷಾನ್ಸಪ್ತ ಭವಿಷ್ಯಾಂಶ್ಚ ಚತುರ್ದಶ ।
ನರಕಾತ್ತಾರಯೇತ್ಸರ್ವಾನ್ಲೋಕಾನ್ಕೃಷ್ಣೇತಿ ಕೀರ್ತನಾತ್ ।
ನ ತೇ ಜೀವಂತಿ ಲೋಕೇಽಸ್ಮಿಯತ್ರ ತತ್ರ ಸ್ಥಿತಾ ನರಾಃ ॥ ೮ ॥
ದ್ವಾರಕಾಯಾಂ ಚ ಸಂಪ್ರಾಪ್ತಾಸ್ತ್ರಿಷು ಲೋಕೇಷು ವಂದಿತಾಃ ।
ದ್ವಾರಕಾಯಾಂ ಪ್ರಕುರ್ವಂತಿ ಯತೀನಾಂ ಭೋಜನಂ ಸ್ಥಿತಿಂ ॥ ೯ ॥
ಗ್ರಾಸೇಗ್ರಾಸೇ ಮುಖಶತಂ ತೇ ಲಭಂತೇ ಫಲಂ ನರಾಃ ।
ಯತೀನಾಂ ಯೇ ಪ್ರಯಚ್ಛಂತಿ ಕೌಪೀನಾಚ್ಛಾದನಾದಿಕಂ ।
ವಸತಾಂ ದ್ವಾರಕಾಮಧ್ಯೇ ಯಥಾಶಕ್ತ್ಯಾ ತು ಭೋಜನಂ ॥ ೧೦ ॥

---

೫. ಭಾನುವಾರ ದ್ವಾದಶೀ ಶ್ರೀವೃಕ್ಷವನ್ನಾರಾಧಿಸುವವರು ಬ್ರಹ್ಮಹತ್ಯೆಯನ್ನು ಮಾಡಿದ್ದರೂ ಅದರಿಂದ ಲಿಪ್ತರಾಗುವುದಿಲ್ಲ,

೬. ಆನೆಯ ಹೆಜ್ಜೆಯಲ್ಲಿ ಇತರ ಪ್ರಾಣಿಗಳ ಹೆಜ್ಜೆಯು ಅಡಗುವಂತೆ ಸಮಸ್ತ ಪುಣ್ಯಗಳೂ ಹರಿದಿನದಲ್ಲಿ ಅಡಗಿರುವುವು.

೭. ಪ್ರತಿಕ್ಷಣದಲ್ಲಿಯೂ ನಾಶವಾಗುತ್ತಿರುವ ನಶ್ವರವಾದ ಈ ದೇಹದಿಂದ ಪ್ರಾಣಿಯು ದ್ವಾದಶಿಯನ್ನು ಜಾಗರಣೆಮಾಡಿ ಸೇವಿಸುವುದಿಲ್ಲವೇಕೆ ?

೮-೯. ಕೃಷ್ಣನಾಮಸಂಕೀರ್ತನಮಾಡುವವನು ಹಿಂದಿನ ಏಳುತಲೆಯ ಪಿತೃಗಳನ್ನೂ ಮುಂದಿನ ಹದಿನಾಲ್ಕು ತಲೆಯವರನ್ನೂ ನರಕದಿಂದ ಉದ್ಧಾರಮಾಡುವನು. ಮನುಷ್ಯರು ಯಾವ ದೇಶದವರಾದರೂ ದ್ವಾರಕೆಗೆ ಬಂದರೆ ಆದರು ಈ ಲೋಕದಲ್ಲಿ ಮರಳಿ ಜನಿಸದೆ ತ್ರಿಭುವನವಂದ್ಯರಾಗುವರು. ಈ ದ್ವಾರಕೆಯಲ್ಲಿ ಯತಿಗಳಿಗೆ ವಾಸಸ್ಥಳವನ್ನು ನಿರ್ಮಿಸಿಕೊಟ್ಟು ಭೋಜನಮಾಡಿಸುವವರು ಅವರು ಸ್ವೀಕರಿಸಿದ ಪ್ರತಿ ಕವಳಗಳಲ್ಲಿಯೂ ನೂರುಯಜ್ಞಗಳ ಫಲವನ್ನು ಹೊಂದುವರು.

೧೦. ದೈತ್ಯರಾಜ ! ದ್ವಾರಕೆಯಲ್ಲಿ ವಾಸಿಸುವ ಯತಿಗಳಿಗೆ ಶಕ್ತ್ಯನುಸಾರ ಕೌಪೀನ, ಹೊದ್ದಿಕೆ ಮೊದಲಾದುವುಗಳನ್ನಿತ್ತು ಭೋಜನಮಾಡಿಸುವವನ ಪುಣ್ಯವನ್ನು ಸಂಕ್ಷೇಪವಾಗಿ ಹೇಳುವೆನು ಕೇಳು.

ಶೃಣು ಪುಣ್ಯಂ ಪ್ರವಕ್ಷ್ಯಾಮಿ ಸಮಾಸೇನ ಹಿ ದೈತ್ಯಜ ।
ಕೋಟಿಭಿರ್ವೇದವಿದ್ಭಿರ್ಗಯಾಯಾಂ ಪಿತೃವತ್ಸಲೈಃ ।
ಭೋಜಿತೈರ್ಯತ್ಸಮಾಪ್ನೋತಿ ತತ್ಫಲಂ ದೈತ್ಯನಾಯಕ ॥ ೧೧ ॥
ಏಕಸ್ಮಿನ್ಭೋಜಿತೇ ಪೌತ್ರ ಭಿಕ್ಷುಕೇ ಫಲಮೀದೃಶಂ ।
ದಾತವ್ಯಂ ಭಿಕ್ಷುಕೇ ಚಾನ್ನಂ ಕುರ್ಯಾದ್ವೈ ಚಾತ್ಮವಿಕ್ರಯಂ ॥ ೧೨ ॥
ಧನ್ಯಾಸ್ತೇ ಯತಯಸ್ಸರ್ವೇ ಯೇ ವಸಂತಿ ಕಲೌ ಯುಗೇ ।
ಕೃಷ್ಣಮಾಶ್ರಿತ್ಯ ದೈತ್ಯೇಂದ್ರ ದ್ವಾರಕಾಯಾಂ ದಿನೇದಿನೇ ॥ ೧೩ ॥
ಪ್ರಾಣಿನೋ ಯೇ ಮೃತಾಃ ಕೇಚಿದ್ದ್ವಾರಕಾಂ ಕೃಷ್ಣಸನ್ನಿಧೌ ।
ಪಾಪಿನಸ್ತತ್ಪದಂ ಯಾಂತಿ ಭಿತ್ವಾ ಸೂರ್ಯಸ್ಯ ಮಂಡಲಂ ॥ ೧೪ ॥
ದ್ವಾರಕಾಚಕ್ರತೀರ್ಥೇ ಯೇ ನಿವಸಂತಿ ನರೋತ್ತಮಾಃ ।
ತೇಷಾಂ ನಿವಾರಿತಾಃ ಸರ್ವೇ ಯಮೇನ ಯಮಕಿಂಕರಾಃ ॥ ೧೫ ॥
ಸ್ನಾತ್ವಾ ಪಶ್ಯಂತಿ ಗೋಮತ್ಯಾಂ ಕೃಷ್ಣಂ ಕಲಿಮಲಾಪಹಂ ।
ನ ತೇಷಾಂ ವಿಷಯೋ ಯಾಯಂ ನ ಚಾಸ್ಮದ್ವಿಷಯೇ ತು ತೇ ॥ ೧೬ ॥
ಅಪಿ ಕೀಟಃ ಪತಂಗೋ ವಾ ವೃಕ್ಷಾ ವಾ ಯೇ ತದಾಶ್ರಿತಾಃ ।
ಯಾಂತಿ ತೇ ಕೃಷ್ಣಸದನಂ ಸಂಸಾರೇ ನ ಪುನರ್ಹಿ ತೇ ॥ ೧೭ ॥

---

೧೧. ದೈತ್ಯರಾಜ ! ಪಿತೃಪ್ರಿಯರಾದ ಕೋಟಿಮಂದಿ ವಿದ್ವಾಂಸರನ್ನು ಗಯೆಯಲ್ಲಿ ಭೋಜನಮಾಡಿಸಿದ ಫಲವು ದೊರೆಯುವುದು.

೧೨. ಪೌತ್ರ ! ಒಬ್ಬ ಸನ್ಯಾಸಿಯನ್ನು ಭೋಜನಮಾಡಿಸಿದರೆ, ಈ ಫಲವು ದೊರೆಯುವುದು. ತನ್ನನ್ನು ಮಾರಿಯಾದರೂ ಭಿಕ್ಷುಕನಿಗೆ ಅನ್ನವನ್ನು ನೀಡಬೇಕು.

೧೩. ಕಲಿಯುಗದಲ್ಲಿ ದ್ವಾರಕಾವಾಸಿಯಾದ ಕೃಷ್ಣನನ್ನು ಆಶ್ರಯಿಸಿ ವಾಸಿಸುವ ಯತಿಗಳೆಲ್ಲ ಪುಣ್ಯವಂತರು.

೧೪. ದ್ವಾರಕೆಯಲ್ಲಿ ಕೃಷ್ಣನ ಹತ್ತಿರ ಮೃತರಾದ ಪಾಪಿಗಳೂ ಸೂರ್ಯಮಂಡಲವನ್ನು ಭೇದಿಸಿ ಆ ಕೃಷ್ಣನ ಸ್ಥಾನಕ್ಕೆ ತೆರಳುವರು.

೧೫. ದ್ವಾರಕೆಯ ಚಕ್ರತೀರ್ಥದಲ್ಲಿ ವಾಸಿಸುವ ನರೋತ್ತಮರನ್ನು ಕರೆತರಬಾರದೆಂದು ಯಮನು ತನ್ನ ಕಿಂಕರರನ್ನು ತಡೆಯುವನು.

೧೬. ಗೋಮತಿಯಲ್ಲಿ ಮಿಂದು ಕೃಷ್ಣನನ್ನು ದರ್ಶನಮಾಡುವ ಮಾನವರು ನಮ್ಮ ದೇಶದಲ್ಲಿ ವಾಸಮಾಡುವುದಿಲ್ಲ. ನಾವು ಅವರದೇಶದಲ್ಲಿ ವಾಸಿಸುವುದಿಲ್ಲ.

೧೭. ಕೀಟವಾಗಲಿ, ಪತಂಗವಾಗಲಿ, ಮರಗಳಾಗಲಿ, ಆ ಮರಗಳನ್ನು ಆಶ್ರಯಿಸಿದ ಯಾವಪ್ರಾಣಿಗಳೇ ಆಗಲಿ ಅವು ಕೃಷ್ಣದೇವಾಲಯಕ್ಕೆ ಹೋದರೆ ಮರಳಿ ಸಂಸಾರದಲ್ಲಿ ಜನಿಸುವುದಿಲ್ಲ.

ಕಿಂ ಪುನರ್ದ್ವಿಜವರ್ಯಾಶ್ಚ ಕ್ಷತ್ರಿಯಾಶ್ಚ ವಿಶೇಷತಃ ।
ತ್ರಿವರ್ಣಪೂಜಾಸಂಯುಕ್ತಾಃ ಶೂದ್ರಾಸ್ತತ್ರ ನಿವಾಸಿನಃ ॥ ೧೮ ॥

ಗೀತಾಂ ಪಠಂತಿ ಕೃಷ್ಣಾಗ್ರೇ ಕಾರ್ತಿಕಂ ಸಕಲಂ ದ್ವಿಜಾಃ ।
ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ॥ ೧೯ ॥

ತ್ರಿರಾತ್ರೇಣಾಪಿ ಕೃಚ್ಛ್ರೇಣ ತಥಾ ಚಾಂದ್ರಾಯಣೇನ ಚ ।
ಯಾವಕೈಸ್ತಪ್ತಕೃಚ್ಛ್ರಾದ್ಯೈಃ ಪಕ್ಷಮಾಸಮುಪೋಷಣೈಃ ॥ ೨೦ ॥

ಕ್ಷಪಯಂತಿ ಚ ಯೇ ಮಾಸಂ ಕಾರ್ತಿಕಂ ವ್ರತಚಾರಿಣಃ ।
ಸ್ನಾತ್ವಾ ವೈ ಗೋಮತೀನೀರೇ ತಥಾ ವೈ ರುಕ್ಮಿಣೀಹ್ರದೇ ॥ ೨೧ ॥

ಶಂಖಚಕ್ರಗದಾಹಸ್ತಾಃ ಕೃಷ್ಣರೂಪಾ ಭವಂತಿ ತೇ ।
ಉಪೋಷ್ಯೈಕಾದಶೀಂ ಶುದ್ಧಾಂ ದಶಮೀ ಸಂಗವರ್ಜಿತಾಂ ॥ ೨೨ ॥

ಶ್ರಾದ್ಧಂ ಕುರ್ವಂತಿ ದ್ವಾದಶ್ಯಾಂ ಚಕ್ರತೀರ್ಥೇ ಚ ನಿರ್ಮಲೇ ।
ಬ್ರಾಹ್ಮಣಾನ್ಭೋಜಯಿತ್ವಾ ಚ ಮಧುಪಾಯಸಸರ್ಪಿಷಾ ॥ ೨೩ ॥

ಸಂತರ್ಪ್ಯ ವಿಧಿವದ್ಭಕ್ತ್ಯಾ ಶಕ್ತ್ಯಾ ದತ್ವಾ ತು ದಕ್ಷಿಣಾಂ ।
ಗೋಭೂಹಿರಣ್ಯವಾಸಾಂಸಿ ತಾಂಬೂಲಂ ಚ ಫಲಾನಿ ಚ ॥ ೨೪ ॥

ಉಪಾನಹೌ ಚ್ಛತ್ರಸುಮಂ ಜಲಪೂರ್ಣಾ ಘಟಾಸ್ತಥಾ ।
ಪಕ್ವಾನ್ನಸಂಯುತಾಃ ಶುಭ್ರಾಃ ಸಫಲಾ ದಕ್ಷಿಣಾನ್ವಿತಾಃ ॥ ೨೫ ॥

---

೧೮. ದ್ವಿಜವರ್ಯರೂ, ಕ್ಷತ್ರಿಯರೂ, ಬ್ರಾಹ್ಮಣಾದಿ ಮೂರುಜಾತಿಯವರನ್ನು ಪೂಜಿಸುವ ಶೂದ್ರರೂ ಅಲ್ಲಿ ವಾಸಮಾಡಿದರೆ ಮುಕ್ತರಾಗುವರೆಂದು ಹೇಳಬೇಕಾಗಿರುವುದಿಲ್ಲ.

೧೯-೨೬. ದ್ವಿಜರೆ ! ಕಾರ್ತಿಕಮಾಸವೆಲ್ಲ ಕೃಷ್ಣನ ಮುಂದೆ ಗೀತೆಯನ್ನು ಪಠಿಸುವವರೂ, ಗೋಮತೀಜಲ, ರುಕ್ಮಿಣೀಹ್ರದ ಇವುಗಳಲ್ಲಿ ಮಿಂದು ಒಂದು ಭೋಜನ, ನಕ್ತ ಯಾಚಿಸದೆಜೀವಿಸುವುದು, ತ್ರಿರಾತ್ರೋಪವಾಸ, ಕೃಚ್ಛ್ರ, ಚಾಂದ್ರಾಯಣ, ಯಾವಕ ತಪ್ತಕೃಚ್ಛ್ರ, ಆರುತಿಂಗಳು ಉಪವಾಸ ಇವುಗಳನ್ನಾಚರಿಸುತ್ತ ಕಾರ್ತಿಕಮಾಸವನ್ನು ಕಳೆಯುವವರೂ, ಶಂಖಚಕ್ರಗದಾಧಾರಿಗಳಾಗಿ ಕೃಷ್ಣರೂಪರಾಗುವರು. ಕಾರ್ತಿಕ ದ್ವಾದಶೀದಿನ ಕೃಷ್ಣನನ್ನು ಉದ್ದೇಶಿಸಿ ನಿರ್ಮಲ ಚಕ್ರತೀರ್ಥದಲ್ಲಿ ಶ್ರಾದ್ಧಗೈದು ಬ್ರಾಹ್ಮಣರಿಗೆ. ಜೇನು, ಪಾಯಸ, ತುಪ್ಪ ಇವುಗಳನ್ನು ಭೋಜನಮಾಡಿಸಿ ಗೋ, ಭೂ

ಏವಂ ಯಃ ಕುರುತೇ ಸಮ್ಯಕ್ಕೃಷ್ಣಮುದ್ದಿಶ್ಯ ಕಾರ್ತಿಕೇ ।
ಮಾರ್ಕಂಡೇಯಸಮಾಪ್ರೀತಿಃ ಪಿತ್ರೂಣಾಂ ಜಾಯತೇ ಧ್ರುವಂ ॥ ೨೬ ॥
ಕೃಷ್ಣಸ್ಯ ತ್ರಿದಶೈಃ ಸಾರ್ಧಂ ತುಷ್ಟಿರ್ಭವತಿ ಚಾಕ್ಷಯಾ ॥ ೨೭ ॥
ಯೇ ಕಾರ್ತಿಕೇ ಪುಣ್ಯತಮಾ ಮನುಷ್ಯಾ
ಸ್ತಿಷ್ಠಂತಿ ಮಾಸಂ ವ್ರತದಾನಯುಕ್ತಾಃ ।
ರಥಾಂಗತೀರ್ಥೇ ಕೃತಪೂತಗಾತ್ರಾಃ
ತೇ ಯಾಂತಿ ಪುಣ್ಯಂ ಪದಮವ್ಯಯಂ ಚ ॥ ೨೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಶ್ರಾದ್ಧಾದಿಮಾಹಾತ್ಮ್ಯವರ್ಣನಂನಾಮ
ಚತ್ವಾರಿಂಶತ್ತಮೋಽಧ್ಯಾಯಃ

---

ಹಿರಣ್ಯ, ವಸ್ತ್ರ, ತಾಂಬೂಲ, ಫಲ, ಪಾದರಕ್ಷೆ, ಛತ್ರಿ, ಪುಷ್ಪ, ನೀರುತುಂಬಿದ ಕಲಶ, ಪಕ್ವಾನ್ನ ಇವುಗಳನ್ನು ದಕ್ಷಿಣೆಯೊಡನೆ ದಾನಮಾಡಿದರೆ ಪಿತೃಗಳಿಗೆ ಮಾರ್ಕಂಡೇಯ ಸಮವಾದ ಪ್ರೀತಿಯುಂಟಾಗುವುದು.

೨೭. ಕೃಷ್ಣನೂ ದೇವತೆಗಳೊಡನೆ ಶಾಶ್ವತವಾದ ಸಂತೋಷವನ್ನು ಹೊಂದುವನು.

೨೮. ಕಾರ್ತಿಕ ಮಾಸವೆಲ್ಲ ಚಕ್ರತೀರ್ಥದಲ್ಲಿ ಮಿಂದು ವ್ರತ, ದಾನಗಳನ್ನು ಮಾಡುವ ಪುಣ್ಯವಂತರಾದ ಮಾನವರು ಶುದ್ಧದೇಹವನ್ನು ಪಡೆದು ಪುಣ್ಯಕರವಾದ ಶಾಶ್ವತ ಸ್ಥಾನಕ್ಕೆ ತೆರಳುವರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಶ್ರಾದ್ಧಾದಿಮಾಹಾತ್ಮ್ಯವರ್ಣನವೆಂಬ
ನಲವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಏಕಚತ್ವಾರಿಂಶತ್ತಮೋಽಧ್ಯಾಯಃ

### ದಾನಶ್ರಾದ್ಧಾದಿಸತ್ಫಲವರ್ಣನಂ

ಶ್ರೀಪ್ರಹ್ಲಾದ ಉವಾಚ :–
ಧನ್ಯಾಸ್ತು ನರಲೋಕಾಸ್ತೇ ಗೋಮತ್ಯಾಂ ತು ಕೃತೋದಕಾಃ ।
ಪೂಜಯಿಷ್ಯಂತಿ ಯೇ ಕೃಷ್ಣಂ ಕೇತಕೀತುಲಸೀದಲೈಃ ॥ ೧ ॥
ನ ತೇಷಾಂ ಸಂಭವೋಸ್ತೀಹ ಘೋರಸಂಸಾರಗಹ್ವರೇ ।
ತೇಷಾಂ ಮೃತ್ಯುಃ ಪುನರ್ನಾಸ್ತಿ ಹ್ಯಮರತ್ವಂ ಹಿ ತೇ ಗತಾಃ ॥ ೨ ॥
ಅನ್ಯತ್ರ ವೈ ಯತೀನಾಂ ತು ಕೋಟೀನಾಂ ಯತ್ಫಲಂ ಭವೇತ್ ।
ದ್ವಾರಕಾಯಾಂ ತು ಚೈಕೇನ ಭೋಜಿತೇನ ತತೋಽಧಿಕಂ ॥ ೩ ॥
ಅತೀತಂ ವರ್ತಮಾನಂ ಚ ಭವಿಷ್ಯದ್ಯಚ್ಚ ಪಾತಕಂ ।
ನಿರ್ದಹೇನ್ನಾಸ್ತಿ ಸಂದೇಹೋ ದ್ವಾರಕಾ ಮನಸಾ ಸ್ಮೃತಾ ॥ ೪ ॥

---

### ಕನ್ನಡದ ಅನುವಾದ

### ದಾನಶ್ರಾದ್ಧಾದಿಸತ್ಫಲವರ್ಣನ

೧. ಶ್ರೀ ಪ್ರಹ್ಲಾದನು ಹೇಳುತ್ತಾನೆ:—ಗೋಮತಿಯಲ್ಲಿ ಮಿಂದು ಕೇತಕೀ ಪುಷ್ಪ, ತುಲಸೀ ದಳಗಳಿಂದ ಕೃಷ್ಣನನ್ನು ಪೂಜಿಸುವ ನರಲೋಕದ ಜನರು ಧನ್ಯರು.

೨. ಅವರು ಈ ಘೋರಸಂಸಾರವೆಂಬ ಕುಣಿಯಲ್ಲಿ ಮರಳಿ ಜನಿಸುವುದಿಲ್ಲ. ಅಮರತ್ವವನ್ನು ಪಡೆದ ಅವರಿಗೆ ಮೃತ್ಯುವಿಲ್ಲ.

೩. ಇತರ ಕಡೆಯಲ್ಲಿ ಕೋಟಿಮಂದಿ ಯತಿಗಳನ್ನು ಭೋಜನ ಮಾಡಿಸಿದ ಪುಣ್ಯಕ್ಕಿಂತ ದ್ವಾರಕೆಯಲ್ಲಿ ಒಬ್ಬನನ್ನು ಭೋಜನ ಮಾಡಿಸುವುದರಿಂದ ಅಧಿಕ ಪುಣ್ಯವುಂಟಾಗುವುದು.

೪. ದ್ವಾರಕೆಯುನ್ನು ಮನಸ್ಸಿನಿಂದ ಸ್ಮರಿಸಿದರೆ ಹಿಂದಿನ ಮುಂದಿನ ಮತ್ತು ವರ್ತಮಾನ ಕಾಲಗಳಲ್ಲಿ ಮಾಡಿದ ಪಾಪಗಳು ನಿಜವಾಗಿಯೂ ಪರಿಹಾರವಾಗುವುವು.

ಜ್ಞಾತ್ವಾ ಕಲಿಯುಗೇ ಘೋರೇ ಹಾಹಾಭೂತಮಚೇತನಂ ।
ದ್ವಾರಕಾಂ ಯೇ ನ ಮುಂಚಂತಿ ಕೃತಾರ್ಥಾಸ್ತೇ ನರೋತ್ತಮಾಃ ॥ ೫ ॥
ಮೃತಾನಾಂ ಯತ್ರ ಜಂತೂನಾಂ ಶ್ವೇತದ್ವೀಪೇ ಸ್ಥಿತಿಃ ಸದಾ ॥ ೬ ॥
ಅಗ್ನಿಷ್ವಾತ್ತಾ ಬರ್ಹಿಷದಃ ಆಜ್ಯಪಾಃ ಸೋಮಪಾಶ್ಚ ಯೇ ।
ಏಕವಿಂಶತಿಃ ಪಿತೃಗಣಾಃ ದ್ವಾರಕಾಯಾಂ ವಸಂತಿ ತೇ ॥ ೭ ॥
ಪುಷ್ಕರಾದೀನಿ ತೀರ್ಥಾನಿ ಗಂಗಾದ್ಯಾಃ ಸರಿತಸ್ತಥಾ ।
ಕುರುಕ್ಷೇತ್ರಾದಿಕ್ಷೇತ್ರಾಣಿ ಕಾಶ್ಯಾದೀನ್ಯೂಷರಾಣಿ ಚ ॥ ೮ ॥
ಗಯಾದಿ ಪಿತೃತೀರ್ಥಾನಿ ಪ್ರಭಾಸಾದ್ಯಾನಿ ಯಾನಿ ಚ ।
ಸ್ಥಾನಾನಿ ಯಾನಿ ಪುಣ್ಯಾನಿ ಗ್ರಾಮಾಶ್ಚ ನಿವಸಂತಿ ವೈ ॥ ೯ ॥
ಕಾಶ್ಯಾದಿಪುರ್ಯೋ ಯಾ ನಿತ್ಯಂ ನಿವಸಂತಿ ಕಲೌ ಯುಗೇ ।
ನಿತ್ಯಂ ಕೃಷ್ಣಸ್ಯ ಸದನೇ ಪಾಪಿನಾಂ ಮುಕ್ತಿದೇ ಸದಾ ॥ ೧೦ ॥
ವೈಶಾಖಶುಕ್ಲದ್ವಾದಶ್ಯಾಂ ಪ್ರಬೋಧಿನ್ಯಾಂ ವಿಶೇಷತಃ ।
ವೈಶಾಖ್ಯಾಂ ದೈತ್ಯಶಾರ್ದೂಲ ಕಲ್ಪಾದಿಷು ಯುಗಾದಿಷು ॥ ೧೧ ॥

---

೫. ಈ ಘೋರವಾದ ಕಲಿಯುಗದಲ್ಲಿ ಪ್ರಪಂಚವು ಹಾಹಾಕಾರವನ್ನು ಹೊಂದಿ ಅಚೇತನವಾಗಿರುವುವನ್ನು ತಿಳಿದು ದ್ವಾರಕೆಯನ್ನು ಬಿಡದ ಮಾನವೋತ್ತಮರು ಧನ್ಯರು.

೬. ದ್ವಾರಕೆಯಲ್ಲಿ ಮೃತರಾದ ಜಂತುಗಳು ಶ್ವೇತದ್ವೀಪದಲ್ಲಿ ವಾಸಿಸುವರು.

೭. ಅಗ್ನಿಷ್ವಾತ್ತರು, ಬರ್ಹಿಷದರು, ಆಜ್ಯಪರು, ಸೋಮಪರು ಎಂಬ ಇಪ್ಪತ್ತೊಂದು ಪಿತೃಗಣದವರು ದ್ವಾರಕೆಯಲ್ಲಿ ವಾಸಿಸುವರು.

೮–೧೦. ಪಾಪಿಗಳಿಗೆ ಮೋಕ್ಷನ್ನೀವಯುವ ಕೃಷ್ಣನ ವಾಸಸ್ಥಳವಾದ ದ್ವಾರಕೆಯಲ್ಲಿ ಪುಷ್ಕರಾದಿ ತೀರ್ಥಗಳೂ, ಗಂಗಾದಿ ನದಿಗಳೂ, ಕುರುಕ್ಷೇತ್ರಾದಿಗಳೂ, ಕಾಶ್ಯಾದಿ ಊಷರ ಕ್ಷೇತ್ರಗಳೂ, ಗಯಾದಿ ಪಿತೃತೀರ್ಥಗಳೂ, ಪ್ರಭಾಸಾದಿ ಪುಣ್ಯ ಸ್ಥಳಗಳೂ, ಗ್ರಾಮಗಳೂ, ಕಾಶ್ಯಾದಿ ಪಟ್ಟಣಗಳೂ ವಾಸಿಸುವುವು.

೧೧–೧೪. ವೈಶಾಖಶುಕ್ಲದ್ವಾದಶೀ. ಪ್ರಬೋಧಿನಿ, ಕಲ್ಪಾದಿ, ಯುಗಾದಿ, ಚಂದ್ರ ಸೂರ್ಯ ಗ್ರಹಣ, ಮನ್ವಾದಿ, ವ್ಯತೀಪಾತ, ಸಂಕ್ರಾಂತಿ, ವೈಧೃತಿ ಇವುಗಳಲ್ಲಿ ಪಿತೃಭಕ್ತಿಯಿಂದ ತಿಲತರ್ಪಣಗೈದರೆ ಅದು ಅಕ್ಷಯವಾಗುವುದು. ಈ ದ್ವಾರಕೆಯಲ್ಲಿ

ಚಂದ್ರಸೂರ್ಯೋರ್ಉಪರಾಗೇಷು ಮನ್ವಾದಿಷು ಸ ಸಂಶಯಃ ।
ವ್ಯತೀಪಾತೇಷು ಸಂಕ್ರಾಂತೌ ವೈಧೃತೌ ದೈತ್ಯನಾಯಕ ॥ ೧೨ ॥
ತಿಲೋದಕಂ ಚ ಯದ್ದತ್ತಂ ತತ್ಸ್ಥಲೇ ಪಿತೃಭಕ್ತಿತಃ ।
ತತ್ಸರ್ವಮಕ್ಷಯಂ ಪ್ರೋಕ್ತಂ ಗೋಮತ್ಯಾಂ ಸ್ನಾನಪೂರ್ವಕಂ ॥ ೧೩ ॥
ಯೇಽತ್ರ ಶ್ರಾದ್ಧಂ ಪ್ರಕುರ್ವಂತಿ ಪಿಂಡದಾನಪುರಸ್ಸರಂ ।
ತೇಷಾಮಕ್ಷಯಾ ತೃಪ್ತಿಃ ಪಿತೄಣಾಮುಪಜಾಯತೇ ॥ ೧೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದಾನಶ್ರಾದ್ಧಾದಿಸತ್ಫಲವರ್ಣನಂ ನಾಮ
ಏಕಚತ್ವಾರಿಂಶತ್ತಮೋಽಧ್ಯಾಯಃ

---

ರುವ ಗೋಮತಿಯಲ್ಲಿ ಮಿಂದು ಪಿಂಡಪ್ರದಾನ ಪುರಸ್ಸರವಾಗಿ ಶ್ರಾದ್ಧ ಮಾಡಿದರೆ ಪಿತೃಗಳಿಗೆ ಅಕ್ಷಯ ತೃಪ್ತಿಯಾಗುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ. ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದಾನಶ್ರಾದ್ಧಾದಿಸತ್ಫಲವರ್ಣನವೆಂಬ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಿಚತ್ವಾರಿಂಶತ್ತಮೋಽಧ್ಯಾಯಃ

### ದ್ವಾರಕಾಮಾಹಾತ್ಮ್ಯಶ್ರವಣಾದಿಫಲವರ್ಣನಂ

ಶ್ರೀ ಪ್ರಹ್ಲಾದ ಉವಾಚ :—

ವೃಷೋತ್ಸರ್ಗಂ ಕರಿಷ್ಯಂತಿ ವೈಶಾಖ್ಯಾಂ ಚೈವ ಕಾರ್ತಿಕೇ ।
ದ್ವಾರಕಾಯಾಂ ಪಿಶಾಚತ್ವಂ ಮುಕ್ತ್ವಾ ಯಾಂತಿ ಪಿತಾಮಹಾಃ ॥ ೧ ॥

ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಏವಂವಿಧಾನಿ ಪಾಪಾನಿ ಕೃತ್ವಾ ಚೈವ ಗುರೂಣ್ಯಪಿ ।

ಸ್ನಾನಮಾತ್ರೇಣ ಗೋಮತ್ಯಾಂ ಶ್ರೀಕೃಷ್ಣಸ್ಯ ಚ ದರ್ಶನಾತ್ ।
ವಿಲಯಂ ಯಾಂತಿ ದೈತ್ಯೇಂದ್ರ ಕಲ್ಪಕೋಟಿಕೃತಾನ್ಯಪಿ ॥ ೩ ॥

ರುಕ್ಮಿಣೀಂ ಯೇ ಪ್ರಪಶ್ಯಂತಿ ಭಕ್ತಿಯುಕ್ತಾಃ ಕಲೌ ನರಾಃ ।
ಪುರೀಂ ಪ್ರದಕ್ಷಿಣಾಂ ಕೃತ್ವಾ ಜಪ್ತ್ವಾ ನಾಮಸಹಸ್ರಕಂ ॥ ೪ ॥

---

### ಕನ್ನಡದ ಅನುವಾದ

### ದ್ವಾರಕಾಮಾಹಾತ್ಮ್ಯಶ್ರವಣಾದಿಫಲವರ್ಣನ

೧. ಪ್ರಹ್ಲಾದನು ಹೇಳುತ್ತಾನೆ:—ದ್ವಾರಕೆಯಲ್ಲಿ ವೈಶಾಖ ಕಾರ್ತಿಕ ಮಾಸಗಳಲ್ಲಿ ವೃಷೋತ್ಸರ್ಗಮಾಡಿದರೆ ಪಿತಾಮಹರು ಪಿಶಾಚತ್ವವನ್ನು ತ್ಯಜಿಸಿ ಮುಕ್ತರಾಗುವರು.

೨-೩. ದೈತ್ಯೇಂದ್ರ! ಇಲ್ಲಿ ಮಿಂದು ಕೃಷ್ಣನನ್ನು ದರ್ಶನ ಮಾಡುವುದರಿಂದ ಅನೇಕ ಕಲ್ಪಗಳಲ್ಲೆಸಗಿದ ಬ್ರಹ್ಮಹತ್ಯೆ, ಮದ್ಯಪಾನ, ಕಳ್ಳತನ, ಗುರುತಲ್ಪಗಮನ ಇವೇ ಮೊದಲಾದ ಮಹಾಪಾತಕಗಳೂ ಪರಿಹಾರವಾಗುವುವು.

೪-೫. ಇಲ್ಲಿ ಕಲಿಯುಗದಲ್ಲಿ ರುಕ್ಮಿಣಿಯನ್ನು ಭಕ್ತಿಯಿಂದ ದರ್ಶನಮಾಡಿ ಪಟ್ಟಣವನ್ನು ಪ್ರದಕ್ಷಿಣೆ ಗೈದು ಸಹಸ್ರ ನಾಮಗಳನ್ನು ಜಪಿಸಿದರೆ ಸಕಲ ಬ್ರಹ್ಮಾಂಡವನ್ನು ಪ್ರದಕ್ಷಿಣೆ ಮಾಡಿದಂತಾಗುವುದು. ಇತರ ಕಡೆಯಲ್ಲಿ ಮಹಾದಾನಗಳನ್ನು

ಪ್ರದಕ್ಷಿಣೀಕೃತಂ ಸರ್ವಂ ಬ್ರಹ್ಮಾಂಡಂ ನಾತ್ರ ಸಂಶಯಃ ।
ಮಹಾದಾನೈಸ್ತು ಚಾನ್ಯತ್ರ ಯತ್ಫಲಂ ಪರಿಕೀರ್ತಿತಂ ।
ದ್ವಾರಕಾಯಾಂ ತು ರುಕ್ಮಿಣ್ಯಾಂ ದೃಷ್ಟಾಯಾಂ ಜಾಯತೇ ತದಾ ॥ ೫ ॥
ದ್ವಾದಶೀವಾಸರೇ ಪ್ರಾಪ್ತೇ ಮಾಹಾತ್ಮ್ಯಂ ದ್ವಾರಕಾಭವಂ ।
ಪಠಂತಿ ಸನ್ನಿಧೌ ವಿಷ್ಣೋಃ ಶೃಣು ವಕ್ಷ್ಯಾಮಿ ತತ್ಫಲಂ ॥ ೬ ॥
ಸರ್ವೇಷು ಚೈವ ಲೋಕೇಷು ಕಾಮಚಾರೀ ವಿರಾಜತೇ ।
ಪದ್ಮವರ್ಣೇನ ಯಾನೇನ ಕಿಂಕಿಣೀಜಾಲಮಾಲಿನಾ ॥ ೭ ॥
ದಿವ್ಯಶ್ವೇತಾಶ್ವಯುಕ್ತೇನ ಕಾಮಗೇನ ಯಥಾಸುಖಂ ।
ಆಭೂತಸಂಪ್ಲವಂ ಯಾವತ್ಕ್ರೀಡತೇಽಪ್ಸರಸಾಂ ಗಣೈಃ ॥ ೮ ॥
ಕೃತಕೃತ್ಯಶ್ಚ ಭವತಿ ಕಲ್ಪಕೋಟಿಸಮನ್ವಿತಃ ।
ಯಥಾ ನಿರ್ಮಥನಾದಗ್ನಿಃ ಸರ್ವಕಾಷ್ಠೇಷು ದೃಶ್ಯತೇ ।
ತಥಾ ಚ ದೃಶ್ಯತೇ ಧರ್ಮೋ ದ್ವಾದಶೀಸೇವನಾನ್ನರೇ ॥ ೯ ॥
ಅತಃ ಪರಂ ಪ್ರವಕ್ಷ್ಯಾಮಿ ಪಿತೃಭಿಃ ಪರಿಕೀರ್ತಿತಂ ।
ಅಪಿ ಸ್ಯಾತ್ಸ ಕುಲೇಽಸ್ಮಾಕಂ ಗೋಮತ್ಯಾಂ ಶ್ರದ್ಧಯಾ ನರಃ ।
ಸ್ನಾತ್ವಾ ಸಂಪೂಜ್ಯ ಕೃಷ್ಣಂ ಚ ಶ್ರಾದ್ಧಂ ಕುರ್ಯಾತ್ಸಪಿಂಡಕಂ ॥ ೧೦ ॥

---

ಮಾಡಿದ ಫಲವು ಈ ದ್ವಾರಕೆಯಲ್ಲಿ ರುಕ್ಮಿಣಿಯನ್ನು ದರ್ಶನಮಾಡುವುದರಿಂದುಂಟಾಗುವುದು.

೬. ದ್ವಾದಶೀದಿನ ವಿಷ್ಣುವಿನ ಹತ್ತಿರ ದ್ವಾರಕಾಮಾಹಾತ್ಮ್ಯವನ್ನು ಪಠಿಸಿದರೆ ಲಭಿಸುವ ಫಲವನ್ನು ಹೇಳುವೆನು ಕೇಳು.

೭-೯. ಪದ್ಮವರ್ಣವೂ, ಕಿರುಘಂಟೆಗಳ ಮಾಲೆಯುಳ್ಳದ್ದೂ, ಬಿಳಿಯಕುದುರೆಗಳನ್ನು ಕಟ್ಟಿರುವುದೂ ಸುಖವಾಗಿ ಸ್ವೇಚ್ಛೆಯಂತೆ ಸಂಚರಿಸುವುದೂ ಆದ ವಿಮಾನದಿಂದ ಸಕಲಲೋಕಗಳಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತ ವಿರಾಜಿಸುವನು. ಪ್ರಳಯಕಾಲದವರೆಗೆ ಅಪ್ಸರೆಯರ ಗುಂಪಿನೊಡನೆ ವಿಹರಿಸುವನು. ಕೋಟಿಕಲ್ಪಗಳಕಾಲ ಕೃತಾರ್ಥನಾಗಿರುವನು. ಸಮಸ್ತ ಕಟ್ಟಿಗೆಗಳಲ್ಲಿಯೂ ಕಡೆಯುವುದರಿಂದ ಅಗ್ನಿಯು ಕಾಣಿಸುವಂತೆ ದ್ವಾದಶಿಯನ್ನು ಸೇವಿಸುವ ಮನುಷ್ಯನಲ್ಲಿ ಧರ್ಮವು ಕಾಣಿಸುವುದು.

೧೦. ಇನ್ನುಮುಂದೆ ಪಿತೃಗಳು ಹೇಳಿದುದನ್ನು ಹೇಳುವೆನು. ನಮ್ಮ ವಂಶದವನು ಗೋಮತಿಯಲ್ಲಿ ಶ್ರದ್ಧೆಯಿಂದ ಮಿಂದು ಕೃಷ್ಣನನ್ನು ಪೂಜಿಸಿ ಪಿಂಡಸಹಿತವಾಗಿ ಶ್ರಾದ್ಧಮಾಡುವವನು ಜನಿಸುವನೇ ?

ಅಪಿ ಸ್ಯಾತ್ಸ ಕುಲೇಽಸ್ಮಾಕಂ ಗೋಮತ್ಯುದಧಿಸಂಗಮೇ ।
ಸ್ನಾತ್ವಾ ಪಶ್ಯತಿ ಯಃ ಕೃಷ್ಣಮಸ್ಮಾಕಂ ತಾರಣಾಯ ವೈ ॥ ೧೧ ॥
ಅಪಿ ಸ್ಯಾತ್ಸಕುಲೇಽಸ್ಮಾಕಂ ಯಃ ಶ್ರುತ್ವಾ ಬ್ರಾಹ್ಮಣಾನನಾತ್ ।
ದ್ವಾರಕಾಮಾಹಾತ್ಮ್ಯಮಿದಂ ಪೂಜಯಿಷ್ಯತಿ ಭಕ್ತಿತಃ ॥ ೧೨ ॥
ಭವಿಷ್ಯ ಆ ಕುಲೇಽಸ್ಮಾಕಂ ಯೋ ಗಚ್ಛೇದ್ದ್ವಾರಕಾಂ ಪುರೀಂ ।
ಸಂಪ್ರಾಪ್ಯ ದ್ವಾದಶೀಂ ಶುದ್ಧಾಂ ಯಃ ಕರಿಷ್ಯತಿ ಜಾಗರಂ ॥ ೧೩ ॥
ಭವಿಷ್ಯತಿ ಕುಲೇಽಸ್ಮಾಕಂ ಪುತ್ರೋ ವಾ ದುಹಿತಾ ತಥಾ ।
ಸ್ತವನ್ನಾಮಸಹಸ್ರಂ ತು ಕೃಷ್ಣಸ್ಯಾಗ್ರೇ ಪಠಿಷ್ಯತಿ ॥ ೧೪ ॥
ಅಪಿ ಸ್ಯಾತ್ಸಕುಲೇಽಸ್ಮಾಕಂ ಭವಿಷ್ಯತಿ ಧೃತವ್ರತಃ ।
ಗೋಪೀಚಂದನದಾನೇನ ಯಸ್ತೋಷಯತಿ ವೈಷ್ಣವಾನ್ ॥ ೧೫ ॥
ಅಪಿ ಸ್ಯಾತ್ಸಕುಲೇಽಸ್ಮಾಕಂ ವೈಷ್ಣವಾನಾಂ ತು ಸನ್ನಿಧೌ ।
ದ್ವಾರಕಾಯಾಶ್ಚ ಮಾಹಾತ್ಮ್ಯಂ ಪಠಿಷ್ಯತಿ ಜಿತೇಂದ್ರಿಯಃ ॥ ೧೬ ॥
ಭವಿಷ್ಯತಿ ಕುಲೇಽಸ್ಮಾಕಂ ಮಾಹಾತ್ಮ್ಯಂ ದ್ವಾರಕಾಭವಂ ।
ಲಿಖಿತ್ವಾ ಕೃಷ್ಣತುಷ್ಟ್ಯರ್ಥಂ ಸ್ವಗೃಹೇ ಧಾರಯಿಷ್ಯತಿ ॥ ೧೭ ॥

---

೧೧. ನಮ್ಮ ವಂಶದಲ್ಲಿ ಯಾವನಾದರೂ ಒಬ್ಬನು ಗೋಮತೀಸಮುದ್ರ ಸಂಗಮದಲ್ಲಿ ಮಿಂದು ನಮ್ಮನ್ನುಉದ್ಧರಿಸಲು ಕೃಷ್ಣನನ್ನುದರ್ಶನಮಾಡುವವನು ಜನಿಸುವನೇ?

೧೨. ಬ್ರಾಹ್ಮಣನ ಬಾಯಿಯಿಂದ ದ್ವಾರಕಾಮಹಾತ್ಮ್ಯವನ್ನು ಕೇಳಿ ಭಕ್ತಿಯಿಂದ ಪೂಜಿಸುವವನು ನಮ್ಮ ವಂಶದಲ್ಲಿ ಹುಟ್ಟುವನೇ ?

೧೩. ದ್ವಾರಕೆಗೆ ಹೋಗಿ ಶುದ್ಧದ್ವಾದಶಿಯದಿನ ಜಾಗರಣೆಮಾಡುವನು ನಮ್ಮ ಕುಲದಲ್ಲಿ ಜನಿಸುವನೇ ?

೧೪. ಕೃಷ್ಣನಮುಂದೆ ಸಹಸ್ರನಾಮವನ್ನು ಪಠಿಸುವ ಪುತ್ರನಾಗಲಿ, ಪುತ್ರಿಯಾಗಲಿ ನಮ್ಮವಂಶದಲ್ಲಿ ಹುಟ್ಟುವರೇ ?

೧೫. ಗೋಪೀಚಂದನ ದಾನದಿಂದ ವೈಷ್ಣವರನ್ನು ಸಂತೋಷಗೊಳಿಸುವವನೂ ವೈಷ್ಣವರ ಹತ್ತಿರ ಜಿತೇಂದ್ರಿಯನಾಗಿ ದ್ವಾರಕಾಮಾಹಾತ್ಮ್ಯವನ್ನು ಪಠಿಸುವವನೂ, ಕೃಷ್ಣನ ಸಂತೋಷಕ್ಕಾಗಿ ದ್ವಾರಕಾಮಾಹಾತ್ಮ್ಯವನ್ನುಬರೆದು ತನ್ನಮನೆಯಲ್ಲಿ ಧರಿಸುವವನೂ ಆದ ಪುತ್ರನು ನಮ್ಮ ವಂಶದಲ್ಲಿ ಹುಟ್ಟುವನೇ ?

ಸ್ವರ್ಣದಾನಂ ಗೋದಾನಂ ಭೂಮಿದಾನಂ ತಥೈವ ಚ ।
ಯಾವಜ್ಜೀವಂ ಭವೇದ್ದತ್ತಂ ಯೇನೇದಂ ಧಾರಿತಂ ಕಲೌ ॥ ೧೮ ॥
ತಪ್ತಕೃಚ್ಛ್ರಂ ಮಹಾಕೃಚ್ಛ್ರಂ ಮಾಸೋಪೋಷಣಮೇವ ಚ ।
ಯಾವಜ್ಜೀವಂ ಕೃತಂ ತೇನ ಯೇನೇದಂ ಶ್ರಾವಿತಂ ಕಲೌ ॥ ೧೯ ॥
ಪ್ರಾಯಶ್ಚಿತ್ತಾನಿ ಚೀರ್ಣಾನಿ ಪಾಪಾನಾಂ ನಾಶನಾಯ ಚ ।
ದ್ವಾರಕಾಯಾಶ್ಚ ಮಾಹಾತ್ಮ್ಯಂ ಯೇನ ವಿಸ್ತಾರಿತಂ ಕಲೌ ॥ ೨೦ ॥
ತಾವತ್ತಿಷ್ಠಂತಿ ಪುರುಷೇ ಬ್ರಹ್ಮಹತ್ಯಾದಿಕಾನಿ ಚ ।
ಯಾವನ್ನ ಲಿಖಿತೇ ಜಂತುರ್ಮಾಹಾತ್ಮ್ಯಂ ದ್ವಾರಕಾಭವಂ ॥ ೨೧ ॥
ದಾನೈಃ ಸರ್ವೈಶ್ಚ ಕಿಂ ತಸ್ಯ ಸರ್ವತೀರ್ಥಾವಗಾಹನೈಃ ।
ದ್ವಾರಕಾಯಾಶ್ಚ ಮಾಹಾತ್ಮ್ಯಂ ಯೇನೇದಂ ಲಿಖಿತಂ ಗೃಹೇ ॥ ೨೨ ॥
ಸರ್ವದುಃಖಪ್ರಶಮನಂ ಸರ್ವಕಾರ್ಯಪ್ರಸಾಧನಂ ।
ಚತುರ್ವರ್ಗಪ್ರದಂ ನಿತ್ಯಂ ಹರಿಭಕ್ತಿವಿವರ್ಧನಂ ॥ ೨೩ ॥
ನ ಚಾಧಿರ್ಭವತೇ ನೂನಂ ಯಾಮ್ಯಂ ತಸ್ಯ ಭಯಂ ನ ಹಿ ।
ಮಾಹಾತ್ಮ್ಯಂ ಪಠತೇ ಯತ್ರ ದ್ವಾರಕಾಯಾಃ ಸಮುದ್ಭವಂ ॥ ೨೪ ॥

---

೧೮. ಇದನ್ನು ಧರಿಸಿದರೆ ಬದುಕಿರುವವರೆಗೆ ಸುವರ್ಣ, ಗೋವು, ಭೂಮಿಗಳನ್ನು ದಾನಮಾಡಿದಂತಾಗುವುದು.

೧೯. ಕಲಿಯುಗದಲ್ಲಿ ಈ ದ್ವಾರಕಾಮಾಹಾತ್ಮ್ಯವನ್ನು ಕೇಳಿಸಿದವನು ಬದುಕಿರುವವರೆಗೆ ತಪ್ತ, ಕೃಚ್ಛ್ರ, ಮಹಾಕೃಚ್ಛ್ರ, ಮಾಸೋಪವಾಸ ಇವುಗಳನ್ನು ಮಾಡಿದವನಂತಾಗುವನು.

೨೦. ಕಲಿಯುಗದಲ್ಲಿ ದ್ವಾರಕಾಮಾಹಾತ್ಮ್ಯವನ್ನು ವಿಸ್ತರಿಸಿದವನು ಪಾಪನಾಶಕ್ಕಾಗಿ ಪ್ರಾಯಶ್ಚಿತ್ತಗಳನ್ನು ಮಾಡಿದವನಂತಾಗುವನು.

೨೧. ಮನುಷ್ಯನು ದ್ವಾರಕಾಮಾಹಾತ್ಮ್ಯವನ್ನು ಬರೆಯದಿರುವವರೆಗೆ ಅವನಲ್ಲಿ ಬ್ರಹ್ಮಹತ್ಯಾದಿ ಪಾಪಗಳಿರುವುವು.

೨೨. ಮನೆಯಲ್ಲಿ ದ್ವಾರಕಾಮಾಹಾತ್ಮ್ಯವನ್ನು ಬರೆದಿರುವವನಿಗೆ ಸಕಲದಾನಗಳಿಂದಲೂ, ಸಮಸ್ತತೀರ್ಥಸ್ನಾನಗಳಿಂದಲೂ ಏನು ಪ್ರಯೋಜನ ?

೨೩–೨೪. ಸಕಲ ದುಃಖಗಳನ್ನು ಪರಿಹರಿಸುವುದೂ, ಸಮಸ್ತಕಾರ್ಯಗಳನ್ನು ಸಾಧಿಸುವುದೂ, ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುವುದೂ, ಹರಿಭಕ್ತಿಯನ್ನು ಹೆಚ್ಚಿಸುವುದೂ ಆದ ದ್ವಾರಕಾಮಾಹಾತ್ಮ್ಯವನ್ನುಪಠಿಸುವವನಿಗೆ ಮಾನಸವ್ಯಥೆಯೂ, ಯಮಭಯವೂ ಇರುವುದಿಲ್ಲ.

ಲಿಖಿತಂ ತಿಷ್ಠತೇ ಯಸ್ಯ ಗೃಹೇ ತತ್ತೀರ್ಥಮೇವ ಚ ।
ಬಲಾಚ್ಛೃಣುಷ್ವ ಮಾಹಾತ್ಮ್ಯಂ ದ್ವಾರಕಾಯಾಃ ಸಮುದ್ಭವಂ ॥ ೨೫ ॥
ವಿಧಿಮಂತ್ರಕ್ರಿಯಾಹೀನಾಂ ಪೂಜಾಂ ಗೃಹ್ಣಾತಿ ಕೇಶವಃ ।
ಮಾಹಾತ್ಮ್ಯಂ ತಿಷ್ಠತೇ ನಿತ್ಯಂ ಲಿಖಿತಂ ಯಸ್ಯ ವೇಶ್ಮನಿ ।
ನ ತಸ್ಯಾಗಃ ಸಹಸ್ರೈಸ್ತು ಕೃತೈರ್ಲಿಪ್ಯತಿ ಮಾನವಃ ॥ ೨೬ ॥
ಯಃ ಪಠೇಚ್ಛೃಣುತೇವಾಪಿ ಮಾಹಾತ್ಮ್ಯಂ ದ್ವಾರಕಾಭವಂ ।
ನ ಭವೇದ್ಭೂತವೈಕಲ್ಯಂ ಧರ್ಮವೈಕಲ್ಯಮೇವ ಚ ॥ ೨೭ ॥
ಯಃ ಸ್ಮರೇತ್ಪ್ರಾತರುತ್ಥಾಯ ಮಾಹಾತ್ಮ್ಯಂ ದ್ವಾರಕಾಭವಂ ।
ದ್ವಾದಶೀನಾಂ ಚ ಸರ್ವಾಸಾಂ ಯದುಕ್ತಂ ಲಭತೇ ಫಲಂ ॥ ೨೮ ॥
ತ್ರಿದಶೈಃ ಪೂಜ್ಯತೇ ನಿತ್ಯಂ ವಂದ್ಯತೇ ಸಿದ್ಧಚಾರಣೈಃ ।
ಮಾಹಾತ್ಮ್ಯಂ ಪಠತೇ ಯೋ ವೈ ದ್ವಾರಕಾಯಾಃ ಸಮುದ್ಭವಂ ॥ ೨೯ ॥
ದ್ವಾರಕಾ ವಸತೇ ಯತ್ರ ತತ್ರ ವಿಷ್ಣುಃ ಸನಾತನಃ ।
ತತ್ರ ತೀರ್ಥಾನಿ ಸರ್ವಾಣಿ ಸರ್ವೇ ದೇವಾಃ ಸವಾಸವಾಃ ।
ಯಜ್ಞಾ ವೇದಾಶ್ಚ ಋಷಯಸ್ತ್ರೈಲೋಕ್ಯಂ ಸಚರಾಚರಂ ॥ ೩೦ ॥

---

೨೫. ದ್ವಾರಕಾಮಾಹಾತ್ಮ್ಯವನ್ನು ಬರೆದಿರುವ ಮನೆಯು ತೀರ್ಥವೆನಿಸಿಕೊಳ್ಳುವುದು. ದ್ವಾರಕಾಮಾಹಾತ್ಮ್ಯವನ್ನು ಬಲಾತ್ಕಾರದಿಂದ ಕೇಳು.

೨೬. ಯಾವನ ಮನೆಯಲ್ಲಿ ದ್ವಾರಕಾಮಾಹಾತ್ಮ್ಯವು ಬರೆಯಲ್ಪಟ್ಟಿರುವುದೋ, ಅವನ ಪೂಜೆಯು ವಿಧಿ, ಮಂತ್ರ, ಕ್ರಿಯೆಗಳಿಂದ ಹೀನವಾಗಿದ್ದರೂ ಅದನ್ನು ವಿಷ್ಣುವು ಸ್ವೀಕರಿಸುವನು. ಆ ಮನುಷ್ಯನು ಸಾವಿರ ಅಪವಾದಗಳನ್ನು ಮಾಡಿದ್ದರೂ ಅದರಿಂದ ಲಿಪ್ತನಾಗುವುದಿಲ್ಲ.

೨೭. ದ್ವಾರಕಾ ಮಾಹಾತ್ಮ್ಯವನ್ನು ಕೇಳುವವನಿಗೆ, ಅಥವಾ ಪಠಿಸುವವನಿಗೆ ಭೂತವ್ಯತ್ಯಾಸವೂ, ಧರ್ಮವ್ಯತ್ಯಾಸವೂ, ಆಗುವುದಿಲ್ಲ,

೨೮. ಬೆಳಗ್ಗೆ ಎದ್ದು ದ್ವಾರಕೆಯ ಮಾಹಾತ್ಮ್ಯವನ್ನು ಸ್ಮರಿಸುವವನು ಸಮಸ್ತ ದ್ವಾದಶಿಗಳ ಫಲವನ್ನು ಪಡೆಯುವನು.

೨೯. ದ್ವಾರಕಾಮಾಹಾತ್ಮ್ಯವನ್ನು ಪಠಿಸುವವನನ್ನು ದೇವತೆಗಳೂ, ಸಿದ್ಧಚಾರಣರೂ ನಿತ್ಯವೂ ಪೂಜಿಸುವರು.

೩೦. ದ್ವಾರಕೆಯಿರುವ ಸ್ಥಳದಲ್ಲಿ ಅನಾದಿಯಾದ ವಿಷ್ಣುವೂ, ಸಕಲ ತೀರ್ಥಗಳೂ, ಇಂದ್ರಾದಿ ದೇವತೆಗಳೂ, ಯಜ್ಞಗಳೂ ವೇದಗಳೂ, ಋಷಿಗಳೂ, ಚರಾಚರಾತ್ಮಕವಾದ ಮೂರುಲೋಕಗಳೂ ನೆಲೆಸುವುವು.

ಶಕ್ತೋ ಹಿ ದ್ವಾರಕಾಂ ಗಂತುಂ ಮಾನವೋ ನ ಹಿ ಪುತ್ರಕ ।
ಕೃಷ್ಣದರ್ಶನಜಂ ಪುಣ್ಯಂ ಮಾಹಾತ್ಮ್ಯಂ ಪಠತೋ ಭವೇತ್ ॥ ೩೧ ॥
ಸತ್ಯಂ ಶೌಚಂ ಶ್ರುತಂ ವಿತ್ತಂ ಸುಶೀಲಂ ಚ ಕ್ಷಮಾಽಽರ್ಜವಂ ।
ಸರ್ವಂ ಚ ನಿಷ್ಫಲಂ ತಸ್ಯ ಮಾಹಾತ್ಮ್ಯಂ ನ ಶೃಣೋತಿ ಯಃ ॥ ೩೨ ॥
ಷಣ್ಮಾಸೇ ಚ ಭವೇತ್ಪುತ್ರೋ ಲಕ್ಷ್ಮೀಶ್ಚೈವ ವಿವರ್ಧತೇ ।
ತಸ್ಯ ಯಃ ಶೃಣುತೇ ಭಕ್ತ್ಯಾ ಮಾಹಾತ್ಮ್ಯಂ ದ್ವಾರಕಾಭವಂ ॥ ೩೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಾರಕಾಮಾಹಾತ್ಮ್ಯಶ್ರವಣಾದಿಫಲವರ್ಣನಂ ನಾಮ
ದ್ವಿಚತ್ವಾರಿಂಶತ್ತಮೋಽಧ್ಯಾಯಃ

---

೩೧. ಪುತ್ರ ! ದ್ವಾರಕೆಗೆ ಹೋಗಲು ಅಶಕ್ತನಾದವನಿಗೆ ಅದರ ಮಾಹಾತ್ಮ್ಯವನ್ನು ಪಠಿಸುವುದರಿಂದಲೇ ಕೃಷ್ಣನನ್ನು ದರ್ಶನಮಾಡಿದ ಪುಣ್ಯವು ಲಭಿಸುವುದು.

೩೨. ಆ ಮಾಹಾತ್ಮ್ಯವನ್ನು ಕೇಳದವನ ಸತ್ಯ, ಶೌಚ, ಶಾಸ್ತ್ರ, ಶ್ರವಣ, ದ್ರವ್ಯ, ಒಳ್ಳೆಯ ನಡತೆ, ಸಹನೆ, ಋಜುತ್ವ ಇವುಗಳೆಲ್ಲ ನಿಷ್ಫಲವಾಗುವುವು.

೩೩. ದ್ವಾರಕಾಮಾಹಾತ್ಮ್ಯವನ್ನು ಭಕ್ತಿಯಿಂದ ಕೇಳುವವನಿಗೆ ಆರು ತಿಂಗಳುಗಳೊಳಗೆ ಪುತ್ರನು ಜನಿಸುವನು. ಸಂಪತ್ತು ಹೆಚ್ಚುವುದು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಹಾತ್ಮ್ಯದಲ್ಲಿ
ದ್ವಾರಕಾಮಾಹಾತ್ಮ್ಯಶ್ರವಣಾದಿಫಲವರ್ಣನವೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ತ್ರಿಚತ್ವಾರಿಂಶತ್ತಮೋಽಧ್ಯಾಯಃ

### ದ್ವಿಜಕೃತದ್ವಾರಕಾಯಾತ್ರಾವಿಧಿವರ್ಣನಂ

ಪ್ರಹ್ಲಾದ ಉವಾಚ :—

ಸಾವಿತ್ರೀಂ ಚ ಭವಾನೀಂ ಚ ದುರ್ಗಾಂ ಚೈವ ಸರಸ್ವತೀಂ ।
ಯೋಽರ್ಚಯೇತ್ತುಲಸೀಪತ್ರೈಃ ಸರ್ವಕಾಮಸಮನ್ವಿತಃ ॥ ೧ ॥
ಗೃಹೀತ್ವಾ ತುಲಸೀಪತ್ರಂ ಭಕ್ತ್ಯಾ ವಿಷ್ಣುಂ ಸಮರ್ಚಯೇತ್ ।
ಅರ್ಚಿತಂ ತೇನ ಸಕಲಂ ಸದೇವಾಸುರಮಾನುಷಂ ॥ ೨ ॥
ಚತುರ್ದಶ್ಯಾಂ ಮಹೇಶಾನಂ ಪೌರ್ಣಮಾಸ್ಯಾಂ ಪಿತಾಮಹಂ ।
ಯೋಽರ್ಚಯಂತಿ ಚ ಸಪ್ತಮ್ಯಾಂ ತುಲಸ್ಯಾ ಚ ಗಣಾಧಿಪಂ ॥ ೩ ॥
ಶಂಖೋದಕಂ ತೀರ್ಥವರಾದ್ವರಿಷ್ಠಂ
ಪಾದೋದಕಂ ತೀರ್ಥವರಾದ್ವರಿಷ್ಠಂ ।
ನೈವೇದ್ಯಶೇಷಂ ಕ್ರತುಕೋಟಿತುಲ್ಯಂ
ನಿರ್ಮಾಲ್ಯಶೇಷಂ ವ್ರತದಾನತುಲ್ಯಂ ॥ ೪ ॥

---

### ಕನ್ನಡದ ಅನುವಾದ

### ದ್ವಿಜಕೃತದ್ವಾರಕಾಯಾತ್ರಾವಿಧಿವರ್ಣನ

೧. ಪ್ರಹ್ಲಾದನು ಹೇಳುತ್ತಾನೆ :—ಸಾವಿತ್ರೀ, ಭವಾನೀ, ದುರ್ಗಾ, ಸರಸ್ವತೀ ಇವರನ್ನು ತುಲಸೀ ದಳಗಳಿಂದ ಅರ್ಚಿಸಿದವನು ಸಕಲೇಷ್ಟಾರ್ಥಗಳಿಂದ ಕೂಡಿರುವನು.

೨. ತುಲಸೀ ದಳದಿಂದ ಭಕ್ತಿಯಿಂದ ವಿಷ್ಣುವನ್ನು ಪೂಜಿಸಿದವನು ದೇವಾಸುರ ಮನುಷ್ಯರಿಂದ ಕೂಡಿದ ಸಕಲ ಭುವನವನ್ನು ಪೂಜಿಸಿದವನಂತಾಗುವನು.

೩. ಚತುರ್ದಶೀದಿನ ಮಹೇಶ್ವರನನ್ನೂ, ಹುಣ್ಣಿಮೆಯದಿನ ಬ್ರಹ್ಮನನ್ನೂ, ಸಪ್ತಮಿಯದಿನ ಗಣೇಶನನ್ನೂ ತುಲಸಿಯಿಂದ ಪೂಜಿಸಿದವರು ಸಕಲ ಲೋಕವನ್ನೂ ಪೂಜಿಸಿದವರಂತಾಗುವರು.

೪. ಶಂಖೋದಕ ಪಾದೋದಕಗಳು ಉತ್ತಮ ತೀರ್ಥಗಳಿಗಿಂತ ಉತ್ತಮವಾಗಿರುವುವು. ನೈವೇದ್ಯಶೇಷವು ಕೋಟಿಯಜ್ಞಗಳಿಗೂ, ನಿರ್ಮಾಲ್ಯಶೇಷವು ವ್ರತದಾನಗಳಿಗೂ ಸಮಾನವಾಗಿರುವುವು.

ಮುಕುಂದಾಶನಶೇಷಂ ತು ಯೋ ಭುನಕ್ತಿ ದಿನೇದಿನೇ ।
ಸಿಕ್ಥೇಸಿಕ್ಥೇ ಭವೇತ್ಪುಣ್ಯಂ ಚಾಂದ್ರಾಯಣಶತಾಧಿಕಂ ॥ ೫ ॥
ನೈವೇದ್ಯಶೇಷಂ ತುಲಸೀವಿಮಿಶ್ರಂ
ವಿಶೇಷತಃ ಪಾದಜಲೇನ ವಿಷ್ಣೋಃ ।
ಯೋಽಶ್ನಾತಿ ನಿತ್ಯಂ ಪುರುಷೋ ಮುರಾರೇಃ
ಪ್ರಾಪ್ನೋತಿ ಯಜ್ಞಾಯುತಕೋಟಿಪುಣ್ಯಂ ॥ ೬ ॥
ಯಃ ಶ್ರಾದ್ಧಕಾಲೇ ಹರಿಭುಕ್ತಶೇಷಂ
ದದಾತಿ ಭಕ್ತ್ಯಾ ಪಿತೃದೇವತಾನಾಂ ।
ತೇನೈವ ಪಿಂಡಾತ್ತುಲಸೀತಿಲೈರ್ವಿಮಿಶ್ರಾ-
ದಾಕಲ್ಪಕೋಟಿಂ ಪಿತರಃ ಸುತೃಪ್ತಾಃ ॥ ೭ ॥
ಸ್ನಾನಾರ್ಚನಕ್ರಿಯಾಕಾಲೇ ಘಂಟಾವಾದ್ಯಂ ಕರೋತಿ ಯಃ ।
ಪುರತೋ ವಾಸುದೇವಸ್ಯ ಗವಾಂ ಕೋಟಿಫಲಂ ಲಭೇತ್ ॥ ೮ ॥
ಸರ್ವವಾದ್ಯಮಯೀ ಘಂಟಾ ಕೇಶವಸ್ಯ ಸದಾ ಪ್ರಿಯಾ ।
ವಾದನಾಲ್ಲಭತೇ ಪುಣ್ಯಂ ಯಜ್ಞಕೋಟಿಫಲಂ ನರಃ ॥ ೯ ॥
ವಾದಿತ್ರಾಣಾಮಭಾವೇ ತು ಪೂಜಾಕಾಲೇ ಚ ಸರ್ವದಾ ।
ಘಂಟಾವಾದ್ಯಂ ನರೈಃ ಕಾರ್ಯಂ ಸರ್ವವಾದ್ಯಮಯೀ ಯತಃ ॥ ೧೦ ॥

---

೫. ವಿಷ್ಣುವಿನ ನೈವೇದ್ಯ ಶೇಷವನ್ನು ಪ್ರತಿದಿನವೂ ಭುಂಜಿಸುವವನಿಗೆ ಪ್ರತಿಯೊಂದು ಅಗಳಿನಲ್ಲಿಯೂ ನೂರು ಚಾಂದ್ರಾಯಣಗಳಿಗಿಂತ ಹೆಚ್ಚು ಪುಣ್ಯವು ದೊರೆಯುವುದು.

೬. ವಿಷ್ಣುವಿನ ನೈವೇದ್ಯ ಶೇಷವನ್ನು ಪಾದೋದಕ ತುಲಸಿಗಳೊಡನೆ ನಿತ್ಯವೂ ಭುಂಜಿಸುವವನಿಗೆ ಹತ್ತು ಸಾವಿರ ಕೋಟಿಯಜ್ಞಗಳ ಫಲವು ದೊರೆಯುವುದು.

೭. ಶ್ರಾದ್ಧಕಾಲದಲ್ಲಿ ಪಿತೃದೇವತೆಗಳಿಗೆ ಹರಿಯ ನೈವೇದ್ಯವನ್ನು ಭಕ್ತಿಯಿಂದ ಅರ್ಪಿಸಿದ ಮಾನವನ ಪಿತೃಗಳು ತಿಲಮಿಶ್ರವಾದ ಆ ಪಿಂಡಗಳಿಂದ ಕೋಟಿ ಕಲ್ಪಗಳ ವರೆಗೆ ತೃಪ್ತರಾಗಿರುವರು.

೮. ಶ್ರೀ ಕೃಷ್ಣನ ಅಭಿಷೇಕ, ಪೂಜೆಗಳ ಸಮಯದಲ್ಲಿ ಆವನ ಮುಂದೆ ಘಂಟೆಯನ್ನು ಬಾರಿಸುವವನಿಗೆ ಕೋಟಿ ಗೋವುಗಳನ್ನು ದಾನಮಾಡಿದ ಫಲವು ದೊರೆಯುವುದು.

೯. ಸಕಲ ವಾದ್ಯರೂಪವಾದ ಘಂಟೆಯು ವಿಷ್ಣುವಿಗೆ ಯಾವಾಗಲೂ ಪ್ರಿಯವಾದುದು. ಆದನ್ನು ಬಾರಿಸುವುದರಿಂದ ಮಾನವನು ಕೋಟಿ ಯಜ್ಞಗಳ ಫಲವನ್ನು ಪಡೆಯುವನು.

೧೦. ಪೂಜೆಯ ಸಮಯದಲ್ಲಿ ನೃತ್ಯ ಗೀತ ವಾದ್ಯಗಳನ್ನು ಮಾಡಲು ಸಾಧ್ಯವಿಲ್ಲದಿದ್ದರೆ ಸಕಲವಾದ್ಯರೂಪವಾದ ಘಂಟೆಯನ್ನು ಬಾರಿಸಬೇಕು.

ತುಲಸೀಕಾಷ್ಠಸಂಭೂತಂ ಚಂದನಂ ಯಚ್ಛತೇ ಹರೇಃ ।
ನಿರ್ದಹೇತ್ಪಾತಕಂ ಸರ್ವಂ ಪೂರ್ವಜನ್ಮಶತಾರ್ಜಿತಂ ॥ ೧೧ ॥
ದದಾತಿ ಪಿತೃಪಿಂಡೇಷು ತುಲಸೀಕಾಷ್ಠಚಂದನಂ ।
ಪಿತೄಣಾಂ ಜಾಯತೇ ತೃಪ್ತಿರ್ಗಯಾಶ್ರಾದ್ಧೇನ ವೈ ತಥಾ ॥ ೧೨ ॥
ಸರ್ವೇಷಾಮೇವ ದೇವಾನಾಂ ತುಲಸೀಕಾಷ್ಠಚಂದನಂ ।
ಪಿತೄಣಾಂ ಚ ವಿಶೇಷೇಣ ಸದಾಽಭೀಷ್ಟಂ ಹರೇಃ ಕಲೌ ॥ ೧೩ ॥
ಹರೇರ್ಭಾಗವತೋ ಭೂತ್ವಾ ತುಲಸೀಕಾಷ್ಠಚಂದನಂ ।
ನಾರ್ಪಯಂತಿ ಸದಾ ವಿಷ್ಣೋರ್ನ ತೇ ಭಾಗವತಾಃ ಕಲೌ ॥ ೧೪ ॥
ಶರೀರಂ ದಹ್ಯತೇ ಯಸ್ಯ ತುಲಸೀಕಾಷ್ಠವಹ್ನಿನಾ ।
ನೀಯಮಾನೋ ಯಮೇನಾಪಿ ವಿಷ್ಣುಲೋಕಂ ಸ ಗಚ್ಛತಿ ॥ ೧೫ ॥
ಯದ್ಯೇಕಂ ತುಲಸೀಕಾಷ್ಠಂ ಮಧ್ಯೇ ಕಾಷ್ಠಸ್ಯ ಯಸ್ಯ ಹಿ ।
ದಾಹಕಾಲೇ ಭವೇನ್ಮುಕ್ತಿಃ ಪಾಪಕೋಟಿಶತಾಯುತೈಃ ॥ ೧೬ ॥
ದಹ್ಯಮಾನಂ ನರಂ ದೃಷ್ಟ್ವಾ ತುಲಸೀಕಾಷ್ಠವಹ್ನಿನಾ ।
ಜನ್ಮಕೋಟಿಸಹಸ್ರೈಸ್ತು ತೋಷಿತಸ್ತೈರ್ಜನಾರ್ದನಃ ॥ ೧೭ ॥

---

೧೧. ತುಲಸೀಕಾಷ್ಠದ ಗಂಧವನ್ನು ವಿಷ್ಣುವಿಗೆ ಸಮರ್ಪಿಸುವವನ ಹಿಂದಿನ ನೂರು ಜನ್ಮಗಳ ಪಾಪಗಳೆಲ್ಲ ಪರಿಹಾರವಾಗುವುವು.

೧೨. ಪಿತೃಪಿಂಡಗಳಲ್ಲಿ ತುಲಸೀಕಾಷ್ಠದ ಗಂಧವನ್ನು ಅರ್ಪಿಸುವವನ ಪಿತೃಗಳಿಗೆ ಗಯಾಶ್ರಾದ್ಧಮಾಡಿದಂತೆ ತೃಪ್ತಿಯುಂಟಾಗುವುದು.

೧೩. ಕಲಿಯುಗದಲ್ಲಿ ತುಳಸೀಕಾಷ್ಠದ ಗಂಧವು ಸಕಲ ದೇವತೆಗಳಿಗೂ, ಪಿತೃಗಳಿಗೂ, ವಿಶೇಷವಾಗಿ ವಿಷ್ಣುವಿಗೂ ಪ್ರಿಯವಾದುದು.

೧೪. ಕಲಿಯುಗದಲ್ಲಿ ವಿಷ್ಣುಭಕ್ತರಾಗಿ ಆ ವಿಷ್ಣುವಿಗೆ ತುಲಸೀಕಾಷ್ಠದ ಗಂಧವನ್ನು ಯಾವಾಗಲೂ ಸಮರ್ಪಿಸದವರು ವಿಷ್ಣುಭಕ್ತರಲ್ಲ.

೧೫. ಯಾವನ ಶರೀರವನ್ನು ತುಲಸೀಕಾಷ್ಠದ ಬೆಂಕಿಯು ಸುಡುವುದೊ ಅವನು ಯಮನಿಂದ ಒಯ್ಯಲ್ಪಡುತ್ತಿದ್ದರೂ ವಿಷ್ಣುಲೋಕಕ್ಕೆ ಹೋಗುವನು.

೧೬. ಶರೀರ ದಹನಕಾಲದಲ್ಲಿ ಇತರ ಕಟ್ಟಿಗೆಗಳ ನಡುವೆ ಒಂದು ತುಲಸೀಕಾಷ್ಠ ವಿದ್ದರೂ ಅವನು ನೂರುಕೋಟಿಪಾಪಗಳಿಂದ ಮುಕ್ತನಾಗುವನು.

೧೭. ತುಳಸೀಕಾಷ್ಠದ ಬೆಂಕಿಯಿಂದ ಸುಡಲ್ಪಡುತ್ತಿರುವ ಮಾನವನನ್ನು ನೋಡಿದ ಮನುಷ್ಯನು ಅನೇಕಕೋಟಿ ಜನ್ಮಗಳಲ್ಲಿ ವಿಷ್ಣುವನ್ನು ಸಂತೋಷಗೊಳಿಸಿದವನಂತಾಗುವನು.

ದಹ್ಯಮಾನಂ ನರಃ ಸರ್ವೇ ತುಲಸೀಕಾಷ್ಠವಹ್ನಿನಾ ।
ವಿಮಾನಸ್ಥಾಃ ಸುರಗಣಾಃ ಕ್ಷಿಪಂತಿ ಕುಸುಮಾಂಜಲೀನ್ ॥ ೧೮ ॥
ನೃತ್ಯಂತ್ಯೋಽಪ್ಸರಸೋ ಹೃಷ್ಟಾ ಗೀತಂ ಗಾಯಂತಿ ಸುಸ್ವರಂ ।
ಜ್ವಲತೇ ಯತ್ರ ದೈತ್ಯೇಂದ್ರ ತುಲಸೀಕಾಷ್ಠಪಾವಕಃ ॥ ೧೯ ॥
ಕುರುತೇ ವೀಕ್ಷಣಂ ವಿಷ್ಣುಃ ಸಂತುಷ್ಟಃ ಸಹ ಶಂಭುನಾ ॥ ೨೦ ॥
ಗೃಹೀತ್ವಾ ತಂ ಕರೇ ಶೌರಿಃ ಪುರುಷಂ ಸ್ವಯಮಗ್ರತಃ ।
ಮಾರ್ಜತೇ ತಸ್ಯ ಪಾಪಾನಿ ಪಶ್ಯತಾಂ ತ್ರಿದಿವೌಕಸಾಂ ।
ಮಹೋತ್ಸವಂ ಚ ಕೃತ್ವಾ ತು ಜಯಶಬ್ದಪುರಃಸರಂ ॥ ೨೧ ॥

ಸೂತ ಉವಾಚ :—

ಪ್ರಹ್ಲಾದೇನೋದಿತಂ ಶ್ರುತ್ವಾ ಮಾಹಾತ್ಮ್ಯಂ ದ್ವಾರಕಾಭವಂ ।
ಪ್ರಹೃಷ್ಟಾ ಋಷಯಃ ಸರ್ವೇ ತಥಾ ದೈತ್ಯೇಶ್ವರೋ ಬಲಿಃ ॥ ೨೨ ॥
ತತಃ ಸರ್ವೇಽಭಿಸಂಧ್ಯೈನಂ ಪ್ರಹ್ಲಾದಂ ದೈತ್ಯಪುಂಗವಂ ।
ಉದ್ಯುಕ್ತಾ ದ್ವಾರಕಾಂ ಗತ್ವಾ ದ್ರಷ್ಟುಂ ಕೃಷ್ಣಮುಖಾಂಬುಜಂ ॥ ೨೩ ॥
ತತಸ್ತೇ ಬಲಿನಾ ಸಾರ್ಧಂ ಮುನಯಃ ಸಂಶಿತವ್ರತಾಃ ।
ಆಗತ್ಯ ದ್ವಾರಕಾಂ ಸ್ನಾತ್ವಾ ಗೋಮತ್ಯಾಂ ವಿಧಿಪೂರ್ವಕಂ ॥ ೨೪ ॥
ಕೃಷ್ಣಂ ದೃಷ್ಟ್ವಾ ಸಮಭ್ಯರ್ಚ್ಯ ಕೃತ್ವಾ ಯಾತ್ರಾಂ ಯಥಾವಿಧಿ ।
ದತ್ತ್ವಾ ದಾನಾನಿ ಬಹುಶಃ ಕೃತಕೃತ್ಯಾಸ್ತತೋಽಭವನ್ ॥ ೨೫ ॥

---

೧೮. ಮನುಷ್ಯನನ್ನು ತುಲಸೀಕಾಷ್ಠದ ಬೆಂಕಿಯು ಸುಡುತ್ತಿರಲು ಅವನಮೇಲೆ ವಿಮಾನದಲ್ಲಿ ಕುಳಿತಿರುವ ದೇವತೆಗಳು ಹೂವುಗಳನ್ನು ಸುರಿಸುವರು.

೧೯. ತುಲಸೀ ಕಾಷ್ಠದಬೆಂಕಿಯು ಉರಿಯುತ್ತಿರುವ ಸ್ಥಳದಲ್ಲಿ ಅಪ್ಸರಸ್ತ್ರೀಯರು ಇಂಪಾಗಿ ಹಾಡುತ್ತ ಸಂತೋಷದಿಂದ ಕುಣಿಯುವರು.

೨೦—೨೧. ವಿಷ್ಣುವು ಸಂತುಷ್ಟನಾಗಿ ಶಿವನೊಡನೆ ಅವನನ್ನು ನೋಡುವನು. ವಿಷ್ಣುವು ಆ ಮನುಷ್ಯನನ್ನು ತಾನೇ ಕೈಹಿಡಿದುಕೊಂಡು ದೇವತೆಗಳು ನೋಡುತ್ತಿರುವಾಗಲೇ ಮಹೋತ್ಸವವನ್ನು ಮಾಡಿ ಜಯಶಬ್ದಸಹಿತವಾಗಿ ಅವನ ಪಾಪಗಳನ್ನು ಪರಿಹರಿಸುವನು.

೨೨. ಸೂತನು ಹೇಳುತ್ತಾನೆ :—ಸಮಸ್ತ ಮುನಿಗಳೂ, ಬಲಿಯೂ ಸಹ ಪ್ರಹ್ಲಾದನು ಹೇಳಿದ ದ್ವಾರಕಾಮಾಹಾತ್ಮ್ಯವನ್ನು ಕೇಳಿ ಹರ್ಷಗೊಂಡರು.

೨೩. ಬಳಿಕ ಅವರೆಲ್ಲರೂ ದೈತ್ಯಶ್ರೇಷ್ಠನಾದ ಪ್ರಹ್ಲಾದನನ್ನು ಹೊಗಳಿ ದ್ವಾರಕೆಗೆ ಹೋಗಿ ಕೃಷ್ಣನ ಮುಖಕಮಲವನ್ನು ನೋಡಲುದ್ಯುಕ್ತರಾದರು.

೨೪—೨೫. ಅನಂತರ ತೀಕ್ಷ್ಣವ್ರತಿಗಳಾದ ಆ ಮುನಿಗಳು ಬಲಿಯೊಡನೆ ದ್ವಾರಕೆಗೆ ಬಂದು ಗೋಮತಿಯಲ್ಲಿ ವಿಧಿಯಂತೆ ಮಿಂದು ಕೃಷ್ಣನನ್ನು ನೋಡಿ ಅರ್ಚಿಸಿ ವಿಧಿಯಂತೆ ಯಾತ್ರೆಗೈದು ಬಹಳವಾಗಿ ದಾನಗಳನ್ನಿತ್ತು ಧನ್ಯರಾದರು.

ಜಗ್ಮುಃ ಸ್ವೀಯಾನಿ ಸ್ಥಾನಾನಿ ಬಲಿಃ ಪಾತಾಲಮಾಯಯೌ ।
ಪ್ರಹ್ಲಾದಂ ಚ ಪ್ರಣಮ್ಯಾಶು ಮೇನೇ ಸ್ವಸ್ಯ ಕೃತಾರ್ಥತಾಂ ॥ ೨೬ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ದ್ವಿಜಕೃತದ್ವಾರಕಾಯಾತ್ರಾವಿಧಿವರ್ಣನಂ ನಾಮ
ತ್ರಿಚತ್ವಾರಿಂಶತ್ತಮೋಽಧ್ಯಾಯಃ

---

೨೬. ತರುವಾಯ ಆ ಮುನಿಗಳು ತಮ್ಮ ಸ್ಥಾನಗಳಿಗೆ ತೆರಳಿದರು. ಬಲಿಯು ಪಾತಾಳಕ್ಕೆ ಹೋಗಿ ಪ್ರಹ್ಲಾದನನ್ನು ಶೀಘ್ರವಾಗಿ ವಂದಿಸಿ ನಾನು ಕೃತಾರ್ಥನಾದೆನೆಂದು ತಿಳಿದನು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ದ್ವಿಜಕೃತದ್ವಾರಕಾಯಾತ್ರಾವಿಧಿವರ್ಣನವೆಂಬ
ನಲವತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

## ಸೂತಸತ್ಕಾರವೃತ್ತಾಂತವರ್ಣನಂ

ಸೂತ ಉವಾಚ :—

ಏತತ್ಪುರಾಣಮಖಿಲಂ ಪುರಾ ಸ್ಕಂದೇನ ಭಾಷಿತಂ ।
ಭೃಗವೇ ಬ್ರಹ್ಮಪುತ್ರಾಯ ತಸ್ಮಾಲ್ಲೇಭೇ ತಥಾಂಗಿರಾಃ ॥ ೧ ॥
ತತಶ್ಚ ಚ್ಯವನಃ ಪ್ರಾಪ ಋಚೀಕಶ್ಚ ತತೋ ಮುನಿಃ ।
ಏವಂ ಪರಂಪರಾಪ್ರಾಪ್ತಂ ಸರ್ವೇಷು ಭುವನೇಷ್ವಪಿ ॥ ೨ ॥
ಸ್ಕಾಂದಂ ಪುರಾಣಮೇತಚ್ಚ ಕುಮಾರೇಣ ಪುರೋದ್ಧೃತಂ ।
ಯಃ ಶೃಣೋತಿ ಸತಾಂ ಮಧ್ಯೇ ನರಃ ಪಾಪಾದ್ವಿಮುಚ್ಯತೇ ॥ ೩ ॥
ಇದಂ ಪುರಾಣಮಾಯುಷ್ಯಂ ಚತುರ್ವರ್ಣಸುಖಪ್ರದಂ ।
ನಿರ್ಮಿತಂ ಷಣ್ಮುಖೇನೇಹ ನಿಯತಂ ಸುಮಹಾತ್ಮನಾ ॥ ೪ ॥

---

### ಕನ್ನಡದ ಅನುವಾದ

### ಸೂತಸತ್ಕಾರವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ :— ಈ ಪುರಾಣವನ್ನೆಲ್ಲ ಹಿಂದೆ ಸ್ಕಂದನು ಬ್ರಹ್ಮ ತನಯನಾದ ಭೃಗುಮುನಿಗೆ ಹೇಳಿದನು. ಅವನಿಂದ ಅಂಗಿರಸ್ಸು ಪಡೆದನು.

೨. ಬಳಿಕ ಚ್ಯವನನೂ, ಅವನಿಂದ ಋಚೀಕ ಮುನಿಯೂ ಹೊಂದಿದರು. ಹೀಗೆ ಈ ಪುರಾಣವು ಸಕಲ ಲೋಕಗಳಲ್ಲಿಯೂ ಪರಂಪರೆಯಿಂದ ಬಂದಿರುವುದು.

೩. ಹಿಂದೆ ಕುಮಾರನು ಹೇಳಿದ ಈ ಸ್ಕಾಂದಪುರಾಣವನ್ನು ಸಜ್ಜನರ ಮಧ್ಯದಲ್ಲಿ ಕೇಳುವ ಮನುಷ್ಯನು ಪಾಪಮುಕ್ತನಾಗುವನು.

೪. ಆಯುಷ್ಯವನ್ನುಂಟುಮಾಡುವುದೂ, ನಾಲ್ಕು ಜಾತಿಯವರಿಗೂ ಸುಖ ವನ್ನೀಯುವುದೂ ಆದ ಈ ಪುರಾಣವನ್ನು ಮಹಾತ್ಮನಾದ ಷಣ್ಮುಖನು ನಿರ್ಮಿ ಸಿರುವನು.

ಏವಮೇತತ್ಸಮಾಖ್ಯಾತಮಾಖ್ಯಾನಂ ಭದ್ರಮಸ್ತು ವಃ ॥ ೫ ॥
ಮಂಡಿತಂ ಸಪ್ತಭಿಃ ಖಂಡೈಃ ಸ್ಕಾಂದಂ ಯಃ ಶೃಣುಯಾನ್ನರಃ ।
ನ ತಸ್ಯ ಪುಣ್ಯಸಂಖ್ಯಾನಂ ಕರ್ತುಂ ಶಕ್ಯೇತ ಕೇನಚಿತ್ ॥ ೬ ॥
ಯ ಇದಂ ಧರ್ಮಮಾಹಾತ್ಮ್ಯಂ ಬ್ರಾಹ್ಮಣಾಯ ಪ್ರಯಚ್ಛತಿ ।
ಸ್ವರ್ಗಲೋಕೇ ವಸೇತ್ತಾವದ್ಯಾವದಕ್ಷರಸಂಖ್ಯಯಾ ॥ ೭ ॥
ಯಥಾ ಹಿ ವರ್ಷತೋ ಧಾರಾ ಯಥಾ ವಾ ದಿವಿ ತಾರಕಾಃ ।
ಗಂಗಾಯಾಂ ಸಿಕತಾ ಯದ್ವತ್ತದ್ವತ್ಸಂಖ್ಯಾ ನ ವಿದ್ಯತೇ ॥ ೮ ॥
ಯೋ ನರಃ ಶೃಣುಯಾದ್ಭಕ್ತ್ಯಾ ದಿನಾನಿ ಚ ಕಿಂಯಂತಿ ವೈ ।
ಸರ್ವಾರ್ಥಸಿದ್ಧೋ ಭವತಿ ಯ ಏತತ್ಪಠತೇಽನರಃ ॥ ೯ ॥
ಪುತ್ರಾರ್ಥೀ ಲಭತೇ ಪುತ್ರಾನ್ಧನಾರ್ಥೀ ಲಭತೇ ಧನಂ ।
ಲಭತೇ ಪತಿಕಾಮಾ ಯಾ ಪತಿಂ ಕನ್ಯಾ ಮನೋರಮಂ ॥ ೧೦ ॥
ಸಮಾಗಮಂ ಲಭಂತೇ ಚ ಬಾಂಧವಾಶ್ಚ ಪ್ರವಾಸಿಭಿಃ ।
ಸ್ಕಾಂದಂ ಪುರಾಣಂ ಶ್ರುತ್ವಾ ತು ಪುಮಾನಾಪ್ನೋತಿ ವಾಂಛಿತಂ ॥ ೧೧ ॥
ಶೃಣ್ವತಃ ಪಠತಶ್ಚೈವ ಸರ್ವಕಾಮಪ್ರದಂ ನೃಣಾಂ ॥ ೧೨ ॥

---

೫–೬. ಹೀಗೆ ಈ ಪುರಾಣವನ್ನು ಹೇಳಿದ್ದೇನೆ. ನಿಮಗೆ ಶುಭವಾಗಲಿ. ಏಳು ಖಂಡಗಳಿಂದ ಮಂಡಿತವಾದ ಈ ಸ್ಕಾಂದ ಪುರಾಣವನ್ನು ಕೇಳಿದ ಮಾನವನ ಪುಣ್ಯವನ್ನು ಎಣಿಸಲು ಯಾರಿಗೂ ಸಾಧ್ಯವಿಲ್ಲ.

೭. ಈ ಸ್ಕಾಂದಪುರಾಣದ ಪುಸ್ತಕವನ್ನು ಬ್ರಾಹ್ಮಣನಿಗೆ ದಾನಮಾಡುವವನು ಇದರಲ್ಲಿರುವ ಅಕ್ಷರ ಸಂಖ್ಯೆಯಷ್ಟು ವರ್ಷಕಾಲ ಸ್ವರ್ಗಲೋಕದಲ್ಲಿ ವಾಸಿಸುವನು.

೮. ಮಳೆಯಧಾರೆ, ಆಕಾಶದಲ್ಲಿರುವ ನಕ್ಷತ್ರ, ಗಂಗೆಯಲ್ಲಿರುವ ಮರಳು ಇವುಗಳಂತೆ ಇದರಿಂದಾಗುವ ಪುಣ್ಯಸಂಖ್ಯೆಯು ಮಿತವಿಲ್ಲದಿರುವುದು.

೯. ಈ ಪುರಾಣವನ್ನು ಭಕ್ತಿಯಿಂದ ಕೆಲವು ದಿನಗಳಮಟ್ಟಿಗಾದರೂ ಕೇಳಿದವನೂ, ಪಠಿಸಿದವನೂ ಸಕಲೇಷ್ಟಾರ್ಥಗಳನ್ನು ಪಡೆಯುವನು.

೧೦. ಪುತ್ರರನ್ನು ಅಪೇಕ್ಷಿಸುವ ಮಾನವನು ಪುತ್ರರನ್ನೂ, ಧನವನ್ನು ಬಯಸುವವನು ಧನವನ್ನೂ, ಹೊಂದುವನು ಪತಿಯನ್ನು ಅಪೇಕ್ಷಿಸುವ ಕನ್ಯೆಯು ಸುಂದರನಾದ ಪತಿಯನ್ನು ಪಡೆಯುವಳು.

೧೧. ಬಾಂಧವರು ದೇಶಾಂತರಕ್ಕೆ ಹೋದವರೊಡನೆ ಸೇರಿ ಸಂತೋಷಪಡುಸೇರಿವರು. ಈ ಪುರಾಣವನ್ನು ಕೇಳಿದ ಮಾನವನು ಇಷ್ಟಾರ್ಥವನ್ನು ಹೊಂದುವನು.

೧೨. ಇದು ಕೇಳುವ ಮತ್ತು ಹೇಳುವ ಮನುಷ್ಯರಿಗೆ ಸಮಸ್ತೇಷ್ಟಾರ್ಥಗಳನ್ನು ನೀಡುವುದು.

ಪುಣ್ಯಂ ಶ್ರುತ್ವಾ ಪುರಾಣಂ ವೈ ದೀರ್ಘಮಾಯುಶ್ಚ ವಿಂದತಿ ।
ಮಹೀಂ ವಿಜಯತೇ ರಾಜಾ ಶತ್ರೂಂಶ್ಚಾಪ್ಯಧಿತಿಷ್ಠತಿ ॥ ೧೩ ॥
ವೇದವಿಚ್ಚ ಭವೇದ್ವಿಪ್ರಃ ಕ್ಷತ್ರಿಯೋ ರಾಜ್ಯಮಾಪ್ನುಯಾತ್ ।
ಧನಂ ಧಾನ್ಯಂ ತಥಾ ವೈಶ್ಯಃ ಶೂದ್ರಃ ಸುಖಮವಾಪ್ನುಯಾತ್ ॥ ೧೪ ॥
ಅಧ್ಯಾಯಮೇಕಂ ಶೃಣುಯಾಚ್ಛ್ಲೋಕಂ ಶ್ಲೋಕಾರ್ಧಮೇವ ವಾ ।
ಯಃ ಶ್ಲೋಕಪಾದಂ ಶೃಣುಯಾದ್ವಿಷ್ಣುಲೋಕಂ ಸ ಗಚ್ಛತಿ ॥ ೧೫ ॥
ಶ್ರುತ್ವಾ ಪುರಾಣಮೇತದ್ಧಿ ವಾಚಕಂ ಯಸ್ತು ಪೂಜಯೇತ್ ।
ತೇನ ಬ್ರಹ್ಮಾ ಚ ವಿಷ್ಣುಶ್ಚ ರುದ್ರಶ್ಚೈವ ಪ್ರಪೂಜಿತಃ ॥ ೧೬ ॥
ಏಕಮಪ್ಯಕ್ಷರಂ ಯಸ್ತು ಗುರುಃ ಶಿಷ್ಯೇ ನಿವೇದಯೇತ್ ।
ಪೃಥಿವ್ಯಾಂ ನಾಸ್ತಿ ತದ್ದ್ರವ್ಯಂ ಯದ್ದತ್ವಾ ಹ್ಯನೃಣೀ ಭವೇತ್ ॥ ೧೭ ॥
ಅತಃ ಸಂಪೂಜನೀಯಸ್ತು ವ್ಯಾಸಃ ಶಾಸ್ತ್ರೋಪದೇಶಕಃ ।
ಗೋಭೂಹಿರಣ್ಯವಸ್ತ್ರಾದ್ಯೈರ್ಭೋಜನೈಃ ಸಾರ್ವಕಾಮಿಕೈಃ ॥ ೧೮ ॥
ಯ ಏವಂ ಭಕ್ತಿಯುಕ್ತಸ್ತು ಶ್ರುತ್ವಾ ಶಾಸ್ತ್ರಮನುತ್ತಮಂ ।
ಪೂಜಯೇದುಪದೇಷ್ಟಾರಂ ಸ ಶೈವಂ ಪದಮಾಪ್ನುಯಾತ್ ॥ ೧೯ ॥

---

೧೩. ಈ ಪುಣ್ಯಕರವಾದ ಈ ಪುರಾಣವನ್ನು ಕೇಳಿದವನು ದೀರ್ಘಾಯುಷ್ಮಂತನಾಗುವನು. ದೊರೆಯು ಶತ್ರುಗಳನ್ನು ಹಿಮ್ಮೆಟ್ಟಿಸಿ ಭೂಮಿಯನ್ನು ಜಯಿಸುವನು.

೧೪. ಇದನ್ನು ಕೇಳಿದ ಬ್ರಾಹ್ಮಣನು ವೇದಜ್ಞನಾಗುವನು. ಕ್ಷತ್ರಿಯನು ರಾಜ್ಯವನ್ನು ಪಡೆಯುವನು. ವೈಶ್ಯನು ಧನ ಧಾನ್ಯಗಳನ್ನೂ, ಶೂದ್ರನು ಸುಖವನ್ನೂ ಹೊಂದುವನು

೧೫. ಈ ಪುರಾಣದ ಒಂದು ಅಧ್ಯಾಯವನ್ನಾಗಲಿ, ಒಂದು ಶ್ಲೋಕವನ್ನಾಗಲಿ, ಶ್ಲೋಕಾರ್ಧವನ್ನಾಗಲಿ, ಶ್ಲೋಕಪಾದವನ್ನಾಗಲಿ ಕೇಳಿದವನು ವಿಷ್ಣುಲೋಕಕ್ಕೆ ತೆರಳುವನು.

೧೬. ಈ ಪುರಾಣವನ್ನು ಕೇಳಿ ಇದನ್ನು ಹೇಳಿದ ಪೌರಾಣಿಕನನ್ನು ಪೂಜಿಸಿದವನು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಪೂಜಿಸಿದವನಂತಾಗುವನು.

೧೭. ಗುರುವು ಇದರ ಒಂದಕ್ಷರವನ್ನು ಶಿಷ್ಯನಿಗೆ ಉಪದೇಶಿಸಿದರೂ ಆ ಗುರುವಿನ ಋಣವನ್ನು ಪರಿಹಾರಮಾಡಿಕೊಳ್ಳಲು ಪ್ರತಿಯಾಗಿ ಕೊಡತಕ್ಕ ಪದಾರ್ಥವೇ ಲೋಕದಲ್ಲಿರುವುದಿಲ್ಲ.

೧೮. ಆದ್ದರಿಂದ ಶಾಸ್ತ್ರೋಪದೇಶವನ್ನು ಮಾಡಿದ ವ್ಯಾಸನನ್ನೂ ಪೌರಾಣಿಕನನ್ನು ಗೋವು, ಭೂಮಿ, ಹಿರಣ್ಯ, ವಸ್ತ್ರಮೊದಲಾದುವುಗಳಿಂದಲೂ, ಸಮಸ್ತ ವಿಧವಾದ ಇಷ್ಟಭೋಜನಗಳಿಂದಲೂ ಪೂಜಿಸಬೇಕು.

೧೯. ಈ ಶಾಸ್ತ್ರವನ್ನು ಭಕ್ತಿಯಿಂದ ಕೇಳಿ ಉಪದೇಶಮಾಡಿದ ಗುರುವನ್ನು ಪೂಜಿಸಿದವನು ಶಿವನ ಸ್ಥಾನಕ್ಕೆ ತೆರಳುವನು.

ಪುರಾಣಶ್ರವಣಾದೇವ ಅನೇಕಭವಸಂಚಿತಂ ।
ಪಾಪಂ ಪ್ರಶಮಮಾಯಾತಿ ಸರ್ವತೀರ್ಥಫಲಂ ಲಭೇತ್ ॥ ೨೦ ॥
ಅಮೃತೇನೋದರಸ್ಥೇನ ಮ್ರಿಯಂತೇ ಸರ್ವದೇವತಾಃ ।
ಕಂಠಸ್ಥಿತವಿಷೇಣಾಪಿ ಯೋ ಜೀವತಿ ಸ ಪಾತು ವಃ ॥ ೨೧ ॥
ವ್ಯಾಸ ಉವಾಚ :—
ಇತ್ಯುಕ್ತ್ವೋಪರತೇ ಸೂತೇ ಶೌನಕಾದಿಮಹರ್ಷಯಃ ।
ಸಂಪೂಜ್ಯ ವಿಧಿವತ್ಸೂತಂ ಪ್ರಶಸ್ಯಾಭ್ಯನಂದಯನ್ ॥ ೨೨ ॥
ಋಷಯ ಊಚುಃ :—
ಕಥಿತೋ ಭವತಾ ಸರ್ಗಃ ಪ್ರತಿಸರ್ಗಸ್ತಥೈವ ಚ ।
ವಂಶಾನುವಂಶಚರಿತಂ ಪುರಾಣಾನಾಮನುಕ್ರಮಃ ॥ ೨೩ ॥
ಮನ್ವಂತರಪ್ರಮಾಣಂ ಚ ಬ್ರಹ್ಮಾಂಡಸ್ಯ ಚ ವಿಸ್ತರಃ ।
ಜ್ಯೋತಿಶ್ಚಕ್ರಸ್ವರೂಪಂ ಚ ಯಥಾವದನುವರ್ಣಿತಂ ॥ ೨೪ ॥
ಧನ್ಯಾಃ ಸ್ಮ ಕೃತಕೃತ್ಯಾಃ ಸ್ಮ ವಯಂ ತವ ಮುಖಾಂಬುಜಾತ್ ।
ಸ್ಕಾಂದಂ ಮಹಾಪುರಾಣಂ ಹಿ ಶ್ರುತ್ವಾ ಸೂತಾತಿಹರ್ಷಿತಾಃ ॥ ೨೫ ॥
ವಯಂ ಮಹರ್ಷಯೋ ವಿಪ್ರಾಃ ಪ್ರದದ್ಮೋಽದ್ಯ ತವಾಽಽಶಿಷಃ ।
ವ್ಯಾಸಶಿಷ್ಯ ಮಹಾಪ್ರಾಜ್ಞ ಚಿರಂ ಜೀವ ಸುಖೀ ಭವ ॥ ೨೬ ॥

---

೨೦. ಈ ಪುರಾಣವನ್ನು ಕೇಳುವುದರಿಂದಲೆ ಅನೇಕ ಜನ್ಮಗಳಲ್ಲಿ ಸಗಿದ ಪಾಪವು ಪರಿಹಾರವಾಗಿ ಸಕಲ ತೀರ್ಥಗಳ ಫಲವು ದೊರೆಯುವುದು.

೨೧. ಹೊಟ್ಟೆಯಲ್ಲಿ ಅಮೃತವಿದ್ದರೂ ಸಕಲ ದೇವತೆಗಳೂ ಮೃತರಾಗುವರು. ಕಂಠದಲ್ಲಿ ವಿಷವಿದ್ದರೂ ಜೀವಿಸುತ್ತಿರುವ ಶಿವನು ನಿಮ್ಮನ್ನು ಪೊರೆಯಲಿ.

೨೨. ವ್ಯಾಸನು ಹೇಳುತ್ತಾನೆ:—ಸೂತನು ಹೀಗೆ ಹೇಳಿ ಸುಮ್ಮನಾಗಲು ಶೌನಕಾದಿಮಹರ್ಷಿಗಳು ಅವನನ್ನು ವಿಧಿಯಂತೆ ಪೂಜಿಸಿ, ಹೊಗಳಿ, ಅಭಿನಂದಿಸಿದರು.

೨೩—೨೪. ಋಷಿಗಳು ಹೇಳುತ್ತಾರೆ:— ನೀನು ನಮಗೆ ಸರ್ಗ ಪ್ರತಿಸರ್ಗಗಳನ್ನೂ, ವಂಶಾನು ವಂಶ ಚರಿತೆಯನ್ನೂ, ಪುರಾಣಗಳ ಅನುಕ್ರಮಣಿಕೆಯನ್ನೂ, ಮನ್ವಂತರ ಪ್ರಮಾಣವನ್ನೂ, ಬ್ರಹ್ಮಾಂಡದ ವಿಸ್ತಾರವನ್ನೂ, ನಕ್ಷತ್ರಚಕ್ರದ ಸ್ವರೂಪವನ್ನೂ ಯಥಾಸ್ಥಿತವಾಗಿ ಹೇಳಿರುವೆ.

೨೫. ಸೂತ ! ನಾವು ನಿನ್ನ ಮುಖಾಂಬುಜದಿಂದ ಸ್ಕಾಂದಮಹಾಪುರಾಣವನ್ನು ಶ್ರವಣಮಾಡಿ ಧನ್ಯರೂ, ಕೃತಾರ್ಥರೂ ಅತಿಸಂತುಷ್ಟರೂ ಆಗಿದ್ದೇವೆ.

೨೬. ಮಹರ್ಷಿಗಳಾದ ನಾವು ನಿನ್ನನ್ನು ಈಗ ಆಶೀರ್ವದಿಸುವೆವು. ವ್ಯಾಸಶಿಷ್ಯನೂ, ಅತ್ಯಂತ ಜ್ಞಾನಿಯೂ ಆದ ನೀನು ಬಹುಕಾಲ ಸುಖದಿಂದ ಜೀವಿಸು.

ಇತಿ ದತ್ವಾಽಽಶಿಷಸ್ತಸ್ಮೈ ದತ್ವಾ ವಾಸೋವಿಭೂಷಣಂ ।
ವಿಸೃಜ್ಯ ಲೋಮಶಂ ಸೂತಂ ಯಜ್ಞಕರ್ಮಾಣ್ಯಥಾಚರನ್ ॥ ೨೭ ॥

ಇತಿ ಶ್ರೀಸ್ಕಾಂದೇ ಮಹಾಪುರಾಣ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಸಪ್ತಮೇ
ಪ್ರಭಾಸಖಂಡೇ ಚತುರ್ಥೇ ದ್ವಾರಕಾಮಾಹಾತ್ಮ್ಯೇ
ಸೂತಸತ್ಕಾರವೃತ್ತಾಂತವರ್ಣನಂ ನಾಮ
ಚತುಶ್ಚತ್ವಾರಿಂಶತ್ತಮೋಽಧ್ಯಾಯಃ

---

೨೭. ಆ ಮಹರ್ಷಿಗಳು ಹೀಗೆ ಆ ಸೂತನನ್ನು ಆಶೀರ್ವದಿಸಿ ವಸ್ತ್ರಭೂಷಣಗಳನ್ನಿತ್ತು ಆವನನ್ನು ಕಳುಹಿಸಿ ಕೊಟ್ಟು ತಾವು ಯಜ್ಞಕರ್ಮದಲ್ಲಿ ತೊಡಗಿದರು.

ಇಲ್ಲಿಗೆ ಎಂಬತ್ತೊಂದು ಸಾವಿರಗ್ರಂಥಗಳುಳ್ಳ ಸ್ಕಾಂದ ಮಹಾಪುರಾಣದ ಏಳನೆಯ
ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯದಲ್ಲಿ
ಸೂತಸತ್ಕಾರವೃತ್ತಾಂತವರ್ಣನವೆಂಬ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

ದ್ವಾರಕಾಮಾಹಾತ್ಮ್ಯಂ ಸಂಪೂರ್ಣಂ

॥ ಇತಿ ಶ್ರೀ ಸ್ಕಾಂದಮಹಾಪುರಾಣಂ ಸಂಪೂರ್ಣಂ ॥

॥ ಶ್ರೀಃ ॥

ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

॥ ಓಂ ತತ್ಸದ್ಬ್ರಹ್ಮಾರ್ಪಣಮಸ್ತು ॥

